೯೯೩ ಶಾಸ್ತ್ರೀಯಕರ್ಮಣಾಂ ಸಾತ್ತ್ವಿಕತ್ವಾದಿತ್ರೈವಿಧ್ಯಪ್ರಯೋಜಕಶ್ರದ್ಧಾ ತ್ರೈವಿಧ್ಯನಿರೂಪಣಂ

೯೯೪ ಶ್ರದ್ಧಾಯಾಃ ಗುಣತ್ರಯೋಪಷ್ಟಬ್ಧಾಂತಃಕರಣಾನುರೂಪತ್ವೋಪ ಪಾದನಂ

೯೯೫ ಅಶಾಸ್ತ್ರವಿಹಿತಕರ್ಮಣಾಂ ಶ್ರದ್ಧಾಪೂರ್ವಕಮನುಷ್ಠಿತಾನಾಮಪಿ ನಿಷ್ಫಲ ತ್ವಮನರ್ಥಾವಹತ್ವಂ ಚ

೯೯೬ ಸತ್ತ್ವಾದಿಗುಣವೃದ್ಧಿಹೇತುಭೂತಾಹಾರಯಜ್ಞತಪೋದಾನಾನಾಂ ತ್ರೈವಿಧ್ಯಕಥನಪ್ರತಿಜ್ಞಾ

೯೯೭ ಜ್ಞಾನವೃದ್ಧಿಫಲಕಸತ್ತ್ವವೃದ್ಧಿಹೇತುಭೂತಸಾತ್ತ್ವಿಕಾಹಾರಸ್ವರೂಪಂ

೯೯೮ ದುಃಖಫಲಕರಜೋವಿವೃದ್ಧಿಹೇತುಭೂತರಾಜಸಾಹಾರಸ್ವರೂಪಂ

೯೯೯ ನಿರಂತರದುಃಖಾದಿಫಲಕತಮೋವೃದ್ಧಿಹೇತುಭೂತತಾಮಸಾಹಾರ ಸ್ವರೂಪಂ

೧೦೦೦ ಸಾತ್ತ್ವಿಕಯಜ್ಞಲಕ್ಷಣಂ

೧೦೦೧ ರಾಜಸಯಜ್ಞಲಕ್ಷಣಂ

೧೦೦೨ ತಾಮಸಯಜ್ಞಲಕ್ಷಣಂ

೧೦೦೩ ಶಾರೀರತಪಸ್ಸ್ವರೂಪಂ

೧೦೦೪ ವಾಚಿಕತಪಸ್ಸ್ವರೂಪಂ

೧೦೦೫ ಮಾನಸತಪಸ್ಸ್ವರೂಪಂ

೧೦೦೬ ತ್ರಿವಿಧಸ್ಯಾಪಿ ತಪಸಃ ಪುನಸ್ಸಾತ್ತ್ವಿಕಾದಿಭೇದೇನ ತ್ರೈವಿಧ್ಯ ಪ್ರಪಂಚನಂ

೧೦೦೭ ದಾನಸ್ಯಾಪಿ ಸಾತ್ತ್ವಿಕಾದಿಭೇದೇನ ತ್ರೈವಿಧ್ಯಪ್ರಪಂಚನಂ

೧೦೦೮ ಉಕ್ತಾನಾಂ ಸತ್ತ್ವಾದಿಗುಣಾನಾಂ ಸಾಂಖ್ಯೋಕ್ತದ್ರವ್ಯತ್ವನಿರಾಕ ರಣಪೂರ್ವಕಮದ್ರವ್ಯತ್ವಸಮರ್ಥನಂ

**ಇತಿ ಸತ್ತ್ವರಜಸ್ತಮೋಗುಣನಿರೂಪಣಪ್ರಕರಣಂ ಪ್ರಥಮಂ ॥೧॥**

೧೦೦೯ ಅಥ ಶಬ್ದಲಕ್ಷಣಂ

೧೦೧೦ ಶಬ್ದಸ್ಯ ಪಂಚಭೂತವರ್ತಿತ್ವಸಮರ್ಥನಂ

೧೦೧೧ ಶಬ್ದಸ್ಯಾವಾಂತರವಿಭಾಗಕಥನಪೂರ್ವಕಂ ವರ್ಣಾತ್ಮಕಶಬ್ದಲಕ್ಷಣಂ

೧೦೧೨ ವರ್ಣಾತ್ಮಕಶಬ್ದಸ್ಯ ದೇವಮನುಷ್ಯತಾಲ್ವಾದ್ಯಭಿವ್ಯಂಗ್ಯತ್ವಂ

೧೦೧೩ ವರ್ಣಾತ್ಮಕಶಬ್ದಸ್ಯೈವ ನಿತ್ಯತ್ವಾನಿತ್ಯತ್ವಾದಿವಿಚಾರವಿಷಯತ್ವಂ
೧೦೧೪ ವರ್ಣಾತ್ಮಕಶಬ್ದಸ್ಯ ಏಕಪಂಚಾಶತ್ಪ್ರಕಾರತ್ವಂ ಪಂಚಾಶತ್ಪ್ರಕಾರತ್ವಂ ವಾ
೧೦೧೫ ವರ್ಣಸಂಖ್ಯಾನಿಯಮಾನುಪಪತ್ತ್ಯಾಶಂಕಾತತ್ಪರಿಹಾರೌ
೧೦೧೬ ನಿತ್ಯವಿಭೂತೌ ವರ್ಣಮಾತೃಕಾಯಾಃ ಸಹಸ್ರಾಕ್ಷರಾತ್ಮಕತ್ವಪಕ್ಷ ಪ್ರದರ್ಶನಂ
೧೦೧೭ ಸಹಸ್ರಾಕ್ಷರತ್ವಶ್ರುತೇಃ ಮತಭೇದೇನ ಅರ್ಥಾಂತರಪರತ್ವಪ್ರದರ್ಶನಂ
೧೦೧೮ ಅಥ ಧ್ವನ್ಯಾತ್ಮಕಶಬ್ದಲಕ್ಷಣಂ
೧೦೧೯ ಮೀಮಾಂಸಕಮತರೀತ್ಯಾ ಶಬ್ದಸ್ಯ ಶ್ರೋತ್ರೇಣ ಸಹ ನಿತ್ಯಸಂಬದ್ಧ ತ್ವೋಪಪಾದನಂ
೧೦೨೦ ಸಾಂಖ್ಯದರ್ಶನಾನುಯಾಯಿನಾಂ ಮತೇನ ಶ್ರೋತ್ರವೃತ್ತಿನಿರೂಪಣಂ
೧೦೨೧ ದೂರಸ್ಥಶಬ್ದೇ ವೀಚೀತರಂಗನ್ಯಾಯಾಸಂಭವಪ್ರದರ್ಶನಂ
೧೦೨೨ ಶ್ರೋತ್ರೇಂದ್ರಿಯಸ್ಯ ವಿಭುತ್ವಕಲ್ಪನಾನುಪಪತ್ತಿಃ
೧೦೨೩ ಶ್ರೋತ್ರಸ್ಯ ಅಭೌತಿಕತ್ವಾತ್ ಸ್ವಸಮವೇತಶಬ್ದಗ್ರಾಹಕತ್ವಪಕ್ಷಾನುಪ ಪತ್ತಿಃ
೧೦೨೪ ಶ್ರೋತ್ರವೃತ್ತ್ಯೈವ ಶಬ್ದಗ್ರಹಣೋಪಪಾದನಂ
೧೦೨೫ ಶ್ರೋತ್ರವೃತ್ತಿಮನಭ್ಯುಪಗಚ್ಛತೋರ್ಮೀಮಾಂಸಕನೈಯಾಯಿಕಯೋ ರನಿಷ್ಟಾಪತ್ತಿಃ
೧೦೨೬ ಅವ್ಯಭಿಚರಿತಲಿಂಗಾಭಾವಾತ್ ದಿಗಾದೀನಾಮನುಮೇಯತ್ವಾನುಪಪತ್ತಿಃ
೧೦೨೭ ಶ್ರೋತ್ರವೃತ್ತೇಸ್ತುಲ್ಯತ್ವೇಽಪಿ ಆಸತ್ತ್ಯಾದಿತಾರತಮ್ಯೇನ ಶಬ್ದಗ್ರಹಣ ತಾರತಮ್ಯೋಪಪತ್ತಿಃ
೧೦೨೮ ಅಥ ನೈಯಾಯಿಕಮತರೀತ್ಯಾ ಶಬ್ದಾಗಮನಪಕ್ಷೋಪಪಾದನಂ
೧೦೨೯ ಅದ್ರವ್ಯಸ್ಯಾಪಿ ಶಬ್ದಸ್ಯ ಸಾಶ್ರಯಸ್ಯ ಶ್ರೋತ್ರಸಮೀಪಗಮನೋಪ ಪತ್ತಿಃ
೧೦೩೦ ಶಬ್ದಗತಮಂದ್ರತ್ವಾದಿಲಿಂಗೇನ ಶಬ್ದೋತ್ಪತ್ತಿದೇಶಾದ್ಯನುಮಾನೋಪ ಪಾದನಂ
೧೦೩೧ ಉಕ್ತಯೋಸ್ಸಾಂಖ್ಯನೈಯಾಯಿಕಪಕ್ಷಯೋರನ್ಯತರಸ್ಯಾನತಿಕ್ರಮಣೀ ಯತ್ವಂ
೧೦೩೨ ಶಬ್ದಾಗಮನಪಕ್ಷೇ ನಭೋನಿಷ್ಠಸ್ಯೈವ ಶಬ್ದಸ್ಯ ಗ್ರಾಹ್ಯತ್ವಂ
೧೦೩೩ ಶ್ರೋತ್ರವೃತ್ತಿಪಕ್ಷೇ ಪಂಚಭೂತವರ್ತಿನೋಽಪಿ ಶಬ್ದಸ್ಯ ಗ್ರಾಹ್ಯತ್ವಂ

೧೦೩೪ ವೇದಾಂತಿನಾಂ ಮತೇ ಶ್ರೋತ್ರವೃತ್ತಿಪಕ್ಷಾಭ್ಯುಪಗಮಃ, ಶಬ್ದಾಗಮನ ಪಕ್ಷದೂಷಣಂ ಚ

೧೦೩೫ ಶಬ್ದಸ್ಯ ಆಕಾಶೋತ್ಪತ್ತಿವಿನಾಶಸಮಸಮಯೋತ್ಪತ್ತಿವಿನಾಶವತ್ತ್ವಪಕ್ಷಾನುವಾದಃ [ಪ್ರದರ್ಶನಂ

೧೦೩೬ ತತ್ರಾಪ್ರಸ್ತಾರಸ್ಯೋದ್ಭಾವನಪೂರ್ವಕಂ ಸ್ವಾಭಿಮತಪಕ್ಷಾಂತರ

೧೦೩೭ ವರ್ಣಾನಾಮಾಕಲ್ಪಸ್ಥಾಯಿತ್ವಂ ಪ್ರತ್ಯೇಕಮೇಕತ್ವಂ ಚ

೧೦೩೮ ತಾರತ್ವಾದಿವಿರುದ್ಧಧರ್ಮಾಣಾಂ ವ್ಯಂಜಕವಾಯುಧರ್ಮತ್ವೇ ಪ್ರಮಾಣ ಪ್ರದರ್ಶನಂ

೧೦೩೯ ತಾರತ್ವಾದಿವಿರುದ್ಧಧರ್ಮಾಣಾಂ ವರ್ಣಧರ್ಮತ್ವಸ್ಫೋರಕವಿಷ್ಣುಚಿತ್ತಾರ್ಯಸೂಕ್ತಿವಿರೋಧಪರಿಹಾರಃ

೧೦೪೦ ಕೇಷಾಂ ಚಿನ್ಮತೇ ವಾಯೋರೇವ ಶಬ್ದಾತ್ಮನಾ ಪರಿಣಾಮಾಭ್ಯುಪಗಮಾಚ್ಛಬ್ದಸ್ಯ ದ್ರವ್ಯತ್ವಂ

೧೦೪೧ ಕೇಷಾಂ ಚಿನ್ಮತೇ ಶಬ್ದಸ್ಯ ಗುಣತ್ವೇಽಪಿ ವಾಯುಮಾತ್ರಗುಣತ್ವಂ

೧೦೪೨ ಉಕ್ತಪಕ್ಷಾಣಾಮನ್ಯತಮಪಕ್ಷಾನಿರ್ಧಾರಣೇಽಪಿ ನ ಸಿದ್ಧಾಂತಹಾನಿಃ

೧೦೪೩ ವರ್ಣಾನಾಂ ಶಾಬ್ದಿಕಾಭಿಮತಸ್ಯ ಸ್ಫೋಟೋಪಾದಾನಕತ್ವಸ್ಯ ನಿರಾಸಃ

೧೦೪೪ ಸ್ಫೋಟಾತ್ಮಕಸ್ಯ ಶಬ್ದಸ್ಯ ಸಾಧಕಪ್ರಮಾಣಾಸಂಭವಃ

೧೦೪೫ ವರ್ಣಾನಾಂ ಪ್ರತ್ಯೇಕಂ ಸಮುದಾಯಭಾವೇನ ವಾ ವಾಚಕತ್ವಾನುಪಪತ್ತ್ಯಾ ವರ್ಣಾಭಿವ್ಯಂಗ್ಯಸ್ಫೋಟಾಂಗೀಕಾರಾವಶ್ಯಕತ್ವಾಶಂಕಾ

೧೦೪೬ ವರ್ಣಾನಾಂ ಪ್ರತ್ಯೇಕಂ ಸಮುದಾಯಭಾವೇನ ವಾ ಸ್ಫೋಟಾಭಿವ್ಯಂಜಕತ್ವಾನುಪಪತ್ತ್ಯಾ ಸ್ಫೋಟಾಂಗೀಕಾರಾನುಪಪತ್ತಿಃ

೧೦೪೭ ನಿರ್ವಿಶೇಷಸ್ಯ ನಿರವಯವಸ್ಯ ಚ ಸ್ಫೋಟಸ್ಯ ಅದ್ವೈತಬ್ರಹ್ಮಣ ಇವ ಪ್ರಪಂಚಭ್ರಮಾಧಿಷ್ಠಾನತ್ವಾನುಪಪತ್ತಿಃ

೧೦೪೮ ಅಪ್ರಾಮಾಣಿಕಸ್ಫೋಟಾಭ್ಯುಪಗಮೇಽಪಿ ವ್ಯಾಕರಣಸ್ಮೃತ್ಯುಪಪತ್ತಿಃ

೧೦೪೯ ಅರ್ವಾಚೀನೈಃ ಕಲ್ಪಿತಸ್ಯಾಪಿ ಸ್ಫೋಟಸ್ಯ ಪಾಣಿನ್ಯಾದಿಭಿರನುಕ್ತತ್ವಾದನಾದರಣೀಯತ್ವಂ

೧೦೫೦ ಶಬ್ದಸ್ಯ ಅದ್ರವ್ಯತ್ವವ್ಯಂಗ್ಯತ್ವಾನುಪಪತ್ತಿಕಥನಪೂರ್ವಕಂ ದ್ರವ್ಯತ್ವಾನಿತ್ಯತ್ವಪೂರ್ವಪಕ್ಷಃ

೧೦೫೧ ವರ್ಣಾನಾಂ ಉಪಾದಾನತ್ವ-ಸ್ಥಾನವಿಶೇಷ-ರೂಪವಿಶೇಷ-ಬೋಧಕವಾಕ್ಯೇಷು ಚತುರ್ಧಾ ವಿಕಲ್ಪಃ

೧೦೫೨ ತತ್ರ ಯಾಥಾರ್ಥ್ಯರೂಪಪ್ರಥಮಪಕ್ಷಾನುಪಪತ್ತಿಪ್ರದರ್ಶನಂ
೧೦೫೩ ಬಾಧಿತಾರ್ಥಕತ್ವರೂಪದ್ವಿತೀಯಪಕ್ಷಾನುಪಪತ್ತಿಪ್ರದರ್ಶನಂ
೧೦೫೪ ದೃಷ್ಟಿವಿಧಿತ್ವರೂಪತೃತೀಯಪಕ್ಷೋಽಪಪತ್ತ್ಯಾಶಂಕಾಪೂರ್ವಕಂ ತಸ್ಯಾಪ್ಯನುಪಪನ್ನತ್ವಪ್ರದರ್ಶನಂ
೧೦೫೫ ಔಪಚಾರಿಕತ್ವರೂಪಚತುರ್ಥಪಕ್ಷಾನುಪಪತ್ತಿಪ್ರದರ್ಶನಂ
೧೦೫೬ ಚತುರ್ಣಾಮಪಿ ಯಥಾಸಂಭವಮುಪಪನ್ನತ್ವರೂಪಪಂಚಮಪಕ್ಷಪ್ರದರ್ಶನೇನ ಪೂರ್ವಪಕ್ಷಪರಿಹಾರಃ
೧೦೫೭ ಶಬ್ದಸ್ಯ ದ್ರವ್ಯತ್ವಾದ್ರವ್ಯತ್ವಾದೀನಾಂ ಮತಭೇದೇನ ವ್ಯವಸ್ಥಾಪನಂ
೧೦೫೮ ದ್ರವ್ಯತ್ವಪಕ್ಷೇ ವಾಯವೀಯತ್ವಂ ಅವಾಯವೀಯತ್ವಂ ಚೇತಿ ಮತದ್ವಯಂ
೧೦೫೯ ವಾಯವೀಯತ್ವೇಽಪಿ ಭೇರ್ಯಾದ್ಯವಿನಾಭೂತತ್ವಭೇರ್ಯಾದಿಜನ್ಯತ್ವರೂಪಪಕ್ಷದ್ವಯಂ
೧೦೬೦ ಪಕ್ಷದ್ವಯಸ್ಯಾಪಿ ಸಮೂಲತ್ವೋಪಪಾದನಂ
೧೦೬೧ ಅಥ ಶಬ್ದಸ್ಯಾದ್ರವ್ಯತ್ವಪಕ್ಷೋಪಪಾದನಂ

## ಇತಿ ಶಬ್ದ ನಿರೂಪಣಪ್ರಕರಣಂ ದ್ವಿತೀಯಂ ॥೨॥

೧೦೬೨ ಅಥ ಸ್ಪರ್ಶಲಕ್ಷಣಂ
೧೦೬೩ ಶೀತೋಷ್ಣಾನುಭಯಭೇದೇನ ಸ್ಪರ್ಶಸ್ಯ ತ್ರೈವಿಧ್ಯಂ
೧೦೬೪ ವಾಯ್ವಾದಿಷು ಸ್ಪರ್ಶಾಂತರೋಪಲಂಭಸ್ಯ ಭೂತಾಂತರಸಂಸರ್ಗನಿಬಂಧನತ್ವಂ
೧೦೬೫ ವಾಯ್ವಾದಿಷು ಪ್ರತೀಯಮಾನಸ್ಯಾಪಿ ಸ್ಪರ್ಶಾಂತರಸ್ಯ ಆರೋಪಿತತ್ವಮೇವ
೧೦೬೬ ಭೂತಾಂತರಸಂಸರ್ಗಸ್ಯ ನೈಜಸ್ಪರ್ಶತಿರಸ್ಕಾರಹೇತುತ್ವಮಪಿ
೧೦೬೭ ದೀಪಪ್ರಭಾರತ್ನಪ್ರಭಯೋಃ ಸ್ಪರ್ಶಾನುಪಲಂಭೇ ಕಾರಣನಿರೂಪಣಂ
೧೦೬೮ ದೀಪಪ್ರಭಾರತ್ನಪ್ರಭಯೋರನುಪ್ರವಿಷ್ಟಭೂತಾಂತರಸ್ಪರ್ಶಸ್ಯಾಪ್ಯನುಪಲಂಭೇ ಕಾರಣನಿರೂಪಣಂ
೧೦೬೯ ದೀಪಪ್ರಭಾರತ್ನಪ್ರಭಯೋಃ ಸ್ಪರ್ಶಸ್ಯ ತಿರಸ್ಕೃತತ್ವಪಕ್ಷನಿರಾಕರಣಪೂರ್ವಕಂ ಅನುದ್ಭೂತತ್ವಪಕ್ಷಪ್ರದರ್ಶನಂ
೧೦೭೦ ಅಪಾಕಜಗುಣಸ್ಯ ಪಾಕಾಂತರಾವಿನಾಶ್ಯತ್ವೋಪಪಾದನಂ.

೧೦೭೧ ಭೂತಾಂತರೇಷ್ವನುಪ್ರವಿಷ್ಟಸ್ಯಾಗ್ನೇ ರೂಪಾನುಪಲಂಭೇ ಸ್ಪರ್ಶೋಪಲಂಭೇ ಚ ಕಾರಣನಿರೂಪಣಂ

೧೦೭೨ ಅನುಷ್ಣಾಶೀತಸ್ಯಾಪಿ ಭಾವರೂಪಸ್ಪರ್ಶವಿಶೇಷತ್ವಸಮರ್ಥನಂ

೧೦೭೩ ಅನುಮಾನೇನ ವಾಯೌ ಶೀತಸ್ಪರ್ಶವತ್ತ್ವಶಂಕಾ

೧೦೭೪ ಪ್ರತಿಬಂದ್ಯಾ ತನ್ನಿರಾಕರಣಂ

೧೦೭೫ ಪಾಕಜಾಪಾಕಜಭೇದೇನ ಸ್ಪರ್ಶಸ್ಯ ಪುನರ್ದ್ವೈವಿಧ್ಯಂ

೧೦೭೬ ಗೋಬ್ರಾಹ್ಮಣಚಂಡಾಲಾದಿಷು ಸ್ಪರ್ಶತಾರತಮ್ಯೋಪಪಾದನಂ

೧೦೭೭ ಪಾಕವಶಾತ್ ಪೃಥಿವ್ಯಾಂ ಮೃದುತ್ವಕಠಿನತ್ವಾದಿಸ್ಪರ್ಶೋತ್ಪತ್ತಿಃ

೧೦೭೮ ಮೃದುತ್ವಾದೀನಾಂ ಸಂಯೋಗರೂಪತ್ವನಿರಾಕರಣಪೂರ್ವಕಂ ಸ್ಪರ್ಶವಿಶೇಷತ್ವಸಮರ್ಥನಂ

೧೦೭೯ ಪಾಕಜಸ್ಪರ್ಶಾನಾಶ್ರಯಯೋರಪಿ ವಾಯುಸಲಿಲಯೋಃ ಮೃದುತ್ವಕಠಿನತ್ವೋಪಲಬ್ಧೌ ಕಾರಣನಿರೂಪಣಂ

೧೦೮೦ ಕಾರ್ಯವೈಜಾತ್ಯಾತ್ ಗೋಬ್ರಾಹ್ಮಣಚಂಡಾಲಾದಿಗತಸ್ಪರ್ಶಸ್ಯ ವೈಜಾತ್ಯೋಪಪತ್ತಿಃ

೧೦೮೧ ಗೋತ್ವಾದಿಜಾತೇರೇವ ಶುದ್ಧ್ಯಶುದ್ಧಿಪ್ರಯೋಜಕತ್ವಾಶಂಕಾ

೧೦೮೨ ಜಾತೇರ್ದುರ್ನಿರೂಪತ್ವಾತ್ ಶುದ್ಧ್ಯಾದಿಪ್ರಯೋಜಕತ್ವಾನುಪಪತ್ತಿಃ

೧೦೮೩ ಜಾತೇಸ್ಸುನಿರೂಪತ್ವಪಕ್ಷಾವಲಂಬನೇನ ಬ್ರಾಹ್ಮಣತ್ವಾದಿಜಾತಿಸ್ವರೂಪನಿರೂಪಣಂ

೧೦೮೪ ಅಸ್ಮಿನ್ ಪಕ್ಷೇ ಗೋಬ್ರಾಹ್ಮಣಾದಿಷು ಸ್ಪರ್ಶತಾರತಮ್ಯಾನಾವಶ್ಯಕತಾ

೧೦೮೫ ಅಪಾಕಜಸ್ಪರ್ಶೇಷು ತಾರತಮ್ಯಪ್ರತೀತೌ ಕಾರಣನಿರೂಪಣಂ

೧೦೮೬ ವಾಯುಸಲಿಲಯೋಃ ಪಾಕಜಸ್ಪರ್ಶಾಂತರಾಸಂಭವೋಪಪಾದನಂ

೧೦೮೭ ಪೃಥಿವ್ಯಾಮುಷ್ಣತ್ವಶೀತತ್ವಯೋಃ ಔಪಾಧಿಕಾರೋಪಿತತ್ವಮೇವ

೧೦೮೮ ಅಥ ರೂಪಲಕ್ಷಣಂ [ಪ್ರದರ್ಶನಂ ಚ

೧೦೮೯ ಶುಕ್ಲಾದಿಭೇದೇನ ರೂಪಸ್ಯ ಚಾತುರ್ವಿಧ್ಯಕಥನಂ, ತದವಾಂತರಭೇದ

೧೦೯೦ ಪೀತರೂಪಸ್ಯ ರಕ್ತರೂಪೇ ಅಂತರ್ಭಾವಪಕ್ಷಪ್ರದರ್ಶನಂ

೧೦೯೧ ಭಾಸ್ವರಾಭಾಸ್ವರಭೇದೇನ ರೂಪಸ್ಯ ಪುನರ್ದ್ವೈವಿಧ್ಯಂ

೧೦೯೨ ಜಲೇ ರೂಪಾಂತರಪ್ರತೀತೇಃ ಪೃಥಿವೀಸಂಸರ್ಗನಿಬಂಧನತ್ವಂ

೧೦೯೩ ನೈಯಾಯಿಕವೈಶೇಷಿಕಾದ್ಯನುರೋಧೇನ ಚಿತ್ರಾಖ್ಯರೂಪಾಂತರಸದ್ಭಾವಾಶಂಕಾ

೧೦೯೪ ಅನ್ಯಥಾನುಪಪತ್ತ್ಯಭಾವಾತ್ ಅಪ್ರಾಮಾಣಿಕತ್ವಾಚ್ಚ ಚಿತ್ರಾಖ್ಯ ರೂಪಾಂತರಸ್ಯ ಅನಂಗೀಕಾರ್ಯತ್ವಂ

೧೦೯೫ ಅವಯವ್ಯಭ್ಯುಪಗಮಪಕ್ಷೇಽಪಿ ಚಿತ್ರರೂಪಸ್ಯಾನಾವಶ್ಯಕತಾ

೧೦೯೬ ರೂಪಸ್ಯ ವ್ಯಾಪ್ಯವೃತ್ತಿತ್ವನಿಯಮಾಸಂಭವೋಪಪಾದನಂ

೧೦೯೭ ಅಥ ರಸಲಕ್ಷಣಂ ತದ್ವಿಭಾಗಶ್ಚ

೧೦೯೮ ಅಥ ಗಂಧಲಕ್ಷಣಂ ತದ್ವಿಭಾಗಶ್ಚ

೧೦೯೯ ಪವನಸಲಿಲಯೋರ್ಗಂಧಪ್ರತೀತೇಃ ಪೃಥಿವೀಸಂಸರ್ಗನಿಬಂಧನತ್ವಂ

೧೧೦೦ ಔಪನಿಷದಾನಾಂ ಪಾಕಜಗುಣಪ್ರಕ್ರಿಯಾಪ್ರಪಂಚನಂ

೧೧೦೧ ಏಕಯಾಪಿ ಸಾಮಗ್ರ್ಯಾ ಅನೇಕಕಾರ್ಯೋತ್ಪತ್ತಿಸಮರ್ಥನಂ

೧೧೦೨ ತತ್ರ ಪರಾಶರಭಟ್ಟಾರ್ಯಸೂಕ್ತಿವಿರೋಧಪ್ರಸಕ್ತ್ಯಾಶಂಕಾತತ್ಪರಿಹಾರೌ

೧೧೦೩ ಪೀಲುಪಾಕಪ್ರಕ್ರಿಯಾನಿರೂಪಣಂ

೧೧೦೪ ಪಿಠರಪಾಕಪ್ರಕ್ರಿಯಾನಿರೂಪಣಂ

೧೧೦೫ ಉಕ್ತಯೋರ್ದ್ವಯೋರಪಿ ಪಾಕಪ್ರಕ್ರಿಯಯೋರ್ವೇದಾಂತಿನಾಮನಭಿಮತತ್ವಂ

೧೧೦೬ ಅವಯವಾನಾಂ ಯಥಾಸಂಭವಂ ಸಂಘಾತಾವಸ್ಥಾಯಾಂ ಪ್ರತ್ಯೇಕಾವಸ್ಥಾಯಾಂ ವಾ ಪಾಕೋತ್ಪತ್ತಿನಿರೂಪಣಂ

**ಇತಿ ಸ್ಪರ್ಶರೂಪರಸಗಂಧನಿರೂಪಣಪ್ರಕರಣಂ ತೃತೀಯಂ ॥೩॥**

೧೧೦೭ ಅಥ ಸಂಯೋಗಲಕ್ಷಣಂ

೧೧೦೮ ಸಂಯೋಗಸ್ಯ ಸಂಯೋಗಿಸ್ವರೂಪಾತ್ಮಕತ್ವಂ ಅಂತರಾಳಶೂನ್ಯತಾತ್ಮಕತ್ವಂ ಚೇತಿ ಪಕ್ಷದ್ವಯಾನುವಾದಃ

೧೧೦೯ ತತ್ರ ಪ್ರಥಮಪಕ್ಷನಿರಾಕರಣಂ

೧೧೧೦ ದ್ವಿತೀಯಪಕ್ಷೇ ಅಂತರಾಳಶೂನ್ಯತ್ವಸ್ಯ ಭಾವಾತಿರಿಕ್ತತ್ವೇ ಅನಭ್ಯುಪಗಮಃ, ಭಾವಾಂತರರೂಪತ್ವೇ ಇಷ್ಟಾಪತ್ತಿಃ

೧೧೧೧ ಅಂತರಾಳಶೂನ್ಯತ್ವಸ್ಯ ಭಾವಾತಿರಿಕ್ತಾಭಾವರೂಪತ್ವೇಽಪಿ ಪ್ರತಿಯೋಗಿತಯಾ ಸಂಯೋಗಸಿದ್ಧಿಃ

೧೧೧೨ ಸಂಯೋಗಸ್ಯ ಸ್ವಾಭಾವಸಾಮಾನಾಧಿಕರಣ್ಯರೂಪಾವ್ಯಾಪ್ಯವೃತ್ತಿತ್ವೋಪಪಾದನಂ

೧೧೧೩ ನಿರವಯವದ್ರವ್ಯೇಷ್ವಪಿ ಸಂಯೋಗಸ್ಯಾವ್ಯಾಪ್ಯವೃತ್ತಿತ್ವೋಪಪತ್ತಿಃ

೧೧೧೪ ನಿತ್ಯಾನಿತ್ಯಭೇದೇನ ಸಂಯೋಗಸ್ಯ ದ್ವೈವಿಧ್ಯಂ

೧೧೧೫ ಅನಿತ್ಯಸಂಯೋಗಸ್ಯಾಪಿ ಉಭಯಕರ್ಮಜನ್ಯತ್ವಾನ್ಯತರಕರ್ಮಜನ್ಯತ್ವಾಭ್ಯಾಂ ದ್ವೈವಿಧ್ಯಂ

೧೧೧೬ ವೈಶೇಷಿಕಾಭಿಮತಸಂಯೋಗಜಸಂಯೋಗಸದ್ಭಾವಪಕ್ಷಾನುವಾದಃ

೧೧೧೭ ಅವಯವಾತಿರಿಕ್ತಾವಯವ್ಯಭಾವಾತ್ ಸಂಯೋಗಜಸಂಯೋಗಸದ್ಭಾವನಿರಾಕರಣಂ

೧೧೧೮ ಅವಯವಾತಿರಿಕ್ತಾವಯವ್ಯಭ್ಯುಪಗಮೇಽಪಿ ಸಂಯೋಗಜಸಂಯೋಗಾನಾವಶ್ಯಕತಾ

೧೧೧೯ ಸಂಯೋಗವತ್ ಕ್ರಿಯಾಯಾ ಅಪಿ ಅವ್ಯಾಪ್ಯವೃತ್ತಿತ್ವಾಭ್ಯುಪಗಮಾತ್ ಅವಯವಕ್ರಿಯಾಯಾ ಏವ ಅವಯವಿಕ್ರಿಯಾರೂಪತ್ವಂ

೧೧೨೦ ಅವಯವಾವಯವಿನೋರ್ದ್ವಯೋರಪಿ ನಿಷ್ಕ್ರಿಯತ್ವೇಽಪಿ ಅನ್ಯದೀಯಕ್ರಿಯಯಾ ಸಂಯೋಗೋತ್ಪತ್ತ್ಯುಪಪತ್ತಿಃ

೧೧೨೧ ಅಥ ನಿತ್ಯಸಂಯೋಗನಿರೂಪಣಂ

೧೧೨೨ ವಿಭುದ್ವಯಸಂಯೋಗಾನಭ್ಯುಪಗಂತೃವೈಶೇಷಿಕಮತನಿರಾಕರಣಾಯ ಅನುಮಾನೇನ ವಿಭುದ್ವಯಸಂಯೋಗಸಮರ್ಥನಂ

೧೧೨೩ ವಿಭುನೋರ್ದ್ವಯೋರಂತರಾಳಶೂನ್ಯತ್ವಮಾತ್ರಾಭ್ಯುಪಗಮೇಽಪಿ ಸಂಯೋಗಸ್ಯ ಅವರ್ಜನೀಯತ್ವಂ

೧೧೨೪ ಅಂತರಾಳಶೂನ್ಯತ್ವಸ್ಯ ಅತ್ಯಂತಸನ್ನಿಹಿತದೇಶಸಂಯೋಗರೂಪತ್ವಾನುಪಪತ್ತ್ಯಾಶಂಕಾತತ್ಪರಿಹಾರೌ

೧೧೨೫ ಸಂಯೋಗಹೇತ್ವಭಾವಾತ್ ವಿಭುನೋರ್ಜನ್ಯಸಂಯೋಗನಿರಾಕರಣಸಂಭವೇಽಪಿ ಹೇತ್ವಜನ್ಯನಿತ್ಯಸಂಯೋಗನಿರಾಕರಣಾಸಂಭವಃ

೧೧೨೬ ವಿಭೂನಾಮಪಿ ಕಾಲಾದೀನಾಂ ಈಶ್ವರೇಣ ವಿಭುನಾ ಸಂಯೋಗಾವಶ್ಯಕತಾ

೧೧೨೭ ಕಾಲಾದೀನಾಂ ವಿಭೂನಾಮೀಶ್ವರಸಮವ್ಯಾಪ್ತತ್ವೇಽಪಿ ಈಶ್ವರನಿಯಾಮ್ಯತ್ವೋಪಪತ್ತಿಃ

೧೧೨೮ ಅಥ ಶಕ್ತಿಲಕ್ಷಣಂ

೧೧೨೯ ಶಕ್ತಿಸದ್ಭಾವೇ ಅನುಮಾನಪ್ರಮಾಣನಿರೂಪಣಂ

೧೧೩೦ ಇಂದ್ರಿಯಾಗೋಚರಸ್ಯಾಪಿ ಶಕ್ತಿತತ್ತ್ವಸ್ಯಾಪಲಾಪಾನರ್ಹತ್ವಂ

೧೧೩೧ ಶಕ್ತೌ ಶಕ್ತ್ಯಂತರಸತ್ತ್ವೇ ಅನವಸ್ಥಾ, ಅಸತ್ತ್ವೇ ಶಕ್ತೇಃ ಕಾರಣತ್ವಾನುಪಪತ್ತಿರಿತ್ಯಾಶಂಕಾ.

೧೧೩೨ ಶಕ್ತೇಃ ಶಕ್ತ್ಯಂತರಾಭಾವೇನ ಅಕಾರಣತ್ವೇಽಪಿ ಶಕ್ತಿಮತ ಏವ ಕಾರಣತ್ವಾತ್ಕಾರ್ಯೋಪಪತ್ತಿಃ

೧೧೩೩ ಶಕ್ತಿಸದ್ಭಾವೇ ಆಗಮಪ್ರಮಾಣನಿರೂಪಣಂ

೧೧೩೪ ಶೈವಾಭಿಮತಶಕ್ತಿಸ್ವರೂಪನಿರೂಪಣಂ

೧೧೩೫ ತನ್ನಿರಾಕರಣಂ, ತತ್ರ ಶಕ್ತೇಃ ಪ್ರಾಧಾನ್ಯಾನುಪಪತ್ತಿಃ, ಉಪಾದಾನತ್ವಾನುಪಪತ್ತಿಶ್ಚ

[ಪತ್ತಿಃ

೧೧೩೬ ಉಪಾದಾನತ್ವಾಭಾವೇಽಪಿ ಶಕ್ತೇರುತ್ಪತ್ತಿವಿನಾಶರೂಪಪರಿಣಾಮೋಪ

೧೧೩೭ ಶಕ್ತೇರೇಕತ್ವಾನುಪಪತ್ತಿಃ

೧೧೩೮ ಶಕ್ತೇರ್ನಿತ್ಯತ್ವಾನುಪಪತ್ತಿಃ

೧೧೩೯ ಶಕ್ತೇರನಾದಿತ್ವಾನುಪಪತ್ತಿಃ

೧೧೪೦ ಶಕ್ತೇರಪರ್ಯನುಯೋಜ್ಯವೈಭವತ್ವಾನುಪಪತ್ತಿಃ

೧೧೪೧ ಶಕ್ತೇಸ್ತ್ರಿವಿಧಪರಿಚ್ಛೇದರಾಹಿತ್ಯಾನುಪಪತ್ತಿಃ

೧೧೪೨ ಪ್ರತಿವಸ್ತು ಶಕ್ತಿಭೇದಾವಶ್ಯಂಭಾವಃ

೧೧೪೩ ಬ್ರಹ್ಮನಿಷ್ಠಾಯಾ ಅಪಿ ಶಕ್ತೇರುಪಾದಾನತ್ವಾನುಪಪತ್ತಿಃ

೧೧೪೪ ಶಕ್ತ್ಯಭೇದವಾದಸ್ಯ ಸಂವಿದದ್ವೈತವಾದಸಮಾನದೋಷಭಾಗಿತ್ವಂ

೧೧೪೫ ಶಕ್ತೇರ್ದ್ರವ್ಯಮಾತ್ರನಿಷ್ಠತ್ವಂ, ದ್ರವ್ಯಾದ್ರವ್ಯೋಭಯನಿಷ್ಠತ್ವಂ, ಚೇತಿಪಕ್ಷದ್ವಯಂ

[ಪಪತ್ತಿಪ್ರದರ್ಶನಂ

೧೧೪೬ ಶಕ್ತೇರ್ದ್ರವ್ಯಮಾತ್ರನಿಷ್ಠತ್ವೇಽಪಿ ಗುಣಾದೀನಾಂ ಶಕ್ತತ್ವವ್ಯವಹಾರೋ

೧೧೪೭ ಶಕ್ತೇರತಿರಿಕ್ತಪದಾರ್ಥತ್ವೇ ಭಾಷ್ಯಕಾರಸಂಮತಿಃ [ಕತ್ವಂ

೧೧೪೮ ಅವಿದ್ಯಾಖ್ಯಕರ್ಮ-ಜೀವ-ಜಗದಾದೌ ಶಕ್ತಿಶಬ್ದಪ್ರಯೋಗಸ್ಯೌಪಚಾರಿ

**ಇತಿ ಸಂಯೋಗ-ಶಕ್ತಿನಿರೂಪಣಪ್ರಕರಣಂ ಚತುರ್ಥಂ ॥೪॥**

## ಇತಿ ಅದ್ರವ್ಯಪರಿಚ್ಛೇದಃ ಷಷ್ಠಃ

**ಓಂ**

**ಶ್ರೀಮತೇ ರಾಮಾನುಜಾಯ ನಮಃ.**

**ಸಮಾಪ್ತಾ ಚೇಯಂ ತತ್ತ್ವಶುದ್ಧೇಃ ವಿಷಯಸೂಚೀ.**

॥ ಶ್ರೀಃ ॥



॥ ಶ್ರೀಃ ॥

ಶ್ರೀಮತೇ ರಾಮಾನುಜಾಯ ನಮಃ

# ತತ್ತ್ವಶುದ್ಧಿ.

## ೧ ಅಚಿತ್ತತ್ತ್ವಪರಿಚ್ಛೇದಂ.

### ೧ ಮಂಗಳಾಚರಣಂ.

ಮಧುರಸರಸವೀಕ್ಷಂ ಸಂಶ್ರಿತಾರ್ಥೈಕದೀಕ್ಷಂ
ದುರಿತಹರಣದಕ್ಷಂ ಯೋಗಿಹೃದ್ಧ್ಯಾನ ಲಕ್ಷಂ ।
ವಿಹಿತವಿಬುಧರಕ್ಷಂ ಕಲ್ಪಿತಾರಾತಿಶಿಕ್ಷಂ
ಕಲಿತವಿನತಮೋಕ್ಷಂ ಪುಂಡರೀಕಾಕ್ಷಮೀಡೇ ॥ ೧ ॥

ಜಯತ್ಯಖಿಲಸಂಸೇವ್ಯಾ ಪ್ರಾಚೀ ಸ್ವಾಚಾರ್ಯಸಂತತಿಃ ।
ಯತ್ಪಾದಕಮಲಾಸಂಗಾನ್ಮಾದೃಶೋಽಪಿ ಬುಧಾಯತೇ ॥ ೨ ॥

### ೨ ರಾಜಾಶೀರ್ವಾದಃ

ಶ್ರೀಮಾನ್ ಕೃಷ್ಣಮಹೀಂದ್ರಃ ಶ್ರಿತಜನಸಂದೋಹಪಾರಿಜಾತದ್ರುಃ ।
ಚಿರತರಮವತಾದವನಿಂ ಕಂಟಕರಹಿತಾಂ ಪ್ರಹೃಷ್ಟಜನಪೂರ್ಣಾಂ ॥ ೩ ॥

ಕರ್ಣಾಟಸಿಂಹಾಸನಭೂಮಿಪಾಲಸಂತಾನದುಗ್ಧೋದಧಿಶೀತಭಾನುಃ ।
ಅಷ್ಟಾಭಿರಿಂಧೇ ಕಿಲ ಲೋಕಪಾಲಮಾತ್ರಾಭಿರೇಷ ಕ್ಷಿತಿಪೋ ಯಧೂನಾಂ ॥

ಮಹಾರಾಜ ಶ್ರೀಮನ್ ಜಗತಿ ವಿಮಲಾ ಕೀರ್ತಿರತುಲಾ
ಜಯತ್ವಾಯುಷ್ಮಂಸ್ತೇ ವಿಬುಧಪರಿಷದ್ಗೇಯವಿಭವಾ ।
ಯಯಾ ದಿಗ್ವ್ಯಾಪಿನ್ಯಾ ಗಗನತಲಮಾರುಹ್ಯ ಸಹಸಾ
ಶಶಿಜ್ಯೋತ್ಸ್ನಾವ್ಯಾಜಾನ್ನಿಜತನುರುಪಾದರ್ಶಿ ರುಚಿರಾ ॥ ೪ ॥

ದೇವಸ್ತೇ ಶುಭಮಾತನೋತು ಕಮಲಾಜಾನಿರ್ಗುಣಾರ್ಣೋನಿಧಿ-
ರ್ಭಕ್ತಾನುಗ್ರಹಕೃಚ್ಛುಭಾಶ್ರಯವಪುಃ ಸೂರೀಂದ್ರಸಂಸೇವಿತಃ ।
ಯತ್ಪಾದಾಂಬುಜಧೂಳಿರಾದರವತೀ ಗಾರ್ಹಸ್ಥ್ಯಧರ್ಮೈಷಿಣೋ
ಗ್ರಾವತ್ವಂ ವಿನಿವರ್ತ್ಯ ಗೌತಮಮುನೇರ್ಜಾಯಾಮುಪಾಕಲ್ಪಯತ್ ॥ ೫ ॥

೩ ಸಪ್ರಯೋಜನಂ ಸಕಾರಣಂ ಚ ಚಿಕೀರ್ಷಿತಗ್ರಂಥರಚನಾಪ್ರತಿಜ್ಞಾ.

ಶ್ರೀಬಾಲಧನ್ವಿವಂಶ್ಯೇನ ಯಾದವಾದ್ರಿನಿವಾಸಿನಾ |
ರಾಮಾನುಜಾರ್ಯಸುಧಿಯಾ ತತ್ತ್ವಶುದ್ಧಿರ್ವಿರಚ್ಯತೇ || ೭ ||

ಶ್ರೀಭಾಷ್ಯಕಾರಸೂಕ್ತೀರಭ್ಯಸಿತುಂ ಯೇ ನ ಶಕ್ತಾಃ ಸ್ಯುಃ |
ತೇಷಾಮುಪಕಾರಕೃತೇ ರಚಿತೋ ಯತ್ನೋಽಯ ಮಾರ್ಯಚೋದನಯಾ ||
ಗಭೀರಶಾಸ್ತ್ರಕಾಠಿನ್ಯಾದ್ಬಿಭ್ಯತಾಂ ಸ್ತೋಕಮೇಧಸಾಂ |
ಬಾಲಾನಾಮುಪಕಾರಾಯ ಭಾಷಾಬಂಧೋಽಯಮಾರ್ಯತೇ || ೯ ||

---

ವೇದಾಂತಶಾಸ್ತ್ರಾಧ್ಯಯನವನ್ನು ಮಾಡುವುದಕ್ಕೆ ಅನುಕೂಲ್ಯವಿಲ್ಲದವರಾಗಿಯೂ, ತತ್ತ್ವವನ್ನು ತಿಳಿಯಬೇಕೆಂಬ ಕುತೂಹಲವುಳ್ಳವರಾಗಿಯೂ ಇರುವ ಮೋಕ್ಷಾರ್ಥಿಗಳ ಉಪಕಾರಕ್ಕೋಸ್ಕರ ಕೆಲವು ಹಿರಿಯರ ಪ್ರೇರಣೆಯಿಂದ ತತ್ತ್ವಶುದ್ಧಿ ಯೆಂಬ ಪ್ರಕರಣಗ್ರಂಥವನ್ನು ಕರ್ಣಾಟಕಭಾಷೆಯಲ್ಲಿ ಬರೆಯುತ್ತೇವೆ.

೪ ತತ್ತ್ವಶುದ್ಧಿಶಬ್ದಾರ್ಥನಿರ್ವಚನಂ.

ತತ್ತ್ವವೆಂದರೆ—ಪದಾರ್ಥದ ಆರೋಪಿತವಲ್ಲದ ಸ್ವಾಭಾವಿಕಸ್ವರೂಪವು; ಅಥವಾ ಯಥಾರ್ಥಜ್ಞಾನವೆಂಬ ಪ್ರಮಿತಿಗೆ ಗೋಚರವಾದ ಪದಾರ್ಥಸ್ವರೂಪವು. ಇಂಥ ತತ್ತ್ವಕ್ಕೆ ಶುದ್ಧಿಯೆಂದರೆ ಹಲವು ಬಗೆಯಾದ ವಾದಿಗಳ ಕೋಲಾಹಲದಿಂದ ತತ್ತ್ವವಿಷಯದಲ್ಲಿ ಜನಗಳಿಗೆ ಉಂಟಾಗಿರುವ ಅನ್ಯಥಾಜ್ಞಾನವೆಂಬ ಕಾಲುಷ್ಯವನ್ನು ಹೋಗಲಾಡಿಸಿ ಯಥಾರ್ಥಜ್ಞಾನವೆಂಬ ನೈರ್ಮಲ್ಯವನ್ನು ಉಂಟುಮಾಡುವಿಕೆ.

೫ ಸಮಸ್ತಚಿದಚಿದ್ವಿಶಿಷ್ಟಸ್ಯ ನಾರಾಯಣಸ್ಯೈವ ತತ್ತ್ವಸ್ವರೂಪತ್ವಂ.

ಸಮಸ್ತಚಿದಚಿದ್ವಿಶಿಷ್ಟನಾದ ಶ್ರೀಮನ್ನಾರಾಯಣನೊಬ್ಬನೇ ತತ್ತ್ವ* ವೆಂಬುದು ಸಕಲವೇದಶಾಸ್ತ್ರಾಗಮಪುರಾಣೇತಿಹಾಸಗ್ರಂಥಗಳ ಸಿದ್ಧಾಂತಸಾರವಾಗಿರುವುದು. ಈ ಸಿದ್ಧಾಂತಕ್ಕೆ ವಿಶಿಷ್ಟಾದ್ವೈತಸಿದ್ಧಾಂತವೆಂದು ಹೆಸರು.

---

* ಇಲ್ಲಿ-ತತ್ತ್ವಂ ಜಿಜ್ಞಾಸಮಾನಾನಾಂ ಹೇತುಭಿಸ್ಸರ್ವತೋಮುಖೈಃ |
ತತ್ತ್ವಮೇಕೋ ಮಹಾಯೋಗೀ ಹರಿರ್ನಾರಾಯಣಃ ಪರಃ ||
ಎಂಬ ವ್ಯಾಸವಚನವನ್ನೂ, 'ತತ್ತ್ವಂ ನಾರಾಯಣಃ ಪರಃ' ಎಂಬ ಶ್ರುತಿವಚನವನ್ನೂ ಪ್ರಮಾಣವಾಗಿ ತಿಳಿಯಬೇಕು

## ೭ ವಿಶಿಷ್ಟಾದ್ವೈತಶಬ್ದಾರ್ಥನಿರ್ವಚನಂ.

ವಿಶಿಷ್ಟವೆಂದರೆ—ವಿಶೇಷಣಗಳೊಡನೆ ಕೂಡಿರುವ ವಿಶೇಷ್ಯವು. ವಿಶಿಷ್ಟದ ಅದ್ವೈತವೆಂದರೆ ಅಂಥ ವಿಶೇಷ್ಯದ ಏಕತ್ವವು ; ಎಂದರೆ ವಿಶೇಷ್ಯವು ಒಂದೇ ಆಗಿರು ವಿಕೆ. ಇಲ್ಲಿ ಚಿತ್ ಅಚಿತ್ ಎಂಬ ಚೇತನಾಚೇತನಪದಾರ್ಥಗಳು ವಿಶೇಷಣಗ ಳಾಗಿಯೂ ಅವುಗಳೊಡನೆ ಯಾವಾಗಲೂ ಕೂಡಿಯೇ ಇರುವ ಶ್ರೀಮನ್ನಾರಾ ಯಣನು ವಿಶೇಷ್ಯವಾಗಿಯೂ, ಅಂಥ ವಿಶೇಷ್ಯವು ಮತ್ತೊಂದಿಲ್ಲವಾದುದರಿಂದ ವಿಶೇ ಷ್ಯವು ಏಕವಾಗಿಯೂ ಇರುವ ಕಾರಣ ಈ ಸಿದ್ಧಾಂತವನ್ನು ವಿಶಿಷ್ಟಾದ್ವೈತಸಿದ್ಧಾಂತ ವೆಂದು ಹೇಳಬಹುದು.

## ೭ ಸಮಸ್ತಪದಪ್ರಯೋಜನಂ.

ಪದಾರ್ಥವು ಅನೇಕವಾಗಿರದೆ ಒಂದೇ ಆಗಿದ್ದರೆ ಅದರಲ್ಲಿ ಸಮಸ್ತ ಎಂಬ ಪದವನ್ನು ಪ್ರಯೋಗಿಸಲಾಗುವುದಿಲ್ಲ. ನಕ್ಷತ್ರವು ಅನೇಕವಾಗಿರುವುದರಿಂದ ಸಮಸ್ತ ನಕ್ಷತ್ರಗಳು ಎಂದು ಹೇಳಬಹುದು. ಚಂದ್ರನು ಒಬ್ಬನೇ ಆಗಿರುವುದರಿಂದ ಸಮಸ್ತ ಚಂದ್ರರು ಎಂದು ಹೇಳಲಾಗುವುದಿಲ್ಲ.

ಅದರಂತೆ ಇಲ್ಲಿ—ವಿಶೇಷಣಗಳಾಗಿರುವ ಚಿದಚಿತ್ತುಗಳಲ್ಲಿ ಸಮಸ್ತ ಎಂಬ ಪದವನ್ನು ಪ್ರಯೋಗಿಸಿರುವುದರಿಂದ ಚಿದಚಿತ್ಪದಾರ್ಥಗಳು ಅನೇಕವಾಗಿರುವುವೆಂದು ಸಿದ್ಧವಾಯಿತು. ಅಲ್ಲದೆ ಆ ಸಮಸ್ತಪದವು ಚಿತ್ತಿನಲ್ಲಿಯೂ ಅಚಿತ್ತಿನಲ್ಲಿಯೂ ಪ್ರತ್ಯೇಕವಾಗಿ ಸಂಬಂಧಿಸುವುದರಿಂದ ಚಿತ್ಪದಾರ್ಥವೂ ಅಚಿತ್ಪದಾರ್ಥವೂ ಅನೇಕವಾಗಿ ಇರುವುವೆಂದು ಸಿದ್ಧವಾಯಿತು. ಇದರಮೇಲೆ ಚಿತ್ಪದಾರ್ಥವೂ ಅಚಿತ್ಪದಾರ್ಥವೂ ಪರಸ್ಪರ ಬೇರೆಯಾಗಿರುವುದೆಂಬುದೂ ದ್ವಂದ್ವಸಮಾಸದಿಂದ ಸಿದ್ಧವಾಯಿತು.

## ೮ ವಿಶಿಷ್ಟಪದಪ್ರಯೋಜನಂ.

ವಿಶೇಷಣವೂ ವಿಶೇಷ್ಯವೂ ಪರಸ್ಪರ ಬೇರೆಯಾಗಿರದೆ ಒಂದೇ ಆಗಿದ್ದರೆ ಅಂಥ ಸ್ಥಳದಲ್ಲಿ ವಿಶೇಷಣವಿಶೇಷ್ಯವ್ಯವಹಾರವೂ ವಿಶಿಷ್ಟ ಎಂಬ ಪದದ ಪ್ರಯೋಗವೂ ಸಂಭ ವಿಸುವುದಿಲ್ಲ. ರಾಮನೂ ಅವನ ಧನುಸ್ಸೂ ಬೇರೆಬೇರೆ ಪದಾರ್ಥವಾಗಿರದೆ ಒಂದೇ ಆಗಿದ್ದರೆ ರಾಮನು ಧನುಸ್ಸುಳ್ಳವನು ಎಂದು ಧನುಸ್ಸನ್ನು ರಾಮನಿಗೆ ವಿಶೇಷಣ ವಾಗಿಯೂ, ರಾಮನನ್ನು ವಿಶೇಷ್ಯವಾಗಿಯೂ ವ್ಯವಹರಿಸಲು ಅವಕಾಶವಿರುತ್ತಿರಲಿಲ್ಲ. ಮತ್ತು ರಾಮನು ಧನುರ್ವಿಶಿಷ್ಟನು ಎಂದು ವಿಶಿಷ್ಟಪದವನ್ನೂ ಪ್ರಯೋಗಿಸುವುದ ಕ್ಕಾಗುತ್ತಿರಲಿಲ್ಲ. ರಾಮನೂ ಅವನ ಧನುಸ್ಸೂ ಬೇರೆಬೇರೆ ಪದಾರ್ಥವಾಗಿರುವುದ

ರಿಂದಲೇ ಅವೆರಡಕ್ಕೂ ಸಂಯೋಗವುಂಟಾದಕಾಲದಲ್ಲಿ ವಿಶೇಷಣವಿಶೇಷ್ಯವ್ಯವಹಾರವೂ ವಿಶಿಷ್ಟಪದಪ್ರಯೋಗವೂ ಲೋಕದಲ್ಲಿ ಕಾಣಬರುವುವು.

ಆದರಂತೆ ಇಲ್ಲಿಯೂ ವಿಶೇಷಣವಾದ ಚಿದಚಿತ್ಪದಾರ್ಥಗಳೂ ವಿಶೇಷ್ಯವಾದ ನಾರಾಯಣಪದಾರ್ಥವೂ ಒಂದೇ ಆಗಿದ್ದಪಕ್ಷದಲ್ಲಿ ವಿಶೇಷಣವಿಶೇಷ್ಯವ್ಯವಹಾರಕ್ಕೂ, ವಿಶಿಷ್ಟಪದಪ್ರಯೋಗಕ್ಕೂ ಅವಕಾಶವಿರುತ್ತಿರಲಿಲ್ಲ. ಆದರೆ ಇಲ್ಲಿ ಆ ವ್ಯವಹಾರವನ್ನೂ ವಿಶಿಷ್ಟ ಎಂಬ ಪದದ ಪ್ರಯೋಗವನ್ನೂ ಮಾಡಿರುವುದರಿಂದ ಚಿದಚಿತ್ತೆಂಬ ವಿಶೇಷಣಗಳಿಗೂ ನಾರಾಯಣನೆಂಬ ವಿಶೇಷ್ಯಕ್ಕೂ ಸ್ವರೂಪಭೇದವುಂಟೆಂದೂ ಸಿದ್ಧವಾಯಿತು.

ಅಂತು—೧ ಚಿತ್ತುಗಳಿಗಿರುವ ಪರಸ್ಪರಸ್ವರೂಪಭೇದವೂ, ೨ ಅಚಿತ್ತುಗಳಿಗಿರುವ ಪರಸ್ಪರಸ್ವರೂಪಭೇದವೂ, ೩ ಚಿತ್ತುಗಳಿಗೂ ಅಚಿತ್ತುಗಳಿಗೂ ಇರುವ ಪರಸ್ಪರಸ್ವರೂಪಭೇದವೂ, ೪ ಚಿತ್ತುಗಳಿಗೂ ನಾರಾಯಣನಿಗೂ ಇರುವ ಪರಸ್ಪರಸ್ವರೂಪಭೇದವೂ, ೫ ಅಚಿತ್ತುಗಳಿಗೂ ನಾರಾಯಣನಿಗೂ ಇರುವ ಪರಸ್ಪರಸ್ವರೂಪಭೇದವೂ, ಹೀಗೆ ಐದುವಿಧವಾದ ಭೇದವೂ ಸಮಸ್ತಚಿದಚಿದ್ವಿಶಿಷ್ಟನಾದ ಎಂಬ ಪದದಿಂದ ಸೂಚಿಸಲ್ಪಟ್ಟಿರುವುದು. ಶ್ರೀಮನ್ನಾರಾಯಣನೊಬ್ಬನೇ ಎಂಬ ಪದದಿಂದ ವಿಶೇಷ್ಯದ ಅದ್ವೈತವು ಎಂದರೆ ಅಭೇದವು ತೋರಿಸಲ್ಪಟ್ಟಿರುವುದು. ಆದಕಾರಣ ವಿಶೇಷಣವಿಶೇಷ್ಯಗಳ ಭೇದವನ್ನೊಳಗೊಂಡು ಅಂಥ ಭೇದಕ್ಕೆ ವಿರುದ್ಧವಲ್ಲದ ವಿಶೇಷ್ಯಾಭೇದವು ಯಾವ ಸಿದ್ಧಾಂತದಲ್ಲಿ ಅಂಗೀಕರಿಸಲ್ಪಟ್ಟಿರುವುದೋ ಅಂಥ ಸಿದ್ಧಾಂತವು ವಿಶಿಷ್ಟಾದ್ವೈತಸಿದ್ಧಾಂತವೆನಿಸಿಕೊಳ್ಳುವುದು.

### ೯ ಯಥೋಕ್ತತತ್ತ್ವಪರಶ್ರುತೀನಾಂ ದಶವಿಧತ್ವಂ.

ಹೀಗೆ ಹಿಂದೆ ಹೇಳಿದ ಐದುವಿಧವಾದ ಭೇದಗಳೊಡನೆಯೂ ವಿಶೇಷ್ಯದ ಅಭೇದದೊಡನೆಯೂ ಕೂಡಿರುವ ತತ್ತ್ವವನ್ನು ಬೋಧಿಸುವುದಕ್ಕಾಗಿ ಹೊರಟಿರುವ ಶ್ರುತಿಗಳನ್ನು (ವೇದಾಂತವಾಕ್ಯಗಳನ್ನು)—೧ ಭೇದಶ್ರುತಿ, ೨ ಅಭೇದಶ್ರುತಿ, ೩ ಘಟಕಶ್ರುತಿ, ೪ ಕಾರಣಶ್ರುತಿ, ೫ ಸಗುಣಶ್ರುತಿ, ೬ ಶೋಧಕಶ್ರುತಿ, ೭ ನಿರ್ವಿಕಾರಶ್ರುತಿ, ೮ ನಿರ್ಗುಣಶ್ರುತಿ, ೯ ಭೇದನಿಷೇಧಶ್ರುತಿ, ೧೦ ತತ್ತ್ವಪರಶ್ರುತಿ, ಎಂದು ಸ್ಥೂಲರೂಪದಿಂದ ಹತ್ತು ರಾಶಿಯಾಗಿ ವಿಂಗಡಿಸಬಹುದು.

### ೧೦ ಭೇದಶ್ರುತ್ಯರ್ಥಃ (೧)

ಇವುಗಳಲ್ಲಿ ಒಂದನೆಯದಾದ ಭೇದಶ್ರುತಿ—ಹಿಂದೆ ಹೇಳಿದ ಐದು ವಿಧವಾದ ಭೇದಗಳನ್ನೂ ತಾತ್ತ್ವಿಕವಾಗಿ ಬೋಧಿಸುವುದಕ್ಕೋಸ್ಕರ ಹೊರಟಿರುವುದು.

## ೧೧ ಅಭೇದಶ್ರುತ್ಯರ್ಥಃ (೨)

ಎರಡನೆಯದಾದ ಅಭೇದಶ್ರುತಿ—ವಿಶೇಷ್ಯದ ಅಭೇದವನ್ನು (ಕಾರ್ಯಕಾರಣಗಳ ಅಭೇದವನ್ನು) ತಾತ್ತ್ವಿಕವಾಗಿ ತೋರಿಸುವುದಕ್ಕೋಸ್ಕರ ಹೊರಟಿರುವುದು.

## ೧೨ ಘಟಕಶ್ರುತ್ಯರ್ಥಃ. (೩)

ಮೂರನೆಯದಾದ ಘಟಕಶ್ರುತಿ ಎಂದರೆ ಚಿದಚಿದ್ರೂಪವಾದ ಜಗತ್ತಿಗೂ ನಾರಾಯಣನಿಗೂ ಶರೀರಶರೀರಿಭಾವಸಂಬಂಧವುಂಟೆಂದು ಬೋಧಿಸುವ ಶ್ರುತಿ-ಹಿಂದೆ ಹೇಳಿದ ಭೇದಶ್ರುತಿಗೂ ಅಭೇದಶ್ರುತಿಗೂ ಆಪಾತವಾಗಿ ತೋರಿಬರುವ ವಿರೋಧವನ್ನು ಪರಿಹರಿಸಿ ಅವುಗಳಿಗಿರುವ ಪರಸ್ಪರಸೌಹಾರ್ದವನ್ನು ತಾತ್ತ್ವಿಕವಾಗಿ ಬೋಧಿಸುವುದಕ್ಕೋಸ್ಕರ ಹೊರಟಿರುವುದು.

## ೧೩ ಕಾರಣಶ್ರುತ್ಯರ್ಥಃ. (೪)

ನಾಲ್ಕನೆಯದಾದ ಕಾರಣಶ್ರುತಿ— ಚಿದಚಿದಾತ್ಮಕವಾದ ಸ್ಥೂಲಪ್ರಪಂಚವನ್ನು ಕುರಿತು ಸೂಕ್ಷ್ಮಚಿದಚಿದ್ವಿಶಿಷ್ಟನಾದ ಶ್ರೀಮನ್ನಾರಾಯಣನೇ ಕಾರಣವಾಗಿರುವನೆಂದು ಅವನ ಸರ್ವಕಾರಣತ್ವವನ್ನು ತೋರಿಸುವುದರ ಮೂಲಕ ಅಪಾರವಾದ ಅವನ ಮಹಿಮೆಯನ್ನು ತಾತ್ತ್ವಿಕವಾಗಿ ತೋರಿಸುವುದಕ್ಕೋಸ್ಕರ ಪ್ರವರ್ತಿಸಿರುವುದು.

## ೧೪ ಸಗುಣಶ್ರುತ್ಯರ್ಥಃ. (೫)

ಐದನೆಯದಾದ ಸಗುಣಶ್ರುತಿ—ನಾರಾಯಣನಲ್ಲಿ ಸರ್ವಜ್ಞತ್ವ, ಸರ್ವಶಕ್ತಿತ್ವ ಮೊದಲಾದ ಅಸಂಖ್ಯಾತವಾದ ಕಲ್ಯಾಣಗುಣಗಳನ್ನು ಬೋಧಿಸುತ್ತ, ಕಾರಣತ್ವಕ್ಕೆ ಉಪಯೋಗಿಸುವ ಜ್ಞಾನಶಕ್ತ್ಯಾದಿಗುಣಗಳು ಅವನಲ್ಲಿ ತಾತ್ತ್ವಿಕವಾಗಿ ಇಲ್ಲದ ಪಕ್ಷದಲ್ಲಿ ತಾತ್ತ್ವಿಕವಾದ ಕಾರಣತ್ವವು ಅವನಿಗೆ ಸಿದ್ಧಿಸುವುದಿಲ್ಲವಾದುದರಿಂದ ಅದನ್ನು ಸ್ಥಿರಪಡಿಸುವುದಕ್ಕಾಗಿ ಅದಕ್ಕೆ ಬೇಕಾದ ಗುಣಗಳನ್ನು ತಾತ್ತ್ವಿಕವಾಗಿ ಬೋಧಿಸುವುದಕ್ಕೋಸ್ಕರ ಹೊರಟಿರುವುದು.

## ೧೫ ಶೋಧಕಶ್ರುತ್ಯರ್ಥಃ (೬)

ಆರನೆಯದಾದ ಶೋಧಕಶ್ರುತಿ—"ಸ್ಥೂಲಪ್ರಪಂಚವನ್ನು ಕುರಿತು ಸೂಕ್ಷ್ಮಚಿದಚಿದ್ವಿಶಿಷ್ಟನಾದ ನಾರಾಯಣನೇ ಕಾರಣವೆಂದು ಅವನ ಕಾರಣತ್ವವು ಹಿಂದೆ ಹೇಳಿದ ಕಾರಣಶ್ರುತಿಯಿಂದ ಸಿದ್ಧಿಸುವುದಾದರೆ, ಮತ್ತು ಅಂಥ ಕಾರ್ಯಕ್ಕೂ ಕಾರಣಕ್ಕೂ ಅಭೇದವನ್ನು ಅಭೇದಶ್ರುತಿಯಿಂದ ಒಪ್ಪಿಕೊಳ್ಳುವುದಾದರೆ, ಕಾರ್ಯರೂಪವಾದ ಜಗತ್ತಿನಲ್ಲಿರುವ ಸಮಸ್ತದೋಷವೂ, ಅಂಥ ಕಾರ್ಯವರ್ಗಕ್ಕಿಂತಲೂ ಬೇರೊಬ್ಬನಲ್ಲದ

ಕಾರಣವಾದ ನಾರಾಯಣನಲ್ಲಿಯೇ ಪ್ರಸಂಗಿಸುವುದಾದುದರಿಂದ, ಕಾರಣತ್ವವನ್ನು ಒಪ್ಪಿಕೊಳ್ಳುವುದಾದರೆ ದೋಷವನ್ನೂ ಒಪ್ಪಿಕೊಳ್ಳಬೇಕಾಗುವುದು; ದೋಷವನ್ನು ಒಪ್ಪಲು ಇಷ್ಟವಿಲ್ಲವಾದರೆ ಕಾರಣತ್ವವನ್ನು ಬಿಡಬೇಕಾಗುವುದು'' ಇಂಥ ಆಕ್ಷೇಪ ವನ್ನು ಪರಿಹರಿಸುವುದಕ್ಕಾಗಿ, ವಿಶಿಷ್ಟಸ್ವರೂಪವು ಕಾರಣವಾಗಿದ್ದರೂ ಕೇವಲ ವಿಶೇಷ್ಯಾಂಶವಾದ ಸ್ವರೂಪಮಾತ್ರವು ಕಾರಣವಲ್ಲವಾದುದರಿಂದ ಕಾರ್ಯಪ್ರಪಂಚದ ಲ್ಲಿರುವ ದೋಷವು ಕಾರಣಕೋಟಿಯಲ್ಲಿರುವ ವಿಶೇಷ್ಯಾಂಶವಾದ ನಾರಾಯಣನಲ್ಲಿ ಅಂಟುವುದಿಲ್ಲವಾದಕಾರಣ, ವಿಶೇಷ್ಯಸ್ವರೂಪವು ಯಾವಾಗಲೂ ಶುದ್ಧವಾಗಿಯೇ ಇರುವುದೆಂದು ಅದನ್ನು ಶೋಧನೆಮಾಡಿ ತೋರಿಸುವುದಕ್ಕಾಗಿ ಹೊರಟಿರುವುದು.

## ೧೬ ನಿರ್ವಿಕಾರಶ್ರುತ್ಯರ್ಥಃ. (೭)

ಏಳನೆಯದಾದ ನಿರ್ವಿಕಾರಶ್ರುತಿ—ಚಿತ್ಪದಾರ್ಥದಲ್ಲಿ ಸ್ವಭಾವದ ಮಾರ್ಪಾ ಡೆಂಬ ಸ್ವಭಾವವಿಕಾರಮಾತ್ರವಿರುವುದಲ್ಲದೆ ಸ್ವರೂಪವಿಕಾರವಿಲ್ಲ, ಅಚಿತ್ಪದಾರ್ಥದಲ್ಲಿ ಸ್ವರೂಪಸ್ವಭಾವಗಳೆರಡಕ್ಕೂ ಮಾರ್ಪಾಡಿರುವುದರಿಂದ ಎರಡುಬಗೆಯ ವಿಕಾರಗಳೂ ಉಂಟು; ವಿಶೇಷ್ಯವಾದ ನಾರಾಯಣನಲ್ಲಿಯಾದರೋ ಈ ಎರಡುಬಗೆಯ ವಿಕಾರ ಗಳಿಗೂ ಪ್ರಸಕ್ತಿಯೇ ಇಲ್ಲ; ಆದಕಾರಣ ಅವನ ಸ್ವರೂಪವು ಯಾವಾಗಲೂ ನಿರ್ವಿ ಕಾರವಾಗಿಯೇ ಇರುವುದು—ಎಂದು ತೋರಿಸಿ, ಹಿಂದೆ ಹೇಳಿದ ಶೋಧಕಶ್ರುತಿಗೆ ಸಹಾಯವನ್ನು ಮಾಡುವುದಕ್ಕೋಸ್ಕರ ಹೊರಟಿರುವುದು. ಆದುದರಿಂದಲೇ ಈ ಎರಡು ಶ್ರುತಿಗಳಿಗೂ ಅರ್ಥದಲ್ಲಿ ವಿಶೇಷತಾರತಮ್ಯವಿಲ್ಲವಾದುದರಿಂದ ಈ ಎರಡು ಶ್ರುತಿಗಳನ್ನೂ ಒಂದೇ ರಾಶಿಯಲ್ಲಿ ಅಂತರ್ಭಾವಮಾಡಿ ಹೇಳುವವರೂ ಉಂಟು.

## ೧೭ ನಿರ್ಗುಣಶ್ರುತ್ಯರ್ಥಃ. (೮)

ಎಂಟನೆಯದಾದ ನಿರ್ಗುಣಶ್ರುತಿ— ನಾರಾಯಣನಲ್ಲಿ ಸಗುಣಶ್ರುತಿಯಿಂದ ವಿಧಿಸಲ್ಪಟ್ಟ ಕಲ್ಯಾಣಗುಣಗಳಿಗೆ ವಿರುದ್ಧವಾದ ಸತ್ತ್ವರಜಸ್ತಮಸ್ಸೆಂಬ ಹೇಯಗುಣ ಗಳು ಯಾವಾಗಲೂ ಅವಕಾಶವನ್ನು ಪಡೆಯಲಾರವೆಂದು ಬೋಧಿಸುವುದರ ಮೂಲಕ ಕಲ್ಯಾಣಗುಣಗಳಿಗೆ ಹೇಯಗುಣಗಳ ಸಂಬಂಧದಿಂದುಂಟಾಗುವ ಕೊರತೆಯಿರಬಹು ದೆಂಬ ಶಂಕೆಯನ್ನು ಹೋಗಲಾಡಿಸಿ ಕಲ್ಯಾಣಗುಣಗಳ ಸರ್ವೋತ್ಕರ್ಷವನ್ನು ತೋರಿ ಸುವುದಕ್ಕೋಸ್ಕರ ಹೊರಟಿರುವುದು.

## ೧೮ ಭೇದನಿಷೇಧಶ್ರುತ್ಯರ್ಥಃ. (೯)

ಒಂಬತ್ತನೆಯದಾದ ಭೇದನಿಷೇಧಶ್ರುತಿ--ನಾರಾಯಣನಲ್ಲಿ ಭೇದಶ್ರುತಿಯಿಂದ ವಿಧಿಸಲ್ಪಟ್ಟ ಪರತಂತ್ರಭೇದಕ್ಕೆ ವಿರುದ್ಧವಾದ ಸ್ವತಂತ್ರಭೇದವು ಎಂದರೆ ನಾರಾಯಣ

ನಿಗೆ ವಿಶೇಷಣವಾಗದೆ ಇರುವ ಸ್ವತಂತ್ರವಾದ ಚಿದಚಿತ್ಪದಾರ್ಥಗಳ ಭೇದವೂ, ನಾರಾಯಣನಿಗಿಂತಲೂ ಬೇರೊಂದಾಗಿ ಸ್ವತಂತ್ರವಾಗಿರುವ ವಿಶೇಷ್ಯಾಂತರದ ಭೇದವೂ, ಇಲ್ಲವೆಂದು ತೋರಿಸಿ ಸಮಸ್ತವಾದ ಚಿದಚಿತ್ಪದಾರ್ಥವೂ ಇರಬೇಕಾದರೆ ಅವನಿಗೆ ವಿಶೇಷಣವಾಗಿಯೇ ಇರುವುದಲ್ಲದೆ ಸ್ವತಂತ್ರವಾಗಿ ಇಲ್ಲವೆಂದೂ. ಅಂಥ ವಿಶೇಷಣಗಳೊಡನೆ ಕೂಡಿರುವ ವಿಶೇಷ್ಯವೂ ನಾರಾಯಣನೇ ಆಗಿರುವುದಲ್ಲದೆ ಅವನಿಗೆ ಸಮಾನವಾದ ಅಥವಾ ಅವನಿಗಿಂತಲೂ ಅಧಿಕವಾದ ಬೇರೊಂದು ವಿಶೇಷ್ಯವಿಲ್ಲವೆಂದೂ ಸ್ಪಷ್ಟಪಡಿಸಿ ಭೇದಾಭೇದಶ್ರುತಿಗಳೆರಡನ್ನೂ ಸ್ಥಿರಪಡಿಸುವುದಕ್ಕೋಸ್ಕರ ಪ್ರವರ್ತಿಸಿರುವುದು.

### ೧೯ ತತ್ತ್ವಪರಶ್ರುತ್ಯರ್ಥಃ (೧೦)

ಹತ್ತನೆಯದಾದ ತತ್ತ್ವಪರಶ್ರುತಿ— ನಾನಾವಿಧವಾದ ಕಾರಣವಾಕ್ಯಗಳಲ್ಲಿ ಕಾರಣವಸ್ತುವನ್ನು ತೋರಿಸುವುದಕ್ಕಾಗಿ ಉಕ್ತವಾಗಿರುವ ಅಗ್ನಿ, ಇಂದ್ರ, ಶಿವ, ಶಂಭು, ಪ್ರಜಾಪತಿ, ಸತ್, ಬ್ರಹ್ಮ, ಆತ್ಮ-ಇವೇ ಮೊದಲಾದ ಸಮಸ್ತಶಬ್ದಗಳೂ ನಾರಾಯಣನನ್ನೇ ಕಾರಣವಾಗಿ ತೋರಿಸುವುವಲ್ಲದೆ ಅಗ್ನೀಂದ್ರಾದಿಗಳನ್ನಲ್ಲವೆಂಬ ಈ ಅರ್ಥವನ್ನು ವ್ಯಕ್ತಪಡಿಸುವುದಕ್ಕಾಗಿ ಆ ಆ ಶಬ್ದಗಳ ಜತೆಯಲ್ಲಿ ನಾರಾಯಣಶಬ್ದವನ್ನು ಸೇರಿಸಿ ಪಾಠಮಾಡಿ, ನಾನಾವಿಧವಾದ ಕಾರಣವಾಕ್ಯಗಳಲ್ಲಿ ಮಂದಮತಿಗಳಿಗೆ ಆಪಾತರೂಪವಾಗಿ ತೋರಿಬರುವ ವಿರೋಧವನ್ನು ಪರಿಹರಿಸುವುದರ ಮೂಲಕ ಸಮಸ್ತವಾದ ಕಾರಣವಾಕ್ಯಗಳಿಗೂ ಐಕಮತ್ಯವನ್ನು ತೋರಿಸಿ ನಾರಾಯಣನಲ್ಲಿಯೇ ಅವುಗಳಿಗೆ ಪರ್ಯವಸಾನವನ್ನು ಘಂಟಾಘೋಷವಾಗಿ ಹೇಳಿ ನಾರಾಯಣನ ಕಾರಣತ್ವವನ್ನು ಅಪ್ರಕಂಪ್ಯವಾಗಿ ನೆಲೆಗೊಳಿಸುವುದು.

### ೨೦ ಸರ್ವೋಪನಿಷದಾಂ ನಾರಾಯಣ ಏವ ಪಾತಿವ್ರತ್ಯಂ.

ಹೀಗೆ—ಸತ್ಕುಲಪ್ರಸೂತರಾಗಿಯೂ, ಒಬ್ಬರ ಅಭಿಪ್ರಾಯವನ್ನು ಮತ್ತೊಬ್ಬರು ಬಿಡದೆ ಐಕಮತ್ಯದಿಂದ ನಡೆದುಕೊಳ್ಳುವವರಾಗಿಯೂ, ಇರುವ ಅಕ್ಕತಂಗಿಯರಂತೆ ಈ ಹತ್ತು ಬಗೆಯ ಶ್ರುತಿಕನ್ಯೆಯರೂ—ವರ್ಣಿಸಲಶಕ್ಯವಾದ ಪರಸ್ಪರ ಪ್ರೀತಿಯಿಂದ ಐಕಮತ್ಯವನ್ನು ತೋರಿಸುತ್ತ ಪರಮತತ್ತ್ವವಾದ ಶ್ರೀಮನ್ನಾರಾಯಣನ ಅಪ್ರತಿಮವಾಗಿಯೂ ಸರ್ವತೋಮುಖವಾಗಿಯೂ ಇರುವ ವೈಭವವನ್ನು ಐಕಕಂಠ್ಯದಿಂದ ಉದ್ಘೋಷಿಸುತ್ತ ಸ್ವಪ್ನದಲ್ಲಿಯೂ ದೇವತಾಂತರದಲ್ಲಿ ಪರತ್ವಬುದ್ಧಿಯನ್ನು ಮಾಡದೆ ಶ್ರೀಮನ್ನಾರಾಯಣನಲ್ಲಿಯೇ ತಮಗಿರುವ ಭಾವಬಂಧವನ್ನು ತೋರಿಸುವುದರ ಮೂಲಕ ಅವನನ್ನೇ ಪಾಣಿಗ್ರಹಣವಿಧಿಯಿಂದ ಸ್ವೀಕರಿಸಿ ತಮ್ಮ ಪಾತಿವ್ರತ್ಯಕ್ಕೆ ಲೇಶಮಾತ್ರವೂ ಭಂಗವಿಲ್ಲದಂತೆ ನಡೆದುಕೊಳ್ಳುತ್ತಿರುವರು.

## ೨೧ ಮತಾಂತರೇ ಸರ್ವಶ್ರುತೀನಾಮಸಾಮಂಜಸ್ಯಂ.

ಸಕಲಶಾಸ್ತ್ರಗಳಿಗೂ ತಾತ್ಪರ್ಯಭೂಮಿಯಾದ ಇಂಥ ವಿಶಿಷ್ಟಾದ್ವೈತಸಿದ್ಧಾಂತವನ್ನು ಬಿಟ್ಟರೆ ಉಳಿದ ಯಾವ ಮತದಲ್ಲಿಯೂ ಸಕಲಶ್ರುತಿಗಳಿಗೂ ಸಾಮಂಜಸ್ಯವನ್ನು ನಿರೂಪಿಸಲು ಶಕ್ಯವಲ್ಲ. ಹೇಗೆಂದರೆ—

## ೨೨ ಅದ್ವೈತಮತೇ ಸರ್ವಶ್ರುತಿವೈಯರ್ಥ್ಯಂ. (೧)

ಅದ್ವೈತಮತದಲ್ಲಿ— ಅದ್ವೈತಶ್ರುತಿಯೊಂದೇ (ಅಭೇದಶ್ರುತಿಯೊಂದೇ) ಪ್ರಮಾಣವಾಗಿ ಕೊನೆಗೆ ನಿಲ್ಲುವುದಲ್ಲದೆ ಉಳಿದ ಎಲ್ಲಾ ಶ್ರುತಿಗಳೂ ಸಮುದ್ರಘೋಷದಂತೆ ವ್ಯರ್ಥವಾಗುವುವು. ಇನ್ನೂ ಸೂಕ್ಷ್ಮವಾಗಿ ವಿಚಾರಮಾಡಿ ನೋಡಿದರೆ ಅದ್ವೈತಶ್ರುತಿಯೂ ಕೊನೆಗೆ ನಿಲ್ಲಲಾರದು. ಏತಕ್ಕೆಂದರೆ— ಇತರ ಶ್ರುತಿಗಳಂತೆ ಅದ್ವೈತಶ್ರುತಿಯೂ ಬ್ರಹ್ಮವ್ಯತಿರಿಕ್ತವಾದುದರಿಂದ ಅವಿದ್ಯೆಯಿಂದ ಕಲ್ಪಿತವಾಗಿರುವುದು ಕಲ್ಪಿತವಾದುದೆಲ್ಲಾ ಮಿಥ್ಯೆಯಾಗಬೇಕಲ್ಲವೇ ?

## ೨೩ ದ್ವೈತಮತೇ ದ್ವೈತೇತರಶ್ರುತಿವೈಯರ್ಥ್ಯಂ. (೨)

ದ್ವೈತಮತದಲ್ಲಿ ದ್ವೈತಶ್ರುತಿಯೊಂದೇ (ಭೇದಶ್ರುತಿಯೊಂದೇ) ಜೀವಿಸಬಹುದು ; ಉಳಿದುವುಗಳೆಲ್ಲಾ ನಿಷ್ಪ್ರಯೋಜನವು. ಇನ್ನೂ ವಿಚಾರಮಾಡಿ ನೋಡಿದರೆ ದ್ವೈತಶ್ರುತಿಯೂ ಸಹ ಈ ಮತದಲ್ಲಿ ಜೀವಿಸಲಾರದು. ಹೇಗೆಂದರೆ— ಚಿದಚಿದಾತ್ಮಕವಾದ ಪ್ರಪಂಚಕ್ಕೂ ಸರ್ವೇಶ್ವರನಿಗೂ ಶರೀರಶರೀರಿಭಾವಸಂಬಂಧವನ್ನು ಈ ಮತದವರು ಒಪ್ಪುವುದಿಲ್ಲ. ಇದರಿಂದ— ಈಶ್ವರನೊಡನೆ ಪ್ರಪಂಚಕ್ಕೆ ಅಪೃಥಕ್ಸಿದ್ಧಿಸಂಬಂಧವು ಇವರ ಮತದಲ್ಲಿ ಸಿದ್ಧಿಸಲಿಲ್ಲವೆಂದು ಫಲಿತವಾಯಿತು. ಈಶ್ವರನಿಗೂ ಪ್ರಪಂಚಕ್ಕೂ ಭೇದವನ್ನು ಮಾತ್ರ ಒಪ್ಪುವರು ಇದರಿಂದ ಅಪೃಥಕ್ಸಿದ್ಧಿಸಂಬಂಧವಿಲ್ಲದ ವಸ್ತುವಿನ ಭೇದವು ಘಟಪಟಗಳ ಭೇದದಂತೆ ಸ್ವತಂತ್ರವಸ್ತುಗಳ ಭೇದವಾಗುವುದಲ್ಲದೆ ಪರತಂತ್ರವಸ್ತುಗಳ ಭೇದವಾಗುವುದಿಲ್ಲವೆಂದು ಫಲಿತವಾಯಿತು. ಭೇದಶ್ರುತಿ ಇಂಥ ಭೇದವನ್ನೇ ಹೇಳುತ್ತಿರುವುದೆಂದು ಇವರು ಒಪ್ಪುವರು. ಇದು ಸಂಗತವಾಗಲಾರದು. ಏತಕ್ಕೆಂದರೆ–ಭೇದಾಭೇದಶ್ರುತಿಗಳಿಗೆ ಆಪಾತವಾಗಿ ತೋರಿಬರುವ ವಿರೋಧವು ಘಟಕಶ್ರುತಿಯಿಂದ ಪರಿಹರಿಸಲ್ಪಟ್ಟಮೇಲೆ ಭೇದಶ್ರುತಿಯಾಗಲಿ, ಅಭೇದಶ್ರುತಿಯಾಗಲಿ ಒಂದರ ಭಾವವನ್ನು ಮತ್ತೊಂದು ತಿರಸ್ಕರಿಸಲಾರದು ಭೇದಶ್ರುತಿಯಿಂದ ಬೋಧಿಸಲ್ಪಟ್ಟ ಭೇದವನ್ನೊಳಪಡಿಸಿಕೊಂಡೇ ಅಭೇದಶ್ರುತಿ ಶರೀರಶರೀರಿಭಾವದಿಂದ ಅಭೇದವನ್ನು ಹೇಗೆ ಬೋಧಿಸುವುದೋ ಅದರಂತೆಯೇ— ಅಭೇದಶ್ರುತಿಯಿಂದ ಬೋಧಿಸಲ್ಪಟ್ಟ ಅಭೇದವನ್ನೊಳಪಡಿಸಿಕೊಂಡೇ ಭೇದಶ್ರುತಿ ಪರತಂತ್ರಭೇದ

ವನ್ನೇ ಬೋಧಿಸಬೇಕಷ್ಟೆ ? ಮತ್ತು ಭೇದನಿಷೇಧಶ್ರುತಿ ಭೇದಶ್ರುತಿಯಿಂದ ವಿಧಿಸಲ್ಪಟ್ಟ ಪರತಂತ್ರಭೇದವನ್ನು ಮುಟ್ಟದೆ ಅದಕ್ಕೆ ವಿರೋಧವಾದ ಸ್ವತಂತ್ರಭೇದವನ್ನು ನಿಷೇಧಿಸುತ್ತಿರುವುದಾದುದರಿಂದ ಇವರಿಗೆ ಅಭಿಮತವಾದ ಭೇದವು ಎಂದರೆ ಶರೀರಶರೀರಿಭಾವಸಂಬಂಧವಿಲ್ಲದ ಸ್ವತಂತ್ರವಸ್ತುಗಳ ಭೇದವು ನಿಷೇಧಶಾಸ್ತ್ರಕ್ಕೆ ಗುರಿಯಾಗಿರುವುದು. ಇದರಿಂದ — ದ್ವೈತಿಗಳಿಗೆ ಅಭಿಮತವಾದ ಭೇದವು ಎಂದರೆ ಆತ್ಯಂತಿಕಭೇದವು ಭೇದಶ್ರುತಿಯಿಂದ ಸಿದ್ಧವಾಗುವುದಿಲ್ಲ. ಆದುದರಿಂದ ದ್ವೈತಮತದಲ್ಲಿಯೂ ಸರ್ವಶ್ರುತಿಗಳಿಗೂ ವೈಯರ್ಥ್ಯವೇ ಫಲಿಸಿರುವುದೆಂದು ಹೇಳಬಹುದು.

### ೨೪ ಸಾಂಖ್ಯಮತೇಽಪಿ ಸರ್ವಶ್ರುತಿವೈಯರ್ಥ್ಯಂ. (೩)

ಪ್ರಕೃತಿಯೇ ಜಗತ್ಕಾರಣವೆಂದು ಹೇಳುವ ಸಾಂಖ್ಯಮತದಲ್ಲಿ — ನಾರಾಯಣನೇ ಜಗತ್ಕಾರಣವೆಂದು ಹೇಳುವ ಶ್ರುತಿವಾಕ್ಯದೊಡನೆ ವಿರೋಧವುಂಟಾಗುವುದರಿಂದಲೂ, ಅಚೇತನವಾದ ಪ್ರಕೃತಿಗೆ ಚೇತನನ ಸಹಾಯವಿಲ್ಲದಿದ್ದರೆ ಜಗದಾಕಾರವಾಗಿ ಪರಿಣಮಿಸುವುದಕ್ಕೆ ಸಾಮರ್ಥ್ಯವಿಲ್ಲವೆಂಬ ಅನುಪಪತ್ತಿಯಿರುವುದರಿಂದಲೂ, ನಿರೀಶ್ವರವಾದವನ್ನು ಕೈಗೊಂಡಿರುವುದರಿಂದ ಈಶ್ವರನ ಸ್ವರೂಪ-ರೂಪ-ಗುಣ-ವಿಭೂತಿ-ಚೇಷ್ಟೆಗಳನ್ನು ವಿಶದಪಡಿಸುವ ಶ್ರುತಿವಾಕ್ಯಗಳಿಗೆ ಲೇಶಮಾತ್ರವೂ ಪ್ರಯೋಜನವಿಲ್ಲದೆ ಹೋಗುವುದರಿಂದಲೂ, ಸಕಲಶ್ರುತಿವಾಕ್ಯಗಳೂ ವ್ಯರ್ಥವಾಗುವುವು.

### ೨೫ ಯೋಗಮತೇ ಈಶ್ವರಸ್ಯ ತ್ರಿವಿಧಕಾರಣತ್ವಪ್ರತಿಪಾದಕಶ್ರುತಿವಿರೋಧಃ. (೪)

ಯೋಗಮತದಲ್ಲಿ ಈಶ್ವರನನ್ನು ಒಪ್ಪಿಕೊಂಡರೂ, ಅಂಥ ಈಶ್ವರನನ್ನು ಜಗತ್ತಿಗೆ ನಿಮಿತ್ತಕಾರಣವಾಗಿಮಾತ್ರ ಅವರು ಒಪ್ಪಿರುವರಾದುದರಿಂದ ಈಶ್ವರನನ್ನೇ (ನಾರಾಯಣನನ್ನೇ) ತ್ರಿವಿಧಕಾರಣವಾಗಿ ಹೇಳುವ ಶ್ರುತಿವಾಕ್ಯದೊಡನೆ ವಿರೋಧವು ಪರಿಹರಿಸಲಶಕ್ಯವಾಗಿರುವುದು.

### ೨೬ ನ್ಯಾಯ-ವೈಶೇಷಿಕಮತಯೋರಪಿ ಶ್ರುತಿವಿರೋಧೋ ವೇದಾಂತಶಾಸ್ತ್ರವೈಯರ್ಥ್ಯಂಚ. (೫-೬)

ಪರಮಾಣುಗಳನ್ನೇ ಜಗತ್ಕಾರಣವಾಗಿ ಒಪ್ಪಿಕೊಳ್ಳುವ ನ್ಯಾಯ-ವೈಶೇಷಿಕಮತಗಳಲ್ಲಿಯೂ ಈಶ್ವರನನ್ನು ನಿಮಿತ್ತಕಾರಣಕೋಟಿಯಲ್ಲಿ ಸೇರಿಸಿರುವುದರಿಂದ ಹಿಂದೆ ಹೇಳಿದ ವಿರೋಧವು ಇಲ್ಲಿಯೂ ತಪ್ಪಿದುದಲ್ಲ. ಮತ್ತು ಶಬ್ದಪ್ರಮಾಣದಿಂದ

ಈಶ್ವರನನ್ನು ಒಪ್ಪಿಕೊಳ್ಳದೆ ಅನುಮಾನಪ್ರಮಾಣದಿಂದಲೇ ಅವನನ್ನು ಸಾಧಿಸುವರಾದುದರಿಂದ ಇಂಥವರಿಗೆ ಈಶ್ವರಸಿದ್ಧಿಯೇ ಇಲ್ಲದಂತಾಗುವುದು. ಹೇಗೆಂದರೆ—ಸಕಲ ಜಗತ್ತಿಗೂ ಕಾರಣವಾಗಿ ಅನುಮಾನಪ್ರಮಾಣದಿಂದ ನಿಷ್ಕರ್ಷಿಸಲ್ಪಡುವ ಒಬ್ಬಾನೊಬ್ಬ ಚೇತನನು ವಿಲಕ್ಷಣಶಕ್ತಿಯುಳ್ಳ ವಿಶ್ವಾಮಿತ್ರಾದಿಗಳಂತೆ ಜೀವಕೋಟಿಯಲ್ಲಿ ಸೇರಿದವನೊಬ್ಬನಾಗಿಯೇ ಇರಬಹುದಾದುದರಿಂದ ಜೀವನಿಗಿಂತಲೂ ವಿಲಕ್ಷಣನಾಗಿಯೂ ಜಗತ್ಕಾರಣವಾಗಿಯೂ ಇರುವ ಈಶ್ವರನು ಶಬ್ದಪ್ರಮಾಣದಿಂದಲ್ಲದೆ ಅನುಮಾನಪ್ರಮಾಣದಿಂದ ಎಂದಿಗೂ ಸಿದ್ಧಿಸಲಾರನು. ಇಂಥವರ ಮತದಲ್ಲಿ ಈಶ್ವರ ವಿಚಾರರೂಪವಾದ ವೇದಾಂತಶಾಸ್ತ್ರವು ಸಂಪೂರ್ಣವಾಗಿಯೂ ವ್ಯರ್ಥವಾಗುವುದು.

## ೨೭ ಸ್ಫೋಟವಾದಿವೈಯಾಕರಣಮತೇ ನಾರಾಯಣಕಾರಣತ್ವಶ್ರುತಿವಿರೋಧಃ (೭)

ಅಖಂಡವಾದ ಸ್ಫೋಟವೆಂಬ ಶಬ್ದಬ್ರಹ್ಮವನ್ನು ಕಾರಣವಾಗಿ ಒಪ್ಪಿಕೊಳ್ಳುವ ವೈಯಾಕರಣರ ಮತದಲ್ಲಿ—ಇಂಥ ಶಬ್ದಬ್ರಹ್ಮವು ಅಚೇತನವಾದುದರಿಂದ ಚೇತನನಾದ ನಾರಾಯಣನನ್ನು ಜಗತ್ಕಾರಣವಾಗಿ ಹೇಳುವ ವೇದಾಂತವಾಕ್ಯದೊಡನೆ ವಿರೋಧವು ಪರಿಹರಿಸಲಶಕ್ಯವಾಗಿರುವುದು.

## ೨೮ ಮೀಮಾಂಸಕಮತೇ ಸೃಷ್ಟಿಪ್ರಳಯೇಶ್ವರಾದಿಪ್ರತಿಪಾದಕವಾಕ್ಯವೈಯರ್ಥ್ಯಂ. (೮)

ಸೃಷ್ಟಿ, ಪ್ರಳಯ, ಈಶ್ವರ, ಅವನ ಸ್ವರೂಪ, ರೂಪ, ಗುಣ, ವಿಭೂತಿ, ಚೇಷ್ಟೆ ಮುಂತಾದುವುಗಳನ್ನು ಒಪ್ಪದಿರುವ ಮೀಮಾಂಸಕರ ಮತದಲ್ಲಿ, ಅವುಗಳನ್ನು ವಿಶದವಾಗಿ ತೋರಿಸುವ ಶ್ರುತಿವಾಕ್ಯಗಳ ಸಮೂಹವೇ ನಿಷ್ಪ್ರಯೋಜನವಾಗುವುದು.

ಹೀಗೆ ದಿಗ್ದಂತಿಗಳಂತೆ ಅತ್ಯಂತಪ್ರಬಲರೆನಿಸಿಕೊಂಡಿರುವ ಪೂರ್ವೋಕ್ತರಾದವರ ಮತಗಳಲ್ಲಿಯೇ ನಾನಾವಿಧವಾದ ವಿರೋಧವು ದುಷ್ಪರಿಹರವಾಗಿರುವಲ್ಲಿ ಕ್ಷುದ್ರವಾದ ಮತಾಂತರಗಳಲ್ಲಿ ಯಾವ ದುರ್ದಶೆಯಿರಬಹುದೆಂಬುದನ್ನು ಸೂಕ್ಷ್ಮಬುದ್ಧಿಯುಳ್ಳವರು ಊಹಿಸಿ ನೋಡಿಕೊಳ್ಳಬಹುದು.

## ೨೯ ತಸ್ಮಾತ್ ವಿಶಿಷ್ಟಾದ್ವೈತಸಿದ್ಧಾಂತಸ್ವೀಕಾರಾವಶ್ಯಕತಾ.

ಆದಕಾರಣ—ಶ್ರುತಿ, ಸ್ಮೃತಿ, ಇತಿಹಾಸ, ಪುರಾಣ, ಆಗಮ ಮುಂತಾದ ಸಕಲಶಾಸ್ತ್ರಗಳಿಗೂ ಏಕಕಂಠ್ಯವನ್ನೂ ಸ್ವಾರಸ್ಯವನ್ನೂ ಅಪೇಕ್ಷಿಸುವವರಿಗೆ ವಿಶಿಷ್ಟಾದ್ವೈತಸಿದ್ಧಾಂತವನ್ನು ಬಿಟ್ಟರೆ ಬೇರೆ ಮಾರ್ಗವಿಲ್ಲ.

೩೦ ವಿಶಿಷ್ಟಾದ್ವೈತಸ್ಯ ಸಕಲಶಾಸ್ತ್ರತಾತ್ಪರ್ಯಭೂಮಿತ್ವೋಪಸಂಹಾರಃ.

ಆದುದರಿಂದಲೇ—ಸಮಸ್ತಚಿದಚಿದ್ವಿಶಿಷ್ಟನಾದ ಶ್ರೀಮನ್ನಾರಾಯಣನೊಬ್ಬನೇ ತತ್ತ್ವವೆಂಬುದು ಸಕಲವೇದ-ಶಾಸ್ತ್ರಗಳು-ಪುರಾಣೇತಿಹಾಸಗಳ ಸಿದ್ಧಾಂತಸಾರವಾಗಿರುವುದು ಎಂದು ಮೊದಲೇ ಸೂಚಿಸಿರುವೆವು.

ಇಂತು ತತ್ತ್ವಶುದ್ಧಿಯೆಂಬ ವಿಶಿಷ್ಟಾದ್ವೈತಪ್ರಕರಣಗ್ರಂಥದೊಳ್
ಅಚಿತ್ತತ್ತ್ವಪರಿಚ್ಛೇದನಲ್ಲಿ ಪೀಠಿಕೆಯೆಂಬ
ಪ್ರಥಮಪ್ರಕರಣಂ.

---

# ದ್ವಿತೀಯ ಪ್ರಕರಣಂ.

---

## ೩೧ ದ್ರವ್ಯಾದ್ರವ್ಯಭೇದೇನ ತತ್ತ್ವಸ್ಯ ದ್ವೈವಿಧ್ಯಂ.

ಇಂಥ ವಿಶಿಷ್ಟವೆಂಬ ತತ್ತ್ವದಲ್ಲಿ ಅಡಗಿರುವ ಪದಾರ್ಥಗಳನ್ನು ದ್ರವ್ಯವೆಂದೂ, ಅದ್ರವ್ಯವೆಂದೂ ಎರಡುರಾಶಿಯಾಗಿ ವಿಂಗಡಿಸಬಹುದು.

## ೩೨ ದ್ರವ್ಯಲಕ್ಷಣಂ.

ಯಾವುದು ಉಪಾದಾನಕಾರಣವಾಗಿರುವುದೋ ಅದು ದ್ರವ್ಯವೆನಿಸಿಕೊಳ್ಳುವುದು. ಯಾವುದು ಅವಸ್ಥೆಗೆ ಆಶ್ರಯವಾಗಿರುವುದೋ ಅದು ಉಪಾದಾನಕಾರಣವೆನಿಸಿಕೊಳ್ಳುವುದು. ಯಾವುದು ಆಗಂತುಕವಾಗಿಯೂ, ಅಪೃಥಕ್ಸಿದ್ಧವಾಗಿಯೂ, ಧರ್ಮಿಯಲ್ಲಿರುವ ಧರ್ಮವಾಗಿಯೂ ಇರುವುದೋ ಅದು ಅವಸ್ಥೆಯೆನಿಸಿಕೊಳ್ಳುವುದು.

## ೩೩ ದ್ರವ್ಯಲಕ್ಷಣಸ್ಯ ಅದ್ರವ್ಯೇ ಅತಿವ್ಯಾಪ್ತಿತತ್ಪರಿಹಾರೌ.

ಈ ಲಕ್ಷಣವಾಕ್ಯದಲ್ಲಿ ಆಗಂತುಕವೆಂಬ ವಿಶೇಷಣದಳವನ್ನು ಹೇಳದಿದ್ದರೆ ಅಪೃಥಕ್ಸಿದ್ಧವಾದ ಧರ್ಮವು ಅವಸ್ಥೆಯೆನಿಸಿಕೊಳ್ಳುವುದು ಎಂದು ಲಕ್ಷಣವಾಗುವುದು; ಆಗ ಶಬ್ದ-ಸ್ಪರ್ಶ-ಮೊದಲಾದ ಮುಂದೆ ಹೇಳುವ ಅದ್ರವ್ಯಗಳಲ್ಲಿ ಪ್ರಮೇಯತ್ವವೆಂಬ ಧರ್ಮವು ಅಪೃಥಕ್ಸಿದ್ಧವಾಗಿರುವುದರಿಂದ ಅದು ಅವಸ್ಥೆಯೆನಿಸಿಕೊಳ್ಳಬೇಕಾಗುವುದು; ಅಂಥ ಅವಸ್ಥೆಗೆ ಆಶ್ರಯವಾದುದರಿಂದ ಶಬ್ದಾದಿಗಳೂ ಉಪಾದಾನವಾಗಬೇಕಾಗುವುದು ; ಉಪಾದಾನವಾದುದರಿಂದ ಅದ್ರವ್ಯವೂ ದ್ರವ್ಯವಾಗಬೇಕಾಗಿ ದ್ರವ್ಯಲಕ್ಷಣಕ್ಕೆ ಅದ್ರವ್ಯದಲ್ಲಿ ಅತಿವ್ಯಾಪ್ತಿದೋಷವುಂಟಾಗುವುದು.

ಇದಕ್ಕಾಗಿ ಲಕ್ಷಣದಲ್ಲಿ ಆಗಂತುಕವೆಂಬ ವಿಶೇಷಣದಳವನ್ನು ಸೇರಿಸಿದರೆ— ಶಬ್ದಾದಿಗಳಲ್ಲಿರುವ ಪ್ರಮೇಯತ್ವವೆಂಬ ಧರ್ಮವು ಅವುಗಳಿಗೆ ಸ್ವಭಾವಸಿದ್ಧವಾಗಿರುವುದರಿಂದ ಆಗಂತುಕವಾಗಲಾರದು; ಆದುದರಿಂದಲೇ ಅದು ಅವುಗಳಿಗೆ ಅಪೃಥಕ್ಸಿದ್ಧವಾಗಿದ್ದರೂ ಆಗಂತುಕವಲ್ಲವಾದುದರಿಂದ ಅವಸ್ಥೆಯೆನಿಸಿಕೊಳ್ಳಲಾರದು; ಅವಸ್ಥೆಯಾಗದಿರುವುದರಿಂದ ಅದಕ್ಕೆ ಆಶ್ರಯವಾದ ಶಬ್ದಾದಿಗಳು ಉಪಾದಾನವಾಗಲಾರವು. ಉಪಾದಾನವಾಗದಿರುವುದರಿಂದ ದ್ರವ್ಯವೆನಿಸಿಕೊಳ್ಳಲಾರವು; ಆದಕಾರಣ ದ್ರವ್ಯಲಕ್ಷಣಕ್ಕೆ ಅದ್ರವ್ಯದಲ್ಲಿ ಅತಿವ್ಯಾಪ್ತಿದೋಷಕ್ಕೆ ಅವಕಾಶವಿಲ್ಲ.

ಈ ಲಕ್ಷಣವಾಕ್ಯದಲ್ಲಿ ಅಪೃಥಕ್ಸಿದ್ಧವೆಂಬ ವಿಶೇಷಣದಳವನ್ನು ಹೇಳದಿದ್ದರೆ— ಆಗಂತುಕವಾದ ಪದಾರ್ಥವು ಅವಸ್ಥೆಯೆನಿಸಿಕೊಳ್ಳುವುದು ಎಂದು ಲಕ್ಷಣವಾಗುವುದು; ಆಗ ಶಬ್ದವೆಂಬ ಅದ್ರವ್ಯದಲ್ಲಿ ದ್ರವ್ಯಲಕ್ಷಣಕ್ಕೆ ಪುನಃ ಅತಿವ್ಯಾಪ್ತಿದೋಷವುಂಟಾಗುವುದು. ಹೇಗೆಂದರೆ— ತನ್ನ ಆಶ್ರಯದಲ್ಲಿ ಎಂದೆಂದಿಗೂ ಇರದೆ ಒಂದಾನೊಂದು ಕಾಲವಿಶೇಷದಲ್ಲಿಮಾತ್ರ ಉಂಟಾಗುವ ಧರ್ಮವು ಆಗಂತುಕವೆನಿಸಿಕೊಳ್ಳುವುದು; ಮೃತ್ಪಿಂಡದಲ್ಲಿ ಈಗ ಪಿಂಡತ್ವವೆಂಬ ಧರ್ಮವಿದ್ದರೂ (ಅವಸ್ಥೆಯಿದ್ದರೂ) ಅದನ್ನು ಕುಲಾಲನು ಕೆಲಸಕ್ಕೆ ಉಪಯೋಗಿಸಿಕೊಂಡಾಗ ಅದರಲ್ಲಿ ಪಿಂಡತ್ವಾವಸ್ಥೆ ಹೋಗಿ ಘಟತ್ವವೆಂಬ ಅವಸ್ಥೆಯುಂಟಾಗುವುದು. ಆ ಘಟವನ್ನು ಒಡೆದುಹಾಕಿದರೆ ಘಟತ್ವಾವಸ್ಥೆ ಹೋಗಿ ಕಪಾಲತ್ವಾವಸ್ಥೆಯುಂಟಾಗುವುದು. ಕಪಾಲವನ್ನು ಚೆನ್ನಾಗಿ ಪುಡಿಮಾಡಿದರೆ ಕಪಾಲತ್ವಾವಸ್ಥೆ ಕಳೆದು ಚೂರ್ಣತ್ವಾವಸ್ಥೆಯುಂಟಾಗುವುದು. ಆ ಚೂರ್ಣವನ್ನು ನೀರಿನಿಂದ ಕಲಸಿ ಉಂಡೆಮಾಡಿದರೆ ಚೂರ್ಣತ್ವಾವಸ್ಥೆ ಹೋಗಿ ಪಿಂಡತ್ವಾವಸ್ಥೆಯುಂಟಾಗುವುದು. ಯಾವ ಪದಾರ್ಥವು ಮೊದಲು ಪಿಂಡತ್ವಾವಸ್ಥೆಗೆ ಆಶ್ರಯವಾಗಿದ್ದಿತೋ ಅದೇ ಪದಾರ್ಥವು ಕಾಲಕ್ರಮದಿಂದ ಘಟತ್ವ-ಕಪಾಲತ್ವ-ಚೂರ್ಣತ್ವ ಎಂಬ ಅವಸ್ಥೆಗಳಿಗೆ ಆಶ್ರಯವಾಗುವುದೇ ಹೊರತು ಏಕಕಾಲದಲ್ಲಿ ಎಲ್ಲಾ ಅವಸ್ಥೆಗಳಿಗೂ ಆಶ್ರಯವಾಗಲಾರದು. ಆದಕಾರಣ ಆ ಅವಸ್ಥೆಗಳು ತಮ್ಮ ಆಶ್ರಯದಲ್ಲಿ ಎಂದೆಂದಿಗೂ ಇರದೆ ಒಂದುಕಾಲವಿಶೇಷದಲ್ಲಿಮಾತ್ರ ಉಂಟಾಗುವುವಾದುದರಿಂದ ಆ ಪದಾರ್ಥಕ್ಕೆ ಅವು ಆಗಂತುಕವೆನಿಸಿಕೊಳ್ಳುವುವು.

ಅದರಂತೆ— ಸೂಕ್ಷ್ಮಚಿದಚಿದ್ವಿಶಿಷ್ಟವಾದ ಬ್ರಹ್ಮವು ಸ್ಥೂಲಚಿದಚಿದ್ವಿಶಿಷ್ಟವಾಗಿ ಪರಿಣಮಿಸುವ ಕಾಲದಲ್ಲಿ ಮೊದಲು ಪ್ರಕೃತಿತ್ವಾವಸ್ಥೆಯೂ ಅನಂತರದಲ್ಲಿ ಕ್ರಮವಾಗಿ ಮಹತ್ತ್ವ, ಅಹಂಕಾರತ್ವ, ತನ್ಮಾತ್ರತ್ವ, ಆಕಾಶತ್ವ ಮೊದಲಾದ ಅವಸ್ಥೆಗಳೂ ಉಂಟಾಗುವುವು. ಆದಕಾರಣ ಆಕಾಶವೆಂಬ ಪದಾರ್ಥವು ತನಗೆ ಆಶ್ರಯ

ವಾದ ಬ್ರಹ್ಮವೆಂಬ ಪದಾರ್ಥದಲ್ಲಿ ಎಂದೆಂದಿಗೂ ಇರದೆ ಕಾಲವಿಶೇಷದಲ್ಲಿ ಉಂಟಾಗಿರುವುದರಿಂದ ಅಂಥ ಬ್ರಹ್ಮಕ್ಕೆ ಅಂಥ ಆಕಾಶವು ಆಗಂತುಕವಾಗಿರುವುದು.

ಆಕಾಶವು ಶಬ್ದಕ್ಕೆ ಆಧಾರವಾಗಿಯೂ, ಶಬ್ದವು ಆಕಾಶಕ್ಕೆ ಆಧೇಯವಾಗಿಯೂ ಇರುವುದರಿಂದ ಆಧಾರತ್ವಸಂಬಂಧದಿಂದ ಆಕಾಶವು ಶಬ್ದವಿಶಿಷ್ಟವಾಗಿರುವುದೆಂದು ಹೇಗೆ ವ್ಯವಹರಿಸುವೆವೋ ಹಾಗೆಯೇ ಆಧೇಯತ್ವಸಂಬಂಧದಿಂದ ಶಬ್ದವು ಆಕಾಶವಿಶಿಷ್ಟವಾಗಿರುವುದೆಂದೂ ವ್ಯವಹರಿಸಬಹುದು.

ಆದಕಾರಣ ಲಕ್ಷಣವಾಕ್ಯದಲ್ಲಿ ಅಪೃಥಕ್ಸಿದ್ಧವೆಂಬ ವಿಶೇಷಣವನ್ನು ಸೇರಿಸದಿದ್ದರೆ--ಬ್ರಹ್ಮಕ್ಕೆ ಆಗಂತುಕವಾದ ಆಕಾಶವು ಅವಸ್ಥೆಯೆನಿಸಿಕೊಂಡು ಅಂಥ ಆಕಾಶವೆಂಬ ಅವಸ್ಥೆಗೆ ಆಧೇಯತ್ವಸಂಬಂಧದಿಂದ ಆಶ್ರಯವಾದ ಶಬ್ದವು ಉಪಾದಾನವಾಗಬೇಕಾಗಿಯೂ, ಆ ಕಾರಣದಿಂದಲೇ ದ್ರವ್ಯವೆನಿಸಿಕೊಳ್ಳಬೇಕಾಗಿಯೂ ಬಂದು ಅದ್ರವ್ಯವಾದ ಶಬ್ದದಲ್ಲಿ ದ್ರವ್ಯಲಕ್ಷಣಕ್ಕೆ ಅತಿವ್ಯಾಪ್ತಿದೋಷವುಂಟಾಗುವುದು.

ಇದಕ್ಕಾಗಿ ಲಕ್ಷಣದಲ್ಲಿ ಅಪೃಥಕ್ಸಿದ್ಧವೆಂಬ ವಿಶೇಷಣವನ್ನು ಸೇರಿಸಿದರೆ—ಆಕಾಶಪದಾರ್ಥವು ಬ್ರಹ್ಮಕ್ಕೆ ಆಗಂತುಕವಾಗಿದ್ದರೂ ಶಬ್ದಕ್ಕೆ ಆಗಂತುಕವಲ್ಲ; ಆಧೇಯತ್ವಸಂಬಂಧದಿಂದ ಶಬ್ದವು ಆಕಾಶಕ್ಕೆ ಆಶ್ರಯವಾಗಿದ್ದರೂ ಅಪೃಥಕ್ಸಿದ್ಧಿಸಂಬಂಧದಿಂದ ಆಶ್ರಯವಾದುದಲ್ಲ; ಆದಕಾರಣ ಆಕಾಶವು ಶಬ್ದಕ್ಕೆ ಅವಸ್ಥೆಯಾಗಲಾರದು ; ಶಬ್ದವೂ ಅಂಥ ಅವಸ್ಥೆಗೆ ಆಶ್ರಯವಲ್ಲವಾದುದರಿಂದ ಉಪಾದಾನವೆನಿಸಿಕೊಳ್ಳಲಾರದು ; ಉಪಾದಾನವಾಗದಿರುವುದರಿಂದಲೇ ದ್ರವ್ಯವೆನಿಸಿಕೊಳ್ಳಲಾರದು; ಆದಕಾರಣ ಶಬ್ದವೆಂಬ ಅದ್ರವ್ಯದಲ್ಲಿ ದ್ರವ್ಯಲಕ್ಷಣಕ್ಕೆ ಅತಿವ್ಯಾಪ್ತಿದೋಷವಿಲ್ಲ.

## ೩೪ ದ್ರವ್ಯಲಕ್ಷಣಸ್ಯ ಈಶ್ವರೇ ಅವ್ಯಾಪ್ತಿಶಂಕಾತತ್ಪರಿಹಾರೌ.

"ಅವಸ್ಥಾಶ್ರಯವಾದ ಪದಾರ್ಥವೇ ಉಪಾದಾನವೆನಿಸಿಕೊಂಡು ಉಪಾದಾನವೇ ದ್ರವ್ಯವೆನಿಸಿಕೊಳ್ಳುವ ಪಕ್ಷದಲ್ಲಿ-ಈಶ್ವರನಲ್ಲಿ ಯಾವುದೊಂದು ಅವಸ್ಥೆಯೂ ಇಲ್ಲವಾಗಿ ಅವಸ್ಥಾಶ್ರಯನಲ್ಲದ ಈಶ್ವರನು ಉಪಾದಾನವೆನಿಸಿಕೊಳ್ಳಲು ಅವಕಾಶವಿಲ್ಲವಾದುದರಿಂದ ದ್ರವ್ಯವೆನಿಸಿಕೊಳ್ಳಲಾರನು; ಆದುದರಿಂದ ಸಿದ್ಧಾಂತದಲ್ಲಿ ದ್ರವ್ಯವೆಂದು ಒಪ್ಪಿಕೊಳ್ಳುವ ಈಶ್ವರನಲ್ಲಿ ಹಿಂದೆ ಹೇಳಿದ ದ್ರವ್ಯಲಕ್ಷಣಕ್ಕೆ ಅವ್ಯಾಪ್ತಿದೋಷವುಂಟಾಗುವುದು" ಎಂದು ಭ್ರಾಂತಿಪಡಬಾರದು.

ನಿತ್ಯಂ ವಿಭುಂ ಸರ್ವಗತಂ ಎಂಬ ಮುಂಡಕಶ್ರುತಿಪ್ರಮಾಣದಿಂದ ಈಶ್ವರನಲ್ಲಿ ಸಕಲಪದಾರ್ಥಸಂಯೋಗವೂ ಸಿದ್ಧವಾಗಿರುವಕಾರಣ—ಪ್ರತಿಕ್ಷಣ

ದಲ್ಲಿಯೂ ಸಂಚರಿಸುತ್ತಿರುವ ವಾಯು, ಸೂರ್ಯ ಮೊದಲಾದ ಪದಾರ್ಥಗಳಿಗೆ ಪೂರ್ವ ಪೂರ್ವಪ್ರದೇಶಸಂಯೋಗನಾಶವುಂಟಾಗಿ ಉತ್ತರೋತ್ತರಪ್ರದೇಶಸಂಯೋಗವು ಪ್ರತಿ ಕ್ಷಣದಲ್ಲಿಯೂ ಈಶ್ವರನಲ್ಲಿ ಉಂಟಾಗುತ್ತಲೇ ಇರುವುದರಿಂದ ಈಶ್ವರನಿಗೆ ಆಗಂತುಕ ವಾಗಿಯೂ ಅಪೃಥಕ್ಸಿದ್ಧವಾಗಿಯೂ ಇರುವ ತತ್ತತ್ಪದಾರ್ಥಸಂಯೋಗವು ಅವಸ್ಥೆ ಯೆನಿಸಿಕೊಳ್ಳುವುದರಲ್ಲಿ ಅಡ್ಡಿಯಿಲ್ಲವಾಗಿ ಅಂಥ ಅವಸ್ಥೆಗೆ ಆಶ್ರಯನಾದ ಈಶ್ವರನು ಉಪಾದಾನವೆನಿಸಿಕೊಳ್ಳಲು ಯಾವ ಅಭ್ಯಂತರವೂ ಇಲ್ಲದಿರುವುದರಿಂದ ಈಶ್ವರನು ದ್ರವ್ಯವಲ್ಲವೆಂದು ಹೇಳಲಾಗುವುದಿಲ್ಲ. ಪ್ರಕೃತಿ, ಕಾಲ, ಶುದ್ಧಸತ್ತ್ವವೆಂಬ ನಿತ್ಯ ವಿಭೂತಿ, ಈ ಮೂರು ಅಚಿದ್ದ್ರವ್ಯಗಳು ಸ್ವರೂಪವಿಕಾರಸ್ವಭಾವವಿಕಾರಗಳೆಂಬ ಉಭಯವಿಧವಾದ ವಿಕಾರರೂಪವಾದ ಅವಸ್ಥೆಗೆ ಸಾಕ್ಷಾದಾಶ್ರಯಗಳಾಗಿರುವು ವಾದುದರಿಂದಲೂ, ಧರ್ಮಭೂತಜ್ಞಾನವೆಂಬ ಚಿದ್ದ್ರವ್ಯವು ಸಂಕೋಚವಿಕಾಸಗಳೆಂಬ ಅವಸ್ಥೆಗಳಿಗೆ ಸಾಕ್ಷಾದಾಶ್ರಯಗಳಾಗಿರುವುವಾದುದರಿಂದಲೂ, ದ್ರವ್ಯಲಕ್ಷಣವು ಈ ನಾಲ್ಕರಲ್ಲಿಯೂ ವ್ಯಾಪಿಸಿರುವುದು.

ಮುಕ್ತಾತ್ಮರ ಧರ್ಮಭೂತಜ್ಞಾನಕ್ಕೆ ಮುಕ್ತಾವಸ್ಥೆಯಲ್ಲಿ ಸಂಕೋಚರೂಪವಾದ ಅವಸ್ಥೆಯಿಲ್ಲದಿದ್ದರೂ ಸರ್ವಪದಾರ್ಥಸಂಯೋಗಿತ್ವರೂಪವಾದ ವಿಕಾಸಾವಸ್ಥೆಯಿರು ವುದರಿಂದ ಅದರಲ್ಲಿಯೂ ದ್ರವ್ಯಲಕ್ಷಣಕ್ಕೆ ಸಮನ್ವಯವನ್ನು ತಿಳಿಯಬಹುದು.

ಅದರಂತೆಯೇ ನಿತ್ಯಸೂರಿಗಳ ಮತ್ತು ಈಶ್ವರನ ಧರ್ಮಭೂತಜ್ಞಾನಕ್ಕೂ ಸರ್ವ ಪದಾರ್ಥಸಂಯೋಗಿತ್ವರೂಪವಾದ ವಿಕಾಸಾವಸ್ಥೆ ಇದ್ದೇ ಇರುವುದರಿಂದ ಅದರಲ್ಲಿ ಯೂ ದ್ರವ್ಯಲಕ್ಷಣದ ವ್ಯಾಪ್ತಿಗೆ ತಡೆಯಿಲ್ಲ.

“ನಿತ್ಯಸೂರಿಗಳ ಮತ್ತು ಈಶ್ವರನ ಧರ್ಮಭೂತಜ್ಞಾನಕ್ಕೆ ಯಾವಾಗಲೂ ಸಂಕೋಚವೇ ಇಲ್ಲದಿರುವುದರಿಂದ ಸರ್ವಪದಾರ್ಥಸಂಯೋಗಿತ್ವವು ಅದಕ್ಕೆ ಸ್ವಾಭಾ ವಿಕವಾಗಿಯೇ ಇರುವಕಾರಣ ಆಗಂತುಕವಾಗಲಿಲ್ಲವಾಗಿ ಇದು ಅವಸ್ಥೆಯೆನಿಸಿ ಕೊಳ್ಳುವ ಬಗೆ ಹೇಗೆ” ಎಂದು ಆಶಂಕಿಸಬಾರದು. ಅವರ ಜ್ಞಾನಕ್ಕೆ ನಿತ್ಯವಾದ ಪದಾರ್ಥಗಳೊಡನೆ ಸಂಯೋಗವು ನಿತ್ಯವಾಗಿದ್ದರೂ ಅನಿತ್ಯವಾದ ಪದಾರ್ಥಗಳೊಡನೆ ಸಂಯೋಗವು ಅನಿತ್ಯವಾದುದರಿಂದ ಆಗಂತುಕವೆಂದೂ ಅವಸ್ಥೆಯೆಂದೂ ಹೇಳಿಸಿಕೊ ಳ್ಳಲು ತಡೆಯಿಲ್ಲವಷ್ಟೆ.

ಜೀವೇಶ್ವರರೆಂಬ ಚಿದ್ದ್ರವ್ಯಗಳು ಅವಸ್ಥೆಗೆ ಸಾಕ್ಷಾದಾಶ್ರಯಗಳಾಗದಿದ್ದರೂ- “ತದವಸ್ಥತದ್ವಿಶಿಷ್ಟತ್ವ” ಎಂದರೆ ಆಗಂತುಕವಾದ ಆ ಆ ಅವಸ್ಥೆಗೆ ಆಶ್ರಯವಾದ ಆ ಆ ದ್ರವ್ಯವಿಶಿಷ್ಟತ್ವವೆಂಬ ಅವಸ್ಥೆ ಜೀವೇಶ್ವರರಲ್ಲಿಯೂ ಸಂಭವಿಸುವುದಾದುದರಿಂದ

ದ್ರವ್ಯಲಕ್ಷಣಕ್ಕೆ ಅವರಲ್ಲಿಯೂ ಸಮನ್ವಯವನ್ನು ತಿಳಿಯಬಹುದು. ಹೀಗೆ ದ್ರವ್ಯ ಲಕ್ಷಣವು ಎಲ್ಲಾ ದ್ರವ್ಯಗಳಲ್ಲಿಯೂ ವ್ಯಾಪಿಸಿರುವುದರಿಂದ ಅವ್ಯಾಪ್ತಿದೋಷಕ್ಕೆ ಅವಕಾಶವಿಲ್ಲ.

### ೩೫ ಅದ್ರವ್ಯಲಕ್ಷಣಂ.

ಇಂಥ ದ್ರವ್ಯವಲ್ಲದುದು ಅದ್ರವ್ಯವೆನಿಸಿಕೊಳ್ಳುವುದು: ಎಂದರೆ—ಆಗಂತುಕ ವಾಗಿಯೂ ಅಪೃಥಕ್ಸಿದ್ಧವಾಗಿಯೂ ಇರುವ ಧರ್ಮವನ್ನು ಪಡೆಯದ ಪದಾರ್ಥವು ಅದ್ರವ್ಯವೆನಿಸಿಕೊಳ್ಳುವುದು. ಶಬ್ದ, ಸ್ಪರ್ಶ ಮೊದಲಾದ ಅದ್ರವ್ಯಗಳಲ್ಲಿ ಶಕ್ತಿ ಯೆಂಬ ಅಪೃಥಕ್ಸಿದ್ಧವಾದ ಧರ್ಮವನ್ನು ಸಿದ್ಧಾಂತದಲ್ಲಿ ಒಪ್ಪಿಕೊಂಡಿದ್ದರೂ ಅದ್ರವ್ಯ ಲಕ್ಷಣಕ್ಕೆ ಶಬ್ದ, ಸ್ಪರ್ಶ ಮೊದಲಾದ ಅದ್ರವ್ಯಗಳಲ್ಲಿ ವ್ಯಾಪ್ತಿಯಿಲ್ಲವೆಂದು ಆಶಂಕಿಸ ಬಾರದು. ಏತಕ್ಕೆಂದರೆ ಶಬ್ದಾದಿಗಳಲ್ಲಿ ಅಂಗೀಕರಿಸುವ ಶಕ್ತಿಯೆಂಬ ಧರ್ಮವು ಅವು ಗಳಿಗೆ ಸ್ವಾಭಾವಿಕವಾಗಿರುವುದೇ ಹೊರತು ಆಗಂತುಕವಲ್ಲ; ಆದಕಾರಣ ಆಗಂತುಕ ವಾಗಿಯೂ ಅಪೃಥಕ್ಸಿದ್ಧವಾಗಿಯೂ ಇರುವ ಧರ್ಮವು ಶಬ್ದಾದಿಗಳಲ್ಲಿ ಇಲ್ಲವೆಂದು ಹೇಳಲು ಅಡ್ಡಿಯಿಲ್ಲ.

### ೩೬ ದ್ರವ್ಯಾದ್ರವ್ಯವಿಭಾಗಾಸಹಿಷ್ಣು ಬೌದ್ಧಮತಾಭಿಪ್ರಾಯಃ.

ಹೀಗೆ ನಿರೂಪಿಸಿದ ದ್ರವ್ಯಾದ್ರವ್ಯವಿಭಾಗವನ್ನು ಬೌದ್ಧರು ಒಪ್ಪುವುದಿಲ್ಲ. ಅವರ ಅಭಿಪ್ರಾಯದ ಸಾರಾಂಶವೇನೆಂದರೆ—ತಮ್ಮಲ್ಲಿ ಬೇರೊಂದಾದ ಯಾವು ದೊಂದು ಧರ್ಮವನ್ನೂ, ತಮಗೆ ಬೇರೊಂದಾದ ಯಾವುದೊಂದು ಆಶ್ರಯವನ್ನೂ, ಪಡೆಯದಿರುವ ಸ್ಪರ್ಶ, ರೂಪ, ರಸ, ಗಂಧ ಎಂಬ ಈ ನಾಲ್ಕೇ ಪದಾರ್ಥಗಳೆನಿಸಿ ಕೊಳ್ಳುವುವಲ್ಲದೆ ಸ್ಪರ್ಶಾದಿಗಳಲ್ಲಿ ಧರ್ಮವಾಗಿರುವ ಬೇರೊಂದು ಪದಾರ್ಥವಾಗಲಿ ಸ್ಪರ್ಶಾದಿಗಳಿಗೆ ಆಶ್ರಯವಾಗಿರುವ ಧರ್ಮಿಯೆಂಬ ಬೇರೊಂದು ಪದಾರ್ಥವಾಗಲಿ ಇಲ್ಲವೇ ಇಲ್ಲ. ಆದಕಾರಣ ಸ್ಪರ್ಶಾದಿಗಳು ತಾತ್ತ್ವಿಕವಾಗಿರುವುವಲ್ಲದೆ ಅವುಗಳಿಗೆ ಆಶ್ರಯವಾದ ಧರ್ಮಿ ತಾತ್ತ್ವಿಕವಲ್ಲ.

ಅಥವಾ—ಆಶ್ರಯವಾದ ಧರ್ಮಿಯೊಂದನ್ನು ಒಪ್ಪಿಕೊಂಡು ಆ ಒಂದೇ ಧರ್ಮಿ ಒಂದುಸಮಯದಲ್ಲಿ ಸ್ಪರ್ಶವೆಂಬ ಭ್ರಾಂತಿಗೂ, ಮತ್ತೊಂದುಸಮಯದಲ್ಲಿ ರೂಪವೆಂಬ ಭ್ರಾಂತಿಗೂ, ಹೀಗೆಯೇ ರಸಭ್ರಾಂತಿಗೂ, ಗಂಧಭ್ರಾಂತಿಗೂ ಗೋಚರ ವಾಗುತ್ತಿರುವುದೆಂದೂ ಹೇಳಬಹುದಾದಪ್ರಯುಕ್ತ ಧರ್ಮಿಯೆಂಬುದು ತಾತ್ತ್ವಿಕ ವಾಗಿರುವುದಲ್ಲದೆ ಸ್ಪರ್ಶಾದಿಧರ್ಮಗಳು ತಾತ್ತ್ವಿಕವಲ್ಲ.

ಈ ಎರಡುಪಕ್ಷಗಳಲ್ಲಿಯೂ—ಸ್ಪರ್ಶಮಾತ್ರವು ಯಾವಾಗ ತೋರುವುದೋ ಆವಾಗ ಅದನ್ನು ವಾಯುತತ್ತ್ವವಾಗಿಯೂ, ಸ್ಪರ್ಶರೂಪಗಳೆರಡೂ ತೋರುವಾಗ ಅವುಗಳನ್ನು ತೇಜಸ್ತತ್ತ್ವವಾಗಿಯೂ, ಸ್ಪರ್ಶ, ರೂಪ, ರಸ, ಈಮೂರೂ ತೋರಿದಾಗ ಅವುಗಳನ್ನು ಜಲತತ್ತ್ವವಾಗಿಯೂ, ಸ್ಪರ್ಶ, ರೂಪ, ರಸ, ಗಂಧ ಈನಾಲ್ಕೂ ಒಟ್ಟಿಗೆ ತೋರಿದಾಗ ಅವುಗಳನ್ನು ಪೃಥಿವೀತತ್ತ್ವವಾಗಿಯೂ, ತಿಳಿಯಬೇಕು. ಈ ನಾಲ್ಕರ ಅಭಾವವೇ ಎಂದರೆ ಆವರಣಾಭಾವವೇ ಆಕಾಶವೆಂಬ ವ್ಯವಹಾರಕ್ಕೆ ಆಸ್ಪದವಾಗಿರುವುದಲ್ಲದೆ ಈ ನಾಲ್ಕುಪದಾರ್ಥಗಳಿಗಿಂತಲೂ ಬೇರೊಂದಾದ ಆಕಾಶವೆಂಬ ಪದಾರ್ಥವು ತಾತ್ತ್ವಿಕವಾಗಿಲ್ಲ. ಆದಕಾರಣ ಹಿಂದೆ ಹೇಳಿದ ದ್ರವ್ಯಾದ್ರವ್ಯವಿಭಾಗವು ಸಮಂಜಸವಲ್ಲವೆಂಬುದು ಬೌದ್ಧಮತದ ಸಾರಾಂಶವಾಗಿರುವುದು.

## ೩೭ ಬೌದ್ಧಮತಖಂಡನಂ.

ಹೀಗೆ ಪ್ರತ್ಯಕ್ಷಾನುಮಾನಗಳೆಂಬ ಎರಡೇ ಪ್ರಮಾಣಗಳನ್ನು ಒಪ್ಪಿಕೊಂಡು ಬಾಹ್ಯಪದಾರ್ಥಗಳನ್ನು ಅಪಲಪಿಸುವ ಬೌದ್ಧಮತವನ್ನು ನಿರಾಕರಿಸಲು ಅವರಿಂದ ಅಂಗೀಕೃತವಾದ ಪ್ರತ್ಯಕ್ಷಾನುಮಾನಗಳೆರಡೇ ಸಾಕಾದಷ್ಟು ಪ್ರಮಾಣಗಳಾಗಿವೆ. ಹೇಗೆಂದರೆ—

ಘಟವು ರೂಪವುಳ್ಳುದಾಗಿರುವುದು-- ಈರೀತಿಯಾದ ಪ್ರತ್ಯಕ್ಷವು ನಮಗೆ ಅಬಾಧಿತವಾಗಿ ಉಂಟಾಗುತ್ತಿರುವುದನ್ನು ಅಪಲಾಪಮಾಡಲು ಯಾರಿಗೂ ಸಾಧ್ಯವಲ್ಲ. ಇಂಥ ಪ್ರತ್ಯಕ್ಷದಿಂದ ಘಟಕ್ಕೂ ಅದರ ರೂಪಕ್ಕೂ ಆಶ್ರಯಾಶ್ರಯಿಭಾವವೆಂಬ ಭೇದವನ್ನು ಸ್ಪಷ್ಟವಾಗಿ ನಾವು ಗ್ರಹಿಸುತ್ತಿರುವೆವು. ಪ್ರತ್ಯಕ್ಷಪ್ರಮಾಣವನ್ನು ಒಪ್ಪಿಕೊಳ್ಳುವ ಬೌದ್ಧರಿಗೂ ಸಹ ಇದನ್ನು ಅಪಲಾಪಮಾಡಲು ಸಾಧ್ಯವಲ್ಲ.

ಪ್ರತ್ಯಕ್ಷದಂತೆಯೇ ಅನುಮಾನಪ್ರಮಾಣವೂ ಬೌದ್ಧಮತನಿರಾಸಕ್ಕೆ ಸಹಕಾರಿಯಾಗಿರುವುದು. ಹೇಗೆಂದರೆ—ಘಟಾದಿಪದಾರ್ಥವು ಅವಸ್ಥೆಗೆ ಆಶ್ರಯವಾಗಿರುವುದರಿಂದ ರೂಪಾದಿಪದಾರ್ಥಕ್ಕಿಂತಲೂ ಬೇರೊಂದಾಗಿಯೇ ಇರುವುದು. ಯಾವ ಪದಾರ್ಥವು ರೂಪಾದಿಪದಾರ್ಥಕ್ಕಿಂತಲೂ ಬೇರೊಂದಾಗಿಲ್ಲವೊ ಅಂಥ ಪದಾರ್ಥವು ಅವಸ್ಥೆಗೂ ಆಶ್ರಯವಾಗಿರುವುದಿಲ್ಲ. ಇದಕ್ಕೆ ರೂಪಾದಿಪದಾರ್ಥಗಳನ್ನೇ ದೃಷ್ಟಾಂತವಾಗಿ ತೆಗೆದುಕೊಳ್ಳಬಹುದು. ರೂಪವು ರೂಪಕ್ಕಿಂತಲೂ ಬೇರೊಂದಲ್ಲವಾದುದರಿಂದ ಅವಸ್ಥೆಗೂ ಆಶ್ರಯವಾಗಿಲ್ಲ. ಘಟಾದಿಪದಾರ್ಥವು ಹಾಗಲ್ಲದೆ ಅವಸ್ಥೆಗೆ ಆಶ್ರಯವಾಗಿರುವುದರಿಂದ ರೂಪಾದಿಪದಾರ್ಥಕ್ಕಿಂತಲೂ ಬೇರೊಂದಾಗಿಯೇ ಇರಬೇಕು.

ಹೀಗೆ ಪ್ರತ್ಯಕ್ಷಾನುಮಾನಗಳೆಂಬ ಪ್ರಮಾಣಗಳಿಂದಲೂ, ಇವುಗಳಿಗೆ ಉಪಷ್ಟಂಭಕವಾಗಿಯೂ ಅವಿಚಾಲ್ಯವಾಣಿಯೂ ಇರುವ ಅಸಂಖ್ಯಾತವಾದ ಯುಕ್ತಿಗಳಿಂದಲೂ, ಕುಮಾರಿಲಭಟ್ಟನೇ ಮೊದಲಾದ ಮಹಾಮೀಮಾಂಸಕರೂ, ತಾರ್ಕಿಕರೂ, ಎಲ್ಲಾ ವೇದಾಂತಿಗಳೂ ಬೌದ್ಧಮತದ ದೌರ್ಬಲ್ಯವನ್ನೂ ನಿಸ್ಸಾರತೆಯನ್ನೂ ತೋರಿಸಿ ಬಾಹ್ಯಪದಾರ್ಥಗಳನ್ನು ನೆಲೆಗೊಳಿಸಿ ಪ್ರಪಂಚದ ಸತ್ಯತ್ವವನ್ನು ಸ್ಥಾಪಿಸಿರುವರು. ಈ ವಿಷಯದಲ್ಲಿ ಅವರು ತೋರಿಸಿರುವ ಯುಕ್ತಿಗಳು ಬಾಲಕರ ಬುದ್ಧಿಗೆ ಗೋಚರವಾಗತಕ್ಕುವುಗಳಲ್ಲವಾದುದರಿಂದ ಅವುಗಳನ್ನು ಇಲ್ಲಿ ನಾವು ತೋರಿಸಲಿಲ್ಲ.

### ೩೮ ದ್ರವ್ಯಾದ್ರವ್ಯವಿಭಾಗೋಪಸಂಹಾರಃ.

ಅದುದರಿಂದ ದ್ರವ್ಯಾದ್ರವ್ಯವಿಭಾಗವನ್ನು ಅಪಲಪಿಸುವುದಕ್ಕಾಗಿ ಬೌದ್ಧರಿಗೆ ಯಾವುದೊಂದು ಪ್ರಮಾಣವೂ, ಯಾವುದೊಂದು ಯುಕ್ತಿಯೂ ಇಲ್ಲವಾದುದರಿಂದ ಪ್ರತ್ಯಕ್ಷಾದಿಪ್ರಮಾಣಗಳಿಂದ ಸಿದ್ಧವಾಗಿರುವ ದ್ರವ್ಯಾದ್ರವ್ಯವಿಭಾಗವು ಸುಪ್ರತಿಷ್ಠಿತವಾಗಿರುವುದು.

ಇಂತು ತತ್ತ್ವಶುದ್ಧಿಯೆಂಬ ವಿಶಿಷ್ಟಾದ್ವೈತಪ್ರಕರಣಗ್ರಂಥದೊಳ್
ಅಚಿತ್ತತ್ತ್ವಪರಿಚ್ಛೇದದಲ್ಲಿ ದ್ರವ್ಯಾದ್ರವ್ಯವಿಭಾಗಪ್ರಕರಣಂ
ದ್ವಿತೀಯಂ.

---

## ತೃತೀಯಪ್ರಕರಣಂ.

---

### ೩೯ ಬೌದ್ಧಮತೇನ ಪದಾರ್ಥಾನಾಂ ಕ್ಷಣಿಕತ್ವಪೂರ್ವಪಕ್ಷಃ.

ದ್ರವ್ಯವನ್ನೇ ತಾತ್ತ್ವಿಕವಾಗಿ ಒಪ್ಪದಿರುವ ಬೌದ್ಧರು ಒಂದುವೇಳೆ ದ್ರವ್ಯವೆಂದು ಹೆಸರಿಡಬಹುದಾದ ಧರ್ಮಿಯೊಂದನ್ನು ಅಂಗೀಕರಿಸಿದರೂ ಅದರ ಉತ್ಪತ್ತಿಕಾಲ ಮೊದಲು ವಿನಾಶಕಾಲದ ವರೆಗೂ ಅದನ್ನು ಸ್ಥಿರವೆಂದು ಒಪ್ಪದೆ ಪ್ರತಿಕ್ಷಣದಲ್ಲಿಯೂ ಅದಕ್ಕೆ ಉತ್ಪತ್ತಿವಿನಾಶಗಳನ್ನು ಕಲ್ಪಿಸುತ್ತ ಪ್ರತಿಯೊಂದು ಪದಾರ್ಥವನ್ನೂ ಕ್ಷಣಿಕವೆಂದು ಹೇಳುವರು. ಇದಕ್ಕೆ ಸಾಧಕವಾಗಿ ಅನುಮಾನಪ್ರಮಾಣವನ್ನು ತೋರಿಸುವರು—ಯಾವುದಾದರೂ ಒಂದು ಪದಾರ್ಥವು ಸತ್ತೆಯೊಡನೆ ಕೂಡಿರುವುದಾಗಿ ಕಂಡುಬಂದರೆ, ಸತ್ತೆಯೊಡನೆ ಕೂಡಿರುವುದೆಂಬ ಕಾರಣದಿಂದಲೇ ಆ ಪದಾರ್ಥವು ಕ್ಷಣಿಕವಾಗಿರುವುದು. ಈ ವಿಷಯದಲ್ಲಿ ಮೇಘಮಂಡಲವನ್ನು ದೃಷ್ಟಾಂತವಾಗಿ ನೋಡಬಹುದು.

ಸತ್ತೆಯೊಡನೆ ಕೂಡಿರುವ ಮೇಘಮಂಡಲವನ್ನು ಪ್ರತ್ಯಕ್ಷದಲ್ಲಿ ಕ್ಷಣಿಕವಾಗಿ ನಾವು ನೋಡುತ್ತಿರುವೆವು. ಅದರಂತೆ ನಮ್ಮ ಕಣ್ಣಿಗೆ ಕಾಣುತ್ತಿರುವ ಸಕಲಪದಾರ್ಥ ಗಳೂ ಸತ್ತೆಯೊಡನೆ ಕೂಡಿಯೇ ಇರುವುದರಿಂದ ಕ್ಷಣಿಕವಾಗಿಯೇ ಇರುತ್ತವೆ ಎಂಬುದರಲ್ಲಿ ಸಂಶಯವಿಲ್ಲ. ಆದುದರಿಂದ ದ್ರವ್ಯಕ್ಕೆ ಸ್ಥಿರತ್ವವನ್ನು ಹೇಳುವವರು ಭ್ರಾಂತರೇ ಹೊರತು ಬೇರೆ ಅಲ್ಲ.

### ೪೦ ಪ್ರತ್ಯಭಿಜ್ಞಾಪ್ರತ್ಯಕ್ಷೇಣ ಪದಾರ್ಥಾನಾಂ ಸ್ಥಿರತ್ವಸಮರ್ಥನಂ.

ಇಂಥ ಕ್ಷಣಿಕತ್ವವಾದವನ್ನು ನಿರಾಕರಿಸಿ ದ್ರವ್ಯಗಳಿಗೆ ಸ್ಥಿರತ್ವವನ್ನು ಸ್ಥಾಪಿಸು ವುದಕ್ಕಾಗಿ ಶಾಸ್ತ್ರಕಾರರು ಪ್ರತ್ಯಕ್ಷಪ್ರಮಾಣವನ್ನು ತೋರಿಸುವರು. ಹೇಗೆಂದರೆ— ಅದೇ ಇದು ಎಂಬುದಾಗಿ ಒಂದಾನೊಂದು ಪ್ರತ್ಯಕ್ಷವು ಅಬಾಧಿತವಾಗಿ ನಮಗೆ ಉಂಟಾಗುತ್ತಿದೆ ಎಂಬುದು ಸರ್ವಾನುಭವಸಿದ್ಧವಾಗಿರುವುದು. ಈ ಪ್ರತ್ಯಕ್ಷವನ್ನು ಶಾಸ್ತ್ರಕಾರರು ಪ್ರತ್ಯಭಿಜ್ಞಾಪ್ರತ್ಯಕ್ಷವೆಂದು ಹೇಳುವರು.

ಇದರಲ್ಲಿ, ಅದೇ ಎಂಬ ಪದದಲ್ಲಿ ಪ್ರಕೃತ್ಯಂಶದಿಂದ ಕಳೆದುಹೋದ ಕಾಲದ ಸಂಬಂಧವುಳ್ಳ ಒಂದು ಪದಾರ್ಥವೂ, ಇದು ಎಂಬ ಪದದಲ್ಲಿ ಪ್ರಕೃತ್ಯಂಶದಿಂದ ವರ್ತ ಮಾನಕಾಲಸಂಬಂಧವುಳ್ಳ ಒಂದು ಪದಾರ್ಥವೂ, ಈ ಎರಡು ಪ್ರಕೃತಿಗಳಮೇಲೆಯೂ ಹಚ್ಚಿರುವ ಸಮಾನವಾದ ಪ್ರಥಮಾವಿಭಕ್ತಿಪ್ರತ್ಯಯಾಂಶದಿಂದ ಆ ಎರಡು ಪದಾರ್ಥ ಗಳ ಅಭೇದವೂ ಎಂದರೆ ಏಕತ್ವವೂ ತೋರುವುವು.

ಹೀಗಾದರೆ ಯಾವ ಪದಾರ್ಥಕ್ಕೆ ಅತೀತಕಾಲಸಂಬಂಧವುಂಟಾಗಿದ್ದಿತೋ ಅದೇ ಪದಾರ್ಥಕ್ಕೆ ವರ್ತಮಾನಕಾಲಸಂಬಂಧವುಂಟಾಗಬೇಕಾದರೆ ಅತೀತಕಾಲದಿಂದ ಹಿಡಿದು ವರ್ತಮಾನಕಾಲದವರೆಗೂ ಆ ಪದಾರ್ಥವು ಸ್ಥಿರವಾಗಿರಬೇಕಲ್ಲವೆ ? ಹೀಗಿರು ವಲ್ಲಿ ಸಕಲಪದಾರ್ಥಗಳಿಗೂ ಕ್ಷಣಿಕತ್ವವನ್ನು ಹೇಗೆ ಹೇಳಲಾದೀತು ? ಆದಕಾರಣ ಪ್ರತ್ಯಭಿಜ್ಞಾಪ್ರತ್ಯಕ್ಷವೆಂಬ ಈಪ್ರಬಲಪ್ರಮಾಣದಿಂದಲೇ ಕ್ಷಣಿಕತ್ವವನ್ನು ನಿರಾ ಕರಿಸಿ ಸಕಲಪದಾರ್ಥಗಳಿಗೂ ಸ್ಥಿರತ್ವವು ಸ್ಥಾಪಿಸಲ್ಪಟ್ಟಿರುವುದು.

### ೪೧ ಉಕ್ತಪ್ರತ್ಯಭಿಜ್ಞಾಯಾ ಬೌದ್ಧಮತೇನ ಭ್ರಾಂತಿತ್ವೋಪಪಾದನಂ.

ಕ್ಷಣಿಕತ್ವವಾದಿಗಳಾದ ಬೌದ್ಧರು ಪದಾರ್ಥಗಳಿಗೆ ಸ್ಥಿರತ್ವವನ್ನು ಸಾಧಿಸಿ ಕೊಡುವ ಮೇಲೆಕಂಡ ಪ್ರತ್ಯಭಿಜ್ಞೆಯನ್ನು ಭ್ರಾಂತಿಯೆಂದು ಸಮರ್ಥನೆಮಾಡಿ ಹೊಡೆ ದುಹಾಕುವರು. ಹೇಗೆಂದರೆ—ಪ್ರತ್ಯಭಿಜ್ಞೆಯೆಂಬುದು ಸಂಸ್ಕಾರಕ್ಕೆ ಅಧೀನವಾದ ಜ್ಞಾನವಾಗಿರುವುದರಿಂದ ಭ್ರಾಂತಿರೂಪವಾಗಿಯೇ ಇರುವುದು. ಯಾವ ಜ್ಞಾನವು

ಸಂಸ್ಕಾರಾಧೀನವಾಗಿರುವುದೋ ಅಂಥ ಜ್ಞಾನವು ಭ್ರಾಂತಿರೂಪವಾಗಿಯೇ ಇರುತ್ತದೆ ಎಂಬುದನ್ನು ಲೋಕದಲ್ಲಿ ನಾವು ನೋಡಿರುತ್ತೇವೆ. ಶುಕ್ತಿಕೆಯಲ್ಲಿ ಇದು ರಜತವು ಎಂದುಂಟಾಗುವ ಜ್ಞಾನವನ್ನು ಈ ವಿಷಯದಲ್ಲಿ ದೃಷ್ಟಾಂತವಾಗಿ ನೋಡಬಹುದು.

ಶುಕ್ತಿಕೆಯನ್ನು ನೋಡುವುದಕ್ಕಿಂತ ಮೊದಲು, ತನ್ನ ಇಂದ್ರಿಯದಿಂದ ರಜತವನ್ನು ಅನುಭವಿಸಿದ್ದ ಮನುಷ್ಯನಿಗೆ ಆ ಅನುಭವದಿಂದ ಅವನ ಹೃದಯದಲ್ಲಿ ರಜತ ಸಂಸ್ಕಾರವೊಂದುಂಟಾಗುವುದು. ಅಂಥವನಿಗೆ ಶುಕ್ತಿಕೆಯ ದರ್ಶನವುಂಟಾದ ಕಾಲದಲ್ಲಿ ಆ ಹಿಂದಣ ಸಂಸ್ಕಾರವು ತಲೆಯೆತ್ತಿ ಇದು ರಜತವು ಎಂಬ ಜ್ಞಾನವನ್ನು ಹುಟ್ಟಿಸುವುದು.

ಹೀಗೆ ಶುಕ್ತಿಕೆಯಲ್ಲಿ ಉಂಟಾಗುವ ರಜತಜ್ಞಾನವು ಸಂಸ್ಕಾರಾಧೀನವಾಗಿರುವುದರಿಂದಲೇ ಇದು ರಜತವಲ್ಲ ಶುಕ್ತಿಕೆ ಎಂಬ ಯಥಾರ್ಥವಾದ ಬಾಧಕಜ್ಞಾನವುಂಟಾದಮೇಲೆ ಅಪ್ರಮಾಣವೆನಿಸಿಕೊಂಡು ಭ್ರಾಂತಿಯೆಂಬ ಹೆಸರನ್ನು ಪಡೆವುದು. ಅಂತು ಶುಕ್ತಿಕೆಯಲ್ಲಿ ಉಂಟಾಗಿರುವ ರಜತಜ್ಞಾನವು ಭ್ರಾಂತಿಯೆನಿಸಿಕೊಳ್ಳುವುದಕ್ಕೆ ಅದು ಸಂಸ್ಕಾರಾಧೀನವಾಗಿರುವಿಕೆಯೇ ಕಾರಣವಾಗಿರುವುದಷ್ಟೆ.

ಅಂಥ ಕಾರಣವು ಮೇಲೆಕಂಡ ಪ್ರತ್ಯಭಿಜ್ಞಾಪ್ರತ್ಯಕ್ಷದಲ್ಲಿಯೂ ಇರುವುದರಿಂದ ಇದೂ ಭ್ರಾಂತಿರೂಪವಾಗಿಯೇ ಇರಬೇಕು. ಹೀಗೆ ಭ್ರಾಂತಿರೂಪವಾದ ಈ ಜ್ಞಾನವು ಪ್ರಮಾಣಕೋಟಿಯಲ್ಲಿಯೇ ಸೇರಲು ಅನರ್ಹವಾಗಿರುವಲ್ಲಿ ಪದಾರ್ಥಗಳ ಸ್ಥಿರತ್ವವನ್ನು ಸಾಧಿಸಿಕೊಡಲು ಹೇಗೆ ಸಮರ್ಥವಾದೀತು ? ಆದಕಾರಣ ನಾವು ಹಿಂದೆ ಹೇಳಿದ ರೀತಿಯಲ್ಲಿ ಮೇಘಮಂಡಲದೃಷ್ಟಾಂತದಿಂದ ಸಕಲಪದಾರ್ಥಗಳಿಗೂ ಕ್ಷಣಿಕತ್ವವೇ ಸಿದ್ಧವಾಗಿರುವುದು.

## ೪೨ ಪ್ರತ್ಯಭಿಜ್ಞಾಯಾ ಭ್ರಾಂತಿತ್ವನಿರಾಕರಣಪೂರ್ವಕಂ ಪ್ರಾಮಾಣ್ಯಸಮರ್ಥನಂ.

ಬೌದ್ಧರ ಇಂಥ ವಾದವನ್ನು ಶಾಸ್ತ್ರಕಾರರು ಈರೀತಿಯಲ್ಲಿ ಖಂಡಿಸುವರು:— ಯಾವ ಯಾವ ಜ್ಞಾನವು ಸಂಸ್ಕಾರಾಧೀನವಾಗಿರುವುದೋ ಅಂಥ ಜ್ಞಾನವೆಲ್ಲಾ ಭ್ರಾಂತಿಯೆನಿಸಿಕೊಂಡು ಅಪ್ರಮಾಣವೇ ಆಗಿರುವುದೆಂಬ ನಿಯಮವಿಲ್ಲ. ಹಿಂದೆ ಅನುಭವಿಸಿದ್ದ ಪದಾರ್ಥಗಳ ವಿಷಯವಾಗಿ ಕಾಲಾಂತರದಲ್ಲಿ ಸ್ಮರಣೆಯುಂಟಾದರೆ ಈ ಸ್ಮರಣರೂಪವಾದ ಜ್ಞಾನವು ಸಂಸ್ಕಾರಾಧೀನವಾಗಿದ್ದರೂ ಅಪ್ರಮಾಣವೆನಿಸಿಕೊಂಡು ಭ್ರಾಂತಿರೂಪವಾಗಿಲ್ಲ. ಚಂದನವನ್ನು ಮೂಸಿನೋಡಿ ಇದು ಸುವಾಸನೆಯುಳ್ಳದು ಎಂದು ತಿಳಿದಿದ್ದ ಮನುಷ್ಯನಿಗೆ ದೂರದಲ್ಲಿರುವ ಚಂದನದ ದರ್ಶನಮಾತ್ರವುಂಟಾದ

ಮೇಲೆ ಚಂದನವು ಸುವಾಸನೆಯುಳ್ಳದು ಎಂಬ ಜ್ಞಾನವುಂಟಾಗುವುದು; ಈ ಜ್ಞಾನವು ಹಿಂದಣ ಅನುಭವದಿಂದ ಉಂಟಾಗಿದ್ದ ಸಂಸ್ಕಾರಕ್ಕೆ ಅಧೀನವಾಗಿದ್ದರೂ ಭ್ರಾಂತಿಯೆನಿಸಿಕೊಂಡು ಅಪ್ರಮಾಣವಾಗಿಲ್ಲ.

ಆದಕಾರಣ ಯಾವ ಜ್ಞಾನವಾದರೂ ಭ್ರಾಂತಿಯೆನಿಸಿಕೊಳ್ಳುವುದಕ್ಕೆ ಅದು ಸಂಸ್ಕಾರಾಧೀನವಾಗಿರುವಿಕೆಯೇ ಕಾರಣವಲ್ಲ. ಮತ್ತೇನೆಂದರೆ—ಯಾವ ಜ್ಞಾನವು ದೋಷಯುಕ್ತವಾದ ಕಾರಣದಿಂದ ಉಂಟಾಗಿರುವುದೋ ಮತ್ತು ಯಾವ ಜ್ಞಾನಕ್ಕೆ ಇದು ಹಾಗಲ್ಲ ಎಂಬ ಬಾಧಕಜ್ಞಾನವುಂಟಾಗುವುದೋ ಅಂಥ ಜ್ಞಾನವೇ ಭ್ರಾಂತಿಯೆನಿಸಿಕೊಂಡು ಅಪ್ರಮಾಣವಾದೀತು.

ಶುಕ್ತಿಕೆಯಲ್ಲಿ ಉಂಟಾಗಿರುವ ರಜತಜ್ಞಾನವೂ ಭ್ರಾಂತಿಯೆನಿಸಿಕೊಂಡು ಅಪ್ರಮಾಣವಾದುದಕ್ಕೆ ಅದು ಸಂಸ್ಕಾರಾಧೀನವಾಗಿರುವಿಕೆಯೇ ಕಾರಣವಲ್ಲ. ಆ ಜ್ಞಾನವು ದೋಷಯುಕ್ತವಾದ ಕಾರಣದಿಂದ ಉಂಟಾಗಿರುವುದರಿಂದಲೂ, ಇದು ರಜತವಲ್ಲ; ಶುಕ್ತಿಕೆ ಎಂಬ ಬಾಧಕಜ್ಞಾನವು ಆದಕ್ಕೆ ಉಂಟಾಗುವುದರಿಂದಲೂ ಆ ಜ್ಞಾನವು ಭ್ರಾಂತಿಯೆನಿಸಿಕೊಂಡು ಅಪ್ರಮಾಣವಾಗಿರುವುದು.

ಆದರಂತೆ ಇಲ್ಲಿಯೂ ಮೇಲೆಕಂಡ ಪ್ರತ್ಯಭಿಜ್ಞಾಪ್ರತ್ಯಕ್ಷವು ದೋಷಯುಕ್ತವಾದ ಕಾರಣದಿಂದ ಹುಟ್ಟದೆಯೂ, ಇದು ಹೀಗಲ್ಲ ಎಂಬ ಬಾಧಕಜ್ಞಾನದಿಂದ ಬಾಧಿಸಲ್ಪಡದೆಯೂ ಇರುವುದರಿಂದ ಇದನ್ನು ಭ್ರಾಂತಿಯೆಂದು ಹೇಳುವುದಕ್ಕಾಗಲಿ ಪ್ರಮಾಣವಲ್ಲವೆಂದು ಹೊಡೆದುಹಾಕುವುದಕ್ಕಾಗಲಿ ಅವಕಾಶವಿಲ್ಲ.

ಆದಕಾರಣ ಮೇಲೆಕಂಡ ಪ್ರತ್ಯಭಿಜ್ಞಾಪ್ರತ್ಯಕ್ಷಜ್ಞಾನವು ನಿರ್ದೋಷವಾದ ಕಾರಣಸಾಮಗ್ರಿಯಿಂದ ಹುಟ್ಟಿದುದಾಗಿಯೂ ಬಾಧಕಜ್ಞಾನವಿರಹಿತವಾಗಿಯೂ ಇರುವುದರಿಂದ ಶ್ರೇಷ್ಠವಾದ ಪ್ರಮಾಣವೆನಿಸಿಕೊಂಡು ಸಕಲಪದಾರ್ಥಗಳಿಗೂ ಅತೀತವರ್ತಮಾನಗಳೆಂಬ ಎರಡುಕಾಲಗಳ ಸಂಬಂಧವನ್ನು ತೋರಿಸುವುದರಮೂಲಕ ಆ ಆ ಪದಾರ್ಥಗಳ ಉತ್ಪತ್ತಿಕಾಲವೊದಲು ವಿನಾಶಕಾಲದವರೆಗೂ ಇರುವ ಮಧ್ಯಕಾಲದಲ್ಲಿ ಆ ಆ ಪದಾರ್ಥಗಳ ಸ್ಥಿರತ್ವವನ್ನು ಸ್ಪಷ್ಟವಾಗಿ ಸ್ಥಾಪಿಸಿಕೊಡುವುದರಿಂದ ಪದಾರ್ಥಗಳಿಗೆ ಕ್ಷಣಿಕತ್ವವನ್ನು ಹೇಳಲು ಯಾವುದೊಂದು ಪ್ರಮಾಣವೂ ಯಾವುದೊಂದು ಯುಕ್ತಿಯೂ ಇರುವುದಿಲ್ಲ.

### ೪೩ ಕ್ಷಣಿಕತ್ವಸಾಧಕಾನುಮಾನಸ್ಯ ಪ್ರತ್ಯಕ್ಷಬಾಧಿತತ್ವಾದಪ್ರಾಮಾಣ್ಯಂ.

ಮೇಘಮಂಡಲದೃಷ್ಟಾಂತದಿಂದ ತೋರಿಸಿರುವ ಅನುಮಾನಪ್ರಮಾಣವೂ

ಇಂಥ ಪ್ರಬಲವಾದ ಪ್ರತ್ಯಭಿಜ್ಞಾಪ್ರತ್ಯಕ್ಷಪ್ರಮಾಣದಿಂದ ಬಾಧಿಸಲ್ಪಟ್ಟು ಅನುಮಾನಾಭಾಸವೆನಿಸಿಕೊಳ್ಳುವುದಲ್ಲದೆ ಕ್ಷಣಿಕತ್ವವನ್ನು ಸಾಧಿಸಲು ಸಮರ್ಥವಾಗಲಾರದು.

## ೪೪ ಪುನರಪಿ ಪ್ರತ್ಯಭಿಜ್ಞಾಯಾಃ ಪ್ರಕಾರಾಂತರೇಣ ಭ್ರಾಂತಿತ್ವೋಪಪಾದನಂ.

ಇಂಥ ಪ್ರತ್ಯಕ್ಷಪ್ರಮಾಣಕ್ಕೆ ಭ್ರಾಂತಿರೂಪತ್ವವನ್ನು ಹೇಳುವುದಕ್ಕಾಗಿ ಬೌದ್ಧರು ಪುನಃ ಈರೀತಿಯಲ್ಲಿ ಪ್ರಯತ್ನಪಡುವರು. ಹೇಗೆಂದರೆ—

ಕುಸೂಲವೆಂದು ವ್ಯವಹರಿಸುವ ಮೂಡೆಯಲ್ಲಿ ಗುಪ್ತವಾಗಿ ಇಟ್ಟಿರುವ ಬೀಜವು ತತ್ಕ್ಷಣದಲ್ಲ ಅಂಕುರೋತ್ಪಾದನೆಮಾಡಿದುದನ್ನು ಯಾರೂ ನೋಡಿಲ್ಲ. ಆದ ಕಾರಣ ಅಬೀಜದಲ್ಲಿ ಅಂಕುರೋತ್ಪಾದನಸಾಮರ್ಥ್ಯವಿಲ್ಲವೆಂದು ಒಪ್ಪಿಕೊಳ್ಳಬೇಕು. ಕ್ಷೇತ್ರದಲ್ಲಿ ಬಿತ್ತಿದ ಬೀಜವು ಅಂಕುರೋತ್ಪಾದನೆಮಾಡುವುದನ್ನು ನಾವೆಲ್ಲರೂ ನೋಡಿರುವೆವು. ಆದಕಾರಣ ಅದರಲ್ಲಿ ಅಂಕುರವನ್ನು ಹುಟ್ಟಿಸುವ ಸಾಮರ್ಥ್ಯವುಂಟೆಂದು ಒಪ್ಪಿಕೊಳ್ಳಬೇಕು. ಹೀಗಿರುವಲ್ಲಿ ಕುಸೂಲದಲ್ಲಿರುವ ಅಸಮರ್ಥವಾದ ಬೀಜಕ್ಕೂ ಕ್ಷೇತ್ರದಲ್ಲಿ ಬಿತ್ತಿರುವ ಸಮರ್ಥವಾದ ಬೀಜಕ್ಕೂ ಪ್ರತ್ಯಭಿಜ್ಞಾಪ್ರತ್ಯಕ್ಷದಿಂದ ಅಭೇದವನ್ನು ಅಂಗೀಕರಿಸುವುದಾದರೆ ಪರಸ್ಪರವಿರುದ್ಧವಾದ ಸಾಮರ್ಥ್ಯಾಸಾಮರ್ಥ್ಯಗಳೆಂಬ ಎರಡುಧರ್ಮಗಳೂ ಒಂದೇ ಪದಾರ್ಥದಲ್ಲಿ ಸೇರಬೇಕಾಗಿ ಬರುವುದು. ಅದು ಸಂಭವಿಸುವುದಿಲ್ಲ. ಏತಕ್ಕೆಂದರೆ—ಯಾವುದು ಅಸಮರ್ಥವೋ ಅದು ಸಮರ್ಥವಾಗಲಾರದು; ಯಾವುದು ಸಮರ್ಥವೋ ಅದು ಅಸಮರ್ಥವೂ ಆಗಲಾರದು. ಬೇವಿನ ಅಂಕುರವನ್ನು ಹುಟ್ಟಿಸುವುದಕ್ಕೆ ಅಸಮರ್ಥವಾದ ಮಾವಿನ ಬೀಜವು ಅದನ್ನು ಹುಟ್ಟಿಸುವುದಕ್ಕೆ ಸಮರ್ಥವಾದ ಬೇವಿನ ಬೀಜವಾಗಿ ಎಂದಿಗೂ ಆಗಲಾರದು. ಅಂಥ ಬೇವಿನ ಬೀಜವು ಅಂಥ ಮಾವಿನ ಬೀಜವಾಗಿಯೂ ಎಂದಿಗೂ ಆಗಲಾರದು.

ಆದಕಾರಣ ಸಾಮರ್ಥ್ಯಾಸಾಮರ್ಥ್ಯಗಳೆಂಬ ಪರಸ್ಪರವಿರುದ್ಧವಾದ ಧರ್ಮಗಳು ತಮತಮಗೆ ಆಶ್ರಯವಾದ ಪದಾರ್ಥಗಳನ್ನು ಪರಸ್ಪರವಾಗಿ ಬೇರ್ಪಡಿಸಿಕೊಂಡೇ ಅವುಗಳಲ್ಲಿ ನಿಲ್ಲುವುವಾದುದರಿಂದ ಸಾಮರ್ಥ್ಯಕ್ಕೆ ಆಶ್ರಯವಾದ ಕ್ಷೇತ್ರಸ್ಥಬೀಜಕ್ಕಿಂತಲೂ ಅಸಾಮರ್ಥ್ಯಕ್ಕೆ ಆಶ್ರಯವಾದ ಕುಸೂಲಸ್ಥಬೀಜವು ಬೇರೊಂದಾಗಿರುವುದೆಂದು ಒಪ್ಪಿಕೊಳ್ಳಲೇಬೇಕು. ಹೀಗೆ ಪೂರ್ವೋತ್ತರಕಾಲಗಳಲ್ಲಿರುವ ಬೀಜಗಳಿಗೆ ಪರಸ್ಪರಭೇದವೇ ಯುಕ್ತಿಯಿಂದ ಸಿದ್ಧಿಸಿರುವಲ್ಲಿ ಅವುಗಳಿಗೆ ಅಭೇದವನ್ನು

ತೋರಿಸುವ ಪ್ರತ್ಯಭಿಜ್ಞಾಪ್ರತ್ಯಕ್ಷವು ಭ್ರಾಂತಿಯೆನಿಸಿಕೊಂಡು ಅಪ್ರಮಾಣಕೋಟಿಯಲ್ಲಿ ಸೇರಲು ತಡೆಯೇನು ?

೪೫ ಪುನಃ ಪ್ರತ್ಯಭಿಜ್ಞಾಯಾ ಭ್ರಾಂತಿತ್ವಾಸಂಭವೋಪಪಾದನಂ.

ಬೌದ್ಧರ ಇಂಥ ವಾದವು ಅವರ ಇಷ್ಟಸಿದ್ಧಿಗೆ ಲೇಶಮಾತ್ರವೂ ಸಹಕಾರಿಯಾಗುವುದಿಲ್ಲವೆಂಬ ಅಂಶವನ್ನು ಇತರ ದರ್ಶನಕಾರರೂ ವೇದಾಂತಿಗಳೂ ಬಹಳ ಚಮತ್ಕಾರವಾಗಿಯೂ ಅತಿವಿಸ್ತರವಾಗಿಯೂ ಉಪಪಾದನೆಮಾಡಿ ತೋರಿಸಿರುವರು. ಅದೆಲ್ಲವನ್ನೂ ಇಲ್ಲಿ ಬರೆವುದಾದರೆ ಈ ಗ್ರಂಥವು ಬಹುದೊಡ್ಡದಾಗಿ ಬಾಲಕರಿಗೆ ಕಠಿನವಾಗುವುದಾದಕಾರಣ ಅದರ ಸಾರಾಂಶವನ್ನು ಕೆಲವು ಮಾತುಗಳಿಂದ ಸಂಗ್ರಹಿಸಿ ಇಲ್ಲಿ ಬರೆವೆವು.

ಅಂಕುರೋತ್ಪಾದನಸಾಮರ್ಥ್ಯವೆಂಬ ಧರ್ಮವು ಕ್ಷೇತ್ರಸ್ಥಬೀಜದಲ್ಲಿ ಇರುವಂತೆ ಕುಸೂಲಸ್ಥಬೀಜದಲ್ಲಿ ಇಲ್ಲದಿದ್ದು ಅದಕ್ಕೆ ಪ್ರತಿಯಾಗಿ ಅದರಲ್ಲಿ ಅಸಾಮರ್ಥ್ಯವೆಂಬ ವಿರುದ್ಧಧರ್ಮವಿದ್ದರಲ್ಲವೆ ನಿಮ್ಮ ವಾಗಾಡಂಬರವು ಸಫಲವಾಗುತ್ತಿದ್ದಿತು. ಇಲ್ಲಿ ಪರಸ್ಪರವಿರುದ್ಧವಾದ ಎರಡು ಧರ್ಮಗಳೂ ಒಂದರಲ್ಲಿ ಸೇರಬೇಕಾದೀತೆಂದು ಊಹಿಸುವುದಕ್ಕಾಗಲಿ, ಅವುಗಳಿಗೆ ಆಶ್ರಯವಾದ ಬೀಜಗಳು ಬೇರೆಬೇರೆಯಾಗಿರಬೇಕೆಂದು ಹೇಳುವುದಕ್ಕಾಗಲಿ ಸ್ವಲ್ಪವೂ ಅವಕಾಶವಿಲ್ಲ. ಅಂಕುರವನ್ನು ಹುಟ್ಟಿಸುವುದಕ್ಕೆ ಸಮರ್ಥವಾಗಿಯೇ ಇದ್ದ ಬೀಜವು ಮೊದಲು ಕುಸೂಲದಲ್ಲಿ ಸ್ವಲ್ಪಕಾಲವಿದ್ದು ಕ್ರಮವಾಗಿ ಕ್ಷೇತ್ರದಲ್ಲಿ ಬಂದು ಸೇರಿ ಅಲ್ಲಿ ಸಹಕಾರಿಕಾರಣಗಳ ಸಾನ್ನಿಧ್ಯವನ್ನೂ ಪಡೆದು ತನ್ನ ಕೆಲಸವನ್ನು ತಾನು ನೆರವೇರಿಸುವುದು.

ಓಹೋ! ಕುಸೂಲದಲ್ಲಿರುವ ಬೀಜಕ್ಕೂ ಅಂಕುರಜನನಸಾಮರ್ಥ್ಯವುಂಟೋ? ಹಾಗಾದರೆ ಕುಸೂಲದಲ್ಲಿಯೇ ಮೊಳಕೆಯನ್ನು ಏಕೆ ಹುಟ್ಟಿಸಲಿಲ್ಲ? ಎಂದು ಶಂಕಿಸಬೇಡಿರಿ. ಸಾಮರ್ಥ್ಯವೆಂಬುದರ ಸ್ವರೂಪವೆಂಥದೆಂಬುದನ್ನು ಚೆನ್ನಾಗಿ ವಿಚಾರಮಾಡಿ ನೀವು ತಿಳಿದುಕೊಂಡಿದ್ದಪಕ್ಷದಲ್ಲಿ ಹೀಗೆ ಶಂಕಿಸುತ್ತಿರಲಿಲ್ಲ. ಸಹಕಾರಿಕಾರಣಗಳೆಲ್ಲವೂ ಒಟ್ಟಾಗಿ ಕೂಡಿದಾಗ ತಾನೂ ಅಲ್ಲಿದ್ದು ತನ್ನ ಕೆಲಸವನ್ನು ನೆರವೇರಿಸುವಿಕೆಯೇ ಸಾಮರ್ಥ್ಯವೆನಿಸಿಕೊಳ್ಳುವುದು; ಅಥವಾ ಸಹಕಾರಿಕಾರಣಗಳೆಲ್ಲವೂ ಒಟ್ಟಾಗಿ ಕೂಡಿಲ್ಲವೆಂಬ ಕಾರಣದಿಂದಲೇ ತನ್ನ ಕೆಲಸವನ್ನು ತಾನು ನೆರವೇರಿಸದಿರುವಿಕೆಯೂ ಸಾಮರ್ಥ್ಯವೆನಿಸಿಕೊಳ್ಳುವುದು.

ಕುಸೂಲದಲ್ಲಿರುವ ಬೀಜವೂ ತತ್ಕಾಲದಲ್ಲಿ ಅಂಕುರವನ್ನು ಹುಟ್ಟಿಸುವುದಿಲ್ಲ; ಘಟವೂ ಅಂಕುರವನ್ನು ಹುಟ್ಟಿಸುವುದಿಲ್ಲ; ಅಂಕುರಾನುತ್ಪಾದನವೆಂಬುದು ಈ ಎರಡು

ವಸ್ತುಗಳಲ್ಲಿಯೂ ಸಮಾನವಾಗಿದ್ದರೂ ಆದಕ್ಕೆ ಕಾರಣವು ಬೇರೆಬೇರೆಯಾಗಿರುವುದ ರಿಂದ ಕುಸೂಲಸ್ಥಬೀಜದಲ್ಲಿ ಸಾಮರ್ಥ್ಯವನ್ನೂ ಘಟದಲ್ಲಿ ಅಸಾಮರ್ಥ್ಯವನ್ನೂ ಒಪ್ಪಿ ಕೊಂಡೇ ತೀರಬೇಕು. ಹೇಗೆಂದರೆ—ಘಟವು ಮೊಳಕೆಯನ್ನು ಹುಟ್ಟಿಸದಿರುವಿಕೆ ಅದರ ಸಹಕಾರಿಕಾರಣಗಳು ಒಟ್ಟಾಗಿ ಸೇರಿಲ್ಲವೆಂಬ ಕಾರಣದಿಂದಲ್ಲ. ಹಾಗಾಗು ವಲ್ಲಿ ಅವುಗಳೆಲ್ಲವೂ ಒಟ್ಟಾಗಿ ಸೇರಿದಾಗ ಘಟವು ಬೀಜದಂತೆ ಅಂಕುರವನ್ನು ಹುಟ್ಟಿ ಸಿಯೇ ತೀರಬೇಕಲ್ಲವೆ ? ಹಾಗಿಲ್ಲದೆ ಅವುಗಳೆಲ್ಲವೂ ಸೇರಿದರೂ ಘಟವು ಎಂದಿಗೂ ಮೊಳಕೆಯನ್ನು ಹುಟ್ಟಿಸುವುದೇ ಇಲ್ಲವಾದಕಾರಣ ಘಟಕ್ಕೆ ಅಂಕುರಜನನದಲ್ಲಿ ಸ್ವರೂಪಯೋಗ್ಯತೆಯೇ ಇಲ್ಲವೆಂದು ಒಪ್ಪಿಕೊಳ್ಳಬೇಕಾದುದರಿಂದ ಘಟಕ್ಕೆ ಅಂಕು ರೋತ್ಪಾದನಸಾಮರ್ಥ್ಯವೇ ಇಲ್ಲವೆಂದು ಸ್ಪಷ್ಟವಾಯಿತು.

ಕುಸೂಲದಲ್ಲಿರುವ ಬೀಜಕ್ಕಾದರೋ ತತ್ಕಾಲದಲ್ಲಿ ಅಂಕುರವನ್ನು ಹುಟ್ಟಿಸ ದಿರುವಿಕೆ ಸ್ವರೂಪಯೋಗ್ಯತೆಯಿಲ್ಲದುದರಿಂದಲ್ಲ. ಹಾಗಾಗುವಲ್ಲಿ ಆ ಬೀಜವು ಘಟ ದಂತೆ ಯಾವಾಗಲೂ ಅಂಕುರವನ್ನು ಹುಟ್ಟಿಸದೆಯೇ ಇರಬೇಕು. ಹಾಗಿಲ್ಲದೆ ಸಹ ಕಾರಿಕಾರಣಗಳೆಲ್ಲವೂ ಒಟ್ಟಾಗಿ ಕೂಡಿದಾಗ ಅಂಕುರೋತ್ಪಾದನೆಯನ್ನು ಮಾಡು ವುದು ಸರ್ವರಿಗೂ ಅನುಭವಸಿದ್ಧವಾಗಿರುವುದು.

ಆದಕಾರಣ ಕುಸೂಲದಲ್ಲಿರುವ ಬೀಜವು ತತ್ಕಾಲದಲ್ಲಿ ಅಂಕುರವನ್ನು ಹುಟ್ಟಿಸ ದಿರುವಿಕೆ, ಅದರ ಸಹಕಾರಿಕಾರಣಗಳು ಒಟ್ಟಾಗಿ ಕೂಡದಿದ್ದುದರಿಂದಲೇ ಎಂದು ಒಪ್ಪಿಕೊಳ್ಳಬೇಕಾದುದರಿಂದ ಕುಸೂಲಸ್ಥಬೀಜಕ್ಕೆ ಅಂಕುರಜನನಸಾಮರ್ಥ್ಯವೇ ಇರು ವುದಲ್ಲದೆ ಅಸಾಮರ್ಥ್ಯಪ್ರಸಂಗಕ್ಕೆ ಅವಕಾಶವೇ ಇಲ್ಲ.

ಆದುದರಿಂದ ವಿರುದ್ಧವಾದ ಎರಡು ಧರ್ಮಗಳು ಒಂದೇ ಪದಾರ್ಥದಲ್ಲಿ ಸೇರ ಬೇಕಾದೀತೆಂಬ ಮಾತು ಸ್ವಪಕ್ಷದ ಅಭಿನಿವೇಶದಿಂದ ಹೇಳಿದ ಮಾತಾಗಿರುವುದಲ್ಲದೆ ಯುಕ್ತವಾದುದಲ್ಲವಾದಕಾರಣ ಅಬಾಧಿತವಾದ ಪ್ರತ್ಯಭಿಜ್ಞಾಪ್ರತ್ಯಕ್ಷವು ಭ್ರಾಂತಿ ರೂಪವೆಂದು ಹೇಳಿಸಿಕೊಳ್ಳುವ ಪ್ರಸಕ್ತಿಯೇ ಇಲ್ಲದೆ ದೃಢತರವಾದ ಪ್ರಮಾಣವಾಗಿ ಪದಾರ್ಥಗಳ ಸ್ಥಿರತ್ವವನ್ನೇ ತೋರಿಸುತ್ತಿರುವುದರಿಂದ ಕ್ಷಣಿಕತ್ವಕ್ಕೆ ಅವಕಾಶವೇ ಇಲ್ಲ.

ಇಂತು ತತ್ತ್ವಶುದ್ಧಿಯೆಂಬ ವಿಶಿಷ್ಟಾದ್ವೈತಪ್ರಕರಣಗ್ರಂಥದೊಳ್
ಅಚಿತ್ತತ್ತ್ವಪರಿಚ್ಛೇದದಲ್ಲಿ ದ್ರವ್ಯಸ್ಥಿರತ್ವಸಮರ್ಥನಪ್ರಕರಣಂ
ತೃತೀಯಂ.

———

# ಚತುರ್ಥ ಪ್ರಕರಣಂ.

---

### ೪೭. ಷೋಢಾ ದ್ರವ್ಯವಿಭಾಗಃ.

ಇಂಥ ದ್ರವ್ಯವು ಜಡ ಎಂದೂ ಅಜಡ ಎಂದೂ ಎರಡು ವಿಧವಾಗಿ ವಿಂಗಡಿಸಲ್ಪಟ್ಟಿರುವುದು. ಅಥವಾ ಪ್ರತ್ಯಕ್ ಎಂದೂ ಪರಾಕ್ ಎಂದೂ ಎರಡುವಿಧವಾಗಿ ಇದನ್ನು ವಿಂಗಡಿಸಬಹುದು. ಅಥವಾ ಪ್ರಕೃತಿ, ಕಾಲ, ಜೀವ, ಈಶ್ವರ, ನಿತ್ಯವಿಭೂತಿ, ಧರ್ಮಭೂತಜ್ಞಾನ ಎಂದು ಆರುವಿಧವಾಗಿಯೂ ದ್ರವ್ಯವನ್ನು ವಿಂಗಡಿಸಬಹುದು.

ಈ ಆರುದ್ರವ್ಯಗಳನ್ನೂ ಮೊದಲನೆಯ ವಿಭಾಗವಾದ ಜಡಾಜಡಗಳೆರಡರಲ್ಲಿ ಅಡಗಿಸಬೇಕಾದರೆ—ಮೊದಲು ಹೇಳಿರುವ ಪ್ರಕೃತಿ, ಕಾಲ ಈ ಎರಡನ್ನೂ ಜಡದ್ರವ್ಯವಾಗಿಯೂ, ಉಳಿದ ನಾಲ್ಕನ್ನೂ ಅಜಡದ್ರವ್ಯವಾಗಿಯೂ ತಿಳಿಯಬೇಕು. ಎರಡನೆಯ ವಿಭಾಗವಾದ ಪ್ರತ್ಯಕ್ ಪರಾಕ್ ಎಂಬ ಎರಡರಲ್ಲಿ ಅಡಗಿಸಬೇಕಾದರೆ ಮಧ್ಯದಲ್ಲಿ ಹೇಳಿರುವ ಜೀವ, ಈಶ್ವರ ಈ ಎರಡನ್ನೂ ಪ್ರತ್ಯಗ್ದ್ರವ್ಯವಾಗಿಯೂ ಉಳಿದ ನಾಲ್ಕನ್ನೂ ಪರಾಗ್ದ್ರವ್ಯವಾಗಿಯೂ ತಿಳಿಯಬೇಕು.

### ೪೭. ಆಕರಗ್ರಂಥೇಷು ತತ್ತ್ವತ್ರಯನಿರೂಪಣಸ್ಯ ದ್ರವ್ಯಾಂತರೋಪಲಕ್ಷಣಪರತ್ವಂ.

“ಚಿತ್ತು, ಅಚಿತ್ತು, ಈಶ್ವರ ಎಂದು ಮೂರುತತ್ತ್ವಗಳನ್ನು ಮಾತ್ರ ಸೂಕ್ಷ್ಮದರ್ಶಿಗಳು ವಿಭಾಗಮಾಡಿ ತೋರಿಸಿರುವಲ್ಲಿ ದ್ರವ್ಯಗಳನ್ನು ಆರುವಿಧವಾಗಿ ವಿಂಗಡಿಸಿದುದು ಹೇಗೆ ಸಂಗತವಾದೀತು” ಎಂದು ಆಶಂಕಿಸಬಾರದು. ವಿಶೇಷ್ಯವು ಪ್ರಧಾನವಾದುದೆಂದೂ ವಿಶೇಷಣವು ಅಪ್ರಧಾನವಾದುದೆಂದೂ ಲೋಕಾನುಭವವೂ ಶಾಸ್ತ್ರವ್ಯವಹಾರವೂ ಉಂಟು; ಆರುದ್ರವ್ಯಗಳೊಳಗೆ ಪ್ರಕೃತಿ, ಜೀವ, ಈಶ್ವರ ಎಂಬ ಮೂರು ತತ್ತ್ವಗಳು ವಿಶೇಷ್ಯವೆನಿಸಿಕೊಂಡು ಪ್ರಧಾನವಾಗಿರುವುದರಿಂದಲೂ, ಉಳಿದ ಕಾಲ, ಧರ್ಮಭೂತಜ್ಞಾನ, ನಿತ್ಯವಿಭೂತಿ ಈ ಮೂರುದ್ರವ್ಯಗಳೂ ವಿಶೇಷಣಗಳೆನಿಸಿಕೊಂಡು ಅಪ್ರಧಾನವಾಗಿರುವುದರಿಂದಲೂ, ಪ್ರಧಾನವಾದ ಮೂರು ತತ್ತ್ವಗಳನ್ನು ವಿಭಾಗಮಾಡಿ ತೋರಿಸಿದುದರಿಂದಲೇ ಅಪ್ರಧಾನವಾದ ಉಳಿದ ಮೂರು ದ್ರವ್ಯಗಳನ್ನೂ ತೋರಿಸಿದಂತೆಯೇ ಆಗಿರುವುದು. ಮನುಷ್ಯನು ಹೋಗುತ್ತಾನೆ ಎಂದು ಹೇಳಿದ ಮಾತ್ರದಲ್ಲಿಯೇ ಅವನ ರೂಪವೂ ಅವನ ಜತೆಯಲ್ಲಿ ಹೋಗು

ತ್ತದೆ ಎಂದು ಹೇಳಿದಂತೆಯೇ ಆಗಿರುವುದರಿಂದ ಅವನ ರೂಪವೂ ಹೋಗುತ್ತದೆ ಎಂದು ಪ್ರತ್ಯೇಕವಾಗಿ ಹೇಳಬೇಕಾದುದಿಲ್ಲ.

ಇಲ್ಲಿ— ಕಾಲವೆಂಬುದು ಮೂರು ತತ್ತ್ವಗಳಿಗೂ ವಿಶೇಷಣವಾಗಿಯೇ ಇರುವುದು. ಧರ್ಮಭೂತಜ್ಞಾನವು ಅದಕ್ಕೆ ಆಶ್ರಯನಾದ ಜೀವನಿಗೂ ಈಶ್ವರನಿಗೂ ವಿಶೇಷಣವಾಗಿಯೇ ಇರುವುದು. ನಿತ್ಯವಿಭೂತಿ ಈಶ್ವರನ ಸಂಕಲ್ಪದಿಂದ ವಿಮಾನ, ಮಂಟಪ, ಗೋಪುರ, ಪ್ರಾಕಾರ, ಉದ್ಯಾನ, ವಾಹನ, ಪರಿಚ್ಛದ, ದಿವ್ಯಮಂಗಳ ವಿಗ್ರಹ ಮುಂತಾದ ಅನೇಕ ವಸ್ತುಗಳಾಗಿ ಪರಿಣಮಿಸಿ ಅವನ ಭೋಗಕ್ಕೆ ಸಾಧನವಾಗಿ ಅವನಿಗೆ ನಿರುಪಾಧಿಕವಿಶೇಷಣವಾಗಿರುವುದು. ನಿತ್ಯವಾದ ಈಶ್ವರೇಚ್ಛೆಯೆಂಬ ಉಪಾಧಿಯಿಂದ ನಿತ್ಯರಿಗೂ ಮುಕ್ತರಿಗೂ ವಿಶೇಷಣವಾಗಿರುವುದು.

ಆದಕಾರಣ—ತತ್ತ್ವವನ್ನು ಚಿತ್, ಅಚಿತ್, ಈಶ್ವರ ಎಂದು ಮೂರು ವಿಧವಾಗಿ ವಿಂಗಡಿಸಿದವರಿಗೆ ಈಮೂರು ತತ್ತ್ವಗಳಲ್ಲಿಯೇ ಉಳಿದ ಮೂರೂ ವಿಶೇಷಣಗಳಾಗಿ ಅಡಗಿರುವುವೆಂದು ಅಭಿಪ್ರಾಯವೇ ಹೊರತು ಆರು ದ್ರವ್ಯಗಳೇ ಇಲ್ಲವೆಂದು ಹೇಳುವುದರಲ್ಲಿ ಅಭಿಪ್ರಾಯವಲ್ಲ.

೪೮ ತತ್ತ್ವತ್ರಯನಿರೂಪಣಸ್ಯೈವ ದೇಹಾತ್ಮವಿವೇಕೋಪಯೋಗಿತ್ವಾತ್ ಗ್ರಂಥೇಷು ತನ್ನಿರೂಪಣಂ.

ಅಲ್ಲದೆ ಸಂಸಾರಸಮುದ್ರದಲ್ಲಿ ಬಿದ್ದು ನರಳುತ್ತಿರುವ ಜೀವನಿಗೆ ಸಂಸಾರದುಃಖವನ್ನು ತಪ್ಪಿಸಿಕೊಂಡು ಶಾಶ್ವತವಾದ ಮೋಕ್ಷಸಾಮ್ರಾಜ್ಯವನ್ನು ಪಡೆಯಬೇಕಾದರೆ ತಾನು ಸಂಸಾರದುಃಖಕ್ಕೆ ಬಂದುದಕ್ಕೆ ಕಾರಣವೇನೆಂಬುದನ್ನು ವಿಚಾರಮಾಡಿ ತಿಳಿದುಕೊಂಡು ಅದನ್ನು ಪರಿಹರಿಸುವುದಕ್ಕೆ ಪ್ರಯತ್ನಪಡಬೇಕು. ಅಂಥ ಕಾರಣವೂ— ಆತ್ಮನಲ್ಲದ ದೇಹದಲ್ಲಿ ಆತ್ಮಭ್ರಾಂತಿಯೂ, ಸ್ವತಂತ್ರನಲ್ಲದ ಆತ್ಮನಲ್ಲಿ ಸ್ವತಂತ್ರತ್ವಭ್ರಮವೂ, ಈ ಎರಡೇ ಆಗಿರುವುದೆಂದು—

ಅನಾತ್ಮನ್ಯಾತ್ಮಬುದ್ಧಿರ್ಯಾ ಅಸ್ವೇ ಸ್ವಮಿತಿ ಯಾ ಮತಿಃ ।
ಅವಿದ್ಯಾತರುಸಂಭೂತಿಬೀಜಮೇತದ್ದ್ವಿಧಾ ಸ್ಥಿತಂ ॥

ಎಂಬ ಪರಾಶರಮಹರ್ಷಿಯ ವಚನದಿಂದ ನಿಷ್ಕರ್ಷಿಸಲ್ಪಟ್ಟಿರುವುದು. ಆದಕಾರಣ ಸಕಲವಾದ ಸಾಂಸಾರಿಕದುಃಖಗಳಿಗೂ ಬೀಜಭೂತವಾಗಿರುವ ಇಂಥ ದೇಹಾತ್ಮಭ್ರಮವನ್ನೂ ಸ್ವತಂತ್ರಾತ್ಮಭ್ರಮವನ್ನೂ ಹೋಗಲಾಡಿಸಿಕೊಳ್ಳುವುದಕ್ಕಾಗಿ ದೇಹಕ್ಕೂ ಆತ್ಮನಿಗೂ ಇರುವ ವ್ಯತ್ಯಾಸಗಳನ್ನೂ ಆತ್ಮನಿಗೂ ಈಶ್ವರನಿಗೂ ಇರುವ ವ್ಯತ್ಯಾಸಗಳನ್ನೂ ತಿಳಿದು ದೇಹಾತ್ಮವಿವೇಕವನ್ನು ಸ್ಥಿರಪಡಿಸಿಕೊಳ್ಳಬೇಕು. ಇಂಥ ದೇಹಾತ್ಮ

ವಿವೇಕಕ್ಕೆ ಚಿದಚಿದೀಶ್ವರರೆಂಬ ತತ್ತ್ವತ್ರಯದ ನಿರೂಪಣವು ಉಪಯುಕ್ತವಾಗಿರು ವಷ್ಟು ಕಾಲ, ಧರ್ಮಭೂತಜ್ಞಾನ, ನಿತ್ಯವಿಭೂತಿ ಇವುಗಳ ನಿರೂಪಣವು ಉಪಯುಕ್ತವಾದುದಲ್ಲ. ಆದಕಾರಣ ತತ್ತ್ವತ್ರಯವನ್ನು ಪೂರ್ವಾಚಾರ್ಯರು ಪ್ರ ಧಾನವಾಗಿ ನಿರೂಪಿಸಿರುವರೇ ಹೊರತು ಉಳಿದ ಮೂರು ದ್ರವ್ಯಗಳನ್ನು ಖಂಡನೆ ಮಾಡುವುದಕ್ಕಲ್ಲ. ಆದುದರಿಂದ ದ್ರವ್ಯಗಳನ್ನು ಆರುವಿಧವಾಗಿ ವಿಂಗಡಿಸಿದುದು ಅಸಂಗತವಲ್ಲ.

ಅಂತು ಜಡದ್ರವ್ಯಗಳೆರಡು ಅಜಡದ್ರವ್ಯಗಳು ನಾಲ್ಕು, ಅಥವಾ ಪ್ರತ್ಯಗ್ದ್ರವ್ಯ ಗಳೆರಡು ಪರಾಗ್ದ್ರವ್ಯಗಳು ನಾಲ್ಕು, ಹೀಗೆ ದ್ರವ್ಯಗಳು ಆರೆಂಬುದು ಸಿದ್ಧವಾಯಿತು.

### ೪೯ ಜಡದ್ರವ್ಯಲಕ್ಷಣಂ.

ಇವುಗಳಲ್ಲಿ ಜಡದ್ರವ್ಯವೆಂದರೇನು ? ಯಾವ ದ್ರವ್ಯವು ತಾನಾಗಿಯೇ ಸ್ಫುರಿ ಸುವುದಿಲ್ಲವೋ, ಎಂದರೆ ಯಾವ ದ್ರವ್ಯದ ಪ್ರಕಾಶವು ಅನ್ಯಾಧೀನವಾಗಿಯೇ ಇರು ವುದೋ ಅಂಥ ದ್ರವ್ಯವು ಜಡದ್ರವ್ಯವೆನಿಸಿಕೊಳ್ಳುವುದು. ಪ್ರಕೃತಿ, ಕಾಲ ಈ ಎರಡು ದ್ರವ್ಯಗಳೂ ತಾವಾಗಿಯೇ ಪ್ರಕಾಶಿಸುವುದಲ್ಲ. ಇವೆರಡರ ಪ್ರಕಾಶವೂ ಜ್ಞಾನಾಧೀನವಾಗಿಯೇ ಇರುವುದು. ಆದುದರಿಂದ ಈ ಎರಡು ದ್ರವ್ಯಗಳನ್ನೂ ಜಡದ್ರವ್ಯಗಳೆಂದು ತಿಳಿಯಬೇಕು.

### ೫೦ ಅಜಡದ್ರವ್ಯಲಕ್ಷಣಂ.

ಅಜಡದ್ರವ್ಯವೆಂದರೇನು ? ಜಡದ್ರವ್ಯಕ್ಕಿಂತಲೂ ಬೇರೊಂದಾದ ದ್ರವ್ಯವು ಅಜಡದ್ರವ್ಯವೆನಿಸಿಕೊಳ್ಳುವುದು: ಎಂದರೆ—ಯಾವ ದ್ರವ್ಯವು ತಾನಾಗಿಯೇ ಸ್ಫುರಿಸು ವುದೋ, ಯಾವುದರ ಪ್ರಕಾಶವು ಅನ್ಯಾಧೀನವಾಗಿಲ್ಲವೋ ಅಂಥ ದ್ರವ್ಯವು ಅಜಡ ದ್ರವ್ಯವೆನಿಸಿಕೊಳ್ಳುವುದು. ಜೀವ, ಈಶ್ವರ, ನಿತ್ಯವಿಭೂತಿ, ಧರ್ಮಭೂತಜ್ಞಾನ ಈ ನಾಲ್ಕು ದ್ರವ್ಯಗಳೂ ಸ್ವಯಂಪ್ರಕಾಶಗಳೆನಿಸಿಕೊಂಡು ತಾವಾಗಿಯೇ ಸ್ಫುರಿಸು ತ್ತಿರುವುದರಿಂದ ಇವುಗಳ ಪ್ರಕಾಶವು ಅನ್ಯಾಧೀನವಲ್ಲ. ಆದುದರಿಂದ ಈ ನಾಲ್ಕು ದ್ರವ್ಯಗಳನ್ನೂ ಅಜಡದ್ರವ್ಯಗಳೆಂದು ತಿಳಿಯಬೇಕು.

### ೫೧ ಪ್ರತ್ಯಗ್ದ್ರವ್ಯಲಕ್ಷಣಂ.

ಪ್ರತ್ಯಗ್ದ್ರವ್ಯವೆಂದರೇನು ? ಯಾವ ದ್ರವ್ಯವು ನಾನು ಎಂದು ತನ್ನನ್ನು ತಾನು ಗ್ರಹಿಸುವುದೋ, ಎಂದರೆ ಯಾವುದು ತನಗೋಸ್ಕರ ಪ್ರಕಾಶಿಸುವುದೋ ಅಂಥ ದ್ರವ್ಯವು ಪ್ರತ್ಯಗ್ದ್ರವ್ಯವೆನಿಸಿಕೊಳ್ಳುವುದು. ಜೀವ, ಈಶ್ವರ ಈ ಎರಡು ದ್ರವ್ಯಗಳೂ ನಾನು ಎಂಬುದಾಗಿ ತಮ್ಮನ್ನು ತಾವು ಗ್ರಹಿಸುವುವು ; ಎಂದರೆ ತಮ

ಗೋಸ್ಕರ ತಾವು ಪ್ರಕಾಶಿಸುವುವು. ಆದುದರಿಂದ ಈ ಎರಡು ದ್ರವ್ಯಗಳನ್ನೂ ಪ್ರತ್ಯಗ್ದ್ರವ್ಯಗಳೆಂದು ತಿಳಿಯಬೇಕು.

## ೫೨ ಪರಾಗ್ದ್ರವ್ಯಲಕ್ಷಣಂ.

ಪರಾಗ್ದ್ರವ್ಯವೆಂದರೇನು? ಪ್ರತ್ಯಗ್ದ್ರವ್ಯಕ್ಕಿಂತಲೂ ಬೇರೊಂದಾದ ದ್ರವ್ಯವು ಪರಾಗ್ದ್ರವ್ಯವೆನಿಸಿಕೊಳ್ಳುವುದು: ಎಂದರೆ—ಯಾವ ದ್ರವ್ಯವು ತನಗಲ್ಲದೆ ಇತರನಿಗೋಸ್ಕರವೇ ಪ್ರಕಾಶಿಸುವುದೋ—ಎಂದರೆ—ನಾನು ಎಂಬುದಾಗಿ ತೋರದೆ ಇದು ಎಂಬುದಾಗಿಯೇ ತೋರುವುದೋ ಅಂಥ ದ್ರವ್ಯವು ಪರಾಗ್ದ್ರವ್ಯವೆನಿಸಿಕೊಳ್ಳುವುದು. ಪ್ರಕೃತಿ, ಕಾಲ, ನಿತ್ಯವಿಭೂತಿ, ಧರ್ಮಭೂತಜ್ಞಾನ ಈ ನಾಲ್ಕು ದ್ರವ್ಯಗಳೂ ತಮಗಲ್ಲದೆ ಇತರನಾದ ಜೀವನಿಗಾಗಲಿ ಈಶ್ವರನಿಗಾಗಲಿ ಪ್ರಕಾಶಿಸುವುವು: ಎಂದರೆ ನಾನು ಎಂಬುದಾಗಿ ತಮಗೆ ತಾವು ಪ್ರಕಾಶಿಸದೆ ಇದು ಎಂಬುದಾಗಿ ಆತ್ಮನಿಗೆ ಅಥವಾ ಈಶ್ವರನಿಗೆ ಪ್ರಕಾಶಿಸುವುವು. ಆದುದರಿಂದ ಈ ನಾಲ್ಕು ದ್ರವ್ಯಗಳನ್ನೂ ಪರಾಗ್ದ್ರವ್ಯಗಳೆಂದು ತಿಳಿಯಬೇಕು.

## ೫೩ ಜೀವೇಶ್ವರಯೋಃ ಸ್ವಂ ಸ್ವಂ ಪ್ರತಿ ಪ್ರತ್ಯಕ್ತ್ವೇऽಪಿ ಅನ್ಯಂ ಪ್ರತಿ ಪರಾಕ್ತ್ವಮಪ್ಯವಿರುದ್ಧಂ.

"ಮೈತ್ರನು ಚೈತ್ರನ ಶರೀರದಲ್ಲಿ ನಡೆವ ಕೆಲವು ಚೇಷ್ಟೆಗಳನ್ನು ಕಂಡು ಆ ಶರೀರದಲ್ಲಿ ಆತ್ಮನಿರುತ್ತಾನೆಂದು ನಿಶ್ಚಯಿಸಿದಮೇಲೆ ಅಂಥ ಆತ್ಮನನ್ನು ಇವನು ಎಂಬ ಶಬ್ದಕ್ಕೆ ಗುರಿಮಾಡಿ ವ್ಯವಹರಿಸುವನು. ಆಗ ಚೈತ್ರಶರೀರದಲ್ಲಿರುವ ಆತ್ಮನು ಮೈತ್ರನಿಗೆ ನಾನು ಎಂಬುದಾಗಿ ತೋರದೆ ಇವನು ಎಂಬುದಾಗಿ ತೋರುವುದರಿಂದ ಮೈತ್ರನ ಭಾಗಕ್ಕೆ ಚೈತ್ರಾತ್ಮನು ಪರಾಗ್ದ್ರವ್ಯವಾಗಬೇಕಲ್ಲವೆ? ಹಾಗಾಗುವಲ್ಲಿ ಆತ್ಮನನ್ನು ಪ್ರತ್ಯಗ್ದ್ರವ್ಯವಾಗಿ ಹಿಂದೆ ಹೇಳಿದುದು ಹೇಗೆ ಸಂಗತವಾದೀತು" ಎಂದು ಶಂಕಿಸಬಾರದು. ಜೀವನೂ ಈಶ್ವರನೂ ತನ್ನನ್ನು ಕುರಿತು ತಾನು ಪ್ರತ್ಯಕ್ಕೆನಿಸಿಕೊಂಡಿದ್ದರೂ ಇತರರನ್ನು ಕುರಿತು ಪರಾಗ್ದ್ರವ್ಯವೆನಿಸಿಕೊಂಡರೆ ವಿರೋಧವೇನೂ ಇರುವುದಿಲ್ಲ. ತನ್ನ ತಂದೆಯನ್ನು ಕುರಿತು ತಾನು ಮಗನೆನಿಸಿಕೊಂಡಿದ್ದರೂ ತನ್ನ ಮಗನನ್ನು ಕುರಿತು ತಾನು ತಂದೆಯೆನಿಸಿಕೊಳ್ಳುವುದರಲ್ಲಿ ತೊಂದರೆಯೇನೂ ಇಲ್ಲವಷ್ಟೆ.

## ೫೪ ಪ್ರತ್ಯಕ್ತ್ವಪರಾಕ್ತ್ವಯೋರಿವ ಅಜಡತ್ವಪರಾಕ್ತ್ವಯೋಃ ಜಡತ್ವಪರಾಕ್ತ್ವಯೋಶ್ಚ ನ ವಿರೋಧಃ.

ಈರೀತಿಯಲ್ಲಿ ಪ್ರತ್ಯಕ್ತ್ವಕ್ಕೂ ಪರಾಕ್ತ್ವಕ್ಕೂ ಹೇಗೆ ವಿರೋಧವಿಲ್ಲವೋ ಹಾಗೆಯೇ ಅಜಡತ್ವಕ್ಕೂ ಪರಾಕ್ತ್ವಕ್ಕೂ, ಜಡತ್ವಕ್ಕೂ ಪರಾಕ್ತ್ವಕ್ಕೂ

ವಿರೋಧವಿಲ್ಲವಾದುದರಿಂದ ಅಜಡವಾದ ನಿತ್ಯವಿಭೂತಿಯೂ ಧರ್ಮಭೂತಜ್ಞಾನವೂ, ಜಡವಾದ ಪ್ರಕೃತಿಯೂ ಕಾಲವೂ ಸಹ, ಪರಾಗ್ದ್ರವ್ಯವೆನಿಸಿಕೊಳ್ಳುವುದರಲ್ಲಿ ಯಾವ ಅಭ್ಯಂತರವೂ ಇಲ್ಲ.

ಇದರಿಂದ ಜಡವಾದ ವಸ್ತು ಅಜಡವಾಗುವುದಿಲ್ಲವೆಂದೂ, ಅಜಡವಾದ ವಸ್ತು ಜಡವಾಗುವುದಿಲ್ಲವೆಂದೂ, ಜಡವಾದ ವಸ್ತು ಪ್ರತ್ಯಕ್ಕಾಗುವುದಿಲ್ಲವೆಂದೂ, ಪ್ರತ್ಯಕ್ಕಾದ ವಸ್ತು ಜಡವಾಗುವುದಿಲ್ಲವೆಂದೂ, ಎಂದರೆ ಜಡತ್ವಾಜಡತ್ವಗಳಿಗೂ ಜಡತ್ವಪ್ರತ್ಯಕ್ತ್ವಗಳಿಗೂ ವಿರೋಧವುಂಟೆಂದೂ, ಜಡವಸ್ತುವಾಗಲಿ ಅಜಡವಸ್ತುವಾಗಲಿ ಪ್ರತ್ಯಗ್ವಸ್ತುವಾಗಲಿ ಪರಾಗ್ವಸ್ತುವಾಗಬಹುದೆಂದೂ, ಫಲಿಸಿತು,

ಅಂತು ಜಡತ್ವವೂ ಪ್ರತ್ಯಕ್ತ್ವವೂ ಎರಡೆರಡು ದ್ರವ್ಯಗಳಲ್ಲಿ ಮಾತ್ರ ಇರುವುವೆಂದೂ, ಅಜಡತ್ವವು ನಾಲ್ಕು ದ್ರವ್ಯಗಳಲ್ಲಿ ಮಾತ್ರ ಇರುವುದೆಂದೂ, ಪರಾಕ್ತ್ವವು ಆರು ದ್ರವ್ಯಗಳಲ್ಲಿಯೂ ಇರುವುದೆಂದೂ, ಸಿದ್ಧವಾಯಿತು.

ಇಂತು ತತ್ತ್ವಶುದ್ಧಿಯೆಂಬ ವಿಶಿಷ್ಟಾದ್ವೈತಪ್ರಕರಣಗ್ರಂಥದೊಳ್
ಅಚಿತ್ತತ್ತ್ವಪರಿಚ್ಛೇದದಲ್ಲಿ ದ್ರವ್ಯಾವಾಂತರವಿಭಾಗಪ್ರಕರಣಂ
ಚತುರ್ಥಂ.

---

## ಪಂಚಮಪ್ರಕರಣಂ.

---

### ೩೩ ತ್ರಿಗುಣದ್ರವ್ಯಲಕ್ಷಣಂ.

ಹೀಗೆ ದ್ರವ್ಯದ ಒಳವಿಭಾಗಗಳನ್ನು ತೋರಿಸಿದೆವು. ಇನ್ನು ಈ ಆರು ದ್ರವ್ಯಗಳ ಪ್ರತ್ಯೇಕಲಕ್ಷಣಗಳನ್ನೂ ಸ್ವರೂಪಸ್ವಭಾವಗಳನ್ನೂ ಪರಿಣಾಮಕ್ರಮವನ್ನೂ ಕ್ರಮವಾಗಿ ನಿರೂಪಿಸುವೆವು.

ಇವುಗಳಲ್ಲಿ ಎಲ್ಲಕ್ಕಿಂತಲೂ ಮೊದಲು ನಿರ್ದೇಶಿಸಿರುವ ಪ್ರಕೃತಿ ಎಂಬುದು ಸತ್ತ್ವ, ರಜಸ್ಸು, ತಮಸ್ಸು ಎಂಬ ಮೂರು ಗುಣಗಳುಳ್ಳುದಾದುದರಿಂದ ತ್ರಿಗುಣವೆಂಬ ಹೆಸರನ್ನು ಪಡೆದಿರುವುದು. ಇಂಥ ತ್ರಿಗುಣದ ಲಕ್ಷಣ, ಸ್ವರೂಪ, ಸ್ವಭಾವ ಮುಂತಾದುವುಗಳನ್ನು ಮೊದಲು ವಿಶದವಾಗಿ ನಿರೂಪಿಸಿ ತೋರಿಸುವೆವು.

ತ್ರಿಗುಣವೆಂಬ ಪ್ರಕೃತಿಗೆ ಮೂರುವಿಧವಾದ ಲಕ್ಷಣಗಳನ್ನು ಹೇಳಬಹುದು.

ಅವುಗಳಲ್ಲಿ ಮೊದಲನೆಯದು--ಅಪೃಥಕ್ಸಿದ್ಧಿಸಂಬಂಧದಿಂದ ರಜೋಗುಣವುಳ್ಳ ದ್ರವ್ಯವು ಪ್ರಕೃತಿಯೆನಿಸಿಕೊಳ್ಳುವುದು.

ಎರಡನೆಯದು—ಅಪೃಥಕ್ಸಿದ್ಧಿಸಂಬಂಧದಿಂದ ತಮೋಗುಣವುಳ್ಳ ದ್ರವ್ಯವು ಪ್ರಕೃತಿಯೆನಿಸಿಕೊಳ್ಳುವುದು. ಕಾಲಿಕಸಂಬಂಧದಿಂದ ಕಾಲದಲ್ಲಿಯೂ ರಜೋಗುಣ ತಮೋಗುಣಗಳಿದ್ದರೂ ಅಪೃಥಕ್ಸಿದ್ಧಿಸಂಬಂಧದಿಂದ ಅವು ಕಾಲದಲ್ಲಿ ಇಲ್ಲವಾದುದರಿಂದ ಪ್ರಕೃತಿಗೆ ಹೇಳಿದ ಈ ಲಕ್ಷಣಗಳು ಪ್ರಕೃತಿಯಲ್ಲದ ಕಾಲದಲ್ಲಿ ವ್ಯಾಪಿಸಲಾರವಾದುದರಿಂದ ಈ ಲಕ್ಷಣಗಳಿಗೆ ಅತಿವ್ಯಾಪ್ತಿದೋಷವಿಲ್ಲ.

ಅಪೃಥಕ್ಸಿದ್ಧಿಸಂಬಂಧದಿಂದ ಸತ್ತ್ವಗುಣವುಳ್ಳ ದ್ರವ್ಯವು ಪ್ರಕೃತಿಯೆನಿಸಿಕೊಳ್ಳುವುದು ಎಂದು ಮತ್ತೊಂದು ಲಕ್ಷಣವನ್ನು ಇದಕ್ಕೆ ಹೇಳಬಾರದು. ಈ ಲಕ್ಷಣಕ್ಕೆ ನಿತ್ಯವಿಭೂತಿಯೆಂಬ ಶುದ್ಧಸತ್ತ್ವದ್ರವ್ಯದಲ್ಲಿ ಅತಿವ್ಯಾಪ್ತಿಯುಂಟಾಗುವುದು.

ಮೂರನೆಯದು—ಘಟತ್ವಾವಸ್ಥೆಯೊಡನೆ ಕೂಡಿರುವ ವಸ್ತುವನ್ನು ಕುರಿತು ಪಿಂಡತ್ವಾವಸ್ಥೆಯೊಡನೆ ಕೂಡಿರುವ ವಸ್ತು ಕಾರಣವಾಗುವಂತೆ ಮಹತ್ತ್ವ, ಅಹಂಕಾರತ್ವ ಮೊದಲಾದ ಅವಸ್ಥೆಯೊಡನೆ ಕೂಡಿರುವ ವಸ್ತುವನ್ನು ಕುರಿತು ಯಾವುದು ಕಾರಣವೋ ಅದು ಪ್ರಕೃತಿಯೆನಿಸಿಕೊಳ್ಳುವುದು. ಅಥವಾ ಅಪೃಥಕ್ಸಿದ್ಧಿಸಂಬಂಧದಿಂದ ತನ್ನಲ್ಲಿ ಉಂಟಾಗುವ ರೂಪವನ್ನು ಕುರಿತು ಘಟವು ಕಾರಣವಾಗುವಂತೆ ಅದೇ ಸಂಬಂಧದಿಂದ ತನ್ನಲ್ಲಿ ಉಂಟಾಗುವ ಮಹತ್ತ್ವಮೊದಲಾದ ಅವಸ್ಥೆಯನ್ನು ಕುರಿತು ಯಾವುದು ಕಾರಣವೋ ಅದು ಪ್ರಕೃತಿಯೆನಿಸಿಕೊಳ್ಳುವುದು.

### ೫೩. ತ್ರಿಗುಣದ್ರವ್ಯೇ ಪ್ರಮಾಣಪ್ರದರ್ಶನಂ.

ಒಂದು ವಸ್ತು ಸಿದ್ಧಿಸಬೇಕಾದರೆ ಲಕ್ಷಣಪ್ರಮಾಣಗಳೆರಡೂ ಇರಬೇಕು. ಪ್ರಕೃತಿಗೆ ಲಕ್ಷಣವನ್ನು ಹೇಳಿ ಆಯಿತು. ಈಗ ಪ್ರಮಾಣವನ್ನು ಹೇಳುವೆವು. ಲೋಕದಲ್ಲಿ ದೃಷ್ಟಿಗೆ ಗೋಚರವಾಗಿರುವ ಘಟ, ಪಟ ಮೊದಲಾದ ತ್ರಿಗುಣದ್ರವ್ಯದಲ್ಲಿ ಪ್ರತ್ಯಕ್ಷವೇ ಪ್ರಮಾಣವಾಗಿರುವುದು. ದೃಷ್ಟಿಗೆ ಗೋಚರವಾಗದ ಮಹತ್, ಅಹಂಕಾರ ಮೊದಲಾದ ತ್ರಿಗುಣದ್ರವ್ಯದಲ್ಲಿ ಅಜಾಮೇಕಾಂ ಲೋಹಿತಶುಕ್ಲಕೃಷ್ಣಾಂ ಎಂಬುದೇ ಮೊದಲಾದ ಅಪೌರುಷೇಯಶಬ್ದವೇ ಪ್ರಮಾಣವಾಗಿರುವುದು.

### ೫೭ ಪ್ರಕೃತೇಃ ನವಸು ದಿಕ್ಷು ಅಪರಿಚ್ಛಿನ್ನತ್ವಂ ಊರ್ಧ್ವದಿಶಿ ಪರಿಚ್ಛಿನ್ನತ್ವಂ ಚ.

ಇಂಥ ಪ್ರಕೃತಿ ತನ್ನ ಎಂಟುದಿಕ್ಕುಗಳಲ್ಲಿಯೂ ಕೆಳಭಾಗದಲ್ಲಿಯೂ ಅಪರಿಚ್ಛಿನ್ನವಾಗಿರುವುದು; ಎಂದರೆ ಎಲ್ಲೆಯಿಲ್ಲದುದಾಗಿರುವುದು. ತನ್ನ ಮೇಲ್ಭಾಗದಲ್ಲಿ

ಮಾತ್ರ ನಿತ್ಯವಿಭೂತಿಯೆಂಬ ಶುದ್ಧಸತ್ತ್ವದ್ರವ್ಯದಿಂದ ಪರಿಚ್ಛೇದಿಸಲ್ಪಟ್ಟು ಎಲ್ಲೆಯುಳ್ಳುದಾಗಿರುವುದು. ಆದಿತ್ಯವರ್ಣಂ ತಮಸಃ ಪರಸ್ತಾತ್ ಎಂಬುದಾಗಿ ತಮಶ್ಶಬ್ದವಾಚ್ಯೆಯಾದ ಪ್ರಕೃತಿಗಿಂತಲೂ ಪರಭಾಗದಲ್ಲಿ ಶುದ್ಧಸತ್ತ್ವವಿರುವುದೆಂದು ಶ್ರುತಿ ಹೇಳುತ್ತದೆ.

೫೮ ತ್ರಿಗುಣದ್ರವ್ಯಸ್ಯೈವ ಮಾಯಾಪ್ರಕೃತ್ಯವಿದ್ಯಾಽಚೇತನಾಚಿದಾದಿಶಬ್ದವಾಚ್ಯತ್ವಂ.

“ಮಾಯೆಯೇ ಉಪಾದಾನಕಾರಣವೆಂದು ಕೆಲವು ಕಡೆಗಳಲ್ಲಿಯೂ, ಪ್ರಕೃತಿಯೇ ಉಪಾದಾನವೆಂದು ಇನ್ನು ಕೆಲವು ಸ್ಥಳಗಳಲ್ಲಿಯೂ, ಅವಿದ್ಯೆಯೇ ಉಪಾದಾನವೆಂದು ಮತ್ತು ಕೆಲವೆಡೆಗಳಲ್ಲಿಯೂ ಹೇಳಿರುವುದರಿಂದ ಹಿಂದೆ ಹೇಳಿದ ತ್ರಿಗುಣದ್ರವ್ಯದ ಮೂರನೆಯ ಲಕ್ಷಣದಲ್ಲಿ ಮಹತ್ತತ್ತ್ವ, ಅಹಂಕಾರತತ್ತ್ವ ಮುಂತಾದುದಕ್ಕೆ ತ್ರಿಗುಣದ್ರವ್ಯವೇ ಉಪಾದಾನಕಾರಣವೆಂದು ಹೇಳಿದುದು ಹೇಗೆ ಸಂಗತವಾದೀತು” ಎಂದು ಸಂದೇಹಪಡಬಾರದು.

ಏತಕ್ಕೆಂದರೆ ಮಾಯಾಶಬ್ದವು ಆಶ್ಚರ್ಯಕರವಾದ ವಸ್ತುವನ್ನು ತೋರಿಸುವುದು. ತ್ರಿಗುಣದ್ರವ್ಯವು ಅತ್ಯಾಶ್ಚರ್ಯಕರವಾದ ವಿಚಿತ್ರಸೃಷ್ಟಿಗೆ ಉಪಕರಣವಾದುದರಿಂದ ಅಂಥ ತ್ರಿಗುಣದ್ರವ್ಯವನ್ನೇ ಮಾಯಾಶಬ್ದವು ಬೋಧಿಸುವುದಲ್ಲದೆ ಮಿಥ್ಯಾರೂಪವಾದ ಅರ್ಥವನ್ನಲ್ಲ.

ಇದೇ ಅಭಿಪ್ರಾಯವನ್ನು ಗೀತಾಚಾರ್ಯನು “ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ” ಎಂದು ಭಗವದ್ಗೀತೆಯ ಏಳನೆಯ ಅಧ್ಯಾಯದ ಹದಿನಾಲ್ಕನೆಯ ಶ್ಲೋಕದಲ್ಲಿ ಸ್ಪಷ್ಟವಾಗಿ ಉಪದೇಶಿಸಿರುವನು.

ಸತ್ತ್ವರಜಸ್ತಮೋಗುಣವಿಶಿಷ್ಟವಾದುದರಿಂದ ‘ಗುಣಮಯೀ’ ಎನಿಸಿಕೊಂಡೂ, ಆಶ್ಚರ್ಯಕರವಾದ ಸೃಷ್ಟಿಗೆ ಉಪಕರಣವಾದುದರಿಂದ ‘ಮಾಯಾ’ ಎನಿಸಿಕೊಂಡೂ ಇರುವ ಈ ಪ್ರಕೃತಿ—ಕ್ರೀಡೆಯಲ್ಲಿ ಪ್ರವರ್ತಿಸಿರುವ ದೇವಶಬ್ದವಾಚ್ಯನಾದ ನನಗೆ ಕ್ರೀಡಾಪರಿಕರವೆಂದು ಅನಾದಿಯಾಗಿ ನನ್ನಿಂದಲೇ ನಿರ್ಮಿಸಲ್ಪಟ್ಟು ‘ದೈವೀ’ ಎನಿಸಿಕೊಂಡಿರುವುದಾದಕಾರಣ ನನ್ನನ್ನು ಮರೆಹೊಕ್ಕವರೇ ಈ ಮಾಯೆಯಿಂದ ಬಿಡುಗಡೆಯನ್ನು ಹೊಂದಬಹುದಲ್ಲದೆ ಹಾಗೆ ಮರೆಹೊಗದವರು ಯಾರೂ ಇದನ್ನು ತಪ್ಪಿಸಿಕೊಳ್ಳಲಾರರೆಂಬುದೇ ಭಗವದ್ವಚನದ ಅಭಿಪ್ರಾಯವು.

ಅಸುರರ ಮತ್ತು ರಾಕ್ಷಸರ ಮಂತ್ರರೂಪವಾದ ಅಸ್ತ್ರಾದಿಗಳು ಆಶ್ಚರ್ಯಕರವಾದ ಕಾರ್ಯವಸ್ತುಸೃಷ್ಟಿಗೆ ಉಪಕರಣವಾದುದರಿಂದ ಹೇಗೆ ಮಾಯಾಶಬ್ದವಾಚ್ಯಗ

ಳಾಗಿರುವುವೋ ಹಾಗೆಯೇ ಈ ಪ್ರಕೃತಿಯೂ ಬ್ರಹ್ಮಾಂಡಮಂಡಲಕ್ಕೆ ಒಳಪಟ್ಟ ವಿಚಿತ್ರಪದಾರ್ಥಗಳ ಸೃಷ್ಟಿಗೆ ಉಪಕರಣವಾದುದರಿಂದ ಮಾಯಾಶಬ್ದವಾಚ್ಯೆಯಾಗಿರುವುದು.

ವಿಚಿತ್ರಪದಾರ್ಥಸೃಷ್ಟ್ಯುಪಕರಣತ್ವವೇ ಮಾಯಾಶಬ್ದದ ಪ್ರವೃತ್ತಿನಿಮಿತ್ತವಾಗಿರುವುದೆಂಬ ಅಂಶವು—

ತತೋ ಭಗವತಾ ತಸ್ಯ ರಕ್ಷಾರ್ಥಂ ಚಕ್ರಮುತ್ತಮಂ ।
ಆಜಗಾಮ ಸಮಾಜ್ಞಪ್ತಂ ಜ್ವಾಲಾಮಾಲಿ ಸುದರ್ಶನಂ ॥
ತೇನ ಮಾಯಾಸಹಸ್ರಂ ತಚ್ಛಂಬರಸ್ಯಾಶುಗಾಮಿನಾ ।
ಬಾಲಸ್ಯ ರಕ್ಷತಾ ದೇಹಮೇಕೈಕಶ್ಯೇನ ಸೂದಿತಂ ॥

ಎಂಬ ವಿಷ್ಣುಪುರಾಣವಚನದಲ್ಲಿ ಸ್ಪಷ್ಟವಾಗಿ ಕಾಣುವುದು. ಆದುದರಿಂದ ಮಾಯಾಶಬ್ದವು ಪ್ರಕೃತಿದ್ರವ್ಯವಾಚಿಯಲ್ಲದೆ ಮಿಥ್ಯಾರ್ಥವಾಚಿಯಲ್ಲ.

ಹಾವಾಡಿಗರೇ ಮೊದಲಾದ ಐಂದ್ರಜಾಲಿಕರಲ್ಲಿ 'ಮಾಯಾವೀ' ಎಂಬ ಶಬ್ದದ ಪ್ರಯೋಗಕ್ಕೂ ಇದೇ ಕಾರಣವಾಗಿರುವುದು. ಆಶ್ಚರ್ಯಕರವಾದ ಮಣಿ ಮಂತ್ರ ಔಷಧ ಮುಂತಾದ ಕೆಲವು ಮಾಯಾವಸ್ತುಗಳನ್ನು ಇಟ್ಟುಕೊಂಡು ಮಿಥ್ಯಾಪದಾರ್ಥವಿಷಯಕವಾದ ಸತ್ಯಬುದ್ಧಿಗಳನ್ನೇ ಜನಗಳಿಗೆ ಅವರು ಉಂಟುಮಾಡುವರಷ್ಟೆ.

ಆದಕಾರಣ ಎಲ್ಲಾ ಪ್ರಯೋಗಗಳಲ್ಲಿಯೂ ಯಾವ ಅರ್ಥವು ಅನುಗತವಾಗಿರುವುದೋ ಅದೇ ಅರ್ಥವು ಶಬ್ದಕ್ಕೆ ವಾಚ್ಯವಾಗಿಯೂ ಪ್ರವೃತ್ತಿನಿಮಿತ್ತವಾಗಿಯೂ ಇರಬೇಕು. ಮಾಯಾಶಬ್ದವನ್ನು ಪ್ರಯೋಗಿಸಿರುವ ಎಲ್ಲಾ ಸ್ಥಳಗಳಲ್ಲಿಯೂ ವಿಚಿತ್ರಪದಾರ್ಥಸೃಷ್ಟ್ಯುಪಕರಣತ್ವವೇ ಅನುಗತವಾಗಿರುವುದರಿಂದ ಮಾಯಾಶಬ್ದಕ್ಕೆ ಇದೇ ವಾಚ್ಯವಾಗಿಯೂ ಪ್ರವೃತ್ತಿನಿಮಿತ್ತವಾಗಿಯೂ ಇರುವುದಲ್ಲದೆ ಮಿಥ್ಯಾತ್ವವು ಪ್ರವೃತ್ತಿನಿಮಿತ್ತವೂ ವಾಚ್ಯವೂ ಆಗಲಾರದು. "ಆದರೆ ಲೋಕದಲ್ಲಿ ಮಿಥ್ಯಾಭೂತವಾದ ಪದಾರ್ಥದಲ್ಲಿಯೂ ಮಾಯಾಶಬ್ದದ ಪ್ರಯೋಗವು ಕೆಲವೆಡೆಗಳಲ್ಲಿ ಕಾಣುತ್ತಿರುವುದು ಹೇಗೆ ಸಂಗತವಾದೀತು" ಎಂದು ಆಶಂಕಿಸಬಾರದು. ಅಂಥ ಕಡೆಗಳಲ್ಲಿ ಮಾಯಾಶಬ್ದವು ಸತ್ಯಭೂತಮಾಯಾಜನ್ಯಸತ್ಯಜ್ಞಾನವಿಷಯತ್ವವೆಂಬ ಉಪಾಧಿಯನ್ನು ಅವಲಂಬಿಸಿ ಮಿಥ್ಯಾರ್ಥಗಳಲ್ಲಿ ಔಪಚಾರಿಕವಾಗಿ ಪ್ರವರ್ತಿಸಿರುವುದಲ್ಲದೆ ಮುಖ್ಯವಲ್ಲ.

ಗುಣತ್ರಯವಿಶಿಷ್ಟವಾಗಿಯೂ ಪಾರಮಾರ್ಥಿಕವಾಗಿಯೂ ಭಗವತ್ಸಂಬಂಧಿನಿಯಾಗಿಯೂ ಇರುವ ಈ ಪ್ರಕೃತಿಯೆಂಬ ಮಾಯೆಯೇ—"ಮಾಯಾಂ ತು ಪ್ರಕೃತಿಂ

ವಿದ್ಯಾನ್ಮಾಯಿನಂ ತು ಮಹೇಶ್ವರಂ'' ಎಂಬ ಶ್ವೇತಾಶ್ವತರಶ್ರುತಿಯಲ್ಲಿಯೂ ಮಾಯಾ ಶಬ್ದದಿಂದ ಬೋಧಿಸಲ್ಪಡುವುದು.

ವಿಚಿತ್ರವಾದ ಪದಾರ್ಥಗಳಾಗಿ ಪರಿಣಮಿಸಿ ಅವುಗಳಲ್ಲಿ ಜೀವನಿಗೆ ಭೋಗ್ಯತ್ವ ಬುದ್ಧಿಯನ್ನು ಹುಟ್ಟಿಸುವಿಕೆಯೂ, ಈಶ್ವರಸ್ವರೂಪವನ್ನು ಮರೆಸುವಿಕೆಯೂ ಈ ಮಾಯಾಶಬ್ದವಾಚ್ಯೆಯಾದ ಪ್ರಕೃತಿಯ ಕೆಲಸವಾಗಿರುವುವು. ಆದುದರಿಂದಲೇ ಭಗವನ್ಮಾಯೆಯಿಂದ ಮೋಹಗೊಳಿಸಲ್ಪಟ್ಟ ಸಮಸ್ತಜೀವರಾಶಿಯೂ ನಿರತಿಶಯಾ ನಂದಸ್ವರೂಪನಾದ ಭಗವಂತನನ್ನು ತಿಳಿದುಕೊಳ್ಳಲು ಅಸಮರ್ಥವಾಗಿರುವುದು. ಆದ ಕಾರಣ ಮಾಯಾಶಬ್ದವು ಪ್ರಕೃತಿದ್ರವ್ಯವನ್ನು ಬೋಧಿಸುವುದಲ್ಲದೆ ಮಿಥ್ಯಾರ್ಥವನ್ನು ಬೋಧಿಸುವುದಿಲ್ಲವೆಂಬ ಅಂಶವನ್ನು ಅಪಲಪಿಸಲು ಶಕ್ಯವಲ್ಲ.

ಮಾಙ್—ಮಾನೇ ಎಂಬ ಧಾತುವಿನಲ್ಲಿರುವ ಮಾ ಎಂಬ ಅಕ್ಷರವನ್ನೂ, ಯಾ—ಪ್ರಾಪಣೇ ಎಂಬ ಧಾತುವಿನಲ್ಲಿರುವ ಯಾ ಎಂಬ ಅಕ್ಷರವನ್ನೂ ಒಟ್ಟಿಗೆ ಸೇರಿಸಿ ಉಚ್ಚರಿಸಿದುದರಿಂದ ಮಾಯಾ ಎಂಬ ಶಬ್ದವುಂಟಾಗಿರುವುದು. ಮಾಂತಿ ಯಸ್ಯಾಂ ಯಾಂತಿ ಯಸ್ಯಾಃ ಸಾ ಮಾಯಾ ಎಂಬವ್ಯುತ್ಪತ್ತಿಯನ್ನು ಮಾಡಿ- ಸಮಸ್ತವಾದ ಕಾರ್ಯವರ್ಗಗಳೂ ಪ್ರಳಯಕಾಲದೊಳು ಯಾವುದರಲ್ಲಿ ಸೂಕ್ಷ್ಮರೂಪ ವಾಗಿ ಅಡಗಿರುವುವೋ, ಸೃಷ್ಟಿಕಾಲದೊಳು ಸ್ಥೂಲರೂಪವನ್ನು ತಾಳಿ ಯಾವುದರ ದೆಸೆಯಿಂದ ಹೊರಗೆ ಹೊರಡುವುವೋ, ಅಂಥ ತ್ರಿಗುಣದ್ರವ್ಯವೇ ಮಾಯಾಶಬ್ದ ದಿಂದಲೂ ಹೇಳಲ್ಪಡುವುದು.

ಈಶ್ವರನು ಪ್ರಕೃಷ್ಟವಾದ ಕೃತಿಗೆ ಎಂದರೆ ವ್ಯಾಪಾರಕ್ಕೆ ಗುರಿಮಾಡಿ ನಾನಾ ಬಗೆಯಾದ ಕಾರ್ಯವರ್ಗಗಳನ್ನು ಯಾವುದರ ದೆಸೆಯಿಂದ ಹೊರಪಡಿಸುವನೋ ಅಂಥ ತ್ರಿಗುಣದ್ರವ್ಯವೇ ಪ್ರಕೃತಿಶಬ್ದದಿಂದಲೂ ವ್ಯವಹರಿಸಲ್ಪಡುವುದು. 'ಅಸ್ಮಾನ್ಮಾ ಯೀ ಸೃಜತೇ ವಿಶ್ವಮೇತತ್' ಎಂಬ ಶ್ರುತಿಯೂ ಈ ಅರ್ಥವನ್ನು ಹೇಳುತ್ತದೆ.

ವಿದ್ಯಾಶಬ್ದದಿಂದ ಹೇಳಲ್ಪಡುವ ಜ್ಞಾನಕ್ಕೆ ವಿರೋಧಿಯಾದುದರಿಂದ ಈ ತ್ರಿಗು ಣದ್ರವ್ಯವೇ ಅವಿದ್ಯಾಶಬ್ದದಿಂದಲೂ ವ್ಯವಹರಿಸಲ್ಪಡುವುದು.

ಹಾಗೆಯೇ ಈ ತ್ರಿಗುಣದ್ರವ್ಯವೇ ಚೇತನಾಶೂನ್ಯವಾದುದರಿಂದ, ಎಂದರೆ ಜ್ಞಾನಶೂನ್ಯವಾದುದರಿಂದ ಅಚೇತನಶಬ್ದದಿಂದಲೂ, ಚಿತ್ತೆಂಬ ಜ್ಞಾನಸ್ವರೂಪ ನಾದ ಜೀವನಿಗಿಂತಲೂ ಬೇರೊಂದಾದುದರಿಂದ ಅಚಿತ್ ಎಂಬ ಶಬ್ದದಿಂದಲೂ ಅಲ್ಲಲ್ಲಿ ವ್ಯವಹರಿಸಲ್ಪಡುವುದರಿಂದ ತ್ರಿಗುಣದ್ರವ್ಯಕ್ಕೆ ಉಪಾದಾನಕಾರಣತ್ವವನ್ನು ಹೇಳಿ ದುದು ಸಂಗತವೇ ಹೊರತು ಅಸಂಗತವಲ್ಲ.

೫೯ ಪ್ರಕೃತೇಃ ಸಮವಿಷಮವಿಕಾರಜನಕತ್ವೈಕಸ್ವಭಾವತ್ವಂ.

ಈ ತ್ರಿಗುಣದ್ರವ್ಯವು ತನ್ನೊಳಗೆ ಯಾವ ಭಾಗದಲ್ಲಿ ಸತ್ತ್ವರಜಸ್ತಮೋಗುಣಗಳ ವೈಷಮ್ಯವನ್ನು ಎಂದರೆ ನ್ಯೂನಾತಿರೇಕವನ್ನು ಪಡೆದಿರುವುದೋ ಅಂಥ ಭಾಗದಲ್ಲಿ ವಿಷಮವಾದ ವಿಕಾರಗಳನ್ನೂ, ಯಾವ ಭಾಗದಲ್ಲಿ ಆ ಗುಣಗಳ ಸಾಮ್ಯವನ್ನು ಪಡೆದಿರುವುದೋ ಅಂಥ ಭಾಗದಲ್ಲಿ ಸಮಾನವಾದ ವಿಕಾರಗಳನ್ನೂ, ಉಂಟುಮಾಡುತ್ತಿರುವುದು. ವಿಷಮವಾದ ವಿಕಾರವೆಂದರೆ--ನಾಮರೂಪವಿಭಾಗನಿರ್ದೇಶಕ್ಕೆ ಯೋಗ್ಯವಾದ ವಿಕಾರವು ಸಮಾನವಾದ ವಿಕಾರವೆಂದರೆ ನಾಮರೂಪವಿಭಾಗನಿರ್ದೇಶಕ್ಕೆ ಅಯೋಗ್ಯವಾದ ವಿಕಾರವು. ಸೃಷ್ಟಿಕಾಲದಲ್ಲಿ ತನ್ನ ಕೆಲವು ಭಾಗದಿಂದ ವಿಷಮವಿಕಾರಗಳನ್ನೂ ಉಳಿದ ಭಾಗದಿಂದ ಸಮವಿಕಾರಗಳನ್ನೂ, ಪ್ರಳಯಕಾಲದಲ್ಲಿ ಎಲ್ಲಾ ಭಾಗದಿಂದಲೂ ಸಮವಿಕಾರಗಳನ್ನೂ ಉಂಟುಮಾಡುವುದು. ಪ್ರಕೃತಿದ್ರವ್ಯವು ನಿರಂತರಪರಿಣಾಮಿಯಾದುದರಿಂದ ಇದು ವಿಕಾರಗಳನ್ನು ಉಂಟುಮಾಡದಿರುವ ಕಾಲವೇ ಇಲ್ಲ.

"ಪ್ರಳಯಕಾಲದಲ್ಲಿಯೂ ಸಮಾನವಾದ ವಿಕಾರಗಳನ್ನು ಉಂಟುಮಾಡುವುದಾದರೆ ಪ್ರಳಯಪದಾರ್ಥದ ಸ್ವರೂಪವೇ ನಷ್ಟವಾಗುವುದು" ಎಂದು ಆಶಂಕಿಸಬಾರದು. ವಿಷಮವಿಕಾರಶೂನ್ಯವಾದ ಕಾಲವು ಪ್ರಳಯಕಾಲವೆನಿಸಿಕೊಳ್ಳುವುದಲ್ಲದೆ ಯಾವ ವಿಕಾರವೂ ಇಲ್ಲದ ಕಾಲವು ಪ್ರಳಯಕಾಲವಲ್ಲ. ಪ್ರಕೃತಿ ಸರ್ವದಾ ಪರಿಣಾಮಿನಿಯಾದುದರಿಂದ ಸರ್ವವಿಕಾರಶೂನ್ಯವಾದ ಕಾಲವೇ ಇಲ್ಲವೆಂದು ಈಗತಾನೆ ಹೇಳಿರುವೆವಷ್ಟೆ.

೬೦ ಪ್ರಕೃತೇಃ ನಿಶ್ಛಿದ್ರತ್ವಸಚ್ಛಿದ್ರತ್ವಸಂಶಯಃ.

ಪ್ರಕೃತಿದ್ರವ್ಯವು ತನ್ನೊಳಗೆ ಛಿದ್ರರಹಿತವಾಗಿರುವುದೋ ಅಥವಾ ಛಿದ್ರವುಳ್ಳುದಾಗಿರುವುದೋ? ಛಿದ್ರರಹಿತವಾಗಿರುವುದಾದರೆ ಇದರ ಪರಿಣಾಮವಿಶೇಷಗಳಾಗಿರುವ ಪೃಥಿವ್ಯಪ್ತೇಜೋವಾಯುಭೂತಗಳು, ಇಂದ್ರಿಯಗಳು, ಶರೀರಗಳು ಇವೇ ಮೊದಲಾದ ಪದಾರ್ಥಗಳು ಇದರಲ್ಲಿ ಸಂಚರಿಸುವ ಬಗೆ ಹೇಗೆ? ಈತೊಂದರೆಗಾಗಿ ಛಿದ್ರವುಳ್ಳುದೆಂದು ಒಪ್ಪಿಕೊಳ್ಳುವುದಾದರೆ ಪ್ರಕೃತಿ ಬಿಡಿಸಿದ ಹತ್ತಿಯಂತೆ ವಿರಳವಿರಳವಾಗಿ ಮಧ್ಯೇ ಮಧ್ಯೇ ಬಿಟ್ಟು ಬಿಟ್ಟು ಹೋಗಿರುವುದೆಂದು ಒಪ್ಪಿಕೊಂಡಂತೆ ಪರ್ಯವಸಾನವಾಗುವುದರಿಂದ 'ಕಾರ್ಯವರ್ಗದಲ್ಲೆಲ್ಲಾ ಕಾರಣವು ವ್ಯಾಪಿಸಿಯೇ ಇರುತ್ತದೆ' ಎಂಬ ಸಿದ್ಧಾಂತವು ಕೆಟ್ಟುಹೋಗುವುದು. ಈ ಉಭಯಸಂಕಟದಲ್ಲಿ ನಿರ್ವಾಹವು ಹೇಗೆ?

೬೧ ಪ್ರಕೃತೇಃ ನಿಶ್ಛಿದ್ರತ್ವಮೇವ.

ನಿರ್ವಾಹವನ್ನು ಹೇಳುವೆವು— ಭೂತ, ಇಂದ್ರಿಯ, ಶರೀರ ಮುಂತಾದ

ಆಕಾರದಿಂದ ಪರಿಣಾಮವನ್ನು ಹೊಂದಿರುವ ಕಾಲದಲ್ಲಿಯೂ ಪ್ರಕೃತಿ ಅಚ್ಛಿದ್ರವಾ ಗಿಯೇ ಇರುವುದರಿಂದ ' ಕಾರ್ಯವರ್ಗದಲ್ಲೆಲ್ಲಾ ಕಾರಣವು ವ್ಯಾಪಿಸಿಯೇ ಇರುತ್ತದೆ' ಎಂಬ ಸಿದ್ಧಾಂತಕ್ಕೆ ಯಾವುದೊಂದು ಹಾನಿಯೂ ಇಲ್ಲ. " ಹಾಗಾದರೆ ನಿಶ್ಛಿದ್ರ ವಾದ ಪ್ರಕೃತಿ ತನ್ನಲ್ಲಿ ಇತರಪದಾರ್ಥಗಳ ಸಂಚಾರಕ್ಕೆ ಅವಕಾಶವನ್ನು ಕೊಡಲಾ ಗುವುದಿಲ್ಲವಾದುದರಿಂದ ಭೂತೇಂದ್ರಿಯಶರೀರಾದಿಗಳು ಸಂಚರಿಸುವ ಬಗೆ ಹೇಗೆ " ಎಂದು ಆಸಂಕಿಸಬೇಡಿರಿ. ಏತಕ್ಕೆಂದರೆ—

ಯಾವ ಎರಡು ಪದಾರ್ಥಗಳಲ್ಲಿಯೂ ಸ್ಪರ್ಶಗುಣವಿರುವುದೋ ಆ ಎರಡು ಪದಾರ್ಥಗಳು ಮಾತ್ರವೇ ಪರಸ್ಪರವಾಗಿ ಒಂದು ಮತ್ತೊಂದಕ್ಕೆ ತನ್ನಲ್ಲಿ ಅವಕಾಶ ವನ್ನು ಕೊಡಲಾಗುವುದಿಲ್ಲವಾದುದರಿಂದ ಆ ಎರಡರೊಳಗೆ ಒಂದಕ್ಕೆ ಮತ್ತೊಂದರಲ್ಲಿ ಸಂಚಾರವು ಸಂಭವಿಸದಿದ್ದರೂ, ಯಾವ ಎರಡು ಪದಾರ್ಥಗಳಲ್ಲಿ ಅಥವಾ ಎರಡರ ಲ್ಲೊಂದರಲ್ಲಿ ಸ್ಪರ್ಶಗುಣವಿಲ್ಲವೋ ಆ ಎರಡು ಪದಾರ್ಥಗಳು ಪರಸ್ಪರವಾಗಿ ಒಂದು ಮತ್ತೊಂದಕ್ಕೆ ತನ್ನಲ್ಲಿ ಅವಕಾಶವನ್ನು ಕೊಡಬಲ್ಲುದಾದುದರಿಂದ ಆ ಎರಡರೊಳಗೆ ಒಂದಕ್ಕೆ ಮತ್ತೊಂದರಲ್ಲಿ ಸಂಚಾರವು ಸಂಭವಿಸಲು ಅಡ್ಡಿಯೇನೂ ಇರುವುದಿಲ್ಲ. ವಾಯು, ಅಗ್ನಿ, ಜಲ, ಪೃಥಿವಿ ಈ ನಾಲ್ಕು ಭೂತಗಳಲ್ಲಿಯೂ ಸ್ಪರ್ಶಗುಣವಿದ್ದರೂ ಸ್ಪರ್ಶಶೂನ್ಯವಾದ ಆಕಾಶದಿಂದ ಇವು ಒಳಗೂ ಹೊರಗೂ ವ್ಯಾಪಿಸಲ್ಪಟ್ಟೇ ಇರು ವುವು. ಆದರೂ ಆಕಾಶದಲ್ಲಿ ಈನಾಲ್ಕು ಭೂತಗಳೂ ಸಂಚರಿಸುತ್ತಲೇ ಇರುವುವು.

ಅದರಂತೆ ಪ್ರಕೃತದಲ್ಲಿಯೂ ಭೂತೇಂದ್ರಿಯಶರೀರಗಳಲ್ಲಿ ಸ್ಪರ್ಶವಿದ್ದರೂ ಪ್ರಕೃತಿಯಲ್ಲಿ ಸ್ಪರ್ಶಗುಣವಿಲ್ಲವಾದುದರಿಂದ ಅಂಥ ಪ್ರಕೃತಿಗೆ ತನ್ನ ಕಾರ್ಯವರ್ಗದ ಲ್ಲೆಲ್ಲಾ ವ್ಯಾಪ್ತಿಯುಂಟಾಗುವುದಕ್ಕಾಗಲಿ ಆಕಾರ್ಯವರ್ಗಗಳು ಪ್ರಕೃತಿಯಲ್ಲಿ ಸಂಚರಿ ಸುವುದಕ್ಕಾಗಲಿ ಯಾವ ಅಡ್ಡಿಯೂ ಇಲ್ಲ.

ಮುಂದೆ ಹೇಳುವ ಇಪ್ಪತ್ತುನಾಲ್ಕು ತತ್ತ್ವಗಳೊಳಗೆ ಮೂಲಪ್ರಕೃತಿಮೊದಲು ಗೊಂಡು ಆಕಾಶದವರೆಗೂ ಇರುವ ತತ್ತ್ವಗಳೊಳಗೆ ಪ್ರಕೃತಿವಿಕೃತಿಗಳೆರಡರಲ್ಲಿಯೂ ಸ್ಪರ್ಶಗುಣವಿಲ್ಲವೆಂದೂ, ವಾಯ್ವಾದಿಪರಿಣಾಮಗಳಲ್ಲಿ ವಿಕೃತಿಯಲ್ಲಿ ಸ್ಪರ್ಶವಿದ್ದರೂ ಪ್ರಕೃತಿಯಾದ ಆಕಾಶದಲ್ಲಿ ಸ್ಪರ್ಶವಿಲ್ಲವೆಂದೂ, ತಿಳಿಯಬಹುದು.

ಇಂತು ತತ್ತ್ವಶುದ್ಧಿಯೆಂಬ ವಿಶಿಷ್ಟಾದ್ವೈತಪ್ರಕರಣಗ್ರಂಥದೊಳ್
ಅಚಿತ್ತತ್ತ್ವಪರಿಚ್ಛೇದದಲ್ಲಿ ಸಾಮಾನ್ಯರೂಪವಾಗಿ
ತ್ರಿಗುಣದ್ರವ್ಯನಿರೂಪಣ ಪ್ರಕರಣಂ ಪಂಚಮಂ.

---

# ಷ ಷ್ಠ ಪ್ರ ಕ ರ ಣಂ.

---

೬೨ ತ್ರಿಗುಣದ್ರವ್ಯಸ್ಯ ಚತುರ್ವಿಂಶತಿತತ್ತ್ವಾತ್ಮನಾ ಪರಿಣಾಮಃ.

ಇಂಥ ತ್ರಿಗುಣದ್ರವ್ಯವು ಪೂರ್ವಪೂರ್ವಾವಸ್ಥಾವಿನಾಶರೂಪವಾದ ಉತ್ತರೋತ್ತರಾವಸ್ಥಾಭೇದಗಳಿಂದ ಇಪ್ಪತ್ತುನಾಲ್ಕು ತತ್ತ್ವಗಳಾಗಿ ಪರಿಣಮಿಸುವುದು. ಮೂಲಪ್ರಕೃತಿ, ಮಹತ್, ಅಹಂಕಾರ, ಮನಸ್ಸೂ ಸೇರಿ ಆರು ಜ್ಞಾನೇಂದ್ರಿಯಗಳು, ಐದು ಕರ್ಮೇಂದ್ರಿಯಗಳು, ಐದು ತನ್ಮಾತ್ರೆಗಳು, ಐದು ಭೂತಗಳು ಇವೇ ಇಪ್ಪತ್ತುನಾಲ್ಕು ತತ್ತ್ವಗಳು.

೬೩ ಮೂಲಪ್ರಕೃತಿಲಕ್ಷಣಂ.

ಇವುಗಳಲ್ಲಿ ಒಂದಕ್ಕೊಂದು ಹೆಚ್ಚುಕಡಮೆಯಾಗದಂತೆ ಸಮಾನವಾದ ಸತ್ತ್ವರಜಸ್ತಮಸ್ಸೆಂಬ ಮೂರುಗುಣಗಳುಳ್ಳ ದ್ರವ್ಯವು ಮೂಲಪ್ರಕೃತಿಯೆನಿಸಿಕೊಳ್ಳುವುದು.

೬೪ ಮೂಲಪ್ರಕೃತೇರವಾಂತರಾವಸ್ಥಾಭೇದಾಶ್ಚತ್ವಾರಃ.

ಇಂಥ ಮೂಲಪ್ರಕೃತಿಯಲ್ಲಿ ಸರ್ವಭಾಗದಲ್ಲಿಯೂ ಗುಣತ್ರಯಸಾಮ್ಯವಿದ್ದರೂ ಅತ್ಯಲ್ಪವಾದ ಅವಸ್ಥಾಭೇದವನ್ನು ಲಕ್ಷಿಸಿ ಮೂಲಪ್ರಕೃತಿ ಅವಿಭಕ್ತತಮಸ್ಸೆಂದೂ, ವಿಭಕ್ತತಮಸ್ಸೆಂದೂ, ಅಕ್ಷರವೆಂದೂ, ಅವ್ಯಕ್ತವೆಂದೂ ನಾಲ್ಕುವಿಧವಾಗಿ ವಿಭಾಗಿಸಲ್ಪಡುವುದು.

ಈಮೂಲಪ್ರಕೃತಿಯನ್ನು--ಮುಂದಣವರ್ಷದಲ್ಲಿ ಬಿತ್ತುವುದಕ್ಕಾಗಿ ಮೂಟೆಯಲ್ಲಿ ಕಟ್ಟಿ ಗುಪ್ತವಾಗಿ ಇಟ್ಟಿರುವ ಬೀಜದಂತೆಯೂ, ಮುಂದೆ ಹೇಳುವ ಮಹತ್ತತ್ತ್ವವನ್ನು ಅಂಕುರದಂತೆಯೂ ಭಾವಿಸಿ; ಈ ಎರಡರ ಮಧ್ಯದಲ್ಲಿ ಅವಿಭಕ್ತತಮಸ್ಸನ್ನು-ಕ್ಷೇತ್ರದಲ್ಲಿ ಬಿತ್ತಿದ ಬೀಜದಂತೆಯೂ, ವಿಭಕ್ತತಮಸ್ಸನ್ನು-ಕ್ಷೇತ್ರದ ಮಣ್ಣಿನಿಂದ ಮೇಲೆ ಹೊರಡುವುದಕ್ಕೆ ಆರಂಭಿಸಿರುವ ಬೀಜದಂತೆಯೂ, ಅಕ್ಷರವನ್ನು-ನೀರಿನಲ್ಲಿ ನೆನೆದು ಅವಯವಶೈಥಿಲ್ಯವನ್ನು ಹೊಂದಿರುವ ಬೀಜದಂತೆಯೂ, ಅವ್ಯಕ್ತವನ್ನು-ಉಬ್ಬಿರುವ ಬೀಜದಂತೆಯೂ, ತಿಳಿಯಬೇಕು.

ಬೀಜದಲ್ಲಿ ಈಗ ಹೇಳಿದ ನಾಲ್ಕು ಅವಸ್ಥೆಗಳೂ ಕ್ರಮವಾಗಿ ಉಂಟಾಗುವಂತೆ ಮೂಲಪ್ರಕೃತಿಯಲ್ಲಿಯೂ ನಾಲ್ಕು ಅವಸ್ಥೆಗಳೂ ಕ್ರಮವಾಗಿ ಉಂಟಾಗುವುದರಿಂದ ಉತ್ತರೋತ್ತರಾವಸ್ಥೆಗೆ ಕಾರಣವಾದುದನ್ನೇ ಪೂರ್ವಪೂರ್ವಾವಸ್ಥೆಯಾಗಿ ತಿಳಿಯಬೇಕು.

## ೬೫ ಮಹತ್ತತ್ತ್ವಲಕ್ಷಣಂ.

ಅವ್ಯಕ್ತತತ್ತ್ವಾವಸ್ಥೆಗೆ ಅವ್ಯವಹಿತವಾದ ಉತ್ತರಾವಸ್ಥೆಯೊಡನೆ ಕೂಡಿರುವ ದ್ರವ್ಯವು ಮಹತ್ತತ್ತ್ವವೆನಿಸಿಕೊಳ್ಳುವುದು. ಅಥವಾ— ಅಹಂಕಾರತತ್ತ್ವಾವಸ್ಥೆಗೆ ಅವ್ಯವಹಿತವಾದ ಪೂರ್ವಾವಸ್ಥೆಯೊಡನೆ ಕೂಡಿರುವ ದ್ರವ್ಯವು ಮಹತ್ತತ್ತ್ವವೆನಿಸಿಕೊಳ್ಳುವುದು. ಅಥವಾ ಮಹಚ್ಛಬ್ದಕ್ಕೆ ವಾಚ್ಯವಾದ ತತ್ತ್ವವು ಮಹತ್ತತ್ತ್ವವೆನಿಸಿಕೊಳ್ಳುವುದು. ಇದರಂತೆಯೇ ಮುಂದೆ ಹೇಳುವ ಅಹಂಕಾರವೇ ಮೊದಲಾದ ತತ್ತ್ವಗಳಲ್ಲಿಯೂ ತತ್ತಚ್ಛಬ್ದವಾಚ್ಯತ್ವವನ್ನೂ ಲಕ್ಷಣವಾಗಿ ತಿಳಿಯಬಹುದು. ಅಹಂಕಾರ ಮೊದಲಾಗಿ ಈಚೆಗಿರುವ ಎಲ್ಲಾ ಕಾರ್ಯವರ್ಗಕ್ಕಿಂತಲೂ ಎಂದರೆ ಇಪ್ಪತ್ತೆರಡು ತತ್ತ್ವಗಳಿಗಿಂತಲೂ ಇದು ಬಲು ದೊಡ್ಡದಾದುದರಿಂದ ಮಹತ್ ಎಂಬ ಹೆಸರನ್ನು ಇದು ಪಡೆದಿರುವುದು.

## ೬೬ ಸಾಂಖ್ಯೋಕ್ತಮಹತ್ತತ್ತ್ವಲಕ್ಷಣಖಂಡನಂ.

'ಅಧ್ಯವಸಾಯವೆಂಬ ಮನೋವೃತ್ತಿವಿಶೇಷವು ಮಹತ್ತತ್ತ್ವವೆನಿಸಿಕೊಳ್ಳುವುದು' ಎಂದು ಸಾಂಖ್ಯರು ಇದಕ್ಕೆ ಲಕ್ಷಣಾಂತರವನ್ನು ಹೇಳುವರು. ಇದು ಸಂಗತವಲ್ಲ. ಏತಕ್ಕೆಂದರೆ— ಅಧ್ಯವಸಾಯವೆಂಬುದು ಜ್ಞಾನದ ಅವಸ್ಥಾವಿಶೇಷವಾದುದರಿಂದಲೂ, ಮಹತ್ತತ್ತ್ವವೆಂಬುದು ಅಚೇತನವಾದುದರಿಂದಲೂ, ಚೇತನಧರ್ಮವು ಅಚೇತನಕ್ಕೆ ಎಂದಿಗೂ ಲಕ್ಷಣವಾಗಲಾರದಾದಕಾರಣ ಆ ಲಕ್ಷಣಕ್ಕೆ ಅಸಂಭವದೋಷವುಂಟಾಗುವುದು. ಮಹತ್ತತ್ತ್ವಕ್ಕೆ ಇದೇರೀತಿಯಾಗಿ ಸಾಂಖ್ಯರು ಹೇಳುವ ಇನ್ನೂ ಬೇರೆ ಬೇರೆಯಾದ ಲಕ್ಷಣಗಳನ್ನೂ ವಿವೇಕಿಗಳು ಅದೇರೀತಿಯಾಗಿ ನಿರಾಕರಿಸಬಹುದು.

## ೬೭ ಮಹತ್ತತ್ತ್ವಸ್ಯ ಅವಾಂತರಾವಸ್ಥಾಭೇದಾಸ್ತ್ರಯಃ.

ಇಂಥ ಮಹತ್ತತ್ತ್ವವು—ಸಾತ್ತ್ವಿಕ, ರಾಜಸ, ತಾಮಸ ಎಂದು ಮೂರು ವಿಧವಾಗಿರುವುದು. ಇದರ ಯಾವ ಭಾಗದಲ್ಲಿ ಸತ್ತ್ವಗುಣವು ತಲೆಯೆತ್ತಿರುವುದೋ ಆ ಭಾಗವು ಸಾತ್ತ್ವಿಕವೆಂದೂ, ರಜೋಗುಣವು ತಲೆಯೆತ್ತಿರುವ ಭಾಗವು ರಾಜಸವೆಂದೂ, ತಮೋಗುಣವು ತಲೆಯೆತ್ತಿರುವ ಭಾಗವು ತಾಮಸವೆಂದೂ ವ್ಯವಹರಿಸಲ್ಪಡುವುದು.

## ೬೮ ಅಹಂಕಾರತತ್ತ್ವಲಕ್ಷಣಂ.

ಇಂದ್ರಿಯತತ್ತ್ವಾವಸ್ಥೆಗೆ ಅವ್ಯವಹಿತವಾದ ಪೂರ್ವಾವಸ್ಥೆಯೊಡನೆ ಕೂಡಿದ ತ್ರಿಗುಣದ್ರವ್ಯವು ಅಹಂಕಾರತತ್ತ್ವವೆನಿಸಿಕೊಳ್ಳುವುದು.

## ೭೯ ಸಾಂಖ್ಯೋಕ್ತಾಹಂಕಾರತತ್ತ್ವಲಕ್ಷಣಖಂಡನಂ.

ಇಲ್ಲಿಯೂ— 'ಅಭಿಮಾನವು ಅಹಂಕಾರತತ್ತ್ವವೆನಿಸಿಕೊಳ್ಳುವುದು' ಎಂದು ಸಾಂಖ್ಯರು ಹೇಳುವ ಲಕ್ಷಣವನ್ನು ಹಿಂದಿನಂತೆಯೇ ನಿರಾಕರಿಸಬಹುದು.

## ೭೦ ಅಹಂಕಾರಶಬ್ದಸ್ಯ ತ್ರಿವಿಧವ್ಯುತ್ಪತ್ತ್ಯಾ ಅರ್ಥತ್ರಯಬೋಧಕತ್ವಂ.

ವೇದಾಂತಶಾಸ್ತ್ರದಲ್ಲಿ ಅಹಂಕಾರಶಬ್ದಕ್ಕೆ ಮೂರುವಿಧವಾದ ವ್ಯುತ್ಪತ್ತಿಯನ್ನು ತೋರಿಸಿ ಮೂರು ಅರ್ಥಗಳನ್ನು ಹೇಳಿರುವರು.

ಇವುಗಳಲ್ಲಿ ಮೊದಲನೆಯದು— ಆತ್ಮವಾಚಕವಾದ ಅಹಂಶಬ್ದದ ಮೇಲೆ ಭಾವಾರ್ಥಕಘಞ್‌ಪ್ರತ್ಯಯಾಂತವಾದ ಕೃಞ್‌ಧಾತುವಿನ ಕಾರ ಎಂಬ ರೂಪವನ್ನು ಸೇರಿಸಿದರೆ ಅಹಂಕಾರ ಎಂದಾಗುವುದು. ಕಾರಶಬ್ದಕ್ಕೆ ಮಾಡುವಿಕೆಯೆಂದರ್ಥವು. ಏನನ್ನು ಮಾಡುವಿಕೆಯೆಂದರೆ ಸಂದರ್ಭವಶದಿಂದ ಬುದ್ಧಿಯನ್ನು ಮಾಡುವಿಕೆ (ತಿಳಿವಿಕೆ) ಯೆಂದು ಪರ್ಯವಸಾನವಾಗುವುದು. ಯಾವುದರಲ್ಲಿ ಯಾವ ಬುದ್ಧಿಯನ್ನು ಮಾಡುವಿಕೆಯೆಂದರೆ ಅಹಂಶಬ್ದಕ್ಕೆ ವಾಚ್ಯನಾದ ಆತ್ಮನಲ್ಲಿ ಅಹಂಬುದ್ಧಿಯನ್ನು ಮಾಡುವಿಕೆಯೆಂದಾಗಿ ಶುಕ್ತಿಕೆಯನ್ನು ಶುಕ್ತಿಕೆಯಾಗಿಯೇ ತಿಳಿದುಕೊಳ್ಳುವಂತೆ ಆತ್ಮನನ್ನು ಆತ್ಮನಾಗಿಯೇ ತಿಳಿದುಕೊಳ್ಳುವಿಕೆಯೆಂಬ ಯಥಾರ್ಥಜ್ಞಾನವು ಅಹಂಕಾರಶಬ್ದಕ್ಕೆ ವಾಚ್ಯವಾಗಿರುವುದೆಂದು ಅರ್ಥವಾಗುವುದು.

ಎರಡನೆಯದು— ಅಹಂಶಬ್ದವನ್ನು ಅಭೂತತದ್ಭಾವೇ ಚ್ವಿಪ್ರತ್ಯಯಾಂತವಾಗಿ ಮಾಡಿ ಅದರಮೇಲೆ ಭಾವಾರ್ಥಕಘಞ್‌ಪ್ರತ್ಯಯಾಂತವಾದ ಕೃಞ್‌ ಧಾತುವಿನ ಕಾರ ಎಂಬ ರೂಪವನ್ನು ಸೇರಿಸಿದರೆ ಅಹಂಕಾರ ಎಂದಾಗುವುದು. ಕಾರ ಎಂಬುದಕ್ಕೆ ಹಿಂದಿನಂತೆಯೇ ಅರ್ಥವು. ಅಹಂಶಬ್ದವನ್ನು ಚ್ವಿಪ್ರತ್ಯಯಾಂತಮಾಡಿದುದರಿಂದ ದೊರೆತ ಅರ್ಥವೇನೆಂದರೆ— ಅಹಮರ್ಥವಲ್ಲದ ಎಂದರೆ ಆತ್ಮವಸ್ತುವಲ್ಲದ ದೇಹದಲ್ಲಿ ಅಹಂಬುದ್ಧಿಯನ್ನು ಎಂದರೆ ಆತ್ಮಬುದ್ಧಿಯನ್ನು ಮಾಡುವಿಕೆಯೆಂದಾಗಿ, ರಜತವಲ್ಲದ ಶುಕ್ತಿಕೆಯನ್ನು ರಜತವಾಗಿ ತಿಳಿದುಕೊಳ್ಳುವಂತೆ ಆತ್ಮನಲ್ಲದ ದೇಹವನ್ನು ಆತ್ಮನಾಗಿ ತಿಳಿದುಕೊಳ್ಳುವಿಕೆಯೆಂಬ ಅಯಥಾರ್ಥಜ್ಞಾನವು ಅಹಂಕಾರಶಬ್ದಕ್ಕೆ ವಾಚ್ಯವಾಗಿರುವುದೆಂದು ಅರ್ಥವಾಗುವುದು.

ಮೂರನೆಯದು— ಅಹಂಶಬ್ದವನ್ನು ಅಭೂತತದ್ಭಾವೇ ಚ್ವಿಪ್ರತ್ಯಯಾಂತವಾಗಿ ಸಿದ್ಧಪಡಿಸಿ ಅದರಮೇಲೆ ಕರಣಾರ್ಥಕಘಞ್‌ಪ್ರತ್ಯಯಾಂತವಾದ ಕೃಞ್‌ ಧಾತುವಿನ ಕಾರ ಎಂಬ ರೂಪವನ್ನು ಸೇರಿಸಿದರೆ ಅಹಂಕಾರ ಎಂದಾಗುವುದು.

ಇದರಿಂದ ಲಭಿಸುವ ಅರ್ಥವೇನೆಂದರೆ—ಅಹಮರ್ಥವಲ್ಲದ ಎಂದರೆ ಆತ್ಮವಸ್ತುವಲ್ಲದ ದೇಹದಲ್ಲಿ ಅಹಂಬುದ್ಧಿಯನ್ನು ಎಂದರೆ ಆತ್ಮಬುದ್ಧಿಯನ್ನು ಮಾಡುವುದಕ್ಕೆ ಯಾವುದು ಕಾರಣವಾಗಿರುವುದೋ ಅದು ಅಹಂಕಾರಶಬ್ದಕ್ಕೆ ವಾಚ್ಯವಾಗಿರುವುದೆಂದು ಅರ್ಥವಾಗುವುದು.

ಈಮೂರು ಅರ್ಥಗಳಲ್ಲಿಯೂ—ಮೊದಲನೆಯ ವ್ಯುತ್ಪತ್ತಿಯಿಂದ ಲಭಿಸುವ ಯಥಾರ್ಥಜ್ಞಾನವು ಮುಮುಕ್ಷುವಾದವನಿಗೆ ಯಾವಾಗಲೂ ಉಪಾದೇಯವಾಗಿರುವುದು. ಎರಡನೆಯ ವ್ಯುತ್ಪತ್ತಿಯಿಂದ ಲಭಿಸುವ ಅಯಥಾರ್ಥಜ್ಞಾನವು ಉತ್ಕೃಷ್ಟರಾದವರನ್ನು ತಿರಸ್ಕರಿಸುವುದಕ್ಕೆ ಕಾರಣವಾದ ಗರ್ವವೆಂದು ಪ್ರಸಿದ್ಧವಾದ ದುರಭಿಮಾನಸ್ವರೂಪವಾದುದರಿಂದ—

ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಪರಿಗ್ರಹಂ ।
ವಿಮುಚ್ಯ ನಿರ್ಮಮಶ್ಶಾಂತೋ ಬ್ರಹ್ಮಭೂಯಾಯ ಕಲ್ಪತೇ ॥

ಎಂಬುವೇ ಮೊದಲಾದ ಅಧ್ಯಾತ್ಮಶಾಸ್ತ್ರದಲ್ಲಿ ಮುಮುಕ್ಷುವಾದವನಿಗೆ ಸರ್ವಕಾಲದಲ್ಲಿಯೂ ತ್ಯಾಜ್ಯವಾಗಿರುವುದೆಂದು ಉಪದೇಶಿಸಲ್ಪಟ್ಟಿರುವುದು. ಮೂರನೆಯ ವ್ಯುತ್ಪತ್ತಿಯಿಂದ ಲಭಿಸುವ ಅರ್ಥವೇ ತ್ರಿಗುಣದ್ರವ್ಯದ ಪರಿಣಾಮವಿಶೇಷವಾದ ಅಹಂಕಾರತತ್ತ್ವವೆನಿಸಿಕೊಳ್ಳುವುದು. ಅನಾತ್ಮವಾದ ದೇಹದಲ್ಲಿ ಆತ್ಮಭ್ರಾಂತಿಯುಂಟಾಗುವುದಕ್ಕೂ, ಅದರಮೂಲಕ ಉತ್ಕೃಷ್ಟಜನರನ್ನು ಅಪಮಾನಪಡಿಸುವುದಕ್ಕೂ, ಆತ್ಮನಿಗೆ ಈ ಅಹಂಕಾರತತ್ತ್ವದ ಸಂಬಂಧವೇ ಕಾರಣವಾಗಿರುವುದರಿಂದ ಇದೂ ಅಹಂಕಾರವೆನಿಸಿಕೊಳ್ಳುವುದರಲ್ಲಿ ಅಡ್ಡಿಯಿಲ್ಲ.

೭೧ ತ್ಯಾಜ್ಯತಯಾ ಉಪದಿಷ್ಟಾದಹಂಕಾರಾದಿದಮಹಂಕಾರತತ್ತ್ವಂ ಭಿನ್ನಂ.

ಶಾಸ್ತ್ರದಲ್ಲಿ ತ್ಯಾಜ್ಯವೆಂಬುದಾಗಿ ಉಪದೇಶಿಸಲ್ಪಟ್ಟಿರುವ ಅಹಂಕಾರವು ಇದೇ ಎಂದು ಭ್ರಾಂತಿಪಡಕೂಡದು. ಏತಕ್ಕೆಂದರೆ—

ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ ।
ಮಾಮೇವ ಯೇ ಪ್ರಪದ್ಯಂತೇ ಮಾಯಾಮೇತಾಂ ತರಂತಿ ತೇ ॥

ಎಂದು ಭಗವದ್ವಚನವಿರುವುದರಿಂದ ಭಗವದನುಗ್ರಹವಿಲ್ಲದೆ ತನ್ನ ಇಚ್ಛಾಮಾತ್ರದಿಂದ ಅಹಂಕಾರತತ್ತ್ವದ ಸಂಬಂಧವನ್ನು ತಪ್ಪಿಸಿಕೊಳ್ಳಲು ಇವನಿಗೆ ಸಾಮರ್ಥ್ಯವಿಲ್ಲವಾದುದರಿಂದ ತ್ಯಾಜ್ಯತ್ವಶಾಸ್ತ್ರವು ಇವನ ಭಾಗಕ್ಕೆ ಅಶಕ್ಯಾರ್ಥವಾಗಿ ವ್ಯರ್ಥವಾಗುವುದು. ಉತ್ಕೃಷ್ಟಜನಾಪಮಾನಹೇತುವಾದ ಗರ್ವವೆಂಬ ಅಹಂಕಾರವನ್ನಾದರೋ

ತನ್ನ ವಿವೇಕರೂಪವಾದ ಬುದ್ಧಿಯಿಂದ ಪರಿತ್ಯಜಿಸಲು ಇವನಿಗೆ ಸಾಮರ್ಥ್ಯವಿರುವುದಾದುದರಿಂದ ತ್ಯಾಜ್ಯತ್ವಶಾಸ್ತ್ರವು ಇವನ ಭಾಗಕ್ಕೆ ಸಫಲವಾಗಬಹುದು.

**೭೨ ಅಹಂಕಾರತತ್ತ್ವಸ್ಯಾಪಿ ಅವಾಂತರಾವಸ್ಥಾಭೇದಾಸ್ತ್ರಯಃ.**

ಇಂಥ ಅಹಂಕಾರತತ್ತ್ವವೂ ಹಿಂದಿನಂತೆಯೇ ಸಾತ್ತ್ವಿಕ, ರಾಜಸ, ತಾಮಸ ಎಂದು ಮೂರುವಿಧವಾಗುವುದು. ಆಮೂರಕ್ಕೂ ಹಿಂದಿನಂತೆಯೇ ಲಕ್ಷಣಗಳನ್ನು ತಿಳಿಯಬೇಕು.

**೭೩ ಸಾತ್ತ್ವಿಕತಾಮಸಯೋಃ ಕ್ರಮೇಣ ಇಂದ್ರಿಯಶಬ್ದತನ್ಮಾತ್ರೋಪಾದಾನತ್ವಂ ರಾಜಸಸ್ಯ ಉಭಯಾನುಗ್ರಾಹಕತ್ವಂ ಚ.**

ಇವುಗಳಲ್ಲಿ ಸಾತ್ತ್ವಿಕಾಹಂಕಾರದಿಂದ ಹನ್ನೊಂದು ಇಂದ್ರಿಯಗಳೂ, ತಾಮಸಾಹಂಕಾರದಿಂದ ಶಬ್ದತನ್ಮಾತ್ರೆಯೂ ಉಂಟಾಗುವುವು ; ರಾಜಸಾಹಂಕಾರವು ಈ ಎರಡಕ್ಕೂ ಸಹಕಾರಿಯಾಗಿರುವುದು. ರಾಜಸತಾಮಸಾಹಂಕಾರಗಳು ಇಂದ್ರಿಯಗಳಿಗೆ ಉಪಾದಾನವಾಗದಿದ್ದರೂ ಇಂದ್ರಿಯತ್ವಾವಸ್ಥೆಗೆ ಅವ್ಯವಹಿತವಾದ ಪೂರ್ವಾವಸ್ಥೆಯುಳ್ಳ ದ್ರವ್ಯವಲ್ಲದೆಹೋಗಲಿಲ್ಲವಾದುದರಿಂದ ಅಹಂಕಾರಲಕ್ಷಣಕ್ಕೆ ಇವುಗಳಲ್ಲಿ ಅವ್ಯಾಪ್ತಿದೋಷವಿಲ್ಲ.

**೭೪ ತ್ರಿವಿಧಸ್ಯಾಪಿ ಅಹಂಕಾರಸ್ಯ ಪ್ರಕಾರಾಂತರೇಣ ಲಕ್ಷಣಕಥನಂ.**

ಈ ಮೂರುವಿಧವಾದ ಅಹಂಕಾರಗಳಿಗೂ ಮತ್ತೊಂದು ರೀತಿಯಲ್ಲಿಯೂ ಲಕ್ಷಣಗಳನ್ನು ಹೇಳಬಹುದು. ಹೇಗೆಂದರೆ—ಇಂದ್ರಿಯಗಳಿಗೆ ಯಾವುದು ಉಪಾದಾನಕಾರಣವೋ ಅದು ಸಾತ್ತ್ವಿಕಾಹಂಕಾರವೆಂದೂ, ಶಬ್ದತನ್ಮಾತ್ರಕ್ಕೆ ಯಾವುದು ಉಪಾದಾನಕಾರಣವೋ ಅದು ತಾಮಸಾಹಂಕಾರವೆಂದೂ, ಈ ಎರಡಕ್ಕೂ ಯಾವುದು ಅನುಗ್ರಾಹಕವೋ (ಸಹಕಾರಿಯೋ) ಅದು ರಾಜಸಾಹಂಕಾರವೆಂದೂ, ತಿಳಿಯಬಹುದು.

**೭೫ ತ್ರಿವಿಧಸ್ಯಾಪಿ ಅಹಂಕಾರಸ್ಯ ಸಂಜ್ಞಾಂತರಾಣಿ.**

ಸಾತ್ತ್ವಿಕಾಹಂಕಾರಕ್ಕೆ ವೈಕಾರಿಕವೆಂದೂ, ರಾಜಸಾಹಂಕಾರಕ್ಕೆ ತೈಜಸವೆಂದೂ, ತಾಮಸಾಹಂಕಾರಕ್ಕೆ ಭೂತಾದಿಯೆಂದೂ ನಾಮಾಂತರಗಳು ಶಾಸ್ತ್ರದಲ್ಲಿ ಹೇಳಿವೆ.

**೭೬ ಅಹಂಕಾರತತ್ತ್ವವಿಷಯೇ ಭೋಜರಾಜಮತಂ ತತ್ಖಂಡನಂ ಚ.**

ಭೋಜರಾಜನು ಈ ಅಹಂಕಾರತತ್ತ್ವವನ್ನು—ಜೀವನವೆಂದೂ, ಸಂರಂಭವೆಂದೂ, ಗರ್ವವೆಂದೂ ವಿಭಾಗಮಾಡಿ ಹನ್ನೊಂದು ಇಂದ್ರಿಯಗಳೊಳಗೆ ಮನ

ಇಂದ್ರಿಯವುಮಾತ್ರ ರಾಜಸಾಹಂಕಾರದಿಂದ ಹುಟ್ಟುವುದೆಂದೂ, ತಾಮಸಾಹಂಕಾರ ದಿಂದ ಪಂಚತನ್ಮಾತ್ರೆಗಳು ಹುಟ್ಟುವುವೆಂದೂ ಹೇಳಿರುವನು. ಇದು ವೇದವಿರುದ್ಧ ವಾದ ಶೈವಾಗಮ ಮುಂತಾದುದನ್ನು ಆಧಾರವಾಗಿಟ್ಟುಕೊಂಡು ಹೇಳಿದ ಮಾತಾಗಿದೆ; ಆದರೆ ಆಪ್ತತಮರಾದ ಪರಾಶರಾದಿಮಹರ್ಷಿಗಳ ವಚನಕ್ಕೂ ಅಹಿರ್ಬುಧ್ನ್ಯಸಂಹಿತೆ ಮೊದಲಾದ ಪಾಂಚರಾತ್ರಗ್ರಂಥಗಳ ವಚನಕ್ಕೂ ವಿರುದ್ಧವಾಗಿರುವುದು.

ಇಂತು ತತ್ತ್ವಶುದ್ಧಿಯೆಂಬ ವಿಶಿಷ್ಟಾದ್ವೈತಪ್ರಕರಣಗ್ರಂಥದೊಳ್
ಅಚಿತ್ತತ್ತ್ವಪರಿಚ್ಛೇದದಲ್ಲಿ ಮೂಲಪ್ರಕೃತಿಮಹದಹಂಕಾರ
ನಿರೂಪಣಪ್ರಕರಣಂ ಷಷ್ಠಂ.

---

## ಸಪ್ತಮಪ್ರಕರಣಂ.

---

### ೭೭ ಇಂದ್ರಿಯಸಾಮಾನ್ಯಲಕ್ಷಣಂ.

ಪ್ರಾಣ, ಅಪಾನ, ವ್ಯಾನ ಮೊದಲಾದ ವಾಯುವಿಶೇಷಗಳಿಗಿಂತಲೂ ಭಿನ್ನ ವಾಗಿಯೂ, ಸ್ಮರಣೆ* ಮುಂತಾದ ಕೆಲಸ ನಡೆವುದಕ್ಕೆ ಅನುಕೂಲವಾದ ಶರೀರ ಪ್ರದೇಶವಿಶೇಷಗಳಲ್ಲಿದ್ದು ಆ ಆ ಕೆಲಸವನ್ನು ನಡೆಸುವುದರಲ್ಲಿ ಸಮರ್ಥವಾಗಿಯೂ ಇರುವ ದ್ರವ್ಯವು ಇಂದ್ರಿಯವೆನಿಸಿಕೊಳ್ಳುವುದು. ಇದು ಇಂದ್ರಿಯಸಾಮಾನ್ಯ ಲಕ್ಷಣವು.

### ೭೮ ಏಕದೇಶ್ಯುಕ್ತಸ್ಯ ಇಂದ್ರಿಯಲಕ್ಷಣಸ್ಯ ಕ್ವಚಿದವ್ಯಾಪ್ತಿಪ್ರದರ್ಶನಂ

"ಶರೀರಕ್ಕಿಂತಲೂ ಭಿನ್ನವಾಗಿಯೂ, ಪ್ರಾಣವಾಯುವಿನಿಂದ ಧರಿಸಲ್ಪಡುವು ವುದಾಗಿಯೂ, ಆತ್ಮನಿಗೆ ಉಪಕಾರಕವಾಗಿಯೂ, ಇರುವ ದ್ರವ್ಯವು ಇಂದ್ರಿಯ

---

*ಮನಸ್ಸು, ಚಕ್ಷು, ಶ್ರೋತ್ರ, ಜಿಹ್ವೆ, ಘ್ರಾಣ, ತ್ವಕ್ಕು, ವಾಕ್ಕು, ಪಾಣಿ ಪಾದ, ಪಾಯು, ಉಪಸ್ಥ ಎಂಬ ಹನ್ನೊಂದು ಇಂದ್ರಿಯಗಳಿಗೂ ಕ್ರಮ ವಾಗಿ ಸ್ಮರಣೆ, ನೋಡುವಿಕೆ, ಕೇಳುವಿಕೆ, ರುಚಿನೋಡುವಿಕೆ, ಮೂಸಿನೋಡುವಿಕೆ, ಮುಟ್ಟುವಿಕೆ, ಹೇಳುವಿಕೆ, ತೆಗೆದುಕೊಳ್ಳುವಿಕೆ, ಹೋಗುವಿಕೆ, ಬಿಡುವಿಕೆ, ಆನಂದಿ ಸುವಿಕೆ ಎಂಬ ಹನ್ನೊಂದು ಕೆಲಸಗಳು ವ್ಯಾಪಾರಗಳಾಗಿರುವುವು. ಇವುಗಳಲ್ಲಿ ಮನ ಇಂದ್ರಿಯದ ವ್ಯಾಪಾರವನ್ನು ಸ್ಮರಣಪದದಿಂದ ತೋರಿಸಿ ಉಳಿದುವುಗಳನ್ನು ಮುಂ ತಾದ ಎಂಬ ಶಬ್ದದಿಂದ ಸೂಚಿಸಿರುವುದು.

ವೆನಿಸಿಕೊಳ್ಳುವುದು'' ಎಂದೂ ಒಂದು ಲಕ್ಷಣವನ್ನು ಪೂರ್ವಾಚಾರ್ಯರಲ್ಲಿ ಕೆಲವರು ಹೇಳಿರುವರು. ಆದರೆ ಈ ಲಕ್ಷಣವು ಪ್ರಾಕೃತೇಂದ್ರಿಯಗಳಲ್ಲಿಮಾತ್ರ ಅನ್ವಯಿಸುವುದಲ್ಲದೆ ಅಪ್ರಾಕೃತೇಂದ್ರಿಯಗಳಲ್ಲಿ ಸಂಬಂಧಿಸುವುದಿಲ್ಲ.

### ೭೯ ಸಾಂಖ್ಯೋಕ್ತೇಂದ್ರಿಯಸಾಮಾನ್ಯಲಕ್ಷಣಖಂಡನಂ.

'ಯಾವ ದ್ರವ್ಯವು ಸಾತ್ತ್ವಿಕಾಹಂಕಾರವನ್ನು ತನಗೆ ಉಪಾದಾನಕಾರಣವಾಗಿ ಪಡೆದಿರುವುದೋ ಅಂಥ ದ್ರವ್ಯವು ಇಂದ್ರಿಯವೆನಿಸಿಕೊಳ್ಳುವುದು' ಎಂದು ಸಾಂಖ್ಯರು ಇಂದ್ರಿಯಸಾಮಾನ್ಯಕ್ಕೆ ಲಕ್ಷಣವನ್ನು ಹೇಳುವರು. ಆದರೆ ಇದೂ ಪೂರ್ವೋಕ್ತ ಲಕ್ಷಣದಂತೆ ಅಪ್ರಾಕೃತವಾದ ಇಂದ್ರಿಯದಲ್ಲಿ ಅವ್ಯಾಪ್ತಿದೋಷಕ್ಕೆ ಈಡಾಗಿರುವುದು.

### ೮೦ ಇಂದ್ರಿಯಸಾಮಾನ್ಯಸ್ಯ ವೈಶೇಷಿಕಾದಿಭಿರುಕ್ತಂ ಲಕ್ಷಣತ್ರಯಂ.

ಇದಲ್ಲದೆ ವೈಶೇಷಿಕರು ಇಂದ್ರಿಯಸಾಮಾನ್ಯಕ್ಕೆ ಮೂರು ಲಕ್ಷಣಗಳನ್ನು ತೋರಿಸಿರುವರು. ಇವುಗಳಲ್ಲಿ ಮೊದಲನೆಯದು--ಶರೀರಸಂಯೋಗಬಲದಿಂದ ಸಾಕ್ಷಾತ್ಕಾರವನ್ನು ನೆರವೇರಿಸುವುದಾಗಿಯೂ, ಅಪ್ರತ್ಯಕ್ಷವಾಗಿಯೂ ಇರುವ ದ್ರವ್ಯವು ಇಂದ್ರಿಯವೆನಿಸಿಕೊಳ್ಳುವುದು. ತಾರ್ಕಿಕರ ಮತದಲ್ಲಿ ಆಕಾಶವು ಅಪ್ರತ್ಯಕ್ಷವಾದುದರಿಂದ ಅದನ್ನು ವ್ಯಾವರ್ತಿಸುವುದಕ್ಕಾಗಿ ಮೊದಲನೆಯ ವಿಶೇಷಣವು; ಇಂದ್ರಿಯಸನ್ನಿಕರ್ಷವನ್ನು ವ್ಯಾವರ್ತಿಸುವುದಕ್ಕಾಗಿ ಶರೀರಸಂಯೋಗಬಲದಿಂದ ಎಂಬ ಪದವು; ಆತ್ಮನನ್ನು ವ್ಯಾವರ್ತಿಸುವುದಕ್ಕಾಗಿ ಅಪ್ರತ್ಯಕ್ಷವಾಗಿಯೂ ಎಂಬ ಪದವು.

ಎರಡನೆಯದು——ಸಾಕ್ಷಾತ್ಕಾರಜನಕಜನಕವಾಗಿಯೂ ಸಾಕ್ಷಾತ್ಕಾರಜನಕವಾಗಿಯೂ ಇರುವುದು ಇಂದ್ರಿಯವೆನಿಸಿಕೊಳ್ಳುವುದು. ಇಂದ್ರಿಯಸನ್ನಿಕರ್ಷವನ್ನು ವ್ಯಾವರ್ತಿಸುವುದಕ್ಕಾಗಿ ವಿಶೇಷಣವು; ಇಂದ್ರಿಯಾವಯವವನ್ನು ವ್ಯಾವರ್ತಿಸುವುದಕ್ಕಾಗಿ ವಿಶೇಷ್ಯವು.

ಮೂರನೆಯದು—— ಶಬ್ದೇತರವಾದ *ಉದ್ಭೂತವಿಶೇಷಗುಣಕ್ಕೆ ಆಶ್ರಯವಲ್ಲದುದಾಗಿಯೂ, ಜ್ಞಾನಕ್ಕೆ ಕಾರಣವಾದ ಮನಸ್ಸಂಯೋಗಕ್ಕೆ ಆಶ್ರಯವಾದುದಾಗಿಯೂ ಇರುವ ದ್ರವ್ಯವು ಇಂದ್ರಿಯವೆನಿಸಿಕೊಳ್ಳುವುದು. ಆತ್ಮನನ್ನು ವ್ಯಾವರ್ತಿ

---

* ಶಬ್ದ, ಸ್ಪರ್ಶ, ರೂಪ, ರಸ, ಗಂಧ, ಸ್ನೇಹ, (ಸ್ನಿಗ್ಧತೆ) ಸಾಂಸಿದ್ಧಿಕದ್ರವತ್ವ, ಬುದ್ಧಿ, ಸುಖ, ದುಃಖ, ಇಚ್ಛೆ, ದ್ವೇಷ, ಪ್ರಯತ್ನ, ಧರ್ಮ, ಅಧರ್ಮ, ಭಾವನೆಯೆಂಬ ಸಂಸ್ಕಾರ, ಈ ಹದಿನಾರೂ ವಿಶೇಷಗುಣಗಳೆನಿಸಿಕೊಳ್ಳುವುವು ಎಂಬುದು ತಾರ್ಕಿಕರ ಪ್ರಕ್ರಿಯೆಯಾಗಿರುವುದು.

ಸುವುದಕ್ಕಾಗಿ ವಿಶೇಷಣವು ; ಇಂದ್ರಿಯಸನ್ನಿಕರ್ಷವನ್ನು ವ್ಯಾವರ್ತಿಸುವುದಕ್ಕಾಗಿ ವಿಶೇಷ್ಯವು; ಶ್ರೋತ್ರೇಂದ್ರಿಯದಲ್ಲಿ ಅವ್ಯಾಪ್ತಿಯ ಪರಿಹಾರಕ್ಕಾಗಿ ಶಬ್ದೇತರಪದವು.

### ೮೧ ತತ್ಖಂಡನಂ.

ಈ ಮೂರು ಲಕ್ಷಣಗಳೂ ಜ್ಞಾನೇಂದ್ರಿಯದಲ್ಲಿ ಸಂಗತವಾಗಬಹುದಾದರೂ ಕರ್ಮೇಂದ್ರಿಯದಲ್ಲಿ ಅವ್ಯಾಪ್ತಿದೋಷದಿಂದ ದೂಷಿತವಾಗಿರುವುವು. ಅಲ್ಲದೆ ಎರಡನೆಯ ಲಕ್ಷಣವು ಘಟಾದಿಪದಾರ್ಥದಲ್ಲಿ ಅತಿವ್ಯಾಪ್ತಿದೋಷದಿಂದಲೂ ಗ್ರಸ್ತವಾಗಿರುವುದು. ಹೇಗೆಂದರೆ--ಘಟದ ಸಾಕ್ಷಾತ್ಕಾರದಲ್ಲಿ ಇಂದ್ರಿಯವೂ ಅದರ ಸನ್ನಿಕರ್ಷವೂ ಹೇಗೆ ಕಾರಣವೋ ಹಾಗೆಯೇ ವಿಷಯವಾದ ಘಟವೂ ಕಾರಣವಾಗಿರುವುದರಿಂದ ಸಾಕ್ಷಾತ್ಕಾರಜನಕತ್ವವೆಂಬ ವಿಶೇಷ್ಯದಳವು ಘಟದಲ್ಲಿರುವುದು. ಸಾಕ್ಷಾತ್ಕಾರಜನಕವಾದ ವಿಷಯೇಂದ್ರಿಯಸಂಯೋಗಕ್ಕೂ ಘಟವು ಜನಕವಾದುದರಿಂದ ವಿಶೇಷಣದಳವೂ ಘಟದಲ್ಲಿರುವುದು. ಆದಕಾರಣ ಅತಿಪ್ರಸಂಗವು ದುಷ್ಪರಿಹರವಾಗಿರುವುದು.

### ೮೨ ಇಂದ್ರಿಯಸಾಮಾನ್ಯಸ್ಯ ಮೀಮಾಂಸಕೋಕ್ತಂ ಲಕ್ಷಣಂ,

ಯಾವ ದ್ರವ್ಯವು ಆ ಆ ಪದಾರ್ಥಗಳೊಡನೆ ಸಂಬದ್ಧವಾಗಿ ಆ ಆ ಪದಾರ್ಥಗಳ ವಿಷಯದಲ್ಲಿ ವಿಶದಾಕಾರವಾದ ಎಂದರೆ ಪ್ರತ್ಯಕ್ಷರೂಪವಾದ ಜ್ಞಾನವನ್ನು ಉಂಟುಮಾಡುವುದೋ ಅಂಥ ದ್ರವ್ಯವು ಇಂದ್ರಿಯವೆನಿಸಿಕೊಳ್ಳುವುದು ಎಂದು ಮೀಮಾಂಸಕರು ಇಂದ್ರಿಯಸಾಮಾನ್ಯಕ್ಕೆ ಲಕ್ಷಣವನ್ನು ಹೇಳುವರು.

### ೮೩ ತತ್ಖಂಡನಂ.

ವೈಶೇಷಿಕರಿಂದ ಉಕ್ತವಾದ ಮೂರು ಲಕ್ಷಣಗಳಂತೆ ಈ ಲಕ್ಷಣವೂ ಜ್ಞಾನೇಂದ್ರಿಯಗಳಾರರಲ್ಲಿಯೂ ಒಂದುವೇಳೆ ಸಂಗತವಾಗಬಹುದಾದರೂ ಕರ್ಮೇಂದ್ರಿಯಗಳಲ್ಲಿ ಅವ್ಯಾಪ್ತಿದೋಷದಿಂದ ದೂಷಿತವಾಗಿರುವುದು. ಇನ್ನೂ ಸೂಕ್ಷ್ಮರೀತಿಯಾಗಿ ವಿಚಾರಮಾಡಿ ನೋಡಿದರೆ ಜ್ಞಾನೇಂದ್ರಿಯಗಳಲ್ಲಿಯೂ ಈ ಲಕ್ಷಣಕ್ಕೆ ಸಮನ್ವಯವಿಲ್ಲವೆಂದು ಹೇಳಬಹುದು. ಹೇಗೆಂದರೆ—ಈ ಇಂದ್ರಿಯಗಳು ತಮಗೆ ಆಶ್ರಯವಾಗಿರುವ ಶರೀರದ ಆ ಆ ಭಾಗಗಳೊಡನೆ ಯಾವಾಗಲೂ ಸಂಬದ್ಧವಾಗಿಯೇ ಇದ್ದರೂ ಅವುಗಳ ವಿಷಯದಲ್ಲಿ ಪ್ರತ್ಯಕ್ಷರೂಪವಾದ ಜ್ಞಾನವನ್ನು ಒಂದುಕಾಲದಲ್ಲಿಯಾದರೂ ಉಂಟುಮಾಡಿದುದನ್ನು ಇದುವರೆಗೂ ಯಾರೂ ಕಾಣಲಿಲ್ಲ. ಆದಕಾರಣ ಈ ಲಕ್ಷಣಕ್ಕೆ ಅಸಂಭವದೋಷವೇ ಉಂಟೆಂದು ಹೇಳುವುದರಲ್ಲಿ ತಡೆಯಿಲ್ಲ. ಆದುದರಿಂದ ನಾವು ಹೇಳಿದ ಲಕ್ಷಣವೇ ಇಂದ್ರಿಯಸಾಮಾನ್ಯಕ್ಕೆ ಶುದ್ಧವಾದ ಲಕ್ಷಣವಾಗಿರುವುದು.

೮೪ ಇಂದ್ರಿಯಾಣಾಂ ಪ್ರಾಕೃತಾಪ್ರಾಕೃತಭೇದೇನ ದ್ವೈವಿಧ್ಯಂ.

ಇಂಥ ಇಂದ್ರಿಯವು ಅಪ್ರಾಕೃತವೆಂದೂ ಪ್ರಾಕೃತವೆಂದೂ ಎರಡು ವರ್ಗವಾಗುವುದು. ರಜೋಗುಣತಮೋಗುಣಗಳ ಸಂಬಂಧವಿಲ್ಲದೆ ಶುದ್ಧಸತ್ತ್ವಾಶ್ರಯವಾದ ಇಂದ್ರಿಯವು ಅಪ್ರಾಕೃತೇಂದ್ರಿಯವಾಗುವುದು. ಗುಣತ್ರಯಾಶ್ರಯವಾದ ಇಂದ್ರಿಯವು ಪ್ರಾಕೃತೇಂದ್ರಿಯವೆನಿಸಿಕೊಳ್ಳುವುದು. ಅವ್ಯಕ್ತ, ಮಹತ್, ಅಹಂಕಾರ ಇವುಗಳಲ್ಲಿಯೂ ಪ್ರಾಕೃತಾಪ್ರಾಕೃತವಿಭಾಗವುಂಟೆಂದು ಕೆಲವರು ಆಚಾರ್ಯರು ಹೇಳುವರು. ಶಬ್ದತನ್ಮಾತ್ರವು ಹುಟ್ಟುವ ಕಾಲದಲ್ಲಿ ಹುಟ್ಟುವ ದ್ರವ್ಯವು, ಅಥವಾ ಸಾತ್ತ್ವಿಕಾಹಂಕಾರವನ್ನು ಉಪಾದಾನಕಾರಣವಾಗಿ ಪಡೆದಿರುವ ದ್ರವ್ಯವು ಪ್ರಾಕೃತೇಂದ್ರಿಯವೆನಿಸಿಕೊಳ್ಳುವುದು.

೮೫ ಜ್ಞಾನೇಂದ್ರಿಯಕರ್ಮೇಂದ್ರಿಯಭೇದೇನ ಪುನರಪಿ ದ್ವೈವಿಧ್ಯಂ.

ಪುನಃ ಇಂದ್ರಿಯವು ಜ್ಞಾನೇಂದ್ರಿಯವೆಂದೂ ಕರ್ಮೇಂದ್ರಿಯವೆಂದೂ ಎರಡು ಬಗೆಯಾಗುವುದು. ಇದರಲ್ಲಿ ಜ್ಞಾನವಿಕಾಸಕ್ಕೆ ಹೇತುವಾಗಿಯೂ ಇಂದ್ರಿಯವಾಗಿಯೂ ಇರುವುದು ಜ್ಞಾನೇಂದ್ರಿಯವೆನಿಸಿಕೊಳ್ಳುವುದು. ಕರ್ಮೇಂದ್ರಿಯವನ್ನು ವ್ಯಾವರ್ತಿಸುವುದಕ್ಕಾಗಿ ಮೊದಲನೆಯ ದಳವು; ಇಂದ್ರಿಯಸನ್ನಿಕರ್ಷವನ್ನು ವ್ಯಾವರ್ತಿಸುವುದಕ್ಕಾಗಿ ಎರಡನೆಯ ದಳವು.

೮೬ ಜ್ಞಾನೇಂದ್ರಿಯಾಣಿ ಷೋಢಾ.

ಈ ಜ್ಞಾನೇಂದ್ರಿಯವು–ಮನಸ್ಸು, ಶ್ರೋತ್ರ, ತ್ವಕ್ಕು, ಚಕ್ಷುಸ್ಸು, ರಸನೆ, ಘ್ರಾಣ ಎಂದು ಆರುವಿಧವಾಗಿರುವುದು.

೮೭ ಸಾಂಖ್ಯಮತಖಂಡನಪೂರ್ವಕಂ ಮನಸೋ ಜ್ಞಾನೇಂದ್ರಿಯತ್ವಸ್ಥಿರೀಕರಣಂ.

ಸಕಲಕರ್ಮಪ್ರವೃತ್ತಿಯೂ ಮನಸ್ಸಿಗೆ ಅಧೀನವಾಗಿರುವುದರಿಂದ ಮನಸ್ಸನ್ನು ಕರ್ಮೇಂದ್ರಿಯವೆಂದು ಸಾಂಖ್ಯರು ಹೇಳುವರು. ಇದು ಸಂಗತವಲ್ಲ. ಏತಕ್ಕೆಂದರೆ ಜ್ಞಾನವನ್ನು ದ್ವಾರವಾಗಿ ಮಾಡಿಕೊಳ್ಳದೆ ಯಾವ ಇಂದ್ರಿಯವು ಕರ್ಮಕ್ಕೆ ಕಾರಣವಾಗುವುದೋ ಅದು ಕರ್ಮೇಂದ್ರಿಯವೆನಿಸಿಕೊಳ್ಳುವುದು. ಮನಸ್ಸಾದರೋ ಜ್ಞಾನವನ್ನು ದ್ವಾರಮಾಡಿಕೊಂಡೇ ಕರ್ಮಕ್ಕೆ ಕಾರಣವಾಗುವುದಾದುದರಿಂದ ಕರ್ಮೇಂದ್ರಿಯಲಕ್ಷಣವು ಮನಸ್ಸಿನಲ್ಲಿ ಬರಲಾರದು. ಕರ್ಮಕ್ಕೆ ಕಾರಣವಾದಮಾತ್ರಕ್ಕೆ ಮನಸ್ಸನ್ನು ಕರ್ಮೇಂದ್ರಿಯಕೋಟಿಯಲ್ಲಿ ಸೇರಿಸುವುದಾದರೆ ಚಕ್ಷುರಾದೀಂದ್ರಿಯಗಳನ್ನೂ ಕರ್ಮೇಂದ್ರಿಯಕೋಟಿಯಲ್ಲಿಯೇ ಸೇರಿಸಬೇಕಾಗುವುದರಿಂದ ಜ್ಞಾನೇಂ

ದ್ರಿಯವೆಂಬ ಹೆಸರನ್ನೇ ಬಿಡಬೇಕಾಗುವುದು. ಶಾಸ್ತ್ರದೊಳಗೆ ಕೆಲವುಕಡೆ ಮನ ಇಂದ್ರಿಯಕ್ಕೆ ಕರ್ಮೇಂದ್ರಿಯತ್ವವ್ಯವಹಾರವನ್ನು ಮಾಡಿರುವುದು ಗೌಣವೇ ಹೊರತು ಮುಖ್ಯವಲ್ಲ. ಆದಕಾರಣ ಮೇಲೆ ಹೇಳಿದ ಆರೂ ಜ್ಞಾನೇಂದ್ರಿಯಗಳೆಂಬುದಕ್ಕೆ ತಡೆಯಿಲ್ಲ.

## ೮೮ ಅಥ ಪ್ರಾಕೃತೇಂದ್ರಿಯೇಷು ಮನಸೋ ಲಕ್ಷಣಂ.

ಇಲ್ಲಿ ಪ್ರಾಕೃತವಾದ ಇಂದ್ರಿಯವರ್ಗವನ್ನು ಕುರಿತು ವಿಚಾರಮಾಡುವೆವು. ರಜೋಗುಣವುಳ್ಳದಾಗಿಯೂ, ಅಥವಾ ತಮೋಗುಣವುಳ್ಳದಾಗಿಯೂ, ಶಬ್ದ, ಸ್ಪರ್ಶ, ರೂಪ, ರಸ, ಗಂಧ ಎಂಬ ಐದುವಿಷಯಗಳನ್ನೂ ಸಾಕ್ಷಾತ್ಕರಿಸುವುದಕ್ಕೆ ಸಾಧನವಾಗಿಯೂ, ಇರುವ ಇಂದ್ರಿಯವು ಪ್ರಾಕೃತಮನಇಂದ್ರಿಯವೆನಿಸಿಕೊಳ್ಳುವುದು ಎಂದು ಆಚಾರ್ಯರುಗಳು ಲಕ್ಷಣವನ್ನು ಹೇಳಿರುವರು. ಈ ಹೇಳಿಕೆಗೆ ಪರ್ಯವಸಾನವೇನೆಂದರೆ—ಶಬ್ದ ಸ್ಪರ್ಶಗಳೆರಡರ ಸಾಕ್ಷಾತ್ಕಾರಕ್ಕೆ ಕಾರಣವಾದ ಇಂದ್ರಿಯವು ಮನಇಂದ್ರಿಯವಾಗುವುದು ; ಅಥವಾ ಶಬ್ದರೂಪಗಳೆರಡರ ಸಾಕ್ಷಾತ್ಕಾರಕ್ಕೆ ಕಾರಣವಾದ ಇಂದ್ರಿಯವು ಮನಇಂದ್ರಿಯವಾಗುವುದು ; ಅಥವಾ ಶಬ್ದ, ರಸ ಇವೆರಡರ ಸಾಕ್ಷಾತ್ಕಾರಕ್ಕೆ ಸಾಧನವಾದ ಇಂದ್ರಿಯವು ಮನಇಂದ್ರಿಯವಾಗುವುದು ; ಅಥವಾ ಶಬ್ದ, ಗಂಧ ಇವೆರಡರ ಸಾಕ್ಷಾತ್ಕಾರಕ್ಕೆ ಸಾಧನವಾದ ಇಂದ್ರಿಯವು ಮನಇಂದ್ರಿಯವಾಗುವುದು ; ಹೀಗೆ ನಾಲ್ಕು ಲಕ್ಷಣಗಳಾಗಿ ಪರ್ಯವಸಾನ ಮಾಡಬೇಕು.

ಈ ನಾಲ್ಕು ಲಕ್ಷಣಗಳಲ್ಲಿಯೂ ಕ್ರಮವಾಗಿ ತ್ವಗಿಂದ್ರಿಯ, ಚಕ್ಷುರಿಂದ್ರಿಯ, ರಸನೇಂದ್ರಿಯ, ಘ್ರಾಣೇಂದ್ರಿಯ ಇವುಗಳನ್ನು ವ್ಯಾವರ್ತಿಸುವುದಕ್ಕಾಗಿ ಶಬ್ದ ಪದವನ್ನು ಪ್ರಯೋಗಿಸಿದೆ. ಶ್ರೋತ್ರೇಂದ್ರಿಯವನ್ನು ವ್ಯಾವರ್ತಿಸುವುದಕ್ಕಾಗಿ ನಾಲ್ಕರಲ್ಲಿಯೂ ಕ್ರಮವಾಗಿ ಸ್ಪರ್ಶ, ರೂಪ, ರಸ, ಗಂಧ ಶಬ್ದಗಳನ್ನು ಪ್ರಯೋಗಿಸಿದೆ. ಆತ್ಮನನ್ನು ವ್ಯಾವರ್ತಿಸುವುದಕ್ಕಾಗಿ ನಾಲ್ಕರಲ್ಲಿಯೂ ಇಂದ್ರಿಯಪದವನ್ನು ಪ್ರಯೋಗಿಸಿದೆ.

## ೮೯ ಮನಸೋ ಲಕ್ಷಣಾಂತರಂ.

ಮನಸ್ಸಿಗೆ ಮತ್ತೊಂದುವಿಧವಾದ ಲಕ್ಷಣವನ್ನು ಹೇಳಬಹುದು. ಸ್ಮೃತಿ ಜನಕವಾದ ಇಂದ್ರಿಯವು ಮನಇಂದ್ರಿಯವಾಗುವುದು. ಶ್ರೋತ್ರವೊದಲಾದ ಇಂದ್ರಿಯಗಳನ್ನು ವ್ಯಾವರ್ತಿಸುವುದಕ್ಕಾಗಿ ಸ್ಮೃತಿಜನಕಪದವೂ, ಆತ್ಮನನ್ನು ವ್ಯಾವರ್ತಿಸುವುದಕ್ಕಾಗಿ ಇಂದ್ರಿಯಪದವೂ ಉಕ್ತವಾಗಿರುವುವು.

## ೯೦ ಪುನಃ ಮನಸೋ ಲಕ್ಷಣಾಂತರಂ.

ಮನಸ್ಸಿಗೆ ಇನ್ನೂ ಒಂದು ಲಕ್ಷಣವನ್ನು ಹೇಳಬಹುದು. ಹೃದಯಪ್ರದೇಶದಲ್ಲಿಮಾತ್ರ ಇರುವ ಇಂದ್ರಿಯವು ಮನಇಂದ್ರಿಯವಾಗುವುದು. ಪದಪ್ರಯೋಜನವು ಪೂರ್ವದಂತೆಯೇ. ಉಳಿದ ಇಂದ್ರಿಯಗಳೂ-ಹೃದಯಪ್ರದೇಶವನ್ನೇ ಮೂಲಸ್ಥಾನವಾಗಿ ಮಾಡಿಕೊಂಡು ಕೆಲಸಮಾಡುವ ಸಮಯದಲ್ಲಿ ಆ ಆ ಸ್ಥಾನಗಳಲ್ಲಿ ನಿಂತು ಕೆಲಸಮಾಡುವುವು. ಆತ್ಮನೂ ಹೃದಯದಲ್ಲಿಯೇ ಹೆಚ್ಚಾಗಿ ನಿಲ್ಲುವನು.

## ೯೧ ಅಂತಃಕರಣಸ್ಯ ಸಾಂಖ್ಯೋಕ್ತತ್ರೈವಿಧ್ಯಖಂಡನಂ.

ಶರೀರದಲ್ಲಿರುವ ಒಂದೇ ವಾಯು ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ ಎಂಬ ಆ ಆ ವೃತ್ತಿಭೇದ ಎಂದರೆ ಕಾರ್ಯಭೇದ ಉಂಟಾದ ಕಾಲದಲ್ಲಿ ಪ್ರಾಣಾದಿಶಬ್ದಗಳಿಂದ ವ್ಯವಹರಿಸಲ್ಪಟ್ಟರೂ ವಸ್ತು ಹೇಗಾದರೆ ಒಂದೇ ಆಗಿರುವುದೋ ಹಾಗೆಯೇ ಒಂದೇ ಅಂತಃಕರಣತತ್ತ್ವವು ಸಂಕಲ್ಪ, ಅಧ್ಯವಸಾಯ, ಚಿಂತೆ, ಅಭಿಮಾನ ಎಂಬ ವೃತ್ತಿಭೇದದಿಂದ ಮನಸ್ಸು, ಬುದ್ಧಿ, ಚಿತ್ತ, ಅಹಂಕಾರ ಎಂಬ ಶಬ್ದಗಳಿಂದ ವ್ಯವಹರಿಸಲ್ಪಡುವುದೇ ಹೊರತು ಅನೇಕವಲ್ಲ. ಆದುದರಿಂದ ಅಂತಃಕರಣವು ಮೂರುವಿಧವು ಎಂದು ಹೇಳುವ ಸಾಂಖ್ಯರ ಮತವು ಮೂಲಪ್ರಮಾಣಶೂನ್ಯವಾದುದರಿಂದ ಅನಾದರಣೀಯವಾಗಿರುವುದು.

## ೯೨ ಪ್ರಾಕೃತಶ್ರೋತ್ರಲಕ್ಷಣಂ.

ಶಬ್ದಾದಿಗಳೈದರಲ್ಲಿ ಅಡಗಿರುವ ಶಬ್ದೇತರದ ಸಾಕ್ಷಾತ್ಕಾರವನ್ನು ಉಂಟುಮಾಡದುದಾಗಿಯೂ ಶಬ್ದದ ಸಾಕ್ಷಾತ್ಕಾರವನ್ನು ಉಂಟುಮಾಡುವುದಾಗಿಯೂ ಇರುವ ಇಂದ್ರಿಯವು ಪ್ರಾಕೃತಶ್ರೋತ್ರೇಂದ್ರಿಯವೆನಿಸಿಕೊಳ್ಳುವುದು. ಇಲ್ಲಿ ಮನಸ್ಸನ್ನು ವ್ಯಾವರ್ತಿಸುವುದಕ್ಕಾಗಿ ಪ್ರಥಮವಿಶೇಷಣವು. ಶ್ರೋತ್ರೇಂದ್ರಿಯವು ಶಬ್ದವನ್ನು ಸಾಕ್ಷಾತ್ಕರಿಸುವಂತೆ ಶಬ್ದದಲ್ಲಿರುವ ಶಬ್ದತ್ವಜಾತಿಯನ್ನೂ, ಕ, ಖ ಮೊದಲಾದ ವರ್ಣಗಳಲ್ಲಿರುವ ಕತ್ವ, ಖತ್ವ ಮೊದಲಾದ ಧರ್ಮಗಳನ್ನೂ ಸಾಕ್ಷಾತ್ಕರಿಸುವುದರಿಂದ ಶಬ್ದೇತರದ ಸಾಕ್ಷಾತ್ಕಾರವನ್ನು ಉಂಟುಮಾಡದ ಎಂಬ ವಿಶೇಷಣವು ಶ್ರೋತ್ರೇಂದ್ರಿಯದಲ್ಲಿ ಬರಲಿಲ್ಲವಾಗಿ ಅಸಂಭವದೋಷವುಂಟಾಗುವುದು. ಇದಕ್ಕಾಗಿ ಶಬ್ದೇತರದ ಎಂಬುದಕ್ಕೆ ಶಬ್ದಾದಿಗಳೈದರಲ್ಲಿ ಅಡಗಿರುವ ಎಂಬ ವಿಶೇಷಣವನ್ನು ಕೊಟ್ಟಿರುವುದು. ಶಬ್ದತ್ವ, ಕತ್ವ, ಖತ್ವ ಮೊದಲಾದುದು ಶಬ್ದೇತರವಾದರೂ ಶಬ್ದಾದಿಗಳೈದರಲ್ಲಿ ಅಡಗಿಲ್ಲವಾದುದರಿಂದ ಅಸಂಭವದೋಷಕ್ಕೆ ಅವಕಾಶವಿಲ್ಲ. ಶ್ರೋತ್ರ, ಶಬ್ದ ಇವುಗಳ ಸಂಯೋಗವನ್ನು ವ್ಯಾವರ್ತಿಸುವುದಕ್ಕಾಗಿ

ಇಂದ್ರಿಯಪದವು. ಕರ್ಮೇಂದ್ರಿಯವನ್ನು ವ್ಯಾವರ್ತಿಸುವುದಕ್ಕಾಗಿ ದ್ವಿತೀಯ ವಿಶೇಷಣವು.

ಈಲಕ್ಷಣದ ಪರ್ಯವಸಾನವೇನೆಂದರೆ—ಸ್ಪರ್ಶಸಾಕ್ಷಾತ್ಕಾರವನ್ನು ಉಂಟು ಮಾಡದುದಾಗಿಯೂ ಶಬ್ದಸಾಕ್ಷಾತ್ಕಾರವನ್ನು ಉಂಟುಮಾಡುವುದಾಗಿಯೂ ಇರುವ ಇಂದ್ರಿಯವು ಶ್ರೋತ್ರವಾಗುವುದು ; ರೂಪಸಾಕ್ಷಾತ್ಕಾರವನ್ನು ಉಂಟುಮಾಡದುದಾಗಿಯೂ ಶಬ್ದಸಾಕ್ಷಾತ್ಕಾರವನ್ನು ಉಂಟುಮಾಡುವುದಾಗಿಯೂ ಇರುವ ಇಂದ್ರಿಯವು ಶ್ರೋತ್ರವಾಗುವುದು; ರಸಸಾಕ್ಷಾತ್ಕಾರವನ್ನು ಉಂಟುಮಾಡದುದಾಗಿಯೂ ಶಬ್ದಸಾಕ್ಷಾತ್ಕಾರವನ್ನು ಉಂಟುಮಾಡುವುದಾಗಿಯೂ ಇರುವ ಇಂದ್ರಿಯವು ಶ್ರೋತ್ರವಾಗುವುದು ; ಗಂಧಸಾಕ್ಷಾತ್ಕಾರವನ್ನು ಉಂಟುಮಾಡದುದಾಗಿಯೂ ಶಬ್ದಸಾಕ್ಷಾತ್ಕಾರವನ್ನು ಉಂಟುಮಾಡುವುದಾಗಿಯೂ ಇರುವ ಇಂದ್ರಿಯವು ಶ್ರೋತ್ರವಾಗುವುದು. ಹೀಗೆ ನಾಲ್ಕು ಲಕ್ಷಣಗಳಾಗಿ ಪರ್ಯವಸಾನಮಾಡಬೇಕು. ಈ ನಾಲ್ಕರಲ್ಲಿಯೂ ಪದಪ್ರಯೋಜನವನ್ನು ಪೂರ್ವದಂತೆಯೇ ತಿಳಿಯಬೇಕು.

### ೯೩ ಶ್ರೋತ್ರೇಂದ್ರಿಯಸ್ಯ ಅಧಿಷ್ಠಾನವಿವೇಕಃ.

ಇಂಥ ಶ್ರೋತ್ರೇಂದ್ರಿಯವು ಕಿವಿಯ ಒಳಭಾಗದಲ್ಲಿರುವ ಶಾರೀರಪ್ರದೇಶ ವಿಶೇಷದಲ್ಲಿರುವುದು. ಸರ್ಪಗಳಿಗಾದರೆ ನೇತ್ರಗೋಳದಲ್ಲಿಯೇ ಇರುವುದು.

### ೯೪ ಶ್ರೋತ್ರಾದೀಂದ್ರಿಯಾಣಾಂ ಭೌತಿಕತ್ವನಿರಾಸಃ.

ಶ್ರೀಮನ್ಮಹಾಭಾರತದ *ಮೋಕ್ಷಧರ್ಮದಲ್ಲಿ ಶ್ರೋತ್ರವೊದಲಾದ ಐದು ಇಂದ್ರಿಯಗಳೂ ಆಕಾಶಾದಿಪಂಚಭೂತಗಳಿಂದ ಕ್ರಮವಾಗಿ ಹುಟ್ಟುವುವೆಂದು ಹೇಳಿರುವುದರಿಂದ ಇವುಗಳು ಭೌತಿಕಗಳೆಂದು ಭ್ರಾಂತಿಗೊಂಡಿರುವ ನೈಯಾಯಿಕರ ಹೇಳಿಕೆಯನ್ನು ನಂಬಬಾರದು. ಮತ್ತು ‡ದಿಶಃ ಶ್ರೋತ್ರಂ ಭೂತ್ವಾ ಕರ್ಣೌ

---

* ಶಬ್ದಃ ಶ್ರೋತ್ರಂ ತಥಾ ಖಾದಿ ತ್ರಯಮಾಕಾಶಸಂಭವಂ |
ವಾಯೋಃ ಸ್ಪರ್ಶಸ್ತಥಾ ಚೇಷ್ಟಾ ತ್ವಕ್ಚೈವ ತ್ರಿತಯಂ ಸ್ಮೃತಂ |
ರೂಪಂ ಚಕ್ಷುಸ್ತಥಾ ವ್ಯಕ್ತಿಸ್ತ್ರಿತಯಂ ತೇಜ ಉಚ್ಯತೇ |
ರಸಃ ಕ್ಲೇದಶ್ಚ ಜಿಹ್ವಾ ಚ ತ್ರಯೋ ಜಲಗುಣಾಃ ಸ್ಮೃತಾಃ |
ಘ್ರಾಣಂ ಘ್ರೇಯಂ ಶರೀರಂ ಚ ತೇ ತು ಭೂಮಿಗುಣಾಃ ಸ್ಮೃತಾಃ || ಇತಿ.

‡ ಅಗ್ನಿರ್ವಾಗ್ಭೂತ್ವಾ ಮುಖಂ ಪ್ರಾವಿಶತ್ ; ವಾಯುಃ ಪ್ರಾಣೋ ಭೂತ್ವಾ ನಾಸಿಕೇ ಪ್ರಾವಿಶತ್ ; ಆದಿತ್ಯಶ್ಚಕ್ಷುರ್ಭೂತ್ವಾ ಅಕ್ಷಿಣೀ ಪ್ರಾವಿಶತ್ ; ದಿಶಃ ಶ್ರೋತ್ರಂ ಭೂತ್ವಾ ಕರ್ಣೌ ಪ್ರಾವಿಶನ್—ಇತಿ ಶ್ರುತಿಃ.

ಹಾ್ರವಿಶನ್ ಎಂಬ ಶ್ರುತಿಪ್ರಮಾಣದಿಂದ ಶ್ರೋತ್ರೇಂದ್ರಿಯವು ದಿಕ್ಕಿನಿಂದ ಹುಟ್ಟಿದುದೆಂದೂ ಭ್ರಾಂತಿಗೊಳ್ಳಬಾರದು.

ಏತಕ್ಕೆಂದರೆ—ಅದೇ ಮೋಕ್ಷಧರ್ಮದಲ್ಲಿ ಭೃಗುಭರದ್ವಾಜಸಂವಾದಪ್ರಕರಣದಲ್ಲಿ ಆಪ್ಯಾಯ್ಯಂತೇ ಚ ತೇ ನಿತ್ಯಂ ಧಾತವಸ್ತೈಸ್ತು ಪಂಚಭಿಃ ಎಂಬುದಾಗಿ ಪಂಚಭೂತಗಳು ಪಂಚೇಂದ್ರಿಯಗಳಿಗೆ ಆಪ್ಯಾಯಕಗಳೆಂದು ಹೇಳಿರುವುದರಿಂದ ಮೊದಲಿನ ವಚನಗಳನ್ನೂ ಇದಕ್ಕೆ ಅನುಕೂಲಿಸುವಂತೆ ನಿರ್ವಾಹಮಾಡಬಹುದು.

ಮತ್ತು—ತೈಜಸಾನೀಂದ್ರಿಯಾಣ್ಯಾಹುರ್ದೇವಾ ವೈಕಾರಿಕಾ ದಶ ।
ಏಕಾದಶಂ ಮನಶ್ಚಾತ್ರ ದೇವಾ ವೈಕಾರಿಕಾಃ ಸ್ಮೃತಾಃ ॥

ಎಂಬ ಅನನ್ಯಥಾಸಿದ್ಧವಾದ ಪರಾಶರವಚನದಿಂದ ಹನ್ನೊಂದು ಇಂದ್ರಿಯಗಳನ್ನೂ ಸಾತ್ತ್ವಿಕಾಹಂಕಾರಕಾರ್ಯಗಳಾಗಿ ಒಪ್ಪಿಕೊಳ್ಳಬೇಕಾಗಿರುವುದರಿಂದ ಇಂದ್ರಿಯಗಳಿಗೆ ಭೌತಿಕತ್ವವನ್ನು ಸ್ವೀಕರಿಸಲು ಅವಕಾಶವಿಲ್ಲ. ಇದರಿಂದಲೇ ಮೇಲೆ ಹೇಳಿದ ಶ್ರುತಿಯೂ ದತ್ತೋತ್ತರವಾಗಿರುವುದು. ಈಪರಾಶರವಚನದಲ್ಲಿ ದೇವಶಬ್ದವು ಇಂದ್ರಿಯವಾಚಕವಾಗಿರುವುದು. ಇಂದ್ರಿಯಗಳು ತೈಜಸವೆಂಬ ರಾಜಸಾಹಂಕಾರದಿಂದ ಉಂಟಾಗುವುವೆಂದು ಕೆಲವರ ಪಕ್ಷವು; ವೈಕಾರಿಕವೆಂಬ ಸಾತ್ತ್ವಿಕಾಹಂಕಾರದಿಂದ ಉಂಟಾಗುವುವೆಂದು ಇನ್ನು ಕೆಲವರ ಪಕ್ಷವು; ಈ ಎರಡು ಪಕ್ಷಗಳೊಳಗೆ ಮೊದಲನೆಯ ಪಕ್ಷವನ್ನು ಶ್ಲೋಕದ ಮೊದಲನೆಯ ಪಾದದಿಂದ ತೋರಿಸಿ, ಎರಡನೆಯ ಪಕ್ಷವನ್ನು ಎರಡನೆಯ ಮೂರನೆಯ ಪಾದಗಳಿಂದ ತೋರಿಸಿ, ಈ ಎರಡು ಪಕ್ಷಗಳೊಳಗೆ ತಮಗೆ ಅಭಿಮತವಾದ ಎರಡನೆಯ ಪಕ್ಷವನ್ನೇ ಸಿದ್ಧಾಂತಪಕ್ಷವಾಗಿ ನಾಲ್ಕನೆಯ ಪಾಡದಿಂದ ಪರಾಶರಮಹರ್ಷಿಗಳು ತೋರಿಸಿರುವರು. ಈವಿಧವಾದ ನಿರ್ವಾಹಗಳನ್ನೆಲ್ಲಾ ಶ್ರೀಭಾಷ್ಯಕಾರರೇ ವೇದಾರ್ಥಸಂಗ್ರಹದಲ್ಲಿ ಸ್ಪಷ್ಟವಾಗಿ ತೋರಿಸಿರುವರು.

ಇಂದ್ರಿಯಗಳಿಗೆ ಭೌತಿಕತ್ವವನ್ನು ಸಾಧಿಸುವುದಾಗಿ ವೈಶೇಷಿಕರು ಹೇಳುವ ಅನುಮಾನಪ್ರಮಾಣಗಳನ್ನು ಶ್ರುತಿಬಾಧೆ, ಸಾಧ್ಯವೈಕಲ್ಯ ಮುಂತಾದ ದೂಷಣಗಳಿಂದ ನಿರಾಕರಿಸಬೇಕು.

ಶಬ್ದವು ಆಕಾಶವೊದಲಾದ ಭೂತಗಳಲ್ಲಿ ಇರುವುದರಿಂದಲೂ, ಅದನ್ನು ಗ್ರಹಿಸುವ ಶ್ರೋತ್ರೇಂದ್ರಿಯವು ಸಾತ್ತ್ವಿಕಾಹಂಕಾರಕಾರ್ಯವಾಗಿರುವುದರಿಂದಲೂ, ಅಂಥ ಶ್ರೋತ್ರೇಂದ್ರಿಯದೊಡನೆ ಆಕಾಶಕ್ಕೆ ಸಂಯೋಗವಿರುವುದರಿಂದಲೂ, ಶ್ರೋತ್ರಸಂಯುಕ್ತವಾದ ಅಂಥ ಆಕಾಶದಲ್ಲಿರುವ ಶಬ್ದಕ್ಕೆ ಶ್ರೋತ್ರೇಂದ್ರಿಯದಿಂದ ಗ್ರಹಿಸ

ಲ್ಪಡಲು ಯೋಗ್ಯತೆಯಿರುವುದರಿಂದಲೂ ಶ್ರೋತ್ರೇಂದ್ರಿಯವು ಅದನ್ನು ಗ್ರಹಿಸಲು ಯಾವ ಅಡ್ಡಿಯೂ ಇರುವುದಿಲ್ಲ. ಇದೇ ಅರ್ಥವನ್ನು ಶ್ರೀಮದ್ವೇದಾಂತದೇಶಿಕರು ನ್ಯಾಯಸಿದ್ಧಾಂಜನಗ್ರಂಥದಲ್ಲಿ—

ಶಬ್ದಸ್ಯ ಭೂತಧರ್ಮತ್ವಾತ್ ಶ್ರುತೇರ್ವೈಕಾರಿಕತ್ವತಃ ।
ಸಂಯುಕ್ತನಿಲಯೋ ಯೋಗ್ಯಃ ಸ ತಯಾ ಸಂಪ್ರತೀಯತೇ ॥

ಎಂಬ ಕಾರಿಕೆಯಿಂದ ಸಂಗ್ರಹಿಸಿ ತೋರಿಸಿರುವರು.

ಶಬ್ದವು ದ್ರವ್ಯವೋ? ಅದ್ರವ್ಯವೋ? ಶ್ರೋತ್ರವು ದೂರದಲ್ಲಿರುವ ಶಬ್ದದ ಸಮೀಪಕ್ಕೆ ಹೋಗಿ ಅದನ್ನು ಗ್ರಹಿಸುವುದೋ? ಅಥವಾ ಶಬ್ದವೇ ಶ್ರೋತ್ರದ ಸಮೀಪಕ್ಕೆ ಬಂದುದರಿಂದ ಶ್ರೋತ್ರವು ಅದನ್ನು ಗ್ರಹಿಸುವುದೋ? ಇತ್ಯಾದಿ ವಿವಾದಗಳನ್ನು ಅದ್ರವ್ಯನಿರೂಪಣಪ್ರಕರಣದಲ್ಲಿ ಪರಿಹರಿಸುವೆವು

### ೯೫ ಪ್ರಾಕೃತತ್ವಗಿಂದ್ರಿಯಲಕ್ಷಣಂ.

ಶಬ್ದಾದಿಗಳೈದರಲ್ಲಿ ಅಡಗಿರುವ ಸ್ಪರ್ಶೇತರದ ಸಾಕ್ಷಾತ್ಕಾರವನ್ನು ಉಂಟು ಮಾಡದುದಾಗಿಯೂ ಸ್ಪರ್ಶಸಾಕ್ಷಾತ್ಕಾರವನ್ನು ಉಂಟುಮಾಡುವುದಾಗಿಯೂ ಇರುವ ಇಂದ್ರಿಯವು ಪ್ರಾಕೃತತ್ವಗಿಂದ್ರಿಯವೆನಿಸಿಕೊಳ್ಳುವುದು.

ಈ ಲಕ್ಷಣದ ಪರ್ಯವಸಾನವೇನೆಂದರೆ— ಶಬ್ದಸಾಕ್ಷಾತ್ಕಾರವನ್ನು ಉಂಟು ಮಾಡದುದಾಗಿಯೂ ಸ್ಪರ್ಶಸಾಕ್ಷಾತ್ಕಾರವನ್ನು ಉಂಟುಮಾಡುವುದಾಗಿಯೂ ಇರುವ ಇಂದ್ರಿಯವು ತ್ವಗಿಂದ್ರಿಯವಾಗುವುದು ; ರೂಪಸಾಕ್ಷಾತ್ಕಾರವನ್ನು ಉಂಟುಮಾಡ ದುದಾಗಿಯೂ ಸ್ಪರ್ಶಸಾಕ್ಷಾತ್ಕಾರವನ್ನು ಉಂಟುಮಾಡುವುದಾಗಿಯೂ ಇರುವ ಇಂದ್ರಿಯವು ತ್ವಗಿಂದ್ರಿಯವಾಗುವುದು ; ರಸಸಾಕ್ಷಾತ್ಕಾರವನ್ನು ಉಂಟುಮಾಡ ದುದಾಗಿಯೂ ಸ್ಪರ್ಶಸಾಕ್ಷಾತ್ಕಾರವನ್ನು ಉಂಟುಮಾಡುವುದಾಗಿಯೂ ಇರುವ ಇಂದ್ರಿಯವು ತ್ವಗಿಂದ್ರಿಯವಾಗುವುದು ; ಗಂಧಸಾಕ್ಷಾತ್ಕಾರವನ್ನು ಉಂಟುಮಾಡ ದುದಾಗಿಯೂ ಸ್ಪರ್ಶಸಾಕ್ಷಾತ್ಕಾರವನ್ನು ಉಂಟುಮಾಡುವುದಾಗಿಯೂ ಇರುವ ಇಂದ್ರಿಯವು ತ್ವಗಿಂದ್ರಿಯವಾಗುವುದು ; ಹೀಗೆ ನಾಲ್ಕು ಲಕ್ಷಣಗಳಾಗಿ ಪರ್ಯವಸಾನ ಮಾಡಬೇಕು. ನಾಲ್ಕರಲ್ಲಿಯೂ ಪದಪ್ರಯೋಜನವು ಪೂರ್ವದಂತೆಯೇ.

### ೯೬ ಪ್ರಾಕೃತಚಕ್ಷುರಿಂದ್ರಿಯಲಕ್ಷಣಂ.

ಶಬ್ದಾದಿಗಳೈದರಲ್ಲಿ ಅಡಗಿರುವ ರೂಪೇತರದ ಸಾಕ್ಷಾತ್ಕಾರವನ್ನು ಉಂಟು ಮಾಡದುದಾಗಿಯೂ ರೂಪಸಾಕ್ಷಾತ್ಕಾರವನ್ನು ಉಂಟುಮಾಡುವುದಾಗಿಯೂ ಇರುವ ಇಂದ್ರಿಯವು ಪ್ರಾಕೃತಚಕ್ಷುರಿಂದ್ರಿಯವೆನಿಸಿಕೊಳ್ಳುವುದು.

ಈ ಲಕ್ಷಣದ ಪರ್ಯವಸಾನವೇನೆಂದರೆ-ಶಬ್ದಸಾಕ್ಷಾತ್ಕಾರವನ್ನು ಉಂಟುಮಾಡದುದಾಗಿಯೂ, ರೂಪಸಾಕ್ಷಾತ್ಕಾರವನ್ನು ಉಂಟುಮಾಡುವುದಾಗಿಯೂ ಇರುವ ಇಂದ್ರಿಯವು ಚಕ್ಷುರಿಂದ್ರಿಯವಾಗುವುದು ; ಸ್ಪರ್ಶಸಾಕ್ಷಾತ್ಕಾರವನ್ನು ಉಂಟುಮಾಡದುದಾಗಿಯೂ, ರೂಪಸಾಕ್ಷಾತ್ಕಾರವನ್ನು ಉಂಟುಮಾಡುವುದಾಗಿಯೂ ಇರುವ ಇಂದ್ರಿಯವು ಚಕ್ಷುರಿಂದ್ರಿಯವಾಗುವುದು ; ರಸಸಾಕ್ಷಾತ್ಕಾರವನ್ನು ಉಂಟುಮಾಡದುದಾಗಿಯೂ, ರೂಪಸಾಕ್ಷಾತ್ಕಾರವನ್ನು ಉಂಟುಮಾಡುವುದಾಗಿಯೂ ಇರುವ ಇಂದ್ರಿಯವು ಚಕ್ಷುರಿಂದ್ರಿಯವಾಗುವುದು ; ಗಂಧಸಾಕ್ಷಾತ್ಕಾರವನ್ನು ಉಂಟುಮಾಡದುದಾಗಿಯೂ, ರೂಪಸಾಕ್ಷಾತ್ಕಾರವನ್ನು ಉಂಟುಮಾಡುವುದಾಗಿಯೂ ಇರುವ ಇಂದ್ರಿಯವು ಚಕ್ಷುರಿಂದ್ರಿಯವಾಗುವುದು : ಹೀಗೆ ನಾಲ್ಕು ಲಕ್ಷಣಗಳಾಗಿ ಪರ್ಯವಸಾನಮಾಡಬೇಕು: ನಾಲ್ಕರಲ್ಲಿಯೂ ಪದಪ್ರಯೋಜನವು ಪೂರ್ವದಂತೆಯೇ.

### ೯೭ ಪ್ರಾಕೃತರಸನೇಂದ್ರಿಯಲಕ್ಷಣಂ.

ಶಬ್ದಾದಿಪಂಚಕದಲ್ಲಿ ಅಡಗಿರುವ ರಸೇತರದ ಸಾಕ್ಷಾತ್ಕಾರವನ್ನು ಉಂಟುಮಾಡದುದಾಗಿಯೂ, ರಸಸಾಕ್ಷಾತ್ಕಾರವನ್ನು ಉಂಟುಮಾಡುವುದಾಗಿಯೂ ಇರುವ ಇಂದ್ರಿಯವು ಪ್ರಾಕೃತರಸನೇಂದ್ರಿಯವೆನಿಸಿಕೊಳ್ಳುವುದು.

ಈ ಲಕ್ಷಣದ ಪರ್ಯವಸಾನವೇನೆಂದರೆ—ಶಬ್ದಸಾಕ್ಷಾತ್ಕಾರವನ್ನು ಉಂಟುಮಾಡದುದಾಗಿಯೂ, ರಸಸಾಕ್ಷಾತ್ಕಾರವನ್ನು ಉಂಟುಮಾಡುವುದಾಗಿಯೂ ಇರುವ ಇಂದ್ರಿಯವು ರಸನೇಂದ್ರಿಯವಾಗುವುದು ; ಸ್ಪರ್ಶಸಾಕ್ಷಾತ್ಕಾರವನ್ನು ಉಂಟುಮಾಡದುದಾಗಿಯೂ, ರಸಸಾಕ್ಷಾತ್ಕಾರವನ್ನು ಉಂಟುಮಾಡುವುದಾಗಿಯೂ ಇರುವ ಇಂದ್ರಿಯವು ರಸನೇಂದ್ರಿಯವಾಗುವುದು ; ರೂಪಸಾಕ್ಷಾತ್ಕಾರವನ್ನು ಉಂಟುಮಾಡದುದಾಗಿಯೂ, ರಸಸಾಕ್ಷಾತ್ಕಾರವನ್ನು ಉಂಟುಮಾಡುವುದಾಗಿಯೂ ಇರುವ ಇಂದ್ರಿಯವು ರಸನೇಂದ್ರಿಯವಾಗುವುದು ; ಗಂಧಸಾಕ್ಷಾತ್ಕಾರವನ್ನು ಉಂಟುಮಾಡದುದಾಗಿಯೂ, ರಸಸಾಕ್ಷಾತ್ಕಾರವನ್ನು ಉಂಟುಮಾಡುವುದಾಗಿಯೂ ಇರುವ ಇಂದ್ರಿಯವು ರಸನೇಂದ್ರಿಯವಾಗುವುದು ; ಹೀಗೆ ನಾಲ್ಕು ಲಕ್ಷಣಗಳಾಗಿ ಪರ್ಯವಸಾನಮಾಡಬೇಕು. ನಾಲ್ಕರಲ್ಲಿಯೂ ಪದಪ್ರಯೋಜನವು ಪೂರ್ವದಂತೆಯೇ.

### ೯೮ ಪ್ರಾಕೃತಘ್ರಾಣೇಂದ್ರಿಯಲಕ್ಷಣಂ.

ಶಬ್ದಾದಿಪಂಚಕದಲ್ಲಿ ಅಡಗಿರುವ ಗಂಧೇತರದ ಸಾಕ್ಷಾತ್ಕಾರವನ್ನು ಉಂಟುಮಾಡದುದಾಗಿಯೂ, ಗಂಧದ ಸಾಕ್ಷಾತ್ಕಾರವನ್ನು ಉಂಟುಮಾಡುವುದಾಗಿಯೂ ಇರುವ ಇಂದ್ರಿಯವು ಪ್ರಾಕೃತಘ್ರಾಣೇಂದ್ರಿಯವೆನಿಸಿಕೊಳ್ಳುವುದು.

ಈ ಲಕ್ಷಣದ ಪರ್ಯವಸಾನವೇನೆಂದರೆ— ಶಬ್ದಸಾಕ್ಷಾತ್ಕಾರವನ್ನು ಉಂಟು ಮಾಡದುದಾಗಿಯೂ, ಗಂಧಸಾಕ್ಷಾತ್ಕಾರವನ್ನು ಉಂಟುಮಾಡುವುದಾಗಿಯೂ ಇರುವ ಇಂದ್ರಿಯವು ಘ್ರಾಣೇಂದ್ರಿಯವೆನಿಸಿಕೊಳ್ಳುವುದು ; ಸ್ಪರ್ಶಸಾಕ್ಷಾತ್ಕಾರವನ್ನು ಉಂಟುಮಾಡದುದಾಗಿಯೂ, ಗಂಧಸಾಕ್ಷಾತ್ಕಾರವನ್ನು ಉಂಟುಮಾಡುವುದಾಗಿಯೂ ಇರುವ ಇಂದ್ರಿಯವು ಘ್ರಾಣೇಂದ್ರಿಯವಾಗುವುದು ; ರೂಪಸಾಕ್ಷಾತ್ಕಾರವನ್ನು ಉಂಟುಮಾಡದುದಾಗಿಯೂ, ಗಂಧಸಾಕ್ಷಾತ್ಕಾರವನ್ನು ಉಂಟುಮಾಡುವುದಾಗಿಯೂ ಇರುವ ಇಂದ್ರಿಯವು ಘ್ರಾಣೇಂದ್ರಿಯವಾಗುವುದು ; ರಸಸಾಕ್ಷಾತ್ಕಾರವನ್ನು ಉಂಟುಮಾಡದುದಾಗಿಯೂ, ಗಂಧಸಾಕ್ಷಾತ್ಕಾರವನ್ನು ಉಂಟುಮಾಡುವುದಾಗಿಯೂ ಇರುವ ಇಂದ್ರಿಯವು ಘ್ರಾಣೇಂದ್ರಿಯವಾಗುವುದು ; ಹೀಗೆ ನಾಲ್ಕು ಲಕ್ಷಣಗಳಾಗಿ ಪರ್ಯವಸಾನಮಾಡಬೇಕು. ನಾಲ್ಕರಲ್ಲಿಯೂ ಪದಪ್ರಯೋಜನವು ಪೂರ್ವದಂತೆಯೇ.

## ೯೯ ತ್ವಗಿಂದ್ರಿಯಸ್ಯ ಅಧಿಷ್ಠಾನಾದಿವಿವೇಕಃ.

ಇವುಗಳಲ್ಲಿ—ತ್ವಗಿಂದ್ರಿಯವು ಶರೀರದ ಎಲ್ಲಾ ಭಾಗಗಳನ್ನೂ ವ್ಯಾಪಿಸಿಕೊಂಡಿರುವುದು. ಹಾಗಾದರೆ ಶರೀರದ ಎಲ್ಲಾ ಭಾಗಗಳಲ್ಲಿಯೂ ಸ್ಪರ್ಶವು ಒಂದೇಸಮವಾಗಿ ತಿಳಿಯಬೇಕಲ್ಲವೆ? ಹಾಗಿಲ್ಲದೆ ಕಣ್ಣಿನಲ್ಲಿಯೂ ಅಂಗಾಲಿನಲ್ಲಿಯೂ ಉಷ್ಣಸ್ಪರ್ಶವು ಹೆಚ್ಚಾಗಿ ಗ್ರಹಿಸಲ್ಪಡಲು ಕಾರಣವೇನು ? ಉಗುರು, ಕೂದಲು, ಹಲ್ಲು ಈ ಭಾಗಗಳಲ್ಲಿ ಸ್ಪರ್ಶವೇ ತಿಳಿಯದಿರಲು ಕಾರಣವೇನು ? ಎಂದು ಆಶಂಕಿಸಬಾರದು. ಶರೀರದಲ್ಲಿರುವ ಪ್ರಾಣವಾಯುವಿನ ವ್ಯಾಪ್ತಿತಾರತಮ್ಯವೇ ಇದಕ್ಕೆ ಕಾರಣವಾಗಿರುವುದು. ಕಣ್ಣು, ಅಂಗಾಲು ಇವುಗಳಲ್ಲಿ ಪ್ರಾಣಶಕ್ತಿ ಹೆಚ್ಚಾಗಿರುವುದರಿಂದ ಸ್ಪರ್ಶವು ಅತಿಶೀಘ್ರವಾಗಿಯೂ ಸ್ಪಷ್ಟವಾಗಿಯೂ ತಿಳಿವುದು. ಉಗುರು, ಕೂದಲು ಮುಂತಾದ ಕಡೆಗಳಲ್ಲಿ ಸ್ಪರ್ಶವು ಚೆನ್ನಾಗಿ ತಿಳಿಯದಿರುವುದಕ್ಕೆ ಆಕಡೆಗಳಲ್ಲಿ ಪ್ರಾಣವಾಯುವಿನ ಮಾಂದ್ಯವೇ ಕಾರಣವಾಗಿರುವುದು. ಆಕಡೆಗಳಲ್ಲಿಯೂ ಸ್ವಲ್ಪಮಟ್ಟಿಗೆ ಪ್ರಾಣವಾಯು ಇದ್ದೇ ಇರುವುದೆಂಬುದನ್ನು ನ್ಯಾಯತತ್ತ್ವವೆಂಬ ಗ್ರಂಥದಲ್ಲಿ ಶ್ರೀಮನ್ನಾಥಮುನಿಗಳು ಅಪ್ಪಣೆಕೊಡಿಸಿರುವರು.

## ೧೦೦ ತ್ವಗಿಂದ್ರಿಯಸ್ಯ ಸ್ಪರ್ಶದ್ರವ್ಯೋಭಯಗ್ರಾಹಕತ್ವಂ.

ಇಂಥ ತ್ವಗಿಂದ್ರಿಯವು ಸ್ಪರ್ಶವನ್ನು ಗ್ರಹಿಸುವುದರ ಮೂಲಕ ಸ್ಪರ್ಶಕ್ಕೆ ಆಶ್ರಯವಾದ ವಾಯು, ಅಗ್ನಿ, ಜಲ, ಪೃಥಿವಿ ಎಂಬ ನಾಲ್ಕು ಭೂತಗಳನ್ನೂ ಅವುಗಳ ವಿಕಾರವಾದ ಘಟಾದಿದ್ರವ್ಯಗಳನ್ನೂ ಗ್ರಹಿಸುವುದು.

## ೧೧೧ ಚಕ್ಷುರ್ಜಿಹ್ವಾಘ್ರಾಣಾನಾಮಧಿಷ್ಠಾನಾದಿವಿವೇಕಃ.

ಚಕ್ಷುರಿಂದ್ರಿಯಕ್ಕೆ ನೇತ್ರಗೋಳಕವೂ, ರಸನೇಂದ್ರಿಯಕ್ಕೆ ನಾಲಗೆಯ ತುದಿಯೂ ದವಡೆಯೂ, ಘ್ರಾಣೇಂದ್ರಿಯಕ್ಕೆ ಮೂಗಿನ ಅಗ್ರಭಾಗವೂ ಅಧಿಷ್ಠಾನವಾಗಿರುವುವು. ಆನೆಗೆ ಮಾತ್ರ ಪಾಣೀಂದ್ರಿಯವೂ ಘ್ರಾಣೇಂದ್ರಿಯವೂ ಸಹ ಅದರ ತುಂಬಿಕೆಯ ತುದಿಯೆಂಬ ಒಂದೇ ಅಧಿಷ್ಠಾನದಲ್ಲಿ ಇರುವುವು. ಆದಕಾರಣ ಕೈಯಿಂದ ಗಂಧವನ್ನು ತಿಳಿದುಕೊಳ್ಳುವುದಕ್ಕೆ ಆನೆಗೆ ಮಾತ್ರವೇ ಶಕ್ತಿಯಿರುವುದು. ಆ ಆ ಪ್ರದೇಶಗಳಲ್ಲಿಯೇ ಆ ಆ ಇಂದ್ರಿಯಗಳು ಇರುವುವೆಂಬ ನಿಯಮವು ಜಂಗಮಶರೀರದಲ್ಲಿ ಮಾತ್ರವೇ ಹೊರತು ಸ್ಥಾವರಶರೀರದಲ್ಲಿ ಇಲ್ಲ.

## ೧೧೨ ಚಕ್ಷುರಿಂದ್ರಿಯಸ್ಯ ರೂಪತದಾಶ್ರಯದ್ರವ್ಯೋಭಯಗ್ರಾಹಕತ್ವಂ.

ಚಕ್ಷುರಿಂದ್ರಿಯವು ವಾಯುವೊಂದನ್ನು ಬಿಟ್ಟು ಉಳಿದ ನಾಲ್ಕು ಭೂತಗಳನ್ನೂ ಅವುಗಳ ರೂಪವನ್ನೂ ಗ್ರಹಿಸುವುದು. ನೀಲರೂಪವು ಪ್ರತ್ಯಕ್ಷವಾಗಿರುವುದರಿಂದ--ಆಕಾಶದಲ್ಲಿ ರೂಪವಿಲ್ಲವೆಂದೂ, ಆಕಾಶವು ಚಕ್ಷುರಿಂದ್ರಿಯಕ್ಕೆ ಗೋಚರವಲ್ಲವೆಂದೂ ಭ್ರಾಂತಿಗೊಳ್ಳಬಾರದು. ಚಕ್ಷುರಿಂದ್ರಿಯದ ತೇಜಸ್ಸಿಗೆ ಪ್ರಸರಣಶಕ್ತಿಯಿರುವುದರಿಂದ ದೂರದಲ್ಲಿರುವ ಪದಾರ್ಥದೊಡನೆಯೂ ಅದಕ್ಕೆ ಸಂಬಂಧವುಂಟಾಗಲು ಯಾವ ಅಡ್ಡಿಯೂ ಇಲ್ಲವಾದುದರಿಂದ ದೂರಸ್ಥವಾದ ಪದಾರ್ಥವನ್ನೂ ಗ್ರಹಿಸಬಹುದು.

## ೧೧೩ ಪ್ರತಿಬಿಂಬಂ ನಾಮ ನ ಬಿಂಬಾತ್ ವಸ್ತ್ವಂತರಂ.

ಚಕ್ಷುರಿಂದ್ರಿಯವು--ತನ್ನ ಇದಿರಿಗಿರುವ ಯಾವ ಪದಾರ್ಥದೊಡನೆ ಸಂಬದ್ಧವಾಗುವುದೋ ಆ ಪದಾರ್ಥವನ್ನು ಮಾತ್ರವೇ ಗ್ರಹಿಸುವುದೆಂಬ ನಿಯಮವನ್ನು ಒಪ್ಪಿಕೊಳ್ಳುವುದಾದರೆ ಕನ್ನಡಿಯನ್ನು ನೋಡುವ ಕಾಲದಲ್ಲಿ ಕತ್ತಿನಲ್ಲಿರುವ ಮುಖವು ಕಾಣಬರುವುದು ಎಲ್ಲರಿಗೂ ಅನುಭವಸಿದ್ಧವಾಗಿರುವುದರಿಂದ ಇದು ಹೇಗೆ ಸಂಗತವಾದೀತು? ಏತಕ್ಕೆಂದರೆ—ಕಣ್ಣಿನ ಸಂಬಂಧವನ್ನು ಪಡೆದಿರುವ ಕನ್ನಡಿಯಲ್ಲಿ ಮುಖವಿಲ್ಲ. ಮುಖವಿರುವ ಕತ್ತಿನೊಡನೆ ಕಣ್ಣಿಗೆ ಸಂಬಂಧವಿಲ್ಲ. ಹೀಗೆ ಮುಖದೊಡನೆ ಸಂಬಂಧವನ್ನು ಪಡೆಯದಿರುವ ಕಣ್ಣು ಮುಖವನ್ನು ಗ್ರಹಿಸುವುದಾದರೆ ಉಕ್ತವಾದ ನಿಯಮಕ್ಕೆ ಭಂಗಬರುವುದಿಲ್ಲವೆ? ಅಥವಾ ಕನ್ನಡಿಯಲ್ಲಿ ಪ್ರತಿಬಿಂಬವೆಂಬ ಮತ್ತೊಂದು ಪದಾರ್ಥವನ್ನು ಒಪ್ಪಿಕೊಳ್ಳಬೇಕಾಗುವುದಿಲ್ಲವೆ?

ಇಲ್ಲ—ಭಂಗವೂ ಬರುವುದಿಲ್ಲ; ಪ್ರತಿಬಿಂಬವೆಂಬ ಪದಾರ್ಥವನ್ನೂ ಒಪ್ಪಿಕೊಳ್ಳಬೇಕಾಗುವುದಿಲ್ಲ. ಚಕ್ಷುರಿಂದ್ರಿಯದ ತೇಜಸ್ಸು ತನ್ನ ಸ್ಥಾನದಿಂದ ಹೊರಟು

ತನಗೆ ಅಭಿಮುಖವಾಗಿರುವ ಸ್ವಚ್ಛಪದಾರ್ಥದ ಮೇಲೆ ಯಾವಾಗ ಬೀಳುವುದೋ ಆವಾಗ ಅದು ಆ ಸ್ವಚ್ಛಪದಾರ್ಥದಿಂದ ಹಿಂದಿರುಗಿಸಲ್ಪಟ್ಟುದಾಗಿ ತನ್ನ ಸ್ಥಾನವನ್ನು ಕುರಿತು ಬರುವಾಗ ತನಗೆ ಅಭಿಮುಖವಾಗಿರುವ ಮುಖದೊಡನೆ ಸಂಬದ್ಧವಾಗಿ ಆ ಮುಖವನ್ನೇ ಗ್ರಹಿಸುವುದು. ಆದಕಾರಣ ನಿಯಮಕ್ಕೆ ಭಂಗವಿಲ್ಲ.

ಕನ್ನಡಿಯಿಂದ ಹೊರಟು ಬರುವಕಾಲದಲ್ಲಿ ಅತಿವೇಗದಿಂದ ತನ್ನ ಸ್ಥಾನವನ್ನು ತಲಪುವ ಸಂಭ್ರಮದಲ್ಲಿ ಕನ್ನಡಿಗೂ ಮುಖಕ್ಕೂ ಇರುವ ಅಂತರಾಳವನ್ನು ಗ್ರಹಿಸುವುದಕ್ಕೆ ಅವಕಾಶವಿಲ್ಲವಾದಕಾರಣ ಕನ್ನಡಿಯಲ್ಲಿಯೇ ಮುಖವಿರುವಂತೆ ತೋರುವುದು. ಆಗ ಅಂಥ ಮುಖವೇ ಪ್ರತಿಬಿಂಬವೆಂಬ ಹೆಸರನ್ನು ಪಡೆವುದಲ್ಲದೆ ಪ್ರತಿಬಿಂಬವೆಂಬ ವಾಸ್ತವವಾದ ಪದಾರ್ಥವೊಂದಿಲ್ಲ. ಪ್ರತಿಯಾಗಿ ಗ್ರಹಿಸಲ್ಪಡುವ ಬಿಂಬವೇ ಪ್ರತಿಬಿಂಬವೆಂದು ವ್ಯವಹರಿಸಲ್ಪಡುವುದು.

ಸ್ಫಟಿಕ, ಗಾಜು ಮುಂತಾದ ಪದಾರ್ಥಗಳಲ್ಲಿ ಚಕ್ಷುರಿಂದ್ರಿಯದ ತೇಜಸ್ಸು ನುಗ್ಗಿಹೋಗುವುದಕ್ಕೆ ಯೋಗ್ಯವಾದಷ್ಟು ಅತಿಸೂಕ್ಷ್ಮವಾದ ರಂಧ್ರಗಳಿರುವುವೆಂದು ಒಪ್ಪಿಕೊಳ್ಳಬೇಕು. ಏತಕ್ಕೆಂದರೆ— ಮಧ್ಯದಲ್ಲಿ ಸ್ಫಟಿಕಾದಿಗಳಿಂದ ವ್ಯವಧಾನವುಂಟಾಗಿದ್ದರೂ ಆಚೆಯ ಭಾಗದಲ್ಲಿರುವ ಪದಾರ್ಥಗಳನ್ನು ನಾವು ನೋಡುತ್ತಿರುವುದೂ, ಮತ್ತು ಸ್ಫಟಿಕಾದಿಗಳಿಂದ ಆಚ್ಛಾದಿಸಲ್ಪಟ್ಟ ದೀಪದ ಪ್ರಭೆ ಹೊರಗೆ ಹೊರಡುತ್ತಿರುವುದೂ ಪ್ರತ್ಯಕ್ಷಸಿದ್ಧವಷ್ಟೆ

## ೧೦೪ ಚಕ್ಷುರಿಂದ್ರಿಯಸ್ಯ ಪ್ರಾಪ್ಯಕಾರಿತ್ವಂ.

ಆ ಆ ಪದಾರ್ಥಗಳೆಡೆಗೆ ಚಕ್ಷುರಿಂದ್ರಿಯವೇ ಹೋಗಿ ಅವುಗಳು ಜ್ಞಾನಕ್ಕೆ ಗೋಚರವಾದಮೇಲೆ ಹಿಂದಿರುಗಿ ಬರುವುದಲ್ಲದೆ ಆ ಆ ಪದಾರ್ಥಗಳೇ ಅಥವಾ ಅವುಗಳ ಪ್ರತಿಬಿಂಬಗಳೇ ಕಣ್ಣಿನೊಳಗೆ ನುಗ್ಗುವುದಿಲ್ಲ. ಇಷ್ಟೊಂದು ಚಿಕ್ಕದಾದ ಕಣ್ಣಿನಲ್ಲಿ ಬಲು ದೊಡ್ಡದಾದ ಸಮುದ್ರ, ಪರ್ವತ, ಪೃಥಿವಿ ಮೊದಲಾದ ಪದಾರ್ಥಗಳು ನುಗ್ಗುತ್ತವೆಯೆಂದು ಮೂಢನೂ ಸಹ ಹೇಳಲಾರನು. ಅವುಗಳ ಪ್ರತಿಬಿಂಬವು ಕಣ್ಣಿನೊಳಗೆ ಹೋಗುತ್ತದೆಯೆಂದು ಹೇಳಲೂ ಅವಕಾಶವಿಲ್ಲ. ಪ್ರತಿಬಿಂಬವೆಂಬ ಪದಾರ್ಥವೇ ಪ್ರಪಂಚದಲ್ಲಿ ಇಲ್ಲವೆಂಬುದನ್ನು ಮೊದಲೇ ತೋರಿಸಿರುವೆವಷ್ಟೆ.

ಆದುದರಿಂದಲೇ ಆ ಆ ಪದಾರ್ಥಗಳನ್ನು ಗ್ರಹಿಸುವುದಕ್ಕೆ ಸಂಪೂರ್ಣವಾದ ಸಾಮರ್ಥ್ಯವನ್ನು ಪಡೆದಿರುವ ಚಕ್ಷುರಿಂದ್ರಿಯಕ್ಕೆ ಪದಾರ್ಥಗ್ರಹಣವುಂಟಾಗುವ ಕಾಲದಲ್ಲಿ ಗ್ರಹಣಕ್ಕೆ ಅಡ್ಡಿಮಾಡುವ ಅಂಧಕಾರವನ್ನು ಹೋಗಲಾಡಿಸುವುದರ

ಮೂಲಕ ಪ್ರತಿಬಂಧಕನಿರಾಸವೆಂಬ ಉಪಕಾರವನ್ನು ಬೆಳಕು ಮಾಡುವುದೇ ಹೊರತು ತಾನೇ ಸ್ವತಂತ್ರವಾಗಿ ಆ ಆ ಪದಾರ್ಥಗಳನ್ನಾಗಲಿ ಅವುಗಳ ಪ್ರತಿಬಿಂಬಗಳನ್ನಾಗಲಿ ಕಣ್ಣಿನೊಳಗೆ ನುಗ್ಗಿಸುವುದಿಲ್ಲ.

ಇಂದ್ರಿಯಗಳ ಮೂಲಕವಾಗಿ ಜ್ಞಾನವೇ ಹೊರಗೆ ಪ್ರಸರಿಸಿ ಆ ಆ ಪದಾರ್ಥಗಳೊಡನೆ ಸಂಯೋಗವನ್ನು ಪಡೆದು. ಅವುಗಳನ್ನು ಪ್ರಕಾಶಪಡಿಸುವುದೆಂಬ ಅಂಶವನ್ನೂ, ಬೆಳಕೆಂಬುದು ಅಂಧಕಾರವೆಂಬ ಪ್ರತಿಬಂಧಕವನ್ನು ಹೋಗಲಾಡಿಸಿ ಚರಿತಾರ್ಥವಾಗುವುದಲ್ಲದೆ ಪದಾರ್ಥಗಳನ್ನು ತಾನೇ ಪ್ರಕಾಶಪಡಿಸುವುದಿಲ್ಲವೆಂಬ ಅಂಶವನ್ನೂ ಶ್ರೀಭಾಷ್ಯಕಾರರು ಅನೇಕಸ್ಥಳಗಳಲ್ಲಿ ಅತಿಸ್ಫುಟವಾಗಿ ನಿರೂಪಿಸಿ ತೋರಿಸಿರುವರು. ಅವುಗಳೊಳಗೆ ಒಂದೆರಡು ಸ್ಥಳಗಳನ್ನು ಇಲ್ಲಿ ಉದಾಹರಿಸುವೆವು—

ಭಗವದ್ಗೀತೆಯ ಹದಿಮೂರನೆಯ ಅಧ್ಯಾಯದಲ್ಲಿ—

ಜ್ಯೋತಿಷಾಮಪಿ ತಜ್ಜ್ಯೋತಿಸ್ತಮಸಃ ಪರಮುಚ್ಯತೇ ।
ಜ್ಞಾನಂ ಜ್ಞೇಯಂ ಜ್ಞಾನಗಮ್ಯಂ ಹೃದಿ ಸರ್ವಸ್ಯ ವಿಷ್ಠಿತಂ ॥

ಎಂಬ ಹದಿನೇಳನೆಯ ಶ್ಲೋಕದ ಭಾಷ್ಯದಲ್ಲಿ— '' ಜ್ಯೋತಿಷಾಂ-ದೀಪಾದಿತ್ಯಮಣಿಪ್ರಭೃತೀನಾಮಪಿ ತದೇವ-ಜ್ಯೋತಿಃ-ಪ್ರಕಾಶಕಂ ದೀಪಾದಿತ್ಯಾದೀನಪ್ಯಾತ್ಮಪ್ರಭಾರೂಪಂ ಜ್ಞಾನಮೇವ ಪ್ರಕಾಶಯತಿ. ದೀಪಾದಯಸ್ತು ವಿಷಯೇಂದ್ರಿಯಸನ್ನಿಕರ್ಷವಿರೋಧಿಸಂತಮಸನಿರಸನಮಾತ್ರಂ ಕುರ್ವತೇ; ತಾವನ್ಮಾತ್ರೇಣ ತೇಷಾಂ ಪ್ರಕಾಶಕತ್ವಂ'' ಎಂದು. ಗೀತಾಭಾಷ್ಯಸೂಕ್ತಿಯಿರುವುದು.

ಮತ್ತು ಹದಿನೈದನೆಯ ಅಧ್ಯಾಯದ—

ನ ತದ್ಭಾಸಯತೇ ಸೂರ್ಯೋ ನ ಶಶಾಂಕೋ ನ ಪಾವಕಃ ।
ಯದ್ಗತ್ವಾ ನ ನಿವರ್ತಂತೇ ತದ್ಧಾಮ ಪರಮಂ ಮಮ ॥

ಎಂಬ ಆರನೆಯ ಶ್ಲೋಕದ ಭಾಷ್ಯದಲ್ಲಿ--'' ತತ್ ಆತ್ಮಜ್ಯೋತಿಃ ನ ಸೂರ್ಯೋ ಭಾಸಯತೇ ನ ಶಶಾಂಕೋ ನ ಪಾವಕಶ್ಚ. ಜ್ಞಾನಮೇವ ಹಿ ಸರ್ವಸ್ಯ ಪ್ರಕಾಶಕಂ. ಬಾಹ್ಯಾನಿ ತು ಜ್ಯೋತೀಂಷಿ ವಿಷಯೇಂದ್ರಿಯಸಂಬಂಧವಿರೋಧಿತಮೋನಿರಸನದ್ವಾರೇಣ ಉಪಕಾರಕಾಣಿ'' ಎಂದು ಭಾಷ್ಯಕಾರರ ಶ್ರೀಸೂಕ್ತಿಯಿರುವುದು.

ವೇದವಿದ್ವೇಷಿಗಳಾದ ನಾಸ್ತಿಕರಿಂದ ಬರೆಯಲ್ಪಟ್ಟ ಕೆಲವು ದುರ್ಗ್ರಂಥಗಳ ಅವಲೋಕನಮಾತ್ರದಿಂದಲೇ ತಮ್ಮನ್ನು ಪ್ರಾಜ್ಞರೆಂದು ಭಾವಿಸಿ ನಿಷ್ಫಲವಾದ ದುರಭಿಮಾನವನ್ನು ದುರ್ಯೋಧನನಂತೆ ವಹಿಸುತ್ತ ಈ ವಿಷಯದಲ್ಲ ಬುದ್ಧಿಮೋಸವನ್ನು ಹೊಂದಿರುವ ಅರ್ವಾಚೀನರಾದ ಕೆಲವರು—ತಾವು ತಿಳಿದುಕೊಂಡಿರುವುದೇ ಯಥಾ

ರ್ಥವೆಂದು ತಾವೇ ನಿರ್ಧರಿಸಿಕೊಂಡು ಆಪ್ತತಮನಾಗಿಯೂ ಸರ್ವಭೂತಸುಹೃತ್ತಾಗಿಯೂ ಇರುವ ಗೀತಾಚಾರ್ಯನ ಉಪದೇಶವನ್ನೂ ತಿರಸ್ಕರಿಸಿ, ಸರ್ವಜ್ಞರಾದ ಮಹರ್ಷಿಗಳಲ್ಲಿಯೂ ಪೂರ್ವಾಚಾರ್ಯರುಗಳಲ್ಲಿಯೂ ಅಜ್ಞಾನವನ್ನು ಆರೋಪಿಸುತ್ತ, ಸದಾಚಾರ್ಯೋಪದೇಶದಿಂದ ಜ್ಞಾನಶುದ್ಧಿಯನ್ನು ಪಡೆವುದಕ್ಕೂ ಲೇಶಮಾತ್ರವೂ ಅವಕಾಶವನ್ನು ಕೊಡದವರಾಗಿ ಕಾಲವನ್ನು ಕಳೆಯುತ್ತಿರುವರು. ಇಂಥವರು—

ಯಃ ಶಾಸ್ತ್ರವಿಧಿಮುತ್ಸೃಜ್ಯ ವರ್ತತೇ ಕಾಮಕಾರತಃ ।
ನ ಸ ಸಿದ್ಧಿಮವಾಪ್ನೋತಿ ನ ಸುಖಂ ನ ಪರಾಂ ಗತಿಂ ॥
ತಸ್ಮಾಚ್ಛಾಸ್ತ್ರಂ ಪ್ರಮಾಣಂ ತೇ ಕಾರ್ಯಾಕಾರ್ಯವ್ಯವಸ್ಥಿತೌ ।
ತಾನಹಂ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್ ।
ಕ್ಷಿಪಾಮ್ಯಜಸ್ರಮಶುಭಾನಾಸುರೀಷ್ವೇವ ಯೋನಿಷು ॥

ಎಂದು ಹೇಳಿದ ಭಗವನ್ನಿಗ್ರಹಕ್ಕೆ ಪಾತ್ರರಾಗಿ ವೇದಬಾಹ್ಯರೆನಿಸಿಕೊಂಡು ಆಸುರಪ್ರಕೃತಿಗಳಾಗಿ ಅಧೋಗತಿಯನ್ನೇ ಹೊಂದುವರಲ್ಲದೆ ಆಸ್ತಿಕಕೋಟಿಯಲ್ಲಿ ಸೇರಿದವರಾಗಲಾರರು.

ಬಿಂಬವ್ಯತಿರಿಕ್ತವಾದ ಪ್ರತಿಬಿಂಬವಿಲ್ಲವೆಂಬ ವಿಷಯದಲ್ಲಿ ಕುಮಾರಿಲಭಟ್ಟರೇ ಮೊದಲಾದ ಮಹಾಮೀಮಾಂಸಕರು ಬರೆದಿರುವ ವಾದಗಳು ಅತಿವಿಪುಲವಾದುದರಿಂದ ಅವುಗಳನ್ನು ಈ ಸಂಕ್ಷೇಪಗ್ರಂಥದಲ್ಲಿ ಬರೆಯಲಿಲ್ಲ ಅಂತು ಇಂದ್ರಿಯಗಳ ಮೂಲಕವಾಗಿ ಜ್ಞಾನವೇ ಹೊರಗೆ ಪ್ರಸರಿಸಿ ಪದಾರ್ಥಗಳನ್ನು ಗ್ರಹಿಸುವುದೆಂಬುದು ವೈದಿಕಸಿದ್ಧಾಂತವಾಗಿರುವುದು.

ಆಯುರ್ವೇದವನ್ನನುಸರಿಸಿ ಅಂಜನ ಮೊದಲಾದ ಕೆಲವು ಸಿದ್ಧೌಷಧಗಳಿಂದ ನೇತ್ರಕ್ಕೆ ಸಂಸ್ಕಾರವನ್ನು ಉಂಟುಮಾಡುವುದಾದರೆ ಅಂಥ ಚಕ್ಷುರಿಂದ್ರಿಯದ ತೇಜಸ್ಸು ಭೂಮಿಯ ಒಳಭಾದಲ್ಲಿಯೂ ಪ್ರವೇಶಿಸಿ ಅಲ್ಲಿರುವ ನಿಧಿ ಮುಂತಾದುದನ್ನು ಗ್ರಹಿಸಲು ಸಮರ್ಥವಾಗುವುದು.

ರಸನೇಂದ್ರಿಯವು ತಾನು ಯಾವ ದ್ರವ್ಯದೊಡನೆ ಸಂಯುಕ್ತವಾಗುವುದೋ ಅದರಲ್ಲಿರುವ ರಸವನ್ನೂ, ಘ್ರಾಣೇಂದ್ರಿಯವು ತಾನು ಯಾವ ದ್ರವ್ಯದೊಡನೆ ಸಂಯುಕ್ತವಾಗುವುದೋ ಅದರಲ್ಲಿರುವ ಗಂಧವನ್ನೂ ಗ್ರಹಿಸುವುವು

ಅಂತು ಇಂದ್ರಿಯಗಳಿಂದ ಆ ಆ ಪದಾರ್ಥಗಳ ಗ್ರಹಣವುಂಟಾಗುವ ಕಾಲದಲ್ಲಿ ಸಂಯೋಗಸಂಬಂಧವಾಗಲಿ, ಸಂಯುಕ್ತಾಶ್ರಯತ್ವಸಂಬಂಧವಾಗಲಿ ಈ ಎರಡು ಸಂಬಂಧಗಳಲ್ಲದೆ ಬೇರೊಂದು ಸಂಬಂಧವೂ ಬೇಕಾಗಿಲ್ಲ.

### ೧೦೫ ಇಂದ್ರಿಯೇಷು ತ್ರಯಾಣಾಂ ಷಣ್ಣಾಮಪಿ ವಾ ದ್ರವ್ಯಗ್ರಾಹಕತ್ವಂ.

ಇದುವರೆಗೂ ಹೇಳಿದುದರ ಫಲಿತಾಂಶವೇನಾಯಿತೆಂದರೆ— ಮನಇಂದ್ರಿಯ, ತ್ವಗಿಂದ್ರಿಯ, ಚಕ್ಷುರಿಂದ್ರಿಯ ಈ ಮೂರೂ ದ್ರವ್ಯಾದ್ರವ್ಯಗಳೆರಡನ್ನೂ ಗ್ರಹಿಸುವ ಶಕ್ತಿಯುಳ್ಳವಾಗಿರುವುವು; ಶ್ರೋತ್ರೇಂದ್ರಿಯ, ರಸನೇಂದ್ರಿಯ, ಘ್ರಾಣೇಂದ್ರಿಯ ಈ ಮೂರೂ ಶಬ್ದ, ರಸ, ಗಂಧ ಎಂಬ ಅದ್ರವ್ಯಗಳನ್ನು ಮಾತ್ರ ಗ್ರಹಿಸುವುವಾಗಿರುವುವು; ಅಥವಾ ಈ ಆರು ಜ್ಞಾನೇಂದ್ರಿಯಗಳೂ ಕಾಲವೆಂಬ ದ್ರವ್ಯದೊಡನೆ ಕೂಡಿಯೇ ಇರುವ ಪದಾರ್ಥಗಳನ್ನು ಗ್ರಹಿಸುವುವಾದುದರಿಂದ ಎಲ್ಲಾ ಜ್ಞಾನೇಂದ್ರಿಯಗಳೂ ದ್ರವ್ಯಾದ್ರವ್ಯಗಳೆರಡನ್ನೂ ಗ್ರಹಿಸುವುವೆಂದು ಹೇಳುವುದರಲ್ಲಿ ತಡೆಯಿಲ್ಲ.

### ೧೦೬ ಪ್ರಾಕೃತೇಂದ್ರಿಯಲಕ್ಷಣಾನಾಮಪ್ರಾಕೃತೇಂದ್ರಿಯೇಷು ನಾತಿವ್ಯಾಪ್ತಿಃ.

"ಪ್ರಾಕೃತವಾದ ಇಂದ್ರಿಯಗಳಂತೆ ಅಪ್ರಾಕೃತವಾದ ಇಂದ್ರಿಯಗಳೂ ಆ ಆ ವಿಷಯಗಳನ್ನು ಸಾಕ್ಷಾತ್ಕರಿಸುವುದಕ್ಕೆ ಸಾಧನಗಳಾಗಿರುವುದರಿಂದ ಪ್ರಾಕೃತೇಂದ್ರಿಯಗಳಿಗೆ ಹೇಳಿದ ಲಕ್ಷಣವು ಅಪ್ರಾಕೃತೇಂದ್ರಿಯಗಳಲ್ಲಿಯೂ ವ್ಯಾಪಿಸಿ ಅತಿವ್ಯಾಪ್ತಿ ದೋಷಕ್ಕೆ ಅವಕಾಶವುಂಟಾಗಿರುವುದು" ಎಂದು ಆಶಂಕಿಸಬಾರದು.

ಸಂಸಾರಾವಸ್ಥೆಯಲ್ಲಿ ಜೀವಾತ್ಮನ ಜ್ಞಾನವು ಕರ್ಮಾಧೀನವಾಗಿ ಸಂಕೋಚವಿಕಾಸಗಳೆಂಬ ಅವಸ್ಥೆಗಳಿಗೆ ಭಾಗಿಯಾಗಿರುವುದರಿಂದ ಅಂಥ ಜ್ಞಾನವು ಪ್ರಸರಿಸುವುದಕ್ಕೆ ಇಂದ್ರಿಯಗಳೆಂಬ ದ್ವಾರಗಳ ಅಪೇಕ್ಷೆಯೂ, ಆ ಆ ಇಂದ್ರಿಯಗಳ ಮೂಲಕವೇ ಆ ಆ ವಿಷಯಗಳನ್ನು ಗ್ರಹಿಸಬೇಕೆಂಬ ನಿರ್ಬಂಧವೂ ಉಂಟು.

ಮುಕ್ತಾವಸ್ಥೆಯಲ್ಲಿಯಾದರೋ ಈಶ್ವರನ ಜ್ಞಾನದಂತೆಯೂ ನಿತ್ಯರ ಜ್ಞಾನದಂತೆಯೂ ಮುಕ್ತರ ಜ್ಞಾನವೂ ಕರ್ಮಕ್ಕೆ ಅಧೀನವಾಗದೆಯೂ, ಸಂಕೋಚವಿಕಾಸಗಳೆಂಬ ಅವಸ್ಥೆಗಳಿಗೆ ಭಾಗಿಯಾಗದೆಯೂ ಸ್ವಾಭಾವಿಕವಾದ ವ್ಯಾಪಕತ್ವಸ್ವಭಾವಕ್ಕೆ ತಡೆಯಿಲ್ಲದುದಾಗಿ ಇಂದ್ರಿಯಾಪೇಕ್ಷೆ ಇಲ್ಲದೆ ಸ್ವತಂತ್ರವಾಗಿಯೇ ಎಲ್ಲಾ ವಿಷಯಗಳಲ್ಲಿಯೂ ಎಲ್ಲಾ ಕಾಲದಲ್ಲಿಯೂ ಪ್ರಸರಿಸುವುದಾದುದರಿಂದ ಆ ಆ ಇಂದ್ರಿಯಗಳ ಮೂಲಕವಾಗಿಯೇ ಆ ಆ ವಿಷಯಗಳ ಜ್ಞಾನವುಂಟಾಗಬೇಕೆಂಬ ನಿರ್ಬಂಧವು ಅವರಿಗೆ ಇಲ್ಲವಾದಕಾರಣ ಪ್ರಾಕೃತೇಂದ್ರಿಯಲಕ್ಷಣಕ್ಕೆ ಅಪ್ರಾಕೃತೇಂದ್ರಿಯದಲ್ಲಿ ಅತಿವ್ಯಾಪ್ತಿ ಉಂಟೆಂದು ಆಲೋಚಿಸುವುದಕ್ಕೂ ಅವಕಾಶವಿಲ್ಲ.

"ಇಂದ್ರಿಯಾಪೇಕ್ಷೆಯಿಲ್ಲದೆಯೇ ಜ್ಞಾನಪ್ರಸರಣವು ನಿತ್ಯಮುಕ್ತೇಶ್ವರರಿಗೆ ಇರುವುದಾದರೆ ಅಂಥವರಿಗೆ ಜ್ಞಾನೇಂದ್ರಿಯಗಳಿಂದ ಪ್ರಯೋಜನವಿಲ್ಲವಾದಕಾರಣ ಜ್ಞಾನೇಂದ್ರಿಯಗಳೇ ಅವರಿಗೆ ಇಲ್ಲವೆಂದು ಏಕೆ ಹೇಳಬಾರದು" ಎಂದು ಆಶಂಕಿಸ ಲಾಗುವುದಿಲ್ಲ. ಏತಕ್ಕೆಂದರೆ— "ಮನಸೈತಾರ್ ಕಾಮಾರ್ ಪಶ್ಯನ್ ರಮತೇ" ಎಂದು ಮನಇಂದ್ರಿಯದ ಸದ್ಭಾವವನ್ನು ವಿಧಿಸಿರುವುದರಿಂದ ಅಂಥ ಮನಇಂದ್ರಿಯ ದೊಡನೆ ಸನ್ನಿಯೋಗಶಿಷ್ಟವಾದ ಜ್ಞಾನೇಂದ್ರಿಯಪಂಚಕವೂ ಅದರ ಜತೆಯಲ್ಲಿಯೇ ಪ್ರವರ್ತಿಸುವುದರಿಂದಲೂ, ಅದು ಇಲ್ಲದಿದ್ದರೆ ಮನಇಂದ್ರಿಯವೂ ನಿವರ್ತಿಸುವುದರಿಂ ದಲೂ, ಶರೀರದ ಲಕ್ಷಣಪೂರ್ತಿಗಾಗಿಯೂ ಅಲಂಕಾರಾರ್ಥವಾಗಿಯೂ ಜ್ಞಾನೇಂ ದ್ರಿಯಗಳಿರಬೇಕೆಂಬ ಔಚಿತ್ಯವಿರುವುದರಿಂದಲೂ, ಇಂದ್ರಿಯಗಳ ಮೂಲಕವಾಗಿಯೂ ಜ್ಞಾನಪ್ರಸರಣವನ್ನು ಪಡೆಯಬೇಕೆಂಬ ಇಚ್ಛೆ ಅವರಿಗೆ ಉಂಟಾದರೆ ಆಗ ಇಚ್ಛಾ ಭಂಗವುಂಟಾಗದಿರುವುದಕ್ಕಾಗಿ ಜ್ಞಾನೇಂದ್ರಿಯಗಳಿಗೆ ಆವಶ್ಯಕತೆಯಿರುವುದರಿಂದಲೂ, ನಿತ್ಯರಿಗೂ ಮುಕ್ತರಿಗೂ ಈಶ್ವರನಿಗೂ ಜ್ಞಾನೇಂದ್ರಿಯಗಳು ಉಂಟೆಂದು ಒಪ್ಪಿಕೊಳ್ಳ ಬೇಕಲ್ಲದೆ ಅವುಗಳ ಅಭಾವವನ್ನು ಹೇಳಲಾಗುವುದಿಲ್ಲ.

### ೧೦೭ ಅಥ ಅಪ್ರಾಕೃತಜ್ಞಾನೇಂದ್ರಿಯಲಕ್ಷಣಾನಿ.

ಇಂಥ ಅಪ್ರಾಕೃತೇಂದ್ರಿಯಗಳ ಲಕ್ಷಣಗಳನ್ನು ಸಂಕ್ಷೇಪವಾಗಿ ಬರೆಯುವೆವು.

೧ ಹೃದಯಪ್ರದೇಶದಲ್ಲಿರುವ ಅಪ್ರಾಕೃತವಾದ ಇಂದ್ರಿಯವು ಅಪ್ರಾಕೃತ ಮನಇಂದ್ರಿಯವೆನಿಸಿಕೊಳ್ಳುವುದು.

೨ ಕಿವಿಯ ಒಳಭಾಗದ ಶಾರೀರಪ್ರದೇಶವಿಶೇಷದಲ್ಲಿರುವ ಅಪ್ರಾಕೃತವಾದ ಇಂದ್ರಿಯವು ಅಪ್ರಾಕೃತಶ್ರೋತ್ರೇಂದ್ರಿಯವೆನಿಸಿಕೊಳ್ಳುವುದು.

೩ ಶರೀರದ ಸರ್ವಭಾಗದಲ್ಲಿಯೂ ಇರುವ ಅಪ್ರಾಕೃತವಾದ ಇಂದ್ರಿಯವು ಅಪ್ರಾಕೃತತ್ವಗಿಂದ್ರಿಯವೆನಿಸಿಕೊಳ್ಳುವುದು.

೪ ನೇತ್ರಗೋಳದಲ್ಲಿರುವ ಅಪ್ರಾಕೃತವಾದ ಇಂದ್ರಿಯವು ಅಪ್ರಾಕೃತ ಚಕ್ಷುರಿಂದ್ರಿಯವೆನಿಸಿಕೊಳ್ಳುವುದು.

೫ ಜಿಹ್ವಾಗ್ರದಲ್ಲಿಯೂ ದವಡೆಯಲ್ಲಿಯೂ ಇರುವ ಅಪ್ರಾಕೃತವಾದ ಇಂದ್ರಿಯವು ಅಪ್ರಾಕೃತರಸನೇಂದ್ರಿಯವೆನಿಸಿಕೊಳ್ಳುವುದು.

೬ ನಾಸಿಕೆಯ ಅಗ್ರಭಾಗದಲ್ಲಿರುವ ಅಪ್ರಾಕೃತವಾದ ಇಂದ್ರಿಯವು ಅಪ್ರಾಕೃತಘ್ರಾಣೇಂದ್ರಿಯವೆನಿಸಿಕೊಳ್ಳುವುದು.

ಈ ಆರು ಲಕ್ಷಣಗಳಲ್ಲಿಯೂ ಇಂದ್ರಿಯಾಂತರಗಳಲ್ಲಿ ಅತಿವ್ಯಾಪ್ತಿಯನ್ನು ಪರಿಹರಿಸುವುದಕ್ಕಾಗಿ ಮೊದಲನೆಯ ವಿಶೇಷಣವೂ, ಪ್ರಾಕೃತೇಂದ್ರಿಯಗಳನ್ನು ವ್ಯಾವರ್ತಿಸುವುದಕ್ಕಾಗಿ ಅಪ್ರಾಕೃತತ್ವವಿಶೇಷಣವೂ, ಆ ಆ ಅಧಿಷ್ಠಾನಗಳಲ್ಲಿರುವ ವಸ್ತ್ವಂತರಗಳಲ್ಲಿ ಅತಿವ್ಯಾಪ್ತಿಯನ್ನು ಪರಿಹರಿಸುವುದಕ್ಕಾಗಿ ಇಂದ್ರಿಯತ್ವದಳವೂ ಹೇಳಲ್ಪಟ್ಟಿರುವುವು.

### ೧೦೮ ಪ್ರಾಕೃತಚಕ್ಷುರಿಂದ್ರಿಯಲಕ್ಷಣಸ್ಯ ಬುದ್ಧಚಕ್ಷುಷಿ ಅವ್ಯಾಪ್ತ್ಯಶಂಕಾತತ್ಪರಿಹಾರೌ.

ಇಲ್ಲಿ ಬೌದ್ಧರು— "ಬುದ್ಧನು ಚಕ್ಷುರಿಂದ್ರಿಯವೊಂದರಿಂದಲೇ ಶಬ್ದ, ಸ್ಪರ್ಶ, ರೂಪ, ರಸ, ಗಂಧ ಎಂಬ ಸಕಲವಿಷಯಗಳನ್ನೂ ತಿಳಿದುಕೊಳ್ಳುವ ಸಾಮರ್ಥ್ಯವುಳ್ಳವನಾಗಿರುವನು. ಆದಕಾರಣ ರೂಪವನ್ನು ಮಾತ್ರ ಗ್ರಹಿಸುವ ಇಂದ್ರಿಯವು ಚಕ್ಷುರಿಂದ್ರಿಯವೆಂದು ಹಿಂದೆ ಹೇಳಿದ ಪ್ರಾಕೃತಚಕ್ಷುರಿಂದ್ರಿಯದ ಲಕ್ಷಣವು ಬುದ್ಧನ ಚಕ್ಷುರಿಂದ್ರಿಯದಲ್ಲಿ ವ್ಯಾಪಿಸಲಿಲ್ಲವಾಗಿ ಅವ್ಯಾಪ್ತಿದೋಷಗ್ರಸ್ತವಾಗಿರುವುದು" ಎಂದು ಹೇಳುವರು.

ಇದು ಸಂಗತವಲ್ಲ. ಏತಕ್ಕೆಂದರೆ—ಚಕ್ಷುರಿಂದ್ರಿಯದಿಂದ ಗ್ರಹಿಸಲಾರದ ಶಬ್ದಾದಿವಿಷಯಗಳನ್ನು ಬುದ್ಧನ ಚಕ್ಷುರಿಂದ್ರಿಯವು ಗ್ರಹಿಸಬಲ್ಲುದೆಂಬುದರಲ್ಲಿ ಪ್ರಮಾಣವಿಲ್ಲ. ಒಂದುವೇಳೆ ಬುದ್ಧನ ಚಕ್ಷುರಿಂದ್ರಿಯಕ್ಕೆ ಪ್ರಬಲವಾದ ಸಾಮರ್ಥ್ಯವುಂಟೆಂದು ಒಪ್ಪಿಕೊಂಡರೂ ಅಂಥ ಚಕ್ಷುರಿಂದ್ರಿಯದಿಂದ—ನಮ್ಮಿಂದ ಗ್ರಹಿಸಲಶಕ್ಯವಾದ ಸೂಕ್ಷ್ಮರೂಪಗಳನ್ನೂ, ವ್ಯವಹಿತರೂಪಗಳನ್ನೂ, ಅತಿದೂರದಲ್ಲಿರುವ ರೂಪಗಳನ್ನೂ ಒಂದುವೇಳೆ ಗ್ರಹಿಸಿದರೂ ಗ್ರಹಿಸಬಹುದಲ್ಲದೆ ಚಕ್ಷುರಿಂದ್ರಿಯದ ಸ್ವಭಾವನಿಯಮವನ್ನೇ ಉಲ್ಲಂಘಿಸಿ ಶಬ್ದ, ಸ್ಪರ್ಶ, ರಸ, ಗಂಧಗಳನ್ನೂ ಅದರಿಂದ ಗ್ರಹಿಸಬಹುದೆಂದು ಹೇಳುವುದು ಅತಿಸಾಹಸೋಕ್ತಿಯಾಗಿಯೂ ಪ್ರಮಾಣಶೂನ್ಯವಾಗಿಯೂ ಇರುವುದು.

### ೧೦೯ ಪ್ರಾಕೃತಕರ್ಮೇಂದ್ರಿಯಸಾಮಾನ್ಯಲಕ್ಷಣಂ.

ಇನ್ನುಮುಂದೆ ಪ್ರಾಕೃತಕರ್ಮೇಂದ್ರಿಯವಿಚಾರವನ್ನು ನಡಸುವೆವು. "ಉಚ್ಚರಿಸುವಿಕೆ, ತೆಗೆದುಕೊಳ್ಳುವಿಕೆ, ಸಂಚರಿಸುವಿಕೆ, ಶಾರೀರಮಲವನ್ನು ತ್ಯಜಿಸುವಿಕೆ, ಆನಂದಿಸುವಿಕೆ ಎಂಬ ಐದರೊಳಗೆ ಅನ್ಯತಮಕ್ರಿಯೆಗೆ ಸಾಧನವಾಗಿಯೂ ಇಂದ್ರಿಯವಾಗಿಯೂ ಇರುವುದು ಪ್ರಾಕೃತಕರ್ಮೇಂದ್ರಿಯವೆನಿಸಿಕೊಳ್ಳುವುದು" ಎಂದು ಇದಕ್ಕೆ ಸಾಮಾನ್ಯಲಕ್ಷಣವು. ಇದರಲ್ಲಿ ಜ್ಞಾನೇಂದ್ರಿಯವನ್ನು ವ್ಯಾವರ್ತಿಸುವುದ

ಕ್ಕಾಗಿ ವಿಶೇಷಣವೂ, ಶರೀರವನ್ನು ವ್ಯಾವರ್ತಿಸುವುದಕ್ಕಾಗಿ ವಿಶೇಷ್ಯವೂ ಹೇಳಲ್ಪಟ್ಟಿರುವುವು

### ೧೧೦ ತದ್ವಿಭಾಗಪೂರ್ವಕಂ ವಾಗಿಂದ್ರಿಯಲಕ್ಷಣಂ.

ಇಂಥ ಕರ್ಮೇಂದ್ರಿಯವು— "ವಾಕ್, ಪಾಣಿ, ಪಾದ, ಪಾಯು, ಉಪಸ್ಥ" ಎಂದು ಐದುವಿಧವಾಗಿರುವುದು. ಇವುಗಳಲ್ಲಿ ವರ್ಣೋಚ್ಚಾರಣೆಗೆ ಸಾಧನವಾಗಿಯೂ ಇಂದ್ರಿಯವಾಗಿಯೂ ಇರುವುದು ವಾಗಿಂದ್ರಿಯವೆನಿಸಿಕೊಳ್ಳುವುದು. ಇತರೇಂದ್ರಿಯಗಳನ್ನು ವ್ಯಾವರ್ತಿಸುವುದಕ್ಕಾಗಿ ವಿಶೇಷಣವೂ, ಜಿಹ್ವಾದಿ ಪ್ರದೇಶಗಳನ್ನು ವ್ಯಾವರ್ತಿಸುವುದಕ್ಕಾಗಿ ವಿಶೇಷ್ಯವೂ ಹೇಳಲ್ಪಟ್ಟಿರುವುವು.

### ೧೧೧ ವಾಗಿಂದ್ರಿಯಸ್ಯ ಅಧಿಷ್ಠಾನಾದಿವಿವೇಕಃ.

ಈ ವಾಗಿಂದ್ರಿಯವು — "ಹೃದಯ, ಕಂಠ, ಜಿಹ್ವಾಮೂಲ, ತಾಲು, ದಂತ, ಓಷ್ಠ, ನಾಸಿಕೆ, ಮೂರ್ಧ (ತಲೆ)" ಎಂಬ ಈ ಎಂಟು ಸ್ಥಾನಗಳಲ್ಲಿರುವುದು.

ಗಿಣಿ, ಮೈನಾ ಮುಂತಾದ ಕೆಲವು ಪಕ್ಷಿಗಳನ್ನು ಬಿಟ್ಟು ಉಳಿದ ಪಶು, ಪಕ್ಷಿ, ಮೃಗ, ಜಲಚರ ಮುಂತಾದ ತಿರ್ಯಗ್ಜಾತಿಗಳಿಗೆ ಉಚ್ಚಾರಣೆಗೆ ಅನುಕೂಲವಾದ ಅದೃಷ್ಟಸಹಾಯವೂ, ಅದಕ್ಕೆ ಅನುಕೂಲವಾದ ಆ ಆ ಅವಯವಗಳ ಸಹಾಯವೂ ಇಲ್ಲವಾದುದರಿಂದ ಉಚ್ಚಾರಣಶಕ್ತಿಯಿಲ್ಲ. ಗಿಣಿ, ಮೈನಾ ಮುಂತಾದುವುಗಳಿಗೂ ಸ್ವಲ್ಪಮಟ್ಟಿಗೆ ಅದೃಷ್ಟವ್ಯತ್ಯಾಸವೂ, ತಾಲು ಮೊದಲಾದ ಅವಯವಗಳ ವ್ಯತ್ಯಾಸವೂ ಇರುವುದರಿಂದ ಅವುಗಳಿಗೂ ಉಚ್ಚಾರಣೆಯಲ್ಲಿ ತಾರತಮ್ಯವಿರುವುದು.

### ೧೧೨ ಪಾಣೀಂದ್ರಿಯಲಕ್ಷಣಂ.

ಬರೆವಿಕೆ, ಪೋಣಿಸುವಿಕೆ ಮುಂತಾದ ಶಿಲ್ಪಕ್ಕೆ ಸಾಧನವಾಗಿಯೂ ಇಂದ್ರಿಯವಾಗಿಯೂ ಇರುವುದು ಪಾಣೀಂದ್ರಿಯವೆನಿಸಿಕೊಳ್ಳುವುದು. ಇಂದ್ರಿಯಾಂತರವನ್ನು ವ್ಯಾವರ್ತಿಸುವುದಕ್ಕಾಗಿ ಮೊದಲನೆಯ ದಳವೂ ಹಸ್ತವನ್ನು ವ್ಯಾವರ್ತಿಸುವುದಕ್ಕಾಗಿ ಇಂದ್ರಿಯಪದವೂ ಉಕ್ತವಾಗಿರುವುವು.

### ೧೧೩ ಪಾಣೀಂದ್ರಿಯಸ್ಯ ಅಧಿಷ್ಠಾನಾದಿವಿವೇಕಃ.

ಈ ಪಾಣೀಂದ್ರಿಯವು ಮನುಷ್ಯಾದಿಗಳಿಗೆ ಕೈಯ ಬೆರಳುಗಳಲ್ಲಿಯೂ, ಆನೆಗಳಿಗೆ ತುಂಬಿಕೆಯ ತುದಿಯಲ್ಲಿಯೂ ಇರುವುದು. "ಹಾಗಾದರೆ ಲೋಕದಲ್ಲಿ ಕೆಲವರು ಅಭ್ಯಾಸಪಾಟವದಿಂದ ಬಾಯಿಂದಲೂ ಕಾಲಿಂದಲೂ ಮುತ್ತುಗಳನ್ನು ಪೋಣಿಸುವುದನ್ನೂ ಬರೆವುದನ್ನೂ ನೋಡುತ್ತೇವೆ; ಬಾಯಲ್ಲಿಯೂ ಕಾಲಲ್ಲಿಯೂ ಪಾಣೀಂ

ದ್ರಿಯವಿಲ್ಲದ ಪಕ್ಷದಲ್ಲಿ ಈ ಕೆಲಸವು ಹೇಗೆ ಜರುಗುವುದು'' ಎಂದು ಸಂದೇಹಪಡಬಾರದು. ಕಲಾಮಾತ್ರದಿಂದ ಅಲ್ಲಿಯೂ ಪಾಣೀಂದ್ರಿಯದ ವ್ಯಾಪ್ತಿಯನ್ನು ಒಪ್ಪಿಕೊಳ್ಳುವುದರಲ್ಲಿ ವಿರೋಧವೇನೂ ಇಲ್ಲ. ''ಹಾಗಾದರೆ ಒಂದು ಇಂದ್ರಿಯದ ಅಧಿಷ್ಠಾನದಲ್ಲಿ ಮತ್ತೊಂದು ಇಂದ್ರಿಯವು ಹೇಗೆ ಇರಬಲ್ಲುದು'' ಎಂದು ಆಶಂಕಿಸಬಾರದು. ಚಕ್ಷು, ಶ್ರೋತ್ರ, ರಸನೆ, ಘ್ರಾಣ, ಈ ಇಂದ್ರಿಯಗಳ ಅಧಿಷ್ಠಾನಗಳಲ್ಲಿಯೂ ತ್ವಗಿಂದ್ರಿಯದ ವ್ಯಾಪ್ತಿಯನ್ನು ಪ್ರತ್ಯಕ್ಷವಾಗಿ ನಾವು ನೋಡುತ್ತಿರುವೆವಷ್ಟೆ.

## ೧೧೪ ಪಾದೇಂದ್ರಿಯಲಕ್ಷಣಂ.

ಸಂಚಾರಕ್ಕೆ ಸಾಧನವಾಗಿಯೂ ಇಂದ್ರಿಯವಾಗಿಯೂ ಇರುವುದು ಪಾದೇಂದ್ರಿಯವೆನಿಸಿಕೊಳ್ಳುವುದು. ಇಂದ್ರಿಯಾಂತರವನ್ನು ವ್ಯಾವರ್ತಿಸುವುದಕ್ಕಾಗಿ ವಿಶೇಷಣವೂ ಕಾಲನ್ನು ವ್ಯಾವರ್ತಿಸುವುದಕ್ಕಾಗಿ ವಿಶೇಷ್ಯವೂ ಉಕ್ತವಾಗಿರುವುವು.

## ೧೧೫ ಪಾದೇಂದ್ರಿಯಸ್ಯ ಅಧಿಷ್ಠಾನಾದಿವಿವೇಕಃ.

ಈ ಪಾದೇಂದ್ರಿಯವು ಮನುಷ್ಯಾದಿಗಳಿಗೆ ಕಾಲಲ್ಲಿಯೂ, ಸರ್ಪಗಳಿಗೆ ಎದೆಯಲ್ಲಿಯೂ, ಪಕ್ಷಿಗಳಿಗೆ ವಿಶೇಷವಾಗಿ ರೆಕ್ಕೆಗಳಲ್ಲಿಯೂ ಸ್ವಲ್ಪಮಟ್ಟಿಗೆ ಕಾಲಲ್ಲಿಯೂ ಇರುವುದು. ಎರಡು ಕೈಗಳನ್ನೂ ನೆಲದಮೇಲೆ ಊರಿ ಕಾಲುಗಳೆರಡನ್ನೂ ಮೇಲಕ್ಕೆ ಎತ್ತಿ ಯಾರಾದರೂ ನಡೆವರಾದರೆ ಆಗ ಕೈಗಳಲ್ಲಿಯೂ ಈ ಪಾದೇಂದ್ರಿಯದ ಶಕ್ತಿ ಸ್ವಲ್ಪಮಟ್ಟಿಗೆ ವ್ಯಾಪಿಸಿರುವುದೆಂದು ಒಪ್ಪಿದರೂ ತೊಂದರೆಯೇನೂ ಇರುವುದಿಲ್ಲ. ಆಕ್ಷೇಪಗಳನ್ನು ಮೊದಲಿನಂತೆಯೇ ಪರಿಹರಿಸಬಹುದು.

ಸರ್ಪಗಳಿಗೆ ಈ ಪಾದೇಂದ್ರಿಯದ ಶಕ್ತಿ ಉರಸ್ಸಿನಲ್ಲಿಯೇ ಇದ್ದು ಉರಸ್ಸಿನಿಂದಲೇ ಅವುಗಳು ಹೋಗುವುವಾದುದರಿಂದ ಉರಗಾಃ ಎಂಬ ಹೆಸರೂ, ಅವುಗಳಿಗೆ ಕಾಲುಗಳಿಲ್ಲವಾಗಿ ಕಾಲುಗಳಿಂದ ಸಂಚರಿಸುವುದಿಲ್ಲವಾದುದರಿಂದ ಪನ್ನಗಾಃ ಎಂಬ ಹೆಸರೂ ಉಂಟಾಗಿರುವುವು. ಇಷ್ಟುಮಾತ್ರದಿಂದಲೇ ಸರ್ಪಗಳಿಗೆ ಪಾದೇಂದ್ರಿಯವೇ ಇಲ್ಲವೆಂದು ತಿಳಿಯಬಾರದು. ಜೀವಾತ್ಮನು ಸಂಸಾರಮಂಡಲದಲ್ಲಿ ಇರುವವರೆಗೂ ಯಾವ ಯಾವ ಶರೀರಕ್ಕೆ ಹೋದರೂ ಅಲ್ಲಲ್ಲಿ ಇವನಿಗೆ ಹನ್ನೊಂದು ಇಂದ್ರಿಯಗಳೂ ತಪ್ಪಿದುವಲ್ಲವಾದುದರಿಂದ ಸರ್ಪಗಳಿಗೆ ಪಾದೇಂದ್ರಿಯವನ್ನು ಅಪಲಪಿಸುವುದು ಪ್ರಮಾಣವಿರುದ್ಧವಾಗಿರುವುದು.

''ಸಂಚಾರಕ್ಕೆ ಯೋಗ್ಯವಾದ ಪಾದೇಂದ್ರಿಯವು ಪಶು, ಪಕ್ಷಿ, ಮೃಗ, ಜಲಚರ, ಮನುಷ್ಯ, ವಾನರ ಮುಂತಾದ ಎಲ್ಲಾ ಪ್ರಾಣಿಗಳಿಗೂ ತಾರತಮ್ಯವಿಲ್ಲದೆ

ಇರುವ ಪಕ್ಷದಲ್ಲಿ ಪಕ್ಷಿಗಳಿಗೆ ಮಾತ್ರ ಆಕಾಶದಲ್ಲಿ ಸಂಚರಿಸುವ ಸಾಮರ್ಥ್ಯವಿರುವುದಕ್ಕೂ ಮನುಷ್ಯರೇ ಮೊದಲಾದವರಿಗೆ ಅದಿಲ್ಲದಿರುವುದಕ್ಕೂ, ಜಲಜಂತುಗಳಿಗೆ ಮಾತ್ರ ಜಲದಲ್ಲಿ ಸಂಚರಿಸುವ ಸಾಮರ್ಥ್ಯವಿರುವುದಕ್ಕೂ ಮನುಷ್ಯರೇ ಮೊದಲಾದವರಿಗೆ ಅದಿಲ್ಲದಿರುವುದಕ್ಕೂ, ವಾನರಗಳಿಗೆ ಮಾತ್ರ ಮರದ ಕೊಂಬೆಗಳ ಮೇಲೆ ಸಂಚರಿಸುವ ಸಾಮರ್ಥ್ಯವಿರುವುದಕ್ಕೂ ಮನುಷ್ಯರೇ ಮೊದಲಾದವರಿಗೆ ಅದಿಲ್ಲದಿರುವುದಕ್ಕೂ, ಕಾರಣವೇನು'' ಎಂಬ ಆಕ್ಷೇಪಕ್ಕೆ-ಮೇಲೆ ಹೇಳಿದ ಎಲ್ಲಾ ಪ್ರಾಣಿಗಳಿಗೂ ಪಾದೇಂದ್ರಿಯವೆಂಬುದು ಸಮಾನವಾಗಿದ್ದರೂ ಅದಕ್ಕೆ ಅಧಿಷ್ಠಾನವಾಗಿರುವ ಆ ಆ ಅವಯವಗಳ ಸನ್ನಿವೇಶದ ತಾರತಮ್ಯವೇ ಈ ಸಂಚಾರತಾರತಮ್ಯಕ್ಕೆ ಕಾರಣವಾಗಿರುವುದೆಂಬ ಸಮಾಧಾನವನ್ನು ತಿಳಿಯಬಹುದು.

ಮನುಷ್ಯಶರೀರದಲ್ಲಿರುವ ಆತ್ಮನೇ ಯೋಗಾಭ್ಯಾಸಬಲದಿಂದ ಪರಕಾಯ ಪ್ರವೇಶವಿದ್ಯೆಯನ್ನು ತಿಳಿದವನಾಗಿ ಪಕ್ಷಿಗಳ, ಜಲಚರಗಳ, ಮತ್ತು ವಾನರಗಳ ಶರೀರಗಳನ್ನು ಪ್ರವೇಶಿಸುವನಾದರೆ ಆಕಾಶದಲ್ಲಿಯೂ, ಜಲದಲ್ಲಿಯೂ, ಕೊಂಬೆಗಳಲ್ಲಿಯೂ ಸಂಚಾರಕ್ಕೆ ಸಾಮರ್ಥ್ಯವನ್ನು ಪಡೆವನು. ಆ ಪಕ್ಷಿಗಳೂ ಜಲಚರಗಳೂ ವಾನರಗಳೂ ಮನುಷ್ಯಶರೀರಕ್ಕೆ ಬಂದುವಾದರೆ ತಮ್ಮ ತಮ್ಮ ಸ್ವಾಭಾವಿಕಸಂಚರಣ ಶಕ್ತಿಯನ್ನು ಕಳೆದುಕೊಂಡು ಮನುಷ್ಯರಂತೆಯೇ ಸಂಚರಣಶಕ್ತಿಯನ್ನು ಪಡೆವುವು

### ೧೧೩ ಪಾಯ್ವಿಂದ್ರಿಯಲಕ್ಷಣಂ.

ಶಾರೀರಮಲತ್ಯಾಗಕ್ಕೆ ಸಾಧನವಾಗಿಯೂ ಇಂದ್ರಿಯವಾಗಿಯೂ ಇರುವುದು ಪಾಯ್ವಿಂದ್ರಿಯವೆನಿಸಿಕೊಳ್ಳುವುದು. ಇಂದ್ರಿಯಾಂತರವ್ಯಾವೃತ್ತಿಗಾಗಿ ವಿಶೇಷಣವೂ ಇದರ ಅಧಿಷ್ಠಾನವನ್ನು ವ್ಯಾವರ್ತಿಸುವುದಕ್ಕಾಗಿ ವಿಶೇಷ್ಯವೂ ಉಕ್ತವಾಗಿರುವುವು.

### ೧೧೪ ಪಾಯ್ವಿಂದ್ರಿಯಸ್ಯ ಅಧಿಷ್ಠಾನಾದಿವಿವೇಕಃ.

ಈ ಪಾಯ್ವಿಂದ್ರಿಯವು ಎಲ್ಲಾ ಪ್ರಾಣಿಗಳಿಗೂ ಅಪಾನಸ್ಥಾನದಲ್ಲಿರುವುದು. 'ಮಾಂಧಾಳ' ವೆಂಬ ಹೆಸರನ್ನು ಪಡೆದ ಕೆಲವು ಪಕ್ಷಿಗಳಿಗೆ (ಕಪಟದ ಹಕ್ಕಿ) ಮಾತ್ರ ಮುಖವಲ್ಲಿರುವುದು. ಆದುದರಿಂದಲೇ ಈ ಪಕ್ಷಿಗಳು ಯಾವಾಗಲೂ ತಮ್ಮ ಎರಡು ಕಾಲುಗಳಿಂದ ಮರದ ಕೊಂಬೆ ಮುಂತಾದುವುಗಳನ್ನು ಹಿಡಿದುಕೊಂಡು ತಲೆಕೆಳಗಾಗಿ ಜೋಲಾಡುತ್ತ ಶಾರೀರವಾದ ಮಲಮೂತ್ರಗಳನ್ನು ತಮ್ಮ ಬಾಯಿಂದಲೇ ಹೊರಪಡಿಸುವುವು. ಸರ್ಪಾದಿಗಳಿಗೂ ಬಾಲದ ತುದಿಯಲ್ಲಿ ಸೂಕ್ಷ್ಮವಾದ ಅಪಾನ ಸ್ಥಾನವಿರುವುದೆಂದು ಸೂಕ್ಷ್ಮದರ್ಶಿಗಳು ನಿರೂಪಿಸಿರುವರು.

### ೧೧೮ ಉಪಸ್ಥೇಂದ್ರಿಯಲಕ್ಷಣಂ.

ಆನಂದವಿಶೇಷಕ್ಕೆ ಸಾಧನವಾಗಿಯೂ ಇಂದ್ರಿಯವಾಗಿಯೂ ಇರುವುದು ಉಪಸ್ಥೇಂದ್ರಿಯವೆನಿಸಿಕೊಳ್ಳುವುದು. ಇಂದ್ರಿಯಾಂತರವನ್ನು ವ್ಯಾವರ್ತಿಸುವುದಕ್ಕಾಗಿ ವಿಶೇಷಣವೂ ಇದರ ಅಧಿಷ್ಠಾನವನ್ನು ವ್ಯಾವರ್ತಿಸುವುದಕ್ಕಾಗಿ ವಿಶೇಷ್ಯವೂ ಉಕ್ತವಾಗಿರುವುವು.

### ೧೧೯ ಉಪಸ್ಥೇಂದ್ರಿಯಸ್ಯ ಅಧಿಷ್ಠಾನಂ.

ಈ ಉಪಸ್ಥೇಂದ್ರಿಯವು ಎಲ್ಲಾ ಪ್ರಾಣಿಗಳಲ್ಲಿಯೂ ಸ್ತ್ರೀಪುರುಷಶರೀರಕ್ಕೆ ಅಸಾಧಾರಣಚಿಹ್ನವಾದ ಗುಹ್ಯಸ್ಥಾನದಲ್ಲಿ ಇರುವುದು.

### ೧೨೦ ಅಥ ಅಪ್ರಾಕೃತಕರ್ಮೇಂದ್ರಿಯವಿಚಾರಃ.

(ಇಂದ್ರಿಯಾಶ್ರಯವಾದ) ದಿವ್ಯಮಂಗಳವಿಗ್ರಹವು ನಿತ್ಯಮುಕ್ತೇಶ್ವರರೆಲ್ಲರಿಗೂ ಇದ್ದೇ ಇರುವುದೆಂದು ಶಾಸ್ತ್ರದಲ್ಲಿ ವಿಧಿಸಿರುವುದರಿಂದಲೂ, ಅಂಥ ವಿಗ್ರಹದ ಆಕಾರ ಪೂರ್ತಿಗಾಗಿಯೂ ಅಲಂಕಾರಾರ್ಥವಾಗಿಯೂ ಕರ್ಮೇಂದ್ರಿಯಗಳಿರಬೇಕೆಂಬ ಔಚಿತ್ಯ ವಿರುವುದರಿಂದಲೂ, ಜ್ಞಾನೇಂದ್ರಿಯಗಳು ಅವರಿಗೆ ಉಂಟೆಂದು ಹಿಂದೆ ತೋರಿಸಿದುದರಿಂದ ಅಂಥ ಜ್ಞಾನೇಂದ್ರಿಯಗಳೊಡನೆ ಸನ್ನಿಯೋಗಶಿಷ್ಟವಾದ ಕರ್ಮೇಂದ್ರಿಯಪಂಚಕವೂ ಅವುಗಳ ಜತೆಯಲ್ಲಿಯೇ ಪ್ರವರ್ತಿಸುವುದಾದುದರಿಂದಲೂ, ಅದು ಇಲ್ಲದಿದ್ದರೆ ಜ್ಞಾನೇಂದ್ರಿಯಗಳೂ ನಿವರ್ತಿಸುವುವಾದುದರಿಂದಲೂ, ನಿತ್ಯಮುಕ್ತೇಶ್ವರರಿಗೆ ಕರ್ಮೇಂದ್ರಿಯಸಾಮಾನ್ಯವು ಸಿದ್ಧವಾಗುವುದು.

ಮತ್ತು ಇದಕ್ಕೆ ಪ್ರಮಾಣಸಿದ್ಧವಾದ ಉಪಪತ್ತಿಯೂ ಉಂಟು. ಹೇಗೆಂದರೆ-

ಪ್ರಕೃತೇಃ ಕ್ರಿಯಮಾಣಾನಿ ಗುಣೈಃ ಕರ್ಮಾಣಿ ಸರ್ವಶಃ ।
ಅಹಂಕಾರವಿಮೂಢಾತ್ಮಾ ಕರ್ತಾಽಹಮಿತಿ ಮನ್ಯತೇ ॥
ತತ್ತ್ವವಿತ್ತು ಮಹಾಬಾಹೋ ಗುಣಕರ್ಮವಿಭಾಗಯೋಃ ।
ಗುಣಾ ಗುಣೇಷು ವರ್ತಂತ ಇತಿ ಮತ್ವಾ ನ ಸಜ್ಜತೇ ॥

ಎಂಬ ಭಗವದ್ಗೀತೆಯ ಮೂರನೆಯ ಅಧ್ಯಾಯದ ಇಪ್ಪತ್ತೇಳು-ಇಪ್ಪತ್ತೆಂಟನೆಯ ಶ್ಲೋಕಗಳಲ್ಲಿಯೂ,—

ಕಾರ್ಯಕಾರಣಕರ್ತೃತ್ವೇ ಹೇತುಃ ಪ್ರಕೃತಿರುಚ್ಯತೇ ।
ಪುರುಷಸ್ಸುಖದುಃಖಾನಾಂ ಭೋಕ್ತೃತ್ವೇ ಹೇತುರುಚ್ಯತೇ ॥

ಎಂಬ ಹದಿಮೂರನೆಯ ಅಧ್ಯಾಯದ ಇಪ್ಪತ್ತನೆಯ ಶ್ಲೋಕದಲ್ಲಿಯೂ,—

ಪ್ರಕೃತ್ಯೈವ ಚ ಕರ್ಮಾಣಿ ಕ್ರಿಯಮಾಣಾನಿ ಸರ್ವಶಃ ।
ಯಃ ಪಶ್ಯತಿ ತಥಾಽಽತ್ಮಾನಮಕರ್ತಾರಂ ಸ ಪಶ್ಯತಿ ॥

ಎಂಬ ಅದೇ ಅಧ್ಯಾಯದ ಇಪ್ಪತ್ತೊಂಬತ್ತನೆಯ ಶ್ಲೋಕದಲ್ಲಿಯೂ—"ಸುಖದುಃಖ ಭೋಗಕ್ಕೆ ಸಾಧನಭೂತವಾದ ಕ್ರಿಯೆಗಳು-ಜೀವನಿಂದ ಅಧಿಷ್ಠಿತವಾಗಿಯೂ ಶರೀ ರೇಂದ್ರಿಯಾಕಾರದಿಂದ ಪರಿಣತವಾಗಿಯೂ ಇರುವ ಪ್ರಕೃತಿದ್ರವ್ಯದಲ್ಲಿಯೇ ಸಾಕ್ಷಾ ತ್ತಾಗಿ ಸಂಭವಿಸುವುವಲ್ಲದೆ ಆತ್ಮನಿಗೆ ಸಾಕ್ಷಾತ್ಕ್ರಿಯಾಶ್ರಯತ್ವವು ಸ್ವರೂಪ ಪ್ರಯುಕ್ತವಲ್ಲವೆಂದು ನಿರ್ಣಯಿಸಿರುವುದರಿಂದಲೂ, ಶರೀರಾಧಿಷ್ಠಾನಕ್ಕೆ ಅನುಕೂಲ ವಾದ ಪ್ರಯತ್ನಾಶ್ರಯತ್ವವೇ ಜೀವನಿಗೆ ಕರ್ತೃತ್ವವೆನಿಸಿಕೊಳ್ಳುವುದಲ್ಲದೆ ಸಾಕ್ಷಾ ತ್ಕ್ರಿಯಾಶ್ರಯತ್ವವಿಲ್ಲವೆಂಬ ಅಭಿಪ್ರಾಯದಿಂದಲೇ 'ಕರ್ತಾ ಶಾಸ್ತ್ರಾರ್ಥವತ್ತ್ವಾತ್" ಎಂಬ ವೇದಾಂತಸೂತ್ರವೂ ಪ್ರವರ್ತಿಸಿರುವುದರಿಂದಲೂ, ಇಂಥ ಸಂದರ್ಭದಲ್ಲಿ ನಿತ್ಯ ಮುಕ್ತೇಶ್ವರರಿಗೆ ಕರ್ಮೇಂದ್ರಿಯಗಳಿಲ್ಲದಿದ್ದರೆ ನಿತ್ಯರಿಗೂ ಮುಕ್ತರಿಗೂ ಕೈಂಕರ್ಯ ಕರ್ತೃತ್ವವೂ, ಈಶ್ವರನಿಗೆ ಸೃಷ್ಟ್ಯಾದಿಕರ್ತೃತ್ವವೂ, ಉಪಪನ್ನವಾಗಲಾರದಾದುರಿಂ ದಲೂ, ಕರ್ಮೇಂದ್ರಿಯಸಾಮಾನ್ಯವು ಅವರಿಗೆ ಇದ್ದೇಇರಬೇಕು.

ಸಾಕ್ಷಾತ್ಕ್ರಿಯಾಶ್ರಯತ್ವವು ಅಚಿದ್ದ್ರವ್ಯಕ್ಕೇ ಸಂಭವಿಸುವುದಲ್ಲದೆ ಚಿತ್ಸ್ವ ರೂಪನಾದ ಆತ್ಮನಿಗೆ ಸಂಭವಿಸುವುದಿಲ್ಲವೆಂಬ ಅಂಶವನ್ನು ವೇದಾಂತಸೂತ್ರಗಳಲ್ಲಿಯೂ ಅವುಗಳ ಭಾಷ್ಯಗಳಲ್ಲಿಯೂ ಸ್ಪಷ್ಟವಾಗಿ ತಿಳಿಯಬಹುದು. ಹೇಗೆಂದರೆ—

ವೇದಾಂತಸೂತ್ರದ ಮೂರನೆಯ ಅಧ್ಯಾಯದ ಮೂರನೆಯ ಪಾದದ ಹನ್ನೆರಡ ನೆಯ ಅಧಿಕರಣವಾದ ಸಾಂಪರಾಯಾಧಿಕರಣದಲ್ಲಿ—

ಮೋಕ್ಷಫಲವನ್ನು ಉದ್ದೇಶಿಸಿ ಸಾಧನಾನುಷ್ಠಾನವನ್ನು ಮಾಡಿದ ಚೇತನನು ಮೋಕ್ಷಫಲಪ್ರಾಪ್ತಿಗಾಗಿ ಅರ್ಚಿರಾದಿಮಾರ್ಗದಿಂದ ಪ್ರಯಾಣೋದ್ಯುಕ್ತನಾದ ಸಮಯದಲ್ಲಿ ಅನಾದಿಕಾಲಸಂಚಿತವಾಗಿದ್ದ ಪುಣ್ಯಾಪಾಪರೂಪವಾದ ಸಕಲಕರ್ಮಬಂಧ ನವೂ ದೇಹಾವಸಾನಕಾಲದಲ್ಲಿಯೇ ನಿಶ್ಶೇಷವಾಗಿ ಕ್ಷೀಣವಾದುದರಿಂದ ಪ್ರಾಕೃತ ಸುಖದುಃಖೋಪಭೋಗಕ್ಕೆ ಸಾಧನವಾದ ಸ್ಥೂಲಶರೀರವು ನಷ್ಟವಾದಂತೆ ಸೂಕ್ಷ್ಮ ಶರೀರವೂ ನಷ್ಟವಾಗಬೇಕಲ್ಲದೆ ವಿರಜಾನದೀಪರ್ಯಂತವಾದ ಅರ್ಚಿರಾದಿಮಾರ್ಗದಲ್ಲಿ ಅದು ಅನುವರ್ತಿಸುವುದಕ್ಕೆ ಕರ್ಮವೆಂಬ ಕಾರಣವು ಲೇಶಮಾತ್ರವೂ ಇಲ್ಲ. ಆದರೂ ಅದು ಅಲ್ಲಿಯವರೆಗೂ ಅನುವರ್ತಿಸಿ ಬರುವುದೆಂಬುದು ಪ್ರಮಾಣಸಿದ್ಧವಾಗಿರುವುದು. ಕಾರಣವಿಲ್ಲದಿದ್ದರೂ ಇದರ ಅನುವೃತ್ತಿ ಸಂಗತವಾಗುವ ಬಗೆ ಹೇಗೆಂಬ ಆಶಂಕೆಗೆ ಪೂರ್ವಪಕ್ಷಿ ಹೇಳುವುದೇನೆಂದರೆ—

"ಗತೇರರ್ಥವತ್ತ್ವಮುಭಯಥಾಽನ್ಯಥಾ ಹಿ ವಿರೋಧಃ" ಮುಮುಕ್ಷುವಾಗಿ ಅರ್ಚಿರಾದಿಮಾರ್ಗದಿಂದ ಹೊರಟಿರತಕ್ಕ ಚೇತನನಿಗೆ ದೇಹಾವಸಾನಕಾಲದಲ್ಲಿಯೇ

ಸಕಲಕರ್ಮಕ್ಷಯವೂ ನಿಶ್ಶೇಷವಾಗಿ ಉಂಟಾಗುವುದಿಲ್ಲ ; ಮತ್ತೇನೆಂದರೆ ಪುಣ್ಯಪಾಪ ಗಳ ಕೆಲವು ಭಾಗವು ದೇಹಾವಸಾನಕಾಲದಲ್ಲಿಯೂ, ಉಳಿದ ಭಾಗವು ವಿರಜಾನದೀ ಪ್ರಾಪ್ತಿಯ ಅನಂತರದಲ್ಲಿಯೂ ನಷ್ಟವಾಗುವುದು ; ಹೀಗೆ (ಉಭಯಥಾ) ಎರಡುಬಗೆ ಯಾಗಿ ಕರ್ಮಗಳ ಕ್ಷಯವನ್ನು ಒಪ್ಪಿಕೊಂಡರೇನೇ (ಗತೇರರ್ಥವತ್ತ್ವಂ) ಅರ್ಚಿರಾದಿ ಮಾರ್ಗಗಮನವನ್ನು ಬೋಧಿಸುವ ಶ್ರುತಿ ಸಾಫಲ್ಯವನ್ನು ಹೊಂದೀತು; (ಅನ್ಯಥಾ ಹಿ ವಿರೋಧಃ) ಹಾಗಿಲ್ಲದೆ ಸ್ಥೂಲಶರೀರವಿಯೋಗಕಾಲದಲ್ಲಿಯೇ ಸಕಲಕರ್ಮಕ್ಷಯವನ್ನೂ ಒಪ್ಪಿಕೊಳ್ಳುವುದಾದರೆ ಸ್ಥೂಲಶರೀರದಂತೆ ಸೂಕ್ಷ್ಮಶರೀರವೂ ಆಗಲೇ ನಷ್ಟವಾಗ ಬೇಕಾದುದು ಆವಶ್ಯಕವಾದುದರಿಂದ ಅಂಥ ಸಂದರ್ಭದಲ್ಲಿ ಶರೀರವಿರಹಿತವಾದ ಕೇವ ಲಾತ್ಮಸ್ವರೂಪಕ್ಕೆ ಗಮನಕ್ರಿಯಾಶ್ರಯತ್ವವು ಸಂಭವಿಸುವುದಿಲ್ಲವಾದಕಾರಣ ಅರ್ಚಿ ರಾದಿಮಾರ್ಗಗಮನಬೋಧಕವಾದ ಶ್ರುತಿ ನಿಷ್ಫಲವಾದೀತು; ಆದುದರಿಂದ ಮು ಮುಕ್ಷುವಾದವನಿಗೆ ದೇಹೋತ್ಕ್ರಮಣಸಮಯದಲ್ಲಿಯೇ ನಿಶ್ಶೇಷಕರ್ಮಕ್ಷಯವು ಉಪಪನ್ನವಲ್ಲ.

ಪೂರ್ವಪಕ್ಷಿಯ ಇಂಥ ಆಕ್ಷೇಪಕ್ಕೆ ಸಿದ್ಧಾಂತಿ ಹೇಳುವ ಸಮಾಧಾನವೇನೆಂದರೆ–

" ಉಪಪನ್ನಸ್ತಲ್ಲಕ್ಷಣಾರ್ಥೋಪಲಬ್ಧೇರ್ಲೋಕವತ್ " (ಉಪಪನ್ನಃ)

ದೇಹೋತ್ಕ್ರಮಣಸಮಯದಲ್ಲಿಯೇ ಸಕಲಕರ್ಮಕ್ಷಯವುಂಟಾಗುವುದೆಂಬುದು ಉಪ ಪನ್ನವೇ ಹೊರತು ಅನುಪಪನ್ನವಲ್ಲ ; ಹೇಗೆಂದರೆ— (ತಲ್ಲಕ್ಷಣಾರ್ಥೋಪಲಬ್ಧೇಃ) ನಿಶ್ಶೇಷಕರ್ಮಕ್ಷಯವನ್ನು ಪಡೆದವನಿಗೆ ಶರೀರಸಂಬಂಧವೆಂಬುದು ಅಪ್ರಸಿದ್ಧವಾಗಿದ್ದ ರಲ್ಲವೆ ಸೂಕ್ಷ್ಮಶರೀರಸಂಬಂಧದ ಉಪಪತ್ತಿಗಾಗಿ ನಿಶ್ಶೇಷಕರ್ಮಕ್ಷಯವು ಪೂರ್ವದಲ್ಲಿ ಇಲ್ಲವೆಂದು ಹೇಳಲು ಅವಕಾಶವಿದ್ದೀತು ; ಸಕಲಕರ್ಮಕ್ಷಯವನ್ನೂ ಬ್ರಹ್ಮಪ್ರಾಪ್ತಿ ಯನ್ನೂ ಪಡೆದಿರುವ ಮುಕ್ತಾತ್ಮನಿಗೆ ಸ್ವರೂಪಾವಿರ್ಭಾವವುಂಟಾದಮೇಲೆ ಅಮೋಘ ವಾದ ಸಂಕಲ್ಪವಿಶೇಷದಿಂದ ಅನೇಕಶರೀರಪರಿಗ್ರಹಣಯೋಗ್ಯತೆಯುಂಟೆಂಬುದನ್ನು ನೂರಾರುಶ್ರುತಿಗಳು ಮೊರೆಯಿಡುತ್ತಿರುವುವಾದುದರಿಂದ ದೇಹವಿಯೋಗಕಾಲದಲ್ಲಿಯೇ ಸಕಲಕರ್ಮಗಳೂ ಕ್ಷೀಣವಾದರೂ ಸೂಕ್ಷ್ಮಶರೀರಸಂಬಂಧವೂ, ಅದರಿಂದಲೇ ಅರ್ಚಿ ರಾದಿಮಾರ್ಗಗಮನವೂ ಆತ್ಮನಿಗೆ ಉಂಟಾಗಲು ತಡೆಯಿಲ್ಲ.

" ಸೂಕ್ಷ್ಮಶರೀರಸದ್ಭಾವಕ್ಕೆ ಕಾರಣವಾದ ಕರ್ಮವು ನಷ್ಟವಾದಮೇಲೆ ಸೂಕ್ಷ್ಮಶರೀರವು ಹೇಗೆ ನಿಂತೀತು ? " ಎಂದು ಆಶಂಕಿಸಕೆಲಸವಿಲ್ಲ. ಏತಕ್ಕೆಂದರೆ— ಬ್ರಹ್ಮಪ್ರಾಪ್ತಿಗಾಗಿ ಅನುಷ್ಠಿತವಾಗಿರುವ ಬ್ರಹ್ಮವಿದ್ಯೆಯ ಪ್ರಭಾವದಿಂದಲೇ ಸೂಕ್ಷ್ಮ ಶರೀರವು ವಿರಜಾನದೀಗಮನಪರ್ಯಂತವೂ ನಿಲ್ಲಬಹುದು ; ಈ ಬ್ರಹ್ಮವಿದ್ಯೆಯೆಂಬುದು

ಸೂಕ್ಷ್ಮಶರೀರದ ಉತ್ಪತ್ತಿಗೆ ಸ್ವತಃ ಕಾರಣವಾಗದಿದ್ದರೂ, ಪ್ರಾಕೃತಸುಖದುಃಖ ಭೋಗಕ್ಕೆ ಸಾಧನವಾದ ಸ್ಥೂಲಶರೀರವೂ ಅದಕ್ಕೂ ಕಾರಣವಾಗಿದ್ದ ಸಕಲಕರ್ಮವೂ ಕ್ಷೀಣವಾಗಿದ್ದರೂ, ತಾನು ಸಾಧಿಸಿಕೊಡುವ ಬ್ರಹ್ಮಪ್ರಾಪ್ತಿಯೆಂಬ ಮಹಾಫಲ ವನ್ನು ಆತ್ಮನಿಗೆ ಕೊಡುವುದಕ್ಕಾಗಿ ಅರ್ಚಿರಾದಿಮಾರ್ಗದಿಂದ ಆತ್ಮನನ್ನು ಕರೆದು ಕೊಂಡು ಹೋಗುವುದಕ್ಕೋಸ್ಕರ ಸೂಕ್ಷ್ಮಶರೀರವನ್ನು ಸ್ಥಾಪಿಸಿಕೊಡುತ್ತದೆ. ಸ್ಥೂಲಶರೀರವನ್ನು ಕಳೆದುಕೊಂಡ ಆತ್ಮಸ್ವರೂಪಕ್ಕೆ ಸೂಕ್ಷ್ಮಶರೀರಸಹಾಯವೂ ಇಲ್ಲದಿದ್ದರೆ ಗಮನಕ್ರಿಯೆಯೇ ಸಂಭವಿಸುವುದಿಲ್ಲವಷ್ಟೆ ?

"ಆದರೆ ಕಾರಣಾಂತರದಿಂದ ಉತ್ಪನ್ನವಾದ ವಸ್ತು ಅಂಥ ಕಾರಣವು ನಷ್ಟ ವಾದಮೇಲೆಯೂ ಪ್ರಯೋಜನಾಂತರಕ್ಕಾಗಿ ಸ್ವಲ್ಪಕಾಲ ಅನುವರ್ತಿಸುವುದೆಂಬು ದನ್ನು ಹೇಗೆ ಒಪ್ಪಲಾದೀತು" ಎಂದು ಆಶಂಕಿಸಬೇಕಾದುದಿಲ್ಲ. ಹೇಗೆಂದರೆ— (ಲೋಕವತ್) ಲೋಕದಲ್ಲಿ ಸಸ್ಯಾದಿಗಳ ಸಮೃದ್ಧಿಗಾಗಿ ನಿರ್ಮಿಸಲ್ಪಟ್ಟ ತಟಾಕ ಮುಂ ತಾದ ಜಲವಸತಿಗಳಲ್ಲಿ ಅವುಗಳ ನಿರ್ಮಾಣಕ್ಕೆ ಕಾರಣಭೂತವಾದ ಇಚ್ಛೆ, ಪ್ರವೃತ್ತಿ ಮುಂತಾದುವು ನಷ್ಟವಾದರೂ ಅದೇ ಜಲವಸತಿಗಳನ್ನು ಜನಗಳು ನಾಶಪಡಿಸದೆ ಸ್ನಾನಪಾನಾದಿರೂಪವಾದ ಪ್ರಯೋಜನಾಂತರಕ್ಕಾಗಿಯೂ ಅವುಗಳನ್ನು ಕಾಪಾಡಿ ಕೊಂಡೇ ಬರುತ್ತಾರೆ.

ಅದರಂತೆಯೇ ಮುಮುಕ್ಷುವಾದವನಿಗೆ ದೇಹಾವಸಾನಕಾಲದಲ್ಲಿ ಸಕಲ ಕರ್ಮವೂ ಕ್ಷೀಣವಾದರೂ ವಿರಜಾನದೀಪರ್ಯಂತವೂ ಗಮನಕ್ರಿಯೆಯ ಉಪಪತ್ತಿ ಯೆಂಬ ಪ್ರಯೋಜನಾಂತರಕ್ಕಾಗಿ ಬ್ರಹ್ಮವಿದ್ಯಾಪ್ರಭಾವದಿಂದ ಸೂಕ್ಷ್ಮಶರೀರದ ಅನುವೃತ್ತಿ ಸಂಭವಿಸಬಹುದು.

ಈ ವಿಚಾರದಿಂದ ಫಲಿತವಾದುದೇನೆಂದರೆ— ಸೂಕ್ಷ್ಮಶರೀರದ ಅನುವೃತ್ತಿ ಯನ್ನು ಒಪ್ಪಿಕೊಂಡೇ ಆತ್ಮನಿಗೆ ಗಮನಕ್ರಿಯಾಶ್ರಯತ್ವಕ್ಕೆ ಉಪಪತ್ತಿಯನ್ನು ಹೇಳಿ ದುದರಿಂದ ಸಾಕ್ಷಾತ್ಕ್ರಿಯಾಶ್ರಯತ್ವವು ಅಚಿದ್ದ್ರವ್ಯಕ್ಕೇ ಇರುವುದಲ್ಲದೆ ಆತ್ಮನಿಗೆ ಸಾಕ್ಷಾತ್ತಾಗಿ ಕ್ರಿಯಾಶ್ರಯತ್ವವು ಯಾವಾಗಲೂ ಸಂಭವಿಸುವುದಿಲ್ಲವೆಂಬುದು ಫಲಿತವಾಯಿತು.

ಆದಕಾರಣ ನಿತ್ಯಮುಕ್ತೇಶ್ವರರಿಗೆ ತತ್ತತ್ಕ್ರಿಯಾಕರ್ತೃತ್ವವಿರಬೇಕಾದರೆ ಕರ್ಮೇಂದ್ರಿಯಗಳಿದ್ದೇ ಇರಬೇಕು.

ಮತ್ತು—ಉತ್ಪತ್ತಿ, ಸ್ಥಿತಿ, ಪರಿಣಾಮ, ವೃದ್ಧಿ, ಅಪಕ್ಷಯ, ವಿನಾಶಗ

ಳೆಂಬ ಷಡ್ಭಾವವಿಕಾರರೂಪವಾದ ಕ್ರಿಯೆಗಳು ಆತ್ಮಸ್ವರೂಪಸಾಮಾನ್ಯಕ್ಕೆ ಸಂಭವಿಸುವುವಲ್ಲವೆಂದು ಬೋಧಿಸುತ್ತಿರುವ—

ಅಪಕ್ಷಯವಿನಾಶಾಭ್ಯಾಂ ಪರಿಣಾಮರ್ಧಿಜನ್ಮಭಿಃ ।
ವರ್ಜಿತಃ ಶಕ್ಯತೇ ವಕ್ತುಂ ಯಃ ಸದಾಸ್ತೀತಿ ಕೇವಲಂ ॥

ಎಂಬುವೇ ಮೊದಲಾದ ವಿಷ್ಣುಪುರಾಣಾದಿವಚನಗಳೂ ಪೂರ್ವೋಕ್ತಗಳಾದ ಗೀತಾವಚನಗಳಿಗೆ ಮತ್ತಷ್ಟು ಉತ್ತೇಜನವನ್ನು ಕೊಡುವುವು. ಆದಕಾರಣ ನಿತ್ಯಮುಕ್ತೇಶ್ವರರ ತತ್ತದ್ವ್ಯಾಪಾರಕರ್ತೃತ್ವನಿರ್ವಾಹಕಕ್ಕೋಸ್ಕರ ಸಾಮಾನ್ಯತಃ ಕರ್ಮೇಂದ್ರಿಯವು ಅವರಿಗೆ ಇದ್ದೇ ಇರುವುದೆಂದು ಒಪ್ಪಬೇಕು.

ಇದರಮೇಲೆ— “ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ಯೋ ವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ” ಎಂಬ ಶ್ವೇತಾಶ್ವತರಶ್ರುತಿ ವೇದೋಪದೇಶಕ್ರಿಯಾಶ್ರಯತ್ವವನ್ನು ಈಶ್ವರನಿಗೆ ವಿಧಿಸಿ ಅದರ ಉಪಪತ್ತಿಗಾಗಿ ವಾಗಿಂದ್ರಿಯವೆಂಬ ಕರ್ಮೇಂದ್ರಿಯವಿಶೇಷವನ್ನು ಅರ್ಥಾಪತ್ತಿಯಿಂದ ಅವನಿಗೆ ಸಿದ್ಧಪಡಿಸುವುದು.

ಈಶ್ವರಶಬ್ದವಾಚ್ಯನಾದ ಪರವಾಸುದೇವನಿಗೆ ಚತುರ್ಭುಜತ್ವವನ್ನೂ, ಶಂಖ, ಚಕ್ರ, ಗದೆ ಮುಂತಾದ ಆಯುಧಗಳ ಧಾರಣಕ್ರಿಯಾಶ್ರಯತ್ವವನ್ನೂ ಬೋಧಿಸುವ ಶಾಸ್ತ್ರವು ಪಾಣೀಂದ್ರಿಯವೆಂಬ ಕರ್ಮೇಂದ್ರಿಯವಿಶೇಷದ ಸದ್ಭಾವವನ್ನು ತೋರಿಸುವುದು.

ಆಶ್ರಿತರನ್ನು ಯಾವಾಗಲೂ ಬಿಟ್ಟುಕೊಡಲಾರದ ಅಚ್ಯುತತ್ವಸ್ವಭಾವದೊಡನೆ ಕೂಡಿರುವ ಚರಣಗಳಿಂದ ಆಶ್ರಿತರಿದ್ದೆಡೆಗೆ ಅವನು ಓಡಿಬರುವನೆಂದು ಗಮನಕ್ರಿಯಾಶ್ರಯತ್ವವನ್ನು ಬೋಧಿಸುವ ಶಾಸ್ತ್ರವು ಅದರ ಉಪಪತ್ತಿಗಾಗಿ ಪಾದೇಂದ್ರಿಯವೆಂಬ ಕರ್ಮೇಂದ್ರಿಯವಿಶೇಷದ ಸದ್ಭಾವವನ್ನು ತೋರಿಸುವುದು.

“ಆದರೆ— ‘ಅಪಾಣಿಪಾದೋ ಜವನೋ ಗ್ರಹೀತಾ” ಎಂದು ಪಾಣಿಪಾದಗಳಿಲ್ಲದೆಯೇ ಗ್ರಹಣಕ್ರಿಯೆಗೂ ಗಮನಕ್ರಿಯೆಗೂ ಆಶ್ರಯನಾಗಿರುವನೆಂದು ಹೇಳುವ ಶ್ರುತಿ ಹೇಗೆ ಸಂಗತವಾದೀತು” ಎಂದು ಆಶಂಕಿಸಬಾರದು. ಈ ನಿಷೇಧಶ್ರುತಿ ಪಾಣಿಪಾದಾದಿವಿಧಾಯಕಶ್ರುತಿಯಿಂದ ಪ್ರಾಪ್ತವಾದ ಪಾಣಿಪಾದಗಳನ್ನು ಪ್ರತಿಷೇಧಿಸುವುದಕ್ಕಾಗಿ ಬರಲಿಲ್ಲ; ಹಾಗೆ ಬಂದಿದ್ದುದಾದರೆ ವಿಧಿಶ್ರುತಿ ನಿರರ್ಥಕವಾಗಿ ಅಪ್ರಮಾಣವೆನಿಸಿಕೊಳ್ಳಬೇಕಾಗುವುದಲ್ಲವೆ ? ಈಶ್ವರಸ್ವರೂಪವು ಸರ್ವದಾ ವ್ಯಾಪಕವಾದುದರಿಂದ ಪಾದೇಂದ್ರಿಯದ ಅಪೇಕ್ಷೆಯಿಲ್ಲದೆಯೇ ಅನಾದಿಕಾಲದಿಂದಲೂ

ಸರ್ವತ್ರ ವೇಗದಿಂದ ಓಡಿಹೋಗಿ ತುಂಬಿಕೊಂಡಿರುವುದೆಂಬ ಅರ್ಥವನ್ನು ಜನನಪದವೂ, ಸರ್ವವಸ್ತುಗಳ ಒಳಭಾಗದಲ್ಲಿಯೂ ಪ್ರವೇಶಿಸಿ ಅಂತರ್ಯಾಮಿಯಾಗಿ ನಿಂತು ಸಕಲಪದಾರ್ಥಗಳನ್ನೂ ಈಶ್ವರಸ್ವರೂಪವು ಧರಿಸುತ್ತಿರುವುದೆಂಬ ಅರ್ಥವನ್ನು ಗ್ರಹೀತೃಪದವೂ ಬೋಧಿಸುತ್ತಿರುವುವು. ಹೀಗೆ ಈ ಎರಡು ಪದಗಳಿಂದಲೂ ಬೋಧಿಸಲ್ಪಟ್ಟ ಬಹಿರ್ವ್ಯಾಪ್ತಿ ಅಂತರ್ವ್ಯಾಪ್ತಿಗಳಿಗೆ ಪಾಣಿಪಾದಗಳ ಅಪೇಕ್ಷೆಯಿಲ್ಲವೆಂಬುದೇ ಉಕ್ತಶ್ರುತಿಗೆ ಅರ್ಥವಾಗಿರುವುದಲ್ಲದೆ ವಿಧಿಶ್ರುತಿಯಿಂದ ಸಿದ್ಧವಾದ ಪಾಣಿಪಾದಗಳೂ ಈಶ್ವರನಿಗೆ ಇಲ್ಲವೆಂಬುದು ಅರ್ಥವಲ್ಲ.

ಹೀಗೆ ಈಶ್ವರನಿಗೆ ವಾಕ್ಪಾಣಿಪಾದೇಂದ್ರಿಯಗಳು ಸಿದ್ಧವಾದಂತೆ ನಿತ್ಯರಿಗೂ ಮುಕ್ತರಿಗೂ— "ತದ್ವಿಪ್ರಾಸೋ ವಿಪನ್ಯವೋ ಜಾಗೃವಾಗ್ಂಸಸ್ಸಮಿಂಧತೇ" ಎಂಬ ಶ್ರುತಿಯಲ್ಲಿ 'ವಿಪನ್ಯವಃ' ಎಂಬ ಪದದಿಂದ ವಿವಿಧಸ್ತೋತ್ರಕರ್ತೃತ್ವವನ್ನು ತೋರಿಸಿರುವುದರಿಂದಲೂ, "ಏತತ್ಸಾಮಗಾಯನ್ನಾಸ್ತೇ" ಎಂದು ಸಾಮಗಾನಕರ್ತೃತ್ವವನ್ನು ಬೋಧಿಸಿರುವುದರಿಂದಲೂ, 'ಬದ್ಧಾಂಜಲಿಪುಟಾ ಹೃಷ್ಟಾ ನಮ ಇತ್ಯೇವ ವಾದಿನಃ" ಎಂದು ನಮಶ್ಶಬ್ದೋಚ್ಚಾರಣಕರ್ತೃತ್ವವನ್ನು ಬೋಧಿಸಿರುವುದರಿಂದಲೂ, ವಾಗಿಂದ್ರಿಯವೆಂಬ ಕರ್ಮೇಂದ್ರಿಯವಿಶೇಷವು ಅವರಿಗೆ ಸಿದ್ಧವಾಗುವುದು.

ದಿವ್ಯಮಂಗಳವಿಗ್ರಹದ್ವಾರಾ ಈಶ್ವರಸಾರೂಪ್ಯವನ್ನು ವಿಧಿಸತಕ್ಕ— "ನಿರಂಜನಃ ಪರಮಂ ಸಾಮ್ಯಮುಪೈತಿ" "ಮಮ ಸಾಧರ್ಮ್ಯಮಾಗತಾಃ" ಎಂಬ ಶಾಸ್ತ್ರವು ಈಶ್ವರನಂತೆ ನಿತ್ಯರಿಗೂ ಮುಕ್ತರಿಗೂ ಚತುರ್ಭುಜತ್ವವನ್ನೂ ಶಂಖಚಕ್ರಾದಿಧಾರಿತ್ವವನ್ನೂ ಅರ್ಥಾಪತ್ತಿಯಿಂದ ತೋರಿಸುವುದರ ಮೂಲಕ ಪಾಣೀಂದ್ರಿಯವನ್ನೂ ಅವರಿಗೆ ಸಿದ್ಧಪಡಿಸುವುದು. "ಬದ್ಧಾಂಜಲಿ ಪುಟಾಃ" ಎಂಬ ಉಕ್ತವಚನವೂ ಈ ಅರ್ಥವನ್ನು ವಿಶದಪಡಿಸುವುದು. ಆದುದರಿಂದ ಪಾಣೀಂದ್ರಿಯವೆಂಬ ಕರ್ಮೇಂದ್ರಿಯವಿಶೇಷವೂ ಅವರಿಗೆ ಸಿದ್ಧವಾಗುವುದು.

ಮತ್ತು— "ಇಮಾನ್ ಲೋಕಾನ್ ಕಾಮಾನ್ನೀ ಕಾಮರೂಪ್ಯನುಸಂಚರನ್" "ಯೇನ ಯೇನ ಧಾತಾ ಗಚ್ಛತಿ ತೇನ ತೇನ ಸಹ ಗಚ್ಛತಿ" ಎಂದು ಗಮನಕ್ರಿಯಾಶ್ರಯತ್ವವನ್ನು ಬೋಧಿಸುವ ಶಾಸ್ತ್ರವು ಅದರ ಉಪಪತ್ತಿಗಾಗಿ ಪಾದೇಂದ್ರಿಯವನ್ನು ಅರ್ಥಾಪತ್ತಿಯಿಂದ ಸಿದ್ಧಪಡಿಸುವುದಾದಕಾರಣ ಪಾದೇಂದ್ರಿಯವೆಂಬ ಕರ್ಮೇಂದ್ರಿಯವಿಶೇಷವೂ ಅವರಿಗೆ ಸಿದ್ಧವಾಗುವುದು.

ಹೀಗೆ ಸಾಮಾನ್ಯಶಾಸ್ತ್ರದಿಂದಲೂ, ವಿಶೇಷಶಾಸ್ತ್ರದಿಂದಲೂ ನಿತ್ಯಮುಕ್ತೇಶ್ವರರಿಗೆ ವಾಕ್ಪಾಣಿಪಾದೇಂದ್ರಿಯಗಳು ಉಂಟೆಂಬುದು ಉಪಪತ್ತಿಪೂರ್ವಕವಾಗಿ

ತೋರಿಸಲ್ಪಟ್ಟಿತು. ಹೀಗಾದಮೇಲೆ ಇವುಗಳೊಡನೆ ಸನ್ನಿಯೋಗಶಿಷ್ಟಗಳಾದ ಉಳಿದ ಕರ್ಮೇಂದ್ರಿಯಗಳೆರಡೂ ಅವುಗಳ ಜತೆಯಲ್ಲಿಯೇ ಪ್ರವರ್ತಿಸುವುವೆಂಬುದನ್ನು ಪ್ರತ್ಯೇಕ ವಾಗಿ ಹೇಳಬೇಕಾದುದೇ ಇಲ್ಲ.

ಪರಮಪದವೆಂಬ ಮೋಕ್ಷಸ್ಥಾನದಲ್ಲಿಯೂ ಕರ್ಮಾಧೀನವಲ್ಲದೆ ಇಚ್ಛಾಧೀನ ವಾದ ಸ್ತ್ರೀಪುರುಷವಿಭಾಗವುಂಟೆಂಬುದು ಅನೇಕಪ್ರಮಾಣಗಳಿಂದ ಸಿದ್ಧವಾಗುವುದು. ಹಾಗಿಲ್ಲದಿದ್ದರೆ ಜಯವಿಜಯಾದಿದ್ವಾರಪಾಲಕರನ್ನೂ, ನಗರಪಾಲಕರನ್ನೂ, ಗಣಾಧಿಪರನ್ನೂ, ದಿವ್ಯಮಹಿಷಿಗಳನ್ನೂ, ಅಷ್ಟಶಕ್ತಿಗಳನ್ನೂ, ಚಾಮರಗ್ರಾಹಿಣಿಗಳನ್ನೂ, ತಾಂಬೂಲಕರಂಡವಾಹಿನಿಯರನ್ನೂ ಬೋಧಿಸುತ್ತಿರುವ ಶಾಸ್ತ್ರಗಳು ಪ್ರಮಾಣಕಕ್ಷ್ಯೆಯಲ್ಲಿ ನಿಲ್ಲುವ ಬಗೆ ಹೇಗೆ ?

ಮತ್ತು ಸಂಸಾರಬಂಧನದಿಂದ ಬಿಡುಗಡೆಯನ್ನು ಹೊಂದಿ ಅರ್ಚಿರಾದಿಮಾರ್ಗ ವಾಗಿ ಸೂಕ್ಷ್ಮಶರೀರದೊಡನೆ ವಿರಜಾತಟವನ್ನೈದಿದ ಜೀವಾತ್ಮನು ವಿರಜಾಸ್ನಾನಾನಂತರದಲ್ಲಿ ಸೂಕ್ಷ್ಮಶರೀರವನ್ನು ತ್ಯಜಿಸಿ ಅಮಾನವಪುರುಷನ ಕರಸ್ಪರ್ಶದಿಂದ ಅಪ್ರಾಕೃತದಿವ್ಯಮಂಗಳವಿಗ್ರಹವನ್ನು ಪಡೆದಮೇಲೆ ಇಂಥ ಮುಕ್ತಾತ್ಮನಿಗೆ ದಿವ್ಯಾಲಂಕಾರವನ್ನು ಮಾಡುವುದಕ್ಕಾಗಿ ಪರಮಪುರುಷನಿಂದ ಆಜ್ಞಾಪಿಸಲ್ಪಟ್ಟ ಐದುನೂರು ಅಪ್ಸರಸ್ತ್ರೀಯರು ಅಲಂಕಾರಸಾಧನಗಳನ್ನು ಕೈಯಲ್ಲಿ ಧರಿಸಿದವರಾಗಿ ಸಂಭ್ರಮದಿಂದ ಓಡಿಬಂದು ಅಲಂಕರಿಸುತ್ತಿರುವರೆಂದು ಮೊರೆಯಿಡುತ್ತಿರುವ "ತಂ ಪಂಚಶತಾನ್ಯಪ್ಸರಸಾಂ ಪ್ರಧಾವಂತಿ ಶತಂಮಾಲಾಹಸ್ತಾಃ ಶತಮಂಜನಹಸ್ತಾಃ ಶತಂ ವಾಸೋಹಸ್ತಾಃ ಶತಂ ಭೂಷಣಹಸ್ತಾಃ ತಂ ಬ್ರಹ್ಮಾಲಂಕಾರೇಣಾಲಂಕುರ್ವಂತಿ" ಎಂಬ ಶ್ರುತಿ ಪರಮಪದದಲ್ಲಿ ಸ್ತ್ರೀಪುರುಷವಿಭಾಗವನ್ನು ಸಹಿಸಲಾರದವರಿಗೆ ಹೇಗೆ ಉಪಪನ್ನವಾದೀತು ?

ಕರ್ಮೇಂದ್ರಿಯಪಂಚಕದಲ್ಲಿ ಕೊನೆಯದಾದ ಎರಡು ಇಂದ್ರಿಯಗಳು ಮಾತ್ರ ನಿತ್ಯಮುಕ್ತೇಶ್ವರರಿಗೆ ಇಲ್ಲವೆಂದು ಬೋಧಿಸುವ ಅಪವಾದವಚನವಾದರೂ ಒಂದುವೇಳೆ ದೊರೆಯುವುದಾಗಿದ್ದರೆ ಆ ಇಂದ್ರಿಯಗಳು ಅವರಿಗೆ ಇಲ್ಲವೆಂದು ಅಂಗೀಕರಿಸಬಹುದಾಗಿದ್ದಿತು. ಅಂಥ ಅಪವಾದಕಪ್ರಮಾಣವೂ ದಿವ್ಯಜ್ಞಾನದೃಷ್ಟಿಯುಳ್ಳ ವೇದದರ್ಶಿಗಳಿಗೂ ಇದುವರೆಗೂ ಗೋಚರವಾಗಿಲ್ಲ.

ಹೀಗೆ ಉಪಪತ್ತಿಸಹಿತವಾದ ಸಾಮಾನ್ಯಶಾಸ್ತ್ರದಿಂದಲೂ, ವಿಶೇಷಶಾಸ್ತ್ರದಿಂದಲೂ, ಸನ್ನಿಯೋಗಶಿಷ್ಟನ್ಯಾಯದಿಂದಲೂ, ಅಪವಾದಕವಚನಾಭಾವದಿಂದಲೂ,

ನಿತ್ಯಮುಕ್ತೇಶ್ವರರಿಗೆ ಸಿದ್ಧವಾಗುವ ಕರ್ಮೇಂದ್ರಿಯಪಂಚಕವನ್ನು ಯಾರೂ ಇಲ್ಲ ಗೊಳಿಸಲಾರರು.

ಈ ಅಭಿಪ್ರಾಯದಿಂದಲೇ ಶ್ರೀಮದ್ವೇದಾಂತದೇಶಿಕರು ನ್ಯಾಯಸಿದ್ಧಾಂಜನ ಗ್ರಂಥದ ನಿತ್ಯವಿಭೂತಿಪರಿಚ್ಛೇದದಲ್ಲಿ—"ಇಯಂ ಚ ಪಂಚೋಪನಿಷತ್ಪ್ರತಿಪಾದ್ಯಪಂಚ ಭೂತೇಂದ್ರಿಯಮಯೀನಿತ್ಯಮುಕ್ತೇಶ್ವರಾಣಾಮಿಚ್ಛಾನುರೂಪಶರೀರೇಂದ್ರಿಯವಿಷಯ ಪ್ರಾಣರೂಪೇಣಾವತಿಷ್ಠತೇ, ತ್ರಿಗುಣದ್ರವ್ಯವದಿಯಮಪಿ ಚತುರ್ವಿಂಶತಿತತ್ತ್ವಾತ್ಮಿಕಾ, ತಥಾಪಿ ನ ತತ್ತ್ವಾನಾಂ ಪ್ರಕೃತಿವಿಕಾರಭಾವಃ, ದಿವ್ಯಮಂಗಳವಿಗ್ರಹಾದೇರ್ನಿತ್ಯತ್ವಶ್ರವಣಾತ್, ಅಪ್ರಾಕೃತಾನಾಮಪಿ ಮಹದಾದೀನಾಂ ಸದ್ಭಾವ ಆಕಾಶಾದಿವತ್, ನಹ್ಯಾಕಾಶಾದ್ಯುಪಾತ್ತಾಸ್ತತ್ರ ವಾಯ್ವಾದಯಃ, ತತ್ರ ಚ ಶರೀರಾದೀನಾಂ ಸಂಸ್ಥಾನಾದೀನಿ ಪ್ರಾಯಶಃ ಪ್ರಾಕೃತತುಲ್ಯಾನಿ, ಶರೀರಾಣಾಂ ಶುಭಾಶ್ರಯಾದೀನಾಂ ಪಾಣ್ಯಾದಿಮತ್ತ್ವಶ್ರವಣಾತ್ತತ್ರೇಂದ್ರಿಯಸದ್ಭಾವಸಿದ್ಧಿಃ, ಚಕ್ಷುರಾದಿಶಬ್ದಾನಾಂ ಚ ಪ್ರಯುಕ್ತಾನಾಂ ಗೋಳಕಾದಾವಮುಖ್ಯತ್ವಾತ್," ಎಂದು ಸ್ಪಷ್ಟವಾಗಿ ಅಪ್ಪಣೆ ಕೊಡಿಸಿರುವರು.

"ಉಕ್ತರೀತಿಯಲ್ಲಿ ನಿತ್ಯಮುಕ್ತೇಶ್ವರರಿಗೆ ಇಂದ್ರಿಯಗಳನ್ನು ಒಪ್ಪಿಕೊಳ್ಳುವುದಾದರೆ ಇಂದ್ರಿಯಾಧಿಷ್ಠಾನರೂಪವಾದ ರಂಧ್ರಗಳಿಲ್ಲದವರಾಗಿಯೂ ಸರ್ವಪ್ರಕಾರದಿಂದಲೂ ಪ್ರಕಾಶಮಾನರಾಗಿಯೂ ಅವರು ಕಂಗೊಳಿಸುವರೆಂದು ಹೇಳುತ್ತಿರುವ "ಇಂದ್ರಿಯಚ್ಛಿದ್ರವಿಧುರಾ ದ್ಯೋತಮಾನಾಶ್ಚ ಸರ್ವಶಃ" ಎಂಬ ಪ್ರಮಾಣವಚನದ ಗತಿಯೇನು? ಮತ್ತು—"ನ ಹ ವೈ ಸಶರೀರಸ್ಯ ಸತಃ ಪ್ರಿಯಾಪ್ರಿಯಯೋರಪಹತಿರಸ್ತಿ ಅಶರೀರಂ ವಾವ ಸಂತಂ ನ ಪ್ರಿಯಾಪ್ರಿಯೇಸ್ಪೃಶತಃ, ಅಸ್ಮಾಚ್ಛರೀರಾತ್ಸಮುತ್ಥಾಯ ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ" ಎಂದು ಮುಕ್ತರಿಗೆ ಶರೀರವಿಲ್ಲವೆಂದು ಬೋಧಿಸುತ್ತಿರುವ ಛಾಂದೋಗ್ಯಶ್ರುತಿಯ ಗತಿಯೇನು?" ಎಂದು ಆಶಂಕಿಸಬಾರದು. ಏತಕ್ಕೆಂದರೆ ಈ ಪ್ರಮಾಣಗಳು ಕರ್ಮಾಧೀನವಾದ ಶರೀರವನ್ನು ಅವರಿಗೆ ಪ್ರತಿಷೇಧಿಸುವುವಲ್ಲದೆ ಸಶರೀರಶ್ರುತಿಯಿಂದ ವಿಧಿಸಲ್ಪಟ್ಟ ದಿವ್ಯಮಂಗಳವಿಗ್ರಹವನ್ನು ಪ್ರತಿಷೇಧಿಸುವುವಲ್ಲ. ಈ ವಿಷಯವೂ ಶ್ರೀಮದ್ವೇದಾಂತದೇಶಿಕರಿಂದ ಅದೇಪ್ರಕರಣದಲ್ಲಿ ತೋರಿಸಲ್ಪಟ್ಟಿರುವುದು.

ಶಾರೀರಕಮೀಮಾಂಸಾರೂಪವಾದ ವೇದಾಂತಸೂತ್ರದ ನಾಲ್ಕನೆಯ ಅಧ್ಯಾಯದ ನಾಲ್ಕನೆಯ ಪಾದದ ಐದನೆಯ ಅಧಿಕರಣವಾದ ಅಭಾವಾಧಿಕರಣದಲ್ಲಿ—

“ಅಭಾವಂ ಬಾದರಿರಾಹ ಹ್ಯೇವಂ” ಎಂದು ಪ್ರಾರಂಭಿಸಿರುವ ಏಳು ಸೂತ್ರಗಳ ಶ್ರೀಭಾಷ್ಯಶ್ರುತಿಪ್ರಕಾಶಿಕೆಗಳಲ್ಲಿಯೂ ಈವಿಷಯವನ್ನು ಸ್ಪಷ್ಟವಾಗಿ ತಿಳಿಯಬಹುದು.

“ಓಹೋ—ಅಸ್ಮದಾದಿಶರೀರೇಂದ್ರಿಯಗಳಿಗೆ ಸಮಾನಾಕಾರವಾದ ಶರೀರೇಂದ್ರಿಯಗಳನ್ನು ನಿತ್ಯಮುಕ್ತೇಶ್ವರರಿಗೂ ಒಪ್ಪುವುದಾದರೆ—ಪ್ರಾಕೃತರಾದ ನಮಗೆ ‘ವಚನಾದಾನವಿಹರಣೋತ್ಸರ್ಗಾನಂದಾಶ್ಚ ಪಂಚೈವ” ಎಂದು ಪ್ರಾಪ್ತವಾಗಿರುವ ಕರ್ಮೇಂದ್ರಿಯವ್ಯಾಪಾರಗಳೈದರೊಳಗೆ—“ಉಚ್ಚರಿಸುವಿಕೆ, ತೆಗೆದುಕೊಳ್ಳುವಿಕೆ, ಸಂಚರಿಸುವಿಕೆ” ಎಂಬ ಮೂರು ವ್ಯಾಪಾರಗಳು ಅವರಿಗೆ ಕಥಂಚಿತ್ ಸಂಗತಗಳಾದರೂ, ಮಲಸಂಬಂಧರಹಿತವಾದ ಅವರ ದಿವ್ಯಶರೀರದಲ್ಲಿ ಪಾಯ್ವಿಂದ್ರಿಯ-ಗುಹ್ಯೇಂದ್ರಿಯಗಳ ವ್ಯಾಪಾರವಾದ ಶಾರೀರಮಲತ್ಯಾಗವೂ ಆನಂದವೂ ಹೇಗೆ ಸಂಗತವಾಗುವುವು? ಆ ಎರಡು ವ್ಯಾಪಾರಗಳು ಮಾತ್ರ ಅವರಿಗೆ ಇಲ್ಲವೆನ್ನುವುದಾದರೆ ನಿಷ್ಪ್ರಯೋಜನಗಳಾದ ಆ ಎರಡು ಇಂದ್ರಿಯಗಳೂ ಅವರಿಗೆ ಇಲ್ಲವೆಂದೇ ಏಕೆ ಹೇಳಬಾರದು?” ಎಂದು ಆಶಂಕಿಸಲಾಗದು. ಏತಕ್ಕೆಂದರೆ—ಪ್ರಮಾಣಸಿದ್ಧವಾದ ಪದಾರ್ಥಗಳನ್ನು ನಿಷ್ಪ್ರಯೋಜನತ್ವವೆಂಬ ಯುಕ್ತ್ಯಾಭಾಸದಿಂದ ಪ್ರಾಮಾಣಿಕರು ಅಪಲಪಿಸಲಾರರು. ಸನ್ನಿಯೋಗಶಿಷ್ಟನ್ಯಾಯದಿಂದಲೂ, ಅಪವಾದಕವಚನಾಭಾವದಿಂದಲೂ, ಎಲ್ಲಾ ಕರ್ಮೇಂದ್ರಿಯಗಳೂ ಅವರಿಗೆ ಸಿದ್ಧವಾಗಿರುವುವೆಂದು ಹಿಂದೆಯೇ ಹೇಳಿರುವೆವಷ್ಟೆ?

ಮತ್ತು—ತ್ರಿಗುಣದ್ರವ್ಯದಂತೆ ಈ ಶುದ್ಧಸತ್ತ್ವದ್ರವ್ಯವೂ ಇಪ್ಪತ್ತುನಾಲ್ಕು ತತ್ತ್ವಗಳ ಆಕಾರವನ್ನು ಪಡೆದಿರುವುದೆಂಬುದೂ, ಆದರೆ ಅವುಗಳು ಒಂದಕ್ಕೊಂದು ಪ್ರಕೃತಿವಿಕಾರಭಾವವನ್ನು (ಕಾರ್ಯಕಾರಣಭಾವವನ್ನು) ಪಡೆಯದೆ ಎಲ್ಲವೂ ನಿತ್ಯಗಳಾಗಿಯೇ ಇರುವುವೆಂಬುದೂ, ಪೂರ್ವೋಕ್ತವಾದ ಶ್ರೀಮದ್ವೇದಾಂತದೇಶಿಕ ಸೂಕ್ತಿಯಿಂದ ಸಿದ್ಧವಾಗಿರುವಕಾರಣ ನಿತ್ಯಮುಕ್ತೇಶ್ವರರಿಗೆ ಹನ್ನೊಂದು ಇಂದ್ರಿಯಗಳೂ ಇರುವುವೆಂಬುದನ್ನು ಅಪಲಪಿಸಲು ಶಕ್ಯವಿಲ್ಲ. ಇಲ್ಲಿ ಹೇಳಬೇಕಾದ ಇನ್ನೂ ಹೆಚ್ಚು ವಿಷಯಗಳನ್ನು ಆಕರಗ್ರಂಥಗಳಲ್ಲಿ ತಿಳಿಯಬಹುದು.

### ೧೨೧ ಅಥ ಅಪ್ರಾಕೃತಕರ್ಮೇಂದ್ರಿಯಲಕ್ಷಣಾನಿ.

ಈರೀತಿಯಲ್ಲಿ ಪ್ರಮಾಣಗಳಿಂದಲೂ, ಉಪಪತ್ತಿಗಳಿಂದಲೂ ನಿತ್ಯಮುಕ್ತೇಶ್ವರರಿಗೆ ಈಶ್ವರಸಂಕಲ್ಪಾಧೀನವಾಗಿಯೂ, ಸ್ವಸಂಕಲ್ಪಸಹಕೃತೇಶ್ವರಸಂಕಲ್ಪಾಧೀನವಾಗಿಯೂ ಕರ್ಮೇಂದ್ರಿಯಗಳು ಐದೂ ಉಂಟೆಂದು ಸಿದ್ಧವಾಗಲು ಇಂಥ ಅಪ್ರಾಕೃತವಾದ ಕರ್ಮೇಂದ್ರಿಯಗಳ ಲಕ್ಷಣಗಳನ್ನೂ ಸಂಕ್ಷೇಪವಾಗಿ ತೋರಿಸುವೆವು.—

೧ ಹೃದಯ, ಕಂಠ, ಜಿಹ್ವಾಮೂಲ, ತಾಲು, ದಂತ, ಓಷ್ಠ, ನಾಸಿಕೆ, ಮೂರ್ಧ (ತಲೆ) ಎಂಬ ಎಂಟು ಸ್ಥಾನಗಳಲ್ಲಿ ಇದ್ದುಕೊಂಡು ವರ್ಣೋಚ್ಚಾರಣೆಗೆ ಸಾಧನವಾಗಿರುವ ಅಪ್ರಾಕೃತವಾದ ಇಂದ್ರಿಯವು ಅಪ್ರಾಕೃತವಾಗಿಂದ್ರಿಯವೆನಿಸಿ ಕೊಳ್ಳುವುದು.

೨ ಕೈಯ ಬೆರಳುಗಳಲ್ಲಿ ಇದ್ದುಕೊಂಡು ಬರೆವಿಕೆ, ಪೋಣಿಸುವಿಕೆ ಮುಂತಾದ ಶಿಲ್ಪಕ್ಕೆ ಸಾಧನವಾಗಿರುವ ಅಪ್ರಾಕೃತವಾದ ಇಂದ್ರಿಯವು ಅಪ್ರಾಕೃತ ಪಾಣೀಂದ್ರಿಯವೆನಿಸಿಕೊಳ್ಳುವುದು

೩ ಪಾದಸ್ಥಾನದಲ್ಲಿ ಇದ್ದುಕೊಂಡು ಸಂಚಾರಕ್ಕೆ ಸಾಧನವಾಗಿರುವ ಅಪ್ರಾಕೃತವಾದ ಇಂದ್ರಿಯವು ಅಪ್ರಾಕೃತಪಾದೇಂದ್ರಿಯವೆನಿಸಿಕೊಳ್ಳುವುದು.

೪ ಅಪಾನಸ್ಥಾನದಲ್ಲಿ ಇರುವ ಅಪ್ರಾಕೃತವಾದ ಇಂದ್ರಿಯವು ಅಪ್ರಾಕೃತ ಪಾಯ್ವಿಂದ್ರಿಯವೆನಿಸಿಕೊಳ್ಳುವುದು. ಪಂಚೋಪನಿಷನ್ಮಯವೆಂದೂ, ಶುದ್ಧಸತ್ತ್ವಾತ್ಮಕವೆಂದೂ ಪ್ರಸಿದ್ಧವಾಗಿರುವ ಅಪ್ರಾಕೃತಶರೀರದಲ್ಲಿ ಮಲಸಂಬಂಧಕ್ಕೆ ಪ್ರಸಕ್ತಿಯೇ ಇಲ್ಲವಾದುದರಿಂದ ಶಾರೀರಮಲತ್ಯಾಗವೆಂಬ ಕ್ರಿಯೆ ಈ ಪಾಯ್ವಿಂದ್ರಿಯಕ್ಕೆ ಸಂಭವಿಸುವುದಿಲ್ಲ. ಆದರೆ ಅಪ್ರಾಕೃತವಾದ ಆ ದಿವ್ಯಶರೀರಗಳಲ್ಲಿರುವ ವಿಚಿತ್ರಪದಾರ್ಥಗಳನ್ನು ಈ ಇಂದ್ರಿಯದ ಮೂಲಕವಾಗಿ ಹೊರಪಡಿಸಬೇಕೆಂದು ನಿತ್ಯಮುಕ್ತೇಶ್ವರರು ಸಂಕಲ್ಪಿಸುವರಾದರೆ ಆಗ ಅಂಥ ಕ್ರಿಯೆ ಈ ಇಂದ್ರಿಯಕ್ಕೆ ಸಂಭವಿಸಬಹುದು.

೫ ಸ್ತ್ರೀಪುರುಷಶರೀರಕ್ಕೆ ಅಸಾಧಾರಣಚಿಹ್ನವಾಗಿರುವ ಗುಹ್ಯಸ್ಥಾನದಲ್ಲಿ ಇದ್ದುಕೊಂಡು ಆನಂದವಿಶೇಷಕ್ಕೆ ಸಾಧನವಾಗಿರುವ ಅಪ್ರಾಕೃತವಾದ ಇಂದ್ರಿಯವು ಅಪ್ರಾಕೃತೋಪಸ್ಥೇಂದ್ರಿಯುವೆನಿಸಿಕೊಳ್ಳುವುದು. ಬ್ರಹ್ಮಾನಂದಾನುಭವದಿಂದ ನಿತ್ಯಸಂತುಷ್ಟರಾಗಿರುವ ನಿತ್ಯಮುಕ್ತೇಶ್ವರರಿಗೆ ಕರ್ಮವಶ್ಯರಾದ ಬದ್ಧಜೀವರಿಗಿರುವಂತೆ ಪ್ರಾಕೃತಹೇಯವಿಷಯದಲ್ಲಿ ಭೋಗ್ಯತಾಬುದ್ಧಿಯಿಲ್ಲವಾದುದರಿಂದ ದುಃಖರೂಪವಾದ ಪ್ರಾಕೃತವಿಷಯಾನುಭವವು ಅವರಿಗೆ ಇಲ್ಲದಿದ್ದರೂ, "ಜಕ್ಷತ್ ಕ್ರೀಡನ್ ರಮಮಾಣಃ ಸ್ತ್ರೀಭಿರ್ವಾ ಯಾನೈರ್ವಾ" ಎಂಬುವೇ ಮೊದಲಾದ ಪ್ರಮಾಣಗಳಿಂದ ಬೋಧಿಸಲ್ಪಡುವ ಭೋಗವಿಶೇಷಗಳು (ಆನಂದವಿಶೇಷಗಳು) ಸತ್ಯಸಂಕಲ್ಪರಾದ ಅವರಿಗೆ ಸಂಕಲ್ಪವಶದಿಂದ ಉಂಟಾಗಲು ಯಾವ ಅಡ್ಡಿಯೂ ಇಲ್ಲ.

೧೨೨ ಕರ್ಮೇಂದ್ರಿಯಾಭಾವವಾದಿನಿರಾಕರಣಂ.

ಹೀಗೆ ಹನ್ನೊಂದು ಇಂದ್ರಿಯಗಳನ್ನೂ ಸ್ಪಷ್ಟವಾಗಿ ನಿರೂಪಿಸಿದೆವು. ಇವುಗ

ಳೊಳಗೆ ಕರ್ಮೇಂದ್ರಿಯಗಳನ್ನು ಅಂಗೀಕರಿಸದವರು ಯಾರಾದರೂ ಇರುವಲ್ಲಿ ಅಂಥವ ರನ್ನು ಕುರಿತು "ಜ್ಞಾನೇಂದ್ರಿಯಗಳನ್ನು ಮಾತ್ರ ಏತಕ್ಕೆ ಅಂಗೀಕರಿಸುತ್ತೀರಿ" ಎಂಗು ಪ್ರಶ್ನೆ ಮಾಡಬೇಕು. "ಜ್ಞಾನೇಂದ್ರಿಯಗಳಿಲ್ಲದಿದ್ದರೆ ಶರೀರದಲ್ಲಿ ಜ್ಞಾನವು ಹುಟ್ಟುವುದಕ್ಕೆ ಮಾರ್ಗವಿಲ್ಲದಂತಾಗುವುದಾದುದರಿಂದ ಜ್ಞಾನೇಂದ್ರಿಯಗಳನ್ನು ಆವ ಶ್ಯಕವಾಗಿ ಒಪ್ಪಿಕೊಳ್ಳಬೇಕು" ಎಂದು ಹೇಳುವರಾದರೆ—"ಕರ್ಮೇಂದ್ರಿಯಗಳಿಲ್ಲ ದಿದ್ದರೆ ಶರೀರದಲ್ಲಿ ಉಚ್ಚಾರಣೆ ಮೊದಲಾದ ಕ್ರಿಯೆ ಹುಟ್ಟುವುದಕ್ಕೆ ಮಾರ್ಗವಿಲ್ಲದಂ ತಾಗುವುದರಿಂದ ಕರ್ಮೇಂದ್ರಿಯಗಳ ಅಂಗೀಕಾರವೂ ಆವಶ್ಯಕವಾಗಿರುವುದು" ಎಂದು ಅವರಿಗೆ ಪ್ರತ್ಯುತ್ತರವನ್ನು ಹೇಳಿ ಅವರ ಬಾಯನ್ನು ಅಡಗಿಸಬಹುದು.

"ಕರ್ಮೇಂದ್ರಿಯಗಳಿಲ್ಲದಿದ್ದರೂ ಬಾಯಿ, ಕೈ, ಕಾಲು ಮುಂತಾದ ಆ ಆ ಅವಯವಗಳಿಂದಲೇ ಉಚ್ಚಾರಣೆ ಮುಂತಾದ ಕ್ರಿಯೆ ಶರೀರದಲ್ಲಿ ಹುಟ್ಟಬಹುದು" ಎಂದು ಅವರು ಹೇಳುವರಾದರೆ—"ಜ್ಞಾನೇಂದ್ರಿಯಗಳಿಲ್ಲದಿದ್ದರೂ ಕಣ್ಣು, ಕಿವಿ, ಮೂಗು ಮುಂತಾದ ಆ ಆ ಅವಯವಗಳಿಂದಲೇ ಶರೀರದಲ್ಲಿ ಜ್ಞಾನವು ಹುಟ್ಟ ಬಹುದು" ಎಂದು ಪ್ರತ್ಯುತ್ತರವನ್ನು ಹೇಳಿ ಅವರನ್ನು ಅಡಗಿಸಬಹುದು.

ಕಣ್ಣು ಕಿವಿ, ಮೂಗು ಮೊದಲಾದ ಅವಯವಗಳೆಲ್ಲಾ ಪುಷ್ಕಲವಾಗಿದ್ದರೂ ಕೆಲವರು ರೂಪವನ್ನು ನೋಡದವರಾಗಿಯೂ ಶಬ್ದವನ್ನು ಕೇಳದವರಾಗಿಯೂ ವಾಸನೆ ಯನ್ನೂ ಆಘ್ರಾಣಿಸಲಾರದವರಾಗಿಯೂ ಇರುವುದನ್ನು ಲೋಕದಲ್ಲಿ ನಾವು ನೋಡು ತ್ತಿರುವೆವಾದುದರಿಂದ ಕಣ್ಣು, ಕಿವಿ, ಮೂಗು ಮೊದಲಾದ ಅಧಿಷ್ಠಾನಗಳಿಂದ ಆಗ ದಿರುವ ರೂಪಾದಿಜ್ಞಾನವನ್ನು ಉಂಟುಮಾಡುವ ಚಕ್ಷುರಾದೀಂದ್ರಿಯಗಳನ್ನು ಆ ಆ ಅಧಿಷ್ಠಾನದಲ್ಲಿ ಒಪ್ಪಿಕೊಂಡೇ ತೀರಬೇಕು" ಎಂದು ಹೇಳುವರಾದರೆ—

"ಬಾಯಿ, ಕೈ, ಕಾಲು ಮೊದಲಾದ ಅವಯವಗಳೆಲ್ಲಾ ಪುಷ್ಕಲವಾಗಿ ದ್ದರೂ ಕೆಲವರು ಉಚ್ಚಾರಣಸಾಮರ್ಥ್ಯವಿಲ್ಲದವರಾಗಿಯೂ, ಬರೆವಿಕೆ, ಪೋಣಿಸು ವಿಕೆ ಮುಂತಾದ ಯಾವ ಶಿಲ್ಪವನ್ನೂ ನಡಸುವ ಸಾಮರ್ಥ್ಯವಿಲ್ಲದವರಾಗಿಯೂ, ಸಂಚಾರಯೋಗ್ಯತೆಯೇ ಇಲ್ಲದವರಾಗಿಯೂ ಇರುವುದನ್ನು ಲೋಕದಲ್ಲಿ ನಾವು ನೋಡುತ್ತಿರುವೆವಾದುದರಿಂದ ಬಾಯಿ, ಕೈ, ಕಾಲು ಮೊದಲಾದ ಅಧಿಷ್ಠಾನಗ ಳಿಂದ ಆಗದಿರುವ ಉಚ್ಚಾರಣಾದಿಕ್ರಿಯೆಯನ್ನು ಉಂಟುಮಾಡುವ ವಾಗಾದೀಂದ್ರಿಯ ಗಳನ್ನೂ ಆ ಆ ಅಧಿಷ್ಠಾನಗಳಲ್ಲಿ ಒಪ್ಪಿಕೊಂಡೇ ತೀರಬೇಕು" ಎಂದು ಪ್ರತ್ಯುತ್ತರ ವನ್ನು ಹೇಳಬಹುದು

ಈ ಯುಕ್ತಿಗಳೆಲ್ಲಾ ಇರಲಿ—"ಆಗಮವೆಂಬ ಪ್ರಮಾಣದ ಬಲದಿಂದ ಜ್ಞಾನೇಂದ್ರಿಯಗಳನ್ನು ಅಂಗೀಕರಿಸುವೆವು" ಎಂದು ಹೇಳುವರಾದರೆ—"ಅದೇ ಆಗಮದಿಂದ ಕರ್ಮೇಂದ್ರಿಯಗಳೂ ಸಿದ್ಧಿಸಿರುವಲ್ಲಿ ಅವುಗಳನ್ನು ಹೇಗೆ ಅಪಲಪಿಸುತ್ತೀರಿ" ಎಂದು ಪ್ರತ್ಯುತ್ತರವನ್ನು ಹೇಳಬಹುದು.

೧೨೩ ಇಂದ್ರಿಯಸಂಖ್ಯಾವಿವಾದಪರಿಹಾರಃ.

ಹೀಗೆ ಇಂದ್ರಿಯಗಳು ಹನ್ನೊಂದೇ ಎಂಬುದು ಸಿದ್ಧವಾಗಿದ್ದರೂ ಶಾಸ್ತ್ರದೊಳಗ ಕೆಲವು ಕಡೆಯಲ್ಲಿ ಇಂದ್ರಿಯಗಳ ಸಂಖ್ಯೆಯನ್ನು ಹೆಚ್ಚಾಗಿಯೂ ಇನ್ನು ಕೆಲವು ಕಡೆಯಲ್ಲಿ ಕಡಮೆಯಾಗಿಯೂ ಹೇಳುವುದಕ್ಕೆ ಕಾರಣವೇನೆಂದರೆ 'ಅಧ್ಯವಸಾಯ, ಅಭಿಮಾನ, ಚಿಂತೆ' ಎಂಬ ಮನೋವೃತ್ತಿಭೇದದಿಂದ ಅಧಿಕಸಂಖ್ಯಾವ್ಯವಹಾರವೂ, ಶರೀರಾವಸಾನದಲ್ಲಿ ಜೀವನ ಜತೆಯಲ್ಲಿ ಹೋಗುವ ಹನ್ನೊಂದು ಇಂದ್ರಿಯಗಳೊಳಗೆ ಕೆಲವನ್ನು ತೋರಿಸುವುದಕ್ಕಾಗಿ ನ್ಯೂನಸಂಖ್ಯಾವಾದವೂ ಪ್ರಸ್ತುತವಾಗಿರುವುವು

೧೨೪ ಇಂದ್ರಿಯಾಣಾಮತಿಸೂಕ್ಷ್ಮತ್ವಂ.

ಜೀವನಿಗೆ ಶರೀರದಿಂದ ಉತ್ಕ್ರಮಣವುಂಟಾಗುವ ಸಮಯದಲ್ಲಿ ಅವನ ಜತೆಯಲ್ಲಿ ಹೋಗುವ ಇಂದ್ರಿಯಗಳನ್ನು ಪಕ್ಕದಲ್ಲಿ ಇರುವವರೂ ನೋಡಲಾರರಾದುದರಿಂದ ಇಂದ್ರಿಯಗಳು ಅಷ್ಟು ಸಣ್ಣವಾಗಿ ಪರಿಚ್ಛಿನ್ನವಾದ ಪರಿಮಾಣವುಳ್ಳುವೆಂಬ ಅಭಿಪ್ರಾಯದಿಂದ ಇಂದ್ರಿಯಗಳು ಅಣುವಾಗಿರುವುವು ಎಂದು ಸೂತ್ರಭಾಷ್ಯಗಳಲ್ಲಿ ಹೇಳಲ್ಪಟ್ಟಿರುವುದೇ ಹೊರತು ಇಂದ್ರಿಯಗಳಿಗೆ ಪರಮಾಣುತ್ವವನ್ನು ಹೇಳುವ ಅಭಿಪ್ರಾಯದಿಂದಲ್ಲ.

ಆದರೆ— ಏತೇ ಸರ್ವ ಏವ ಸಮಾಃ ಸರ್ವ ಏವಾನಂತಾಃ ಎಂಬ ಶ್ರುತಿಯಲ್ಲಿ ಇಂದ್ರಿಯಗಳಿಗೆ ಸಾಮ್ಯವನ್ನೂ ಆನಂತ್ಯವನ್ನೂ ಹೇಳಿರುವುದಕ್ಕೆ ಆಶಯವೇನು ? ಆನಂತ್ಯದಿಂದ ಇವುಗಳಿಗೆ ವಿಭುತ್ವವೇ ಸಿದ್ಧಿಸುವುದಲ್ಲವೆ ? ಇಲ್ಲ. ಎಲ್ಲಾ ಇಂದ್ರಿಯಗಳೂ ಜೀವನಿಗೆ ಉಪಕಾರಣವಾಗಿರುವುದರಿಂದ ಉಪಕರಣತ್ವ ಧರ್ಮವು ಇವುಗಳೆಲ್ಲದರಲ್ಲಿಯೂ ಸಮವಾದುದರಿಂದ ಸಮಾಃ ಎಂದು ಹೇಳಲ್ಪಟ್ಟಿರುವುದು. ಇಂಥ ಇಂದ್ರಿಯಗಳ ವೃತ್ತಿಗಳು ಎಂದರೆ ಕೆಲಸಗಳು ಅಸಂಖ್ಯಾತವಾಗಿರುವುದರಿಂದ ಅನಂತಾಃ ಎಂದೂ ಹೇಳಲ್ಪಟ್ಟಿರುವುದು.

೧೨೫ ಇಂದ್ರಿಯಾಣಾಮತಿಸೂಕ್ಷ್ಮತ್ವೇ ಉಪಪತ್ತಿಃ.

ಆದುದರಿಂದಲೇ ಈ ಇಂದ್ರಿಯಗಳು ಪರಿಚ್ಛಿನ್ನವಾದ ವಿಚಿತ್ರಪರಿಣಾಮಗಳಿಗೆ

ಭಾಗಿಗಳಾಗಿ ವಿಕಾರಶೀಲಗಳಾಗಿದ್ದುಕೊಂಡು ಜೀವನಿಗೆ ಕರ್ಮಾಧೀನವಾಗಿ ಬಂದೊದಗುವ ಆ ಆ ಶರೀರಗಳಿಗೆ ತಕ್ಕಂತೆ ದೊಡ್ಡವೂ ಚಿಕ್ಕವೂ ಆಗುತ್ತ ಮಶಕಶರೀರಕ್ಕೆ ಜೀವನು ಬಂದಾಗ ಅದಕ್ಕೆ ತಕ್ಕ ಪರಿಮಾಣವನ್ನೂ, ಗಜಶರೀರಕ್ಕೆ ಬಂದಾಗ ಅದಕ್ಕೆ ತಕ್ಕ ಪರಿಮಾಣವನ್ನೂ ಹೊಂದುವುವು. ಹೀಗೆ ಕಾಲಭೇದದಿಂದ ಪರಿಮಾಣಭೇದ ವುಂಟಾಗುವಲ್ಲಿ ವಿರೋಧವೇನೂ ಇಲ್ಲ.

### ೧೨೬ ಇಂದ್ರಿಯಾಣಾಂ ಸ್ವತೋ ದೋಷಾಭಾವಃ.

ಇಂಥ ಇಂದ್ರಿಯಗಳ ಅಧಿಷ್ಠಾನದಲ್ಲಿ ದೋಷವಿದ್ದರೆ ಅದರಿಂದ ಇವು ದೋಷ ವಿಶಿಷ್ಟವೆನಿಸಿಕೊಳ್ಳುವುವೇ ಹೊರತು ಸ್ವರೂಪದಿಂದಲ್ಲ. ಆದುದರಿಂದಲೇ ಅಂಧನಾಗಿರುವವನೊಬ್ಬನು ಪರಕಾಯಪ್ರವೇಶವಿದ್ಯೆಯಿಂದ ಇನ್ನೊಬ್ಬನ ಶರೀರವನ್ನಾಗಲಿ ಮೃತಶರೀರವನ್ನಾಗಲಿ ಪ್ರವೇಶಿಸಿದರೆ ಅಲ್ಲಿಯೂ ಅಂಧನಾಗಿಯೇ ಇರಬೇಕೆಂಬ ನಿರ್ಬಂಧ ವಿಲ್ಲದೆ ವಿಶಾಲವಾದ ಕಣ್ಣುಗಳುಳ್ಳವನಾಗಿಯೂ, ರೂಪವನ್ನು ನೋಡಬಲ್ಲವನಾಗಿಯೂ ಇರಬಹುದು.

### ೧೨೭ ಅದೃಷ್ಟವಿಶೇಷವಶಾತ್ ಇಂದ್ರಿಯವ್ಯಾಪಾರನಿರೋಧ ವಿಕಾಸಯೋಃ ತಾರತಮ್ಯಂ.

ಸುಷುಪ್ತಿ, ಮೂರ್ಛೆ ಮೊದಲಾದ ಅವಸ್ಥೆಗಳಲ್ಲಿ ಆ ಆ ಜೀವನ ಅದೃಷ್ಟ ವಿಶೇಷದಿಂದ ಇಂದ್ರಿಯವ್ಯಾಪಾರಗಳಿಗೆ ನಿರೋಧತಾರತಮ್ಯವುಂಟಾಗುವಂತೆಯೇ ಸ್ಥಾವರಾದ್ಯವಸ್ಥೆಗಳಲ್ಲಿಯೂ ಅದೃಷ್ಟದ ತಾರತಮ್ಯದಿಂದಲೇ ಇಂದ್ರಿಯವ್ಯಾಪಾರಗಳ ನಿರೋಧಕ್ಕೆ ತಾರತಮ್ಯವುಂಟಾಗುವುದು.

ಶುಭತರವಾಗಿಯೂ ಪ್ರಬಲವಾಗಿಯೂ ಇರುವ ಅದೃಷ್ಟದ ತಾರತಮ್ಯದಿಂದಲೇ ಗಂಧರ್ವರು, ಯೋಗಿಗಳು ಮೊದಲಾದವರ ಇಂದ್ರಿಯಗಳಿಗೆ ಸೂಕ್ಷ್ಮವಾಗಿಯೂ ವ್ಯವಹಿತವಾಗಿಯೂ ವಿಪ್ರಕೃಷ್ಟವಾಗಿಯೂ ಇರುವ ವಿಷಯಗಳನ್ನು ಗ್ರಹಿಸುವ ಸಾಮರ್ಥ್ಯವುಂಟಾಗುವುದು

### ೧೨೮ ಕೇಷಾಂಚಿನ್ಮತೇ ತತ್ತಜ್ಜೀವಾನಾಂ ತತ್ತದಿಂದ್ರಿಯನಿಯಮ ವ್ಯವಸ್ಥಾಭಾವಃ.

ಆ ಆ ಜೀವರುಗಳ ಅದೃಷ್ಟವಿಶೇಷದಿಂದ ಆ ಆ ಇಂದ್ರಿಯಗಳು ಅವರವರಿಗೇ ಉಪಕರಣಗಳಾಗಿರಬೇಕೆಂಬ ವ್ಯವಸ್ಥೆಯಿದ್ದರೂ, ಸಜೀವವಾದ ಮತ್ತೊಂದು ಶರೀರ ವನ್ನು ಮತ್ತೊಬ್ಬ ಜೀವನು ಪರಕಾಯಪ್ರವೇಶವಿದ್ಯೆಯಿಂದ ಪ್ರವೇಶಿಸಿದಾಗ ಆ ಶರೀರದಲ್ಲಿರುವ ಇಂದ್ರಿಯಗಳು ಈಗ ಪ್ರವೇಶಿಸಿದ ಜೀವನಿಗೆ ಉಪಕರಣಗಳಾಗ ಬಹುದು. ಪ್ರಬಲವಾದ ಅದೃಷ್ಟಾಂತರವೇ ಇದಕ್ಕೆ ಕಾರಣವಾಗಿರುವುದು.

## ೧೨೯ ವಸ್ತುತಸ್ತು ತತ್ತಜ್ಜೀವಾನಾಂ ತತ್ತದಿಂದ್ರಿಯ ನಿಯಮವ್ಯವಸ್ಥೈವ.

ಅಥವಾ—ಪರಕಾಯವನ್ನು ಪ್ರವೇಶಿಸುವ ಜೀವನು ತನ್ನ ಇಂದ್ರಿಯಗಳೊಡನೆಯೇ ಪರಕಾಯದಲ್ಲಿ ಪ್ರವೇಶಿಸುವನಾದುದರಿಂದ ಪರಶರೀರದಲ್ಲಿಯೂ ತನ್ನ ಇಂದ್ರಿಯಗಳಿಂದಲೇ ಸುಖದುಃಖಗಳನ್ನು ಅನುಭವಿಸಬಹುದಾದಕಾರಣ ಹಿಂದೆ ಹೇಳಿದ ಇಂದ್ರಿಯವ್ಯವಸ್ಥೆಗೆ ಲೋಪವೇನೂ ಇರುವುದಿಲ್ಲ. ವಿಚಾರಮಾಡಿ ನೋಡಿದರೆ ಈ ಪಕ್ಷವೇ ಸಮಂಜಸವಾಗಿ ಕಾಣುವುದು. ಏತಕ್ಕೆಂದರೆ—ಪರಕಾಯಪ್ರವೇಶವನ್ನು ಮಾಡುವ ಜೀವನು ಮೃತಶರೀರವನ್ನು ಪ್ರವೇಶಿಸುವನಾದರೆ ಆಗ ಅಲ್ಲಿ ತನ್ನ ಇಂದ್ರಿಯಗಳಿಂದಲೇ ಸುಖದುಃಖಗಳನ್ನು ಅನುಭವಿಸಬೇಕಲ್ಲವೆ? ಹಾಗಾದರೆ ಸಜೀವಶರೀರವನ್ನು ಪ್ರವೇಶಿಸುವಾಗಲೂ ಇದೇ ನ್ಯಾಯವನ್ನು ಅವಲಂಬಿಸುವುದು ಯುಕ್ತವಾಗಿರುವುದು. ಆದುದರಿಂದಲೇ—

ಶರೀರಂ ಯದವಾಪ್ನೋತಿ ಯಚ್ಚಾಪ್ಯುತ್ಕ್ರಾಮತೀಶ್ವರಃ ।
ಗೃಹೀತ್ವೈತಾನಿ ಸಂಯಾತಿ ವಾಯುರ್ಗಂಧಾನಿವಾಶಯಾತ್ ॥

ಎಂಬ ಭಗವದ್ಗೀತಾವಚನವೂ ಸಂಗತವಾಗುವುದು.

## ೧೩೦ ಆಪ್ಯಾಯಕವಿಯೋಗಸಂಯೋಗಾಭ್ಯಾಮಿಂದ್ರಿಯಶಕ್ತೇಃ ಹ್ರಾಸವೃದ್ಧೀ.

ಇಂದ್ರಿಯಗಳಿಗೆ ಆಪ್ಯಾಯಕಗಳಾದ ಪಂಚಭೂತಗಳ ಭಾಗಗಳು ಶರೀರವಿನಾಶಕಾಲದಲ್ಲಿ ಶರೀರವನ್ನು ಬಿಟ್ಟು ಹೊರಟುಹೋಗುವುದರಿಂದ ಆಗ ಆಪ್ಯಾಯಕವಿರಹಿತವಾದ ಇಂದ್ರಿಯಗಳ ಶಕ್ತಿಗಳು ತಗ್ಗುವುವು. ಶರೀರಾಂತರವನ್ನು ಪ್ರವೇಶಿಸುವಾಗ ಪುನಃ ಅವುಗಳ ಶಕ್ತಿ ಪೂರ್ಣವಾಗುವುದು.

## ೧೩೧ ಆಪ್ರಳಯಮಿಂದ್ರಿಯಾಣಾಂ ನಿತ್ಯತ್ವಂ.

ಸಂಸಾರವನ್ನು ಬಿಟ್ಟು ಮೋಕ್ಷಕ್ಕೆ ಹೋಗುವ ಜೀವನಿಂದ ಇಲ್ಲಿಯೇ ತ್ಯಜಿಸಲ್ಪಟ್ಟ ಇಂದ್ರಿಯಗಳನ್ನು ಇನ್ನೊಬ್ಬ ಜೀವನು ತನಗೆ ಉಪಕರಣವಾಗಿ ಸ್ವೀಕರಿಸುವನು. ಅಥವಾ ಅಂಥ ಇಂದ್ರಿಯಗಳು ಯಾರೊಬ್ಬರಿಗೂ ಉಪಕರಣವಾಗದೆ ಈ ಪ್ರಕೃತಿಮಂಡಲದಲ್ಲಿಯೇ ಇದ್ದು ಮಹಾಪ್ರಳಯದಲ್ಲಿ ಲಯವನ್ನು ಹೊಂದುವುವೆಂದೂ ಹೇಳಬಹುದು. ಅಂತು ಪ್ರಳಯಕಾಲದವರೆಗೂ ಇಂದ್ರಿಯಗಳು ನಿತ್ಯವಾಗಿರುವುವೆಂಬುದು ಪ್ರಮಾಣಸಿದ್ಧವಾಗಿರುವುದು.

## ೧೩೨ ಪ್ರತಿಶರೀರಂ ಕರ್ಮೇಂದ್ರಿಯೋತ್ಪತ್ತಿವಿನಾಶವಾದಿಯಾದವ ಮತಖಂಡನಂ.

ಪ್ರತಿಶರೀರದಲ್ಲಿಯೂ ಶರೀರದ ಉತ್ಪತ್ತಿಯೊಡನೆ ಕರ್ಮೇಂದ್ರಿಯಗಳ ಉತ್ಪತ್ತಿಯನ್ನೂ, ಶರೀರದ ವಿನಾಶದೊಡನೆ ಇವುಗಳಿಗೂ ವಿನಾಶವನ್ನೂ ಯಾದವಪ್ರಕಾಶ ಮತದವರು ಹೇಳುವರು. ಇದು ಶ್ರೀಭಾಷ್ಯಕಾರರಿಗೆ ಸಮ್ಮತವಾದುದಲ್ಲ. ಏತಕ್ಕೆಂದರೆ ಇಂದ್ರಿಯಗಳನ್ನು ಅಹಂಕಾರತತ್ತ್ವದ ಕಾರ್ಯವಾಗಿ ಅಂಗೀಕರಿಸುವ ಸಿದ್ಧಾಂತದಲ್ಲಿ ಪ್ರತಿಶರೀರದ ಉತ್ಪತ್ತಿವಿನಾಶಕಾಲಗಳಲ್ಲಿಯೂ ಅಹಂಕಾರತತ್ತ್ವದ ಉತ್ಪತ್ತಿವಿನಾಶಗಳಿಲ್ಲವಾದುದರಿಂದ ಕರ್ಮೇಂದ್ರಿಯಗಳಿಗೂ ಪ್ರತಿಶರೀರದಲ್ಲಿಯೂ ಉತ್ಪತ್ತಿವಿನಾಶಗಳನ್ನು ಅಂಗೀಕರಿಸುವುದಕ್ಕೆ ಅವಕಾಶವಿಲ್ಲ.

## ೧೩೩ ಇಂದ್ರಿಯವಿಷಯೇ ನಾನಾವಾದಿನಾಂ ನಾನಾವಿಧಾಃ ಪ್ರಲಾಪಾಃ.

ಬೌದ್ಧರು ಚಾರ್ವಾಕರು, ವೈಶೇಷಿಕರು — ಇವರೇ ಮೊದಲಾದವರು ಇಂದ್ರಿಯಗಳಿಗೆ ೧. ಸ್ತ್ರೀಪುಂನಪುಂಸಕವಿಭಾಗವನ್ನು ಹೇಳುವರು. ೨. ಕೆಲವರು ಕರ್ಮೇಂದ್ರಿಯಗಳನ್ನೇ ಅಂಗೀಕರಿಸುವುದಿಲ್ಲ. ೩. ಶರೀರದಲ್ಲಿ ಒಂದೇ ಇಂದ್ರಿಯವಿರುವುದಲ್ಲದೆ ಹನ್ನೊಂದು ಇಂದ್ರಿಯಗಳಿಲ್ಲವೆಂದು ಕೆಲವರು ಹೇಳುವರು. ೪. ಅದರಲ್ಲಿಯೂ ತ್ವಗಿಂದ್ರಿಯವೊಂದನ್ನೇ ಸ್ವೀಕರಿಸಬೇಕೆಂದು ಇನ್ನು ಕೆಲವರು ಹೇಳುವರು. ೫ ಶರೀರವೇ ಇಂದ್ರಿಯವೆನಿಸಿಕೊಳ್ಳುವುದಲ್ಲದೆ ಶರೀರಕ್ಕಿಂತಲೂ ಭಿನ್ನವಾದ ಇಂದ್ರಿಯವೆಂಬ ಪದಾರ್ಥವೇ ಇಲ್ಲವೆಂದು ಕೆಲವರ ಮತ. ೬. ಶರೀರದ ಉತ್ಪತ್ತಿವಿನಾಶಗಳೊಡನೆ ಕರ್ಮೇಂದ್ರಿಯಗಳಿಗೂ ಉತ್ಪತ್ತಿವಿನಾಶಗಳುಂಟಾಗುವುವೆಂಬುದು ಇನ್ನು ಕೆಲವರ ಮತ. ೭. ಮನಇಂದ್ರಿಯವನ್ನು ವಿಭುವಾಗಿ ಎಂದರೆ ವ್ಯಾಪಕವಾಗಿ ಕೆಲವರು ಹೇಳುವರು. ೮. ಕೆಲವರು ಇದನ್ನು (ಮನಸ್ಸನ್ನು) ನಿತ್ಯವೆನ್ನುವರು. ೯. ಕೆಲವರು ತೈಜಸ ಎಂದರೆ ರಾಜಸಾಹಂಕಾರಜನ್ಯವೆನ್ನುವರು. ೧೦. ಕೆಲವರು ತೇಜೋರೂಪವೆನ್ನುವರು. ೧೧. ಮತ್ತೆ ಕೆಲವರು ಮನಸ್ತತ್ತ್ವವೇ ಇಲ್ಲವೆನ್ನುವರು. ೧೨. ಇನ್ನು ಕೆಲವರು ಭೌತಿಕವೆನ್ನುವರು.

## ೧೩೪ ತೇಷಾಮಾಗಮಬಾಧಿತತ್ವಾತ್ ಅನಾದರಣೀಯತ್ವಂ.

ಹೀಗೆ ಯುಕ್ತ್ಯಾಭಾಸಗಳಿಂದ ಸ್ವಕಪೋಲಕಲ್ಪಿತವಾಗಿ ಹೊರಟಿರುವ ಬಾಹ್ಯಮತಗಳು ವೇದಾಂತಿಗಳ ಮುಂದೆ ನಿಲ್ಲಲಾರವೆಂಬುದನ್ನು ಸ್ಪಷ್ಟಪಡಿಸುವುದಕ್ಕಾಗಿಯೇ ಇಂದ್ರಿಯಗಳ ವಿಚಾರಗಳನ್ನು ಸಂಪೂರ್ಣವಾಗಿ ಇಲ್ಲಿ ನಿರೂಪಿಸಿ ತೋರಿಸಿರುವೆವು. ಇದರಲ್ಲಿ ಶ್ರುತಿಪ್ರಮಾಣದಿಂದ ಜ್ಞಾನೇಂದ್ರಿಯ, ಕರ್ಮೇಂದ್ರಿಯ ಎಂಬ ವಿಭಾಗ

ವನ್ನು ನಾವು ತೋರಿಸಿರುವೆವಾದುದರಿಂದ ಸ್ತ್ರೀಂದ್ರಿಯ, ಪುರುಷೇಂದ್ರಿಯ, ನಪುಂಸಕೇಂದ್ರಿಯ ಎಂಬ ವಿಭಾಗಕ್ಕೆ ಅವಕಾಶವಿಲ್ಲ.

ಹನ್ನೊಂದು ಇಂದ್ರಿಯಗಳೇ ಇರುವುವೆಂದು ತೋರಿಸಿರುವೆವಾದುದರಿಂದ ಕರ್ಮೇಂದ್ರಿಯಗಳನ್ನು ಅಂಗೀಕರಿಸದಿರುವುದಕ್ಕಾಗಲಿ, ಒಂದೇ ಇಂದ್ರಿಯವೆಂಬ ಪಕ್ಷಕ್ಕಾಗಲಿ, ತ್ವಗಿಂದ್ರಿಯವೊಂದೇ ಇರುವುದೆಂಬ ಪಕ್ಷಕ್ಕಾಗಲಿ, ಬುದ್ಧ್ಯಹಂಕಾರಚಿತ್ತಗಳೆಂಬ ಹೆಚ್ಚು ಇಂದ್ರಿಯಗಳನ್ನು ಕಲ್ಪಿಸುವುದಕ್ಕಾಗಲಿ, ಮನಸ್ತತ್ತ್ವವೇ ಇಲ್ಲವೆನ್ನುವುದಕ್ಕಾಗಲಿ ಅವಕಾಶವಿಲ್ಲ.

ಇಂದ್ರಿಯಗಳು ಶಬ್ದತನ್ಮಾತ್ರೆಯ ಉತ್ಪತ್ತಿಲಯಸಮಕಾಲದಲ್ಲಿ ಉತ್ಪತ್ತಿಲಯಗಳನ್ನು ಪಡೆವುವೆಂದು ತೋರಿಸಿದುದರಿಂದ ಶರೀರದ ಉತ್ಪತ್ತಿವಿನಾಶಗಳೊಡನೆ ತಾವೂ ಉತ್ಪತ್ತಿವಿನಾಶಗಳನ್ನು ಪಡೆವುವೆಂದು ಕಲ್ಪಿಸಲು ಅವಕಾಶವಿಲ್ಲ.

ಮಹಾಪ್ರಳಯದವರೆಗೂ ಇಂದ್ರಿಯಗಳು ನಿತ್ಯವೆಂದು ಹೇಳಿದುದರಿಂದ ಇವುಗಳು ಶರೀರಕ್ಕಿಂತಲೂ ಪೃಥಕ್ಕಾದ ತತ್ತ್ವವೆಂದು ಸಿದ್ಧಿಸುವಕಾರಣ ಇದನ್ನು ಅಪಲಾಪಮಾಡಲು ಅವಕಾಶವಿಲ್ಲ. ಮತ್ತು ಮನಸ್ತತ್ತ್ವವನ್ನು ನಿತ್ಯವಾಗಿ ಕಲ್ಪಿಸಲೂ ಅವಕಾಶವಿಲ್ಲ.

ಹನ್ನೊಂದು ಇಂದ್ರಿಯಗಳನ್ನೂ ಸಾತ್ತ್ವಿಕಾಹಂಕಾರಕಾರ್ಯಗಳಾಗಿ ತೋರಿಸಿದುದರಿಂದ ರಾಜಸಾಹಂಕಾರಕಾರ್ಯಗಳಾಗಿಯೂ, ಭೌತಿಕಗಳಾಗಿಯೂ, ಮನಸ್ಸನ್ನು ತೇಜೋರೂಪವಾಗಿಯೂ, ಹೇಳಲು ಅವಕಾಶವಿಲ್ಲ. ಆದಕಾರಣ ಇಂಥವಗ ಪ್ರಲಾಪಗಳೆಲ್ಲಾ ಆಗಮದಿಂದ ಬಾಧಿಸಲ್ಪಡುವುವಾದುದರಿಂದ ಅನಾದರಣೀಯವಾಗಿರುವುವು.

ಇಂತು ತತ್ತ್ವಶುದ್ಧಿಯೆಂಬ ವಿಶಿಷ್ಟಾದ್ವೈತಪ್ರಕರಣಗ್ರಂಥದೊಳ್
ಅಚಿತ್ತತ್ತ್ವಪರಿಚ್ಛೇದದಲ್ಲಿ ಏಕಾದಶೇಂದ್ರಿಯನಿರೂಪಣ
ಪ್ರಕರಣಂ ಸಪ್ತಮಂ.

---

## ಅಷ್ಟಮಪ್ರಕರಣಂ.

---

### ೧೩೫ ಅಥ ತನ್ಮಾತ್ರಸಾಮಾನ್ಯಲಕ್ಷಣಂ.

ಇನ್ನು ತನ್ಮಾತ್ರಗಳ ಮತ್ತು ಪಂಚಭೂತಗಳ ಸೃಷ್ಟಿಕ್ರಮವನ್ನು ತೋರಿಸುವೆವು. ಭೂತಗಳ ಅವ್ಯವಹಿತಸೂಕ್ಷ್ಮಾವಸ್ಥೆಯೊಡನೆ ಕೂಡಿರುವ ದ್ರವ್ಯವು ತನ್ಮಾತ್ರ

ವೆನಿಸಿಕೊಳ್ಳುವುದು. ಅಥವಾ ಉತ್ಕಟಾವಸ್ಥೆಯನ್ನು ಹೊಂದದ ಎಂದರೆ ಸೂಕ್ಷ್ಮವಾದ ಶಬ್ದಾದಿಗುಣಗಳಿಗೆ ಆಶ್ರಯವಾದ ದ್ರವ್ಯವು ತನ್ಮಾತ್ರವೆನಿಸಿಕೊಳ್ಳುವುದು.

## ೧೩೬. ಉಕ್ತಲಕ್ಷಣಸ್ಯ ಲಕ್ಷ್ಯೇ ಸಂಗಮನಂ.

ದಧಿರೂಪವಾಗಿ ಪರಿಣಮಿಸುವುದಕ್ಕೆ ಆರಂಭಿಸಿರುವ ಕ್ಷೀರಕ್ಕೆ ಕ್ಷೀರತ್ವಾವಸ್ಥೆ, ದಧಿತ್ವಾವಸ್ಥೆ ಈ ಎರಡು ಅವಸ್ಥೆಗಳ ಮಧ್ಯಕಾಲದ ಅವಸ್ಥೆಯೊಂದುಂಟು; ಎಂದರೆ—ಕ್ಷೀರತ್ವಾವಸ್ಥೆಯ ಅವಸಾನವೂ ದಧಿತ್ವಾವಸ್ಥೆಯ ಆರಂಭವೂ ಆಗಿರುವ ಅವಸ್ಥೆಯೊಂದುಂಟು. ಅದರಂತೆ ಪಂಚಭೂತಗಳಾಗಿ ಪರಿಣಮಿಸುವುದಕ್ಕೆ ಆರಂಭಿಸಿರುವ ತಾಮಸಾಹಂಕಾರಕ್ಕೆ ಅಹಂಕಾರತ್ವಾವಸ್ಥೆ, ಭೂತತ್ವಾವಸ್ಥೆ ಈ ಎರಡು ಅವಸ್ಥೆಗಳ ಮಧ್ಯಕಾಲದ ಅವಸ್ಥೆಯೊಂದುಂಟು: ಎಂದರೆ—ಅಹಂಕಾರತ್ವಾವಸ್ಥೆಯ ಅವಸಾನವೂ ಭೂತತ್ವಾವಸ್ಥೆಯ ಆರಂಭವೂ ಆಗಿರುವ ಅವಸ್ಥೆಯೊಂದುಂಟು. ಆ ಅವಸ್ಥೆ ತನ್ಮಾತ್ರವೆನಿಸಿಕೊಳ್ಳುವುದು. ತತ್ಸಂಬಂಧದಿಂದ ಅಂಥ ಅವಸ್ಥೆಯೊಡನೆ ಕೂಡಿದ ದ್ರವ್ಯವೂ ತನ್ಮಾತ್ರವೆನಿಸಿಕೊಳ್ಳುವುದು. ಅಂಥ ದ್ರವ್ಯವೇ ಪಂಚಭೂತಗಳಿಗೆ ಉಪಾದಾನಕಾರಣವಾಗಿರುವುದು. ಸಾಂಖ್ಯರು ಹೇಳುವಂತೆ ಶಬ್ದಾದಿಗುಣಮಾತ್ರದಿಂದಲೇ ಪಂಚಭೂತಸೃಷ್ಟಿಯಿಲ್ಲ.

## ೧೩೭. ಭೂತಾನಾಂ ಸಾಮಾನ್ಯಲಕ್ಷಣಕಥನಪೂರ್ವಕಂ ಶಾಂತತ್ವ-ಘೋರತ್ವ-ಮೂಢತ್ವ-ರೂಪಾವಸ್ಥಾಪ್ರದರ್ಶನಂ.

ಉತ್ಕಟಾವಸ್ಥೆಯನ್ನು ಹೊಂದಿದ ಶಬ್ದಾದಿಗುಣಗಳಿಗೆ ಆಶ್ರಯವಾದ ದ್ರವ್ಯವು ಭೂತವೆನಿಸಿಕೊಳ್ಳುವುದು. ಈ ಭೂತಗಳಲ್ಲಿ ಶಾಂತತ್ವ, ಘೋರತ್ವ, ಮೂಢತ್ವ ಎಂಬ ಮೂರು ಅವಸ್ಥೆಗಳುಂಟು. ಶಾಂತತ್ವವೆಂದರೆ ಅನುಕೂಲವೇದನೀಯತ್ವ; ಘೋರತ್ವವೆಂದರೆ ಪ್ರತಿಕೂಲವೇದನೀಯತ್ವ; ಮೂಢತ್ವವೆಂದರೆ ಉದಾಸೀನವೇದನೀಯತ್ವ. ಭೌತಿಕವಾದ ಪದಾರ್ಥಗಳಲ್ಲಿ ನಮಗೆ ಕೆಲವು ಅನುಕೂಲವಾಗಿಯೂ, ಕೆಲವು ಪ್ರತಿಕೂಲವಾಗಿಯೂ, ಕೆಲವು ಉದಾಸೀನವಾಗಿಯೂ, ಕಾಣುವುದಕ್ಕೆ ಈ ಶಾಂತತ್ವ ಘೋರತ್ವ ಮೂಢತ್ವಗಳೇ ಕಾರಣವಾಗಿರುವುವು ತನ್ಮಾತ್ರದಲ್ಲಿ ಈ ಅವಸ್ಥೆಗಳಿಲ್ಲ. ಈ ಅವಸ್ಥೆಗಳನ್ನೇ ಉತ್ಕಟಾವಸ್ಥೆಗಳೆಂದು ವಿವಕ್ಷೆಮಾಡಿರುವೆವು. ಆದುದರಿಂದಲೇ ತನ್ಮಾತ್ರಲಕ್ಷಣದಲ್ಲಿ ಉತ್ಕಟಾವಸ್ಥೆಯನ್ನು ಹೊಂದದ ಎಂಬ ವಿಶೇಷಣವನ್ನೂ, ಭೂತಲಕ್ಷಣದಲ್ಲಿ ಉತ್ಕಟಾವಸ್ಥೆಯನ್ನು ಹೊಂದಿದ ಎಂಬ ವಿಶೇಷಣವನ್ನೂ ಪರಸ್ಪರವ್ಯಾವೃತ್ತಿಗಾಗಿ ಹೇಳಿರುವೆವು. ತನ್ಮಾತ್ರದ್ರವ್ಯ, ಭೂತ

ದ್ರವ್ಯ ಈ ಎರಡೂ ಶಬ್ದಾದಿಗುಣಗಳಿಗೆ ಆಶ್ರಯವಾಗಿರುವುದರಿಂದ ಅಷ್ಟುಮಾತ್ರ ವನ್ನೇ ಲಕ್ಷಣವಾಗಿ ಹೇಳುವುದಾದರೆ ಪರಸ್ಪರವೈಲಕ್ಷಣ್ಯವು ತೋರುವುದಿಲ್ಲವಷ್ಟೆ.

**೧೩೮ ಭೂತಾನಾಂ ಲಘುಭೂತಂ ಲಕ್ಷಣಾಂತರಂ.**

ಈ ಭೂತಲಕ್ಷಣವನ್ನು ಇನ್ನೂ ವಿವೇಚನೆಮಾಡಿ ಹೇಳುವುದಾದರೆ ಉತ್ಕಟಾವಸ್ಥೆಯನ್ನು ಹೊಂದಿದ ಶಬ್ದಗುಣಕ್ಕೆ ಆಶ್ರಯವಾದ ದ್ರವ್ಯವು ಭೂತವೆನಿಸಿಕೊಳ್ಳುವುದು ಎಂದು ಇಷ್ಟುಮಾತ್ರಲಕ್ಷಣವೇ ಸಾಕಾಗಿರುವುದು. ಸ್ಪರ್ಶಾದಿಗುಣಗಳನ್ನೆಲ್ಲಾ ಈ ಲಕ್ಷಣದಲ್ಲಿ ಸೇರಿಸಬೇಕಾದ ಆವಶ್ಯಕತೆಯಿಲ್ಲ. ಶಬ್ದಗುಣವು ಉತ್ಕಟಾವಸ್ಥೆಯನ್ನು ಹೊಂದಿ ಐದು ಭೂತಗಳಲ್ಲಿಯೂ ಇರುವುದರಿಂದ ಲಕ್ಷಣಸಮನ್ವಯವಾಗುವುದು.

ತನ್ಮಾತ್ರೆಗಳಲ್ಲಿಯೂ ಭೂತಗಳಲ್ಲಿಯೂ ಪ್ರಾಕೃತಾಪ್ರಾಕೃತವಿಭಾಗವನ್ನು ಇಂದ್ರಿಯಗಳಿಗೆ ಹೇಳಿದಂತೆಯೇ ತಿಳಿಯಬೇಕು.

**೧೩೯ ತನ್ಮಾತ್ರಾಣಾಂ ಭೂತಾನಾಂ ಚ ಪ್ರತ್ಯೇಕಂ ಪಂಚವಿಧತ್ವಂ.**

ಶಬ್ದತನ್ಮಾತ್ರೆ, ಸ್ಪರ್ಶತನ್ಮಾತ್ರೆ, ರೂಪತನ್ಮಾತ್ರೆ, ರಸತನ್ಮಾತ್ರೆ, ಗಂಧತನ್ಮಾತ್ರೆ ಎಂದು ತನ್ಮಾತ್ರೆ ಐದುಬಗೆಯಾಗಿಯೂ, ಆಕಾಶ, ವಾಯು, ಅಗ್ನಿ, ಜಲ, ಪೃಥಿವಿ ಎಂದು ಭೂತವೂ ಐದುಬಗೆಯಾಗಿಯೂ ಇರುವುವು.

**೧೪೦ ಅಥ ತನ್ಮಾತ್ರವಿಶೇಷಾಣಾಂ ಪ್ರತ್ಯೇಕಂ ಲಕ್ಷಣತ್ರಯಪ್ರದರ್ಶನಂ.**

ತನ್ಮಾತ್ರೆಗಳಿಗೆ ಮೂರುಬಗೆಯಾದ ಲಕ್ಷಣವನ್ನು ಶಾಸ್ತ್ರಕಾರರು ಹೇಳುವರು. ಇವುಗಳಲ್ಲಿ ಮೊದಲನೆಯದು—ತಾಮಸಾಹಂಕಾರ, ಆಕಾಶ ಈ ಎರಡರ ಮಧ್ಯಮಾವಸ್ಥೆಯೊಡನೆ ಕೂಡಿದ ದ್ರವ್ಯವು ಶಬ್ದತನ್ಮಾತ್ರೆಯೆನಿಸಿಕೊಳ್ಳುವುದು.

ಆಕಾಶ, ವಾಯು ಈ ಎರಡರ ಮಧ್ಯಮಾವಸ್ಥೆಯೊಡನೆ ಕೂಡಿದ ದ್ರವ್ಯವು ಸ್ಪರ್ಶತನ್ಮಾತ್ರೆಯೆನಿಸಿಕೊಳ್ಳುವುದು. ವಾಯು, ಅಗ್ನಿ ಈ ಎರಡರ ಮಧ್ಯಮಾವಸ್ಥೆಯೊಡನೆ ಕೂಡಿದ ದ್ರವ್ಯವು ರೂಪತನ್ಮಾತ್ರೆಯೆನಿಸಿಕೊಳ್ಳುವುದು. ಅಗ್ನಿ, ಜಲ ಈ ಎರಡರ ಮಧ್ಯಮಾವಸ್ಥೆಯೊಡನೆ ಕೂಡಿದ ದ್ರವ್ಯವು ರಸತನ್ಮಾತ್ರೆಯೆನಿಸಿಕೊಳ್ಳುವುದು. ಜಲ, ಪೃಥಿವಿ ಈ ಎರಡರ ಮಧ್ಯಮಾವಸ್ಥೆಯೊಡನೆ ಕೂಡಿದ ದ್ರವ್ಯವು ಗಂಧತನ್ಮಾತ್ರೆಯೆನಿಸಿಕೊಳ್ಳುವುದು.

ಎರಡನೆಯ ಲಕ್ಷಣ—ಉತ್ಕಟಾವಸ್ಥೆಯನ್ನು ಹೊಂದದ ಶಬ್ದಗುಣವುಳ್ಳುದಾಗಿಯೂ, ಸ್ಪರ್ಶಶೂನ್ಯವಾಗಿಯೂ ಇರುವ ದ್ರವ್ಯವು ಶಬ್ದತನ್ಮಾತ್ರೆಯೆನಿಸಿಕೊಳ್ಳು

ವುದು. ಉತ್ಕಟಾವಸ್ಥೆಯನ್ನು ಹೊಂದದ ಸ್ಪರ್ಶಗುಣವುಳ್ಳದಾಗಿಯೂ, ರೂಪಶೂನ್ಯವಾಗಿಯೂ ಇರುವ ದ್ರವ್ಯವು ಸ್ಪರ್ಶತನ್ಮಾತ್ರೆಯೆನಿಸಿಕೊಳ್ಳುವುದು. ಉತ್ಕಟಾವಸ್ಥೆಯನ್ನು ಹೊಂದದ ರೂಪಗುಣವುಳ್ಳದಾಗಿಯೂ, ರಸಶೂನ್ಯವಾಗಿಯೂ ಇರುವ ದ್ರವ್ಯವು ರೂಪತನ್ಮಾತ್ರೆಯೆನಿಸಿಕೊಳ್ಳುವುದು. ಉತ್ಕಟಾವಸ್ಥೆಯನ್ನು ಹೊಂದದ ರಸಗುಣವುಳ್ಳದಾಗಿಯೂ, ಗಂಧಶೂನ್ಯವಾಗಿಯೂ ಇರುವ ದ್ರವ್ಯವು ರಸತನ್ಮಾತ್ರೆಯೆನಿಸಿಕೊಳ್ಳುವುದು. ಉತ್ಕಟಾವಸ್ಥೆಯನ್ನು ಹೊಂದದ ಗಂಧಗುಣವುಳ್ಳ ದ್ರವ್ಯವು ಗಂಧತನ್ಮಾತ್ರೆಯೆನಿಸಿಕೊಳ್ಳುವುದು.

ಈ ಪ್ರತಿಯೊಂದು ಲಕ್ಷಣದಲ್ಲಿಯೂ ಉತ್ಕಟಾವಸ್ಥೆಯನ್ನು ಹೊಂದದ ಎಂಬ ದಳವನ್ನು ಹೇಳದಿದ್ದರೆ ಕ್ರಮವಾಗಿ ಆಕಾಶ, ವಾಯು, ಅಗ್ನಿ, ಜಲ, ಪೃಥಿವಿ ಈ ಭೂತಗಳಲ್ಲಿ ಲಕ್ಷಣಗಳಿಗೆ ಅತಿವ್ಯಾಪ್ತಿದೋಷವುಂಟಾಗುವುದರಿಂದ ಆ ದಳವನ್ನು ಹೇಳಬೇಕಾಗಿರುವುದು. ಮೊದಲಿಂದ ನಾಲ್ಕು ಲಕ್ಷಣಗಳಲ್ಲಿ ಪ್ರತಿಯೊಂದರಲ್ಲಿಯೂ ಎರಡನೆಯ ವಿಶೇಷಣವನ್ನು ಹೇಳದಿದ್ದರೆ ಕ್ರಮವಾಗಿ ಸ್ಪರ್ಶ-ರೂಪ-ರಸ-ಗಂಧ-ತನ್ಮಾತ್ರೆಗಳಲ್ಲಿ ಅತಿವ್ಯಾಪ್ತಿದೋಷವುಂಟಾಗುವುದರಿಂದ ಆ ವಿಶೇಷಣವು ಹೇಳಲ್ಪಟ್ಟಿರುವುದು.

ಮೂರನೆಯ ಲಕ್ಷಣ—ಆಕಾಶಕ್ಕೆ ಉಪಾದಾನಕಾರಣವಾದ ದ್ರವ್ಯವು ಶಬ್ದತನ್ಮಾತ್ರೆಯೆನಿಸಿಕೊಳ್ಳುವುದು. ವಾಯುವಿಗೆ ಉಪಾದಾನಕಾರಣವಾದ ದ್ರವ್ಯವು ಸ್ಪರ್ಶತನ್ಮಾತ್ರೆಯೆನಿಸಿಕೊಳ್ಳುವುದು. ಅಗ್ನಿಗೆ ಉಪಾದಾನಕಾರಣವಾದ ದ್ರವ್ಯವು ರೂಪತನ್ಮಾತ್ರೆಯೆನಿಸಿಕೊಳ್ಳುವುದು. ಜಲಕ್ಕೆ ಉಪಾದಾನಕಾರಣವಾದ ದ್ರವ್ಯವು ರಸತನ್ಮಾತ್ರೆಯೆನಿಸಿಕೊಳ್ಳುವುದು. ಪೃಥಿವಿಗೆ ಉಪಾದಾನಕಾರಣವಾದ ದ್ರವ್ಯವು ಗಂಧತನ್ಮಾತ್ರೆಯೆನಿಸಿಕೊಳ್ಳುವುದು.

೧೪೧ ತನ್ಮಾತ್ರೇಭ್ಯೋ ಭೂತಸೃಷ್ಟೌ ಸಾಂಖ್ಯಮತೋಪನ್ಯಾಸಃ.

ಇಲ್ಲಿ ಸಾಂಖ್ಯರು ಹೇಳುವುದೇನೆಂದರೆ--ಐದು ತನ್ಮಾತ್ರೆಗಳೂ ಸಾಕ್ಷಾತ್ತಾಗಿ ತಾಮಸಾಹಂಕಾರದಿಂದಲೇ ಹುಟ್ಟುವುವು. ಅವುಗಳಲ್ಲಿ ಶಬ್ದತನ್ಮಾತ್ರೆ ಇತರಸಹಾಯವಿಲ್ಲದೆಯೇ ಆಕಾಶವನ್ನು ಉಂಟುಮಾಡುವುದು. ಸ್ಪರ್ಶ ಮೊದಲಾದ ನಾಲ್ಕು ತನ್ಮಾತ್ರೆಗಳೂ ಪೂರ್ವಪೂರ್ವತನ್ಮಾತ್ರೆಗಳ ಸಹಾಯವನ್ನು ಪಡೆದು ವಾಯು ಮೊದಲಾದ ಉತ್ತರೋತ್ತರ ಭೂತಗಳನ್ನು ಉಂಟುಮಾಡುವುವು; ಎಂದರೆ--ಸ್ಪರ್ಶತನ್ಮಾತ್ರೆ ಶಬ್ದತನ್ಮಾತ್ರೆಯೊಂದರ ಸಹಾಯದಿಂದ ವಾಯುವನ್ನೂ, ರೂಪತನ್ಮಾತ್ರೆ ಶಬ್ದಸ್ಪರ್ಶಗಳೆರಡರ ಸಹಾಯದಿಂದ ಅಗ್ನಿಯನ್ನೂ, ರಸತನ್ಮಾತ್ರೆ ಶಬ್ದ ಸ್ಪರ್ಶ ರೂಪಗಳೆಂಬ ಮೂರರ

ಸಹಾಯದಿಂದ ಜಲವನ್ನೂ, ಗಂಧತನ್ಮಾತ್ರೆ, ಶಬ್ದ, ಸ್ಪರ್ಶ, ರೂಪ, ರಸಗಳೆಂಬ ನಾಲ್ಕರ ಸಹಾಯದಿಂದ ಪೃಥಿವಿಯನ್ನೂ ಉಂಟುಮಾಡುವುವೆಂದು ಹೇಳುವರು.

### ೧೪೨ ತತ್ಖಂಡನಂ.

ಇದು ಸಂಗತವಲ್ಲ. ಏತಕ್ಕೆಂದರೆ— ಆಕಾಶಾದ್ವಾಯುಃ, ವಾಯೋರಗ್ನಿಃ, ಅಗ್ನೇರಾಪಃ, ಅದ್ಭ್ಯಃ ಪೃಥಿವೀ ಎಂಬುದಾಗಿ ಸೃಷ್ಟಿಪ್ರಕರಣದಲ್ಲಿ ಅನನ್ಯಥಾಸಿದ್ಧವಾದ ವಾಕ್ಯಗಳಿಂದ ಉಪಾದಾನಕಾರಣಗಳ ಕ್ರಮವಿಶೇಷವನ್ನು ತೋರಿಸಿರುವುದಕ್ಕೆ ವಿರೋಧವುಂಟಾಗುವುದು ಅಲ್ಲದೆ ಇದೇ ಶ್ರುತಿಗೆ ವ್ಯಾಖ್ಯಾನರೂಪವಾಗಿ ೧ ವಿಷ್ಣುಪುರಾಣದಲ್ಲಿ ಉಕ್ತವಾಗಿರುವ ಪರಾಶರಮಹರ್ಷಿಯ ವಚನಗಳೊಡನೆ ವಿರೋಧವುಂಟಾಗುವುದು. ಮತ್ತು ಈ ವಚನಗಳಿಗೆ ಸಮಾನಾರ್ಥಕವಾದ ೨ ಶ್ರೀಪಾಂಚರಾತ್ರಗ್ರಂಥವಚನಗಳಿಗೂ ವಿರೋಧವುಂಟಾಗುವುದು.

ಅಷ್ಟೌ ಪ್ರಕೃತಯಃ ಷೋಡಶ ವಿಕಾರಾಃ ಎಂಬ ಶ್ರುತಿಯಿಂದ ಇಪ್ಪತ್ತು ನಾಲ್ಕು ತತ್ತ್ವಗಳೊಳಗೆ ಪ್ರಕೃತಿ, ಮಹತ್, ಅಹಂಕಾರ, ಪಂಚತನ್ಮಾತ್ರೆಗಳು

---

೧ ಭೂತಾದಿಸ್ತು ವಿಕುರ್ವಾಣಃ ಶಬ್ದತನ್ಮಾತ್ರಕಂ ತತಃ ।
ಸಸರ್ಜ ಶಬ್ದತನ್ಮಾತ್ರಮಾಕಾಶಂ ಶಬ್ದಲಕ್ಷಣಂ ॥
ಆಕಾಶಸ್ತು ವಿಕುರ್ವಾಣಃ ಸ್ಪರ್ಶಮಾತ್ರಂ ಸಸರ್ಜ ಹ ।
ಬಲವಾನಭವದ್ವಾಯುಃ ತಸ್ಯ ಸ್ಪರ್ಶೋ ಗುಣೋ ಮತಃ ॥
ತತೋ ವಾಯುರ್ವಿಕುರ್ವಾಣೋ ರೂಪಮಾತ್ರಂ ಸಸರ್ಜ ಹ।
ಇತ್ಯಾದಿ

೨ ಶಬ್ದತನ್ಮಾತ್ರಮಭವತ್ತಸ್ಮಾಕಾಶಮಜಾಯತ ।
ಸ್ಪರ್ಶಮಾತ್ರಂ ತಥಾಕಾಶಾತ್ತಸ್ಮಾದ್ವಾಯುರಜಾಯತ ॥
ರೂಪಮಾತ್ರಮಭೂದ್ವಾಯೋಸ್ತಸ್ಮಾದಗ್ನಿರಜಾಯತ ।
ರಸಮಾತ್ರಂ ತು ಜಜ್ಞೇಽಗ್ನೇಸ್ತಸ್ಮಾದಾಪಃ ಪ್ರಜಜ್ಞಿರೇ ॥
ಗಂಧತನ್ಮಾತ್ರಮದ್ಭ್ಯೋಽಪಿ ಗಂಧಮಾತ್ರಾತ್ತಥಾ ಮಹೀ ।
ಶಬ್ದೈಕಗುಣ ಆಕಾಶಃ ಶಬ್ದಸ್ಪರ್ಶಗುಣೋಽನಿಲಃ ॥
ಶಬ್ದಸ್ಪರ್ಶೌ ತಥಾ ರೂಪಂ ತದ್ವಾನಗ್ನಿರುದಾಹೃತಃ ।
ಶಬ್ದಸ್ಪರ್ಶೌ ರಸೋ ರೂಪಂ ಚಾತುರ್ಗುಣ್ಯಮಪಾಂ ಸ್ಮೃತಂ ॥
ಶಬ್ದಸ್ಪರ್ಶೌ ರಸೋ ರೂಪಂ ಗಂಧಃ ಪಂಚಗುಣಾ ಮಹೀ । ಇತಿ.

ಈ ಎಂಟೂ ಪ್ರಕೃತಿಯೆಂದೂ, ಎಂದರೆ ಉಪಾದಾನಕಾರಣವೆಂದೂ, ಹನ್ನೊಂದು ಇಂದ್ರಿಯಗಳು ಪಂಚಭೂತಗಳು ಈ ಹದಿನಾರೂ ವಿಕಾರಗಳೇ ಹೊರತು ಪ್ರಕೃತಿಯಲ್ಲವೆಂದೂ, ನಿಷ್ಕರ್ಷಿಸಲ್ಪಟ್ಟಿರುವಕಾರಣ ಉತ್ತರೋತ್ತರತನ್ಮಾತ್ರೆಗೆ ಪೂರ್ವಪೂರ್ವಭೂತವು ಕಾರಣವೆಂದು ಹೇಳುವುದಕ್ಕಿಲ್ಲವಾಗಿ ತಾಮಸಾಹಂಕಾರವನ್ನೇ ತನ್ಮಾತ್ರೆಗಳಿಗೆ ಉಪಾದಾನಕಾರಣವಾಗಿ ಒಪ್ಪಿಕೊಳ್ಳಬೇಕಾದುದರಿಂದ ಸಾಂಖ್ಯ ಮತವೇ ಸಮಂಜಸವಾಗಿರುವುದೆಂದು ಭ್ರಾಂತಿಪಡಬಾರದು.

ಏತಕ್ಕೆಂದರೆ— ಈ ಶ್ರುತಿ ಚತುರ್ವಿಂಶತಿತತ್ತ್ವಗಳನ್ನು ಪ್ರಕೃತಿಯೆಂದೂ ವಿಕೃತಿಯೆಂದೂ ವಿಭಾಗಮಾಡಿ ತೋರಿಸುವುದಕ್ಕೂ, ಅದರಲ್ಲಿಯೂ ಎಂಟು ಪ್ರಕೃತಿಗಳೆಂದೂ ಹದಿನಾರು ವಿಕೃತಿಗಳೆಂದೂ ವ್ಯವಸ್ಥೆಮಾಡುವುದಕ್ಕೂ ಪ್ರವರ್ತಿಸಿದುದಲ್ಲ; ಮತ್ತೇನೆಂದರೆ—ಅಷ್ಟೌ ಪ್ರಕೃತಯಃ ಷೋಡಶ ವಿಕಾರಾಃ ಶರೀರೇ ತಸ್ಯ ಎಂದು ವಾಕ್ಯಕ್ರಮವಿರುವುದು. ಇದರಲ್ಲಿ ಶರೀರವನ್ನು ಆರಂಭಿಸುವ ತತ್ತ್ವಗಳು ಪ್ರಕೃತಿ, ಮಹತ್, ಅಹಂಕಾರ, ಪಂಚಭೂತಗಳು ಈ ಎಂಟೇ ಆಗಿರುವುದರಿಂದ ಇವು ಪ್ರಕೃತಿಯೆನಿಸಿಕೊಳ್ಳುವುವು; ಏಕಾದಶೇಂದ್ರಿಯಗಳೂ, ಶಬ್ದಮೊದಲಾದ ಐದು ವಿಷಯಗಳೂ ಈ ಹದಿನಾರೂ ಶರೀರವನ್ನು ಆಶ್ರಯಿಸಿಕೊಂಡಿರುವುವಲ್ಲದೆ ಶರೀರಕ್ಕೆ ಉಪಾದಾನಕಾರಣವಲ್ಲವಾದುದರಿಂದ ಪ್ರಕೃತಿಯಲ್ಲವಾಗಿ ವಿಕೃತಿಯೆಂದು ವ್ಯವಹರಿಸಲ್ಪಡುವುವು. ಆದಕಾರಣ ಐದು ತನ್ಮಾತ್ರೆಗಳೂ ತಾಮಸಾಹಂಕಾರದಿಂದಲೇ ಉಂಟಾಗುವುವೆಂಬ ಸಾಂಖ್ಯರ ಮತವು ಶ್ರುತಿವಿರುದ್ಧವಾದುದರಿಂದ ಅನಾದರಣೀಯವಾಗಿರುವುದು.

ಹೀಗೆ ಸಾಂಖ್ಯಮತವನ್ನು ನಿರಾಕರಿಸಿದುದಕ್ಕೆ ಶಬ್ದತನ್ಮಾತ್ರೆಯ ಪ್ರಥಮಲಕ್ಷಣಕ್ಕೆ ಸ್ಪರ್ಶಾದಿತನ್ಮಾತ್ರೆಗಳಲ್ಲಿ ಅತಿವ್ಯಾಪ್ತಿಪರಿಹಾರವೇ ಪ್ರಯೋಜನವಾಗಿರುವುದು.

## ೧೪೩ ಅಥ ಆಕಾಶಲಕ್ಷಣಂ.

ಸ್ಪರ್ಶರಹಿತವಾಗಿಯೂ ಉತ್ಕಟಾವಸ್ಥೆಯನ್ನು ಹೊಂದಿದ ಶಬ್ದಕ್ಕೆ ಆಶ್ರಯವಾಗಿಯೂ ಇರುವ ಭೂತವು ಆಕಾಶವೆನಿಸಿಕೊಳ್ಳುವುದು. ವಾಯುಮೊದಲಾದ ಭೂತಗಳನ್ನು ವ್ಯಾವರ್ತಿಸುವುದಕ್ಕಾಗಿ ಪ್ರಥಮದಳವೂ, ಪ್ರಕೃತಿ, ಮಹತ್, ಅಹಂಕಾರ, ತನ್ಮಾತ್ರೆ ಇವುಗಳನ್ನು ವ್ಯಾವರ್ತಿಸುವುದಕ್ಕಾಗಿ ದ್ವಿತೀಯದಳವೂ, ಶಬ್ದತನ್ಮಾತ್ರೆಯನ್ನು ವ್ಯಾವರ್ತಿಸುವುದಕ್ಕಾಗಿ ಉತ್ಕಟಾವಸ್ಥೆಯನ್ನು ಹೊಂದಿದ ಎಂಬ ಪದವೂ ಉಕ್ತವಾಗಿರುವುವು.

ಶ್ರೋತ್ರೇಂದ್ರಿಯಕ್ಕೆ ಆಪ್ಯಾಯಕವಾದ ಭೂತವು ಆಕಾಶವೆನಿಸಿಕೊಳ್ಳು ವುದು ಎಂದು ಇನ್ನೊಂದು ಲಕ್ಷಣವನ್ನೂ ಇದಕ್ಕೆ ಹೇಳಬಹುದು.

### ೧೪೪ ಅವಕಾಶಪ್ರದಾನೇನ ಆಕಾಶಸ್ಯ ಉಪಕಾರಕತ್ವಂ.

ಇಂಥ ಆಕಾಶವು ಅವಕಾಶವನ್ನು ಕೊಡುವುದರ ಮೂಲಕ ಉಪಕರಿಸುತ್ತಿರು ವುದೆಂದು ಶಾಸ್ತ್ರಬಲದಿಂದ ಒಪ್ಪಿಕೊಳ್ಳಬೇಕು. ಅವಕಾಶವನ್ನು ಕೊಡುವುದು ಎಂದರೆ ಸ್ಪರ್ಶವುಳ್ಳ ಪದಾರ್ಥಗಳ ಸಂಚಾರಕ್ಕೆ ಅಡ್ಡಿಮಾಡದಿರುವಿಕೆ.

### ೧೪೫ ಅನ್ವಯವ್ಯತಿರೇಕಾಭ್ಯಾಂ ಆಕಾಶಸ್ಯ ಅವಕಾಶಪ್ರದಾತೃತ್ವ ವ್ಯಭಿಚಾರಾಶಂಕಾ.

"ಓಹೋ—ಇದು ಬಹಳ ಸಾಹಸವಾಗಿ ತೋರುವುದು. ಹೇಗೆಂದರೆ-ಸ್ಪರ್ಶ ವುಳ್ಳ ಪದಾರ್ಥಗಳ ಸಂಚಾರಕ್ಕೆ ಅಡ್ಡಿಮಾಡದಿರುವಿಕೆ ಎಂದರೆ ಅಂಥ ಪದಾರ್ಥಗಳ ಸಂಚಾರವು ಹುಟ್ಟದಿರುವುದಕ್ಕೆ ಕಾರಣವಾಗದೆ ಇರುವಿಕೆಯೆಂದಾಗಿ ಅವುಗಳ ಸಂಚಾ ರವು ಹುಟ್ಟುವುದಕ್ಕೆ ಕಾರಣವಾಗಿರುವಿಕೆಯೆಂದು ಪರ್ಯವಸಾನವಾಗುವುದು. ಹೀಗೆ ಸಂಚಾರಕಾರಣತ್ವವನ್ನು ಆಕಾಶದಲ್ಲಿ ಒಪ್ಪಿಕೊಳ್ಳುವುದರಿಂದ ಪ್ರಯೋಜನವಿಲ್ಲವೆಂ ಬುದು ಮಾತ್ರವೇ ಅಲ್ಲದೆ ಗೌರವವೂ ಉಂಟು. ಹೇಗೆಂದರೆ—ಸ್ಪರ್ಶಗುಣವುಳ್ಳ ಎರಡು ಪದಾರ್ಥಗಳಿಗೆ ಪರಸ್ಪರ ಪ್ರತಿಘಾತವು ಉಂಟಾದರೆ ಅದು ಅವುಗಳ ಗತಿಗೆ ಪ್ರತಿಬಂಧಕವಾಗಿರುವುದು. ಅಂಥ ಪ್ರತಿಬಂಧಕವಿಲ್ಲದಿದ್ದರೆ ಆ ಪದಾರ್ಥಗಳಿಗೆ ಸಂಚಾರವು ಸ್ವತಃ ಉಂಟಾಗಬಹುದಾದುದರಿಂದ ಇದಕ್ಕಾಗಿ ಆಕಾಶವು ಬೇಕಾಗಿಲ್ಲ. ಆಕಾಶರೂಪವಾಗಿ ಪರಿಣಮಿಸದೆ ಉಳಿದಿರುವ ಪ್ರಕೃತಿಯ ಮಿಕ್ಕ ಪ್ರದೇಶಗಳಲ್ಲಿಯೂ ಆಕಾಶವಿಲ್ಲದಿದ್ದರೂ ಸಂಚಾರವುಂಟಾಗಬಹುದು. ಆಕಾಶವಾಗಿ ಪರಿಣಮಿಸಿರುವ ಭಾಗದಲ್ಲಿಯೂ ಮೇಲೆ ಹೇಳಿದ ಪ್ರತಿಬಂಧಕವಿದ್ದರೆ ಆಕಾಶವಿದ್ದರೂ ಸಂಚಾರವಿಲ್ಲ ದೆಯೂ ಇರುವುದು.

ಆದಕಾರಣ ಆಕಾಶವಿಲ್ಲದಿದ್ದರೂ ಅಲ್ಲಿ ಸಂಚಾರವಿರುವುದನ್ನೂ, ಆಕಾಶ ವಿದ್ದರೂ ಇಲ್ಲಿ ಸಂಚಾರವಿಲ್ಲದಿರುವುದನ್ನೂ ನಾವು ಶಾಸ್ತ್ರಪ್ರಮಾಣದಿಂದಲೂ ಪ್ರತ್ಯ ಕ್ಷಪ್ರಮಾಣದಿಂದಲೂ ತಿಳಿಯುತ್ತಿರುವೆವಾದುದರಿಂದ ಅನ್ವಯವ್ಯತಿರೇಕಗಳೆರಡೂ ತಪ್ಪಿರುವಕಾರಣ ಸಂಚಾರಕ್ಕೆ ಆಕಾಶವು ಕಾರಣವೆಂದು ಹೇಳುವುದು ಸಾಹಸಿಕೋಕ್ತಿ ಯಾಗಿರುವುದಲ್ಲದೆ ವಿವೇಚಕರ ನಂಬಿಕೆಗೆ ಯೋಗ್ಯವಾದುದಲ್ಲ" ಎಂದು ದುಡುಕಿ ಹೇಳಬಾರದು.

## ೧೪೩ ತತ್ಪರಿಹಾರಃ

ಆ ಆ ಪ್ರಮಾಣಗಳಿಂದ ನಿರಾಬಾಧವಾಗಿ ಸಿದ್ಧಿಸಿರುವ ಪದಾರ್ಥಗಳನ್ನು ಗೌರವವೆಂಬ ಯುಕ್ತ್ಯಾಭಾಸದಿಂದಲಾಗಲಿ ನಿಷ್ಪ್ರಯೋಜನತ್ವವೆಂಬ ಯುಕ್ತ್ಯಾಭಾಸ ದಿಂದಲಾಗಲಿ ಅಪಲಾಪಮಾಡಲು ಸಾಧ್ಯವಿಲ್ಲ. ಹಾಗೆ ಅಪಲಾಪಮಾಡುವುದಾದರೆ ದಾರಿಯಲ್ಲಿ ಹೋಗುತ್ತಿರುವಾಗ ನಮ್ಮ ಕಣ್ಣಿಗೆ ಗೋಚರವಾಗುವ ಸಾವಿರಾರು ಲೋಷ್ಟಗಳನ್ನು ಗೌರವವೆಂಬ ಯುಕ್ತ್ಯಾಭಾಸದಿಂದ ಒಂದೇ ಲೋಷ್ಟವೆಂದು ಒಪ್ಪಿ ಕೊಳ್ಳಬೇಕಾಗಿ ಬರುವುದು. ಮತ್ತು ಲೋಷ್ಟದರ್ಶನವು ನಿಷ್ಪ್ರಯೋಜನವಾಗಿರುವು ದೆಂಬ ಯುಕ್ತ್ಯಾಭಾಸದಿಂದ ಸುವರ್ಣದರ್ಶನವೇ ನಮಗೆ ಉಂಟಾಗಿರುವುದೆಂಬ ಕಲ್ಪನೆಯನ್ನೂ ಒಪ್ಪಿಕೊಳ್ಳಬೇಕಾಗಿ ಬರುವುದು.

ಹಾಗಾದರೆ—ನಿಷ್ಪ್ರಯೋಜನವಾದ ಅರ್ಥಗಳನ್ನು ಪ್ರಮಾಣಗಳಿಂದ ಒಪ್ಪಿ ಕೊಳ್ಳುವುದಕ್ಕೆ ಹೇಗೆ ಆದೀತೆಂದು ಆಶಂಕಿಸಬಾರದು. ಪ್ರಮಾಣದಿಂದ ಪದಾರ್ಥವು ಸಿದ್ಧವಾಗಿದ್ದರೆ ಅದಕ್ಕೆ ಅನುಸಾರವಾಗಿ ಪ್ರಯೋಜನವನ್ನು ಬುದ್ಧಿವಂತರು ಕಲ್ಪಿಸಿ ಕೊಳ್ಳಬೇಕಲ್ಲದೆ ಪ್ರಯೋಜನವಿಲ್ಲವೆಂಬ ಇಷ್ಟುಮಾತ್ರದಿಂದಲೇ ಪ್ರಮಾಣಸಿದ್ಧ ವಾದ ಪದಾರ್ಥವನ್ನು ಅನ್ಯಥಾಕರಿಸುವುದಕ್ಕೆ ಅವಕಾಶವಿಲ್ಲ. ಕಣ್ಣುಗಳಿಲ್ಲದವನಿಗೆ ಸೂರ್ಯನ ಬೆಳಕಿನಿಂದ ಪ್ರಯೋಜನವಿಲ್ಲವೆಂಬ ಮಾತ್ರದಿಂದಲೇ ಸೂರ್ಯನೇ ಇಲ್ಲವೆಂದು ಅಪಲಾಪಮಾಡಲು ಸಾಧ್ಯವಾದೀತೆ ?

ಆದಕಾರಣ ಆಕಾಶವು ಅವಕಾಶಪ್ರದಾನಮಾಡುವುದರ ಮೂಲಕ ಉಪಕರಿಸು ತ್ತಿರುವುದೆಂಬ ಅರ್ಥವು ಶ್ರುತಿಮೊದಲಾದ ಪ್ರಮಾಣಗಳಿಂದ ಸಿದ್ಧವಾಗಿರುವುದರಿಂದ ಈ ವಿಷಯದಲ್ಲಿ ಪ್ರತ್ಯಕ್ಷಾದಿಮೂಲಕವಾದ ಯುಕ್ತ್ಯಾಭಾಸಗಳು ಪ್ರಯೋಜನಕಾರಿ ಗಳಾಗಲಾರವು

## ೧೪೭ ಅಂಡಬಹಿರ್ವರ್ತ್ಯವಕಾಶಸ್ಯ ಆಕಾಶಾಜನ್ಯತ್ವೇಽಪಿ ಅಂಡಾಂತರ್ವರ್ತ್ಯವಕಾಶಸ್ಯ ಆಕಾಶಜನ್ಯತ್ವೋಪಪತ್ತಿಃ.

ಆಕಾಶರೂಪವಾಗಿ ಪರಿಣಮಿಸಿರುವ ಪ್ರಕೃತಿಯ ಒಂದುಭಾಗದಲ್ಲಲ್ಲದೆ ಆಕಾಶ ವಾಗಿ ಪರಿಣಮಿಸದ ಇತರಭಾಗದಲ್ಲಿಯೂ ಅವಕಾಶವೆಂಬುದು ಇದ್ದೇ ಇರುವುದು. ಹಾಗಿಲ್ಲದಿದ್ದರೆ ಮೋಕ್ಷವನ್ನು ಪಡೆವಾಗ ಜೀವನು ಪರಮಪದವನ್ನು ಕುರಿತು ಹೋಗುವ ಸಂದರ್ಭದಲ್ಲಿ ಸ್ಪರ್ಶಗುಣವುಳ್ಳ ಭೂತಸೂಕ್ಷ್ಮಗಳೊಡನೆ ಕೂಡಿ ವಿರಜಾ ನದಿಯವರೆಗೂ ಹೋಗುತ್ತಾನೆ ಎಂದು ಪ್ರಮಾಣಸಿದ್ಧವಾಗಿರುವ ಅರ್ಥವು ಹೇಗೆ ಸಂಗತವಾದೀತು. ಆದಕಾರಣ ಅಂಡದ ಹೊರಗಡೆಯಲ್ಲಿರುವ ಅವಕಾಶಕ್ಕೆ ಆಕಾ

ಶವು ಕಾರಣವಾಗದಿದ್ದರೂ ಅಂಡಾಂತರ್ವರ್ತಿಯಾದ ಅವಕಾಶಕ್ಕೆ ಆಕಾಶವು ಕಾರಣವಾಗಿರುವುದರಲ್ಲಿ ಯಾವ ವಿರೋಧವೂ ಇಲ್ಲ. ಜ್ಯೋತಿಷ್ಟೋಮಯಾಗದಿಂದ ಉಂಟಾಗುವ ಸ್ವರ್ಗಸುಖಪ್ರಾಪ್ತಿಗೆ ಅಗ್ನಿಹೋತ್ರವು ಕಾರಣವಾಗದಿದ್ದರೂ ಅಗ್ನಿಹೋತ್ರದಿಂದ ಉಂಟಾಗುವ ಸ್ವರ್ಗಸುಖಪ್ರಾಪ್ತಿಗೆ ಅಗ್ನಿಹೋತ್ರವು ಕಾರಣವಾಗಿಯೇ ಇರುವುದೆಂಬುದನ್ನು ತಪ್ಪಿಸಲು ಯಾರಿಗೂ ಶಕ್ತಿಯಿಲ್ಲವಷ್ಟೆ.

### ೧೪೮ ನೈಯಾಯಿಕಾದ್ಯುಕ್ತಸ್ಯ ಆಕಾಶನಿತ್ಯತ್ವಸ್ಯ ಆಗಮಬಾಧ್ಯತ್ವಂ.

ಆಕಾಶಕ್ಕೆ ಉತ್ಪತ್ತಿವಿನಾಶಗಳಿಲ್ಲವೆಂದೂ, ಆತ್ಮನಂತೆ ಇದು ನಿತ್ಯವಾಗಿಯೇ ಇರುವುದೆಂದೂ ಹೇಳುವ ನೈಯಾಯಿಕರೇ ಮೊದಲಾದವರು ಇದರ ನಿತ್ಯತ್ವವನ್ನು ಸಾಧಿಸುವುದಕ್ಕಾಗಿ ಹೇಳುವ ಆಭಾಸರೂಪವಾದ ಅನುಮಾನಗಳನ್ನು ನಿರಾಕರಿಸುವುದಕ್ಕಾಗಿ ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಸ್ಸಂಭೂತಃ ಎಂಬುವೇ ಮೊದಲಾದ ಶ್ರುತಿಗಳನ್ನು ಉದಾಹರಿಸಿ ಆಗಮಬಾಧೆ ಮುಂತಾದ ದೋಷಗಳನ್ನು ತೋರಿಸಬೇಕು.

### ೧೪೯ ಆಕಾಶಸ್ಯ ಪ್ರತ್ಯಕ್ಷತ್ವಂ.

ಯಾವಾಗ ಕಣ್ಣನ್ನು ತೆರೆದು ನೋಡುತ್ತೇವೆಯೋ ಆಕ್ಷಣದಲ್ಲಿಯೇ ವಿಲಂಬವಿಲ್ಲದೆ ಇದು ಆಕಾಶವು ಎಂಬ ಜ್ಞಾನವು ಅಬಾಧಿತವಾಗಿ ನಮಗೆ ಉಂಟಾಗುವುದರಿಂದ ಇಂಥ ಆಕಾಶವನ್ನು ಪ್ರತ್ಯಕ್ಷಪ್ರಮಾಣಸಿದ್ಧವಾಗಿ ಒಪ್ಪಿಕೊಳ್ಳಬೇಕು.

### ೧೫೦ ಪ್ರಭಾಯಾ ಆಕಾಶತ್ವವಾದನಿರಾಕರಣಂ.

"ಕಣ್ಣನ್ನು ತೆರೆದು ನೋಡುವಾಗ ಬೆಳಕೆಂಬ ಒಂದು ಪದಾರ್ಥವು ಕಣ್ಣಿಗೆ ಬೀಳುವುದರಿಂದ ಅದನ್ನೇ ಆಕಾಶವೆಂದು ಭ್ರಾಂತಿಗೊಂಡು ತಿಳಿದುಕೊಳ್ಳಬಹುದಲ್ಲದೆ ಬೆಳಕಿಗಿಂತಲೂ ಬೇರೊಂದಾದ ಆಕಾಶವೆಂಬ ಪದಾರ್ಥ ಒಂದಿಲ್ಲ" ಎಂದು ಭ್ರಾಂತಿಗೊಂಡು ಮರುಳಾಗಬಾರದು. ಬೆಳಕೇ ಅವಕಾಶವೆನಿಸಿಕೊಳ್ಳುವುದಾದರೆ ಇಲ್ಲಿ ಬೆಳಕು-ಇಲ್ಲಿ ಅಂಧಕಾರವು ಎಂದು ಬೆಳಕಿಗೂ ಅಂಧಕಾರಕ್ಕೂ ಅಧಿಕರಣವಾಗಿ (ಆಧಾರವಾಗಿ) ಒಂದು ಪದಾರ್ಥವನ್ನು ತಿಳಿಯಕೂಡದಷ್ಟೆ.

### ೧೫೧ ಅರೂಪಿಣ ಆಕಾಶಸ್ಯ ಚಕ್ಷುರ್ಗ್ರಾಹ್ಯತ್ವಾನುಪಪತ್ತಿಶಂಕಾ.

ಅಯ್ಯಾ—ಆಕಾಶವು ಪ್ರತ್ಯಕ್ಷಪ್ರಮಾಣಸಿದ್ಧವೆಂಬ ಸಿದ್ಧಾಂತವು ಸಮಂಜಸವಾದುದಲ್ಲ. ಏತಕ್ಕೆಂದರೆ ಆಕಾಶದಲ್ಲಿ ರೂಪವಿಲ್ಲವಷ್ಟೆ ; ರೂಪವಿಲ್ಲದ ಪದಾರ್ಥವನ್ನು ಕಣ್ಣಿನಿಂದ ನೋಡುವ ಬಗೆ ಹೇಗೆ? ಹಾಗೆ ನೋಡುವುದಾದರೆ ಈಶ್ವರನನ್ನೂ ನಾವು ಕಣ್ಣಿನಿಂದ ನೋಡಬಹುದಾಗಿ ಬರುವುದು; ಇದು ಸಾಧ್ಯವಲ್ಲವೆಂಬುದನ್ನು

ಶ್ರುತಿಯೇ ಹೀಗೆ ಸ್ಪಷ್ಟವಾಗಿ ಹೇಳುತ್ತಿರುವುದು—ನ ಸಂದೃಶೇ ತಿಷ್ಠತಿ ರೂಪಮಸ್ಯ ನ ಚಕ್ಷುಷಾ ಪಶ್ಯತಿ ಕಶ್ಚನೈನಂ. ಈಶ್ವರನಂತೆ ಆಕಾಶದಲ್ಲಿಯೂ ರೂಪವಿಲ್ಲದಪ್ರಯುಕ್ತ ಚಾಕ್ಷುಷಜ್ಞಾನಕ್ಕೆ ಆಕಾಶವನ್ನು ಗೋಚರಪಡಿಸಿಕೊಳ್ಳಲು ಅವಕಾಶವಿಲ್ಲದಿರುವಾಗ ಆಕಾಶವು ಪ್ರತ್ಯಕ್ಷವೆಂದು ಹೇಗೆ ಒಪ್ಪಿಕೊಳ್ಳಲಾದೀತು ?

೧೫೨ ಅರೂಪಿಣೋಽಪಿ ಅಕಾಶಸ್ಯ ಕಾಲವತ್
ಚಕ್ಷುರ್ಗ್ರಾಹ್ಯತ್ವೋಪಪತ್ತಿಃ.

ಕಾಲವು ಷಡಿಂದ್ರಿಯಗಳಿಗೂ ವೇದ್ಯವಾಗಿರುವುದರಿಂದ ಚಕ್ಷುರಿಂದ್ರಿಯಕ್ಕೂ ವೇದ್ಯವಾಗಿರುವುದಷ್ಟೆ. ಕಾಲದಲ್ಲಿ ರೂಪವಿಲ್ಲದಿದ್ದರೂ ಅದನ್ನು ಕಣ್ಣಿನಿಂದ ನೋಡುವ ಬಗೆ ಹೇಗೆ? “ ಪ್ರತ್ಯಕ್ಷಪ್ರಮಾಣದಮೇಲೆ ಯಾವ ಯುಕ್ತಿಯೂ ಕೆಂದುವುದಿಲ್ಲ ; ರೂಪಶೂನ್ಯವಾಗಿದ್ದರೂ ಕಾಲವು ಪ್ರತ್ಯಕ್ಷಗೋಚರವಾಗಿರುವುದರಿಂದ ಕಾಲಭಿನ್ನ ದ್ರವ್ಯದಲ್ಲಿ ಚಾಕ್ಷುಷಜ್ಞಾನವುಂಟಾಗಬೇಕಾದರೆ ರೂಪವು ಕಾರಣವಾಗಿರಬೇಕು ಎಂಬ ನಿಯಮವನ್ನು ಒಪ್ಪಿಕೊಳ್ಳಬೇಕು ” ಎಂಬುದಾದರೆ— ರೂಪಶೂನ್ಯವಾಗಿದ್ದರೂ ಆಕಾಶವೂ ಕಾಲದಂತೆ ಪ್ರತ್ಯಕ್ಷಗೋಚರವಾಗಿರುವುದರಿಂದ ಆಕಾಶ, ಕಾಲ ಈ ಉಭಯವ್ಯತಿರಿಕ್ತವಾದ ದ್ರವ್ಯದಲ್ಲಿ ಚಾಕ್ಷುಷಜ್ಞಾನವುಂಟಾಗಬೇಕಾದರೆ ರೂಪವು ಕಾರಣವಾಗಿರಬೇಕು ಎಂಬ ನಿಯಮವನ್ನೂ ಏತಕ್ಕೆ ಒಪ್ಪಕೂಡದು ?

೧೫೩ ಪಂಚೀಕರಣೇನ ಆಕಾಶಸ್ಯಾಪಿ ರೂಪವತ್ತ್ವಾತ್
ಚಕ್ಷುರ್ಗಮ್ಯತ್ವೋಪಪತ್ತಿಃ.

ಅಥವಾ ಮುಂದೆ ಹೇಳುವ ಪಂಚೀಕರಣಪ್ರಕ್ರಿಯೆಯಿಂದ ಆಕಾಶದಲ್ಲಿಯೂ ರೂಪವಿದ್ದೇ ಇರುವುದರಿಂದ ಇದು ಚಕ್ಷುರಿಂದ್ರಿಯಕ್ಕೆ ಗೋಚರವಾಗಲು ಅಡ್ಡಿಯೇನೂ ಇಲ್ಲ. ಕಾಲವೆಂಬುದು ಯಾವಾಗಲೂ ಘಟಾದಿಪದಾರ್ಥಗಳಂತೆ ಮುಖ್ಯವಿಶೇಷ್ಯವಾಗಿ ತೋರದೆ ಇತರಪದಾರ್ಥಗಳಿಗೆ ವಿಶೇಷಣವಾಗಿಯೇ ಯಾವಾಗಲೂ ತೋರುತ್ತಿರುವುದರಿಂದ ಅದರಲ್ಲಿ ಸಾಕ್ಷಾತ್ತಾಗಿ ರೂಪವಿಲ್ಲದಿದ್ದರೂ ರೂಪವುಳ್ಳ ಪದಾರ್ಥಗಳೊಡನೆ ಸಂಯುಕ್ತವಾಗಿಯೇ ಇರುವುದರಿಂದ ಅದೂ ಸಹ ಚಕ್ಷುರಿಂದ್ರಿಯಕ್ಕೆ ಗೋಚರವಾಗಲು ಅಡ್ಡಿಯೇನೂ ಇಲ್ಲ.

೧೫೪ ಪಂಚೀಕರಣೇನ ವಾಯೋರಪಿ ರೂಪವತ್ತ್ವಾತ್
ಚಕ್ಷುರ್ಗಮ್ಯತ್ವಾಶಂಕಾತತ್ಪರಿಹಾರೌ.

ಹಾಗಾದರೆ ವಾಯುವಿನಲ್ಲಿಯೂ ಪಂಚೀಕರಣಪ್ರಕ್ರಿಯೆಯಿಂದ ರೂಪವಿರುವುದಷ್ಟೆ; ಅದೂ ಚಕ್ಷುರಿಂದ್ರಿಯಕ್ಕೆ ಗೋಚರವಾಗಬೇಕಾಗಿದ್ದುದು ತಪ್ಪಿಹೋದು

ದಕ್ಕೆ ಕಾರಣವೇನು ? ಅದರ ರೂಪವು ಉದ್ಭೂತತ್ವಾವಸ್ಥೆಯನ್ನು ಎಂದರೆ ಉತ್ಕಟಾವಸ್ಥೆಯನ್ನು ಹೊಂದದಿರುವಿಕೆಯೇ ಇದಕ್ಕೆ ಕಾರಣವಾಗಿರುವುದೆಂದು ತಿಳಿಯಬೇಕು.

ಆದಕಾರಣ ಹೀಗೆ ಹಿಂದೆ ತೋರಿಸಿದ ರೀತಿಯಲ್ಲಿ ಆಕಾಶವು ರೂಪವನ್ನು ಪಡೆದಿರುವುದರಿಂದ ಆಕಾಶವು ಶ್ಯಾಮಳವಾಗಿರುವುದು ಎಂದು ಎಲ್ಲರಿಗೂ ಪ್ರಸಿದ್ಧವಾಗಿರುವುದು.

## ೧೫೫ ಅಥ ವಾಯುಲಕ್ಷಣಂ.

ಇಂಥ ಆಕಾಶದಿಂದ ಸ್ಪರ್ಶತನ್ಮಾತ್ರೆಯುಂಟಾಗಿ ಅದರಿಂದ ವಾಯು ಉಂಟಾಗುವುದು. ಈ ವಾಯುವಿಗೆ ನಾಲ್ಕು ವಿಧವಾದ ಲಕ್ಷಣವನ್ನು ಶಾಸ್ತ್ರಕಾರರು ತೋರಿಸಿರುವರು.

ಮೊದಲನೆಯ ಲಕ್ಷಣ— ಉತ್ಕಟಾವಸ್ಥೆಯನ್ನು ಹೊಂದಿದ ಸ್ಪರ್ಶಕ್ಕೆ ಆಶ್ರಯವಾಗಿಯೂ ರೂಪರಹಿತವಾಗಿಯೂ ಇರುವ ಭೂತವು ವಾಯುವೆನಿಸಿಕೊಳ್ಳುವುದು. ಸ್ಪರ್ಶತನ್ಮಾತ್ರೆಯನ್ನು ವ್ಯಾವರ್ತಿಸುವುದಕ್ಕಾಗಿ ಉತ್ಕಟಾವಸ್ಥೆಯನ್ನು ಹೊಂದಿದ ಎಂಬ ಪದವೂ, ಪ್ರಕೃತಿಮಹದಹಂಕಾರತನ್ಮಾತ್ರಾಕಾಶಗಳನ್ನು ವ್ಯಾವರ್ತಿಸುವುದಕ್ಕಾಗಿ ಪ್ರಥಮವಿಶೇಷಣವೂ, ಅಗ್ನ್ಯಾದಿಭೂತಗಳನ್ನು ವ್ಯಾವರ್ತಿಸುವುದಕ್ಕಾಗಿ ದ್ವಿತೀಯದಳವೂ ಉಕ್ತವಾಗಿರುವುವು.

ಎರಡನೆಯ ಲಕ್ಷಣ—ಅಥವಾ ಅಸ್ಮದಾದಿಗಳ ತ್ವಗಿಂದ್ರಿಯಭಿನ್ನೇಂದ್ರಿಯಜನ್ಯಜ್ಞಾನಕ್ಕೆ ಗೋಚರವಾಗದೆಯೂ, ಅಸ್ಮದಾದಿಗಳ ತ್ವಗಿಂದ್ರಿಯಜನ್ಯಜ್ಞಾನಕ್ಕೆ ಗೋಚರವಾಗುವುದಾಗಿಯೂ ಇರುವ ದ್ರವ್ಯವು ವಾಯುವೆನಿಸಿಕೊಳ್ಳುವುದು. ಘಟಾದಿಗಳನ್ನು ವ್ಯಾವರ್ತಿಸುವುದಕ್ಕಾಗಿ ಪ್ರಥಮದಳವೂ, ವಾಯುವಿನಲ್ಲಿಯೇ ಅಸಂಭವವನ್ನು ವ್ಯಾವರ್ತಿಸುವುದಕ್ಕಾಗಿ ತ್ವಗಿಂದ್ರಿಯಭಿನ್ನಪದವೂ, ಮುಕ್ತಾತ್ಮರ ಇಂದ್ರಿಯಗಳಿಗೆ ವಿಷಯನಿಯಮವಿಲ್ಲವಾದುದರಿಂದ ಅದನ್ನು ವ್ಯಾವರ್ತಿಸುವುದಕ್ಕಾಗಿ ಅಸ್ಮದಾದಿಪದವೂ, ಇಂದ್ರಿಯಗಳನ್ನು ವ್ಯಾವರ್ತಿಸುವುದಕ್ಕಾಗಿ ದ್ವಿತೀಯದಳವೂ, ಸ್ಪರ್ಶಗುಣವನ್ನು ವ್ಯಾವರ್ತಿಸುವುದಕ್ಕಾಗಿ ದ್ರವ್ಯಪದವೂ ಉಕ್ತವಾಗಿರುವುವು.

ಮೂರನೆಯ ಲಕ್ಷಣ— ಅಥವಾ ಅನುಷ್ಣಾಶೀತಸ್ಪರ್ಶವಿಶಿಷ್ಟವಾಗಿಯೂ ಗಂಧಶೂನ್ಯವಾಗಿಯೂ ಇರುವ ಭೂತವು ವಾಯುವೆನಿಸಿಕೊಳ್ಳುವುದು. ಜಲವನ್ನು ವ್ಯಾವರ್ತಿಸುವುದಕ್ಕಾಗಿ ಪ್ರಥಮದಳವೂ, ಪೃಥಿವಿಯನ್ನು ವ್ಯಾವರ್ತಿಸುವುದಕ್ಕಾಗಿ ದ್ವಿತೀಯದಳವೂ ಉಕ್ತವಾಗಿರುವುವು.

ನಾಲ್ಕನೆಯ ಲಕ್ಷಣ—ಅಥವಾ ಚಾಕ್ಷುಷಜ್ಞಾನಕ್ಕೆ ಗೋಚರವಾಗದೆಯೂ ಸ್ಪಾರ್ಶನಜ್ಞಾನಕ್ಕೆ ಗೋಚರವಾಗುವುದಾಗಿಯೂ ಇರುವ ದ್ರವ್ಯವು ವಾಯುವೆನಿಸಿಕೊಳ್ಳುವುದು. ಅಗ್ನ್ಯಾದಿಗಳನ್ನು ವ್ಯಾವರ್ತಿಸುವುದಕ್ಕಾಗಿ ಪ್ರಥಮದಳವೂ, ಪ್ರಕೃತ್ಯಾದಿಗಳನ್ನು ವ್ಯಾವರ್ತಿಸುವುದಕ್ಕಾಗಿ ದ್ವಿತೀಯದಳವೂ ಉಕ್ತವಾಗಿರುವುವು.

೧೫೩. ವಾಯೋರಪ್ರತ್ಯಕ್ಷತ್ವವಾದಿನೈಯಾಯಿಕಮತಖಂಡನಂ.

ಈ ವಾಯು ರೂಪಶೂನ್ಯದ್ರವ್ಯವಾದುದರಿಂದ ತ್ವಗಿಂದ್ರಿಯಕ್ಕೆ ಯೋಗ್ಯವಲ್ಲವೆಂದೂ, ಪ್ರತ್ಯಕ್ಷಕ್ಕೆ ಯೋಗ್ಯವಲ್ಲವೆಂದೂ ಆ ಆ ವಾದಿಗಳು ಹೇಳುವುದು ಯುಕ್ತ್ಯಾಭಾಸಮೂಲಕವಾದುದರಿಂದ ಅನಾದರಣೀಯವಾಗಿರುವುದು. ಪ್ರತ್ಯಕ್ಷದ ಮೇಲೆ ಯಾವ ಯುಕ್ತಿಗಳೂ ಕೆಂಸುವುದಿಲ್ಲವೆಂದು ಹಿಂದೆಯೇ ಹೇಳಿರುವೆವಷ್ಟೆ. ವಾಯು ತ್ವಗಿಂದ್ರಿಯಜನ್ಯಪ್ರತ್ಯಕ್ಷಕ್ಕೆ ಗೋಚರವಾಗುತ್ತಿರುವುದನ್ನು ಯಾರು ತಪ್ಪಿಸಬಲ್ಲರು? ತ್ವಗಿಂದ್ರಿಯದಿಂದ ದ್ರವ್ಯವನ್ನು ಪ್ರತ್ಯಕ್ಷೀಕರಿಸುವ ಸಮಯದಲ್ಲಿ ಅದರಲ್ಲಿ ಸ್ಪರ್ಶಗುಣವಿದ್ದರೆ ಸಾಕಾಗಿರುವುದಲ್ಲದೆ ರೂಪವೂ ಇರಬೇಕೆಂಬ ನಿರ್ಬಂಧವಿಲ್ಲ.

ತ್ವಗಿಂದ್ರಿಯವು ವಾಯುವಿನಲ್ಲಿರುವ ಸ್ಪರ್ಶವನ್ನು ಪ್ರತ್ಯಕ್ಷೀಕರಿಸಿದ ಮೇಲೆ ಅಂಥ ಸ್ಪರ್ಶಕ್ಕೆ ಆಶ್ರಯವಾದ ವಾಯುವನ್ನು ಅನುಮಾನಪ್ರಮಾಣದಿಂದ ನಿಶ್ಚಯಿಸುತ್ತೇವಲ್ಲದೆ ತ್ವಗಿಂದ್ರಿಯಜನ್ಯಪ್ರತ್ಯಕ್ಷಕ್ಕೆ ವಾಯು ಗೋಚರವಲ್ಲವೆಂದು ನೈಯಾಯಿಕರು ಹೇಳುವರು. ಹಾಗಾಗುವುದಾದರೆ ತ್ವಗಿಂದ್ರಿಯವು ಅಗ್ನಿಜಲಪೃಥಿವಿಗಳಲ್ಲಿರುವ ಸ್ಪರ್ಶವನ್ನು ಪ್ರತ್ಯಕ್ಷೀಕರಿಸಿದ ಮೇಲೆ ಅಂಥ ಸ್ಪರ್ಶಕ್ಕೆ ಆಶ್ರಯವಾದ ಅಗ್ನಿಜಲಪೃಥಿವಿಗಳನ್ನೂ ಅನುಮಾನಪ್ರಮಾಣದಿಂದಲೇ ನಿಶ್ಚಯಿಸಬಹುದಾದಕಾರಣ ತ್ವಗಿಂದ್ರಿಯಜನ್ಯಪ್ರತ್ಯಕ್ಷಕ್ಕೆ ಅವುಗಳೂ ಗೋಚರವಾಗದೆ ಹೋಗಬೇಕಾಗುವುದು.

"ತ್ವಗಿಂದ್ರಿಯದಿಂದ ಘಟವನ್ನು ಸಾಕ್ಷಾತ್ಕರಿಸುತ್ತೇನೆ" ಎಂಬ ಪ್ರತ್ಯಕ್ಷವಿರುವಂತೆ "ತ್ವಗಿಂದ್ರಿಯದಿಂದ ವಾಯುವನ್ನು ಸಾಕ್ಷಾತ್ಕರಿಸುತ್ತೇನೆ" ಎಂಬ ಪ್ರತ್ಯಕ್ಷವೂ ಅಬಾಧಿತವಾಗಿರುವುದರಿಂದ ಪ್ರತಿಬಂದಿಯೂ ಅದರ ಪರಿಹಾರವೂ ಉಭಯತ್ರ ಸಮಾನವಾಗಿರುವುವು.

೧೫೪. ವಾಯೋಃ ಸ್ವಭಾವವಿಶೇಷಾಃ.

ಇಂಥ ವಾಯುವಿಗೆ ಸ್ವಭಾವದಿಂದಲೋ, ಅದೃಷ್ಟರೂಪವಾದ ಈಶ್ವರಸಂಕಲ್ಪದಿಂದಲೋ ತಿರ್ಯಗ್ಗಮನವೇ ಸ್ವಾರಸಿಕವಾಗಿರುವುದು. "ಪಾರ್ಥಿವದ್ರವ್ಯದಿಂದಲಾಗಲಿ ವಾಯ್ವಂತರದಿಂದಲಾಗಲಿ ಅಭಿಘಾತವಿಲ್ಲದಿದ್ದಾಗ ವಾಯುವಿಗೆ ತಿರ್ಯಗ್ಗಮನವುಂಟಾಗಲಿ" ಎಂದು ಈಶ್ವರಸಂಕಲ್ಪವಿರುವುದು. ವಾಯುವಿನ ತಿರ್ಯಗ್ಗಮನವು ಅದೃಷ್ಟ

ದಿಂದ ಉಂಟಾದುದೆಂದು ಕಣಾದಸೂತ್ರದಲ್ಲಿಯೂ ಹೇಳಲ್ಪಟ್ಟಿರುವುದು. ಅಂಥ ಅಭಿಘಾತವಿದ್ದಾಗ ಭ್ರಮಣ, ಊರ್ಧ್ವಗಮನ ಮೊದಲಾದ ವ್ಯಾಪಾರಗಳುಂಟಾಗುವುವು. ಅವು ದೂರದಲ್ಲಿರುವ ಮನುಷ್ಯನಿಗೆ ಹಗುರವಾದ ಹುಲ್ಲು, ಎಲೆ ಮುಂತಾದುವುಗಳ ಭ್ರಮಣದಿಂದಲೂ, ಊರ್ಧ್ವಗಮನದಿಂದಲೂ ಅನುಮಾನಪ್ರಮಾಣದಿಂದ ತಿಳಿದುಬರುವುವು. ಸಮೀಪದಲ್ಲಿರುವವನಿಗಾದರೆ ತ್ವಗಿಂದ್ರಿಯಜನ್ಯವಾದ ಪ್ರತ್ಯಕ್ಷಜ್ಞಾನಕ್ಕೆ ಗೋಚರವಾಗುವುವು.

ವಾಯುವಿಗೆ ಮತ್ತೊಂದುವಾಯುವಿನಿಂದ ಅಭಿಘಾತವುಂಟಾಗುತ್ತಿರುವುದು ಪ್ರತ್ಯಕ್ಷಸಿದ್ಧವಾದುದರಿಂದ ವಾಯುಗಳು ಭಿನ್ನಭಿನ್ನವಾಗಿರುವುವೆಂಬುದೂ ಸಿದ್ಧವಾಯಿತು. ಈ ವಾಯುವಿಗೆ ಪಾರ್ಥಿವಪದಾರ್ಥಗಳಿಂದಲೂ ಜಲೀಯಪದಾರ್ಥಗಳಿಂದಲೂ ಎಲ್ಲಾ ಕಡೆಯಲ್ಲಿಯೂ ತಡೆಯುಂಟಾದರೆ ಇದಕ್ಕೆ ಸ್ತಂಭೀಭಾವವುಂಟಾಗುವುದು. ಚರ್ಮನಿರ್ಮಿತವಾದ ತಿದಿಯಲ್ಲಿಯೂ ಒಳಗೆ ಟೊಳ್ಳಾಗಿರುವ ಚೆಂಡುಗಳಲ್ಲಿಯೂ ಇದನ್ನು ಕಾಣಬಹುದು.

ಈ ವಾಯುವಿಗೆ ಮೂರನೆಯ ಲಕ್ಷಣದಲ್ಲಿ ಹೇಳಿದಂತೆ ಅನುಷ್ಣವಾಗಿಯೂ ಅಶೀತವಾಗಿಯೂ ಇರುವ ಸ್ಪರ್ಶವೇ ಸ್ವಾಭಾವಿಕವಾಗಿದ್ದರೂ-ಜಲಸಂಬಂಧದಿಂದ ಶೀತಸ್ಪರ್ಶವೂ, ಆತಪಸಂಪರ್ಕದಿಂದ ಉಷ್ಣಸ್ಪರ್ಶವೂ, ಕಸ್ತೂರಿ, ಕೇಸರಿ, ಪುಷ್ಪ ಮೊದಲಾದ ಸುಗಂಧವಸ್ತುಗಳ ಪರಿಚಯದಿಂದ ಸೌರಭ್ಯವೂ, ದುರ್ಗಂಧವಸ್ತುಗಳ ಸಹವಾಸದಿಂದ ದುರ್ವಾಸನೆಯೂ ಇದರಲ್ಲಿ ಆರೋಪಿತವಾಗುವುವು. ಆದುದರಿಂದಲೇ ಮೂರನೆಯ ಲಕ್ಷಣದಲ್ಲಿ ಅವ್ಯಾಪ್ತಿದೋಷವನ್ನು ಆಶಂಕಿಸುವುದಕ್ಕೆ ಅವಕಾಶವಿಲ್ಲ.

**೧೫೮ ವಾಯೌ ಶೀತಸ್ಪರ್ಶಗುಣವಾದ್ಯಾಯುರ್ವೇದಿತವಖಂಡನಂ.**

ಆಯುರ್ವೇದಾಭಿಜ್ಞರು ಹೀಗೆ ಹೇಳುವರು—"ಯಾವ ಪದಾರ್ಥವು ಯಾವ ಪದಾರ್ಥದಿಂದ ವೃದ್ಧಿಪಡಿಸಲ್ಪಡುವುದೋ ಆ ಪದಾರ್ಥವು ಆ ಪದಾರ್ಥಕ್ಕೆ ಸಜಾತೀಯವಾಗಿರುವುದೆಂದು ವೈದ್ಯಶಾಸ್ತ್ರದ ನಿಯಮವುಂಟು. ಶೀತದ್ರವ್ಯವಾದ ಜಲವು ಶರೀರದಲ್ಲಿ ವಾಯುವನ್ನು ವೃದ್ಧಿಪಡಿಸುವುದರಿಂದ ವಾಯು ಜಲಕ್ಕೆ ಸಜಾತೀಯವೇ ಆಗಬೇಕಾದಕಾರಣ ಜಲದಲ್ಲಿರುವ ಶೀತಸ್ಪರ್ಶಗುಣವೇ ವಾಯುವಿನಲ್ಲಿರುವುದಲ್ಲದೆ ಬೇರೆ ಇಲ್ಲ."

ವಾಯುವಿನಲ್ಲಿ ಜಲಸಂಬಂಧವಿಲ್ಲದಿದ್ದಾಗ ಶೀತಸ್ಪರ್ಶವಿಲ್ಲವೆಂಬ ಪ್ರತ್ಯಕ್ಷವೂ ತತ್ಸಂಬಂಧವಿದ್ದಾಗ ಶೀತಸ್ಪರ್ಶವುಂಟೆಂಬ ಪ್ರತ್ಯಕ್ಷವೂ ಇರುವುದರಿಂದ ಶೀತಸ್ಪರ್ಶಗುಣವು ಜಲದ ಗುಣವಲ್ಲದೆ ವಾಯುವಿಗೆ ಸ್ವಾಭಾವಿಕವಾಗಲಾರದಾದಪ್ರಯುಕ್ತ

ಆಯುರ್ವೇದಾಭಿಜ್ಞರ ಮತವು ಈ ವಿಷಯದಲ್ಲಿ ಸಮಂಜಸವಾದುದಲ್ಲ. ಹಾಗಾದರೆ – ವೃದ್ಧಿಸ್ಸಮಾನೈಸ್ಸರ್ವೇಷಾಂ ವಿಪರೀತೈರ್ವಿಪರ್ಯಯಃ ಎಂದು ಹಿಂದೆ ಹೇಳಿದ ನಿಯಮವು ಹೇಗೆ ಸಂಗತವಾದೀತೆಂದು ಚಿಂತಿಸಬಾರದು. ಏತಕ್ಕೆಂದರೆ ಅಂಥ ನಿಯಮವೇ ಇಲ್ಲ. ಅನುಷ್ಣಾಶೀತಸ್ಪರ್ಶಗುಣವುಳ್ಳ ಕೆಲವು ಪಾರ್ಥಿವಪದಾರ್ಥಗಳಿಂದ ಉಷ್ಣವೂ ಶೀತವೂ ವೃದ್ಧಿಯಾಗುತ್ತಿರುವುದನ್ನು ನೋಡುತ್ತಿರುವೆವಷ್ಟೆ.

"ಅಂಥ ಕಡೆಯಲ್ಲಿ ಪಾರ್ಥಿವಪದಾರ್ಥಗಳಿಂದಲೇ ಉಷ್ಣಶೀತಗಳ ವೃದ್ಧಿಯಾಗಲಿಲ್ಲ; ಮತ್ತೇನೆಂದರೆ ಪಂಚೀಕರಣಪ್ರಕ್ರಿಯೆಯಿಂದ ಆ ಪಾರ್ಥಿವಪದಾರ್ಥಗಳಲ್ಲಿ ಅಡಗಿರುವ ಅಗ್ನಿಜಲಭಾಗಗಳಿಂದಲೇ ಉಷ್ಣಶೀತಗಳ ವೃದ್ಧಿಯುಂಟಾಗುವುದು" ಎಂದು ಹೇಳುವುದಾದರೆ—ಶೀತದ್ರವ್ಯವಾದ ಜಲದಿಂದ ವಾಯು ವೃದ್ಧಿಹೊಂದುವ ಕಡೆಯಲ್ಲಿಯೂ ಅದೇ ಪಂಚೀಕರಣಪ್ರಕ್ರಿಯೆಯಿಂದ ಜಲದಲ್ಲಿ ಅಡಗಿರುವ ಅನುಷ್ಣಾಶೀತಸ್ಪರ್ಶಗುಣವುಳ್ಳ ಪಾರ್ಥಿವಭಾಗದಿಂದಲೇ ಅಂಥ ಗುಣವುಳ್ಳ ವಾಯು ವೃದ್ಧಿಹೊಂದುತ್ತದೆ ಎಂದು ಏತಕ್ಕೆ ಹೇಳಬಾರದು?

ವ್ಯಷ್ಟಿಸೃಷ್ಟಿಯಲ್ಲಿ ಪ್ರತಿಯೊಂದು ಭೂತವೂ ಪಂಚಭೂತಾತ್ಮಕವಾಗಿಯೇ ಇರುವುದರಿಂದ ಶೀತದ್ರವ್ಯವಾದ ಜಲದಿಂದ ವಾಯು ವೃದ್ಧಿಯಾಗುವ ಕಡೆಯಲ್ಲಿ ವಾಯುವಿನಲ್ಲಿರುವ ಜಲಭಾಗವೇ ಬಾಹ್ಯಜಲದಿಂದ ವೃದ್ಧಿಹೊಂದುವುದಲ್ಲದೆ ವಾಯು ವೃದ್ಧಿಯಾಗಲಿಲ್ಲವೆಂದೂ ಏತಕ್ಕೆ ಹೇಳಬಾರದು?

ಆಪೋಮಯಃ ಪ್ರಾಣಃ ಎಂಬುದಾಗಿ ಪ್ರಾಣವಾಯುವಿಗೆ ಜಲದಿಂದ ಆಪ್ಯಾಯನವುಂಟಾಗುವುದನ್ನು ಶ್ರುತಿಯೇ ತೋರಿಸುವುದರಿಂದ ವಾಯುವಿಗೆ ಶೀತವಸ್ತುವಿನಿಂದ ಅಭಿವೃದ್ಧಿ ಸಂಘಟಿಸಬಹುದಾದಕಾರಣ ಸಜಾತೀಯವಸ್ತುವಿನಿಂದಲೇ ಅಭಿವೃದ್ಧಿಯಿರಬೇಕೆಂಬ ನಿಯಮವಿಲ್ಲ.

ಈಶ್ವರೋಽಪಿ ನ ಜಾನಾತಿ ವಸ್ತುಸಂಯೋಗಜಂ ಗುಣಂ ಎಂಬಂತೆ ಆ ಆ ಪದಾರ್ಥಗಳಲ್ಲಿ ಪರಸ್ಪರಸಂಯೋಗದಿಂದ ಉಂಟಾಗುವ ವಿಚಿತ್ರವಾದ ಶಕ್ತಿಯನ್ನು ಸರ್ವಜ್ಞನಾದ ಈಶ್ವರನೂ ಸಂಪೂರ್ಣವಾಗಿ ತಿಳಿಯಲಾರನು; ಎಂದರೆ ಅತ್ಯಾಶ್ಚರ್ಯಕರವಾಗಿರುವುದೆಂಬ ಅಭಿಪ್ರಾಯದಿಂದ ಪದಾರ್ಥಗಳಲ್ಲಿ ಮನುಷ್ಯರ ಬುದ್ಧಿಗೆ ದುರೂಹವಾಗಿರುವ ಅನೇಕಶಕ್ತಿಗಳನ್ನು ಸ್ವೀಕರಿಸಿ ಆಯುರ್ವೇದಾಭಿಜ್ಞರಾದವರೇ ಆ ಆ ಪದಾರ್ಥಗಳ ಸ್ವಭಾವವನ್ನೂ ಪ್ರಭಾವವನ್ನೂ ಅತ್ಯದ್ಭುತವಾಗಿ ವರ್ಣನೆ ಮಾಡಿರುವರು. ಹೇಗೆಂದರೆ—

ಭೇರಿ ಬಹಳ ಚಿಕ್ಕದಾಗಿದ್ದರೂ ಅದರ ಚರ್ಮಕ್ಕೆ ಒಂದು ಬಗೆಯ ಮೂಲಿಕೆಯ ರಸವನ್ನು ಸವರಿ ಆ ಭೇರಿಯನ್ನು ಹೊಡೆದರೆ ಸಮಸ್ತವಾದ ದಿಙ್ಮಂಡಲದಲ್ಲಿಯೂ ವ್ಯಾಪಿಸುವ ಅತಿಪ್ರಬಲವಾದ ಧ್ವನಿಯನ್ನು ಆ ಭೇರಿ ಉಂಟುಮಾಡುತ್ತದೆ ಎಂದೂ, ಯಾವುದಕ್ಕೂ ಅಂಜದ ಮಹಾಸರ್ಪಗಳೂ ಇದಕ್ಕೆ ಹೆದರಿ ದೂರವಾಗುವುವೆಂದೂ, ಚಿಕಿತ್ಸೆಗೆ ಸಾಧ್ಯವಾಗದ ಅನೇಕರೋಗಗಳಿಗೂ ಇದರಿಂದ ಪರಿಹಾರವುಂಟಾಗುವುದೆಂದೂ ಆಯುರ್ವೇದಾಭಿಜ್ಞರು ಹೇಳಿರುವದು. ಇದೇ ಅರ್ಥವನ್ನು ಮಾಘನೆಂಬ ಮಹಾಕವಿಯೂ ಶಿಶುಪಾಲವಧವೆಂಬ ತನ್ನ ಕಾವ್ಯದೊಳಗೆ ಒಂದು ಪ್ರಕರಣದಲ್ಲಿ ಹೇಳಿರುವನು; "ಸರ್ಪಾಭಿಸಾರೌಷಧಿಸಂಪ್ರಯುಕ್ತಾ ಭೇರೀವ ಸಾ ಭೀಮತರಂ ರರಾಸ" ಹೀಗೆಯೇ ಅಯಸ್ಕಾಂತಶಿಲೆಗೆ ಲೋಹವನ್ನು ಆಕರ್ಷಿಸುವ ಶಕ್ತಿ ಸ್ವಾಭಾವಿಕವಾಗಿರುವುದು.

ಹೀಗೆ ಆ ಆ ಪದಾರ್ಥಗಳಿಗೆ ಅದ್ಭುತವಾದ ಸ್ವಾಭಾವಿಕಶಕ್ತಿಯಿರುವಂತೆ ವಾಯುವಿಗೂ ಅನುಷ್ಣಾಶೀತಸ್ಪರ್ಶವು ಸ್ವಾಭಾವಿಕವಾಗಿದ್ದರೂ-ಆ ಆ ಪದಾರ್ಥಗಳ ಸಂಬಂಧದಿಂದ ಆರೋಪಿತವಾದ ಆ ಆ ಸ್ವಭಾವವಿಶೇಷಗಳೂ ತೋರಿಬರುವುದರಲ್ಲಿ ಯಾವುದೊಂದು ಅಭ್ಯಂತರವೂ ಇರುವುದಿಲ್ಲ.

### ೧೫೯ ವಾಯೋಃ ಚತುರ್ಧಾ ವಿಭಾಗಃ.

ಇಂಥ ವಾಯು ಇಂದ್ರಿಯಾಪ್ಯಾಯಕ, ಪ್ರಾಣ, ಶರೀರ, ವಿಷಯ ಎಂದು ನಾಲ್ಕು ವಿಧವಾಗಿದ್ದುಕೊಂಡು ಸಕಲಪ್ರಾಣಿಗಳಿಗೂ ಉಪಕಾರಮಾಡುತ್ತಿರುವುದು.

ಇದರಲ್ಲಿ ಮೊದಲನೆಯುದು— ತ್ವಗಿಂದ್ರಿಯದೊಡನೆ ತಾನು ಏಕೀಭವಿಸಿ ಇದ್ದುಕೊಂಡು ತ್ವಗಿಂದ್ರಿಯಕ್ಕೆ ಆಪ್ಯಾಯಕವಾಗಿರುವುದು.

ಎರಡನೆಯುದು—ಪ್ರಾಣವಾಯುರೂಪವಾಗಿ ಶರೀರದಲ್ಲಿ ಇದ್ದುಕೊಂಡು ಸರ್ವಪ್ರಾಣಿಗಳಿಗೂ ಉಪಕರಿಸುವುದು. ಇದರಲ್ಲಿ ಶರೀರಧಾರಣೆ ಮುಂತಾದ ವ್ಯಾಪಾರಗಳಿಗೆ ಕಾರಣವಾಗಿರುವ ವಾಯುವಿಶೇಷವೇ ಪ್ರಾಣವೆನಿಸಿಕೊಳ್ಳುವುದಲ್ಲದೆ ವಾಯುಸಾಮಾನ್ಯವಾಗಲಿ ವಾಯುವಿನ ಕ್ರಿಯಾವಿಶೇಷವಾಗಲಿ ಪ್ರಾಣವೆನಿಸಿಕೊಳ್ಳುವುದಿಲ್ಲ; ಎಂದರೆ ಅವಸ್ಥಾವಿಶೇಷವನ್ನು ಹೊಂದಿರುವ ವಾಯುವೇ ಪ್ರಾಣವೆನಿಸಿಕೊಳ್ಳುವುದು.

೧೬೦ ಏಕಸ್ಯೈವ ಪ್ರಾಣಸ್ಯ ವೃತ್ತಿಭೇದಾತ್ ಸಂಜ್ಞಾಭೇದಃ.

ಒಂದೇ ಮನಸ್ತತ್ತ್ವವು ಸಂಕಲ್ಪ, ಅಧ್ಯವಸಾಯ, ಅಭಿಮಾನ, ಚಿಂತೆ ಎಂಬ ವೃತ್ತಿಭೇದದಿಂದ ಮನಸ್ಸು, ಬುದ್ಧಿ, ಅಹಂಕಾರ, ಚಿತ್ತ ಎಂಬ ಸಂಜ್ಞಾಭೇದವನ್ನು ಪಡೆವಂತೆ ಪ್ರಾಣವಾಯುವೆಂಬ ಒಂದೇ ವಸ್ತು ಶರೀರದ ಆ ಆ ಭಾಗಗಳಲ್ಲಿ ಬೇರೆ ಬೇರೆ ಕೆಲಸಗಳನ್ನು ಮಾಡುವುದರಿಂದ ಪ್ರಾಣ, ಅಪಾನ, ವ್ಯಾನ ಉದಾನ, ಸಮಾನ ಎಂಬ ಐದು ಹೆಸರುಗಳನ್ನೂ, ನಾಗ, ಕೂರ್ಮ, ಕೃಕರ, ದೇವದತ್ತ, ಧನಂಜಯ ಎಂಬ ಇನ್ನೊಂದುಬಗೆಯ ಐದು ಹೆಸರುಗಳನ್ನೂ ಪಡೆವುದು.

೧೬೧ ತತ್ರ ಪ್ರಾಣಾಪಾನಾದೀನಾಂ ವೃತ್ತಿವಿಶೇಷಪ್ರದರ್ಶನಂ.

ಇವುಗಳಲ್ಲಿ ಪ್ರಾಣವಾಯು— ಪ್ರಾಣಿಗಳಿಂದ ಭುಜಿಸಲ್ಪಟ್ಟೂ ಕುಡಿಯಲ್ಪಟ್ಟೂ ಇರುವ ಆಹಾರವೂ ಜಲವೂ ಅನ್ನಕೋಶವನ್ನೂ ಜಲಕೋಶವನ್ನೂ ಸೇರಿದ ಮೇಲೆ ಅವುಗಳನ್ನು ಸಮರಸವಾಗಿ ಪಕ್ವಮಾಡಿ ರಕ್ತಮಾಂಸಾದಿಗಳಾಗಿ ಪರಿಣಮಿಸುವಂತೆ ಮಾಡಿ ಆ ಆ ಕೋಶಗಳಿಗೆ ಅವುಗಳನ್ನು ತಲಪಿಸುತ್ತ ಶರೀರಸ್ಥಿತಿಗೆ ಕಾರಣವಾಗುವುದು. ಹೃದಯವೇ ಇದಕ್ಕೆ ಪ್ರಧಾನಸ್ಥಾನವಾಗಿದ್ದರೂ ಆ ಆ ಕೆಲಸಗಳಿಗೆ ಅನುಸಾರವಾಗಿ ಅಲ್ಲಲ್ಲಿ ಸಂಚರಿಸುವುದು.

ಅಪಾನವಾಯು-ಶರೀರದಲ್ಲಿರುವ ಮಲಮೂತ್ರಾದಿಗಳನ್ನು ಕೆಳಗೆ ತಳ್ಳುವುದು. ತೆಗೆದುಕೊಳ್ಳುವಿಕೆ, ಬಿಡುವಿಕೆ ಮುಂತಾದ ಕೆಲಸಗಳನ್ನು ವ್ಯಾನವಾಯು ನಡಸುವುದು. ಶರೀರದಲ್ಲಿರುವುದನ್ನು ಊರ್ಧ್ವಮುಖವಾಗಿ ತರುವುದು ಉದಾನವಾಯುವಿನ ಕೆಲಸವಾಗಿರುವುದು. ಶರೀರಕ್ಕೆ ಪೋಷಣಾದಿಗಳನ್ನು ಸಮಾನವಾಯು ನಡಸುವುದು. ಉದ್ಗಾರ, ವಮನ ಇವೇಮುಂತಾದುವು ನಾಗವಾಯುವಿನ ಕೆಲಸವಾಗಿರುವುವು. ಕಣ್ಣನ್ನು ಮುಚ್ಚುವಿಕೆಯೂ ತೆರೆವಿಕೆಯೂ ಕೂರ್ಮವಾಯುವಿನಿಂದ ನಡೆವುವು. ಕೃಕರವಾಯು ಹಸಿವು, ಬಾಯಾರಿಕೆ, ಕೆಮ್ಮುವಿಕೆ, ಸೀನುವಿಕೆ, ತೇಗುವಿಕೆ ಮುಂತಾದುವನ್ನು ನಡಸುವುದು. ಆಕಳಿಸುವಿಕೆ ಮುಂತಾದ ಕೆಲಸಗಳನ್ನು ದೇವದತ್ತವಾಯು ನಡಸುವುದು. ಧನಂಜಯವಾಯುವಾದರೋ ಶರೀರದ ಸರ್ವಭಾಗವನ್ನೂ ವ್ಯಾಪಿಸಿ, ಮರಣಾನಂತರದಲ್ಲಿಯೂ ಶರೀರದಲ್ಲಿ ಸ್ವಲ್ಪಕಾಲವಿದ್ದು ಅದರಲ್ಲಿರುವ ಪದಾರ್ಥಗಳನ್ನು ರೂಪಾಂತರವಾಗಿ ಪರಿಣಮಿಸುವಂತೆ ಮಾಡುವುದು. ಈ ಕೆಲಸಗಳೊಳಗೆ ಕೆಲವನ್ನು ಕೆಲವು ಗ್ರಂಥಕಾರರು ವ್ಯತ್ಯಸ್ತವಾಗಿ ಹೇಳಿದ್ದರೂ ಎಲ್ಲಾ ಕೆಲಸವೂ ಪ್ರಾಣವೆಂಬ ಒಂದೇ ವಾಯುವಿಗೆ ಸೇರುವುದಾದುದರಿಂದ ಅಷ್ಟೊಂದು ವಿರೋಧವೇನೂ ಇರುವುದಿಲ್ಲ.

## ೧೬೨ ಪ್ರಾಣಸ್ಯ ಶರೀರೇಂದ್ರಿಯಧಾರಕತ್ವೇ ಪ್ರಮಾಣಪ್ರದರ್ಶನಂ.

ಇಂಥ ಪ್ರಾಣವೇ ಶರೀರಧಾರಣೆಗೂ ಇಂದ್ರಿಯಧಾರಣೆಗೂ ಕಾರಣವಾಗಿರುವುದೆಂಬ ಅಂಶವನ್ನು ಛಾಂದೋಗ್ಯಬೃಹದಾರಣ್ಯಕಶ್ರುತಿಗಳು ಕಥಾರೂಪವಾಗಿ ತೋರಿಸಿರುವುದರಿಂದ ಶರೀರೇಂದ್ರಿಯಧಾರಕತ್ವವೂ ಇದಕ್ಕೆ ಸಿದ್ಧವಾಗಿರುವುದು. ಆ ಕಥೆಗಳನ್ನು ಅಲ್ಲಿಯೇ ತಿಳಿದುಕೊಳ್ಳಬಹುದು.

## ೧೬೩ ಸ್ಥಾವರಶರೀರೇಷ್ವಪಿ ಪ್ರಾಣಸದ್ಭಾವಃ.

ಇಂಥ ಪ್ರಾಣವು ಜಂಗಮವಾದ ಶರೀರಗಳಲ್ಲಿ ಮಾತ್ರವಲ್ಲದೆ ವೃಕ್ಷಾದಿ ಸ್ಥಾವರಶರೀರಗಳಲ್ಲಿಯೂ ಉಂಟು. ಹಾಗಿಲ್ಲದಿದ್ದರೆ—ಆ ವೃಕ್ಷಾದಿಗಳ ಬುಡದಲ್ಲಿ ಸುರಿದ ನೀರು ಅವುಗಳ ಕೊಂಬೆಗಳಲ್ಲಿಯೂ, ಚಿಗುರು, ಎಲೆ, ಹೂ, ಕಾಯಿ, ಹಣ್ಣು ಮುಂತಾದುವುಗಳಲ್ಲಿಯೂ ವ್ಯಾಪಿಸುವ ಬಗೆ ಹೇಗೆ? ಬುಡದಲ್ಲಿ ಮಾಡಲ್ಪಟ್ಟ ದೋಹಳಸಂಸ್ಕಾರವನ್ನು ಅವುಗಳು ಗ್ರಹಿಸುವುದು ಹೇಗೆ? ಭೂಮಿಯಲ್ಲಿರುವ ತಮಗೆ ಬೇಕಾದ ಆಹಾರಭಾಗಗಳನ್ನು ಗ್ರಹಿಸುವುದು ಹೇಗೆ? ಆದಕಾರಣ ಸ್ಥಾವರಶರೀರಗಳಲ್ಲಿಯೂ ಪ್ರಾಣವಾಯು ಇರುತ್ತದೆ ಎಂಬುದರಲ್ಲಿ ಸಂಶಯವಿಲ್ಲ. ಜೀವನು ಯಾವಾಗ ಆ ಶರೀರಕ್ಕೆ ಬಂದಿರುವನೋ ಆವಾಗ ಅವನ ಸುಖದುಃಖಾನುಭವಕ್ಕೆ ಅನುಕೂಲವಾಗಿ ಪ್ರಾಣವಾಯುವೂ ಅಲ್ಲಿ ಇರಬೇಕಾದುದು ಆವಶ್ಯಕವಷ್ಟೆ. ಆದರೆ ಜಂಗಮ ಶರೀರಗಳಲ್ಲಿರುವಂತೆ ಪ್ರಾಣಾಪಾನಾದಿಭೇದಗಳಿಂದಲೂ ನಾಗಕೂರ್ಮಾದಿಭೇದಗಳಿಂದಲೂ ಸ್ಥಾವರಶರೀರಗಳಲ್ಲಿ ಇಲ್ಲವೆಂಬುದನ್ನು ಮಾತ್ರ ಹೇಳಬಹುದಲ್ಲದೆ ಪ್ರಾಣವಾಯುವೇ ಅವುಗಳಲ್ಲಿ ಇಲ್ಲವೆಂದು ಹೇಳಲಾಗುವುದಿಲ್ಲ.

## ೧೬೪ ನಖದಂತಾದಿಷು ಪ್ರಾಣಶಕ್ತೇಃ ಮಂದತರವ್ಯಾಪ್ತಿಃ.

ಉಗುರು, ಹಲ್ಲು, ಕೂದಲು, ಕಿಣವೆಂಬ ಜಡ್ಡು ಇವುಗಳಲ್ಲಿ ಪ್ರಾಣಶಕ್ತಿ ಅತಿಸ್ವಲ್ಪವಾಗಿ ವ್ಯಾಪಿಸಿರುವುದರಿಂದಲೇ ಅವುಗಳಲ್ಲಿ ಸ್ಪರ್ಶವು ಚೆನ್ನಾಗಿ ತಿಳಿವುದಿಲ್ಲ ಎಂಬುದನ್ನು ನ್ಯಾಯತತ್ತ್ವವೆಂಬ ಗ್ರಂಥದಲ್ಲಿ ಶ್ರೀಮನ್ನಾಥಮುನಿಗಳು ತೋರಿಸಿರುವರು.

ಇಂಥ ಪ್ರಾಣವಾಯುವಿಗೇ ರೇಚಕ-ಪೂರಕ-ಕುಂಭಕ-ಭೇದದಿಂದ ನಿರೋಧವನ್ನು ಉಪದೇಶಿಸಿ ಅದಕ್ಕೆ ಪ್ರಾಣಾಯಾಮವೆಂದು ಹೆಸರಿಟ್ಟು ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣೆ, ಧ್ಯಾನ, ಸಮಾಧಿ ಎಂಬ ಅಷ್ಟಾಂಗವಾದ ಯೋಗದಲ್ಲಿ ಯೋಗಾಭ್ಯಾಸಕ್ಕೆ ನಾಲ್ಕನೆಯ ಅಂಗವಾಗಿ ಯೋಗ

ಶಾಸ್ತ್ರಜ್ಞರು ಉಪದೇಶಿಸುವರು. ಆಯುರ್ವೇದದಲ್ಲಿಯೂ ಯೋಗಶಾಸ್ತ್ರಗಳಲ್ಲಿಯೂ ಇನ್ನೂ ಹೆಚ್ಚಾಗಿ ಇದರ ವಿವರವನ್ನು ತಿಳಿಯಬಹುದು.

ಹೀಗೆ ವಾಯುವಿನಿಂದ ಪ್ರಾಣಿಗಳಿಗೆ ಉಂಟಾಗುವ ನಾಲ್ಕು ವಿಧವಾದ ಉಪಕಾರಗಳಲ್ಲಿ ಎರಡು ಬಗೆಯ ಉಪಕಾರಗಳನ್ನು ಸಂಕ್ಷೇಪವಾಗಿ ತೋರಿಸಿದೆವು.

ಮೂರನೆಯದು— ಹಿಂದೆ ಹೇಳಿದ ಪ್ರಾಣವಾಯುವಿಗಿಂತಲೂ ವಿಲಕ್ಷಣವಾದ ಬೇರೊಂದು ವಾಯುವೇ ಶರೀರಕ್ಕೆ ಉಪಾದಾನಕಾರಣವಾಗಿ ಇದ್ದುಕೊಂಡು ಇತರವಾದ ನಾಲ್ಕು ಭೂತಗಳೊಡನೆ ಕೂಡಿ ಶರೀರಸ್ವರೂಪವನ್ನು ಉಂಟುಮಾಡುವುದು. ಇಂಥ ಶರೀರಗಳನ್ನು ವಾಯುಲೋಕದಲ್ಲಿರುವ ವಾಯುಪ್ರಚುರವಾದ ವಾಯವೀಯಶರೀರಗಳೆಂದು ತಿಳಿಯಬಹುದು.

ನಾಲ್ಕನೆಯದು—ಹಿಂದೆ ಹೇಳಿದ ಆಪ್ಯಾಯಕವಾಯು, ಪ್ರಾಣವಾಯು, ಶರೀರೋಪಾದಾನವಾಯು ಈ ಮೂರುಬಗೆಯಾದ ವಾಯುಗಳಿಗಿಂತಲೂ ಬೇರೆಯಾದ ವಾಯು. ಇದೇ ವಿಷಯವಾಯುವೆಂದು ವ್ಯವಹರಿಸಲ್ಪಡುವುದು. ಇದು ಪ್ರಚಂಡವಾಯುರೂಪವಾಗಿಯೂ, ಮೊರ, ಬೀಸಣಿಗೆ, ಪಂಕಾ ಮೊದಲಾದವುಗಳಿಂದ ಹೊರಡುವ ಸೌಮ್ಯವಾಯುರೂಪವಾಗಿಯೂ ಇದ್ದು ಸಮಯೋಚಿತವಾಗಿ ಪ್ರಾಣಿಗಳ ಉಪಕಾರಕ್ಕೆ ಒದಗುವುದು.

೧೬೫ ಏಕದೇಶವಾಚಿನೋಽಗ್ನಿಶಬ್ದಸ್ಯ ಕೃತ್ಸ್ನತೇಜೋಭೂತಪರತ್ವಂ.

ಇಂಥ ವಾಯುವಿನಿಂದ ರೂಪತನ್ಮಾತ್ರೆಯೂ ಆದರಿಂದ ಅಗ್ನಿಯೂ ಎಂದರೆ ತೇಜೋಭೂತವೂ ಉಂಟಾಗುವುವು. ಛಾಂದೋಗ್ಯದಲ್ಲಿ "ತಾ ಅನ್ನಮಸೃಜಂತ" ಎಂಬ ವಾಕ್ಯದಲ್ಲಿ ಪೃಥಿವಿಯ ಏಕದೇಶವಾದ ಅನ್ನದಲ್ಲಿ ಪ್ರಯೋಗಿಸಿರುವ ಅನ್ನಶಬ್ದವು ಸಂಪೂರ್ಣಪೃಥಿವಿಯನ್ನು ತೋರಿಸುವಂತೆ ತೈತ್ತಿರೀಯದಲ್ಲಿ "ವಾಯೋರಗ್ನಿಃ" ಎಂಬ ವಾಕ್ಯದಲ್ಲಿ ತೇಜೋಭೂತದ ಏಕದೇಶವಾದ ಅಗ್ನಿಯಲ್ಲಿ ಪ್ರಯೋಗಿಸಿರುವ ಅಗ್ನಿಶಬ್ದವು ಸಂಪೂರ್ಣವಾದ ತೇಜೋಭೂತವನ್ನೇ ತೋರಿಸುವುದು. ಅಷ್ಟುಮಾತ್ರವೇ ಅಲ್ಲ;, ಛಾಂದೋಗ್ಯದಲ್ಲಿ ಜಲತತ್ತ್ವವೆಂಬ ನಾಲ್ಕನೆಯ ಭೂತಕ್ಕೆ ಉಪಾದಾನಕಾರಣವಾದ ಮೂರನೆಯ ಭೂತದಲ್ಲಿ "ತತ್ತೇಜ ಐಕ್ಷತ" "ತದಪೋಽಸೃಜತ" ಎಂಬುದಾಗಿ ತೇಜಶ್ಶಬ್ದವನ್ನು ಪ್ರಯೋಗಿಸಿರುವುದರಿಂದಲೂ, ಈ ತೈತ್ತಿರೀಯದಲ್ಲಿಯೂ "ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಸ್ಸಂಭೂತಃ, ಆಕಾಶಾದ್ವಾಯುಃ, ವಾಯೋರಗ್ನಿಃ, ಅಗ್ನೇರಾಪಃ" ಎಂಬುದಾಗಿ ಭೂತ

ಗಳ ಸೃಷ್ಟಿಕ್ರಮವನ್ನು ಹೇಳುವುದಾಗಿ ಆರಂಭಿಸಿ ಇಲ್ಲಿ ಜಲತತ್ತ್ವಕ್ಕೆ ಉಪಾದಾನ ಕಾರಣವಾದ ತೇಜೋಭೂತದಲ್ಲಿ ಅಗ್ನಿಪದವನ್ನು ಪ್ರಯೋಗಿಸಿರುವುದರಿಂದಲೂ, ಈ ಅಗ್ನಿಶಬ್ದವು ಸಂಪೂರ್ಣವಾದ ತೇಜೋಭೂತವನ್ನೇ ತೋರಿಸುವುದು.

೧೬೬. ಅಗ್ನಿಂ ಪ್ರತಿ ವಾಯೋಃ ನಿಮಿತ್ತಕಾರಣತ್ವಾಶಂಕಾ.

ಇದೆಲ್ಲಾ ಸರಿಯೆ "ವಾಯೋರಗ್ನಿಃ" ಎಂಬ ವಾಕ್ಯದಲ್ಲಿ ವಾಯುಪದದ ಮೇಲಿರುವ ಪಂಚಮೀವಿಭಕ್ತಿ ಉಪಾದಾನಕಾರಣತ್ವವನ್ನು ಹೇಳುವುದಾಗಿದ್ದರಲ್ಲವೆ ವಾಯು ಅಗ್ನಿಯೆಂಬ ತೇಜೋಭೂತವಾಗಿ ಪರಿಣಮಿಸುತ್ತದೆ ಎಂದು ಹೇಳಬಹುದು. ಮೊದಲು ಅದೇ ಇಲ್ಲ; "ಕುಲಾಲನಿಂದ ಘಟವು ಹುಟ್ಟುತ್ತದೆ" ಎಂಬ ಸ್ಥಳ ದಲ್ಲಿ ಕುಲಾಲಪದದ ಮೇಲಣ ಪಂಚಮಿ ಹೇಗೆ ಕುಲಾಲನಿಗೆ ನಿಮಿತ್ತಕಾರಣತ್ವವನ್ನು ಮಾತ್ರ ತೋರಿಸಿ ಉಪಾದಾನಕಾರಣತ್ವವನ್ನು ತೋರಿಸುವುದಿಲ್ಲವೋ ಹಾಗೆ ಇಲ್ಲಿಯೂ ವಾಯೋಃ ಎಂಬ ಪಂಚಮಿ ಅಗ್ನಿಯನ್ನು ಕುರಿತು ವಾಯು ನಿಮಿತ್ತಕಾರಣವೆಂದು ತೋರಿಸುವುದಲ್ಲದೆ ಉಪಾದಾನಕಾರಣವೆಂದು ತೋರಿಸುವುದಿಲ್ಲ.

ಪ್ರತ್ಯಕ್ಷಪ್ರಮಾಣಕ್ಕೆ ವಿರೋಧವುಂಟಾಗುವುದರಿಂದಲೂ ಉಪಾದಾನಕಾರ ಣತ್ವವನ್ನು ಹೇಳಲಾಗುವುದಿಲ್ಲ. ಕಟ್ಟಿಗೆ, ಹುಲ್ಲು, ಒಣಗಿದ ಎಲೆ ಇವೇ ಮೊದ ಲಾದ ಪಾರ್ಥಿವಪದಾರ್ಥಗಳು ಹೊಗೆಯಾಗಿಯೂ, ಬೆಂಕಿಯಾಗಿಯೂ, ಬೂದಿಯಾ ಗಿಯೂ ಪರಿಣಮಿಸುತ್ತಿರುವುದನ್ನು ಪ್ರತ್ಯಕ್ಷವಾಗಿ ನೋಡುತ್ತಿರುವೆವಲ್ಲದೆ ವಾಯು ಅಗ್ನಿಯಾಗಿ ಪರಿಣಮಿಸಿದುದನ್ನು ಯಾರೂ ನೋಡಿಲ್ಲ. ಕಟ್ಟಿಗೆ ಮುಂತಾದುವುಗಳು ಅಗ್ನಿಯಾಗಿ ಪರಿಣಮಿಸುವ ಕಾಲದಲ್ಲಿ ವಾಯು ಸಹಾಯಮಾಡುತ್ತದೆ ಎಂಬುದನ್ನು ಮಾತ್ರ ಪ್ರತ್ಯಕ್ಷವಾಗಿ ನಾವು ಕಾಣುತ್ತಿರುವುದರಿಂದ ಅಂಥ ವಾಯುವನ್ನು ಅಗ್ನಿಗೆ ನಿಮಿತ್ತಕಾರಣವಾಗಿ ಹೇಳಬಹುದಲ್ಲದೆ ಉಪಾದಾನಕಾರಣವಾಗಿ ಹೇಳುವುದು ಹೇಗೆ ?

"ವಿಜಾತೀಯವಾದ ಕಟ್ಟಿಗೆ ಮುಂತಾದುವುಗಳಿಂದ ವಿಜಾತೀಯವಾದ ಅಗ್ನಿ ಹುಟ್ಟುತ್ತದೆ ಎಂದು ಹೇಳುವುದು ನ್ಯಾಯವಲ್ಲವಾದುದರಿಂದ ಆ ಕಟ್ಟಿಗೆ ಮುಂ ತಾದ ಪಾರ್ಥಿವಪದಾರ್ಥಗಳಲ್ಲಿ ಸೂಕ್ಷ್ಮರೂಪವಾಗಿ ಅಡಗಿರುವ ಸಜಾತೀಯವಾದ ಅಗ್ನ್ಯಂಶಗಳೇ ಬಾಹ್ಯವಾಗಿಯೂ ಸ್ಥೂಲರೂಪವಾಗಿಯೂ ಇರುವ ಅಗ್ನಿಯನ್ನು ಉಂಟುಮಾಡುವುವಲ್ಲದೆ ಪಾರ್ಥಿವಪದಾರ್ಥಗಳೇ ಅಗ್ನಿಗೆ ಕಾರಣವಾಗಲಾರವು" ಎಂದು ಹೇಳುವುದೂ ಸಾಧ್ಯವಲ್ಲ ವಿಜಾತೀಯವಾದ ಎರಡು ಪದಾರ್ಥಗಳಿಗೆ ಪರ ಸ್ಪರವಾಗಿ ಕಾರ್ಯಕಾರಣಭಾವವೇ ಲೋಕದಲ್ಲಿ ಇಲ್ಲದಿದ್ದಪಕ್ಷದಲ್ಲಿ ನೀವು ಹೇಳಿದಂತೆ ಕಲ್ಪನೆಯನ್ನು ಮಾಡಬಹುದಾಗಿದ್ದಿತು; ಹಾಗಿಲ್ಲದೆ ಕಟ್ಟಿಗೆ ಮುಂತಾದುವುಗಳಿಂದ

ಹೊಗೆ, ಬೂದಿ ಮುಂತಾದ ವಿಜಾತೀಯಪದಾರ್ಥಗಳು ಉಂಟಾಗುತ್ತಿರುವುದನ್ನೂ, ಸಗಣಿಯಿಂದ ವೃಶ್ಚಿಕವು ಉಂಟಾಗುತ್ತಿರುವುದನ್ನೂ, ಪ್ರತ್ಯಕ್ಷವಾಗಿ ನೋಡುತ್ತೇವೆ. ಆದಕಾರಣ ಪಾರ್ಥಿವಪದಾರ್ಥವೇ ಅಗ್ನಿಗೆ ಉಪಾದಾನಕಾರಣವಾಗಿ ವಾಯು ಅದಕ್ಕೆ ನಿಮಿತ್ತಕಾರಣವಾಗಿರಬಹುದಲ್ಲದೆ ಉಪಾದಾನಕಾರಣವಾಗಲಾರದು.

"ಪಾರ್ಥಿವಪದಾರ್ಥವೇ ಅಗ್ನಿಗೆ ಕಾರಣವಾಗಿರುವುದಾದರೆ ಕಾರಣವಾದ ಪಾರ್ಥಿವಪದಾರ್ಥದಲ್ಲಿರುವ ಅನುಷ್ಣಾಶೀತಸ್ಪರ್ಶಕ್ಕೆ ವಿರುದ್ಧವಾದ ಉಷ್ಣಸ್ಪರ್ಶವು ಕಾರ್ಯವಾದ ಅಗ್ನಿಯಲ್ಲಿ ಹೇಗೆ ಬರಬಹುದು ? ಕಾರಣಗುಣವಲ್ಲವೆ ಕಾರ್ಯದಲ್ಲಿ ಬರಬೇಕು; ಆದುದರಿಂದ ಪಾರ್ಥಿವಪದಾರ್ಥವು ಅಗ್ನಿಗೆ ಕಾರಣವಾಗಲಿಕ್ಕಿಲ್ಲ" ಎಂದು ಆಶಂಕಿಸಬಾರದು. ಧೂಮಕ್ಕೂ ಭಸ್ಮಕ್ಕೂ ಕಾರಣವಾದ ಪಾರ್ಥಿವಪದಾರ್ಥದಲ್ಲಿ ಇಲ್ಲದಿರುವ ಗಂಧವಿಶೇಷವು ಕಾರ್ಯವಾದ ಧೂಮದಲ್ಲಿಯೂ ಭಸ್ಮದಲ್ಲಿಯೂ ತೋರುವಂತೆಯೂ, ತುರುಚೆಯಗಿಡಕ್ಕೆ ಕಾರಣವಾದ ಪಾರ್ಥಿವಪದಾರ್ಥದಲ್ಲಿ ಇಲ್ಲದ ನವೆಯನ್ನು ಉಂಟುಮಾಡುವ ಸ್ಪರ್ಶಗುಣವು ಕಾರ್ಯವಾದ ತುರುಚೆಯ ಗಿಡದ ಎಲೆಯಲ್ಲಿ ಕಾಣುವಂತೆಯೂ, ಕಾರಣವಾದ ಪಾರ್ಥಿವವಸ್ತುವಿನಲ್ಲಿ ಇಲ್ಲದಿರುವ ಉಷ್ಣಸ್ಪರ್ಶವು ಕಾರ್ಯವಾದ ಅಗ್ನಿಯಲ್ಲಿ ತೋರುವುದರಲ್ಲಿ ವಿರೋಧವೇನೂ ಇಲ್ಲ.

ಅಗ್ನಿಗೆ ವಾಯುವನ್ನೇ ಉಪಾದಾನಕಾರಣವಾಗಿ ಹೇಳುವವರ ಮತದಲ್ಲಿಯೂ ಈ ಆಕ್ಷೇಪವು ತಪ್ಪಿದುದಲ್ಲ. ವಾಯುವಿನಲ್ಲಿಯೂ ಪೃಥಿವಿಯಂತೆ ಅನುಷ್ಣಾಶೀತಸ್ಪರ್ಶವಲ್ಲದೆ ಉಷ್ಣಸ್ಪರ್ಶವಿಲ್ಲವಷ್ಟೆ. ಒಂದೇ ಜಲವು ಸಹಕಾರಿಕಾರಣಗಳ ವ್ಯತ್ಯಾಸದಿಂದ ನೊರೆಯಾಗಿಯೂ ಗುಳ್ಳೆಯಾಗಿಯೂ ಅಲೆಯಾಗಿಯೂ ಪರಿಣಮಿಸುವಂತೆ ಒಂದೇ ಪಾರ್ಥಿವಪದಾರ್ಥವು ಆ ಆ ಸಹಕಾರಿಭೇದದಿಂದ ಹೊಗೆಯಾಗಿಯೂ ಬೆಂಕಿಯಾಗಿಯೂ ಭಸ್ಮವಾಗಿಯೂ ಪರಿಣಮಿಸಬಹುದು. ಆದಕಾರಣ ವಾಯು ಅಗ್ನಿಗೆ ಉಪಾದಾನಕಾರಣವೆಂದು ಹೇಳಲು ಸಾಧ್ಯವಿಲ್ಲದಿರುವಲ್ಲಿ ವಾಯೋರಗ್ನಿಃ ಎಂಬ ಪಂಚಮಿಯಿಂದ ಉಪಾದಾನಕಾರಣತ್ವವೇ ಹೇಳಲ್ಪಡುವುದೆಂದು ನಿಷ್ಕರ್ಷಿಸುವ ಬಗೆ ಹೇಗೆ ?

## ೧೬೭ ಅಗ್ನಿಂ ಪ್ರತಿ ವಾಯೋಃ ಉಪಾದಾನಕಾರಣತ್ವಸಮರ್ಥನಂ.

ವಾಯೋಃ ಎಂಬ ಪಂಚಮಿ ಕಾರಣತ್ವಮಾತ್ರವನ್ನು ತೋರಿಸಿದರೂ, ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಸ್ಸಂಭೂತಃ, ಆಕಾಶಾದ್ವಾಯುಃ ಎಂಬ ಪೂರ್ವವಾಕ್ಯಗಳಲ್ಲಿರುವ ಪಂಚಮಿ ಉಪಾದಾನತ್ವವನ್ನೇ ತೋರಿಸುವುದರಿಂದ ಉಪಾದಾನಕಾರಣಪ್ರಕರಣದಲ್ಲಿ ಪಠಿತವಾಗಿರುವ ವಾಯೋಃ ಎಂಬ ಪಂಚಮಿ ಅನನ್ಯಥಾಸಿದ್ಧವಾಗಿ ಉಪಾದಾನತ್ವವನ್ನೇ ತೋರಿಸುವುದು.

ಲಯಪ್ರಕರಣದಲ್ಲಿ ತೇಜಸ್ಸಿಗೆ ವಾಯುವಿನಲ್ಲಿ ಲಯವನ್ನು ಹೇಳಿರುವುದರಿಂದಲೂ ತೇಜಸ್ಸಿಗೆ ವಾಯುವೇ ಉಪಾದಾನಕಾರಣವಾಗಿರಬೇಕು. ನಿಮಿತ್ತಕಾರಣದಲ್ಲಿ ಕಾರ್ಯಕ್ಕೆ ಲಯವುಂಟಾಗುವುದಿಲ್ಲ ಘಟವು ನಾಶವನ್ನು ಹೊಂದುವ ಕಾಲದಲ್ಲಿ ಮೃತ್ಪಿಂಡದಲ್ಲಿ ಲೀನವಾಗುವುದಲ್ಲದೆ ಕುಂಬಾರನಲ್ಲಿ ಅಲ್ಲ.

೧೬೮ ಅಗ್ನಿಂ ಪ್ರತಿ ಪಾರ್ಥಿವಪದಾರ್ಥಸ್ಯ ಉಪಾದಾನಕಾರಣತ್ವಭಂಗಃ.

ಕಟ್ಟಿಗೆ ಮುಂತಾದ ಪಾರ್ಥಿವಪದಾರ್ಥಗಳಿಂದ ಅಗ್ನಿಯುಂಟಾಗುತ್ತದೆ ಎಂದು ಹೇಳಿದುದು ಸಮಂಜಸವಲ್ಲ. ಅಂಥ ಪದಾರ್ಥಗಳೂ ಪಂಚೀಕರಣಪ್ರಕ್ರಿಯೆಯಿಂದ ಪಂಚಭೂತಾತ್ಮಕವಾಗಿಯೇ ಇರುವುವಾದುದರಿಂದ ಅವುಗಳಲ್ಲಿ ಅಡಗಿರುವ ಸೂಕ್ಷ್ಮವಾದ ತೇಜೋಭಾಗದಿಂದಲೇ ಸ್ಥೂಲವಾದ ಬಾಹ್ಯವಹ್ನಿಯುಂಟಾಗುವುದಲ್ಲದೆ ಕೇವಲ ಪಾರ್ಥಿವಪದಾರ್ಥಗಳಿಂದಲ್ಲ.

ಓಹೋ-ಕಟ್ಟಿಗೆ ಮುಂತಾದುವುಗಳಲ್ಲಿಯೂ ಅಗ್ನಿ ಇರುವುದೆಂದು ಒಪ್ಪುವುದಾದರೆ ಸ್ಥೂಲವಾದ ಅಗ್ನಿ ಹುಟ್ಟುವುದಕ್ಕಿಂತಲೂ ಪೂರ್ವದಲ್ಲಿ ಅದು ನಮ್ಮ ತ್ವಗಿಂದ್ರಿಯಕ್ಕೆ ಏತಕ್ಕೆ ಗೋಚರವಾಗುವುದಿಲ್ಲ? ಹವುದು ಗೋಚರವಾಗುವುದಿಲ್ಲ; ಅದ ಮಾತ್ರಕ್ಕೆ ಅವುಗಳಲ್ಲಿ ಅಗ್ನಿಯೇ ಇಲ್ಲವೆಂದು ಹೇಳಲಾದೀತೆ? ಹಾಗೆ ಹೇಳುವುದಾದರೆ ಸ್ಥೂಲವಾದ ಅಗ್ನಿ ಅವುಗಳಲ್ಲಿ ಹುಟ್ಟಿದಮೇಲೆಯೂ ಅದರ ಜ್ವಾಲೆಯನ್ನು ಆರಿಸಿದರೆ ಆಗಲೂ ಅದು ನಮ್ಮ ತ್ವಗಿಂದ್ರಿಯಕ್ಕೆ ಗೋಚರವಾಗುವುದಿಲ್ಲವಾದುದರಿಂದ ಆಗಲೂ ಅಲ್ಲಿ ಅಗ್ನಿಯಿಲ್ಲವೆಂದು ಹೇಳಬೇಕಾದೀತು. ಆದಕಾರಣ ಅವುಗಳಲ್ಲಿ ಪಂಚೀಕರಣಪ್ರಕ್ರಿಯೆಯಿಂದ ಶಾಸ್ತ್ರಸಿದ್ಧವಾದ ಅಗ್ನ್ಯವಯವಗಳನ್ನು ಕಾರಣಾಂತರದಿಂದ ನಮಗೆ ಗೋಚರವಾಗಲಿಲ್ಲವೆಂದು ಹೇಳಬೇಕಲ್ಲದೆ ಅಲ್ಲಿ ಅಗ್ನಿಯೇ ಇಲ್ಲದುದರಿಂದಲ್ಲ. ಆದಕಾರಣ ಪಾರ್ಥಿವಪದಾರ್ಥವು ಅಗ್ನಿಗೆ ಎಂದಿಗೂ ಕಾರಣವಾಗಲಾರದು

ಸಮುದ್ರಜಲದಿಂದಲೇ ವೃದ್ಧಿಯನ್ನು ಹೊಂದಿ ಸಮುದ್ರಜಲದ ಪರಿಣಾಮರೂಪವಾಗಿಯೇ ಇರುವ ಬಡಬಾಗ್ನಿಗೂ, ನೀರುಂಡಮೇಘಮಂಡಲದಲ್ಲಿರುವ ವೈದ್ಯುತಾಗ್ನಿಗೂ ಪಾರ್ಥಿವಪದಾರ್ಥವು ಉಪಾದಾನಕಾರಣವಾಗಿರುವುದೆಂದು ಸ್ವಪ್ನದಲ್ಲಿಯೂ ಊಹಿಸಲು ಅವಕಾಶವಿಲ್ಲವಷ್ಟೆ.

ಬಾಡಬ-ವೈದ್ಯುತಾಗ್ನಿಗಳಿಗೆ ಜಲವೇ ಉಪಾದಾನಕಾರಣವೆಂದೂ, ಭೂಮಿಯಲ್ಲಿರುವ ಅಗ್ನಿಗೆ ಪಾರ್ಥಿವಪದಾರ್ಥಗಳೇ ಉಪಾದಾನಕಾರಣವೆಂದೂ, ಹೀಗೆ ಅನಿಯತವಾದ ಹಲವು ಉಪಾದಾನಕಾರಣಗಳನ್ನು ಕಲ್ಪನೆ ಮಾಡುವುದರಮೂಲಕ ಗೌರವವನ್ನು ವಹಿಸುವುದು ಲಾಘವಾರ್ಥಿಗಳಿಗೆ ಯುಕ್ತವಲ್ಲ.

ಆದಕಾರಣ ಆ ಆ ಪಾರ್ಥಿವಪದಾರ್ಥಗಳಲ್ಲಿ ಸೂಕ್ಷ್ಮರೂಪವಾಗಿ ಅಡಗಿರುವ ಅಗ್ನಿಯೇ ಕೆಲವು ಸಹಕಾರಿಕಾರಣಗಳ ಸಂಪತ್ತಿಯಿಂದಲೂ, ಆ ಆ ಪ್ರಾಣಿಗಳ ಅದೃಷ್ಟವಶದಿಂದ ಆ ಆ ಪದಾರ್ಥಗಳೊಳಗೆ ತತ್ಕಾಲದಲ್ಲಿ ಬಂದೊದಗಿರುವ ಸಜಾತೀಯವಾದ ಅಗ್ನ್ಯವಯವಗಳ ಸಂಯೋಗದಿಂದಲೂ ಆ ಆ ಪದಾರ್ಥಗಳಲ್ಲಿ ಸ್ಥೂಲರೂಪವನ್ನು ಹೊಂದಿ ಪ್ರಬಲವಾದ ಅಗ್ನಿಯಾಗಿ ಕಾಣುವುದು. ಮಹರ್ಷಿಗಳ ವ್ಯವಹಾರವೂ ಇದೇ ಅರ್ಥವನ್ನು ಸ್ಪಷ್ಟವಾಗಿ ತೋರಿಸುತ್ತಿರುವುದು--ಕಾಷ್ಠೇಽಗ್ನಿರಿವ ಶೇರತೇ, ದಾರುಣ್ಯಗ್ನಿರ್ಯಥಾತೈಲಂ ತಿಲೇ ತದ್ವದಸೌ ಪುಮಾನ್ ಇತ್ಯಾದಿ.

೧೬೯ ಕಾಷ್ಠಾದಿಷು ಗೂಢಸ್ಯಾಗ್ನೇರನುದ್ಭೂತರೂಪತ್ವೇಽಪಿ ಉದ್ಭೂತ ರೂಪಂ ಬಾಹ್ಯಮಗ್ನಿಂ ಪ್ರತಿ ಉಪಾದಾನಕಾರಣತ್ವೋಪಪತ್ತಿಃ.

ಓಹೋ—ಪಂಚೀಕರಣಪ್ರಕ್ರಿಯೆಯಿಂದ ಆ ಆ ಪದಾರ್ಥಗಳಲ್ಲಿ ಅಗ್ನಿ ಅಡಗಿರುವುದಾದರೆ ಅಂಥ ಅಗ್ನಿ ಉದ್ಭೂತರೂಪವುಳ್ಳದ್ದೋ ಅಥವಾ ಅನುದ್ಭೂತರೂಪವುಳ್ಳದ್ದೋ? ಉದ್ಭೂತರೂಪವುಳ್ಳದ್ದಾದರೆ ಸ್ಥೂಲವಾದ ಅಗ್ನಿಯಂತೆ ಇದೂ ನಮ್ಮ ಇಂದ್ರಿಯಕ್ಕೆ ಗೋಚರವಾಗಬೇಕು; ಅನುದ್ಭೂತರೂಪವುಳ್ಳದ್ದಾದರೆ ಅಂಥ ಅಗ್ನಿ ಉದ್ಭೂತರೂಪವುಳ್ಳ ಅಗ್ನಿಗೆ ಉಪಾದಾನಕಾರಣವಾಗಲು ಯೋಗ್ಯವಲ್ಲ. ಈ ಉಭಯಸಂಕಟಕ್ಕೆ ಪರಿಹಾರವೇನು?

ಉಭಯಸಂಕಟವಿದ್ದರಲ್ಲವೆ ಪರಿಹಾರವನ್ನು ಹುಡುಕಬೇಕು; ಸಂಕಟವೇ ಇಲ್ಲ. ಅನುದ್ಭೂತರೂಪವಾದ ಅಗ್ನಿ ಉದ್ಭೂತರೂಪವಾದ ಅಗ್ನಿಗೆ ಉಪಾದಾನಕಾರಣವಾಗಲು ಯೋಗ್ಯವಲ್ಲವೆಂಬ ಮಾತೇ ನಂಬಿಕೆಗೆ ಅರ್ಹವಾದುದಲ್ಲ. ಸಹಕಾರಿಕಾರಣಗಳ ಸಂಪತ್ತಿಯಿಂದ ಅನುದ್ಭೂತರೂಪವಾದ ಅಗ್ನಿಯೂ ಉದ್ಭೂತರೂಪವಾದ ಅಗ್ನಿಗೆ ಉಪಾದಾನಕಾರಣವಾಗುವುದರಲ್ಲಿ ಯಾವ ಅಡ್ಡಿಯೂ ಇಲ್ಲ. ಪ್ರಬಲವಾಗಿ ಕಾಯಿಸಲ್ಪಟ್ಟ ಕೊಪ್ಪರಿಗೆಯಲ್ಲಿ ಮರಳುತ್ತಿರುವ ಎಣ್ಣೆಯಲ್ಲಿ ಅಡಗಿರುವ ಅಗ್ನಿ ಅನುದ್ಭೂತರೂಪವಾಗಿದ್ದರೂ ಒಂದೆರಡು ಜಲಬಿಂದುಗಳ ಸಹಾಯವು ದೊರೆತ ಮಾತ್ರಕ್ಕೆ ತತ್‌ಕ್ಷಣದಲ್ಲಿಯೇ ಆಕಾಶದವರೆಗೂ ಉರಿವಷ್ಟು ಪ್ರಬಲವಾದ ಜ್ವಾಲೆಗಳೊಡನೆ ಕೂಡಿರುವ ಉದ್ಭೂತರೂಪವಾದ ಅಗ್ನಿಯನ್ನು ಉಂಟುಮಾಡುತ್ತಿರುವುದು ಯಾರಿಗೂ ತಿಳಿಯದ ವಿಷಯವಲ್ಲ.

೧೭೦ ವೃಷ್ಟಿಸೃಷ್ಟೌ ಅಗ್ನೇರೇವ ಅಗ್ನ್ಯುಪಾದಾನತ್ವೇಽಪಿ ಸಮಷ್ಟಿ ಸೃಷ್ಟೌ ವಾಯೋರೇವ ಅಗ್ನ್ಯುಪಾದಾನತ್ವಂ.

ಆದಕಾರಣ ಪಂಚೀಕರಣಕ್ಕೆ ಅನಂತರದಲ್ಲಿ ಉಂಟಾಗುವ ವೃಷ್ಟಿಸೃಷ್ಟಿಯಲ್ಲಿ ಸ್ಥೂಲವಾದ ಅಗ್ನಿಗೆ ಸೂಕ್ಷ್ಮವಾದ ಅಗ್ನಿ ಉಪಾದಾನಕಾರಣವಾಗಿಯೂ, ಪಂಚೀ

ಕರಣಕ್ಕೆ ಪೂರ್ವದಲ್ಲಿ ಉಂಟಾಗುವ ಸಮಷ್ಟಿಸೃಷ್ಟಿಯಲ್ಲಿ ವಾಯುವೇ ಅಗ್ನಿಗೆ ಉಪಾದಾನಕಾರಣವಾಗಿಯೂ, ಇರುವುದೆಂಬುದು ಸೃಷ್ಟಿರಹಸ್ಯವಾದ ವೈದಿಕ ಸಿದ್ಧಾಂತವಾಗಿರುವುದು.

## ೧೭೧ ಅಥ ಅಗ್ನಿಲಕ್ಷಣಂ.

ಉತ್ಕಟಾವಸ್ಥೆಯನ್ನು ಹೊಂದಿದ ಉಷ್ಣಸ್ಪರ್ಶವುಳ್ಳ ದ್ರವ್ಯವು ತೇಜೋಭೂತವೆಂದಾಗಲಿ ಅಗ್ನಿಯೆಂದಾಗಲಿ ಹೇಳಲ್ಪಡುವುದು. ಅಥವಾ ಭಾಸ್ವರರೂಪವುಳ್ಳ ದ್ರವ್ಯವು ಹಾಗೆ ಹೇಳಲ್ಪಡುವುದು. ಪ್ರಥಮಲಕ್ಷಣದಲ್ಲಿ ರೂಪತನ್ಮಾತ್ರೆಯನ್ನು ವ್ಯಾವರ್ತಿಸುವುದಕ್ಕಾಗಿ "ಉತ್ಕಟಾವಸ್ಥೆಯನ್ನು ಹೊಂದಿದ" ಎಂಬ ಪದವೂ, ವಾಯುಜಲಪೃಥಿವಿಗಳನ್ನು ವ್ಯಾವರ್ತಿಸುವುದಕ್ಕಾಗಿ ಉಷ್ಣಸ್ಪರ್ಶಪದವೂ ಉಕ್ತವಾಗಿರುವುವು. ದ್ವಿತೀಯಲಕ್ಷಣದಲ್ಲಿ ಜಲವನ್ನು ವ್ಯಾವರ್ತಿಸುವುದಕ್ಕಾಗಿ ಭಾಸ್ವರರೂಪಪದವು ಉಕ್ತವಾಗಿರುವುದು. ಅಂಥ ತೇಜಸ್ಸು ವಾಗಿಂದ್ರಿಯಕ್ಕೂ ಚಕ್ಷುರಿಂದ್ರಿಯಕ್ಕೂ ಆಪ್ಯಾಯಕವಾಗಿರುವುದು.

## ೧೭೨ ಅಂಧಕಾರವ್ಯತಿರಿಕ್ತಪದಾರ್ಥಗ್ರಹಣಾಯ ತೇಜೋಽಪೇಕ್ಷಾ.

ಲೋಕದಲ್ಲಿ ತೇಜಸ್ಸೆಂಬುದು ಯಾವ ಕೆಲಸಕ್ಕಾಗಿ ಆವಶ್ಯಕವಾಗಿರುವುದು? ಪದಾರ್ಥಗಳನ್ನು ನೋಡುವುದಕ್ಕಾಗಿ. ಯಾವ ಪದಾರ್ಥಗಳನ್ನು ? ಅಂಧಕಾರವೆಂಬುದೊಂದನ್ನು ಬಿಟ್ಟು ಉಳಿದ ಪದಾರ್ಥಗಳನ್ನು. ಆದರೆ ಅಂಧಕಾರದ ಗತಿಯೇನು? ತೇಜಸ್ಸಿನ ಸಹಾಯವಿಲ್ಲದೆಯೇ ಅದನ್ನು ನೋಡಬಹುದೆಂಬುದೇ ಗತಿ.

## ೧೭೩ ಅಂಜನವಿಶೇಷಾಸಹಕೃತಸ್ಯ ದಿವಾಭೀತಾದಿಚಕ್ಷುರ್ವ್ಯತಿರಿಕ್ತಸ್ಯ ಚ ಚಕ್ಷುಷಃ ತೇಜೋಽಪೇಕ್ಷಾ.

ಯಾವುವುಗಳಿಗೆ ಈ ತೇಜಸ್ಸು ಆವಶ್ಯಕವಾಗಿರುವುದು? ಕಣ್ಣುಗಳಿಗೆ. ಯಾವ ಕಣ್ಣುಗಳಿಗೆ ? ಪದಾರ್ಥಗಳನ್ನು ನೋಡಲುದ್ಯುಕ್ತವಾಗಿರುವ ಕಣ್ಣುಗಳಿಗೆ. ಯಾರ ಅಂಥ ಕಣ್ಣುಗಳಿಗೆ? ವೈದ್ಯಶಾಸ್ತ್ರಪ್ರಸಿದ್ಧವಾಗಿ ಸಿದ್ಧೌಷಧವೆನಿಸಿಕೊಂಡಿರುವ ಅಂಜನದ ಸಹಾಯವಿಲ್ಲದವರ ಅಂಥ ಕಣ್ಣುಗಳಿಗೆ. ಆದರೆ ಅಂಥ ಅಂಜನದ ಸಹಾಯವನ್ನು ಪಡೆದಿರುವವರ ಕಣ್ಣುಗಳಿಗೇನು ಗತಿ ? ತೇಜಸ್ಸಿನ ಸಹಾಯವಿಲ್ಲದೆಯೇ ಪದಾರ್ಥಗಳನ್ನು ನೋಡಬಹುದೆಂಬುದೇ ಗತಿ.

ಮತ್ತೂ ಯಾವ ಕಣ್ಣುಗಳಿಗೆ ? ದಿವಾಭೀತವೇ ಮೊದಲಾದ ಕೆಲವು ಪ್ರಾಣಿಗಳ ಕಣ್ಣುಗಳನ್ನು ಬಿಟ್ಟು ಉಳಿದ ಕಣ್ಣುಗಳಿಗೆ. ಆದರೆ ಆ ಪ್ರಾಣಿಗಳ ಕಣ್ಣುಗಳಿಗೇನುಗತಿ ? ತೇಜಸ್ಸಿರುವ ಕಾಲದಲ್ಲಿ ಕುರುಡರಂತೆ ಒಂದು ಕಡೆಯಲ್ಲಿ ಅಡಗಿದ್ದು

ಹೆಚ್ಚು ತೇಜಸ್ಸಿಲ್ಲದ ಕಾಲದಲ್ಲಿ ಎಂದರೆ ರಾತ್ರಿಕಾಲದಲ್ಲಿ ಪದಾರ್ಥಗಳನ್ನು ನೋಡು ವಿಕೆಯೇ ಗತಿ.

## ೧೭೪ ಸೂಕ್ಷ್ಮಪದಾರ್ಥಗ್ರಹಣಾಯ ಪ್ರಚುರತರತೇಜೋಽಪೇಕ್ಷಾ.

ಪದಾರ್ಥಗಳನ್ನು ನೋಡುವುದಕ್ಕೆ ಎಂಥ ತೇಜಸ್ಸು ಬೇಕಾಗಿರುವುದು ? ಆ ಆ ಪದಾರ್ಥಗಳನ್ನು ನೋಡುವುದಕ್ಕೆ ತಕ್ಕಷ್ಟು ತೇಜಸ್ಸು ಬೇಕಾಗಿರುವುದರಿಂದ ಅತಿಸೂಕ್ಷ್ಮವಾದ ವಸ್ತುಗಳನ್ನು ನೋಡುವುದಕ್ಕೆ ಹೆಚ್ಚಾದ ತೇಜಸ್ಸು ಬೇಕಾಗಿರುವುದು. ಹೆಚ್ಚಾದ ತೇಜಸ್ಸಿನಿಂದ ಅತಿಸೂಕ್ಷ್ಮವಾದ ಪದಾರ್ಥಗಳನ್ನು ನೋಡಬಹುದೆಂಬುದನ್ನು ನಾವು ಎಲ್ಲಿ ಪರಿಚಯಮಾಡಿ ತಿಳಿದುಕೊಳ್ಳಬಹುದು ? ಗವಾಕ್ಷದ ಮಾರ್ಗವಾಗಿ ಮನೆಯೊಳಕ್ಕೆ ನುಗ್ಗಿಬರುವ ಬಿಸಲಿನಲ್ಲಿ ಕಾಣಬರುವ ತ್ರಸರೇಣುವೆಂಬ ಅತಿಸೂಕ್ಷ್ಮವಾದ ವಸ್ತುವನ್ನು ಹೆಚ್ಚಾದ ತೇಜಸ್ಸಿನ ಸಹಾಯದಿಂದಲೇ ನಾವು ನೋಡಬಲ್ಲೆವೆಂಬುದು ಎಲ್ಲರಿಗೂ ಪರಿಚಿತವಾಗಿಯೇ ಇರುವುದು.

## ೧೭೫ ಪದಾರ್ಥಗ್ರಹಣಾಯ ಇಂದ್ರಿಯಾಪ್ಯಾಯಕತೇಜೋಭಿನ್ನ ತೇಜೋಽಪೇಕ್ಷಾ.

ಮತ್ತೂ ಎಂಥ ತೇಜಸ್ಸು ಬೇಕಾಗಿರುವುದು ? ಚಕ್ಷುರಿಂದ್ರಿಯಕ್ಕೆ ಆಪ್ಯಾಯಕವಾದ ತೇಜಸ್ಸಿಗಿಂತಲೂ ಬೇರೊಂದಾದ ತೇಜಸ್ಸು ಬೇಕಾಗಿರುವುದು. ಅಂಥ ತೇಜಸ್ಸಿಲ್ಲದಿದ್ದರೆ ಹಾನಿಯೇನು ? ಇಂದ್ರಿಯಕ್ಕೆ ಆಪ್ಯಾಯಕವಾದ ತೇಜಸ್ಸಿನಿಂದಲೇ ಕೆಲಸವು ಏತಕ್ಕೆ ನಡೆಯಬಾರದು ? ಇಂದ್ರಿಯಕ್ಕೆ ಆಪ್ಯಾಯಕವಾದ ತೇಜಸ್ಸು ಇನ್ನಿಗೆ ಇಂದ್ರಿಯವು ಪಟುವಾಗಿರುವ ಪರ್ಯಂತವೂ ಇದ್ದೇ ಇರುವುದರಿಂದ ಅಂಥ ಕಾಲದಲ್ಲಿಯೂ ಇರುವುದಷ್ಟೆ; ಆಗ ಅಷ್ಟುಮಾತ್ರದಿಂದ ಕೆಲಸವು ನಡೆವುದಿಲ್ಲವೆಂಬುದು ಪ್ರತ್ಯಕ್ಷಸಿದ್ಧವಾಗಿರುವಕಾರಣ ಇಂದ್ರಿಯಾಪ್ಯಾಯಕವಾದ ತೇಜಸ್ಸಿಗಿಂತಲೂ ವಿಲಕ್ಷಣವಾದ ತೇಜಸ್ಸೊಂದು ಬೇಕಾಗಿರುವುದು.

## ೧೭೬ ತೇಜಸಃ ಚತುರ್ಧಾ ವಿಭಾಗಃ.

ಇಂಥ ತೇಜೋಭೂತವು ಇಂದ್ರಿಯಾಪ್ಯಾಯಕ, ವೈಶ್ವಾನರ, ಶರೀರ, ವಿಷಯ ಎಂದು ನಾಲ್ಕುವಿಧವಾಗಿದ್ದುಕೊಂಡು ಸಕಲಪ್ರಾಣಿಗಳಿಗೂ ಉಪಕಾರ ಮಾಡುತ್ತಿರುವುದು. ಇದರಲ್ಲಿ ಮೊದಲನೆಯದಾದ ಇಂದ್ರಿಯಾಪ್ಯಾಯಕವನ್ನು ಮೊದಲೇ ಹೇಳಿದೆವು ; ಎರಡನೆಯದಾದ ವೈಶ್ವಾನರವೆಂಬುದು ಎಲ್ಲಾ ಪ್ರಾಣಿಗಳ ಶರೀರದ ಒಳಭಾಗದಲ್ಲಿಯೂ ನಾಭಿಮಂಡಲದಲ್ಲಿ ಇದ್ದುಕೊಂಡು ಪ್ರಾಣ, ಅಪಾನ ಮುಂತಾದ ವಾಯುಗಳ ಸಹಾಯದಿಂದ ಭುಜಿಸಲ್ಪಟ್ಟೂ ಕುಡಿಯಲ್ಪಟ್ಟೂ ಇರುವ

ಆ ಆ ವಸ್ತುಗಳನ್ನು ಪಚನಮಾಡುವುದಕ್ಕೆ ಕಾರಣವಾಗಿರುವ ಒಂದಾನೊಂದು ತೇಜಸ್ಸಾಗಿರುವುದು. ಮೂರನೆಯದು ಹಿಂದೆ ಹೇಳಿದ ಎರಡುಬಗೆಯಾದ ತೇಜಸ್ಸಿಗಿಂತಲೂ ವಿಲಕ್ಷಣವಾದ ಬೇರೊಂದು ತೇಜಸ್ಸು. ಇದು ಶರೀರಕ್ಕೆ ಉಪಾದಾನ ಕಾರಣವಾಗಿ ಇದ್ದುಕೊಂಡು ಇತರವಾದ ನಾಲ್ಕುಭೂತಗಳೊಡನೆಯೂ ಕೂಡಿ ಶರೀರ ಸ್ವರೂಪವನ್ನು ಉಂಟುಮಾಡುವುದು. ಇಂಥ ಶರೀರಗಳನ್ನು ತೇಜೋಲೋಕದಲ್ಲಿ ತೇಜಃ ಪ್ರಚುರವಾದ ಅಗ್ನಿ, ಸೂರ್ಯ ಮೊದಲಾದ ತೈಜಸಶರೀರಗಳೆಂದು ತಿಳಿಯಬಹುದು.

ನಾಲ್ಕನೆಯದು— ಹಿಂದೆ ಹೇಳಿದ ಮೂರುಬಗೆಯಾದ ತೇಜಸ್ಸಿಗಿಂತಲೂ ಬೇರೆಯಾದ ತೇಜಸ್ಸು ವಿಷಯವೆನಿಸಿಕೊಳ್ಳುವುದು. ಇದು ಬೆಳದಿಂಗಳು, ಬಿಸಲು, ಮಿಂಚು, ಲೌಕಿಕಾಗ್ನಿ ಇವೇ ಮೊದಲಾದ ರೂಪಗಳಿಂದ ಸಮಯೋಚಿತವಾಗಿ ಪ್ರಾಣಿಗಳ ಉಪಕಾರಕ್ಕೆ ಒದಗುವುದು. ಸೂರ್ಯಕಿರಣವು ಸರ್ವತೋಮುಖವಾಗಿ ವ್ಯಾಪಿಸಿ ಸಸ್ಯಾದಿಗಳಲ್ಲಿಯೂ ಫಲವರ್ಗಗಳಲ್ಲಿಯೂ ಔಷ್ಣ್ಯವನ್ನು ಉಂಟುಮಾಡಿ ಅವುಗಳು ಪಕ್ವವಾಗುವುದಕ್ಕೆ ಕಾರಣವಾಗುವುದು. ಗ್ರೀಷ್ಮಕಾಲದಲ್ಲಿ ಈ ಕಿರಣವು ಉಗ್ರವಾಗಿ ವ್ಯಾಪಿಸಿ ಭೂಮಂಡಲದಲ್ಲಿರುವ ಜಲಾಂಶವನ್ನು ಹೀರುತ್ತ ಮೇಘ ಮಂಡಲದಲ್ಲಿ ಸೇರಿಸಿ ಒಂದಕ್ಕೆ ಸಾವಿರಪಾಲು ಹೆಚ್ಚಾಗಿ ವರ್ಷಕಾಲದಲ್ಲಿ ಮಳೆಯನ್ನು ಉಂಟುಮಾಡುವುದು. ಶ್ರುತಿಯೇ ಈ ವಿಷಯವನ್ನು ಸ್ಪಷ್ಟವಾಗಿ ಉಪದೇಶಿಸುತ್ತಿರುವುದು—ಯಾಭಿರಾದಿತ್ಯಸ್ತಪತಿ ರಶ್ಮಿಭಿಸ್ತಾಭಿಃ ಪರ್ಜನ್ಯೋ ವರ್ಷತಿ ಇತ್ಯಾದಿ. ಇದರಂತೆ ಚಂದ್ರಕಿರಣವೂ ಸರ್ವತೋಮುಖವಾಗಿ ವ್ಯಾಪಿಸಿ ಸಸ್ಯಾದಿಗಳಲ್ಲಿಯೂ, ಫಲವರ್ಗಗಳಲ್ಲಿಯೂ ಅವುಗಳಿಗೆ ತಕ್ಕಂತೆ ಆ ಆ ರಸಗಳ ಉತ್ಪತ್ತಿಗೆ ಕಾರಣವಾಗುವುದು. ಲೌಕಿಕಾಗ್ನಿ ಆ ಆ ಪ್ರಾಣಿಗಳ ಅದೃಷ್ಟಕ್ಕೆ ತಕ್ಕಂತೆ ಆ ಆ ಕಾಲಕ್ಕೆ ಒದಗಿ ಪಾಕ, ಶೀತನಿವಾರಣೆ ಮುಂತಾದ ಕಾರ್ಯಗಳಿಗೆ ಉಪಯೋಗವಾಗುವುದು.

### ೧೭೭ ದೀಪಾದಿಜ್ವಾಲಾರೂಪಸ್ಯಾಗ್ನೇಃ ಶೀಘ್ರವಿನಾಶಿತ್ವರೂಪಂ ಕ್ಷಣಿಕತ್ವಂ.

ಇದರಲ್ಲಿ ಜ್ವಾಲಾರೂಪವಾದ ಲೌಕಿಕಾಗ್ನಿಗೆ ಆಶ್ರಯನಾಶವುಂಟಾದ ಕಾಲದಲ್ಲಿ ನಾಶವು ಕಾಣಬರುವುದರಿಂದ ಶೀಘ್ರವಿನಾಶಿತ್ವವೆಂಬ ಕ್ಷಣಿಕತ್ವವನ್ನು ಒಪ್ಪಿಕೊಳ್ಳಬೇಕು. ಈ ಜ್ವಾಲೆಗೆ ಬೇಕಾಗಿರುವ ಎಣ್ಣೆ ಬತ್ತಿ ಮುಂತಾದ ಪುಷ್ಕಲ ಕಾರಣಸಾಮಗ್ರಿ ಒಂದೇಸಲ ಒಟ್ಟಿಗೆ ಬಂದು ಸೇರುವುದಾಗಿದ್ದರೂ ಈ ಜ್ವಾಲೆ ಕ್ಷಣಿಕವಲ್ಲವೆಂದು ಹೇಳಬಹುದಾಗಿದ್ದಿತು. ಹಾಗಿಲ್ಲದೆ ಕಾರಣಸಾಮಗ್ರಿ ಕ್ರಮಕ್ರಮವಾಗಿ

ಬಂದು ಸೇರುವುದರಿಂದ ಕ್ರಮಕ್ರಮವಾಗಿ ಅನೇಕಜ್ವಾಲೆಗಳ ಉತ್ಪತ್ತಿಯನ್ನೂ ಒಪ್ಪಿಕೊಳ್ಳಬೇಕಾಗಿರುವುದು ಹೀಗೆ ಉತ್ಪತ್ತಿಯನ್ನು ಪಡೆದ ಅನೇಕದೀಪಜ್ವಾಲೆಗಳಿಗೆ ಆಗಾಗಲೇ ನಾಶವನ್ನೂ ಒಪ್ಪಿಕೊಳ್ಳದಿದ್ದರೆ ಸ್ವಲ್ಪಹೊತ್ತಿನೊಳಗೆ ಅನೇಕ ದೀಪಜ್ವಾಲೆಗಳು ನಮ್ಮ ಕಣ್ಣಿಗೆ ಬೀಳಬೇಕಾಗುವುವು ಹಾಗಿಲ್ಲದೆ ಬಹಳ ಹೊತ್ತಿನವರೆಗೂ ಒಂದು ದೀಪಜ್ವಾಲೆಯೇ ನಮ್ಮ ಕಣ್ಣಿಗೆ ಕಾಣುತ್ತಿರುವುದರಿಂದ ಆಗಾಗ್ಗೆ ಅವುಗಳ ನಾಶವನ್ನೂ ಒಪ್ಪಿಕೊಳ್ಳಬೇಕು.

೧೭೮ ಪ್ರತ್ಯಭಿಜ್ಞಾಪ್ರತ್ಯಕ್ಷೇಣ ದೀಪಜ್ವಾಲಾಯಾಃ ಸ್ಥಿರತ್ವಾಶಂಕಾ.

ಹಾಗಾದರೆ ರಾತ್ರಿಯ ದೀಪವೇ ಈಗಲೂ ಉರಿಯುತ್ತಿರುವುದು ಎಂದು ನಮಗೆ ಉಂಟಾಗುತ್ತಿರುವ ಪ್ರತ್ಯಭಿಜ್ಞೆ ಹೇಗೆ ಅಸಂಗತವಾದೀತು? ಮನೆಯನ್ನು ಬಿಟ್ಟು ಹೊರಗೆ ಹೋಗಿದ್ದ ಮನುಷ್ಯನು ಪುನಃ ಮನೆಗೆ ಬಂದಾಗ ಅವನನ್ನು ನೋಡುವ ಆ ಮನೆಯವರಿಗೆ ಅವನೇ ಇವನು ಎಂಬ ಪ್ರತ್ಯಭಿಜ್ಞೆಯುಂಟಾಗುವುದು; ಇದರಿಂದ ಹೊರಗೆ ಹೋದದ್ದುಮೊದಲುಗೊಂಡು ಪುನಃ ಮನೆಗೆ ಬಂದು ಸೇರುವವರೆಗೂ ಆ ಮನುಷ್ಯನ ಸ್ಥಿರತ್ವವನ್ನು ಅವರು ತಿಳಿದುಕೊಳ್ಳುವರಲ್ಲದೆ ಸ್ವಲ್ಪ ಹೊತ್ತು ಕಾಣದಿದ್ದಮಾತ್ರಕ್ಕೆ ಮಧ್ಯಕಾಲದಲ್ಲಿ ಆ ಮನುಷ್ಯನಿಗೆ ವಿನಾಶವನ್ನು ಕಲ್ಪಿಸುವುದಿಲ್ಲ. ಅದರಂತೆ ದೀಪಜ್ವಾಲೆಯಲ್ಲಿಯೂ ಹಿಂದೆ ತೋರಿಸಿದ ಯಥಾರ್ಥವಾದ ಪ್ರತ್ಯಭಿಜ್ಞೆಯಿಂದ ಸ್ಥಿರತ್ವವನ್ನು ಹೇಳಬೇಕಲ್ಲದೆ ಕ್ಷಣಿಕತ್ವವನ್ನು ಹೇಗೆ ಹೇಳಲಾದೀತು?

೧೭೯ ಪ್ರತ್ಯಭಿಜ್ಞಾಯಾಃ ಭ್ರಾಂತಿತ್ವೋಪಪಾದನೇನ
ದೀಪಜ್ವಾಲಾಯಾಃ ಕ್ಷಣಿಕತ್ವದೃಢೀಕರಣಂ.

ಹೊರಗೆ ಹೋಗಿದ್ದ ಮನುಷ್ಯನಿಗೆ ಪುನಃ ಬರುವವರೆಗೂ ಮಧ್ಯೇಮಧ್ಯೇ ಉತ್ಪತ್ತಿಗೂ ವಿನಾಶಕ್ಕೂ ಕಾರಣಗಳಿಲ್ಲವಾದುದರಿಂದ ಕ್ಷಣಿಕತ್ವವನ್ನು ಹೇಳಲು ಅವಕಾಶವಿಲ್ಲದಿದ್ದರೂ ದೀಪಜ್ವಾಲೆಯಲ್ಲಿ ಉತ್ಪತ್ತಿವಿನಾಶಸಾಮಗ್ರಿಗಳು ಪ್ರತ್ಯಕ್ಷಸಿದ್ಧವಾಗಿರುವುದರಿಂದ ಕ್ಷಣಿಕತ್ವವು ತಪ್ಪಿದುದಲ್ಲ. ಆದಕಾರಣ ಹಿಂದೆ ತೋರಿಸಿದ ಪ್ರತ್ಯಭಿಜ್ಞೆ ಭ್ರಾಂತಿರೂಪವಾಗಿರುವುದಲ್ಲದೆ ಯಥಾರ್ಥವಲ್ಲ. ಉರಿಯುತ್ತಿದ್ದ ದೀಪವನ್ನು ಆರಿಸಿ ಪುನಃ ಹತ್ತಿಸಿದರೆ ಸಾದೃಶ್ಯದಿಂದ ಆಗಲೂ ಪ್ರತ್ಯಭಿಜ್ಞೆಯುಂಟಾಗುವುದು; ಆದಮಾತ್ರಕ್ಕೆ ಅಲ್ಲಿ ಸ್ಥಿರತ್ವವನ್ನು ಹೇಳಲಾದೀತೆ?

೧೮೦ ನಿಪುಣಂ ನಿರೂಪಣೇ ಜ್ವಾಲಾಭೇದಸ್ಯೈವ ಪ್ರತ್ಯಕ್ಷಸಿದ್ಧತ್ವಂ.

ಎಡೆಬಿಡದೆ ಸೂಕ್ಷ್ಮವಾಗಿ ನೋಡುತ್ತಿದ್ದರೆ ಜಲಪ್ರವಾಹದಂತೆ ಜ್ವಾಲಾಪ್ರವಾಹವು ಪ್ರತ್ಯಕ್ಷಗೋಚರವಾಗುವುದರಿಂದ ಅನೇಕಜ್ವಾಲೆಗಳೇ ಇರುವುವೆಂದೂ,

ಅವುಗಳಲ್ಲಿ ಪರಸ್ಪರವಾಗಿ ಅತ್ಯಂತಸಾದೃಶ್ಯದಿಂದ ಅಭೇದಭ್ರಾಂತಿಯೂ ಉಂಟಾಗುವುದೆಂದೂ ತತ್ತ್ವರತ್ನಾಕರದಲ್ಲಿ ಶ್ರೀಮನ್ನಾಥಮುನಿಗಳಿಂದ ಸ್ಪಷ್ಟವಾಗಿ ಹೇಳಲ್ಪಟ್ಟಿರುವುದು.

### ೧೮೧ ಜ್ವಾಲಾಯಾ ಅಕಾರಣನಾಶವಾದಖಂಡನಂ.

ಬೌದ್ಧಮತದ ವಾಸನೆಯುಳ್ಳವರಾಗಿ ವೇದಾಂತಿಗಳೆಂದು ಹೆಸರಿಟ್ಟುಕೊಂಡಿರುವ ಕೆಲವರು. ಕಾರಣವಿಲ್ಲದೆಯೇ ಜ್ವಾಲಾವಿನಾಶವುಂಟಾಗುವುದೆಂದು ಹೇಳುವರು. ಇದು ನ್ಯಾಯವಾದುದಲ್ಲ. ಏತಕ್ಕೆಂದರೆ ಹಿಂದೆ ನಿರಾಕರಿಸಲ್ಪಟ್ಟ ಬೌದ್ಧರ ಕ್ಷಣಿಕತ್ವವಾದವೇ ಪುನಃ ಅಂಕುರಿಸಿದಂತಾಗುವುದು. ಅದೃಷ್ಟ, ಈಶ್ವರ ಮುಂತಾದ ಸಾಮಾನ್ಯಕಾರಣಗಳು ಯಾವಾಗಲೂ ಇದ್ದೇ ಇರುವುದರಿಂದ ಕಾರಣವೇ ಇಲ್ಲವೆಂದು ಹೇಳುವುದಕ್ಕೂ ಅವಕಾಶವಿಲ್ಲ. ಆಕಾಶದಲ್ಲಿ ಎಸೆಯಲ್ಪಟ್ಟ ಮಣ್ಣುಹಿಂಟೆ ವೇಗದಿಂದ ಕೆಳಗೆ ಬಿದ್ದು ನಾಶಹೊಂದುತ್ತನೆ ಎಂಬುದು ಪ್ರತ್ಯಕ್ಷಸಿದ್ಧವಾದುದರಿಂದ ವೇಗವೇ ಅದರ ನಾಶಕ್ಕೆ ಕಾರಣವಾಗಿರುವಂತೆ ಜ್ವಾಲಾಪ್ರವಾಹದಲ್ಲಿಯೂ ವೇಗವಿರುವುದರಿಂದ ಅಂಥ ವೇಗವೇ ಜ್ವಾಲೆಗೆ ನಾಶವೆಂಬ ಅವಸ್ಥಾಂತರವನ್ನು ಉಂಟುಮಾಡುವುದಕ್ಕೆ ಕಾರಣವಾಗಿರುವುದೆಂದೂ ಏತಕ್ಕೆ ತಿಳಿಯಬಾರದು? ನಾಶವೆಂಬುದು ಭಾವೇತರಪದಾರ್ಥವಾಗಿದ್ದರಲ್ಲವೆ ಕಾರಣವಿಲ್ಲದೆಯೇ ಉಂಟಾಗಬಹುದೆಂದು ಊಹಿಸಲು ಅವಕಾಶವಾಗುತ್ತಿದ್ದಿತು. ಪೂರ್ವಪೂರ್ವಾವಸ್ಥೆಯೊಡನೆ ಕೂಡಿದ ವಸ್ತುವಿಗೆ ಉತ್ತರೋತ್ತರಾವಸ್ಥೆಯೇ ನಾಶವೆನಿಸಿಕೊಳ್ಳುವುದರಿಂದ ಇದು ಕಾರಣವಿಲ್ಲದೆಯೇ ಉಂಟಾಗುತ್ತದೆ ಎಂಬುದು ವಿಚಾರಶೂನ್ಯವಾದ ಉಕ್ತಿಯೇ ಹೊರತು ಯುಕ್ತಿಯುಕ್ತವಾದುದಲ್ಲ.

ಹೀಗೆಯೇ ಪೂರ್ವಪೂರ್ವಶಬ್ದಗಳೂ, ಪೂರ್ವಪೂರ್ವಸಂಸ್ಕಾರಗಳೂ ಉತ್ತರೋತ್ತರಶಬ್ದಗಳಿಂದಲೂ ಉತ್ತರೋತ್ತರಸಂಸ್ಕಾರಗಳಿಂದಲೂ ನಾಶಹೊಂದಿ ಚರಮಶಬ್ದವೂ, ಚರಮಸಂಸ್ಕಾರವೂ ಕಾರಣವಿಲ್ಲದೆಯೇ ನಾಶಹೊಂದುತ್ತವೆ ಎಂದೂ ಕೆಲವರು ಹೇಳುವರು. ಚರಮವಾದ ಶಬ್ದಕ್ಕೂ ಸಂಸ್ಕಾರಕ್ಕೂ ಉತ್ತರೋತ್ತರವಾದ ಶಬ್ದವೂ ಸಂಸ್ಕಾರವೂ ಇಲ್ಲದಿದ್ದರೂ ಪೂರ್ವಶಬ್ದದಿಂದಲೇ ಮತ್ತು ಪೂರ್ವಸಂಸ್ಕಾರದಿಂದಲೇ ನಾಶವುಂಟಾಗಬಹುದು; ಅಥವಾ ಫಲದಿಂದಲಾಗಲಿ ಕಾರಣನಾಶದಿಂದಲಾಗಲಿ ನಾಶವುಂಟಾಗಬಹುದು. ಆದಕಾರಣ ನಾಶವೆಂಬುದು ಕಾರಣವಿಲ್ಲದೆ ಎಲ್ಲಿಯೂ ಉಂಟಾಗುವುದಿಲ್ಲ.

### ೧೮೨ ಪುನಃ ಪ್ರಕಾರಾಂತರೇಣ ತೇಜಸಃ ಚಾತುರ್ವಿಧ್ಯಂ.

ಇಂಥ ತೇಜಸ್ಸನ್ನೇ ಕೆಲವರು ದಾರ್ಶನಿಕರು ಭೌಮ, ದಿವ್ಯ, ಔದರ್ಯ, ಆಕರಜ ಎಂದು ನಾಲ್ಕುವಿಧವಾಗಿ ವಿಭಾಗಮಾಡುವರು. ಇವುಗಳಲ್ಲಿ ಭೌಮವೆಂಬುದು

ಭೂಮಿಯಲ್ಲಿ ಕಾಣುತ್ತಿರುವ ಅಗ್ನಿ. ದಿವ್ಯವೆಂಬುದು ಆದಿತ್ಯಾದಿತೇಜಸ್ಸು. ಔದರ್ಯ ವೆಂಬುದು ವೈಶ್ವಾನರಾಗ್ನಿ. ಎಂದರೆ ಪ್ರಾಣಿಗಳ ಉದರದಲ್ಲಿ ಆಹಾರಪರಿಪಾಕಕ್ಕೆ ಸಾಧನವಾಗಿರುವ ಅಗ್ನಿ. ಆಕರಜವೆಂಬುದು ಗಣಿಯಲ್ಲಿ ಉಂಟಾಗುವ ಲೋಹ, ರತ್ನ, ಚಿನ್ನ, ಬೆಳ್ಳಿ ಮುಂತಾದ ತೇಜಸ್ಸು.

## ೧೮೩ ಪ್ರಭಾಪ್ರಭಾವದ್ರೂಪೇಣ ಪುನಃ ತೇಜಸೋ ದ್ವೈವಿಧ್ಯಕಥನಪೂರ್ವಕಂ ಪ್ರಭಾನಿರೂಪಣಂ.

ತೇಜಸ್ಸು ಪುನಃ ಸಾಮಾನ್ಯವಾಗಿ ಪ್ರಭೆಯೆಂದೂ ಪ್ರಭಾಶ್ರಯವೆಂದೂ ಎರಡು ವಿಧವಾಗುವುದು. ಇದರಲ್ಲಿ ಆವರಣವಿದ್ದರೆ ಅದರಲ್ಲಿ ಅಷ್ಟರಲ್ಲಿಯೇ ಅಡಗಿರುವುದಾಗಿಯೂ, ಆವರಣವಿಲ್ಲದಿದ್ದರೆ ತನ್ನ ವೇಗಶಕ್ತಿಗೆ ಅನುಸಾರವಾಗಿ ತನ್ನ ಆಶ್ರಯವಿರುವ ಪ್ರದೇಶಕ್ಕಿಂತಲೂ ಹೆಚ್ಚು ಪ್ರದೇಶಗಳಲ್ಲಿ ಪ್ರಸರಿಸುವುದಾಗಿಯೂ ಇರುವ ತೇಜಸ್ಸು ಪ್ರಭೆಯೆನಿಸಿಕೊಳ್ಳುವುದು. ಇಂಥ ಪ್ರಭೆ ತನ್ನ ಆಶ್ರಯವು ಹುಟ್ಟುವ ಕಾಲದಲ್ಲಿ ಹುಟ್ಟಿ, ಅದು ಲಯಿಸುವ ಕಾಲದಲ್ಲಿ ಲಯವನ್ನು ಹೊಂದುವುದು. ಮತ್ತು ತನ್ನ ಆಶ್ರಯದ ಸಮೀಪದಲ್ಲಿ ಬರಬರುತ್ತ ಚಿಕ್ಕದಾಗುತ್ತಲೂ ದೂರಕ್ಕೆ ಹೋದಹಾಗೆಲ್ಲಾ ವಿಶಾಲವಾಗಿ ಹೋಗುತ್ತಲೂ ಇರುವುದು. ಈ ಗುಣವನ್ನೇ ಶಾಸ್ತ್ರಕಾರರು ಸೂಕ್ಷ್ಮಮೂಲತ್ವವೆಂದೂ, ಪೃಥ್ವಗ್ರತ್ವವೆಂದೂ ವ್ಯವಹರಿಸುವರು

## ೧೮೪ ಪ್ರಭಾಯಾಃ ಶಿಥಿಲದೀಪಾವಯವತ್ವವಾದಖಂಡನಂ.

ದೀಪದ ಅವಯವಗಳೇ ಶಿಥಿಲವಾಗಿ ನಾಲ್ಕು ಕಡೆಗೂ ಹೊರಟು ಪ್ರಭೆಯೆನಿಸಿಕೊಳ್ಳುವುವು ಎಂದು ಭ್ರಾಂತಿಪಡಬಾರದು. ಏಕೆಂದರೆ ಊರ್ಧ್ವಮುಖವಾಗಿ ಪ್ರಸರಿಸುವಿಕೆಯೇ ಸ್ವಭಾವವಾಗಿ ಉಳ್ಳ ದೀಪದ ಅವಯವಗಳಿಗೆ ವಾಯು ಮೊದಲಾದ ಪದಾರ್ಥಗಳಿಂದ ಅಭಿಘಾತವಿಲ್ಲದಿದ್ದರೂ ಒಂದೇ ಸಮಯದಲ್ಲಿ ನಾಲ್ಕು ಕಡೆಯಲ್ಲಿಯೂ ಸರ್ವತೋಮುಖವಾಗಿ ಪ್ರಸರಣವುಂಟಾಗುತ್ತದೆ ಎಂದು ಕಲ್ಪನೆಮಾಡುವುದನ್ನು ಯುಕ್ತವೆಂದು ವಿವೇಚಕರು ಒಪ್ಪುವುದಿಲ್ಲ.

ಇಲ್ಲಿ ಹೀಗೆ ವಿಚಾರಮಾಡಬೇಕು ; ಬತ್ತಿಯ ಒಂದುಭಾಗದಲ್ಲಿ ಪಿಂಡಾಕಾರವಾಗಿಯೂ, ಒಂದೆರಡು ಅಂಗುಲದಷ್ಟು ಉದ್ದವಾಗಿ ಊರ್ಧ್ವಮುಖವಾಗಿಯೂ ಉರಿಯುತ್ತಿರುವ ದೀಪಕ್ಕೆ ಪಿಂಡಾಕಾರವಾಗಿರುವಿಕೆಯೇ ಸ್ವಭಾವವೋ ? ಅಥವಾ ಅವಯವಶೈಥಿಲ್ಯವನ್ನು ಹೊಂದಿ ಸರ್ವತೋಮುಖವಾಗಿ ಪ್ರಸರಿಸುವಿಕೆಯೇ ಸ್ವಭಾವವೋ ? ಪ್ರಥಮಪಕ್ಷವನ್ನು ಅಂಗೀಕರಿಸುವುದಾದರೆ ಶೈಥಿಲ್ಯವು ಸಂಭವಿಸುವುದಿಲ್ಲ.

ದ್ವಿತೀಯಪಕ್ಷವನ್ನು ಅವಲಂಬಿಸುವುದಾದರೆ ಪಿಂಡಾಕಾರವಾಗಿರುವಿಕೆ ಕೂಡುವುದಿಲ್ಲ. ಈ ಎರಡು ಸ್ವಭಾವಗಳೂ ಪರಸ್ಪರವಿರುದ್ಧವಾದುದರಿಂದ ಒಂದು ಪದಾರ್ಥದಲ್ಲಿ ಇರಲಾರವು. ಈ ಎರಡು ಗುಣಗಳಲ್ಲಿ ಒಂದನ್ನು ಸ್ವಾಭಾವಿಕವೆಂದೂ ಮತ್ತೊಂದನ್ನು ಕಾರಣಾಂತರದಿಂದ ಉಂಟಾಗುವುದೆಂದೂ ಕಲ್ಪಿಸುವುದಾದರೆ ಯಾರಿಗೂ ಗೋಚರವಾಗದಿರುವ ಅಂಥ ಕಾರಣಾಂತರವನ್ನು ಕಲ್ಪಿಸುವುದೇ ಗೌರವಗ್ರಸ್ತವಾಗಿರುವುದು.

ಪ್ರಭೆಯಲ್ಲಿ ಪಿಂಡೀಭಾವವೂ ದೀಪದಲ್ಲಿ ಸರ್ವತೋಮುಖವಾದ ಪ್ರಸರಣಸ್ವಭಾವವೂ ಪ್ರತ್ಯಕ್ಷಸಿದ್ಧವಾಗಿಲ್ಲ; ಮತ್ತೇನೆಂದರೆ ದೀಪದಲ್ಲಿ ಪಿಂಡೀಭಾವವೂ ಪ್ರಭೆಯಲ್ಲಿ ಸರ್ವತೋಮುಖವಾದ ಪ್ರಸರಣಸ್ವಭಾವವೂ ಪ್ರತ್ಯಕ್ಷಸಿದ್ಧವಾಗಿರುವುದರಿಂದ ಆ ಆ ಪದಾರ್ಥಗಳಿಗೆ ಆ ಆ ಸ್ವಭಾವಗಳನ್ನೇ ನೈಜವಾಗಿ ಒಪ್ಪಿಕೊಳ್ಳುವುದರಲ್ಲಿ ತೊಂದರೆಯೇನೂ ಇಲ್ಲವಾದುದರಿಂದ ಹೆಚ್ಚಾಗಿ ಯಾವುದನ್ನೂ ಕಲ್ಪನೆಮಾಡಬೇಕಾದುದಿಲ್ಲ.

ಪ್ರಭೆಗೆ ಆಶ್ರಯವಾಗಿರುವ ದೀಪವೆಂಬ ಪದಾರ್ಥಕ್ಕೇ ಅವಯವಶೈಥಿಲ್ಯವನ್ನು ಕಲ್ಪಿಸುವುದಾದರೆ ಘಟಾದಿಪದಾರ್ಥಗಳಿಗಿಂತಲೂ ಇನ್ನೂ ದೀರ್ಘಕಾಲದವರೆಗೂ ಸ್ಥಿರವಾಗಿರುವ ಮಣಿ, ದ್ಯುಮಣಿ (ಸೂರ್ಯ) ಮುಂತಾದ ಪ್ರಭಾಶ್ರಯಪದಾರ್ಥಗಳಿಗೂ ಅವಯವಶೈಥಿಲ್ಯವುಂಟಾಗಿ ಆಗಲೇ ನಶಿಸಿಹೋಗಬೇಕಾಗಿದ್ದಿತಲ್ಲವೆ? ಅವುಗಳಿಗೂ ಪ್ರತಿಕ್ಷಣದಲ್ಲಿಯೂ ಉತ್ಪತ್ತಿವಿನಾಶಗಳನ್ನು ಕಲ್ಪಿಸುವುದಾದರೆ ಉತ್ಪತ್ತಿವಿನಾಶಗಳ ಕಾರಣಗಳನ್ನೂ ಕಲ್ಪಿಸಬೇಕಾಗಿ ಬರುವುದರಿಂದ ಅತ್ಯಂತಗೌರವವುಂಟಾಗುವುದು. ಏತಕ್ಕೆಂದರೆ ದೀಪಕ್ಕೆ ಎಣ್ಣೆ, ಬತ್ತಿ ಮುಂತಾದ ಕಾರಣಸಾಮಗ್ರಿಗಳು ಕಾಣುವಂತೆ ಮಣಿದ್ಯುಮಣಿಗಳ ಉತ್ಪತ್ತಿಗೆ ಪ್ರತಿಕ್ಷಣದಲ್ಲಿಯೂ ಯಾವ ಕಾರಣಸಾಮಗ್ರಿಗಳೂ ಕಾಣುವುದಿಲ್ಲ.

ಮಣಿದ್ಯುಮಣಿಗಳಿಗೆ ಪ್ರತಿಕ್ಷಣದಲ್ಲಿಯೂ ಉತ್ಪತ್ತಿವಿನಾಶಗಳಿಲ್ಲವೆಂಬು ತೋರಿಸುವ "ಸ ಏವಾಯಂ ಮಣಿಃ-ಸ ಏವಾಯಂ ದ್ಯುಮಣಿಃ" ಎಂಬ ಪ್ರತ್ಯಭಿಜ್ಞೆ ಭ್ರಾಂತಿಯಾಗಿರಬಹುದೆಂದು ಹೇಳಲೂ ಅವಕಾಶವಿಲ್ಲ ; ಏತಕ್ಕೆಂದರೆ:—ಅವುಗಳಿಗೆ ಅವಯವಶೈಥಿಲ್ಯವು ಮೊದಲು ಸಿದ್ಧವಾದರೆ ಪ್ರತ್ಯಭಿಜ್ಞೆಯನ್ನು ಭ್ರಾಂತಿಯೆಂದು ಕಲ್ಪಿಸಬಹುದು; ಪ್ರತ್ಯಭಿಜ್ಞೆ ಭ್ರಾಂತಿಯೆಂಬುದು ಸಿದ್ಧವಾದರೆ ಅವುಗಳಿಗೆ ಅವಯವಶೈಥಿಲ್ಯವನ್ನು ಕಲ್ಪಿಸಬಹುದು. ಹೀಗೆ ಅನ್ಯೋನ್ಯಾಶ್ರಯದೋಷವುಂಟಾಗುವುದಲ್ಲವೆ ?

ಮತ್ತು ದೀಪಪ್ರಭೆಯನ್ನು ದೀಪಕ್ಕಿಂತಲೂ ಭಿನ್ನವಾದ ತೇಜೋವಸ್ತುವಾಗಿ ಒಪ್ಪದೆ ದೀಪದ ಅವಯವಗಳೇ ಶಿಥಿಲವಾಗಿ ನಾಲ್ಕು ಕಡೆಗೂ ಹೊರಟು ಪ್ರಭೆಯೆನಿಸಿಕೊಳ್ಳುವುವೆಂದು ಹೇಳುವುದಾದರೆ ಅನೇಕಯುಕ್ತಿವಿರೋಧವೂ ಉಂಟಾಗಿ ಯುಕ್ತಿವಿರೋಧವೆಂಬ ದೋಷಕ್ಕೂ ಗುರಿಯಾಗಬೇಕಾಗುತ್ತದೆ

ಹೇಗೆಂದರೆ—ಶಿಥಿಲವಾದ ದೀಪದ ಅವಯವಗಳು ಪ್ರಭೆಯೆನಿಸಿಕೊಳ್ಳುವುವಾದರೆ ಶಿಥಿಲವಾದ ಮಣ್ಣುಹಿಂಟಿಯು ಅವಯವಗಳು ಧೂಳಿಗಳೆನಿಸಿಕೊಂಡು ನಾಲ್ಕು ಕಡೆಗಳಲ್ಲಿಯೂ ವ್ಯಾಪಿಸುವ ಕಾಲದಲ್ಲಿ ಡೊಂಕುಡೊಂಕಾಗಿಯೂ ಸಂಚರಿಸುತ್ತ ಎಂದರೆ ಕುಟಿಲಗತಿಯಿಂದ ಸಂಚರಿಸುತ್ತ ಸರ್ವತೋಮುಖವಾಗಿ ಹರಡಿಕೊಳ್ಳುವುವಲ್ಲದೆ ಋಜುಗತಿಯಿಂದಲೇ ಹರಡಿಕೊಳ್ಳುವುವೆಂಬ ನಿಯಮವಿಲ್ಲ; ಪ್ರಭೆಯಾದರೆ ಯಾವಾಗಲೂ ಋಜುವಾಗಿಯೇ ಪ್ರಸರಿಸುತ್ತಿರುವುದಲ್ಲದೆ ಸರ್ಪಗತಿಯಂತೆ ಕುಟಿಲಗತಿಯನ್ನು ಯಾವಾಗಲೂ ಹೊಂದುವುದಿಲ್ಲ. ಶಿಥಿಲವಾದ ದೀಪದ ಅವಯವಗಳೇ ಪ್ರಭೆಯಾಗುವುವಾದರೆ ಈ ಋಜುಪ್ರಸರಣನಿಯಮಕ್ಕೆ ಕಾರಣವೇನೆಂದು ಕೇಳಿದಾಗ ಯಾವ ಪ್ರತ್ಯುತ್ತರವನ್ನು ಹೇಳಬಲ್ಲಿರಿ ?

ಸರಿಯೆ "ಪ್ರಭೆಗೆ ಋಜುಪ್ರಸರಣನಿಯಮವಿದ್ದರಲ್ಲವೆ ಈ ಆಕ್ಷೇಪಣೆಗೆ ಅವಕಾಶವುಂಟಾಗುವುದು; ಅದೇ ಇಲ್ಲ ; ಧೂಳಿಯಂತೆ ಪ್ರಭೆಗೂ ಕುಟಿಲಗತಿ ಏತಕ್ಕೆ ಇರಬಾರದು" ಎಂದು ಹೇಳುವಿರೋ ? ಹಾಗಾದರೆ-ಪ್ರಭೆಗೆ ಅಡ್ಡಿಯಾಗಿ ಒಂದು ಪದಾರ್ಥವನ್ನು ಮಡಗಿದರೆ ಆ ಪದಾರ್ಥದ ಛಾಯೆ ಅದರ ಹಿಂಭಾಗದ ಋಜುಪ್ರದೇಶದಲ್ಲಿಯೇ ಏತಕ್ಕೆ ಬೀಳಬೇಕು ? ಪ್ರಭೆ ಕುಟಿಲವಾಗಿದ್ದರೆ ಅದನ್ನು ಅಡ್ಡಿಮಾಡುವ ಪದಾರ್ಥದ ಛಾಯೆಯೂ ಋಜುಪ್ರದೇಶದಲ್ಲಿ ಬೀಳದೆ ಮತ್ತೊಂದು ಪ್ರದೇಶದಲ್ಲಿ ಬೀಳಬಹುದಲ್ಲವೆ ? ಆದಕಾರಣ ತಿರೋಧಾಯಕವಾದ ಪದಾರ್ಥದ ಛಾಯೆ ಋಜುಪ್ರದೇಶದಲ್ಲಿಯೇ ಬೀಳುವುದೆಂಬ ನಿಯಮವು ಪ್ರತ್ಯಕ್ಷಸಿದ್ಧವಾಗಿರುವುದರಿಂದ ಪ್ರಭೆಯೂ ಋಜುವಾಗಿಯೇ ಪ್ರಸರಿಸುವುದೆಂಬ ನಿಯಮವನ್ನು ಅಂಗೀಕರಿಸಿದ ಹೊರತು ಬೇರೆ ಗತಿಯಿಲ್ಲ.

ಬೇರೆ ಗತಿಯಿಲ್ಲವೆಂದು ನಿರ್ಧರಿಪಡಿಸುವುದು ಹೇಗೆ ? ನಾವು ಬೇರೆ ಗತಿಯನ್ನು ತೋರಿಸುವೆವು. ಹೇಗೆಂದರೆ—ಪ್ರಭೆಯನ್ನು ಅಡ್ಡಿಮಾಡುವ ಪದಾರ್ಥದ ಛಾಯೆ-ಅಡ್ಡಿಮಾಡುವ ಪದಾರ್ಥಕ್ಕಿಂತಲೂ ಬಲುದೊಡ್ಡದಾಗಿ ಪ್ರತ್ಯಕ್ಷದಲ್ಲಿ ಕಾಣುವುದು. ಪ್ರಭೆ ಋಜುವಾಗಿಯೇ ಪ್ರಸರಿಸಿದ್ದಪಕ್ಷದಲ್ಲಿ ಋಜುಪ್ರಸರಣವುಳ್ಳ ಪ್ರಭೆಯನ್ನು

ಅಡ್ಡಿಮಾಡುವ ಪದಾರ್ಥದ ಛಾಯೆಯೂ ಋಜುಪ್ರದೇಶದಲ್ಲಿಯೇ ಬಿದ್ದು ತಿರೋಧಾಯಕವಾದ ಪದಾರ್ಥಕ್ಕಿಂತಲೂ ಅನ್ಯೂನಾನತಿರಿಕ್ತವಾಗಿ ಕಾಣಬೇಕಲ್ಲದೆ ವಿಪುಲವಾಗಿ ಕಾಣಕೂಡದು. ಮತ್ತು ಛಾಯೆಯನ್ನು ಉಂಟುಮಾಡುವ ಪದಾರ್ಥದ ಸಮೀಪದಲ್ಲಿ ಛಾಯೆ ಚಿಕ್ಕದಾಗಿಯೂ ದೂರದೂರಕ್ಕೆ ಹೋದಹಾಗೆಲ್ಲಾ ಅತಿ ವಿಪುಲವಾಗಿಯೂ ಕಾಣುವುದು. ಇದರಿಂದ ಪ್ರಭೆಗೆ ವಕ್ರಗತಿಯಲ್ಲದೆ ಋಜುಗತಿಯಿಲ್ಲವೆಂದು ಸಿದ್ಧವಾಗುವುದಲ್ಲವೆ ?

ಇಲ್ಲ ; ಸಿದ್ಧವಾಗುವುದಿಲ್ಲ. ಪ್ರಭೆ ಬುಡದಲ್ಲಿ ದಟ್ಟವಾಗಿಯೂ ತುದಿಯಲ್ಲಿ ವಿರಳವಾಗಿಯೂ ಇರುವುದೆಂದೂ, ಈ ಸ್ವಭಾವವನ್ನೇ ಶಾಸ್ತ್ರಕಾರರು ಸೂಕ್ಷ್ಮಮೂಲತ್ವವೆಂಬುದಾಗಿಯೂ, ಪೃಥ್ವಗ್ರತ್ವವೆಂಬುದಾಗಿಯೂ ವ್ಯವಹರಿಸುವರೆಂದೂ ಹಿಂದೆ ಹೇಳಿರುವೆವಷ್ಟೆ. ಆದಕಾರಣ ಪ್ರಭೆಯನ್ನು ತಡೆವ ಪದಾರ್ಥವು ಬುಡದಲ್ಲಿ ಎಷ್ಟು ಪ್ರಭೆಯನ್ನು ತಡೆವುದೋ ತುದಿಯಲ್ಲಿಯೂ ಅಷ್ಟು ಪ್ರಭೆಯನ್ನು ತಡೆಯಬೇಕಲ್ಲವೆ ? ಆದುದರಿಂದ ತಡೆಯಲ್ಪಡುವ ಪ್ರಭೆ ಬುಡದಲ್ಲಿ ಸೂಕ್ಷ್ಮವಾಗಿಯೂ ತುದಿಯಲ್ಲಿ ವಿರಳವಾಗಿಯೂ ಇರುವುದರಿಂದಲೇ ಪ್ರಭೆಯನ್ನು ತಡೆವ ವಸ್ತುವಿನ ಛಾಯೆಯೂ ಸಹ ಬುಡದಲ್ಲಿ ಸೂಕ್ಷ್ಮವಾಗಿಯೂ ತುದಿಯಲ್ಲಿ ವಿಪುಲವಾಗಿಯೂ ಕಾಣುವುದಲ್ಲದೆ ಪ್ರಭೆ ಕುಟಿಲಗತಿಯಾದುದರಿಂದಲ್ಲ.

ಇದರಂತೆ ಕೆಲವು ಛಾಯೆಗಳು ಡೊಂಕಾಗಿ ಕಾಣುವುದೂ ಕೂಡ ಆ ಛಾಯೆಯನ್ನು ಉಂಟುಮಾಡುವ ಪದಾರ್ಥವು ಡೊಂಕಾದುದರಿಂದಲೇ ಅಲ್ಲದೆ ಪ್ರಭೆಯ ಪ್ರಸರಣವು ಡೊಂಕಾದುದರಿಂದಲ್ಲ. ಪ್ರಭೆಗೆ ಋಜುಪ್ರಸರಣವಲ್ಲದೆ ವಕ್ರಪ್ರಸರಣವೇ ಇರುವುದಾದರೆ ಪ್ರಭೆಯನ್ನು ಅಡ್ಡಿಮಾಡುವ ಪದಾರ್ಥವು ಡೊಂಕಾಗಿಲ್ಲದಿರುವಾಗಲೂ ಛಾಯೆ ಮಾತ್ರ ಡೊಂಕಾಗಿಯೇ ಕಾಣಬೇಕು. ಲೋಕದಲ್ಲಿ ಹಾಗೆ ಕಾಣುವುದಿಲ್ಲವಾದುದರಿಂದ ತಿರೋಧಾಯಕಪದಾರ್ಥದ ಡೊಂಕುತನದಿಂದ ಬಂದಿರುವ ಛಾಯಾಕೌಟಿಲ್ಯವೂ ಸಹ ಪ್ರಭೆಗೆ ಋಜುಪ್ರಸರಣವನ್ನೇ ಸ್ಥಾಪಿಸಿಕೊಡುವುದಾಗಿರುವುದು.

ಮತ್ತು—ವಿಶೀರ್ಣವಾದ ದೀಪದ ಅವಯವಗಳೇ ಪ್ರಭೆಯೆನಿಸಿಕೊಳ್ಳುವುವಾದರೆ—ವಿಶೀರ್ಣವಾದ ಮಣ್ಣುಹೆಂಟೆಯ ಅವಯವಗಳೆನಿಸಿಕೊಂಡಿರುವ ಧೂಳಿ ಗಾಳಿಯಿಂದ ನಾಲ್ಕುಕಡೆಗೂ ಚದರಿಸಲ್ಪಡುವಂತೆ ಈ ಪ್ರಭೆಯೂ ಗಾಳಿಯಿಂದ ಏತಕ್ಕೆ ಚದರಿಸಲ್ಪಡುವುದಿಲ್ಲ ? ವಿಶಕಲಿತವಾದ ದೀಪಾವಯವವೇ ಪ್ರಭೆಯಾಗಿದ್ದರೆ ಹೀಗೆ ಚದರಿಸಲ್ಪಡದೆ ಇರುವಿಕೆ ಸಂಗತವಾಗುವುದಿಲ್ಲವಷ್ಟೆ ?

ಪ್ರಭೆ ಗಾಳಿಯಿಂದ ಚದರಿಸಲ್ಪಟ್ಟಿಲ್ಲವೆಂಬುದನ್ನು ಹೇಗೆ ಕಂಡುಹಿಡಿವುದೆನ್ನು ವಿರೋ? ಹೀಗೆ ಕಂಡುಹಿಡಿಯಬಹುದು:—ಮನೆಯ ಒಳಭಾಗದಲ್ಲಿರುವ ದೀಪದ ಪ್ರಭೆ ಮನೆಯ ಪೂರ್ವಭಾಗದ ಭಿತ್ತಿಯಲ್ಲಿರುವ ಕಿಟಕಿಯಿಂದ ಹೊರಟು ಅಲ್ಲಿರುವ ಮೈದಾನವಾದ ಪ್ರದೇಶವನ್ನೂ ಉಲ್ಲಂಘಿಸಿ ಅದರ ಪೂರ್ವಭಾಗದಲ್ಲಿರುವ ಮತ್ತೊಂದು ಮನೆಯ ಪಶ್ಚಿಮಭಾಗದ ಗೋಡೆಯಮೇಲೆ ಬಿದ್ದಿರುವುದು; ಈ ಸಂದರ್ಭದಲ್ಲಿ ಆ ಮೈದಾನಪ್ರದೇಶದಲ್ಲಿ ದಕ್ಷಿಣದಿಕ್ಕಿನ ಬಿರುಗಾಳಿ ಉತ್ತರದಿಕ್ಕಿಗೆ ಬೀಸುವುದಾಗಿದ್ದರೆ ಮಧ್ಯದಲ್ಲಿ ಸಿಕ್ಕಿ ಬಿದ್ದಿರುವ ಪ್ರಭೆಯೂ ಆ ಬಿರುಗಾಳಿಯಿಂದ ಚದರಿಸಲ್ಪಟ್ಟು ಉತ್ತರ ದಿಕ್ಕಿಗೆ ಒಯ್ಯಲ್ಪಡಬೇಕಾದುದರಿಂದ ಮೈದಾನದ ಪೂರ್ವಭಾಗದಲ್ಲಿರುವ ಗೋಡೆಯ ಮೇಲೆ ಈ ಪ್ರಭೆ ಬೀಳುವುದಕ್ಕೆ ಅವಕಾಶವಿರುತ್ತಿರಲಿಲ್ಲ. ದೀಪವು ಸ್ಥಿರವಾಗಿರುವ ವರೆಗೂ ಆ ಗೋಡೆಯಮೇಲೆ ಪ್ರಭೆಯೂ ಸ್ಥಿರವಾಗಿಯೇ ಇರುತ್ತದೆಯೆಂಬುದು ಪ್ರತ್ಯಕ್ಷವಷ್ಟೆ.

ಧೂಳಿ ಗಾಳಿಯಿಂದ ಚದರಿಸಲ್ಪಟ್ಟರೂ ಪ್ರಭೆಯೆಂಬ ಪದಾರ್ಥವು ಗಾಳಿ ಯಿಂದ ಚದರಿಸಲ್ಪಡುವುದಿಲ್ಲವೆನ್ನುವುದಾದರೆ— ಧೂಳಿಯೆಂಬ ಪದಾರ್ಥಮಾತ್ರ ಏತಕ್ಕೆ ಚದರಿಸಲ್ಪಡಬೇಕು? ಧೂಳಿ ಮಣ್ಣಿಹಿಂಟೆಯ ಶಿಥಿಲವಾದ ಅವಯವವಾ ದುದರಿಂದ ಚದರಿಸಲ್ಪಡುವುದೆನ್ನುವುದಾದರೆ ಪ್ರಭೆಯೂ ಸಹ ದೀಪದ ಶಿಥಿಲವಾದ ಅವಯುವವೆಂದು ನೀವೇ ಹೇಳುತ್ತೀರಾದುದರಿಂದ ಇದೂ ಸಹ ಚದರಿಸಲ್ಪಡಬೇಕು. ಅದರಂತೆ ಇದು ಚದರಿಸಲ್ಪಡುವುದಿಲ್ಲವೆಂಬುದನ್ನು ಹಿಂದೆ ಹೇಳಿದ ಯುಕ್ತಿಯಿಂದ ಪ್ರತ್ಯಕ್ಷವಾಗಿ ನಾವು ತೋರಿಸಿರುವೆವಾದಕಾರಣ ಧೂಳಿಗೂ ಪ್ರಭೆಗೂ ವ್ಯತ್ಯಾಸವನ್ನು ಒಪ್ಪಿಕೊಳ್ಳುವುದಕ್ಕಾಗಿ ಧೂಳಿಯೆಂಬುದು ಮಣ್ಣಿಹಿಂಟೆಯ ಶಿಥಿಲವಾದ ಅವಯವ ವಾಗಿದ್ದರೂ, ಪ್ರಭೆಯೆಂಬುದು ದೀಪದ ಶಿಥಿಲವಾದ ಅವಯುವವಲ್ಲವೆಂದೂ, ದೀಪ ಕ್ಕಿಂತಲೂ ವಿಲಕ್ಷಣವಾದ ಇನ್ನೊಂದು ತೇಜಃಪದಾರ್ಥವೆಂದೂ ಸ್ವೀಕರಿಸಿಯೇ ತೀರಬೇಕು.

ಅದಕಾರಣ—ಧನುಸ್ಸಿನಲ್ಲಿ ಏರಿಸಲ್ಪಟ್ಟ ಹೆದೆ ಹೇಗಾದರೆ ಧನುಸ್ಸಿನ ಶಿಥಿಲ ವಾದ ಅವಯುವವೆನಿಸಿಕೊಳ್ಳುವುದಿಲ್ಲವೋ, ಮತ್ತು ಧನುಸ್ಸಿನ ಬುಡದಿಂದ ತುದಿಯ ವರೆಗೂ ಹೇಗಾದರೆ ಎಡೆಬಿಡದೆ ಋಜುವಾಗಿ ವ್ಯಾಪಿಸಿರುವುದೋ ಅದರಂತೆ ಪ್ರಭೆ ಯೆಂಬುದೂ ಸಹ ತನಗೆ ಆಶ್ರಯವಾದ ದೀಪ, ಮಣಿ, ದ್ಯುಮಣಿ ಮೊದಲಾದುವು ಗಳನ್ನು ಬುಡವಾಗಿ ಮಾಡಿಕೊಂಡು ತನ್ನ ವೇಗದ ಶಕ್ತಿಯಿರುವವರೆಗೂ ಋಜು ವಾಗಿಯೇ ವ್ಯಾಪಿಸುವ ವಸ್ತ್ವಂತರವಾಗಿರುವುದಲ್ಲದೆ ಶಿಥಿಲವಾದ ದೀಪದ ಅವಯುವ ವೆಂದಿಗೂ ಆಗಲಾರದು.

## ೧೮೫ ಗಂಧಾದಿಭ್ಯಃ ಪ್ರಭಾಯಾಃ ವೈಲಕ್ಷಣ್ಯಂ.

ಸರ್ವತೋಮುಖವಾಗಿ ಹರಡಿಕೊಳ್ಳುವಿಕೆಯೇ ಸ್ವಭಾವವಾಗಿ ಉಳ್ಳ ಗಂಧಕ್ಕೆ ಆಶ್ರಯವಾಗಿರುವ ಚಂಪಕವೊದಲಾದ ಪುಷ್ಪಗಳ ಅವಯವಗಳಿಗೆ ಸ್ವಲ್ಪಮಟ್ಟಿಗೆ ಶೈಥಿಲ್ಯವಿದ್ದರೂ ಆ ಶೈಥಿಲ್ಯವು ತೋರದೆ "ಇದು ಅದೇ ಪುಷ್ಪವು" ಎಂಬ ಭ್ರಾಂತಿರೂಪವಾದ ಪ್ರತ್ಯಭಿಜ್ಞೆಯುಂಟಾಗುವಂತೆ, ಮಣಿದ್ಯುಮಣಿಗಳಲ್ಲಿ ಉಂಟಾಗುವ ಪ್ರತ್ಯಭಿಜ್ಞೆಯೂ ಭ್ರಾಂತಿರೂಪವಾಗಿರಬಹುದೆಂದು ಹೇಳಲೂ ಅವಕಾಶವಿಲ್ಲ. ಆಗಲೂ ಹಿಂದೆ ಹೇಳಿದ ಅನ್ಯೋನ್ಯಾಶ್ರಯವೇ ತಲೆಯೆತ್ತುವುದು.

ಚಂಪಕವೊದಲಾದ ಪುಷ್ಪಗಳಲ್ಲಿ ಅದ್ರವ್ಯವಾದ ಗಂಧವು ಸ್ವತಂತ್ರವಾದ ದ್ರವ್ಯವಲ್ಲವಾದುದರಿಂದ ತನಗೆ ಆಶ್ರಯವಾದ ದ್ರವ್ಯವನ್ನು ಬಿಟ್ಟಿರಲಾರದಾದಕಾರಣ ಗಾಳಿಯಿಂದ ಮತ್ತೊಂದು ಕಡೆಗೆ ಸೆಳೆಯಲ್ಪಡುವ ಕಾಲದಲ್ಲಿ ತನಗೆ ಆಶ್ರಯವಾದ ಪುಷ್ಪಗಳ ಕೆಲವು ಪರಮಾಣುಗಳ ಜತೆಯಲ್ಲಿಯೇ ಒಯ್ಯಲ್ಪಡುತ್ತದೆ ಎಂದು ಒಪ್ಪಿಕೊಂಡರೂ, ಪ್ರಭೆಯ ವಿಷಯದಲ್ಲಿ ಆ ನ್ಯಾಯವು ಸಂಭವಿಸುವುದಿಲ್ಲ. ಪ್ರಭೆ ಪ್ರಭಾಶ್ರಯಕ್ಕೆ ಪರತಂತ್ರವಾಗಿದ್ದರೂ ಗಂಧದಂತೆ ಅದ್ರವ್ಯವಲ್ಲ ; ದ್ರವ್ಯವಾಗಿರುವುದು. ಅದರಂತೆ ಸ್ವತಃಪ್ರಸರಣಶಕ್ತಿಯಿಲ್ಲದುದಲ್ಲ ; ತಾನಾಗಿಯೇ ತನ್ನ ಆಶ್ರಯವಿರುವ ಪ್ರದೇಶಕ್ಕಿಂತಲೂ ಅಧಿಕಪ್ರದೇಶದಲ್ಲಿಯೂ ಪ್ರಸರಿಸುವುದು. ಅದರಂತೆ ರೂಪಶೂನ್ಯವಾದುದಲ್ಲ ; ರೂಪವತ್ತಾಗಿರುವುದು. ಆಶ್ರಯನಾಶವಾದರೂ ಗಂಧವು ಸ್ವಲ್ಪಕಾಲವಿರುವಂತೆ ಪ್ರಭೆ ಆಶ್ರಯನಾಶಾನಂತರದಲ್ಲಿ ಒಂದು ಕ್ಷಣಕಾಲವೂ ಇರುವುದಲ್ಲ ; ಆ ಕ್ಷಣದಲ್ಲಿಯೇ ನಾಶಹೊಂದುವುದು. ಗಂಧಕ್ಕೆ ಆಶ್ರಯವಾದ ಪುಷ್ಪವು ಶೀಘ್ರದಲ್ಲಿಯೇ ನಾಶಹೊಂದುವಂತೆ ಪ್ರಭೆಗೆ ಆಶ್ರಯವಾದ ಮಣಿ, ದ್ಯುಮಣಿ ಮೊದಲಾದುವು ಶೀಘ್ರದಲ್ಲಿ ನಾಶಹೊಂದುವುವಲ್ಲ. ಹೀಗೆ ಗಂಧಕ್ಕೂ ಪ್ರಭೆಗೂ ಬಹಳ ತಾರತಮ್ಯವಿರುವಕಾರಣ ಪ್ರಭೆಯೆಂಬುದನ್ನು ಪ್ರಭಾಶ್ರಯಕ್ಕಿಂತಲೂ ಭಿನ್ನವಾದ ತೇಜೋದ್ರವ್ಯವೆಂದೂ, ಪ್ರಭಾಶ್ರಯಕ್ಕೆ ಅಪೃಥಕ್ಸಿದ್ಧವಾದ ವಿಶೇಷಣವೆಂದೂ ಪ್ರತ್ಯಕ್ಷಬಲದಿಂದ ಒಪ್ಪಿಕೊಳ್ಳಬೇಕು.

## ೧೮೬ ಪ್ರಭಾಯಾಃ ಸ್ವಾಶ್ರಯಂ ಪ್ರತಿ ಅಪೃಥಕ್ಸಿದ್ಧತ್ವೋಪಪಾದನಂ.

ಆಗಲಿ—ಆದರೂ ಪ್ರಭೆಯನ್ನು ಪ್ರಭಾಶ್ರಯಕ್ಕೆ ಅಪೃಥಕ್ಸಿದ್ಧವಾಗಿ ಎಂದರೆ ಅವಿನಾಭೂತವಾಗಿ ಹೇಳಲಾಗುವುದಿಲ್ಲ ಏತಕ್ಕೆಂದರೆ--ಪ್ರಭಾಶ್ರಯನಾದ ಸೂರ್ಯನು ಅಸ್ತಂಗತನಾದಮೇಲೆಯೂ ಗ್ರೀಷ್ಮರ್ತುವಿನ ರಾತ್ರಿಕಾಲದಲ್ಲಿ ಉಷ್ಣಸ್ಪರ್ಶವನ್ನು ನಾವು ಅನುಭವಿಸುತ್ತಿರುವೆವು. ಆಗ ಉಷ್ಣಸ್ಪರ್ಶಕ್ಕೆ ಆಶ್ರಯವಾದ ಪ್ರಭೆ ತನಗೆ

ಆಶ್ರಯನಾದ ಸೂರ್ಯನನ್ನು ಬಿಟ್ಟಿರುವುದೆಂದು ಹೇಳಬೇಕಲ್ಲವೆ ? ಇಲ್ಲ ; ಪ್ರಭೆಯೂ ಸೂರ್ಯನೊಡನೆಯೇ ಹೊರಟುಹೋಗಿರುವುದು.

ಈ ವಿಷಯವನ್ನು ಆದಿಕವಿಯಾದ ಶ್ರೀ ವಾಲ್ಮೀಕಿಮಹರ್ಷಿಯಿಂದ ಅನುಗೃಹೀತವಾದ ಶ್ರೀ ರಾಮಾಯಣದಲ್ಲಿ ಆಂಜನೇಯನನ್ನು ಕುರಿತು ಲಕ್ಷ್ಮಣನು ಹೇಳಿದ

ರಾಜ್ಯಾದ್ಭ್ರಷ್ಟೋ ವನೇ ವಸ್ತುಂ ಮಯಾ ಸಾರ್ಧಮಿಹಾಗತಃ ।
ಭಾರ್ಯಯಾ ಚ ಮಹಾತೇಜಾಃ ಸೀತಯಾಽನುಗತೋ ವಶೀ ॥
ದಿನಕ್ಷಯೇ ಮಹಾತೇಜಾಃ ಪ್ರಭಯೇವ ದಿವಾಕರಃ ।
ಅಹಮಸ್ಯಾವರೋ ಭ್ರಾತಾ ಗುಣೈರ್ದಾಸ್ಯಮುಪಾಗತಃ ॥

ಎಂಬ ಈ ವಚನದಿಂದ ಸ್ಪಷ್ಟವಾಗಿ ತಿಳಿಯಬಹುದು.

ನಾರೀಮಣಿಯೆಂದು ಪ್ರಸಿದ್ಧಳಾಗಿರುವ ಜಗನ್ಮಾತೆಯಾದ ಸೀತಾದೇವಿಯು-ತನಗೆ ಆಶ್ರಯಭೂತನಾದ ಪ್ರಾಣಕಾಂತನಿಗೆ ವನವಾಸವು ಬಂದೊದಗಿದ ಕಾಲದಲ್ಲಿ ತನ್ನ ಆಶ್ರಯವನ್ನು ಬಿಟ್ಟಿರಲಾರದೆ ಅವನನ್ನು ಅನುಸರಿಸಿ ತಾನೂ ವನಕ್ಕೇ ಹೋದಳಲ್ಲದೆ ಅಯೋಧ್ಯಾನಗರಿಯಲ್ಲಿ ಕ್ಷಣಮಾತ್ರವೂ ನಿಲ್ಲಲಿಲ್ಲವೆಂಬ ಈ ಪ್ರಕೃತಾರ್ಥವನ್ನು ವಿಶದಪಡಿಸುವುದಕ್ಕಾಗಿಯೇ ಅಲ್ಲವೆ ಸೂರ್ಯಾಸ್ತಮಯಕಾಲದ ಪ್ರಭೆಯನ್ನು ಇಲ್ಲಿ ದೃಷ್ಟಾಂತವಾಗಿ ತೋರಿಸಿರುವುದು. ಪ್ರಮಾಣಾಂತರದಿಂದ ಪ್ರಸಿದ್ಧವಾಗಿಯೂ, ಸರ್ವಸಮ್ಮತವಾಗಿಯೂ ಇರುವ ಅರ್ಥವಲ್ಲವೆ ದೃಷ್ಟಾಂತವಾಗಬೇಕು.

ಹಾಗಾದರೆ ಗ್ರೀಷ್ಮಕಾಲದ ರಾತ್ರಿಯಲ್ಲಿ ಅನುಭವಿಸಲ್ಪಡುತ್ತಿರುವ ಉಷ್ಣಸ್ಪರ್ಶಕ್ಕೆ ಆಶ್ರಯವಾದ ದ್ರವ್ಯವು ಯಾವುದು? ಹೇಳುವೆವು--ಸಹಸ್ರಕಿರಣನಾದ ಸೂರ್ಯನು ವಸಂತಗ್ರೀಷ್ಮಗಳೆಂಬ ಮೊದಲನೆಯ ಎರಡು ಋತುಗಳಲ್ಲಿ ಮುನ್ನೂರು ಕಿರಣಗಳಿಂದ ಬೆಂಕಿಯನ್ನು ಸುರಿಯುತ್ತಾನೆಂದೂ, ವರ್ಷರ್ತುಶರದೃತುಗಳೆಂಬ ಮಧ್ಯದ ಎರಡು ಋತುಗಳಲ್ಲಿ ನಾನೂರು ಕಿರಣಗಳಿಂದ ಜಲವನ್ನು ಸುರಿಯುತ್ತಾನೆಂದೂ, ಹೇಮಂತಶಿಶಿರಗಳೆಂಬ ಚರಮವಾದ ಎರಡು ಋತುಗಳಲ್ಲಿ ಉಳಿದ ಮುನ್ನೂರು ಕಿರಣಗಳಿಂದ ಹಿಮವನ್ನು ಸುರಿಯುತ್ತಾನೆಂದೂ, ಮತ್ಸ್ಯಪುರಾಣದಲ್ಲಿ ಹೇಳಿರುವಂತೆ ಗ್ರೀಷ್ಮಕಾಲದಲ್ಲಿ ಸೂರ್ಯನಿಂದ ಸುರಿಯಲ್ಪಟ್ಟ ಅಗ್ನಿಯ ಅವಯವಗಳು ರಾತ್ರಿಕಾಲದಲ್ಲಿಯೂ ಇರುವುವಾದುದರಿಂದ ಅವುಗಳಲ್ಲಿರುವ ಉಷ್ಣಸ್ಪರ್ಶವನ್ನೇ ನಾವು ಅನುಭವಿಸುತ್ತಿರುವೆವಾದಕಾರಣ, ಪ್ರಭೆಯೆಂಬುದು ಗ್ರೀಷ್ಮಕಾಲದ ರಾತ್ರಿಯಲ್ಲಿ ತನ್ನ ಆಶ್ರಯವನ್ನು ಬಿಟ್ಟಿರುವುದೆಂದು ಹೇಳಬೇಕಾದುದಿಲ್ಲ. ಆದುದರಿಂದ

ಈ ಪ್ರಭೆ ತನ್ನ ಆಶ್ರಯಕ್ಕಿಂತಲೂ ಭಿನ್ನವಾದ ತೇಜೋದ್ರವ್ಯವಾಗಿದ್ದರೂ ಅಪೃಥಕ್ಸಿದ್ಧವಾಗಿಯೇ ಇರುವುದೆಂಬುದಕ್ಕೆ ಚ್ಯುತಿಯಿಲ್ಲ.

### ೧೮೭ ಕ್ವಚಿತ್ಪ್ರಭಾವಿಶೇಷೇ ಮೂಲಾಗ್ರಯೋಃ ಔಷ್ಣ್ಯೋಪಲಂಭಾನುಪಲಂಭಯೋಃ ಕಾರಣನಿರೂಪಣಂ.

ಇಂಥ ಪ್ರಭೆ ಬುಡದಲ್ಲಿ ದಟ್ಟವಾಗಿಯೂ ತುದಿಯಲ್ಲಿ ವಿರಳವಾಗಿಯೂ ಇರುವುದನ್ನು ನಾವು ಪ್ರತ್ಯಕ್ಷವಾಗಿ ನೋಡುತ್ತಿರುವೆವು. ಆದುದರಿಂದಲೇ ಇದರ ಔಷ್ಣ್ಯವು ಮೂಲಭಾಗದಲ್ಲಿ ಒಂದೇಕಡೆಯಲ್ಲಿ ಕೂಡಹಾಕಲ್ಪಟ್ಟಿರುವುದರಿಂದ ನಮ್ಮ ತ್ವಗಿಂದ್ರಿಯದ ಮೂಲಕ ಅದು ನಮಗೆ ಗೋಚರವಾಗುತ್ತಿರುವುದು. ತುದಿಯಲ್ಲಿಯಾದರೋ ಪ್ರಭೆ ವಿರಳವಾಗಿ ಹರಡಿಕೊಂಡಿರುವುದರಿಂದ ಅದರ ಔಷ್ಣ್ಯವೂ ಹರಡಲ್ಪಟ್ಟು ನಮ್ಮ ತ್ವಗಿಂದ್ರಿಯಕ್ಕೆ ಗೋಚರವಾಗಲು ಯೋಗ್ಯವಾಗಿಲ್ಲ ಸೂರ್ಯಪ್ರಭೆಯಲ್ಲಿಯಾದರೆ ಉಷ್ಣಸ್ಪರ್ಶವು ಪ್ರಬಲತರವಾಗಿರುವುದರಿಂದ ತುದಿಯಲ್ಲಿಯೂ ಅದನ್ನು ಗ್ರಹಿಸುತ್ತಿರುವೆವು. ಇದೆಲ್ಲವನ್ನೂ ನಾವು ಪ್ರತ್ಯಕ್ಷಪ್ರಮಾಣದಿಂದಲೇ ಒಪ್ಪಿಕೊಳ್ಳುವೆವಾದುದರಿಂದ ಇದರಲ್ಲಿ ಯಾರೂ ಯಾವ ವಿರೋಧವನ್ನೂ ಹೇಳಲು ಅವಕಾಶವಿಲ್ಲ.

### ೧೮೮ ಪ್ರಭಾಶ್ರಯನಿರೂಪಣಂ.

ಅವಿನಾಭಾವಸಂಬಂಧದಿಂದ ಪ್ರಭೆಯೊಡನೆ ಕೂಡಿದ ತೇಜಸ್ಸು ಪ್ರಭಾಶ್ರಯವೆನಿಸಿಕೊಳ್ಳುವುದು. ಒಂದು ದೀಪಪ್ರಭೆಯೊಡನೆ ಸಂಯೋಗಸಂಬಂಧವನ್ನು ಪಡೆದಿರುವ ಮತ್ತೊಂದು ದೀಪಪ್ರಭೆಯನ್ನು ವ್ಯಾವರ್ತಿಸುವುದಕ್ಕಾಗಿ ಅವಿನಾಭಾವಸಂಬಂಧದಿಂದ ಎಂಬ ಪದವೂ, ಈಶ್ವರನನ್ನು ವ್ಯಾವರ್ತಿಸುವುದಕ್ಕಾಗಿ ತೇಜಸ್ಸು ಎಂಬ ಪದವೂ ಉಕ್ತವಾಗಿರುವುವು. ಇಂಥ ಪ್ರಭಾಶ್ರಯವು ಮಣಿ, ದ್ಯುಮಣಿ, ದೀಪ, ಅಗ್ನಿ, ವಿದ್ಯುತ್ ಮೊದಲಾಗಿ ಅನೇಕವಿಧವಾಗಿರುವುದು.

### ೧೮೯ ತತ್ರ ಮಣ್ಯಾದೀನಾಂ ಕಾರ್ಯತಾರತಮ್ಯೇ ತತ್ತತ್-ಸ್ವಭಾವತಾರತಮ್ಯಸ್ಯೈವ ಕಾರಣತ್ವಂ.

ಇವುಗಳಲ್ಲಿ ದ್ಯುಮಣಿಯೆಂಬ ತೇಜಸ್ಸು ಶೋಕವನ್ನೂ ಶೋಷಣವನ್ನೂ, ಚಂದ್ರನೆಂಬ ತೇಜಸ್ಸು ಹರ್ಷವನ್ನೂ ಜಲವೃದ್ಧಿಯನ್ನೂ, ಅಗ್ನಿಯೆಂಬ ತೇಜಸ್ಸು ಪಾಕವನ್ನೂ, ಮಣಿಯೆಂಬ ತೇಜಸ್ಸು ಮನಸ್ಸಿಗೆ ಉಲ್ಲಾಸವನ್ನೂ ಉಂಟುಮಾಡುವುದಕ್ಕೆ ಅವುಗಳ ಸ್ವಭಾವತಾರತಮ್ಯವೇ ಕಾರಣವಾಗಿರುವುದು. ಅದಕ್ಕೂ ಕಾರಣವು ಅವುಗಳ ಉತ್ಪತ್ತಿಗೆ ಕಾರಣವಾಗಿರುವ ಆ ಆ ಸಾಮಗ್ರಿಗಳ ವ್ಯತ್ಯಾಸವೇ. ಆ ಅಗ್ನಿಯ ಊರ್ಧ್ವಮುಖವಾದ ಜ್ವಲನಸ್ವಭಾವಕ್ಕೂ ಇದೇ ಕಾರಣವಾಗಿರುವುದು. ಅಥವಾ

ಈ ಎಲ್ಲಾ ಸ್ವಭಾವಗಳಿಗೂ ಈಶ್ವರನ ಸಂಕಲ್ಪವೆಂಬ ಅದೃಷ್ಟವೇ ಕಾರಣವೆಂದೂ ಹೇಳಬಹುದು.

೧೯೦ ಅಗ್ನ್ಯಾದಿತೇಜಸಾಂ ಸ್ವಾಭಾವಿಕಸಾಂಸರ್ಗಿಕರೂಪವಿವೇಕಃ.

ಅಗ್ನಿ ಮೊದಲಾದ ತೇಜಸ್ಸಿಗೆ ಕೆಂಪಾಗಿರುವಿಕೆಯೂ ಭಾಸ್ವರವಾಗಿರುವಿಕೆಯೂ ಎಂದರೆ ಪ್ರಜ್ವಲಿಸುತ್ತಿರುವಿಕೆಯೂ ಸ್ವಭಾವಸಿದ್ಧವಾಗಿರುವುವು. ಆದರೂ ಜಲ ಮುಂತಾದ ಪದಾರ್ಥಾಂತರಗಳ ಸಂಸರ್ಗದಿಂದ ವಿಚಿತ್ರವಾದ ಬಣ್ಣವೂ ಇದಕ್ಕೆ ಉಂಟಾಗುವುದು.

೧೯೧ ತೇಜಸಾಂ ಶುಕ್ಲರೂಪವಾದಿವೈಶೇಷಿಕಮತಸ್ಯ ವೇದವಿರುದ್ಧತ್ವಂ

ತೇಜಸ್ಸಿನಲ್ಲಿ ಶುಕ್ಲರೂಪವಿರುವುದೆಂದು ಸಾಧಿಸುವುದಕ್ಕಾಗಿ ವೈಶೇಷಿಕರು ಹೇಳುವ ಅನುಮಾನವಾದಗಳೆಲ್ಲಾ ಯದಗ್ನೇಃ ರೋಹಿತಂ ರೂಪಂ ತೇಜಸಸ್ತದ್ರೂಪಂ ಎಂಬ ಶ್ರುತಿಯಿಂದ ಬಾಧಿಸಲ್ಪಡುವುದಾದಕಾರಣ ಅನಾದರಣೀಯಗಳಾಗಿರುವುವು

೧೯೨ ಮಧ್ಯಂದಿನೇ ರವಿಮಂಡಲಸ್ಯ ಶುಕ್ಲತ್ವೇನ ಪ್ರತಿಭಾಸೇ ಕಾರಣನಿರೂಪಣಂ.

ಆದರೆ ಮಧ್ಯಾಹ್ನಕಾಲದಲ್ಲಿ ಸೂರ್ಯಮಂಡಲವು ಬಿಳುಪಾಗಿ ಕಾಣುವುದಕ್ಕೆ ಕಾರಣವೇನು ? ಮಂಡಲವನ್ನು ಆವರಿಸಿಕೊಂಡು ಅದಕ್ಕೆ ಉಪಷ್ಟಂಭಕವಾಗಿರುವ ಜಲದಲ್ಲಿರುವ ಶುಕ್ಲರೂಪವು ಆಗ ನಮಗೆ ತೋರುವುದಲ್ಲದೆ ಆ ಶುಕ್ಲರೂಪವು ಸೂರ್ಯನ ರೂಪವಲ್ಲ.

ಹಾಗಾದರೆ ಮಂಡಲಾವಷ್ಟಂಭಕವಾದ ಜಲದ ರೂಪವು ಉದ್ಭವಾವಸ್ಥೆಯನ್ನು ಹೊಂದಿದ್ದರೆ ಅಂಥ ಜಲದ ಶೀತಸ್ಪರ್ಶವೂ ಉದ್ಭವಾವಸ್ಥೆಯನ್ನು ಹೊಂದಿರಬೇಕಲ್ಲವೆ ? ಏತಕ್ಕೆಂದರೆ ಉದ್ಭವಾವಸ್ಥೆಯನ್ನು ಹೊಂದಿದ ರೂಪವುಳ್ಳ ವಸ್ತುವಿನಲ್ಲಿ ಸ್ಪರ್ಶವೂ ಉದ್ಭವಾವಸ್ಥೆಯನ್ನು ಹೊಂದಿಯೇ ಇರುತ್ತದೆ ಎಂಬ ನಿಯಮವು ಲೋಕದಲ್ಲಿ ಕಾಣಬರುವುದು. ಮಂಡಲೋಪಷ್ಟಂಭಕವಾದ ಜಲದಲ್ಲಿ ಶೀತಸ್ಪರ್ಶವು ಅನುಭವಕ್ಕೆ ಗೋಚರವಾಗುವುದಿಲ್ಲವಾದುದರಿಂದ ರೂಪವೂ ಅವರಲ್ಲಿ ಉದ್ಭವಾವಸ್ಥೆಗೆ ಬಂದಿಲ್ಲವೆಂದೇ ಹೇಳಬೇಕಾಗುವುದು. ಆದುದರಿಂದ ಅಲ್ಲಿ ಕಾಣಬರುವ ರೂಪವು ಜಲದ ರೂಪವಲ್ಲವಾಗಿ ಪರಿಶೇಷಾತ್ ಸೂರ್ಯಮಂಡಲದ ರೂಪವಾಗಿಯೆ ಇರಬೇಕಲ್ಲವೆ?

ಅಲ್ಲ ; ಅದು ಜಲದ ರೂಪವಲ್ಲದೆ ತೇಜಸ್ಸಿನ ರೂಪವಲ್ಲ. ದೀಪಪ್ರಭೆಯಲ್ಲಿ ಸ್ಪರ್ಶವು ಉದ್ಭವಾವಸ್ಥೆಗೆ ಬಂದಿಲ್ಲದಿದ್ದರೂ ರೂಪವು ಉದ್ಭವಾವಸ್ಥೆಗೆ ಬಂದಿರುವುದು ಪ್ರತ್ಯಕ್ಷಸಿದ್ಧವಾಗಿರುವುದರಿಂದ ನೀವು ಹೇಳಿದ ನಿಯಮವೇ ಲೋಕದಲ್ಲಿ ಇಲ್ಲ. ಆದ

ಕಾರಣ ಮಂಡಲೋಪಷ್ಟಂಭಕವಾದ ಜಲದ ಶುಕ್ಲರೂಪವೇ ಮಧ್ಯಾಹ್ನಕಾಲದಲ್ಲಿ ನಮಗೆ ತೋರುತ್ತಿರುವುದಲ್ಲದೆ ಆ ಶುಕ್ಲರೂಪವು ಮಂಡಲದ ನಿಜರೂಪವಲ್ಲ. ಆದ ಕಾರಣ ತೇಜಸ್ಸಿಗೆ ಲೌಹಿತ್ಯವೇ ಸ್ವಾಭಾವಿಕವಾಗಿರುವುದೆಂದು ಮೊರೆಯಿಡುತ್ತಿರುವ ಶ್ರುತಿಯ ಮುಂದೆ ಯಾರೂ ಪ್ರತಿಪಕ್ಷಿಗಳಾಗಿ ನಿಲ್ಲಲಾರರು.

## ೧೯೩ ಅಥ ಜಲಲಕ್ಷಣಂ.

ಇಂಥ ತೇಜಸ್ಸಿನಿಂದ ರಸತನ್ಮಾತ್ರೆಯೂ, ಅದರಿಂದ ಜಲತತ್ತ್ವವೂ ಉಂಟಾಗುವುವು. ಉತ್ಕಟಾವಸ್ಥೆಯನ್ನು ಹೊಂದಿದ ಶೀತಸ್ಪರ್ಶವುಳ್ಳ ದ್ರವ್ಯವು ಜಲವೆನಿಸಿಕೊಳ್ಳುವುದು. ಅಥವಾ ಗಂಧಶೂನ್ಯವಾಗಿಯೂ ಉತ್ಕಟಾವಸ್ಥೆಯನ್ನು ಹೊಂದಿದ ರಸವುಳ್ಳದಾಗಿಯೂ ಇರುವ ದ್ರವ್ಯವು ಜಲವೆನಿಸಿಕೊಳ್ಳುವುದು. ಅಥವಾ ಗಂಧಶೂನ್ಯವಾಗಿಯೂ ಗುರುತ್ವವುಳ್ಳದಾಗಿಯೂ ಇರುವ ದ್ರವ್ಯವು ಜಲವೆನಿಸಿಕೊಳ್ಳುವುದು.

ಇದರಲ್ಲಿ ಮೊದಲನೆಯ ಲಕ್ಷಣದಲ್ಲಿಯೂ ಎರಡನೆಯ ಲಕ್ಷಣದಲ್ಲಿಯೂ ರಸತನ್ಮಾತ್ರೆಯನ್ನು ವ್ಯಾವರ್ತಿಸುವುದಕ್ಕಾಗಿ ಉತ್ಕಟಾವಸ್ಥೆಯನ್ನು ಹೊಂದಿದ ಎಂಬ ಪದವೂ, ಎರಡನೆಯ ಮೂರನೆಯ ಲಕ್ಷಣಗಳಲ್ಲಿ ಪೃಥಿವಿಯನ್ನು ವ್ಯಾವರ್ತಿಸುವುದಕ್ಕಾಗಿ ಮೊದಲನೆಯ ವಿಶೇಷಣವೂ, ತೇಜಸ್ಸನ್ನು ವ್ಯಾವರ್ತಿಸುವುದಕ್ಕಾಗಿ ಎರಡನೆಯ ವಿಶೇಷಣವೂ ಉಕ್ತವಾಗಿರುವುವು.

## ೧೯೪ ಜಲತತ್ತ್ವಸ್ಯ ಸ್ವಭಾವವಿಶೇಷಾಃ.

ಇಂಥ ಜಲತತ್ತ್ವಕ್ಕೆ ಶುಕ್ಲರೂಪವೂ, ಮಧುರರಸವೂ, ಶೀತಸ್ಪರ್ಶವೂ ಸ್ವಾಭಾವಿಕವಾಗಿದ್ದರೂ ಪದಾರ್ಥಾಂತರಗಳ ಸಂಸರ್ಗದಿಂದ ಬೇರೊಂದು ವಿಚಿತ್ರವಾದ ರೂಪವೂ, ರಸವೂ, ಸ್ಪರ್ಶವೂ ಇದರಲ್ಲಿ ಆರೋಪಿಸಲ್ಪಡುವುವು. ಅದ್ರವ್ಯಪ್ರಕರಣದಲ್ಲಿ ಪೃಥಿವ್ಯಪ್ತೇಜಸ್ಸುಗಳಲ್ಲಿರುವ ಗುಣಗಳ ವ್ಯವಸ್ಥೆಗಳನ್ನು ತೋರಿಸುವೆವು. ಮತ್ತು ಈ ಜಲತತ್ತ್ವಕ್ಕೆ ದ್ರವತ್ವವೇ ಸ್ವಾಭಾವಿಕವಾಗಿರುವುದು. ಮಳೆಯಲ್ಲಿ ಬೀಳುವ ಹಿಮದ ಕಲ್ಲು (ಆನೆಕಲ್ಲು) ಮುಂತಾದುವುಗಳಲ್ಲಿ ಅವುಗಳನ್ನು ನೆಲೆಗೊಳಿಸುವ ಕೆಲವು ಉಪಷ್ಟಂಭಕಪದಾರ್ಥಗಳು ಅವುಗಳಲ್ಲಿ ಸೇರಿರುವುದರಿಂದ ಸ್ವಲ್ಪಕಾಲದ ಮಟ್ಟಿಗೆ ಅವುಗಳಲ್ಲಿ ಕಾಠಿನ್ಯವು ತೋರಿಬಂದರೂ ಕೂಡಲೇ ಸ್ವಾಭಾವಿಕವಾದ ದ್ರವತ್ವವು ಅವುಗಳಲ್ಲಿ ತಲೆಯೆತ್ತುವುದು.

## ೧೯೫ ಜಲತತ್ತ್ವಸ್ಯ ಚತುರ್ಧಾ ವಿಭಾಗಃ.

ಈ ಜಲತತ್ತ್ವವು ಪ್ರಾಣಾಪ್ಯಾಯಕ, ರಸನಾಪ್ಯಾಯಕ, ಶರೀರ, ವಿಷಯ ಎಂದು ನಾಲ್ಕು ಬಗೆಯಾಗಿರುವುದು. ಈ ವಿಷಯದಲ್ಲಿ 'ಆಪೋಮಯಃ ಪ್ರಾಣಃ'

ಎಂಬ ಶ್ರುತಿಯನ್ನೂ, ಆಹಾರವನ್ನು ಅಗಿವ ಕಾಲದಲ್ಲಿ ಹಲ್ಲುಗಳ ಮಧ್ಯದಿಂದ ಇಳಿದು ಬರುವ ಜಲವು ರಸನೇಂದ್ರಿಯಕ್ಕೆ ಆಪ್ಯಾಯಕವಾಗಿರುವುದೆಂಬ ಪ್ರತ್ಯಕ್ಷವನ್ನೂ ನೋಡಬಹುದು

ಜಲವು ಶರೀರಕ್ಕೆ ಉಪಾದಾನಕಾರಣವಾಗಿರುವುದನ್ನು ವರುಣಲೋಕದಲ್ಲಿ ಇರುವ ಜಲೀಯಶರೀರಗಳಲ್ಲಿ ಕಾಣಬಹುದು. ಕೆರೆ, ಕೊಳ, ನದಿ, ಸಮುದ್ರ ಮುಂತಾದುವುಗಳಲ್ಲಿರುವ ಜಲವು ವಿಷಯಜಲವೆನಿಸಿಕೊಳ್ಳುವುದು.

## ೧೯೩. ಅಥ ಪೃಥಿವೀಲಕ್ಷಣಂ.

ಇಂಥ ಜಲತತ್ತ್ವದಿಂದ ಗಂಧತನ್ಮಾತ್ರೆಯೂ, ಅದರಿಂದ ಪೃಥಿವಿಯೂ ಉಂಟಾಗುವುವು. ಉತ್ಕಟಾವಸ್ಥೆಯನ್ನು ಹೊಂದಿದ ಗಂಧವುಳ್ಳ ದ್ರವ್ಯವು ಪೃಥಿವಿಯೆನಿಸಿಕೊಳ್ಳುವುದು. ಅಥವಾ ರಸವುಳ್ಳುದಾಗಿಯೂ, ಉದ್ಭವಾವಸ್ಥೆಯನ್ನು ಹೊಂದದ ಅನುಷ್ಣಾಶೀತಸ್ಪರ್ಶವುಳ್ಳುದಾಗಿಯೂ ಇರುವ ದ್ರವ್ಯವು ಪೃಥಿವಿಯೆನಿಸಿಕೊಳ್ಳುವುದು. ಅಥವಾ ಶೀತಸ್ಪರ್ಶಶೂನ್ಯವಾಗಿಯೂ, ಗುರುತ್ವವುಳ್ಳುದಾಗಿಯೂ ಇರುವ ದ್ರವ್ಯವು ಪೃಥಿವಿಯೆನಿಸಿಕೊಳ್ಳುವುದು.

ಇಲ್ಲಿ ಮೊದಲನೆಯ ಲಕ್ಷಣದಲ್ಲಿ ಗಂಧತನ್ಮಾತ್ರೆಯನ್ನು ವ್ಯಾವರ್ತಿಸುವುದಕ್ಕಾಗಿ ಉತ್ಕಟಾವಸ್ಥೆಯನ್ನು ಹೊಂದಿದ ಎಂಬ ದಳವೂ, ಎರಡನೆಯ ಲಕ್ಷಣದಲ್ಲಿ ವಾಯುವನ್ನು ವ್ಯಾವರ್ತಿಸುವುದಕ್ಕಾಗಿ ಪ್ರಥಮದಳವೂ, ಜಲವನ್ನು ವ್ಯಾವರ್ತಿಸುವುದಕ್ಕಾಗಿ ದ್ವಿತೀಯದಳವೂ, ಮೂರನೆಯ ಲಕ್ಷಣದಲ್ಲಿ ಜಲವನ್ನು ವ್ಯಾವರ್ತಿಸುವುದಕ್ಕಾಗಿ ಪ್ರಥಮದಳವೂ, ತೇಜಸ್ಸು, ವಾಯು ಮುಂತಾದುವುಗಳನ್ನು ವ್ಯಾವರ್ತಿಸುವುದಕ್ಕಾಗಿ ದ್ವಿತೀಯದಳವೂ ಉಕ್ತವಾಗಿರುವುವು.

## ೧೯೪. ಪೃಥಿವ್ಯಾಃ ಸ್ವಭಾವವಿಶೇಷಾಃ.

ಇಂಥ ಪೃಥಿವಿ ಮೊತ್ತಮೊದಲು ಸೌರಭ್ಯಗಂಧವುಳ್ಳುದಾಗಿಯೂ, ಮಾಧುರ್ಯರಸವುಳ್ಳುದಾಗಿಯೂ ಕೃಷ್ಣರೂಪವುಳ್ಳುದಾಗಿಯೂ, ಅನುಷ್ಣಾಶೀತಸ್ಪರ್ಶವುಳ್ಳುದಾಗಿಯೂ ಉಂಟಾಗುವುದು. ಅನಂತರದಲ್ಲಿ ಅನುಷ್ಣಾಶೀತಸ್ಪರ್ಶವು ಅದರಲ್ಲಿ ಸರ್ವಕಾಲದಲ್ಲಿಯೂ ಅನುವರ್ತಿಸುವುದು. ತೇಜಸ್ಸಂಪರ್ಕವೂ ಜಲಸಂಪರ್ಕವೂ ಇದ್ದರೆ ಉಷ್ಣಸ್ಪರ್ಶವೂ ಶೀತಸ್ಪರ್ಶವೂ ಪೃಥಿವಿಯಲ್ಲಿ ಆರೋಪಿತವಾಗಿ ತೋರುವುವು. ಅದಿಲ್ಲದಿದ್ದರೆ ಸ್ವಾಭಾವಿಕವಾದ ಅನುಷ್ಣಾಶೀತಸ್ಪರ್ಶವೇ ತೋರುವುದು; ಎಂದರೆ ಪೃಥಿವಿಯಲ್ಲಿ ಪಾಕವಿಶೇಷದಿಂದ ಸ್ವಾಭಾವಿಕವಾದ ಗಂಧರೂಪರಸಗಳಿಗೆ ಪರಿವರ್ತನೆಯುಂಟಾಗಿ ಬೇರೊಂದು ಗಂಧ, ಬೇರೊಂದು ರೂಪ, ಬೇರೊಂದು ರಸ, ಇವುಗಳು

ಆರೋಪಿತವಾಗದೆ ಔಪಾಧಿಕವಾಗಿ ಅವಿನಾಭಾವಸಂಬಂಧದಿಂದಲೇ ಹುಟ್ಟಬಹುದು. ಆದರೆ ಉಷ್ಣಸ್ಪರ್ಶವೂ ಶೀತಸ್ಪರ್ಶವೂ ಪೃಥಿವಿಯಲ್ಲಿ ಆರೋಪಿತವಾಗಿಯೇ ಇರುವುಪಲ್ಲದೆ ಅವುಗಳಂತೆ ಸ್ವಾಭಾವಿಕವಲ್ಲವೆಂಬುದು ಮಾತ್ರವಲ್ಲ ; ಔಪಾಧಿಕವಾಗಿಯೂ ಅವಿನಾಭಾವಸಂಬಂಧದಿಂದ ಹುಟ್ಟುವುವಲ್ಲ. ಗ್ರೀಷ್ಮಕಾಲದಲ್ಲಿ ಪೃಥಿವಿ ಕಾಲನ್ನು ಸುಡುತ್ತಿರುವುದೂ, ಶೀತಕಾಲದಲ್ಲಿ ತಣ್ಣಗಿರುವುದೂ, ಪೃಥಿವಿಯ ಸ್ವಾಭಾವಿಕಗುಣದಿಂದಲ್ಲ ಪೃಥಿವಿಯಲ್ಲಿ ಸಂಯುಕ್ತವಾಗಿರುವ ತೇಜಸ್ಸಿನ ಮತ್ತು ಜಲದ ಗುಣದಿಂದಲೇ.

೧೯೪ ಪೃಥಿವ್ಯಾಃ ಪರಿಣಾಮವಿಶೇಷೇಷ್ವಪಿ ಗಂಧ-ರೂಪ-ರಸಾನಾಂ ಔಪಾಧಿಕಾವಿನಾಭೂತತ್ವಂ.

ಅದರಂತೆ ಪೃಥಿವಿಯ ಪರಿಣಾಮವಾಗಿರುವ ಚಿಗುರು, ಎಲೆ, ಹೂ, ಕಾಯಿ, ಹಣ್ಣು, ಹತ್ತಿ ಮುಂತಾದ ವಸ್ತುಗಳಲ್ಲಿರುವ ವಿಲಕ್ಷಣವಾದ ಗಂಧರೂಪರಸಗಳೂ ಪೃಥಿವಿಯಲ್ಲಿ ಸಂಯುಕ್ತವಾದ ಪದಾರ್ಥಾಂತರಗಳ ಗುಣಗಳೆಂದೂ, ಪೃಥಿವಿಯಲ್ಲಿ ಆರೋಪಿತವಾಗಿ ಅದರ ಪರಿಣಾಮವಾಗಿರುವ ಚಿಗುರು ಮುಂತಾದವುಗಳಲ್ಲಿ ಬಂದಿರುವುವೆಂದೂ ತಿಳಿಯಬಾರದು. ಅಂಥ ಪದಾರ್ಥಾಂತರಗಳು ಪೃಥಿವಿಯಲ್ಲಿ ಸಂಯುಕ್ತವಾಗಿರುವುವೆಂಬುದಕ್ಕೆ ಪ್ರಮಾಣವಿಲ್ಲವಾದುದರಿಂದಲೂ, ಪೃಥಿವಿಯಲ್ಲಿಯೇ ಪರಿಪಾಕವಿಶೇಷದಿಂದ ಅಂಥ ಗುಣಗಳು ಉಂಟಾಗಬಹುದಾದುದರಿಂದಲೂ, ಪೃಥಿವಿಗೆ ಅವು ಔಪಾಧಿಕವಾಗಿ ಅವಿನಾಭಾವಸಂಬಂಧದಿಂದಲೇ ಹುಟ್ಟಿರುವುವೆಂದೇ ತಿಳಿಯಬೇಕು.

ಪೃಥಿವಿಗೆ ಕಪ್ಪುಬಣ್ಣವೇ ಸ್ವಾಭಾವಿಕವೆಂಬುದು ಯತ್ಕೃಷ್ಣಂ ತದನ್ನಸ್ಯ ಎಂಬ ಛಾಂದೋಗ್ಯಶ್ರುತಿಯಿಂದಲೇ ಸಿದ್ಧವಾಗಿರುವುದು. ಅನ್ನವೆಂದರೆ ಪೃಥಿವಿ. ಆದಕಾರಣ ಪರಿಪಾಕವಿಶೇಷದಿಂದ ರೂಪಾಂತರವು ಪೃಥಿವಿಯಲ್ಲಿ ಬರಬಹುದು.

ಮಹಾಪೃಥಿವಿಯಲ್ಲಿ ಸೌರಭ್ಯಗಂಧವೇ ತೋರುವುದರಿಂದ ಅದೇ ಇದಕ್ಕೆ ಸ್ವಾಭಾವಿಕವಾಗಿದ್ದು ಪರಿಪಾಕವಿಶೇಷದಿಂದ ಗಂಧಾಂತರವೂ ಇದರಲ್ಲಿ ಬರಬಹುದು.

ಪೃಥಿವಿಗೆ ಉಪಾದಾನಕಾರಣವಾದ ಜಲದಲ್ಲಿ ಮಾಧುರ್ಯರಸವಿರುವುದರಿಂದಲೂ, ಕಾರಣದಲ್ಲಿರುವ ಗುಣವು ಕಾರ್ಯದಲ್ಲಿಯೂ ಅನುವರ್ತಿಸುವುದೆಂಬ ನ್ಯಾಯಕ್ಕೆ ಇಲ್ಲಿ ಅಡ್ಡಿಯಿಲ್ಲವಾದುದರಿಂದಲೂ. ಮಾಧುರ್ಯರಸವೇ ಪೃಥಿವಿಗೆ ಸ್ವಾಭಾವಿಕವಾಗಿದ್ದು ಪರಿಪಾಕವಿಶೇಷದಿಂದ ರಸಾಂತರವೂ ಇದರಲ್ಲಿ ಬರಬಹುದು.

ಆದರೆ ಕಾರಣವಾದ ಜಲದಲ್ಲಿರುವ ದ್ರವತ್ವಗುಣವೂ ಕಾರ್ಯವಾದ ಪೃಥಿವಿಯಲ್ಲಿ ಬರಬೇಕಲ್ಲವೆ? ಹವುದು, ಬರಬೇಕು; ಕಾರಣಾಂತರವಶದಿಂದ ಕೆಲವು

ಪೃಥಿವೀಭಾಗಗಳಲ್ಲಿ ಆ ದ್ರವತ್ವವು ತಡೆಯಲ್ಪಟ್ಟು ಕಾಠಿನ್ಯವು ಕಂಡುಬಂದರೂ, ಕೆಲವು ಪೃಥಿವೀಭಾಗಗಳಲ್ಲಿ ಜಲಸಂಸರ್ಗದಿಂದಲೂ ತೇಜಸ್ಸಂಸರ್ಗದಿಂದಲೂ ಆ ದ್ರವತ್ವವು ವ್ಯಕ್ತವಾಗುವುದು. ಲವಣವೆಂಬ ಪೃಥಿವಿಯ ಭಾಗದಲ್ಲಿ ಜಲಸಂಸರ್ಗದಿಂದಲೂ, ನವನೀತವೆಂಬ ಪೃಥಿವಿಯ ಭಾಗದಲ್ಲಿ ತೇಜಸ್ಸಂಪರ್ಕದಿಂದಲೂ ದ್ರವತ್ವವು ಕಾಣುವುದಿಲ್ಲವೆ ?

ಲವಣವೆಂಬುದು ಸಮುದ್ರಜಲದಿಂದಲೇ ನಿರ್ಮಿತವಾದುದರಿಂದ ಜಲಮಯವೇ ಹೊರತು ಪಾರ್ಥಿವವಲ್ಲವೆಂದು ಭ್ರಮಿಸಬಾರದು. ಸಾಮುದ್ರಲವಣದಲ್ಲಿ ಒಂದು ವೇಳೆ ಹಾಗೆ ಕಲ್ಪಿಸಿದರೂ ದೊಡ್ಡದೊಡ್ಡ ಪರ್ವತಗಳಿರುವ ಕೆಲವು ದೇಶಗಳಲ್ಲಿ ಪರ್ವತಾಕಾರವಾದ ಕಲ್ಲುಬಂಡೆಗಳಾಗಿ ಭೂಮಿಯಲ್ಲಿ ಹುಟ್ಟುವ ಸೈಂಧವಲವಣಮುಂತಾದುವುಗಳಲ್ಲಿ ಪಾರ್ಥಿವತ್ವವನ್ನು ಯಾರೂ ಅಪಲಪಿಸಲಾರರಷ್ಟೆ.

## ೧೯೯ ಪೃಥಿವ್ಯಾಃ ಚತುರ್ಧಾ ವಿಭಾಗಃ.

ಇಂಥ ಪೃಥಿವಿ ಮನಆಪ್ಯಾಯಕ, ಘ್ರಾಣೇಂದ್ರಿಯಾಪ್ಯಾಯಕ, ಶರೀರ, ವಿಷಯ ಎಂದು ನಾಲ್ಕು ಬಗೆಯಾಗಿರುವುದು.

ಇದರಲ್ಲಿ ಅನ್ನಮಯಂ ಹಿ ಸೋಽಮ್ಯ ಮನಃ, ಆಪ್ಯಾಯ್ಯಂತೇ ಚ ತೇ ನಿತ್ಯಂ ಇವೇ ಮೊದಲಾದ ಶ್ರುತಿಸ್ಮೃತಿಪ್ರಮಾಣಗಳಿಂದ ಪೃಥಿವಿಗೆ ಮನಆಪ್ಯಾಯಕತ್ವವೂ ಇಂದ್ರಿಯಾಪ್ಯಾಯಕತ್ವವೂ ಸಿದ್ಧವಾಗಿರುವುವು.

ಪೃಥಿವಿ ಶರೀರಕ್ಕೆ ಉಪಾದಾನಕಾರಣವಾಗಿರುವುದನ್ನು ಮನುಷ್ಯ ತಿರ್ಯಕ್ ಸ್ಥಾವರಗಳ ಶರೀರಗಳಲ್ಲಿ ಕಾಣಬಹುದು.

ಮಣ್ಣು, ಕಲ್ಲು, ಓಷಧಿಗಳು, ಅಂಧಕಾರ ಇವೇ ಮೊದಲಾದುವುಗಳನ್ನು ವಿಷಯಪೃಥಿವಿಯೆಂದು ತಿಳಿಯಬಹುದು.

## ೨೦೦ ಮೃತ್ಪಾಷಾಣಾದೀನಾಂ ವಿಷಯತ್ವಾನುಪಪತ್ತಿಶಂಕಾ.

ವಿಷಯವೆಂಬುದು ಆಪ್ಯಾಯಕಕ್ಕಿಂತಲೂ ಶರೀರಕ್ಕಿಂತಲೂ ಭಿನ್ನವಾಗಿರಬೇಕಲ್ಲವೆ ? ಮಣ್ಣು, ಕಲ್ಲು ಮೊದಲಾದುವೆಲ್ಲಾ ಈಶ್ವರನಿಗೂ ಜೀವವಿಶೇಷಕ್ಕೂ ಶರೀರವಾಗಿಯೇ ಇರುವುದರಿಂದ ಶರೀರಭಿನ್ನವಾಗಲಿಲ್ಲವಾಗಿ ಇವುಗಳನ್ನು ವಿಷಯಕೋಟಿಯಲ್ಲಿ ಸೇರಿಸುವುದು ಹೇಗೆ ಎಂದು ಆಶಂಕಿಸಬಾರದು.

## ೨೦೧ ತತ್ಪರಿಹಾರಃ.

ಶಾಸ್ತ್ರಮರ್ಯಾದೆಯನ್ನು ತಿಳಿದಿರುವ ಈಶ್ವರನಿಗೂ ಜೀವವಿಶೇಷಕ್ಕೂ ಮಣ್ಣು, ಕಲ್ಲು ಮುಂತಾದುವು ಶರೀರವೆಂದು ತಿಳಿದರೂ, ಲೋಕವ್ಯವಹಾರಮಾತ್ರದಲ್ಲಿ ನಿರತ

ರಾದವರು ಇಂದ್ರಿಯಗಳಿಗೂ ಚೇಷ್ಟೆಗಳಿಗೂ ಆಶ್ರಯವಾದ ಪದಾರ್ಥವನ್ನೇ ಶರೀರ ವಾಗಿ ಭಾವಿಸುತ್ತಿರುವುದರಿಂದ ಮಣ್ಣು, ಕಲ್ಲು ಮುಂತಾದುವುಗಳಲ್ಲಿ ಇಂದ್ರಿಯ ಗಳೂ ಚೇಷ್ಟೆಗಳೂ ಇಲ್ಲವಾಗಿ, ಲೋಕದವರು ಅವುಗಳನ್ನು ಶರೀರವೆಂದು ವ್ಯವಹರಿಸು ತ್ತಿಲ್ಲ. ಅಂಥ ಲೋಕವ್ಯವಹಾರವನ್ನು ಅನುಸರಿಸಿ ಅವುಗಳನ್ನು ಇಲ್ಲಿ ಶರೀರ ಕೋಟಿ ಯಲ್ಲಿ ಸೇರಿಸದೆ ವಿಷಯಕೋಟಿಯಲ್ಲಿ ಸೇರಿಸಿರುವೆವು.

ವೃಕ್ಷ ಮೊದಲಾದ ಸ್ಥಾವರಪದಾರ್ಥಗಳಿಗೆ ಶರೀರತ್ವವನ್ನು ಒಪ್ಪಿಕೊಂಡಿರುವ ವೈಶೇಷಿಕರೇ ಮೃತ್ಪಾಷಾಣಾದಿಗಳನ್ನು ವಿಷಯಕೋಟಿಯಲ್ಲಿಯೂ ಪರಿಗಣಿಸಿರುವರಾಗಿ ರುತ್ತಾರೆ ಎಂಬುದು ಅವರ ದರ್ಶನಗ್ರಂಥಗಳಲ್ಲಿ ಸ್ಫುಟವಾಗಿರುವುದು. ಆದಕಾರಣ ಮಣ್ಣು, ಕಲ್ಲು, ಓಷಧಿ ಅಂಧಕಾರ ಮುಂತಾದುವುಗಳನ್ನು ವಿಷಯಪೃಥಿವಿಯಾಗಿ ತಿಳಿಯಬಹುದು ಎಂದು ಹೇಳಲು ಯಾವ ಅಡ್ಡಿಯೂ ಇಲ್ಲ.

### ೨೦೨ ಅಂಧಕಾರಸ್ಯ ಪಾರ್ಥಿವದ್ರವ್ಯತ್ವಸಮರ್ಥನಂ.

ಇದೆಲ್ಲಾ ಸರಿಯೆ. ಅಂಧಕಾರವನ್ನು ಪೃಥಿವಿಯ ವಿಷಯಕೋಟಿಯಲ್ಲಿ ಸೇರಿಸುವುದು ಹೇಗೆ ? ಅಂಧಕಾರವೆಂದರೆ ಕತ್ತಲೆ. ಬೆಳಕಿನ ಅಭಾವವೇ ಕತ್ತಲೆ ಯೆನಿಸಿಕೊಳ್ಳುವುದು. ಬೆಳಕೆಂಬ ದ್ರವ್ಯದ ಅಭಾವವು ಕತ್ತಲೆಯಾದರೆ ದ್ರವ್ಯಾ ಭಾವರೂಪವಾದ ಕತ್ತಲೆ ದ್ರವ್ಯವೆನಿಸಿಕೊಳ್ಳುವುದಕ್ಕೇ ನೋಡಲು ಯೋಗ್ಯತೆಯನ್ನು ಪಡೆಯದಿರುವಲ್ಲಿ ಇದು ಪಾರ್ಥಿವದ್ರವ್ಯವಿಶೇಷವೆನಿಸಿಕೊಳ್ಳಲು ಯೋಗ್ಯವಾದೀತೆ ? ಹವುದು ; ಆಗುವುದು. ದ್ರವ್ಯಕ್ಕೆ ಹೇಳಿದ ಲಕ್ಷಣವು ಅಂಧಕಾರಪದಾರ್ಥದಲ್ಲಿಯೂ ಇರುವುದರಿಂದ ಇದನ್ನು ದ್ರವ್ಯವೆಂದು ಹೇಳಲು ಯಾವ ತಡೆಯೂ ಇಲ್ಲ

ಅವಸ್ಥೆಗೆ ಆಶ್ರಯವಾದುದು ದ್ರವ್ಯವೆನಿಸಿಕೊಳ್ಳುವುದು ಎಂದಲ್ಲವೆ ದ್ರವ್ಯ ಲಕ್ಷಣವನ್ನು ಹಿಂದೆ ಹೇಳಿರುವೆವು. ಅಂಧಕಾರದಲ್ಲಿಯೂ ನೀಲರೂಪ, ಚಲನ ಸ್ಥಿತಿ ಮುಂತಾದ ಕ್ರಿಯೆ, " ಇಲ್ಲಿ ಕತ್ತಲೆ, ಅಲ್ಲಿ ಕತ್ತಲೆ " ಎಂಬ ಪರಾಪರವಿಭಾಗ, ಇವೇ ಮೊದಲಾದ ಅವಸ್ಥೆಗಳಿರುವುದರಿಂದ ಇದೂ ದ್ರವ್ಯವೆನಿಸಿಕೊಳ್ಳಲೂ, ಪಾರ್ಥಿವ ದ್ರವ್ಯವಿಶೇಷವೆನಿಸಿಕೊಳ್ಳಲೂ ಯಾವ ತಡೆಯೂ ಇಲ್ಲ.

" ಅಂಧಕಾರವು ನೀಲರೂಪಮೊದಲಾದ ಅವಸ್ಥೆಗೆ ಆಶ್ರಯವಾಗಿರುವುದು " ಎಂಬ ಈ ಜ್ಞಾನಕ್ಕೆ " ಅಂಧಕಾರವು ನೀಲರೂಪಮೊದಲಾದ ಅವಸ್ಥೆಗೆ ಆಶ್ರಯ ವಾಗಿಲ್ಲ " ಎಂಬ ಬಾಧಕಜ್ಞಾನವು ಯಾವಾಗಲಾದರೂ ಉಂಟಾಗುವುದಾಗಿದ್ದರೆ ಆಗ ಪೂರ್ವಜ್ಞಾನವನ್ನು ಭ್ರಾಂತಿಯೆಂದು ತಿಳಿದು " ಇದು ಪ್ರಮಾಣರೂಪವಾದ

ಜ್ಞಾನವಲ್ಲ '' ಎಂದು ಹೊಡೆದುಹಾಕಿ ಅಂಧಕಾರವು ದ್ರವ್ಯವಲ್ಲ ಎಂದು ಹೇಳಬಹು ದಾಗಿದ್ದಿತು; ಅದೂ ಇಲ್ಲ; ಅಂಧಕಾರವ್ಯತಿರಿಕ್ತವಾದ ಪದಾರ್ಥಗಳನ್ನು ಬೆಳಕಿನ ಸಹಾಯುವನ್ನು ಪಡೆದಿರುವ ಚಕ್ಷುರಿಂದ್ರಿಯದಿಂದಲೂ, ಅಂಧಕಾರವನ್ನಾದರೆ ಬೆಳಕಿನ ಸಹಾಯವಿಲ್ಲದೆ ಕೇವಲಚಕ್ಷುರಿಂದ್ರಿಯದಿಂದಲೂ ನಾವು ಪ್ರತ್ಯಕ್ಷವಾಗಿ ಗ್ರಹಿಸು ತ್ತಲೇ ಇರುತ್ತೇವೆ. ಆದುದರಿಂದ ತಮಸ್ಸು ದ್ರವ್ಯವೆಂಬುದನ್ನು ಅನ್ಯಥಾಕರಿಸಲು ಸಾಧ್ಯವಲ್ಲ.

ಈ ಅಂಧಕಾರದ ವಿಷಯದಲ್ಲಿ ವೇದಾಂತಿಗಳೂ, ಕುಮಾರಿಲಭಟ್ಟರೇ ಮೊದ ಲಾದ ಮೀಮಾಂಸಕರೂ, ತಾರ್ಕಿಕರೂ, ದೊಡ್ಡದೊಡ್ಡ ವಾದಗಳನ್ನು ಬರೆದಿರು ವರು. ಅವುಗಳೆಲ್ಲವೂ ಬಾಲಕರಿಗೆ ಸುಲಭವಾಗಿ ಗೋಚರವಾಗತಕ್ಕ ವಿಷಯಗಳಲ್ಲ ವಾದುದರಿಂದ ಅವುಗಳನ್ನು ಬಿಟ್ಟು ಸಿದ್ಧಾಂತವನ್ನು ಮಾತ್ರ ಸಂಕ್ಷೇಪವಾಗಿ ಇಲ್ಲಿ ತೋರಿಸಿರುವೆವು. ಈ ವಿಷಯವು ಆಯಾಸವಿಲ್ಲದೆ ಜ್ಞಾಪಕದಲ್ಲಿ ನಿಲ್ಲುವುದಕ್ಕಾಗಿ ಪೂರ್ವಾಚಾರ್ಯರ ಪದ್ಯವೊಂದನ್ನು ಉದಾಹರಿಸುವೆವು—

ತಮೋ ನಾಮ ದ್ರವ್ಯಂ ಬಹಳವಿರಳಂ ಮೇಚಕಚಲಂ
ಪ್ರತೀತಂ ಕೇನಾಪಿ ಕ್ವಚಿದಪಿ ನ ಬಾಧಶ್ಚ ದದೃಶೇ ।
ಅತಃ ಕಲ್ಪ್ಯೇ ಹೇತುಃ ಪ್ರಮಿತಿರಪಿ ಶಾಬ್ದೀ ವಿಜಯತೇ
ನಿರಾಲೋಕಂ ಚಕ್ಷುಃ ಪ್ರಥಯತಿ ಹಿ ತದ್ದರ್ಶನವಶಾತ್॥

ಇಂತು ತತ್ತ್ವಶುದ್ಧಿಯೆಂಬ ವಿಶಿಷ್ಟಾದ್ವೈತಪ್ರಕರಣಗ್ರಂಥದೊಳ್
ಅಚಿತ್ತತ್ತ್ವಪರಿಚ್ಛೇದದಲ್ಲಿ ಪಂಚತನ್ಮಾತ್ರ-ಪಂಚಭೂತ-
ನಿರೂಪಣಪ್ರಕರಣಂ ಅಷ್ಟಮಂ.

---

## ನ ವ ಮ ಪ್ರ ಕ ರ ಣ ಂ.

---

**೨೦೩ ಉಕ್ತೇಷು ಚತುರ್ವಿಂಶತಿತತ್ತ್ವೇಷು ಪ್ರಮಾಣಪ್ರದರ್ಶನಂ.**

ಈರೀತಿಯಾಗಿ ಮೂಲಪ್ರಕೃತಿಮೊದಲುಗೊಂಡು ಪೃಥಿವಿಯವರೆಗೂ ಇರುವ ಇಪ್ಪತ್ತುನಾಲ್ಕು ತತ್ತ್ವಗಳನ್ನೂ ನಿರೂಪಿಸಿದೆವು. ಛಾಂದೋಗ್ಯೋಪನಿಷತ್ತಿನಲ್ಲಿ ತೇಜೋಬನ್ನಗಳೆಂಬ ಅಗ್ನಿ, ಜಲ, ಪೃಥಿವಿ ಈ ಮೂರೇ ತತ್ತ್ವಗಳ ಸೃಷ್ಟಿಯನ್ನು

ಹೇಳಿದ್ದರೂ ತೈತ್ತಿರೀಯೋಪನಿಷತ್ತಿನ ಸಹಾಯದಿಂದ ಹೇಗಾದರೆ ಆಕಾಶವಾಯುಗ ಳನ್ನೂ ಸೇರಿಸಿ ಪಂಚಭೂತಗಳ ಸೃಷ್ಟ್ಯಾದಿಗಳನ್ನು ಅಂಗೀಕರಿಸುತ್ತೇವೆಯೋ ಅದ ರಂತೆಯೇ ಸುಬಾಲ, ಶ್ವೇತಾಶ್ವತರ, ಕೌಷೀತಕಿ ಮೊದಲಾದ ಇತರ ಉಪನಿಷತ್ತುಗಳ ಆಧಾರದಿಂದ ಉಳಿದ ತತ್ತ್ವಗಳನ್ನೂ ಅಂಗೀಕರಿಸಬೇಕಾಗಿಯೇ ಇರುವುದು.

## ೨೦೪ ಶೈವಾನಾಂ ಷಟ್ತ್ರಿಂಶತ್ತತ್ತ್ವವಾದಃ.

ಶೈವಾಗಮವನ್ನು ಅವಲಂಬಿಸಿರುವರು— "೧ ಮಾಯೆ ೨ ಪುರುಷ ಎಂಬ ಎರಡು ತತ್ತ್ವಗಳೂ ; ೩ ಶಿವತತ್ತ್ವ, ೪ ಶಕ್ತಿತತ್ತ್ವ, ೫ ಸದಾಶಿವತತ್ತ್ವ, ೫ ಈಶ್ವರತತ್ತ್ವ, ೭ ವಿದ್ಯಾತತ್ತ್ವ ಎಂಬ ಐದು ಶುದ್ಧತತ್ತ್ವಗಳೂ ; ೮ ಕಾಲ, ೯ ನಿಯತಿ, ೧೦ ಕಲೆ, ೧೧ ವಿದ್ಯೆ, ೧೨ ರಾಗ ಎಂಬ ಐದುತತ್ತ್ವಗಳೂ ; ಹಿಂದೆ ಹೇಳಿದ ಇಪ್ಪತ್ತುನಾಲ್ಕು ತತ್ತ್ವಗಳೂ ; ಅಂತು ಮೂವತ್ತಾರು ತತ್ತ್ವಗಳಿರು ವುವು"—ಎಂದು ಹೇಳುವರು.

## ೨೦೫ ತತ್ಖಂಡನಂ.

ಇಲ್ಲಿ ವಿಚಾರಮಾಡಿ ನೋಡಿದರೆ—ಹಿಂದೆ ಹೇಳಿದ ಇಪ್ಪತ್ತುನಾಲ್ಕು ತತ್ತ್ವ ಗಳೂ ಮುಂದೆ ಹೇಳುವ ಜೀವತತ್ತ್ವ, ಈಶ್ವರತತ್ತ್ವ ಇವುಗಳೂ ಅಂತು ಈ ಇಪ್ಪ ತ್ತಾರು ತತ್ತ್ವಗಳಲ್ಲಿಯೇ, ಅಥವಾ ಕಾಲವನ್ನು ಸೇರಿಸಿಕೊಳ್ಳುವ ಪಕ್ಷದಲ್ಲಿ ಇಪ್ಪ ತ್ತೇಳು ತತ್ತ್ವಗಳಲ್ಲಿಯೇ, ಶೈವಾಗಮದ ತತ್ತ್ವಗಳೆಲ್ಲವೂ ಅಡಗಿರುವುವೇ ಹೊರತು ಹೆಚ್ಚುವುವಲ್ಲ. ಹೇಗೆಂದರೆ-ಮಾಯೆಯೆಂಬುದಕ್ಕೆ ತ್ರಿಗುಣದ್ರವ್ಯದಲ್ಲಿಯೂ, ಪುರುಷ ನೆಂಬುದಕ್ಕೆ ಜೀವತತ್ತ್ವದಲ್ಲಿಯೂ ಅಂತರ್ಭಾವವಾಗುವುದು. ಶಿವತತ್ತ್ವಮೊದ ಲಾದ ಐದು ಶುದ್ಧತತ್ತ್ವಗಳೂ ಕಾಲಶೂನ್ಯವಾಗಿರುವುದರಿಂದ ಒಂದೇ ತತ್ತ್ವವಲ್ಲದೆ ಭಿನ್ನಭಿನ್ನವಾದ ತತ್ತ್ವವಲ್ಲವೆಂಬುದನ್ನು ಶೈವಾಗಮದವರೇ ಒಪ್ಪಿಕೊಂಡಿರುವರು. ಪತಿಂ ವಿಶ್ವಸ್ಯಾತ್ಮೇಶ್ವರಂ ಶಾಶ್ವತಂ ಶಿವಮಚ್ಯುತಂ ಎಂಬ ನಾರಾಯ ಣಾನುವಾಕಶ್ರುತಿಯಿಂದಲೂ, ಸರ್ವಶ್ಶರ್ವಶ್ಶಿವಃ ಸ್ಥಾಣುರ್ಭೂತಾದಿರ್ನಿಧಿ ರವ್ಯಯಃ ಎಂಬ ವಿಷ್ಣುಸಹಸ್ರನಾಮಾಂತರ್ಗತವಾದ ಮಹಾಭಾರತವಚನದಿಂದಲೂ ನಾರಾಯಣನಿಗೇನೇ ಶಿವನೆಂಬ ನಾಮಾಂತರವೂ ಇರುವುದರಿಂದ ಶಿವತತ್ತ್ವವು ನಾ ರಾಯಣತತ್ತ್ವವೇ ಆಗಿರುವುದು.

ಹೀಗೆ ಚಿದಚಿದೀಶ್ವರರಲ್ಲಿ ಅವರ ಏಳು ತತ್ತ್ವಗಳಡಗಿದುವು. ಇದಲ್ಲದೆ ಮೂಲ ಪ್ರಕೃತಿಮೊದಲಾದ ಇಪ್ಪತ್ತುನಾಲ್ಕುತತ್ತ್ವಗಳೂ ಮಾಯೆಯೆಂಬ ಅಚಿತ್ತಿನಲ್ಲಿಯೇ ಸೇರುವುವೆಂಬುದರಲ್ಲಿ ಅವರೂ ವಿವಾದಪಡುವುದಿಲ್ಲ. ಅಂತು ನಾವು ಹೇಳಿರುವ

ತತ್ತ್ವತ್ರಯದಲ್ಲಿ ಅವರ ಮೂವತ್ತೊಂದು ತತ್ತ್ವಗಳೂ ಅಡಗಿದಂತಾಯಿತು. ಉಳಿದ ಐದು ತತ್ತ್ವಗಳಲ್ಲಿ ರಾಗವೆಂಬುದು ಜೀವನ ಜ್ಞಾನಾವಸ್ಥಾವಿಶೇಷವಾದುದರಿಂದ ತತ್ತ್ವಾಂತರವೇ ಅಲ್ಲ. ವಿದ್ಯಾತತ್ತ್ವವೆಂಬುದನ್ನು ಜ್ಞಾನೋತ್ಪತ್ತಿಗೆ ಸಾಧನವಾದ ತತ್ತ್ವಾಂತರವಾಗಿ ಹೇಳುವರು. ಮನಸ್ಸುಮೊದಲಾದ ಇಂದ್ರಿಯಗಳೇ ಜ್ಞಾನೋತ್ಪತ್ತಿಗೆ ಸಾಕಾದಷ್ಟು ಸಾಧನಗಳಾಗಿರುವುದರಿಂದ ಅಪ್ರಸಿದ್ಧವಾದ ವಿದ್ಯೆಯೆಂಬ ತತ್ತ್ವಾಂತರವು ಅನಾವಶ್ಯಕವಾಗಿರುವುದು.

ಕಲೆ ಎಂಬುದು ಪುರುಷನೆಂಬ ಜೀವತತ್ತ್ವದ ಮಲವನ್ನು ಎಂದರೆ ಪುಣ್ಯಪಾಪರೂಪವಾದ ಕೊಳೆಯನ್ನು ಹೋಗಲಾಡಿಸಿ ಕರ್ತೃತ್ವಶಕ್ತಿವ್ಯಂಜಕವಾಗಿದ್ದುಕೊಂಡು ಮಹತ್, ಅಹಂಕಾರ ಮೊದಲಾಗಿ ಪೃಥಿವೀಪರ್ಯಂತವಾದ ಕಾರ್ಯವರ್ಗವನ್ನು ಉಂಟು ಮಾಡುವ ತತ್ತ್ವಾಂತರವೆಂದು ಹೇಳುವರು.

ಇಂಥ ತತ್ತ್ವವೊಂದಿರುವುದಾದರೆ ಅದು ಪ್ರಕೃತಿಯ ಅವ್ಯಕ್ತಾವಸ್ಥೆಗೆ ಕಾರಣವಾಗಿರುವ ಅಕ್ಷರಾವಸ್ಥೆಯಾಗಿರಬಹುದಲ್ಲದೆ ಭಿನ್ನವಾಗಿಲ್ಲ ಅದನ್ನೇ ಕಲಾಶಬ್ದದಿಂದಲಾಗಲಿ ಶಬ್ದಾಂತರದಿಂದಲಾಗಲಿ ವ್ಯವಹರಿಸಬಹುದು. ಆದರೆ ಅದಕ್ಕೆ ಕರ್ತೃಶಕ್ತಿವ್ಯಂಜಕತ್ವವನ್ನುಮಾತ್ರ ಒಪ್ಪಲಾಗುವುದಿಲ್ಲ. ಇಂದ್ರಿಯಾಧೀನವಾದ ಜ್ಞಾನದಿಂದಲೂ ಪುಣ್ಯಪಾಪರೂಪವಾದ ಕರ್ಮದಿಂದಲೂ ಕರ್ತೃಶಕ್ತಿಗೆ ಅಭಿವ್ಯಕ್ತಿಯುಂಟಾಗುವುದು. ಆದಕಾರಣ ಕಲೆಯೆಂಬುದು ತತ್ತ್ವಾಂತರವಲ್ಲ.

ಇಂಥ ಕಲೆಯಿಂದ ತನ್ನ ಕಾರ್ಯವರ್ಗಗಳುಂಟಾಗುವ ಕಾಲದಲ್ಲಿ ಕಾಲವೆಂಬುದೂ ನಿಯತಿಯೆಂಬುದೂ ಸಹಾಯಕರವಾದ ತತ್ತ್ವಾಂತರಗಳಾಗಿರುವುವೆಂದೂ, ಅವುಗಳಲ್ಲಿ ಕಾಲವೆಂಬುದು ಪ್ರಸಿದ್ಧವಾಗಿರುವುದೆಂದೂ, ನಿಯತಿಯೆಂಬುದು ನಿಯಮನರೂಪವಾಗಿರುವುದೆಂದೂ ಹೇಳುವರು.

ಇದರಲ್ಲಿ ನಿಯತಿಶಬ್ದದಿಂದ—ಪ್ರಪಂಚದ ವಿಷಯದಲ್ಲಿ ಈಶ್ವರನು ನಡಸುವ ನಿಯಮನರೂಪವಾದ ನಿಯಂತೃತ್ವಶಕ್ತಿಯನ್ನು ವಿವಕ್ಷೆಮಾಡುವುದಾದರೆ ಈಶ್ವರ ಸಂಕಲ್ಪಕ್ಕಿಂತಲೂ ಬೇರೊಂದಾದ ನಿಯತಿಯೆಂಬುದು ಅಪ್ರಸಿದ್ಧವಾಗಿರುವುದು. ಅಲ್ಲದೆ ಆ ನಿಯತಿಶಬ್ದದಿಂದ "ಕಾರಣವಿದ್ದರೆ ಕಾರ್ಯವೂ ಆವಶ್ಯಕವಾಗಿ ಇದ್ದೇ ತೀರಬೇಕು" ಎಂಬ ಫಲಾವಶ್ಯಂಭಾವರೂಪವಾದ ನಿಯಮವನ್ನು ವಿವಕ್ಷೆಮಾಡುವುದಾದರೆ ಆ ನಿಯತಿ ಪುಣ್ಯಪಾಪರೂಪವಾದ ಕರ್ಮವೇ ಆಗಿರುವುದಲ್ಲದೆ ತತ್ತ್ವಾಂತರವಲ್ಲ.

ಅಲ್ಲದೆ ಆ ನಿಯತಿಶಬ್ದದಿಂದ “ ಇಂಥ ಕಾರಣವು ಇಂಥ ಕಾರ್ಯವನ್ನೇ ಉಂಟು ಮಾಡುವುದಲ್ಲಿಗೆ ಬೇರೊಂದನ್ನು ಉಂಟುಮಾಡಲಾರದು ” ಎಂದು ಆ ಆ ಕಾರ್ಯಗಳನ್ನು ಮಾತ್ರ ನಿಯಮಿಸುವ ಶಕ್ತಿಯನ್ನು ವಿವಕ್ಷಿಮಾಡುವುದಾದರೆ ಆ ಆ ಕಾರಣ ವಸ್ತುಗಳಲ್ಲಿರುವ ಶಕ್ತಿವಿಶೇಷವೇ ನಿಯತಿಯೆನಿಸಿಕೊಳ್ಳುವುದಲ್ಲದೆ ತತ್ತ್ವಾಂತರವಲ್ಲ.

ಅಹಿರ್ಬುಧ್ನ್ಯಸಂಹಿತೆ ಮೊದಲಾದ ಪಾಂಚರಾತ್ರಗ್ರಂಥಗಳಲ್ಲಿಯೂ ತತ್ತ್ವಗಳ ಗಣನಾಪ್ರಸಕ್ತಿಯಲ್ಲಿ ನಿಯತಿಯನ್ನು ಗಣನೆ ಮಾಡಿರುವುದಕ್ಕೆ ಆ ಆ ಪದಾರ್ಥಗಳ ಶಕ್ತಿವಿಶೇಷಗಳನ್ನೇ ನಿಯತಿಯೆಂಬ ಶಬ್ದದಿಂದ ತೋರಿಸುವುದರಲ್ಲಿಯೇ ಅಭಿಪ್ರಾಯವಲ್ಲದೆ ತತ್ತ್ವಾಂತರವುಂಟೆಂದು ತೋರಿಸುವುದರಲ್ಲಿ ಅಭಿಪ್ರಾಯವಿಲ್ಲ.

## ೨೦೬ ಕಾಲಸ್ಯ ನಿತ್ಯತ್ವಸಮರ್ಥನಂ.

ಕಾಲವೆಂಬ ತತ್ತ್ವವು ಮಾಯಾತತ್ತ್ವದಿಂದ ಸೃಷ್ಟಿಸಲ್ಪಡುವುದೆಂದು ಹೇಳುವರು. ಇದು ಅನಾದಿರ್ಭಗವಾನ್ ಕಾಲೋ ನಾಂತೋಽಸ್ಯ ದ್ವಿಜ ವಿದ್ಯತೇ ಎಂಬ ಪರಾಶರವಚನದಿಂದ ಕಾಲವು ಅನಾದಿಯೆಂದೂ ಇದಕ್ಕೆ ಸೃಷ್ಟಿಪ್ರಳಯಗಳೇ ಇಲ್ಲವೆಂದೂ ಸ್ಪಷ್ಟವಾಗಿ ತಿಳಿದುಬರುವ ಕಾರಣ ಆಗಮದಿಂದ ಬಾಧಿಸಲ್ಪಡುವುದು.

ಮತ್ತು ಕಾಲತತ್ತ್ವಕ್ಕೆ ಸೃಷ್ಟಿಪ್ರಳಯಗಳನ್ನು ಒಪ್ಪಿಕೊಳ್ಳಲಾಗುವುದಿಲ್ಲ. ಹೇಗೆಂದರೆ—ಪ್ರಪಂಚಕ್ಕೆ ಪ್ರಳಯವಾದ ಅನಂತರದಲ್ಲಿಯೂ ಅದೇ ಪ್ರಪಂಚಕ್ಕೆ ಪುನಃ ಸೃಷ್ಟಿಯಾಗುವುದಕ್ಕೆ ಪೂರ್ವದಲ್ಲಿಯೂ ಕಾಲವೆಂಬ ಪದಾರ್ಥ ಇರುವುದೋ? ಇಲ್ಲವೋ? ಇರುವುದೆಂಬಪಕ್ಷದಲ್ಲಿ ಪ್ರಪಂಚಸೃಷ್ಟಿಯ ಜತೆಯಲ್ಲಿ ಕಾಲವನ್ನು ಸೃಷ್ಟಿಸಬೇಕಾದ ಆವಶ್ಯಕತೆಯಿಲ್ಲ. ಸ್ಥೂಲರೂಪದಲ್ಲಿಲ್ಲದ ವಸ್ತುವನ್ನಲ್ಲವೆ ಸೃಷ್ಟಿಸಬೇಕು; ಎಂದರೆ ಸ್ಥೂಲರೂಪಕ್ಕೆ ತರಬೇಕು ಕಾಲವಿಲ್ಲವೆಂಬಪಕ್ಷದಲ್ಲಿ ಪ್ರಳಯವಾದ ಅನಂತರದಲ್ಲಿಯೂ ಸೃಷ್ಟಿಯಾಗುವುದಕ್ಕೆ ಪೂರ್ವದಲ್ಲಿಯೂ ಎಂಬ ವಾಕ್ಯಗಳಲ್ಲಿರುವ ಅನಂತರದಲ್ಲಿಯೂ, ಪೂರ್ವದಲ್ಲಿಯೂ ಎಂಬ ಪದಗಳಿಗೆ ಅರ್ಥವಿಲ್ಲದಂತಾಗಿ ಯಾವಾಗ ಕಾಲವಿರಲಿಲ್ಲವೋ ಯಾವಾಗ ಅದನ್ನು ಸೃಷ್ಟಿಸಿದನೋ ಎಂಬ ಅಂಶವನ್ನೇ ಹೇಳಲಾಗವುದಿಲ್ಲ. ಆ ಪದಗಳಿಗೆ ಅರ್ಥವಿರುವಪಕ್ಷದಲ್ಲಿ ಅದೇ ಕಾಲವಾದುಗರಿಂದ ಅದನ್ನೇ ಪ್ರತಿಷೇಧಮಾಡಲು ಸಾಧ್ಯವಿಲ್ಲ.

ಇದು ಹಾಗಿರಲಿ—ಅವರೂ ಭೂತಕಾಲದಲ್ಲಿಯೂ ಭವಿಷ್ಯತ್ಕಾಲದಲ್ಲಿಯೂ ನಾವು ಕಾಲವನ್ನು ನಿಷೇಧಮಾಡುವುದಿಲ್ಲ. ಪುತ್ತೇನೆಂದರೆ—ಭೂತದೇಶದಲ್ಲಿಯೂ ಭವಿಷ್ಯದ್ದೇಶದಲ್ಲಿಯೂ ಕಾಲವನ್ನು ನಿಷೇಧಮಾಡುತ್ತೇವೆ ಎಂದು ಹೇಳುವುದಾದರೆ ಅದೂ

ಸಮಂಜಸವಲ್ಲ. ದೇಶವು ಭೂತವೆಂದಾಗಲಿ ಭವಿಷ್ಯತ್ತು ಎಂದಾಗಲಿ ಎನ್ನಿಸಿಕೊಳ್ಳ ಬೇಕಾದರೂ ಅದಕ್ಕೆ ಕಾಲಸಂಬಂಧವಿದ್ದೇ ಇರಬೇಕಲ್ಲದೆ ಅದಿಲ್ಲದೆ ಭೂತವೆಂಬ ದೇಶವೂ ಭವಿಷ್ಯತ್ತೆಂಬ ದೇಶವೂ ಅಪ್ರಸಿದ್ಧವಾಗಿರುವುವು.

### ೨೦೭ ನಿತ್ಯವಿಭೂತಾವಪಿ ಕಾಲಸದ್ಭಾವಃ.

ಶುದ್ಧಸತ್ತ್ವವೆಂಬ ನಿತ್ಯವಿಭೂತಿಯಲ್ಲಿಯೂ ಕಾಲವು ಸಕಲಪದಾರ್ಥಗಳಿಗೂ ಅಧೀನವಾಗಿರುವುದಲ್ಲದೆ ಸಕಲಪದಾರ್ಥಗಳೂ ಕಾಲಕ್ಕೆ ಅಧೀನವಾಗಿಲ್ಲವೆಂಬ ಇಷ್ಟು ಮಾತ್ರವಲ್ಲದೆ ಕಾಲವೇ ಇಲ್ಲವೆಂಬುದಿಲ್ಲ. ಕಾಲಂ ಸ ಪಚತೇ ತತ್ರ ನ ಕಾಲ ಸ್ತತ್ರ ವೈ ಪ್ರಭುಃ. ಕಲಾಮುಹೂರ್ತಾದಿಮಯಶ್ಚ ಕಾಲೋ ನ ಯದ್ವಿ ಭೂತೇಃ ಪರಿಣಾಮಹೇತುಃ ಇತ್ಯಾದಿಪ್ರಮಾಣಗಳಿಂದ ಇದನ್ನು ತಿಳಿಯಬಹುದು. ಹಾಗಿಲ್ಲದೆ ನಿತ್ಯವಿಭೂತಿಯಲ್ಲಿ ಕಾಲವೇ ಇಲ್ಲವೆನ್ನುವುದಾದರೆ ಸದಾ ಪಶ್ಯಂತಿ ಸೂರಯಃ ಇತ್ಯಾದಿಪ್ರಮಾಣಗಳ ಗತಿ ಏನಾಗಬೇಕು ?

### ೨೦೮ ಕಾಲಸ್ಯ ಸ್ವವ್ಯತಿರಿಕ್ತನಿಖಿಲವಸ್ತುಪರಿಣಾಮಂ ಪ್ರತಿ ನಿಮಿತ್ತತ್ವಂ ಸ್ವಪರಿಣಾಮಂ ಪ್ರತಿ ಉಪಾದಾನತ್ವಂ ಚ.

ಇಂಥ ಕಾಲವು ಆ ಆ ಕಾರ್ಯಕ್ಕೆ ಸಹಕಾರಿಯಾಗಿರುವುದೆಂಬುದನ್ನು ಅನ್ವಯ ವ್ಯತಿರೇಕವೆಂಬ ಲೋಕಪ್ರಮಾಣದಿಂದಲೂ, ಆಗಮವೆಂಬ ಶಾಸ್ತ್ರಪ್ರಮಾಣದಿಂ ದಲೂ ಒಪ್ಪಿಕೊಳ್ಳಬೇಕು. ಅನ್ವಯವ್ಯತಿರೇಕವೆಂದರೆ—ವಸಂತಕಾಲ ಬಂದರೇನೇ ಮಾವಿನಮರದಲ್ಲಿ ಚಿಗುರು, ಎಲೆ, ಹೂ, ಕಾಯಿ, ಹಣ್ಣು ಇವುಗಳುಂಟಾಗುವು ವೆಂದೂ ವಸಂತಕಾಲವಿಲ್ಲದಿದ್ದರೆ ಇಲ್ಲವೆಂದೂ ಇರುವ ಇಂಥ ನಿಯಮವು.

ಸೂರ್ಯಪರಿಸ್ಪಂದರೂಪವಾದ ಉಪಾಧಿಯೊಡನೆ ಕೂಡಿದ ಆ ಆ ಕಾಲವು ಆ ಆ ಕಾರ್ಯಕ್ಕೆ ನಿಮಿತ್ತಕಾರಣವಾಗಿರುವುದು ; ಕ್ಷಣ, ಲವ, ದಿನ, ಪಕ್ಷ, ಮಾಸ, ಋತು, ಅಯನ, ಸಂವತ್ಸರ ಮೊದಲಾದ ತನ್ನ ಅವಸ್ಥೆಗಳನ್ನು ಕುರಿತು ಉಪಾದಾನ ಕಾರಣವಾಗಿಯೇ ಇರುವುದು.

### ೨೦೯ ದ್ವಯೋರಪಿ ಖಂಡಮಹಾಕಾಲಯೋಃ ವ್ಯಾಪಕತ್ವಂ.

ಮಹಾಕಾಲವಾದರೆ ಹೇಗೆ ಸರ್ವಲೋಕದಲ್ಲಿಯೂ ಇರುವ ಸಕಲಪದಾರ್ಥ ಗಳಿಗೂ ವಿಶೇಷಣವಾಗಿರುವುದರಿಂದ ವ್ಯಾಪಕವೆನಿಸಿಕೊಂಡಿದೆಯೋ ಹಾಗೆಯೇ ಖಂಡ ಕಾಲವಾದ ಕ್ಷಣ, ಲವ, ದಿನ, ಪಕ್ಷ, ಮಾಸ, ಋತು, ಆಯನ, ಸಂವತ್ಸರ ಇವುಗಳೂ ಸರ್ವಲೋಕದ ಸಮಸ್ತಪದಾರ್ಥಗಳಿಗೂ ವಿಶೇಷಣವಾಗಿರುವುದರಿಂದ ಇವುಗಳಿಗೂ ವ್ಯಾಪಕತ್ವವು (ಸರ್ವಸಂಬಂಧಿತ್ವವು) ಸ್ವಾಭಾವಿಕವಾಗಿರುವುದು.

ಈಕ್ಷಣದಲ್ಲಿ ಸಮಸ್ತಪ್ರಪಂಚವೂ ಇರುವುದು, ಈ ಸಂವತ್ಸರದಲ್ಲಿ ಸಮಸ್ತಪ್ರಪಂಚವೂ ಇರುವುದು ಎಂಬ ವ್ಯವಹಾರವು ಅಬಾಧಿತವಾಗಿರುವುದರಿಂದ ಕ್ಷಣಾದಿಗಳೂ ಸಮಸ್ತಪದಾರ್ಥಗಳಿಗೂ ವಿಶೇಷಣಗಳಾಗಿಯೇ ಇರುವುವೆಂಬುದು ಸರ್ವಾನುಭವಸಿದ್ಧವಷ್ಟೆ.

### ೨೧೦ ಕಾಲಸ್ಯ ಕ್ಷಣಲವಾದಿರೂಪೇಣ ಪರಿಣಾಮೇ ಪ್ರಮಾಣಪ್ರದರ್ಶನಂ.

ಇಂಥ ಕಾಲವು ಕ್ಷಣಲವಾದಿರೂಪವಾಗಿ ವಿಕಾರವನ್ನು ಹೊಂದುವುದೆಂಬ ಅಂಶವನ್ನು ಸರ್ವೇ ನಿಮೇಷಾ ಜಜ್ಞಿರೇ ವಿದ್ಯುತಃ ಪುರುಷಾದಧಿ, ಕಲಾಮುಹೂರ್ತಾಃ ಕಾಷ್ಠಾಶ್ಚಾಹೋರಾತ್ರಾಶ್ಚ ಸರ್ವಶಃ ಇವೇ ಮೊದಲಾದ ಶ್ರುತಿಗಳಿಂದಲೂ, ಕಾಲಂ ಸ ಪಚತೇ, ಕಲಾಮುಹೂರ್ತಾದಿಮಯಶ್ಚ ಕಾಲಃ ಇವೇ ಮೊದಲಾದ ಸ್ಮೃತಿಗಳಿಂದಲೂ ತಿಳಿಯಬಹುದು.

### ೨೧೧ ಕಾಲಸ್ಯ ಸವಿಕಾರತ್ವಸಮರ್ಥನಂ.

ಮೃತ್ಪಿಂಡವು ಘಟಾದಿರೂಪವಾಗಿ ವಿಕಾರವನ್ನು ಹೊಂದುತ್ತದೆ ಎಂದರೆ— ಇದು ನಮ್ಮ ಅನುಭವಕ್ಕೆ ಬರುತ್ತದೆ. ಕಾಲವು ಕ್ಷಣಲವಾದಿರೂಪವಾಗಿ ವಿಕಾರವನ್ನು ಹೊಂದುತ್ತದೆ ಎಂದರೆ ಇದು ನಮ್ಮ ಅನುಭವಕ್ಕೆ ಬರುವುದಿಲ್ಲ; ಇದಕ್ಕೆ ಕಾರಣವೇನು ? ವಿಕಾರಶಬ್ದದ ನಿಜವಾದ ಅರ್ಥಸ್ವರೂಪವನ್ನು ಪರಿಶೀಲನೆಮಾಡಿ ತಿಳಿದುಕೊಳ್ಳದಿರುವಿಕೆಯೇ ಇದಕ್ಕೆ ಕಾರಣವಾಗಿರುವುದು. ಮೃತ್ಪಿಂಡದಲ್ಲಿ ಕೆಲವು ಅವಯವಗಳ ಪರಿವರ್ತನೆಯಿಂದ ಘಟಾಕಾರವಾದ ವಿಕಾರವುಂಟಾದುದನ್ನು ಲೋಕದವರು ಶೀಘ್ರವಾಗಿ ತಿಳಿದುಕೊಂಡು ಕಾಲದಲ್ಲಿ ಅವಯವಗಳೇ ಇಲ್ಲವಾದುದರಿಂದ ಅವಯವಪರಿವರ್ತನೆಯೆಂಬ ವಿಕಾರಕ್ಕೆ ಅವಕಾಶವಿಲ್ಲವಾಗಿ ಕಾಲಕ್ಕೆ ವಿಕಾರವೆಂದರೇನು ? ಎಂದು ಸಂದೇಹಪಡುವರು. ವಿಕಾರವುಂಟಾಗುವುದಕ್ಕೆ ಪದಾರ್ಥವು ಸಾವಯವವಾಗಿಯೇ ಇರಬೇಕೆಂಬ ನಿರ್ಬಂಧವಿಲ್ಲ. ನಿರವಯವವಾದ ಪದಾರ್ಥದಲ್ಲಿಯೂ ವಿಕಾರವುಂಟಾಗುವುದು. ಹೀಗೆ ಒಪ್ಪಿಕೊಂಡರಲ್ಲವೆ ಚಿದಚಿದ್ವಿಶಿಷ್ಟನಾದ ಈಶ್ವರನಲ್ಲಿಯೂ ವಿಕಾರವುಂಟೆಂಬ ವೈದಿಕಸಿದ್ಧಾಂತವು ಜೀವಿಸುವುದು.

### ೨೧೨ ಸಾವಯವನಿರವಯವರೂಪಸರ್ವದ್ರವ್ಯಸಾಧಾರಣವಿಕಾರ ಲಕ್ಷಣಂ.

ಹಾಗಾದರೆ—ಸಾವಯವ, ನಿರವಯವ ಎಂಬ ಭೇದವನ್ನಿಡದೆ ಸಕಲದ್ರವ್ಯಗಳಲ್ಲಿಯೂ ಉಂಟಾಗಬಹುದಾದ ವಿಕಾರವೆಂಬುದು ಯಾವುದು? ನಾಮಾಂತರಪ್ರಾಪ್ತಿ-

ಯೋಗ್ಯವಾದ ಜನ್ಯಧರ್ಮವನ್ನು ಪಡೆವಿಕೆಯೇ ವಿಕಾರವೆನಿಸಿಕೊಳ್ಳುವುದು. ಮೃತ್ಪಿಂಡವು ತನ್ನಲ್ಲಿ ಘಟತ್ವವೆಂಬ ಜನ್ಯಧರ್ಮವನ್ನು ಪಡೆಯದಿದ್ದಪಕ್ಷದಲ್ಲಿ ಘಟವೆಂಬ ನಾಮಾಂತರವನ್ನು ಪಡೆಯುತ್ತಿರಲಿಲ್ಲ. ಆದಕಾರಣ ಮೃತ್ಪಿಂಡಕ್ಕೆ ಘಟತ್ವಾವಸ್ಥಾ ಪ್ರಾಪ್ತಿ ನಾಮಾಂತರಪ್ರಾಪ್ತಿಗೆ ಅರ್ಹವಾದುದರಿಂದ ಇದೇ ವಿಕಾರವೆನಿಸಿಕೊಳ್ಳುವುದು

ಇದರಂತೆಯೇ ಕಾಲವೆಂಬುದು ಕ್ಷಣತ್ವ, ದಿನತ್ವ ಮೊದಲಾದ ಜನ್ಯಧರ್ಮವನ್ನು ಪಡೆಯದಿದ್ದಪಕ್ಷದಲ್ಲಿ ಕ್ಷಣ, ದಿನ ಮೊದಲಾದ ನಾಮಾಂತರವನ್ನು ಪಡೆಯುತ್ತಿರಲಿಲ್ಲ. ಆದಕಾರಣ ಅಂಥ ನಾಮಾಂತರಪ್ರಾಪ್ತಿಗೆ ಯೋಗ್ಯವಾಗಿ ಜನ್ಯಧರ್ಮವೆನಿಸಿಕೊಂಡ ಕ್ಷಣತ್ವ, ದಿನತ್ವ ಮೊದಲಾದ ಅವಸ್ಥೆ ಕಾಲದ ವಿಕಾರವೆನಿಸಿಕೊಳ್ಳುವುದು.

೨೧೩ ವಿಭುದ್ರವ್ಯೇಷ್ವಪಿ ವಿಕಾರಾವಶ್ಯಂಭಾವಃ.

ಇದರಂತೆಯೇ ನಿರವಯವನಾದ ಆತ್ಮನಲ್ಲಿಯೂ ಈಶ್ವರನಲ್ಲಿಯೂ ತಿಳಿಯಬೇಕು. ಇದರಿಂದ ವಿಭುಪದಾರ್ಥಗಳಲ್ಲಿ ವಿಕಾರವು ಸಂಭವಿಸುವುದಿಲ್ಲವೆಂಬ ಭ್ರಾಂತಿಯೂ ನಷ್ಟವಾಯಿತು. ಅವಯವಪರಿವರ್ತನವೆಂಬ ವಿಕಾರವು ಅವುಗಳಲ್ಲಿ ಸಂಭವಿಸದಿದ್ದರೂ ಅವಸ್ಥಾಂತರಪ್ರಾಪ್ತಿಯೆಂಬ ವಿಕಾರವು ಅವುಗಳಲ್ಲಿ ಸಂಭವಿಸಲು ತಡೆಯಿಲ್ಲ. ಇಂಥ ವಿಕಾರವೂ ಅವುಗಳಲ್ಲಿ ಸಂಭವಿಸುವುದಿಲ್ಲವೆಂಬ ದುರಾಗ್ರಹವನ್ನು ವಹಿಸುವುದಾದರೆ ಅವುಗಳು ತಮ್ಮ ವಿಭುತ್ವವನ್ನೇ ಕಳೆದುಕೊಳ್ಳಬೇಕಾಗುವುದು. ವಿಭುತ್ವವೆಂದರೆ—ಸಕಲವಾದ ಮೂರ್ತಪದಾರ್ಥಗಳೊಡನೆಯೂ ಸಂಯೋಗವನ್ನು ಪಡೆದಿರುವಿಕೆ. ಇಲ್ಲಿ ಸಂಯೋಗವೆಂಬುದೂ ಒಂದು ಅವಸ್ಥೆಯಾಗಿ ವಿಕಾರವೆನಿಸಿಕೊಂಡಿರುವುದರಿಂದ ಅಂಥ ವಿಕಾರವೂ ವಿಭುವಿನಲ್ಲಿ ಇಲ್ಲದ ಪಕ್ಷದಲ್ಲಿ ಅದರ ವಿಭುತ್ವವೇ ಎದ್ದುಹೋಗುವುದು. ಸಕಲಪದಾರ್ಥಸಂಯೋಗವಿದ್ದರಲ್ಲವೆ ವಿಭುವೆನಿಸಿಕೊಳ್ಳುವುದು.

ವಿಭುತ್ವ, ವಿಕಾರಿತ್ವ ಈ ಎರಡು ಧರ್ಮಗಳಿಗೂ ಪರಸ್ಪರವಿರೋಧವಿರುವುದರಿಂದ ಒಂದಿದ್ದರೆ ಮತ್ತೊಂದಿರುವುದಕ್ಕಿಲ್ಲವೆಂಬ ಈ ಸಂಕಟಕ್ಕಾಗಿ ವಿಕಾರಿತ್ವವನ್ನುಮಾತ್ರ ಒಪ್ಪಿಕೊಂಡು ವಿಭುತ್ವವನ್ನೇ ಬಿಟ್ಟು-ವಿಭುವಾದ ಪದಾರ್ಥವೇ ಇಲ್ಲವೆಂದು ಹೇಳುವುದಾದರೆ-ಹಿಂದೆ ಉದಾಹರಿಸಿದ ಶ್ರುತಿಸ್ಮೃತಿಗಳೆಂಬ ಪ್ರಬಲಪ್ರಮಾಣಗಳಿಂದ ಕಾಲದಲ್ಲಿ ವಿಕಾರಿತ್ವವು ಬೋಧಿಸಲ್ಪಟ್ಟಿರುವಕಾರಣ ಅದನ್ನು ಬಿಡುವುದಕ್ಕಿಲ್ಲವಾಗಿ ಕಾಲದಲ್ಲಿಯೂ ವಿಭುತ್ವವನ್ನೇ ಬಿಡಬೇಕಾಗಿ ಬರುವುದು.

ಅವಯವಪರಿವರ್ತನವೆಂಬ ವಿಕಾರವು ವಿಭುವಿನಲ್ಲಿ ಸಂಭವಿಸದಿದ್ದರೂ ಅವಸ್ಥಾಂತರಪ್ರಾಪ್ತಿಯೆಂಬ ವಿಕಾರವು ಸಂಭವಿಸಬಹುದಾದುದರಿಂದ ವಿಭುತ್ವಕ್ಕೂ

ವಿಕಾರಿತ್ವಕ್ಕೂ ಪರಸ್ಪರವಿರೋಧವೇ ಇಲ್ಲವೆಂದು ಹಿಂದೆಯೇ ತೋರಿಸಿರುವೆವು. ಆದ ಕಾರಣ ವಿಭುತ್ವವೂ ವಿಕಾರಿತ್ವವೂ ಕಾಲದಲ್ಲಿ ವಿರೋಧವಿಲ್ಲದೆ ಇರುವಂತೆ ಈಶ್ವರ ನಲ್ಲಿಯೂ ವಿರೋಧವಿಲ್ಲದೆ ಇರಬಹುದು.

**೨೧೪ ವಿಭುದ್ರವ್ಯೇಷ್ವಪಿ ಆಗಮಬಲಾತ್ ಕಾರಣತ್ವಾವಶ್ಯಂಭಾವಃ.**

"ಕಾರಣತ್ವವಿದ್ದರಲ್ಲವೆ ಜನ್ಯಧರ್ಮವನ್ನು ಪಡೆದಿರುವಿಕೆಯೆಂಬ ವಿಕಾರಿತ್ವ ವನ್ನು ಒಪ್ಪಿಕೊಳ್ಳಬೇಕು ? ವಿಭುಪದಾರ್ಥದಲ್ಲಿ ಕಾರಣತ್ವವನ್ನು ಬೋಧಿಸುವ ಪ್ರಮಾಣವೇ ಇಲ್ಲವಾದುದರಿಂದ ವಿಕಾರಿತ್ವವೂ ಇಲ್ಲ" ಎಂದು ಹೇಳುವುದಾದರೆ—

ಕಾರಣತ್ವವೇ ಇಲ್ಲವೆಂಬ ಮಾತಿಗೆ—ಲೋಕದಲ್ಲಿ ಎಲ್ಲಿಯೂ ಕಾರ್ಯ ಕಾರಣಭಾವಸಂಬಂಧವೇ ಇಲ್ಲ ಎಂದು ಅಭಿಪ್ರಾಯವೋ ? ಅಥವಾ ವಿಭು ಪದಾರ್ಥಗಳಲ್ಲಿ ಕಾರಣತ್ವವಿಲ್ಲ ಎಂದು ಅಭಿಪ್ರಾಯವೋ ?

ಪ್ರಥಮಪಕ್ಷದಲ್ಲಿ-ಪರರನ್ನು ಕುರಿತು ನಿಮ್ಮಿಂದ ಪ್ರಯೋಗಿಸಲ್ಪಟ್ಟ-ಲೋಕ ದಲ್ಲಿ ಎಲ್ಲಿಯೂ ಕಾರ್ಯಕಾರಣಭಾವಸಂಬಂಧವೇ ಇಲ್ಲ-ಎಂಬ ವಾಕ್ಯದಿಂದ ಪರರಿಗೆ ಜ್ಞಾನವುಂಟಾಗುವುದೋ ? ಇಲ್ಲವೋ ? ಉಂಟಾಗುವುದಾದರೆ ಆ ವಾಕ್ಯವು ಪರರ ಜ್ಞಾನೋತ್ಪತ್ತಿಗೆ ಕಾರಣವಾದುದರಿಂದ ಕಾರ್ಯಕಾರಣಭಾವವನ್ನು ಒಪ್ಪಿ ಕೊಂಡಂತಾಗುವುದು. ಆ ವಾಕ್ಯದಿಂದ ಪರರಿಗೆ ಜ್ಞಾನವುಂಟಾಗದಿದ್ದರೆ ವಾಕ್ಯೋ ಚ್ಚಾರಣೆಯೇ ವ್ಯರ್ಥವಾಗುವುದಾದಕಾರಣ ಅಂಥ ವಾಕ್ಯವು ಉಭಯಪಕ್ಷಗಳಲ್ಲಿಯೂ ವ್ಯಾಹತವಾಗುವುದು.

ಮತ್ತು ಲೋಕದಲ್ಲಿ ಕಾಣುತ್ತಿರುವ ಘಟ, ಪಟ ಮೊದಲಾದ ಕಾರ್ಯವರ್ಗಕ್ಕೆ ಪೂರ್ವೋತ್ತರಾವಧಿಗಳು ಉಂಟೋ ? ಇಲ್ಲವೋ ? ಅವಧಿಯುಂಟೆಂದು ಹೇಳುವು ದಾದರೆ ಯಾವ ಕಾಲದಿಂದ ಹಿಡಿದು ಯಾವ ಕಾಲದವರೆಗೆ ಘಟಾದಿಪದಾರ್ಥಗಳಿರು ವುವು ? ಎಂಬ ಪ್ರಶ್ನೆಗೆ-ಯಾವ ಪದಾರ್ಥವಿದ್ದಮೇಲೆ ಘಟವು ತಪ್ಪದೆ ಹುಟ್ಟಿ ತೋ, ಯಾವ ಪದಾರ್ಥವಿದ್ದಮೇಲೆ ತಪ್ಪದೆ ಘಟವು ನಾಶಹೊಂದು ವುದೋ ಆ ಎರಡು ಪದಾರ್ಥಗಳ ಮಧ್ಯಕಾಲದಲ್ಲಿ ಘಟಾದಿಕಾರ್ಯ ವರ್ಗವು ಇರುವುದು-ಎಂಬ ಉತ್ತರವನ್ನು ಹೇಳಬೇಕಾಗುವುದು. ಆಗ ಪೂರ್ವಾ ವಧಿ ಘಟದ ಉತ್ಪತ್ತಿಗೂ, ಉತ್ತರಾವಧಿ ಘಟದ ವಿನಾಶಕ್ಕೂ ಕಾರಣವಾದುದ ರಿಂದ ಕಾರ್ಯಕಾರಣಭಾವವನ್ನು ಒಪ್ಪಿದಂತಾಗುವುದು.

ಘಟಾದಿಕಾರ್ಯವರ್ಗಕ್ಕೆ ಪೂರ್ವೋತ್ತರಾವಧಿಯೇ ಇಲ್ಲವೆಂದು ಹೇಳುವುದಾದರೆ ಪೂರ್ವೋತ್ತರಾವಧಿಶೂನ್ಯನಾದ ಆತ್ಮನಂತೆ ಘಟಾದಿಪದಾರ್ಥವೂ ನಿತ್ಯವಾಗಿ ತೋರ

ಬೇಕಾಗುವುದು. ಅಥವಾ ಪೂರ್ವೋತ್ತರಾವಧಿಶೂನ್ಯವಾದ ಮೊಲದ ಕೊಂಬಿನಂತೆ ಯಾವಾಗಲೂ ತೋರದೆ ಇರಬೇಕಾಗುವುದು. ಆದಕಾರಣ ಕಾರಣತ್ವವೇ ಇಲ್ಲ ವೆಂಬ ಮಾತಿಗೆ-ಲೋಕದಲ್ಲಿ ಎಲ್ಲಿಯೂ ಕಾರ್ಯಕಾರಣಭಾವಸಂಬಂಧವೇ ಇಲ್ಲ-ಎಂಬ ಮೊದಲನೆಯ ಅಭಿಪ್ರಾಯವು ಯುಕ್ತವಾಗಲಿಲ್ಲ.

ವಿಭುಪದಾರ್ಥಗಳಲ್ಲಿ ಕಾರಣತ್ವವಿಲ್ಲ ಎಂಬ ಎರಡನೆಯ ಅಭಿಪ್ರಾಯ ವನ್ನು ಹೇಳುವುದಾದರೆ ಈ ಅಭಿಪ್ರಾಯಕ್ಕೆ ಪರ್ಯವಸಾನವೇನು? ಘಟಕ್ಕೆ ಕಾರಣ ವಾದ ಮೃತ್ಪಿಂಡ, ಕುಲಾಲ, ದಂಡಮುಂತಾದ ಸಾಮಗ್ರಿ ಇವು ಯಾವಾಗ ಒಟ್ಟಾಗಿ ಕೂಡುವುವೋ ಆಗ ಘಟದ ಉತ್ಪತ್ತಿಯುಂಟೆಂದೂ, ಯಾವಾಗ ಕೂಡಲಿಲ್ಲವೋ ಆಗ ಘಟದ ಉತ್ಪತ್ತಿಯಿಲ್ಲವೆಂದೂ; ಮತ್ತು ಯಾವ ಸ್ಥಳದಲ್ಲಿ ಕೂಡುವುವೋ ಆ ಸ್ಥಳದಲ್ಲಿ ಘಟದ ಉತ್ಪತ್ತಿಯುಂಟೆಂದೂ, ಯಾವ ಸ್ಥಳದಲ್ಲಿ ಕೂಡಲಿಲ್ಲವೋ ಆ ಸ್ಥಳದಲ್ಲಿ ಉತ್ಪತ್ತಿಯಿಲ್ಲವೆಂದೂ; ಲೋಕದಲ್ಲಿ ಪ್ರತ್ಯಕ್ಷವಾಗಿರುವುದು; ಆದಕಾರಣ ಕಾರಣಸಾಮಗ್ರಿಗೆ ಒಂದು ಕಾಲದಿಂದಲೂ ಒಂದು ದೇಶದಿಂದಲೂ ಪರಿಚ್ಛೇದವಿರುವುದ ರಿಂದ ಅದು ಇರುವ ಕಾಲವೊಂದೂ, ಅದು ಇಲ್ಲದಿರುವ ಕಾಲವೊಂದೂ, ಅದು ಇರುವ ದೇಶವೊಂದೂ, ಅದು ಇಲ್ಲದಿರುವ ದೇಶವೊಂದೂ, ಲೋಕ ದಲ್ಲಿ ಪ್ರಸಿದ್ಧವಾಗಿರುವುದರಿಂದ ಅದರ ಕಾರ್ಯವಾದ ಘಟವೂ ಒಂದು ಕಾಲ ಒಂದು ದೇಶಗಳಲ್ಲಿ ಇದ್ದು ಮತ್ತೊಂದುಕಾಲ ಮತ್ತೊಂದು ದೇಶ ಗಳಲ್ಲಿ ಇಲ್ಲದೆಯೂ ಇರಬಹುದು; ನಿತ್ಯವಾಗಿಯೂ ವಿಭುವಾಗಿಯೂ ಇರುವ ವಸ್ತುವಿನಲ್ಲಿ ಕಾರಣತ್ವವನ್ನು ಒಪ್ಪಿಕೊಳ್ಳುವುದಾದರೆ ನಿತ್ಯ ವಾದ ವಸ್ತು ಒಂದುಕಾಲದಲ್ಲಿ ಇದ್ದು ಮತ್ತೊಂದು ಕಾಲದಲ್ಲಿ ಇಲ್ಲ ವೆಂಬುದಿಲ್ಲದೆ ಯಾವಾಗಲೂ ಇರುವುದರಿಂದ ಕಾರ್ಯದ ಉತ್ಪತ್ತಿಯೂ ಯಾವಾಗಲೂ ಇದ್ದೇ ಇರಬೇಕಾಗುವುದು; ಮತ್ತು ವಿಭುವಸ್ತು ಒಂದು ಪ್ರದೇಶದಲ್ಲಿ ಇದ್ದು ಮತ್ತೊಂದು ಪ್ರದೇಶದಲ್ಲಿ ಇಲ್ಲವೆಂಬುದಿಲ್ಲದೆ ಸರ್ವ ಪ್ರದೇಶದಲ್ಲಿಯೂ ಇರುವುದರಿಂದ ಕಾರ್ಯದ ಉತ್ಪತ್ತಿಯೂ ಸರ್ವಪ್ರದೇ ಶದಲ್ಲಿಯೂ ಇರಬೇಕಾಗುವುದು; ಆದಕಾರಣ ವಿಭುಪದಾರ್ಥಗಳಲ್ಲಿ ಕಾರಣತ್ವವು ಸಂಭವಿಸುವುದಿಲ್ಲ—ಹೀಗಲ್ಲವೆ ಪರ್ಯವಸಾನವಾಗುವುದು ?

ಇದು ಸಮಂಜಸವಲ್ಲ; ಹಿಂದೆ ಹೇಳಿದ ಅನ್ವಯವ್ಯತಿರೇಕಗಳಿಲ್ಲದಿದ್ದರೂ ಆಗಮಪ್ರಮಾಣದಿಂದ ವಿಭುವಸ್ತುವಿನಲ್ಲಿ ಕಾರಣತ್ವವು ಸಂಭವಿಸಬಹುದಾದ

ಪ್ರಯುಕ್ತ ಕಾಲವು ವಿಭುವಾಗಿದ್ದರೂ ಕ್ಷಣ, ದಿನ ಮುಂತಾದ ತನ್ನ ವಿಕಾರಗಳನ್ನು ಕುರಿತು ಉಪಾದಾನಕಾರಣವಾಗಲು ತಡೆಯಿಲ್ಲ. ಈ ವಿಷಯದಲ್ಲಿ ಅನುಮಾನಪ್ರಮಾಣಗಳನ್ನು ಶಾಸ್ತ್ರಕಾರರು ತೋರಿಸಿದ್ದರೂ ಬಾಲಕರಿಗೆ ಅವು ಸುಲಭವಲ್ಲವಾದಕಾರಣ ಅವುಗಳನ್ನು ಇಲ್ಲಿ ಬರೆದು ತೋರಿಸಲಿಲ್ಲ.

೨೧೫ ಕಾಲಸ್ಯ ಷಡಿಂದ್ರಿಯವೇದ್ಯತ್ವಾತ್ ಪ್ರತ್ಯಕ್ಷತ್ವಂ.

ಇಂಥ ಕಾಲವು ಜ್ಞಾನೇಂದ್ರಿಯಗಳಾರಕ್ಕೂ ಗೋಚರವಾಗುವುದರಿಂದ ಇದನ್ನು ಪ್ರತ್ಯಕ್ಷವೆಂದೇ ಒಪ್ಪಿಕೊಳ್ಳಬೇಕು. ಷಡಿಂದ್ರಿಯಗಳಿಂದಲೂ ಆ ಆ ಪದಾರ್ಥಗಳನ್ನು ಗ್ರಹಿಸುವ ಕಾಲದಲ್ಲಿ ಅವುಗಳಿಗೆ ವಿಶೇಷಣವಾಗಿ ಕಾಲವನ್ನೂ ಗ್ರಹಿಸುತ್ತಿರುವೆವಷ್ಟೆ, ಆಗಮದಿಂದಲೂ ಕಾಲವೆಂಬುದು ಸಿದ್ಧಿಸುವುದಾದರೂ ಆಗಮವನ್ನು ತಿಳಿಯದ ಪಾಮರರೂ ಕಾಲದ ವಿಷಯವಾಗಿ ವ್ಯವಹಾರವನ್ನು ಅಬಾಧಿತವಾಗಿ ನಡೆಸುತ್ತಿರುವುದರಿಂದ ಕಾಲವು ಪ್ರತ್ಯಕ್ಷವಾಗಿಯೇ ಇರಬೇಕು. ಅಂತು ಯಾವಾಗಲೂ ಸಕಲಪದಾರ್ಥಗಳಿಗೂ ವಿಶೇಷಣವಾಗಿಯೇ ತೋರಿ ಸ್ವತಂತ್ರವಾಗಿ ತೋರದಿರುವುದರಿಂದ ತತ್ತ್ವಗಳನ್ನು ಗಣನೆಮಾಡುವ ಸಂದರ್ಭದಲ್ಲಿ ಇದನ್ನು ಪ್ರತ್ಯೇಕವಾಗಿ ಗಣನೆಮಾಡಲಿಲ್ಲ.

೨೧೬ ಸಿದ್ಧಾಂತೇ ತತ್ತ್ವಸಂಖ್ಯಾನೈವಿಧ್ಯವ್ಯವಸ್ಥಾ.

ಹೀಗೆ ಅವ್ಯಕ್ತವೊದಲುಗೊಂಡು ಪೃಥಿವಿಯವರೆಗೂ ತತ್ತ್ವಗಳನ್ನು ಗಣನೆಮಾಡಿ ಕಾಲವನ್ನುಬಿಟ್ಟರೆ ಜೀವನು ಇಪ್ಪತ್ತೈದನೆಯವನಾಗಿಯೂ, ಈಶ್ವರನು ಇಪ್ಪತ್ತಾರನೆಯವನಾಗಿಯೂ ಆಗುವನು. ಕಾಲವನ್ನೂ ಸೇರಿಸಿದರೆ ಇನ್ನೊಂದು ಸಂಖ್ಯೆಯೂ, ಅಕ್ಷರತತ್ತ್ವವನ್ನೂ ಸೇರಿಸಿದರೆ ಮತ್ತೊಂದು ಸಂಖ್ಯೆಯೂ, ತಮಸ್ಸನ್ನೂ ಸೇರಿಸಿದರೆ ಇನ್ನೂ ಒಂದು ಸಂಖ್ಯೆಯೂ ಹೆಚ್ಚುವುವು. ಇಂಥ ಪಕ್ಷಾಂತರಗಳನ್ನು ತಂ ಷಡ್ವಿಂಶಕಮಿತ್ಯಾಹುಸ್ಸಪ್ತವಿಂಶಮಥಾಪರೇ ಇತ್ಯಾದಿಶ್ರುತಿಯೇ ಸೂಚಿಸುವುದು.

೨೧೭ ಸತ್ತ್ವರಜಸ್ತಮಸಾಂ ನ ಪೃಥಕ್ತತ್ತ್ವತ್ವಂ.

ಸತ್ತ್ವರಜಸ್ತಮಸ್ಸುಗಳನ್ನೂ ಪ್ರತ್ಯೇಕವಾಗಿ ಲೆಕ್ಕಮಾಡಿ ತತ್ತ್ವಸಂಖ್ಯೆಯನ್ನು ಹೆಚ್ಚಿಸುವುದು ಯುಕ್ತವಲ್ಲ. ಇವುಗಳನ್ನು ಅದ್ರವ್ಯಗಳಲ್ಲಿ ಗಣನೆಮಾಡಿ ದ್ರವ್ಯತ್ವವೇ ಇವುಗಳಿಗಿಲ್ಲವೆಂಬುದನ್ನು ಮುಂದೆ ತೋರಿಸುವೆವು.

೨೧೮ ಪಂಚವಿಂಶಾತಿರಿಕ್ತತತ್ತ್ವನಿಷೇಧಕವಚನಾನಾಂ ತಾತ್ಪರ್ಯಾವಿಷ್ಕರಣಂ.

ಇಪ್ಪತ್ತೈದನೆಯ ತತ್ತ್ವವಾದ ಜೀವನಿಗಿಂತಲೂ ಬೇರೊಂದಾದ ಇಪ್ಪತ್ತಾರ

ನೆಯ ತತ್ತ್ವವಿಲ್ಲವೆಂದು ಹೇಳುತ್ತಿರುವ ಪ್ರಮಾಣವಚನಗಳ ವಾಸ್ತವಾಭಿಪ್ರಾಯ ವನ್ನು ಮಹಾಭಾರತದ ಮೋಕ್ಷಧರ್ಮಪ್ರಕರಣದಲ್ಲಿ ಶ್ರೀವೇದವ್ಯಾಸಮಹರ್ಷಿಗಳು ಸ್ಪಷ್ಟಪಡಿಸಿರುವರು—

ಅನ್ಯಶ್ಚ ರಾಜರ್ಷೇ ಸ ಪರಸ್ತಥಾಽನ್ಯಃ ಪಂಚವಿಂಶಕಃ ।
ತತ್ಸ್ಥತ್ವಾದನುಪಶ್ಯಂತಿ ಹ್ಯೇಕ ಏವೇತಿ ಸಾಧವಃ ॥

ಜೀವನು ಸುರನರತಿರ್ಯಕ್‌ಸ್ಥಾವರಗಳೆಂಬ ನಾಲ್ಕುಬಗೆಯಾದ ಶರೀರಗಳಿಗಿಂತಲೂ ಭಿನ್ನನಾಗಿ ವಿಲಕ್ಷಣನಾಗಿದ್ದರೂ ಆ ಆ ಶರೀರಗಳಲ್ಲಿ ಪ್ರವೇಶಿಸಿ ವಾಸಮಾಡುತ್ತಿರುವನೆಂಬ ಕಾರಣದಿಂದಲೇ ಆ ಆ ಶರೀರಗಳಿಗೆ ವಾಚಕಗಳಾದ ಶಬ್ದಗಳಿಂದ ಹೇಗೆ ಬೋಧಿಸಲ್ಪಡುವನೋ, ಹಾಗೆಯೇ ಈಶ್ವರನೂ ಚೇತನಾಚೇತನಗಳೆರಡಕ್ಕಿಂತಲೂ ಬೇರೊಬ್ಬನಾಗಿ ವಿಲಕ್ಷಣನಾಗಿದ್ದರೂ ಎಲ್ಲಾ ಚೇತನಾಚೇತನಗಳಲ್ಲಿಯೂ ಒಳಹೊಕ್ಕು ವಾಸಮಾಡುತ್ತಿರುವನೆಂಬ ಕಾರಣದಿಂದಲೇ ಆ ಆ ಚೇತನಾಚೇತನಗಳಿಗೆ ವಾಚಕಗಳಾದ ಶಬ್ದಗಳಿಂದ ಬೋಧಿಸಲ್ಪಡುವನು ; ಎಂದರೆ ಜೀವನನ್ನು ಮನುಷ್ಯ ಶಬ್ದದಿಂದ ವ್ಯವಹರಿಸುವುದಕ್ಕೆ ಮನುಷ್ಯಶರೀರದಲ್ಲಿ ಅವನು ವಾಸಮಾಡುವಿಕೆಯೇ ಕಾರಣವಾದಂತೆ ಈಶ್ವರನನ್ನೂ ಜೀವಶಬ್ದದಿಂದ ವ್ಯವಹರಿಸುವುದಕ್ಕೆ ಜೀವನಲ್ಲಿ ಈಶ್ವರನು ವಾಸಮಾಡುವಿಕೆಯೇ ಕಾರಣವಾಗಿರುವುದು. ಇದೇ ಅರ್ಥವನ್ನು ಅವಸ್ಥಿತೇರಿತಿ ಕಾಶಕೃತ್ಸ್ನಃ ಎಂಬ ವೇದಾಂತಸೂತ್ರದಲ್ಲಿಯೂ ವ್ಯಕ್ತವಾಗಿ ಹೇಳಿರುವರು.

## ೨೧೯ ಪದಾರ್ಥಾನಾಂ ಆನಂತ್ಯೇಽಪಿ ತತ್ತ್ವಾನಾಂ ಷಡ್ವಿಂಶತಿತ್ವೋಪಪತ್ತಿಃ.

ಪೃಥಿವಿಯಲ್ಲಿರುವ ಪದಾರ್ಥಗಳಿಗೆ ಲೆಕ್ಕವೇ ಇಲ್ಲದಿರುವಲ್ಲಿ ತತ್ತ್ವಗಳು ಇಪ್ಪತ್ತಾರೇ ಎಂದು ಕ್ಲ್ಪಪ್ತಪಡಿಸುವುದು ಹೇಗೆ ಎಂದು ಆಶಂಕಿಸಬಾರದು. ವ್ಯಷ್ಟಿಸೃಷ್ಟಿಯಲ್ಲಿರುವ ಆ ಪದಾರ್ಥಗಳೆಲ್ಲವೂ ಪೃಥಿವೀತತ್ತ್ವಕ್ಕೇ ಸೇರಿರುವುವಾದುದರಿಂದ ಪದಾರ್ಥಗಳು ಹೆಚ್ಚಿದಮಾತ್ರಕ್ಕೆ ತತ್ತ್ವಸಂಖ್ಯೆ ಹೆಚ್ಚುವುದಿಲ್ಲ.

## ೨೨೦ ತತ್ತ್ವಾನಾಂ ಸ್ವೈಕದೇಶೇನೈವ ಸ್ವಕಾರ್ಯಾರಂಭಕತ್ವಂ.

ಇಂಥ ತತ್ತ್ವಗಳು ತಮ್ಮತಮ್ಮ ಏಕದೇಶವಾದ ಒಂದೊಂದು ಭಾಗದಿಂದಲೇ ಉತ್ತರೋತ್ತರತತ್ತ್ವಗಳನ್ನು ಆರಂಭಿಸುವುವಲ್ಲದೆ ತಮ್ಮ ಸಂಪೂರ್ಣಭಾಗವನ್ನೂ ಉತ್ತರೋತ್ತರತತ್ತ್ವಾಕಾರವಾಗಿ ಪರಿಣಾಮಗೊಳಿಸುವುದಿಲ್ಲ. ಏತಕ್ಕೆಂದರೆ—ಕಾರಣ ತತ್ತ್ವವು ಕಾರ್ಯವನ್ನು ಆವರಿಸುತ್ತಲೂ, ಕಾರ್ಯದಲ್ಲಿ ಅನುವರ್ತಿಸುತ್ತಲೂ ಇರಬೇಕಲ್ಲವೆ? ಕಾರಣತತ್ತ್ವವು ಸಂಪೂರ್ಣವಾಗಿಯೇ ಕಾರ್ಯಾಕಾರವಾಗಿ ಪರಿಣಮಿಸುವ

ಪಕ್ಷದಲ್ಲಿ ಹೀಗೆಯೇ ಪೂರ್ವಪೂರ್ವತತ್ತ್ವಗಳೆಲ್ಲವೂ ಉತ್ತರೋತ್ತರತತ್ತ್ವಾಕಾರವಾಗಿ ಪರಿಣಮಿಸಿ ಕೊನೆಗೆ ಭೂಮಿಯೊಂದೇ ಉಳಿಯಬೇಕಾಗಿಯೂ, ಉಳಿದ ಭೂತಗಳೆಲ್ಲವೂ ಕಾಣದೆ ಹೋಗಬೇಕಾಗಿಯೂ, ಕಾರಣದಿಂದ ಕಾರ್ಯಕ್ಕೆ ಆವರಣವೂ ಕಾರ್ಯದಲ್ಲಿ ಕಾರಣಕ್ಕೆ ವ್ಯಾಪ್ತಿಯೂ ಇಲ್ಲದೆ ಹೋಗಬೇಕಾಗಿಯೂ ಬರುವುದು,

**೨೨೧ ತನ್ಮಾತ್ರಾಣಾಂ ತು ಏಕದೇಶತಃ ಕಾರ್ತ್ಸ್ನ್ಯೇನ ವಾ ಸ್ವಕಾರ್ಯಾರಂಭಕತ್ವಮಿತಿಪಕ್ಷದ್ವಯಂ.**

ಪಂಚತನ್ಮಾತ್ರೆಗಳಿಗೆಮಾತ್ರ ಆವಾರಕತ್ವವನ್ನೂ ಕಾರ್ಯವ್ಯಾಪ್ತಿಯನ್ನೂ ಹೇಳಿಲ್ಲವಾದುದರಿಂದ ಅವುಗಳು ನಿಶ್ಶೇಷವಾಗಿಯೇ ಆಕಾಶಾದಿಭೂತಗಳಾಗಿ ಪರಿಣಮಿಸುವುವೆಂದು ಕೆಲವರು ಹೇಳುವರು.

ಶರೀರವು ಚತುರ್ವಿಂಶತಿತತ್ತ್ವಮಯವೆಂದು ಶಾಸ್ತ್ರದಲ್ಲಿ ಉಕ್ತವಾಗಿರುವ ಕಾರಣ ಪಂಚತನ್ಮಾತ್ರೆಗಳಿಗೆ ನಿಶ್ಶೇಷಪರಿಣಾಮವಾಗುವ ಪಕ್ಷದಲ್ಲಿ ಐದುತತ್ತ್ವಗಳು ಕಡಮೆಯಾಗುವುದರಿಂದ ಶರೀರವು ಹತ್ತೊಂಬತ್ತು ತತ್ತ್ವಗಳೊಡನೆ ಕೂಡಿರುವಂಥದಾಗಬೇಕಲ್ಲದೆ ಚತುರ್ವಿಂಶತಿತತ್ತ್ವಾತ್ಮಕವಾಗಿರಲು ಅವಕಾಶವಿಲ್ಲದಂತಾಗುವುದು. ಆದಕಾರಣ ಪಂಚತನ್ಮಾತ್ರೆಗಳೂ ಇತರತತ್ತ್ವಗಳೂ ತಮ್ಮತಮ್ಮ ಏಕದೇಶದಿಂದಲೇ ಉತ್ತರೋತ್ತರಭೂತಗಳನ್ನು ಆರಂಭಿಸುತ್ತವೆ ಎಂದೇ ಒಪ್ಪಿಕೊಳ್ಳಬೇಕೆಂದು ಇನ್ನು ಕೆಲವರು ಹೇಳುವರು.

**೨೨೨ ಪಕ್ಷದ್ವಯಸ್ಯಾಪಿ ಪ್ರತ್ಯೇಕಂ ನಿರ್ವಾಹಕ್ರಮಃ.**

ಇಲ್ಲಿ ಮೊದಲನೆಯ ಪಕ್ಷದಲ್ಲಿ—ಶರೀರವು ಚತುರ್ವಿಂಶತಿತತ್ತ್ವಾತ್ಮಕವಾಗಿರುವುದೆಂಬ ಶಾಸ್ತ್ರವಚನಕ್ಕೆ ಪಂಚತನ್ಮಾತ್ರೆಗಳ ಕಾರ್ಯವಾದ ಶಬ್ದ, ಸ್ಪರ್ಶ, ರೂಪ, ರಸ, ಗಂಧ ಎಂಬ ಐದು ಗುಣಗಳನ್ನು ಸೇರಿಸಿ ಶರೀರವು ಚತುರ್ವಿಂಶತಿತತ್ತ್ವಾತ್ಮಕವಾಗಿರುವುದೆಂದು ನಿರ್ವಾಹಮಾಡಬೇಕು. ಅಥವಾ ಆ ವಚನಕ್ಕೆ ಇಪ್ಪತ್ತುನಾಲ್ಕೆಂಬ ಸಂಖ್ಯೆಯಲ್ಲಿ ಮುಖ್ಯತಾತ್ಪರ್ಯವಿಲ್ಲದೆ ಎಲ್ಲಾ ಅಚಿತ್ತತ್ತ್ವಗಳೂ ಶರೀರದಲ್ಲಿ ಸೇರಿರುವುವೆಂದು ಹೇಳುವುದರಲ್ಲಿಯೇ ಮುಖ್ಯತಾತ್ಪರ್ಯವೆಂದಾಗಲಿ ನಿರ್ವಾಹಮಾಡಬೇಕು.

ಎರಡನೆಯ ಪಕ್ಷದಲ್ಲಿ— "ಕೆಲವು ಉಪನಿಷತ್ತುಗಳಲ್ಲಿ ಕೆಲವು ತತ್ತ್ವಗಳ ಸೃಷ್ಟಿಗಳನ್ನು ಅವಿವಕ್ಷೆಯಿಂದ ಹೇಳದಿದ್ದಂತೆ ತನ್ಮಾತ್ರೆಗಳಿಗೂ ಆವಾರಕತ್ವವನ್ನೂ ಕಾರ್ಯವ್ಯಾಪ್ತಿಯನ್ನೂ ಅವಿವಕ್ಷೆಯಿಂದ ಹೇಳದಿರಬಹುದಾದಕಾರಣ ಏಕದೇಶಪರಿಣಾಮಕ್ಕೆ ತೊಂದರೆಯೇನೂ ಇಲ್ಲವಾಗಿ ಶರೀರವು ಚತುರ್ವಿಂಶತಿತತ್ತ್ವಾತ್ಮಕವೆಂದು

ಹೇಳುವ ವಚನಕ್ಕೆ ಮುಖ್ಯರೀತಿಯಾಗಿಯೇ ನಿರ್ವಾಹವು ಸಂಭವಿಸಬಹುದು'' ಎಂದು ನಿರ್ವಾಹಮಾಡಬೇಕು.

### ೨೨೩ ಅಥ ವ್ಯಷ್ಟಿಸೃಷ್ಟ್ಯುಪಯೋಗಿಪಂಚೀಕರಣಂ.

ಇಂಥ ತತ್ತ್ವಗಳನ್ನು ಈಶ್ವರನು ತನ್ನ ಸಂಕಲ್ಪದಿಂದ ಸೃಷ್ಟಿಸುವ ಕಾಲದಲ್ಲಿ ಪೂರ್ವಪೂರ್ವತತ್ತ್ವಗಳನ್ನು ತನಗೆ ಶರೀರಗಳನ್ನಾಗಿ ಪರಿಗ್ರಹಿಸಿ ಅವುಗಳಿಗೆ ಅಂತರ್ಯಾಮಿಯಾಗಿದ್ದು ಉತ್ತರೋತ್ತರತತ್ತ್ವಗಳನ್ನು ಸಮಷ್ಟಿರೂಪವಾಗಿ ಸೃಷ್ಟಿಸಿ ಅವುಗಳಿಗೆ ವ್ಯಷ್ಟಿನಾಮಗಳನ್ನೂ ವ್ಯಷ್ಟಿರೂಪಗಳನ್ನೂ ಉಂಟುಮಾಡಬೇಕೆಂದು ಸಂಕಲ್ಪಿಸಿ ಪಂಚೀಕರಣವನ್ನು ಮಾಡುವನು

### ೨೨೪ ಪಂಚೀಕರಣಸ್ಯ ಆವಶ್ಯಕತಾ.

ಗೋಡೆಯನ್ನು ಹಾಕುವುದಕ್ಕೆ ಉದ್ಯೋಗಿಸಿದ ಮನುಷ್ಯನು ಅದಕ್ಕೆ ಬೇಕಾಗಿರುವ ಮಣ್ಣು. ಕಲ್ಲು, ಮರಳು ಸುಣ್ಣ. ನೀರು ಇವುಗಳನ್ನು ಪ್ರತ್ಯೇಕವಾಗಿ ಸಿದ್ಧಪಡಿಸಿಕೊಂಡಮಾತ್ರಕ್ಕೆ ಗೋಡೆಯುಂಟಾಗಲಾರದು; ಅವುಗಳೊಳಗೆ ಯಾವ ಯಾವ ವಸ್ತುವಿನ ಎಷ್ಟೆಷ್ಟು ಭಾಗವು ಬೇಕಾಗಿರುವುದೋ ಆ ಆ ವಸ್ತುವಿನ ಅಷ್ಟಷ್ಟು ಭಾಗವನ್ನು ಒಂದಾಗಿ ಕೂಡಿಸಿ ನೀರುಸುರಿದು ಸಮರಸಪಡಿಸಿ ಇಷ್ಟುಮಾತ್ರವೇ ಅಲ್ಲದೆ ತನ್ನ ಜ್ಞಾನಶಕ್ತಿಯನ್ನೂ ಶಾರೀರಪ್ರವೃತ್ತಿಯನ್ನೂ ಅವುಗಳಲ್ಲಿ ಸಲ್ಲಿಸಿ ಅವುಗಳಿಂದ ಗೋಡೆಯೆಂಬ ಕಾರ್ಯವಸ್ತುವನ್ನು ಉಂಟುಮಾಡುತ್ತಾನೆ. ಅದರಂತೆ ಈಶ್ವರನೂ ಚೇತನರ ಹಿತಕ್ಕೋಸ್ಕರ ಬ್ರಹ್ಮಾಂಡಗಳನ್ನೂ, ಅವುಗಳ ಒಳಗಿರುವ ಪದಾರ್ಥಗಳನ್ನೂ ವ್ಯಷ್ಟಿರೂಪದಿಂದ ಸೃಷ್ಟಿಸಬೇಕೆಂದು ಸಂಕಲ್ಪಿಸಿ ಅದಕ್ಕೆ ಬೇಕಾಗಿರುವ ಪ್ರಕೃತಿ, ಮಹತ್, ಅಹಂಕಾರ ಮುಂತಾದ ತತ್ತ್ವಗಳನ್ನು ಪ್ರತ್ಯೇಕವಾಗಿ ಸಿದ್ಧಪಡಿಸಿಕೊಂಡು ಅವುಗಳಲ್ಲಿ ಪಂಚಭೂತಗಳೂ ಪ್ರತ್ಯೇಕಪ್ರತ್ಯೇಕವಾಗಿಯೇ (ಶುದ್ಧವಾಗಿಯೇ) ಇರುವ ಪಕ್ಷದಲ್ಲಿ ಬ್ರಹ್ಮಾಂಡಗಳೂ ಅವುಗಳ ಒಳಗಿನ ಪದಾರ್ಥಗಳೂ ಉಂಟಾಗಲಾರವಾದುದರಿಂದ ಕಾರ್ಯಕ್ಕೆ ಅನುಕೂಲಿಸುವಂತೆ ಅವುಗಳನ್ನು ಸಮರಸಪಡಿಸುವುದಕ್ಕಾಗಿ ಅವುಗಳಿಗೆ ಪಂಚೀಕರಣವನ್ನು ಮಾಡುವುದು ಅತ್ಯಾವಶ್ಯಕವಾಗಿರುವುದು.

### ೨೨೫ ಪಂಚೀಕರಣಸ್ವರೂಪಂ.

ಪಂಚೀಕರಣವೆಂದರೆ – ಪಂಚಭೂತಗಳನ್ನೂ ಪ್ರತ್ಯೇಕವಾಗಿ ಎರಡುಭಾಗ ಮಾಡಿ ಆ ಎರಡರಲ್ಲೊಂದನ್ನು ಪುನಃ ನಾಲ್ಕುಭಾಗಮಾಡಿ ಈ ನಾಲ್ಕುಭಾಗಗಳನ್ನೂ ತಮ್ಮತಮ್ಮ ಇನ್ನೊಂದು ಅರ್ಧವನ್ನು ಬಿಟ್ಟು ಉಳಿದ ನಾಲ್ಕುಭೂತಗಳ ನಾಲ್ಕು ಅರ್ಧಗಳಲ್ಲಿಯೂ ಒಂದೊಂದರಲ್ಲಿ ಒಂದೊಂದರಂತೆ ಸೇರಿಸುವಿಕೆ.

ಹೀಗೆ ಮಾಡುವುದರಿಂದ ಈಗ ನಮಗೆ ಕಾಣಬರುವ ಆಕಾಶದಲ್ಲಿ ತನ್ನದಾದ ಅರ್ಧಾಂಶವೂ, ಉಳಿದ ನಾಲ್ಕುಭೂತಗಳ ಎಂಟನೆಯ ಒಂದಂಶವೆಂಬ ನಾಲ್ಕು ಅಂಶಗಳು ಕೂಡಿ ಆದ ಇನ್ನೊಂದು ಅರ್ಧವೂ ಸೇರಿ ಪೂರ್ಣವಾದ ಒಂದು ಆಕಾಶವೆನಿಸಿಕೊಂಡಿರುವುದು. ಇದರಂತೆಯೇ ಉಳಿದ ಭೂತಗಳನ್ನೂ ತಿಳಿಯಬೇಕು. ಐದುಭೂತಗಳಲ್ಲಿಯೂ ಐದುಭೂತಗಳೂ ಮಿಶ್ರವಾಗಿದ್ದರೂ ಒಂದುಭೂತವನ್ನು ಮತ್ತೊಂದು ಭೂತದ ಶಬ್ದದಿಂದ ವ್ಯವಹರಿಸದಿರುವುದಕ್ಕೂ, ತನ್ನ ಹೆಸರಿನಿಂದಲೇ ವ್ಯವಹರಿಸುವುದಕ್ಕೂ, ತನ್ನಲ್ಲಿ ಇತರ ಭೂತಗಳ ಭಾಗವು ಕಡಮೆಯಾಗಿಯೂ ತನ್ನ ಭಾಗವು ಹೆಚ್ಚಾಗಿಯೂ ಇರುವಿಕೆಯೇ ಕಾರಣವಾಗಿರುವುದು

**೨೨೬ ಪಂಚೀಕರಣಾನಂತರಂ ಈಶ್ವರೇಣೈವ ಅಂಡಸೃಷ್ಟಿಃ ಬ್ರಹ್ಮಸೃಷ್ಟೀ ರುದ್ರಸೃಷ್ಟಿಶ್ಚ.**

ಹೀಗೆ ಪಂಚೀಕರಣವನ್ನು ಮಾಡಿದಮೇಲೆ ಸಕಲಜೀವವ್ಯಕ್ತಿಗೂ ಪ್ರತ್ಯೇಕವಾಗಿ ಸರ್ವೇಶ್ವರನು ಅಂತರ್ಯಾಮಿಯಾಗಿದ್ದು ಹೀಗೆ ತನ್ನಿಂದ ವ್ಯಾಪಿಸಲ್ಪಟ್ಟ ಜೀವರಾಶಿಗಳನ್ನು ಅವರವರ ಕರ್ಮಾನುಸಾರವಾಗಿ ಪ್ರಕೃತಿಪ್ರಾಕೃತವಸ್ತುಗಳಲ್ಲಿ ಪ್ರವೇಶಗೊಳಿಸಿ ಕರ್ಮಫಲಗಳನ್ನು ಅನುಭವಿಸುವಂತೆ ಮಾಡುವುದಕ್ಕೋಸ್ಕರ ಒಂದಕ್ಕೊಂದು ದಶಗುಣಿತವಾಗಿ ವೃದ್ಧಿಹೊಂದಿರುವ ೧. ಜಲತತ್ತ್ವ ೨. ತೇಜಸ್ತತ್ತ್ವ ೩. ವಾಯುತತ್ತ್ವ ೪. ಆಕಾಶತತ್ತ್ವ ೫. ಅಹಂಕಾರತತ್ತ್ವ ೬. ಮಹತ್ತತ್ತ್ವ ೭. ಅವ್ಯಕ್ತತತ್ತ್ವ ಎಂಬ ಏಳು ಆವರಣತತ್ತ್ವಗಳಿಂದ ಆವರಿಸಲ್ಪಟ್ಟು ಹೇಮಾಕಾರವಾಗಿ ಪರಿಣಾಮವನ್ನು ಹೊಂದಿರುವ ಭೂತರೂಪವಾದ ಬ್ರಹ್ಮಾಂಡವನ್ನು ಅದೇ ತತ್ತ್ವಗಳಿಂದ ಉಂಟುಮಾಡಿ, ಅಂಥ ಬ್ರಹ್ಮಾಂಡದ ಒಳಭಾಗದಲ್ಲಿ ೧. ಮನಸ್ಸು ೨. ಚಕ್ಷುಸ್ಸು ೩. ವಾಕ್ಕು ೪. ಶ್ರೋತ್ರ ೫. ನಾಸಿಕೆ ೬. ಅಂಡ ೭. ನಾಭಿಕಮಲ ಎಂಬ ತನ್ನ ಏಳುಸ್ಥಾನಗಳೊಳಗೆ ಯಾವುದಾದರೂ ಒಂದು ಸ್ಥಾನದಲ್ಲಿ—ಅಂಡಾಂತರ್ವರ್ತಿಗಳಾದ ಸಕಲಜೀವರಿಂದ ಕೂಡಲ್ಪಟ್ಟ ಶರೀರವುಳ್ಳ ಚತುರ್ಮುಖಬ್ರಹ್ಮದೇವನನ್ನು ತನ್ನ ಪ್ರಸಾದಗುಣದಿಂದಲೂ. ರುದ್ರನನ್ನು ಕ್ರೋಧಗುಣದಿಂದಲೂ ಸೃಷ್ಟಿಸುವನು. ಈ ವಿಷಯದಲ್ಲಿ ಶ್ರುತಿ, ಸ್ಮೃತಿ ಮುಂತಾದ ಪ್ರಮಾಣಗಳನ್ನು ಆಕರಗ್ರಂಥಗಳಿಂದಲೇ ತಿಳಿಯಬೇಕು.

**೨೨೭ ಸರ್ವೇಶ್ವರೇಣ ಬ್ರಹ್ಮರುದ್ರಯೋರಂತರ್ಯಾಮಿಭೂಯ ಸೃಷ್ಟಿಸಂಹಾರಪ್ರವರ್ತನಂ.**

ಅನಂತರದಲ್ಲಿ ಅಂಥ ಪರಮಾತ್ಮನು ತನ್ನಿಂದ ಸೃಷ್ಟಿಸಲ್ಪಟ್ಟ ಚತುರ್ಮುಖನಿಗೆ ಅಂತರ್ಯಾಮಿಯಾಗಿದ್ದು ಸಕಲವೇದಗಳನ್ನೂ ಅವನಿಗೆ ಉಪದೇಶಿಸಿ ವಿಚಿತ್ರಸೃಷ್ಟಿಗೆ

ತಕ್ಕಷ್ಟು ಜ್ಞಾನಶಕ್ತಿಗಳನ್ನೂ ಅವನಿಗೆ ಕೊಟ್ಟು ಆಗಾಗ ಅವನಿಗೆ ಬಂದೊದಗುವ ಸಕಲವಾದ ಆಪತ್ತುಗಳನ್ನೂ ತಾನೇ ಹೋಗಲಾಡಿಸಿ ಬ್ರಹ್ಮಾಂಡದ ಒಳಗೆ ಅಡಗಿರುವ ಹದಿನಾಲ್ಕು ಲೋಕಗಳನ್ನೂ, ಅವುಗಳಲ್ಲಿ ದೇವತಿರ್ಯಙ್ಮನುಷ್ಯಸ್ಥಾವರಗಳೆಂಬ ಚತುರ್ವಿಧವಾದ ಪ್ರಾಣಿವರ್ಗವನ್ನೂ, ಪೂರ್ವ, ಪಶ್ಚಿಮ ಮೊದಲಾದ ದಿಗ್ವಿಭಾಗಗಳನ್ನೂ, ಇವುಗಳೆಲ್ಲಕ್ಕೂ ನಾಮರೂಪಗಳನ್ನೂ, ಅವನ ಮೂಲಕವಾಗಿ ಮಾಡಿಸುವನು. ಮತ್ತು ಅವನಿಗೆ ಅಂತರ್ಯಾಮಿಯಾಗಿದ್ದು ತಾನೂ ಮಾಡುವನು. ಇದರಂತೆಯೇ ರುದ್ರನಿಗೆ ಅಂತರ್ಯಾಮಿಯಾಗಿದ್ದು ಸಕಲವೇದಗಳನ್ನೂ ವೇದಾರ್ಥಗಳನ್ನೂ ಅವನಿಗೆ ಉಪದೇಶಿಸಿ ಸಂಹಾರಕ್ಕೆ ತಕ್ಕಷ್ಟು ಜ್ಞಾನಶಕ್ತಿಗಳನ್ನು ಅವನಿಗೆ ಕೊಟ್ಟು ಆಗಾಗ ಅವನಿಗೆ ಬಂದೊದಗುವ ಸಕಲವಾದ ಆಪತ್ತುಗಳನ್ನೂ ತಾನೇ ಹೋಗಲಾಡಿಸಿ ಮೂರುಲೋಕಗಳ ಸಂಹಾರವನ್ನುಮಾತ್ರ ಅವನಿಂದ ಮಾಡಿಸುವನು. ಮತ್ತು ಅವನಿಗೆ ಅಂತರ್ಯಾಮಿಯಾಗಿದ್ದು ತಾನೂ ಮಾಡುವನು. ಪ್ರಾಕೃತಪ್ರಳಯವನ್ನಾದರೆ ತಾನೇ ಸ್ವತಂತ್ರನಾಗಿ ಸರ್ವೇಶ್ವರನು ನಡಸುವನು.

ನಿರೀಶ್ವರವಾದಿಗಳಾದ ಸಾಂಖ್ಯರ ಮತವನ್ನು ಅವಲಂಬಿಸಿ ಸ್ವತಂತ್ರವಾದ ಪ್ರಕೃತಿಯೇ ಪ್ರಪಂಚದ ಸೃಷ್ಟಿಸ್ಥಿತಿಸಂಹಾರಗಳಿಗೆ ಕಾರಣವೆಂದು ತಿಳಿದು ನಾರಾಯಣನಿಗೆ ಜಗತ್ಕಾರಣತ್ವವಿಲ್ಲವೆಂದು ಭ್ರಾಂತಿಪಡುವವರು ಆವರಾದರೂ ಇದ್ದರೆ ಅಂಥವರಿಗೂ, ಪರಮಾಣುಕಾರಣವಾದಿಗಳಾದ ಚಾರ್ವಾಕ-ಬೌದ್ಧ-ನೈಯಾಯಿಕ-ವೈಶೇಷಿಕರ ಮತವನ್ನು ಅವಲಂಬಿಸಿ ಪರಮಾಣುಗಳೇ ಜಗತ್ಕಾರಣವೆಂದು ತಿಳಿದು ಭ್ರಾಂತರಾಗುವವರು ಆವರಾದರೂ ಇದ್ದರೆ ಅಂಥವರಿಗೂ, ವಿಶೇಷಜ್ಞಾನವಿಲ್ಲದ ಪಾಮರಜನಗಳ ಪ್ರಸಿದ್ಧಿಮಾತ್ರವನ್ನು ಅವಲಂಬಿಸಿ ಸೃಷ್ಟಿಗೆ ಚತುರ್ಮುಖನೂ ಸಂಹಾರಕ್ಕೆ ರುದ್ರನೂ ಕಾರಣಭೂತರೆಂದು ತಿಳಿದು ನಾರಾಯಣನಿಗೆ ಸೃಷ್ಟಿಸಂಹಾರಕಾರಣತ್ವವಿಲ್ಲವೆಂದು ಭ್ರಾಂತಿಗೊಳ್ಳುವವರು ಆವರಾದರೂ ಇದ್ದರೆ ಅಂಥವರಿಗೂ,—

ಕೃಷ್ಣ ಏವ ಹಿ ಲೋಕಾನಾಮುತ್ಪತ್ತಿರಪಿಚಾಽಪ್ಯಯಃ ।
ಕೃಷ್ಣಸ್ಯ ಹಿ ಕೃತೇ ಭೂತಮಿದಂ ವಿಶ್ವಂ ಚರಾಽಚರಂ ॥

ಎಂದು ಜ್ಞಾನವೃದ್ಧರಾದ ಶ್ರೀಭೀಷ್ಮಾಚಾರ್ಯರು—ಸಭಾಪರ್ವದ ಮೂವತ್ತೆಂಟನೆಯ ಅಧ್ಯಾಯದಲ್ಲಿ ಉಪದೇಶಿಸಿದ ವಚನವೇ ಸಮಾಧಾನವನ್ನು ಹೇಳಿ ಭ್ರಾಂತಿಯನ್ನು ಹೋಗಲಾಡಿಸುವುದು.

ಉಕ್ತವಾದ ಈ ವಚನದಿಂದ ಕೃಷ್ಣನಿಗೆ ಜಗತ್ಕಾರಣತ್ವವು ತಿಳಿದುಬಂದರೂ ನಾರಾಯಣನಿಗೆ ಜಗತ್ಕಾರಣತ್ವವು ಇದರಿಂದ ತಿಳಿದುಬರುವುದಿಲ್ಲವೆಂದು ಆಶಂಕಿಸುವ

ಲೋಕವಿಲಕ್ಷಣರು ಅವರಾದರೂ ಇದ್ದರೆ ಅಂಥವರು "ವಿಷ್ಣುರ್ನಾರಾಯಣಃ ಕೃಷ್ಣಃ" ಎಂಬ ಅಮರಕೋಶದ ಸಾಧಾರಣವಚನವನ್ನೂ ತಿಳಿಯದವರೆನಿಸಿಕೊಂಡು ಪರಿಹಾಸ್ಯಕ್ಕೆ ಗುರಿಯಾಗುವರು. ಏತಕ್ಕೆಂದರೆ—ಈ ಶ್ಲೋಕದಲ್ಲಿರುವ 'ಹಿ' ಎಂಬ ಶಬ್ದವು "ಏಕೋ ಹ ವೈ ನಾರಾಯಣ ಆಸೀನ್ನ ಬ್ರಹ್ಮಾ ನೇಶಾನಃ" ಎಂಬ ಮಹೋಪನಿಷತ್ಪ್ರಸಿದ್ಧಿಯನ್ನು ತೋರಿಸುವುದರ ಮೂಲಕ ನಾರಾಯಣನನ್ನು ಸ್ಮರಣೆಗೆ ತರುವುದಷ್ಟೆ.

೨೨೮ ನೈಯಾಯಿಕಾಭಿಮತದಿಙ್ನಾಮಕತತ್ತ್ವಾಂತರನಿರಾಕರಣಂ.

ನೈಯಾಯಿಕರು ದಿಕ್ಕೆಂಬ ಒಂದು ತತ್ತ್ವಾಂತರವನ್ನು ಒಪ್ಪಿಕೊಂಡು ಅದಕ್ಕೆ ನಿತ್ಯತ್ವವನ್ನೂ ವಿಭುತ್ವವನ್ನೂ ಸ್ವೀಕರಿಸಿ ಅದು ಸೃಷ್ಟಿಸಂಹಾರಗಳಿಗೆ ಒಳಪಡುವುದಿಲ್ಲವೆಂದು ಹೇಳುವರು.

ಸೂರ್ಯನ ಉದಯಾಸ್ತಮಯಪ್ರದೇಶಗಳಿಗೆ ಸನ್ನಿಹಿತವಾದ ಆ ಆ ಪ್ರದೇಶಗಳ ಸಂಯೋಗದ ಹೆಚ್ಚುಕಡಮೆಯೇ ಪೂರ್ವ, ಪಶ್ಚಿಮ ಮುಂತಾದ ದಿಗ್ವ್ಯವಹಾರಕ್ಕೆ ಕಾರಣವಾಗಿ ನಿರ್ವಾಹವು ಸಂಭವಿಸುತ್ತಿರುವಲ್ಲಿ ಅತಿರಿಕ್ತವಾಗಿ ದಿಕ್ಕೆಂಬ ಒಂದು ತತ್ತ್ವಾಂತರವನ್ನು ಒಪ್ಪಿಕೊಳ್ಳಬೇಕಾದ ಆವಶ್ಯಕತೆಯಿಲ್ಲವೆಂಬುದು ವೇದಾಂತಿಗಳ ಸಿದ್ಧಾಂತವಾಗಿರುವುದು.

ಇಂಥ ಬ್ರಹ್ಮಾಂಡಗಳು ವಿರಾಡ್ರೂಪನಾದ ಸರ್ವೇಶ್ವರನ ದಿವ್ಯಶರೀರದಲ್ಲಿ ಅಸಂಖ್ಯಾತಗಳಾಗಿರುವುವೆಂಬುದನ್ನೂ, ಬ್ರಹ್ಮಾಂಡಗಳೊಳಗಿರುವ ಚತುರ್ದಶಭುವನಗಳ ಮರ್ಯಾದೆಗಳನ್ನೂ, ಅವುಗಳಲ್ಲಿ ಒಂದಕ್ಕೊಂದಕ್ಕೆ ಇರುವ ದೂರವ್ಯತ್ಯಾಸವನ್ನೂ ಅವುಗಳಲ್ಲಿರುವ ಸುಖದುಃಖಗಳ ತಾರತಮ್ಯವನ್ನೂ, ಇನ್ನೂ ಅವುಗಳಿಗೆ ಸಂಬಂಧಪಟ್ಟ ಇತರವಿಷಯಗಳನ್ನೂ, ಇತಿಹಾಸಗಳಲ್ಲಿಯೂ, ಪುರಾಣಗಳಲ್ಲಿಯೂ ಸ್ಪಷ್ಟವಾಗಿ ತಿಳಿದುಕೊಳ್ಳಬಹುದು.

ಅಂತು ಜೀವರುಗಳಿಗೆ ಅವರವರ ಕರ್ಮಫಲಗಳನ್ನು ಅನುಭವಪಡಿಸುವುದಕ್ಕೋಸ್ಕರ ಸೃಷ್ಟಿಸಿದ ಈ ಬ್ರಹ್ಮಾಂಡದಲ್ಲಿ ಸುರನರತಿರ್ಯಕ್‌ಸ್ಥಾವರಗಳೆಂಬ ನಾಲ್ಕು ಬಗೆಯ ಶರೀರಗಳಲ್ಲಿ ಯಾವುದಾದರೂ ಒಂದು ಶರೀರವನ್ನು ಆಗಾಗ ಪಡೆಯುತ್ತ ಜೀವರುಗಳು ತಮ್ಮ ತಮ್ಮ ಕರ್ಮಫಲವಾದ ಸುಖದುಃಖಗಳನ್ನು ಅನುಭವಿಸುತ್ತಿರುವರೆಂದು ಸಿದ್ಧವಾಯಿತು.

ಇಂತು ತತ್ತ್ವಶುದ್ಧಿಯೆಂಬ ವಿಶಿಷ್ಟಾದ್ವೈತಪ್ರಕರಣಗ್ರಂಥದೊಳ್
ಅಚಿತ್ತತ್ತ್ವಪರಿಚ್ಛೇದದಲ್ಲಿ ತತ್ತ್ವಾಂತರನಿರಾಕರಣ-ಕಾಲ
ತತ್ತ್ವನಿರೂಪಣ-ಪಂಚೀಕರಣನಿರೂಪಣಪ್ರಕರಣಂ ನವಮಂ.



# ದ ಶ ಮ ಪ್ರ ಕ ರ ಣ ಂ,

## ೨೨೯ ಅಥ ಶರೀರಲಕ್ಷಣವಿಚಾರಾರಂಭಃ.

ಶರೀರವೆಂದರೇನು ?— ಶರೀರದ ವಾಸ್ತವಾಕಾರವನ್ನು ತಿಳಿದುಕೊಳ್ಳುವುದಕ್ಕಾಗಿ ಶರೀರದ ಲಕ್ಷಣವನ್ನು ಮೊದಲು ತಿಳಿಯಬೇಕು. ಇದಕ್ಕೆ ನೈಯಾಯಿಕರೂ ವೈಶೇಷಿಕರೂ ಹೇಳಿರುವ ಮೂರು ಲಕ್ಷಣಗಳನ್ನೂ ಇಲ್ಲಿ ಮೊದಲು ತೋರಿಸಿ, ಅನಂತರದಲ್ಲಿ ಅವುಗಳಲ್ಲಿರುವ ದೋಷಗಳನ್ನು ವಿವರಿಸಿ, ಆದರಮೇಲೆ ಶ್ರೀಭಾಷ್ಯಕಾರರು ಅನುಗ್ರಹಿಸಿರುವ ಮೂರುಲಕ್ಷಣಗಳನ್ನೂ, ಅವರಿಗೆ ತಾತ್ಪರ್ಯವಿಷಯವಾದ ನಾಲ್ಕನೆಯದೊಂದು ಲಕ್ಷಣವನ್ನೂ, ಈ ನಾಲ್ಕುಲಕ್ಷಣಗಳಿಗಿಂತಲೂ ಅತ್ಯಂತಲಘುಭೂತವಾದ ಮತ್ತೊಂದು ಲಕ್ಷಣವನ್ನೂ, ಇಂಥ ಶರೀರಲಕ್ಷಣಗಳ ಪರಿಜ್ಞಾನದಿಂದ ಲಭಿಸುವ ಪ್ರಯೋಜನವನ್ನೂ, ಶರೀರವೆಂಬುದರ ಒಳವಿಭಾಗಗಳನ್ನೂ, ಈಶ್ವರವ್ಯತಿರಿಕ್ತವಾದ ಸಮಸ್ತದ್ರವ್ಯಗಳೂ ಈಶ್ವರನಿಗೆ ನಿರುಪಾಧಿಕಶರೀರಗಳಾಗಿಯೇ ಇರುವುವೆಂಬುದರಲ್ಲಿ ಪ್ರಮಾಣಗಳನ್ನೂ, ಇಲ್ಲಿ ಕ್ರಮವಾಗಿ ತೋರಿಸುವೆವು.

## ೨೩೦ ಶರೀರಸ್ಯ ನೈಯಾಯಿಕವೈಶೇಷಿಕಾಭಿಮತಂ ಲಕ್ಷಣತ್ರಯಂ.

ನ್ಯಾಯವೈಶೇಷಿಕದರ್ಶನಕಾರರು ಹೇಳುವ—ಪ್ರಥಮಲಕ್ಷಣಂ— ಅಂತ್ಯಾವಯವಿಯಾಗಿಯೂ ಚೇಷ್ಟೆಗೆ ಆಶ್ರಯವಾಗಿಯೂ ಇರುವುದು ಶರೀರವೆನಿಸಿಕೊಳ್ಳುವುದು. ಕೈ ಕಾಲು ಮೊದಲಾದ ಅವಯವಗಳನ್ನು ವ್ಯಾವರ್ತಿಸುವುದಕ್ಕಾಗಿ ಮೊದಲನೆಯ ದಳವೂ, ಘಟಾದಿಪದಾರ್ಥಗಳನ್ನು ವ್ಯಾವರ್ತಿಸುವುದಕ್ಕಾಗಿ ಎರಡನೆಯ ದಳವೂ ಉಕ್ತವಾಗಿರುವುವು.

ದ್ವಿತೀಯಲಕ್ಷಣಂ— ಅಂತ್ಯಾವಯವಿಯಾಗಿಯೂ ಇಂದ್ರಿಯಾಶ್ರಯವಾಗಿಯೂ ಇರುವುದು ಶರೀರವೆನಿಸಿಕೊಳ್ಳುವುದು. ಕಣ್ಣು-ಮೂಗು ಮುಂತಾದ ಒಂದೊಂದು ಅವಯವವನ್ನೂ ವ್ಯಾವರ್ತಿಸುವುದಕ್ಕಾಗಿ ಮೊದಲನೆಯ ದಳವೂ, ಘಟಾದಿಪದಾರ್ಥಗಳನ್ನು ವ್ಯಾವರ್ತಿಸುವುದಕ್ಕಾಗಿ ದ್ವಿತೀಯದಳವೂ ಉಕ್ತವಾಗಿರುವುವು.

ತೃತೀಯಲಕ್ಷಣಂ—ಅಂತ್ಯಾವಯವಿಯಾಗಿಯೂ ಭೋಗಾಯತನವಾಗಿಯೂ ಇರುವುದು ಶರೀರವೆನಿಸಿಕೊಳ್ಳುವುದು. ಹೃದಯ ಮೊದಲಾದ ಒಂದೊಂದು ಅವಯವವನ್ನೂ ವ್ಯಾವರ್ತಿಸುವುದಕ್ಕಾಗಿ ಮೊದಲನೆಯದಳವೂ, ಘಟಾದಿಪದಾರ್ಥಗಳನ್ನು ವ್ಯಾವರ್ತಿಸುವುದಕ್ಕಾಗಿ ಎರಡನೆಯದಳವೂ ಉಕ್ತವಾಗಿರುವುವು.

ಈ ಮೂರುಲಕ್ಷಣಗಳನ್ನೂ ಅಸ್ಮದಾದಿಗಳ ಶರೀರದಲ್ಲಿ ಸಮನ್ವಯಮಾಡಿಕೊಳ್ಳಬಹುದು. ನಮ್ಮ ಶರೀರವು ಕೈ ಕಾಲು ಮುಂತಾದ ಅನೇಕ ಅವಯವಗಳೊಡನೆ ಕೂಡಿ ಕೊನೆಯ ಅವಯವಿಯಾಗಿಯೂ, ಚಲನೆ ಮುಂತಾದ ಚೇಷ್ಟೆಗಳಿಗೆ ಆಶ್ರಯವಾಗಿಯೂ ಇರುವುದರಿಂದ ಪ್ರಥಮಲಕ್ಷಣವು ಸಂಗತವಾಗಿರುವುದು, ಹಾಗೆಯೇ ಇಂದ್ರಿಯಗಳಿಗೆ ಆಶ್ರಯವಾಗಿಯೂ ಸುಖದುಃಖಗಳ ಭೋಗಕ್ಕೆ ಸ್ಥಾನವಾಗಿಯೂ ಇರುವುದರಿಂದ ಎರಡನೆಯ ಮೂರನೆಯ ಲಕ್ಷಣಗಳಿಗೂ ಸಮನ್ವಯವನ್ನು ತಿಳಿಯಬಹುದು.

### ೨೩೧ ತತ್ರ ಪ್ರಥಮಲಕ್ಷಣದೂಷಣಂ.

(ಘಟಾದೌ ಅತಿವ್ಯಾಪ್ತಿಃ) ಭಾಷ್ಯಕಾರರ ಅಭಿಪ್ರಾಯದಿಂದ ಈ ಲಕ್ಷಣಗಳಲ್ಲಿರುವ ದೋಷಗಳೇನೆಂದರೆ-ಮೊದಲನೆಯ ಲಕ್ಷಣದಲ್ಲಿ ಚೇಷ್ಟಾಶಬ್ದದಿಂದ ಕ್ರಿಯಾಸಾಮಾನ್ಯವನ್ನು ವಿವಕ್ಷೆಮಾಡುವುದಾದರೆ--ಘಟಾದಿಗಳಲ್ಲಿಯೂ ಉತ್ಪತ್ತಿ-ಸ್ಥಿತಿ-ಪರಿಣಾಮ-ವೃದ್ಧಿ-ಅಪಕ್ಷಯ-ವಿನಾಶಗಳೆಂಬ ಕ್ರಿಯೆಗಳು ಇರುವುದರಿಂದ ಲಕ್ಷ್ಯವಲ್ಲದ ಘಟಾದಿಗಳಲ್ಲಿ ಈ ಲಕ್ಷಣಕ್ಕೆ ಅತಿವ್ಯಾಪ್ತಿದೋಷವುಂಟಾಗುವುದು.

(ಭೂಪರ್ವತಾದೌ ಅತಿವ್ಯಾಪ್ತಿಃ) ಪ್ರಯತ್ನವುಳ್ಳ ಆತ್ಮನ ಪ್ರೇರಣೆಯಿಂದ ಉಂಟಾಗುವ ಕ್ರಿಯೆಯನ್ನು ಚೇಷ್ಟಾಶಬ್ದದಿಂದ ವಿವಕ್ಷೆಮಾಡುವುದಾದರೆ-ಪ್ರಯತ್ನವುಳ್ಳ ಈಶ್ವರನೆಂಬ ಆತ್ಮನ ಪ್ರೇರಣೆಯಿಂದ ಉಂಟಾಗುವ ಭೂಕಂಪ-ಪರ್ವತಕಂಪ ಮುಂತಾದ ಕಂಪನಕ್ರಿಯೆಗೆ ಆಶ್ರಯವಾಗಿರುವ ಭೂಮಿ-ಪರ್ವತ ಮೊದಲಾದುವುಗಳಲ್ಲಿ ಲಕ್ಷಣಕ್ಕೆ ಅತಿವ್ಯಾಪ್ತಿದೋಷವುಂಟಾಗುವುದು. ಭೂಮಿ-ಪರ್ವತ-ಮೊದಲಾದುವುಗಳನ್ನು ಈಶ್ವರನಿಗೆ ಶರೀರಗಳೆಂದು ಅವರು ಒಪ್ಪುವುದಿಲ್ಲ.

(ಪ್ರಾಣಾದೌ ಅತಿವ್ಯಾಪ್ತಿಃ) ಪ್ರಯತ್ನವುಳ್ಳ ಜೀವಾತ್ಮನ ಪ್ರೇರಣೆಯಿಂದ ಉಂಟಾಗುವ ಕ್ರಿಯೆಯನ್ನು ಚೇಷ್ಟಾಶಬ್ದದಿಂದ ವಿವಕ್ಷೆಮಾಡುವುದಾದರೆ-ಪ್ರಯತ್ನವುಳ್ಳ ಜೀವಾತ್ಮನ ಪ್ರೇರಣೆಯಿಂದ ಉಂಟಾಗುವ ಅನೇಕಕ್ರಿಯೆಗಳಿಗೆ ಆಶ್ರಯವಾದ ಪ್ರಾಣಾಪಾನಾದಿಗಳಲ್ಲಿ ಲಕ್ಷಣಕ್ಕೆ ಅತಿವ್ಯಾಪ್ತಿದೋಷವುಂಟಾಗುವುದು. ಪ್ರಾಣಾದಿಗಳು ಜೀವನಿಗೆ ಶರೀರವಲ್ಲವಷ್ಟೆ?

### ೨೩೨ ಪ್ರಾಣಾದೌ ಅತಿವ್ಯಾಪ್ತ್ಯನುಪಪತ್ತ್ಯಾಶಂಕಾ.

"ಯಾವ ಅವಯವಿ ತನಗೆ ಸಜಾತೀಯವಾದ ಇನ್ನೊಂದು ಅವಯವಿಯೊಡನೆ ಸೇರಿದಾಗ ಮತ್ತೊಂದು ಅವಯವಿಯಾಗಿ ವ್ಯವಹರಿಸಲ್ಪಡುವುದಿಲ್ಲವೋ

ಅದು ಅಂತ್ಯಾವಯವಿ; ಘಟವು ಇನ್ನೊಂದು ಘಟದೊಡನೆ ಸೇರಿದಾಗ ಈ ಎರಡೂ ಸೇರಿ ಒಂದೇ ಘಟವೆಂದು ವ್ಯವಹರಿಸಲ್ಪಡುವುದಿಲ್ಲವಾದಕಾರಣ ಘಟವು ಅಂತ್ಯಾವಯವಿಯಾಗಿರುವುದು. ವಾಯು--ಜಲ--ತೇಜಸ್ಸು--ಈ ಮೂರು ಅವಯವಿಗಳೂ ಮತ್ತೊಂದು ವಾಯುವಿನೊಡನೆ ಮತ್ತೊಂದು ಜಲದೊಡನೆ ಮತ್ತೊಂದು ತೇಜಸ್ಸಿನೊಡನೆ ಸೇರಿದಾಗ ಈ ಎರಡು ವಾಯುಗಳೂ ಸೇರಿ ಒಂದು ವಾಯುವಾಗಿಯೂ, ಎರಡು ಜಲಗಳೂ ಸೇರಿ ಒಂದು ಜಲವಾಗಿಯೂ, ಎರಡು ತೇಜಸ್ಸುಗಳೂ ಸೇರಿ ಒಂದು ತೇಜಸ್ಸಾಗಿಯೂ ವ್ಯವಹರಿಸಲ್ಪಡುವುದಿಲ್ಲವೆಂಬುದಿಲ್ಲದೆ ಅಂಥ ವ್ಯವಹಾರಕ್ಕೆ ಈ ಮೂರು ಅವಯವಿಗಳೂ ಗೋಚರಗಳಾಗಿರುವುದರಿಂದ ವಾಯುಜಲತೇಜಸ್ಸುಗಳು ಅಂತ್ಯಾವಯವಿಗಳಾಗುವುದಿಲ್ಲ. ಹೀಗಿರುವಲ್ಲಿ ಶರೀರದಲ್ಲಿರುವ ಪ್ರಾಣಾಪಾನಾದಿಗಳು ವಾಯುಪದಾರ್ಥವಾದಕಾರಣ ಇವುಗಳು ಬುದ್ಧಿಪೂರ್ವಕವಾದ ಜೀವನ ಪ್ರೇರಣೆಯಿಂದ ಉಂಟಾಗುವ ಅನೇಕಕ್ರಿಯೆಗಳಿಗೆ ಆಶ್ರಯಗಳಾಗಿದ್ದರೂ ಅಂತ್ಯಾವಯವಿಗಳಲ್ಲವಾದುದರಿಂದ ಇವುಗಳಲ್ಲಿ ಅತಿವ್ಯಾಪ್ತಿದೋಷವು ಹೇಗೆಬಂದೀತು?'' ಎಂದು ಹೇಳುವುದಾದರೆ—

### ೨೩೩ ಅಂತ್ಯಾವಯವಿತ್ವಸ್ಯ ದುರ್ವಚತ್ವಾತ್ ಪ್ರಾಣಾದೌ ಅತಿವ್ಯಾಪ್ತ್ಯುಪಪತ್ತಿಃ.

ವಾಯುಜಲತೇಜಸ್ಸುಗಳು ಸಂಸರ್ಗಿದ್ರವ್ಯಗಳಾಗಿರುವಕಾರಣ ಅಂತ್ಯಾವಯವಿಗಳಾಗುವುದಿಲ್ಲವಾದರೆ ಅಂತ್ಯಾವಯವಿಯೆನಿಸಿಕೊಂಡಿರುವ ಪದಾರ್ಥಗಳು ಮತ್ತಾವುವು? ಘಟ ಪಟ ಮುಂತಾದುವುಗಳೇ ಅಂತ್ಯಾವಯವಿಗಳೆಂದು ಹೇಳಬೇಡಿರಿ. ಅನೇಕಘಟಗಳನ್ನು ಸೇರಿಸಿ ಒಂದು ಗೋಡೆಯನ್ನು ಹಾಕುವಪಕ್ಷದಲ್ಲಿ ಗೋಡೆಯೆಂಬ ಇನ್ನೊಂದು ಅವಯವಿ ಘಟದಿಂದ ಹುಟ್ಟಬಹುದಾದಕಾರಣ ಘಟವೂ ಅಂತ್ಯಾವಯವಿಯಾಗುವುದಕ್ಕಿಲ್ಲ; ಅನೇಕಪಟಗಳನ್ನು ಜೋಡಿಸಿ ಒಂದು ಕಂಥೆಯನ್ನು ಹೊಲಿವುದಾದರೆ ಕಂಥೆಯೆಂಬ ಇನ್ನೊಂದು ಅವಯವಿ ಪಟದಿಂದ ಹುಟ್ಟಬಹುದಾದ ಕಾರಣ ಪಟವೂ ಅಂತ್ಯಾವಯವಿಯಾಗುವುದಕ್ಕಿಲ್ಲ.

ಘಟಾದಿಗಳು ಅವಯವ್ಯಂತರವನ್ನು ಪ್ರಾರಂಭಿಸುವುದಿಲ್ಲವೆಂದರೆ ವಾಯ್ವಾದಿಗಳೂ ಅವಯವ್ಯಂತರವನ್ನು ಪ್ರಾರಂಭಿಸುವುದಿಲ್ಲವೆಂದು ನಿಮಗೆ ಪ್ರತಿಬಂದಿಯಾಗಿ ನಾವೂ ಹೇಳಬಹುದು. ಘಟಾದಿಗಳು ಮಧ್ಯಮಾವಯವಿಗಳಲ್ಲದೆ ಅಂತ್ಯಾವಯವಿಗಳಲ್ಲವೆಂದು ಹೇಳುವುದಾದರೆ ವಾಯ್ವಾದಿಗಳೂ ಅದರಂತೆಯೇ ಮಧ್ಯಮಾವಯವಿಗಳಾಗಬಹುದಾಗಿ ಅಂತ್ಯಾವಯವಿಯೆಂಬ ವಸ್ತುವೇ ಆಕಾಶದ ಮೊಗ್ಗಿಗೆ ಸಮಾನವಾಗಿ

ಅತ್ಯಂತಾಸತ್ಯವಾದುದರಿಂದ ಇಂಥ ದಳವನ್ನು ಲಕ್ಷಣದಲ್ಲಿ ಸೇರಿಸಿದವರು ಎಷ್ಟು ಸೂಕ್ಷ್ಮಬುದ್ಧಿಯುಳ್ಳವರಾಗಿರಬೇಕೆಂಬುದನ್ನು ವಿವೇಚಕರೇ ವಿವೇಚನೆಮಾಡಿನೋಡಲಿ

೨೩೪ ಶರೀರಸ್ಯ ಅಂತ್ಯಾವಯವಿತ್ವಸಂಭವಾಶಂಕಾ.

ಪೂಜ್ಯರೇ! ಮನುಷ್ಯಾದಿಶರೀರಗಳಿಂದ ಇನ್ನೊಂದು ದ್ರವ್ಯವು ಆರಂಭಿಸಲ್ಪಡದಿರುವುದರಿಂದ-ಎಂದರೆ ಈ ಶರೀರವು ಇನ್ನೊಂದು ದ್ರವ್ಯವಾಗಿ ಪರಿಣಮಿಸುವುದಿಲ್ಲವಾದುದರಿಂದ ಇಂಥ ಶರೀರಗಳೇ ಅಂತ್ಯಾವಯವಿಗಳೆನಿಸಿಕೊಳ್ಳಲು ಯೋಗ್ಯವಾಗಿ ಕಾಣುತ್ತಿರುವಲ್ಲಿ ಅಂತ್ಯಾವಯವಿಯೇ ಅಸತ್ಯವೆಂದು ಹೇಗೆ ಹೇಳುವುದು ?

೨೩೫ ಶರೀರಸ್ಯಾಪಿ ಅಂತ್ಯಾವಯವಿತ್ವಾನುಪಪತ್ತಿಃ.

ಹೀಗೆ ಹೇಳುವುದು-ಅಂತ್ಯಾವಯವಿಯೆಂದರೇನು ? ಸಮವಾಯಿಕಾರಣಕ್ಕಿಂತಲೂ ಭಿನ್ನವಾಗಿಯೂ ಜನ್ಯದ್ರವ್ಯವಾಗಿಯೂ ಇರುವುದು ಅಂತ್ಯಾವಯವಿಯೆನಿಸಿಕೊಳ್ಳುವುದು; ಶರೀರವು ತನಗೆ ಸಮವಾಯಿಕಾರಣವಾದ ಅವಯವಕ್ಕಿಂತಲೂ ಭಿನ್ನವಾಗಿಯೂ ಜನ್ಯದ್ರವ್ಯವಾಗಿಯೂ ಇರುವುದರಿಂದ ಅಂತ್ಯಾವಯವಿಯೆನಿಸಿಕೊಳ್ಳುವುದು— ಹೀಗೆಂದಲ್ಲವೆ ನಿಮ್ಮ ಅಭಿಮತವು ? ಇಲ್ಲಿ ಸಮವಾಯಿಕಾರಣವೆಂದರೇನು ? ಅಯುತಸಿದ್ಧಗಳಿಗಿರುವ ಸಮವಾಯವೆಂಬ ಸಂಬಂಧದಿಂದ ಯಾವುದರಲ್ಲಿ ಕಾರ್ಯವುಂಟಾಗುವುದೋ ಅದು ಸಮವಾಯಿಕಾರಣವೆಂದು ಅಭಿಪ್ರಾಯವೋ ? ಅಥವಾ ಉತ್ತರಾವಸ್ಥೆಗೆ ಆಶ್ರಯವಾದ ವಸ್ತುವನ್ನು ಕುರಿತು ಪೂರ್ವಾವಸ್ಥೆಗೆ ಆಶ್ರಯವಾದ ಅದೇ ವಸ್ತು ಸಮವಾಯಿಕಾರಣವಾಗುವುದೆಂದು ಅಭಿಪ್ರಾಯವೋ ? ಇಲ್ಲಿ ಮೊದಲನೆಯ ಪಕ್ಷವು ಸಂಭವಿಸುವುದಿಲ್ಲ; ಸಮವಾಯವೆಂಬ ಸಂಬಂಧವೇ ಇಲ್ಲವಾದುದರಿಂದ ಅಂಥ ಸಂಬಂಧದೊಡನೆ ಕೂಡಿದ ಕಾರಣತ್ವಲಕ್ಷಣವೇ ಸಂಭವಿಸುವುದಿಲ್ಲವಷ್ಟೆ. ಎರಡನೆಯ ಪಕ್ಷದಲ್ಲಿಯೂ ಮನುಷ್ಯಾದಿಶರೀರಗಳು ಅಂತ್ಯಾವಯವಿಗಳಾಗುವುದಕ್ಕಿಲ್ಲ. ಏತಕ್ಕೆಂದರೆ ಯುವತ್ವಾವಸ್ಥೆಗೆ ಆಶ್ರಯವಾದ ಶರೀರವನ್ನು ಕುರಿತು ಬಾಲ್ಯಾವಸ್ಥೆಗೆ ಆಶ್ರಯವಾದ ಶರೀರವು ಸಮವಾಯಿಕಾರಣವೇ ಆಗಿರುವುದರಿಂದ ತದ್ಭಿನ್ನವಾಗಲಿಲ್ಲ. ಭಿನ್ನವಾಗಿದ್ದರಲ್ಲವೆ ಅಂತ್ಯಾವಯವಿಯೆನಿಸಿಕೊಳ್ಳಬಹುದಾಗಿದ್ದಿತು. ಆದಕಾರಣ ಅಂತ್ಯಾವಯವಿತ್ವವು ಇಂಥದೆಂದು ನಿರೂಪಿಸಲು ಸಾಧ್ಯವಲ್ಲವಾದುದರಿಂದ ಪ್ರಾಣಾದಿಗಳಲ್ಲಿ ಹಿಂದೆ ಹೇಳಿದ ಅತಿವ್ಯಾಪ್ತಿ ಅಪರಿಹಾರ್ಯವಾಗಿರುವುದು.

(ಅಹಲ್ಯಾಶರೀರೇ ಶಿಲಾರೂಪೇ ಅವ್ಯಾಪ್ತಿಃ)— ಮತ್ತು ಶಿಲಾರೂಪವಾದ ಅಹಲ್ಯಾಶರೀರದಲ್ಲಿ ಚೇಷ್ಟೆಯೇ ಇಲ್ಲವಾದುದರಿಂದ ಲಕ್ಷಣಕ್ಕೆ ಅವ್ಯಾಪ್ತಿದೋಷವು ಪರಿಹರಿಸಲಶಕ್ಯವಾಗಿರುವುದು.

(ಪರಕಾಯಪ್ರವೇಶೇ ಪರಶರೀರೇ ಅತಿವ್ಯಾಪ್ತಿಃ)-ಮತ್ತು ಪರಕಾಯ ಪ್ರವೇಶದಲ್ಲಿ ಪ್ರಯತ್ನವುಳ್ಳ ಒಬ್ಬ ಜೀವನು ಮತ್ತೊಬ್ಬನ ಶರೀರವನ್ನು ಪ್ರವೇಶಿಸುವ ಕಾಲದಲ್ಲಿ ಇವನ ಪ್ರೇರಣೆಯಿಂದ ಆ ಶರೀರದಲ್ಲಿ ಕೆಲವು ಚೇಷ್ಟೆಗಳು ನಡೆವುದರಿಂದ ಆ ಶರೀರವು ಪ್ರವೇಶಿಸಿಡವನಿಗೆ ಶರೀರವಾಗಬೇಕಾಗಿ ಬಂದು ಲಕ್ಷಣಕ್ಕೆ ಅತಿವ್ಯಾಪ್ತಿ ದೋಷವು ಪರಿಹರಿಸಲಶಕ್ಯವಾಗಿರುವುದು

## ೨೩೬ ಅಥ ದ್ವಿತೀಯಲಕ್ಷಣದೂಷಣಂ.

(ಅಸಂಭವಃ, ಇಂದ್ರಿಯಾವಯವೇ ಘಟಾದೌ ಚ ಅತಿವ್ಯಾಪ್ತಿಶ್ಚ) ಎರಡನೆಯ ಲಕ್ಷಣದಲ್ಲಿ ಇಂದ್ರಿಯಾಶ್ರಯವಾಗಿಯೂ ಎಂಬ ಪದಕ್ಕೆ ಅಭಿಪ್ರಾಯವೇನು ? ಸಮವಾಯಸಂಬಂಧದಿಂದ ಇಂದ್ರಿಯವುಳ್ಳದೆಂಬ ಅಭಿಪ್ರಾಯವೋ ? ಅಥವಾ ಸಂಯೋಗಸಂಬಂಧದಿಂದ ಇಂದ್ರಿಯವುಳ್ಳದೆಂಬ ಅಭಿಪ್ರಾಯವೋ ? ಪ್ರಥಮಪಕ್ಷವು ಸಂಭವಿಸುವುದಿಲ್ಲ. ಏತಕ್ಕೆಂದರೆ ಶರೀರವೂ ಇಂದ್ರಿಯವೂ ಪರಸ್ಪರ ಅಯುತಸಿದ್ಧಗಳಲ್ಲವಾದುದರಿಂದ ಇವೆರಡಕ್ಕೂ ಸಮವಾಯಸಂಬಂಧವು ನಿಮ್ಮ ಮತದಲ್ಲಿಯೇ ಇಲ್ಲವಷ್ಟೆ ? ಮತ್ತು ಇಂದ್ರಿಯವು ತನ್ನ ಅವಯವಗಳಲ್ಲಿ ಸಮವಾಯಸಂಬಂಧದಿಂದ ಇರುವುದಾದಕಾರಣ ಶರೀರಲಕ್ಷಣಕ್ಕೆ ಇಂದ್ರಿಯಾವಯವದಲ್ಲಿ ಅತಿವ್ಯಾಪ್ತಿ ಪರಿಹರಿಸಲಶಕ್ಯವಾಗಿರುವುದು. ಎರಡನೆಯ ಪಕ್ಷದಲ್ಲಿ ಇಂದ್ರಿಯಗಳಿಗೆ ಗೋಚರವಾದ ಘಟಾದಿವಿಷಯಗಳಲ್ಲಿಯೂ ಇಂದ್ರಿಯಸಂಯೋಗವಿರುವುದರಿಂದ ಘಟಾದಿಗಳಲ್ಲಿ ಅತಿವ್ಯಾಪ್ತಿಯುಂಟಾಗುವುದು.

## ೨೩೭ ಘಟಾದೌ ಕಥಂಚಿದತಿವ್ಯಾಪ್ತಿಪರಿಹಾರೇಪಿ ಬುದ್ಬುದಾದೌ ಅತಿವ್ಯಾಪ್ತಿಃ

ಪೂಜ್ಯರೇ ! "ಸಂಯೋಗಸಂಬಂಧದಿಂದ ಇಂದ್ರಿಯವುಳ್ಳದೆಂದರೆ ಯಾವಾಗಲೋ ಒಂದು ಕಾಲದಲ್ಲಿ ಇಂದ್ರಿಯಸಂಯೋಗವುಳ್ಳದೆಂದು ಅರ್ಥವಲ್ಲ ; ಯಾವ ವಸ್ತುವಾದರೆ ತಾನು ಹುಟ್ಟಿದವೊದಲುಗೊಂಡು ಲಯಿಸುವವರೆಗೂ ಇಂದ್ರಿಯ ಸಂಯೋಗವುಳ್ಳದಾಗಿರುವುದೋ ಅದು ಶರೀರವೆನಿಸಿಕೊಳ್ಳುವುದೆಂದು ಅರ್ಥವು. ಘಟಾದಿಪದಾರ್ಥಗಳಾದರೆ ಯಾವುದೋ ಒಂದು ಕಾಲದಲ್ಲಿ ಇಂದ್ರಿಯಸಂಯೋಗಕ್ಕೆ ಆಶ್ರಯಗಳಾಗಿರುವುವಲ್ಲದೆ ಹುಟ್ಟಿದವೊದಲು ಕೊನೆಯವರೆಗೂ ಆಶ್ರಯಗಳಾಗುವುವಲ್ಲ ; ಆದಕಾರಣ ಅವುಗಳಲ್ಲಿ ಅತಿವ್ಯಾಪ್ತಿಯನ್ನು ಹೇಳುವುದಕ್ಕೆ ಅವಕಾಶವಿಲ್ಲ. ಅಸ್ಮದಾದಿಗಳ ಶರೀರವಾದರೆ ಉತ್ಪತ್ತಿ ಮೊದಲು ಕೊನೆಯವರೆಗೂ ಎಡೆಬಿಡದೆ ಇಂದ್ರಿಯ

ಸಂಯೋಗಕ್ಕೆ ಆಶ್ರಯವಾಗಿಯೇ ಇರುವುದರಿಂದ ಲಕ್ಷಣವು ಸಂಗತವಾಗಬಹುದು.'' ಎಂದು ಹೇಳುವುದಾದರೆ ಎಡೆಬಿಡದೆ ಕಣ್ಣುತೆರೆದು ನೋಡುತ್ತಿರುವ ಕಾಲದಲ್ಲಿಯೇ ಹುಟ್ಟಿ ಆಗಲೇ ನಾಶಹೊಂದಿರುವ ಬುದ್ಬುದದಲ್ಲಿ (ಗುಳ್ಳೆಯಲ್ಲಿ) ಹುಟ್ಟಿದವೊದಲು ಕೊನೆಯವರೆಗೂ ಇಂದ್ರಿಯಸಂಯೋಗವಿರುವುದರಿಂದ ಅದರಲ್ಲಿ ಅತಿವ್ಯಾಪ್ತಿದುಷ್ಪರಿಹರವಾಗುವುದು.

(ಆತ್ಮನಿ ಅತಿವ್ಯಾಪ್ತಿಃ) ಮನಇಂದ್ರಿಯವು ನಿತ್ಯವಾಗಿರುವುದು ಎಂಬುವರ ಮತದಲ್ಲಿ ಅದರೊಡನೆ ಸಂಯೋಗವು ನಿತ್ಯನಾದ ಆತ್ಮನಿಗೆ ನಿತ್ಯವಾಗಿಯೂ ಇರುವುದರಿಂದ ಆತ್ಮನಲ್ಲಿ ಶರೀರಲಕ್ಷಣಕ್ಕೆ ಅತಿವ್ಯಾಪ್ತಿ ದುಷ್ಪರಿಹರವಾಗುವುದು.

(ಮೃತಶರೀರೇ ಅವ್ಯಾಪ್ತಿಃ) ಮೃತಶರೀರವನ್ನು ನೀವು ಶರೀರವೆಂದೇ ಒಪ್ಪಿರುವಿರಾದುದರಿಂದ ಆಗ ಅದರಲ್ಲಿ ಇಂದ್ರಿಯಸಂಯೋಗವಿಲ್ಲದಿರುವಕಾರಣ ಅವ್ಯಾಪ್ತಿ ದುಷ್ಪರಿಹರವಾಗುವುದು.

### ೨೩೮ ಇಂದ್ರಿಯೈಸ್ಸಹ ಶರೀರಸ್ಯ ಕೃತ್ಸ್ನಪ್ರದೇಶಸಂಯೋಗ ಸಂಭವಾತ್ ಅವ್ಯಾಪ್ತಿಪರಿಹಾರಾಶಂಕಾ.

ಪೂಜ್ಯರೇ! ಯಾವುದರ ಕೃತ್ಸ್ನಪ್ರದೇಶವೂ ಇಂದ್ರಿಯಸಂಯೋಗಕ್ಕೆ ಆಶ್ರಯವಾಗಿರುವುದೋ ಅದು ಶರೀರವೆನಿಸಿಕೊಳ್ಳುವುದೆಂದು ಶರೀರಕ್ಕೆ ಲಕ್ಷಣವನ್ನು ಹೇಳುವೆವು; ಬುದ್ಬುದಾದಿಗಳ ಒಂದು ಭಾಗದಲ್ಲಿ ಇಂದ್ರಿಯಸಂಯೋಗವಿದ್ದರೂ ಅವುಗಳ ಒಳಭಾಗದಲ್ಲಿ ಇಂದ್ರಿಯಸಂಯೋಗವಿಲ್ಲವಾದುದರಿಂದ ಅತಿವ್ಯಾಪ್ತಿಗೆ ಅವಕಾಶವಿಲ್ಲ. ಮೃತಶರೀರದಲ್ಲಿಯೂ ಮರಣಕ್ಕೆ ಪೂರ್ವದಲ್ಲಿ ಕೃತ್ಸ್ನಭಾಗದಲ್ಲಿಯೂ ಇಂದ್ರಿಯಸಂಯೋಗವಿದ್ದುದರಿಂದ ಅವ್ಯಾಪ್ತಿಗೂ ಅವಕಾಶವಿಲ್ಲ. ಕೃತ್ಸ್ನಕಾಲದಲ್ಲಿಯೂ ಇಂದ್ರಿಯಸಂಯೋಗವಿರಬೇಕೆಂಬುದು ಲಕ್ಷಣದಲ್ಲಿ ಸೇರಿಲ್ಲವಾದುದರಿಂದ ಮೃತಶರೀರದಲ್ಲಿ ಈಗ ಇಂದ್ರಿಯಸಂಯೋಗವಿಲ್ಲದಿದ್ದರೂ ಹಾನಿಯಿಲ್ಲದೆ ಲಕ್ಷಣಸಮನ್ವಯವಾಗುವುದು'' ಎಂದು ಹೇಳುವುದಾದರೆ—

### ೨೩೯ ಕೃತ್ಸ್ನಪ್ರದೇಶಸಂಯೋಗಾಸಂಭವಾತ್ ಅವ್ಯಾಪ್ತೇಃ ಅಪರಿಹಾರ್ಯತ್ವಂ.

ಮೂರ್ತವಾದ ಎರಡು ಪದಾರ್ಥಗಳಿಗೆ ಪರಸ್ಪರ ಪ್ರತಿಘಾತವಾಡುವಿಕೆಯೇ ಸ್ವಭಾವವಾಗಿರುವುದರಿಂದ ಅಂಥವುಗಳಿಗೆ ಸಂಯೋಗವುಂಟಾಗುವುದಾದರೆ ಏಕಪ್ರದೇಶದಲ್ಲಿ ಸಂಯೋಗವುಂಟಾಗಬಹುದಲ್ಲದೆ ಕೃತ್ಸ್ನಪ್ರದೇಶದಲ್ಲಿಯೂ ಸಂಯೋಗವುಂಟಾ

ಗುವುದಿಲ್ಲ. ಇಂದ್ರಿಯಗಳೂ ಶರೀರಗಳೂ ಅಂಥವುಗಳೇ ಆಗಿರುವುದರಿಂದ ಇವೆರಡಕ್ಕೂ ಸಂಯೋಗವು ಏಕದೇಶದಲ್ಲಿರುವುದೇ ಹೊರತು ಕೃತ್ಸ್ನಭಾಗದಲ್ಲಿಯೂ ಇಲ್ಲವೆಂಬುದನ್ನು ನೀವೇ ಒಪ್ಪಿಕೊಳ್ಳಬೇಕಾಗಿರುವುದರಿಂದ ಶರೀರಲಕ್ಷಣಕ್ಕೆ ಶರೀರದಲ್ಲಿ ಅವ್ಯಾಪ್ತಿದೋಷಕ್ಕೆ ಪರಿಹಾರವೇ ಆಗಲಿಲ್ಲ.

### ೨೪೦ ಪುನಃ ಪ್ರಕಾರಾಂತರೇಣ ಕೃತ್ಸ್ನಪ್ರದೇಶಸಂಯೋಗಸಂಭವಾಶಂಕಾ.

ಪೂಜ್ಯರೇ ! "ಶರೀರೇಂದ್ರಿಯಗಳೆರಡೂ ಮೂರ್ತಪದಾರ್ಥಗಳಾಗಿದ್ದರೂ ಇವುಗಳಿಗೆ ಕೃತ್ಸ್ನಪ್ರದೇಶದಲ್ಲಿಯೂ ಸಂಯೋಗವುಂಟಾಗಲು ಅಡ್ಡಿಯಿಲ್ಲ. ಚಕ್ಷುರಿಂದ್ರಿಯ-ತ್ವಗಿಂದ್ರಿಯ-ಈ ಎರಡೂ ಮೂರ್ತಪದಾರ್ಥಗಳಾಗಿದ್ದರೂ ಚಕ್ಷುಗೋಳಕವೆಂಬ ಒಂದುಸ್ಥಾನದಲ್ಲಿ ಈ ಎರಡೂ ಸಂಯೋಗವನ್ನು ಪಡೆದಿರುವುವೇ ಹೊರತು ಪರಸ್ಪರ ಪ್ರತಿಘಾತಕಗಳಾಗಿಲ್ಲ. ಮತ್ತು ನೀರು ಬೆಳಕು ಈ ಎರಡು ಪದಾರ್ಥಗಳೂ ಮೂರ್ತಗಳಾಗಿದ್ದರೂ ಪರಸ್ಪರ ಪ್ರತಿಘಾತವನ್ನು ಮಾಡುವುದಿಲ್ಲ. ಆದುದರಿಂದಲೇ ನೀರಿನ ಒಳಗಿರುವ ಮರಳು ನೀರಿನಿಂದ ಆವರಿಸಲ್ಪಟ್ಟಿದ್ದರೂ ಬೆಳಕೆಂಬುದು ನೀರಿನ ಒಳಗೂ ನುಗ್ಗಿ ಮರಳಿನ ಮೇಲೆ ಬಿದ್ದು ಆ ಮರಳನ್ನು ನಮ್ಮ ದೃಷ್ಟಿಗೆ ಗೋಚರಪಡಿಸುವುದು. ಮೂರ್ತವಾದ ಈ ಎರಡು ಪದಾರ್ಥಗಳೂ ಒಂದಕ್ಕೊಂದು ಅಡ್ಡಿಮಾಡುವುವಾಗಿದ್ದರೆ ಮರಳನ್ನು ಆವರಿಸಿಕೊಂಡಿರುವ ನೀರು ಮರಳಿನ ಮೇಲೆ ಬೆಳಕು ಬೀಳುವುದಕ್ಕೆ ಬೆಳಕಿಗೆ ಅವಕಾಶವನ್ನೇ ಕೊಡುತ್ತಿರಲಿಲ್ಲ. ಮರಳೂ ಬೆಳಕಿನ ಸಂಬಂಧವನ್ನು ಪಡೆಯುತ್ತಿರಲಿಲ್ಲ. ಬೆಳಕಿನ ಸಂಬಂಧವಿಲ್ಲದ ಮರಳೂ ನಮ್ಮ ಕಣ್ಣಿಗೆ ಗೋಚರವಾಗುವುದಕ್ಕೂ ಅವಕಾಶವಿರುತ್ತಿರಲಿಲ್ಲ. ಆದುದರಿಂದ ಇವು ಹೇಗೆ ಕೃತ್ಸ್ನಪ್ರದೇಶಸಂಯೋಗವನ್ನು ಪಡೆದಿರುವುವೋ ಹಾಗೆಯೇ ಶರೀರಕ್ಕೂ ಇಂದ್ರಿಯಗಳಿಗೂ ಕೃತ್ಸ್ನಪ್ರದೇಶಸಂಯೋಗವು ಸಂಭವಿಸಬಹುದಾಗಿರುವಲ್ಲಿ ಅವ್ಯಾಪ್ತಿದೋಷಕ್ಕೆ ಅವಕಾಶವೆಲ್ಲಿ ?" ಎಂದು ಹೇಳುವಿರೋ—

### ೨೪೧ ಇಂದ್ರಿಯಾಣಾಂ ಕಥಂಚಿದಪಿ ಕೃತ್ಸ್ನಪ್ರದೇಶಸಂಯೋಗಾಸಂಭವೋಪಪಾದನಂ.

ಆದರೆ ಶರೀರದ ಕೃತ್ಸ್ನಭಾಗದಲ್ಲಿಯೂ ಇಂದ್ರಿಯಸಂಯೋಗವುಂಟೋ ? ಹಾಗಾದರೆ ನಮ್ಮ ಉದರದಲ್ಲಿರುವ ಅನೇಕಕ್ರಿಮಿಗಳನ್ನು ನಮ್ಮ ತ್ವಗಿಂದ್ರಿಯದಿಂದ ನಾವು ಯಾವಾಗಲೂ ನಿಯಮವಾಗಿ ಮುಟ್ಟದೆ ಇರುವುದಕ್ಕೆ ಕಾರಣವೇನು ?

ಶರೀರದ ಕೃತ್ಸ್ನ ಭಾಗಗಳಲ್ಲಿಯೂ ತ್ವಗಿಂದ್ರಿಯದ ಸಂಯೋಗವಿರುತ್ತಿದ್ದರೆ ಆ ಕ್ರಿಮಿಗಳನ್ನು ನಾವು ತಪ್ಪದೆ ಸ್ಪರ್ಶಮಾಡಬೇಕಲ್ಲವೆ ? ಆದಕಾರಣ ಇಂದ್ರಿಯಗಳ ಸಂಯೋಗವಿಲ್ಲದ ಕೆಲವು ಒಳಭಾಗಗಳೂ ಶರೀರದಲ್ಲಿ ಉಂಟೆಂಬುದು ಪ್ರತ್ಯಕ್ಷಸಿದ್ಧವಾದುದರಿಂದ ಶರೀರಲಕ್ಷಣಕ್ಕೆ ಶರೀರದಲ್ಲಿ ಅವ್ಯಾಪ್ತಿ ತಪ್ಪಿದುದಲ್ಲ

### ೨೪೨ ದ್ವಿತೀಯಲಕ್ಷಣಸ್ಯ ಪರಿಷ್ಕಾರಾಂತರಾವಲಂಬನೇನ ಉಕ್ತದೋಷಪರಿಹಾರಾಶಂಕಾ.

ಪೂಜ್ಯರೇ ! "ಏಕಕಾಲದಲ್ಲಿ ಅನೇಕೇಂದ್ರಿಯಗಳ ಸಂಬಂಧವನ್ನು ಯಾವುದು ಪಡೆದಿರುವುದೋ ಅದು ಶರೀರವೆನಿಸಿಕೊಳ್ಳುವುದು ಎಂದು ಶರೀರಲಕ್ಷಣವನ್ನು ಪರಿಷ್ಕರಿಸುವೆವು. ಈಗ ಇಂದ್ರಿಯಾವಯವಗಳಲ್ಲಿಯಾಗಲಿ ಘಟಾದಿಪದಾರ್ಥಗಳಲ್ಲಿಯಾಗಲಿ ಅತಿವ್ಯಾಪ್ತಿಯನ್ನು ಹೇಳುವುದಕ್ಕೆ ಅವಕಾಶವಿಲ್ಲ. ಏಕಕಾಲದಲ್ಲಿ ಅನೇಕೇಂದ್ರಿಯಸಂಬಂಧವು ಅವುಗಳಲ್ಲಿ ಇಲ್ಲವಷ್ಟೆ. ಘಟಾದಿಪದಾರ್ಥಗಳಲ್ಲಿ ಚಕ್ಷುರಿಂದ್ರಿಯ ತ್ವಗಿಂದ್ರಿಯ ಈ ಎರಡರ ಸಂಬಂಧವೂ ಏಕಕಾಲದಲ್ಲಿದ್ದರೂ ಹಾನಿಯಿಲ್ಲ. ಏತಕ್ಕೆಂದರೆ ಲಕ್ಷಣದಲ್ಲಿ ಅನೇಕೇಂದ್ರಿಯವೆಂಬ ಪದದಿಂದ ಚಕ್ಷುರಿಂದ್ರಿಯ ಮನಇಂದ್ರಿಯ ಈ ಎರಡು ಇಂದ್ರಿಯಗಳನ್ನೇ ವಿವಕ್ಷೆಮಾಡಿರುವೆವು."

### ೨೪೩ ಪರಿಷ್ಕೃತಸ್ಯಾಪಿ ಲಕ್ಷಣಸ್ಯ ಸ್ಥಲಾಂತರೇ ಅತಿವ್ಯಾಪ್ತ್ಯಾದಿಪ್ರದರ್ಶನಂ.

ಎಂದು ಹೇಳುವುದಾದರೆ-ಸರ್ವವ್ಯಾಪಿಯಾದ ಆಕಾಶವೂ ಈಶ್ವರನೂ ನಮ್ಮ ಇಂದ್ರಿಯಗಳಿರತಕ್ಕ ಭಾಗಗಳಲ್ಲಿಯೂ ವ್ಯಾಪಿಸಿಯೇ ಇರುವುದರಿಂದ ನಮ್ಮ ಚಕ್ಷುರಿಂದ್ರಿಯ ಮನಇಂದ್ರಿಯ ಇವುಗಳೊಡನೆ ಸಂಯೋಗವನ್ನು ಏಕಕಾಲದಲ್ಲಿ ಪಡೆದಿರುವಕಾರಣ ಆ ಎರಡು ಪದಾರ್ಥಗಳೂ ನಮಗೆ ಶರೀರವಾಗಬೇಕಾಗಿ ಲಕ್ಷಣಕ್ಕೆ ಅತಿವ್ಯಾಪ್ತಿದೋಷವುಂಟಾಗುವುದು. ಸಂಯೋಗಸಂಬಂಧವನ್ನು ವಿವಕ್ಷೆಮಾಡದೆ ಅವಿನಾಭಾವಸಂಬಂಧವನ್ನು ವಿವಕ್ಷೆಮಾಡುವುದಾದರೆ ನಿಮ್ಮ ಮತದಲ್ಲಿ ಶರೀರವೂ ಇಂದ್ರಿಯಗಳೂ ಅಯುತಸಿದ್ಧಗಳಲ್ಲವಾಗಿ ಅಪೃಥಕ್ಸಿದ್ಧಿಸಂಬಂಧವು ಇವಕ್ಕೆ ಸಂಭವಿಸುವುದಿಲ್ಲವಾದಕಾರಣ ಪುನಃ ಅವ್ಯಾಪ್ತಿದೋಷವು ಸ್ಥಿರಪಡುವುದು. ಮತ್ತು ಸಕಲಪದಾರ್ಥಗಳೂ ಈಶ್ವರನಿಗೆ ಅಪೃಥಕ್ಸಿದ್ಧವಿಶೇಷಣಗಳಾಗಿರುವುದರಿಂದ ನಮ್ಮ ಮತರೀತಿಯಾಗಿ ನಿಮ್ಮ ಶರೀರಲಕ್ಷಣಕ್ಕೆ ಈಶ್ವರನಲ್ಲಿ ಅತಿವ್ಯಾಪ್ತಿಯೂ ಸಂಭವಿಸುವುದು.

೨೪೪ ಪುನಃ ಪರಿಷ್ಕಾರಾಂತರಾವಲಂಬನಂ.

ಪೂಜ್ಯರೇ! "ಇಂದ್ರಿಯಕ್ಕೂ ಯಾವ ಪದಾರ್ಥಕ್ಕೂ ಇರುವ ಸಂಬಂಧವು ಈ ಎರಡಕ್ಕಿಂತಲೂ ಇತರನಾದ ಪದಾರ್ಥಗಳ ಜ್ಞಾನಕ್ಕೆ ಕಾರಣವಾಗುವುದೋ ಆ ಪದಾರ್ಥವು ಶರೀರವೆನಿಸಿಕೊಳ್ಳುವುದು ಎಂದು ಲಕ್ಷಣವನ್ನು ಪರಿಷ್ಕರಿಸುವೆವು. ನಮ್ಮ ಇಂದ್ರಿಯಗಳಿಗೂ ನಮ್ಮ ಶರೀರಕ್ಕೂ ಇರುವ ಸಂಬಂಧವು ಇವೆರಡಕ್ಕಿಂತಲೂ ಇತರವಾದ ಘಟಾದಿಪದಾರ್ಥಗಳ ಜ್ಞಾನಕ್ಕೆ ಕಾರಣವಾಗಿರುವುದರಿಂದ ನಮ್ಮ ಶರೀರದಲ್ಲಿ ಲಕ್ಷಣಕ್ಕೆ ಸಮನ್ವಯವಾಗುವುದು. ನಮ್ಮ ಚಕ್ಷುರಿಂದ್ರಿಯಕ್ಕೂ ಘಟಕ್ಕೂ ಉಂಟಾಗುವ ಸಂಬಂಧವು ಘಟಜ್ಞಾನಕ್ಕೇ ಕಾರಣವಾಗುವುದಲ್ಲದೆ ಇತರಪದಾರ್ಥದ ಜ್ಞಾನಕ್ಕೆ ಕಾರಣವಾಗುವುದಿಲ್ಲವಾದುದರಿಂದ ಈ ಲಕ್ಷಣಕ್ಕೆ ಘಟಾದಿಪದಾರ್ಥಗಳಲ್ಲಿ ಅತಿವ್ಯಾಪ್ತಿಯೂ ಇಲ್ಲ"

೨೪೫ ತಸ್ಯಾಪಿ ದೂಷಣಂ.

ಎಂದು ಹೇಳುವುದಾದರೆ—ಪ್ರಾಣದಲ್ಲಿ ಅತಿವ್ಯಾಪ್ತಿ ತಪ್ಪಲಾರದು. ಹೇಗೆಂದರೆ-ಪ್ರಾಣೋತ್ಕ್ರಮಣವಾದಮೇಲೆ ಶರೀರದಲ್ಲಿ ಜ್ಞಾನವುಂಟಾಗುವುದಿಲ್ಲವಾದುದರಿಂದ ಪ್ರಾಣಕ್ಕೂ ಶರೀರಕ್ಕೂ ಇರುವ ಸಂಬಂಧವು ಜ್ಞಾನಕ್ಕೆ ಕಾರಣವೆನ್ನುವುದರಲ್ಲಿ ವಿವಾದವಿಲ್ಲ. ಇಂದ್ರಿಯಸಂಬಂಧವನ್ನು ಪಡೆದಿರುವ ಶರೀರದೊಡನೆ ಪ್ರಾಣಕ್ಕೆ ಉಂಟಾಗಿರುವ ಸಂಬಂಧವೂ ಇಂದ್ರಿಯಾಶ್ರಯಸಂಬಂಧರೂಪವಾಗಿರುವುದರಿಂದ ಇಂದ್ರಿಯಸಂಬಂಧರೂಪವೆನಿಸಿಕೊಳ್ಳುವುದಕ್ಕೆ ತಡೆಯಿಲ್ಲವಾಗಿ ಜ್ಞಾನಕ್ಕೆ ಕಾರಣವಾದ ಇಂದ್ರಿಯಸಂಬಂಧವು ಪ್ರಾಣದಲ್ಲಿರುವುದರಿಂದ ಶರೀರಲಕ್ಷಣಕ್ಕೆ ಪ್ರಾಣದಲ್ಲಿ ಅತಿವ್ಯಾಪ್ತಿ ತಪ್ಪಿದುದಲ್ಲ.

೨೪೬ ಪುನಃ ಪರಿಷ್ಕಾರಾಂತರಾವಲಂಬನಂ.

ಜ್ಞಾನಕ್ಕೆ ಕಾರಣವಾದ ಇಂದ್ರಿಯಸಂಯೋಗವನ್ನು ಪಡೆದಿರುವ ದ್ರವ್ಯವು ಶರೀರವೆನಿಸಿಕೊಳ್ಳುವುದು ಎಂದು ಲಕ್ಷಣವನ್ನು ಪರಿಷ್ಕರಿಸಿ, ಪ್ರಾಣಕ್ಕೂ ಇಂದ್ರಿಯಕ್ಕೂ ಸಂಬಂಧವಿದ್ದರೂ ಸಂಯೋಗವಿಲ್ಲವಾದುದರಿಂದ ಅತಿವ್ಯಾಪ್ತಿಯನ್ನು ಪರಿಹರಿಸಿ, ಶರೀರಕ್ಕೂ ಇಂದ್ರಿಯಗಳಿಗೂ ಸಂಯೋಗವೇ ಇರುವುದರಿಂದ ಲಕ್ಷಣಕ್ಕೆ ಸಮನ್ವಯವನ್ನು ಮಾಡುವುದಾದರೆ —

೨೪೭ ತಸ್ಯಾಪಿ ದೂಷಣಂ.

ಆಗ ಮನಸ್ಸಿನಲ್ಲಿ ಅತಿವ್ಯಾಪ್ತಿ ತಪ್ಪಿದುದಲ್ಲ. ಇತರೇಂದ್ರಿಯಗಳಿಗೂ ಮನಸ್ಸಿಗೂ ಉಂಟಾಗುವ ಸಂಯೋಗವು ಜ್ಞಾನೋತ್ಪತ್ತಿಗೆ ಕಾರಣವಷ್ಟೆ. ಮತ್ತು ಆತ್ಮ

ನಲ್ಲಿಯೂ ಅತಿವ್ಯಾಪ್ತಿ ತಪ್ಪಿದುದಲ್ಲ. ಮನಸ್ಸಿನೊಡನೆ ಆತ್ಮನಿಗೆ ಉಂಟಾಗುವ ಸಂಯೋಗವೂ ಜ್ಞಾನಕ್ಕೆ ಕಾರಣವಷ್ಟೆ.

### ೨೪೮ ಪುನಃ ಪರಿಷ್ಕಾರಾಂತರಾವಲಂಬನಂ.

ಯಾವ ಪದಾರ್ಥವು ತಾನಿರುವವರೆಗೂ ಇಂದ್ರಿಯಗಳೊಡನೆ ಸಂಯೋಗವನ್ನು ಪಡೆಯದಿರುವುದಕ್ಕೆ ಯೋಗ್ಯವಾಗುವುದಿಲ್ಲವೋ ಅದು ಶರೀರವೆನಿಸಿಕೊಳ್ಳುವುದು. ಎಂದು ಲಕ್ಷಣವನ್ನು ಹೇಳಿ, ಘಟಾದಿಪದಾರ್ಥಗಳು ಅನೇಕವೇಳೆ ಇಂದ್ರಿಯಸಂಯೋಗವನ್ನು ಪಡೆಯದಿರುವುದಕ್ಕೆ ಯೋಗ್ಯಗಳಾಗಿಯೇ ಇರುವುವಾದುದರಿಂದ ಅತಿವ್ಯಾಪ್ತಿಯಿಲ್ಲವೆಂದೂ ತೋರಿಸಿ, ಶರೀರವು ಸರ್ವದಾ ಇಂದ್ರಿಯಸಂಯೋಗವನ್ನು ಪಡೆದೇ ಇರುವುದರಿಂದ ಪಡೆಯದೆ ಇರುವುದಕ್ಕೆ ಯೋಗ್ಯವಾಗುವುದಿಲ್ಲವಾದಕಾರಣ ಲಕ್ಷಣಸಮನ್ವಯಕ್ಕೂ ತಡೆಯಿಲ್ಲವೆಂದು ಹೇಳುವುದಾದರೆ—

### ೨೪೯ ತಸ್ಯಾಪಿ ದೂಷಣಂ.

ಆಗ ಮರಣಾನಂತರದಲ್ಲಿ ಅದೇ ಶರೀರದಲ್ಲಿ ಇಂದ್ರಿಯಸಂಯೋಗವಿಲ್ಲವೆಂದು ನೀವೇ ಒಪ್ಪಿರುವಿರಾದುದರಿಂದ ಅದರಲ್ಲಿ ಅವ್ಯಾಪ್ತಿ ದುಷ್ಪರಿಹರವಾಗುವುದು. ನಿಮ್ಮ ಮತದಲ್ಲಿ ಅದೂ ಶರೀರವೆನಿಸಿಕೊಂಡಿರುವುದರಿಂದ ಅದರಲ್ಲಿಯೂ ಲಕ್ಷಣವಿರಬೇಕಷ್ಟೆ ?

ಮತ್ತು ನಿಮ್ಮ ಮತದಲ್ಲಿ ಮನಇಂದ್ರಿಯವು ನಿತ್ಯವಾದುದರಿಂದಲೂ, ಆಕಾಶ ಕಾಲ-ದಿಕ್ಕು-ಆತ್ಮ-ಈ ನಾಲ್ಕು ಪದಾರ್ಥಗಳೂ ನಿತ್ಯವಾಗಿಯೂ ವಿಭುಗಳಾಗಿಯೂ ಇರುವುದರಿಂದಲೂ, ವಿಭುಪದಾರ್ಥಗಳಿಗೆ ಇಂದ್ರಿಯಸಂಯೋಗವಿಲ್ಲವೆಂಬುದು ಯಾವಾಗಲೂ ಇಲ್ಲವಾದುದರಿಂದಲೂ, ಈ ನಾಲ್ಕು ಪದಾರ್ಥಗಳೂ ತಾವಿರುವವರೆಗೂ ಮನಇಂದ್ರಿಯದೊಡನೆ ಸಂಯೋಗವನ್ನು ಪಡೆದೇ ಇರುವುವಾದುದರಿಂದ ಪಡೆಯದಿರುವುದಕ್ಕೆ ಯೋಗ್ಯಗಳಾಗುವುದಿಲ್ಲವಾದಕಾರಣ ಈ ನಾಲ್ಕರಲ್ಲಿಯೂ ಲಕ್ಷಣಕ್ಕೆ ಅತಿವ್ಯಾಪ್ತಿ ತಪ್ಪಿದುದಲ್ಲ.

### ೨೫೦ ಪುನಃ ಪರಿಷ್ಕಾರಾಂತರಾವಲಂಬನಂ.

ಪೂಜ್ಯರೇ! "ಇಂದ್ರಿಯಕ್ಕಿಂತಲೂ ಭಿನ್ನವಾಗಿಯೂ, ಪ್ರಾಣದ ವ್ಯಾಪಾರಕ್ಕೆ ಅಧೀನವಾದ ಪ್ರವೃತ್ತಿನಿವೃತ್ತಿವ್ಯಾಪಾರವುಳ್ಳುದಾಗಿಯೂ ಇರುವ ದ್ರವ್ಯವು ಶರೀರವೆನಿಸಿಕೊಳ್ಳುವುದು. ಇಂದ್ರಿಯಗಳನ್ನು ವ್ಯಾವರ್ತಿಸುವುದಕ್ಕಾಗಿ ಪ್ರಥಮ ವಿಶೇಷಣವೂ, ಘಟಾದಿಪದಾರ್ಥಗಳನ್ನು ವ್ಯಾವರ್ತಿಸುವುದಕ್ಕಾಗಿ ದ್ವಿತೀಯವಿಶೇಷ

ಣವೂ ಉಕ್ತವಾಗಿರುವುವು. ನಮ್ಮ ಶರೀರವು ಇಂದ್ರಿಯಕ್ಕಿಂತಲೂ ಭಿನ್ನವಾಗಿಯೂ, ಪ್ರಾಣದ ವ್ಯಾಪಾರಕ್ಕೆ ಅಧೀನವಾಗಿಯೇ ತನ್ನ ವ್ಯಾಪಾರಗಳನ್ನು ನಡಸುವುದಾಗಿಯೂ ಇರುವುದರಿಂದ ಲಕ್ಷಣಸಮನ್ವಯವನ್ನು ತಿಳಿಯಬಹುದು'' ಎಂದು ಹೇಳುವುದಾದರೆ—

### ೨೫೧ ತಸ್ಯಾಪಿ ದೂಷಣಂ.

ಆತ್ಮನಲ್ಲಿಯೂ ಮಲದಲ್ಲಿಯೂ ಅತಿವ್ಯಾಪ್ತಿದೋಷವು ದುಷ್ಪರಿಹರವಾಗುವುದು ಈ ಎರಡು ಪದಾರ್ಥಗಳೂ ಇಂದ್ರಿಯಭಿನ್ನಗಳಾಗಿಯೂ, ಮತ್ತು ಇವೆರಡರ ಪ್ರವೃತ್ತಿನಿವೃತ್ತಿಗಳು ಪ್ರಾಣವ್ಯಾಪಾರಾಧೀನಗಳಾಗಿಯೂ ಇರುವುವಷ್ಟೆ. ಆಗಲಿ-ಇಲ್ಲಿ ಅತಿವ್ಯಾಪ್ತಿಯುಂಟಾದರೆ ಹಾನಿಯೇನು ? ''ಆತ್ಮನು ನನಗೆ ಶರೀರವು'', '' ಮಲವು ನನಗೆ ಶರೀರವು '' ಎಂಬ ವ್ಯವಹಾರವು ಬಂದೊದಗುವುದೇ ಹಾನಿ.

### ೨೫೨ ಪುನಃ ಪರಿಷ್ಕಾರಾಂತರಾವಲಂಬನಂ.

ಪೂಜ್ಯರೇ ! '' ಯಾವುದರ ಸಕಲವ್ಯಾಪಾರಗಳೂ ಪ್ರಾಣಾಧೀನವಾಗಿರುವುವೋ ಅದು ಶರೀರವೆನಿಸಿಕೊಳ್ಳುವುದು. ಆತ್ಮನ ಕೆಲವು ವ್ಯಾಪಾರಗಳು ಪ್ರಾಣಾಧೀನಗಳಾಗಿದ್ದರೂ ಅವನ ವ್ಯಾಪಾರಗಳೊಳಗೆ ಪ್ರಾಣಕ್ಕೆ ಅಧೀನವಲ್ಲದ ಕೆಲವು ವ್ಯಾಪಾರಗಳೂ ಉಂಟು. ತಾನು ಜೀವಿಸುವುದಕ್ಕೆ ಎಂದರೆ ಪ್ರಾಣಧಾರಣೆಯನ್ನು ಮಾಡುವುದಕ್ಕೆ ಮೂಲಭೂತವಾದ ಪ್ರಯತ್ನವು ಆತ್ಮನಲ್ಲಿ ಇರುವುದಷ್ಟೆ. ಇಂಥ ಪ್ರಯತ್ನದಿಂದ ಆತ್ಮನು ಪ್ರಾಣಗಳನ್ನು ತನ್ನಲ್ಲಿ ಧಾರಣೆಮಾಡುತ್ತಿದ್ದರಲ್ಲವೆ ಅದರ ಮೇಲೆ ಪ್ರಾಣವು ತನ್ನ ಕೆಲಸಗಳನ್ನು ಮಾಡಬಲ್ಲುದು. ಆದಕಾರಣ ಆತ್ಮನಲ್ಲಿರುವ ಅಂಥ ಪ್ರಯತ್ನವು ಪ್ರಾಣಾಧೀನವಲ್ಲವಾದುದರಿಂದ ಆತ್ಮನ ಸಕಲವ್ಯಾಪಾರಗಳೂ ಪ್ರಾಣಾಧೀನಗಳಲ್ಲವಾಗಿ ಈ ಶರೀರಲಕ್ಷಣಕ್ಕೆ ಆತ್ಮನಲ್ಲಿ ಅತಿವ್ಯಾಪ್ತಿದೋಷವಿಲ್ಲ. ಅಸ್ಮದಾದಿಗಳ ಶರೀರದಲ್ಲಿ ಉಂಟಾಗುವ ಸಕಲವ್ಯಾಪಾರಗಳೂ ಪ್ರಾಣಾಧೀನಗಳಾಗಿಯೇ ಇರುವುವಾದುದರಿಂದ ಲಕ್ಷಣಕ್ಕೆ ಸಮನ್ವಯವನ್ನೂ ತಿಳಿಯಬಹುದು'' ಎಂದು ಹೇಳುವುದಾದರೆ—

### ೨೫೩ ತಸ್ಯಾಪಿ ದೂಷಣಂ.

ಆಗ ಅವ್ಯಾಪ್ತಿದೋಷವಾಗಲಿ ಅಸಂಭವದೋಷವಾಗಲಿ ತಲೆದೋರುವುದು. ಬಿರುಗಾಳಿಯಿಂದಲಾಗಲಿ ಜಲಪ್ರವಾಹದಿಂದಲಾಗಲಿ ಬಲಾತ್ಕಾರವಾಗಿ ಮತ್ತೊಂದು ಕಡೆಗೆ ಒಯ್ಯಲ್ಪಡುತ್ತಿರುವ ಶರೀರಗಳಲ್ಲಿ ಉಂಟಾಗುವ ಗಮನ, ಪತನ ಮುಂತಾದ

ವ್ಯಾಪಾರಗಳು ಪ್ರಾಣಕ್ಕೆ ಅಧೀನಗಳಲ್ಲವಾದುದರಿಂದ ಈ ಶರೀರಲಕ್ಷಣವು ಲಕ್ಷ್ಯವಾದ ಶರೀರದಲ್ಲಿ ವ್ಯಾಪಿಸಲಿಲ್ಲವಷ್ಟೆ.

### ೨೫೪ ಪುನಃ ಪರಿಷ್ಕಾರಾಂತರಾವಲಂಬನಂ.

ಆರ್ಯರೇ! “ಇಂದ್ರಿಯಗಳಿಂದ ಆತ್ಮನಲ್ಲಿ ಉಂಟಾಗುವ ಜ್ಞಾನಕ್ಕೆ ಯಾವುದು ಅವಚ್ಛೇದಕವಾಗಿದೆಯೋ ಎಂದರೆ ಪ್ರದೇಶವಿಶೇಷವನ್ನು ತೋರಿಸತಕ್ಕದಾಗಿದೆಯೋ ಅದು ಶರೀರವೆನಿಸಿಕೊಳ್ಳುವುದು. ಆತ್ಮನು ವಿಭುವಾದುದರಿಂದ ಎಂದರೆ ವ್ಯಾಪಕವಸ್ತುವಾದುದರಿಂದ ಶರೀರದ ಒಳಗೂ ಹೊರಗೂ ಇರುವನು; ಇಂಥ ಆತ್ಮನಿಗೆ ಇಂದ್ರಿಯಗಳಿಂದ ಉಂಟಾಗುವ ಜ್ಞಾನವು ಆತ್ಮನ ಯಾವ ಪ್ರದೇಶದಲ್ಲಿ ಉಂಟಾಗುವುದೆಂದು ನಿಶ್ಚಯವಾಗುವುದಿಲ್ಲ. ಶರೀರವಾದರೆ ಆತ್ಮನ ಒಂದು ಭಾಗವನ್ನು ಆವರಿಸಿ ಆ ಪ್ರದೇಶದಲ್ಲಿಯೇ ಜ್ಞಾನವುಂಟಾಗುವುದೆಂಬ ನಿಶ್ಚಯವನ್ನು ನಮಗೆ ಉಂಟುಮಾಡಿಕೊಡುವುದಾದಕಾರಣ ಈ ಲಕ್ಷಣವು ಶರೀರದಲ್ಲಿ ಚೆನ್ನಾಗಿ ಅನ್ವಯಿಸುವುದು. ಘಟಾದಿಪದಾರ್ಥಗಳು ಇಂದ್ರಿಯಗಳಿಂದ ಉಂಟಾಗುವ ಜ್ಞಾನಕ್ಕೆ ಅವಚ್ಛೇದಕಗಳಲ್ಲವಾದುದರಿಂದ ಅತಿವ್ಯಾಪ್ತಿಯೂ ಇಲ್ಲ'' ಎಂದು ಹೇಳುವುದಾದರೆ-

### ೨೫೫ ತಸ್ಯಾಪಿ ದೂಷಣಂ.

ಆಗ ಈಶ್ವರಶರೀರಗಳಲ್ಲಿ ಈ ಲಕ್ಷಣಕ್ಕೆ ಅವ್ಯಾಪ್ತಿದೋಷವುಂಟಾಗುವುದು. ಜಗದ್ರಕ್ಷಣೆಗಾಗಿ ಎಂದರೆ ಪಾಪಿಗಳನ್ನು ಸಂಹರಿಸುವುದರ ಮೂಲಕ ಸಾಧುಗಳ ಪರಿತ್ರಾಣವನ್ನು ಮಾಡಿ ಅವರ ಮೂಲಕ ಧರ್ಮರಹಸ್ಯಗಳನ್ನು ನೆಲೆಗೊಳಿಸುವುದಕ್ಕಾಗಿ ತನ್ನ ಅಮೋಘವಾದ ಸಂಕಲ್ಪದಿಂದ ಈಶ್ವರನು ಪರಿಗ್ರಹಿಸುವ ಅಸಂಖ್ಯಾತಗಳಾದ ದಿವ್ಯಶರೀರಗಳಲ್ಲಿ ಈ ಲಕ್ಷಣವು ವ್ಯಾಪಿಸುವುದಿಲ್ಲ. ಏತಕ್ಕೆಂದರೆ ಸರ್ವಜ್ಞನಾದ ಈಶ್ವರನು ನಿತ್ಯನಾದುದರಿಂದ ಅವನ ಜ್ಞಾನವೂ ನಿತ್ಯವಾಗಿರುವುದಾದಕಾರಣ ಇಂದ್ರಿಯಗಳಿಂದ ಉಂಟಾಗುವ ಜ್ಞಾನವೇ ಈಶ್ವರನಲ್ಲಿ ಅಪ್ರಸಿದ್ಧವಾಗಿರುವುದು. ಅವನ ಜ್ಞಾನವು ಅವನ ಶರೀರದ ಒಳಭಾಗದಲ್ಲಿರುವಂತೆ ಹೊರಭಾಗದಲ್ಲಿಯೂ ಇದ್ದೇ ಇರುವುದರಿಂದ ಅಂಥ ಜ್ಞಾನಕ್ಕೆ ಅವನ ಶರೀರಗಳು ಅವಚ್ಛೇದಕಗಳಾಗಿಲ್ಲವಾಗಿ ಅವುಗಳಲ್ಲಿ ಅವ್ಯಾಪ್ತಿದೋಷವು ಅಪರಿಹಾರ್ಯವಾಗಿರುವುದು.

ಹಾಗೆಯೇ ಶಿಲಾರೂಪವಾದ ಅಹಲ್ಯಾದಿಶರೀರಗಳಲ್ಲಿಯೂ ಇಂದ್ರಿಯಜನ್ಯವಾದ ಜ್ಞಾನವೇ ಇಲ್ಲವಾದುದರಿಂದ ಆ ಶರೀರಗಳು ಅಂಥ ಜ್ಞಾನಕ್ಕೆ ಅವಚ್ಛೇದಕಗಳಾಗಲಿಲ್ಲವಾಗಿ ಅವುಗಳಲ್ಲಿಯೂ ಅವ್ಯಾಪ್ತಿಯನ್ನು ತಿಳಿಯಬಹುದು. ಆದಕಾರಣ

ನೀವು ಹೇಳಿದ ಮೂರು ಲಕ್ಷಣಗಳೊಳಗೆ ಒಂದನೆಯ ಎರಡನೆಯ ಲಕ್ಷಣಗಳು ಯಾವಯಾವ ರೀತಿಯಲ್ಲಿ ನೋಡಿದರೂ ಸಂಗತವಾಗುವುವಲ್ಲ.

### ೨೫೩ ಅಥ ತೃತೀಯಲಕ್ಷಣದೂಷಣಂ.

ಮೂರನೆಯ ಲಕ್ಷಣದಲ್ಲಿ—ಭೋಗಾಯತನವಾಗಿಯೂ ಎಂಬ ಪದಕ್ಕೆ ಅಭಿಪ್ರಾಯವೇನು ?—"ಭೋಗವೆಂದರೆ ಸುಖದುಃಖಾನುಭವ-ಇದಕ್ಕೆ ಆಯತನವೆಂದರೆ ಹೇತುವಾಗಿರುವುದು" ಎಂಬ ಅಭಿಪ್ರಾಯವಾಗುವ ಪಕ್ಷದಲ್ಲಿ ಇಲ್ಲಿ ಉಭಯಾನುಭವವೂ ವಿವಕ್ಷಿತವೋ ಅಥವಾ ಒಂದೊಂದರ ಅನುಭವವೇ ವಿವಕ್ಷಿತವೋ ? ಎಂದು ಪ್ರಶ್ನೆಮಾಡಿದಾಗ ಉಭಯಾನುಭವವೂ ವಿವಕ್ಷಿತವೆಂದು ಹೇಳುವುದಾದರೆ ಸುಖದುಃಖಗಳೆರಡರ ಅನುಭವಕ್ಕೂ ಹೇತುವಾಗಿರುವ ಮನುಷ್ಯಾದಿಶರೀರಗಳಲ್ಲಿ ಲಕ್ಷಣಸಮನ್ವಯವಾದರೂ, ಕೇವಲ ಸುಖಾನುಭವಕ್ಕೆ ಹೇತುವಾದ ಮುಕ್ತಾತ್ಮರ ಶರೀರಗಳಲ್ಲಿಯೂ ಈಶ್ವರಶರೀರಗಳಲ್ಲಿಯೂ, ಕೇವಲ ದುಃಖಾನುಭವಕ್ಕೆ ಹೇತುವಾದ ನಾರಕಿಗಳ ಯಾತನಾಶರೀರಗಳಲ್ಲಿಯೂ ಅವ್ಯಾಪ್ತಿದೋಷವುಂಟಾಗುವುದು. ಆದುದರಿಂದಲೇ ಎರಡನೆಯ ಪಕ್ಷದಲ್ಲಿ ಅದೇ ಶರೀರಗಳಲ್ಲಿ ಪರಸ್ಪರಾವ್ಯಾಪ್ತಿಯೂ ಮನುಷ್ಯಾದಿಶರೀರಗಳಲ್ಲಿ ಸುತರಾಂ ಅವ್ಯಾಪ್ತಿಯೂ ಉಂಟಾಗುವುವು. ಮತ್ತು ಮನೆ, ಮಠ ಮುಂತಾದುವುಗಳೂ ಭೋಗಕ್ಕೆ ಹೇತುಗಳಾಗಿರುವುದರಿಂದ ಅವುಗಳೂ ಶರೀರವೆನಿಸಿಕೊಳ್ಳಬೇಕಾಗಿ ಅತಿವ್ಯಾಪ್ತಿಯೂ ಅಪರಿಹಾರ್ಯವಾಗಿರುವುದು.

### ೨೫೪ ತೃತೀಯಲಕ್ಷಣಸ್ಯ ಪರಿಷ್ಕಾರಾಂತರಾವಲಂಬನಂ ತತ್ಖಂಡನಂ ಚ.

ಹಾಗಲ್ಲ—"ಯಾವ ಆತ್ಮನಲ್ಲಿ ಉಂಟಾಗುವ ಭೋಗವು ಯಾವುದರ ಸಂಬಂಧದಿಂದಲೇ ಉಂಟಾಗುವುದೋ ಅವನಿಗೆ ಅದು ಭೋಗಾಯತನವಾಗಿರುವುದು. ದೇವದತ್ತನೆಂಬ ಆತ್ಮನಿಗೆ ಉಂಟಾಗುವ ಭೋಗವು ಅವನ ಶರೀರಸಂಬಂಧದಿಂದಲೇ ಉಂಟಾಗುವುದಾದುದರಿಂದ ಲಕ್ಷಣಕ್ಕೆ ಸಮನ್ವಯವನ್ನು ತಿಳಿಯಬಹುದು. ಶರೀರಸಂಬಂಧವಿದ್ದರೆ ಮನೆ ಮಠಗಳಿಲ್ಲದಿದ್ದರೂ ಅವುಗಳಿಂದ ಆಗುವ ಪ್ರಯೋಜನಗಳನ್ನು ಬೇರೊಂದರಿಂದ ಸಂಪಾದಿಸಬಹುದು. ಮನೆ ಮುಂತಾದುವುಗಳಿದ್ದರೂ ಶರೀರಸಂಬಂಧವಿಲ್ಲದಿದ್ದರೆ ಅದರಿಂದ ಆಗುವ ಪ್ರಯೋಜನವನ್ನು ಮತ್ತೊಂದರಿಂದ ಸಂಪಾದಿಸಲಾಗುವುದಿಲ್ಲ. ಆದಕಾರಣ ಮನೆ ಮುಂತಾದುವುಗಳಲ್ಲಿ ಅತಿವ್ಯಾಪ್ತಿಯೂ ಇಲ್ಲ" ಎಂಬುದಾಗಿ ಹೇಳುವ ಪಕ್ಷದಲ್ಲಿ—

ಇದರಿಂದ ಫಲಿತವಾದ ನಿಯಮವೇನಾಯಿತು? ಭೋಗವಿದ್ದರೆ ಶರೀರವಿದ್ದೇ ಇರಬೇಕೆಂದಲ್ಲವೆ? ನಮ್ಮ ಸಿದ್ಧಾಂತರೀತಿಯಾಗಿ ಇದು ಲಕ್ಷಣವಾಗಲಾರದು. ಮುಕ್ತಾತ್ಮನು ತನಗೆ ಇಚ್ಛೆಯಿಲ್ಲದಿದ್ದರೆ ಶರೀರವನ್ನು ಪರಿಗ್ರಹಿಸದೆಯೂ ಇದ್ದು ಭೋಗವನ್ನು ಮಾತ್ರ ತಪ್ಪದೆ ಪಡೆಯುತ್ತಿರುವನು. ಅಂಥ ಭೋಗದಲ್ಲಿ ಶರೀರ ಸಂಬಂಧವು ಕಾರಣವಾಗಲಿಲ್ಲವಷ್ಟೆ.

ಮುಕ್ತಾತ್ಮನಿಗೆ ಸುಖಭೋಗವಿದ್ದರೂ ಲಕ್ಷಣದಲ್ಲಿ ದುಃಖಾತ್ಮಕಭೋಗವನ್ನು ವಿವಕ್ಷೆ ಮಾಡುವುದರಿಂದ ದೋಷವಿಲ್ಲವೆಂದು ಹೇಳುವುದಾದರೆ–ಆಗ ಇಂದ್ರಿಯಗಳಲ್ಲಿ ಅತಿವ್ಯಾಪ್ತಿ ತಲೆದೋರುವುದು. ಇಂದ್ರಿಯಗಳಿಂದ ಉಂಟಾಗುವ ಭೋಗಗಳೆಲ್ಲವೂ ದುಃಖರೂಪಗಳಾಗಿಯೇ ಇರುವುವಷ್ಟೆ. ಹಾಗೆಯೇ ಮುಕ್ತಾತ್ಮರುಗಳೂ ಈಶ್ವರನೂ ತಮ್ಮ ಇಚ್ಛೆಯಿಂದ ಪರಿಗ್ರಹಿಸುವ ದಿವ್ಯಶರೀರಗಳಲ್ಲಿ ಸುಖಾತ್ಮಕವಾದ ಭೋಗವಲ್ಲದೆ ದುಃಖಾತ್ಮಕವಾದ ಭೋಗಕ್ಕೆ ಪ್ರಸಕ್ತಿಯೇ ಇಲ್ಲವಾದುದರಿಂದ ಆ ಶರೀರಗಳಲ್ಲಿ ಅವ್ಯಾಪ್ತಿಯೂ ಸ್ಥಿರವಾಗುವುದು.

ಮತ್ತು ಆತ್ಮನಲ್ಲಿ ಉಂಟಾಗುವ ಭೋಗವೆಲ್ಲಾ ಶರೀರಸಂಬಂಧದಿಂದಲೇ ಉಂಟಾಗುವುದೆಂದರೆ ಕಳೆದುಹೋದ ಅನೇಕಜನ್ಮಗಳಲ್ಲಿಯೂ, ಭಾವಿಯಾದ ಅನೇಕ ಜನ್ಮಗಳಲ್ಲಿಯೂ ಆತ್ಮನಲ್ಲಿ ಉಂಟಾದ ಮತ್ತು ಉಂಟಾಗುವ ಭೋಗಗಳೆಲ್ಲಾ ವರ್ತಮಾನಶರೀರಸಂಬಂಧದಿಂದ ಉಂಟಾಗಲಿಲ್ಲವಾಗಿ ವರ್ತಮಾನಶರೀರದಲ್ಲಿ ಅಸಂಭವ ದೋಷವುಂಟಾಗುವುದು. ಹೀಗೆಯೇ ಸಮಸ್ತಶರೀರಗಳೂ ಆ ಆ ಕಾಲಕ್ಕೆ ವರ್ತಮಾನವೆನಿಸಿಕೊಂಡೇ ಇದ್ದುದರಿಂದಲೂ ಇರುವುದರಿಂದಲೂ ಎಲ್ಲಾ ಶರೀರಗಳಲ್ಲಿಯೂ ಅಸಂಭವದೋಷವು ಸ್ಫುಟವಾಗಿರುವುದು. ಹಾಗಲ್ಲ—"ಜನ್ಮಾಂತರದಲ್ಲಿ ಉಂಟಾದ ಭೋಗಗಳೂ ಒಂದೊಂದು ಶರೀರದ ಸಂಬಂಧದಿಂದಲೇ ಉಂಟಾಗಿರುವುವಾದುದರಿಂದ ಅಸಂಭವವಿಲ್ಲ" ಎಂದು ಹೇಳುವುದಾದರೆ ಆತ್ಮಾಶ್ರಯವೆಂಬ ದೋಷವು ತಲೆಯೆತ್ತುವುದು. ಶರೀರಲಕ್ಷಣದ ವಿಚಾರವೇ ಅಲ್ಲವೆ ಪ್ರಕೃತದಲ್ಲಿ ನಡೆಯುತ್ತಿರುವುದು. ಶರೀರಕ್ಕೆ ಲಕ್ಷಣವೇನೆಂದು ಪ್ರಶ್ನೆಮಾಡಿದಾಗ "ಯಾವುದು ಶರೀರವೋ ಅದು ಶರೀರವು" ಎಂದು ಲಕ್ಷಣವನ್ನು ಹೇಳುವುದಾದರೆ ಆತ್ಮಾಶ್ರಯದೋಷವುಂಟಾಗುವುದು. ಮೊದಲು ಶರೀರವೆಂಬುದು ಇಂಥದೆಂದು ತಿಳಿದರೆ ಅದರಿಂದ ಜನ್ಮಾಂತರಭೋಗವೂ ಶರೀರದಿಂದಲೇ ಉಂಟಾಯಿತೆಂದು ತಿಳಿಯಬಹುದು. ಅದನ್ನು ತಿಳಿವುದಕ್ಕಾಗಿಯೇ ಪುನಃ ಶರೀರಪದಾರ್ಥಜ್ಞಾನವೇ ಬೇಕಾಗಿರುವುದರಿಂದ ಆತ್ಮಾಶ್ರಯದೋಷಕ್ಕೆ ಪರಿಹಾರವಾಗುವುದಿಲ್ಲ.

### ೨೫೮ ಪುನಃ ಪರಿಷ್ಕಾರಾಂತರಾವಲಂಬನಂ ತತ್ಖಂಡನಂ ಚ.

ಪೂಜ್ಯರೇ! "ಆತ್ಮನಲ್ಲಿ ಉಂಟಾಗುವ ಭೋಗಕ್ಕೆ ಯಾವುದು ಅವಚ್ಛೇದಕವಾಗಿದೆಯೋ ಎಂದರೆ ಪ್ರದೇಶವಿಶೇಷವನ್ನು ತೋರಿಸುವುದಾಗಿದೆಯೋ ಅದು ಶರೀರವೆನಿಸಿಕೊಳ್ಳುವುದು. ಭೋಗಾಯತನವೆಂಬ ಪದಕ್ಕೂ ಇದೇ ಅಭಿಪ್ರಾಯವು. ಆತ್ಮನು ವಿಭುವಾದುದರಿಂದ ಎಂದರೆ ವ್ಯಾಪಕವಸ್ತುವಾದುದರಿಂದ ಶರೀರದ ಒಳಗೂ ಹೊರಗೂ ವ್ಯಾಪಿಸಿರುವನು. ಇಂಥ ಆತ್ಮನಲ್ಲಿ ಉಂಟಾಗುವ ಭೋಗವು ಆತ್ಮನ ಯಾವ ಪ್ರದೇಶದಲ್ಲಿ ಉಂಟಾಗುವುದೆಂದು ನಿಶ್ಚಯವಾಗುವುದಿಲ್ಲ. ಶರೀರವಾದರೆ ಆತ್ಮನ ಒಂದು ಭಾಗವನ್ನಾವರಿಸಿ ಆ ಪ್ರದೇಶದಲ್ಲಿಯೇ ಆತ್ಮನಿಗೆ ಭೋಗವುಂಟಾಗುವುದೆಂಬ ನಿಶ್ಚಯವನ್ನು ನಮಗೆ ಉಂಟುಮಾಡಿಕೊಡುವುದಾದಕಾರಣ ಈ ಲಕ್ಷಣವು ಶರೀರದಲ್ಲಿ ಚೆನ್ನಾಗಿ ಅನ್ವಯಿಸುವುದು. ಮನೆ ಮುಂತಾದುವುಗಳು ಆತ್ಮನಲ್ಲಿ ಉಂಟಾಗುವ ಭೋಗಕ್ಕೆ ಅವಚ್ಛೇದಕಗಳಲ್ಲವಾದುದರಿಂದ ಅವುಗಳಲ್ಲಿ ಅತಿವ್ಯಾಪ್ತಿಯೂ ಇಲ್ಲ. ಆದರೆ ಸಿಂಹದ ಕಂಠಪ್ರದೇಶದಲ್ಲಿ ನಾದವುಂಟಾದರೂ—"ವನದಲ್ಲಿ ಸಿಂಹನಾದವು" ಎಂಬುದಾಗಿಯೂ ವ್ಯವಹಾರವಿರುವುದರಿಂದ ಕಂಠಪ್ರದೇಶದಲ್ಲಿ ಉಂಟಾಗುವ ನಾದವನ್ನು ಕುರಿತು ಕಂಠದಂತೆ ವನವೂ ಹೇಗೆ ಅವಚ್ಛೇದಕವಾಗಿರುವುದೋ ಆದರಂತೆ ಶರೀರದಿಂದ ಆಕ್ರಮಿಸಲ್ಪಟ್ಟ ಆತ್ಮನ ಭಾಗದಲ್ಲಿ ಉಂಟಾಗುವ ಭೋಗಕ್ಕೆ "ಗೃಹದಲ್ಲಿ ಆತ್ಮನಿಗೆ ಸುಖವು" ಎಂಬ ವ್ಯವಹಾರವೂ ಇರುವುದರಿಂದ ಶರೀರದಂತೆ ಗೃಹವೂ ಅವಚ್ಛೇದಕವಾಗಿಯೇ ಇರುವಕಾರಣ ಅತಿವ್ಯಾಪ್ತಿ ಪುನಃ ಬಂದೇ ಬರುವುದು ಎಂದು ಹೇಳಬಾರದು. ಏತಕ್ಕೆಂದರೆ ಲಕ್ಷಣವಾಕ್ಯದಲ್ಲಿ ಭೋಗಕ್ಕೆ ಯಾವುದು ಸಾಕ್ಷಾತ್ತಾಗಿ ಅವಚ್ಛೇದಕವಾಗಿರುವುದೋ ಅದನ್ನೇ ವಿವಕ್ಷೆಮಾಡಿರುವೆವು. ಸಿಂಹನಾದಕ್ಕೆ ಕಂಠವು ಸಾಕ್ಷಾತ್ತಾಗಿ ಅವಚ್ಛೇದಕವಾಗಿರುವುದು. ವನವಾದರೆ—ಸಿಂಹನಾದಕ್ಕೆ ಸಾಕ್ಷಾತ್ತಾಗಿ ಅವಚ್ಛೇದಕವಾಗಿರುವ ಸಿಂಹಕಂಠಕ್ಕೆ ಆಶ್ರಯವಾಗಿರುವ ಸಿಂಹಶರೀರಕ್ಕೆ ಆಶ್ರಯವಾಗಿರುವುದರಿಂದ ಪರಂಪರೆಯಾಗಿ ಅವಚ್ಛೇದಕವಾಗಿರುವುದಲ್ಲದೆ ಸಾಕ್ಷಾತ್ತಾಗಿ ಅಲ್ಲ. ಆದರಂತೆ ಆತ್ಮನಲ್ಲಿ ಉಂಟಾಗುವ ಭೋಗಕ್ಕೆ ಶರೀರವು ಸಾಕ್ಷಾತ್ತಾಗಿ ಅವಚ್ಛೇದಕವಾಗಿರುವುದು. ಗೃಹವಾದರೆ—ಅಂಥ ಶರೀರಕ್ಕೆ ಆಧಾರವಾಗಿರುವ ಕಾಲುಗಳು ನಿಲ್ಲುವುದಕ್ಕೆ ಆಶ್ರಯವಾದುದರಿಂದ ಪರಂಪರೆಯಿಂದ ಅವಚ್ಛೇದಕವಾಗಿರುವುದಲ್ಲದೆ ಸಾಕ್ಷಾತ್ತಾಗಿ ಅಲ್ಲ. ಆದಕಾರಣ ಗೃಹಾದಿಗಳಲ್ಲಿ ಅತಿವ್ಯಾಪ್ತಿಗೆ ಪ್ರಸಕ್ತಿಯೇ ಇಲ್ಲ. ಆದುದರಿಂದ ಭೋಗಕ್ಕೆ ಅವಚ್ಛೇದಕವಾದುದು ಭೋಗಾಯತನವೆಂದೂ, ಅದೇ ಶರೀರವೆಂದೂ ಹೇಳುವುದರಲ್ಲಿ ತಡೆಯೇನು?

ಎಂದು ಹೇಳುವುದಾದರೆ—ಪರಕಾಯಪ್ರವೇಶಸ್ಥಳದಲ್ಲಿ ಪರಶರೀರವು ಈಗ ಅದರಲ್ಲಿ ಪ್ರವೇಶಿಸಿದವನಿಗೆ ಶರೀರವಾಗಬೇಕಾಗಿ ಬಂದು ಅದರಲ್ಲಿ ಅತಿವ್ಯಾಪ್ತಿ ದ್ದುಷ್ಪರಿಹರವಾಗುವುದು. ಕೆಲವು ಭೋಗವಿಶೇಷಗಳನ್ನು ಪಡೆವುದಕ್ಕಾಗಿಯೇ ಅಷ್ಟೆ ಇನ್ನೊಬ್ಬನ ಶರೀರದಲ್ಲಿ ಪ್ರವೇಶಿಸುವನು. ಆಗ ಅಂಥ ಭೋಗಕ್ಕೆ ಆ ಶರೀರವು ಸಾಕ್ಷಾತ್ತಾಗಿಯೇ ಅವಚ್ಛೇದಕವಾಗಿರುವುದರಿಂದ ಅತಿವ್ಯಾಪ್ತಿ ತಪ್ಪಿದುದಲ್ಲ. ಸರ್ವ ವ್ಯಾಪಕನಾದ ಈಶ್ವರನಲ್ಲಿ ಉಂಟಾಗುವ ಭೋಗವು ಅವನ ಶರೀರಭಾಗದಲ್ಲಿ ಮಾತ್ರವೇ ಉಂಟಾಗದೆ ಸರ್ವಪ್ರದೇಶದಲ್ಲಿಯೂ ಉಂಟಾಗುವುದಾದುದರಿಂದ ಅಂಥ ಭೋಗಕ್ಕೆ ಅವನ ದಿವ್ಯಶರೀರವು ಅವಚ್ಛೇದಕವಾಗಲಿಲ್ಲವಾಗಿ ಆ ಶರೀರದಲ್ಲಿ ಅವ್ಯಾಪ್ತಿಯೂ ಪರಿಹರಿಸಲಶಕ್ಯವಾಗಿರುವುದು.

### ೨೩೯ ಪುನಃ ಪರಿಷ್ಕಾರಾಂತರಾವಲಂಬನಂ.

ಪೂಜ್ಯರೇ! "ಭೋಗಾಶ್ರಯವೆಂಬ ಭ್ರಮಕ್ಕೆ ಯಾವುದು ಗೋಚರವಾಗಿರುವುದೋ, ಅಥವಾ ಆತ್ಮನೆಂಬ ಭ್ರಮಕ್ಕೆ ಯಾವುದು ಗೋಚರವಾಗಿರುವುದೋ ಅದು ಶರೀರವೆನಿಸಿಕೊಳ್ಳುವುದು. ಶಾಸ್ತ್ರವಾಸನೆಯಿಲ್ಲದೆ ಕೇವಲ ಲೋಕತಂತ್ರವನ್ನು ಅನುಸರಿಸಿದವರಿಗೆ ಶರೀರದಲ್ಲಿಯೇ ಭೋಗವಿರುವುದೆಂದೂ, ಶರೀರವೇ ಆತ್ಮನೆಂದೂ ಭ್ರಮವಿರುವುದಷ್ಟೆ. ಇಂಥ ಭ್ರಮವು ಶಾಸ್ತ್ರವಾಸನೆಯಿಲ್ಲದವರಿಗೆ ಘಟಾದಿಪದಾರ್ಥಗಳಲ್ಲಿಯೂ ಉಂಟಾಗಬಹುದು. ಆದರೆ ನಾನು ಆತ್ಮನು ನನಗೆ ಭೋಗವುಂಟು ಎಂಬ ಪ್ರತ್ಯಕ್ಷರೂಪವಾದ ಭ್ರಮವು ಅಂಥವರಿಗೆ ಶರೀರದಲ್ಲಿಯೇ ಇರುವುದಲ್ಲದೆ ಘಟಾದಿಪದಾರ್ಥಗಳಲ್ಲಿ ಇಲ್ಲ. ಆದಕಾರಣ ಘಟಾದಿಗಳಲ್ಲಿ ಅತಿವ್ಯಾಪ್ತಿಪರಿಹಾರವೂ ಶರೀದಲ್ಲಿ ಲಕ್ಷಣಕ್ಕೆ ಸಮನ್ವಯವೂ ಆಗಬಹುದು."

### ೨೪೦ ತಸ್ಯಾಪಿ ಖಂಡನಂ.

ಎಂದು ಹೇಳುವುದಾದರೆ-ದೇಹವೇ ಆತ್ಮನೆಂದು ಹೇಳುವ ವಾದಿಗಳಂತೆ ಇಂದ್ರಿಯವೇ ಆತ್ಮನೆಂದೂ, ಮನಸ್ಸೇ ಆತ್ಮನೆಂದೂ, ಪ್ರಾಣವೇ ಆತ್ಮನೆಂದೂ, ಬುದ್ಧಿಯೇ ಆತ್ಮನೆಂದೂ, ಹೇಳುವ ವಾದಿಗಳೂ ಬಹು ಮಂದಿಗಳಿರುವರಾದುದರಿಂದ ಆ ಆ ವಾದಿಗಳ ಮತದಂತೆ ಇಂದ್ರಿಯವೂ ಮನಸ್ಸೂ ಪ್ರಾಣವೂ ಬುದ್ಧಿಯೂ ಸಹ ಆತ್ಮನೆಂಬ ಭ್ರಮಕ್ಕೆ ಗೋಚರವಾಗಿರುವುದರಿಂದ ಅವುಗಳೂ ಶರೀರಗಳೆನಿಸಿಕೊಳ್ಳಬೇಕಾಗಿ ಬಂದು ಈ ಲಕ್ಷಣಕ್ಕೆ ಅವುಗಳಲ್ಲಿ ಅತಿವ್ಯಾಪ್ತಿಯುಂಟಾಗುವುದು ನಾನು ಕುರುಡನು ನಾನು ಕಿವುಡನು ನಾನು ಮೂಗನು ಎಂಬ ಪ್ರತ್ಯಕ್ಷಭ್ರಮವು

ಅವುಗಳಲ್ಲಿಯೂ ಇರುವುದಷ್ಟೆ. ಮತ್ತು ಮುಕ್ತಶರೀರದಲ್ಲಿಯೂ ಈಶ್ವರಶರೀರದಲ್ಲಿಯೂ ಅವ್ಯಾಪ್ತಿಯುಂಟಾಗುವುದು. ಲೋಕತಂತ್ರಾನುವರ್ತಿಗಳಿಗೆ ಶರೀರವಿಷಯದಲ್ಲಿ ಆತ್ಮಭ್ರಮವಿರುವಂತೆ ಮುಕ್ತರಿಗೂ ಈಶ್ವರನಿಗೂ ಆತ್ಮಭ್ರಮವಿಲ್ಲವಷ್ಟೆ.

೨೬೧ ಪುನಃ ಪರಿಷ್ಕಾರಾಂತರಾವಲಂಬನಂ ತತ್ಖಂಡನಂ ಚ.

ಹಾಗಾದರೆ "ಕೈ ಕಾಲು ತಲೆ ಮುಂತಾದ ಅವಯವಗಳೊಡನೆ ಕೂಡಿರುವ ವಸ್ತು ಶರೀರವೆನಿಸಿಕೊಳ್ಳುವುದು" ಎಂದು ಹೇಳುವುದಾದರೆ ಅಂಥ ಅವಯವಗಳೊಡನೆ ಕೂಡಿರುವ ಪುತ್ತಳಿಗಳಲ್ಲಿ (ಬೊಂಬೆಗಳಲ್ಲಿ) ಲಕ್ಷಣಕ್ಕೆ ಅತಿವ್ಯಾಪ್ತಿಯುಂಟಾಗಿ ಅವುಗಳೂ ಶರೀರವೆನಿಸಿಕೊಳ್ಳಬೇಕಾಗುವುವು.

ಇದೇ ಲಕ್ಷಣದಲ್ಲಿ ಪ್ರಾಣವುಳ್ಳುದಾಗಿಯೂ ಎಂಬುದೊಂದು ವಿಶೇಷಣವನ್ನು ಸೇರಿಸಿ ಪುತ್ತಳಿಗಳಲ್ಲಿ ಅತಿವ್ಯಾಪ್ತಿಪರಿಹಾರವನ್ನೂ, ಅಸ್ಮದಾದಿಶರೀರಗಳಲ್ಲಿ ಲಕ್ಷಣಸಮನ್ವಯವನ್ನೂ ಮಾಡುವುದಾದರೆ ಮೃತಶರೀರದಲ್ಲಿ ಅವಯವಗಳಿದ್ದರೂ ಪ್ರಾಣವಿಲ್ಲವಾಗಿ ಅವ್ಯಾಪ್ತಿದೋಷವುಂಟಾಗುವುದು.

ಯಾವುದಾದರೂ ಒಂದುಕಾಲದಲ್ಲಿ ಪ್ರಾಣವಿದ್ದರೆ ಸಾಕಾಗಿರುವುದೆಂದು ವಿವಕ್ಷಿಮಾಡಿ ಪುತ್ತಳಿಗಳಲ್ಲಿ ಯಾವಾಗಲೂ ಪ್ರಾಣವಿಲ್ಲದುದರಿಂದ ಅತಿವ್ಯಾಪ್ತಿಪರಿಹಾರವನ್ನೂ, ಮೃತಶರೀರದಲ್ಲಿ ತತ್ಕಾಲದಲ್ಲಿ ಪ್ರಾಣವಿಲ್ಲದಿದ್ದರೂ ಪೂರ್ವದಲ್ಲಿ ಇದ್ದುದರಿಂದ ಅವ್ಯಾಪ್ತಿಪರಿಹಾರವನ್ನೂ ಮಾಡುವುದಾದರೆ ಆಗ ವೃಕ್ಷಾದಿಸ್ಥಾವರಶರೀರಗಳಲ್ಲಿ ಅವ್ಯಾಪ್ತಿಯುಂಟಾಗುವುದು. ಅವುಗಳಲ್ಲಿ ಪ್ರಾಣವಿದ್ದರೂ ಕೈ ಕಾಲು, ತಲೆ ಮುಂತಾದ ಅವಯವಗಳಿಲ್ಲವಷ್ಟೆ.

೨೬೨ ಪುನಃ ಪರಿಷ್ಕಾರಾಂತರಾವಲಂಬನಂ ತತ್ಖಂಡನಂ ಚ.

ಹಾಗಾದರೆ—"ಯಾವ ಆತ್ಮನಿಗೆ ಭೋಗವನ್ನು ಕೊಡುವ ಅದೃಷ್ಟದಿಂದ ಯಾವುದು ಉಂಟಾಗುವುದೋ ಅವನಿಗೆ ಅದು ಶರೀರವೆನಿಸಿಕೊಳ್ಳುವುದು; ಆತ್ಮನಿಗೆ ಸುಖದುಃಖಭೋಗಗಳನ್ನು ಕೊಡುವ ಅದೃಷ್ಟವು ಭೋಗಕ್ಕೆ ಅನುಕೂಲವಾದ ಶರೀರವನ್ನು ಉಂಟುಮಾಡಿಯೇ ಭೋಗಕ್ಕೆ ಕಾರಣವಾಗುವುದಲ್ಲವೆ? ಆದಕಾರಣ ಈ ಲಕ್ಷಣವು ಯಾವುದೊಂದು ದೋಷಕ್ಕೂ ಗುರಿಯಾಗದೆ ಶುದ್ಧವಾಗಿರುವುದು" ಎಂದು ಹೇಳುವುದಾದರೆ—

ಆತ್ಮನಿಗೆ ಭೋಗವನ್ನು ಕೊಡುವ ಅದೃಷ್ಟದಿಂದ ಶರೀರವು ಹೇಗೆ ಉಂಟಾಗುವುದೋ ಹಾಗೆಯೇ ಇಂದ್ರಿಯವೂ ತಪ್ಪದೆ ಉಂಟಾಗಬೇಕಾಗಿರುವುದರಿಂದ ಇಂದ್ರಿ

ಯದಲ್ಲಿ ಅತಿವ್ಯಾಪ್ತಿಯುಂಟಾಗುವುದು. ಇಂದ್ರಿಯಗಳ ಉತ್ಪತ್ತಿಗೆ ಕಾರಣವಾಗದೆ ಶರೀರದ ಉತ್ಪತ್ತಿಗೆ ಮಾತ್ರ ಕಾರಣವಾಗುವ ಅದೃಷ್ಟವಿಶೇಷವು ಇಂಥದು ಎಂದು ನಿರೂಪಿಸಲು ಶಕ್ಯವಲ್ಲ. ಶರೀರವನ್ನು ಮಾತ್ರವೇ ಯಾವುದು ಉಂಟುಮಾಡುವುದೋ ಅದೇ ಶರೀರಾರಂಭಕವಾದ ಅದೃಷ್ಟವೆಂದು ಹೇಳುವುದಾದರೆ ಆತ್ಮಾಶ್ರಯವಾಗು ವುದು. ಏತಕ್ಕೆಂದರೆ ಶರೀರಲಕ್ಷಣದಲ್ಲಿಯೇ ಶರೀರಪದವು ಸೇರುತ್ತದು.

ಪುಣ್ಯವಿಶೇಷದಿಂದ ಉಂಟಾಗಿರುವ ಒಂದೇ ಒಂದು ಅದೃಷ್ಟದಿಂದ ಶರೀರ, ಗೃಹ, ಕ್ಷೇತ್ರ, ಆರಾಮ, ದೀರ್ಘಾಯುಷ್ಯ, ಪುತ್ರಾದಿಸಂಪತ್ತಿ ಮುಂತಾದ ಅನೇಕಫಲಗಳು ದೊರೆವುವಾಗಿದ್ದರೆ ಶರೀರಜನಕವಾದ ಅದೃಷ್ಟದಿಂದ ಉಂಟಾಗಿ ರುವ ಗೃಹಾದಿಗಳಲ್ಲಿ ಅತಿವ್ಯಾಪ್ತಿ ಅವಿಚಾಲ್ಯವಾಗಿರುವುದು. ಆದಕಾರಣ ನ್ಯಾಯ ವೈಶೇಷಿಕದರ್ಶನಕಾರರು ಶರೀರಕ್ಕೆ ಹೇಳಿದ ಮೂರು ಲಕ್ಷಣಗಳೂ ಅಸಂಗತಗಳಾ ಗಿರುವುವು.

ಇಂತು ತತ್ತ್ವಶುದ್ಧಿಯೆಂಬ ವಿಶಿಷ್ಟಾದ್ವೈತಪ್ರಕರಣಗ್ರಂಥದೊಳ್
ಅಚಿತ್ತತ್ತ್ವಪರಿಚ್ಛೇದದಲ್ಲಿ ನೈಯಾಯಿಕಾದ್ಯಭಿಮತಶರೀರ
ಲಕ್ಷಣತ್ರಯಖಂಡನಂ ನಾಮ ದಶಮಂ ಪ್ರಕರಣಂ.

---

## ಏಕಾದಶಪ್ರಕರಣಂ.

### ೨೬೩. ಅಥ ಸಿದ್ಧಾಂತ್ಯಭಿಮತಶ್ರುತಿಸಿದ್ಧಶರೀರಲಕ್ಷಣ ಕಥನಾರಂಭಃ.

ಹೀಗೆ ನೈಯಾಯಿಕರೂ ವೈಶೇಷಿಕರೂ ಶರೀರವಿಷಯದಲ್ಲಿ ಹೇಳಿದ ಮೂರು ಲಕ್ಷಣಗಳನ್ನೂ, ಅವುಗಳಲ್ಲಿರುವ ದೋಷಗಳನ್ನೂ ವಿವರವಾಗಿ ತಿಳಿಯಪಡಿಸಿದೆವು. ಈ ರೀತಿಯಾಗಿ ಅವ್ಯಾಪ್ತಿ, ಅತಿವ್ಯಾಪ್ತಿ, ಅಸಂಭವ ಎಂಬ ದೋಷಗಳಿಂದ ಗ್ರಸ್ತಗ ಳಾಗಿರುವ ಲಕ್ಷಣಾಭಾಸಗಳನ್ನು ಶರೀರಕ್ಕೆ ಸ್ವಕಪೋಲದಿಂದ ಕಲ್ಪಿಸಿ, ಶಾಸ್ತ್ರದೊ ಳಗೆ ಸಾವಿರಾರು ಕಡೆಗಳಲ್ಲಿ ಪ್ರಯೋಗಿಸಿರುವ ಶರೀರಪದಕ್ಕೆ ಮುಖ್ಯಾರ್ಥತ್ವವನ್ನು ಕೆಡಿಸಿ, ಗೌಣಾರ್ಥತ್ವವನ್ನು ಸ್ವೀಕರಿಸುವುದಕ್ಕಿಂತಲೂ, ಸಕಲಪ್ರಯೋಗಗಳಲ್ಲಿಯೂ ಶರೀರಪದಕ್ಕೆ ಒಂದೇ ವಿಧವಾದ ಮುಖ್ಯಾರ್ಥತ್ವವು ಸಂಭವಿಸುವಂತೆ ಶರೀರಕ್ಕೆ

ಶಾಸ್ತ್ರಸಿದ್ಧವಾದ ಸಲ್ಲಕ್ಷಣಗಳನ್ನು ಸ್ವೀಕರಿಸುವುದೇ ನ್ಯಾಯಸ್ಥರಿಗೆ ನ್ಯಾಯ್ಯವಾ ದುದರಿಂದ ಅದರಂತೆ ಶ್ರೀಭಾಷ್ಯಕಾರರು ಶರೀರಕ್ಕೆ ಮೂರು ಲಕ್ಷಣಗಳನ್ನು ತೋರಿ ಸಿರುವರು.

### ೨೬೪ ವೇದಾಂತಶಾಸ್ತ್ರೇ ಶರೀರಲಕ್ಷಣಕಥನಸ್ಯ ಕಾರಣ ಶೂನ್ಯತ್ವಪ್ರಯೋಜನಶೂನ್ಯತ್ವಾಶಂಕಾ.

ಪೂಜ್ಯರೇ! “ಶರೀರವೆಂಬ ಪದಾರ್ಥವು—ಗೋವು, ಅಶ್ವ, ಮಹಿಷ, ಘಟ, ಪಟ ಮುಂತಾದ ಪದಾರ್ಥಗಳಂತೆ ಲೋಕಸಿದ್ಧವಾಗಿಯೇ ಇರುವುದರಿಂದ ಇದರ ಲಕ್ಷಣವನ್ನು ಲೋಕದಿಂದಲೇ ತಿಳಿದುಕೊಳ್ಳಬಹುದಾಗಿರುವಲ್ಲಿ ವೇದಾಂತಶಾಸ್ತ್ರ ದಲ್ಲಿ ಇದನ್ನು ನಿರೂಪಿಸುವ ಅವಶ್ಯಕತೆಯೇನು? ಲೋಕಸಿದ್ಧವಾದ ಪದಾರ್ಥಗಳಿಗೂ ಇಲ್ಲಿ ಲಕ್ಷಣಗಳನ್ನು ಹೇಳುವುದಾದರೆ—ಗೋವು, ಅಶ್ವ, ಮಹಿಷ, ಘಟ, ಪಟ ಮುಂತಾದುವುಗಳಿಗೂ ಇಲ್ಲಿ ಲಕ್ಷಣಗಳನ್ನು ಏತಕ್ಕೆ ಹೇಳಲಿಲ್ಲ? ಆದಕಾರಣ ಶ್ರೀ ಭಾಷ್ಯಕಾರರು ಶರೀರಲಕ್ಷಣಕ್ಕಾಗಿ ಇಷ್ಟೊಂದು ಶ್ರಮವನ್ನು ವಹಿಸಿದುದಕ್ಕೆ ಕಾರ ಣವೂ, ಪ್ರಯೋಜನವೂ ಏನಾಗಿರಬಹುದೆಂಬುದನ್ನು ನಿರೂಪಿಸಿ ನಿಶ್ಚಯಿಸಲು ಶಕ್ಯ ವಲ್ಲ” ಎಂದು ಆಶಂಕಿಸಬಾರದು.

### ೨೬೫ ವೇದಾಂತಶಾಸ್ತ್ರೇ ಶರೀರಲಕ್ಷಣಕಥನಸ್ಯ ಸಕಾರಣತ್ವಂ ಸಪ್ರಯೋಜನತ್ವಂ ಚ.

ಗೋವು ಮುಂತಾದ ಲೌಕಿಕಪದಾರ್ಥಗಳನ್ನು ವಿಚಾರಮಾಡಿ ನೋಡಿದರೆ—ಎಲ್ಲಾ ಗೋವುಗಳಲ್ಲಿಯೂ ಇರುವುದಾಗಿಯೂ, ಗೋವನ್ನು ಬಿಟ್ಟು ಉಳಿದ ಯಾವ ಪದಾರ್ಥಗಳಲ್ಲಿಯೂ ಇಲ್ಲದಿರುವುದಾಗಿಯೂ, ಇರುವ ಒಂದಾನೊಂದು ಆಕೃತಿ ಯನ್ನು ಎಂದರೆ, ಸಂಸ್ಥಾನವೆಂದು ಹೇಳಿಸಿಕೊಳ್ಳುವ ಅಸಾಧಾರಣವಾದ ಮತ್ತು ಏಕರೂಪವಾದ ಜಾತಿಯನ್ನು ಗೋವು ಪಡೆದಿರುವುದು. ಹಾಗೆಯೇ—ಎಲ್ಲಾ ಅಶ್ವ ಗಳಲ್ಲಿಯೂ ಇರುವುದಾಗಿಯೂ, ಅಶ್ವವನ್ನು ಬಿಟ್ಟು ಉಳಿದ ಯಾವ ಪದಾರ್ಥಗಳ ಲ್ಲಿಯೂ ಇಲ್ಲದಿರುವುದಾಗಿಯೂ, ಇರುವ ಒಂದಾನೊಂದು ಏಕರೂಪವಾದ ಅಸಾ ಧಾರಣಾಕಾರವನ್ನು ಅಶ್ವವು ಪಡೆದಿರುವುದು. ಹೀಗೆಯೇ—ಮಹಿಷ, ಘಟ, ಪಟ ಮುಂತಾದ ಪದಾರ್ಥಗಳೂ ತಮತಮಗೆ ಅಸಾಧಾರಣವಾದ ಒಂದೊಂದು ಆಕಾರ ವನ್ನು ಪಡೆದಿರುವುವು. ಅಂಥ ಆಕಾರವನ್ನೇ ಅವಲಂಬಿಸಿ ಗೋವು, ಅಶ್ವ, ಮಹಿಷ ಮುಂತಾದ ಶಬ್ದಗಳೂ ಆ ಆ ಅರ್ಥಗಳಲ್ಲೇ ಮಾತ್ರ ಪ್ರಯೋಗಿಸಲ್ಪಡುವುವು. ಆದು

ದರಿಂದ ಈ ಶಬ್ದಗಳನ್ನು ಆ ಆ ಅರ್ಥಗಳಲ್ಲಿ ಮಾತ್ರ ಪ್ರಯೋಗಿಸುವುದಕ್ಕೂ ಇತರ ಅರ್ಥಗಳಲ್ಲಿ ಪ್ರಯೋಗಿಸದಿರುವುದಕ್ಕೂ ಈ ಅಸಾಧಾರಣಾಕಾರದ ಸದ್ಭಾವಾಸದ್ಭಾವಗಳೇ ಕಾರಣಗಳಾಗಿರುವುವು.

ಅದರಂತೆ ಎಲ್ಲಾ ಶರೀರಗಳಲ್ಲಿಯೂ ಇರುವುದಾಗಿಯೂ ಶರೀರೇತರಪದಾರ್ಥಗಳಲ್ಲಿ ಇಲ್ಲದಿರುವುದಾಗಿಯೂ ಇರುವ ಏಕರೂಪವಾದ ಅಸಾಧಾರಣಾಕಾರವನ್ನು ಶರೀರವೆಂಬ ಪದಾರ್ಥವೂ ಪಡೆದಿದ್ದಪಕ್ಷದಲ್ಲಿ ಅಂಥ ಆಕಾರವನ್ನೇ ಅವಲಂಬಿಸಿ ಶರೀರಶಬ್ದವನ್ನು ಅಂಥ ಪದಾರ್ಥದಲ್ಲಿ ಪ್ರಯೋಗಿಸಬಹುದಾಗಿದ್ದಿತಾದುದರಿಂದ ಇದರ ಲಕ್ಷಣಕ್ಕಾಗಿ ಶ್ರಮಪಡಬೇಕಾಗುತ್ತಿರಲಿಲ್ಲ. ಶರೀರಶಬ್ದವನ್ನು ಯಾವ ಯಾವ ಪದಾರ್ಥಗಳಲ್ಲಿ ಪ್ರಯೋಗಿಸುತ್ತೇವೋ ಅವುಗಳೆಲ್ಲದರಲ್ಲಿಯೂ ಇರುವ ಏಕರೂಪವಾದ ಒಂದು ಆಕಾರವು ಲೋಕಪ್ರಸಿದ್ಧವಾಗಿಲ್ಲ ಪಶು, ಪಕ್ಷಿ, ಮೃಗ ಕ್ರಿಮಿ, ಕೀಟ, ಮನುಷ್ಯ, ವಾನರ, ಸರ್ಪ, ಜಲಚರ ಮುಂತಾದ ಸಕಲಪ್ರಾಣಿಗಳ ಶರೀರಗಳಲ್ಲಿಯೂ ಶರೀರಶಬ್ದಪ್ರಯೋಗವು ಅಬಾಧಿತವಾಗಿ ಲೋಕದಲ್ಲಿ ವಾಡಿಕೆಯಾಗಿರುವುದು. ಮತ್ತು ಭೂಮಿ, ಜಲ, ತೇಜಸ್ಸು, ವಾಯು, ಆಕಾಶ, ಅಹಂಕಾರ, ಮಹಾನ್, ಪ್ರಕೃತಿ, ಅವ್ಯಕ್ತ, ಅಕ್ಷರ, ತಮಸ್ಸು, ಆತ್ಮ, ಮೃತ್ಯು ಮುಂತಾದ ಅನೇಕಪದಾರ್ಥಗಳಲ್ಲಿಯೂ ಶರೀರಶಬ್ದಪ್ರಯೋಗವು ಅಬಾಧಿತವಾಗಿ ಶಾಸ್ತ್ರದಲ್ಲಿ ವಾಡಿಕೆಯಾಗಿರುವುದು.

ಯಾವುದೊಂದು ಅಸಾಧಾರಣಾಕಾರವನ್ನು ಅವಲಂಬಿಸಿ ಶರೀರಶಬ್ದವು ಇಷ್ಟೊಂದು ಅರ್ಥಗಳಲ್ಲಿಯೂ ಪ್ರವರ್ತಿಸಬಹುದಾಗಿದ್ದಿತೋ ಅಂಥ ಏಕರೂಪವಾದ ಅಸಾಧಾರಣಾಕಾರವನ್ನು ಈ ಪದಾರ್ಥಗಳಲ್ಲಿ ಲೋಕಪ್ರಸಿದ್ಧವಾಗಿ ನಾವು ಕಾಣುತ್ತಿಲ್ಲ. ಏಕರೂಪವಾದ ಅಂಥ ಆಕಾರವಾದರೋ ಶರೀರಶಬ್ದಪ್ರವೃತ್ತಿಗಾಗಿ ಇದ್ದೇ ಇರಬೇಕು. ಪ್ರತ್ಯಕ್ಷದಲ್ಲಿ ಅಂಥ ಆಕಾರವು ಸಿದ್ಧವಾಗಿಲ್ಲದಿರುವಿಕೆಯೇ ಶಾಸ್ತ್ರದಿಂದ ಆ ಆಕಾರವನ್ನು ಶ್ರೀಭಾಷ್ಯಕಾರರು ತೋರಿಸಲು ಪ್ರಯತ್ನಪಟ್ಟುದಕ್ಕೆ ಕಾರಣವಾಗಿರುವುದು.

ಮತ್ತು ಸರ್ವದೇಶ, ಸರ್ವಕಾಲ, ಸರ್ವಾವಸ್ಥೆಗಳಲ್ಲಿಯೂ ಸರ್ವಪ್ರಕಾರದಿಂದಲೂ ಈಶ್ವರನಿಗೆ ಪರತಂತ್ರನಾಗಿಯೇ ಇರುವ ಜೀವಾತ್ಮನು ತನಗಿರುವ ಸ್ವಾಭಾವಿಕವಾದ ಪಾರತಂತ್ರ್ಯವನ್ನು ಮರೆತು ತನ್ನನ್ನು ಸ್ವತಂತ್ರನೆಂದು ಭ್ರಮಿಸಿ ಅದಕ್ಕೆ ಅನುಗುಣವಾಗಿ ಪುಣ್ಯಪಾಪರೂಪವಾದ ಕರ್ಮದಲ್ಲಿ ಪ್ರವರ್ತಿಸಿರುವುದರಿಂದ ನಾನಾ ವಿಧವಾದ ಸಾಂಸಾರಿಕದುಃಖಕ್ಕೆ ಗುರಿಯಾಗಿ ನರಳುತ್ತಿರುವನು. ಇಂಥ ದುಃಖದಿಂದ

ಬಿಡಿಸಿಕೊಂಡು ಶಾಶ್ವತವಾದ ಮೋಕ್ಷಸುಖಕ್ಕೆ ತನ್ನನ್ನು ಭಾಗಿಯಾಗಿ ಮಾಡ ಬೇಕಾದರೆ ದುಃಖಕ್ಕೆ ಕಾರಣವಾಗಿರುವ ಸ್ವಾತಂತ್ರ್ಯಭ್ರಮವನ್ನು ಹೋಗಲಾಡಿಸಿ ಸ್ವಾಭಾವಿಕವಾಗಿರುವ ಪಾರತಂತ್ರ್ಯವನ್ನು ಚೆನ್ನಾಗಿ ತಿಳಿಯಬೇಕು. ಹೇಗಾದರೆ ಒಬ್ಬ ಜೀವಾತ್ಮನಿಗೆ ಅವನ ಶರೀರವು ಸರ್ವದೇಶಸರ್ವಕಾಲಸರ್ವಾವಸ್ಥೆಗಳಲ್ಲಿಯೂ ಸರ್ವಪ್ರಕಾರದಿಂದಲೂ ಪರತಂತ್ರವಾಗಿಯೇ ಇರುವುದೋ ಅದರಂತೆ ತಾನೂ ಈಶ್ವರ ನಿಗೆ ಸರ್ವಾವಸ್ಥೆಗಳಲ್ಲಿಯೂ ಶರೀರವಾಗಿಯೇ ಇದ್ದು ಸರ್ವಪ್ರಕಾರದಿಂದಲೂ ಪರ ತಂತ್ರನಾಗಿಯೇ ಇರುವನೆಂದು ತಿಳಿದು ಈ ತಿಳಿವಳಿಕೆಯನ್ನು ತನ್ನಲ್ಲಿ ನೆಲೆಗೊಳಿಸದ ರಲ್ಲದೆ ಸ್ವಾತಂತ್ರ್ಯಭ್ರಮವು ತಪ್ಪುವುದಿಲ್ಲ. ಅದು ತಪ್ಪಿದರಲ್ಲದೆ ಸಾಂಸಾರಿಕ ದುಃಖವು ತಪ್ಪಲಾರದು. ಆದಕಾರಣ ಸಾಂಸಾರಿಕದುಃಖವು ತಪ್ಪಬೇಕಾದರೆ ಸ್ವಾತಂತ್ರ್ಯಭ್ರಮವು ತಪ್ಪಬೇಕು. ಅದು ತಪ್ಪಬೇಕಾದರೆ ಯಥಾವಸ್ಥಿತವಾದ ಪಾರತಂತ್ರ್ಯಜ್ಞಾನವುಂಟಾಗಬೇಕು. ತನಗೂ ಈಶ್ವರನಿಗೂ ಇರುವ ಸ್ವಾಭಾವಿಕ ವಾದ ಶರೀರಶರೀರಿಭಾವಸಂಬಂಧವನ್ನು ತಿಳಿದುಕೊಂಡರಲ್ಲದೆ ಯಥಾವಸ್ಥಿತವಾದ ಪಾರತಂತ್ರ್ಯಜ್ಞಾನವುಂಟಾಗಲಾರದು. ಆದಕಾರಣ ಸಕಲದುಃಖನಿವೃತ್ತಿಗೂ ಶಾಶ್ವತಸುಖಪ್ರಾಪ್ತಿಗೂ ಮುಖ್ಯಕಾರಣವಾದ್ದುದು ತನಗೂ ಈಶ್ವರನಿಗೂ ಇರುವ ಶರೀರಶರೀರಿಭಾವಸಂಬಂಧಜ್ಞಾನವಲ್ಲದೆ ಬೇರೊಂದಿಲ್ಲವಾದುದರಿಂದ ಇಂಥ ಸಂಬಂಧ ವನ್ನು ತಿಳಿದುಕೊಳ್ಳುವಾಗ ಅದರೊಳಗೆ ಅಡಗಿರುವ ಶರೀರಪದಾರ್ಥವನ್ನು ಮೊತ್ತ ಮೊದಲು ತಿಳಿದುಕೊಳ್ಳಬೇಕಾದುದು ಪ್ರತಿಯೊಬ್ಬ ಜೀವಾತ್ಮನಿಗೂ ಅತ್ಯಾವಶ್ಯಕ ವಾಗಿರುವುದರಿಂದ ಸಮಸ್ತಜೀವಾತ್ಮರುಗಳ ಹಿತಕ್ಕಾಗಿಯೇ ಪ್ರವರ್ತಿಸಿರುವ ಶ್ರೀ ಭಾಷ್ಯಕಾರರು ಈ ವೇದಾಂತಶಾಸ್ತ್ರದಲ್ಲಿ ಶರೀರಪದಾರ್ಥಕ್ಕೆ ಶಾಸ್ತ್ರಸಿದ್ಧವಾದ ಲಕ್ಷಣ ವನ್ನೇ ಸ್ಪಷ್ಟವಾಗಿ ನಿರೂಪಿಸಿ ತೋರಿಸಿರುವುದನ್ನು ನಿಷ್ಪ್ರಯೋಜನವೆಂದು ಯಾರು ತಾನೆ ಹೇಳಬಲ್ಲರು ?

### ೨೬೬ ತತ್ರ ಏಕೋಕ್ತ್ಯೈಕ್ರೋಡೀಕೃತ್ಯ ಶರೀರಸ್ಯ ಲಕ್ಷಣತ್ರಯ ಪ್ರದರ್ಶನಂ.

ಶ್ರೀಭಾಷ್ಯಕಾರರು—ಶಾರೀರಕಮೀಮಾಂಸಾಭಾಷ್ಯದಲ್ಲಿ ದ್ವಿತೀಯಾಧ್ಯಾಯ ಪ್ರಥಮಪಾದದ ಅಪೀತೌ ತದ್ವತ್ಪ್ರಸಂಗಾದಸಮಂಜಸಂ ಎಂಬ ಎಂಟನೆಯ ಸೂತ್ರದಲ್ಲಿ ಚೇತನಾಚೇತನರೂಪವಾದ ಪ್ರಪಂಚವು ಈಶ್ವರನಿಗೆ ಶರೀರವಾಗಲಾರದೆಂಬ ಪೂರ್ವಪಕ್ಷವನ್ನು ತೃಪ್ತಿಕರವಾದಷ್ಟು ಯುಕ್ತಿಗಳೊಡನೆ ಚೆನ್ನಾಗಿ ಸಮರ್ಥನೆಮಾಡಿ ಅನಂತರದಲ್ಲಿ ನ ತು ದೃಷ್ಟಾಂತಭಾವಾತ್ ಎಂಬ ಒಂಬತ್ತನೆಯ ಸೂತ್ರದಲ್ಲಿ

ಪೂರ್ವಸೂತ್ರೋಕ್ತವಾದ ಪೂರ್ವಪಕ್ಷವನ್ನು ಪ್ರಬಲವಾದ ಯುಕ್ತಿಗಳಿಂದಲೂ ಪ್ರಮಾಣಗಳಿಂದಲೂ ಖಂಡಿಸಿ ಚೇತನಾಚೇತನರೂಪವಾದ ಪ್ರಪಂಚವು ಯಾವಾಗಲೂ ಈಶ್ವರನಿಗೆ ಶರೀರವಾಗಿಯೇ ಇರುವುದೆಂಬುದನ್ನೂ, ಹಾಗಿಲ್ಲದಿದ್ದರೆ ಈ ಪ್ರಪಂಚಕ್ಕೆ ಸತ್ತೆಯೇ ಇಲ್ಲವೆಂಬುದನ್ನೂ ಸಮರ್ಥನೆಮಾಡಿ ಆ ಸಂದರ್ಭದಲ್ಲಿ ಶರೀರಕ್ಕೆ ಉಪನಿಷದ್ವಾಕ್ಯಗಳಿಂದ ಸಿದ್ಧವಾಗಿರುವ ಮೂರು ಲಕ್ಷಣಗಳನ್ನು ಏಕೋಕ್ತಿಯಿಂದ ಲಾಘವಕ್ಕಾಗಿ ಕ್ರೋಡೀಕರಿಸಿ ತೋರಿಸಿರುವರು.

ಹೇಗೆಂದರೆ—"ಚೈತನ್ಯವಿಶಿಷ್ಟನಾದ ಯಾವನೊಬ್ಬನಿಗೆ ಯಾವ ಧರ್ಮದೊಡನೆ ಕೂಡಿರುವ ಯಾವ ದ್ರವ್ಯವು ತಾನಿರುವವರೆಗೂ ತನ್ನಿಂದ ಸಾಧ್ಯವಾಗುವ ಕೆಲಸದಲ್ಲಿ ಅವನಿಂದ ಪ್ರೇರಿಸಲ್ಪಡುವುದಾಗಿಯೂ, ಅವನಿಂದ ಧರಿಸಲ್ಪಡುವುದಾಗಿಯೂ, ಅವನಿಗೆ ಶೇಷಭೂತವಾಗಿಯೇ ಇರುವಿಕೆಯೆಂಬ ಸ್ವಭಾವವುಳ್ಳದಾಗಿಯೂ ಇರುವುದೋ ಆ ಚೇತನನಿಗೆ ಅಂಥ ಧರ್ಮದೊಡನೆ ಕೂಡಿರುವ ಆ ದ್ರವ್ಯವು ಶರೀರವೆನಿಸಿಕೊಳ್ಳುವುದು."

ಈ ಲಕ್ಷಣವು ಶರೀರಕ್ಕೆ ಒಂದೇ ಲಕ್ಷಣವಾಗಿ ಹೇಳಲ್ಪಟ್ಟಿರುವುದೆಂದು ಕೆಲವರು ಅಭಿಪ್ರಾಯಪಡುವರು. 'ಶರೀರಕ್ಕೆ ಮೂರುವಿಧವಾದ ಲಕ್ಷಣಗಳು ಇಲ್ಲಿ ತೋರಿಸಲ್ಪಟ್ಟಿರುವುವೆಂದು ಇನ್ನು ಕೆಲವರು ಪೂರ್ವಾಚಾರ್ಯರು ಅಭಿಪ್ರಾಯಪಟ್ಟಿರುವರು ಈ ಎರಡನೆಯ ಪಕ್ಷದವರ ಸಂಖ್ಯೆಯೇ ಹೆಚ್ಚಾಗಿರುವುದರಿಂದಲೂ, ಈ ಪಕ್ಷವೇ ಯುಕ್ತಿಯುಕ್ತವಾಗಿರುವುದರಿಂದಲೂ, ಭಾಷ್ಯಕಾರರು ಅನುಗ್ರಹಿಸಿರುವ ಈ ಲಕ್ಷಣವನ್ನು ಮೂರುವಿಧವಾಗಿ ವಿಂಗಡಿಸಿ ಆ ಲಕ್ಷಣಗಳಲ್ಲಿ ಅಡಗಿರುವ ಪದಗಳ ಪ್ರಯೋಜನವನ್ನೂ, ಲಕ್ಷ್ಯದಲ್ಲಿ ಲಕ್ಷಣಸಮನ್ವಯವನ್ನೂ ಕ್ರಮವಾಗಿ ತೋರಿಸುವೆವು.

## ೨೬೭ ತತ್ರ ವಿಭಜ್ಯ ಪ್ರಥಮಲಕ್ಷಣಪ್ರದರ್ಶನಂ.

ಮೊದಲನೆಯ ಲಕ್ಷಣ—"೧ ಚೈತನ್ಯವಿಶಿಷ್ಟನಾದ ೨ ಯಾವನೊಬ್ಬನಿಗೆ ೩ ಯಾವ ಧರ್ಮದೊಡನೆ ಕೂಡಿರುವ ೪ ಯಾವ ದ್ರವ್ಯವು ೫ ತಾನಿರುವವರೆಗೂ ಅವನನ್ನು ಬಿಟ್ಟು ಅಗಲಿ ಇರುವುದಕ್ಕೆ ಅನರ್ಹವಾದುದಾಗಿ ೬ ತನ್ನಿಂದ ಸಾಧ್ಯವಾಗಬಹುದಾದ ಕೆಲಸದಲ್ಲಿ ಅವನ ಪ್ರೇರಣೆಗೆ ಅಧೀನವಾದ ವ್ಯಾಪಾರವುಳ್ಳದಾಗಿರುವುದಕ್ಕೆ ಯೋಗ್ಯವಾಗಿರುವುದೋ ಆ ಚೇತನನಿಗೆ ಅಂಥ ಧರ್ಮದೊಡನೆ ಕೂಡಿರುವ ಆ ದ್ರವ್ಯವು ಶರೀರವೆನಿಸಿಕೊಳ್ಳುವುದು.

೨೬೮ ಅಸಂಬಂಧಿಕಸಸಂಬಂಧಿಕಭೇದೇನ ಶಬ್ದಾನಾಂ ದ್ವೈರಾಶ್ಯಂ

ಲೋಕದಲ್ಲಿ—ಯಾವ ಶಬ್ದವು ಮತ್ತೊಂದು ಶಬ್ದದ ಸಹಾಯವನ್ನು ಅಪೇಕ್ಷಿಸದೆ ಸ್ವತಂತ್ರವಾಗಿ ತನ್ನ ಅರ್ಥವನ್ನು ಬೋಧಿಸಬಲ್ಲುದೋ ಆ ಶಬ್ದವು ಅಸಂಬಂಧಿಕ ಶಬ್ದವೆನಿಸಿಕೊಳ್ಳುವುದು. ಉದಾಹರಣೆ-ಗೋವು, ಅಶ್ವ, ಮಹಿಷ, ಘಟ, ಪಟ ಮುಂತಾದ ಶಬ್ದಗಳು.

ಯಾವ ಶಬ್ದವಾದರೆ ಮತ್ತೊಂದು ಶಬ್ದದ ಸಹಾಯವನ್ನು ಅಪೇಕ್ಷಿಸಿಯೇ ತನ್ನ ಅರ್ಥವನ್ನು ಬೋಧಿಸುವುದೋ ಆ ಶಬ್ದವು ಸಸಂಬಂಧಿಕಶಬ್ದವೆನಿಸಿಕೊಳ್ಳುವುದು. ಉದಾಹರಣೆ-ಅತ್ತೆ, ಮಾವ, ಸೋದರಮಾವ, ತಾಯಿ, ತಂದೆ, ಅಣ್ಣ, ತಮ್ಮ, ಅಕ್ಕ, ತಂಗಿ, ಮಗಳು, ಗಂಡ, ಹೆಂಡತಿ ಮುಂತಾದ ಶಬ್ದಗಳು.

೨೬೯. ಶರೀರಶಬ್ದಸ್ಯ ಸಸಂಬಂಧಿಕಶಬ್ದರಾಶಾವೇವ ನಿವೇಶಃ.

ಹೀಗೆ ಅಸಂಬಂಧಿಕವೆಂದೂ ಸಸಂಬಂಧಿಕವೆಂದೂ ಎರಡು ರಾಶಿಗಳಾಗಿರುವ ಶಬ್ದಗಳೊಳಗೆ ಶರೀರಶಬ್ದವು- ಗೋವು, ಅಶ್ವ ಮೊದಲಾದ ಶಬ್ದಗಳಂತೆ ಅಸಂಬಂಧಿಕ ಶಬ್ದರಾಶಿಗೆ ಸೇರುವುದಿಲ್ಲ ; ಅತ್ತೆ, ಮಾವ ಮೊದಲಾದ ಶಬ್ದಗಳಂತೆ ಸಸಂಬಂಧಿಕ ಶಬ್ದರಾಶಿಗೇ ಸೇರುವುದು ಏತಕ್ಕೆಂದರೆ—ಅತ್ತೆ, ಮಾವ ಎಂಬ ಶಬ್ದಗಳನ್ನು ಕೇಳಿದೊಡನೆಯೇ ಅವುಗಳ ಪೂರ್ಣವಾದ ಅರ್ಥವು ನೆನಪಿಗೆ ಬಾರದೆ ಯಾರ ಅತ್ತೆ, ಯಾರ ಮಾವ ಎಂಬ ಪ್ರಶ್ನೆ ಮಧ್ಯದಲ್ಲಿ ಹುಟ್ಟಿ ರಾಮನ ಅತ್ತೆ-ರಾಮನ ಮಾವ ಎಂಬ ಪ್ರತ್ಯುತ್ತರವು ದೊರೆತಮೇಲೆ ಅತ್ತೆ ಮಾವ ಮುಂತಾದ ಶಬ್ದಗಳ ಪೂರ್ಣವಾದ ಅರ್ಥವು ನೆನಪಿಗೆ ಬರುವಂತೆ ಶರೀರ ಎಂಬ ಶಬ್ದವನ್ನು ಕೇಳಿದೊಡನೆಯೇ ಅದರ ಅರ್ಥವು ನೆನಪಿಗೆ ಬಾರದೆ ಯಾರ ಶರೀರವು ಎಂಬ ಜಿಜ್ಞಾಸೆ ಮಧ್ಯದಲ್ಲಿ ಹುಟ್ಟಿ ರಾಮನ ಶರೀರವು-ಕೃಷ್ಣನ ಶರೀರವು ಎಂಬ ಪ್ರತ್ಯುತ್ತರವು ದೊರೆತಮೇಲೆ ಶರೀರ ಶಬ್ದದ ಸಂಪೂರ್ಣಾರ್ಥವು ತಿಳಿವಳಿಕೆಗೆ ಬರುವುದು.

ಯಾವುದಾದರೂ ಒಂದು ಗೋವನ್ನು ನೋಡಿದಮೇಲೆ ಎಲ್ಲರಭಾಗಕ್ಕೂ ಅದು ಗೋವಾಗಿಯೇ ಇರುವುದು. ಎಲ್ಲರೂ ಅದನ್ನು ಗೋವೆಂಬುದಾಗಿಯೇ ವ್ಯವಹರಿಸುವರು. ಯಾವನಾದರೂ ಒಬ್ಬ ಪುತ್ರನನ್ನು ನೋಡಿದಮೇಲೆ ಯಾವನೋ ಒಬ್ಬನ ಭಾಗಕ್ಕೆ ಅವನು ಪುತ್ರನಾಗಿರುವನಲ್ಲದೆ ಎಲ್ಲರ ಭಾಗಕ್ಕೂ ಅವನು ಪುತ್ರನಾಗಿರುವುದಿಲ್ಲ, ಎಲ್ಲರೂ ಅವನನ್ನು ಪುತ್ರನೆಂದೇ ವ್ಯವಹರಿಸುವುದಿಲ್ಲ.

ಇದರಂತೆ ಯಾವುದಾದರೂ ಒಂದು ಶರೀರವನ್ನು ನೋಡಿದರೆ ಎಲ್ಲರ ಭಾಗಕ್ಕೂ ಅದು ಶರೀರವೆನಿಸಿಕೊಳ್ಳುವುದಿಲ್ಲ. ಯಾವನೋ ಒಬ್ಬನಿಗೆ ಮಾತ್ರ ಅದು ಶರೀರವಾಗಿರುವುದು. ಪುತ್ರನೆಂಬವನಿಗೆ ತಂದೆಯೆಂಬವನು ಹೇಗಾದರೆ ಪ್ರತಿಸಂಬಂಧಿಯೆನಿಸಿಕೊಳ್ಳುವನೋ ಅದರಂತೆ ಯಾವನಿಗೆ ಇದು ಶರೀರವಾಗಿದೆಯೋ ಅವನೇ ಇದಕ್ಕೆ ಪ್ರತಿಸಂಬಂಧಿಯೆನಿಸಿಕೊಳ್ಳುವನು.

ಅಂತು—ಪುತ್ರನೆಂಬ ಪದಾರ್ಥಕ್ಕೆ ಪುತ್ರನಿಗಿಂತಲೂ ಬೇರೊಬ್ಬನಾದ ಪ್ರತಿಸಂಬಂಧಿ ಇರುವಂತೆ ಶರೀರಪದಾರ್ಥಕ್ಕೂ ಶರೀರಕ್ಕಿಂತಲೂ ಬೇರೊಬ್ಬನಾದ ಪ್ರತಿಸಂಬಂಧಿ ಉಂಟೆಂಬುದನ್ನೂ, ಪ್ರತಿಸಂಬಂಧಿಯಿದ್ದರೇನೇ ಇದು ಶರೀರವೆನಿಸಿಕೊಳ್ಳುವುದೆಂಬುದನ್ನೂ ವ್ಯಕ್ತಪಡಿಸುವುದಕ್ಕಾಗಿಯೇ ಹಿಂದೆ ಹೇಳಿದ ಶರೀರಲಕ್ಷಣದಲ್ಲಿ ಯಾವನೊಬ್ಬನಿಗೆ, ಆ ಚೇತನನಿಗೆ ಎಂಬ ಪದಗಳು ಪ್ರಯೋಗಿಸಲ್ಪಟ್ಟಿರುವುವು.

## ೧೨೦. ಶರೀರಶಬ್ದಸ್ಯ ಸಸಂಬಂಧಿಕಶಬ್ದರಾಶೌ ನಿವೇಶಕಥನಸ್ಯ ಪ್ರಯೋಜನಪ್ರದರ್ಶನಂ.

ಇದರಿಂದ—ಶರೀರಕ್ಕೆ ಇದಕ್ಕಿಂತಲೂ ಬೇರೊಬ್ಬನಾದ ಪ್ರತಿಸಂಬಂಧಿ ಉಂಟೆಂಬ ನಿಶ್ಚಯಾತ್ಮಕವಾದ ಜ್ಞಾನವು ದೃಢಪಟ್ಟುದರಿಂದಲೂ, ಅವನೇ ಈ ಶರೀರವನ್ನು ಕೆಳಗೆ ಬೀಳಗೊಳಿಸದೆ ಹೊತ್ತುಕೊಂಡಿರುವುದಕ್ಕಾಗಿ ಇದರಲ್ಲಿ ಪ್ರವೇಶಿಸಿ ಆತ್ಮನೆನಿಸಿಕೊಳ್ಳುವನೆಂಬ ಜ್ಞಾನವೂ ಸಹ ಅವಿಚಾಲ್ಯವಾದುದರಿಂದಲೂ, ದುಃಖರೂಪವಾದ ಸಂಸಾರಕ್ಕೆ ಕಾರಣವಾಗಿರುವ ದೇಹಾತ್ಮಭ್ರಮ - ಸ್ವಾತಂತ್ರ್ಯಭ್ರಮ ಈ ಎರಡರಲ್ಲಿ ದೇಹಾತ್ಮಭ್ರಮವೆಂಬ ಒಂದು ಶತ್ರುವನ್ನು ನಿರ್ಮೂಲನಮಾಡಲು ಬಹಳ ಅನುಕೂಲ್ಯವುಂಟಾಯಿತು. ಸಂಪೂರ್ಣವಾಗಿ ಶರೀರಲಕ್ಷಣವನ್ನು ತಿಳಿದು, ಚೇತನಾಚೇತನರೂಪವಾದ ಸಮಸ್ತಪ್ರಪಂಚವೂ ಇಂಥ ಶರೀರಲಕ್ಷಣದೊಡನೆ ಕೂಡಿರುವುದರಿಂದ ಸಮಸ್ತಪ್ರಪಂಚವೂ ಈಶ್ವರನಿಗೆ ನಿರ್ಬಾಧವಾಗಿ ಶರೀರವೆನಿಸಿಕೊಂಡಿರುವ ಕಾರಣ ಪ್ರಪಂಚದಲ್ಲಿ ಅನ್ಯತಮನಾದ ನಾನೂ ಸಹ ಈಶ್ವರನಿಗೆ ಶರೀರವಾಗಿಯೇ ಇರುವೆನೆಂದು ತಡೆಯಿಲ್ಲದೆ ತಿಳಿದುಕೊಳ್ಳುವುದರಿಂದ ಈಶ್ವರಶರೀರವಾದ ತನಗೆ ಈಶ್ವರಪಾರತಂತ್ರ್ಯವಲ್ಲದೆ ಸ್ವಾತಂತ್ರ್ಯವೆಲ್ಲಿಂದ ಬಂದೀತೆಂದು ಅನಾಯಾಸವಾಗಿ ತಿಳಿದುಕೊಳ್ಳಬಹುದಾದುದರಿಂದ ಸ್ವತಂತ್ರಾತ್ಮಭ್ರಮವೆಂಬ ಎರಡನೆಯ ಶತ್ರುವನ್ನೂ ನಿರ್ಮೂಲನಮಾಡಲು ಅತ್ಯಂತಾನುಕೂಲ್ಯವುಂಟಾಗಿರುವುದು. ಶರೀರಶಬ್ದವನ್ನು ಸಸಂಬಂಧಿಕಶಬ್ದರಾಶಿಯಲ್ಲಿ ಸೇರಿಸಿದುದಕ್ಕೆ ಇವೇ ಮುಖ್ಯಪ್ರಯೋಜನೆಗಳಾಗಿರುವುವು.

## ೨೭೧. ಪ್ರಥಮಲಕ್ಷಣಘಟಕಾನಾಂ ದಳಾನಾಂ ಪ್ರಯೋಜನನಿರೂಪಣಂ.

ಈ ಶರೀರಲಕ್ಷಣದಲ್ಲಿ—೧ ಚೈತನ್ಯವಿಶಿಷ್ಟನಾದ-ಎಂಬ ಪದದಲ್ಲಿ ಚೈತನ್ಯ ಪದಕ್ಕೆ ಧರ್ಮಭೂತಜ್ಞಾನವೆಂದರ್ಥವು. ಆದುದರಿಂದ ಚೈತನ್ಯವಿಶಿಷ್ಟನಾದ ಎಂಬ ಮೊದಲನೆಯ ದಳಕ್ಕೆ ಧರ್ಮಭೂತಜ್ಞಾನವಿಶಿಷ್ಟನಾದ ಎಂದು ಅರ್ಥನಿಷ್ಕರ್ಷೆಯಾಗುವುದು. ಈ ಲಕ್ಷಣದಲ್ಲಿ ಈ ದಳವನ್ನು ಹೇಳದಿದ್ದರೆ ಉಳಿದ ದಳಗಳನ್ನನುಸರಿಸಿ ಧರ್ಮಭೂತಜ್ಞಾನತ್ವವೆಂಬ ಧರ್ಮದೊಡನೆ ಕೂಡಿರುವುದಾಗಿಯೂ, ಸಂಕೋಚವಿಕಾಸಗಳೆಂಬ ಅವಸ್ಥೆಗಳಿಗೆ ಆಶ್ರಯವಾದುದರಿಂದ ದ್ರವ್ಯವೆನಿಸಿಕೊಂಡುದಾಗಿಯೂ, ತಾನಿರುವವರೆಗೂ ಆತ್ಮನನ್ನು ಬಿಟ್ಟು ಆಗಲಿ ಇರುವುದಕ್ಕೆ ಅನರ್ಹವಾಗಿಯೂ, ತನ್ನಿಂದ ಸಾಧ್ಯವಾಗಬಹುದಾದ ಪ್ರಸರಣ ಕೆಲಸದಲ್ಲಿ ಆತ್ಮನ ಪ್ರೇರಣೆಗೆ ಅಧೀನವಾದ ವ್ಯಾಪಾರವುಳ್ಳುದಾಗಿಯೂ, ಇರುವುದರಿಂದ ಆತ್ಮನಿಗೆ ಧರ್ಮಭೂತಜ್ಞಾನವು ಶರೀರವಾಗಿಯೇ ಇರಬೇಕಾಗುವುದು.

ಈ ಅತಿವ್ಯಾಪ್ತಿಯನ್ನು ಪರಿಹರಿಸುವುದಕ್ಕಾಗಿ ಚೈತನ್ಯವಿಶಿಷ್ಟನಾದ ಎಂಬ ದಳವು ಕೊಡಲ್ಪಟ್ಟಿರುವುದು. ಕೇವಲಾತ್ಮಸ್ವರೂಪವನ್ನು ಕುರಿತು ಧರ್ಮಭೂತಜ್ಞಾನವು ಹಿಂದೆ ಹೇಳಿದ ಉಳಿದ ವಿಶೇಷಣಗಳೊಡನೆ ಕೂಡಿದುದಾಗಿದ್ದರೂ ಧರ್ಮಭೂತಜ್ಞಾನವಿಶಿಷ್ಟನಾದ ಆತ್ಮನನ್ನು ಕುರಿತು ಮತ್ತೊಂದು ಧರ್ಮಭೂತಜ್ಞಾನವು ಅಂಥ ವಿಶೇಷಣಗಳೊಡನೆ ಕೂಡಿರುವುದೆಂಬುದು ಅಪ್ರಸಿದ್ಧವಾದುದರಿಂದ ಅತಿವ್ಯಾಪ್ತಿವಾರಣವಾಗಿರುವುದು.

ಈ ಪ್ರಥಮದಳದಲ್ಲಿರುವ ಮರ್ಮವೇನೆಂದರೆ—ಧರ್ಮಭೂತಜ್ಞಾನವು ಧರ್ಮಭೂತಜ್ಞಾನವಿಶಿಷ್ಟನಾದ ಆತ್ಮನ ಪ್ರೇರಣೆಗೆ ಅಧೀನವಾದ ವ್ಯಾಪಾರವುಳ್ಳುದಾಗಬೇಕಾದರೆ ವಿಶೇಷಣವಾದ ಧರ್ಮಭೂತಜ್ಞಾನದ ಪ್ರೇರಣೆಗೆ ಅಧೀನವಾದ ವ್ಯಾಪಾರವುಳ್ಳುದಾಗಿಯೂ ಆಗಬೇಕಾಗಿ ಬರುವುದು. ಇದು ಧರ್ಮಭೂತಜ್ಞಾನದಲ್ಲಿ ಸಂಭವಿಸುವುದಿಲ್ಲವೆಂಬುದೇ.

೨ ಯಾವನೊಬ್ಬನಿಗೆ-ಎಂಬ ಎರಡನೆಯ ಪದದಿಂದ ಘಟಪಟಾದಿಪದಾರ್ಥಗಳಂತೆ ಶರೀರಪದಾರ್ಥವು ಅಪ್ರತಿಯೋಗಿಕವಲ್ಲ ಎಂದರೆ ಅಸಂಬಂಧಿಕವಲ್ಲ; ಕಿಂತು ಸಪ್ರತಿಯೋಗಿಕವೆಂದು ಸೂಚಿಸಲ್ಪಡುವುದು. ಹೀಗೆ ಸೂಚಿಸಿದುದಕ್ಕೆ ಪ್ರಯೋಜನವನ್ನು ಹಿಂದೆಯೇ ತೋರಿಸಿರುವೆವು.

೩ ಯಾವ ಧರ್ಮದೊಡನೆ ಕೂಡಿರುವ-ಎಂಬ ಮೂರನೆಯ ದಳವನ್ನು ಲಕ್ಷಣದಲ್ಲಿ ಸೇರಿಸದಿದ್ದರೆ-ಉಳಿದ ದಳಗಳನ್ನನುಸರಿಸಿ ಶರೀರದಲ್ಲಿಯೇ ಶರೀರಲಕ್ಷ

ಣಕ್ಕೆ ಅವ್ಯಾಪ್ತಿದೋಷವುಂಟಾಗುವುದು. ಹೇಗೆಂದರೆ—ಆತ್ಮನು ಶರೀರವನ್ನು ಬಿಟ್ಟು ಹೊರಟು ಹೋದಮೇಲೆಯೂ ಶರೀರಪದಾರ್ಥವಿರುವುದರಿಂದ ತಾನಿರುವ ವರೆಗೂ ಅವನನ್ನು ಬಿಟ್ಟು ಅಗಲಿ ಇರುವುದಕ್ಕೆ ಅನರ್ಹವಾದುದಾಗಿರದೆ ಅರ್ಹವಾದು ದಾಗಿಯೇ ಇರುವುದರಿಂದ ಜೀವದ್ದಶೆಯಲ್ಲಿರುವ ಶರೀರವು ತತ್ಕಾಲದಲ್ಲಿ ಅವನನ್ನು ಬಿಟ್ಟು ಅಗಲಿ ಇರಲಿಲ್ಲವಾದರೂ ಮತ್ತೊಂದು ಕಾಲದಲ್ಲಿ ಅಗಲಿ ಇರುವುದಕ್ಕೆ ಅರ್ಹ ವಾಗಿರುವಕಾರಣ ಅನರ್ಹತ್ವಲಕ್ಷಣವು ಇದರಲ್ಲಿ ವ್ಯಾಪಿಸಲಿಲ್ಲವಷ್ಟೆ.

ಮೂರನೆಯ ದಳವನ್ನು ಸೇರಿಸಿದುದರಿಂದ ಅವ್ಯಾಪ್ತಿಪರಿಹಾರವಾದ ಕ್ರಮ ವೆಂತೆಂದರೆ—ಶರೀರವೆನಿಸಿಕೊಂಡ ಪದಾರ್ಥದಲ್ಲಿ ಜೀವದ್ದಶೆಯಲ್ಲಿ ಒಂದುವಿಧವಾದ ಧರ್ಮವೂ ಎಂದರೆ ಒಂದುಬಗೆಯಾದ ಅವಸ್ಥೆಯೂ, ಮರಣಾನಂತರದಲ್ಲಿ ಮತ್ತೊಂದು ವಿಧವಾದ ಅವಸ್ಥೆಯೂ ಇರುವುವು ಅನೇಕಪದಾರ್ಥಗಳು ಸೇರಿ ಒಂದು ಸಮುದಾ ಯವಾಗಿ ಶರೀರವೆನಿಸಿಕೊಂಡಿರುವುವು ಜೀವದ್ದಶೆಯಲ್ಲಿ ಈ ಸಮುದಾಯವು ಪರಿಪೂರ್ಣವಾಗಿದ್ದರೂ ಇದು ಯಾವಾಗ ನಾಶಹೊಂದುವುದಕ್ಕೆ ಉಪಕ್ರಮಿಸು ವುದೋ ಆಗ ಅನೇಕಪದಾರ್ಥಗಳು ಇದರಿಂದ ಹೊರಗೆ ಹೊರಟುಹೋಗಿ ಸಮುದಾ ಯದಲ್ಲಿದ್ದ ಪದಾರ್ಥಗಳ ಸಂಖ್ಯೆ ಕಡಮೆಯಾಗುವುದು. ಸ್ವಲ್ಪಹೊತ್ತಿನಲ್ಲಿಯೇ ಉಳಿದಿರುವ ದ್ರವ್ಯವೂ ರೂಪಾಂತರವನ್ನು ಎಂದರೆ ಅವಸ್ಥಾಂತರವನ್ನು ಹೊಂದಿ ನಾಶಹೊಂದಿತು ಎಂಬ ವ್ಯವಹಾರಕ್ಕೆ ಗುರಿಯಾಗುವುದು.

ಆದಕಾರಣ ಜೀವದ್ದಶೆಯಲ್ಲಿದ್ದ ಅವಸ್ಥೆಯೂ ಮರಣಾನಂತರದಲ್ಲಿ ಇರುವ ಅವಸ್ಥೆಯೂ ಭಿನ್ನಭಿನ್ನವಾದುದರಿಂದ ಬೇರೊಂದು ಅವಸ್ಥೆಯೊಡನೆ ಕೂಡಿರುವ ದ್ರವ್ಯವು ಅವನನ್ನು ಬಿಟ್ಟು ಅಗಲಿ ಇರುವುದಕ್ಕೆ ಅರ್ಹವಾಗಿದ್ದರೂ ಪೂರ್ವಾವಸ್ಥೆ ಯೊಡನೆ ಕೂಡಿದ ದ್ರವ್ಯವು ಅಗಲಿ ಇರುವುದಕ್ಕೆ ಅರ್ಹವಾಗಿರದೆ ಅನರ್ಹವಾಗಿಯೇ ಇರುವುದರಿಂದ ಲಕ್ಷ್ಯವಾದ ಶರೀರದಲ್ಲಿ ಲಕ್ಷಣಕ್ಕೆ ಅವ್ಯಾಪ್ತಿಪರಿಹಾರವುಂಟಾಗಿ ರುವುದು. ಮೃತಶರೀರವು ಶರೀರಪದಕ್ಕೆ ಮುಖ್ಯಾರ್ಥವೇ ಅಲ್ಲವಾದುದರಿಂದ ಈ ಶರೀರಲಕ್ಷಣಕ್ಕೆ ಅದು ಲಕ್ಷ್ಯವೂ ಅಲ್ಲ. ಆದುದರಿಂದಲೇ ಅದು ಆತ್ಮನನ್ನು ಬಿಟ್ಟು ಅಗಲಿ ಇರುವುದಕ್ಕೆ ಅನರ್ಹವಾಗಿರದೆ ಅರ್ಹವಾಗಿದ್ದರೂ ದೋಷವಿಲ್ಲ. ಲಕ್ಷ್ಯದಲ್ಲಿ ಲಕ್ಷಣವಿರಬೇಕಲ್ಲದೆ ಲಕ್ಷ್ಯೇತರದಲ್ಲಿ ಲಕ್ಷಣವಿಲ್ಲವೆಂಬುದು ದೋಷವಲ್ಲವಷ್ಟೆ.

೪ ಯಾವ ದ್ರವ್ಯವು-ಎಂಬುದಾಗಿ ನಾಲ್ಕನೆಯ ದಳದಲ್ಲಿ ದ್ರವ್ಯಪದವನ್ನು ಸೇರಿಸಿರುವುದರಿಂದ ಕ್ರಿಯೆ, ಸಂಯೋಗ, ಗುಣ ಮುಂತಾದುವುಗಳು ಶರೀರವಲ್ಲ ವೆಂಬುದು ಸೂಚಿಸಲ್ಪಡುವುದು. ಆದುದರಿಂದಲೇ—ಯಸ್ಯ ವೇದಾಃ ಶರೀರಂ,

ಯಸ್ಯ ಯಜ್ಞಾಃ ಶರೀರಂ ಎಂಬುದಾಗಿ ಸರ್ವೇಶ್ವರನಿಗೆ ಸಮಸ್ತವೇದಗಳೂ ಸಮಸ್ತ ಯಜ್ಞಗಳೂ ಶರೀರಗಳಾಗಿರುವುವೆಂದು ಹೇಳುವ ವೇದಾಂತವಾಕ್ಯದಲ್ಲಿ ವೇದಶಬ್ದವೂ ಯಜ್ಞಶಬ್ದವೂ ಅದ್ರವ್ಯದಲ್ಲಿ ಪರಿಗಣಿಸಲ್ಪಟ್ಟಿರುವ ಶಬ್ದವೆಂಬುದನ್ನೂ ಸಂಯೋಗ ವೆಂಬ ಕ್ರಿಯೆಯನ್ನೂ ತೋರಿಸುವುವಲ್ಲ; ಮತ್ತೇನೆಂದರೆ ವೇದಾಭಿಮಾನಿದೇವತೆಯ ನ್ನೂ. ಯಜ್ಞಾಭಿಮಾನಿದೇವತೆಯನ್ನೂ ತೋರಿಸುವುವು. ಆ ದೇವತೆ ದ್ರವ್ಯವಾಗಿಯೇ ಇರುವುದರಿಂದ ಅದಕ್ಕೆ ಈಶ್ವರಶರೀರತ್ವವು ಅಬಾಧಿತವಾಗಿಯೇ ಇರುವುದು. ಶಬ್ದ ರೂಪವಾದ ವೇದಕ್ಕೂ ಕ್ರಿಯಾರೂಪವಾದ ಯಜ್ಞಕ್ಕೂ ಈಶ್ವರಶರೀರತ್ವವಿಲ್ಲದಿದ್ದರೂ ಹಾನಿಯಿಲ್ಲ. ದ್ರವ್ಯೇತರಪದಾರ್ಥವು ಶರೀರವೆನಿಸಿಕೊಳ್ಳಲು ಯೋಗ್ಯವಲ್ಲವಷ್ಟೆ.

"ಲಕ್ಷಣದಲ್ಲಿ ದ್ರವ್ಯಪದವನ್ನು ಸೇರಿಸದಿದ್ದರೆ ಕ್ರಿಯಾದಿಗಳಲ್ಲಿ ಅತಿವ್ಯಾಪ್ತಿ ಬರುವುದಾಗಿದ್ದರಲ್ಲವೆ ದ್ರವ್ಯಪದವನ್ನು ಸೇರಿಸಿ ಆ ಅತಿವ್ಯಾಪ್ತಿಯನ್ನು ಪರಿಹರಿಸ ಬೇಕು; ದ್ರವ್ಯಪದವನ್ನು ಸೇರಿಸದಿದ್ದರೂ ಕ್ರಿಯಾದಿಗಳಲ್ಲಿ ಅತಿವ್ಯಾಪ್ತಿಗೆ ಅವ ಕಾಶವೇ ಇಲ್ಲ. ಹೇಗೆಂದರೆ—ಅವನ ಪ್ರೇರಣೆಗೆ ಅಧೀನವಾದ ವ್ಯಾಪಾರ ವುಳ್ಳುದಾಗಿರುವುದೋ-ಎಂಬ ಮತ್ತೊಂದು ವಿಶೇಷಣವು ಲಕ್ಷಣವಾಕ್ಯದಲ್ಲಿ ಸೇರಿ ಸಲ್ಪಟ್ಟಿರುವುದು; ದ್ರವ್ಯದಲ್ಲಿ ಕ್ರಿಯೆ ಹುಟ್ಟಬಹುದಲ್ಲದೆ ಕ್ರಿಯೆಯಲ್ಲಿ ಕ್ರಿಯೆ ಹುಟ್ಟ ಲಾರದಾದುದರಿಂದ ಚೇತನನ ಪ್ರೇರಣೆಗೆ ಅಧೀನವಾದ ವ್ಯಾಪಾರವು ಎಂದರೆ ಕ್ರಿಯೆ ಕ್ರಿಯೆಯಲ್ಲಿ ಅಪ್ರಸಿದ್ಧವಾದುದರಿಂದ ಶರೀರಲಕ್ಷಣವು ಕ್ರಿಯಯನ್ನು ಸ್ಪರ್ಶಿಸಲೇ ಇಲ್ಲವಾದಕಾರಣ ಅತಿವ್ಯಾಪ್ತಿಯೇ ತಲೆದೋರದಿರುವಲ್ಲಿ ಅದನ್ನು ಪರಿಹರಿಸುವುದಕ್ಕಾಗಿ ದ್ರವ್ಯಪದವನ್ನು ಲಕ್ಷಣದಲ್ಲಿ ಸೇರಿಸಿರುವುದು ಸುತರಾಂ ವ್ಯರ್ಥವಾಗಿರುವುದು." ಎಂದು ಭ್ರಾಂತಿಪಡಬಾರದು.

ಏತಕ್ಕೆಂದರೆ—ಲಕ್ಷಣವಾಕ್ಯದಲ್ಲಿರುವ ವ್ಯಾಪಾರಪದದಿಂದ ಕ್ರಿಯಾರೂಪ ವಾದ ವ್ಯಾಪಾರವನ್ನೇ ವಿವಕ್ಷೆಮಾಡಕೂಡದು. ಹಾಗೆ ವಿವಕ್ಷೆಮಾಡುವುದಾದರೆ ವಿಭುಪದಾರ್ಥವಾದ ಕಾಲದಲ್ಲಿ ಈಶ್ವರಪ್ರೇರಣೆಗೆ ಅಧೀನವಾದ ಕ್ರಿಯೆಯೊಂದೂ ಸಂಭವಿಸುವುದಿಲ್ಲವಾದುದರಿಂದ ಕಾಲವು ಈಶ್ವರನಿಗೆ ಶರೀರವಾಗದೆ ಹೋಗಬೇಕಾಗಿ ಬರುವುದು. ಆದಕಾರಣ ಚೇತನನ ಪ್ರೇರಣೆಗೆ ಅಧೀನವಾದ ಯಾವುದಾದರೂ ಒಂದು ಧರ್ಮವುಳ್ಳುದಾಗಿರಬೇಕೆಂಬುದನ್ನೇ ವ್ಯಾಪಾರಪದದಿಂದ ವಿವಕ್ಷಿಸಬೇಕು. ಹೀಗೆ ವಿವಕ್ಷೆಮಾಡುವುದರಿಂದ ಜೀವನು ಉತ್ಕ್ರಮಣ, ಗಮನ, ಆಗಮನ ಮುಂತಾದ ಕ್ರಿಯೆಗಳನ್ನು ನಡಸುವ ಕಾಲದಲ್ಲಿ ಆ ಕ್ರಿಯೆಗಳಲ್ಲಿಯೂ ಉತ್ಪತ್ತಿ ಯೆಂಬ ಒಂದು ಧರ್ಮವುಂಟಾಗುವುದರಿಂದ ಕ್ರಿಯೆಯಲ್ಲಿ ಅತಿವ್ಯಾಪ್ತಿ ತಡೆಯಿಲ್ಲದೆ

ಉಂಟಾಗುವಕಾರಣ ಅದರ ನಿವಾರಣೆಗಾಗಿ ಲಕ್ಷಣದಲ್ಲಿ ದ್ರವ್ಯಪದವು ಅತ್ಯಂತಾವಶ್ಯಕವಾಗಿರುವುದು.

೫ ತಾನಿರುವವರೆಗೂ ಅವನನ್ನು ಬಿಟ್ಟು ಅಗಲಿ ಇರುವುದಕ್ಕೆ ಅನರ್ಹವಾದುದಾಗಿ— ಎಂಬ ಐದನೆಯ ದಳವನ್ನು ಲಕ್ಷಣದಲ್ಲಿ ಸೇರಿಸದಿದ್ದರೆ ಉಳಿದ ದಳಗಳನ್ನನುಸರಿಸಿ-ಜೀವನು ಯೋಗಸಿದ್ಧಿಬಲದಿಂದ ಪರಕಾಯವನ್ನು ಪ್ರವೇಶಿಸಿ ತನ್ನ ಪ್ರೇರಣೆಯಿಂದ ಆ ಶರೀರದಲ್ಲಿ ಕೆಲವು ಕೆಲಸಗಳನ್ನು ನಡಸುತ್ತಿರುವ ಸಂದರ್ಭದಲ್ಲಿ ಈ ಶರೀರಲಕ್ಷಣವು ಆ ಪರಕಾಯದಲ್ಲಿ ಸಮನ್ವಿತವಾಗಲು, ಅಂಥ ಪರಕಾಯವು ಈಗ ಪ್ರವೇಶಮಾಡಿದ ಜೀವಾತ್ಮನಿಗೆ ಶರೀರವಾಗಬೇಕಾಗಿ ಬರುವುದು.

ಹಾಗೆಯೇ-ಪ್ರಾಣವೂ, ಇಂದ್ರಿಯಗಳೂ ಜೀವನ ಪ್ರೇರಣೆಗೆ ಅಧೀನವಾದ ವ್ಯಾಪಾರವುಳ್ಳವುಗಳಾಗಿಯೇ ಇರುವುದರಿಂದ ಲಕ್ಷಣಕ್ಕೆ ಅವುಗಳಲ್ಲಿಯೂ ಸಮನ್ವಯವುಂಟಾಗಿ ಅವುಗಳೂ ಜೀವನಿಗೆ ಶರೀರಗಳೆನಿಸಿಕೊಳ್ಳಬೇಕಾಗಿ ಬರುವುದು.

ಹಾಗೆಯೇ—ಜೀವನು ಕುಠಾರವನ್ನು (ಕೊಡಲಿಯನ್ನು) ಕೈಯಲ್ಲಿ ಹಿಡಿದು ತನ್ನ ಪ್ರೇರಣೆಯಿಂದ ಅದರಲ್ಲಿ ಕೆಲವು ವ್ಯಾಪಾರಗಳನ್ನು ನಡಸುವಾಗ ಅದರಲ್ಲಿ ಲಕ್ಷಣಕ್ಕೆ ಸಮನ್ವಯವುಂಟಾಗಿ ಆ ಕೊಡಲಿಯೂ ಅವನಿಗೆ ಶರೀರವಾಗಬೇಕಾಗಿ ಬರುವುದು.

ಹೀಗೆ ಪರಕಾಯ, ಪ್ರಾಣ, ಇಂದ್ರಿಯ, ಕುಠಾರ ಇವುಗಳಲ್ಲಿ ಅತಿವ್ಯಾಪ್ತಿಯುಂಟಾಗುವುದರಿಂದ ಅದನ್ನು ತಪ್ಪಿಸುವುದಕ್ಕಾಗಿ ಐದನೆಯ ದಳವು ಲಕ್ಷಣದಲ್ಲಿ ಸೇರಿಸಲ್ಪಟ್ಟಿರುವುದು. ಇದರಿಂದ—ಪರಕಾಯದಲ್ಲಿ ಇವನು ಪ್ರವೇಶಿಸುವುದಕ್ಕಿಂತಲೂ ಮೊದಲೇ ಅದು ಮತ್ತೊಬ್ಬನಿಗೆ ಶರೀಶವಾಗಿದ್ದು ಇವನು ಅದನ್ನು ಬಿಟ್ಟು ಹೊರಟುಹೋದಮೇಲೆಯೂ ಮೊದಲಿನವನಿಗೇನೇ ಶರೀರವಾಗಿರುವುದರಿಂದ ಮಧ್ಯಕಾಲದಲ್ಲಿಯೂ ಅವನಿಗೇ ಶರೀರವಾಗಿರುವಕಾರಣ, ತಾನಿರುವವರೆಗೂ ಅವನನ್ನು ಎಂದರೆ ಮಧ್ಯದಲ್ಲಿ ಪ್ರವೇಶಿಸಿದ್ದ ಜೀವವನ್ನು ಬಿಟ್ಟು ಅಗಲಿ ಇರುವುದಕ್ಕೆ ಅನರ್ಹವಾಗಿರದೆ ಅರ್ಹವಾಗಿಯೇ ಇರುವುದರಿಂದ ಈ ಶರೀರಲಕ್ಷಣಕ್ಕೆ ಪರಕಾಯದಲ್ಲಿ ಅತಿವ್ಯಾಪ್ತಿಯುಂಟಾಗಲಿಲ್ಲವಾಗಿ ಪರಕಾಯವು ಮಧ್ಯದಲ್ಲಿ ಪ್ರವೇಶಿಸಿದವನಿಗೆ ಎಂದಿಗೂ ಶರೀರವಾಗಲಾರದು.

ಹಿಂದೆ ತೋರಿಸಿದ ರೀತಿಯಲ್ಲಿ ಇಪ್ಪತ್ತುನಾಲ್ಕು ತತ್ತ್ವಗಳೂ ಕ್ರಮವಾಗಿ ಹುಟ್ಟಿದ ಮೇಲೆ ಕೊನೆಯ ಐದು ತತ್ತ್ವಗಳಾದ ಪಂಚಭೂತಗಳನ್ನು ಪಂಚೀಕರಣಕ್ರಮದಿಂದ ಕೂಡಿಸಿದರೆ ಹೀಗೆ ಪಂಚೀಕೃತವಾದ ಪಂಚಭೂತಗಳಿಂದ ಎಲ್ಲಕ್ಕಿಂತಲೂ

ಕೊನೆಯಲ್ಲಿ ಶರೀರಸೃಷ್ಟಿಯುಂಟಾಗುವುದು. ವಾಯುವಿಶೇಷರೂಪವಾದ ಪ್ರಾಣ ವಾದರೆ ಭೂತಸೃಷ್ಟಿಗಿಂತಲೂ ಅನಂತರದಲ್ಲಿ ಸೃಷ್ಟಿಸಲ್ಪಟ್ಟಿರುವುದರಿಂದಲೂ, ಇಂದ್ರಿ ಯಗಳಾದರೆ ತಾಮಸಾಹಂಕಾರದಿಂದ ಆಕಾಶವು ಹುಟ್ಟುವ ಸಮಯದಲ್ಲಿಯೇ ಸಾತ್ತ್ವಿಕಾಹಂಕಾರದಿಂದ ಹುಟ್ಟಿರುವುವಾದುದರಿಂದ ಶರೀರಸೃಷ್ಟಿಗಿಂತಲೂ ಪೂರ್ವ ದಲ್ಲಿಯೇ ಸಿದ್ಧವಾಗಿರುವುವೆಂಬುದರಲ್ಲಿ ಸಂಶಯವಿಲ್ಲವಾದುದರಿಂದಲೂ, ಮತ್ತು ಈ ಜೀವನು ಸಂಸಾರಸಂಬಂಧವನ್ನು ಬಿಟ್ಟು ಮೋಕ್ಷವನ್ನು ಹೊಂದುವುದಾದರೆ ಆಗ ಅವನ ಪ್ರಾಣವೂ ಇಂದ್ರಿಯಗಳೂ ಈ ಪ್ರಕೃತಿಮಂಡಲದಲ್ಲಿಯೇ ಮಹಾಪ್ರಳಯ ದವರೆಗೂ ಇರುವುವಾದುದರಿಂದಲೂ, ತಾವಿರುವವರೆಗೂ ಅವನನ್ನು ಬಿಟ್ಟು ಅಗಲಿ ಇರುವುದಕ್ಕೆ ಅನರ್ಹವಾಗಿರದೆ ಅರ್ಹವಾಗಿಯೇ ಇರುವುದರಿಂದ ಪ್ರಾಣದಲ್ಲಿಯೂ ಇಂದ್ರಿಯದಲ್ಲಿಯೂ ಅತಿವ್ಯಾಪ್ತಿಯಿಲ್ಲವಾಗಿ ಪ್ರಾಣೇಂದ್ರಿಯಗಳೂ ಜೀವನಿಗೆ ಶರೀರ ವಾಗಲಾರವು.

ಕುಠಾರವು ಮಧ್ಯಕಾಲದಲ್ಲಿ ಕೆಲವು ನಿಮಿಷಗಳೊಳಗೆ ಜೀವನಿಗೆ ಅಧೀನವಾದ ಕೆಲವು ವ್ಯಾಪಾರಗಳುಳ್ಳದಾದರೂ ಅದಕ್ಕೆ ಮೊದಲೂ ಅದರ ಅನಂತರದಲ್ಲಿಯೂ ಅವನನ್ನು ಬಿಟ್ಟು ಅಗಲಿ ತನ್ನ ಸ್ಥಾನದಲ್ಲಿ ತಾನು ಇದ್ದೂ ಇರುವುದೂ ಆಗಿರುವುದ ರಿಂದ ಅವನನ್ನು ಬಿಟ್ಟು ಅಗಲಿ ಇರುವುದಕ್ಕೆ ಅನರ್ಹವಾಗಿರದೆ ಅರ್ಹವಾಗಿಯೇ ಇರುವಕಾರಣ ಕುಠಾರದಲ್ಲಿಯೂ ಲಕ್ಷಣಕ್ಕೆ ಅತಿವ್ಯಾಪ್ತಿಯಿಲ್ಲವಾಗಿ ಕುಠಾರವೂ ಜೀವನಿಗೆ ಶರೀರವಾಗಲಾರದು.

೬ ತನ್ನಿಂದ ಸಾಧ್ಯವಾಗಬಹುದಾದ ಕೆಲಸದಲ್ಲಿ ಅವನ ಪ್ರೇರಣೆಗೆ ಅಧೀನವಾದ ವ್ಯಾಪಾರವುಳ್ಳದಾಗಿರುವುದಕ್ಕೆ ಯೋಗ್ಯವಾಗಿರುವುದೋ- ಎಂಬ ಆರನೆಯ ದಳದಲ್ಲಿ ತನ್ನಿಂದ ಸಾಧ್ಯವಾಗಬಹುದಾದ ಕೆಲಸದಲ್ಲಿ ಎಂಬ ಭಾಗವನ್ನು ಸೇರಿಸದಿದ್ದರೆ ಅವನ ಪ್ರೇರಣೆಗೆ ಅಧೀನವಾದ ಸಕಲವ್ಯಾಪಾರಗಳೂ ಶರೀರಕ್ಕೆ ಇದ್ದೇಇರಬೇಕೆಂದು ಲಕ್ಷಣವು ತೋರುವುದು. ಆಗ ಸಮುದ್ರದ ಮೇಲೆ ಕಾಲಿನಿಂದಲೇ ನಡೆವುದಕ್ಕೂ ಆಕಾಶದಲ್ಲಿ ಹಾರುವುದಕ್ಕೂ ಸಹ ಜೀವನು ಶರೀರವನ್ನು ಪ್ರೇರಿಸಿದರೂ ಅಂಥ ವ್ಯಾಪಾರಗಳು ಶರೀರಕ್ಕೆ ಸಂಭವಿಸುವುದಿಲ್ಲವಾದುದರಿಂದ ಶರೀರ ಸಾಮಾನ್ಯದಲ್ಲಿ ಶರೀರಲಕ್ಷಣಕ್ಕೆ ಅಸಂಭವದೋಷವುಂಟಾಗುವುದು.

"ದೇವಶರೀರದಲ್ಲಿಯೂ ಪಕ್ಷಿಶರೀರದಲ್ಲಿಯೂ ಆಕಾಶಗಮನವೂ, ಜಲಜಂತು ಗಳ ಶರೀರದಲ್ಲಿ ಕಾಲಿನಿಂದಲೇ ಸಮುದ್ರ ಸಂಚಾರವೂ, ಪ್ರತ್ಯಕ್ಷಸಿದ್ಧವಾಗಿರುವಲ್ಲಿ

ಶರೀರಸಾಮಾನ್ಯದಲ್ಲಿ ಅಸಂಭವದೋಷವುಂಟಾಗುವುದೆಂದು ಹೇಗೆ ಹೇಳಬಹುದು" ಎಂದು ಭ್ರಾಂತಿಪಡಬಾರದು.

ಮನುಷ್ಯ, ಮೃಗ, ಸರ್ಪ ಮುಂತಾದ ಕೆಲವು ಶರೀರಗಳನ್ನು ಧ್ಯಾನಕ್ಕೆ ತಂದುಕೊಂಡು ಅವುಗಳಿಗೆ ಆಕಾಶಗಮನವೂ ಸಮುದ್ರಗಮನವೂ ಅಶಕ್ಯವಾಗಿರುವುವೆಂಬ ಅಭಿಪ್ರಾಯದಿಂದ ಆಕಾಶ-ಸಮುದ್ರ-ಗಮನದೃಷ್ಟಾಂತಗಳನ್ನು ಇಲ್ಲಿ ಹೇಳಿದೆವಲ್ಲದೆ ಸರ್ವಶರೀರಾಭಿಪ್ರಾಯದಿಂದಲ್ಲ. ಮನುಷ್ಯಾದಿಶರೀರಗಳು ಆಕಾಶಗಮನ ಮುಂತಾದುವನ್ನು ಮಾಡದಿದ್ದಮಾತ್ರಕ್ಕೇನೇ ಶರೀರಗಳಲ್ಲವೆನಿಸಿಕೊಳ್ಳುವುದಿಲ್ಲ.

ದೇವಾದಿಸಮಸ್ತಶರೀರಗಳಿಂದಲೂ ಅಸಾಧ್ಯಗಳಾಗಿರುವ ಕೆಲಸಗಳೂ ಅನೇಕವಾಗಿ ಉಂಟಷ್ಟೆ. ಈಬ್ರಹ್ಮಾಂಡದ ಹೊರಭಾಗಕ್ಕೆ ಹೋಗಿ ನೋಡಬೇಕೆಂಬ ಕುತೂಹಲವು ಆತ್ಮನಿಗಿದ್ದರೂ, ಅದಕ್ಕಾಗಿ ಅವನು ಶರೀರವನ್ನು ಪ್ರೇರಿಸಿದರೂ, ಅಂಡಾಂತರ್ವರ್ತಿಯಾದ ಯಾವ ಶರೀರವೂ ಅಂಡದ ಹೊರಭಾಗಕ್ಕೆ ಹೋಗಲು ಅನುಕೂಲವಾದ ವ್ಯಾಪಾರವನ್ನು ಪಡೆಯಲಾರದಷ್ಟೆ. ಅದಕಾರಣ ಶರೀರಸಾಮಾನ್ಯದಲ್ಲಿ ಅಸಂಭವದೋಷವು ಬಂದೇಬರುವುದರಿಂದ ಅದನ್ನು ಪರಿಹರಿಸುವುದಕ್ಕಾಗಿ ತನ್ನಿಂದ ಸಾಧ್ಯವಾಗಬಹುದಾದ ಕೆಲಸದಲ್ಲಿ—ಎಂಬ ಭಾಗವನ್ನು ಆವಶ್ಯಕವಾಗಿಯೂ ಸೇರಿಸಬೇಕು.

ಆದರೆ—ಯಾವ ಶರೀರದಿಂದ ಯಾವ ವ್ಯಾಪಾರವು ಸಾಧ್ಯವಾದೀತೆಂಬ ವಿಷಯವನ್ನು ಲೋಕಾನುಭವದಿಂದಲೇ ತಿಳಿದುಕೊಳ್ಳಬಹುದಾಗಿರುವುದರಿಂದ ಶಾಸ್ತ್ರ ಮೂಲಕವಾಗಿ ಅದನ್ನು ನಿರೂಪಿಸಬೇಕಾದುದಿಲ್ಲ ಆದುದರಿಂದಲೇ ಕಲ್ಲು, ಕಟ್ಟಿಗೆ, ಘಟ, ಪಟ, ಮುಂತಾದ ಪದಾರ್ಥಗಳು ಆ ಆ ಜೀವವಿಶೇಷಕ್ಕೆ ಶರೀರಗಳಾಗಿದ್ದರೂ ಅವುಗಳಲ್ಲಿ ಜೀವಾಧೀನವಾದ ವ್ಯಾಪಾರವು ಒಂದೂ ಇಲ್ಲವಾದುದರಿಂದ ಆ ಶರೀರಗಳಲ್ಲಿ ಶರೀರಲಕ್ಷಣಕ್ಕೆ ಅವ್ಯಾಪ್ತಿದೋಷವುಂಟಾಗಿರುವುದೆಂಬ ಆಕ್ಷೇಪವೂ ಪರಿಹರಿಸಲ್ಪಟ್ಟಿರುವುದು ವೃಕ್ಷ ಮೊದಲಾದ ಶರೀರಗಳಲ್ಲಿ ಜೀವನ ಪ್ರೇರಣೆಯಿಂದ ನಡೆವ ವ್ಯಾಪಾರಗಳು ಎಂದರೆ ಅವಸ್ಥಾಭೇದರೂಪವಾದ ಧರ್ಮಗಳು ಅತಿಸೂಕ್ಷ್ಮವಾದುದರಿಂದ ಹೇಗೆ ನಮ್ಮಿಂದ ಕಂಡುಹಿಡಿಯಲು ಶಕ್ಯವಲ್ಲವೋ, ಅದರಂತೆಯೇ ಕಲ್ಲು, ಕಟ್ಟಿಗೆ, ಘಟ, ಪಟ, ಬೆಂಚು, ಕುರ್ಚಿ, ಮೇಜು, ಮಣೆ, ಮೊರ, ಚೆಂಬು, ತಪ್ಪಲೆ ಮುಂತಾದ ಸಕಲಶರೀರಗಳಲ್ಲಿಯೂ ಆ ಆ ಜೀವನ ಪ್ರೇರಣೆಯಿಂದ ನಡೆವ ವ್ಯಾಪಾರಗಳು ಎಂದರೆ ಅವಸ್ಥಾಭೇದರೂಪವಾದ ಧರ್ಮಗಳು ಅತ್ಯಂತ ಸೂಕ್ಷ್ಮವಾದುದರಿಂದ ನಮ್ಮಿಂದ ಕಂಡು ಹಿಡಿಯಲು ಸಾಧ್ಯವಾಗದಿದ್ದ ಮಾತ್ರಕ್ಕೇನೇ ಅವುಗಳಲ್ಲಿ ವ್ಯಾಪಾರವೇ

ಇಲ್ಲವೆಂಬುದು ಸಿದ್ಧಿಸುವುದಿಲ್ಲವಾದಪ್ರಯುಕ್ತ ಅವುಗಳಲ್ಲಿ ಲಕ್ಷಣಕ್ಕೆ ಅವ್ಯಾಪ್ತಿ ದೋಷವಿಲ್ಲ.

ಇದೇ ಆರನೆಯ ದಳದಲ್ಲಿ- ವ್ಯಾಪಾರವುಳ್ಳುದಾಗಿರುವುದಕ್ಕೆ ಯೋಗ್ಯವಾಗಿರುವುದೋ-ಎಂಬ ಅಂಶದಲ್ಲಿ ಯೋಗ್ಯವಾಗಿರುವುದೋ ಎಂಬ ಪದವನ್ನು ಸೇರಿಸದೆ ವ್ಯಾಪಾರವುಳ್ಳುದಾಗಿರುವುದೋ ಎಂಬ ಇಷ್ಟುಮಾತ್ರವನ್ನು ಸೇರಿಸುವುದಾದರೆ, ರೋಗಗ್ರಸ್ತವಾದ ಶರೀರದಲ್ಲಿ ತನ್ನಿಂದ ಸಾಧ್ಯವಾಗಬಹುದಾದ ಕೆಲಸಗಳಲ್ಲಿಯೂ ಚೇತನನ ಪ್ರೇರಣೆಗೆ ಅಧೀನವಾದ ಅನೇಕ ವ್ಯಾಪಾರಗಳು ನಡೆವುದಿಲ್ಲವಾದುದರಿಂದ ಅವ್ಯಾಪ್ತಿದೋಷವುಂಟಾಗುವುದು. ಇದಕ್ಕಾಗಿ ವ್ಯಾಪಾರವುಳ್ಳುದಾಗಿರುವುದೋ ಎಂದು ಹೇಳದೆ ವ್ಯಾಪಾರವುಳ್ಳುದಾಗಿರುವುದಕ್ಕೆ ಯೋಗ್ಯವಾಗಿರುವುದೋ ಎಂದು ಹೇಳಲ್ಪಟ್ಟಿರುವುದು.

ರೋಗಗ್ರಸ್ತವಾದ ಶರೀರದಲ್ಲಿ ಚೇತನನ ಪ್ರೇರಣೆಗೆ ಅಧೀನವಾದ ಗಮನಾಗಮನ ಮುಂತಾದ ಕೆಲವು ವ್ಯಾಪಾರಗಳು ತತ್ಕಾಲಕ್ಕೆ ನಡೆಯದಿದ್ದರೂ ಅವುಗಳನ್ನು ನಡಸತಕ್ಕ ಯೋಗ್ಯತೆ ಆ ಶರೀರಕ್ಕೆ ಇದ್ದೇ ಇರುವುದು. ಆದರೂ ಅಗ್ನಿಯಲ್ಲಿರುವ ದಾಹಕತ್ವಶಕ್ತಿ ಪ್ರಬಲವಾದ ಮಣಿಮಂತ್ರೌಷಧಗಳ ವೇಗದಿಂದ ತಡೆಯಲ್ಪಡುವಂತೆ ರುಗ್ಣಶರೀರದಲ್ಲಿರುವ ಆ ಯೋಗ್ಯತೆ ಪ್ರಬಲವಾದ ರೋಗದ ವೇಗದಿಂದ ತಡೆಯಲ್ಪಟ್ಟಿರುವುದಲ್ಲದೆ ಅದರಲ್ಲಿ ಆ ಶಕ್ತಿಯೇ ಇಲ್ಲವೆಂದಲ್ಲ. ಆದಕಾರಣ ರುಗ್ಣಶರೀರದಲ್ಲಿ ಅವ್ಯಾಪ್ತಿಗೆ ಅವಕಾಶವಿಲ್ಲ.

೨೭೨. ಘಟಪಟಾದೀನಾಂ ಸ್ಥಾವರಶರೀರತ್ವಸಾಮ್ಯೋಪಪತ್ತಿಃ.

"ವೃಕ್ಷ ಮುಂತಾದ ಸ್ಥಾವರಶರೀರಗಳಲ್ಲಿ ಜೀವನ ಪ್ರೇರಣೆಯಿಂದ ಸೂಕ್ಷ್ಮವಾದ ವ್ಯಾಪಾರಗಳು ನಡೆಯುತ್ತಿರುವಂತೆ ಘಟ, ಪಟ ಮುಂತಾದ ಶರೀರಗಳಲ್ಲಿಯೂ ಅತ್ಯಂತಸೂಕ್ಷ್ಮವಾದ ವ್ಯಾಪಾರಗಳು ನಡೆಯುತ್ತಲೇ ಇರುವುವೆಂದು ತೋರಿಸಿದುದರಿಂದ ಘಟಪಟಾದಿಶರೀರಗಳಿಗೆ ವೃಕ್ಷಾದಿಸ್ಥಾವರಶರೀರಗಳ ಸಾಮ್ಯವನ್ನು ತೋರಿಸಿದಂತಾಯಿತು. ಆದರೆ ಸ್ಥಾವರಶರೀರಗಳಲ್ಲಿ ಉನ್ಮೇಷನಿಮೇಷಗಳು ತೋರುವುವು; ಎಂದರೆ—ಮರಗಳು ಕಣ್ಣನ್ನು ಮುಚ್ಚಿ ತೆರೆಯುತ್ತವೆಯೋ ಎಂಬಂತೆ ರಾತ್ರಿಕಾಲದಲ್ಲಿ ತಮ್ಮ ಎಲೆಗಳನ್ನು ಸಂಕೋಚಪಡಿಸಿಕೊಳ್ಳುತ್ತಲೂ ಪ್ರಾತಃಕಾಲದಲ್ಲಿ ಹರಡುತ್ತಲೂ ಇರುವುವು ಇಂಥ ಉನ್ಮೇಷನಿಮೇಷಗಳು ಘಟ. ಪಟ ಮುಂತಾದ ಶರೀರಗಳಲ್ಲಿ ಇಲ್ಲವೆಂಬುದು ಪ್ರತ್ಯಕ್ಷಸಿದ್ಧವಾಗಿರುವಲ್ಲಿ ಇವುಗಳಿಗೆ ಸ್ಥಾವರಶರೀರದ ಸಾಮ್ಯವನ್ನು ಹೇಗೆ ಹೇಳಲಾದೀತು" ಎಂದು ಆಕ್ಷೇಪಿಸಬಾರದು.

ವೃಕ್ಷಮುಂತಾದ ಕೆಲವು ಸ್ಥಾವರಶರೀರಗಳಲ್ಲಿ ಮಾತ್ರ ಉನ್ಮೇಷನಿಮೇಷಗಳು ಕಂಡುಬಂದರೂ ಉನ್ಮೇಷನಿಮೇಷರಹಿತವಾದ ಸ್ಥಾವರಶರೀರಗಳೂ ಅನೇಕವಾಗಿ ಇರುವುದರಿಂದ ಅವುಗಳೊಡನೆ ಘಟ, ಪಟ ಮುಂತಾದ ಶರೀರಗಳಿಗೆ ಸಾಮ್ಯವನ್ನು ಹೇಳಲು ತಡೆಯಿಲ್ಲವಷ್ಟೆ.

೨೭೩. ಘಟಪಟಾದೀನಾಂ ಶರಿರತ್ವಾಭಾವಭ್ರಾಂತಿನಿವಾರಣಂ.

"ಇದೆಲ್ಲಾ ಸರಿಯೆ, ಆದರೆ ಘಟ, ಪಟ ಮುಂತಾದುವುಗಳು ಶರೀರವೆನಿಸಿಕೊಂಡರಲ್ಲವೆ ಅವುಗಳಲ್ಲಿ ಶರೀರಲಕ್ಷಣದ ಅವ್ಯಾಪ್ತಿದೋಷಪರಿಹಾರಕ್ಕಾಗಿ ಪ್ರಯತ್ನಪಡಬಹುದು; ಮೊದಲು ಅವುಗಳಿಗೆ ಶರೀರತ್ವವೇ ಅಪ್ರಸಿದ್ಧವಾಗಿರುವುದಲ್ಲವೆ" ಎಂದು ಭ್ರಾಂತಿಪಡಬಾರದು. ಭೂತಾನಾಂ ಪ್ರಾಣಿನಃ ಶ್ರೇಷ್ಠಾಃ, ಅಪ್ರಾಣಿಮತ್ಸು ಸ್ವಲ್ಪಾಸಾ ಸ್ಥಾವರೇಷು ತತೋಽಧಿಕಾ ಇತ್ಯಾದಿಶಾಸ್ತ್ರಗಳಿಂದ ಶಿಲೆ ಕಾಷ್ಠ ಘಟ ಪಟ ಮುಂತಾದುವುಗಳಲ್ಲಿಯೂ ತರತಮಭಾವದಿಂದ ಚೈತನ್ಯವಿರುವುದೆಂದು ಬೋಧಿಸಲ್ಪಟ್ಟಿರುವ ಕಾರಣ ಅವುಗಳಲ್ಲಿರುವ ಜೀವನನ್ನು ಕುರಿತು ಅವುಗಳಿಗೆ ಶರೀರತ್ವವನ್ನು ಆವಶ್ಯಕವಾಗಿ ಒಪ್ಪಿಕೊಳ್ಳಬೇಕಷ್ಟೆ. ಮುಂದೆ ಹೇಳುವ ನಾಲ್ಕನೆಯ ಲಕ್ಷಣವನ್ನು ನೋಡುವಿರಾದರೆ ಈ ರೀತಿಯಾದ ಭ್ರಾಂತಿಗೆ ಸ್ವಲ್ಪಮಾತ್ರವೂ ಅವಕಾಶವೇ ಇರುವುದಿಲ್ಲವೆಂದು ನೀವೇ ತಿಳಿವಿರಿ.

೨೭೪. ಸ್ವಶಕ್ಯೇಷು ಸರ್ವೇಷು ವ್ಯಾಪಾರೇಷು ಚೇತನಪ್ರೇರಣಾವಶ್ಯಂಭಾವನಿರ್ಬಂಧಾಭಾವಃ.

"ಆದೂ ಹಾಗಿರಲಿ—ತನ್ನಿಂದ ಸಾಧ್ಯವಾಗಬಹುದಾದ ಕೆಲಸಗಳಲ್ಲಿ ಚೇತನನ ಪ್ರೇರಣೆಯಿರಬೇಕಲ್ಲವೆ? ನಿಮೇಷೋನ್ಮೇಷವ್ಯಾಪಾರಗಳು ಸ್ಥಾವರಗಳಿಗೆ ಸಾಧ್ಯವಾದುವುಗಳೆಂಬೂ ಹಿಂದೆ ಹೇಳಲ್ಪಟ್ಟಿತಲ್ಲವೆ? ಆದರೆ ನಿಮೇಷೋನ್ಮೇಷರಹಿತವಾದ ಕೆಲವು ಸ್ಥಾವರಶರೀರಗಳಲ್ಲಿ ನಿಮೇಷೋನ್ಮೇಷವ್ಯಾಪಾರಗಳಿಗಾಗಿ ಚೇತನನ ಪ್ರೇರಣೆಯಿಲ್ಲವಾದುದರಿಂದ ಅವುಗಳಲ್ಲಿ ಪುನಃ ಅವ್ಯಾಪ್ತಿದೋಷವು ತಲೆದೋರುವುದು" ಎಂದು ಭ್ರಮಿಸಬಾರದು.

ಯಾವ ಯಾವ ಶರೀರಕ್ಕೆ ಯಾವ ಯಾವ ವ್ಯಾಪಾರಗಳು ಸಾಧ್ಯಗಳಾಗಿರುವುವೋ ಅಂಥ ಎಲ್ಲಾ ವ್ಯಾಪಾರಗಳಲ್ಲಿಯೂ ಚೇತನನು ಶರೀರಗಳನ್ನು ಪ್ರೇರಿಸಿಯೇ ತೀರಬೇಕೆಂಬ ನಿರ್ಬಂಧವೇನೂ ಇಲ್ಲವಷ್ಟೆ. ಒಂದುವೇಳೆ ಅಂಥ ನಿರ್ಬಂಧವುಂಟೆಂದು ನಿಮಗೆ ತೋರಿಬಂದರೂ ಈ ಶರೀರಲಕ್ಷಣದಲ್ಲಿ ಹಾಗೆ ವಿವಕ್ಷೆ ಮಾಡುವುದಕ್ಕೆ

ಪ್ರಯೋಜನವೇನೂ ಇಲ್ಲ. ಅಷ್ಟುಮಾತ್ರವಲ್ಲದೆ ಈ ಲಕ್ಷಣದಲ್ಲಿ ಹಾಗೆ ವಿಶಕ್ಷಿ ಮಾಡುವುದಾದರೆ ಮನುಷ್ಯಾದಿಶರೀರಗಳಲ್ಲಿ ಅವ್ಯಾಪ್ತಿದೋಷವನ್ನು ಯಾರು ತಡೆಯ ಬಲ್ಲರು ? ಮನುಷ್ಯಶರೀರದಿಂದ ಸಾಧ್ಯವಾಗಬಹುದಾದ ಅನೇಕವ್ಯಾಪಾರಗಳಲ್ಲಿಯೂ ತನಗೆ ಇಚ್ಛೆಯಿಲ್ಲದಿರುವಾಗ ಚೇತನನು ಶರೀರವನ್ನು ಅವುಗಳಲ್ಲಿ ಪ್ರೇರಿಸದಿರುವಿಕೆ ಸರ್ವರಿಗೂ ಅನುಭವಸಿದ್ಧವಾಗಿರುವುದಲ್ಲವೆ ?

ಆದಕಾರಣ—ತನ್ನಿಂದ ಸಾಧ್ಯವಾಗಬಹುದಾದ ಎಲ್ಲಾ ವ್ಯಾಪಾರಗಳಲ್ಲಿಯೂ ಚೇತನನ ಪ್ರೇರಣೆಗೆ ಅಧೀನವಾದ ವ್ಯಾಪಾರವುಳ್ಳುದಾಗಿರುವುದಕ್ಕೆ ಯೋಗ್ಯತೆಯು ಳ್ಳುದಾಗಿರಬೇಕೆಂಬ ಅಭಿಪ್ರಾಯವೇ ಲಕ್ಷಣವಾಕ್ಯದಲ್ಲಿ ವಿವಕ್ಷಿತವಾಗಿರುವುದರಿಂದ ನಿಮೇಷೋನ್ಮೇಷರಹಿತವಾದ ಸ್ಥಾವರಶರೀರಗಳಲ್ಲಿಯೂ ಅಂಥ ಯೋಗ್ಯತೆಯಿದ್ದೇ ಇರುವುದರಿಂದ ಅವುಗಳಲ್ಲಿ ಅವ್ಯಾಪ್ತಿಗೆ ಅವಕಾಶವಿಲ್ಲ.

ಅಂಥ ವ್ಯಾಪಾರದ ಯೋಗ್ಯತೆ ಅವುಗಳಿಗಿದ್ದಪಕ್ಷದಲ್ಲಿ ಯಾವಾಗಲಾದರೂ ಒಂದುವೇಳೆ ಅಂಥ ವ್ಯಾಪಾರವೂ ನಡೆದೇ ತೀರಬೇಕೆಂಬ ನಿರ್ಬಂಧವುಂಟೆಂದೂ ಭ್ರಮಿಸಬಾರದು. ಅದೃಷ್ಟನುಂತಾದ ಕೆಲವು ಸಹಕಾರಿಕಾರಣಗಳು ದೊರೆಯದಿದ್ದ ಪ್ರಯುಕ್ತ ನಿಮೇಷೋನ್ಮೇಷಾದಿಗಳು ಅವುಗಳಲ್ಲಿ ಹುಟ್ಟಲಿಲ್ಲವಲ್ಲದೆ ಯೋಗ್ಯತೆಯೇ ಇಲ್ಲದುದರಿಂದಲ್ಲ. ಬೀಜಕ್ಕೆ ಅಂಕುರೋತ್ಪಾದನಶಕ್ತಿ ಸ್ವಾಭಾವಿಕವಾಗಿದ್ದರೂ ಅಂಕುರೋತ್ಪಾದನಕ್ಕಿಂತಲೂ ಪೂರ್ವದಲ್ಲಿ ಪ್ರಬಲವಾದ ಕಾರಣಾಂತರದಿಂದ ಬೀಜವೇ ನಷ್ಟವಾದುದಾದರೆ ಆ ಬೀಜವು ಅಂಕುರವನ್ನು ಹುಟ್ಟಿಸಲೇ ಇಲ್ಲವೆಂಬ ಇಷ್ಟುಮಾತ್ರ ದಿಂದ ಆ ಬೀಜಕ್ಕೆ ಅಂಕುರೋತ್ಪಾದನಶಕ್ತಿಯೇ ಇರಲಿಲ್ಲವೆಂದು ಹೇಳಲಾದೀತೆ ?

೨೭೫. ಅನೇನ ಪ್ರಥಮಲಕ್ಷಣೇನ ಶರೀರಸ್ಯ ಆತ್ಮನಿಯಾಮ್ಯತ್ವಸಿದ್ಧಿಃ.

ಇದೇ ಆರನೆಯ ದಳದಲ್ಲಿ—ಪ್ರೇರಣೆಯೆಂಬ ಪದಕ್ಕೆ ಶರೀರದ ಒಳಹೊಕ್ಕು ಅಲ್ಲಿಂದ ನಡಸುವ ಪ್ರೇರಣೆ ಎಂದೇ ಅರ್ಥವಿವಕ್ಷೆ ಮಾಡಿರುವುದರಿಂದ ಶರೀರವು ಆತ್ಮನಿಗೆ ನಿಯಾಮ್ಯವಾಗಿರುವುದೆಂಬುದು ಸಿದ್ಧವಾಯಿತು. ಆದುದರಿಂದಲೇ ಪುತ್ರಾದಿ ಶರೀರದಲ್ಲಿ ಅತಿವ್ಯಾಪ್ತಿ ಪರಿಹೃತವಾಗಿರುವುದು. ಹೀಗೆ ವಿವಕ್ಷೆಮಾಡದಿದ್ದರೆ ಪುತ್ರಾದಿಶರೀರವು ತಂದೆ ತಾಯಿ ಮುಂತಾದವರಿಗೆ ಶರೀರವಾಗಬೇಕಾಗುತ್ತಿದ್ದಿತು.

ಹೇಗೆಂದರೆ—ತಂದೆಯನ್ನು ಕುರಿತು ಪುತ್ರನಿಗೆ ಉಂಟಾಗಿರುವ ಪುತ್ರತ್ವಸಂ ಬಂಧವು ಪುತ್ರನಿರುವವರೆಗೂ ಸಿದ್ಧವಾದುದರಿಂದ ಅಂಥ ಸಂಬಂಧದೊಡನೆ ಕೂಡಿಯೇ ಇರುವ ಪುತ್ರಶರೀರವು ಅಸಂಬಂಧಕ್ಕೆ ಅನರ್ಹವಾದುವಾಗಿಯೂ, ತನ್ನಿಂದ ಸಾಧ್ಯ

ನಾಗಬಹುದಾದ ಕೆಲಸದಲ್ಲಿ ತಂದೆಯ ಪ್ರೇರಣೆಗೆ ಅಧೀನವಾದ ವ್ಯಾಪಾರವುಳ್ಳುದಾಗಿರುವುದಕ್ಕೆ ಯೋಗ್ಯವಾದುದಾಗಿಯೂ ಇರುವುದು; ಆದರೆ ತಂದೆಯ ಶರೀರದಲ್ಲಿ ಇರುವ ಆತ್ಮನು ಪುತ್ರಶರೀರದಲ್ಲಿ ಒಳಹೊಕ್ಕು ಪ್ರೇರಣೆಯನ್ನು ಮಾಡುವುದಿಲ್ಲವಾದುದರಿಂದ ಪುತ್ರಶರೀರವು ತನ್ನೊಳಗಿರುವ ಆತ್ಮನನ್ನು ಕುರಿತು ಶರೀರವಾಗುವುದಲ್ಲದೆ ತಂದೆಯ ಶರೀರದಲ್ಲಿರುವ ಆತ್ಮನನ್ನು ಕುರಿತು ಶರೀರವಾಗಲಾರದು.

## ೨೭೬. ಅಸ್ಯ ಪ್ರಥಮಲಕ್ಷಣಸ್ಯ ಫಲಿತಾಂಶಕಥನಪೂರ್ವಕಂ ಸರ್ವಲಕ್ಷ್ಯೇಷು ಲಕ್ಷಣಸಂಗಮನಂ.

ಈ ಪ್ರಥಮಲಕ್ಷಣದಲ್ಲಿರುವ ಎಲ್ಲಾ ದಳಗಳಿಗೂ ಈ ರೀತಿಯಲ್ಲಿ ಪ್ರಯೋಜನವನ್ನು ತೋರಿಸಿದೆವು. ಈ ಪ್ರಥಮಲಕ್ಷಣದ ಪರ್ಯವಸಾನ ಅಥವಾ ಫಲಿತಾಂಶವೇನಾಗಿರುವುದೆಂದರೆ—ಯಾವ ದ್ರವ್ಯವು ಯಾವನೊಬ್ಬನಿಗೆ ಅಪೃಥಕ್ಸಿದ್ಧವಿಶೇಷಣವಾಗಿಯೇ ಇದ್ದು ಅವನ ಧರ್ಮಭೂತಜ್ಞಾನಕ್ಕೆ ಅಧೀನವಾದ ವ್ಯಾಪಾರವುಳ್ಳುದಾಗಿರುವುದಕ್ಕೆ ಸ್ವರೂಪಯೋಗ್ಯತೆಯನ್ನು ಪಡೆದಿರುವುದೋ ಅಂಥ ದ್ರವ್ಯವು ಅವನಿಗೆ ಶರೀರವೆನಿಸಿಕೊಳ್ಳುವುದು ಎಂದು ಇದರ ಫಲಿತಾಂಶವನ್ನು ತಿಳಿಯಬೇಕು.

ಈ ಲಕ್ಷಣವನ್ನು ಅಸ್ಮದಾದಿಶರೀರಗಳಲ್ಲಿ ಸಮನ್ವಯಮಾಡಿಕೊಳ್ಳುವುದು ಸಾಮಾನ್ಯಬುದ್ಧಿಯುಳ್ಳವರಿಗೂ ಕಠಿನವಾದ ಕೆಲಸವಾಗಿಲ್ಲ. ಈಶ್ವರಭಿನ್ನವಾಗಿಯೂ ಚೇತನಾಚೇತನಾತ್ಮಕವಾಗಿಯೂ ಇರುವ ಸಮಸ್ತದ್ರವ್ಯಗಳೂ ಈಶ್ವರನಿಗೆ ಅಪೃಥಕ್ಸಿದ್ಧವಿಶೇಷಣಗಳಾಗಿಯೇ ಇದ್ದು ಈಶ್ವರನ ಸಂಕಲ್ಪವೆಂಬ ಧರ್ಮಭೂತಜ್ಞಾನಕ್ಕೆ ಅಧೀನವಾದ ವ್ಯಾಪಾರವುಳ್ಳುವುಗಳಾಗಿರುವುದಕ್ಕೆ ಸ್ವರೂಪಯೋಗ್ಯತೆಯನ್ನು ಪಡೆದುವುಗಳಾಗಿರುವುದರಿಂದ ಸಮಸ್ತಪ್ರಪಂಚವೂ ಈಶ್ವರನಿಗೆ ಶರೀರವಾಗಿಯೇ ಇರುವ ಕಾರಣ ಈ ಲಕ್ಷಣಕ್ಕೆ ಪ್ರಪಂಚದಲ್ಲಿಯೂ ಸಮನ್ವಯವನ್ನು ಮಾಡಿಕೊಂಡು ಸಮಸ್ತಪ್ರಪಂಚವನ್ನೂ ಈಶ್ವರನಿಗೆ ಶರೀರವನ್ನಾಗಿ (ನಿಯಾಮ್ಯವನ್ನಾಗಿ) ತಿಳಿಯಬಹುದು.

## ೨೭೭. ಅಥ ದ್ವಿತೀಯಲಕ್ಷಣಪ್ರದರ್ಶನಂ.

ಎರಡನೆಯ ಲಕ್ಷಣ—"ಯಾವ ಧರ್ಮದೊಡನೆ ಕೂಡಿರುವ ಯಾವ ದ್ರವ್ಯವು ತಾನಿರುವ ಕಾಲ ಯಾವತ್ತಿನಲ್ಲಿಯೂ ಯಾವ ಚೇತನನಿಗೆ ಧಾರ್ಯವಾಗಿಯೇ ಇರುವುದೋ ಅಂಥ ಧರ್ಮದೊಡನೆ ಕೂಡಿರುವ ಆ ದ್ರವ್ಯವು ಆ ಚೇತನನಿಗೆ ಶರೀರವೆನಿಸಿಕೊಳ್ಳುವುದು."

ಮೊದಲನೆಯ ಲಕ್ಷಣದಲ್ಲಿ ಆತ್ಮನಿಗೂ ಶರೀರಕ್ಕೂ ನಿಯಾಮ್ಯನಿಯಾಮಕ ಭಾವವು ಫಲಿಸಿರುವುದು. ಈ ಲಕ್ಷಣದಲ್ಲಿ ಆಧಾರಾಧೇಯಭಾವವು ಫಲಿಸುವುದು. ಆಧಾರಾಧೇಯಭಾವವೆಂದರೆ ಇಲ್ಲಿ ಇದು ಇರುತ್ತದೆ ಎಂಬ ಲೋಕಾನುಭವದಿಂದ ಸಿದ್ಧವಾಗಿರುವ ಒಂದಾನೊಂದು ಸಂಬಂಧವಿಶೇಷವು. ಯಾವ ಪದಾರ್ಥದ ಸತ್ತೆ ಯಾವ ಪದಾರ್ಥಕ್ಕೆ ಅಧೀನವಾಗಿರುವುದೋ; ಯಾವ ಪದಾರ್ಥವು ಕೆಳಗೆ ಬೀಳದಿರುವಿಕೆಗೆ ಯಾವ ಪದಾರ್ಥದ ಸಂಬಂಧವು ಬೇಕಾಗಿರುವುದೋ ಆ ಎರಡು ಪದಾರ್ಥಗಳಲ್ಲಿ ಆಧಾರಾಧೇಯಭಾವವೆಂಬ ಸಂಬಂಧವಿಶೇಷವಿರುವುದು. ಉದಾಹರಣೆ— ಘಟದಲ್ಲಿರುವ ರೂಪರಸಗಂಧಾದಿಗಳ ಸತ್ತೆ ಘಟಕ್ಕೆ ಅಧೀನವಾಗಿರುವುದು. ಘಟವು ಕೆಳಗೆ ಬಿದ್ದುಹೋಗದಿರುವುದಕ್ಕೆ ಭೂತಲದ ಸಂಬಂಧವು ಬೇಕಾಗಿರುವುದು. ಆದುದರಿಂದ ಘಟಕ್ಕೂ ಅದರ ರೂಪಾದಿಗಳಿಗೂ ಆಧಾರಾಧೇಯಭಾವಸಂಬಂಧವುಂಟು. ಮತ್ತು ಭೂತಲಕ್ಕೂ ಘಟಕ್ಕೂ ಆಧಾರಾಧೇಯಭಾವಸಂಬಂಧವುಂಟು.

ಹೀಗಿರುವಲ್ಲಿ ಅಸ್ಮದಾದಿಶರೀರಗಳ ಸತ್ತೆ ಚೇತನಸಂಬಂಧಕ್ಕೆ ಅಧೀನವಾಗಿರುವುದರಿಂದ ಶರೀರದಲ್ಲಿ ಆಧೇಯತ್ವವೂ ಚೇತನನಲ್ಲಿ ಆಧಾರತ್ವವೂ ಸಿದ್ಧಿಸುವ ಕಾರಣ ಇವೆರಡಕ್ಕೂ ಆಧಾರಾಧೇಯಭಾವಸಂಬಂಧವುಂಟೆಂದು ಹೇಳುವುದರಲ್ಲಿ ತಡೆಯಿಲ್ಲವಾದುದರಿಂದಲೂ, ಶರೀರವಿರುವಕಾಲ ಯಾವತ್ತಿನಲ್ಲಿಯೂ ಇಂಥ ಸಂಬಂಧಕ್ಕೆ ಚ್ಯುತಿಯಿಲ್ಲವಾದುದರಿಂದಲೂ, ಅಸ್ಮದಾದಿಶರೀರಗಳಲ್ಲಿ ಲಕ್ಷಣಸಮನ್ವಯವನ್ನು ಮಾಡಿಕೊಳ್ಳಬಹುದು.

ತಾಯಿ ತಂದೆ ಮೊದಲಾದವರು ಪುತ್ರಾದಿಶರೀರವನ್ನು ಧರಿಸಿರುವ ಕಾಲದಲ್ಲಿ ಪುತ್ರಾದಿಶರೀರದಲ್ಲಿ ಉಂಟಾಗಿರುವ ಪತನಾಭಾವಕ್ಕೆ ತಾಯಿತಂದೆ ಮುಂತಾದವರ ಸಂಬಂಧವು ಆವಶ್ಯಕವಾಗಿರುವುದರಿಂದ ಪುತ್ರಾದಿಶರೀರವು ಪಿತ್ರಾದಿಗಳಿಗೆ ಶರೀರವೆನಿಸಿಕೊಳ್ಳಬೇಕಾಗಿ ಬರುವುದು. ಈ ಅತಿವ್ಯಾಪ್ತಿಯನ್ನು ತಪ್ಪಿಸುವುದಕ್ಕಾಗಿ ತಾನಿರುವ ಕಾಲ ಯಾವತ್ತಿನಲ್ಲಿಯೂ ಯಾವ ಚೇತನನಿಗೆ ಧಾರ್ಯವಾಗಿಯೇ ಇರುವುದೋ ಎಂಬ ದಳವು ಲಕ್ಷಣದಲ್ಲಿ ಸೇರಿಸಲ್ಪಟ್ಟಿರುವುದು. ಪುತ್ರಾದಿಶರೀರವು ಪಿತ್ರಾದಿಗಳಿಂದ ಯಾವುದೋ ಒಂದೊಂದು ಸಮಯದಲ್ಲಿ ಧರಿಸಲ್ಪಡುವುದಾದರೂ ಸರ್ವಕಾಲದಲ್ಲಿಯೂ ಧರಿಸಲ್ಪಡುವುದಿಲ್ಲವಾದುದರಿಂದ ಪುತ್ರಾದಿಶರೀರವು ಪಿತ್ರಾದಿಗಳಿಗೆ ಶರೀರವೆನಿಸಿಕೊಳ್ಳಲಾರದು. ತನ್ನೊಳಗೆ ವ್ಯಾಪಿಸಿರುವ ಚೇತನನಿಂದಲಾದರೆ ಸರ್ವಕಾಲದಲ್ಲಿಯೂ ಧರಿಸಲ್ಪಡುತ್ತಿರುವುದರಿಂದ ಅವನಿಗೆ ಇದು ಶರೀರವೆನಿಸಿಕೊಳ್ಳುವುದರಲ್ಲಿ ತಡೆಯಿಲ್ಲ.

ಹೀಗಾದರೆ, ಧರ್ಮಭೂತಜ್ಞಾನವು ತಾನಿರುವ ಕಾಲ ಯಾವತ್ತಿನಲ್ಲಿಯೂ ಆತ್ಮನಿಗೆ ಧಾರ್ಯವಾಗಿಯೇ ಇರುವುದರಿಂದ ಇದು ಅವನಿಗೆ ಶರೀರವೆನಿಸಿಕೊಳ್ಳಬೇಕಾಗುವುದಲ್ಲವೆ? ಹೀಗೆಂಬ ಶಂಕೆ ಲಕ್ಷಣದಲ್ಲಿ ಚೇತನಪದವನ್ನು ಸೇರಿಸಿರುವುದರಿಂದಲೇ ಪರಿಹರಿಸಲ್ಪಡುವುದು. ಇದರ ವಿವರವನ್ನು ಪ್ರಥಮಲಕ್ಷಣದಲ್ಲಿರುವ ಚೇತನಪದದ ವಿವರಣೆಯಲ್ಲಿ ತಿಳಿಯಬಹುದು.

ಇದೆಲ್ಲಾ ಸರಿಯೆ, ಆದರೆ ಯಾವನಾದರೂ ಒಬ್ಬ ಮನುಷ್ಯನ ತಲೆಯಲ್ಲಿ ಹೇನು ಹುಟ್ಟಿ ಅಲ್ಲಿಯೇ ನಾಶಹೊಂದುವುದಾಗಿದ್ದರೆ ಅಂಥ ಹೇನು ತಾನಿದ್ದ ಕಾಲ ಯಾವತ್ತಿನಲ್ಲಿಯೂ ಆ ಮನುಷ್ಯನಿಗೆ ಧಾರ್ಯವಾಗಿಯೇ ಇದ್ದಿತಾದುದರಿಂದ ಅವನಿಗೆ ಅದು ಶರೀರವೆನಿಕೊಳ್ಳಬೇಕಲ್ಲವೆ?

ಅಲ್ಲ. ಏತಕ್ಕೆಂದರೆ ಲಕ್ಷಣದಲ್ಲಿ ಸೇರಿರುವ ತಾನಿರುವ ಕಾಲ ಯಾವತ್ತಿನಲ್ಲಿಯೂ ಎಂಬ ಪದದಿಂದ ಗುಣಕ್ಕೂ ಗುಣಿಗೂ ಇರುವಂತೆ ಅಪೃಥಕ್ಸಿದ್ಧಿಸಂಬಂಧದಿಂದ ಚೇತನನಿಗೆ ಧಾರ್ಯವಾಗಿರಬೇಕೆಂದು ವಿವಕ್ಷೆಮಾಡಿರುವಕಾರಣ ಹೇನು ಆ ಮನುಷ್ಯನಿಗೆ ಸಂಯೋಗಸಂಬಂಧದಿಂದ ಧಾರ್ಯವಾಗಿದ್ದರೂ ಅಪೃಥಕ್ಸಿದ್ಧಿಸಂಬಂಧದಿಂದ ಧಾರ್ಯವಾಗಿರಲಿಲ್ಲವಾಗಿ ಅದು ಅವನಿಗೆ ಶರೀರವಾಗಲಾರದು.

ಅಥವಾ-ಸಂಬಂಧಕ್ಕೆ ಅಧೀನವಾದ ಸತ್ತೆಯನ್ನು ಪಡೆದಿರುವಿಕೆಯೇ ಆಧೇಯತ್ವವೆನಿಸಿಕೊಳ್ಳುವುದು. ತಾನಿರುವ ಯಾವತ್ಕಾಲದಲ್ಲಿಯೂ ಎಂಬ ಪದಸ್ವಾರಸ್ಯದಿಂದ ಅಪೃಥಕ್ಸಿದ್ಧಿಸಂಬಂಧವು ಫಲಿಸಿರುವುದು. ಇದರಿಂದ ಚೇತನನೊಡನೆ ಅಪೃಥಕ್ಸಿದ್ಧಿಸಂಬಂಧಕ್ಕೆ ಅಧೀನವಾಗಿರುವ ಸತ್ತೆಯನ್ನು ಪಡೆದಿರುವಿಕೆ ಹೇನಿಗೆ ಇಲ್ಲವಾದುದರಿಂದ ಅತಿವ್ಯಾಪ್ತಿಗೆ ಅವಕಾಶವಿಲ್ಲವೆಂಬುದು ವ್ಯಕ್ತವಾಗುವುದು.

ಆದುದರಿಂದಲೇ ಈ ದ್ವಿತೀಯಲಕ್ಷಣದ ಪರ್ಯವಸಾನವು—ಚೈತನ್ಯವಿಶಿಷ್ಟನಾದ ಆತ್ಮನೊಡನೆ ಅಪೃಥಕ್ಸಿದ್ಧಿಸಂಬಂಧವುಂಟಾಗಿ ತದಧೀನವಾದ ಸತ್ತೆಯನ್ನು ಪಡೆದಿರುವ ದ್ರವ್ಯವು ಅವನಿಗೆ ಶರೀರವೆನಿಸಿಕೊಳ್ಳುವುದು-ಎಂದಾಗುವುದು. ಅಸ್ಮದಾದಿಶರೀರಗಳಲ್ಲಿ ಈ ಲಕ್ಷಣಕ್ಕೆ ಸಮನ್ವಯವನ್ನು ಮಾಡಿಕೊಳ್ಳಬಹುದು. ಅದರಂತೆಯೇ ಚೇತನಾಚೇತನರೂಪವಾದ ಸಮಸ್ತಪ್ರಪಂಚವೂ ಈಶ್ವರನೊಡನೆ ಅಪೃಥಕ್ಸಿದ್ಧಿಸಂಬಂಧವನ್ನು ಪಡೆದು ಅಂಥ ಸಂಬಂಧಕ್ಕೆ ಅಧೀನವಾದ ಸತ್ತೆಯನ್ನು ಪಡೆದಿರುವುದರಿಂದ ಈಶ್ವರನಿಗೆ ಶರೀರವೆನಿಸಿಕೊಂಡಿರುವುದು. ಹೆಚ್ಚು ವಿಷಯಗಳನ್ನೆಲ್ಲಾ ಪ್ರಥಮ ಲಕ್ಷಣದ ವಿವರಣದಲ್ಲಿ ಹೇಳಿದಂತೆಯೇ ತಿಳಿಯಬಹುದು.

## ೨೭೮. ಅಥ ತೃತೀಯಲಕ್ಷಣಪ್ರದರ್ಶನಂ.

ಮೂರನೆಯ ಲಕ್ಷಣ—" ಯಾವ ಧರ್ಮದೊಡನೆ ಕೂಡಿರುವ ಯಾವ ದ್ರವ್ಯವು ತಾನಿರುವ ಕಾಲ ಯಾವತ್ತಿನಲ್ಲಿಯೂ ಯಾವ ಚೇತನನಿಗೆ ಶೇಷವಾಗದಿರುವುದಕ್ಕೆ ಅರ್ಹವಲ್ಲದುದಾಗಿರುವುದೋ ಅಂಥ ಧರ್ಮದೊಡನೆ ಕೂಡಿದ ಆ ದ್ರವ್ಯವು ಆ ಚೇತನನಿಗೆ ಶರೀರವೆನಿಸಿಕೊಳ್ಳುವುದು-ಎಂದರೆ ಶೇಷತ್ವವನ್ನು ಹೋಗಲಾಡಿಸಿಕೊಳ್ಳುವುದಕ್ಕೆ ಅಡ್ಡಿಯಾಗಿರುವ ಸಂಬಂಧವನ್ನು ಯಾವ ದ್ರವ್ಯವು ಯಾವ ಚೇತನನೊಡನೆ ಪಡೆದಿರುವುದೋ ಆ ದ್ರವ್ಯವು ಅವನಿಗೆ ಶರೀರವೆನಿಸಿಕೊಳ್ಳುವುದು."

ಯಾವುದಿದ್ದರೆ ಶೇಷತ್ವವನ್ನು ಹೋಗಲಾಡಿಸಿಕೊಳ್ಳಲಾಗುವುದಿಲ್ಲವೋ; ಯಾವುದಿಲ್ಲದಿದ್ದರೆ ಶೇಷತ್ವವನ್ನು ತಪ್ಪಿಸಿಕೊಳ್ಳಬಹುದೋ. ಅದು ಶೇಷತ್ವನಿವೃತ್ತಿಗೆ ಪ್ರತಿಬಂಧಕವಾಗುವುದು. ಪ್ರಕೃತದಲ್ಲಿ ಅಪೃಥಕ್ಸಿದ್ಧಿಸಂಬಂಧವೇ ಶೇಷತ್ವನಿವೃತ್ತಿಗೆ ಅಂಥ ಪ್ರತಿಬಂಧಕವಾಗಿರುವುದು ಅಸ್ಮದಾದಿಶರೀರವು ಅಸ್ಮದಾದ್ಯಾತ್ಮಸ್ವರೂಪಕ್ಕೆ ಅಪೃಥಕ್ಸಿದ್ಧವಾಗಿರದೆ ಪೃಥಕ್ಸಿದ್ಧವಾಗಿ ಸ್ವತಂತ್ರವೆನಿಸಿಕೊಂಡಿದ್ದ ಪಕ್ಷದಲ್ಲಿ ನಮಗೆ ಸೇವೆಯನ್ನು ಮಾಡದೆ ಇದು ಶೇಷತ್ವದಿಂದ ಬಿಡುಗಡೆಯನ್ನು ಹೊಂದಬಹುದಾಗಿದ್ದಿತು. ಅದಿಲ್ಲವಾದುದರಿಂದ ಶೇಷವಾಗದಿರುವುದಕ್ಕೆ ಅರ್ಹವಲ್ಲದುದಾಗಿ ಎಂದರೆ ಶೇಷವಾಗಿಯೇ ಇರುವುದಕ್ಕೆ ಅರ್ಹವಾಗಿಯೇ ಇರುವುದು.

ತಾಯಿತಂದೆಗಳನ್ನು ಕುರಿತು ಪುತ್ರನಿಗಿರುವ ಪುತ್ರತ್ವಸಂಬಂಧವು ಪುತ್ರನು ಅವರಿಗೆ ಶೇಷನಾಗಿರುವುದಕ್ಕೆ ಕಾರಣವಾಗಿದ್ದರೂ ಅದು ಅಪೃಥಕ್ಸಿದ್ಧಿರೂಪವಾದ ಸಂಬಂಧವಲ್ಲ. ಪುತ್ರನನ್ನು ಮತ್ತೊಬ್ಬನಿಗೆ ದಾನಮಾಡುವ ಪಕ್ಷದಲ್ಲಿ ಆಗ ಪುತ್ರತ್ವಸಂಬಂಧವು ಬಿಟ್ಟು ಹೋಗುವ ಕಾರಣ ಪುತ್ರನು ಶೇಷತ್ವನಿರ್ಬಂಧದಿಂದ ಬಿಡುಗಡೆಯನ್ನು ಹೊಂದಲೂ ಅವಕಾಶವುಂಟು. ಶರೀರಕ್ಕೂ ಆತ್ಮನಿಗೂ ಇರುವ ಸಂಬಂಧವಾದರೆ ಇಂಥದಲ್ಲವಾದುದರಿಂದ ಶರೀರವು ತಾನಿರುವವರೆಗೂ ಯಾವಾಗಲೂ ಆತ್ಮನಿಗೆ ಶೇಷವಾಗಿಯೇ ಇದ್ದೇ ತೀರಬೇಕು.

ಇದರಂತೆಯೇ ಚೇತನಾಚೇತನರೂಪವಾದ ಪ್ರಪಂಚಕ್ಕೂ ಈಶ್ವರನಿಗೂ ಇರುವ ಸಂಬಂಧವು ಅಪೃಥಕ್ಸಿದ್ಧಿಸಂಬಂಧರೂಪವೇ ಆಗಿರುವುದರಿಂದಲೂ, ಚೇತನಾಚೇತನಗಳ ಸ್ವರೂಪವು ನಿತ್ಯವಾದುದರಿಂದಲೂ, ಇದು ತಾನಿರುವವರೆಗೂ ಯಾವಾಗಲೂ ಈಶ್ವರನಿಗೆ ಶೇಷವಾಗದಿರುವುದಕ್ಕೆ ಅನರ್ಹವಾಗಿ ಶೇಷವಾಗಿಯೇ ಇರಬೇಕಾಗಿರುವುದರಿಂದ ಹೀಗಿರುವಿಕೆಯೇ ಇದರಲ್ಲಿರುವ ಶರೀರತ್ವವೆಂಬ ಧರ್ಮವಾಗಿರುವುದು.

ಈ ಲಕ್ಷಣದಲ್ಲಿಯೂ ಚೈತನ್ಯವಿಶಿಷ್ಟನಾದ-ಎಂಬ ಅರ್ಥವನ್ನು ತೋರಿಸುವ ಚೇತನನಿಗೆ-ಎಂಬ ದಳವನ್ನು ಸೇರಿಸಿರುವುದರಿಂದ ಧರ್ಮಭೂತಜ್ಞಾನವು ತನಗೆ ಆಶ್ರಯನಾದ ಆತ್ಮನನ್ನು ಕುರಿತು ಅಪೃಥಕ್ಸಿದ್ಧಿಸಂಬಂಧವುಳ್ಳದಾದಕಾರಣ ಅವನಿಗೆ ಶೇಷವೆನಿಸಿಕೊಂಡಿದ್ದರೂ, ಚೈತನ್ಯವಿಶಿಷ್ಟನಾದ ಆತ್ಮನನ್ನು ಕುರಿತು ಇದಕ್ಕೆ ಅಪೃಥಕ್ಸಿದ್ಧಿಸಂಬಂಧವಿಲ್ಲವಾಗಿ ಅಂಥವನಿಗೆ ಇದು ಶೇಷವಲ್ಲವಾಗುದರಿಂದ ಆತ್ಮನಿಗೆ ಇದು ಶರೀರವೆನಿಸಿಕೊಳ್ಳಲಾರದೆಂಬ ಪ್ರಯೋಜನವನ್ನು ಮೊದಲನೆಯ ಲಕ್ಷಣದಲ್ಲಿ ತೋರಿಸಿದಂತೆ ತಿಳಿಯಬಹುದು.

### ೨೭೯. ಉಕ್ತಲಕ್ಷಣತ್ರಯಫಲಿತಲಘುಭೂತಚತುರ್ಥಲಕ್ಷಣಪ್ರದರ್ಶನಂ.

ಹೀಗೆ ಭಾಷ್ಯಕಾರರಿಂದ ಕಂಠೋಕ್ತವಾಗಿರುವ ಮೂರು ಲಕ್ಷಣಗಳ ಫಲಿತಾಂಶರೂಪವಾಗಿಯೂ, ಭಾಷ್ಯಕಾರರಿಗೆ ಅಭಿಮತವಾಗಿಯೂ, ಗಹನವಲ್ಲದೆ ಅತ್ಯಂತ ಲಘುವಾಗಿಯೂ, ಆದುದರಿಂದಲೇ ಮಂದಮತಿಗಳಿಗೂ ಸುಲಭವಾಗಿ ತಿಳಿದುಕೊಳ್ಳಲು ಸಾಧ್ಯವಾದುದಾಗಿಯೂ ಇರುವ ನಾಲ್ಕನೆಯದಾದ ಒಂದು ಲಕ್ಷಣವನ್ನೂ ಶರೀರವಿಷಯದಲ್ಲಿ ತೋರಿಸಬಹುದು.

ಹೇಗೆಂದರೆ—" ಯಾವ ಧರ್ಮದೊಡನೆ ಕೂಡಿರುವ ಯಾವ ದ್ರವ್ಯವು ಯಾವ ಚೇತನನಿಗೆ ಅಪೃಥಕ್ಸಿದ್ಧವಿಶೇಷಣವಾಗಿರುವುದೋ ಅದು ಅವನಿಗೆ ಶರೀರವೆನಿಸಿಕೊಳ್ಳುವುದು." ತಾನಿರುವವರೆಗೂ ಸಂಬಂಧವಿಲ್ಲದಿರುವಿಕೆಗೆ ಅನರ್ಹವಾಗಿರುವಿಕೆಯೇ ಅಪೃಥಕ್ಸಿದ್ಧಿಯೆನಿಸಿಕೊಳ್ಳುವುದು. ಹಿಂದಿನ ಮೂರು ಲಕ್ಷಣಗಳಲ್ಲಿಯೂ ಕ್ರಮವಾಗಿ ತೋರಿಸಲ್ಪಟ್ಟ ನಿಯಾಮ್ಯತ್ವ, ಆಧೇಯತ್ವ, ಶೇಷತ್ವಗಳೆಂಬ ಮೂರು ಧರ್ಮಗಳೂ ಈ ಅಪೃಥಕ್ಸಿದ್ಧಿಯೆಂಬುದರ ಒಳಭೇದಗಳಲ್ಲದೆ ಬೇರೆ ಅಲ್ಲ.

ಲೋಕದಲ್ಲಿ ಅಪೃಥಕ್ಸಿದ್ಧಿಸಂಬಂಧವಿಲ್ಲದ ಕಡೆಯಲ್ಲಿಯೂ ನಿಯಾಮ್ಯತ್ವ, ಆಧೇಯತ್ವ, ಶೇಷತ್ವಗಳಿರಬಹುದು. ಹೇಗೆಂದರೆ—ಪ್ರಜೆಗಳಿಗೂ ರಾಜನಿಗೂ ಅಪೃಥಕ್ಸಿದ್ಧಿಸಂಬಂಧವಿಲ್ಲದಿದ್ದರೂ ನಿಯಾಮ್ಯನಿಯಾಮಕಭಾವವಿರುವುದರಿಂದ ಪ್ರಜೆಗಳಲ್ಲಿ ನಿಯಾಮ್ಯತ್ವವಿರಬಹುದು ; ತಾಯಿಗೂ ಮಗನಿಗೂ ಅಪೃಥಕ್ಸಿದ್ಧಿಸಂಬಂಧವಿಲ್ಲದಿದ್ದರೂ ತಾಯಿ ಮಗನನ್ನು ಎತ್ತಿಕೊಳ್ಳುವಾಗ ಆಧಾರಾಧೇಯಭಾವವಿರುವುದರಿಂದ ಮಗನಲ್ಲಿ ಆಧೇಯತ್ವವಿರಬಹುದು ; ಪತಿಪತ್ನಿಯರಿಗೆ ಅಪೃಥಕ್ಸಿದ್ಧಿಸಂಬಂಧವಿಲ್ಲದಿದ್ದರೂ ಶೇಷಶೇಷಿಭಾವವಿರುವುದರಿಂದ ಪತ್ನಿಯಲ್ಲಿ ಶೇಷತ್ವವಿರಬಹುದು.

ಆದರೆ ಬ್ರಾಹ್ಮಣತ್ವಕ್ಷತ್ರಿಯತ್ವಾದಿಗಳು ಮನುಷ್ಯತ್ವದ ಒಳಭೇದಗಳಾಗಿಯೇ ಇರುವಂತೆ ಶರೀರಲಕ್ಷಣಗಳಲ್ಲಿ ಹೇಳಲ್ಪಟ್ಟಿರುವ ನಿಯಾಮ್ಯತ್ವ, ಆಧೇಯತ್ವ, ಶೇಷತ್ವ ಗಳು ಅಪೃಥಕ್ಸಿದ್ಧಿಸಂಬಂಧದ ಒಳಭೇದಗಳಾಗಿಯೇ ಇರುವುವಲ್ಲದೆ ಬೇರೆ ಅಲ್ಲ. ಆದುದರಿಂದಲೇ. ಬ್ರಾಹ್ಮಣತ್ವಾದಿಗಳಿದ್ದ ಕಡೆಯಲ್ಲಿ ಮನುಷ್ಯತ್ವವು ಫಲಿಸುವಂತೆ ಶರೀರಲಕ್ಷಣಾಂತರ್ಗತವಾದ ನಿಯಾಮ್ಯತ್ವಾದಿಗಳಿರುವ ಕಡೆಯಲ್ಲಿ ಅಪೃಥಕ್ಸಿದ್ಧತ್ವವು ಫಲಿಸುವುದರಿಂದ ಈ ನಾಲ್ಕನೆಯ ಲಕ್ಷಣವು ಹಿಂದಣ ಮೂರುಲಕ್ಷಣಗಳಿಂದ ಫಲಿತ ವಾದ ಲಕ್ಷಣವಾಗಿರುವುದು. ಮೊದಲನೆಯ ಲಕ್ಷಣದಲ್ಲಿ ತೋರಿಸಿದಂತೆಯೇ ಇಲ್ಲಿಯೂ ಆ ಆ ದಳಗಳ ಪ್ರಯೋಜನಗಳನ್ನು ತಿಳಿಯಬೇಕು.

ಹೀಗೆ ನಾಲ್ಕನೆಯ ಲಕ್ಷಣವನ್ನು ತೋರಿಸುವುದರ ಮೂಲಕ ಚೇತನಾಪೃಥ ಕ್ಸಿದ್ಧದ್ರವ್ಯತ್ವವೆಂಬ ಅತ್ಯಂತಲಘುಭೂತವಾದ ಧರ್ಮವು ಶರೀರಪದಕ್ಕೆ ಪ್ರವೃತ್ತಿ ನಿಮಿತ್ತವಾಗಿರುವುದೆಂದು ಸ್ಪಷ್ಟಪಡಿಸಿರುವುದರಿಂದ-ಶರೀರಶಬ್ದವಿಷಯದಲ್ಲಿ ಅನೇಕರು ಅನೇಕಪ್ರಕಾರವಾಗಿ ಉದ್ಘೋಷಿಸುತ್ತಿದ್ದ ಆಕ್ಷೇಪಗಳಿಗೆಲ್ಲಾ ಪರಿಹಾರವನ್ನು ತೋರಿಸಿ ದಂತಾಯಿತು.

**೨೮೦. ತತೋಽಪಿ ಲಘುಭೂತಸ್ಯ ಪಂಚಮಲಕ್ಷಣಸ್ಯ ಪ್ರದರ್ಶನಂ.**

ಇಂಥ ನಾಲ್ಕು ಲಕ್ಷಣಗಳಲ್ಲದೆ ಇನ್ನೂ ಅತ್ಯಂತಸುಲಭವಾಗಿ ಹೆಗ್ಗುರುತಿನಿಂದ ತಿಳಿದುಕೊಳ್ಳಬಹುದಾದ ಐದನೆಯ ಒಂದು ಲಕ್ಷಣವನ್ನೂ ಶರೀರಕ್ಕೆ ಹೇಳಬಹುದು. ಹೇಗೆಂದರೆ—" ಈಶ್ವರನನ್ನೂ ಧರ್ಮಭೂತಜ್ಞಾನವನ್ನೂ ಬಿಟ್ಟು ಉಳಿದ ದ್ರವ್ಯಗ ಳೆಲ್ಲವೂ ಶರೀರವೆನಿಸಿಕೊಳ್ಳುವುವು " ಇದರಿಂದ ಪ್ರಕೃತಿದ್ರವ್ಯವೂ, ಅದರ ಪರಿಣಾಮ ಗಳೂ, ಕಾಲವೂ, ನಿತ್ಯವಿಭೂತಿಯೂ, ಜೀವನೂ ಇವುಗಳೆಲ್ಲವೂ ಶರೀರವೆನಿಸಿಕೊಳ್ಳುವು ವೆಂದು ಫಲಿಸಿತು. ಶರೀರಶಬ್ದವು ಘಟ ಪಟ ಮುಂತಾದ ಶಬ್ದಗಳಂತೆ ಅಸಂಬಂಧಿಕ ಶಬ್ದವಲ್ಲವೆಂದೂ, ಪುತ್ರ ಪಿತೃ ಮುಂತಾದ ಶಬ್ದಗಳಂತೆ ಸಸಂಬಂಧಿಕಶಬ್ದವೆಂದೂ ಹಿಂದೆಯೇ ತೋರಿಸಿರುವೆವು; ಹಿಂದಣ ನಾಲ್ಕು ಲಕ್ಷಣಗಳಲ್ಲಿಯೂ ಶರೀರದ ಪ್ರತಿ ಸಂಬಂಧಿ ಕಂಠೋಕ್ತನಾಗಿರುವನು ಈ ಐದನೆಯ ಲಕ್ಷಣದಲ್ಲಿ ಪ್ರತಿಸಂಬಂಧಿ ಕಂಠೋಕ್ತನಾಗಿಲ್ಲವಾದರೂ ಆ ಆ ಪ್ರಮಾಣವಿಶೇಷಗಳಿಂದ ನಿರ್ಧರಿಸಲ್ಪಡುವನು.

**೨೮೧. ಉಕ್ತಪಂಚಪ್ರಕಾರಶರೀರಲಕ್ಷಣಪರಿಜ್ಞಾನಸ್ಯ ಪರಮಪ್ರಯೋಜನಪ್ರದರ್ಶನಂ.**

ಈ ರೀತಿಯಲ್ಲಿ ಐದುಬಗೆಯಾದ ಶರೀರಲಕ್ಷಣಗಳನ್ನು ತಿಳಿದುಕೊಂಡುದರಿಂದ ಲಭಿಸುವ ಪ್ರಯೋಜನವೇನೆಂದರೆ—" ಜೀವನಿಗೆ ತನ್ನ ಪುಣ್ಯಾಪುಣ್ಯರೂಪವಾದ

ಕರ್ಮನಿಮಿತ್ತನಾಗಿ ಅವುಗಳ ಫಲವಾದ ಸುಖದುಃಖಗಳನ್ನನುಭವಿಸುವುದಕ್ಕಾಗಿ ಆಗಾಗ ಪಂಚಭೂತಗಳು ಶರೀರಾಕಾರದಿಂದ ಪರಿಣಮಿಸಿ ಬಂದೊದಗುವುವೆಂದೂ, ಆ ಕರ್ಮವು ಮುಗಿದರೆ ಅವುಗಳ ಫಲಾನುಭವವೂ ಮುಗಿದು ಆ ಶರೀರವೂ ಸಹ ತನಗೆ ಕಾರಣಭೂತವಾದ ಪಂಚಭೂತಗಳಲ್ಲಿ ಲಯಿಸುವುದೆಂದೂ, ಈಶ್ವರನಿಗಾದರೆ ಅಂಥ ಪುಣ್ಯಾಪುಣ್ಯರೂಪವಾದ ಕರ್ಮವೂ, ಅದರಿಂದ ಬರುವ ಸುಖದುಃಖಾನುಭವವೂ, ಅದಕ್ಕಾಗಿ ಬಂದೊದಗುವ ಶರೀರವೂ ಇಲ್ಲವಾದರೂ ಉಳಿದ ಸಮಸ್ತದ್ರವ್ಯಗಳಿಗೂ ಸತ್ತೆಯನ್ನು ಉಂಟುಮಾಡುವುದಕ್ಕಾಗಿ ಈಶ್ವರನು ಅವುಗಳಲ್ಲಿ ವ್ಯಾಪಿಸಿ ಅವುಗಳನ್ನು ತನಗೆ ನಿಯಾಮ್ಯಗಳಾಗಿಯೂ ಆಧೇಯಗಳಾಗಿಯೂ ಶೇಷಗಳಾಗಿಯೂ ಮಾಡಿಕೊಂಡು ತನ್ನ ಅಮೋಘವಾದ ನಿತ್ಯಸಂಕಲ್ಪದಿಂದ ತನಗೂ ಅವುಗಳಿಗೂ ಅಪೃಥಕ್ಸಿದ್ಧಿಸಂಬಂಧವು ನಿತ್ಯವಾಗಿರುವಂತೆ ಸ್ಥಿರಪಡಿಸಿ ಈ ರೀತಿಯಾಗಿ ಸಮಸ್ತವನ್ನೂ ತನಗೆ ಶರೀರವಾಗಿ ಮಾಡಿಕೊಂಡಿರುವುದರಿಂದ ಚಿದಚಿದ್ರೂಪವಾದ ಸಮಸ್ತ ಪ್ರಪಂಚವೂ ಈಶ್ವರನಿಗೆ ಯಾವಾಗಲೂ ಯಾವುದೊಂದು ಕಾರಣವನ್ನೂ ಅಪೇಕ್ಷಿಸದೆ ಸ್ವಭಾವದಿಂದಲೇ ಸರ್ವಕಾಲದಲ್ಲಿಯೂ ಶರೀರವಾಗಿಯೇ ಇರುವಕಾರಣ ಅಂಥ ಪ್ರಪಂಚದಲ್ಲಿ ಒಬ್ಬನಾದ ತಾನೂ ಸಹ ಎಂದರೆ ಪ್ರತಿಯೊಬ್ಬ ಜೀವನೂ ತನ್ನ ಶರೀರವನ್ನು ದೃಷ್ಟಾಂತವಾಗಿ ನೋಡಿಕೊಂಡು ಅದರಂತೆ ತಾನೂ ಈಶ್ವರನಿಗೆ ಶರೀರವಾಗಿ ಅತ್ಯಂತಪರತಂತ್ರನಾಗಿಯೂ, ಶೇಷಭೂತನಾಗಿಯೂ ಇರುವೆನೆಂದೂ ತಿಳಿದು ಅಂಥ ಸರ್ವೋತ್ತಮವಾದ ಜ್ಞಾನಯಜ್ಞದ ಪ್ರಭಾವದಿಂದ ಸಕಲವಿಧವಾದ ಕರ್ಮಬಂಧವನ್ನೂ ನಾಶಗೊಳಿಸಿ ಸಾಂಸಾರಿಕಗಳಾದ ಸಮಸ್ತದುಃಖಗಳಿಂದಲೂ ವಿಮುಕ್ತನಾಗಿ ಶಾಶ್ವತಿಕವಾಗಿಯೂ, ಎಲ್ಲೆಯಿಲ್ಲದುದಾಗಿಯೂ ಇರುವ ಬ್ರಹ್ಮಾನಂದಾನುಭವವನ್ನು ಪಡೆದು ಆತ್ಮತತ್ತ್ವವಿರುವವರೆಗೂ ಸುಖವಾಗಿ ಬಾಳುವವನಾಗುವನು.'' ಎಂಬುದೇ ಶರೀರಲಕ್ಷಣಜ್ಞಾನಕ್ಕೆ ಪರಮಪ್ರಯೋಜನವಾಗಿರುವುದು.

**೨೮೨. ಜಗದ್ಬ್ರಹ್ಮಣೋಃ ಶರೀರಶರೀರಿಭಾವಸಂಬಂಧಪರಿಜ್ಞಾನಸ್ಯ ಪರಮನಿಶ್ಶ್ರೇಯಸಸಾಧನತ್ವೇ ದಿಙ್ಮಾತ್ರೇಣ ಪ್ರಮಾಣಪ್ರದರ್ಶನಂ.**

ಅಜ್ಞಾನವಶದಿಂದ ಆಚರಿಸಿದ ಪಾಪಗಳ ನಿವಾರಣೆಗೋಸ್ಕರ ಪ್ರಾಯಶ್ಚಿತ್ತಗಳನ್ನು ಉಪದೇಶಿಸುವುದಾಗಿ ಪ್ರಾರಂಭಿಸಿದ ಆಪಸ್ತಂಬಮಹರ್ಷಿಯು ಸಕಲಪ್ರಾಯಶ್ಚಿತ್ತಗಳೊಳಗೂ ಪ್ರಧಾನವಾದ ಆತ್ಮಪರಮಾತ್ಮಸ್ವರೂಪಜ್ಞಾನವೆಂಬ ಉತ್ತಮೋತ್ತಮ ಪ್ರಾಯಶ್ಚಿತ್ತವನ್ನು ಮೊತ್ತಮೊದಲು ಉಪದೇಶಿಸಬೇಕೆಂದು ಕರುಣಿಸಿ ಸ್ವಪ್ರಣೀತ

ವಾದ ಧರ್ಮಸೂತ್ರದ ಪ್ರಥಮಪ್ರಶ್ನದ ಇಪ್ಪತ್ತೆರಡನೆಯ ಖಂಡದಲ್ಲಿ ಈರೀತಿಯಾಗಿ ಅಪ್ಪಣೆಕೊಡಿಸಿರುತ್ತಾರೆ.

"ಆತ್ಮಲಾಭಾನ್ನ ಪರಂ ವಿದ್ಯತೇ ||
ತತ್ರಾತ್ಮಲಾಭೀಯಾನ್ ಶ್ಲೋಕಾನುದಾಹರಿಷ್ಯಾಮಃ |
ಪೂಃ ಪ್ರಾಣಿನಃ ಸರ್ವ ಏವ ಗುಹಾಶಯಸ್ಯ ಅಹನ್ಯಮಾನಸ್ಯ ವಿಕಲ್ಮಷಸ್ಯ | ಅಚಲಂ ಚಲನಿಕೇತಂ ಯೇಽನುತಿಷ್ಠಂತಿ ತೇಽಮೃತಾಃ" ||

ಇದರ ಅರ್ಥವೇನೆಂದರೆ—(ಆತ್ಮಲಾಭಾನ್ನ ಪರಂ ವಿದ್ಯತೇ) ಪ್ರತಿಯೊಬ್ಬ ಜೀವನಿಗೂ ಸ್ವಸ್ವರೂಪಜ್ಞಾನಪೂರ್ವಕವಾದ ಪರಮಾತ್ಮಜ್ಞಾನದಿಂದ ಪರಮಾತ್ಮ ಪ್ರಾಪ್ತಿಯನ್ನು ಪಡೆವುದಕ್ಕಿಂತಲೂ ಉತ್ಕೃಷ್ಟವಾದ ಮತ್ತೊಂದು ಪುರುಷಾರ್ಥವು ಆವುದೂ ಇಲ್ಲ.

(ತತ್ರ) ಅಂಥ ಆತ್ಮಲಾಭವೆಂಬ ಪರಮಪ್ರಯೋಜನರೂಪವಾದ ಪರಮಪುರುಷಾರ್ಥವು ಅಪೇಕ್ಷಿತವಾಗಲು, (ಆತ್ಮಲಾಭೀಯಾನ್) ಆತ್ಮಪರಮಾತ್ಮಸ್ವರೂಪಗಳನ್ನು ಕರತಲಗತವಾದ ಆಮಲಕದಂತೆ ಸುಲಭಪಡಿಸಿಕೊಡಲು ಸಮರ್ಥಗಳಾಗಿರುವ (ಶ್ಲೋಕಾನ್) ನಾನಾವೇದಶಾಖೆಗಳಿಗೆ ಒಳಪಟ್ಟಿರುವ ಉಪನಿಷತ್ತುಗಳಲ್ಲಿ ಗುಪ್ತವಾಗಿ ಅಡಗಿರುವ ಪದ್ಯಗಳನ್ನು, (ಉದಾಹರಿಷ್ಯಾಮಃ) ಗಣಿಯಲ್ಲಿ ಅಡಗಿರುವ ರತ್ನಗಳನ್ನು ಅಲ್ಲಿಂದ ಉದ್ಧರಿಸಿ ಹೊರಪಡಿಸುವಂತೆ ಅಂಥ ಉಪನಿಷತ್ತುಗಳಿಂದ ಉದ್ಧರಿಸಿ ಹೊರಕ್ಕೆತಂದು ಜೀವರಾಶಿಗಳ ಉಪಕಾರಕ್ಕೋಸ್ಕರ ಇಲ್ಲಿ ಉಪದೇಶಿಸುವೆವು

(ಗುಹಾಶಯಸ್ಯ) ಸರ್ವಪ್ರಾಣಿಗಳ ಸತ್ತಾರೂಪವಾದ ಸ್ಥಿತಿಗಾಗಿಯೂ, ಪ್ರವೃತ್ತಿಗಾಗಿಯೂ, ನಿವೃತ್ತಿಗಾಗಿಯೂ ಅವುಗಳ ಹೃದಯವೆಂಬ ಗುಹಾಪ್ರದೇಶದಲ್ಲಿ ಅಂತರ್ಯಾಮಿರೂಪದಿಂದ ಆತ್ಮನೆನಿಸಿಕೊಂಡು ಸರ್ವಕಾಲದಲ್ಲಿಯೂ ಸನ್ನಿಹಿತನಾಗಿರುವ ಶ್ರೀಮನ್ನಾರಾಯಣನಿಗೆ (ಸರ್ವ ಏವ ಪ್ರಾಣಿನಃ) ತತ್ತಚ್ಛರೀರವಿಶಿಷ್ಟರಾದ ಬದ್ಧ-ಮುಕ್ತ-ನಿತ್ಯರೆಂಬ ಸಕಲಾತ್ಮವರ್ಗಗಳೂ (ಪೂಃ) ಆಧೇಯತ್ವ-ನಿಯಾಮ್ಯತ್ವ-ಶೇಷತ್ವಗಳೆಂಬ ಶರೀರಪದಪ್ರವೃತ್ತಿನಿಮಿತ್ತವುಳ್ಳುವಾದುದರಿಂದ ಮುಖ್ಯವಾದ ಶರೀರವೆನಿಸಿಕೊಂಡಿರುವುವು.

(ಪ್ರಾಣಿನಃ) ಎಂಬ ಬಹುವಚನಕ್ಕೆ ಅನುಸಾರವಾಗಿ ಪೂಶ್ಶಬ್ದದಲ್ಲಿಯೂ (ಪುರಃ) ಎಂದು ಬಹುವಚನವನ್ನು ಪ್ರಯೋಗಿಸಬೇಕಾದುದು ಉಚಿತವಾಗಿದ್ದರೂ ಪ್ರತಿಯೊಂದು ಆತ್ಮವಸ್ತುವೂ ಈಶ್ವರನಿಗೆ ಪ್ರತ್ಯೇಕಪ್ರತ್ಯೇಕವಾಗಿ ಶರೀರವೆನಿಸಿಕೊಳ್ಳು

ವುದೆಂಬ ಅರ್ಥವನ್ನು ಸೂಚಿಸುವುದಕ್ಕಾಗಿ (ಪುಂಃ) ಎಂಬ ಏಕವಚನವು ಪ್ರಯುಕ್ತ ವಾಗಿರುವುದು. ಇದರಿಂದ—ಸ್ಥೂಲಸೂಕ್ಷ್ಮರೂಪವಾದ ಶರೀರಗಳ ಒಳಭಾಗದಲ್ಲಿ ಜೀವನು ಪ್ರವೇಶಿಸದಿದ್ದರೆ ಜೀವನಿಗೆ ಶರೀರಪ್ರತಿಸಂಬಂಧಿತ್ವರೂಪವಾದ ಆತ್ಮತ್ವವೂ-ಶರೀರಕ್ಕೆ ಆತ್ಮಪ್ರತಿಸಂಬಂಧಿತ್ವರೂಪವಾದ ಶರೀರತ್ವವೂ—ಹೇಗೆ ಸಿದ್ಧಿಸಲಾರವೋ, ಹಾಗೆ ಅಚಿದ್ವಸ್ತುವಿನಂತೆ ಪ್ರತಿಯೊಂದು ಆತ್ಮವಸ್ತುವಿನಲ್ಲಿಯೂ ಒಳಭಾಗದಲ್ಲಿ ಈಶ್ವರನು ವ್ಯಾಪಿಸದಿದ್ದರೆ ಈಶ್ವರನಿಗೆ ಆತ್ಮತ್ವವೂ ಜೀವನಿಗೆ ಶರೀರತ್ವವೂ ಸಿದ್ಧಿಸಲಾರ ವಾದಪ್ರಯುಕ್ತ ಅಣುವಿಗಿಂತಲೂ ಅಣುತರನಾಗಬಲ್ಲ ಸರ್ವೇಶ್ವರನು ಜೀವನಲ್ಲಿಯೂ ಒಳಹೊಕ್ಕು ಅಂತರ್ಯಾಮಿಯಾಗಿ ನಿಂತಿರುವನೆಂಬುದು ಆಪಸ್ತಂಬಮಹರ್ಷಿಯ ಆಶಯ ವೆಂಬು ವ್ಯಕ್ತವಾಗುವುದು. ಹಾಗಾದರೆ ಆಗ ಪರಮಾತ್ಮನನ್ನು (ಆತ್ಮಶಯಸ್ಯ) ಎಂದಲ್ಲವೆ ಹೇಳಬೇಕು? (ಗುಹಾಶಯಸ್ಯ)ಎಂದು ಹೇಗೆ ಹೇಳಲಾದೀತು? ನಿರವಯವ ನಾದ ಜೀವನಿಗೆ ಹೃದಯಗುಹೆಯೆಂಬುದೊಂದು ಅವಯವವಿಲ್ಲವಾಗಿ ಇದು ಶರೀರದ ಒಂದು ಭಾಗವಿಶೇಷವಾಗಿರುವುದಷ್ಟೆ? ಹವುದು—ಆದರೂ ಪರಮಾತ್ಮನಿಂದ ಒಳ ಭಾಗದಲ್ಲಿ ವ್ಯಾಪಿಸಲ್ಪಟ್ಟ ಜೀವಾತ್ಮನು ಹೃದಯಗುಹೆಯ ಒಳಭಾಗದಲ್ಲಿ ವ್ಯಾಪಿಸಿರು ವುದರಿಂದ ಪರಮಾತ್ಮನನ್ನು ಗುಹಾಶಯನೆಂದು ಹೇಳಲು ತಡೆಯಿಲ್ಲ. ವನದಲ್ಲಿರುವ ಪರ್ವತದ ಗುಹಾಮಧ್ಯದಲ್ಲಿ ವಾಸಮಾಡುತ್ತಿರುವ ಸಿಂಹವನ್ನು (ವನವಾಸಿ) ಎಂದು ಹೇಳುವುದು ಸರ್ವಲೋಕಪ್ರಸಿದ್ಧವಷ್ಟೆ.

ಇಂಥ ಗುಹಾಶಯನಿಗೆ ಎರಡು ವಿಶೇಷಣಗಳು ಹೇಳಲ್ಪಡುವುವು— ಅವುಗಳಲ್ಲಿ ಒಂದನೆಯದು-(ಅಹನ್ಯಮಾನಸ್ಯ) ಹೃದಯಗುಹಾವಿಶಿಷ್ಟವಾದ ಶರೀರವು ಛೇದನ-ಭೇದನ-ದಾಹನ-ಕ್ಲೇದನ-ಶೋಷಣ-ಮುಂತಾದ ಅನರ್ಥಗಳಿಂದ ನಾಶಗೊಳಿಸಲ್ಪಡು ವುದಾಗಿದ್ದರೂ ಗುಹಾಶಯನಾದ ಇವನು ಅಂಥ ವ್ಯಾಪಾರಗಳಾವುದರಿಂದಲೂ ನಾಶ ಗೊಳಿಸಲ್ಪಡತಕ್ಕವನಲ್ಲ; ನಿತ್ಯನಾಗಿರುವನು. ಇಂಥ ನಾರಾಯಣನಿಗೆ.

ಇದಕ್ಕೆ ಕಾರಣವೇನೆಂಬುದನ್ನು ತೋರಿಸುವುದಕ್ಕಾಗಿ ಎರಡನೆಯ ವಿಶೇಷಣವು-(ವಿಕಲ್ಮಷಸ್ಯ) ಕಲ್ಮಷರಹಿತನಾದಂಥ. ಕಲ್ಮಷವೆಂದರೆ ದೋಷ. ಜಡತ್ವ-ಪರಿಣಾ ಮಿತ್ವ-ಜ್ಞಾನಶೂನ್ಯತ್ವ-ವೊದಲಾದ ಪ್ರಕೃತಿಗತದೋಷವಾಗಲಿ, ಪುಣ್ಯಪಾಪರೂಪ ಕರ್ಮವಶ್ಯತ್ವ-ಅಜ್ಞತ್ವ-ಸುಖಿತ್ವ - ದುಃಖಿತ್ವ - ವೊದಲಾದ ಜೀವಗತದೋಷವಾಗಲಿ ಈಶ್ವರನನ್ನು ಆವರಿಸಲಾರವು. ಹೇಗಾದರೆ ಜೀವನಿಗೆ ಅಪೃಥಕ್ಸಿದ್ಧವಿಶೇಷಣವಾಗಿ ರುವ ಸ್ಥೂಲಶರೀರದಲ್ಲಿರುವ ಬಾಲತ್ವ- ಯುವತ್ವ- ವೃದ್ಧತ್ವ- ಜನ್ಮ- ಜರೆ-ವ್ಯಾಧಿ-ಮರಣ-ಮುಂತಾದ ದೋಷಗಳು ವಿಶೇಷ್ಯಾಂಶವಾದ ಜೀವಸ್ವರೂಪವನ್ನು ಸ್ಪರ್ಶಿಸದೆ

ಶರೀರವೆಂಬ ವಿಶೇಷಣಮಾತ್ರದಲ್ಲಿಯೇ ನಿಲ್ಲುವುವೋ—ಅದರಂತೆ ಗುಹಾಶಯನಾದ ಈಶ್ವರನಿಗೆ ಜೀವತತ್ತ್ವಪ್ರಕೃತಿತತ್ತ್ವಗಳೆರಡೂ ಅಪೃಥಕ್ಸಿದ್ಧವಿಶೇಷಣಗಳಾಗಿ ಶರೀರಗಳೆನಿಸಿಕೊಂಡಿರುವುದರಿಂದ ಈ ಎರಡರಲ್ಲಿಯೂ ಇರುವ ಯಾವವಿಧವಾದ ದೋಷಗಳೂ ಆ ಆ ವಿಶೇಷಣಗಳಲ್ಲಿಯೇ ವ್ಯವಸ್ಥಿತಗಳಾಗಿರುವುವಲ್ಲದೆ ವಿಶೇಷ್ಯಾಂಶವಾದ ಈಶ್ವರ ಸ್ವರೂಪವನ್ನು ಸ್ಪರ್ಶಿಸಲಾರವು. ಆದುದರಿಂದ ಪ್ರಕೃತಿಯ ಪರಿಣಾಮವಿಶೇಷವಾದ ಶರೀರಕ್ಕೆ ಛೇದನ ಭೇದನ ಮುಂತಾದ ಉಪಹತಿಯುಂಟಾದರೂ ಈಶ್ವರಸ್ವರೂಪಕ್ಕೆ ಅಂಥ ಉಪಹತಿಯುಂಟಾಗಲು ಕಾರಣವು ಲೇಶಮಾತ್ರವೂ ಇಲ್ಲವಾದುದರಿಂದ ಗುಹಾಶಯನನ್ನು (ಅಹನ್ಯಮಾನಸ್ಯ) ಎಂದು ಹೇಳಲು ತಡೆಯಿಲ್ಲ.

ಹೀಗೆ ಈ ಶ್ಲೋಕದ ಪೂರ್ವಾರ್ಧದಲ್ಲಿ—(ಅಹನ್ಯಮಾನಸ್ಯ ವಿಕಲ್ಮಷಸ್ಯ) ಎಂಬ ಎರಡು ವಿಶೇಷಣಗಳಿಂದ— ಕಾರ್ಯಕಾರಣರೂಪವಾದ ಯಾವ ಹೇಯಗುಣಗಳೂ ಈಶ್ವರನಲ್ಲಿ ಇಲ್ಲವೆಂದು ಹೇಳಿದುದರಿಂದ ಹೇಯಪ್ರತ್ಯನೀಕತ್ವವೂ, (ಗುಹಾಶಯಸ್ಯ) ಎಂಬ ವಿಶೇಷ್ಯದಿಂದ ಸರ್ವಾಂತರ್ಯಾಮಿತ್ವವನ್ನು ತೋರಿಸುವುದರಮೂಲಕ-ಅಂತರ್ಯಾಮಿತ್ವಕ್ಕೆ ಹೇತುಭೂತಗಳಾಗಿರುವ ವಾತ್ಸಲ್ಯ-ಸ್ವಾಮಿತ್ವ-ಸೌಶೀಲ್ಯ-ಸೌಲಭ್ಯ ಮುಂತಾದ ಕಲ್ಯಾಣಗುಣಗಳನ್ನು ಸೂಚಿಸಿದುದರಿಂದ ಕಲ್ಯಾಣಗುಣಾಕರತ್ವವೂ, ಆದುದರಿಂದಲೇ ಇಂಥ ಅಂತರ್ಯಾಮಿಯನ್ನು ಕುರಿತು ಸಮಸ್ತಪ್ರಾಣಿವರ್ಗಕ್ಕೂ ಸ್ವಾಭಾವಿಕವಾದ ಶರೀರತ್ವವೂ ಉಂಟೆಂದು ಹೇಳಿದುದರಿಂದ—ಚೇತನಾಚೇತನರೂಪವಾದ ಸಮಸ್ತಪ್ರಪಂಚಕ್ಕೂ ಈಶ್ವರಶರೀರತ್ವವೇ ಸ್ವರೂಪಯಾಥಾತ್ಮ್ಯವೆಂದೂ, ಈಶ್ವರನಿಗೆ ಸರ್ವಾಂತರ್ಯಾಮಿತ್ವವೇ ಸ್ವರೂಪಯಾಥಾತ್ಮ್ಯವೆಂದೂ ಉಕ್ತವಾಯಿತು. ಇನ್ನು ಇಂಥ ಸಂಬಂಧಜ್ಞಾನವನ್ನು ಸಂಪಾದಿಸಿ ಸರ್ವಕಾಲದಲ್ಲಿಯೂ ಈಶ್ವರಪಾರತಂತ್ರ್ಯವನ್ನು ಅನುಸಂಧಿಸುವಿಕೆಯೇ ಜೀವನಿಗೆ ಅಪೇಕ್ಷಿತವಾದ ಮೋಕ್ಷವನ್ನು ಪಡೆವುದಕ್ಕೆ ಸಾಧನವಾಗಿರುವುದೆಂಬ ಅಂಶವನ್ನು ಈ ಶ್ಲೋಕದ ಉತ್ತರಾರ್ಧದಿಂದ ಉಪದೇಶಿಸುತ್ತಾರೆ.

(ಅಚಲಂ) ಹೀಗೆ ಸರ್ವಪ್ರಾಣಿಸಂಬಂಧಿತ್ವವನ್ನು ತೋರಿಸಿದುದರಿಂದಲೇ ಆಕಾಶದಂತೆ ಸರ್ವಗತತ್ವವು ಈಶ್ವರನಿಗೆ ಸಿದ್ಧವಾದಪ್ರಯುಕ್ತ ಅತ್ತಿತ್ತ ಚಲಿಸುವುದಕ್ಕೆ ಅವಕಾಶವಿಲ್ಲದಂತೆ ಸರ್ವತ್ರ ಪರಿಪೂರ್ಣನಾಗಿ ಅಚಲನೆನಿಸಿಕೊಂಡಿರುವ, ಮತ್ತು—

(ಚಲನಿಕೇತಂ) ವ್ಯಾಪಕನಾದ ಅವನಂತೆ ಅಪರಿಚ್ಛಿನ್ನವಲ್ಲದೆ ಪರಿಚ್ಛಿನ್ನವಾಗಿರುವ ವ್ಯಾಪ್ಯವಾದ ಚೇತನಾಚೇತನರೂಪಪ್ರಪಂಚವನ್ನೇ ವಾಸಸ್ಥಾನವಾಗಿ ಮಾಡಿಕೊಂಡು ಸ್ಥಿರನಾಗಿರುವ ಅಂಥ ಸರ್ವೇಶ್ವರನನ್ನು ಕುರಿತು,

(ಯೇ) ಸಂಸಾರಬಂಧನದಿಂದ ಬಿಡುಗಡೆಯನ್ನೂ ಭಗವಚ್ಚರಣಾರವಿಂದ ಪ್ರಾಪ್ತಿಯೆಂಬ ಮೋಕ್ಷಸಾಮ್ರಾಜ್ಯವನ್ನೂ ಪಡೆಯಲಪೇಕ್ಷೆಯುಳ್ಳ ಯಾವ ಭಾಗ್ಯ ಶಾಲಿಗಳು,

(ಅನು) "ಅನುರ್ಲಕ್ಷಣೇ-ಹೀನೇ" ಎಂಬ ವ್ಯಾಕರಣಸೂತ್ರವನ್ನನುಸರಿಸಿ "ಕೃಷ್ಣಮನು ಸುರಾಃ" ಎಂದರೆ ದೇವತೆಗಳು ಕೃಷ್ಣನನ್ನು ಕುರಿತು ಅಪಕೃಷ್ಟರಾ ದವರು (ಶೇಷಭೂತರಾದವರು) ಎಂಬಂತೆ ಪೂರ್ವೋಕ್ತಸಂಬಂಧಜ್ಞಾನದಿಂದ ಸರ್ವಥಾ ಪಾರತಂತ್ರ್ಯವನ್ನು ಅನುಸಂಧಿಸುತ್ತಲೇ,

(ತಿಷ್ಠಂತಿ) ಇರುತ್ತಾರೆಯೋ, ಎಂದರೆ ಅವನು ನನಗೆ ಆತ್ಮನೆಂದೂ – ನಾನು ಆವನಿಗೆ ಶರೀರವೆಂದೂ ತಿಳಿದು ಇಂಥ ಪಾರತಂತ್ರ್ಯಾನುಸಂಧಾನಕ್ಕೆ ವಿಚ್ಛೇದವಿಲ್ಲ ದಂತೆ ತಮ್ಮ ಕಾಲವನ್ನು ಕಳೆಯುತ್ತಿರುವರೋ,

(ತೇ) "ವಾಸುದೇವಃ ಸರ್ವಮಿತಿ ಸ ಮಹಾತ್ಮಾ ಸುದುರ್ಲಭಃ" ಎಂಬಂತೆ ವಾಸುದೇವನಿಂದಲೂ ಶ್ಲಾಘಿಸಲ್ಪಡುವ ಅಂಥ ಮಹಾನುಭಾವರಾದ ಚೇತನರು,

(ಅಮೃತಾಃ) ಜನ್ಮ-ಜರೆ-ವ್ಯಾಧಿ-ಮರಣ-ಮುಂತಾದ ಯಾವ ಹೇಯಧರ್ಮ ಗಳೂ ಇಲ್ಲದವರಾಗಿ ಮುಕ್ತರಾಗಿ ಬಾಳುವರು. ಇಂಥ ಪರಮಪ್ರಯೋಜನಕ್ಕೆ ಶರೀರಶರೀರಿಭಾವಸಂಬಂಧಜ್ಞಾನವೇ ಸಾಧನವಾದುದರಿಂದಲೂ, ಶರೀರಪದಾರ್ಥ ವನ್ನು ಇಂಥದೆಂದು ತಿಳಿದುಕೊಳ್ಳದಿದ್ದರೆ ಆ ಸಂಬಂಧಜ್ಞಾನವು ಸಂಭವಿಸುವುದಿಲ್ಲ ವಾದುದರಿಂದಲೂ, ಶರೀರಪದಾರ್ಥದ ಸ್ವರೂಪಪರಿಜ್ಞಾನಕ್ಕಾಗಿಯೇ ಇಲ್ಲಿ ವಿಶದ ವಾಗಿ ಶರೀರಲಕ್ಷಣಗಳನ್ನು ನಿರೂಪಿಸಿ ತೋರಿಸಿದೆವು. ಇನ್ನು ಮುಂದೆ ಇದರ ಅಂತರಾಳಿಕವಿಭಾಗಗಳನ್ನು ತೋರಿಸುವೆವು.

### ೨೮೩. ಉಕ್ತಲಕ್ಷಣಸ್ಯ ಶರೀರಸ್ಯ ನಿತ್ಯಾನಿತ್ಯಭೇದೇನ ದ್ವೈವಿಧ್ಯಂ.

ಇಂಥ ಶರೀರವು ನಿತ್ಯವೆಂದೂ ಅನಿತ್ಯವೆಂದೂ ಸಾಮಾನ್ಯತಃ ಎರಡುಬಗೆಯಾ ಗಿರುವುದು. ಇದರಲ್ಲಿ ತ್ರಿಗುಣದ್ರವ್ಯವೆಂಬ ಪ್ರಕೃತಿಯೂ, ಅದರ ಪರಿಣಾಮಗಳೂ, ಕಾಲವೂ, ಜೀವನೂ, ಪರವಾಸುದೇವನ ಶುಭಾಶ್ರಯವೆನಿಸಿಕೊಂಡಿರುವ ದಿವ್ಯಮಂಗಳ ವಿಗ್ರಹವೂ, ನಿತ್ಯಸೂರಿಗಳಿಗಿರುವ ಸ್ವಾಭಾವಿಕವಾದ ಗರುಡ, ಆದಿಶೇಷ ಮುಂತಾದ ಶರೀರವೂ ನಿತ್ಯಶರೀರವೆನಿಸಿಕೊಳ್ಳುವುವು.

### ೨೮೪. ಅನಿತ್ಯಶರೀರಸ್ಯಾಪಿ ಇಚ್ಛಾಕೃತಕರ್ಮಕೃತಭೇದೇನ ದ್ವೈವಿಧ್ಯಂ.

ಅನಿತ್ಯಶರೀರವು ಇಚ್ಛಾಕೃತವೆಂದೂ ಕರ್ಮಕೃತವೆಂದೂ ಎರಡುಬಗೆಯಾಗು ವುದು. ಇವುಗಳಲ್ಲಿ ಮಹತ್ತತ್ತ್ವವೊದಲು ಪೃಥಿವೀತತ್ತ್ವದವರೆಗೂ ಇರುವ

ಇಪ್ಪತ್ತು ಮೂರ.ತತ್ತ್ವಗಳೂ, ಪರವಾಸುದೇವನನ್ನು ಬಿಟ್ಟು ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಎಂಬ ನಾಲ್ಕು ವ್ಯೂಹಮೂರ್ತಿಗಳೂ, ಈ ನಾಲ್ವರಲ್ಲಿ ಒಬ್ಬೊಬ್ಬ ರಿಂದ ಮೂವರು ಮೂವರಂತೆ ಆವಿರ್ಭವಿಸಿರುವ ಕೇಶವಾದಿದ್ವಾದಶಮೂರ್ತಿಗಳೆಂಬ ವ್ಯೂಹಾಂತರಮೂರ್ತಿಗಳೂ, ಅಸಂಖ್ಯಾತಗಳಾದ ರಾಮಕೃಷ್ಣಾದ್ಯವತಾರಮೂರ್ತಿ ಗಳೂ, ಇವುಗಳೆಲ್ಲವೂ ಈಶ್ವರನಿಗೆ ಇಚ್ಛಾಕೃತವಾದ ಅನಿತ್ಯಶರೀರಗಳಾಗಿರುವುವು ಹಾಗೆಯೇ ನಿತ್ಯಸೂರಿಗಳೂ ಮುಕ್ತರುಗಳೂ ಆಗಾಗ ತಮ್ಮ ಇಷ್ಟೆಯಿಂದ ಪರಿಗ್ರಹಿ ಸುವ ಅನೇಕ ಶರೀರಗಳು ಅವರಿಗೆ ಇಚ್ಛಾಕೃತವಾದ ಅನಿತ್ಯಶರೀರಗಳಾಗಿರುವುವು.

## ೨೮೫. ಕರ್ಮಕೃತಸ್ಯಾಪಿ ಸಂಕಲ್ಪವಿಶಿಷ್ಟಕರ್ಮಕೃತಕೇವಲಕರ್ಮ ಕೃತಭೇದೇನ ದ್ವೈವಿಧ್ಯಂ

ಕರ್ಮಕೃತವಾದ ಅನಿತ್ಯಶರೀರವು-ತನ್ನ ಸಂಕಲ್ಪದೊಡನೆ ಕೂಡಿದ ಕರ್ಮದಿಂದ ಕೃತವಾದುದೆಂದೂ, ಕೇವಲಕರ್ಮಕೃತವಾದುದೆಂದೂ ಎರಡು ಬಗೆಯಾಗುವುದು. ಇವುಗಳಲ್ಲಿ ಮೊದಲನೆಯದು ಸೌಭರಿ ಮುಂತಾದ ಮಹರ್ಷಿಗಳಿಗೆ ಸಂಭವಿಸಿದ್ದ ಶರೀರವು. ಸೌಭರಿಮಹರ್ಷಿ ತಮ್ಮ ತಪೋಬಲದಿಂದ ಉಂಟಾದ ಅದೃಷ್ಟವಿಶೇಷ ದೊಡನೆ ಕೂಡಿದ ತಮ್ಮ ಸಂಕಲ್ಪದಿಂದ ಮಾಂಧಾತೃಚಕ್ರವರ್ತಿಯ ಐವತ್ತು ಮಂದಿ ಕನ್ಯೆಯರನ್ನೂ ವಿವಾಹಮಾಡಿಕೊಂಡು ಅವರೊಡನೆ ಐಹಿಕಭೋಗಗಳನ್ನನುಭವಿಸು ವುದಕ್ಕಾಗಿ ಏಕಕಾಲದಲ್ಲಿ ಐವತ್ತು ಅನಿತ್ಯಶರೀರಗಳನ್ನು ಪರಿಗ್ರಹಿಸಿದರಷ್ಟೆ.

ಕೇವಲ ಕರ್ಮಕೃತವಾದ ಅನಿತ್ಯಶರೀರವು-ಕರ್ಮಚಕ್ರಕ್ಕೆ ಅಧೀನರಾಗಿ ಅದರ ವೇಗದಿಂದ ತಿರುಗಿಸಲ್ಪಟ್ಟೂ, ಈ ಸಂಸಾರಮಂಡಲದಲ್ಲಿ ಒಂದು ಸ್ಥಾನದಿಂದ ಮತ್ತೊಂದು ಸ್ಥಾನಕ್ಕೆ ಒಯ್ಯಲ್ಪಟ್ಟೂ ತಿರುಗಿ ತಿರುಗಿ ಅಲೆದಾಡುತ್ತಿರುವ ಅಸ್ಮದಾದಿ ಗಳಿಗೆ ಕರ್ಮಾಧೀನವಾಗಿ ಅಲ್ಲಲ್ಲಿ ಅವರ್ಜನೀಯವಾಗಿ ಬಂದೊದಗುತ್ತಿರುವ ಶರೀರ ವಾಗಿರುವುದು.

## ೨೮೬. ಪುನರಪಿ ಜಂಗಮಾಜಂಗಮಭೇದೇನ ಶರೀರಸ್ಯ ದ್ವೈವಿಧ್ಯಂ.

ಪುನಃ ಈ ಶರೀರವು ಮತ್ತೊಂದುರೀತಿಯಲ್ಲಿ ಸಾಮಾನ್ಯವಾಗಿ ಜಂಗಮವೆಂದೂ ಅಜಂಗಮವೆಂದೂ ಎರಡುಬಗೆಯಾಗಿ ವಿಂಗಡಿಸಲ್ಪಡುವುದು. ಸಂಚರಣಕ್ರಿಯೆಯುಳ್ಳ ಶರೀರಗಳನ್ನು ಜಂಗಮಗಳಾಗಿಯೂ, ಸಂಚಾರರಹಿತವಾದ ಶರೀರಗಳನ್ನು ಅಜಂಗಮ ಗಳಾಗಿಯೂ ತಿಳಿಯಬಹುದು

೨೮೭. ಜಂಗಮಾಜಂಗಮ ಭೇದೇನ ಶರೀರಸ್ಯ ದ್ವೈವಿಧ್ಯಕಥನಾನುಪಪತ್ತಿಶಂಕಾ.

ಹೀಗಾದರೆ—ಶಿಲೆ, ಕಾಷ್ಠ, ಘಟ, ಪಟ ಮುಂತಾದ ಜಡಪದಾರ್ಥಗಳಿಗೆ ಅಜಂಗಮಶರೀರಗಳ ಗುಂಪಿನಲ್ಲಿ ಅಂತರ್ಭಾವವೋ? ಅಥವಾ ಜಂಗಮಗಳ ಗುಂಪಿನಲ್ಲಿಯೋ? ಶಾಸ್ತ್ರವಿರೋಧವುಂಟಾಗುವುದರಿಂದ ಪ್ರಥಮಪಕ್ಷವನ್ನು ಅಂಗೀಕರಿಸಲಾಗುವುದಿಲ್ಲ. ಹೇಗೆಂದರೆ-ವಿಷ್ಣುಪುರಾಣದಲ್ಲಿ ಅಜಂಗಮಗಳನ್ನು "ವೃಕ್ಷ, ಗುಲ್ಮ, ಲತೆ, ವೀರುತ್, ತೃಣ" ಎಂದು ಐದುವಿಧವಾಗಿ ವಿಂಗಡಿಸಿ ಈ ಐದಕ್ಕೂ ಕ್ರಮವಾಗಿ "ತಮಸ್ಸು, ಮೋಹ, ಮಹಾಮೋಹ, ತಾಮಿಸ್ರ, ಅಂಧತಾಮಿಸ್ರ," ಎಂಬ ಐದು ಸಂಜ್ಞೆಗಳನ್ನಿಟ್ಟು ಪೂರ್ವಪೂರ್ವಕ್ಕಿಂತಲೂ ಉತ್ತರೋತ್ತರ ಹೇಳಿದುದು ಅತ್ಯಂತ ನಿಹೀನವಾದ ಜನ್ಮವಾಗಿರುವುದೆಂದು ನಿಷ್ಕರ್ಷಿಸಲ್ಪಟ್ಟಿರುವುದರಿಂದ ಈಗುಂಪಿನಲ್ಲಿ ಶಿಲಾಕಾಷ್ಠಾದಿಗಳು ಸೇರಲಿಲ್ಲವಾಗಿ ಇವುಗಳನ್ನು ಅಜಂಗಮಶರೀರಗಳೆಂದು ಹೇಳುವುದು ಶಬ್ದಪ್ರಮಾಣಕ್ಕೆ ವಿರುದ್ಧವಾಗಿರುವುದು. ಇತರಸಹಾಯದಿಂದ ಇವುಗಳು ಸ್ಥಳಾಂತರಕ್ಕೆ ಸಂಚಾರವನ್ನು ಪಡೆಯಬಹುದಾದುದರಿಂದ ಇವುಗಳನ್ನು ಅಜಂಗಮಕೋಟಿಯಲ್ಲಿ ಸೇರಿಸುವುದು ಸಂಗತವಾಗಿಯೂ ಇಲ್ಲ. ಹಾಗಾದರೆ ಜಂಗಮಗಳ ಗುಂಪಿನಲ್ಲಿ ಸೇರಬಹುದೆಂಬ ದ್ವಿತೀಯಪಕ್ಷವನ್ನು ಅಂಗೀಕರಿಸಲು ತಡೆಯೇನು? ಸುಪ್ರಸಿದ್ಧವಾಗಿ ಜಂಗಮವೆನಿಸಿಕೊಂಡಿರುವ ದೇವಮನುಷ್ಯಾದಿಗಳ ಗುಂಪಿನಲ್ಲಿ ಶಿಲಾಕಾಷ್ಠಾದಿಗಳು ಸೇರದಿರುವಿಕೆಯೇ ತಡೆಯಾಗಿರುವುದು. ಮತ್ತು ಇತರಸಹಾಯವಿಲ್ಲದೆ ಸ್ವಾಭಾವಿಕವಾದ ಗಮನಶಕ್ತಿ ಇವುಗಳಿಗಿಲ್ಲವಾದುದರಿಂದ ಶಿಲಾಕಾಷ್ಠಾದಿಗಳನ್ನು ಜಂಗಮಕೋಟಿಯಲ್ಲಿ ಸೇರಿಸುವುದೂ ಸಂಗತವಾಗಿಲ್ಲ. ಸ್ವಾಭಾವಿಕವಾದ ಗಮನಶಕ್ತಿಯಿಲ್ಲದ ಇವುಗಳಿಗೆ ಇತರಸಹಾಯದಿಂದ ಉಂಟಾಗುವ ಗಮನಮಾತ್ರದಿಂದ ಜಂಗಮಕೋಟಿಯಲ್ಲಿ ಅಂತರ್ಭಾವವನ್ನು ಹೇಳುವುದಾದರೆ ಅನೇಕಮನುಷ್ಯರ ಸಹಾಯದಿಂದ ಒಂದು ದೊಡ್ಡ ವೃಕ್ಷಕ್ಕೂ ಮತ್ತೊಂದು ಕಡೆಗೆ ಗಮನವು ಸಂಭವಿಸಬಹುದಾದುದರಿಂದ ಅಂಥ ವೃಕ್ಷವನ್ನೂ ಜಂಗಮಕೋಟಿಯಲ್ಲಿ ಸೇರಿಸಬೇಕಾಗಿ ಬರುವುದು. ಅದು ಹಿಂದೆ ಹೇಳಿದ ಶಾಸ್ತ್ರಕ್ಕೆ ವಿರುದ್ಧವಾಗುವುದು. ಆದಕಾರಣ ಜಂಗಮಕೋಟಿಯಲ್ಲಿ ಸೇರಬೇಕಾದರೆ ಸ್ವಾಭಾವಿಕವಾದ ಗಮನಶಕ್ತಿಯೇ ಇರಬೇಕು. ಶಿಲಾಕಾಷ್ಠಾದಿಗಳಿಗೆ ಅದು ಇಲ್ಲವಾದುದರಿಂದ ಇವು ಜಂಗಮಕೋಟಿಯಲ್ಲಿಯೂ ಸೇರಲಾರವು. ಮತ್ತು ಶಿಲಾಕಾಷ್ಠಾದಿಗಳಿಗೆ ಮೊದಲು ಶರೀರತ್ವವು ಸಿದ್ಧವಾದರಲ್ಲವೆ ಇವು ಯಾವ ಗುಂಪಿನಲ್ಲಿ ಸೇರಿದುವೆಂದು ವಿಚಾರಮಾಡಬಹುದು; ಇವುಗಳಲ್ಲಿ ಜೀವನಿರುವನೆಂಬುದ

ರಲ್ಲಿಯೇ ಪ್ರಮಾಣವಿಲ್ಲವಾದುದರಿಂದ ಇವುಗಳಿಗೆ ಶರೀರತ್ವವೇ ಸಿದ್ಧವಾಗಿಲ್ಲ. ಆದ ಕಾರಣ ಜಂಗಮವೆಂದೂ ಅಜಂಗಮವೆಂದೂ ಎರಡು ವಿಧವಾಗಿ ಶರೀರವನ್ನು ವಿಂಗಡಿಸಿ ದುದೇ ಸಂಗತವಾಗಿ ಕಾಣುವುದಿಲ್ಲ.

## ೨೮೮ ತತ್ಪರಿಹಾರನಿರೂಪಣಂ.

ಇಂಥ ಆಕ್ಷೇಪಕ್ಕೆ ಸಮಾಧಾನವನ್ನು ಈ ಮುಂದೆ ಹೇಳುವ ರೀತಿಯಲ್ಲಿ ತಿಳಿಯ ಬೇಕು—ಸ್ವಾಭಾವಿಕವಾದ ಗಮನಶಕ್ತಿ ಇವುಗಳಿಗಿಲ್ಲವಾದುದರಿಂದ ಇವು ಜಂಗಮ ಕೋಟಿಯಲ್ಲಿ ಸೇರಲಾರವೆಂದು ಹೇಳಿದ ಉಕ್ತಿ ನಮಗೂ ಇಷ್ಟವಾಗಿರುವುದು; ಇವುಗಳನ್ನು ನಾವು ಜಂಗಮಕೋಟಿಯಲ್ಲಿ ಸೇರಿಸಿಯೂ ಇಲ್ಲ, ಆದರೆ ಅಜಂಗಮ ಕೋಟಿಯಲ್ಲಿ ಇವುಗಳಿಗೆ ಅಂತರ್ಭಾವವನ್ನು ತಪ್ಪಿಸಲು ಯಾರಿಗೂ ಶಕ್ಯವಲ್ಲ. ವಿಷ್ಣು ಪುರಾಣದಲ್ಲಿ ಪರಿಗಣಿಸಲ್ಪಟ್ಟಿರುವ "ವೃಕ್ಷ-ಗುಲ್ಮ-ಲತೆ-ವೀರುತ್-ತೃಣ" ಇವು ಗಳಲ್ಲಿ ಶಿಲಾಕಾಷ್ಠಾದಿಗಳು ಸೇರಲಿಲ್ಲವಾದುದರಿಂದ ಅಜಂಗಮಕೋಟಿಯಲ್ಲಿ ಅಂತ ರ್ಭಾವವನ್ನು ಹೇಗೆ ಹೇಳಬಹುದೆಂದು ಚಿಂತಿಸಬಾರದು; ಇವುಗಳಲ್ಲಿ ತಾಮಿಸ್ರವೆಂಬ ಸಂಜ್ಞೆಯನ್ನು ಪಡೆದಿರುವ ನಾಲ್ಕನೆಯದಾದ "ವೀರುತ್" ಎಂಬುದರ ಒಳಭೇದಗಳಲ್ಲಿ ಶಿಲಾಕಾಷ್ಠಾದಿಗಳು ಸೇರುವುವಾದುದರಿಂದ ಇವುಗಳಿಗೆ ಅಜಂಗಮಕೋಟಿಯಲ್ಲಿ ಅಂತರ್ಭಾವವನ್ನು ಹೇಳುವೆವಾದರೆ ಯಾವ ವಿರೋಧವೂ ಇರುವುದಿಲ್ಲ.

## ೨೮೯ ಉಕ್ತಾರ್ಥೇ ಭಾಷ್ಯಕಾರಸಂಮತಿಃ.

ಆದುದರಿಂದಲೇ ವೇದಾರ್ಥಸಂಗ್ರಹವೆಂಬ ಗ್ರಂಥದಲ್ಲಿ ಶ್ರೀಭಾಷ್ಯಕಾರರು "ದೇವ-ಮನುಷ್ಯ-ಯಕ್ಷ-ರಾಕ್ಷಸ--ಪಕ್ಷಿ-ವೃಕ್ಷ-ಲತೆ-ಕಾಷ್ಠ-ಶಿಲೆ-ತೃಣ-ಘಟ--ಪಟ" ಇವೇ ಮೊದಲಾದ ಸಮಸ್ತಶಬ್ದಗಳೂ ಪ್ರತ್ಯಕ್ಷಗೋಚರವಾದ ಆ ಆ ಆಕಾರ ದೊಡನೆ ಕೂಡಿರುವ ಆ ಆ ಜಡಪದಾರ್ಥಗಳನ್ನು ಬೋಧಿಸುವುದರ ಮೂಲಕ ಅಷ್ಟು ಮಾತ್ರದಲ್ಲಿ ವಿಶ್ರಾಂತಿಯನ್ನು ಹೊಂದದೆ ಆ ಆ ವಸ್ತುಗಳನ್ನು ಕರ್ಮವಶದಿಂದ ತನಗೆ ಶರೀರವಾಗಿ ಪರಿಗ್ರಹಿಸಿ ಅವುಗಳನ್ನು ಅಭಿಮಾನಿಸುತ್ತ ಅವುಗಳೊಳಗೆ ಪ್ರವೇಶಿಸಿರುವ ಜೀವಾತ್ಮನನ್ನೂ, ಅಂಥ ಜೀವಾತ್ಮನಿಗೂ ಅಂತರ್ಯಾಮಿಯಾಗಿ ಒಳಗೆ ಗೂಢನಾಗಿ ರುವ ಪರಮಾತ್ಮನನ್ನೂ ಬೋಧಿಸುವುದಕ್ಕೆ ಹೊರಟು, ಮೇಲೆ ಕಾಣುವ ಅಚಿದ್ವಸ್ತು ವನ್ನು ಜೀವನಿಗೆ ವಿಶೇಷಣವಾಗಿಯೂ, ಈ ಅಚಿದ್ವಸ್ತು-ಜೀವ-ಈ ಎರಡನ್ನೂ ಪರಮಾತ್ಮನಿಗೆ ವಿಶೇಷಣಗಳಾಗಿಯೂ, ಪರಮಾತ್ಮನನ್ನೇ ಮುಖ್ಯವಿಶೇಷ್ಯವಾಗಿಯೂ ಬೋಧಿಸಿ, ಅಂಥ ಪರಮಾತ್ಮನೇ ಮುಖ್ಯವಿಶೇಷ್ಯವಾಗಿ ಸಮಸ್ತಪದಾರ್ಥಗಳಲ್ಲಿಯೂ

ವ್ಯಾಪಕನಾಗಿರುವುದರಿಂದ ಸಮಸ್ತಪದಾರ್ಥಗಳನ್ನೂ ಬೋಧಿಸುವ ಸಮಸ್ತಶಬ್ದಗಳೂ ಪರಮಾತ್ಮಪರ್ಯಂತವಾದ ಅರ್ಥವನ್ನು ಬೋಧಿಸಿದರಲ್ಲದೆ ವಿಶ್ರಾಂತಿಯನ್ನು ಪಡೆಯಲಾರವೆಂದು ಸ್ಪಷ್ಟವಾಗಿ ಅಪ್ಪಣೆ ಕೊಡಿಸಿರುವರು.

ಇದರಿಂದ—"ಶಿಲಾಕಾಷ್ಠಾದಿಗಳಲ್ಲಿ ಜೀವನೇ ಇಲ್ಲವಾದುದರಿಂದ ಅವುಗಳಿಗೆ ಶರೀರತ್ವವೇ ಇಲ್ಲ" ಎಂಬ ಆಶಂಕೆ ನಿವಾರಿಸಲ್ಪಟ್ಟಿರುವುದು. ಗೌತಮಮಹರ್ಷಿಯ ಶಾಪಕ್ಕೆ ಪಾತ್ರಳಾದ ಅಹಲ್ಯೆಯ ವೃತ್ತಾಂತವನ್ನು ಸದಾಚಾರ್ಯಮುಖದಿಂದ ಕೇಳಿರುವವರಿಗೆ "ಶಿಲಾಕಾಷ್ಠಾದಿಗಳಲ್ಲಿ ಜೀವನೇ ಇಲ್ಲ" ಎಂಬ ಆಶಂಕೆ ತಲೆದೋರುವುದಕ್ಕೇ ಅವಕಾಶವಿಲ್ಲ

ಮತ್ತು-ಶ್ರೀ ಭಾಗವತದ ಹನ್ನೊಂದನೆಯ ಸ್ಕಂಧದ ಇಪ್ಪತ್ತನಾಲ್ಕನೆಯ ಅಧ್ಯಾಯದಲ್ಲಿ ಶ್ರೀ ಕೃಷ್ಣನು ಉದ್ಧವನಿಗೆ ಉಪದೇಶಿಸಿರುವ—

"ಅಣುರ್ಬೃಹತ್ಕೃಶಃ ಸ್ಥೂಲೋ ಯೋ ಯೋ ಭಾವಃ ಪ್ರಸಿಧ್ಯತಿ ।
ಸರ್ವೋಽಪ್ಯುಭಯಸಂಯುಕ್ತಃ ಪ್ರಕೃತ್ಯಾ ಪುರುಷೇಣ ಚ ॥"

ಎಂಬ ಹದಿನಾರನೆಯ ಶ್ಲೋಕವನ್ನು ಅರ್ಥಸಹಿತವಾಗಿ ಆಚಾರ್ಯಮುಖದಿಂದ ಕೇಳುವವರಿಗೆ ಈ ಶಂಕೆ ಪುನಃ ಅಂಕುರಿಸಲಾರದು.

### ೨೯೦ ಭಾಷ್ಯಕಾರಸಂಮತೇ ಉಕ್ತಾರ್ಥೇ ಪ್ರಮಾಣಪ್ರದರ್ಶನಂ.

ಮತ್ತು ಶ್ರೀಮದ್ಗೀತಾಭಾಷ್ಯದಲ್ಲಿ ಹದಿನಾಲ್ಕನೆಯ ಅಧ್ಯಾಯದ

ಊರ್ಧ್ವಂ ಗಚ್ಛಂತಿ ಸತ್ತ್ವಸ್ಥಾ ಮಧ್ಯೇ ತಿಷ್ಠಂತಿ ರಾಜಸಾಃ ।
ಜಘನ್ಯಗುಣವೃತ್ತಿಸ್ಥಾ ಅಧೋ ಗಚ್ಛಂತಿ ತಾಮಸಾಃ ॥

ಎಂಬ ಹದಿನೆಂಟನೆಯ ಶ್ಲೋಕದ ವ್ಯಾಖ್ಯಾನದಲ್ಲಿ—ಉತ್ತರಾರ್ಧಕ್ಕೆ ವ್ಯಾಖ್ಯಾನವನ್ನು ಮಾಡುವಾಗ "ತಮೋಗುಣದಿಂದ ಅತ್ಯಂತಮಲಿನರಾಗಿರುವ ಜೀವರುಗಳು ಉತ್ತರೋತ್ತರವಾಗಿ ಅತ್ಯಂತನಿಕೃಷ್ಟವೆನಿಸಿಕೊಳ್ಳುವ ತಮೋಗುಣವ್ಯಾಪಾರದಲ್ಲಿ ನಿರತರಾಗಿ ಅದರ ಫಲವನ್ನು ಅನುಭವಿಸುವುದಕ್ಕೋಸ್ಕರ ಉತ್ತರೋತ್ತರವಾಗಿ ಅತ್ಯಂತನಿಹೀನವಾಗಿರುವ ಜನ್ಮಗಳನ್ನು ಪರಿಗ್ರಹಿಸುತ್ತ ಕೆಳಕೆಳಗೆ ಹೋಗುತ್ತಿರುವರು; ಹೇಗೆಂದರೆ—ಮೊದಲು ಚಂಡಾಲಜಾತಿಯಲ್ಲಿ ಹುಟ್ಟುವರು; ಅನಂತರದಲ್ಲಿ ತಿರ್ಯಗ್ಜಾತಿಗಳಲ್ಲಿ ಹುಟ್ಟುವರು; ಅದರಮೇಲೆ ಅದಕ್ಕಿಂತಲೂ ನೀಚವಾದ ಕ್ರಿಮಿಕೀಟಾದಿಜನ್ಮವನ್ನು ಪಡೆವರು; ಇಷ್ಟುಮಾತ್ರವಲ್ಲದೆ ಸ್ಥಾವರಜನ್ಮಕ್ಕೂ ಬರುವರು; ಅದರ ಮೇಲೆ ಅದಕ್ಕಿಂತಲೂ ನೀಚವಾದ ಗುಲ್ಮ-ಲತೆ-ಮುಂತಾದ ಜನ್ಮವನ್ನು ಗ್ರಹಿಸುವರು; ಕೊನೆಗೆ ಎಲ್ಲದಕ್ಕಿಂತಲೂ ನೀಚವಾದ ಶಿಲೆ-ಕಾಷ್ಠ-ಲೋಷ್ಟ-ತೃಣ

ಮುಂತಾದ ಶರೀರವನ್ನು ಪಡೆವರು'' ಎಂದು ಸ್ಪಷ್ಟವಾಗಿ ಶ್ರೀಭಾಷ್ಯಕಾರರು ಅನುಗ್ರಹಿಸಿರುವುದರಿಂದ ''ಶಿಲೆ, ಕಾಷ್ಠ, ಘಟ, ಪಟ, ಮುಂತಾದುವುಗಳಲ್ಲಿ ಜೀವನೇ ಇಲ್ಲ'' ಎಂಬ ಆಶಂಕೆ ಅತ್ಯಂತಮೂಢಮತಿಗಳಿಗಲ್ಲದೆ ಸ್ವಲ್ಪಮಾತ್ರ ವಿವೇಕವುಳ್ಳವರಿಗೂ ಸಹ ತಲೆದೋರದು.

ಆದಕಾರಣ ಶಿಲಾಕಾಷ್ಠಾದಿಗಳಿಗೆ ಅಜಂಗಮಕೋಟಿಯಲ್ಲಿ ಅಂತರ್ಭಾವವನ್ನು ನಿರ್ಬಾಧವಾಗಿ ಹೇಳಬಹುದಾದುದರಿಂದ ಜಂಗಮವೆಂದೂ ಅಜಂಗಮವೆಂದೂ ಶರೀರವನ್ನು ಎರಡು ಬಗೆಯಾಗಿ ವಿಭಾಗಮಾಡಿಡುದರಲ್ಲಿ ಯಾವ ಅನುಪಪತ್ತಿಯೂ ಇರುವುದಿಲ್ಲ.

## ೨೯೧ ಜಂಗಮಶರೀರಸ್ಯ ಚಾತುರ್ವಿಧ್ಯಂ.

ಈ ಜಂಗಮಶರೀರವು—ದೇವಶರೀರ, ಮನುಷ್ಯಶರೀರ, ತಿರ್ಯಕ್ಛರೀರ, ನಾರಕಿಶರೀರ ಎಂದು ನಾಲ್ಕುಬಗೆಯಾಗಿ ವಿಂಗಡಿಸಲ್ಪಡುವುದು.

ಕಿನ್ನರ, ಗಂಧರ್ವ, ರಾಕ್ಷಸ, ಯಕ್ಷ, ಅಪ್ಸರಸ್ಸು, ವಿಧ್ಯಾಧರ, ಗುಹ್ಯಕ ಪಿಶಾಚ, ಸಿದ್ಧಜಾತಿ, ಭೂತಜಾತಿ ಇವುಗಳೆಲ್ಲವೂ ದೇವಜಾತಿಯ ಒಳಭೇದಗಳಾಗಿರುವುವು.

ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಚಂಡಾಲ. ಮ್ಲೇಚ್ಛ, ಕಿರಾತ, ಹೂಣ, ಪುಳಿಂದ, ಪುಲ್ಕಸ ಮುಂತಾದ ಜಾತಿಗಳು ಮನುಷ್ಯಜಾತಿಯ ಒಳಭೇದಗಳಾಗಿರುವುವು.

ಈ ಎರಡು ಜಾತಿಯವರೂ ಶಾಸ್ತ್ರವಶ್ಯರಾಗಿ ಎಂದರೆ ಶಾಸ್ತ್ರೋಕ್ತವಾದ ವಿಧಿನಿಷೇಧಗಳಿಗೆ ಬದ್ಧರಾಗಿ ಇರುವರು.

ಮೃಗ, ಪಕ್ಷಿ, ಸರ್ಪ, ಕ್ರಿಮಿ, ಕೀಟ, ಜಲಜಂತುಗಳು ಇವೇ ಮೊದಲಾದುವು ತಿರ್ಯಗ್ಜಾತಿಯ ಒಳಭೇದಗಳಾಗಿರುವುವು.

ನಾರಕಿಶರೀರವೆಂದರೆ—ಈ ಲೋಕದಲ್ಲಿ ನಡಸಿದ ಪಾಪಕೃತ್ಯಕ್ಕೆ ಫಲವಾದ ದುಃಖವನ್ನು ಅನುಭವಿಸುವುದಕ್ಕಾಗಿಯೇ ರೌರವ ಮುಂತಾದ ನರಕಗಳಲ್ಲಿ ಜೀವನಿಗೆ ದೊರೆವ ಯಾತನಾಶರೀರಗಳು, ಯಾತನೆಯನ್ನು ಅನುಭವಿಸುವುದಕ್ಕಾಗಿಯೇ ಈ ಶರೀರಗಳು ಬಂದೊದಗುವುದರಿಂದ ಯಾತನೆಯನ್ನು ಸಹಿಸಲಾರದೆ ಜೀವನು ಅಲ್ಲಿ ಮರಣಹೊಂದಲು ಅವಕಾಶವಿಲ್ಲ; ಆ ಶರೀರಗಳು ಅಷ್ಟೊಂದು ಬಲವತ್ತರಗಳಾಗಿಯೂ, ದುಸ್ತ್ಯಜಗಳಾಗಿಯೂ ಇರುವುವು. ಹೆಚ್ಚು ಮಾತಿನಿಂದೇನು? ಬೆಂಕಿಯಂತೆ ಬಲವಾಗಿ ಕಾದಿರುವ ಲೋಹದ ಕಂಬಕ್ಕೆ ಇವನನ್ನು ಬಿಗಿದುಕಟ್ಟಿದರೂ ಇವನು ಆ ದುಃಖವನ್ನು

ಅನುಭವಿಸುತ್ತ ಆ ಶರೀರದಲ್ಲಿಯೇ ಇರಬೇಕಲ್ಲದೆ ಮರಣಹೊಂದಲಾಗುವುದಿಲ್ಲ; ಬಲವತ್ತರವಾಗಿ ಕಾದು ಮರುಳುತ್ತಿರುವ ಎಣ್ಣೆಯ ಕೊಪ್ಪರಿಗೆಯಲ್ಲಿ ಇವನನ್ನು ಎತ್ತಿಹಾಕಿದರೂ ಮರಣಹೊಂದಲಾಗುವುದಿಲ್ಲ. ಪಾಪಫಲವಾದ ದುಃಖಾನುಭವವು ಹೋಗಿದರೆ ಆ ಶರೀರವನ್ನು ಬಿಟ್ಟು ಮತ್ತೊಂದು ಶರೀರಕ್ಕೆ ಹೋಗುವನು.

## ೨೯೨ ಪುನರಪಿ ಜಂಗಮಶರೀರಸ್ಯ ಯೋನಿಜಾಯೋನಿಜಭೇದೇನ ದ್ವೈವಿಧ್ಯಂ,

ಇದೇ ಜಂಗಮಶರೀರವು—ಯೋನಿಜವೆಂದೂ, ಅಯೋನಿಜವೆಂದೂ, ಪುನಃ ಎರಡು ಬಗೆಯಾಗಿ ವಿಂಗಡಿಸಲ್ಪಡುವುದು. ಈ ವಿಭಾಗವು ದೇವ ಮನುಷ್ಯ, ತಿರ್ಯಕ್ ಈ ಮೂರು ಜಾತಿಯ ಶರೀರಗಳಲ್ಲಲ್ಲದೆ ನಾರಕಿಶರೀರದಲ್ಲಿ ಸಂಭವಿಸುವುದಿಲ್ಲ ಏತಕ್ಕೆಂದರೆ ಕೇವಲಪಾಪದಿಂದ ಪ್ರಾಪ್ತವಾಗುವ ಆ ಶರೀರವು ಅಯೋನಿಜವಾಗಿರುವುದಲ್ಲದೆ ಯೋನಿಜವಾಗುವುದಕ್ಕೆ ಅವಕಾಶವಿಲ್ಲ.

ದೇವಜಾತಿಯಲ್ಲಿ—ಪರಮಾತ್ಮನ ನಾಭಿಕಮಲದಿಂದ ಹುಟ್ಟಿದ ಚತುರ್ಮುಖನ ಶರೀರವೂ, ಪರಮಾತ್ಮನ ಸಂಕಲ್ಪದಿಂದ ಹುಟ್ಟಿದ ಮಧುಕೈಟಭರ ಶರೀರವೂ, ಚತುರ್ಮುಖನಿಗೆ ಮಾನಸಪುತ್ರರಾಗಿ ಹುಟ್ಟಿದ ಸನಕಾದಿಗಳ ಶರೀರವೂ, ಕರ್ದಮ, ನಾರದ ಪುಲಸ್ಯ, ಅತ್ರಿ ಮುಂತಾದ ಪ್ರಜಾಪತಿಗಳ ಶರೀರವೂ ಸಹ ಅಯೋನಿಜಶರೀರಗಳಾಗಿರುವುವು.

ಮನುಷ್ಯಜಾತಿಯಲ್ಲಿ—ಧೃಷ್ಟದ್ಯುಮ್ನ, ದ್ರೌಪದಿ ಮುಂತಾದವರ ಶರೀರಗಳು ಅಯೋನಿಜಗಳಾಗಿರುವುವು.

ತಿರ್ಯಗ್ಜಾತಿಯಲ್ಲಿ—ಐರಾವತ. ಉಚ್ಚೈಶ್ಶ್ರವಸ್ಸು ಮುಂತಾದ ವುಗಳ ಶರೀರಗಳು ಅಯೋನಿಜಗಳಾಗಿರುವುವು ಯೋನಿಜಶರೀರವಾದರೆ ಈ ಮೂವರಲ್ಲಿಯೂ ಸುಪ್ರಸಿದ್ಧವಾಗಿಯೇ ಇರುವುದು.

## ೨೯೩ ರೇತಸ್ಸೇಚನರೂಪಪಂಚಮಾಹುತ್ಯಭಾವಾತ್ ಅಯೋನಿಜಶರೀರಾಸಂಭವಾಶಂಕಾ.

ಹೀಗಾದರೆ—'' ಛಾಂದೋಗ್ಯೋಪನಿಷತ್ತಿನಲ್ಲಿ ಪಂಚಾಗ್ನಿವಿದ್ಯಾಪ್ರಕರಣದಲ್ಲಿ ''ದ್ಯುಲೋಕ, ಪರ್ಜನ್ಯ, ಪೃಥಿವಿ, ಪುರುಷ, ಯೋಷಿತ'' ಎಂಬ ಐದುಪದಾರ್ಥಗಳನ್ನೂ ಅಗ್ನಿಯಾಗಿ ರೂಪಣಮಾಡಿ, ಇವುಗಳಲ್ಲಿ ಕ್ರಮವಾಗಿ ''ಶ್ರದ್ಧೆ, ಸೋಮ ವೃಷ್ಟಿ, ಅನ್ನ, ರೇತಸ್ಸು'' ಈ ಪದಾರ್ಥಗಳ ಸಂಯೋಗವೆಂಬ ಆಹುತಿಯನ್ನು ಹೇಳಿ ಐದನೆಯ ಅಗ್ನಿಯಾದ ಯೋಷಿತ್ತಿನಲ್ಲಿ ರೇತಸ್ಸೇಚನವೆಂಬ ಆಹುತಿ ಸಂಭವಿಸಿದ

ಮೇಲೆಯೇ ಈ ಜೀವನು ಶರೀರವನ್ನು ಧರಿಸಿ ಪುರುಷಶಬ್ದದಿಂದ ವ್ಯವಹರಿಸಲ್ಪಡುವುದಕ್ಕೆ ಯೋಗ್ಯನಾಗುವನಲ್ಲದೆ ಅದಕ್ಕೆ ಪೂರ್ವದಲ್ಲಿ ಶರೀರವಿಶಿಷ್ಟನಾಗಲಾರನೆಂದು ಹೇಳಿರುವಾಗ ಅಯೋನಿಜಶರೀರದಲ್ಲಿ ರೇತಸ್ಸೇಚನವೆಂಬ ಪಂಚಮಾಹುತಿಯಿಲ್ಲದಿರಲು ಆ ಶರೀರವು ಹೇಗೆ ಹುಟ್ಟೀತು'' ಎಂದು ಆಶಂಕಿಸಬಾರದು.

## ೨೯೪ ಪಂಚಮಾಹುತಿನಿಯಮಸ್ಯ ಯೋನಿಜಶರೀರಮಾತ್ರ ವಿಷಯತ್ವಂ.

ಏತಕ್ಕೆಂದರೆ—ಪಂಚಾಗ್ನಿ ವಿದ್ಯೆಯಲ್ಲಿ ಇತಿ ತು ಪಂಚಮ್ಯಾಮಾಹುತಾವಾಪಃ ಪುರುಷವಚಸೋ ಭವಂತಿ ಎಂದು ಹೇಳಿರುವ ರೇತಸ್ಸೇಚನವೆಂಬ ಪಂಚಮಾಹುತಿನಿಯಮವು ಯೋನಿಜಶರೀರಕ್ಕಲ್ಲದೆ ಅಯೋನಿಜಶರೀರಕ್ಕಲ್ಲ ಪುರುಷ ಶಬ್ದದಿಂದ ವ್ಯವಹರಿಸಲ್ಪಡುವುದಕ್ಕೆ ಯೋಗ್ಯವಾದ ಶರೀರಪ್ರಾಪ್ತಿಗೆ ಪಂಚಮಾಹುತಿಯೂ ಒಂದು ಕಾರಣವೆನಿಸಿಕೊಳ್ಳುವುದೇ ಅಲ್ಲದೆ ಇದಕ್ಕೆ ಕಾರಣತ್ವವೇ ಇಲ್ಲವೆಂಬುದಿಲ್ಲವೆಂಬ ಅತ್ಯಂತಾಯೋಗವ್ಯಾವೃತ್ತಿಯನ್ನು ಮಾತ್ರ ಈ ಛಾಂದೋಗ್ಯಶ್ರುತಿ ತೋರಿಸುವುದು. ಇಷ್ಟೇ ಅಲ್ಲದೆ ಇತರಕಾರಣಗಳಿಗೆ ಶರೀರಪ್ರಾಪ್ತಿಕಾರಣತ್ವವೇ ಇಲ್ಲವೆಂಬ ಅನ್ಯಯೋಗವ್ಯಾವೃತ್ತಿಯನ್ನು ಈ ಶ್ರುತಿ ತೋರಿಸುವುದಿಲ್ಲ. ಆದುದರಿಂದ ಪಂಚಮಾಹುತಿಯಿಲ್ಲದಿದ್ದರೂ ಕಾರಣಾಂತರವನ್ನನುಸರಿಸಿ ನಾರಕಿ ಮುಂತಾದ ಅಯೋನಿಜಶರೀರವುಂಟಾಗಲು ತಡೆಯಿಲ್ಲ. ಈ ವಿಷಯವನ್ನು—ವೇದಾಂತಸೂತ್ರದ ಮೂರನೆಯ ಅಧ್ಯಾಯದ ಮೊದಲನೆಯ ಪಾದದಲ್ಲಿ—"ನ ತೃತೀಯೇ ತಥೋಪಲಬ್ಧೇಃ'' ಎಂಬ ಹದಿನೆಂಟನೆಯ ಸೂತ್ರದ ಭಾಷ್ಯಶ್ರುತಪ್ರಕಾಶಿಕೆಗಳಲ್ಲಿ ಸ್ಪಷ್ಟವಾಗಿ ಕಾಣಬಹುದು.

ಶರೀರಪ್ರಾಪ್ತಿಗೆ ಪಂಚಮಾಹುತಿ ಇದ್ದೇ ಇರಬೇಕೆಂಬ ಈ ನಿಯಮದ ಭಂಗವು ಪಾಪಕರ್ಮಿಗಳಾದ ನಾರಕಿಗಳಿಗೆ ಮಾತ್ರವೇ ಅಲ್ಲ; ಪುಣ್ಯಕರ್ಮಿಗಳಿಗೂ ಈ ನಿಯಮವನ್ನು ಎದರುನೋಡದೆಯೇ ಶರೀರಪ್ರಾಪ್ತಿಯುಂಟಾಗಬಹುದು.

ಪಂಚಮಾಹುತಿಯನ್ನು ಅಪೇಕ್ಷಿಸದೆಯೇ ಕೆಲವು ಭೂತಗಳಿಗೆ ದೇಹಪ್ರಾಪ್ತಿಯುಂಟಾಗಬಹುದೆಂಬ ಅಂಶವನ್ನು—"ತೇಷಾಂ ಖಲ್ವೇಷಾಂ ಭೂತಾನಾಂ ತ್ರೀಣ್ಯೇವ ಬೀಜಾನಿ ಭವಂತಿ ಅಂಡಜಂ ಜೀವಜಮುದ್ಭಿಜ್ಜಮಿತಿ'' ಎಂಬ ಒಂದಾನೊಂದು ಶ್ರುತಿಯೇ ತೋರಿಸುವುದು; ಇಲ್ಲಿ ಜೀವಜಶಬ್ದವು ಜರಾಯುಜವನ್ನು ತೋರಿಸುವುದು. ಉದ್ಭಿಜ್ಜಶಬ್ದವು—ವೃಕ್ಷ, ಗುಲ್ಮ, ಲತೆ ಮುಂತಾದುದನ್ನು ತೋರಿಸುವುದು ಇದೇ ಉದ್ಭಿಜ್ಜಶಬ್ದದಿಂದ ಸ್ವೇದಜವೂ ವಿವಕ್ಷಿತ

ವಾಗಿರುವುದು. ಉದ್ಭಿಜ್ಜದಲ್ಲಿರುವ ಕೆಲವು ಸ್ವಭಾವಗಳಿಗೆ ಸದೃಶವಾದ ಸ್ವಭಾವಗಳು ಸ್ವೇದಜದಲ್ಲಿಯೂ ಇರುವುದರಿಂದ ಇವೆರಡನ್ನೂ ಒಂದು ರಾಶಿಯಲ್ಲಿ ಸೇರಿಸಿ ಉದ್ಭಿಜ್ಜಪದದಿಂದ ವ್ಯವಹರಿಸಬಹುದು. ಪೃಥಿವಿಯ ಊಷ್ಮಜನ್ಯತ್ವ, ಅಯೋನಿಜತ್ವ, ಪಾಪಪ್ರಚುರತ್ವ ಎಂಬ ಈ ಸ್ವಭಾವಗಳು ಉದ್ಭಿಜ್ಜಗಳಲ್ಲಿ ಇರುವಂತೆ ಸ್ವೇದಜಗಳಲ್ಲಿಯೂ ಇರುವುವಷ್ಟೆ. ಈ ಶ್ರುತಿಯಲ್ಲಿ ಶರೀರದ ವಿಭಾಗಗಳನ್ನು ತೋರಿಸುವ ಮೂರು ಪದಗಳೊಳಗೆ ಮೂರನೆಯದಾದ ಉದ್ಭಿಜ್ಜಪದದಿಂದ ಸ್ವೇದಜವೂ ಸಂಗೃಹಿತವಾಗಿರುವುದೆಂಬ ಅಂಶವನ್ನು—"ತೃತೀಯಶಬ್ದಾವರೋಧಸ್ಸಂಶೋಕಜಸ್ಯ" ಎಂಬಸೂತ್ರದಲ್ಲಿ ಸೂತ್ರಕಾರರೇ ಹೇಳಿರುವರು. ಆದುದರಿಂದ ಉದ್ಭಿಜ್ಜದಂತೆ ಸ್ವೇದಜವೆಂಬುದೂ ಒಂದು ಅಯೋನಿಜಶರೀರವುಂಟೆಂಬುದು ಸಿದ್ಧವಾದುದರಿಂದ— ಸ್ವೇದಜಶರೀರವನ್ನೇ ಅಪಲಪಿಸುವ ಅರ್ವಾಚೀನರಾದ ವೇದವಿದ್ವೇಷಿಗಳು ಶ್ರುತಿಬಹಿಷ್ಕೃತರಾಗಿರುವರು—

ಹೇಗೆಂದರೆ—ಕಾರ್ಯಕಾರಣಭಾವವು ಸಜಾತೀಯವಾದ ಎರಡು ಪದಾರ್ಥಗಳಿಗೇ ಸಂಭವಿಸುವುದಲ್ಲದೆ ವಿಜಾತೀಯಪದಾರ್ಥಗಳಿಗೆ ಸಂಭವಿಸುವುದಿಲ್ಲವೆಂದು ಹೇಳಿ ವಿಜಾತೀಯಪ್ರಪಂಚಕ್ಕೆ ವಿಜಾತೀಯಬ್ರಹ್ಮವು ಕಾರಣವಾಗಲಾರದೆಂದು ವಾದಿಸುವ ಸಾಂಖ್ಯರನ್ನು ನಿರಾಕರಿಸುವ ಸಂದರ್ಭದಲ್ಲಿ ವೇದಾಂತಿಗಳು ವಿಜಾತೀಯಪದಾರ್ಥಗಳಿಗೂ ಕಾರ್ಯಕಾರಣಭಾವವುಂಟೆಂಬುದನ್ನು ಸಮರ್ಥನೆ ಮಾಡುವುದಕ್ಕಾಗಿ ಪ್ರತ್ಯಕ್ಷದಲ್ಲಿ ಕೆಲವು ದೃಷ್ಟಾಂತಗಳನ್ನು ತೋರಿಸುವರು; ಜೇನುತುಪ್ಪದಲ್ಲಿ ಕಾಲಕ್ರಮದಿಂದ ಕ್ರಿಮಿ ಉತ್ಪನ್ನವಾಗುವುದು; ಉಪದಂಶವೆಂದು ಹೇಳುವ ಉಪ್ಪಿನಕಾಯಿನಲ್ಲಿ ಕ್ರಿಮಿಯುಂಟಾಗುವುದು ಮನೆಮನೆಯಲ್ಲಿಯೂ ಸುಪ್ರಸಿದ್ಧವು. ಗೋಮಯವು ವಿಶೇಷವಾಗಿ ಕೊಳೆತುಹೋದರೆ ಅದರಲ್ಲಿ ವೃಶ್ಚಿಕವುಂಟಾಗುವುದು. ಹೀಗೆ ವಿಜಾತೀಯಪದಾರ್ಥಗಳಿಗೂ ಕಾರ್ಯಕಾರಣಭಾವವುಂಟೆಂಬುದು ಪ್ರತ್ಯಕ್ಷಸಿದ್ಧವಾಗಿರುವುದರಿಂದ ಪ್ರತ್ಯಕ್ಷವಿರುದ್ಧವಲ್ಲ. ಆದಕಾರಣ ಸರ್ವವಿಲಕ್ಷಣವಾದ ಬ್ರಹ್ಮವು ಪ್ರಪಂಚಕ್ಕೆ ಕಾರಣವಾಗಿರುವುದೆಂದು ಹೇಳುವ ವೇದಾಂತಶಾಸ್ತ್ರಕ್ಕೆ ಯಾವ ಪ್ರಮಾಣದೊಡನೆಯೂ ವಿರೋಧವಿಲ್ಲವೆಂಬುದು ವೇದಾಂತಿಗಳ ಮತವಾಗಿರುವುದು.

ಇಂಥ ಮತವನ್ನು ಸಹಿಸಲಾರದ ವೇದವಿದ್ವೇಷಿಗಳೊಳಗೆ ಅರ್ವಾಚೀನರಾದ ಕೆಲವರು ಹೇಳುವುದೇನೆಂದರೆ—ಕೇವಲವಾದ ಜೇನುತುಪ್ಪದಿಂದಲೂ, ಕೇವಲವಾದ ಉಪದಂಶದಿಂದಲೂ ಕ್ರಿಮಿಯುಂಟಾಗುವುದಿಲ್ಲ; ಮತ್ತೇನೆಂದರೆ- ಅಂಡಜವಾದ ಆ ಆ ಕ್ರಿಮಿಗಳು ತಮ್ಮ ಶರೀರದಿಂದ ಮೊಟ್ಟೆಯನ್ನಿಕ್ಕಿದ

ಮೇಲೆ, ಅತಿಸೂಕ್ಷ್ಮವಾಗಿರುವ ಆ ಮೊಟ್ಟೆಗಳು ಸರ್ವತೋಮುಖವಾಗಿ ಪ್ರಸರಿಸುವ ವಾಯುವಿನಿಂದ ಒಯ್ಯಲ್ಪಟ್ಟವುಗಳಾಗಿ ಜೇನುತುಪ್ಪದಲ್ಲಿಯೂ ಉಪದಂಶದಲ್ಲಿಯೂ ವ್ಯಾಪಿಸಿ ಕಾಲಕ್ರಮದಿಂದ ಅಲ್ಲಿ ಕ್ರಿಮಿಗಳಾಗುವುವು; ಇದರಂತೆಯೇ ವೃಶ್ಚಿಕದ ಶರೀರದಿಂದ ಉತ್ಪನ್ನವಾದ ಅಂಡಗಳೇ ಗಾಳಿಯ ಮೂಲಕವಾಗಿ ಗೋಮಯದಲ್ಲಿ ಸಂಕ್ರಮಿಸಿ ಅಲ್ಲಿ ವೃಶ್ಚಿಕಗಳಾಗಿ ಪರಿಣಮಿಸುವುವಲ್ಲದೆ ಕೇವಲ ಗೋಮಯವು ವೃಶ್ಚಿಕಕ್ಕೆ ಉಪಾದಾನಕಾರಣವಲ್ಲ" ಎಂದು ಹೇಳುವರು.

ಇಂಥ ವೇದಬಾಹ್ಯರ ಮೌಢ್ಯವನ್ನು ಅವರಿಗೆ ತೋರಿಸುವುದಕ್ಕಾಗಿ ಅವರನ್ನು ಕುರಿತು ಹೀಗೆ ಪ್ರಶ್ನೆ ಮಾಡಬೇಕು—ವಾಯುವಿನ ಮೂಲಕವಾಗಿ ಆ ಆ ಮೊಟ್ಟೆಗಳು ಮಧುವಿನಲ್ಲಿಯೂ ಉಪದಂಶದಲ್ಲಿಯೂ ವ್ಯಾಪಿಸಿ ಕ್ರಿಮಿಗಳಾಗುವುವೆಂಬುದೇ ನಿಜವಾದರೆ ವಾಯುಸಂಚಾರಕ್ಕೆ ಅವಕಾಶವನ್ನು ಕೊಡದೆ ಬಲವತ್ತರವಾಗಿ ಮುಚ್ಚಿ ಇಟ್ಟಿರುವ ಮಧುವಿನಲ್ಲಿಯೂ ಉಪದಂಶದಲ್ಲಿಯೂ ಕ್ರಿಮಿಗಳು ಉಂಟಾಗಕೂಡದಷ್ಟೆ. ಅಂಥ ಸಂದರ್ಭದಲ್ಲಿಯೂ ಅವುಗಳಲ್ಲಿ ಕ್ರಿಮಿಯುಂಟಾಗುತ್ತಿರುವುದನ್ನು ಲೋಕದವರೆಲ್ಲರೂ ಬಲ್ಲರು ; ಇದು ಹೇಗೆ ಸಂಗತವಾದೀತು ?

ಮತ್ತು-ಮಧು, ಉಪದಂಶ, ಗೋಮಯ ಇವುಗಳು ಆ ಆ ಪ್ರಾಣಿಗಳನ್ನು ಕುರಿತು ಉಪಾದಾನಕಾರಣವಾಗುವಷ್ಟು ಅಸಾಧಾರಣಸಾಮರ್ಥ್ಯವನ್ನು ಪಡೆದಿಲ್ಲವಾದರೆ-ಇವುಗಳು ಯಾವಾಗಲೂ ಏಕರೂಪವಾದ ಅದೇ ಪ್ರಾಣಿಗಳನ್ನು ಏಕೆ ಉಂಟುಮಾಡಬೇಕು? ಇತರ ಪ್ರಾಣಿಗಳನ್ನೂ ಏಕೆ ಉಂಟುಮಾಡಬಾರದು ? ಮೊಟ್ಟೆಗಳನ್ನು ಒಯ್ಯುವ ವಾಯು ಮೊಟ್ಟೆಗಳ ತಾರತಮ್ಯವನ್ನು ನೋಡದೆ ಅತಿಸೂಕ್ಷ್ಮವಾದ ಹಲವುಬಗೆಯ ಮೊಟ್ಟೆಗಳನ್ನೂ ಇವುಗಳಲ್ಲಿ ನುಗ್ಗಿಸುವುದಷ್ಟೆ ?

ಮತ್ತು-ಸರ್ವತೋಮುಖವಾಗಿ ಹರಡಿಕೊಳ್ಳುವ ವಾಯು ಗೋಮಯದಲ್ಲಿ ಮಾತ್ರವೇ ವೃಶ್ಚಿಕದ ಮೊಟ್ಟೆಗಳನ್ನು ಹೊಗಿಸಬೇಕೆಂಬ ಪರಿಜ್ಞಾನವನ್ನು ಪಡೆದಿಲ್ಲವಾದುದರಿಂದ ತಾನು ಸಂಚರಿಸುವ ಎಲ್ಲಾ ಕಡೆಗಳಲ್ಲಿಯೂ ಆ ಮೊಟ್ಟೆಗಳನ್ನು ನುಗ್ಗಿಸುವುದು; ಹೀಗಿದ್ದರೂ, ಗೋಮಯವ್ಯತಿರಿಕ್ತಪದಾರ್ಥಗಳೂ ಗೋಮಯದಂತೆ ವೃಶ್ಚಿಕವನ್ನು ಏಕೆ ಹುಟ್ಟಿಸಲಿಲ್ಲ ?

ಆದಕಾರಣ ಇತರಪದಾರ್ಥಗಳಲ್ಲಿ ಗಾಳಿಯಿಂದ ಒಯ್ಯಲ್ಪಟ್ಟ ವೃಶ್ಚಿಕಾಂಡಗಳಿದ್ದರೂ ಗೋಮಯವಿಲ್ಲದುದರಿಂದ ವೃಶ್ಚಿಕೋತ್ಪತ್ತಿಯಿಲ್ಲವೆಂಬುದನ್ನೂ, ಬಲವತ್ತರವಾಗಿ ಮುಚ್ಚಿ ಇಡಲ್ಪಟ್ಟ ಗೋಮಯದಲ್ಲಿ ವೃಶ್ಚಿಕಾಂಡಗಳಿಲ್ಲದಿದ್ದರೂ ವೃಶ್ಚಿಕೋತ್ಪತ್ತಿಯಾಗುತ್ತಿರುವುದನ್ನೂ ಪ್ರತ್ಯಕ್ಷದಲ್ಲಿ ನಾವೆಲ್ಲರೂ ನೋಡುತ್ತಿರುವೆವಾದಪ್ರಯುಕ್ತ

ಅನ್ವಯವ್ಯತಿರೇಕಗಳಿಂದ ವಿಜಾತೀಯಗೋಮಯವು ವಿಜಾತೀಯವೃಶ್ಚಿಕಕ್ಕೆ ಕಾರಣ ವಾಗಿರುವುದೆಂಬುದನ್ನು ಯಾರೂ ನಿರಾಕರಿಸಲಾರರು. ಆದುದರಿಂದ-ಅಂಡಜ, ಜರಾಯುಜ, ಉದ್ಭಿಜ್ಜ, ಎಂಬುವುಗಳಂತೆ ಸ್ವೇದಜವೆಂಬುದೂ ಒಂದು ಶರೀರಾವಾಂ ತರಜಾತಿ ಪ್ರತ್ಯಕ್ಷಸಿದ್ಧವಾಗಿರುವುದನ್ನು ಅಪಲಪಿಸಲು ಸಾಧ್ಯವಲ್ಲವಾದಪ್ರಯುಕ್ತ ರೇತಸ್ಸೇಚನವೆಂಬ ಪಂಚಮಾಹುತಿಯ ಅಪೇಕ್ಷೆಯಿಲ್ಲದೆಯೇ ಅಯೋನಿಜವಾಗಿ ಈ ಸ್ವೇದಜಶರೀರವು ಹುಟ್ಟಲು ಯಾವ ಅಭ್ಯಂತರವೂ ಇಲ್ಲ.

ಮತ್ತು.--ಪುಣ್ಯಫಲಾನುಭವದಿಂದ ಪುಣ್ಯಕರ್ಮವು ಮುಗಿವವರೆಗೂ ಈ ಜೀವನು ಸ್ವರ್ಗಾದಿಲೋಕಗಳಲ್ಲಿ ವಾಸಮಾಡಿ ಅಭುಕ್ತಫಲವಾದ ಇತರ ಕರ್ಮಗಳ ಐಹಿಕಫಲವನ್ನು ಅನುಭವಿಸುವುದಕ್ಕೋಸ್ಕರ ಇಹಲೋಕಾಗಮನಕ್ಕೆ ಉಪಕ್ರಮಿಸಿ ಅಲ್ಲಿಂದ ಹೊರಟು ಮೊದಲು ಚಂದ್ರನಿಂದ ಆಕಾಶವನ್ನು ಸೇರಿ, ಅಲ್ಲಿಂದ ವಾಯುವನ್ನೂ, ವಾಯುವಾಗಿ ಧೂಮವನ್ನೂ, ಧೂಮವಾಗಿ ಜಲಧರವನ್ನೂ, ಜಲಧರವಾಗಿ ವರ್ಷಿ ಸುವ ಮೇಘವನ್ನೂ ಸೇರಿ, ಅಲ್ಲಿಂದ ವೃಷ್ಟಿಯ ಮೂಲಕವಾಗಿ ಸಸ್ಯಾದಿಗಳನ್ನು ಪ್ರವೇಶಿಸಿ, ಜೀವಾಂತರದಿಂದ ಶರೀರವಾಗಿ ಪರಿಗ್ರಹಿಸಲ್ಪಟ್ಟಿರುವ ಭತ್ತ, ಗೋಧಿ, ಕಡಲೆ, ಉದ್ದು, ಎಳ್ಳು ಮುಂತಾದ ಧಾನ್ಯಗಳಲ್ಲಿಯೂ, ಓಷಧಿವನಸ್ಪತಿಗಳಲ್ಲಿಯೂ ಸಂಶ್ಲೇಷವನ್ನು ಪಡೆದು ಪುರುಷನ ಉದರದಲ್ಲಿ ಪ್ರವೇಶಿಸಿ, ಅಲ್ಲಿ ರೇತಸ್ಸಿನೊಡನೆ ಕಲೆತು, ರೇತಸ್ಸೇಚನವೆಂಬ ಆಹುತಿಯ ಮೂಲಕವಾಗಿ ಯೋನಿಯನ್ನು ಪ್ರವೇಶಿಸಿ ಅಲ್ಲಿ ಪೂರ್ಣ ವಾದ ಶರೀರಾಕಾರವನ್ನು ಪಡೆದು ಪುರುಷನೆಂದು ಹೇಳಿಸಿಕೊಳ್ಳುವುದಕ್ಕೆ ಯೋಗ್ಯ ನಾಗುವನೆಂದು ಹೇಳಿರುವಕಾರಣ ಯೋನಿಪ್ರಾಪ್ತಿಗಿಂತಲೂ ಮೊದಲು ಆಕಾಶದಲ್ಲಿ ಇವನಿಗೆ ಸಂಯೋಗಮಾತ್ರವೇ ಹೊರತು ಬೇರೆ ಇಲ್ಲ.

ಹಾಗಾದರೆ ಆ ವ್ರೀಹ್ಯಾದಿಧಾನ್ಯಗಳನ್ನು ಶರೀರಗಳಾಗಿ ಪರಿಗ್ರಹಿಸಿ ಅವುಗಳಿಗೆ ಅಭಿಮಾನಿಗಳಾಗಿದ್ದ ಇತರ ಜೀವರು ಏನಾಗುವರು ? ಆ ವ್ರೀಹ್ಯಾದಿಧಾನ್ಯಗಳನ್ನು ಕೊಯ್ಯುವಾಗಲೇ ಆ ಶರೀರಗಳನ್ನು ಬಿಟ್ಟು ಅವರು ಹೊರಟುಹೋಗುವರು; ಆ ಧಾನ್ಯ ಗಳ—ಕೊಯ್ಯುವಿಕೆ, ಒಣಗಿಸುವಿಕೆ, ಕುಟ್ಟುವಿಕೆ, ಬೇಸುವಿಕೆ, ಪಚನಮಾಡು ವಿಕೆ, ಆಹಾರವಾಗಿ ಉಪಯೋಗಿಸುವಿಕೆ, ಮುಂತಾದ ಅವಸ್ಥೆಗಳಲ್ಲಿ ಆ ಜೀವರು ಅನುವರ್ತಿಸಿ ಬರುವವರಲ್ಲ; ಈಗ ಸಂಶ್ಲೇಷವನ್ನು ಪಡೆದಿರುವ ಜೀವನೇ ಅನುವರ್ತಿ ಸುವನು. ಈ ವಿಷಯವನ್ನು ವೇದಾಂತಸೂತ್ರದ ಮೂರನೆಯ ಅಧ್ಯಾಯದ ಒಂದ ನೆಯ ಪಾದದೊಳಗೆ—“ ಅನ್ಯಾಧಿಷ್ಠಿತೇ ಪೂರ್ವವದಭಿಲಾಪಾತ್ ” ಎಂಬ ಇಪ್ಪತ್ತನಾಲ್ಕನೆಯ ಸೂತ್ರದ ಶ್ರುತಪ್ರಕಾಶಿಕೆಯಲ್ಲಿ ಸ್ಪಷ್ಟವಾಗಿ ಕಾಣಬಹುದು.

ಹೀಗೆ ಅವುಗಳಲ್ಲಿ ಸಂಯೋಗವನ್ನು ಪಡೆದು ರೇತೋಮೂಲಕವಾಗಿ ಯೋನಿಯನ್ನು ಪ್ರವೇಶಿಸಿದ ಮೇಲೆ — ಈ ಪ್ರವೇಶವು ಸ್ತ್ರೀಯ ಋತುಕಾಲವೆಂಬ ಹದಿನಾರು ರಾತ್ರಿಗಳೊಳಗಾಗಿಯೇ ಇಷ್ಟಪಕ್ಷದಲ್ಲಿ ಅಲ್ಲಿ ಒಂದು ಅಹೋರಾತ್ರದವರೆಗೂ ಕಲಿಲವಾಗಿ ಎಂದರೆ ಸ್ವಲ್ಪ ದ್ರವವಾಗಿಯೇ ಇರುವುದು, ಏಳು ದಿನಗಳೊಳಗಾಗಿ ಬುದ್ಬುದದಂತೆ (ಗುಳ್ಳೆಯಂತೆ) ಪರಿಣಮಿಸುವುದು. ಹದಿನೈದು ದಿವಸಗಳೊಳಗಾಗಿ ಪಿಂಡಾಕೃತಿಯನ್ನು ಹೊಂದುವುದು, ಒಂದು ತಿಂಗಳೊಳಗಾಗಿ ಕಠಿನವಾಗುವುದು. ಎರಡನೆಯ ತಿಂಗಳಲ್ಲಿ ತಲೆಯುಂಟಾಗುವುದು. ಮೂರು ತಿಂಗಳೊಳಗೆ ಕಾಲುಗಳು ಉಂಟಾಗುವುವು. ನಾಲ್ಕನೆಯ ತಿಂಗಳಲ್ಲಿ ಬೆರಳುಗಳೂ ಹೊಟ್ಟೆಯೂ ಸೊಂಟವೂ ಉಂಟಾಗುವುವು. ಐದನೆಯ ತಿಂಗಳಲ್ಲಿ ಬೆನ್ನಿನ ಮೂಳೆಗಳು ಚೆನ್ನಾಗಿ ಹುಟ್ಟುವುವು ಆರನೆಯ ತಿಂಗಳಲ್ಲಿ ಮೂಗು ಕಣ್ಣು ಕಿವಿಗಳು ಆವಿರ್ಭವಿಸುವುವು ಏಳನೆಯ ತಿಂಗಳಲ್ಲಿ ಜೀವಕಳೆ ಕೂಡುವುದು. ಎಂಟನೆಯ ತಿಂಗಳಲ್ಲಿ ಎಲ್ಲವೂ ಪೂರ್ಣವಾಗುವುವು. ಒಂಬತ್ತು ಅಥವಾ ಹತ್ತನೆಯ ತಿಂಗಳಲ್ಲಿ ಅತಿಪ್ರಬಲವಾದ ವಾಯುವೇಗದಿಂದ ಈಚೆಗೆ ತಳ್ಳಲ್ಪಡುವುದು ಹೀಗೆ ಯೋನಿಜವಾದ ಶರೀರಕ್ಕೆ ಆ ಆ ಕ್ಲಿಪ್ತ ಕಾಲಗಳಲ್ಲಿ ಗರ್ಭದೊಳಗೆ ಉಂಟಾಗುವ ಪರಿಣಾಮಗಳನ್ನೂ, "ರಕ್ತ, ಮಾಂಸ, ಮೇದಸ್ಸು, ಅಸ್ಥಿ, ಸ್ನಾಯು (ನಾಡಿ,) ಮಜ್ಜಾ, ಶುಕ್ಲ" ಎಂಬ ಸಪ್ತಧಾತುಗಳ ಸ್ವರೂಪಸ್ವಭಾವಗಳನ್ನೂ, ಶರೀರಕ್ಕೆ ಮೂಲಸ್ತಂಭವಾಗಿರುವ ವಾತಪಿತ್ತಶ್ಲೇಷ್ಮಗಳ ಸ್ವರೂಪಸ್ವಭಾವಪ್ರಯೋಜನಗಳನ್ನೂ, ನಾಡೀವಿಶೇಷ ಅವುಗಳ ಪರಿಮಾಣ, ಅವುಗಳಲ್ಲಿ ಮುಖ್ಯಾಮುಖ್ಯನಾಡಿಗಳ ವಿಭಾಗ, ಇವೇ ಮೊದಲಾದುವುಗಳನ್ನೆಲ್ಲಾ ಆಯುರ್ವೇದಗ್ರಂಥಗಳಲ್ಲಿಯೂ, ಯೋಗಶಾಸ್ತ್ರಗ್ರಂಥಗಳಲ್ಲಿಯೂ ತಿಳಿದುಕೊಳ್ಳಬೇಕು.

## ೨೯೫ ಪುನರಪಿ ಶರೀರಸ್ಯ ಜರಾಯುಜಾದಿಭೇದೇನ ಚಾತುರ್ವಿಧ್ಯಂ.

ಹೀಗೆಯೇ-ಜರಾಯುಜ, ಅಂಡಜ, ಸ್ವೇದಜ, ಉದ್ಭಿಜ್ಜ ಎಂಬ ನಾಲ್ಕು ಒಳಭೇದಗಳನ್ನು ಈ ಶರೀರವಿಷಯದಲ್ಲಿ ತಿಳಿಯಬೇಕು ಎಲ್ಲಾ ಚತುಷ್ಪಾಜ್ಜಾತಿಯೂ ಎಲ್ಲಾ ಮನುಷ್ಯಜಾತಿಯೂ ಜರಾಯುಜವೆನಿಸಿಕೊಳ್ಳುವುದು. (ಜರಾಯು ಎಂದರೆ ನವಿರುಕಾಗದದಂತೆ ಅತಿಸೂಕ್ಷ್ಮವಾಗಿ ಗರ್ಭದಲ್ಲಿರುವ ಒಂದಾನೊಂದು ಚೀಲ.) "ಪಕ್ಷಿ, ಸರ್ಪ, ಮೊಸಳೆ, ಮೀನು, ಆಮೆ, ಇಂಥ ಅನೇಕಜಾತಿಗಳು ಅಂಡಜವೆನಿಸಿಕೊಳ್ಳುವುವು. (ಅಂಡ-ಮೊಟ್ಟೆ). ಕಾಡುನೊಣ, ಊರುನೊಣ, ಸೊಳ್ಳೆ, ಹೇನು, ತಿಗಣೆ ಮುಂತಾದ ಅನೇಕಜಾತಿಗಳು ಸ್ವೇದಜವೆನಿಸಿಕೊಳ್ಳುವುವು. (ಸ್ವೇದ-ಶಾಖ)

ಭೂಮಿಯನ್ನು ಭೇದಿಸಿಕೊಂಡು ಅಂಕುರರೂಪವಾಗಿ ಹುಟ್ಟಿ ಮೇಲಕ್ಕೆ ಬೆಳೆದು ಬರುವ ಎಲ್ಲಾ ಸ್ಥಾವರಜಾತಿಗಳೂ ಉದ್ಭಿಜ್ಜವೆನಿಸಿಕೊಳ್ಳುವುವು.

### ೨೯೬ ವ್ಯಷ್ಟಿಶರೀರಾಣಾಂ ಈಶ್ವರಂ ಪ್ರತಿ ಸದ್ವಾರಕಶರೀರತ್ವ-ಮಿತ್ಯೇಕಃ ಪಕ್ಷಃ.

ವ್ಯಷ್ಟಿಸೃಷ್ಟಿಯಲ್ಲಿ ಆ ಆ ಜೀವನಿಗೆ ಶರೀರಗಳಾಗಿರುವ ಈ ಸಕಲಶರೀರಗಳೂ ಈಶ್ವರನಿಗೂ ಶರೀರಗಳಾಗಿಯೇ ಇರುವುವು. ಈಶ್ವರನೂ ಜೀವನಲ್ಲಿ ಸಾಕ್ಷಾತ್ತಾಗಿ ಪ್ರವೇಶಿಸಿ ಅಂಥ ಜೀವನನ್ನು ಆ ಆ ಶರೀರದಲ್ಲಿ ಪ್ರವೇಶಗೊಳಿಸುವುದರಿಂದ ಆ ಆ ಶರೀರವು ಜೀವದ್ವಾರಾ ಈಶ್ವರನಿಗೂ ಶರೀರವಾಗಿ ಸದ್ವಾರಕಶರೀರವೆನಿಸಿಕೊಳ್ಳುವುದೆಂದು ಕೆಲವರು ಪೂರ್ವಾಚಾರ್ಯರು ಒಪ್ಪಿರುವರು. ಶ್ರೀಭಾಷ್ಯಕಾರರ ಸೂಕ್ತಿಗಳೊಳಗೆ ಅನೇಕಕಡೆಗಳಲ್ಲಿ ಇದು ಕಂಡುಬರುವುದು.

### ೨೯೭ ಜೀವಸ್ಯೇವ ಅಚಿದ್ವಸ್ತುನೋಽಪಿ ಈಶ್ವರಂ ಪ್ರತಿ ಅದ್ವಾರಕಶರೀರತ್ವಮೇವೇತ್ಯಪರಃ ಪಕ್ಷಃ.

ಇನ್ನು ಕೆಲವರು ಆಚಾರ್ಯರು ಹೇಳುವುದೇನೆಂದರೆ-"ಈಶ್ವರನು ಜೀವನಲ್ಲಿ ಹೇಗೆ ಸಾಕ್ಷಾತ್ತಾಗಿ ಪ್ರವೇಶಿಸುವನೋ ಹಾಗೆಯೇ ಅಚಿದ್ವಸ್ತುವಿನಲ್ಲಿಯೂ ಸಾಕ್ಷಾತ್ತಾಗಿ ಪ್ರವೇಶಿಸಬಹುದಾದುದರಿಂದ ಜೀವನಂತೆಯೇ ಅಚಿದ್ವಸ್ತುವೂ ಈಶ್ವರನಿಗೆ ಸಾಕ್ಷಾತ್ತಾಗಿಯೇ ಶರೀರವಾಗಿ ಅದ್ವಾರಕಶರೀರವೆನಿಸಿಕೊಳ್ಳುವುದರಲ್ಲಿ ಅಡ್ಡಿಯೇನೂ ಇಲ್ಲ; ಸುಷುಪ್ತಿಮೂರ್ಛಾದ್ಯವಸ್ಥೆಗಳಲ್ಲಿ ಜೀವನು ತನ್ನ ಶರೀರವನ್ನು ಪ್ರೇರಿಸಲಾರದೆ ಬಿದ್ದಿರುವಾಗ ಈಶ್ವರನೇ ಅದನ್ನು ಪ್ರೇರಿಸಿ ಶ್ವಾಸೋಚ್ಛ್ವಸಾದಿಗಳನ್ನು ನಡಸುವಕಾರಣ ಆ ಸಮಯದಲ್ಲಿ ಈಶ್ವರನಿಗೆ ಅದು ಸಾಕ್ಷಾತ್ತಾಗಿ ಶರೀರವಾಗಿರುವುದೆಂದು ಹೇಳಬೇಕಲ್ಲವೆ? ಹಾಗಾದರೆ ಸರ್ವಕಾಲದಲ್ಲಿಯೂ ಹಾಗೆಯೇ ಇರುವುದೆಂದು ಏತಕ್ಕೆ ಹೇಳಬಾರದು" ಎಂದು ಹೇಳುವರು.

### ೨೯೮ ಸರ್ವದ್ರವ್ಯಾಣಾಂ ಈಶ್ವರಂ ಪ್ರತಿನಿರುಪಾಧಿಕಶರೀರತ್ವಂ, ಅಚಿದ್ದ್ರವ್ಯಸ್ಯ ಜೀವಂ ಪ್ರತಿ ಸೋಪಾಧಿಕಶರೀರತ್ವಂ ಚ.

ಹೇಗಾದರೂ—ಸರ್ವದೇಶ, ಸರ್ವಕಾಲ, ಸರ್ವಾವಸ್ಥೆಗಳಲ್ಲಿಯೂ ಇರುವ ಸರ್ವದ್ರವ್ಯಗಳೂ ಈಶ್ವರನಿಗೆ ಸ್ವತಏವ ಎಂದರೆ ಯಾವುದೊಂದು ಕಾರಣವನ್ನೂ ಅಪೇಕ್ಷಿಸದೆ ಶರೀರಗಳಾಗಿವೆಯೆಂದೂ, ಅವುಗಳೊಳಗೆ ಅಚಿದ್ದ್ರವ್ಯವು ಜೀವನ ಕರ್ಮಫಲ ಭೋಗಕ್ಕಾಗಿ ಅವನ ಕರ್ಮಾನುಸಾರವಾಗಿ ಶರೀರಾಕಾರವನ್ನು ತಾಳಿ ಆ ಕರ್ಮ

ವಿರುವಪರ್ಯಂತವೂ ಅವನಿಗೂ ಶರೀರವಾಗಿದೆಯೆಂದೂ, ಅಂಗೀಕರಿಸುವುದೇ ವೇದಾಂತೋಪದಿಷ್ಟವಾಗಿಯೂ ನ್ಯಾಯ್ಯವಾಗಿಯೂ ಇರುವ ಮಾರ್ಗವಾಗಿರುವುದು.

೨೯೯ ಏವಂ ಪ್ರಕೃತಿತತ್ತ್ವನಿರೂಪಣಸ್ಯ ಪ್ರಯೋಜನ ಕಥನಪೂರ್ವಕಂ ಪ್ರಥಮಪರಿಚ್ಛೇದೋಪಸಂಹಾರಃ

ಹೀಗೆ ನಿರೂಪಿಸಲ್ಪಟ್ಟ ಈ ಪ್ರಕೃತಿತತ್ತ್ವವು—ನಮಗೆ ಆತ್ಮಸಾಕ್ಷಾತ್ಕಾರವೂ ಈಶ್ವರಸಾಕ್ಷಾತ್ಕಾರವೂ ಸಿದ್ಧಿಸುವುದಕ್ಕೆ ಅಡ್ಡಿಯಾಗುವಂತೆ ಅವೆರಡನ್ನೂ ಮರೆಸುವ ತೆರೆಯಾಗಿ ಮಧ್ಯದಲ್ಲಿ ಇದ್ದು ನಮ್ಮ ಜ್ಞಾನವನ್ನು ಅತ್ಯಂತವಾಗಿ ಸಂಕೋಚಪಡಿಸಿ, ಭೋಗ್ಯವಾದ ಆತ್ಮಸ್ವರೂಪದಲ್ಲಿಯೂ ಭೋಗ್ಯತಮವಾದ ಈಶ್ವರಸ್ವರೂಪದಲ್ಲಿಯೂ ನಮಗೆ ಭೋಗ್ಯತಾಬುದ್ಧಿಯನ್ನು ತಪ್ಪಿಸಿದುದು ಮಾತ್ರವೇ ಅಲ್ಲದೆ ಅಭೋಗ್ಯವಾದ ತನ್ನಲ್ಲಿ ಭೋಗ್ಯತಾಬುದ್ಧಿಯನ್ನೂ ನಮಗೆ ವೃದ್ಧಿಪಡಿಸಿ, ನಮ್ಮನ್ನು ಬಲವತ್ತರವಾದ ಬಂಧನಕ್ಕೆ ಸಿಲುಕಿಸಿರುವುದು ಆದಕಾರಣ ನಮಗೆ ಅತ್ಯಂತವಾಗಿ ಹೇಯವಾಗಿರುವ ಈ ಪ್ರಕೃತಿಯ ಸ್ವರೂಪಸ್ವಭಾವಾದಿಗಳನ್ನು ಚೆನ್ನಾಗಿ ತಿಳಿದ ಹೊರತು ಇದರಲ್ಲಿ ದೃಢವಾದ ಹೇಯತ್ವಜ್ಞಾನವೂ, ವೈರಾಗ್ಯವೂ ಉಂಟಾಗುವುದಿಲ್ಲವಾದುದರಿಂದ ಇದಕ್ಕಾಗಿ ಇಲ್ಲಿ ಈ ಪ್ರಕೃತಿತತ್ತ್ವದ ಸ್ವರೂಪ, ಸ್ವಭಾವ ಮೊದಲಾದುವುಗಳನ್ನೂ, ಇದರ ಪರಿಣಾಮಪರಂಪರೆಗಳನ್ನೂ ಯಥಾವತ್ತಾಗಿ ನಿರೂಪಿಸಿರುವೆವು. ಶೈವಾಗಮದವರ ಮತವನ್ನು ನಿರಾಕರಿಸುವ ಪ್ರಕರಣದಲ್ಲಿಯೇ ಕಾಲತತ್ತ್ವವನ್ನೂ ನಿರೂಪಿಸಿರುವೆವು. ಇನ್ನು ಮುಂದೆ ಕ್ರಮಪ್ರಾಪ್ತವಾದ ಜೀವತತ್ತ್ವವನ್ನು ನಿರೂಪಿಸುವೆವು.

---

ಸಂಪ್ರತಿ ತತ್ತ್ವಂ ಮಲಿನಂ ಮಿಥ್ಯಾವಾದೋ ಯದಾತ್ಯಗತೋ ಮಲಿನಃ
ಸಂಪ್ರತಿ ತತ್ತ್ವಂ ವಿಮಲಂ ತತ್ತ್ವವಿಶುದ್ಧಿರ್ಯದಾತ್ಯಗತಾ ವಿಮಲಾ ||

---

ಇಂತು ತತ್ತ್ವಶುದ್ಧಿಯೆಂಬ ವಿಶಿಷ್ಟಾದ್ವೈತಪ್ರಕರಣಗ್ರಂಥದೊಳ್
ಅಚಿತ್ತತ್ತ್ವಪರಿಚ್ಛೇದದಲ್ಲಿ ಸಿದ್ಧಾಂತ್ಯಭಿಮತಶರೀರಲಕ್ಷಣ
ಪಂಚಕ-ಶರೀರಾವಾಂತರವಿಭಾಗ-ಪ್ರದರ್ಶನಂ ನಾಮ
ಏಕಾದಶಂ ಪ್ರಕರಣಂ.

---

ಇತಿ ಅಚಿತ್ತತ್ತ್ವಪರಿಚ್ಛೇದಃ ಪ್ರಥಮಃ ಸಮಾಪ್ತಃ

ಓಂ

ಓಂ ಶ್ರೀಮತೇ ರಾಮಾನುಜಾಯ ನಮಃ

॥ ಶ್ರೀಃ ॥

ಶ್ರೀಮತೇ ರಾಮಾನುಜಾಯ ನಮಃ.

# ತತ್ತ್ವಶುದ್ಧಿ.



## ೨. ಜೀವಪರಿಚ್ಛೇದಂ.

---

### ೩೦೦. ತತ್ರ ಆದೌ ಜೀವಲಕ್ಷಣಕಥನಪ್ರತಿಜ್ಞಾ

ಈ ರೀತಿಯಾಗಿ ಪ್ರಥಮಪರಿಚ್ಛೇದದಲ್ಲಿ ಪ್ರಕೃತಿತತ್ತ್ವವನ್ನೂ ಕಾಲತತ್ತ್ವವನ್ನೂ ವಿಶದವಾಗಿ ನಿರೂಪಿಸಿದೆವು. ಅನಂತರದಲ್ಲಿ ಕ್ರಮಪ್ರಾಪ್ತವಾದ ಜೀವತತ್ತ್ವವನ್ನು ನಿರೂಪಿಸುವೆವು. ಆಕರಗ್ರಂಥಗಳಲ್ಲಿ ಜೀವತತ್ತ್ವಕ್ಕೆ ಅನೇಕವಿಧವಾದ ಲಕ್ಷಣಗಳನ್ನು ಪೂರ್ವಾಚಾರ್ಯರು ತೋರಿಸಿರುವರು. ಅವುಗಳಲ್ಲಿ ಮುಖ್ಯವಾದ ಕೆಲವು ಲಕ್ಷಣಗಳನ್ನು ಇಲ್ಲಿ ನಿರೂಪಿಸಿ ತೋರಿಸುವೆವು.

### ೩೦೧. ಜೀವಸ್ಯ ಪ್ರಥಮಲಕ್ಷಣಂ.

**"ಅತ್ಯಲ್ಪವಾದ ಪರಿಮಾಣವುಳ್ಳದಾಗಿಯೂ, ಅಪೃಥಕ್ಸಿದ್ಧಿಸಂಬಂಧದಿಂದ ಜ್ಞಾನವುಳ್ಳದಾಗಿಯೂ ಇರುವ ತತ್ತ್ವವು ಜೀವತತ್ತ್ವವೆನಿಸಿಕೊಳ್ಳುವುದು."** ಅಪೃಥಕ್ಸಿದ್ಧಿಸಂಬಂಧದಿಂದ ಜ್ಞಾನವುಳ್ಳ ಈಶ್ವರತತ್ತ್ವದಲ್ಲಿ ಅತಿವ್ಯಾಪ್ತಿಯನ್ನು ಪರಿಹರಿಸುವುದಕ್ಕಾಗಿ ಮೊದಲನೆಯ ದಳವೂ, ಅತ್ಯಲ್ಪಪರಿಮಾಣವುಳ್ಳ ತ್ರಸರೇಣು ಮುಂತಾದ ಪದಾರ್ಥಗಳಲ್ಲಿ ಅತಿವ್ಯಾಪ್ತಿಯನ್ನು ಪರಿಹರಿಸುವುದಕ್ಕಾಗಿ ದ್ವಿತೀಯದಳವೂ ಈ ಲಕ್ಷಣದಲ್ಲಿ ಸೇರಿಸಲ್ಪಟ್ಟಿರುವುವು.

ಮತ್ತು ಜ್ಞಾನವು ಆತ್ಮನಲ್ಲಿ ಇರುವಂತೆ ಜ್ಞಾನಕ್ಕೆ ಗೋಚರವಾದ ಘಟಾದಿಪದಾರ್ಥಗಳಲ್ಲಿಯೂ ವಿಷಯತಾಸಂಬಂಧದಿಂದ ಇದ್ದೇ ಇರುವುದರಿಂದ ಪುನಃ ಘಟಾದಿಪದಾರ್ಥಗಳಲ್ಲಿ ಅತಿವ್ಯಾಪ್ತಿ ಬಂದೇ ಬರುವುದು. ಇದಕ್ಕಾಗಿ ಈ ಲಕ್ಷಣದಲ್ಲಿ **ಅಪೃಥಕ್ಸಿದ್ಧಿಸಂಬಂಧದಿಂದ** ಎಂಬ ಪದವು ಸೇರಿಸಲ್ಪಟ್ಟಿರುವುದು. ಘಟಾದಿಪದಾರ್ಥಗಳಲ್ಲಿ ವಿಷಯತಾಸಂಬಂಧದಿಂದ ಜ್ಞಾನವು ಇದ್ದರೂ

ಅಪೃಥಕ್ಸಿದ್ಧಿಸಂಬಂಧದಿಂದ ಅಲ್ಲಿ ಇಲ್ಲವಾದಕಾರಣ ಅತಿವ್ಯಾಪ್ತಿಗೆ ಅವಕಾಶವಿಲ್ಲ. ಜೀವತತ್ತ್ವವಾದರೆ ಅಣುವಾದುದರಿಂದ ಅತ್ಯಲ್ಪಪರಿಮಾಣವುಳ್ಳದಾಗಿಯೂ, ಅಪೃಥಕ್ಸಿದ್ಧಿಸಂಬಂಧದಿಂದ ಜ್ಞಾನವುಳ್ಳುದಾಗಿಯೂ ಇರುವುದರಿಂದ ಲಕ್ಷ್ಮೀ ಮೊದಲುಗೊಂಡು ಪಿಪೀಲಿಕಾಪರ್ಯಂತವಾದ ಸಮಸ್ತಜೀವವರ್ಗದಲ್ಲಿಯೂ ಪ್ರತ್ಯೇಕ ವ್ಯಕ್ತಿಯಲ್ಲಿ ಲಕ್ಷಣಕ್ಕೆ ಸಮನ್ವಯವನ್ನು ತಿಳಿಯಬಹುದು.

## ೩೦೨. ದ್ವಿತೀಯಲಕ್ಷಣಂ.

**"ಶೇಷತ್ವವುಳ್ಳದಾಗಿಯೂ, ಅಪೃಥಕ್ಸಿದ್ಧಿಸಂಬಂಧದಿಂದ ಜ್ಞಾನವುಳ್ಳದಾಗಿಯೂ ಇರುವ ತತ್ತ್ವವು ಜೀವತತ್ತ್ವವೆನಿಸಿಕೊಳ್ಳುವುದು."** ಪ್ರಥಮಲಕ್ಷಣದಂತೆ ಇದರಲ್ಲಿಯೂ ಈಶ್ವರನಲ್ಲಿ ಅತಿವ್ಯಾಪ್ತಿಯ ಪರಿಹಾರಕ್ಕಾಗಿ ಮೊದಲನೆಯ ದಳವೂ, ಶೇಷತ್ವವುಳ್ಳ ಘಟಾದಿಪದಾರ್ಥಗಳಲ್ಲಿ ಅತಿವ್ಯಾಪ್ತಿಯನ್ನು ಪರಿಹರಿಸುವುದಕ್ಕಾಗಿ ದ್ವಿತೀಯದಳವೂ ಸೇರಿಸಲ್ಪಟ್ಟಿರುವುವು. **ಅಪೃಥಕ್ಸಿದ್ಧಿಸಂಬಂಧದಿಂದ** ಎಂಬ ಪದದ ಪ್ರಯೋಜನವನ್ನು ಮೊದಲಿನಂತೆಯೇ ತಿಳಿಯಬೇಕು. ಲಕ್ಷ್ಮಿ ಮೊದಲುಗೊಂಡು ಇರುವೆಯುವರೆಗೂ ಇರುವ ಸಮಸ್ತಜೀವರಾಶಿಯೂ ಪ್ರತ್ಯೇಕಪ್ರತ್ಯೇಕವಾಗಿ ಈಶ್ವರನಿಗೆ ಶೇಷವಾಗಿಯೂ ಅಪೃಥಕ್ಸಿದ್ಧಿಸಂಬಂಧದಿಂದ ಜ್ಞಾನವುಳ್ಳುದಾಗಿಯೂ ಇರುವುದರಿಂದ ಲಕ್ಷಣಕ್ಕೆ ಸಮನ್ವಯವನ್ನು ತಿಳಿಯಬಹುದು.

**ಶ್ರೀಮದ್ವೇದಾಂತದೇಶಿಕರ** ಸಿದ್ಧಾಂತದಲ್ಲಿ ಲಕ್ಷ್ಮಿಗೆ ಈಶ್ವರಕೋಟಿಯಲ್ಲಿ ಅಂತರ್ಭಾವವನ್ನು ಹೇಳುವುದೇ ಹೆಚ್ಚಾಗಿ ಅಭಿಮತವಾಗಿರುವುದು; ಇತರ ಆಚಾರ್ಯರ ಸಿದ್ಧಾಂತದಲ್ಲಿ ಲಕ್ಷ್ಮಿಗೆ ಜೀವಕೋಟಿಯಲ್ಲಿ ಅಂತರ್ಭಾವವನ್ನು ಹೇಳುವುದೇ ಯುಕ್ತವೆಂದು ಅಭಿಮತವಾಗಿರುವುದು. ಹೀಗೆ ಸಂಪ್ರದಾಯಭೇದವಿರುವುದರಿಂದ ಆ ಆ ಸಂಪ್ರದಾಯದವರು ತಮ್ಮ ತಮ್ಮ ಸಂಪ್ರದಾಯಕ್ಕೆ ಅನುಸಾರವಾಗಿ ಈ ವಿಷಯವನ್ನು ವ್ಯವಸ್ಥೆಮಾಡಿ ತಿಳಿದುಕೊಳ್ಳಬಹುದು. ಇಬ್ಬರು ಆಚಾರ್ಯರ ಅಭಿಪ್ರಾಯಗಳನ್ನೂ ಇಲ್ಲಿ ತೋರಿಸುವುದು ಮಾತ್ರವೇ ನಮ್ಮ ಕೆಲಸವಾಗಿರುವುದು.

ಅದರಲ್ಲಿ **ಶ್ರೀಮದ್ವೇದಾಂತದೇಶಿಕಸಂಪ್ರದಾಯಾನುಯಾಯಿಗಳ** ಅಭಿಪ್ರಾಯವೇನೆಂದರೆ—

**ಇಚ್ಛಯಾ ಯದುಪಾದೇಯಂ ಯಸ್ಯಾತಿಶಯಸಿದ್ಧಯೇ ।**
**ಉಭಯಾನುಭಯೈಕೈಕಜುಷಾ ತೌ ಶೇಷಶೇಷಿಣೌ ॥**

ಲೋಕದಲ್ಲಿಯೂ ಶಾಸ್ತ್ರದಲ್ಲಿಯೂ ಶೇಷಶೇಷಿಭಾವವೆಂಬುದು ನಾಲ್ಕುಬಗೆಯಾಗಿ ಕಂಡುಬರುವುದು. ಹೇಗೆಂದರೆ—

**ಒಂದನೆಯದು**—ಶೇಷಶೇಷಿಗಳಿಬ್ಬರೂ ಎಲ್ಲಿ ಚೇತನರಾಗಿಯೇ ಇರುವರೋ ಅಲ್ಲಿ ಪರಸ್ಪರೇಚ್ಛೆಯಿಂದ ಅವರಿಬ್ಬರಿಗೂ ಶೇಷಶೇಷಿಭಾವವುಂಟಾಗುವುದು. ಉದಾಹರಣೆ—ಲೋಕದಲ್ಲಿ ರಾಜಭೃತ್ಯರಿಗೂ, ಪತಿಪತ್ನಿಯರಿಗೂ, ಗುರುಶಿಷ್ಯರಿಗೂ ಶೇಷಶೇಷಿಭಾವವು ಉಭಯೇಚ್ಛೆಯಿಂದ ಉಂಟಾಗುವುದು; ಶಾಸ್ತ್ರದಲ್ಲಿ ಲಕ್ಷ್ಮೀತದ್ವಲ್ಲಭರಿಗೆ ಉಭಯೇಚ್ಛೆಯಿಂದ ಶೇಷಶೇಷಿಭಾವವುಂಟಾಗುವುದು.

**ಎರಡನೆಯದು**—ಶೇಷಶೇಷಿಗಳೆರಡೂ ಎಲ್ಲಿ ಅಚೇತನಗಳಾಗಿಯೇ ಇರುವುವೋ ಅಲ್ಲಿ ಅಚೇತನಗಳಾದ ಅವುಗಳಿಗೆ ಇಚ್ಛೆಯಿಲ್ಲದಿದ್ದರೂ ಇನ್ನೊಬ್ಬ ಚೇತನನ ಇಚ್ಛೆಯಿಂದ ಅವೆರಡಕ್ಕೂ ಶೇಷಶೇಷಿಭಾವವು ಸಂಭವಿಸಬಹುದು. ಉದಾಹರಣೆ—ಕೃಷಿಯೂ, ಕೃಷಿಯಿಂದ ಸಂಸ್ಕರಿಸಲ್ಪಡುವ ಕ್ಷೇತ್ರವೂ. ಸಾಂಗೋಪಾಂಗವಾದ ಕೃಷಿವ್ಯಾಪಾರದಿಂದ ಕ್ಷೇತ್ರದಲ್ಲಿ ಸಸ್ಯೋತ್ಪತ್ತಿಗೆ ಯೋಗ್ಯವಾದ ಒಂದುಬಗೆಯ ಅತಿಶಯವುಂಟಾಗುವಕಾರಣ ಕೃಷಿ ಶೇಷವಾಗಿಯೂ ಕ್ಷೇತ್ರವು ಶೇಷಿಯಾಗಿಯೂ ಇರುವುವು; ಆದರೆ ಈ ಎರಡೂ ಅಚೇತನವಾದುದರಿಂದ ಇವುಗಳಿಗೆ ಇಚ್ಛೆಯೇ ಇಲ್ಲವಾಗಿ ಇವುಗಳ ಶೇಷಶೇಷಿಭಾವಕ್ಕೆ ಇವುಗಳ ಇಚ್ಛೆ ಕಾರಣವಾಗದಿದ್ದರೂ ಕರ್ಷಕನ ಇಚ್ಛೆಯಿಂದಲೇ ಇವುಗಳಿಗೆ ಶೇಷಶೇಷಿಭಾವವುಂಟಾಗಬಹುದು. ಇದು ಲೌಕಿಕವಾದ ಉದಾಹರಣವು. ಇದರಂತೆ—ಶಾಸ್ತ್ರೀಯವಾದ ಉದಾಹರಣೆಗಳಲ್ಲಿಯೂ—ಪ್ರಯಾಜ-ಅನೂಯಾಜ ಮುಂತಾದ ಕ್ರಿಯಾಕಲಾಪಕ್ಕೂ, ದರ್ಶಪೂರ್ಣಮಾಸ ಮುಂತಾದ ಯಾಗಕ್ಕೂ ಶೇಷಶೇಷಿಭಾವವುಂಟೆಂಬುದನ್ನು ತಿಳಿಯಬಹುದು. ಅಲ್ಲಿಯೂ ಅವುಗಳಿಗೆ ಪರಸ್ಪರ ಇಚ್ಛೆಯಿಲ್ಲದಿದ್ದರೂ, ಈಶ್ವರೇಚ್ಛೆಯಿಂದಲಾಗಲಿ ಯಜಮಾನನ ಇಚ್ಛೆಯಿಂದಲಾಗಲಿ ಅವೆರಡಕ್ಕೂ ಶೇಷಶೇಷಿಭಾವವುಂಟಾಗಬಹುದು.

**ಮೂರನೆಯದು**—ಶೇಷಿ ಚೇತನನಾಗಿಯೂ ಶೇಷವು ಅಚೇತನವಾಗಿಯೂ ಇರುವ ಕಡೆಯಲ್ಲಿ ಕೇವಲ ಶೇಷಿಯ ಇಚ್ಛೆಯಿಂದಲೇ ಶೇಷಶೇಷಿಭಾವವುಂಟಾಗುವುದು. ಉದಾಹರಣೆ—ಲೋಕದಲ್ಲಿ ಮನುಷ್ಯನೆಂಬ ಶೇಷಿಗೆ ಧನಕನಕವಸ್ತುವಾಹನಾದಿಗಳೂ, ಗೃಹಕ್ಷೇತ್ರಾರಾಮಾದಿಗಳೂ ಕೇವಲ ಶೇಷಿಯ ಇಚ್ಛೆಯಿಂದಲೇ ಶೇಷಗಳಾಗಿರುವುವು. ಶಾಸ್ತ್ರದಲ್ಲಿ ಜೀವವ್ಯತಿರಿಕ್ತವಾದ ಪ್ರಕೃತಿಪ್ರಾಕೃತವಸ್ತುಗಳೆಲ್ಲವೂ ಕೇವಲ ಈಶ್ವರೇಚ್ಛೆಯಿಂದಲೇ ಈಶ್ವರನಿಗೆ ಶೇಷಗಳಾಗಿರುವುವು.

**ನಾಲ್ಕನೆಯದು**—ಶೇಷಿ ಅಚೇತನವಾಗಿಯೂ ಶೇಷವು ಚೇತನನಾಗಿಯೂ ಇರುವ ಕಡೆಯಲ್ಲಿ ಕೇವಲ ಶೇಷದ ಇಚ್ಛೆಯಿಂದಲೇ ಶೇಷಶೇಷಿಭಾವವುಂಟಾಗುವುದು. ಉದಾಹರಣೆ—ಲೋಕದಲ್ಲಿ ಪಾಕಕ್ರಿಯಾಸಿದ್ಧಿಗೆ ಪಾಚಕನು (ಅಡಿಗೆಯವನು) ಶೇಷವಾಗಿರುವನು. ಶಾಸ್ತ್ರದಲ್ಲಿ ದರ್ಶಪೂರ್ಣಮಾಸ-ಜ್ಯೋತಿಷ್ಟೋಮ ಮುಂತಾದ ಯಾಗಕ್ರಿಯೆಯ ನಿಷ್ಪತ್ತಿಗೆ ಯಜಮಾನನು ಕರ್ತೃಕಾರಕವಾದುದರಿಂದ ಶೇಷಭೂತನಾಗಿರುವನು. ಇಲ್ಲಿ ಶೇಷಿಯಾದ ಕ್ರಿಯೆ ಅಚೇತನವಾದುದರಿಂದ ಅದಕ್ಕೆ ಇಚ್ಛೆ ಸಂಭವಿಸುವುದಿಲ್ಲವಾಗಿ ಕೇವಲ ಶೇಷದ ಇಚ್ಛೆಯಿಂದಲೇ ಶೇಷಶೇಷಿಭಾವವುಂಟಾಗುವುದು.

ಹೀಗೆ ನಾಲ್ಕುಬಗೆಯಾಗಿ ಉಂಟಾಗುವ ಶೇಷಶೇಷಿಭಾವದಲ್ಲಿ ಲಕ್ಷ್ಮಿಗೂ ಈಶ್ವರನಿಗೂ ಇರುವ ಶೇಷಶೇಷಿಭಾವವು ಒಂದನೆಯ ಕ್ರಮಕ್ಕೆ ಸೇರುವುದು. ಜೀವನಿಗೆ ಹೇಳಿದ ಎರಡನೆಯ ಲಕ್ಷಣದಲ್ಲಿ ಸ್ವಾಭಾವಿಕಶೇಷತ್ವವೇ ಜೀವನಿಗೆ ಲಕ್ಷಣವೆಂದು ವಿವಕ್ಷೆಮಾಡಬೇಕು. ಸ್ವಾಭಾವಿಕಶೇಷತ್ವವೆಂದರೆ—ಶೇಷತ್ವಾಶ್ರಯದಲ್ಲಿರುವ ಇಚ್ಛೆಗೆ ಅಧೀನವಲ್ಲದ ಶೇಷತ್ವವು. ಲಕ್ಷ್ಮಿಯಲ್ಲಿರುವ ಶೇಷತ್ವವು ಅವಳಿಗೆ ಸ್ವಾಭಾವಿಕವಲ್ಲ; ಮತ್ತೇನೆಂದರೆ—**"ನೀನು ನನಗೆ ಶೇಷಭೂತಳಾಗಿರಬೇಕು"** ಎಂದು ಈಶ್ವರನು ಅಪೇಕ್ಷಿಸಲು, **"ಹಾಗಾದರೆ ನಾನು ನಿನಗೆ ಶೇಷಭೂತಳಾಗಿರುವೆನು"** ಎಂದು ಲಕ್ಷ್ಮಿ ಇಷ್ಟಪಟ್ಟುದರಿಂದ ಲಕ್ಷ್ಮಿಯಲ್ಲಿರುವ ಭಗವಚ್ಛೇಷತ್ವವು ದಂಪತಿಗಳಾದ ಅವರಿಬ್ಬರ ಇಚ್ಛೆಗೆ ಅಧೀನವಾಗಿಯೇ ಉಂಟಾದುದಾದಕಾರಣ ಲಕ್ಷ್ಮಿಗೆ ಅದು ಸ್ವಾಭಾವಿಕವಲ್ಲ. ಆದುದರಿಂದ ಜೀವನಿಗೆ ಹೇಳುವ ಲಕ್ಷಣಗಳಿಗೆಲ್ಲಾ ಲಕ್ಷ್ಮಿ ಲಕ್ಷ್ಯಭೂತಳೇ ಅಲ್ಲವಾದ ಪ್ರಯುಕ್ತ ಇವಳಿಗೆ ಜೀವಕೋಟಿಯಲ್ಲಿ ಅಂತರ್ಭಾವವನ್ನು ಹೇಳಲಾಗುವುದಿಲ್ಲ. ಈಶ್ವರನಿಗೆ ಹೇಳುವ ಲಕ್ಷಣಗಳೆಲ್ಲವೂ ಇವಳಲ್ಲಿಯೂ ಸುಸಂಗತವಾಗಿ ಅನ್ವಯಿಸುವುವಾದುದರಿಂದ ಈಶ್ವರಕೋಟಿಯಲ್ಲಿಯೇ ಇವಳಿಗೆ ಅಂತರ್ಭಾವವನ್ನು ಹೇಳಬೇಕು.

ಮತ್ತು ಅಣುಪರಿಮಾಣನಾದ ಜೀವನ ಸ್ವರೂಪಕ್ಕೆ ವಿರುದ್ಧವಾದ ವಿಭುತ್ವವನ್ನು ಲಕ್ಷ್ಮೀಸ್ವರೂಪಕ್ಕೆ ಪಾಂಚರಾತ್ರ-ವಿಷ್ಣುಪುರಾಣ-ಮುಂತಾದ ಪ್ರಮಾಣಗ್ರಂಥಗಳಲ್ಲಿ ಸ್ಪಷ್ಟವಾಗಿ ಹೇಳಿರುವುದರಿಂದಲೂ ಜೀವಲಕ್ಷಣಕ್ಕೆ ಲಕ್ಷ್ಮಿಯನ್ನು ಗುರಿಮಾಡಲಾಗುವುದಿಲ್ಲ; ಆದಕಾರಣ ಲಕ್ಷ್ಮಿಯನ್ನು ಈಶ್ವರಕೋಟಿಯಲ್ಲಿಯೇ ಸೇರಿಸಬೇಕಲ್ಲದೆ ಜೀವಕೋಟಿಯಲ್ಲಿ ಸೇರಿಸಲು ಅವಕಾಶವಿಲ್ಲ.

"ತದಂತರ್ಭಾವಾತ್ತ್ವಂ ನ ಪೃಥಗಭಿಧತ್ತೇ ಶ್ರುತಿರಪಿ" ಎಂದು ಶ್ರೀ ಪರಾಶರಭಟ್ಟಾರ್ಯರೂ ಈ ಅಭಿಪ್ರಾಯವನ್ನು ಸ್ಪಷ್ಟವಾಗಿ ಅಪ್ಪಣೆ ಕೊಡಿಸಿರುವರು—ಇದು ಶ್ರೀಮದ್ವೇದಾಂತದೇಶಿಕಸಂಪ್ರದಾಯಾನುಸಾರಿಗಳಾದ ಆಚಾರ್ಯರ ಅಭಿಪ್ರಾಯದ ಸಂಕ್ಷೇಪವಾಗಿರುವುದು.

ಉಳಿದ ಆಚಾರ್ಯರುಗಳ ಅಭಿಪ್ರಾಯವೇನೆಂದರೆ—೧. ನಾರಾಯಣಶಬ್ದವ್ಯಾಖ್ಯಾನಪ್ರಕರಣದಲ್ಲಿ ಚೇತನಾಚೇತನವಸ್ತುಬೋಧಕವಾದ ನಾರಶಬ್ದದ ಅರ್ಥಗಳೊಳಗೆ ಲಕ್ಷ್ಮಿಗೂ ಅಂತರ್ಭಾವವನ್ನು ಉಭಯಸಂಪ್ರದಾಯದವರೂ ಒಪ್ಪಿದುವುದರಿಂದಲೂ, ೨. ಪುಂಲಿಂಗಾಂತವಾದ ಅಯನಶಬ್ದವು ಇವಳಲ್ಲಿ ಅನ್ವಯಿಸಲಾರದಾದುದರಿಂದಲೂ, ೩. ಸ್ವವ್ಯತಿರಿಕ್ತಸರ್ವಾಂತರ್ಯಾಮಿತ್ವವನ್ನು ಈಶ್ವರನಿಗೆ ಹೇಳುವ ಕಾಲದಲ್ಲಿ ಇವಳಿಗೂ ಅವನು ಅಂತರ್ಯಾಮಿಯಾಗಿರಬೇಕಾದುದು ಆವಶ್ಯಕವಾದುದರಿಂದಲೂ, ೪. ಅವನಂತೆ ಇವಳಿಗೂ ಸ್ವವ್ಯತಿರಿಕ್ತಸರ್ವಾಂತರ್ಯಾಮಿತ್ವವನ್ನು ಹೇಳುವುದಾದರೆ ಅವನಿಗೂ ಇವಳು ಅಂತರ್ಯಾಮಿನಿಯಾಗಿರಬೇಕಾಗಿ ಬರುವಪ್ರಯುಕ್ತ ಪರಸ್ಪರಾಂತರ್ಯಾಮಿತ್ವವು ಸಂಭವಿಸುವುದಿಲ್ಲವಾದಕಾರಣ ಅವನ ಅಂತರ್ಯಾಮಿತ್ವಕ್ಕೆ ಇವಳ ವಿಷಯದಲ್ಲಿ ನ್ಯೂನತೆಯುಂಟಾಗುವುದರಿಂದಲೂ, ೫. ನಾರಶಬ್ದದಲ್ಲಿ ವಿವಕ್ಷಿತವಾಗಿರುವ ಜಗತ್ಕಾರಣತ್ವವೆಂಬ ಈಶ್ವರಲಕ್ಷಣವು ನರಶಬ್ದವಾಚ್ಯನಾದ ಅವನಲ್ಲಿ ಅನ್ವಯಿಸುವುದಲ್ಲದೆ ನಾರಿಯಾದ ಇವಳಲ್ಲಿ ಸಾಕ್ಷಾತ್ತಾಗಿ ಸಂಬಂಧಿಸುವುದಿಲ್ಲವಾದುದರಿಂದಲೂ, ೬ ಜೀವನಿಗೆ ಹೇಳುವ ಎಲ್ಲಾ ಲಕ್ಷಣಗಳೂ ಇವಳಲ್ಲಿಯೂ ನಿರಾಬಾಧವಾಗಿ ಅನ್ವಯಿಸುವುವಾದುದರಿಂದಲೂ, ಇವಳಿಗೆ ಜೀವಕೋಟಿಯಲ್ಲಿ ಅಂತರ್ಭಾವವನ್ನು ಹೇಳುವುದು ಯುಕ್ತವಾಗಿರುವುದು.

ಮತ್ತು ಲಕ್ಷ್ಮಿಯಲ್ಲಿರುವ ಭಗವಚ್ಛೇಷತ್ವವು ಅವಳಿಗೆ ಸ್ವಾಭಾವಿಕವಲ್ಲವೆಂಬ ವಿಷಯದಲ್ಲಿಯೂ, ದಂಪತಿಗಳಾದ ಅವರಿಬ್ಬರ ಇಚ್ಛೆಗೆ ಅಧೀನವಾಗಿಯೇ ಉಂಟಾಗಿರುವುದೆಂಬ ವಿಷಯದಲ್ಲಿಯೂ, ಶ್ರುತಿ, ಸ್ಮೃತಿ, ಸೂತ್ರಗಳಲ್ಲಿ ಆವುದೊಂದು ಪ್ರಮಾಣವಚನವೂ ದೊರೆತಿಲ್ಲ. ಅತೀಂದ್ರಿಯವಿಷಯದಲ್ಲಿ ಶಬ್ದವೇ ಪ್ರಮಾಣವಾಗಬೇಕಲ್ಲದೆ ಮತ್ತಾವುದೂ ಪ್ರಮಾಣವಾಗಲಾರದು.

ಒಂದುವೇಳೆ ಇಬ್ಬರ ಇಚ್ಛೆಯಿಂದಲೇ ಲಕ್ಷ್ಮಿಗೆ ಶೇಷತ್ವವುಂಟಾಗಿರುವುದೆಂದು ಒಪ್ಪಿದರೂ ಅದು ನಿಯತವಾಗಿ ಲಕ್ಷ್ಮಿಯಲ್ಲಿಯೇ ಉಂಟಾಗಬೇಕೆಂಬ ಲಲಾಟಲಿಪಿಯೇನು? ವ್ಯತ್ಯಸ್ತವಾಗಿ ಈಶ್ವರನೇ ಲಕ್ಷ್ಮಿಗೆ ನಿಯತವಾಗಿಯೂ

ಏತಕ್ಕೆ ಶೇಷಭೂತನಾಗಿರಬಾರದು? ಲಕ್ಷ್ಮಿಗೆ ಇರುವ ಸ್ವಾತಂತ್ರ್ಯವು ಈಶ್ವರ ಸ್ವಾತಂತ್ರ್ಯಕ್ಕೆ ಕಡಮೆಯಾದುದಲ್ಲವಾದುದರಿಂದ ಅವನ ಸ್ವಾತಂತ್ರ್ಯಕ್ಕೆ ಸಮಾನಸ್ವಾತಂತ್ರ್ಯವುಳ್ಳ ಇವಳು ಈಶ್ವರನನ್ನೇ ತನಗೆ ನಿಯತವಾಗಿ ಶೇಷಭೂತನನ್ನಾಗಿ ಮಾಡಿಕೊಳ್ಳದೆ ತಾನೇ ಅವನಿಗೆ ನಿಯತವಾಗಿ ಏತಕ್ಕೆ ಶೇಷಭೂತಳಾದಳೋ ತಿಳಿಯಲಿಲ್ಲ.

ಮತ್ತು ಲಕ್ಷ್ಮಿಯಲ್ಲಿರುವ ಶೇಷತ್ವವು ಉಭಯೇಚ್ಛಾಸಿದ್ಧವೆಂಬುದಕ್ಕೆ ಅವರಿಬ್ಬರೂ ಚೇತನರಾಗಿರುವಿಕೆಯೇ ಅಲ್ಲವೆ ಕಾರಣವು? ಹಾಗಾದರೆ ಸಕಲ ಜೀವವ್ಯಕ್ತಿಯಲ್ಲಿ ಇರುವ ಶೇಷತ್ವವೂ ಜೀವೇಶ್ವರರೆಂಬ ಉಭಯಚೇತನರ ಇಚ್ಛೆಯಿಂದಲೇ ಉಂಟಾಗಬಹುದಾದಕಾರಣ ಜೀವಸಾಮಾನ್ಯಕ್ಕೂ ಶೇಷತ್ವವು ಸ್ವಾಭಾವಿಕವಲ್ಲವೆಂದು ಏತಕ್ಕೆ ಹೇಳಬಾರದು?

ಮತ್ತು ಲಕ್ಷ್ಮಿಗೆ ಜೀವಕೋಟಿಯಲ್ಲಿ ಅಂತರ್ಭಾವವಿಲ್ಲವೆಂಬ ವಿಷಯವು ಅನನ್ಯಥಾಸಿದ್ಧವಾದ ಸ್ಪಷ್ಟತರಪ್ರಮಾಣದಿಂದ ಸಿದ್ಧವಾಗಿದ್ದರಲ್ಲವೆ ಜೀವಲಕ್ಷಣಕ್ಕೆ ಲಕ್ಷ್ಮಿ ಗುರಿಯಾಗುವುದಿಲ್ಲವೆಂದು ಹೇಳಬಹುದು; ಅದೇ ಸಿದ್ಧವಾಗಿಲ್ಲ.

ಮತ್ತು ಲಕ್ಷ್ಮಿಯ ಶೇಷತ್ವವು ಇಬ್ಬರ ಇಚ್ಛೆಯಿಂದಲೇ ಸಿದ್ಧವಾಗಿರುವುದೆಂಬ ವಿಷಯವು ಸ್ಪಷ್ಟವಾದ ಬೇರೊಂದು ಪ್ರಮಾಣದಿಂದ ಸಿದ್ಧವಾದರಲ್ಲವೆ ಈ ಜೀವಲಕ್ಷಣದಲ್ಲಿ ಸ್ವಾಭಾವಿಕಶೇಷತ್ವವನ್ನು ವಿವಕ್ಷೆಮಾಡಿ ಲಕ್ಷ್ಮಿಯಲ್ಲಿ ಅತಿವ್ಯಾಪ್ತಿಯನ್ನು ತಪ್ಪಿಸಬಹುದು? ಅದೇ ಸಿದ್ಧವಾಗಿಲ್ಲ. ಈ ಲಕ್ಷಣದಿಂದಲೇ ಅದನ್ನೂ ಸಿದ್ಧಪಡಿಸುವ ಪಕ್ಷದಲ್ಲಿ ಅನ್ಯೋನ್ಯಾಶ್ರಯದೋಷವುಂಟಾಗುವುದು. ಹೇಗೆಂದರೆ—ಇಚ್ಛೆಯಿಂದ ಶೇಷತ್ವವು ಸಿದ್ಧವಾದರೆ ಈ ಲಕ್ಷಣದಲ್ಲಿ ಸ್ವಾಭಾವಿಕ ಶೇಷತ್ವವಿವಕ್ಷೆಮಾಡಬಹುದು; ಸ್ವಾಭಾವಿಕಶೇಷತ್ವವಿವಕ್ಷೆ ಮಾಡಿದರೆ ಇಚ್ಛೆಯಿಂದ ಶೇಷತ್ವಸಿದ್ಧಿ.

ಮತ್ತು ಈಶ್ವರನಲ್ಲಿರುವ ಶೇಷಿತ್ವವೂ, ಅವನನ್ನು ಕುರಿತು ಶೇಷವೆನಿಸಿಕೊಳ್ಳುವ ಸಕಲಪದಾರ್ಥಗಳಲ್ಲಿಯೂ ಇರುವ ಶೇಷತ್ವವೂ ಸಹ ಆವುದೊಂದು ಕಾರಣದಿಂದಲೂ ಆವುದೊಂದು ಪ್ರಯೋಜನಕ್ಕಾಗಿಯೂ ಉಂಟಾದುದಲ್ಲ. ಕಿಂತು ಅವನಿಗೂ ಅವುಗಳಿಗೂ ಇರುವ ಆ ಶೇಷಶೇಷಿಭಾವವು ಸ್ವರೂಪಪ್ರಯುಕ್ತವಾಗಿಯೇ ಇರುವುದೆಂಬ ಅಂಶವು ಶ್ರೀಪಾಂಚರಾತ್ರದೊಳಗೆ—

"ನಂತವ್ಯಃ ಪರಮಃ ಶೇಷೀ ಶೇಷಾ ನಂತಾರ ಈರಿತಾಃ ।
ನಂತೃನಂತವ್ಯಭಾವೋಽಯಂ ನ ಪ್ರಯೋಜನಪೂರ್ವಕಃ ॥"

ಎಂಬ ಅಹಿರ್ಬುಧ್ನ್ಯಸಂಹಿತಾವಚನದಲ್ಲಿ ಸ್ಪಷ್ಟವಾಗಿರುವುದು. ಪ್ರಸ್ತುತವಾದ ಈ ಶೇಷಶೇಷಿಭಾವವು ಸ್ವಾಭಾವಿಕವಲ್ಲದೆ ಔಪಾಧಿಕವಾಗಿದ್ದಪಕ್ಷದಲ್ಲಿ ಅಂಥ ಶೇಷಶೇಷಿಭಾವದ ಕಾರ್ಯವಾದ ಸಂತೃಸಂತವ್ಯಭಾವವೂ ಔಪಾಧಿಕವೇ ಆಗಬೇಕಾದುದರಿಂದ ಇಲ್ಲಿ ಔಪಾಧಿಕತ್ವಪ್ರತಿಷೇಧಮಾಡಿದುದು ಅಸಂಗತವಾಗುವುದು.

ಈ ವಚನವು ಲಕ್ಷ್ಮೀವ್ಯತಿರಿಕ್ತಸಮಸ್ತಚೇತನವಿಷಯಃವೆಂದು ಸಂಕೋಚಪಡಿಸಲೂ ಆಗುವುದಿಲ್ಲ. ಏತಕ್ಕೆಂದರೆ—ಹಾಗೆ ಸಂಕೋಚಪಡಿಸುವುದಾದರೆ ಆಗ ಲಕ್ಷ್ಮಿಗೆ ಶೇಷಕೋಟಿಯಲ್ಲಿ ಸಂಬಂಧಕ್ಕೆ ಅವಕಾಶವೇ ಇಲ್ಲವಾಗಿ ಶೇಷಿಕೋಟಿಯಲ್ಲಿಯೇ ಅಂತರ್ಭಾವವನ್ನು ಹೇಳಿ—"ಪರಮಃ ಶೇಷೀ" ಎಂಬ ಪದದಿಂದಲೇ ಇವಳಿಗೂ ಸಂಗ್ರಹಣವನ್ನು ಹೇಳಬೇಕಾಗುವುದು. ಆದರೆ ಅದು ಸಂಭವಿಸುವುದಿಲ್ಲ. ಶೇಷತ್ವಾಸಮಾನಾಧಿಕರಣವಾದ (ಶೇಷತ್ವದ ಜತೆಯಲ್ಲಿ ಇಲ್ಲದ) ಶೇಷಿತ್ವವಲ್ಲವೆ ಪರಮಶೇಷಿತ್ವವೆನಿಸಿಕೊಳ್ಳುವುದು. ಲಕ್ಷ್ಮಿಗೆ ಏಕೋನಶೇಷಿತ್ವವೂ, ಈಶ್ವರನೊಬ್ಬನಿಗೇ ಪರಮಶೇಷಿತ್ವವೂ ಉಭಯಸಂಪ್ರದಾಯಸಿದ್ಧವಾದುದರಿಂದ ಪರಮಶೇಷಿಪದವು ಲಕ್ಷ್ಮಿಯನ್ನು ತೋರಿಸಲಾರದಷ್ಟೆ. ಮತ್ತು—

**"ದಾಸಭೂತಾಃ ಸ್ವತಃ ಸರ್ವೇ ಹ್ಯಾತ್ಮಾನಃ ಪರಮಾತ್ಮನಃ"**

ಎಂಬ ವಚನವು ಈಶ್ವರವ್ಯತಿರಿಕ್ತವಾದ ಆತ್ಮಸಾಮಾನ್ಯದಲ್ಲಿಯೂ ಶೇಷತ್ವವು ಸ್ವತಸ್ಸಿದ್ಧವಾಗಿರುವುದೆಂದು ಉದ್ಘೋಷಿಸುತ್ತಿರುವಾಗ ಲಕ್ಷ್ಮಿಯಲ್ಲಿರುವ ಶೇಷತ್ವವು ಮಾತ್ರ ಉಭಯೇಚ್ಛಾಪ್ರಯುಕ್ತವೆಂದು ಹೇಳುವುದು ಪ್ರಮಾಣವಿರುದ್ಧವಾಗಿರುವುದು. ಉಕ್ತವಚನದಲ್ಲಿರುವ ಸರ್ವಶಬ್ದಕ್ಕೆ ಲಕ್ಷ್ಮೀ ವ್ಯತಿರಿಕ್ತಚೇತನವಿಷಯದಲ್ಲಿ ಸಂಕೋಚಕಲ್ಪನೆ ಯುಕ್ತವಲ್ಲವಷ್ಟೆ.

ಮತ್ತು ಅಣುತ್ವವಿಶಿಷ್ಟವಾದ ಜೀವಸ್ವರೂಪಕ್ಕೆ ವಿರುದ್ಧವಾದ ವಿಭುತ್ವವನ್ನು ಪಾಂಚರಾತ್ರದಲ್ಲಿ ಲಕ್ಷ್ಮಿಗೆ ಹೇಳಿರುವುದರಿಂದ ಇವಳನ್ನು ಈಶ್ವರಕೋಟಿಯಲ್ಲೇ ಸೇರಿಸಬೇಕಲ್ಲದೆ ಜೀವಕೋಟಿಯಲ್ಲಿ ಸೇರಿಸಲು ಅವಕಾಶವಿಲ್ಲವೆಂದು ಹೇಳುವುದಾದರೆ—

**ಅಚ್ಛೇದ್ಯೋಽಯಮದಾಹ್ಯೋಽಯಮಕ್ಲೇದ್ಯೋಽಶೋಷ್ಯ ಏವ ಚ । ನಿತ್ಯಃ ಸರ್ವಗತಃ ಸ್ಥಾಣುರಚಲೋಽಯಂ ಸನಾತನಃ ॥**

ಎಂದು ಭಗವದ್ಗೀತೆಯಲ್ಲಿಯೂ—

**ದೇಹೇಂದ್ರಿಯಮನಃಪ್ರಾಣಧೀಭ್ಯೋಽನ್ಯೋಽನನ್ಯಸಾಧನಃ ।**
**ನಿತ್ಯೋ ವ್ಯಾಪೀ ಪ್ರತಿಕ್ಷೇತ್ರಮಾತ್ಮಾ ಭಿನ್ನಃ ಸ್ವತಸ್ಸುಖೀ ॥**

ಎಂದು **ಶ್ರೀಮದ್ಯಾಮುನಾಚಾರ್ಯಸೂಕ್ತಿಯಲ್ಲಿಯೂ ಸರ್ವಗತಃ-ವ್ಯಾಪೀ** ಎಂಬ ಪದಗಳಿಂದ ಜೀವನಿಗೂ ವಿಭುತ್ವವು ಕಂಠೋಕ್ತವಾಗಿರುವಕಾರಣ ಜೀವ ತತ್ತ್ವಕ್ಕೂ ಈಶ್ವರಕೋಟಿಯಲ್ಲೇ ಅಂತರ್ಭಾವವನ್ನು ತುಲ್ಯಯುಕ್ತಿಯಿಂದ ಹೇಳಬೇಕಾಗಿ ಬಂದು—**ಈಶ್ವರತತ್ತ್ವ-ಅಚಿತ್ತತ್ತ್ವ** ಈ ಎರಡೇ ತತ್ತ್ವಗ ಳುಳಿದು ಜೀವತತ್ತ್ವವೇ ಉಚ್ಛಿನ್ನವಾಗುವುದರಿಂದ ತತ್ತ್ವತ್ರಯವೆಂಬ ಸಿದ್ಧಾಂ ತವು ಜೀವಿಸುವ ಬಗೆ ಹೇಗೆ?

ಉಕ್ತವಾದ ಭಗವದ್ಗೀತಾವಚನದಲ್ಲಿಯೂ, ಯಾಮುನಾಚಾರ್ಯವಚನದಲ್ಲಿ ಯೂ ಇರುವ **ಸರ್ವಗತಃ-ವ್ಯಾಪೀ** ಎಂಬ ಪದಗಳಿಗೆ—"**ಸಮಸ್ತವಾದ ಸೂಕ್ಷ್ಮಾಚಿದ್ವಸ್ತುಗಳಲ್ಲಿಯೂ ಪ್ರವೇಶಿಸಲು ಸಾಮರ್ಥ್ಯವುಳ್ಳ ವನು**" ಎಂಬ ಅರ್ಥವನ್ನು ಸ್ವೀಕರಿಸುವುದಾದರೆ ಲಕ್ಷ್ಮಿಗೆ ಇಂಥ ಸಾಮರ್ಥ್ಯವು ದಂಡವಾರಿತವಾಗಿಲ್ಲ; ಪಾಂಚರಾತ್ರದಲ್ಲಿಯೂ ಲಕ್ಷ್ಮಿಯ ವಿಷಯವಾಗಿ ಪ್ರಯೋ ಗಿಸಿರುವ "**ಸರ್ವಗಾ**" ಇತ್ಯಾದಿಪದಕ್ಕೆ ಅದರಂತೆಯೇ ಅರ್ಥವನ್ನು ಏಕೆ ಸ್ವೀಕರಿಸಬಾರದು?

ಪಾಂಚರಾತ್ರದ ಹಾರ್ದಿಕಭಾವವನ್ನು **ಶ್ರೀ ಪರಾಶರಮಹರ್ಷಿಯು** ಶ್ರೀ ವಿಷ್ಣುಪುರಾಣದಲ್ಲಿ—

**"ರಾಘವತ್ವೇಽಭವತ್ಸೀತಾ ರುಕ್ಮಿಣೀ ಕೃಷ್ಣಜನ್ಮನಿ ।**
**ಅನ್ಯೇಷು ಚಾವತಾರೇಷು ವಿಷ್ಣೋರೇಷಾಽನಪಾಯಿನೀ"**
**"ದೇವತ್ವೇ ದೇವದೇಹೇಯಂ ಮನುಷ್ಯತ್ವೇ ಚ ಮಾನುಷೀ ।**
**ವಿಷ್ಣೋರ್ದೇಹಾನುರೂಪಾಂ ವೈ ಕರೋತ್ಯೇಷಾಽಽತ್ಮನಸ್ತನುಂ"**
**"ಯಥಾ ಸರ್ವಗತೋ ವಿಷ್ಣುಸ್ತಥೈವೇಯಂ ದ್ವಿಜೋತ್ತಮ"**

ಇತ್ಯಾದಿವಚನಗಳಿಂದ ಯಥಾವತ್ತಾಗಿ ತೋರಿಸಿರುವರು. ಇದರಿಂದ—ಪಾಂಚ ರಾತ್ರದಲ್ಲಿ ಲಕ್ಷ್ಮಿಗೆ ಉಕ್ತವಾಗಿರುವ ವ್ಯಾಪಕತ್ವವು ವಿಗ್ರಹವ್ಯಾಪ್ತಿಯಿಂದ ಬಂದುದಲ್ಲದೆ ಸ್ವರೂಪವ್ಯಾಪ್ತಿಯಿಂದ ಬಂದುದಲ್ಲವೆಂದು ಸ್ಪಷ್ಟವಾಗಿರುವುದು.

ಮತ್ತು ಲಕ್ಷ್ಮಿಗೆ ಚೈತನ್ಯವಿರುವುದರಿಂದ ಅಚಿತ್ಕೋಟಿಯಲ್ಲಿಯೂ, ವಿಭು ತ್ವವಿರುವುದರಿಂದ ಜೀವಕೋಟಿಯಲ್ಲಿಯೂ, ಈಶ್ವರಪತ್ನೀತ್ವವಿರುವುದರಿಂದ ಈಶ್ವರಕೋಟಿಯಲ್ಲಿಯೂ ಅಂತರ್ಭಾವವನ್ನು ಹೇಳುವುದಕ್ಕೆ ಅವಕಾಶವಿಲ್ಲವಾಗಿ

ಇವಳನ್ನು ನಾಲ್ಕನೆಯ ತತ್ತ್ವವೆಂದು ಹೇಳಬೇಕಾಗಿಬರುವಕಾರಣ ತತ್ತ್ವತ್ರಯ ಸಿದ್ಧಾಂತವು ಭಗ್ನವಾಗುವುದು.—

"ಲಕ್ಷ್ಮೀರ್ನಾಚಿಚ್ಚೇತನತ್ವಾತ್ ನ ಜೀವೋಽಪಿ ವಿಭುತ್ವತಃ।
ನೇಶ್ವರಸ್ತಸ್ಯ ಪತ್ನೀತ್ವಾತ್ ತತ್ತ್ವತ್ರಿತ್ವಂ ಕಥಂ ಭವೇತ್ ॥"

ಆದಕಾರಣ ಲಕ್ಷ್ಮಿಗೆ ಉಭಯೇಚ್ಛಾಸಿದ್ಧವಾದ ಶೇಷತ್ವವೇ ಇರುವುದೆಂಬುದರಲ್ಲಿ ಪ್ರಮಾಣವಿಲ್ಲವಾದಪ್ರಯುಕ್ತ ಸ್ವಾಭಾವಿಕವಾದ ಶೇಷತ್ವವೇ ಅವಳಿಗೂ ಇರುವಕಾರಣ ಈ ದ್ವಿತೀಯಲಕ್ಷಣದಲ್ಲಿ ಸ್ವಾಭಾವಿಕಶೇಷತ್ವವಿವಕ್ಷೆಯನ್ನು ಮಾಡಿದರೂ ಲಕ್ಷ್ಮಿಯಲ್ಲಿಯೂ ಈ ಲಕ್ಷಣವು ವ್ಯಾಪಿಸದೆ ಬಿಡುವುದಿಲ್ಲವಾದುದರಿಂದ ಲಕ್ಷ್ಮಿಗೆ ಜೀವಕೋಟಿಯಲ್ಲಿಯೇ ಅಂತರ್ಭಾವವು ಶಾಸ್ತ್ರಸಿದ್ಧವಾಗುವುದಲ್ಲದೆ ಈಶ್ವರಕೋಟಿಯಲ್ಲಿ ಅಂತರ್ಭಾವಕ್ಕೆ ಅವಕಾಶವಿಲ್ಲ.

ಪರಾಶರಭಟ್ಟಾರ್ಯರ ಸೂಕ್ತಿಗೆ—"ವಿಶಿಷ್ಟವಸ್ತುವಿನಲ್ಲಿ ಅಪೃಥಕ್ಸಿದ್ಧವಿಶೇಷಣವಸ್ತು ಯಾವಾಗಲೂ ಅಂತರ್ಗತವಾಗಿಯೇ ಇರುವುದರಿಂದ ವಿಶಿಷ್ಟವಾಚಕಶಬ್ದದಿಂದಲೇ ಅಂಥ ವಿಶೇಷಣಕ್ಕೂ ಸಂಗ್ರಹಣವಾಗುವುದಾದಪ್ರಯುಕ್ತ ಶ್ರುತಿ ಪ್ರತ್ಯೇಕವಾಗಿ ನಿನ್ನನ್ನು ತೋರಿಸುತ್ತಿಲ್ಲ" ಎಂಬ ತಾತ್ಪರ್ಯವಿರುವುದರಿಂದ ಇದು ಲಕ್ಷ್ಮಿಗೆ ಈಶ್ವರಕೋಟಿಯಲ್ಲಿ ಅಂತರ್ಭಾವವನ್ನು ಹೇಳಲು ಸಾಧಕವಾಗಲಾರದು.—ಇದು ಉಳಿದ ಆಚಾರ್ಯರ ಅಭಿಪ್ರಾಯದ ಸಂಕ್ಷೇಪವಾಗಿದುವುದು.

ಹೀಗೆ ಉಭಯುವಿಧಾಚಾರ್ಯರ ಅಭಿಪ್ರಾಯವನ್ನೂ ಸಂಕ್ಷೇಪವಾಗಿ ಇಲ್ಲಿ ನಾವು ತೋರಿಸಿರುವೆವಾದುದರಿಂದ ಅವರವರ ಸಂಪ್ರದಾಯಕ್ಕೆ ವಿರೋಧಬಾರದಂತೆ ಅವರವರು ಅವುದಾದರೊಂದು ಅಭಿಪ್ರಾಯವನ್ನು ಗ್ರಹಿಸಬಹುದು.

## ೩೦೩. ತೃತೀಯಲಕ್ಷಣಂ.

"ಅಣುವಾಗಿಯೂ, ಅಪೃಥಕ್ಸಿದ್ಧಿಸಂಬಂಧದಿಂದ ಜ್ಞಾನವುಳ್ಳುದಾಗಿಯೂ ಇರುವ ತತ್ತ್ವವು ಜೀವತತ್ತ್ವವೆನಿಸಿಕೊಳ್ಳುವುದು." ಇಲ್ಲಿಯೂ ಈಶ್ವರನನ್ನು ವ್ಯಾವರ್ತಿಸುವುದಕ್ಕಾಗಿ ಪ್ರಥಮದಳವೂ, ತ್ರಸರೇಣುವನ್ನು ವ್ಯಾವರ್ತಿಸುವುದಕ್ಕಾಗಿ ದ್ವಿತೀಯದಳವೂ, ಪುನಃ ವಿಷಯತಾ ಸಂಬಂಧದಿಂದ ಜ್ಞಾನವುಳ್ಳ ತ್ರಸರೇಣುವನ್ನೇ ವ್ಯಾವರ್ತಿಸುವುದಕ್ಕಾಗಿ "ಅಪೃಥಕ್ಸಿದ್ಧಿಸಂಬಂಧದಿಂದ" ಎಂಬ ಪದವೂ ಲಕ್ಷಣದಲ್ಲಿ ಸೇರಿಸಲ್ಪಟ್ಟಿರುವುವು.

## ೩೦೪. ಚತುರ್ಥಲಕ್ಷಣಂ.

“ಆಧೇಯತ್ವವುಳ್ಳುದಾಗಿಯೂ, ಅಪೃಥಕ್ಸಿದ್ಧಿಸಂಬಂಧದಿಂದ ಜ್ಞಾನವುಳ್ಳುದಾಗಿಯೂ ಇರುವ ತತ್ತ್ವವು ಜೀವತತ್ತ್ವವೆನಿಸಿಕೊಳ್ಳುವುದು.” ಇಲ್ಲಿಯೂ ಈಶ್ವರವ್ಯಾವೃತ್ತಿಗಾಗಿ ಪ್ರಥಮದಳವೂ, ಅಚಿತ್ತತ್ತ್ವವ್ಯಾವೃತ್ತಿಗಾಗಿ ದ್ವಿತೀಯದಳವೂ, ಪುನಃ ಅಚಿತ್ತತ್ತ್ವವ್ಯಾವೃತ್ತಿಗಾಗಿ ಅಪೃಥಕ್ಸಿದ್ಧಿಸಂಬಂಧಪದವೂ ಉಕ್ತವಾಗಿರುವುವು.

## ೩೦೫. ಪಂಚಮಲಕ್ಷಣಂ.

“ವಿಧೇಯತ್ವ (ನಿಯಾಮ್ಯತ್ವ) ವುಳ್ಳುದಾಗಿಯೂ, ಅಪೃಥಕ್ಸಿದ್ಧಿಸಂಬಂಧದಿಂದ ಜ್ಞಾನವುಳ್ಳುದಾಗಿಯೂ ಇರುವ ತತ್ತ್ವವು ಜೀವತತ್ತ್ವವೆನಿಸಿಕೊಳ್ಳುವುದು” ದಳಪ್ರಯೋಜನಗಳನ್ನು ನಾಲ್ಕನೆಯ ಲಕ್ಷಣದಲ್ಲಿ ಹೇಳಿದಂತೆಯೇ ತಿಳಿಯಬೇಕು. ಲಕ್ಷ್ಮಿಯನ್ನು ಜೀವಕೋಟಿಯಲ್ಲಿ ಸೇರಿಸದೆ ಈಶ್ವರಕೋಟಿಯಲ್ಲಿ ಸೇರಿಸಲು ಇಷ್ಟಪಡುವವರು ಈ ನಾಲ್ಕನೆಯ ಐದನೆಯ ಲಕ್ಷಣಗಳಲ್ಲಿಯೂ ಪ್ರಥಮದಳದಲ್ಲಿ ಸ್ವಾಭಾವಿಕಪದವನ್ನು ಸೇರಿಸಿ ದ್ವಿತೀಯಲಕ್ಷಣದಂತೆ ಲಕ್ಷ್ಮೀವ್ಯಾವೃತ್ತಿಯನ್ನು ತಿಳಿಯಬೇಕು.

ಇವಳನ್ನು ಈಶ್ವರಕೋಟಿಯಲ್ಲಿ ಸೇರಿಸಲು ಇಷ್ಟಪಡದವರು ದ್ವಿತೀಯಲಕ್ಷಣದಲ್ಲಿ ತೋರಿಸಿದಂತೆಯೇ ಈ ಲಕ್ಷಣಗಳಿಗೂ ಲಕ್ಷ್ಮಿಯಲ್ಲಿ ಸಮನ್ವಯವನ್ನು ಮಾಡಿಕೊಳ್ಳಬೇಕು. ಲಕ್ಷ್ಮಿಯ ಭಗವಚ್ಛೇಷತ್ವವು ಉಭಯೇಚ್ಛಾಸಿದ್ಧವೆಂಬುದರಲ್ಲಿ ಹೇಗೆ ಪ್ರಮಾಣವಿಲ್ಲವೋ ಹಾಗೆಯೇ ಆಧೇಯತ್ವವಿಧೇಯತ್ವಗಳೂ ಇಚ್ಛಾಸಿದ್ಧವೆಂಬುದರಲ್ಲಿ ಪ್ರಮಾಣವಿಲ್ಲವಾದುದರಿಂದ ಶೇಷತ್ವದಂತೆಯೇ ಆಧೇಯತ್ವವಿಧೇಯತ್ವಗಳೂ ಲಕ್ಷ್ಮಿಗೆ ಸ್ವಾಭಾವಿಕಗಳಾಗಿರುವಪ್ರಯುಕ್ತ ಲಕ್ಷಣದಲ್ಲಿ ಸ್ವಾಭಾವಿಕತ್ವವಿವಕ್ಷೆಯನ್ನು ಮಾಡಿದರೂ ಈ ಲಕ್ಷಣಗಳೂ ಲಕ್ಷ್ಮಿಯಲ್ಲಿ ಅಬಾಧಿತವಾಗಿ ಅನ್ವಯಿಸುವುವಾದಕಾರಣ ಜೀವಕೋಟಿಯಲ್ಲಿ ಅಂತರ್ಭಾವವನ್ನು ಇವರೂ ತಿಳಿಯಬಹುದಷ್ಟೆ.

**ಇಂತು ತತ್ತ್ವಶುದ್ಧಿಯೆಂಬ ವಿಶಿಷ್ಟಾದ್ವೈತಪ್ರಕರಣಗ್ರಂಥದೊಳ್ ಜೀವಪರಿಚ್ಛೇದದಲ್ಲಿ ಜೀವಲಕ್ಷಣನಿರೂಪಣಪ್ರಕರಣಂ ಪ್ರಥಮಂ ೧**



# ದ್ವಿತೀಯಪ್ರಕರಣಂ.

---

## ೩೦೬. ಜೀವಸ್ಯ ದೇಹೇಂದ್ರಿಯಾದಿಭ್ಯೋ ವಿಲಕ್ಷಣತ್ವಪ್ರತಿಜ್ಞಾ.

ಇಂಥ ಜೀವಾತ್ಮನು ೧. ದೇಹಕ್ಕಿಂತಲೂ, ೨. ಇಂದ್ರಿಯಗಳಿಗಿಂತಲೂ, ೩. ಮನಸ್ಸಿಗಿಂತಲೂ, ೪. ಪ್ರಾಣಗಳಿಗಿಂತಲೂ, ೫. ಬುದ್ಧಿಗಿಂತಲೂ, (ಧರ್ಮಭೂತಜ್ಞಾನಕ್ಕಿಂತಲೂ) ಭಿನ್ನನಾಗಿರುವನು; ಎಂದರೆ—ವಿಲಕ್ಷಣನಾಗಿರುವನು; ೬. ಮತ್ತು ಸ್ವಯಂಪ್ರಕಾಶನು; ಎಂದರೆ—ಘಟಾದಿಪದಾರ್ಥಗಳಂತೆ ಜ್ಞಾನಾಧೀನವಾದ ಪ್ರಕಾಶವುಳ್ಳವನಲ್ಲ, ತನಗೆ ತಾನೇ ಪ್ರಕಾಶಿಸುವನು. ೭. ಮತ್ತು ವಿನಾಶರಹಿತನಾದುದರಿಂದ ನಿತ್ಯನಾಗಿರುವನು. ೮. ಮತ್ತು ಅತಿಸೂಕ್ಷ್ಮವಾದ ಅಚಿದ್ವಸ್ತುಗಳಲ್ಲಿಯೂ ಪ್ರವೇಶಿಸಲು ಸಾಮರ್ಥ್ಯವುಳ್ಳುವನು; ಎಂದರೆ—ಅವುಗಳಿಗಿಂತಲೂ ಅತಿಸೂಕ್ಷ್ಮನಾಗಿರುವನು. ೯. ಮತ್ತು ಪ್ರತಿಯೊಂದು ಶರೀರದಲ್ಲಿಯೂ ಭಿನ್ನಭಿನ್ನನಾಗಿರುವನು, ಎಂದರೆ ಎಲ್ಲಾ ಶರೀರಗಳಿಗೂ ಒಬ್ಬನೇ ಆತ್ಮನಾಗಿರದೆ ಒಂದೊಂದು ಶರೀರಕ್ಕೆ ಒಬ್ಬೊಬ್ಬನು ಆತ್ಮನಾಗಿರುವನು. ೧೦. ಮತ್ತು ಸ್ವಭಾವದಿಂದಲೇ ಆನಂದಸ್ವರೂಪನಾಗಿರುವನು.

ಈ ಹತ್ತುವಿಷಯಗಳನ್ನೂ ಪರಮಾಚಾರ್ಯರಾದ **ಯಾಮುನಮುನಿಗಳು**—

> **"ದೇಹೇಂದ್ರಿಯಮನಃಪ್ರಾಣಧೀಭ್ಯೋಽನ್ಯೋಽನನ್ಯಸಾಧನಃ |**
> **ನಿತ್ಯೋ ವ್ಯಾಪೀ ಪ್ರತಿಕ್ಷೇತ್ರಮಾತ್ಮಾ ಭಿನ್ನಃ ಸ್ವತಸ್ಸುಖೀ ॥"**

ಎಂಬ ಕಾರಿಕೆಯಲ್ಲಿ ಪ್ರತಿಜ್ಞಾರೂಪವಾಗಿ ತೋರಿಸಿರುವರು. ಈ ಜೀವಪರಿಚ್ಛೇದದ ದ್ವಿತೀಯಪ್ರಕರಣಪ್ರಾರಂಭಮೊದಲುಗೊಂಡು ಪಂಚಮಪ್ರಕರಣದ ಕೊನೆಯವರೆಗೂ ಆಗುವ ನಾಲ್ಕುಪ್ರಕರಣಗಳೂ ಈ **ಯಾಮುನಾರ್ಯರ** ಕಾರಿಕೆಯ ವ್ಯಾಖ್ಯಾನರೂಪವಾಗಿರುವುವು. ಉಕ್ತವಾದ ಹತ್ತುವಿಷಯಗಳೊಳಗೆ ಮೊದಲನೆಯ ಆರು ವಿಷಯಗಳು ಕಾರಿಕೆಯ ಪೂರ್ವಾರ್ಧದಿಂದಲೂ, ಮೇಲಿನ ನಾಲ್ಕು ವಿಷಯಗಳು ಉತ್ತರಾರ್ಧದಿಂದಲೂ ಪ್ರತಿಜ್ಞಾತಗಳಾಗಿರುವುವು. ಇವುಗಳಲ್ಲಿ—ಜೀವನಿಗೆ ದೇಹಭಿನ್ನತ್ವವೆಂಬ ಮೊದಲನೆಯ ವಿಷಯವನ್ನು ದ್ವಿತೀಯಪ್ರಕರಣದಲ್ಲಿಯೂ, ಇಂದ್ರಿಯ, ಮನಃ, ಪ್ರಾಣ, ಭಿನ್ನತ್ವವೆಂಬ ಎರಡು ಮೂರು ನಾಲ್ಕನೆಯ ವಿಷಯಗಳನ್ನು ತೃತೀಯಪ್ರಕರಣದಲ್ಲಿಯೂ, ಧರ್ಮಭೂತಜ್ಞಾನಭಿನ್ನತ್ವವೆಂಬ ಐದ

ನೆಯ ವಿಷಯವನ್ನು ಇದಕ್ಕೆ ಸಂಬದ್ಧವಾದ ಜ್ಞಾತೃತ್ವ, ಕರ್ತೃತ್ವ, ಭೋಕ್ತೃತ್ವ ಗಳೊಡನೆ ಚತುರ್ಥಪ್ರಕರಣದಲ್ಲಿಯೂ, ಸ್ವಯಂಪ್ರಕಾಶತ್ವ, ನಿತ್ಯತ್ವ, ಅಣುತ್ವ, ಪ್ರತಿಶರೀರಭಿನ್ನತ್ವ, ಸ್ವತಸ್ಸುಖಿತ್ವವೆಂಬ ಉಳಿದ ಐದು ವಿಷಯಗಳನ್ನು ಪಂಚಮ ಪ್ರಕರಣದಲ್ಲಿಯೂ ವಿಶದವಾಗಿ ನಿರೂಪಿಸಿ, ಜೀವವಿಷಯದಲ್ಲಿ ಹೇಳಬೇಕಾದ ಅವ ಶಿಷ್ಟಪ್ರಕೀರ್ಣಕವಿಷಯಗಳನ್ನು ಆರನೆಯ ಪ್ರಕರಣದಲ್ಲಿ ವ್ಯಕ್ತಪಡಿಸಿ ಈ ಜೀವ ಪರಿಚ್ಛೇದವನ್ನು ಮುಗಿಸುವೆವು. ಇಂಥ ವೈದಿಕಘಂಟಾಪಥಕ್ಕೆ (ವೈದಿಕರಾಜ ಮಾರ್ಗಕ್ಕೆ) ವಿರುದ್ಧಗಳಾಗಿ ಕಂಟಕಗಳೆನಿಸಿಕೊಂಡಿರುವ ಆ ಆ ದುರ್ಮತಗಳನ್ನು ಆ ಆ ಪ್ರಕರಣಗಳಲ್ಲಿಯೇ ಸಮೂಲವಾಗಿ ಕಿತ್ತುಹಾಕುವುದರಮೂಲಕ ವೈದಿಕ ಮಾರ್ಗಸಂಚಾರಾಪೇಕ್ಷಿಗಳಾದ ಸಾತ್ತ್ವಿಕಜನರಿಗೆ ಮಾರ್ಗಸಂಶೋಧನರೂಪ ವಾದ ಸೇವೆಯನ್ನು ಸಲ್ಲಿಸುವೆವು.

### ೩೦೭. ಪ್ರತಿಜ್ಞಾತಾರ್ಥಸ್ಯೋಪಪಾದನಾರಂಭಃ

ಪೂರ್ವೋಕ್ತವಾದ ಪ್ರತಿಜ್ಞಾವಾಕ್ಯದಲ್ಲಿ **ಇಂಥ ಜೀವಾತ್ಮನು ದೇಹಾದಿಗಳಿಗಿಂತಲೂ ಭಿನ್ನನಾಗಿರುವನು** ಎಂದು ಹೇಳಿರುವ ಇಂಥ ಶಬ್ದದಿಂದ—“ಹಿಂದೆ ಹೇಳಿದ ಜ್ಞಾತೃತ್ವಸಹಿತವಾದ ಲಕ್ಷಣದೊಡನೆ ಕೂಡಿದ ಜೀವಾತ್ಮನು” ಎಂದು ತೋರುವುದು; ಆದುದರಿಂದಲೇ “ಜ್ಞಾತೃತ್ವಕ್ಕೆ ಆಶ್ರಯ ನಾದ ಜೀವನು ಜ್ಞಾತೃತ್ವಕ್ಕೆ ಆಶ್ರಯವಲ್ಲದ ದೇಹಾದಿಗಳಿಗಿಂತಲೂ ಭಿನ್ನನಾಗಿ ರುವನು” ಎಂದು ಪ್ರತಿಜ್ಞಾವಾಕ್ಯದ ತಾತ್ಪರ್ಯವು ಫಲಿಸುವುದು.

### ೩೦೮. ದೇಹಾತ್ಮವಾದಿಚಾರ್ವಾಕಮತೇನ ಪ್ರಥಮಪೂರ್ವಪಕ್ಷಃ

**“ಆತ್ಮತತ್ತ್ವವು ದೇಹವೇಯೋ ಅಥವಾ ದೇಹಕ್ಕಿಂತಲೂ ಭಿನ್ನವಾದುದೋ?”** ಎಂಬ ವಿವಾದವು ಚಾರ್ವಾಕರೆಂಬ ವಾದಿಗಳಿಗೂ ವೇದಾಂತಿಗಳೆಂಬ ಪ್ರತಿವಾದಿಗಳಿಗೂ ಇಲ್ಲಿ ನಡೆವುದು. ಇದರಲ್ಲಿ ವಾದಿಗಳ ಅಭಿ ಪ್ರಾಯವನ್ನು ಮೊದಲು ಚನ್ನಾಗಿ ತಿಳಿದುಕೊಳ್ಳಬೇಕು. ಅವರ ಅಭಿಪ್ರಾಯದಲ್ಲಿ ಮೂರು ಪಕ್ಷಗಳುಂಟೆಂದು ಹೇಳಬಹುದು. ಹೇಗೆಂದರೆ—ದೇಹವೆಂಬುದು ಅನೇಕಾ ವಯವಸಂಘಾತಾತ್ಮಕವಾಗಿರುವುದೆಂಬ ಅಂಶದಲ್ಲಿ ವಾದಿಪ್ರತಿವಾದಿಗಳಿಬ್ಬರಿಗೂ ವಿವಾದವಿಲ್ಲ; ಆದರಲ್ಲಿ “ಕೈ, ಕಾಲು, ತಲೆ ಮುಂತಾದ ಅವಯವಗಳಲ್ಲಿ ಪ್ರತಿ ಯೊಂದರಲ್ಲಿಯೂ ಶಬ್ದಸ್ಪರ್ಶರೂಪರಸಗಂಧಗಳು ಹೇಗೆ ಇರುವುವೋ; ಅದರಂತೆ ಪ್ರತಿಯೊಂದರಲ್ಲಿಯೂ ಚೈತನ್ಯವೂ ಉಂಟೆಂದು ಅಂಗೀಕರಿಸಿ ಅವುಗಳನ್ನೇ ಆತ್ಮ ತತ್ತ್ವಗಳನ್ನಾಗಿ ಹೇಳುವುದರಲ್ಲಿ ಬಾಧಕವೇನೂ ಇರುವುದಿಲ್ಲ.” “ಅಥವಾ ಈ

ಅವಯವಗಳೊಳಗೆ ಯಾವುದಾದರೊಂದು ಅವಯವಕ್ಕೇ ಚೈತನ್ಯವುಂಟೆಂದು ಅಂಗೀಕರಿಸಿ ಅದನ್ನೇ ಆತ್ಮತತ್ತ್ವವನ್ನಾಗಿ ಹೇಳಿದರೂ ಬಾಧಕವೇನೂ ಇರುವುದಿಲ್ಲ" **ಎಂಬುದು ಪ್ರಥಮಪಕ್ಷವಾಗಿರುವುದು.**

## ೩೧೯. ದ್ವಿತೀಯಪೂರ್ವಪಕ್ಷಃ

ಅಥವಾ—ಪ್ರತಿಯೊಂದು ಅವಯವದಲ್ಲಿಯೂ ಚೈತನ್ಯವನ್ನು ಒಪ್ಪಿಕೊಳ್ಳುವುದಾದರೆ ಅತ್ಯಂತಗೌರವವುಂಟಾಗುವುದು; ಯಾವುದಾದರೊಂದು ಅವಯವದಲ್ಲಿ ಚೈತನ್ಯವನ್ನು ಅಂಗೀಕರಿಸುವುದಾದರೆ ವಿನಿಗಮಕವಿಲ್ಲವಾದುದರಿಂದ ಇಂಥ ಅವಯವದಲ್ಲಿಯೇ ಅಂಗೀಕರಿಸಬೇಕೆಂದು ನಿರ್ಣಯವಾಗುವುದಿಲ್ಲ. ಅವಯವಗಳೊಳಗೆ ಪ್ರತಿಯೊಂದರಲ್ಲಿಯೂ ಯದ್ಯಪಿ ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳು ಉಂಟು; ಆದಮಾತ್ರಕ್ಕೆ ಅವುಗಳಂತೆ ಚೈತನ್ಯವನ್ನೂ ಪ್ರತಿಯೊಂದರಲ್ಲಿಯೂ ಅಂಗೀಕರಿಸಿಯೇ ಆಗಬೇಕೆಂಬ ರಾಜಾಜ್ಞೆಯೇನೂ ಇಲ್ಲ. ಆದಕಾರಣ ಲೋಕದಲ್ಲಿ ಹೇಗಾದರೆ ಪ್ರತ್ಯೇಕಪದಾರ್ಥದಲ್ಲಿ ಏಕತ್ವಸಂಖ್ಯೆ ಪ್ರತ್ಯೇಕವಾಗಿದ್ದರೂ— ಏಕತ್ವಸಂಖ್ಯೆಗಿಂತಲೂ ಹೆಚ್ಚಿದ, ದ್ವಿತ್ವ, ತ್ರಿತ್ವ ಮೊದಲಾಗಿ ಪರಾರ್ಧಪರ್ಯಂತವಾದ ಸಂಖ್ಯೆಗಳೊಳಗೆ ದ್ವಿತ್ವಸಂಖ್ಯೆ ಒಂದೇ ಪದಾರ್ಥದಲ್ಲಿರದೆ ಎರಡುಪದಾರ್ಥಗಳನ್ನು ತನಗೆ ಆಶ್ರಯಗಳನ್ನಾಗಿಮಾಡಿಕೊಂಡೇ ಇರುವುದೋ; ತ್ರಿತ್ವಸಂಖ್ಯೆಯೂ ಒಂದೇ ಪದಾರ್ಥದಲ್ಲಿರದೆ ಎರಡೇ ಪದಾರ್ಥಗಳಲ್ಲಿಯೂ ಇರದೆ ಮೂರು ಪದಾರ್ಥಗಳನ್ನು ತನಗೆ ಆಶ್ರಯಗಳನ್ನಾಗಿಮಾಡಿಕೊಂಡೇ ಇರುವುದೋ; ಎಂದರೆ, ಆ ಆ ಸಂಖ್ಯೆ ಅಷ್ಟಷ್ಟು ಪದಾರ್ಥಗಳಲ್ಲಿ ಪ್ರತ್ಯೇಕವಾಗಿರದೆ ಸಮುದಾಯದಲ್ಲಿ ಹೇಗೆ ಇರುವುದೋ; ಆದರಂತೆಯೇ ಶರೀರದಲ್ಲಿರುವ ಎಲ್ಲಾ ಅವಯವಗಳನ್ನೂ ಒಟ್ಟಾಗಿ ಕೂಡಿಸಿದರೆ ಆಗ ತೋರಿಬರುವ ಅವುಗಳ ಸಮುದಾಯದಲ್ಲಿ ಒಂದು ಚೈತನ್ಯವಿರುವುದೆಂದು ಅಂಗೀಕರಿಸಿದರೆ ಈ ಪಕ್ಷವು ಮೊದಲು ಹೇಳಿದ ಗೌರವದೋಷದಿಂದ ದೂಷಿತವಾಗಲಾರದು **ಎಂಬುದು ದ್ವಿತೀಯಪಕ್ಷವಾಗಿರುವುದು.**

## ೩೧೦. ತೃತೀಯಪೂರ್ವಪಕ್ಷಃ

"ಅಥವಾ ಅನೇಕವಾದ ಅವಯವಗಳು ಸೇರಿ ಒಂದು ಅವಯವಿಯುಂಟಾಗುವುದು. ಆದುದರಿಂದ ಕಾರಣವಾದ ಅವಯವಗಳ ಕಾರ್ಯವಾಗಿಯೂ, ಕಾರಣವಾದ ಅವಯವಗಳಿಗಿಂತಲೂ ಭಿನ್ನವಾಗಿಯೂ ಇರುವ ಅವಯವಿಯೆಂಬುದರಲ್ಲಿ ಎಂದರೆ, ಕೈ, ಕಾಲು, ತಲೆ ಮೊದಲಾದ ಅವಯವಗಳಿಂದ ಜನಿತವಾಗಿ ಅವುಗಳಿಗಿಂ

ತಲೂ ವಿಲಕ್ಷಣವಾದ ಅವಯುವಿಯಲ್ಲಿ ಚೈತನ್ಯವನ್ನು ಒಪ್ಪಿಕೊಳ್ಳುವುದಾದರೂ ಈ ಪಕ್ಷವೂ ಪೂರ್ವೋಕ್ತವಾದ ದೋಷದಿಂದ ದೂಷಿತವಾಗಲಾರದು. ಏತಕ್ಕೆಂದರೆ, ಅಷ್ಟೊಂದು ಅವಯವಗಳೂ ಸೇರಿ ಒಂದೇ ಅವಯುವಿಯನ್ನು ಉಂಟು ಮಾಡುವುವಾದುದರಿಂದ ಇಂಥ ಒಂದೇ ಅವಯುವಿಯಲ್ಲಿ ಒಂದೇ ಚೈತನ್ಯವನ್ನು ಅಂಗೀಕರಿಸುವೆವಷ್ಟೆ? **“ದೇವೋऽಹಂ ಮನುಷ್ಯೋऽಹಂ ಸ್ಥೂಲೋऽಹಂ ಕೃಶೋऽಹಂ”** ಎಂದು ಅಬಾಧಿತವಾಗಿ ಎಲ್ಲರಿಗೂ ಉಂಟಾಗುವ ಆತ್ಮ ಸಾಕ್ಷಿಕವಾದ ದೇಹಾತ್ಮಾಭೇದಾನುಭವಪ್ರತ್ಯಕ್ಷವೇ ಈ ಮೂರು ಪಕ್ಷಗಳಿಗೂ ಮೂಲಸ್ತಂಭದಂತೆ ದೃಢತರವಾದ ಪ್ರಮಾಣವಾಗಿರುವುದು. ಈ ವಿಷಯವನ್ನು ಮುಂದೆ ಸ್ವಲ್ಪದೂರದಲ್ಲಿಯೇ ವಿಶದಪಡಿಸುವೆವು; **ಎಂಬುದು ಮೂರನೆಯ ಪಕ್ಷವಾಗಿರುವುದು.**

## ೩೧೧. ಪ್ರಥಮಪೂರ್ವಪಕ್ಷನಿರಾಕರಣಂ.

ಇವರಲ್ಲಿ **ಪ್ರಥಮಪಕ್ಷವು ಸಂಗತವಲ್ಲ.** ಏತಕ್ಕೆಂದರೆ, ಪ್ರತಿಯೊಂದು ಅವಯುವವನ್ನೂ ಒಂದೊಂದು ಆತ್ಮತತ್ತ್ವವನ್ನಾಗಿ ಒಪ್ಪಿಕೊಳ್ಳುವುದಾದರೆ ಅನೇಕವಾದ ಅವಯುವಗಳೊಡನೆ ಕೂಡಿರುವ ಈ ನಮ್ಮ ಶರೀರದಲ್ಲಿ ಅನೇಕವಾದ ಆತ್ಮತತ್ತ್ವಗಳಿರುವುವೆಂದೂ, ಅವೆಲ್ಲವೂ ಈ ಶರೀರವೆಂಬ ಯಂತ್ರವನ್ನು ನಡಸುವುದಕ್ಕೆ ಅಧಿಪತಿಗಳಾಗಿರುವುವೆಂದೂ ಒಪ್ಪಿದಂತಾಗುವುದು; ಆಗ ಭಿನ್ನಭಿನ್ನವಾದ ಶರೀರಗಳಲ್ಲಿರುವ ಭಿನ್ನಭಿನ್ನವಾದ ಆತ್ಮಗಳಿಗೆ ಪರಸ್ಪರ ಭಿನ್ನಾಭಿಪ್ರಾಯವುಂಟಾಗುವಂತೆ ಈ ಒಂದೇ ಶರೀರದಲ್ಲಿರುವ ಭಿನ್ನಭಿನ್ನವಾದ ಆತ್ಮಗಳಿಗೂ ಪರಸ್ಪರ ಭಿನ್ನಾಭಿಪ್ರಾಯವುಂಟಾಗಬೇಕು. ಹೇಗೆಂದರೆ, ಒಂದು ಗ್ರಾಮಕ್ಕೆ ಹತ್ತುಮಂದಿ ಪಟೇಲರು ಅಧಿಪತಿಗಳಾಗಿರುವರಾದರೆ, ಆ ಗ್ರಾಮದ ಕೆಲಸವನ್ನು ನಡಸುವುದಕ್ಕಾಗಿ ಒಬ್ಬ ಪಟೇಲನು ಒಂದು ಆಜ್ಞೆಯನ್ನು ಮಾಡುವಕಾಲದಲ್ಲಿ ಉಳಿದ ಒಂಬತ್ತುಮಂದಿ ಪಟೇಲರೂ ಆ ಆಜ್ಞೆಯನ್ನೇ ಅನುಸರಿಸುವರೆಂದು ಹೇಳಲಾಗುವುದಿಲ್ಲ. ಪ್ರತ್ಯುತ ಅವರಲ್ಲಿ ಭಿನ್ನಾಭಿಪ್ರಾಯಗಳೇ ಲೋಕದಲ್ಲಿ ಕಂಡುಬರುವುದರಿಂದ ಆ ಗ್ರಾಮದಲ್ಲಿ ಆವುದೊಂದು ಕೆಲಸವೂ ಹೇಗೆ ಜರುಗುವುದಿಲ್ಲವೋ; ಅದರಂತೆ ಈ ಶರೀರಕ್ಕೆ ಅಧಿಪತಿಗಳಾಗಿ ಇದರಲ್ಲಿರುವ ಅನೇಕ ಆತ್ಮತತ್ತ್ವಗಳಿಗೂ ಭಿನ್ನಾಭಿಪ್ರಾಯವುಂಟಾಗಿ ಈ ಶರೀರದಲ್ಲಿ ಆವುದೊಂದು ಕೆಲಸವೂ ನಡೆಯಕೂಡದು. ತಲೆಯೆಂಬ ಆತ್ಮನಿಗೆ ಈ ಶರೀರವನ್ನು ಮತ್ತೊಂದುಸ್ಥಳಕ್ಕೆ ಸಂಚಾರ ಪಡಿಸಬೇಕೆಂದು ಇಚ್ಛೆಯುಂಟಾದಕಾಲದಲ್ಲಿ ಕಾಲೆಂಬ ಆತ್ಮನಿಗೆ ಅದಕ್ಕೆ ವಿರುದ್ಧ

ವಾದ ಅಭಿಪ್ರಾಯವುಂಟಾದರೆ ಆಗ ಈ ಶರೀರವು ಮುಂದಕ್ಕೂ ಹೋಗಲಾರದೆ ಅಲ್ಲಿಯೂ ನಿಲ್ಲಲಾರದೆ ತತ್ತರಿಸಬೇಕಲ್ಲವೆ? ಆದರೆ ಈ ಶರೀರದಲ್ಲಿ ಹಾಗೆ ಭಿನ್ನಾಭಿಪ್ರಾಯವಾಗಲಿ ಅದರಿಂದ ಉಂಟಾಗುವ ತೊಂದರೆಯಾಗಲಿ ಯಾವಾಗಲೂ ಉಂಟಾಗುವುದೇ ಇಲ್ಲ. ಸರ್ವಕಾಲದಲ್ಲಿಯೂ ಒಂದೊಂಡೇ ಅಭಿಪ್ರಾಯವನ್ನೂ, ಅದಕ್ಕೆ ತಕ್ಕಂತೆಯೇ ಕೆಲಸಗಳು ನಡೆವುತ್ತಿರುವುದನ್ನೂ ನಾವು ಪ್ರತ್ಯಕ್ಷವಾಗಿ ನೋಡುತ್ತಲೇ ಇರುವೆವು.

ಮತ್ತು "**ನನ್ನಮನೆ--ನನ್ನಬಟ್ಟೆ-ನನ್ನಹೊಲ--ನನ್ನತೋಟ**" ಎಂಬುವ ಸ್ಥಳಗಳಲ್ಲಿ "**ನನ್ನ**" ಎಂದು ಹೇಳಿಕೊಳ್ಳುವ ಆತ್ಮನಿಗಿಂತಲೂ ಮನೆ ಮುಂತಾದುದು ಭಿನ್ನವಾಗಿಯೇ ಇರುವುದಲ್ಲದೆ ಆತ್ಮನೇ ಆಗಿಲ್ಲ. ಹಾಗಿರುವಪಕ್ಷದಲ್ಲಿ "**ನಾನು ಮನೆ-ನಾನು ಬಟ್ಟೆ**" ಇತ್ಯಾದಿವ್ಯವಹಾರಗಳನ್ನು ಮಾಡಬೇಕಾಗಿದ್ದಿತಲ್ಲದೆ, "**ನನ್ನ ಮನೆ**" ಇತ್ಯಾದಿಭೇದವ್ಯವಹಾರವನ್ನು ಮಾಡಲಾಗುತ್ತಿರಲಿಲ್ಲ. ಅದರಂತೆಯೇ ಈ ಶರೀರದಲ್ಲಿಯೂ "**ನನ್ನ ತಲೆ--ನನ್ನ ಕಾಲು-ನನ್ನ ಕೈ-ನನ್ನ ಹೊಟ್ಟೆ**" ಇತ್ಯಾದಿವ್ಯವಹಾರಗಳು ಅಬಾಧಿತವಾಗಿ ನಡೆವುತ್ತಿರುವುದರಿಂದ "**ನನ್ನ**" ಎಂದು ಹೇಳಿಕೊಳ್ಳುವ ಆತ್ಮನಿಗಿಂತಲೂ ತಲೆ ಮುಂತಾದ ಅವಯವಗಳು ಭಿನ್ನವಾಗಿರಬೇಕಲ್ಲದೆ ಆತ್ಮನೇ ಆಗಿರುವುದಕ್ಕಿಲ್ಲ. ಹಾಗಿರುವಪಕ್ಷದಲ್ಲಿ "**ನಾನು ತಲೆ-ನಾನು ಕಾಲು**" ಎಂದು ಹೇಳಬೇಕಲ್ಲದೆ, "**ನನ್ನ ತಲೆ**" ಇತ್ಯಾದಿಭೇದವ್ಯವಹಾರವನ್ನು ಮಾಡಲಾಗುತ್ತಿರಲಿಲ್ಲ. ಆದಕಾರಣ ಅವಯವಗಳಿಗಿಂತಲೂ ಭಿನ್ನನಾದ ಒಬ್ಬ ಆತ್ಮನನ್ನು ಈ ಶರೀರದಲ್ಲಿ ಒಪ್ಪಿಕೊಂಡರಲ್ಲದೆ ಹಿಂದೆ ಹೇಳಿದುದೆಲ್ಲಾ ಸಮಂಜಸವಾಗುವುದಿಲ್ಲ.

ಮತ್ತು ಯಾವುದಾದರೊಂದು ಅವಯವವನ್ನೇ ಆತ್ಮನನ್ನಾಗಿ ಅಂಗೀಕರಿಸುವುದಾದರೆ, ಆ ಅವಯವವು ಛೇದಿಸಲ್ಪಟ್ಟಾಗ ಶರೀರದಲ್ಲಿ ಆತ್ಮನಿಲ್ಲದೆ ಹೋಗಬೇಕು. ಅದೂ ಅಲ್ಲದೆ ಆ ಅವಯವವೆಂಬ ಆತ್ಮನು ಹಿಂದೆ ಅನುಭವಿಸಿದ್ದುದನ್ನು ಆ ಅವಯವವು ನಷ್ಟವಾದಮೇಲೆ ಮತ್ತೊಬ್ಬನು ಈ ಶರೀರದಲ್ಲಿ ಸ್ಮರಿಸಕೂಡದು. ಮತ್ತೊಬ್ಬನು ಅನುಭವಿಸಿದುದನ್ನು ಇನ್ನೊಬ್ಬನು ಸ್ಮರಿಸಲಾರನಷ್ಟೆ? ಯಾವುದೊಂದು ಅವಯವವೂ ತನ್ನನ್ನು "**ನಾನು**" ಎಂಬುದಾಗಿ ತಿಳಿದುಕೊಳ್ಳುವುದಿಲ್ಲವಾದುದರಿಂದ ಅವಯವರೂಪನಾದ ಆತ್ಮನೂ ಸಹ ತನ್ನನ್ನು "**ನಾನು**" ಎಂಬುದಾಗಿ ತಿಳಿಯಲೂ ವ್ಯವಹರಿಸಲೂ ಕೂಡದು. ಮತ್ತು ಆ ಆ ಅವಯವಗಳನ್ನು "**ನನ್ನದು**" ಎಂಬುದಾಗಿ ತಿಳಿಯಲೂ ವ್ಯವಹರಿಸಲೂ ಕೂಡದು.

ಮತ್ತು ಯಾವ ಅವಯುವವನ್ನು ಆತ್ಮನನ್ನಾಗಿ ಒಪ್ಪಿಕೊಳ್ಳುತ್ತೀರೋ ಅದಕ್ಕಿಂತಲೂ ಇತರವಾದ ಅವಯುವದಲ್ಲಿ ಉಂಟಾಗುವ ಸುಖದುಃಖಗಳನ್ನು ಈ ಆತ್ಮನು ತಿಳಿಯಕೂಡದು. ಶರೀರದ ಸರ್ವಭಾಗಗಳಲ್ಲಿಯೂ ಉಂಟಾಗುವ ಸುಖ ದುಃಖಗಳನ್ನು ಆತ್ಮನು ತಿಳಿದುಕೊಳ್ಳುತ್ತಲೇ ಇರುವನೆಂಬುದನ್ನಾದರೆ ನಾವು ಆತ್ಮಸಾಕ್ಷಿಯಾಗಿ ಅನುಭವಿಸುತ್ತಲೇ ಇರುವೆವು. **ಆದಕಾರಣ ಪ್ರಥಮ ಪಕ್ಷವು ಸಂಗತವಲ್ಲ.**

## ೩೧೨. ದ್ವಿತೀಯಪೂರ್ವಪಕ್ಷನಿರಾಕರಣಂ.

ಇದರಂತೆಯೇ "**ಅವಯುವಸಮುದಾಯದಲ್ಲಿ ಒಂದು ಚೈತನ್ಯ ವಿರುವುದೆಂಬ ದ್ವಿತೀಯಪಕ್ಷವೂ ಸಮಂಜಸವಲ್ಲ.**" ಏತಕ್ಕೆಂದರೆ. ಅವಯುವಸಮುದಾಯದಲ್ಲಿ—ಚೈತನ್ಯಕ್ಕೆ ಬದಲಾಗಿ ಚೈತನ್ಯಾಭಾವವೇ ಅನುಮಾನ ಪ್ರಮಾಣದಿಂದ ಸಿದ್ಧಿಸುವುದು. ಹೇಗೆಂದರೆ, ವಿವಾದಾಸ್ಪದವಾದ ಅವಯುವಸಮು ದಾಯವು ಚೇತನಭಿನ್ನವಾಗಿರುವುದು; ಎಂದರೆ—ಚೇತನವಾಗಲಾರದು, ಯಾವ ಕಾರಣದಿಂದ? ಸಂಘಾತಾತ್ಮಕವಾಗಿರುವುದರಿಂದ, ರೂಪವುಳ್ಳುದಾಗಿರುವುದ ರಿಂದ, ಬಹಿರಿಂದ್ರಿಯಕ್ಕೆ ಗೋಚರವಾಗಿರುವುದರಿಂದ. ಯಾವುದು ಸಂಘಾತಾತ್ಮ ಕವಾಗಿಯೂ ರೂಪವುಳ್ಳುದಾಗಿಯೂ ಬಹಿರಿಂದ್ರಿಯಕ್ಕೆ ಗೋಚರವಾದುದಾಗಿ ಯೂ ಇರುವುದೋ ಅದು ಚೇತನಭಿನ್ನವಾಗಿರುವುದೆಂಬುದನ್ನು ಘಟಾದಿ ದೃಷ್ಟಾಂತಗಳಲ್ಲಿ ಕಾಣಬಹುದು; ಅವಯುವಸಮುದಾಯದಲ್ಲಿಯೂ ಈ ಹೇತು ಗಳಿರುವುದರಿಂದ ಘಟಾದಿಗಳಂತೆ ಇದರಲ್ಲಿಯೂ ಚೈತನ್ಯಾಭಾವವು ಸಿದ್ಧಿಸುವು ದಲ್ಲದೆ ಚೈತನ್ಯಸದ್ಭಾವಕ್ಕೆ ಅವಕಾಶವಿಲ್ಲ.

ಪ್ರತ್ಯಕ್ಷವೆಂಬ ಒಂದೇ ಪ್ರಮಾಣವನ್ನು ಅವಲಂಬಿಸಿರುವ ಚಾರ್ವಾಕ ಮತದವರನ್ನು ಕುರಿತು ಅನುಮಾನಪ್ರಮಾಣೋಪನ್ಯಾಸವು ಹೇಗೆ ಸಂಗತವಾದೀ ತೆಂದು ಚಿಂತಿಸಬಾರದು. ಚಾರ್ವಾಕಮತದಲ್ಲಿಯೇ ಕೆಲವರು "**ಅಥ ಲೋಕಾ ಯತಂ**" ಎಂಬ ಸ್ಥಳದಲ್ಲಿ ಆಯತಶಬ್ದದಿಂದ ಅನುಮಾನಪ್ರಮಾಣವನ್ನೂ ಒಪ್ಪಿರುವರಾದಕಾರಣ ಅಂಥವರನ್ನು ಕುರಿತು ಅನುಮಾನಪ್ರಮಾಣೋಪನ್ಯಾಸವು ಸಂಗತವಷ್ಟೆ?

ಅಥವಾ "**ವ್ಯಾಪಕವಿಲ್ಲದಿದ್ದರೆ ವ್ಯಾಪ್ಯವಿರುವುದಿಲ್ಲ**" ಎಂಬ ತರ್ಕರೂಪವಾದ ಯುಕ್ತಿಯನ್ನೇ ಇಲ್ಲಿ ಉಪನ್ಯಾಸಮಾಡಿರುವೆವಲ್ಲದೆ ಅನುಮಾನ ಪ್ರಮಾಣೋಪನ್ಯಾಸವನ್ನು ಮಾಡಲಿಲ್ಲವೆಂದೂ ಸಮಾಧಾನವನ್ನು ಹೇಳಬಹುದು.

ಹೇಗೆಂದರೆ, ಯಾವುದರಲ್ಲಿ ಸಂಘಾತತ್ವವೂ, ರೂಪವತ್ತ್ವವೂ, ಬಹಿರಿಂದ್ರಿಯ ಗೋಚರತ್ವವೂ ಇರುವುದೋ ಅದರಲ್ಲಿ ಚೈತನ್ಯಾಭಾವವೇ ಇರುವುದೆಂಬ ವ್ಯಾಪ್ತಿಯನ್ನು ಘಟಾದಿಪದಾರ್ಥಗಳಲ್ಲಿ ನಾವು ಕಂಡಿರುವೆವು. ಇಲ್ಲಿ ಸಂಘಾತತ್ವ ಮೊದಲಾದ ಮೂರು ಧರ್ಮಗಳೂ ವ್ಯಾಪ್ಯಗಳಾಗಿಯೂ ಚೈತನ್ಯಾಭಾವವು ವ್ಯಾಪಕವಾಗಿಯೂ ಇರುವುದರಿಂದ ಅವಯುವಸಮುದಾಯದಲ್ಲಿ ಚೈತನ್ಯವನ್ನು ಅಂಗೀಕರಿಸುವ ಪಕ್ಷದಲ್ಲಿ ಚೈತನ್ಯಾಭಾವವೆಂಬ ವ್ಯಾಪಕಧರ್ಮವಿಲ್ಲವಾದಕಾರಣ ಸಂಘಾತತ್ವ ಮೊದಲಾದ ವ್ಯಾಪ್ಯಧರ್ಮಗಳೂ ಇಲ್ಲದೇ ಇರಬೇಕಾಗುವುದು. ಈ ಧರ್ಮಗಳಾದರೆ ಅವಯುವಸಮುದಾಯದಲ್ಲಿ ಪ್ರತ್ಯಕ್ಷಸಿದ್ಧವಾಗಿರುವುವು. ಆದಕಾರಣ ಅದರಲ್ಲಿ ಚೈತನ್ಯಾಭಾವವೇ ಸಿದ್ಧಿಸುವುದಲ್ಲದೆ ಚೈತನ್ಯಸದ್ಭಾವಕ್ಕೆ ಅವಕಾಶವಿಲ್ಲ.

ಮತ್ತು ಸಂಪೂರ್ಣಾವಯುವಸಮುದಾಯದಲ್ಲಿ ಚೈತನ್ಯವು ಪರ್ಯಾಪ್ತಿ ಸಂಬಂಧದಿಂದ ಇರುವುದೆಂದು ಹೇಳುವುದಾದರೆ ಒಂದು ಬೆರಳು ಕತ್ತರಿಸಿಹೋದಾಗ ಸಂಪೂರ್ಣಸಮುದಾಯವಿಲ್ಲವಾದಕಾರಣ ಅದರಲ್ಲಿ ಚೈತನ್ಯವಿರಕೂಡದು. ಆದರೆ, ಬೆರಳು ಇಲ್ಲದಿದ್ದರೂ ಮನುಷ್ಯಾದಿಪ್ರಾಣಿಗಳು ಚೈತನ್ಯದೊಡನೆ ಕೂಡಿ ಜೀವಿಸುತ್ತಿರುವುದನ್ನು ಎಲ್ಲರೂ ಪ್ರತ್ಯಕ್ಷದಲ್ಲಿ ನೋಡುತ್ತಿರುವರು. **ಆದಕಾರಣ ದ್ವಿತೀಯಪಕ್ಷವೂ ಸಮಂಜಸವಲ್ಲ.**

### ೩೧೩. ತೃತೀಯಪೂರ್ವಪಕ್ಷನಿರಾಕರಣಂ.

ಇದರಂತೆಯೇ **"ಅವಯವಾತಿರಿಕ್ತವಾದ ಒಂದೇ ಅವಯವಿಯಲ್ಲಿ ಒಂದೇ ಚೈತನ್ಯವನ್ನು ಸ್ವೀಕರಿಸುವೆವು." ಎಂಬ ತೃತೀಯಪಕ್ಷವೂ ಯುಕ್ತವಲ್ಲ.** ಏತಕ್ಕೆಂದರೆ, ಚಾರ್ವಾಕಮತದಲ್ಲಿ ಅವಯುವಾತಿರಿಕ್ತವಾದ ಅವಯುವಿಯೆಂಬ ಒಂದು ವಸ್ತುವೇ ಇಲ್ಲ. ನೈಯಾಯಿಕಮತದವರು ಅವಯುವಾತಿರಿಕ್ತವಾದ ಅವಯುವಿಯೆಂಬ ಒಂದು ಪದಾರ್ಥವನ್ನು ಒಪ್ಪಿಕೊಂಡರೂ, ತ್ರಸರೇಣುಗಳ ಪುಂಜವೇ ಘಟಾದಿಪದಾರ್ಥಗಳಾಗಿ ಪರಿಣಮಿಸುವುದೆಂದು ಹೇಳುವ ಚಾರ್ವಾಕರ ಮತದಲ್ಲಿಯೇ ಅವಯುವಿಯೆಂಬ ಅತಿರಿಕ್ತವಸ್ತು ಖಂಡಿಸಲ್ಪಟ್ಟಿರುವುದಷ್ಟೆ?

ಒಂದುವೇಳೆ ಅವಯುವಕಾರ್ಯವಾದ ಅವಯುವಿಯೆಂಬ ಅತಿರಿಕ್ತಪದಾರ್ಥವೊಂದನ್ನು ಸ್ವೀಕರಿಸಿದರೂ ಅದರಲ್ಲಿ ಚೈತನ್ಯವೆಂಬ ಗುಣವುಂಟಾಗಲು ಅವಕಾಶವಿಲ್ಲ. ಕಾರಣವಾದ ಅವಯುವಗಳಲ್ಲಿ ಇರುವ ಗುಣವೇ ಕಾರ್ಯವಾದ ಅವಯುವಿಯಲ್ಲಿ ಬರಬಹುದಲ್ಲದೆ ಕಾರಣದಲ್ಲಿ ಇಲ್ಲದ ಗುಣವು ಕಾರ್ಯದಲ್ಲಿ ಬರಲಾರದಷ್ಟೆ? ಈ ತೊಂದರೆ

ಯನ್ನು ಪರಿಹರಿಸುವುದಕ್ಕಾಗಿ ಕಾರಣವಾದ ಅವಯವಗಳಲ್ಲಿಯೂ ಚೈತನ್ಯವನ್ನು ಒಪ್ಪಿಕೊಳ್ಳುವುದಾದರೆ ಪ್ರಥಮಪಕ್ಷದಲ್ಲಿ ಹೇಳಿದ ಭಿನ್ನಾಭಿಪ್ರಾಯತ್ವ ಮುಂತಾದ ದೋಷಗಳು ಪುನಃ ತಲೆದೋರುವುವು.

ಪೂಜ್ಯರೇ ? "ಕಾರಣಗತವಾದ ಗುಣವೇ ಕಾರ್ಯದಲ್ಲಿ ಬರಬೇಕೆಂಬ ನಿರ್ಬಂಧವಿಲ್ಲ; ಅದರಲ್ಲಿ ಇಲ್ಲದ ಗುಣವೂ ಕಾರ್ಯದಲ್ಲಿ ಬರಬಹುದು. ನೈಯಾಯಿಕರು ಹೇಳುವಂತೆ ಪೀಲುಪಾಕಪ್ರಕ್ರಿಯೆಯಲ್ಲಿ ಕಾರಣಗುಣವೇ ಕಾರ್ಯದಲ್ಲಿ ಇರುವುದೆಂದು ಕಂಡುಬಂದರೂ, ಅದೇ ನೈಯಾಯಿಕರು ಹೇಳುವ ಪಿಠರಪಾಕವೆಂಬ ಮತ್ತೊಂದು ಪ್ರಕ್ರಿಯೆಯಲ್ಲಿ—ಕಾರಣದಲ್ಲಿ ಇಲ್ಲದ ಗುಣವೂ ಕಾರ್ಯದಲ್ಲಿ ಬರಬಹುದು. ಮಾವಿನ ಬೀಜವು ವೃಕ್ಷವಾಗಿ ಪರಿಣಮಿಸಿದ ಮೇಲೆ ಕಾರಣವಾದ ಬೀಜದಲ್ಲಿ ಸೂಕ್ಷ್ಮರೂಪವಾಗಿ ಅಡಗಿ ಇದ್ದ ಗುಣಗಳೇ ಕಾರ್ಯವಾದ ವೃಕ್ಷದಲ್ಲಿ ಕಂಡು ಬಂದರೂ, ಕಪ್ಪುಬಣ್ಣವುಳ್ಳ ಮೃತ್ಪಿಂಡವು ಘಟಾಕಾರವಾಗಿ ಪರಿಣಮಿಸಿದ ಮೇಲೆ ಆ ಘಟವನ್ನು ಆವಿಗೆಯಲ್ಲಿ ಇಟ್ಟು ಚನ್ನಾಗಿ ಸುಟ್ಟು ಅನಂತರದಲ್ಲಿ ತೆಗೆದು ನೋಡಿದರೆ, ಅದರಲ್ಲಿ ಕೆಂಪುಬಣ್ಣವು ಕಾಣುವುದು. ಈ ಕೆಂಪುಬಣ್ಣವು ಕಾರಣವಾದ ಮೃತ್ಪಿಂಡದಲ್ಲಿ ಇರಲಿಲ್ಲವಾದರೂ ಪಾಕವಿಶೇಷದಿಂದ ಕಾರ್ಯವಾದ ಘಟದಲ್ಲಿಯೇ ಉಂಟಾಗಿರುವುದಲ್ಲವೆ? ಅದರಂತೆ ಕಾರಣವಾದ ಅವಯವಗಳಲ್ಲಿ ಚೈತನ್ಯವಿಲ್ಲದಿದ್ದರೂ ಅವುಗಳ ಪರಿಣಾಮವಿಶೇಷದಿಂದ ಅವಯವಿಯೆಂಬ ಕಾರ್ಯದಲ್ಲಿಯೇ ಚೈತನ್ಯಗುಣವುಂಟಾಗಲು ತಡೆಯೇನು" ಎಂದು ಆಶಂಕಿಸಬಾರದು.

ಏತಕ್ಕೆಂದರೆ, ಪಾಕವಿಶೇಷದಿಂದ ರೂಪವುಂಟಾಗುವಾಗ ಘಟವೆಂಬ ಅವಯವಿಯಲ್ಲಿ ಮಾತ್ರವೇ ರೂಪವುಂಟಾಗುವುದಿಲ್ಲ. ಕಾರಣವಾದ ಘಟಾವಯವಗಳಲ್ಲಿಯೂ ರಕ್ತರೂಪವುಂಟಾಗುವುದು. ಇದರಂತೆ ಅವಯವಗಳ ಪರಿಣಾಮವಿಶೇಷವಾದ ಅವಯವಿಯಲ್ಲಿ ಚೈತನ್ಯವುಂಟಾಗುವಾಗ ಅವಯವಗಳಲ್ಲಿಯೂ ಚೈತನ್ಯವು ಅವಶ್ಯಕವಾಗಿಯೂ ಉಂಟಾಗಬೇಕಾಗಿ ಬರುವುದರಿಂದ ಪುನಃ ಪ್ರಥಮಪಕ್ಷದಲ್ಲಿ ಹೇಳಿದ ದೂಷಣದಿಂದ ಬಿಡುಗಡೆ ಹೊಂದುವುದಕ್ಕೆ ಮಾರ್ಗವಿಲ್ಲದಂತಾಗುವುದು.

ಪೂಜ್ಯರೇ ? "ಪ್ರತ್ಯವಯವದಲ್ಲಿಯೂ ಚೈತನ್ಯಪ್ರಸಂಗವುಂಟಾದೀತೆಂದು ಹೇಳಲಾಗುವುದಿಲ್ಲ; ೧ ಕಿಣ್ವಾದಿಪದಾರ್ಥಗಳ ಸಂಯೋಜನದಿಂದ ಉಂಟಾದ ಮದ್ಯವಸ್ತುವಿನ ಸಂಘಾತದಲ್ಲಿಯೇ ಹೇಗಾದರೆ ಮದಶಕ್ತಿಯುಂಟಾಗುವುದೋ

೧ (ಕಿಣ್ವ) ಒಂದುಬಗೆಯ ಮದ್ಯವನ್ನು ಉಂಟುಮಾಡುವ ಅಂಕುರವಿಶೇಷವು.

ಅದರಂತೆ ಇಲ್ಲಿಯೂ ಸಂಘಾತದಲ್ಲಿಯೇ ಒಂದು ಚೈತನ್ಯವು ಉಂಟಾಗಲು ತಡೆಯೇನು ? "

ಎಂದು ಪ್ರಲಾಪಿಸಬಾರದು. ಏತಕ್ಕೆಂದರೆ, ದೃಷ್ಟಾಂತದಲ್ಲಿಯೂ ಸಂಘಾತದಲ್ಲಿ ಮದಶಕ್ತಿಯುಂಟಾಗುವಾಗ ಅದರ ಅವಯುವಗಳಲ್ಲಿಯೂ ಮದಶಕ್ತಿ ರೂಪ, ರಸ, ಗಂಧ, ಸ್ಪರ್ಶ, ಪರಿಣಾಮಗಳಂತೆ ಉಂಟಾಗಿಯೇ ಉಂಟಾಗುವುದು.

೧. ಹೇಗಾದರೆ, ನಾನಾಬಣ್ಣವುಳ್ಳ ತಂತುಗಳಿಂದ ನಿರ್ಮಿತವಾದ ಪಟದಲ್ಲಿ ಅವಯುವವಾದ ತಂತುವಿನಲ್ಲಿ ಇರುವ ರೂಪಕ್ಕಿಂತಲೂ ಬೇರೊಂದು ರೂಪವು ಉಂಟಾಗುವುದಿಲ್ಲವೋ—

೨. ಮತ್ತು ಮಾವಿನ ಹಣ್ಣಿನ ಆ ಆ ಅವಯುವಭಾಗಗಳಲ್ಲಿ ವ್ಯವಸ್ಥಿತವಾಗಿ ಇರುವ ಮಧುರರಸ, ಅಮ್ಲರಸ ಇವುಗಳಿಗಿಂತಲೂ ಬೇರೊಂದು ರಸವು ಅವಯುವಿಯಾದ ಮಾವಿನ ಹಣ್ಣಿನಲ್ಲಿ ಕಾಣುವುದಿಲ್ಲವೋ—

೩. ಮತ್ತು ವೀಳ್ಯದೆಲೆಯಲ್ಲಿ ಅತಿಪಕ್ವವಾದ ಅವಯುವಭಾಗದಲ್ಲಿ ವ್ಯವಸ್ಥಿತವಾಗಿ ಇರುವ ದುರ್ಗಂಧಕ್ಕಿಂತಲೂ, ಅಲ್ಪಪಕ್ವವಾದ ಅವಯುವಭಾಗದಲ್ಲಿ ವ್ಯವಸ್ಥಿತವಾಗಿ ಇರುವ ಸುಗಂಧಕ್ಕಿಂತಲೂ ಬೇರೊಂದು ಗಂಧವು ಅವಯುವಿಯಾದ ವೀಳ್ಯದೆಲೆಯಲ್ಲಿ ಕಾಣುವುದಿಲ್ಲವೋ—

೪. ಮತ್ತು ಬಾಳೆಯ ಎಲೆಯಲ್ಲಿ ಆ ಆ ಅವಯುವಭಾಗಗಳಲ್ಲಿ ವ್ಯವಸ್ಥಿತವಾಗಿ ಇರುವ ಕಠಿನಸ್ಪರ್ಶಸುಕುಮಾರಸ್ಪರ್ಶಗಳಿಗಿಂತಲೂ ಬೇರೊಂದು ಸ್ಪರ್ಶವು ಅವಯುವಿಯಾದ ಬಾಳೆಯ ಎಲೆಯಲ್ಲಿ ಕಾಣುವುದಿಲ್ಲವೋ—

೫. ಮತ್ತು ವೃಕ್ಷದಲ್ಲಿ ಮೂಲ, ಮಧ್ಯ, ತುದಿಯೆಂಬ ಆ ಆ ಅವಯುವಭಾಗಗಳಲ್ಲಿ ವ್ಯವಸ್ಥಿತವಾಗಿ ಇರುವ ಮಹಾಪರಿಮಾಣ, ಮಧ್ಯಮಪರಿಮಾಣ, ಅಲ್ಪಪರಿಮಾಣಗಳಿಗಿಂತಲೂ ಬೇರೊಂದು ಪರಿಮಾಣವು ಅವಯುವಿಯಾದ ವೃಕ್ಷದಲ್ಲಿ ಕಾಣುವದಿಲ್ಲವೋ—

**ಅದರಂತೆ ಕಿಣ್ವಾದಿವಸ್ತುಗಳ ಸಂಮೇಳನದಿಂದ ಉಂಟಾದ ಅವಯುವಿಯಲ್ಲಿಯೂ** ಮದಶಕ್ತಿ ಕಾಣಬೇಕಾದರೆ ಅದರ ಅವಯುವದಲ್ಲಿ ಮದಶಕ್ತಿಯುಂಟಾಗಿ ಆ ಮದಶಕ್ತಿಯೇ ಅವಯುವಿಯಲ್ಲಿಯೂ ಕಾಣುವುದಲ್ಲದೆ ಬೇರೊಂದು ಮದಶಕ್ತಿ ಅವಯುವಿಯಾದ ಸಂಘಾತದಲ್ಲಿ ಇಲ್ಲ.

ಹಾಗೆಯೇ ದಾರ್ಷ್ಟಾಂತಿಕವಾದ ಶರೀರದಲ್ಲಿಯೂ ಆ ಆ ಅವಯುವಗಳಲ್ಲಿ ಇರುವ ಚೈತನ್ಯವೇ ಅವಯುವಿಯಾದ ಸಂಘಾತದಲ್ಲಿ ಕಾಣಬೇಕಲ್ಲದೆ ಬೇರೊಂದು

ಚೈತನ್ಯಕ್ಕೆ ಅವಕಾಶವಿಲ್ಲವಾಗಿ ಪ್ರತ್ಯವಯವಗಳಲ್ಲಿಯೂ ಅನೇಕ ಚೈತನ್ಯಗಳನ್ನು ಒಪ್ಪಿಕೊಳ್ಳಬೇಕಾಗಿ ಬರುವುದರಿಂದ ಪ್ರಥಮಪಕ್ಷದ ದೂಷಣಗಳನ್ನು ತಪ್ಪಿಸಿ ಕೊಳ್ಳುವುದಕ್ಕೆ ಮಾರ್ಗವಿಲ್ಲ.

ಪೂಜ್ಯರೇ ? "ಈಗ ಹೇಳಿದ ಐದು ದೃಷ್ಟಾಂತಗಳೊಳಗೆ ಮೊದಲನೆಯ ದೃಷ್ಟಾಂತವಾದ ಪಟದಲ್ಲಿ ಅವಯವವಾದ ತಂತುವಿನಲ್ಲಿ ಇರುವ ರೂಪಕ್ಕಿಂತಲೂ ಬೇರೊಂದು ರೂಪವು ಅವಯುವಿಯಲ್ಲಿ ಇಲ್ಲವೆಂದು ಹೇಳಿದುದು ಸಂಗತವಲ್ಲ. ನಾನಾಬಣ್ಣವುಳ್ಳ ತಂತುಗಳಿಂದ ನಿರ್ಮಿತವಾದ ಪಟದಲ್ಲಿ ಚಿತ್ರರೂಪವೆಂಬ ಒಂದಾ ನೊಂದು ವಿಲಕ್ಷಣರೂಪವು ಕಾಣುವುದಷ್ಟೆ ? ಹಾಗೆ ಅದರಲ್ಲಿ ವಿಲಕ್ಷಣವಾದ ರೂಪವೊಂದನ್ನು ಒಪ್ಪಿಕೊಳ್ಳದಿದ್ದರೆ ಅವಯವಿಯಾದ ಪಟವು ರೂಪಶೂನ್ಯವಾದು ದಾಗಿ ಚಕ್ಷುರಿಂದ್ರಿಯಕ್ಕೆ ಗೋಚರವಾಗಕೂಡದು. ರೂಪಶೂನ್ಯವಾದ ವಸ್ತು ವನ್ನು ಚಕ್ಷುರಿಂದ್ರಿಯದಿಂದ ಗ್ರಹಿಸಲಾಗುವುದಿಲ್ಲವಷ್ಟೆ ?"

ಎಂದು ಭ್ರಾಂತಿಪಡಬಾರದು, ಏತಕ್ಕೆಂದರೆ, ತಂತುಗಳು ಪಟಾಕಾರವಾಗಿ ಪರಿಣಮಿಸುವುದಕ್ಕಿಂತಲೂ ಪೂರ್ವದಲ್ಲಿ ಆ ಆ ತಂತುಗಳಲ್ಲಿ ಆ ಆ ರೂಪವು ಕಂಡು ಬರುವಂತೆ, ಅದೇ ತಂತುಗಳು ಒಂದಕ್ಕೊಂದು ಹೆಣೆದುಕೊಂಡು ಪಟಾಕಾರವಾಗಿ ಪರಿಣಮಿಸಿದ ಮೇಲೆ ಎಲ್ಲಾ ತಂತುಗಳಲ್ಲಿ ಇರುವ ಎಲ್ಲಾ ರೂಪವೂ ಒಟ್ಟಿಗೆ ಏಕ ಕಾಲದಲ್ಲಿ ಕಣ್ಣಿಗೆ ಗೋಚರವಾಗುವುದರಿಂದ ಆಗ ಅದಕ್ಕೆ ಚಿತ್ರರೂಪವೆಂಬ ವ್ಯವ ಹಾರವು ಮಾತ್ರ ಉಂಟಾಗುವುದಲ್ಲದೆ ತಂತುಗಳಲ್ಲಿ ಇಲ್ಲದ ಹೊಸದಾದ ರೂಪ ವೊಂದೂ ಪಟದಲ್ಲಿ ಕಾಣುವುದಿಲ್ಲವಷ್ಟೆ ? ತಂತುಗಳು ತಂತುತ್ವಾವಸ್ಥೆಯಲ್ಲಿಯೇ ಇರುವ ಕಾಲದಲ್ಲಿ ಬಹುತ್ವವೆಂಬ ಸಂಖ್ಯಾವಿಶೇಷಕ್ಕೆ ಆಶ್ರಯಗಳಾಗಿ ಇರುವುವು ; ಅದೇ ತಂತುಗಳು ಪಟತ್ವಾವಸ್ಥೆಯನ್ನು ತಾಳಿದ ಸಮಯದಲ್ಲಿ ಏಕತ್ವಸಂಖ್ಯೆಗೆ ಆಶ್ರಯಗಳಾಗುವುವು. ಅನೇಕ ತಂತುಗಳು ಸೇರಿದರಲ್ಲವೆ ಒಂದು ಪಟವಾಗು ವುದು ? ಹೀಗೆ ಏಕತ್ವಸಂಖ್ಯೆಗೆ ಆಶ್ರಯವೆನಿಸಿಕೊಂಡಿರುವ ತಂತುಮಯವಾದ ಪಟದಲ್ಲಿ ಏಕತ್ವವನ್ನು ವಿವಾದವಿಲ್ಲದೆ ಒಪ್ಪಿಕೊಳ್ಳುವುದಾದರೆ ಚಿತ್ರತ್ವವನ್ನು ಬಿಡ ಬೇಕಾಗುವುದು ; ಚಿತ್ರತ್ವವನ್ನೇ ಒಪ್ಪಿಕೊಳ್ಳುವುದಾದರೆ ಏಕತ್ವವನ್ನು ಬಿಡ ಬೇಕಾಗುವುದು ; ಈ ಎರಡನ್ನೂ ಒಪ್ಪಿಕೊಳ್ಳುವೆವೆಂಬುದುಮಾತ್ರ ಆಗಲಾರದು. ಆಗಲಾರದಾದರೂ ಪಟದಲ್ಲಿ ಏಕತ್ವವನ್ನೂ ಚಿತ್ರತ್ವವನ್ನೂ ಒಪ್ಪಿಕೊಳ್ಳುವೆವೆಂದು ಹೇಳುವೆವಾದರೆ, ಹೀಗೆ ಹೇಳುವಿಕೆಯೇ ಒಂದು ವಿಚಿತ್ರವಾಗಿ ಇರುವುದಲ್ಲದೆ ಇದ ರಿಂದ ಪಟದಲ್ಲಿ ಚಿತ್ರತ್ವವು ಎಂದಿಗೂ ಬರಲಾರದು.

ಚಿತ್ರರೂಪವು ಇದರಲ್ಲಿ ಬಾರದಿದ್ದಮಾತ್ರಕ್ಕೇ ಈ ಅವಯವಿ ರೂಪಶೂನ್ಯವೆಂದಾಗಲಿ, ಚಕ್ಷುರಿಂದ್ರಿಯಕ್ಕೆ ಗೋಚರವಾಗಕೂಡದೆಂದಾಗಲಿ ಹೇಳಲು ಅವಕಾಶವಿಲ್ಲ. ಪಟವೆಂಬ ಅವಯವಿ ತಂತುಗಳೆಂಬ ಅವಯವಗಳಿಗಿಂತಲೂ ಭಿನ್ನವಾದ ಪದಾರ್ಥವಾಗಿ ಇದ್ದರಲ್ಲವೆ **"ಅದರಲ್ಲಿ ರೂಪವುಂಟೋ ಇಲ್ಲವೋ? ಚಕ್ಷುರಿಂದ್ರಿಯಕ್ಕೆ ಗೋಚರವಾಗಲು ಅರ್ಹವೋ ಅನರ್ಹವೋ?"** ಇತ್ಯಾದಿವಿಚಾರಗಳನ್ನು ಮಾಡಬಹುದು. ತಂತುಗಳೇ ಪರಸ್ಪರ ಸಂಯೋಗವಿಶೇಷದಿಂದ ಪಟವೆನಿಸಿಕೊಳ್ಳುವುದಕ್ಕೆ ಯೋಗ್ಯವಾದ ಅವಸ್ಥೆಯನ್ನು ಪಡೆದಿರುವುವಾದಕಾರಣ ತಂತುಗಳಿಗಿಂತಲೂ ಅತಿರಿಕ್ತವಾದ ಪಟವೆಂಬ ಅವಯವಿಯೇ ಅಪ್ರಸಿದ್ಧವಾಗಿರುವಲ್ಲಿ ಮೇಲೆ ಹೇಳಿದ ವಿಚಾರಕ್ಕೆ ಅವಕಾಶವೆಲ್ಲಿಯದು? ರೂಪವುಳ್ಳ ತಂತುಗಳೇ ಪಟವೆನಿಸಿಕೊಂಡು ಕಣ್ಣಿಗೆ ಕಾಣುತ್ತಿರುವಲ್ಲಿ ಇಂಥ ಪಟವನ್ನು ರೂಪಶೂನ್ಯವೆಂದಾಗಲಿ, ಚಕ್ಷುರಿಂದ್ರಿಯಕ್ಕೆ ಗೋಚರವಾಗಕೂಡದೆಂದಾಗಲಿ ವಿವೇಚಕರಾದವರು ಹೇಳುವರೆ?

ಆದಕಾರಣ ನಾನಾರೂಪಗಳನ್ನು ಏಕಕಾಲದಲ್ಲಿ ನೋಡುವುದಾದರೆ ಅಂಥ ಸಂದರ್ಭದಲ್ಲಿ ಆ ರೂಪಗಳೇ ಚಿತ್ರರೂಪವೆಂಬ ವ್ಯವಹಾರಕ್ಕೆ ಗುರಿಯಾಗುವುವಲ್ಲದೆ ಅವುಗಳಿಗಿಂತಲೂ ಭಿನ್ನವಾದ ಚಿತ್ರರೂಪವೆಂಬುದೊಂದು ಇಲ್ಲವೆಂಬ ಸಿದ್ಧಾಂತವು ಅಭೇದ್ಯವಾಗಿರುವುದು.

ಹೀಗೆ ಇಲ್ಲಿ ತೋರಿಸಿದ ಚಿತ್ರರೂಪಖಂಡನಕ್ರಮವನ್ನೇ ಶಾಸ್ತ್ರಕಾರರು—

**"ಚಿತ್ರಂ ಚೇದೇಕತಾ ನ ಸ್ಯಾದೇಕಂ ಚೇಚ್ಚಿತ್ರತಾ ಕಥಂ ।**
**ಏಕಂ ಚ ತಚ್ಚ ಚಿತ್ರಂ ಚ ತತ್ತು ಚಿತ್ರಾಂತರಂ ಭವೇತ್ ॥"**

ಎಂಬ ಕಾರಿಕೆಯಲ್ಲಿ ಸಂಗ್ರಹಿಸಿ ತೋರಿಸಿರುವರು. ಆದಕಾರಣ ಮೊದಲನೆಯ ದೃಷ್ಟಾಂತವಾದ ಪಟದಲ್ಲಿ ಅದರ ಅವಯವವಾದ ತಂತುವಿನಲ್ಲಿ ಇರುವ ರೂಪಕ್ಕಿಂತಲೂ ಬೇರೊಂದು ರೂಪವಿಲ್ಲವೆಂದು ಹೇಳಿದುದು ಅತ್ಯಂತ ಸಂಗತವಾಗಿರುವುದಲ್ಲದೆ ಅಸಂಗತವಲ್ಲ.

ಹೀಗೆ ಪಟಾದಿದೃಷ್ಟಾಂತಗಳಲ್ಲಿಯೂ ಅವಯವಗಳಲ್ಲಿ ಇರುವ ರೂಪ, ರಸ, ಗಂಧ, ಸ್ಪರ್ಶ, ಪರಿಮಾಣಗಳೇ ಅವಯವಿಯಲ್ಲಿಯೂ ತೋರುವುವಲ್ಲದೆ ಅವುಗಳಿಗಿಂತಲೂ ಭಿನ್ನಗಳಾದ ರೂಪಾದಿಗಳು ಅವಯವಿಯಲ್ಲಿ ಇಲ್ಲವೆಂದೂ, ಅದರಂತೆ ದಾರ್ಷ್ಟಾಂತಿಕವಾದ ಶರೀರದಲ್ಲಿಯೂ ಸಂಘಾತರೂಪವಾದ ಅವಯವಿಯಲ್ಲಿ ಚೈತನ್ಯವನ್ನು ಅಂಗೀಕರಿಸುವುದಾದರೆ ಅವಯವಗತಚೈತನ್ಯವೇ ಅವಯವಿಯಲ್ಲಿ

ತ್ತೋರುವುದಲ್ಲದೆ ಅದಕ್ಕಿಂತಲೂ ಭಿನ್ನವಾದ ಚೈತನ್ಯವು ಇದರಲ್ಲಿ ಸಂಭವಿಸುವು ದಿಲ್ಲವೆಂದೂ ತೋರಿಸಿದುದರಿಂದ ಪಟಾದಿದೃಷ್ಟಾಂತಗಳು ಚಾರ್ವಾಕರಿಗೆ ಅನು ಕೂಲವಲ್ಲವೆಂದು ವ್ಯಕ್ತಪಡಿಸಿದಂತಾಯಿತು.

ಇದರಿಂದ ಚಾರ್ವಾಕರ ಅಮ್ಲಕರ್ಪೂರಾದಿದೃಷ್ಟಾಂತಪ್ರಲಾಪಗಳೂ ನಿರಾಕರಿಸಲ್ಪಟ್ಟಿರುವುವು; ಅವರು ಹೇಳುವುದೇನೆಂದರೆ—"ಹುಳಿಯಲ್ಲಿಯೂ ಕರ್ಪೂರದಲ್ಲಿಯೂ ಪ್ರತ್ಯೇಕವಾಗಿ ವಿಷಶಕ್ತಿಯಿಲ್ಲದಿದ್ದರೂ ಅವುಗಳ ಪರಸ್ಪರ ಸಂಮೇಳನದಿಂದ ಉಂಟಾಗುವ ಸಂಘಾತದಲ್ಲಿ ವಿಷಶಕ್ತಿಯುಂಟಾಗುವಂತೆಯೂ, ಹಾಗೆಯೇ ಅರಿಶಿನದಲ್ಲಿಯೂ ಸುಣ್ಣದಲ್ಲಿಯೂ ಪ್ರತ್ಯೇಕವಾಗಿ ಕೆಂಪುಬಣ್ಣವಿಲ್ಲ ದಿದ್ದರೂ ಅವುಗಳ ಸಂಮೇಳನದಿಂದ ಉಂಟಾದ ಸಮಷ್ಟಿಯಲ್ಲಿ ಕೆಂಪುಬಣ್ಣ ವುಂಟಾಗುವಂತೆಯೂ, ದಾರ್ಷ್ಟಾಂತಿಕವಾದ ಶರೀರದಲ್ಲಿಯೂ ಪ್ರತ್ಯೇಕವಾದ ಅವಯವದಲ್ಲಿ ಚೈತನ್ಯವಿಲ್ಲದಿದ್ದರೂ ಸಮುದಾಯದಲ್ಲಿ ಚೈತನ್ಯವುಂಟಾಗ ಬಹುದು" ಎಂದು ಹೇಳುವರು. ಇಂಥ ಪ್ರಲಾಪಗಳಿಗೂ ಅವಕಾಶವಿಲ್ಲ. ಪಟಾದಿ ದೃಷ್ಟಾಂತಗಳಲ್ಲಿ ತೋರಿಸಿದಂತೆಯೇ ಈ ದೃಷ್ಟಾಂತಗಳಲ್ಲಿಯೂ ಸಂಮೇಳನಾ ನಂತರದಲ್ಲಿ ಪ್ರತ್ಯೇಕವಾದ ಅವಯವದಲ್ಲಿಯೇ ವಿಷಶಕ್ತಿಯೂ ಕೆಂಪುಬಣ್ಣವೂ ಉಂಟಾಗುವುದಲ್ಲದೆ ಅವಯವಿಯಲ್ಲಿ ಅಲ್ಲವಷ್ಟೆ?

ಆದಕಾರಣ ಅವಯವಿಯಲ್ಲಿ ಚೈತನ್ಯವು ತೋರುವುದಾದರೆ, ಅವಯವ ಗಳಲ್ಲಿ ಇರುವ ಚೈತನ್ಯವೇ ತೋರಬೇಕಲ್ಲದೆ ಬೇರೊಂದು ಚೈತನ್ಯಕ್ಕೆ ಅವಕಾಶವಿಲ್ಲ ವಾಗಿ ಪ್ರಥಮಪಕ್ಷದ ದೂಷಣಗಳನ್ನು ತಪ್ಪಿಸಿಕೊಳ್ಳುವುದಕ್ಕೆ ಮಾರ್ಗವೇ ಇಲ್ಲ. **ಆದಕಾರಣ ತೃತೀಯಪಕ್ಷವೂ ಸಮಂಜಸವಲ್ಲ.**

## ೩೧೪. ದೇಹಾತಿರಿಕ್ತಸ್ಯಾತ್ಮನ ಆವಶ್ಯಕತಾ.

ಮತ್ತು ದೇಹಕ್ಕಿಂತಲೂ ವಿಲಕ್ಷಣವಾದ ಬೇರೊಂದು ಆತ್ಮತತ್ತ್ವವನ್ನು ಒಪ್ಪಿಕೊಳ್ಳದಿದ್ದರೆ, ತಾಯಿತಂದೆಗಳ ಏಕರೂಪವಾದ ವ್ಯಾಪಾರದಿಂದಲೇ ಹುಟ್ಟಿ ಏಕರೂಪವಾದ ಲಾಲನಪಾಲನಗಳಿಂದಲೇ ಬೆಳೆದು ವೃದ್ಧಿಹೊಂದಿರುವ ಅನೇಕ ಶರೀರಗಳಲ್ಲಿ ಪರಸ್ಪರ ತಾರತಮ್ಯವುಂಟಾಗಲು ಕಾರಣವೇನೆಂಬ ಪ್ರಶ್ನೆಗೆ ದೇಹಾತ್ಮವಾದಿಗಳಾದ ಚಾರ್ವಾಕರು ಯಾವ ಉತ್ತರವನ್ನು ಹೇಳಬಲ್ಲರು? ದೃಷ್ಟ ವಾದ ಯಾವುದೊಂದು ಕಾರಣವನ್ನೂ ಅವುಗಳಲ್ಲಿ ತೋರಿಸಲು ಅವಕಾಶವಿಲ್ಲವಷ್ಟೆ? ಆದುದರಿಂದ ಆ ಆ ದೇಹದ ಉತ್ಪತ್ತಿಗೆ ಕಾರಣವಾದ ಅದೃಷ್ಟವನ್ನೇ ಆ ಆ ಶರೀರಗಳ ಪರಸ್ಪರ ತಾರತಮ್ಯಕ್ಕೂ ಕಾರಣವನ್ನಾಗಿ ಹೇಳಬೇಕು. ಅಂಥ

ಅದೃಷ್ಟವನ್ನ ಉಂಟಾಗುವುದಕ್ಕೆ ಕಾರಣವಾದ ಪುಣ್ಯಪಾಪಗಳನ್ನು ಮಾಡುವುದಕ್ಕೆ ದೇಹಕ್ಕಿಂತಲೂ ವಿಲಕ್ಷಣನಾದ ಒಬ್ಬಾನೊಬ್ಬ ಆತ್ಮನು ಆ ದೇಹವು ಹುಟ್ಟುವು ದಕ್ಕಿಂತಲೂ ಮೊದಲೇ ಮತ್ತೊಂದು ದೇಹದಲ್ಲಿ ಇದ್ದು, ಪುಣ್ಯಪಾಪಗಳ ಮೂಲಕ ಮೇಲೆ ಕಂಡ ಅದೃಷ್ಟವನ್ನು ಸಂಪಾದಿಸಿಕೊಂಡು, ಆ ಅದೃಷ್ಟದಿಂದ ಈ ದೇಹ ವನ್ನು ಉಂಟುಮಾಡಿಕೊಂಡು, ಈಗ ಇದರಲ್ಲಿ ಬಂದು ವಾಸಮಾಡುತ್ತಿರುವನೆಂದು ಒಪ್ಪಿಕೊಂಡೇ ತೀರಬೇಕು.

ಮತ್ತು ಶಿಶು ತಾಯಿಯ ಗರ್ಭಕೋಶವನ್ನು ಬಿಟ್ಟು ಈಚೆಗೆ ಬಂದ ತತ್‌ಕ್ಷಣದಲ್ಲಿಯೇ ರೋದನವನ್ನು ಮಾಡುವಾಗ ತಾಯಿ ಅದರ ಬಾಯೊಳಗೆ ತನ್ನ ಸ್ತನದ ತುದಿಯನ್ನಿಟ್ಟರೆ ಕೂಡಲೆ ಚಪ್ಪರಿಸುತ್ತ ಸ್ತನ್ಯವನ್ನು ಹೀರುವುದೂ, ಅದ ರಿಂದ ತನ್ನ ಮನೋರಥಪೂರ್ತಿಯಾದ ಮೇಲೆ ರೋದನವನ್ನು ನಿಲ್ಲಿಸುವುದೂ, ಇದೆಲ್ಲವೂ ಆ ಶಿಶುವಿಗೆ ಅಷ್ಟು ಶೀಘ್ರಕಾಲದಲ್ಲಿ ಹೇಗೆ ಬಂದಿತು ?

ತನ್ನ ಕ್ಷುದ್ಬಾಧೆಯನ್ನು ಹೋಗಲಾಡಿಸಿಕೊಳ್ಳುವುದಕ್ಕೆ ಸ್ತನ್ಯಪಾನವೇ ಉಪಾಯವೆಂದು ತಿಳಿದುಕೊಂಡಿದ್ದರಲ್ಲವೆ ಸ್ತನ್ಯಕ್ಕಾಗಿ ಅಳುವುದೂ, ಸ್ತನ್ಯವು ದೊರೆತಮೇಲೆ ಅದನ್ನು ಚಪ್ಪರಿಸುವುದೂ, ಅದರಿಂದ ತನ್ನ ಇಷ್ಟಪೂರ್ತಿಯನ್ನು ಮಾಡಿಕೊಳ್ಳುವುದೂ, ಇದೆಲ್ಲವೂ ಸಂಭವಿಸುವುದು.

ಕ್ಷುನ್ನಿವೃತ್ತಿಗೆ ಸ್ತನ್ಯಪಾನವೇ ಉಪಾಯವೆಂಬ ಜ್ಞಾನವು ಆ ಶಿಶುವಿಗೆ ಈ ಶರೀರದಲ್ಲಿಯೇ ಹುಟ್ಟಿದ ತತ್‌ಕ್ಷಣದಲ್ಲಿಯೇ ಅಷ್ಟು ಶೀಘ್ರವಾಗಿ ಉಂಟಾಯಿ ತೆಂದು ವಿವೇಚಕರು ಹೇಳಲಾಗುವುದಿಲ್ಲ. ಆದಕಾರಣ ಹಿಂದಿನ ಅನೇಕಜನ್ಮಗಳಲ್ಲಿ ಅನೇಕಾವರ್ತಿ ಸ್ತನ್ಯಪಾನವನ್ನು ಮಾಡಿ ಅದರಿಂದ ಕ್ಷುನ್ನಿವೃತ್ತಿಯನ್ನು ಪಡೆದು ಸ್ತನ್ಯಪಾನವೇ ಕ್ಷುನ್ನಿವೃತ್ತಿಗೆ ಉಪಾಯವಾಗಿರುವುದೆಂಬ ಅನುಭವವನ್ನು ಪಡೆ ದಿದ್ದುದರಿಂದ ಅಂಥ ಅನುಭವದಿಂದ ಆ ಆತ್ಮನಲ್ಲಿ ದೃಢತರವಾದ ಒಂದಾನೊಂದು ಸಂಸ್ಕಾರವು ಉಂಟಾಗಿ ಅಂಥ ಸಂಸ್ಕಾರದೊಡನೆ ಕೂಡಿದವನಾಗಿಯೇ ಆ ಆತ್ಮನು ಈಗ ಈ ಶರೀರದಲ್ಲಿ ಬಂದಿರುವನಾದುದರಿಂದ ಈಗ ಆ ಸಂಸ್ಕಾರವು ತಲೆಯೆತ್ತಿ ಹಿಂದಿನ ಜನ್ಮದಲ್ಲಿ ಅನುಭವಿಸಿದ್ದ ಸ್ತನ್ಯಪಾನದ ಸ್ಮರಣೆಯನ್ನು ಈಗ ಉಂಟು ಮಾಡುವುದು. ಇಂಥ ಸ್ಮರಣಾತ್ಮಕವಾದ ಜ್ಞಾನವೇ ಆ ಶಿಶುವಿಗೆ ತತ್ಕಾಲದಲ್ಲಿ ಇರುವುದೆಂದು ಹೇಳಬಹುದಲ್ಲದೆ ಬೇರೆವಿಧವಾಗಿ ಹೇಳಲು ಮಾರ್ಗವಿಲ್ಲ.

ಆದಕಾರಣ ಇಂಥ ಸ್ಮರಣೆಗೆ ಕಾರಣವಾದ ಸಂಸ್ಕಾರವನ್ನೂ, ಅಂಥ ಸಂಸ್ಕಾರಕ್ಕೆ ಕಾರಣವಾದ ಪೂರ್ವಾನುಭವವನ್ನೂ ಅವಶ್ಯಕವಾಗಿ ಒಪ್ಪಿಕೊಳ್ಳ

ಬೇಕಾಗಿರುವುದರಿಂದ ಅಂಥ ಪೂರ್ವಾನುಭವವನ್ನು ಪಡೆದ ಆತ್ಮನು ಈ ಶರೀರವು ಹುಟ್ಟುವುದಕ್ಕಿಂತಲೂ ಪೂರ್ವದಲ್ಲಿಯೇ ಇದ್ದನೆಂದು ಎಲ್ಲರೂ ಒಪ್ಪಿಕೊಳ್ಳ ಬೇಕಾಗಿರುವುದು.

## ೩೧೫. ಭೌತಿಕಧಾತುವಿಶೇಷಸ್ಯೈವಾತ್ಮತ್ವಾಶಂಕಾ.

ಪೂಜ್ಯರೇ ? " ಹಿಂದೆ ತೋರಿಸಿದ ರೀತಿಯಾಗಿ ಸಮುದಾಯದಲ್ಲಿ ಚೈತನ್ಯವು ಸಿದ್ಧಿಸದಿದ್ದರೆ ಅದು ಹೋಗಲಿ; ಮತ್ತೊಂದು ವಿಧವಾಗಿ ಇದರಲ್ಲಿ ಚೈತನ್ಯವನ್ನು ತೋರಿಸುವೆವು, ಹೇಗೆಂದರೆ—ಈ ಶರೀರದಲ್ಲಿ ಪಂಚಭೂತಗಳ ಪರಿಣಾಮರೂಪ ವಾಗಿ ಧಾತುವಿಶೇಷವೆನಿಸಿಕೊಂಡಿರುವ ಒಂದಾನೊಂದು ಪದಾರ್ಥವನ್ನು ಒಪ್ಪಿ ಕೊಂಡು ಅದಕ್ಕೆ ಆತ್ಮನೆಂಬ ಹೆಸರನ್ನು ಕೊಡುವೆವು. ಆತ್ಮನು ಅಲ್ಪಪರಿಮಾಣ ವುಳ್ಳವನೆಂದು ಹೇಳುವುದು ಅಭಿಮತವಾದರೆ ಈ ಧಾತುವಿಶೇಷವೆಂಬ ಆತ್ಮನೂ ಅಲ್ಪಪರಿಮಾಣನಾಗಿಯೇ ಶರೀರದ ಒಂದು ಭಾಗದಲ್ಲಿ ಇರುವನೆಂದು ಅಂಗೀಕರಿಸು ವೆವು; ಆದರೂ ನೈಯಾಯಿಕರು ಒಪ್ಪಿಕೊಂಡಿರುವ ಮನಇಂದ್ರಿಯದಂತೆ ಈ ಆತ್ಮನಿಗೂ ಅತಿಶೀಘ್ರವಾಗಿ ಶರೀರದ ಒಳಗೆ ಸಂಚರಿಸುವ ಸಾಮರ್ಥ್ಯವನ್ನೂ ಒಪ್ಪಿಕೊಳ್ಳುವೆವಾದುದರಿಂದ ಹಸ್ತಪಾದಾದಿಗಳಲ್ಲಿ ಉಂಟಾಗುವ ಸುಖದುಃಖ ಗಳನ್ನು ಏಕಕಾಲದಲ್ಲಿ ಗ್ರಹಿಸುವುದಕ್ಕೆ ಆವುದೊಂದು ತೊಂದರೆಯೂ ಇರುವು ದಿಲ್ಲ. ಆತ್ಮನು ದೇಹಕ್ಕೆ ಸಮಾನವಾದ ಪರಿಮಾಣವುಳ್ಳವನೆಂದು ಹೇಳುವುದು ಅಭಿಮತವಾದರೆ ಇದೇ ಧಾತುವಿಶೇಷವೆಂಬ ಆತ್ಮನಿಗೆ ಸ್ಥಾಯಿತ್ವವನ್ನು ಒಪ್ಪಿ ಕೊಳ್ಳುವೆವು. ಆಗ ಈ ಧಾತುವಿಶೇಷವು **" ಹೃದಯಸ್ಥಿತಪಿತ್ತವಿಶೇಷಃ ಪ್ರಕಾಶಃ "** ಎಂಬ ವೈದ್ಯಾಗಮವಚನದಂತೆ ಒಂದಾನೊಂದು ವಿಲಕ್ಷಣವಾದ ಧಾತುವಿಶೇಷವೆನಿಸಿಕೊಂಡು ಸ್ಥಾಯಿಯಾಗಿ ಆತ್ಮನೆನಿಸಿಕೊಳ್ಳುವುದೆಂದು ಹೇಳಲು ಯಾವ ಅಭ್ಯಂತರವೂ ಇಲ್ಲವಷ್ಟೆ ? "

## ೩೧೬. ಆಶಂಕಿತಪಕ್ಷೇ ಸಿದ್ಧಾಂತಿನೋಽರ್ಧಾಂಶಾಂಗೀಕಾರಃ

ಹೀಗೆ ಹೇಳುವುದಾದರೆ, ದೇಹಾತಿರಿಕ್ತವಾದ ಆತ್ಮವಸ್ತುವನ್ನು ಪ್ರಕಾ ರಾಂತರದಿಂದ ಒಪ್ಪಿಕೊಂಡಂತೆಯೇ ಆಗುವುದು. ನಾವು ಹೇಳುವಂತೆ ಆತ್ಮವಸ್ತು ವಿಗೆ ಜ್ಞಾನಾನಂದಾತ್ಮಕತ್ವವನ್ನು ಒಪ್ಪಿಕೊಳ್ಳದೆ ಭೌತಿಕಧಾತುವಿಶೇಷಾತ್ಮಕತ್ವ ವನ್ನು ಒಪ್ಪಿಕೊಳ್ಳುವುದರಿಂದ ಈ ಪಕ್ಷವು ಅರ್ಧಭಾಗದಲ್ಲಿ ಅವೈದಿಕವಾಗಿದ್ದರೂ, ಈ ಧಾತುವಿಶೇಷಕ್ಕೆ ದೇಹಾತಿರಿಕ್ತತ್ವವನ್ನು ಒಪ್ಪಿ ಅದಕ್ಕೆ ಆತ್ಮನೆಂಬ ಹೆಸ

ರನ್ನು ಕೊಟ್ಟಿರುವುದರಿಂದ ದೇಹಾತಿರಿಕ್ತವಾದ ಆತ್ಮವಸ್ತು ಉಂಟೆಂದು ಒಪ್ಪಿದಂತಾಗಿ ಅರ್ಧಭಾಗದಲ್ಲಿ ವೈದಿಕವಾಗಿಯೂ ಇರುವುದಷ್ಟೆ?

## ೩೧೭ ಆತ್ಮನೋ ದೇಹಾತಿರಿಕ್ತತ್ವೇ ಸಿದ್ಧೇ ಜ್ಞಾನಾನಂದತ್ವಾದೇರನಾಯಾಸೇನ ಸಿದ್ಧಿಃ

ಪೂಜ್ಯರೇ! ಇಷ್ಟು ಮಾತ್ರವನ್ನು ನಾವು ಒಪ್ಪಿಕೊಂಡಮಾತ್ರಕ್ಕೆ ನಿಮ್ಮ ಇಷ್ಟಸಿದ್ಧಿ ಹೇಗಾಯಿತು? ನೀವು ಹೇಳುವಂತೆ ಈ ಆತ್ಮನಿಗೆ ನಿತ್ಯತ್ವವನ್ನೂ ಆನಂದಸ್ವರೂಪತ್ವವನ್ನೂ ನಾವು ಒಪ್ಪುವುದಿಲ್ಲವಾದುದರಿಂದ ಆತ್ಮನಿಗೆ ಅನಿತ್ಯತ್ವವೂ ಜಡತ್ವವೂ ಸಿದ್ಧಿಸುವಕಾರಣ ನಿಮ್ಮ ಇಷ್ಟಸಿದ್ಧಿಯಾಗಲಿಲ್ಲವಷ್ಟೆ?

ಹವುದು ಯದ್ಯಪಿ ಪೂರ್ಣರೂಪವಾಗಿ ನಮ್ಮ ಇಷ್ಟಸಿದ್ಧಿಯಾಗಲಿಲ್ಲ; ಆದರೂ ಆತ್ಮವಸ್ತುವಿಗೆ ದೇಹಾತಿರಿಕ್ತತ್ವವನ್ನೇ ಒಪ್ಪಿಕೊಳ್ಳದಿದ್ದ ನೀವು ದೇಹಾತಿರಿಕ್ತತ್ವವನ್ನು ಯಾವಾಗ ಒಪ್ಪಿದಿರೋ ಆಗಲೇ ಉಳಿದಿರುವ ಅನಿತ್ಯತ್ವಜಡತ್ವಾದಿಪ್ರಲಾಪಗಳನ್ನೂ ಅನುಮಾನ ಆಗಮ ಮುಂತಾದ ಪ್ರಮಾಣಗಳಿಂದ ಆಯಾಸವಿಲ್ಲದೆ ನಿರಾಕರಿಸಿ ನಿತ್ಯತ್ವ ಅಜಡತ್ವ ಮುಂತಾದುವುಗಳನ್ನೂ ಸಾಧಿಸಬಹುದು.

ಅಥವಾ—ಪ್ರತ್ಯಕ್ಷಮಾತ್ರಪ್ರಾಮಾಣ್ಯವಾದಿಗಳಾಗಿದ್ದ ನೀವು ಪ್ರತ್ಯಕ್ಷಮಾತ್ರವೇ ಪ್ರಮಾಣವೆಂಬ ಅಭಿಮಾನವನ್ನು ಬಿಟ್ಟು ಈಗ ಪ್ರತ್ಯಕ್ಷಕ್ಕೆ ಗೋಚರವಾಗದಿರುವ ಉಕ್ತಧಾತುವಿಶೇಷವನ್ನು ಅನುಮಾನಪ್ರಮಾಣದಿಂದಲೋ ವೈದ್ಯಾಗಮಪ್ರಮಾಣದಿಂದಲೋ ಒಪ್ಪಿರುವಿರಾದುದರಿಂದ ಅದರಂತೆಯೇ ನಾವೂ ಅದೇ ಅನುಮಾನಾಗಮಪ್ರಮಾಣಗಳಿಂದ ಆತ್ಮನಿಗೆ ನಿತ್ಯತ್ವವನ್ನೂ ಜ್ಞಾನಾನಂದಾತ್ಮಕತ್ವವನ್ನೂ ಸಾಧನೆಮಾಡಿ ಅನಿತ್ಯತ್ವವನ್ನೂ ಜಡತ್ವವನ್ನೂ ಆಯಾಸವಿಲ್ಲದೆ ನಿರಾಕರಿಸುವೆವು.

ಚಾರ್ವಾಕಮತವನ್ನು ಹೇಳುವುದಕ್ಕೆ ಉಪಕ್ರಮಿಸಿದ ಮೊದಲು ಇದುವರೆಗೂ ಹೇಳಿದ ಪೂರ್ವಪಕ್ಷಸಿದ್ಧಾಂತಗಳ ಫಲಿತಾಂಶವೇನಾಯಿತು?

## ೩೧೮ ಚಾರ್ವಾಕೋಕ್ತಪೂರ್ವಪಕ್ಷಫಲಿತಾಂಶನಿರೂಪಣಂ

**ಪೂರ್ವಪಕ್ಷದ ಫಲಿತಾಂಶವು**—ದೇಹಾತಿರಿಕ್ತವಾದ ಆತ್ಮತತ್ತ್ವವಿಲ್ಲವೆಂದೂ, ದೇಹವೇ ಆತ್ಮತತ್ತ್ವವೆಂದೂ ಹೇಳುವ ಚಾರ್ವಾಕರ ಮತಕ್ಕೆ **ದೇವೋಽಹಂ, ಮನುಷ್ಯೋಽಹಂ, ಸ್ಥೂಲೋಽಹಂ, ಕೃಶೋಽಹಂ** ಎಂದು ಅಬಾಧಿತವಾಗಿ ಎಲ್ಲರಿಗೂ ಉಂಟಾಗುತ್ತಿರುವ ಆತ್ಮಸಾಕ್ಷಿಕವಾದ

ದೇಹಾತ್ಮಾಭೇದಾನುಭವರೂಪಪ್ರತ್ಯಕ್ಷವೇ ಮೂಲಸ್ತಂಭದಂತೆ ದೃಢತರವಾದ ಪ್ರಮಾಣವಾಗಿರುವುದು.

ಇಲ್ಲಿ—ಅಹಂಪದದ ಅರ್ಥವು ಆವುದೋ ಅದೇ ಆತ್ಮತತ್ತ್ವವೆಂಬುದರಲ್ಲಿ ಇಬ್ಬರಿಗೂ ವಿವಾದವಿಲ್ಲ; ಅದು ಆವುದಾಗಿರಬಹುದೆಂಬುದನ್ನು ವಿಚಾರಮಾಡಿ ನೋಡಿದರೆ ಉಕ್ತವಾದ ಪ್ರತ್ಯಕ್ಷಪ್ರಮಾಣದಿಂದ ದೇಹವೇ ಅಹಂಪದಾರ್ಥವಾದ ಆತ್ಮತತ್ತ್ವವೆಂದು ನಿಷ್ಕರ್ಷಿಸಲ್ಪಡುವುದು.

ಹೇಗೆಂದರೆ—ಈ ಪ್ರತ್ಯಕ್ಷದಲ್ಲಿ ದೇವಮನುಷ್ಯಪದಗಳಿಂದ ಬೋಧಿಸಲ್ಪಡುವ ದೇವತ್ವಮನುಷ್ಯತ್ವಜಾತಿಗಳೂ, ಸ್ಥೂಲಕೃಶಪದಗಳಿಂದ ಬೋಧಿಸಲ್ಪಡುವ ಸ್ಥೂಲತ್ವಕೃಶತ್ವಧರ್ಮಗಳೂ ಶರೀರದಲ್ಲಿ ಇರುವುವಲ್ಲದೆ ಆತ್ಮನಲ್ಲಿ ಇಲ್ಲ. ಅಂಥ ಜಾತಿಗಳನ್ನೂ ಧರ್ಮಗಳನ್ನೂ ಬೋಧಿಸುವ ದೇವಮನುಷ್ಯಕೃಶಸ್ಥೂಲಪದಗಳ ಜತೆಯಲ್ಲಿ ಅಹಂಶಬ್ದವನ್ನು ಪುನಃ ಪುನಃ ಪಾಠಮಾಡಿ ಇರುವುದರಿಂದ ದೇವಮನುಷ್ಯಪದಗಳ ಅರ್ಥವಾದ ಅಂಥ ಜಾತಿವಿಶಿಷ್ಟವಾಗಿಯೂ, ಸ್ಥೂಲಕೃಶಪದಗಳ ಅರ್ಥವಾದ ಅಂಥ ಧರ್ಮವಿಶಿಷ್ಟವಾಗಿಯೂ ಇರುವ ದೇಹಕ್ಕೂ, ಅಹಂಶಬ್ದದ ಅರ್ಥವಾದ ಆತ್ಮತತ್ತ್ವಕ್ಕೂ ಅಭೇದಾನುಭವವು ಸರ್ವರಿಗೂ ಪ್ರತ್ಯಕ್ಷಸಿದ್ಧವಾಗಿ ಇರುವುದು.

ಉಕ್ತವಾದ ಈ ಅನುಭವವನ್ನು ಭ್ರಾಂತಿರೂಪವೆಂದು ಹೇಳಿ ಅಪ್ರಮಾಣವೆಂದು ನಿರಾಕರಿಸುವುದಕ್ಕೂ ಅವಕಾಶವಿಲ್ಲ; ಏತಕ್ಕೆಂದರೆ ಶುಕ್ತಿಕೆಯಲ್ಲಿ ಮೊತ್ತ ಮೊದಲು **ಇದಂ ರಜತಂ** ಎಂಬ ಭ್ರಾಂತಿಯುಂಟಾದರೂ **ನೇದಂ ರಜತಂ** ಎಂಬ ಬಾಧಜ್ಞಾನವು ಉತ್ತರತ್ರ ಉಂಟಾಗುವುದಾದುದರಿಂದ ಪೂರ್ವಾನುಭವಕ್ಕೆ ಭ್ರಾಂತಿತ್ವವನ್ನು ಅಂಗೀಕರಿಸಿ ಅಪ್ರಾಮಾಣ್ಯವನ್ನು ಹೇಳಬಹುದು; ಅಲ್ಲಿ ಪೂರ್ವಾನುಭವರೂಪವಾದ ಅಭೇದಪ್ರತ್ಯಕ್ಷವು ದೋಷಜನ್ಯವಾದುದರಿಂದ ಅನ್ಯಥಾಸಿದ್ಧವಾಗಿ ಅಪ್ರಮಾಣವೆನಿಸಿಕೊಳ್ಳಲು ಅರ್ಹವಾಗಿರುವುದು; ಉತ್ತರಾನುಭವರೂಪವಾದ ಭೇದಪ್ರತ್ಯಕ್ಷವು ನಿರ್ದುಷ್ಟಕಾರಣಜನ್ಯವಾದುದರಿಂದ ಅನನ್ಯಥಾಸಿದ್ಧವಾಗಿ ಪ್ರಮಾಣವೆನಿಸಿಕೊಂಡು ದುರ್ಬಲವಾದ ಪೂರ್ವಪ್ರತ್ಯಕ್ಷವನ್ನು ನಿರಾಕರಿಸುವುದಕ್ಕೆ ಸಮರ್ಥವಾಗಿರುವುದು. ಅದರಂತೆ ಇಲ್ಲಿ **ದೇವೋಽಹಂ ಮನುಷ್ಯೋಽಹಂ ಸ್ಥೂಲೋಽಹಂ ಕೃಶೋಽಹಂ** ಎಂಬ ಪೂರ್ವಾನುಭವಪ್ರತ್ಯಕ್ಷಕ್ಕೆ ವಿರುದ್ಧವಾಗಿ "**ನ ದೇವೋಽಹಂ ನ ಮನುಷ್ಯೋಽಹಂ ನ ಸ್ಥೂಲೋಽಹಂ ನ ಕೃಶೋಽಹಂ**" ಎಂಬ ಅನುಭವವು ಉತ್ತರತ್ರ ಯಾವಾಗಲೂ ಯಾರಿಗೂ

ಉಂಟಾಗುವುದೇ ಇಲ್ಲವಾದುದರಿಂದ ಪೂರ್ವಾನುಭವಕ್ಕೆ ದೋಷಜನ್ಯತ್ವವನ್ನೂ, ಅತ ಏವ ಭ್ರಾಂತಿರೂಪತ್ವವನ್ನೂ, ಅನ್ಯಥಾಸಿದ್ಧತ್ವವನ್ನೂ, ಅಪ್ರಾಮಾಣ್ಯವನ್ನೂ ಹೇಳಲು ಅವಕಾಶವಿಲ್ಲ. ಆದಕಾರಣ ದೇಹವೇ ಆತ್ಮನೆಂದು ನಿಷ್ಕರ್ಷಿಸುವುದಕ್ಕೆ ಉಕ್ತವಾದ ಈ ಪ್ರತ್ಯಕ್ಷಪ್ರಮಾಣವೇ ಸಾಕಾದಷ್ಟು ತೃಪ್ತಿಕರವಾದ ಪ್ರಮಾಣವಾಗಿ ಇರುವುದು.

ಹಾಗಾದರೆ “ ಸಂಘಾತಾತ್ಮಕವಾದ ದೇಹದಲ್ಲಿ ಪ್ರತ್ಯವಯವದಲ್ಲಿಯೂ ಚೈತನ್ಯವನ್ನು ಒಪ್ಪುವುದಾದರೆ ಅಂಥ ಅನೇಕ ಆತ್ಮತತ್ತ್ವಗಳಿಗೆ ಶರೀರದಲ್ಲಿ ಅಭಿಪ್ರಾಯಭೇದವುಂಟಾಗಬೇಕೆಂಬ ಪೂರ್ವೋಕ್ತದೂಷಣಕ್ಕೆ ಪರಿಹಾರವೇನು ” ಎಂದು ಚಿಂತಿಸಕೆಲಸವಿಲ್ಲ.

ಒಂದು ಗ್ರಾಮಕ್ಕೆ ಅಧಿಪತಿಗಳಾದ ಅನೇಕರೊಳಗೆ ಅಭಿಪ್ರಾಯಭೇದವು ಕಾಣುವಂತೆ ಶರೀರದಲ್ಲಿ ಅಭಿಪ್ರಾಯಭೇದವು ಯಾವಾಗಲೂ ಕಾಣುವುದಿಲ್ಲ ವಾದುದರಿಂದ ಪ್ರತ್ಯವಯವದಲ್ಲಿಯೂ ಒಂದೊಂದು ಆತ್ಮತತ್ತ್ವದಂತೆ ಅನೇಕಾತ್ಮತತ್ತ್ವಗಳನ್ನು ಈ ಶರೀರದಲ್ಲಿ ಒಪ್ಪಿಕೊಂಡರೂ ಅಭಿಪ್ರಾಯಭೇದವುಂಟಾಗದಿರುವಿಕೆಯೇ ಈ ಶರೀರಕ್ಕೆ ಸ್ವಾಭಾವಿಕವೆಂದು ಅಂಗೀಕರಿಸಬೇಕು. ಅಭಿಪ್ರಾಯಭೇದಾಭಾವಪ್ರತ್ಯಕ್ಷವೇ ಇದರಲ್ಲಿ ಜಾಗರೂಕವಾದ ಪ್ರಮಾಣವಾಗಿ ಇರುವಲ್ಲಿ ಯಾರೂ ಯಾವವಿಧವಾದ ಅನುಪಪತ್ತಿಯನ್ನೂ ಇಲ್ಲಿ ಹೇಳಲಾಗುವುದಿಲ್ಲ. ಪ್ರತ್ಯಕ್ಷಪ್ರಮಾಣದ ಮುಂದೆ ಇದಕ್ಕೆ ವಿರುದ್ಧವಾಗಿ ಯಾವ ಯುಕ್ತಿಯೂ ಯಾವ ಪ್ರಮಾಣವೂ ನಿಲ್ಲಲಾರವಷ್ಟೆ? **“ನ ಹಿ ದೃಷ್ಟೇಽನುಪಪನ್ನಂ ನಾಮ”** ಎಂದಲ್ಲವೆ ಶಾಸ್ತ್ರಕಾರರೂ ಬರೆವುದು? ಆದಕಾರಣ ದೇಹಾತಿರಿಕ್ತವಾದ ಆತ್ಮವಸ್ತು ಇಲ್ಲವೆಂಬುದರಲ್ಲಿಯೂ, ದೇಹವೇ ಆತ್ಮತತ್ತ್ವವಾಗಿರುವುದೆಂಬುದರಲ್ಲಿಯೂ, ಉಕ್ತಪ್ರತ್ಯಕ್ಷವೇ ದೃಢತರವಾದ ಪ್ರಮಾಣವಾಗಿ ಇರುವುದು. **ಇದೇ ಪೂರ್ವಪಕ್ಷದ ಫಲಿತಾಂಶವು.**

## ೩೧೯. ಸಿದ್ಧಾಂತಫಲಿತಾಂಶನಿರೂಪಣಂ.

**ಸಿದ್ಧಾಂತದ ಸಾರಾಂಶವು**—ಉಕ್ತವಾದ ಅಭೇದಪ್ರತ್ಯಕ್ಷವು ಸರ್ವಾನುಭವಸಿದ್ಧವಾಗಿ ಇರುವಂತೆ ಆತ್ಮಶರೀರಗಳಿಗೆ ಭೇದಪ್ರತ್ಯಕ್ಷವೂ ಸರ್ವಾನುಭವಸಿದ್ಧವಾಗಿ ಇಲ್ಲದಿದ್ದರೆ ನೀವು ಹೇಳುವಂತೆ ದೇಹವೇ ಆತ್ಮವೆಂದು ಒಪ್ಪಬಹುದಾಗಿ ಇದ್ದಿತು. ಹಾಗಿಲ್ಲದೆ, **ಮಮ ದೇಹಃ-ಮಮ ಹಸ್ತಃ-ಮಮ ಶಿರಃ-ಮಮ ಪಾದಃ** ಎಂಬುದಾಗಿ ಶರೀರಾತ್ಮಗಳಿಗೆ ಭೇದಪ್ರತ್ಯಕ್ಷವೂ ಸರ್ವಾನುಭವಸಿದ್ಧವಾಗಿ ಇರುವಲ್ಲಿ ಅಭೇದವನ್ನು ಹೇಗೆ ಅಂಗೀಕರಿಸಲಾದೀತು?

ಆದರೆ " ಪರಸ್ಪರವಿರುದ್ಧವಾದ ಈ ಎರಡು ಪ್ರತ್ಯಕ್ಷಗಳೂ ಆತ್ಮತತ್ತ್ವವಿಷಯದಲ್ಲಿ ಪ್ರವರ್ತಿಸಿ ಇರುವುದರಿಂದ ಆತ್ಮತತ್ತ್ವವು ಶರೀರಕ್ಕಿಂತಲೂ ಅಭಿನ್ನವೋ ಅಥವಾ ಭಿನ್ನವೋ ಎಂದು ಅನ್ಯತರಪಕ್ಷದ ನಿರ್ಣಯವು ಉಂಟಾಗುವುದಿಲ್ಲವಾದ ಕಾರಣ ಆತ್ಮವಿಷಯದಲ್ಲಿ ನಿತ್ಯಸಂದೇಹವೇ ನಿಲ್ಲುವುದು " ಎಂದು ಭ್ರಮಿಸಬಾರದು.

ವಿರುದ್ಧವಾದ ಎರಡು ಪ್ರಮಾಣಗಳು ಏಕವಸ್ತುವಿಷಯದಲ್ಲಿ ಪ್ರವರ್ತಿಸಿದರೂ—ವಸ್ತುವಿನಲ್ಲಿ ವಿಕಲ್ಪವು ಸಂಭವಿಸುವುದಿಲ್ಲವಾದುದರಿಂದ ಆ ಎರಡು ಪ್ರಮಾಣಗಳೊಳಗೆ ಆವುದು ದುರ್ಬಲ ಆವುದು ಪ್ರಬಲ ಎಂಬುದನ್ನು ವಿಚಾರಪೂರ್ವಕವಾಗಿ ಮೊದಲು ನಿರ್ಣಯಿಸಿಕೊಂಡು ಪ್ರಬಲಪ್ರಮಾಣದಿಂದ ದುರ್ಬಲಪ್ರಮಾಣವನ್ನು ನಿರಾಕರಿಸಿ ಪ್ರಬಲಪ್ರಮಾಣಕ್ಕೆ ಅನುಸಾರವಾಗಿಯೇ ಪ್ರಮೇಯದ ಸ್ವರೂಪವನ್ನು ನಿಷ್ಕರ್ಷಿಸಬೇಕು.

## ೩೨೦. ದೇಹಾತ್ಮನೋರಭೇದಪ್ರತ್ಯಕ್ಷಸ್ಯ ಸಂಸರ್ಗಾಖ್ಯದೋಷಮೂಲಕತ್ವಾದ್ದುರ್ಬಲತ್ವಂ.

ಪ್ರಕೃತದಲ್ಲಿ ಆತ್ಮವಸ್ತುವಿಗೆ ಶರೀರದೊಡನೆ ಅನಾದಿಕಾಲದಿಂದಲೂ ಉಂಟಾಗುತ್ತಲೇ ಬರುತ್ತಿರುವ ದೃಢತರಸಂಸರ್ಗವೆಂಬ ದೋಷವೇ ಅಭೇದಪ್ರತ್ಯಕ್ಷಕ್ಕೆ ಕಾರಣವಾಗಿ ಇರುವುದರಿಂದ ದುಷ್ಟಕಾರಣಜನ್ಯವಾದ ಈ ಅಭೇದಪ್ರತ್ಯಕ್ಷವು ಅನ್ಯಥಾಸಿದ್ಧವಾಗಿ ಭ್ರಾಂತಿಯೆನಿಸಿಕೊಂಡು ದುರ್ಬಲವಾಗುವುದಾದಪ್ರಯುಕ್ತ ಆತ್ಮಶರೀರಗಳಿಗೆ ಅಭೇದವನ್ನು ಸ್ಥಿರಪಡಿಸಲು ಇದು ಸಮರ್ಥವಾದ ಪ್ರಮಾಣವಾಗುವುದಿಲ್ಲ.

## ೩೨೧. ಭೇದಪ್ರತ್ಯಕ್ಷಸ್ಯ ಅದುಷ್ಟಕಾರಣಜನ್ಯತ್ವಾತ್ ಅಬಾಧಿತತ್ವಾಚ್ಚ ಪ್ರಾಬಲ್ಯಂ.

ಭೇದಪ್ರತ್ಯಕ್ಷಕ್ಕಾದರೆ ಇಂಥ ದೋಷವು ಆವುದೊಂದೂ ಇಲ್ಲವಾದುದರಿಂದಲೂ, ಉತ್ತರಕಾಲದಲ್ಲಿ ಬಾಧೆಯೂ ಇಲ್ಲವಾದುದರಿಂದಲೂ, ಅನನ್ಯಥಾಸಿದ್ಧವಾದ ಈ ಭೇದಪ್ರತ್ಯಕ್ಷವು ಪ್ರಬಲವೆನಿಸಿಕೊಂಡು ತನಗೆ ವಿರುದ್ಧವಾದ ಅಭೇದಪ್ರತ್ಯಕ್ಷವನ್ನು ನಿರಾಕರಿಸಿ ಆತ್ಮಶರೀರಗಳಿಗೆ ಭೇದವನ್ನು ಸ್ಥಿರಪಡಿಸಲು ಸಮರ್ಥವಾದ ಪ್ರಮಾಣವಾಗಿ ಇರುವುದು.

## ೩೨೨. ಸಂಸರ್ಗಸ್ಯ ದೋಷತ್ವೋಪಪಾದನಂ.

ಪೂಜ್ಯರೇ ? ಆತ್ಮವಸ್ತುವಿಗೆ ಅನಾದಿಕಾಲದಿಂದಲೂ ಶರೀರದೊಡನೆ ದೃಢತರವಾದ ಸಂಸರ್ಗವಿರಲಿ ; ಆದಮಾತ್ರಕ್ಕೆ ಈ ದೃಢತರಸಂಸರ್ಗವು ದೋಷವೆನಿಸಿ

ಕೊಳ್ಳುವ ಬಗೆ ಹೇಗೆ? ಮತ್ತು ಇಂಥ ಸಂಸರ್ಗದಿಂದ ಅಭೇದಭ್ರಾಂತಿಯುಂಟಾದುದನ್ನು ಮತ್ತೆಲ್ಲಿಯಾದರೂ ಕಾಣಬಹುದೋ?

ಹೌದು ಕಾಣಬಹುದು, ಅಯಃಪಿಂಡವನ್ನು ಎಂದರೆ ಕಬ್ಬಿಣದ ಗಟ್ಟಿಯನ್ನು ಬಲವತ್ತರವಾದ ಅಗ್ನಿಯಿಂದ ಕೆಂಪಗೆ ಕಾಯಿಸಿ ದೃಢತರವಾದ ಅಗ್ನಿಸಂಸರ್ಗವನ್ನು ಅದಕ್ಕೆ ಉಂಟುಮಾಡಿದರೆ ಇಂಥ ದೃಢತರಸಂಸರ್ಗವು, ಅಗ್ನಿಯೂ ಅಯಃಪಿಂಡವೂ ಭಿನ್ನಭಿನ್ನವೆಂದು ತಿಳಿದಿರುವವರಿಗೂ ಕೂಡ ಅಭೇದಭ್ರಮವನ್ನು ಉಂಟುಮಾಡುವುದಾದಕಾರಣ ವಸ್ತುವಿನ ಯಥಾವಸ್ಥಿತಸ್ವರೂಪಜ್ಞಾನಕ್ಕೆ ಕಾರಣವಾಗದೆ ಭ್ರಾಂತಿಜ್ಞಾನಕ್ಕೆ ಕಾರಣವಾಗುವುದಾದಪ್ರಯುಕ್ತ ಈ ದೃಢತರ ಸಂಸರ್ಗವು ದೋಷವೆನಿಸಿಕೊಳ್ಳುವುದು.

ಇದರಂತೆ ಆತ್ಮನಿಗೂ ಶರೀರಕ್ಕೂ ಇರುವ ದೃಢತರಸಂಸರ್ಗವು ಅವುಗಳ ಯಥಾವಸ್ಥಿತವಾದ ಭೇದಸ್ವರೂಪವನ್ನು ತಿಳಿಯಗೊಳಿಸದೆ ಅಭೇದಭ್ರಾಂತಿಗೆ ಕಾರಣವಾಗುವುದಾದುದರಿಂದ ದೋಷವೆನಿಸಿಕೊಳ್ಳಲು ತಡೆಯಿಲ್ಲ.

ಇಂಥ ದೋಷದಿಂದ ಉಂಟಾದ ಅಭೇದಪ್ರತ್ಯಕ್ಷವು ಅನ್ಯಥಾಸಿದ್ಧವಾಗಿ ಭ್ರಾಂತಿಯೆನಿಸಿಕೊಂಡು ದುರ್ಬಲವಾಗಿ ಇರುವುದಾದಕಾರಣ, ಅದುಷ್ಟಕಾರಣ ಜನ್ಯವಾಗಿಯೂ ಅನನ್ಯಥಾಸಿದ್ಧವಾಗಿಯೂ ಇರುವ ಪ್ರಮಾರೂಪವಾದ ಭೇದ ಪ್ರತ್ಯಕ್ಷವೆಂಬ ಪ್ರಬಲಪ್ರಮಾಣದ ಮುಂದೆ ನಿಲ್ಲಲಾರದು.

### ೩೨೩. ಪ್ರತ್ಯಕ್ಷಾನುಮಾನಾಗಮಾನಾಮನ್ಯತಮೇನಾಪಿ ದೇಹಾತಿರಿಕ್ತಾತ್ಮಸಾಧನಸಂಭವಃ

ಆದಕಾರಣ ಹೀಗೆ ಪ್ರತ್ಯಕ್ಷಮಾತ್ರಪ್ರಾಮಾಣ್ಯವಾದಿಗಳಾದ ಚಾರ್ವಾಕರನ್ನು ಪ್ರತ್ಯಕ್ಷಪ್ರಮಾಣದಿಂದಲೇ ನಿರಾಕರಿಸಿ ದೇಹಾತಿರಿಕ್ತವಾದ ಆತ್ಮತತ್ತ್ವವನ್ನು ಸ್ಥಿರಪಡಿಸಿದೆವು. ಒಂದುವೇಳೆ ಅವರು ಅನುಮಾನಪ್ರಮಾಣವನ್ನೂ ಒಪ್ಪುವವರಾದರೆ ಹಿಂದೆ ಹೇಳಿದಂತೆ ಸಂಘಾತತ್ವ, ರೂಪವತ್ತ್ವ, ಬಾಹ್ಯೇಂದ್ರಿಯ ಗೋಚರತ್ವವೆಂಬ ಹೇತುಗಳನ್ನು ತೋರಿಸಿ ಅನುಮಾನಪ್ರಮಾಣದಿಂದಲೂ ಅವರ ಮತವನ್ನು ನಿರಾಕರಿಸಿ ದೇಹಾತಿರಿಕ್ತವಾದ ಆತ್ಮತತ್ತ್ವವನ್ನು ಸಾಧಿಸಬಹುದು. ಒಂದುವೇಳೆ ಅವರು ವೈದ್ಯ ಮೊದಲಾದ ಆಗಮಗಳನ್ನು ಪ್ರಮಾಣಗಳಾಗಿ ಸ್ವೀಕರಿಸುವವರಾದರೆ ಶ್ರುತಿ ಸ್ಮೃತಿ ಮೊದಲಾದ ಆಗಮಗಳಿಂದಲೂ ಅವರನ್ನು ನಿರಾಕರಿಸಿ ದೇಹಾತಿರಿಕ್ತವಾದ ಆತ್ಮತತ್ತ್ವವನ್ನು ಸಾಧಿಸಬಹುದು ಕೇವಲ ಆಮುಷ್ಮಿಕಫಲಗಳಿಗೆ ಸಾಧನಗಳಾಗಿರುವ ದರ್ಶಪೂರ್ಣಮಾಸ, ಜ್ಯೋತಿಷ್ಟೋಮ

ಮುಂತಾದ ಕರ್ಮಗಳನ್ನು ವಿಧಿಸುವ ಆಗಮವು ಅಂಥ ಆಮುಷ್ಮಿಕಫಲವನ್ನು ಅನು ಭವಿಸುವುದಕ್ಕೆ ಯೋಗ್ಯವಾದ ದೇಹಾತಿರಿಕ್ತಾತ್ಮತತ್ತ್ವವನ್ನು ಅಂಗೀಕರಿಸಿದರ ಲ್ಲವೆ ಸಮಂಜಸವಾದೀತು.

ಅಂತು, ಅನುಮಾನಪ್ರಮಾಣ, ಆಗಮಪ್ರಮಾಣ ಇವುಗಳ ಸಹಾಯ ವಿಲ್ಲದೆ ಕೇವಲ ಪ್ರತ್ಯಕ್ಷಪ್ರಮಾಣದಿಂದಲೇ ಚಾರ್ವಾಕರನ್ನು ನಿರಾಕರಿಸಿ ದೇಹಾತಿ ರಿಕ್ತಾತ್ಮತತ್ತ್ವವನ್ನು ಸಾಧಿಸಬಹುದೆಂದು ಹೇಳಿದಹಾಗಾಯಿತು **ಇದೇ ಸಿದ್ಧಾಂತದ ಸಾರಾಂಶವಾಗಿರುವುದು.**

## ೩೨೪ ಸಿದ್ಧಾಂತ್ಯೇಕದೇಶಿಮತೇ ದೇಹಾತಿರಿಕ್ತಾತ್ಮನಃ ಶಾಸ್ತ್ರೈಕ ಸಮಧಿಗಮ್ಯತ್ವಪ್ರತಿಜ್ಞಾ

ಇಲ್ಲಿ ಸಿದ್ಧಾಂತ್ಯೇಕದೇಶಿಗಳಾದ ಕೆಲವರು "ದೇಹಾತಿರಿಕ್ತವಾದ ಆತ್ಮ ತತ್ತ್ವವು ಸಿದ್ಧಿಸಬೇಕಾದರೆ ಆಗಮದಿಂದಲೇ ಸಿದ್ಧಿಸಬೇಕಲ್ಲದೆ ಪ್ರತ್ಯಕ್ಷಪ್ರಮಾಣ ದಿಂದಲಾಗಲಿ ಅನುಮಾನಪ್ರಮಾಣದಿಂದಲಾಗಲಿ ಸಿದ್ಧಿಸಲಾರದು; ಆತ್ಮಸಿದ್ಧಿ ಗ್ರಂಥದಲ್ಲಿ ಪರಮಾಚಾರ್ಯರಾದ **ಯಾಮುನಮುನಿಗಳು ಆನುಮಾನಿ ಕೀಮಪ್ಯಾತ್ಮಸಿದ್ಧಿಮಶ್ರದ್ದಧಾನಾಃ ಶ್ರೌತೀಮೇವ ತಾಂ ಶ್ರೋತ್ರಿ ಯಾಃ ಸಂಗಿರಂತೇ** ಎಂದು ಹೇಳಿರುವರಷ್ಟೆ? ಆದಕಾರಣ ದೇಹಾತಿರಿಕ್ತಾ ತ್ಮಸಿದ್ಧಿಗಾಗಿ ಶಾಸ್ತ್ರವನ್ನೇ ಅವಲಂಬಿಸಬೇಕು—ಎಂದು ಹೇಳುವರು.

## ೩೨೫ ಸಿದ್ಧಾಂತ್ಯೇಕದೇಶಿನಾಂ ಹಾರ್ದಿಕಭಾವಾವಿಷ್ಕರಣಂ

ಹೀಗೆ ಹೇಳುವ ಸಿದ್ಧಾಂತ್ಯೇಕದೇಶಿಗಳ ಹಾರ್ದಿಕವಾದ ಅಭಿಪ್ರಾಯವೇ ನೆಂದರೆ ಪೂರ್ವಪಕ್ಷಿಗಳಿಗೆ ಅಭಿಮತವಾದ ಅಭೇದಪ್ರತ್ಯಕ್ಷಕ್ಕೆ ದೌರ್ಬಲ್ಯವೂ, ಸಿದ್ಧಾಂತಿಗಳಿಗೆ ಅಭಿಮತವಾದ ಭೇದಪ್ರತ್ಯಕ್ಷಕ್ಕೆ ಪ್ರಾಬಲ್ಯವೂ ಸಿದ್ಧಿಸಿದರಲ್ಲವೆ ಕೇವಲಪ್ರತ್ಯಕ್ಷದಿಂದ ದೇಹಾತಿರಿಕ್ತಾತ್ಮಸಿದ್ಧಿಯನ್ನು ಹೇಳಬಹುದು; ಇಲ್ಲಿ ಅದೇ ಇಲ್ಲ: ಪೂರ್ವಪಕ್ಷಿಗಳ ಹೇಳಿಕೆಯಂತೆ ಅಭೇದಪ್ರತ್ಯಕ್ಷವೇ ಪ್ರಬಲವಾಗುವು ದಲ್ಲದೆ ಭೇದಪ್ರತ್ಯಕ್ಷವು ಪ್ರಬಲವಾಗಲಾರದು. ಹೇಗೆಂದರೆ—

## ೩೨೬ ಭೇದಗ್ರಾಹಿತ್ವೇನಾಭಿಮತಸ್ಯಾಪಿ ಪ್ರತ್ಯಕ್ಷಸ್ಯ ಅಭೇದ ಗ್ರಾಹಿತ್ವೋಪಪಾದನಂ

**ಮಮ ದೇಹಃ-ಮಮ ಹಸ್ತಃ-ಮಮ ಶಿರಃ-ಮಮ ಪಾದಃ-** ಇತ್ಯಾದಿಪ್ರತ್ಯಕ್ಷವನ್ನಲ್ಲವೆ ಭೇದಪ್ರತ್ಯಕ್ಷವನ್ನಾಗಿ ಹೇಳುವಿರಿ? ಈ ಪ್ರತ್ಯಕ್ಷವು

ಆತ್ಮಶರೀರಗಳಿಗೆ **ಭೇದವನ್ನು** ತೋರಿಸುವುದಾಗಿಲ್ಲ. ಕಿಂತು **ಅಭೇದವನ್ನೇ** ತೋರಿಸುವುದು. ಹೇಗೆಂದರೆ—**ಮಮಾತ್ಮಾ** ಎಂಬ ಸ್ಥಳದಲ್ಲಿ **ಮಮ** ಎಂದು ಹೇಳಿಕೊಳ್ಳುವ ಆತ್ಮನಿಗೆ ಮತ್ತೊಂದು ಆತ್ಮವಸ್ತು ಇಲ್ಲವಾದುದರಿಂದ ಅಲ್ಲಿ ರುವ ಆತ್ಮಶಬ್ದಕ್ಕೆ ಸ್ವರೂಪವೆಂದು ಅರ್ಥವಾಗಿ **ಮಮಸ್ವರೂಪಂ** ಎಂದು ಪರ್ಯವಸಾನವಾಗಿ ಆತ್ಮನಿಗೂ ಅವನ ಸ್ವರೂಪಕ್ಕೂ ಅಭೇದವೇ ಹೇಗೆಬೋಧಿಸ ಲ್ಪಡುವುದೋ ಅದರಂತೆ **ಮಮ ದೇಹಃ** ಇತ್ಯಾದಿಸ್ಥಳದಲ್ಲಿಯೂ **ದೇಹಃ ಹಸ್ತಃ ಶಿರಃ ಪಾದಃ** ಎಂಬ ಈ ಶಬ್ದಗಳಿಗೂ ಸ್ವರೂಪವೆಂದು ಅರ್ಥವಾಗಿ **ಮಮ ಸ್ವರೂಪಂ** ಎಂದು ಪರ್ಯವಸಾನವಾಗಿ ದೇಹಾದಿಗಳೇ ಆತ್ಮನ ಸ್ವರೂಪ ವೆಂದು ಅಭೇದವೇ ತೋರುವುದಲ್ಲದೆ ಇಲ್ಲಿ ಭೇದಸ್ಫೂರ್ತಿಯೇ ಇಲ್ಲ.

## ೩೨೭ ತದರ್ಥಂ ಸ್ವರೂಪಶಬ್ದಾರ್ಥಪರಿಷ್ಕರಣಂ

**"ತನಗೆ ಅಸಾಧಾರಣವಾದ ಧರ್ಮದೊಡನೆ ಕೂಡಿರುವ ಧರ್ಮಿಯೇ ಸ್ವರೂಪವೆನಿಸಿಕೊಳ್ಳುವುದು"** ತನಗೆ ಅಸಾಧಾರಣವಾದ ಧರ್ಮವೆಂದರೆ **ಸ್ವವ್ಯತಿರಿಕ್ತವಾದ ವಸ್ತುವಿನಲ್ಲಿ ಇಲ್ಲದೆ ಇರುವ ಧರ್ಮವು ಘಟಸ್ಯ ಸ್ವರೂಪಂ** ಎಂಬ ಸ್ಥಳದಲ್ಲಿ ಸ್ವರೂಪಶಬ್ದಕ್ಕೆ **ವ್ಯತಿರಿಕ್ತವಸ್ತುವಿ ನಲ್ಲಿ ಇಲ್ಲದಿರುವ ಧರ್ಮದೊಡನೆ ಕೂಡಿದ ಧರ್ಮಿ** ಎಂದು ಅರ್ಥ ವಾಗುವುದು. ಯಾವುದಕ್ಕಿಂತಲೂ ವ್ಯತಿರಿಕ್ತವೆಂದು ಪ್ರತಿಸಂಬಂಧಿಯ ಆಕಾಂಕ್ಷೆಯುಂಟಾದರೆ **ಘಟಸ್ಯ** ಎಂಬ ಷಷ್ಠ್ಯಂತವಾದ ಪದವು ಪ್ರಾತಿ ಪದಿಕದಿಂದ ಘಟಪದಾರ್ಥವನ್ನು ಬೋಧಿಸಿ ಷಷ್ಠೀವಿಭಕ್ತಿಪ್ರತ್ಯಯದಿಂದ ಆ ಘಟಪದಾರ್ಥಕ್ಕೆ ಪ್ರತಿಸಂಬಂಧಿತ್ವವನ್ನು ತೋರಿಸುವುದಾದಕಾರಣ ಸ್ವರೂಪ ಪದಾರ್ಥದ ಏಕದೇಶವಾದ ಭೇದದಲ್ಲಿ ಘಟಪದಾರ್ಥವೇ ಪ್ರತಿಸಂಬಂಧಿಯಾಗಿ ಅನ್ವಯಿಸುವುದರಿಂದ **ಘಟಸ್ಯ ಸ್ವರೂಪಂ** ಎಂಬ ವಾಕ್ಯಕ್ಕೆ **ಘಟವ್ಯತಿರಿಕ್ತ ವಾದ ವಸ್ತುವಿನಲ್ಲಿ ಇಲ್ಲದಿರುವ ಧರ್ಮದೊಡದೆ ಕೂಡಿರುವ ಧರ್ಮಿ** ಎಂದು ಅರ್ಥವಾಗುವುದು.

## ೩೨೮. ಪುನಃ ಪ್ರಕಾರಾಂತರೇಣ ಪರಿಷ್ಕರಣಂ

ಅಥವಾ—ಅಸಾಧಾರಣಧರ್ಮವೆಂದರೆ—ಏಕಮಾತ್ರದಲ್ಲಿ ಇರುವ ಧರ್ಮವು. ಎಂದರೆ **ಭೇದಪ್ರತಿಸಂಬಂಧಿಯಲ್ಲಿಯೂ ಭೇದಾಶ್ರಯದಲ್ಲಿಯೂ ಇರುವುದರಿಂದ ಭೇದವಿಶಿಷ್ಟವೆಂದು ಹೇಳಿಸಿಕೊಳ್ಳುವ ಧರ್ಮಕ್ಕಿಂ**

**ತಲೂ ಭಿನ್ನವಾದ ಧರ್ಮವು.** ಘಟ ಪಟ ಈ ಎರಡು ಪದಾರ್ಥಗಳ ಪರ ವಾಗಿ ವಿಚಾರಮಾಡಿ ನೋಡಿದರೆ ಘಟತ್ವವೆಂಬ ಧರ್ಮವು ಘಟಮಾತ್ರದಲ್ಲಿಯೂ ದ್ರವ್ಯತ್ವವೆಂಬ ಧರ್ಮವು ಘಟಪಟಗಳೆರಡರಲ್ಲಿಯೂ ಇರುವುದು; ಪಟವು ಘಟಕ್ಕಿಂ ತಲೂ ಭಿನ್ನವಾಗಿ ಇರುವುದರಿಂದ ಘಟಪ್ರತಿಯೋಗಿಕವಾದ ಭೇದವು ಪಟದಲ್ಲಿ ಇರುವುದು. ದ್ರವ್ಯತ್ವವೆಂಬ ಧರ್ಮವು ಪಟಗತವಾದ ಭೇದಕ್ಕೆ ಪ್ರತಿಯೋಗಿಯಾದ ಘಟದಲ್ಲಿಯೂ ಇದ್ದು ಅಂಥ ಭೇದಕ್ಕೆ ಆಶ್ರಯವಾದ ಪಟದಲ್ಲಿಯೂ ಇರುವುದ ರಿಂದ ಈ ದ್ರವ್ಯತ್ವವೆಂಬ ಧರ್ಮವು ಉಕ್ತವಾದ ಉಭಯಸಂಬಂಧದಿಂದ ಭೇದವಿಶಿ ಷ್ಟವೆನಿಸಿಕೊಳ್ಳುವುದು. ಘಟತ್ವವೆಂಬ ಧರ್ಮವಾದರೆ ಪಟದಲ್ಲಿ ಇಲ್ಲದೆ ಘಟಮಾತ್ರ ದಲ್ಲಿ ಇರುವುದರಿಂದ ಉಕ್ತವಾದ ಉಭಯಸಂಬಂಧದಿಂದ ಭೇದವಿಶಿಷ್ಟವೆನಿಸಿಕೊಳ್ಳ ಲಾರದು. ಆದಕಾರಣ ಉಕ್ತವಾದ ಉಭಯಸಂಬಂಧದಿಂದ ಭೇದವಿಶಿಷ್ಟವಾದ ದ್ರವ್ಯತ್ವಧರ್ಮಕ್ಕಿಂತಲೂ ಉಕ್ತವಾದ ಉಭಯಸಂಬಂಧದಿಂದ ಭೇದವಿಶಿಷ್ಟವಲ್ಲದ ಘಟತ್ವವೆಂಬ ಧರ್ಮವು ಭಿನ್ನವಾಗಿ ಇರುವುದರಿಂದ ಏಕಮಾತ್ರದಲ್ಲಿ ಇರುವ ಧರ್ಮ ವೆನಿಸಿಕೊಂಡು ಅಸಾಧಾರಣಧರ್ಮವೆನಿಸಿಕೊಳ್ಳಲು ತಡೆಯಿಲ್ಲ.

ಅಂತು. **ಘಟಸ್ಯ ಸ್ವರೂಪಂ** ಎಂಬ ಸ್ಥಳದಲ್ಲಿ ಸ್ವರೂಪಶಬ್ದಕ್ಕೆ **ಏಕಮಾತ್ರದಲ್ಲಿ ಇರುವ ಧರ್ಮದೊಡನೆ ಕೂಡಿದ ಧರ್ಮಿ** ಎಂದು ಅರ್ಥವಾಗುವುದು—ಎಂದರೆ **ಭೇದಪ್ರತಿಯೋಗಿಯಲ್ಲಿಯೂ ಭೇದಾ ಶ್ರಯದಲ್ಲಿಯೂ ಇರುವುದರಿಂದ ಭೇದವಿಶಿಷ್ಟವೆಂದು ಹೇಳಿಸಿಕೊ ಳ್ಳುವ ಧರ್ಮಕ್ಕಿಂತಲೂ ಭಿನ್ನವಾದ ಧರ್ಮದೊಡನೆ ಕೂಡಿದ ಧರ್ಮಿ** ಎಂದು ಅರ್ಥವಾಗುವುದು. ಯಾವುದರಲ್ಲಿರುವ ಧರ್ಮವೆಂದು ಆಕಾಂಕ್ಷೆಯುಂಟಾ ದರೆ **ಘಟಸ್ಯ** ಎಂಬ ಷಷ್ಠ್ಯಂತವಾದ ಪದವು ಪ್ರಾತಿಪದಿಕದಿಂದ ಘಟ ಪದಾರ್ಥವನ್ನು ಬೋಧಿಸಿ ಷಷ್ಠೀವಿಭಕ್ತಿಪ್ರತ್ಯಯದಿಂದ ಅದಕ್ಕೆ ಆಧಾರತ್ವವನ್ನು ಬೋಧಿಸುವುದರಮೂಲಕ ಉಕ್ತವಾದ ಧರ್ಮದಲ್ಲಿ ಆಧೇಯತ್ವವನ್ನು ತೋರಿಸುವು ದಾದಕಾರಣ ಸ್ವರೂಪಪದಾರ್ಥದ ಏಕದೇಶವಾದ ಧರ್ಮದಲ್ಲಿ ಷಷ್ಠೀವಿಭಕ್ತಿಯ ಅರ್ಥವಾದ ಆಧೇಯತ್ವಕ್ಕೆ ಅನ್ವಯವಿರುವುದರಿಂದ **ಘಟಸ್ಯ ಸ್ವರೂಪಂ** ಎಂಬ ವಾಕ್ಯಕ್ಕೆ **ಘಟದಲ್ಲಿ ಇರುವ ಏಕಮಾತ್ರವೃತ್ತಿಧರ್ಮದೊಡನೆ ಕೂಡಿರುವ ಧರ್ಮಿ** ಎಂದು ಅರ್ಥವಾಗುವುದು.

ಇದರಂತೆ **ಮಮ ದೇಹಃ** ಎಂಬ ಸ್ಥಳದಲ್ಲಿಯೂ ದೇಹಶಬ್ದವು ಸ್ವರೂಪವೆಂಬ ಅರ್ಥವನ್ನೇ ತೋರಿಸುವುದರಿಂದ ಪ್ರಥಮಪಕ್ಷದಲ್ಲಿ ಹೇಳಿದಂತೆ

"ಮದ್ವ್ಯತಿರಿಕ್ತವಾದ ವಸ್ತುವಿನಲ್ಲಿ ಇಲ್ಲದಿರುವ ಧರ್ಮದೊಡನೆ ಕೂಡಿರುವ ಧರ್ಮಿ" ಎಂದಾಗಲಿ, ಅಥವಾ ದ್ವಿತೀಯಪಕ್ಷದಲ್ಲಿ ಹೇಳಿದಂತೆ "ಮದ್ವೃತ್ತಿಯಾದ ಏಕಮಾತ್ರವೃತ್ತಿಧರ್ಮದೊಡನೆ ಕೂಡಿರುವ ಧರ್ಮಿ" ಎಂದಾಗಲಿ ಅರ್ಥವಾಗುವುದು.

## ೩೨೯. ಉಕ್ತಪ್ರತ್ಯಕ್ಷೇಣಾತ್ಮನೋ ದೇಹಾತಿರಿಕ್ತತ್ವಾಸಿದ್ಧಿಃ.

ಅಂತು ಸ್ವರೂಪವಾಚಿಯಾದ ದೇಹಶಬ್ದದೊಡನೆ ಕೂಡಿರುವ "**ಮಮ ದೇಹಃ**" ಎಂಬ ವಾಕ್ಯದಿಂದ ಉಂಟಾಗುವ ಜ್ಞಾನದಲ್ಲಿ ಏಕಮಾತ್ರವೃತ್ತಿಧರ್ಮವು ಆತ್ಮನಿಷ್ಠವಾಗಿ ಇರುವುದೆಂದು ತೋರಿದರೂ ಆತ್ಮವಸ್ತು ದೇಹಕ್ಕಿಂತಲೂ ಭಿನ್ನವಾದುದೆಂದು ತೋರುವುದಿಲ್ಲವಾದಕಾರಣ "**ಮಮ ದೇಹಃ**" ಎಂಬ ಪ್ರತ್ಯಕ್ಷವು "**ಸ್ಥೂಲೋऽಹಂ-ಕೃಶೋऽಹಂ**" ಎಂಬ ಅಭೇದಪ್ರತ್ಯಕ್ಷವನ್ನು ನಿರಾಕರಿಸಲು ಸಮರ್ಥವಾಗಲಾರದು. ಆದಕಾರಣ ಅಭೇದಪ್ರತ್ಯಕ್ಷವೇ ನಿಷ್ಪ್ರತಿದ್ವಂದ್ವಿಯಾಗಿ ಪ್ರಬಲಪ್ರಮಾಣವೆನಿಸಿಕೊಂಡು ದೇಹಕ್ಕೂ ಆತ್ಮತತ್ತ್ವಕ್ಕೂ ಐಕ್ಯವನ್ನೇ ತೋರಿಸುತ್ತಿರುವುದಾದುದರಿಂದ ಇದನ್ನು ನಿರಾಕರಿಸಬಲ್ಲುದಾಗಿಯೂ ಇದಕ್ಕಿಂತಲೂ ಪ್ರಬಲವಾಗಿಯೂ ಇರುವ ಮತ್ತೊಂದು ಪ್ರತ್ಯಕ್ಷವು ಸಿದ್ಧಾಂತಿಗಳಿಗೆ ಇಲ್ಲವಾದಕಾರಣ "**ದೇಹಾತಿರಿಕ್ತವಾದ ಆತ್ಮತತ್ತ್ವವು ಕೇವಲ ಪ್ರತ್ಯಕ್ಷದಿಂದ ಸಿದ್ಧಿಸಲಿಲ್ಲ.**"

## ೩೩೦. ಅನುಮಾನೇನಾಪಿ ಆತ್ಮನೋ ದೇಹಾತಿರಿಕ್ತತ್ವಾಸಿದ್ಧ್ಯುಪಪಾದನಂ.

ಹೋಗಲಿ, ಆದರೆ ಕೆಳಗೆ ಹೇಳಿದಂತೆ ಸಂಘಾತತ್ವಾದಿಹೇತುಗಳನ್ನು ತೋರಿಸಿ ಅನುಮಾನಪ್ರಮಾಣದಿಂದ ದೇಹಾತಿರಿಕ್ತಾತ್ಮತತ್ತ್ವವನ್ನು ಸಾಧಿಸಬಹುದಲ್ಲವೆ? ಇಲ್ಲ; ಅದೂ ಸಾಧ್ಯವಿಲ್ಲ, ಪ್ರಬಲಪ್ರಮಾಣದಿಂದ ದುರ್ಬಲಪ್ರಮಾಣವನ್ನು ನಿರಾಕರಿಸಬಹುದಲ್ಲದೆ ದುರ್ಬಲಪ್ರಮಾಣದಿಂದ ಪ್ರಬಲಪ್ರಮಾಣವನ್ನು ನಿರಾಕರಿಸಲು ಸಾಧ್ಯವಿಲ್ಲ. ಇತರವಾದ ಸಮಸ್ತಪ್ರಮಾಣಗಳಿಗಿಂತಲೂ ಪ್ರಬಲವಾದ ಪ್ರತ್ಯಕ್ಷಪ್ರಮಾಣವನ್ನೇ ತೋರಿಸಿ ಚಾರ್ವಾಕರು ದೇಹಾತ್ಮೈಕ್ಯವನ್ನು ಘೋಷಿಸುತ್ತಿರುವಾಗ ಅದಕ್ಕಿಂತಲೂ ದುರ್ಬಲವಾದ ಅನುಮಾನಪ್ರಮಾಣದಿಂದ ಅದನ್ನು ಹೇಗೆ ನಿರಾಕರಿಸಲಾದೀತು?

ಪ್ರತ್ಯಕ್ಷಪ್ರಮಾಣವನ್ನೇ ಮೂಲವಾಗಿ ಮಾಡಿಕೊಂಡು ಅನುಮಾನಪ್ರಮಾಣವು ಜೀವಿಸುವುದಾದುದರಿಂದ ಮೂಲಭೂತವಾದ ಪ್ರತ್ಯಕ್ಷದೊಡನೆ ಅನುಮಾನಕ್ಕೆ ವಿರೋಧವು ಉಂಟಾಗುವ ಸಂದರ್ಭದಲ್ಲಿ ಮೂಲವಾದ ಪ್ರತ್ಯಕ್ಷವೇ

ಪ್ರಬಲವಾಗಿ ದುರ್ಬಲವಾದ ಅನುಮಾನವನ್ನೇ ನಿರಾಕರಿಸುವುದಲ್ಲದೆ ಅನುಮಾನವು ಪ್ರತ್ಯಕ್ಷವನ್ನು ನಿರಾಕರಿಸಲಾರದು. ಹಾಗೆ ನಿರಾಕರಿಸುವುದಾದರೆ, ವಹ್ನಿ, ಉಷ್ಣ ಸ್ಪರ್ಶಗುಣವುಳ್ಳದೆಂದು ಪ್ರತ್ಯಕ್ಷದಿಂದ ತಿಳಿದಿದ್ದರೂ, "ವಹ್ನಿಯೂ ಪದಾರ್ಥವು, ಜಲವೂ ಪದಾರ್ಥವು, ಪದಾರ್ಥವಾದ ಜಲದಲ್ಲಿ ಶೈತ್ಯಗುಣವಿರುವುದರಿಂದ ಪದಾರ್ಥವಾದ ವಹ್ನಿಯಲ್ಲಿಯೂ ಶೈತ್ಯಗುಣವಿರಬೇಕು" ಎಂಬ ಅನುಮಾನ ದಿಂದ ಉಷ್ಣತ್ವಪ್ರತ್ಯಕ್ಷವನ್ನೂ ಬಾಧಿಸಿ ವಹ್ನಿಯಲ್ಲಿ ಶೈತ್ಯಗುಣವನ್ನು ಒಪ್ಪಿ ಕೊಳ್ಳಬೇಕಾಗಿ ಬರುವುದು. ಆದಕಾರಣ ದೇಹಾತ್ಮಗಳ ಐಕ್ಯವನ್ನು ತೋರಿಸುವ ಪ್ರತ್ಯಕ್ಷಪ್ರಮಾಣವು ಜಾಗರೂಕವಾಗಿ ಇರುವಾಗ ಅದಕ್ಕೆ ವಿರುದ್ಧವಾಗಿ ಶರೀ ರಾತ್ಮಗಳ ಭೇದವನ್ನು ತೋರಿಸುವ ಅನುಮಾನವು ಹುಟ್ಟುವುದಕ್ಕೇ ಅವಕಾಶವಿಲ್ಲ ವಾದುದರಿಂದ, **ದೇಹಾತಿರಿಕ್ತವಾದ ಆತ್ಮತತ್ತ್ವವು ಅನುಮಾನ ಪ್ರಮಾಣದಿಂದಲೂ ಸಿದ್ಧಿಸಲಿಲ್ಲ.**

### ೩೩೧. ಅತಃ ಶಾಸ್ತ್ರೇಣೈವ ದೇಹಾತಿರಿಕ್ತಾತ್ಮಸಿದ್ಧಿನಿಗಮನಂ.

ನಿತ್ಯನಿರ್ದೋಷವಾಗಿಯೂ, ಬಾಧಕಜ್ಞಾನರಹಿತವಾಗಿಯೂ, ಅನಾದಿ ನಿಧನಾವಿಚ್ಛಿನ್ನಸಂಪ್ರದಾಯವಾಗಿಯೂ ಇರುವ ಅನನ್ಯಥಾಸಿದ್ಧವಾದ ಶಾಸ್ತ್ರ ದಿಂದಲಾದರೆ **"ಸ್ಥೂಲೋಽಹಂ-ಕೃಶೋಽಹಂ"** ಇತ್ಯಾದಿಪ್ರತ್ಯಕ್ಷವು ತಡೆಯಿಲ್ಲದೆ ಬಾಧಿಸಲ್ಪಡುವುದಾದುದರಿಂದ—**ದೇಹಾತಿರಿಕ್ತಾತ್ಮತತ್ತ್ವವು ಆಗಮದಿಂದಲೇ ಸಿದ್ಧಿಸಬೇಕು.** ಇದೇ ಸಿದ್ಧಾಂತ್ಯೇಕದೇಶಿಗಳ ಹಾರ್ದಿಕ ವಾದ ಅಭಿಪ್ರಾಯವಾಗಿ ಇರುವುದು.

### ೩೩೨. ಉಕ್ತಸ್ಯೈಕದೇಶಿಮತಸ್ಯ ನಿರಾಕರಣಾಯ ಕೇವಲ ಪ್ರತ್ಯಕ್ಷೇಣೈವ ದೇಹಾತಿರಿಕಾತ್ಮಸಿದ್ಧಿಸಮರ್ಥನಂ.

ಆದರೆ, ಈ ಏಕದೇಶಿಗಳ ಮತವು ಅಷ್ಟು ಸ್ವಾರಸಿಕವಾದುದಾಗಿಯೂ ಸಮಂಜಸವಾದುದಾಗಿಯೂ ಇಲ್ಲ. ಹೇಗೆಂದರೆ—ಅಭೇದಪ್ರತ್ಯಕ್ಷಕ್ಕಿಂತಲೂ ಭೇದಪ್ರತ್ಯಕ್ಷಕ್ಕೆ ನೀವು ತೋರಿಸಿದಂತೆ ಅನ್ಯಥಾಸಿದ್ಧಿಯನ್ನೂ ದೌರ್ಬಲ್ಯವನ್ನೂ ಹೇಳಲಾಗುವುದಿಲ್ಲ. **"ಮಮ ದೇಹಃ"** ಇತ್ಯಾದಿಸ್ಥಳದಲ್ಲಿ ಸ್ವರೂಪವಿವ ಕ್ಷೆಯಿಂದಲೇ ದೇಹಾದಿಶಬ್ದಗಳು ಪ್ರಯೋಗಿಸಲ್ಪಟ್ಟಿರುವುವೆಂಬ ನಿಯಮವಿಲ್ಲ. ಸ್ವರೂಪವಿವಕ್ಷೆಯಿಲ್ಲದಿರುವಾಗಲೂ ಕೇವಲ ದೇಹಾದಿವಿವಕ್ಷೆಯಿಂದಲೂ ದೇಹಾ ದಿಶಬ್ದಪ್ರಯೋಗವು ಲೋಕದಲ್ಲಿ ಕಾಣುತ್ತಿರುವುದಷ್ಟೆ? ಆದಕಾರಣ **"ಮಮ**

ದೇಹಃ ” ಎಂಬ ಸ್ಥಳದಲ್ಲಿ ಮಮ ಎಂಬ ಪದದ ಪ್ರಕೃತಿಗೆ ಆತ್ಮನೂ, ಷಷ್ಠೀ ವಿಭಕ್ತಿಪ್ರತ್ಯಯಕ್ಕೆ ಸಂಬಂಧವೂ, ದೇಹಪದಕ್ಕೆ ಶರೀರವೂ, ಅರ್ಥವಾಗಿರುವುದ ರಿಂದ “ಮಮ ದೇಹಃ” ಎಂಬ ವಾಕ್ಯದಿಂದ ಉಂಟಾಗುವ ಜ್ಞಾನವು ಆತ್ಮವಸ್ತುವನ್ನೂ ದೇಹವನ್ನೂ ಹೇಗೆ ಗ್ರಹಿಸುವುದೋ, ಹಾಗೆಯೇ ದೇಹದಲ್ಲಿ ಆತ್ಮಸಂಬಂಧವನ್ನೂ ಗ್ರಹಿಸಿಯೇ ಗ್ರಹಿಸುವುದು. ಷಷ್ಠೀವಿಭಕ್ತಿಯಿಂದ ಬೋಧಿ ಸಲ್ಪಟ್ಟ ಸಂಬಂಧವು ಭೇದರೂಪವಾಗಿಯೇ ಇರುವುದರಿಂದಲಾಗಲಿ, ಅಥವಾ ಇಂಥ ಸಂಬಂಧವು ಯಾವುದರಲ್ಲಿ ಇರುವುದೋ ಅದರಲ್ಲಿ ಭೇದವೂ ಆವಶ್ಯಕವಾಗಿ ಇದ್ದೇ ಇರುವಕಾರಣ ಭೇದವ್ಯಾಪ್ಯವಾಗಿ ಇರುವುದರಿಂದಲಾಗಲಿ ದೇಹಪದಾರ್ಥ ಕ್ಕೂ ಆತ್ಮಪದಾರ್ಥಕ್ಕೂ ಪರಸ್ಪರಭೇದವೇ ಈ ಪ್ರತ್ಯಕ್ಷಪ್ರಮಾಣದಿಂದ ಅಬಾ ಧಿತವಾಗಿ ಬೋಧಿಸಲ್ಪಡುವಕಾರಣ ಇದಕ್ಕೆ ವಿರುದ್ಧವಾದ ಅಭೇದಪ್ರತ್ಯಕ್ಷವನ್ನು ಇದರಿಂದ ಬಾಧಿಸಿ ದೇಹಾತಿರಿಕ್ತವಾದ ಆತ್ಮತತ್ತ್ವವನ್ನು ಶಾಸ್ತ್ರಸಹಾಯವಿಲ್ಲದೆ ಕೇವಲ ಭೇದಪ್ರತ್ಯಕ್ಷದಿಂದಲೇ ಸಾಧಿಸಲು ಯಾವ ತಡೆಯೂ ಇಲ್ಲ.

## ೩೩೩. ಉಕ್ತಪ್ರತ್ಯಕ್ಷೇ ಅಭೇದಸ್ಯಾಪಿ ಷಷ್ಠೀವಿಭಕ್ತ್ಯರ್ಥತ್ವಾಶಂಕಾ.

ಪೂಜ್ಯರೇ ? ಷಷ್ಠೀವಿಭಕ್ತಿಯಿಂದ ಬೋಧಿಸಲ್ಪಟ್ಟ ಸಂಬಂಧವು ಭೇದ ರೂಪವಾಗಿಯೇ ಇರಬೇಕೆಂಬ ನಿರ್ಬಂಧವೇನು ? ಅಭೇದವೂ ಷಷ್ಠೀವಿಭಕ್ತಿಯ ಅರ್ಥವಾಗಿ ಏತಕ್ಕೆ ಇರಕೂಡದು ? “ರಾಹೋಶ್ಶಿರಃ ಶಿಲಾಪುತ್ರಕಸ್ಯ ಶರೀರಂ” ಇತ್ಯಾದಿಸ್ಥಳಗಳಲ್ಲಿ—ಎಂದರೆ, “ರಾಹುವಿನ ತಲೆ, ಪುತ್ತಳಿಯ ದೇಹವು” ಇತ್ಯಾದಿಸ್ಥಳಗಳಲ್ಲಿ ಅಭೇದವೇ ಷಷ್ಠೀವಿಭಕ್ತಿಯ ಅರ್ಥವಾಗಿ ಇರುವು ದಲ್ಲವೆ ? ಶಿರೋಭಾಗವೇ ರಾಹುವೆನಿಸಿಕೊಂಡು ರಾಹುವಿಗೆ ಮತ್ತೊಂದು ಶಿರ ಸ್ಸಿಲ್ಲವಾದಕಾರಣ “ರಾಹೋಶ್ಶಿರಃ” ಎಂಬ ಸ್ಥಳದಲ್ಲಿ ಅಭೇದವೇ ಷಷ್ಠೀ ವಿಭಕ್ತಿಯ ಅರ್ಥವಾಗಿ ಇರುವುದು. ಬೊಂಬೆಯ ಆಕಾರದಿಂದ ನಿಂತಿರುವ ಒಂದು ಬಗೆಯ ಶರೀರವೇ ಪುತ್ತಳಿಯೆನಿಸಿಕೊಂಡು, ಪುತ್ತಳಿಗೆ ಮತ್ತೊಂದು ಶರೀರವಿಲ್ಲ ವಾದಕಾರಣ “ಶಿಲಾಪುತ್ರಕಸ್ಯ ಶರೀರಂ” ಎಂಬ ಸ್ಥಳದಲ್ಲಿಯೂ ಅಭೇದವೇ ಷಷ್ಠೀವಿಭಕ್ತಿಯ ಅರ್ಥವಾಗಿ ಇರುವುದು.

ಅದರಂತೆಯೇ “ಮಮ ದೇಹಃ” ಎಂಬ ಸ್ಥಳದಲ್ಲಿಯೂ ಅಭೇದವೇ ಷಷ್ಠೀವಿಭಕ್ತಿಯ ಅರ್ಥವಾಗಿ ದೇಹಾತ್ಮಗಳ ಐಕ್ಯವೇ ಈ ಪ್ರತ್ಯಕ್ಷದಿಂದಲೂ ಏತಕ್ಕೆ ಬೋಧಿಸಲ್ಪಡಬಾರದು.” ಎಂದು ಆಶಂಕಿಸಲಾಗದು.—

**೩೩೪. ಅಭೇದಸ್ಯ ಕಥಂಚಿತ್ಸಂಬಂಧತ್ವಸಂಭವೇಽಪಿ ಷಷ್ಠೀವಿಭಕ್ತಿಬೋಧ್ಯತ್ವಾಸಂಭವಃ.**

ಏತಕ್ಕೆಂದರೆ, ಅಭೇದವೆಂಬುದು ಒಂದುವೇಳೆ ಸಂಬಂಧವೆನಿಸಿಕೊಳ್ಳುವುದಕ್ಕೆ ಯೋಗ್ಯವಾದರೂ ಆಗಲಿ, ಆದರೆ ಅದು ಯಾವಾಗಲೂ ಷಷ್ಠೀವಿಭಕ್ತಿಯ ಅರ್ಥವಾಗುವುದಕ್ಕೆ ಯೋಗ್ಯವಾಗಲಾರದು. ಅಭೇದವೂ ಷಷ್ಠೀವಿಭಕ್ತಿಯ ಅರ್ಥವಾಗುವುದಾದರೆ "ನೀಲೋ ಘಟಃ" ಎಂದು ಪ್ರಯೋಗಿಸುವ ಕಡೆಯಲ್ಲಿ "ನೀಲಸ್ಯ ಘಟಃ" ಎಂಬುದಾಗಿಯೂ ಪ್ರಯೋಗಿಸಬಹುದಾಗಿ ಬರುವುದು. ಆದರೆ ಅಂಥ ಪ್ರಯೋಗವು ಲೋಕದಲ್ಲಿಯಾಗಲಿ ಶಾಸ್ತ್ರದಲ್ಲಿಯಾಗಲಿ ಇಲ್ಲವಷ್ಟೆ?

**೩೩೫. ಕ್ವಚಿತ್ತತ್ಸಂಭವೇಽಪಿ ಮಮ ದೇಹ ಇತ್ಯಾದೌ ಭೇದಸ್ಯೈವ ಷಷ್ಠ್ಯರ್ಥತ್ವಂ.**

ಪೂಜ್ಯರೇ? ಅಭೇದವು ಷಷ್ಠೀವಿಭಕ್ತಿಯ ಅರ್ಥವೆಂಬುದನ್ನು ಒಪ್ಪಿಕೊಳ್ಳದಿದ್ದರೆ "ರಾಹೋಃ ಶಿರಃ" ಇತ್ಯಾದಿಪ್ರಯೋಗಗಳ ಗತಿಯೇನು? ಇಂಥ ಪ್ರಯೋಗಗಳಿಗೆ ಔಪಚಾರಿಕತ್ವವನ್ನೂ ಅಮುಖ್ಯತ್ವವನ್ನೂ ಹೇಳುವುದೇ ಗತಿ.

ಅಥವಾ ಗತ್ಯಂತರವಿಲ್ಲದುದರಿಂದಲೂ, ಪ್ರಬಲಪ್ರಮಾಣಾಂತರವಿರೋಧವಿರುವುದರಿಂದಲೂ, "ರಾಹೋಃ ಶಿರಃ" ಇವೇ ಮೊದಲಾದ ಕೆಲವು ಸ್ಥಳಗಳಲ್ಲಿ ಹಾಗೆ ಒಪ್ಪಿಕೊಂಡರೂ, "ಮಮ ದೇಹಃ" ಇತ್ಯಾದಿಸ್ಥಳದಲ್ಲಿ ಗತ್ಯಂತರವಿರುವಾಗಲೂ, ಪ್ರಬಲಪ್ರಮಾಣಾಂತರವಿರೋಧವಿಲ್ಲದಿರುವಾಗಲೂ ಅಭೇದವನ್ನು ಷಷ್ಠೀವಿಭಕ್ತಿಯ ಅರ್ಥವನ್ನಾಗಿ ಒಪ್ಪಲಾಗುವುದಿಲ್ಲ.

**೩೩೬. ತಸ್ಮಾದ್ಭೇದಪ್ರತ್ಯಕ್ಷೇಣ ಅಭೇದಪ್ರತ್ಯಕ್ಷಸ್ಯ ಬಾಧ್ಯತ್ವೋಪಪತ್ತಿಃ.**

ಪೂಜ್ಯರೇ? ಇಲ್ಲಿ ಪ್ರಬಲಪ್ರಮಾಣಾಂತರವಿರೋಧವಿಲ್ಲವೆಂದು ಹೇಗೆ ಹೇಳಲಾದೀತು? "ಸ್ಥೂಲೋಽಹಂ ಕೃಶೋಽಹಂ" ಎಂಬ ಪ್ರಬಲವಾದ ಅಭೇದಪ್ರತ್ಯಕ್ಷದೊಡನೆ ವಿರೋಧವು ಇಲ್ಲಿಯೂ ಇರುವುದಲ್ಲವೆ?

ಹವುದು ವಿರೋಧವಿರುವುದು, ಇದ್ದಮಾತ್ರಕ್ಕೆ ಏನಾಯಿತು? ತಪ್ತವಾದ ಅಯಃಪಿಂಡದಲ್ಲಿ ಸಂಸರ್ಗವಿಶೇಷವೆಂಬ ದೋಷದಿಂದ ಅಗ್ನ್ಯಭೇದಭ್ರಾಂತಿಯುಂಟಾಗುವಂತೆ ಆತ್ಮನಲ್ಲಿಯೂ ಶರೀರಸಂಸರ್ಗವಿಶೇಷವೆಂಬ ದೋಷದಿಂದ ಶರೀರಾಭೇದಭ್ರಾಂತಿಯುಂಟಾಗಬಹುದಾದಕಾರಣ ಅಭೇದಪ್ರತ್ಯಕ್ಷವು ಭ್ರಾಂತಿ

ರೂಪವಾಗಿ ಅನ್ಯಥಾಸಿದ್ಧವೆನಿಸಿಕೊಂಡು ದುರ್ಬಲವಾಗಿ ಇರುವುದೆಂಬ ಅಂಶವನ್ನು ಮೊದಲೇ ವಿಶದವಾಗಿ ತೋರಿಸಿ ಇರುವೆವಷ್ಟೆ ?

ಅಭೇದಪ್ರತ್ಯಕ್ಷವು ಭೇದಪ್ರತ್ಯಕ್ಷಕ್ಕಿಂತಲೂ ದುರ್ಬಲವೂ ಬಾಧ್ಯವೂ ಆಗದೆ ಪ್ರಬಲವೂ ಅಬಾಧ್ಯವೂ ಆಗಿಯೇ ಇರುವಪಕ್ಷದಲ್ಲಿ ಇಂಥ ಅಭೇದಪ್ರತ್ಯಕ್ಷವನ್ನು ಶಾಸ್ತ್ರವು ತಾನೆ ಹೇಗೆ ಬಾಧಿಸಬಲ್ಲುದು ? ಹೇಗೆ ತಾನೆ ದೇಹಾತಿರಿಕ್ತವಾದ ಆತ್ಮತತ್ತ್ವವನ್ನು ಪ್ರತ್ಯಕ್ಷವಿರುದ್ಧವಾಗಿ ಬೋಧಿಸಬಲ್ಲುದು ? ಪ್ರತ್ಯಕ್ಷವಿರುದ್ಧವಾದ ಅನುಮಾನಪ್ರಮಾಣವು ಹೇಗೆ ಅಂಕುರಿಸಲಾರದೋ ಹಾಗೆಯೇ ಶಾಸ್ತ್ರವೂ ಪ್ರತ್ಯಕ್ಷವಿರೋಧವಿದ್ದರೆ ಅಂಕುರಿಸಲಾರದಷ್ಟೆ ? ಭೂಮಿಯಲ್ಲಿ ನಿಂತಿರುವ ಯೂಪಸ್ತಂಭಕ್ಕೂ ಗಗನಸಂಚಾರಿಯಾದ ಆದಿತ್ಯನಿಗೂ ಅತ್ಯಂತಭೇದವನ್ನು ತೋರಿಸುವ ಪ್ರತ್ಯಕ್ಷಪ್ರಮಾಣವನ್ನು, ಅವುಗಳಿಗೆ ಅಭೇದವನ್ನು ಬೋಧಿಸುವ " **ಆದಿತ್ಯೋ ಯೂಪಃ** " ಎಂಬ ಶಾಸ್ತ್ರವು ಬಾಧಿಸಲಾರದಷ್ಟೆ ?

ಆದಕಾರಣ ಕೆಳಗೆ ಹೇಳಿದ ರೀತಿಯಲ್ಲಿ ಅನ್ಯಥಾಸಿದ್ಧವಾಗಿರುವ "**ಸ್ಥೂಲೋಽಹಂ**" ಇತ್ಯಾದಿಯಾದ ಅಭೇದಪ್ರತ್ಯಕ್ಷವು ಅನನ್ಯಥಾಸಿದ್ಧವಾದ "**ಮಮ ದೇಹಃ**" ಇತ್ಯಾದಿಭೇದಪ್ರತ್ಯಕ್ಷದಿಂದ ಬಾಧಿಸಲ್ಪಡುವುದೆಂದು ಒಪ್ಪಿಕೊಳ್ಳುವುದೇ ಯುಕ್ತವಾಗಿ ಇರುವುದು.

### ೩೩೭. ಏವಮನುಮಾನೇನಾಪಿ ತಸ್ಯ ಬಾಧ್ಯತ್ವಂ.

ಮತ್ತು ಪ್ರತಿಕ್ಷಣದಲ್ಲಿಯೂ ದೀಪಜ್ವಾಲೆಯನ್ನು ಭಿನ್ನಭಿನ್ನವೆಂದು ತೋರಿಸುವ ಅನನ್ಯಥಾಸಿದ್ಧವಾದ ಅನುಮಾನಪ್ರಮಾಣದಿಂದ ದೀಪಜ್ವಾಲೆಯ ಐಕ್ಯವನ್ನು ತೋರಿಸುವ " **ಸೇಯಂ ದೀಪಜ್ವಾಲಾ** " ಎಂಬ ಅನ್ಯಥಾಸಿದ್ಧವಾದ ಪ್ರತ್ಯಭಿಜ್ಞಾಪ್ರತ್ಯಕ್ಷವು ಹೇಗೆ ಬಾಧಿಸಲ್ಪಡುವುದೋ ಹಾಗೆಯೇ ಸಂಘಾತತ್ವ, ರೂಪವತ್ತ್ವ, ಬಹಿರಿಂದ್ರಿಯಗೋಚರತ್ವವೆಂಬ ಹೇತುಗಳನ್ನು ತೋರಿಸಿ ಕೆಳಗೆ ಹೇಳಿದ ಅನನ್ಯಥಾಸಿದ್ಧವಾದ ಅನುಮಾನಪ್ರಮಾಣದಿಂದಲೂ, ಅನ್ಯಥಾಸಿದ್ಧವಾದ ಅಭೇದಪ್ರತ್ಯಕ್ಷವು ಬಾಧಿಸಲ್ಪಡುವುದರಲ್ಲಿ ತಡೆಯಿಲ್ಲ.

### ೩೩೮. ಆತ್ಮಸಿದ್ಧೌ ಶಾಸ್ತ್ರನೈರಪೇಕ್ಷ್ಯೋಪಸಂಹಾರಃ.

ಆದಕಾರಣ ಶಾಸ್ತ್ರಸಹಾಯವಿಲ್ಲದೆ ಕೇವಲ ಪ್ರತ್ಯಕ್ಷಾನುಮಾನಪ್ರಮಾಣಗಳಿಂದಲೇ ದೇಹಾತಿರಿಕ್ತವಾದ ಆತ್ಮತತ್ತ್ವದ ಸಿದ್ಧಿ ನಿರಾತಂಕವಾಗಿ ಉಂಟಾಗಬಹುದಾದುದರಿಂದ, ಆತ್ಮಸಿದ್ಧಿಗಾಗಿ ಶಾಸ್ತ್ರವೇ ಬೇಕಾಗಿರುವುದೆಂಬ ನಿರ್ಬಂಧವನ್ನು ಒಪ್ಪಿಕೊಳ್ಳಬೇಕಾದುದಿಲ್ಲ.

## ೩೩೯. ನ ಸ್ಥೂಲೋಽಹಮಿತಿ ಬಾಧಕಪ್ರತ್ಯಯಾಭಾವಾತ್ ಸ್ಥೂಲತ್ವಪ್ರತ್ಯಕ್ಷಸ್ಯ ಬಾಧ್ಯತ್ವಕಥಂತಾಶಂಕಾ.

ಪೂಜ್ಯರೇ ? ಶುಕ್ತಿಕೆಯಲ್ಲಿ ಮೊತ್ತಮೊದಲು ಉಂಟಾದ "**ಇದಂ ರಜತಂ**" ಎಂಬ ಅಭೇದಪ್ರತ್ಯಕ್ಷವು, ಇದಕ್ಕೆ ಉತ್ತರಕಾಲದಲ್ಲಿ ಉಂಟಾಗುವ "**ನೇದಂ ರಜತಂ**" ಎಂಬ ಭೇದಗ್ರಾಹಿಯಾದ ಬಾಧಕಪ್ರತ್ಯಕ್ಷದಿಂದ ಬಾಧಿಸಲ್ಪಡುವುದೆಂದರೆ ಯುಕ್ತವಾಗಿರುವುದು ;

ಆದರಂತೆ ದೇಹದಲ್ಲಿ ಮೊತ್ತಮೊದಲು ಉಂಟಾದ "**ಸ್ಥೂಲೋಽಹಂ**" ಇತ್ಯಾದಿಯಾದ ಅಭೇದಪ್ರತ್ಯಕ್ಷವು ಬಾಧಿಸಲ್ಪಡಬೇಕಾದರೆ ಇದಕ್ಕೆ ಉತ್ತರಕಾಲದಲ್ಲಿ "**ನ ಸ್ಥೂಲೋಽಹಂ**" ಎಂಬುದಾಗಿಯಾಗಲಿ, "**ಮಮ ಸ್ಥೂಲಃ**" ಎಂಬುದಾಗಿಯಾಗಲಿ ಭೇದಗ್ರಾಹಿಯಾದ ಬಾಧಕಪ್ರತ್ಯಕ್ಷವಿರಬೇಕಲ್ಲವೆ ? ಆದರೆ ಈ ವಿಷಯದಲ್ಲಿ ಅಂಥ ಬಾಧಕಪ್ರತ್ಯಕ್ಷವು ಯಾವಾಗಲೂ ಯಾರಿಗೂ ಉಂಟಾಗುವುದೇ ಇಲ್ಲ; ಹೀಗಿರುವಲ್ಲಿ ಅಭೇದಪ್ರತ್ಯಕ್ಷವನ್ನು ಬಾಧಿಸುವ ಬಗೆ ಹೇಗೆ?

## ೩೪೦. ದುಷ್ಟಕಾರಣಜನ್ಯತ್ವಾತ್ ಮಮ ದೇಹ ಇತಿ ಬಾಧಕಪ್ರತ್ಯಯಸತ್ತ್ವಾಚ್ಚ ಸ್ಥೂಲತ್ವಪ್ರತ್ಯಕ್ಷಸ್ಯ ಬಾಧ್ಯತ್ವೋಪಪತ್ತಿಃ.

ಬಾಧಿಸುವ ಬಗೆ ಹೀಗೆ—"**ಯಸ್ಯ ಚ ದುಷ್ಟಂ ಕರಣಂ ಯಸ್ಯ ಚ ಮಿಥ್ಯೇತಿ ಪ್ರತ್ಯಯಃ ಸ ಏವಾಸಮೀಚೀನಃ ಪ್ರತ್ಯಯಃ**" ಎಂದರೆ, "ಯಾವ ಜ್ಞಾನವು ದುಷ್ಟವಾದ ಕಾರಣಸಾಮಗ್ರಿಯಿಂದ ಉಂಟಾಗಿ ಇರುವುದೋ, ಮತ್ತು ಯಾವ ಜ್ಞಾನಕ್ಕೆ ವಿರುದ್ಧವಾದ ಬಾಧಕಜ್ಞಾನವು ಉತ್ತರಕಾಲದಲ್ಲಿ ಉಂಟಾಗುವುದೋ ಅಂಥ ಜ್ಞಾನವೇ ಅಪ್ರಮಾಣವಾದ ಜ್ಞಾನವಾಗಿ ಇರುವುದು" ಎಂದು ದಾರ್ಶನಿಕರು ಹೇಳಿ ಇರುವಂತೆ ದೇಹಾತ್ಮೈಕ್ಯವನ್ನು ತೋರಿಸುವ ಪ್ರತ್ಯಕ್ಷವು ಶರೀರಸಂಸರ್ಗವಿಶೇಷವೆಂಬ ದೋಷದಿಂದ ಉಂಟಾಗಿ ಇರುವುದಾದಕಾರಣ ಬಾಧ್ಯವಾಗಿ ಇರುವುದೆಂಬುದರಲ್ಲಿ ತಡೆಯಿಲ್ಲ. ಬಾಧಕಜ್ಞಾನವೂ ಸಹ "**ನಾಹಂ ಸ್ಥೂಲಃ**" "**ಮಮ ಸ್ಥೂಲಃ**" ಎಂಬುದಾಗಿಯೇ ಉಂಟಾಗಬೇಕೆಂಬ ರಾಜಶಾಸನವೇನೂ ಇಲ್ಲ. "**ಮಮ ದೇಹಃ**" ಎಂಬುದಾಗಿಯೂ ಭೇದಗ್ರಾಹಿಯಾದ ಬಾಧಕಪ್ರತ್ಯಕ್ಷವುಂಟಾದರೂ ಇಷ್ಟಸಿದ್ಧಿಗೇನೂ ತಡೆಯಿಲ್ಲ.

## ೩೪೧. ನಾಹಂ ಸ್ಥೂಲಃ ಇತ್ಯಾದಿರೂಪೇಣ ಬಾಧಕ ಪ್ರತ್ಯಯಾನುದಯೇ ಕಾರಣನಿರೂಪಣಂ.

ಆದರೆ, " **ಮಮ ದೇಹಃ** " ಎಂಬುದಾಗಿ ಭೇದಪ್ರತ್ಯಕ್ಷವುಂಟಾಗು ವಂತೆ, " **ನಾಹಂ ಸ್ಥೂಲಃ-ಮಮ ಸ್ಥೂಲಃ** " ಎಂಬುದಾಗಿಯೂ ಭೇದ ಪ್ರತ್ಯಕ್ಷವು ಏತಕ್ಕೆ ಉಂಟಾಗಲಿಲ್ಲವೆಂದು ಕೇಳಬಹುದು ; ಈ ಪ್ರಶ್ನೆಗೆ—ಅಹಂ ಪದದ ಅರ್ಥವಾದ ಆತ್ಮವಸ್ತುವಿಗೆ ಸ್ಥೂಲಪದದ ಅರ್ಥವಾದ ದೇಹದೊಡನೆ ಅಭೇದವನ್ನು ಗ್ರಹಿಸುವ ಪ್ರತ್ಯಕ್ಷಜ್ಞಾನದಿಂದ ಉಂಟಾಗಿರುವ ಸಂಸ್ಕಾರವು ಅತ್ಯಂತದೃಢವಾಗಿ ಇರುವುದರಿಂದಲೇ "**ನಾಹಂ ಸ್ಥೂಲಃ ಮಮಸ್ಥೂಲಃ**" ಎಂಬ ಭೇದಪ್ರತ್ಯಕ್ಷವುಂಟಾಗಲಿಲ್ಲವೆಂಬ ಪರಿಹಾರವನ್ನೂ ತಿಳಿಯಬಹುದು.

ದೇಹಾತ್ಮಭೇದಜ್ಞಾನವುಳ್ಳವರಿಗೂ ಪುನಃ ಪುನಃ ದೇಹಾತ್ಮೈಕ್ಯಭ್ರಮ ವುಂಟಾಗುವುದಕ್ಕೂ ಇಂಥ ದೋಷವಿಶೇಷದ ಪ್ರಭಾವವೇ ಕಾರಣವಾಗಿ ಇರು ವುದು. ಶಂಖವು ಧವಳವಾಗಿಯೇ ಇರುವುದೆಂಬ ನಿಶ್ಚಯಾತ್ಮಕವಾದ ಜ್ಞಾನ ವುಳ್ಳವರಿಗೂ ಪಿತ್ತದೋಷಪ್ರಭಾವದಿಂದ ಪುನಃಪುನಃ, ಶಂಖವು ಪೀತವಾಗಿ ಇರುವುದೆಂಬ ಭ್ರಮವುಂಟಾಗುವುದು ಸಹಜವಷ್ಟೆ ?

ಮತ್ತು ಬಿದರು ಸರ್ಪವಲ್ಲವೆಂಬ ನಿಶ್ಚಯಾತ್ಮಕವಾದ ಜ್ಞಾನವುಳ್ಳವರಿಗೂ ಮಂಡೂಕದ (ಕಪ್ಪೆಯ) ಕೊಬ್ಬಿನಿಂದ ಮಾಡಿದ ಅಂಜನವನ್ನು ನೇತ್ರದಲ್ಲಿ ಹಚ್ಚಿ ಕೊಂಡು ನೋಡುವಾಗ ಬಿದರಿನಲ್ಲಿ ಸರ್ಪಭ್ರಾಂತಿ ಪುನಃಪುನಃ ಉಂಟಾಗುವುದು ಸಹಜವಷ್ಟೆ ?

## ೩೪೨. ಚಾರ್ವಾಕಮತಖಂಡನೋಪಸಂಹಾರಃ

ಆದಕಾರಣ ಪೂರ್ವೋಕ್ತವಾದ ಪ್ರತ್ಯಕ್ಷದಿಂದಲಾಗಲಿ ಅನುಮಾನದಿಂದ ಲಾಗಲಿ ಶಾಸ್ತ್ರದಿಂದಲಾಗಲಿ ದೇಹಕ್ಕೂ ಆತ್ಮನಿಗೂ ಭೇದವೇ ಸಿದ್ಧಿಸುವುದರಿಂದ ದೇಹವೇ ಆತ್ಮವೆಂದು ಹೇಳುವ ಚಾರ್ವಾಕರ ಮತವು ಸ್ವಪಕ್ಷಸಾಧಕವಾದ ಪ್ರಮಾಣದಿಂದ ಶೂನ್ಯವಾಗಿಯೂ ಪರಪಕ್ಷಸಾಧಕವಾದ ಪ್ರಮಾಣಗಳಿಂದ ಬಾಧಿತವಾಗಿಯೂ ಇರುವುದರಿಂದ ಮುಮುಕ್ಷುಗಳಿಗೆ ಅನಾದರಣೀಯವಾಗಿ ಇರುವುದು.

## ೩೪೩. ಅಥ ಶ್ರೀಭಾಗವತೋಕ್ತಪ್ರಕ್ರಿಯಯಾ ದೇಹಾತ್ಮವಿವೇಕ ಕ್ರಮಪ್ರದರ್ಶನಂ.

ದೇಹಕ್ಕಿಂತಲೂ ಆತ್ಮತತ್ತ್ವವು ಅತ್ಯಂತವಿಲಕ್ಷಣವಾದುದೆಂದು ನಿರೂ ಪಿಸಿ ತೋರಿಸುವ ಈ ಸಂದರ್ಭದಲ್ಲಿ, ಶ್ರೀಭಾಗವತದ ಹನ್ನೊಂದನೆಯ ಸ್ಕಂಧದ

ಇಪ್ಪತ್ತೆರಡನೆಯ ಅಧ್ಯಾಯದೊಳಗೆ **ಉದ್ಧವನಿಂದ** ಪ್ರಶ್ನೆಮಾಡಲ್ಪಟ್ಟ **ಶ್ರೀ ಕೃಷ್ಣನು** ದೇಹಾತ್ಮವಿವೇಕಕ್ರಮವನ್ನು ಅತಿಚಮತ್ಕಾರವಾಗಿ ಉಪದೇಶಿಸಿ ಇರುವನು. ಶಿಷ್ಯರ ಬುದ್ಧಿವೈಶದ್ಯಕ್ಕಾಗಿ ಆ ಪ್ರಕರಣಪ್ರಸ್ತಾವವನ್ನೂ ಇಲ್ಲಿ ಬರೆದು ತೋರಿಸುವೆವು.

**೩೪೪. ವಸ್ತುತೋ ಭಿನ್ನಯೋರಪಿ ದೇಹಾತ್ಮನೋಃ**
**ತಾದಾತ್ಮ್ಯಪ್ರತೀತೌ ಕಾರಣಪ್ರಶ್ನಃ**

**ಉದ್ಧವ ಉವಾಚ—**

**ಪ್ರಕೃತಿಃ ಪುರುಷಶ್ಚೋಭೌ ಯದ್ಯಪ್ಯಾತ್ಮವಿಲಕ್ಷಣೌ ।**
**ಅನ್ಯೋನ್ಯಾಪಾಶ್ರಯಾತ್ಕೃಷ್ಣ ದೃಶ್ಯತೇ ನ ಭಿದಾ ತಯೋಃ ॥**

**ಉದ್ಧವನು ಕೃಷ್ಣನನ್ನು** ಕುರಿತು ಪ್ರಶ್ನೆಮಾಡುತ್ತಾನೆ—**ಓ ಕೃಷ್ಣಾ!** ಹಿಂದೆ ನೀನು ನನಗೆ ತತ್ತ್ವಗಳನ್ನು ಉಪದೇಶಿಸುವ ಸಮಯದಲ್ಲಿ ಪ್ರಕೃತಿಯೆಂಬ ಅಚಿತ್ತತ್ತ್ವವನ್ನೂ, ಪುರುಷನೆಂಬ ಜೀವತತ್ತ್ವವನ್ನೂ ಪ್ರತ್ಯೇಕವಾಗಿ ಉಪದೇಶಿಸಿರುತ್ತೀಯಾದುದರಿಂದ ಈ ಎರಡು ತತ್ತ್ವಗಳ ಸ್ವರೂಪಗಳೂ ಸ್ವಭಾವಗಳೂ ಯದ್ಯಪಿ ಒಂದಕ್ಕೊಂದು ತಮ್ಮೊಳಗೆ ಅತ್ಯಂತ ವಿಲಕ್ಷಣಗಳಾಗಿಯೇ ಇರುವುವು; ಆದರೂ ಈ ಎರಡು ತತ್ತ್ವಗಳಿಗೂ ಭೇದವು ಪ್ರತ್ಯಕ್ಷದಲ್ಲಿ ಕಾಣುವುದಿಲ್ಲ. ಏತಕ್ಕೆಂದರೆ, ಪುರುಷನೆಂಬ ಜೀವನ ಸತ್ತೆಯನ್ನು ಕಂಡುಹಿಡಿಯಬೇಕಾದರೆ ಶರೀರವನ್ನು ನೋಡಬೇಕು; ಶರೀರದ ಸತ್ತೆಯನ್ನು ಕಾಣಬೇಕಾದರೆ ಆತ್ಮನ ಸತ್ತೆಯನ್ನು ಮೊದಲು ನಿಶ್ಚಯಿಸಿಕೊಳ್ಳಬೇಕು. ಹೀಗೆ ಶರೀರವಿಲ್ಲದೆ ಆತ್ಮನನ್ನೂ ಆತ್ಮನಿಲ್ಲದೆ ಶರೀರವನ್ನೂ ಕಂಡುಹಿಡಿವುದು ಸಾಧ್ಯವಲ್ಲ. ಪ್ರತ್ಯಕ್ಷದಲ್ಲಿ ಈ ಎರಡು ಪದಾರ್ಥಗಳೂ ಒಂದನ್ನು ಬಿಟ್ಟು ಮತ್ತೊಂದು ತೋರದೆ ಯಾವಾಗಲೂ ಜತೆಯಲ್ಲಿಯೇ ತೋರುತ್ತಿರುವುವಾದುದರಿಂದ ಈ ಎರಡೂ ಒಂದೇ ತತ್ತ್ವವೆಂದು ಏಕೆ ಹೇಳಬಾರದು? ನಿಜವಾಗಿಯೂ ಇವುಗಳಿಗೆ ಪರಸ್ಪರ ಭೇದವಿರುವುದಾದರೆ, "ದೇವೋಽಹಂ ಮನುಷ್ಯೋಽಹಂ ಬ್ರಾಹ್ಮಣೋಽಹಂ ಕ್ಷತ್ರಿಯೋಽಹಂ ಸ್ಥೂಲೋಽಹಂ ಕೃಶೋಽಹಂ" (ನಾನು ದೇವನು, ನಾನು ಮನುಷ್ಯನು, ನಾನು ಬ್ರಾಹ್ಮಣನು, ನಾನು ಕ್ಷತ್ರಿಯನು, ನಾನು ಸ್ಥೂಲನಾದವನು, ನಾನು ಕೃಶನಾದವನು) ಎಂಬುದಾಗಿ ಈ ಎರಡಕ್ಕೂ ಅಭೇದವು ತೋರುವುದಕ್ಕೆ ಕಾರಣವೇನು? ದೇವ ಮನುಷ್ಯ ಮುಂತಾದ ಶಬ್ದಗಳಿಂದ ಬೋಧಿಸಲ್ಪಡುವ ದೇವತ್ವ ಮನುಷ್ಯತ್ವ ಮೊದಲಾದ ಜಾತಿಗಳ ಸಂಬಂಧವು ಶರೀರವನ್ನು ಆಕ್ರಮಿಸಬಲ್ಲುದೇ

ಹೊರತು ಆತ್ಮನನ್ನು ಆಕ್ರಮಿಸಲಾರದು. ದೇವಾದಿಶಬ್ದಬೋಧ್ಯವಾದ ಶರೀರಕ್ಕೂ, ಅಹಂಶಬ್ದಬೋಧ್ಯವಾದ ಆತ್ಮತತ್ತ್ವಕ್ಕೂ ಅಭೇದವನ್ನು ಅಂಗೀಕರಿಸದಿದ್ದರೆ, "ದೇವೋಽಹಂ, ಮನುಷ್ಯೋಽಹಂ" ಎಂಬುದೇ ಮೊದಲಾದ ವ್ಯವಹಾರವನ್ನು ಮಾಡುವ ಬಗೆ ಹೇಗೆ ? ಮತ್ತು ಈ ಅಭೇದವ್ಯವಹಾರವು ಬಂದುದಕ್ಕೆ ಕಾರಣ ವೇನು ? ಕಾರಣವನ್ನು ನಿರೂಪಿಸಿ ತೋರಿಸುವುದು ಶಕ್ಯವಲ್ಲವೆಂದು ಒಂದುವೇಳೆ ಹೇಳುವುದಾದರೆ ಇವೆರಡಕ್ಕೂ ಪರಸ್ಪರ ಭೇದವನ್ನು ಸ್ಥಿರಪಡಿಸುವ ಬಗೆ ಹೇಗೆ?

**ಪ್ರಕೃತೌ ಲಕ್ಷ್ಯತೇ ಹ್ಯಾತ್ಮಾ ಪ್ರಕೃತಿಶ್ಚ ತಥಾಽತ್ಮನಿ ।**
**ಏವಂ ಮೇ ಪುಂಡರೀಕಾಕ್ಷ ಮಹಾಂತಂ ಸಂಶಯಂ ಹೃದಿ ।**
**ಛೇತ್ತುಮರ್ಹಸಿ ಸರ್ವಜ್ಞ ವಚೋಭಿರ್ನಯನೈಪುಣ್ಯೈಃ ॥**

**ಓ ಪುಂಡರೀಕಾಕ್ಷ !** ಪ್ರಕೃತಿಯ ಪರಿಣಾಮವಾದ ಶರೀರದಲ್ಲಿಯೇ ಆತ್ಮನು ಕಾಣಲ್ಪಡುತ್ತಾನಲ್ಲದೆ ಶರೀರದ ಹೊರಗೆ ಕಾಣಲ್ಪಡುವುದಿಲ್ಲ; ಶರೀರವೂ ಆತ್ಮನಲ್ಲಿಯೇ ಕಾಣಲ್ಪಡುತ್ತದೆಯಲ್ಲದೆ ಆತ್ಮನಿಂದ ಹೊರಗಾಗಿ ಕಾಣುವುದಿಲ್ಲ. ಆದಕಾರಣ—ಈ ಎರಡು ಪದಾರ್ಥಗಳೂ ಒಂದನ್ನು ಬಿಟ್ಟು ಮತ್ತೊಂದು ತೋರು ವುದೇ ಇಲ್ಲವೆಂಬ ಒಂದು ಕಾರಣವೂ, ಪೂರ್ವೋಕ್ತವಾದ—"ದೇವೋಽಹಂ" ಇತ್ಯಾದಿ ಅಭೇದಪ್ರತೀತಿಯೆಂಬ ಮತ್ತೊಂದು ಕಾರಣವೂ, ಬಲಿಷ್ಠವಾದ ಈ ಎರಡು ಕಾರಣಗಳೂ ಸೇರಿ—ದೇಹಾತ್ಮಗಳಿಗೆ ಭೇದವನ್ನು ಹೇಳುವವರ ನಾಲಿಗೆ ಯನ್ನು ಒಳಕ್ಕೇ ತಳ್ಳುತ್ತಿರುವುವಲ್ಲದೆ ಹೊರಕ್ಕೆ ಹೊರಡಿಸಲಾರವು. ನೀನಾದರೆ ದೇಹಾತ್ಮಗಳಿಗೆ ಅತ್ಯಂತ ವೈಲಕ್ಷಣ್ಯವನ್ನೇ ಉಪದೇಶಿಸುತ್ತೀಯೇ. **ಓ ಸರ್ವಜ್ಞ!** ನನ್ನ ಹೃದಯದಲ್ಲಿ ನಾಟಿಹೋಗಿರುವ ಈ ಮಹಾಸಂಶಯವನ್ನು ಪರಿಹರಿಸಲು ನೀನಲ್ಲದೆ ಮತ್ತಾರು ಸಮರ್ಥರಾದಾರು. ಯುಕ್ತಿಮಾರ್ಗದಲ್ಲಿ ಅತ್ಯಂತ ನೈಪುಣ್ಯ ವನ್ನು (ಸಾಮರ್ಥ್ಯವನ್ನು) ಪಡೆದಿರುವ ವಾಕ್ಚಾತುರ್ಯಗಳಿಂದ ನೀನೇ ನನ್ನ ಸಂಶಯವನ್ನು ಹೋಗಲಾಡಿಸು.

**ತ್ವತ್ತೋ ಜ್ಞಾನಂ ಹಿ ಜೀವಾನಾಂ ಪ್ರಮೋಷಸ್ತೇಽತ್ರ ಶಕ್ತಿತಃ ।**
**ತ್ವಮೇವ ಹ್ಯಾತ್ಮಮಾಯಾಯಾಃ ಗತಿಂ ವೇತ್ಥ ನ ಚಾಪರೇ ॥**

ಅನ್ವಯವ್ಯತಿರೇಕಗಳನ್ನು ವಿಮರ್ಶೆಮಾಡಿ ನೋಡಿದರೆ ಸರ್ವಜ್ಞತ್ವವು ನಿನ್ನಲ್ಲೇ ನೆಲೆಗೊಂಡಿರುವುದಲ್ಲದೆ ಮತ್ತೊಬ್ಬರಿಗೆ ಘಟಿಸದು. ಏತಕ್ಕೆಂದರೆ ಜೀವರುಗಳೆನಿಸಿಕೊಂಡಿರುವ ನನ್ನಂಥವರಿಗೆ ಯಥಾರ್ಥವಾದ ಯಾವ ಜ್ಞಾನ ವುಂಟಾಗಬೇಕಾದರೂ ನಿನ್ನ ಅನುಗ್ರಹದಿಂದಲೇ ಉಂಟಾಗಬೇಕಲ್ಲದೆ ಮತ್ತೊಂದು

ಕಾರಣದಿಂದ ಉಂಟಾಗದು. ಜೀವರುಗಳ ವಸ್ತುಸ್ವರೂಪಸ್ಥಿತಿಯನ್ನು ವಿಮರ್ಶೆ ಮಾಡಿ ನೋಡಿದರೆ—ಕರ್ಮರೂಪವಾದ ಅವಿದ್ಯೆಯೆಂಬ ಒಂದಾನೊಂದು ನಿನ್ನ ಶಕ್ತಿಯಿಂದ ಜೀವರುಗಳಿಗೆ ಈ ಜ್ಞಾನವಿಷಯದಲ್ಲಿ ಅತ್ಯಂತ ಪ್ರಮೋಷವೇ (ಸಂಕೋಚವೇ) ಸ್ವತಃ ಇರುವುದಲ್ಲದೆ ವಿಕಾಸವಿಲ್ಲ. ಆದಕಾರಣ ಜ್ಞಾನವಿಕಾಸ ವಾಗಬೇಕಾದರೆ ನಿನ್ನ ಅನುಗ್ರಹವೇ ಬೇಕು—ನಿನ್ನ ಹೊರತು ಉಳಿದವರೆಲ್ಲರೂ ಸಂಕುಚಿತಜ್ಞಾನವುಳ್ಳವರಾದುದರಿಂದ ಸರ್ವಜ್ಞತ್ವವು ನಿನಗೊಬ್ಬನಿಗೇ ಸಲ್ಲುವುದು. ನಿನಗೆ ಕ್ರೀಡಾಸಾಧನವಾಗಿ ಇರುವ ಮಾಯಾಶಬ್ದವಾಚ್ಯೆಯಾದ ಈ ಪ್ರಕೃತಿಯ ನಿಜಸ್ಥಿತಿಯನ್ನು ನೀನೊಬ್ಬನಲ್ಲದೆ ಮತ್ತೊಬ್ಬರಾರೂ ತಿಳಿಯರು.

## ೩೪೫. ದೇಹಾತ್ಮನೋಃ ಭೇದಪ್ರತಿಜ್ಞಾಪೂರ್ವಕಂ ಅಭೇದಪ್ರತೀತೌ ಕಾರಣನಿರೂಪಣಂ.

**ಶ್ರೀ ಭಗವಾನುವಾಚ—**

**ಪ್ರಕೃತಿಃ ಪುರುಷಶ್ಚೇತಿ ವಿಕಲ್ಪಃ ಪುರುಷರ್ಷಭ ।**
**ಏಷ ವೈಕಾರಿಕಸ್ಸರ್ಗೋ ಗುಣವ್ಯತಿಕರಾತ್ಮಕಃ ॥**

ಹೀಗೆ **ಉದ್ಧವನಿಂದ** ಪ್ರಶ್ನೆಮಾಡಲ್ಪಟ್ಟ **ಶ್ರೀಕೃಷ್ಣನು** ಪ್ರತ್ಯುತ್ತರವನ್ನು ಹೇಳುತ್ತಾನೆ—

**ಓ ಪುರುಷಶ್ರೇಷ್ಠನಾದ ಉದ್ಧವನೇ!** ನನ್ನ ಸರ್ವಜ್ಞತ್ವವನ್ನು ಉಪಪಾದನೆ ಮಾಡುವುದಕ್ಕಾಗಿ—ಯಾವ ಮಾಯೆಯು ನಿಜಸ್ಥಿತಿ ದುರ್ವಿಜ್ಞೇಯವೆಂದು ನೀನು ಹೇಳಿದೆಯೋ ಅದೇ ಮಾಯೆಯ ಪರಿಣಾಮವಿಶೇಷವಾದ ಅಹಂಕಾರವೆಂಬ ಒಂದಾನೊಂದು ತತ್ತ್ವದ ಸಂಬಂಧವೇ ದೇಹಾತ್ಮಗಳ ಅಭೇದಜ್ಞಾನಕ್ಕೆ ಕಾರಣವಾಗಿ ಇದೆಯೆಂದು ನೀನು ತಿಳಿ. ಏತಕ್ಕೆಂದರೆ ಪ್ರಕೃತಿಗೂ ಪುರುಷನಿಗೂ ವಿಕಲ್ಪವೆಂಬುದೇ (ಭೇದವೆಂಬುದೇ) ಸಿದ್ಧಾಂತವು. ಜೀವನಿಗೆ ಅಹಂಕಾರತತ್ತ್ವದ ಸಂಬಂಧವು ಇಲ್ಲದಿದ್ದ ಪಕ್ಷದಲ್ಲಿ ಪ್ರಕೃತಿಪುರುಷರ ಭೇದಸಿದ್ಧಾಂತವನ್ನು ಇವನು ತಿಳಿಯುತ್ತಿದ್ದನು. ಅದಕ್ಕೆ ಅಡ್ಡಿಯಾಗಿ ಅನಾದಿಕಾಲದಿಂದಲೂ ಇವನಿಗೆ ಅಹಂಕಾರತತ್ತ್ವಸಂಬಂಧವು ಏರ್ಪಟ್ಟಿರುವುದರಿಂದ ದೇಹಾತ್ಮಗಳ ಭೇದಸಿದ್ಧಾಂತವನ್ನು ತಿಳಿವುದಕ್ಕೆ ಮಾರ್ಗವಿಲ್ಲವಾಗಿ ಮೋಹದಿಂದ ಅಭೇದವನ್ನು ತಿಳಿವನು. **ಅಧಿಭೂತವೆಂದೂ, ಅಧ್ಯಾತ್ಮವೆಂದೂ, ಅಧಿದೈವವೆಂದೂ** ಮೂರು ಬಗೆಯಾಗಿರುವ ಈ ಸರ್ಗವು (ಕಾರ್ಯಪ್ರಪಂಚವು) ವೈಕಾರಿಕವೆನಿಸಿಕೊಂಡಿರುವುದು—ಎಂದರೆ ಪ್ರಕೃತಿಯ ವಿಕಾರವಾದ ಅಹಂಕಾರತತ್ತ್ವದಿಂದಲೇ ಮೃತ್ಪಿಂಡ

ದಿಂದ ಘಟದಂತೆ ನಿರ್ಮಿಸಲ್ಪಟ್ಟಿರುವುದು. ಮತ್ತು ಚೇತನಾಚೇತನಾತ್ಮಕವಾದ ಈ ಪ್ರಪಂಚದಲ್ಲಿ—ಜ್ಞಾನ, ಇಚ್ಛೆ, ದ್ವೇಷ, ಪ್ರಯತ್ನ ಮುಂತಾದ ಚೇತನಧರ್ಮಗಳನ್ನು ಅಚೇತನವಾದ ಶರೀರದಲ್ಲಿಯೂ, ಸ್ಥೂಲತ್ವ, ಕೃಶತ್ವ, ದೇವತ್ವ, ಮನುಷ್ಯತ್ವ ಮುಂತಾದ ಅಚೇತನಧರ್ಮಗಳನ್ನು ಚೇತನನಲ್ಲಿಯೂ ವ್ಯತ್ಯಸ್ತವಾಗಿ ತಿಳಿದುಕೊಂಡುದುಮಾತ್ರವಲ್ಲದೆ ಚೇತನಾಚೇತನಗಳಿಗೆ ಅಭೇದವನ್ನು ತಿಳಿವುದರ ಮೂಲಕ ಈ ಎಲ್ಲಾ ಧರ್ಮಗಳನ್ನೂ ಒಂದೇ ಧರ್ಮಿಯಲ್ಲಿ ತಿಳಿದುಕೊಳ್ಳುವುದೂ ಈ ಕಾರ್ಯಪ್ರಪಂಚಕ್ಕೆ ಸ್ವರೂಪಸಿದ್ಧವಾದಂತೆ ಆಗಿರುವುದು.' ಇಷ್ಟಕ್ಕೂ ಕಾರಣವು ಆ ಮಾಯೆಯ ಪ್ರಭಾವವೇ.

> ಮಮಾಂಗ ಮಾಯಾ ಗುಣಮಯ್ಯನೇಕಧಾ
> ವಿಕಲ್ಪಬುದ್ಧೀಶ್ಚ ಗುಣೈರ್ವಿಧತ್ತೇ ।
> ವೈಕಾರಿಕಸ್ತ್ರಿವಿಧೋಽಧ್ಯಾತ್ಮಮೇಕ-
> ಮಥಾಧಿದೈವಮಧಿಭೂತಮನ್ಯತ್ ॥

**ಓ ಉದ್ಧವನೇ!** ನನ್ನ ಈ ಮಾಯಾಶಬ್ದವಾಚ್ಯೆಯಾದ ಪ್ರಕೃತಿ ತನ್ನ ಪರಿಣಾಮವಿಶೇಷವಾದ ಅಹಂಕಾರತತ್ತ್ವದ ಮೂಲಕವಾಗಿಮಾತ್ರವೇ ಪೂರ್ವೋಕ್ತವಾದ ಗುಣವ್ಯತ್ಯಾಸವನ್ನು ಉಂಟುಮಾಡುವುದೆಂದು ತಿಳಿಯಬೇಡ, ಇದು ಸತ್ತ್ವರಜಸ್ತಮೋಗುಣವಿಶಿಷ್ಟವಾದುದರಿಂದ ತನ್ನ ಗುಣಗಳಿಂದಲೇ ಆತ್ಮನಲ್ಲಿ ದೇವತ್ವ-ಮನುಷ್ಯತ್ವ-ಸ್ವತಂತ್ರತ್ವ-ಮುಂತಾದ ಭೇದಬುದ್ಧಿಗಳನ್ನು ನಾನಾಬಗೆಯಾಗಿ ಉಂಟುಮಾಡುತ್ತಿರುವುದು. ನಾನು ಹಿಂದಿನ ಶ್ಲೋಕದಲ್ಲಿ ವೈಕಾರಿಕ ಶಬ್ದದಿಂದ ಹೇಳಿದ ಅಹಂಕಾರತತ್ತ್ವದ ಸಮಾಚಾರವನ್ನು ಸ್ವಲ್ಪಮಟ್ಟಿಗೆ ಹೇಳುವೆನು ಕೇಳು. ಅಧ್ಯಾತ್ಮವೆಂಬುದೊಂದು, ಅಧಿದೈವವೆಂಬುದೊಂದು, ಅಧಿಭೂತವೆಂಬುದೊಂದು, ಹೀಗೆ ಅಹಂಕಾರತತ್ತ್ವವು ಮೂರು ಬಗೆಯಾಗಿ ಇರುವುದು.

> ದೃಗ್ರೂಪಮಾರ್ಕಂ ವಪುರತ್ರ ರಂಧ್ರೇ
> ಪರಸ್ಪರಾತ್ಸಿಧ್ಯತಿ ಯಃ ಸ್ವತಃ ಖೇ ।
> ಆತ್ಮಾ ಯದೇಷಾಮಪರೋಽಯಮಾದ್ಯಃ
> ಸ್ವಯಾನುಭೂತ್ಯಾಖಿಲಸಿದ್ಧಸಿದ್ಧಿಃ ॥

ಉಕ್ತವಾದ ಈ ಮೂರರ ಸ್ವರೂಪವನ್ನು ಶ್ರೀಕೃಷ್ಣನು ವಿವರಿಸುತ್ತಾನೆ- **ಓ ಉದ್ಧವನೇ! (ದೃಕ್)** ಎಂದರೆ ಚಕ್ಷುರಿಂದ್ರಿಯವು, ಇದು ಅಧ್ಯಾತ್ಮವೆಂಬ ಅಹಂಕಾರವಾಗುವುದು. ಇಲ್ಲಿ ಆತ್ಮಶಬ್ದವು ದೇಹವಾಚಕವಾಗಿ ಇರುವುದು.

ಅಧ್ಯಾತ್ಮವಾದ ಅಹಂಕಾರವೆಂದರೆ ದೇಹದಲ್ಲಿ ಇರುವ ಅಹಂಕಾರತತ್ತ್ವವೆಂದು ಅರ್ಥವು. ರಾಜಸಾಹಂಕಾರದ ಸಹಾಯವನ್ನು ಪಡೆದಿರುವ ಸಾತ್ತ್ವಿಕಾಹಂಕಾರವು ಇಂದ್ರಿಯರೂಪವಾಗಿ ಪರಿಣಮಿಸಿ ಶರೀರದಲ್ಲಿ ಇರುವುದರಿಂದ ಈ ಅಹಂಕಾರವು ಅಧ್ಯಾತ್ಮಾಹಂಕಾರವೆನಿಸಿಕೊಳ್ಳುವುದು. ಇದರಿಂದ—ವಿಷಯಗ್ರಾಹಕವಾದ ಇಂದ್ರಿಯವರ್ಗವು ಅಧ್ಯಾತ್ಮಾಹಂಕಾರವೆಂದು ಫಲಿತವಾಯಿತು.

**(ರೂಪಂ)** ಗ್ರಾಹ್ಯವಾದ ವಿಷಯಗಳೊಳಗೆ ಒಂದಾದ ಶುಕ್ಲನೀಲಪೀತಾದಿರೂಪವು ಅಧಿಭೂತವೆಂಬ ಅಹಂಕಾರವಾಗುವುದು. ಭೂತವೆಂದರೆ ಪಂಚಭೂತಗಳು—ಅಧಿಭೂತವಾದ ಅಹಂಕಾರವೆಂದರೆ ಭೂತಗಳಲ್ಲಿ ಇರುವ ಅಹಂಕಾರತತ್ತ್ವವೆಂದು ಅರ್ಥವು. ರಾಜಸಾಹಂಕಾರದ ಸಹಾಯವನ್ನು ಪಡೆದಿರುವ ತಾಮಸಾಹಂಕಾರವು ಶಬ್ದಾದಿವಿಷಯಗಳಾಗಿ ಪರಿಣಮಿಸಿ ಭೂತಗಳಲ್ಲಿ ಇರುವುದರಿಂದ ಈ ಅಹಂಕಾರವು ಅಧಿಭೂತಾಹಂಕಾರವೆನಿಸಿಕೊಳ್ಳುವುದು. ಇದರಿಂದ—ಇಂದ್ರಿಯಗ್ರಾಹ್ಯವಾದ ವಿಷಯವರ್ಗವು ಅಧಿಭೂತಾಹಂಕಾರವೆಂದು ಫಲಿತವಾಯಿತು.

**(ಆರ್ಕಂ ವಪುಃ)** ಸೂರ್ಯಸಂಬಂಧಿಯಾದ ಶರೀರವು ಅಧಿದೈವವೆಂಬ ಅಹಂಕಾರವಾಗುವುದು. ದೈವವೆಂದರೆ, ಗ್ರಾಹಕವಾದ ಇಂದ್ರಿಯವರ್ಗಕ್ಕೂ, ಗ್ರಾಹ್ಯವಾದ ವಿಷಯವರ್ಗಕ್ಕೂ ಅಧಿಷ್ಠಾತಾವಾಗಿ ನಿಯಾಮಕನಾಗಿ ಇರುವವನು. ಅಧಿದೈವವಾದ ಅಹಂಕಾರವೆಂದರೆ, ನಿಯಾಮಕದೇವತಾವರ್ಗಸಂಬಂಧಿಯಾದ ಅಹಂಕಾರತತ್ತ್ವವೆಂದು ಅರ್ಥವು. ರಾಜಸಾಹಂಕಾರದ ಸಹಾಯವನ್ನು ಪಡೆದಿರುವ ತಾಮಸಾಹಂಕಾರವು ಇಂದ್ರಿಯವರ್ಗಕ್ಕೂ ವಿಷಯವರ್ಗಕ್ಕೂ ನಿಯಾಮಕವಾದ ಸೂರ್ಯಾದಿದೈವಕ್ಕೆ ಶರೀರವಾಗಿ ಪರಿಣಮಿಸಿ ಅಂಥ ದೈವವನ್ನು ಆಶ್ರಯಿಸಿಕೊಂಡಿರುವುದರಿಂದ ಈ ಅಹಂಕಾರವು ಅಧಿದೈವಾಹಂಕಾರವೆನಿಸಿಕೊಳ್ಳುವುದು. ಇದರಿಂದ—ಗ್ರಾಹಕವಾದ ಇಂದ್ರಿಯವರ್ಗಕ್ಕೂ ಗ್ರಾಹ್ಯವಾದ ವಿಷಯವರ್ಗಕ್ಕೂ ಒತ್ತಾಸೆಯನ್ನು ಮಾಡುವ ದೇವತಾವರ್ಗಶರೀರವು ಅಧಿದೈವಾಹಂಕಾರವೆಂದು ಫಲಿತವಾಯಿತು.

ಹೀಗೆ ಉಕ್ತವಾದ ತ್ರಿವಿಧಾಹಂಕಾರವೂ, **(ಅತ್ರ ರಂಧ್ರೇ ಪರಸ್ಪರಾತ್ ಸಿಧ್ಯತಿ)** ಈ ಶರೀರದಲ್ಲಿ ಇರುವ ಚಕ್ಷುರ್ಗೋಳಕವೆಂಬ ರಂಧ್ರದಲ್ಲಿ ಪರಸ್ಪರವಾಗಿ ಉಪಕಾರ್ಯೋಪಕಾರಕಭಾವವನ್ನು ಪಡೆದು ಜ್ಞಾನೋತ್ಪಾದನವೆಂಬ ಸ್ವಕಾರ್ಯಕ್ಕೆ ಯೋಗ್ಯವಾಗುತ್ತದೆ. ಹೇಗೆಂದರೆ—ಸೂರ್ಯಶರೀರವೆಂಬ ಅಧಿದೈವಾ

ಹಂಕಾರವು ತನ್ನ ಕಿರಣದ ಮೂಲಕವಾಗಿ ಇಂದ್ರಿಯವೆಂಬ ಅಧ್ಯಾತ್ಮಾಹಂಕಾರವನ್ನೂ, ವಿಷಯವೆಂಬ ಅಧಿಭೂತಾಹಂಕಾರವನ್ನೂ ಆಕ್ರಮಿಸಿ ಆಪ್ಯಾಯನಪಡಿಸಿದರೇನೇ ಇಂದ್ರಿಯಗಳಿಗೂ ವಿಷಯಗಳಿಗೂ ಗ್ರಾಹ್ಯಗ್ರಾಹಕಭಾವವುಂಟಾಗುವುದು. ಆದುದರಿಂದ ಆ ಎರಡೂ ಅಧಿದೈವಾಹಂಕಾರದಿಂದ ಉಪಕೃತವಾಗಿ ಇರುವುವು.

ಗ್ರಾಹ್ಯವಾದ ವಿಷಯವು ಗ್ರಾಹಕವಾದ ಇಂದ್ರಿಯಕ್ಕೆ ಅತಿದೂರಸ್ಥವಾಗಿಯೂ, ಕುಡ್ಯಾದಿವ್ಯವಹಿತವಾಗಿಯೂ ಇದ್ದುದಾದರೆ ಆಗ ಅದಕ್ಕೆ ಗ್ರಾಹ್ಯತ್ವವೂ, ಅಧಿದೈವಾಹಂಕಾರದಿಂದ ಆಕ್ರಮಣವೂ ಸಂಭವಿಸುವುದಿಲ್ಲ. ಇದಕ್ಕಾಗಿ ಗ್ರಾಹ್ಯವೆಂಬ ಈ ಅಧಿಭೂತಾಹಂಕಾರವು ದೂರಸ್ಥವಾಗಿಯೂ ವ್ಯವಹಿತವಾಗಿಯೂ ಇರದೆ ಸನ್ನಿಹಿತವಾಗಿಯೂ ಅವ್ಯವಹಿತವಾಗಿಯೂ ಇದ್ದು ತನ್ನ ಸ್ವರೂಪವನ್ನು ತೋರ್ಪಡಿಸಿಕೊಂಡು ಅಧ್ಯಾತ್ಮಾಹಂಕಾರಕ್ಕೂ ಅಧಿದೈವಾಹಂಕಾರಕ್ಕೂ ಉಪಕಾರವನ್ನು ಮಾಡುವುದು.

ಗ್ರಾಹಕವಾದ ಇಂದ್ರಿಯವೆಂಬ ಅಧ್ಯಾತ್ಮಾಹಂಕಾರವು ವಿಷಯಗ್ರಹಣಕಾಲದಲ್ಲಿ ಗ್ರಹಣಕ್ಕೆ ಅಡ್ಡಿಯಾಗುವಂತೆ ತನ್ನನ್ನು ಆಚ್ಛಾದಿಸಿಕೊಳ್ಳುವುದಾದರೆ ಅದಕ್ಕೆ ಗ್ರಾಹಕತ್ವವು ಕೂಡುವುದಿಲ್ಲವಾಗಿ ಉಳಿದ ಎರಡು ಅಹಂಕಾರಗಳು ಮಾಡಿದ ಉಪಕಾರವೂ ವ್ಯರ್ಥವಾಗುವುದು. ಇದಕ್ಕಾಗಿ ಈ ಅಧ್ಯಾತ್ಮಾಹಂಕಾರವು ವಿಷಯಗ್ರಹಣಕಾಲದಲ್ಲಿ ತನ್ನನ್ನು ಸಂಕೋಚಪಡಿಸಿಕೊಳ್ಳದೆ ವಿಶಾಲವಾಗಿ ತೆರೆದು ಅಧಿಭೂತಾಧಿದೈವಾಹಂಕಾರಗಳಿಗೆ ಉಪಕಾರಮಾಡುವುದು.

ಹೀಗೆ ಈ ಮೂರರೊಳಗೆ ಆವುದೊಂದನ್ನು ಬಿಟ್ಟರೂ ಉಳಿದುವು ಜ್ಞಾನೋತ್ಪಾದನವೆಂಬ ಫಲವನ್ನು ಉಂಟುಮಾಡಲಾರವಾದುದರಿಂದ ಈ ಮೂರೂ ಪರಸ್ಪರವಾಗಿ ಉಪಕಾರ್ಯೋಪಕಾರಕಭಾವವನ್ನು ಪಡೆದಿರುವುವು.

ಓಹೋ, ಈ ಮೂರರ ಪರಸ್ಪರೋಪಕಾರದಿಂದಲೇ ರೂಪ ಮೊದಲಾದ ವಿಷಯಗಳ ಪ್ರಕಾಶವು (ಜ್ಞಾನವು) ಉಂಟಾಗುವುದೋ; ಹಾಗಾದರೆ ರೂಪಾದಿಗಳಿಗಿಂತಲೂ ವಿಲಕ್ಷಣನಾದ ಆತ್ಮನ ಪ್ರಕಾಶವು ಉಂಟಾಗುವ ಬಗೆ ಹೇಗೆ? ಎಂಬ ಆಶಂಕೆಗೆ ಪರಿಹಾರವನ್ನು ಹೇಳುತ್ತಾನೆ—**(ಯಃ ಸ್ವತಃ ಖೇ ಆತ್ಮಾ)** ಇಲ್ಲಿ ಪುಂಲಿಂಗವಾದ ಯಚ್ಛಬ್ದವಿರುವುದರಿಂದ ಅಂಥ ತಚ್ಛಬ್ದವೊಂದನ್ನು ಅಧ್ಯಾಹರಿಸಿಕೊಂಡು, ಹಿಂದಿನ ವಾಕ್ಯದಲ್ಲಿ ಇರುವ **ಸಿಧ್ಯತಿ** ಎಂಬ ಕ್ರಿಯಾಪದವನ್ನೂ ಅನುಷಂಗಿಸಿಕೊಂಡು ಅನ್ವಯಪೂರ್ತಿಯನ್ನು ತಿಳಿಯಬೇಕು. **( ಖೇ ಯಃ ಆತ್ಮಾ**

**ಸಃ ಸ್ವತಃ ಸಿಧ್ಯತಿ)** ಹೃದಯಾಕಾಶದಲ್ಲಿ ಆತ್ಮನೆಂಬುವನು ಯಾವನಿರುವನೋ ಅವನು ಸ್ವತ ಏವ ಜ್ಞಾನಪ್ರಕಾಶಕ್ಕೆ ಗೋಚರನಾಗುವನು;' ಎಂದರೆ, ರೂಪ ಮುಂತಾದ ವಿಷಯಗಳ ಪ್ರಕಾಶಕ್ಕೆ ಮೂರುಬಗೆಯ ಅಹಂಕಾರತತ್ತ್ವದ ಒತ್ತಾಸೆ ಬೇಕಾಗಿರುವಂತೆ ಆತ್ಮನ ಪ್ರಕಾಶಕ್ಕೆ ಆವುದರ ಒತ್ತಾಸೆಯೂ ಬೇಕಾಗಿಲ್ಲ. ಸ್ವಯಂಪ್ರಕಾಶವಾದ ಪ್ರತ್ಯಗ್ವಸ್ತುವಾದುದರಿಂದ ತನಗೆ ತಾನೇ ಪ್ರಕಾಶಿಸುವನು.

ಹಾಗಾದರೆ ಉಕ್ತವಾದ ಮೂರುಬಗೆಯ ಅಹಂಕಾರಕ್ಕೂ ಸ್ವಯಂ ಪ್ರಕಾಶತ್ವವು ಇಲ್ಲದೆ ಹೋದುದಕ್ಕೂ ಆತ್ಮನಿಗೆ ಮಾತ್ರ ಸ್ವಯಂಪ್ರಕಾಶತ್ವವು ಇರುವುದಕ್ಕೂ ಕಾರಣವೇನೆಂಬ ಆಶಂಕೆಯನ್ನು ಪದ್ಯದ ಅವಶಿಷ್ಟಭಾಗದಿಂದ ಪರಿ ಹರಿಸುತ್ತಾನೆ.—**(ಯದೇಷಾಮುಪರೋಽಯಮಾದ್ಯಃ ಸ್ವಯಾಽನು ಭೂತ್ಯಾಽಖಿಲಸಿದ್ಧಸಿದ್ಧಿಃ)** ಯಾವ ಕಾರಣದಿಂದ, ಈ ಆತ್ಮನು ಈ ಮೂರು ಬಗೆಯ ಅಹಂಕಾರಗಳಿಗೂ ವಿಷಯಪ್ರಕಾಶಕತ್ವಶಕ್ತಿಯುಂಟಾಗುವುದಕ್ಕೆ ಮೂಲ ಕಾರಣವಾಗಿ ನಿಂತಿರುವನೋ; ಮತ್ತು ಆ ಮೂರೂ ಸ್ವಸ್ವವ್ಯಾಪಾರದಿಂದ ವಿಶ್ರಾಂತಿಹೊಂದಿದ ಕಾಲದಲ್ಲಿಯೂ ಇವನು ವಿಶ್ರಾಂತಿಯನ್ನು ಹೊಂದದೆ ಆಗಲೂ ಪ್ರಕಾಶಿಸುತ್ತಲೇ ಇರುವನೋ; ಆ ಕಾರಣದಿಂದಲೇ ಈ ಆತ್ಮನೆಂಬುವನು ತನಗೆ ಅಸಾಧಾರಣವಾಗಿ ಇರುವ ಅನುಭೂತಿಯೆಂಬ ಸ್ವರೂಪಭೂತಜ್ಞಾನದಿಂದ ತನ್ನನ್ನು ತಾನೇ ತನಗೆ ಪ್ರಕಾಶಗೊಳಿಸಿಕೊಳ್ಳುತ್ತಲೂ, ಸ್ವವ್ಯತಿರಿಕ್ತವಾದ ಸಮಸ್ತ ಪ್ರಕಾಶ್ಯವಸ್ತುವನ್ನೂ ತನ್ನ ಧರ್ಮಭೂತಜ್ಞಾನಪ್ರಭೆಯಿಂದ ಪ್ರಕಾಶಗೊಳಿಸಿಕೊಳ್ಳು ತ್ತಲೂ ಇರುವನು. ಇಂಥ ಸ್ವಭಾವವು ಮೂರುಬಗೆಯ ಅಹಂಕಾರಕ್ಕೂ ಇಲ್ಲ ವಾದುದರಿಂದ ಅವುಗಳಿಗೆ ಸ್ವಯಂಪ್ರಕಾಶತ್ವವಿಲ್ಲ. ಆದುದರಿಂದಲೇ ಜಡವಾದ ಅವುಗಳಿಗಿಂತಲೂ ಅಜಡನಾದ ಇವನು ಅತ್ಯಂತವಿಲಕ್ಷಣನಾಗಿ ಭಿನ್ನನೆನಿಸಿಕೊಂಡಿ ರುವನು.

ಹೀಗೆ ಪೂರ್ವಶ್ಲೋಕದಲ್ಲಿ—ಚಕ್ಷುರಿಂದ್ರಿಯವೆಂಬ ಒಂದು ಅಧ್ಯಾತ್ಮಾ ಹಂಕಾರವನ್ನು ತೆಗೆದುಕೊಂಡು ಅದಕ್ಕೆ ರೂಪವೆಂಬ ಅಧಿಭೂತವನ್ನೂ, ಸೂರ್ಯ ಶರೀರವೆಂಬ ಅಧಿದೈವವನ್ನೂ ತೋರಿಸಿ ಈ ಮೂರೂ ಪರಸ್ಪರೋಪಕಾರದಿಂದಲೇ ಜ್ಞಾನೋತ್ಪಾದನವೆಂಬ ಫಲವನ್ನು ಉಂಟುಮಾಡುವುವೆಂದು ಉಪದೇಶಿಸಿದನು; ಚಕ್ಷುರಿಂದ್ರಿಯಕ್ಕೆ ಹೇಳಿದ ಈ ನ್ಯಾಯವನ್ನು ಇತರೇಂದ್ರಿಯಗಳಲ್ಲಿಯೂ ಊಹಿಸಿ ಕೊಳ್ಳಬೇಕೆಂದು ಈಗ ಅತಿದೇಶಮಾಡುತ್ತಾನೆ.—

**ಏವಂ ತ್ವಗಾದಿ ಶ್ರವಣಂ ಚ. ಚಕ್ಷುಃ**
**ಜಿಹ್ವಾದಿ ನಾಸಾದಿ ಚ ಚಿತ್ತಯುಕ್ತಂ ॥**

ಹಿಂದೆಯೂ ಮುಂದೆಯೂ ಆದಿಶಬ್ದಪ್ರಯೋಗವಿರುವುದರಿಂದ ಮಧ್ಯ ಪತಿತವಾಗಿರುವ ಶ್ರವಣಪದದಲ್ಲಿಯೂ, ಚಕ್ಷುಃಪದದಲ್ಲಿಯೂ ಆದಿಪದವನ್ನು ಸೇರಿಸಿ ಕೊಂಡು ಶ್ರವಣಾದಿ, ಚಕ್ಷುರಾದಿ ಎಂದು ಪೂರ್ತಿಮಾಡಿಕೊಳ್ಳಬೇಕು. ತ್ವಕ್, ಶ್ರವಣಂ, ಚಕ್ಷುಃ, ಜಿಹ್ವಾ, ನಾಸಿಕಾ ಎಂಬ ಈ ಐದು ಶಬ್ದಗಳೂ ಇಂದ್ರಿಯ ವಿಶೇಷವಾಚಕಗಳಾದುದರಿಂದ ಅಧ್ಯಾತ್ಮರೂಪವಾದ ಅಹಂಕಾರವನ್ನು ತೋರಿ ಸುವುವು. ಈ ಪದಗಳ ಮುಂದೆ ಇರುವ ಆದಿಶಬ್ದಗಳು ಉಳಿದ ಅಧಿಭೂತಾಧಿ ದೈವಾಹಂಕಾರಗಳನ್ನು ತೋರಿಸುವುವು. ಆದುದರಿಂದ—ತ್ವಗಾದಿ-ಶ್ರವಣಾದಿ-ಚಕ್ಷುರಾದಿ-ಜಿಹ್ವಾದಿ-ನಾಸಾದಿ ಎಂಬ ಐದು ಪದಗಳೂ ಮೂರುಬಗೆಯ ಅಹಂ ಕಾರವನ್ನು ಪ್ರತ್ಯೇಕವಾಗಿ ಒಳಕೊಂಡಿರುವ ಐದುವರ್ಗಗಳನ್ನು ಬೋಧಿಸುವುವು. ಚಕ್ಷುರಿಂದ್ರಿಯವೆಂಬ ಅಧ್ಯಾತ್ಮಾಹಂಕಾರ, ರೂಪವೆಂಬ ಅಧಿಭೂತಾಹಂಕಾರ, ಸೂರ್ಯಶರೀರವೆಂಬ ಅಧಿದೈವಾಹಂಕಾರ, ಈ ಮೂರನ್ನು ಒಳಕೊಂಡಿರುವ ಚಕ್ಷು ರಾದಿ ವರ್ಗವು ಪೂರ್ವಶ್ಲೋಕದಲ್ಲಿಯೇ ವಿವರಿಸಲ್ಪಟ್ಟಿತು. ಆದರೂ ಅದನ್ನು ಈ ಶ್ಲೋಕದಲ್ಲಿ ಪುನಃ ಚಕ್ಷುರಾದಿ ಎಂದು ಉಚ್ಚಾರಣೆ ಮಾಡಿದುದು ದೃಷ್ಟಾಂತ ಕ್ಕಾಗಿಯೇ. ಚಕ್ಷುರಾದಿವರ್ಗವು ಹೇಗಾದರೆ ಮೂರು ಬಗೆಯ ಅಹಂಕಾರವನ್ನು ಒಳಕೊಂಡಿರುವ ಒಂದು ಸಮುದಾಯರೂಪವಾಗಿ ಇರುವುದೋ, (ಏವಂ) ಇದರಂತೆಯೇ ತ್ವಗಾದಿ, ಶ್ರವಣಾದಿ, ಜಿಹ್ವಾದಿ, ನಾಸಾದಿ, ಎಂಬ ಉಳಿದ ನಾಲ್ಕು ವರ್ಗಗಳೂ ಮೂರುಬಗೆಯಾದ ಅಹಂಕಾರವನ್ನು ಒಳಕೊಂಡಿರುವ ಒಂದೊಂದು ಸಮುದಾಯರೂಪವಾಗಿ ಇರುವುವೆಂದು ತಿಳಿಯಬೇಕು, ಮತ್ತು ಚಕ್ಷುರಾದಿವರ್ಗವು ಹೇಗಾದರೆ ಪರಸ್ಪರೋಪಕಾರದಿಂದಲೇ ಜ್ಞಾನೋತ್ಪತ್ತಿಗೆ ಕಾರಣವಾಗುವುದೋ-ಹಾಗೆಯೇ ತ್ವಗಾದಿಯಾದ ನಾಲ್ಕುವರ್ಗಗಳೊಳಗೂ ಪ್ರತಿ ಯೊಂದು ವರ್ಗವೂ ವರ್ಗದಲ್ಲಿ ಅಡಗಿರುವ ಮೂರರ ಪರಸ್ಪರಸಹಾಯದಿಂದಲೇ ಜ್ಞಾನೋತ್ಪಾದನಸಾಮರ್ಥ್ಯವನ್ನು ಪಡೆವುದು.

೧. ಅದರಲ್ಲಿ—ತ್ವಗಾದಿವರ್ಗದೊಳಗೆ—ತ್ವಗಿಂದ್ರಿಯವೇ ಅಧ್ಯಾತ್ಮಾ ಹಂಕಾರವು; ಸ್ಪರ್ಶವೇ ಅಧಿಭೂತಾಹಂಕಾರವು; ವಾಯುವೇ ಅಧಿದೈವಾಹಂಕಾ ರವು: ಇದು ತ್ವಗಾದಿವರ್ಗವೆನಿಸಿಕೊಳ್ಳುವುದು.

೨. ಶ್ರವಣಾದಿವರ್ಗದೊಳಗೆ—ಶ್ರವಣೇಂದ್ರಿಯವೇ ಅಧ್ಯಾತ್ಮಾಹಂಕಾರವು; ಶಬ್ದವೇ ಅಧಿಭೂತಾಹಂಕಾರವು; ದಿಕ್ಕುಗಳೇ ಅಧಿದೈವಾಹಂಕಾರವು; ಇದು ಶ್ರವಣಾದಿವರ್ಗವೆನಿಸಿಕೊಳ್ಳುವುದು.

೩. ಚಕ್ಷುರಾದಿವರ್ಗವಾದರೆ ಪೂರ್ವಶ್ಲೋಕದಲ್ಲಿಯೇ ಉಕ್ತವಾಗಿ ಇರುವುದು.

೪. ಜಿಹ್ವಾದಿವರ್ಗದೊಳಗೆ—ಜಿಹ್ವೆಯೇ ಅಧ್ಯಾತ್ಮಾಹಂಕಾರವಾಗಿ ಇರುವುದು ; ರಸವೇ ಅಧಿಭೂತಾಹಂಕಾರವು ; ವರುಣನೇ ಅಧಿದೈವಾಹಂಕಾರವು ; ಇದೇ ಜಿಹ್ವಾದಿವರ್ಗವೆನಿಸಿಕೊಳ್ಳುವುದು.

೫. ನಾಸಾದಿವರ್ಗದೊಳಗೆ—ನಾಸಿಕೆಯೇ ಅಧ್ಯಾತ್ಮಾಹಂಕಾರವು ; ಗಂಧವೇ ಅಧಿಭೂತಾಹಂಕಾರವು ; ಅಶ್ವಿನೀದೇವತೆಗಳೇ ಅಧಿದೈವಾಹಂಕಾರವು ; ಇದು ನಾಸಾದಿವರ್ಗವೆನಿಸಿಕೊಳ್ಳುವುದು.

ಹೀಗೆ ಉಕ್ತವಾದ ಐದು ವರ್ಗಗಳಲ್ಲಿಯೂ ಆ ಆ ಇಂದ್ರಿಯವೆಂಬ ಪ್ರತಿಯೊಂದು ಅಧ್ಯಾತ್ಮಾಹಂಕಾರವೂ ಮನಸ್ಸೆಂಬ ಅಧ್ಯಾತ್ಮಾಹಂಕಾರದ ಸಹಾಯವಿಲ್ಲದೆ ಸ್ವಕಾರ್ಯವನ್ನು ಮಾಡಲಾರದೆಂಬುದನ್ನು ತೋರಿಸುವುದಕ್ಕೋಸ್ಕರ ಶ್ಲೋಕದಲ್ಲಿ **ಚಿತ್ತಯುಕ್ತಂ** ಎಂಬ ವಿಶೇಷಣವು ಕೊಡಲ್ಪಟ್ಟಿರುವುದು. ಇದರಿಂದ ತ್ವಗಾದಿವರ್ಗದಂತೆ ಮನಆದಿಯೆಂಬುದೂ ಒಂದು ಆರನೆಯ ವರ್ಗವು ಉಟೆಂದು ಸೂಚಿತವಾಯಿತು. ಈ ವರ್ಗದಲ್ಲಿ ಮನಇಂದ್ರಿಯವೇ ಅಧ್ಯಾತ್ಮಾಹಂಕಾರವು; ಧ್ಯೇಯವಾದ ವಿಷಯವೇ ಅಧಿಭೂತಾಹಂಕಾರವು; ಚಂದ್ರನೇ ಅಧಿದೈವಾಹಂಕಾರವು; ಇದೇ ಮನಆದಿವರ್ಗವೆನಿಸಿಕೊಳ್ಳುವುದು.

**ಓ ಕೃಷ್ಣ!** ಚಕ್ಕಂದವಾದ ಈ ಪುರಾಣಕಥೆ ಕೇಳುವುದಕ್ಕೆ ಇಂಪಾಗಿಯೇ ಇರುವುದು ; ಆದರೆ, ಅತ್ಯಂತವಿಲಕ್ಷಣಗಳಾದ ದೇಹಾತ್ಮಗಳೆರಡಕ್ಕೂ ಅಭೇದಪ್ರತೀತಿಯುಂಟಾಗುತ್ತಿರುವುದಕ್ಕೆ ಕಾರಣವೇನೆಂಬ ನನ್ನ ಪ್ರಶ್ನೆಗೆ ಉತ್ತರವೇನಾಯಿತು? ಎಂಬ ಉದ್ವೇಗವನ್ನು ಪರಿಹರಿಸುವುದಕ್ಕಾಗಿ, ಉಕ್ತವಾದ ಅಹಂಕಾರತತ್ತ್ವದ ಸಂಬಂಧವೇ ಅಭೇದಪ್ರತೀತಿಗೆ ಕಾರಣವೆಂದು ಹೇಳಿ ಉತ್ತರವಾಕ್ಯವನ್ನು ಉಪಸಂಹಾರಮಾಡುತ್ತಾನೆ.—

**ಯೋಽಸೌ ಗುಣಕ್ಷೋಭಕೃತೋ ವಿಕಾರಃ**
**ಪ್ರಧಾನಮೂಲಾನ್ಮಹತಃ ಪ್ರಸೂತಃ ।**
**ಅಹಂ ತ್ರಿವೃನ್ಮೋಹವಿಕಲ್ಪಹೇತು-**
**ರ್ವೈಕಾರಿಕಸ್ತಾಮಸ ಐಂದ್ರಿಯಶ್ಚ ॥**

(ಇಲ್ಲಿ ಅಹಂಶಬ್ದವು ಅಹಂಕಾರತತ್ತ್ವವನ್ನು ತೋರಿಸುವುದು.) ಓ ಉದ್ಧವನೇ! **(ಯೋಽಸೌ ಅಹಂ, ಸಃ ಮೋಹವಿಕಲ್ಪಹೇತುಃ)** ಯಾವ ಈ ಅಹಂಕಾರತತ್ತ್ವವೆಂಬುದುಂಟೋ, ಅದೇ ಮೋಹಕ್ಕೂ ವಿಕಲ್ಪಕ್ಕೂ ಕಾರಣವಾಗಿ ಇರುವುದೆಂದು ತಿಳಿ. ಮೋಹವೆಂದರೆ ದೇಹಾತ್ಮಗಳ ಅಭೇದಜ್ಞಾನವೆಂಬ ಅಜ್ಞಾನವು. ವಿಕಲ್ಪವೆಂದರೆ ಆತ್ಮನಲ್ಲಿ ದೇವತ್ವ-ಮನುಷ್ಯತ್ವ-ಸ್ವತಂತ್ರತ್ವ ಮುಂತಾದ ಧರ್ಮಗಳ ಆರೋಪವು. ಇವೆರಡಕ್ಕೂ ಕಾರಣವಾಗಿ ಇರುವ ಅಹಂಕಾರತತ್ತ್ವದ ಸ್ವರೂಪವನ್ನು ಸ್ವಲ್ಪಮಟ್ಟಿಗೆ ವಿವರಿಸುವೆನು ಕೇಳು— **(ಗುಣಕ್ಷೋಭಕೃತಃ ವಿಕಾರಃ)** ಪ್ರಕೃತಿಯಲ್ಲಿ ಇರುವ ಸತ್ತ್ವರಜಸ್ತಮೋಗುಣಗಳ ಪರಸ್ಪರ ವೈಷಮ್ಯದಿಂದ (ನ್ಯೂನಾತಿರೇಕದಿಂದ) ನಿರ್ಮಿಸಲ್ಪಟ್ಟಿರುವ ಯಾವ ವಿಕಾರವುಂಟೋ ತದ್ರೂಪವಾಗಿ ಇರುವುದು. ಮತ್ತು **(ಪ್ರಧಾನಮೂಲಾನ್ಮಹತಃ ಪ್ರಸೂತಃ)** ಪ್ರಧಾನವೆಂಬ ಪ್ರಕೃತಿದ್ರವ್ಯದಿಂದ ಇದು ಸಾಕ್ಷಾತ್ತಾಗಿ ಹುಟ್ಟಿದುದಲ್ಲ; ಪ್ರಧಾನವನ್ನು ಮೂಲಕಾರಣವಾಗಿ ಪಡೆದಿರುವ ಮಹತ್ತತ್ತ್ವದಿಂದ ಇದು ಉತ್ಪನ್ನವಾಗಿ ಇರುವುದು. ಮತ್ತು **(ವೈಕಾರಿಕಸ್ತಾಮಸ ಐಂದ್ರಿಯಶ್ಚ ತ್ರಿವೃತ್)** ಸಾತ್ತ್ವಿಕವೆಂದೂ ತಾಮಸವೆಂದೂ ರಾಜಸವೆಂದೂ ಇದು ಮೂರು ಬಗೆಯಾಗಿ ಇರುವುದು. ಸಾತ್ತ್ವಿಕಾಹಂಕಾರದಿಂದ ಇಂದ್ರಿಯಗಳು ಹುಟ್ಟುವ ಕಾಲದಲ್ಲಿ ರಾಜಸಾಹಂಕಾರವು ಅನುಗ್ರಾಹಕವಾಗಿ ಇರುವಕಾರಣ ರಾಜಸಾಹಂಕಾರವನ್ನು ಐಂದ್ರಿಯಶಬ್ದದಿಂದ ನಿರ್ದೇಶಿಸಿರುವುದು.

ದೇಹಕ್ಕೂ ಆತ್ಮನಿಗೂ ಅಭೇದಪ್ರತೀತಿಯುಂಟಾಗಿ ಇರುವುದಕ್ಕೆ ಕಾರಣವನ್ನು ಹೇಳಿದುದಾಯಿತು; ಆದುದರಿಂದಲೇ ಆತ್ಮನು ದೇಹಕ್ಕಿಂತಲೂ ಅತ್ಯಂತ ವಿಲಕ್ಷಣನಾಗಿಯೇ ಇರುವನೆಂದು ಉಪದೇಶಿಸುತ್ತಾನೆ.—

**೩೪೬. ಆತ್ಮನಃ ದೇಹವಿಲಕ್ಷಣತ್ವೋಪಪಾದನಂ**

**ಆತ್ಮಾ ಪರಿಜ್ಞಾನಮಯೋಽವಿವಾದೋ**
**ಹ್ಯಸ್ತೀತಿ ನಾಸ್ತೀತಿ ಭಿದಾರ್ಥನಿಷ್ಠಃ ।**
**ವ್ಯರ್ಥೋಽಪಿ ನೈವೋಪರಮೇತ ಪುಂಸಾಂ**
**ಮತ್ತಃ ಪರಾವೃತ್ತಧಿಯಾಂ ಸ್ವಲೋಕಾತ್ ॥**

**ಓ ಉದ್ಧವನೇ!** ಆತ್ಮನೆಂಬುವನು ಪರಿತೋ ಜ್ಞಾನಮಯನಾಗಿ ಇರುವನು; ಎಂದರೆ, ಆತ್ಮನ ಸ್ವರೂಪದಲ್ಲಿ ಎಳ್ಳಿನ ಮೊನೆಯಷ್ಟು ಭಾಗವಾದರೂ ಜಡತ್ವವಿಲ್ಲ. ಸಂಪೂರ್ಣಭಾಗವೂ ಜ್ಞಾನಸ್ವರೂಪವಾಗಿಯೇ ಇರುವುದು. ಇದರಿಂದ

ದೇಹವು ಇದಕ್ಕೆ ವಿಪರೀತವಾಗಿ ಸಂಪೂರ್ಣಭಾಗದಲ್ಲಿಯೂ ಜಡಸ್ವರೂಪವಾಗಿ ಇದೆಯೆಂಬುದು ಸೂಚಿತವಾಗುವುದು.

ಮತ್ತು, ಈ ಆತ್ಮನೆಂಬುವನು ವಿವಾದವಿಲ್ಲದೆಯೇ ಸಿದ್ಧನಾಗಿ ಇರುವನು. ಪಶುಪಕ್ಷಿಮೃಗಾದಿಗಳೂ ಕೂಡ **ನಾನು** ಎಂಬ ಪ್ರತೀತಿಗೆ ಗೋಚರವಾದ ಒಂದಾನೊಂದು ವಸ್ತುವನ್ನು ತಮ್ಮೊಳಗೆ ತಾವೇ ತಿಳಿದುಕೊಂಡು ಅದರಲ್ಲಿ ವಿವಾದಪಡುವುದಿಲ್ಲವಷ್ಟೆ ?

ಮತ್ತು, ಪರಿತೋ ಜ್ಞಾನಮಯನಾಗಿ ಇರುವನೆಂದು ಹೇಳಿದುದರಿಂದ ಸರ್ವದಾ ಏಕರೂಪತ್ವವು ತೋರುವುದು; ಈ ಏಕರೂಪತ್ವಕ್ಕೆ ಕಾರಣವು ನಿರ್ವಿಕಾರತ್ವವೇ. ಮೃತ್ಪಿಂಡದಲ್ಲಿ ಹಲವುಬಗೆಯ ವಿಕಾರಗಳೂ ಬಂದೊದಗುವುವಾದಕಾರಣ ಅದು ಏಕರೂಪತ್ವವನ್ನು ಪಡೆಯಲು ಅವಕಾಶವಿಲ್ಲ. ನಿರವಯವವಾದ ಆತ್ಮಸ್ವರೂಪದಲ್ಲಿಯಾದರೆ ಆವುದೊಂದು ವಿಕಾರವೂ ಉಂಟಾಗಲಾರದಾದಪ್ರಯುಕ್ತ ಇದು ಸರ್ವದಾ ಏಕರೂಪವಾಗಿ ಇರುವುದು; ಆದುದರಿಂದ **ಅಸ್ತಿ** ಎಂಬ ವ್ಯವಹಾರವನ್ನು ಈ ಆತ್ಮಸ್ವರೂಪವಿಷಯದಲ್ಲಿ ನಿರಾತಂಕವಾಗಿ ಮಾಡಬಹುದು. ಅಚೇತನವಸ್ತುವಿನ ಪರಿಣಾಮವಿಶೇಷವಾದ ಶರೀರದಲ್ಲಿಯಾದರೋ, ಪೂರ್ವಪೂರ್ವಾವಸ್ಥೆಗಳು ಉತ್ತರೋತ್ತರಕಾಲಗಳಲ್ಲಿ ಇಲ್ಲವಾದುದರಿಂದ **ಅಸ್ತಿ** ಎಂಬ ವ್ಯವಹಾರಯೋಗ್ಯತೆಯೇ ಇಲ್ಲದೆ ಅದಕ್ಕೆ ವಿಪರೀತವಾಗಿ **ನಾಸ್ತಿ** ಎಂಬ ವ್ಯವಹಾರಯೋಗ್ಯತೆಯೇ ಇರುವುದು. ಆ ಆ ಅವಸ್ಥೆಯಿರುವಕಾಲದಲ್ಲಿಮಾತ್ರವೇ **ಅಸ್ತಿ** ಎಂಬ ವ್ಯವಹಾರಕ್ಕೆ ಶರೀರವು ಭಾಗಿಯಾಗಬಹುದಲ್ಲದೆ **ಸರ್ವದಾ ಅಸ್ತಿ** ಎಂಬ ವ್ಯವಹಾರಕ್ಕೆ ಎಂದಿಗೂ ಭಾಗಿಯಾಗಲಾರದು. ಈ ಅರ್ಥವೇ **ಅಸ್ತೀತಿ ನಾಸ್ತೀತಿ ಭಿದಾಽರ್ಥನಿಷ್ಠಃ** ಎಂಬ ಪದಗಳಿಂದ ಹೇಳಲ್ಪಡುವುದು. ಎಂದರೆ **ಅಸ್ತಿ ನಾಸ್ತಿ** ಎಂಬ ಎರಡು ವಿಧವಾದ ವ್ಯವಹಾರವೂ ದೇವತ್ವ ಮನುಷ್ಯತ್ವ ಮುಂತಾದ ಭೇದದೊಡನೆ ಕೂಡಿರುವ ದೇಹವೆಂಬ ಪದಾರ್ಥದ ಪರವಾಗಿಯೇ ಪ್ರವರ್ತಿಸುವುದಲ್ಲದೆ ಆತ್ಮಸ್ವರೂಪಪರವಾಗಿ ಎಂದಿಗೂ ಪ್ರವರ್ತಿಸುವುದಿಲ್ಲ.

ಅಥವಾ (**ಅಸ್ತೀತಿ ನಾಸ್ತೀತಿ ಭಿದಾ**) ಅಸ್ತಿನಾಸ್ತಿ ಎಂಬ ಭೇದವು (**ಅರ್ಥನಿಷ್ಠಃ**) ನಿರಂತರಪರಿಣಾಮಿಯಾದ ದೇಹವಿಷಯದಲ್ಲಿ ನಿಲ್ಲುವುದೇ ಹೊರತು ಅಪರಿಣಾಮಿಯಾದ ಆತ್ಮನ ವಿಷಯದಲ್ಲಿ ಬರಲಾರದು; ಎಂದೂ ವ್ಯಾಖ್ಯಾನಮಾಡಬಹುದು. ಈ ಪಕ್ಷದಲ್ಲಿ **ಅರ್ಥನಿಷ್ಠಃ** ಎಂಬ ಪುಂಲಿಂಗವು ಆರ್ಷವಾಗುವುದು. ದೇವತ್ವಮನುಷ್ಯತ್ವಾದಿಭೇದವು ದೇಹರೂಪವಾದ ಪದಾರ್ಥ

ದಲ್ಲಿಯೇ ನಿಲ್ಲುವುದೆಂದು ಹೇಳಿದುದರಿಂದ—ಆತ್ಮಸ್ವರೂಪದಲ್ಲಿ ಅಂಥ ದೇವತ್ವಮ ನುಷ್ಯತ್ವಾದಿಭೇದವಿಲ್ಲವೆಂದೂ, ಸ್ವರೂಪದಲ್ಲಿಯೇ ಅಂಥ ಭೇದಪ್ರತೀತಿ ಭ್ರಾಂತಿಯೇ ಹೊರತು ಯಥಾರ್ಥಜ್ಞಾನವಲ್ಲವೆಂದೂ ಸಿದ್ಧವಾಯಿತು.

ಆತ್ಮನ ಸ್ವರೂಪಯಾಥಾತ್ಮ್ಯವನ್ನು ಸಾಕ್ಷಾತ್ಕರಿಸಿದರೇನೇ ಅಂಥ ಭ್ರಾಂತಿ ತೊಲಗುವುದಲ್ಲದೆ ಮತ್ತಾವರೀತಿಯಿಂದಲೂ ಅದು ತೊಲಗುವುದಿಲ್ಲವೆಂದು ಉತ್ತರಾರ್ಧದಿಂದ ಉಪದೇಶಿಸುತ್ತಾನೆ.—ಈ ಭೇದಭ್ರಮವು ಅರ್ಥಶೂನ್ಯವಾದುದರಿಂದ ವ್ಯರ್ಥವೆನಿಸಿಕೊಳ್ಳುವುದು. ಈ ಭೇದಭ್ರಮಕ್ಕೆ ಗೋಚರವಾದ ದೇವತ್ವಮನುಷ್ಯತ್ವ ಮುಂತಾದ ಭೇದರೂಪಾರ್ಥವು ಆತ್ಮನಲ್ಲಿ ಸರ್ವಥಾ ಇಲ್ಲವಷ್ಟೆ.

ಇಂಥ ಭ್ರಮವು— ಆತ್ಮಸಾಕ್ಷಾತ್ಕಾರಕ್ಕೆ ಕಾರಣಭೂತನಾದ ನನ್ನಲ್ಲಿ ವಿಮುಖರಾಗಿರುವ ಆಸುರಪ್ರಕೃತಿಗಳಾದ ಪುರುಷರಿಗೆ ಯಾವಾಗಲೂ ತೊಲಗುವುದೇ ಇಲ್ಲ; ಕೋಟಿಕೋಟಿ ಜನ್ಮಗಳಲ್ಲಿಯೂ ಅಂಥವರಿಗೆ ಅನುವರ್ತಿಸುತ್ತಲೇ ಇರುವುದು.

**ಸ್ವಲೋಕಾತ್** ಎಂಬ ಪದವು (**ಸ್ವಸ್ಯ ಲೋಕಃ ಯಸ್ಮಾತ್**) ಎಂದು ಬಹುವ್ರೀಹಿಸಮಾಸಾಂತವಾಗಿ (**ಮತ್ತಃ**) ಎಂಬ ಪದಕ್ಕೆ ವಿಶೇಷಣವಾಗಿ ಇರುವುದು. ಸ್ವ-ಎಂದರೆ ಆತ್ಮಸ್ವರೂಪವು; ಲೋಕ ಎಂದರೆ ಸಾಕ್ಷಾತ್ಕಾರವು. ಆತ್ಮಸ್ವರೂಪದ ಸಾಕ್ಷಾತ್ಕಾರವು ಯಾವನ ಅನುಗ್ರಹದಿಂದ ಉಂಟಾಗುವುದೋ ಅಂಥ ನನ್ನಲ್ಲಿ ವೈಮುಖ್ಯವನ್ನು ವಹಿಸಿರುವವರಿಗೆ ಎಂದಿಗೂ ಆ ಭ್ರಮವು ನೀಗುವುದಿಲ್ಲವೆಂದು ಅಭಿಪ್ರಾಯವು.

## ೩೮೭. ಭಗವದ್ವಿಮುಖಾನಾಂ ಉಚ್ಚಾವಚಜನ್ಮಪ್ರಾಪ್ತಿಪ್ರಕಾರಪ್ರಶ್ನಃ.

ಹೀಗೆ ಭಗವದ್ವಿಮುಖರಾದವರಿಗೆ—ಸುರ, ನರ, ತಿರ್ಯಕ್ ಸ್ಥಾವರವೆಂಬ ನಾನಾಶರೀರಗಳೊಡನೆ ಪುನಃ ಪುನಃ ಸಂಯೋಗವಿಯೋಗರೂಪವಾದ ಸಂಸಾರವು ಅನುವರ್ತಿಸುತ್ತಲೇ ಇರುವುದೆಂದು ಉಪದೇಶಿಸಿದುದನ್ನು ಕೇಳಿ ಆ ವಿಷಯದಲ್ಲಿ **ಉದ್ಧವನು** ಪ್ರಶ್ನೆಮಾಡುತ್ತಾನೆ.—

**ಉದ್ಧವ ಉವಾಚ.—**

**ಪರಾವೃತ್ತಧಿಯಸ್ತ್ವತ್ತಃ ಸ್ವಕೃತೈಃ ಕರ್ಮಭಿಃ ಪ್ರಭೋ ।**
**ಉಚ್ಚಾವಚಾನ್ ಯಥಾ ದೇಹಾನ್ ಗೃಹ್ಣಂತಿ ವಿಸೃಜಂತಿ ಚ॥**

**ತನ್ಮಮಾಖ್ಯಾಹಿ ಗೋವಿಂದ ದುರ್ವಿಭಾವ್ಯಮನಾತ್ಮಭಿಃ ।**
**ನ ಹ್ಯೇತತ್ಪ್ರಾಯಶೋ ಲೋಕೇ ವಿದ್ವಾಂಸಸ್ಸಂತಿ ವಂಚಿತಾಃ ॥**

**ಓ ಪ್ರಭೂ!** ಸರ್ವರಿಗೂ ಸ್ವಾಮಿಯಾಗಿಯೂ ಸರ್ವಭೂತಸುಹೃತ್ತಾಗಿಯೂ ಇರುವ ನಿನ್ನಲ್ಲಿ ವೈಮುಖ್ಯವನ್ನು ವಹಿಸಿರುವ ಕೃತಘ್ನರಾದ ಪಾಪಿಷ್ಠರು ನೀಚೋಚ್ಚಗಳಾದ ನಾನಾಶರೀರಗಳನ್ನು ಅಡಿಗಡಿಗೆ ಗ್ರಹಿಸುತ್ತಲೂ ತ್ಯಜಿಸುತ್ತಲೂ ಇರುವರಷ್ಟೆ; ಆಗ ಅವರು ಅವುಗಳನ್ನು ಹೇಗೆ ಗ್ರಹಿಸುವರು? ಮತ್ತು ಹೇಗೆ ಬಿಡುವರು? ಎಂದರೆ ಪೂರ್ವಪೂರ್ವದೇಹಗಳನ್ನು ಬಿಟ್ಟು ಹೊಸ ಹೊಸ ದೇಹಗಳನ್ನು ಗ್ರಹಿಸುವ ಕಾಲದಲ್ಲಿ, ಪೂರ್ವಪೂರ್ವದೇಹಗಳನ್ನು ಬಿಟ್ಟಂತೆ ಪೂರ್ವಪೂರ್ವೇಂದ್ರಿಯಗಳನ್ನೂ ಬಿಟ್ಟು, ಹೊಸಹೊಸದೇಹಗಳನ್ನು ಗ್ರಹಿಸುವಂತೆ ಹೊಸಹೊಸಇಂದ್ರಿಯಗಳನ್ನೂ ಗ್ರಹಿಸುವರೋ? ಅಥವಾ ಪೂರ್ವಪೂರ್ವದೇಹಗಳನ್ನು ಮಾತ್ರ ಬಿಟ್ಟು ಪೂರ್ವಪೂರ್ವೇಂದ್ರಿಯಗಳೊಡನೆ ಕೂಡಿದವರಾಗಿಯೇ ಹೋಗಿ ಹೊಸಹೊಸದೇಹಗಳನ್ನು ಮಾತ್ರ ಗ್ರಹಿಸುವರೋ? ಎಂಬುದು ಪ್ರಶ್ನಾಭಿಪ್ರಾಯವು.

**ಓ ಗೋವಿಂದ!** ಈ ವಿಷಯವು ಅಲ್ಪಬುದ್ಧಿಯುಳ್ಳವರಿಂದ ನಿರ್ಣಯಿಸಲು ಶಕ್ಯವಾದುದಲ್ಲ. ಪ್ರಾಯಶಃ ಲೋಕದಲ್ಲಿ ಈ ವಿಷಯವನ್ನು ಚೆನ್ನಾಗಿ ತಿಳಿದವರೇ ಆರೂ ಇಲ್ಲವೆಂದು ನನಗೆ ತೋರುವುದು. ಏತಕ್ಕೆಂದರೆ ಎಲ್ಲರೂ ನಿನ್ನ ಮಾಯೆಯಿಂದ ವಂಚಿಸಲ್ಪಟ್ಟಿರುವರು. **ಆಶ್ರಿತವಾತ್ಸಲ್ಯಪರಿಪೂರ್ಣನಾದವನೇ!** ಈ ವಿಷಯವನ್ನು ವಿವರವಾಗಿ ನೀನೇ ನನಗೆ ಉಪದೇಶಿಸು.

## ೩೪೮. ಸೇಂದ್ರಿಯೈಃ ಭೂತಸೂಕ್ಷ್ಮೈಃ ಸಂಪರಿಷ್ವಕ್ತಾನಾಮೇವ ದೇಹಾತ್ ದೇಹಾಂತರಗಮನಂ.

ಶ್ರೀಭಗವಾನುವಾಚ—

**ಮನಃ ಕರ್ಮಮಯಂ ನೃಣಾಮಿಂದ್ರಿಯೈಃ ಪಂಚಭಿರ್ಯುತಂ ।**
**ಲೋಕಾಲ್ಲೋಕಂ ಪ್ರಯಾತ್ಯನ್ಯ ಆತ್ಮಾ ತದನುವರ್ತತೇ ॥**

ಶ್ರೀ ಕೃಷ್ಣನು ಪ್ರತ್ಯುತ್ತರವನ್ನು ಹೇಳುತ್ತಾನೆ.—**ಓ-ಉದ್ಧವನೇ!** ಕರ್ಮವಾಸನೆಯಿಂದ ತುಂಬಿರುವಕಾರಣ ಕರ್ಮೇಂದ್ರಿಯಗಳೊಡನೆ ಕೂಡಿದುದಾಗಿಯೇ ಇರುವ ಮನಸ್ಸು ಐದು ಜ್ಞಾನೇಂದ್ರಿಗಳೊಡನೆಯೂ ಕೂಡಿದುದಾಗಿ ಲೋಕದಿಂದ ಲೋಕಾಂತರವನ್ನು ಕುರಿತು (ಪೂರ್ವಶರೀರದಿಂದ ಶರೀರಾಂತರ

ವನ್ನು ಕುರಿತು) ತೆರಳುವುದು. ಇಂದ್ರಿಯಗಳಿಗಿಂತಲೂ ಅತ್ಯಂತ ಭಿನ್ನನಾದ ಆತ್ಮನೂ ಸಹ ಆ ಮನಸ್ಸನ್ನೇ ಹಿಂಬಾಲಿಸುತ್ತಾನೆ.

## ೩೪೯. ಸೇಂದ್ರಿಯಸ್ಯ ದೇಹಾಂತರಪ್ರಾಪ್ತಾವಪಿ ಪೂರ್ವಜನ್ಮಾದ್ಯ ಸ್ಮರಣೇ ಕಾರಣನಿರೂಪಣಂ.

ಪೂರ್ವಶರೀರದಲ್ಲಿ ಇದ್ದ ಜ್ಞಾನೇಂದ್ರಿಯಗಳನ್ನೂ ತೆಗೆದುಕೊಂಡೇ ಮತ್ತೊಂದು ಶರೀರವನ್ನು ಮನಸ್ಸು ಹೊಂದುವುದಾದರೆ ಪೂರ್ವಜನ್ಮದ ವೃತ್ತಾಂತ ವನ್ನು ಅಣುಮಾತ್ರವೂ ಅದು ಏಕೆ ಸ್ಮರಿಸುವುದಿಲ್ಲ" ಎಂಬ ಆಶಂಕೆಗೆ ಪರಿಹಾರ ವನ್ನು ಹೇಳುತ್ತಾನೆ.

**ಧ್ಯಾಯನ್ಮನೋಽನುವಿಷಯಾನ್ ದೃಷ್ಟಾನ್ ವಾಥ ಶ್ರುತಾನನು।**
**ಉದ್ಯತ್ಸೀದತ್ಕರ್ಮತಂತ್ರಂ ಸ್ಮೃತಿಸ್ತದನು ಶಾಮ್ಯತಿ ॥**

**ಓ ಉದ್ಧವನೇ!** ಪ್ರಬಲವಾದ ಕರ್ಮವಾಸನೆಗೆ ಅಧೀನವಾಗಿ ಸಿಕ್ಕಿ ಬಿದ್ದಿರುವ ಮನಸ್ಸು ಕಂಡೂ ಕೇಳಿಯೂ ಇರುವ ಶಬ್ದಾದಿವಿಷಯಗಳನ್ನೇ ಸರ್ವದಾ ಚಿಂತಿಸುತ್ತಿರುವುದಾಗಿ, ತನಗೆ ಅಭಿಮತವಾದ ವಿಷಯಗಳ ಸಾನ್ನಿಧ್ಯವುಂಟಾದರೆ ಸಂತೋಷಪಡುತ್ತಲೂ, ಅವು ದೊರೆಯದಿದ್ದರೆ ಕ್ಲೇಶಪಡುತ್ತಲೂ ಇರುವುದು. ಆದುದರಿಂದಲೇ ಉತ್ತರೋತ್ತರಜ್ಞಾನಪರಂಪರೆಗಳಿಂದ ಅತ್ಯಂತವ್ಯವಧಾನ ವುಂಟಾಗಿ ಪೂರ್ವಸಂಸ್ಕಾರಗಳು ಲುಪ್ತವಾಗುವುವಾದಕಾರಣ ಪೂರ್ವಜನ್ಮ ವೃತ್ತಾಂತವನ್ನು ಸ್ಮರಿಸಲು ಸಾಧ್ಯವಿಲ್ಲ. ಒಂದೇ ಜನ್ಮದಲ್ಲಿಯೇ ಬಾಲ್ಯದಲ್ಲಿ ನಡೆದ ವೃತ್ತಾಂತಗಳೆಲ್ಲವನ್ನೂ ವಾರ್ಧಕದಲ್ಲಿ ಸ್ಮರಿಸಲು ಸಾಧ್ಯವಿಲ್ಲದಿರುವಲ್ಲಿ ಜನ್ಮಾಂತರದ ಸಮಾಚಾರಗಳನ್ನು ಹೇಗೆ ಸ್ಮರಿಸಲಾದೀತು?

ಮತ್ತು ಜನ್ಮಾಂತರದಿಂದ ಈ ಜನ್ಮಕ್ಕೆ ಇವನು ಬಂದು ಪ್ರವರ್ಧಮಾನ ನಾಗುವ ವೇಳೆಗೆ ಮಧ್ಯದಲ್ಲಿ ಎಷ್ಟು ಕ್ಲೇಶಪರಂಪರೆಗಳನ್ನು ಇವನು ಅನುಭವಿಸಿ ಇರುವನೆಂಬುದನ್ನು ಸ್ವಲ್ಪ ಗಮನಿಸಿ ನೋಡು—ಮೊದಲು ಮರಣಸಂಕಟ, ಅನಂತ ರದಲ್ಲಿ ಪ್ರಬಲತರವಾದ ನರಕಯಾತನಾನುಭವ, ಅನಂತರದಲ್ಲಿ ಮಾತೃಗರ್ಭವಾಸ ವೆಂಬ ನರಕಯಾತನೆ, ಅನಂತರದಲ್ಲಿ ತೀವ್ರತರವಾದ ಪ್ರಸವವೇದನಾನುಭವ, ಅನಂ ತರದಲ್ಲಿ ಈ ಜನ್ಮದಲ್ಲಿಯೂ ಎಷ್ಟೋ ದುಃಖಪರಂಪರೆ, ಹೀಗೆ ಇಷ್ಟೊಂದು ಉಪ ಹತಿಯಿರುವಾಗ ಜನ್ಮಾಂತರದ ಸಮಾಚಾರವನ್ನು ಆ ತಬ್ಬಲಿ ಮನಸ್ಸು ಹೇಗೆ ಸ್ಮರಿಸಬಲ್ಲುದು. ಇದೇ ಅರ್ಥವನ್ನು ಶ್ರೀಮದ್ಯಾಮುನಾಚಾರ್ಯರೂ—

" ಪ್ರಾಯಣಾತ್ ನರಕಕ್ಲೇಶಾತ್ ಪ್ರಸೂತಿವ್ಯಸನಾದಪಿ ।
ಚಿರಾತಿವೃತ್ತಾಃ ಪ್ರಾಗ್ಜನ್ಮ ವಾದಾ ನ ಸ್ಮೃತಿಗೋಚರಾಃ " ॥

ಎಂಬುದಾಗಿ ಸಂಗ್ರಹಿಸಿ ತೋರಿಸಿರುವರು.

ವಿಷಯಾಭಿನಿವೇಶೇನ ನಾತ್ಮಾನಂ ಯನ್ಮನಃ ಸ್ಮರೇತ್ ।
ಜಂತೋರ್ವೈ ಕಸ್ಯಚಿದ್ಧೇತೋರ್ಮೃತಿರತ್ಯಂತವಿಸ್ಮೃತಿಃ ॥

**ಓ ಉದ್ಧವನೇ!** ಯಾವ ಜೀವಾತ್ಮನ ಮನಇಂದ್ರಿಯವು ವಿಷಯಾನುಭವದಲ್ಲಿ ತನಗಿರುವ ಅತ್ಯಂತಾಭಿನಿವೇಶದ ವೇಗದಿಂದ ಸೆಳೆಯಲ್ಪಟ್ಟು ದೇಹವಿಲಕ್ಷಣನಾದ ಆತ್ಮನನ್ನು ಸ್ಮರಿಸುವುದಕ್ಕೆ ಅಸಮರ್ಥವಾಗಿ ಇರುವುದೋ, ಅಂಥ ಜೀವಾತ್ಮನಿಗೆ ಅವನ ಜನ್ಮಾವಸಾನಕ್ಕೆ ಕಾರಣವಾಗಿರುವ ಅವುದೋ ಒಂದು ಕರ್ಮವಿಶೇಷದಿಂದ ಬಂದೊದಗಿದ ಮರಣವೆಂಬುದು ಸಮಸ್ತಜ್ಞಾನಗಳಿಗೂ ಪೂರ್ಣವಾದ ಲೋಪವನ್ನು ಉಂಟುಮಾಡುವುದು. ಆದುದರಿಂದ ಜನ್ಮಾಂತರವೃತ್ತಾಂತವು ಈಗ ಸ್ಮರಣೆಗೆ ಬರಲು ಅವಕಾಶವಿಲ್ಲ.

" ಆಗಲಿ—ಆದರೇನು? ಪೂರ್ವಜನ್ಮದ ಮರಣಕಾಲದಲ್ಲಿ ಸಮಸ್ತಜ್ಞಾನಕ್ಕೂ ಆತ್ಯಂತಿಕಲೋಪವುಂಟಾದರೂ, ಪುನಃ ದೇಹಾಂತರಸಂಯೋಗವೆಂಬ ಜನ್ಮವನ್ನು ಪಡೆವ ಕಾಲದಲ್ಲಿ ಪೂರ್ವಜನ್ಮದ ಇಂದ್ರಿಯಗಳೇ ಅನುವರ್ತಿಸಿ ಬಂದಿರುವುದರಿಂದ ಪೂರ್ವಜನ್ಮವೃತ್ತಾಂತದ ಸ್ಮರಣೆ ಅದೇ ಇಂದ್ರಿಯಗಳಿಂದ ಈಗ ಆವಶ್ಯಕವಾಗಿಯೂ ಉಂಟಾಗಬೇಕಲ್ಲವೆ?" ಎಂಬ ಆಶಂಕೆಗೆ ಪರಿಹಾರವನ್ನು ಹೇಳುತ್ತಾನೆ—

ಜನ್ಮ ತ್ವಾತ್ಮತಯಾ ಪುಂಸಃ ಸರ್ವಭಾವೇನ ಭೂರಿದ ।
ವಿಷಯಸ್ವೀಕೃತಿಂ ಪ್ರಾಹುರ್ಯಥಾ ಸ್ವಪ್ನಮನೋರಥೌ ॥

**ಓ ದಾನಶೀಲನಾದ ಉದ್ಧವನೇ!** ಪುಂಶಬ್ದವಾಚ್ಯನಾದ ಜೀವಾತ್ಮನು ತನಗೂ ಶರೀರಕ್ಕೂ ಇರುವ ವೈಲಕ್ಷಣ್ಯವನ್ನು ತಿಳಿದುಕೊಳ್ಳಲಾರದೆ ತಾನೇ ಶರೀರವೆಂದೂ, ಶರೀರವೇ ತಾನೆಂದೂ ಭಾವಿಸಿ ದೃಢತರವಾದ ಈ ಎಲ್ಲಾ ಮನೋಭಾವನೆಯಿಂದಲೂ ಅಭಿನ್ನವಾಗಿಯೇ ತಿಳಿದು ಪರಿಗ್ರಹಿಸುವ ಈ ಶರೀರಸ್ವೀಕಾರವೇ ಆತ್ಮನಿಗೆ ಜನ್ಮವೆನಿಸಿಕೊಳ್ಳುವುದೆಂದು ಪ್ರಾಜ್ಞರು ಹೇಳುವರು. ಇದರಿಂದ—ಉತ್ಪತ್ತಿಕ್ಷಣಮೊದಲುಗೊಂಡೇ ಇವನಿಗೆ ದೇಹಾತ್ಮಾಭಿಮಾನವು ಬಲವತ್ತರವಾಗಿ ಹೃದಯದಲ್ಲಿ ನಾಟಿಹೋಗಿ ಇರುವುದೆಂಬುದು ಸಿದ್ಧವಾಗುವುದು. ಈ ದೇಹವು ಈಗತಾನೆ ಕೆಲವು ದಿವಸಗಳಿಗೆ ಮುಂಚೆ ಹುಟ್ಟಿತೆಂದೂ, ಅದಕ್ಕೆ

ಪೂರ್ವದಲ್ಲಿ ಈ ದೇಹವು ಇರಲೇ ಇಲ್ಲವೆಂದೂ, ಇವನು ನಿಶ್ಚಯವಾಗಿ ತಿಳಿದಿರುವನು; ಮತ್ತು ಈ ದೇಹವೇ ಆತ್ಮವೆನಿಸಿಕೊಳ್ಳುವುದಲ್ಲದೆ ಇದಕ್ಕಿಂತಲೂ ವಿಲಕ್ಷಣನಾದ ಆತ್ಮನೊಬ್ಬನಿಲ್ಲವೆಂದೂ ತಿಳಿದಿರುವನು. ಹೀಗಿರುವಲ್ಲಿ ಆವನ ಜನ್ಮಾಂತರವನ್ನು ಆವನು ತಿಳಿಯಲಾದೀತು? ತಿಳಿವೆಂಬುದು ಶರೀರವೆಂಬ ಆತ್ಮನಿಗೇ ಉಂಟಾಗುವುದು. ಈಶರೀರವೆಂಬ ಆತ್ಮನೇ ತನ್ನ ಪೂರ್ವಜನ್ಮವೃತ್ತಾಂತವನ್ನು ತಾನು ತಿಳಿದುಕೊಳ್ಳಲು ಶಕ್ಯವಲ್ಲ. ಏತಕ್ಕೆಂದರೆ ಇದರ ಉತ್ಪತ್ತಿಗಿಂತಲೂ ಪೂರ್ವದಲ್ಲಿ ಇದು ಇರಲೇಇಲ್ಲವಾದಕಾರಣ ಜನ್ಮಾಂತರವೆಂಬುದೇ ಇಲ್ಲದಿರುವಲ್ಲಿ ಆರ ಜನ್ಮಾಂತರವನ್ನು ಆರು ತಿಳಿಯಲಾದೀತು. ಆದಕಾರಣ ಜನ್ಮದ ಪ್ರಥಮ ಕ್ಷಣಮೊದಲುಗೊಂಡೇ ಇವನಿಗೆ ಬಲವತ್ತರವಾದ ದೇಹಾತ್ಮಾಭಿಮಾನವು ರೂಢಮೂಲವಾಗಿ ಸ್ಥಿರಪಟ್ಟಿರುವಿಕೆಯೇ ಜನ್ಮಾಂತರಸ್ಮರಣಕ್ಕೆ ಅಡ್ಡಿಯಾಗಿ ಇರುವುದು. ಜನ್ಮಾಂತರವನ್ನು ಸ್ಮರಿಸಿಕೊಳ್ಳಬೇಕಾದರೆ—ಅನಿತ್ಯವಾದ ದೇಹಕ್ಕಿಂತಲೂ ವಿಲಕ್ಷಣನಾಗಿ ನಿತ್ಯನಾದ ಆತ್ಮನು ಮತ್ತೊಬ್ಬನು ಇರುವನೆಂದೂ, ಅವನಿಗೆ ಪುಣ್ಯಪಾಪರೂಪಕರ್ಮಾನುಸಾರವಾಗಿ ಅನೇಕಶರೀರಪರಿಗ್ರಹವೆಂಬ ಜನ್ಮವುಂಟೆಂದೂ, ಅಂಥ ಜನ್ಮವನ್ನು ಪಡೆವುದಕ್ಕಾಗಿ ಪೂರ್ವೋತ್ತರಕಾಲಗಳಲ್ಲಿ ಅನುವರ್ತಿಸಿ ಬರುವನೆಂದೂ, ಮೊದಲು ತಿಳಿದಿರಬೇಕು; ಹುಟ್ಟಿದಾರಭ್ಯ ಶರೀರವೇ ಆತ್ಮನೆಂಬ ವಾಸನಾಸಮುದ್ರದಲ್ಲಿ ಮುಳುಗಾಡುತ್ತಿರುವ ಇವನಿಗೆ ಶರೀರಾತಿರಿಕ್ತನಾದ ಆತ್ಮನ ಸುದ್ದಿಯನ್ನೇ ಕಾಣಲು ಅವಕಾಶವಿಲ್ಲದಿರುವಲ್ಲಿ ಜನ್ಮಾಂತರವೃತ್ತಾಂತದ ಸ್ಮರಣೆ ಹೇಗೆ ಬಂದೀತು **ಉದ್ಧವನೇ?**

"ಆಗಲಿ, ದೇಹವೇ ಆತ್ಮನೆಂದೂ ತಿಳಿದಿರಲಿ, ಆದರೇನಾಯಿತು? ಈ ದೇಹಾತ್ಮಾಭಿಮಾನವನ್ನು ಭ್ರಾಂತಿಯೆಂದು ಏಕೆ ತಳ್ಳಬೇಕು? ನಿಜವಾಗಿಯೂ ದೇಹವೇ ಆತ್ಮನಾಗಿ ಏಕೆ ಇರಕೂಡದು? ಈ ಅಭಿಮಾನವೂ ಏಕೆ ಯಥಾರ್ಥವಾಗಿ ಇರಬಾರದು?" ಎಂಬ ಆಶಂಕೆಯನ್ನು **"ಯಥಾ ಸ್ವಪ್ನ ಮನೋರಥಾ"** ಎಂಬ ಶ್ಲೋಕಶೇಷದಿಂದ ಪರಿಹರಿಸುತ್ತಾನೆ. ಕನಸಿನಲ್ಲಿ ಗಜಾರೋಹಣವನ್ನೂ ಸ್ವಶಿರಶ್ಛೇದನವನ್ನೂ ತಿಳಿದುಕೊಂಡಮಾತ್ರಕ್ಕೆ ಅದು ಯಥಾರ್ಥಜ್ಞಾನವಾದೀತೆ? ಅತ್ಯಂತಾಶಕ್ತನಾದವನು ಆಕಾಶದಲ್ಲಿ ನಗರನಿರ್ಮಾಣವನ್ನು ಮನೋರಥಿಸುತ್ತಿದ್ದರೆ ಅದೆಲ್ಲವೂ ಯಥಾರ್ಥವಾದೀತೆ? ಆದಕಾರಣ ಇವನಿಗೆ ದೇಹವೇ ಆತ್ಮನೆಂದು ಅಭಿಮಾನವು ಹುಟ್ಟಿದಮಾತ್ರಕ್ಕೆ ಈ ಅಭಿಮಾನವು ಯಥಾರ್ಥವಾದೀತೆ? ಇದು ಭ್ರಾಂತಿಯೇ ಸರಿ.

ಅಥವಾ—.ಪೂರ್ವಶರೀರದ ಮರಣ, ಈ ಶರೀರದ ಸ್ವೀಕಾರ, ಈ ಎರಡೂ ಜನ್ಮಾಂತರವೃತ್ತಾಂತಸ್ಮರಣೆಗೆ ತಲೆಯೆತ್ತಲು ಅವಕಾಶವನ್ನು ಕೊಡದೆ ತಿರಸ್ಕರಿಸುತ್ತಿರುವುವೆಂಬ ವಿಷಯದಲ್ಲಿಯಾದರೂ "**ಸ್ವಪ್ನಮನೋರಥೌ**" ಎಂಬುದು ದೃಷ್ಟಾಂತವಾಗಿ ಇರುವುದೆಂದೂ ಹೇಳಬಹುದು. ಮಲಗುವುದಕ್ಕೆ ಪೂರ್ವಕಾಲದಲ್ಲಿ ನಡದಿರುವ ಸಮಾಚಾರವನ್ನು ಸ್ವಪ್ನದಲ್ಲಿ ಸ್ಮರಿಸಲಾಗುವುದಿಲ್ಲ. ಸ್ವಪ್ನವೇ ಅದರ ಸ್ಮರಣೆಗೆ ತಿರಸ್ಕಾರವನ್ನು ಮಾಡುತ್ತಿರುವುದು. ಅತ್ಯಂತ ದರಿದ್ರನಾದವನು ಮನೋರಾಜ್ಯವನ್ನು ಕಟ್ಟುವುದಕ್ಕೆ ಮನೋರಥಿಸುತ್ತಿರುವ ಸಮಯದಲ್ಲಿ ತಾನು ದರಿದ್ರನೆಂದೂ, ಇಂಥ ರಾಜ್ಯನಿರ್ಮಾಣಕ್ಕೆ ತಾನು ಅನರ್ಹನೆಂದೂ, ತನ್ನ ನಿಜಸ್ಥಿತಿಯನ್ನು ಸ್ಮರಣೆಗೆ ತಂದುಕೊಳ್ಳುವುದೇ ಇಲ್ಲ; ಮನೋರಾಜ್ಯವನ್ನು ಕಟ್ಟುತ್ತಲೇ ಇರುವನು. ಈ ಮನೋರಥಪರಂಪರೆಯೇ ಆ ಸ್ಮರಣೆಯನ್ನು ತಲೆಯೆತ್ತಗೊಳಿಸದೆ ತಿರಸ್ಕರಿಸುತ್ತಿರುವುದು. ಅದರಂತೆಯೇ ಪೂರ್ವಮರಣವೂ; ಈ ದೇಹದ ಸ್ವೀಕಾರವೂ ಜನ್ಮಾಂತರ ವೃತ್ತಾಂತದ ಸ್ಮರಣೆಗೆ ಅವಕಾಶವನ್ನು ಕೊಡದೆ ಅದನ್ನು ಪಾತಾಳಕ್ಕಿಂತಲೂ ಕೆಳಗೆ ಅಮುಕುತ್ತಿರುವುದು. ಆದಕಾರಣ ಪೂರ್ವಜನ್ಮದ ಇಂದ್ರಿಯಗಳೇ ಇಲ್ಲಿಯೂ ಅನುವರ್ತಿಸಿ ಬಂದಿದ್ದರೂ ಜನ್ಮಾಂತರವೃತ್ತಾಂತ ಸ್ಮರಣೆಗೆ ಅವಕಾಶವಿಲ್ಲ.

ಉಕ್ತವಾದ ದೃಷ್ಟಾಂತಗಳನ್ನು ವಿವರಿಸುತ್ತಾನೆ—

**ಸ್ವಪ್ನಂ ಮನೋರಥಂ ಚೇತ್ಥಂ ಪ್ರಾಕ್ತನಂ ನ ಸ್ಮರತ್ಯಸೌ।**
**ತತ್ರಪೂರ್ವಮಿವಾತ್ಮಾನಮಪೂರ್ವಂ ಚಾನುಪಶ್ಯತಿ॥**

**ಓ-ಉದ್ಧವನೇ!** ಇಲ್ಲಿ **ಕುರ್ವನ್** ಎಂಬ ಒಂದು ಪದವನ್ನು ಅಧ್ಯಾಹರಿಸಿಕೊಂಡು "**ಸ್ವಪ್ನಂ ಮನೋರಥಂ ಚಕುರ್ವನ್**" ಎಂದು ಅನ್ವಯಿಸಿಕೊಳ್ಳಬೇಕು. ಸ್ವಪ್ನವನ್ನೂ ಮನೋರಥವನ್ನೂ ನಡೆಸುತ್ತಿರುವವನು ತನ್ನ ಪ್ರಾಕ್ತನವಾದ ಬ್ರಾಹ್ಮಣತ್ವ ದರಿದ್ರತ್ವ ಮುಂತಾದ ಆಕಾರಗಳನ್ನು ಸ್ಮರಿಸುವುದೇ ಇಲ್ಲ. ಅದರಂತೆ ಮರಣವೂ ಶರೀರಪರಿಗ್ರಹವೂ ಪೂರ್ವಜ್ಞಾನದ ಆತ್ಯಂತಿಕಲೋಪಕ್ಕೆ ಕಾರಣವಾದುದರಿಂದ ಪೂರ್ವಜನ್ಮಸ್ಮರಣಕ್ಕೆ ಅವಕಾಶವಿಲ್ಲ.

ಆದರೆ ಮತ್ತಾವರೀತಿಯಲ್ಲಿ ಸ್ಮರಿಸುತ್ತಾನೆ ಅಥವಾ ತಿಳಿಯುತ್ತಾನೆ? ಎಂಬುದನ್ನು ಉತ್ತರಾರ್ಧದಲ್ಲಿ ತಿಳಿಸುತ್ತಾನೆ.—'**ಇವ**' ಎಂಬ ಪದವನ್ನು '**ಅಪೂರ್ವಂ**' ಎಂಬ ಪದದೊಡನೆಯೇ ಸೇರಿಸಿಕೊಳ್ಳಬೇಕು. ಈ ಜನ್ಮಕ್ಕೆ ಈಗ ಬಂದಿರುವ ಆತ್ಮನು ನಿಜಸ್ಥಿತಿಯಾಗಿಯೂ ಪೂರ್ವಜನ್ಮದಲ್ಲಿಯೂ ಇದ್ದವ

ನಾಗಿ ಹಳೆಬನಾದ ಅವನೇ ಇಲ್ಲಿಗೆ ಬಂದಿದ್ದರೂ, ಇವನು ತನ್ನನ್ನು ಹಳೆಬನೆಂದು ತಿಳಿದುಕೊಳ್ಳುವುದಿಲ್ಲ; ಈ ಶರೀರದಲ್ಲಿಯೇ ಇವನೊಬ್ಬನು ಹೊಸಬನಾಗಿ ಬಂದಿರುವನೆಂದೇ ತಿಳಿದುಕೊಳ್ಳುವನು.

## ೩೫೦. ಮರಣಶರೀರಪರಿಗ್ರಹಯೋಃ ಬಾಹ್ಯಾಭ್ಯಂತರ ಮಿಥ್ಯಾಭೂತಭೇದಜ್ಞಾನಹೇತುತ್ವಪ್ರದರ್ಶನಂ.

"ಮರಣವೂ ಶರೀರಪರಿಗ್ರಹವೂ ಪೂರ್ವಚರಿತ್ರದ ಸ್ಮರಣಪಘಾತವನ್ನು ಮಾತ್ರವೇ ಉಂಟುಮಾಡುತ್ತಿರುವುವೆಂದು ತಿಳಿಯಬೇಡ—ಅನರ್ಥಕಾರಿಯಾದ ಭೇದಬುದ್ಧಿಯನ್ನೂ ಉಂಟುಮಾಡುವುವೆಂದು ತಿಳಿ" ಎಂದು ಉಪದೇಶಿಸುತ್ತಾನೆ.-

**ಇಂದ್ರಿಯಾಯನಸೃಷ್ಟ್ಯೇದಂ ತ್ರೈವಿಧ್ಯಂ ಭಾತಿ ವಸ್ತುನಿ ।**
**ಬಹಿರಂತರ್ಭಿದಾಹೇತುಃ ಜನೋಽಸಜ್ಜನಕೃದ್ಯಥಾ ॥**

**ಓ ಉದ್ಧವನೇ! "ವಸತೀತಿ ವಸ್ತು"** ಎಂಬ ವ್ಯುತ್ಪತ್ತಿಯಿಂದ ಈ ವಸ್ತುಶಬ್ದವು ಸರ್ವದಾ ಏಕರೂಪವಾಗಿ ನಿಂತಿರುವ ಆತ್ಮಸ್ವರೂಪವನ್ನು ತೋರಿಸುವುದು. ಇಂಥ ಆತ್ಮನಲ್ಲಿ ಇಂದ್ರಿಯಗಳಿಗೆ ಆಶ್ರಯವಾದ ಶರೀರವನ್ನು ಸೃಷ್ಟಿಸಿದುದರಿಂದ (ಶರೀರದ ಉತ್ಪತ್ತಿಯಿಂದ) ಶರೀರವೆಂದೂ ಇಂದ್ರಿಯವೆಂದೂ ಅಂತಃಕರಣವೆಂದೂ ಮೂರುಬಗೆ ತೋರುವುದು. ಈ ತ್ರೈವಿಧ್ಯವೇ ದೇವತ್ವ, ಮನುಷ್ಯತ್ವ, ಬಾಲತ್ವ, ಯುವತ್ವ ಮುಂತಾದ ಹೊರಗಿನ ಭೇದವೆಂಬ ಅನರ್ಥಕ್ಕೂ ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ, ಭಯ, ವಿಷಾದ ಮುಂತಾದ ಒಳಗಿನ ಭೇದವೆಂಬ ಅನರ್ಥಕ್ಕೂ ಕಾರಣವಾಗುವುದು. ಅಸಜ್ಜನನೆನಿಸಿಕೊಂಡ ಅಸತ್ಪುತ್ರನು ಅನರ್ಥಕ್ಕೆ ಹೇತುವಾದುದರಿಂದ ಅಂಥವನನ್ನು ಉತ್ಪಾದನೆಮಾಡಿದ ಪುರುಷನೂ ಹೇಗೆ ಅನರ್ಥಕಾರಿಯೆಂದು ವ್ಯವಹರಿಸಲ್ಪಡುವನೋ ಅದರಂತೆ ನಾನಾಬಗೆಯಾದ ಅನರ್ಥಕ್ಕೆ ಕಾರಣವಾಗಿರುವ ಬಾಹ್ಯಾಭ್ಯಂತರರೂಪವಾದ ಉಕ್ತಭೇದವನ್ನು ಉಂಟುಮಾಡುವ ಅಂತಃಕರಣಾದಿತ್ರೈವಿಧ್ಯವೂ ಶರೀರಸಂಬಂಧಪ್ರಯುಕ್ತವಾಗಿ ಆತ್ಮನಲ್ಲಿ ಬಂದಿರುವಕಾರಣ ಇದನ್ನು ಅನರ್ಥಕಾರಿಯೆಂದೇ ತಿಳಿ.

## ೩೫೧. ಶರೀರಸ್ಯ ಸತತಪರಿಣಾಮಿತ್ವನಿರೂಪಣಂ.

ಪೂರ್ವಶ್ಲೋಕದಲ್ಲಿ ವಸ್ತುಶಬ್ದದಿಂದ ಆತ್ಮಸ್ವರೂಪವು ಸರ್ವದಾ ಏಕರೂಪವಾಗಿ ಇರುವುದೆಂದು ಹೇಳಿದಕಾರಣ ಶರೀರವು ಹಾಗಿಲ್ಲವೆಂದೂ ಸರ್ವದಾ ಪರಿ

ಣಾಮಿಯಾಗಿ ಇರುವುದೆಂದೂ ಸೂಚಿತವಾಯಿತು: ಅದನ್ನು ಈ ಶ್ಲೋಕದಲ್ಲಿ ಸ್ಪಷ್ಟಪಡಿಸುತ್ತಾನೆ—

**ನಿತ್ಯದಾ ಹ್ಯಂಗ ಭೂತಾನಿ ಭವಂತಿ ನ ಭವಂತಿ ಚ ।**
**ಕಾಲೇನಾಲಕ್ಷ್ಯವೇಗೇನ ಸೂಕ್ಷ್ಮತ್ವಾತ್ತನ್ನ ದೃಶ್ಯತೇ ॥**

**ಓ ಉದ್ಧವನೇ!** ಪಂಚಭೂತಗಳ ಪರಿಣಾಮವಿಶೇಷವೆನಿಸಿಕೊಂಡಿರುವ ಶರೀರಗಳು ಪ್ರತಿಕ್ಷಣದಲ್ಲಿಯೂ ಹೊಸಹೊಸಪರಿಣಾಮಗಳನ್ನು (ಅವಸ್ಥಾಂತರಗಳನ್ನು) ಹೊಂದುತ್ತಲೇ ಇರುವುವು; ಹಾಗೆಯೇ ಪೂರ್ವಪೂರ್ವಪರಿಣಾಮಗಳನ್ನು (ಪೂರ್ವಾವಸ್ಥೆಗಳನ್ನು) ತ್ಯಜಿಸುತ್ತಲೂ ಇರುವುವು. ಆದರೆ ಈ ಉತ್ತರಾವಸ್ಥಾಪ್ರಾಪ್ತಿ, ಪೂರ್ವಾವಸ್ಥಾವಿಸರ್ಜನೆ ಈ ಎರಡರ ಮಧ್ಯಕಾಲವು ಅತಿಸೂಕ್ಷ್ಮವಾದುದರಿಂದ ಆ ಎರಡೂ ಸಮಗೆ ಅಷ್ಟು ಶೀಘ್ರದಲ್ಲಿಯೇ ಸ್ಪಷ್ಟವಾಗಿ ಕಾಣುವುದಿಲ್ಲ.

### ೩೫೨. ಅತಿಸೂಕ್ಷ್ಮಾಣಾಂ ಶರೀರಪರಿಣಾಮಾನಾಂ ಸೋದಾಹರಣಂ ದುರ್ವಿಜ್ಞಾನತ್ವಪ್ರದರ್ಶನಂ.

ಅತಿಸೂಕ್ಷ್ಮವಾದುದರಿಂದ ಇದನ್ನು ಕಂಡುಹಿಡಿವುದು ಸುಲಭವಲ್ಲವೆಂಬುದನ್ನು ಕೆಲವು ದೃಷ್ಟಾಂತಗಳಿಂದ ಸ್ಪಷ್ಟಪಡಿಸುತ್ತಾನೆ—

**ಯಥಾರ್ಚಿಷಾಂ ಸ್ರೋತಸಾಂ ಚ ಫಲಾನಾಂ ಚ ವನಸ್ಪತೇಃ**
**ತಥೈವ ಸರ್ವಭೂತಾನಾಂ ವಯೋಽವಸ್ಥಾದಯಃ ಕೃತಾಃ ॥**

**ಓ-ಉದ್ಧವನೇ!** ಬತ್ತಿಯಮೇಲೆ ಉರಿಯುತ್ತಿರುವ ದೀಪಜ್ವಾಲೆಯನ್ನು ಗಮನಿಸಿನೋಡು—ಉದ್ದವಾದ ಬತ್ತಿಯಲ್ಲಿ ಆ ಬತ್ತಿಯ ಪೂರ್ವಪೂರ್ವಾವಯವಗಳಿಗೂ ಪ್ರಾಥಮಿಕಜ್ವಾಲೆಗೂ ಸಂಯೋಗವುಂಟಾದುದರಿಂದ ಕ್ರಮಕ್ರಮವಾಗಿ ಬಂದೊದಗುತ್ತಿರುವ ಅನೇಕಜ್ವಾಲೆಗಳು ಕಳೆದುಹೋಗುತ್ತಲೇ ಇರುವುವು; ಅದೇ ಬತ್ತಿಯ ಉತ್ತರೋತ್ತರಾವಯವಗಳಿಗೂ ಜ್ವಾಲೆಗೂ ಸಂಯೋಗವುಂಟಾಗುವುದರಿಂದ ಒಂದಕ್ಕೊಂದು ಅತ್ಯಂತಸದೃಶವಾದ ಅನೇಕ ಜ್ವಾಲೆಗಳು ಮೇಲೆ ಮೇಲೆ ಬರುತ್ತಲೇ ಇರುವುವು. ಹೊಸಹೊಸದಾಗಿ ಜ್ವಾಲೆಗಳು ಹುಟ್ಟುವುದಿಲ್ಲವೆಂದೂ ಪ್ರಥಮಜ್ವಾಲೆಯೇ ಕೊನೆಯವರೆಗೂ ಇರುವುದೆಂದೂ ಹೇಳುವುದಾದರೆ—ಪ್ರಥಮಜ್ವಾಲೆ ಹುಟ್ಟುವಕಾಲದಲ್ಲಿ ಬತ್ತಿಯೂ ಎಣ್ಣೆಯೂ ಎಷ್ಟರಮಟ್ಟಿಗೆ ಇದ್ದುವೋ ಕೊನೆಯಲ್ಲಿಯೂ ಅಷ್ಟರಮಟ್ಟಿಗೆ ಅವು ಕಾಣಬೇಕಾಗುವುದು. ಆದರೆ ಪ್ರತ್ಯಕ್ಷದಲ್ಲಿ ಅವು ಕ್ರಮಕ್ರಮವಾಗಿ ಕಡಮೆಯೂ

ಗುತ್ತಾ ಬರುವುದು ಕಾಣುವುದರಿಂದ ಪ್ರತಿಕ್ಷಣದಲ್ಲಿಯೂ ಹೊಸಹೊಸಜ್ವಾಲೆಗಳು ಉಂಟಾದುವೆಂದೂ ಅವುಗಳಿಂದಲೇ ಎಣ್ಣೆಯೂ ಬತ್ತಿಯೂ ಕ್ರಮಕ್ರಮವಾಗಿ ಕಡಮೆಮಾಡಲ್ಪಟ್ಟುವೆಂದೂ ಒಪ್ಪಿಕೊಳ್ಳಬೇಕು.

ಹೀಗೆ ಪ್ರತಿಕ್ಷಣದಲ್ಲಿಯೂ ಉಂಟಾದ ಹೊಸಹೊಸಜ್ವಾಲೆಗಳಿಗೆ ಉತ್ತರೋತ್ತರಕ್ಷಣಗಳಲ್ಲಿ ನಾಶವನ್ನೂ ಒಪ್ಪಬೇಕು. ಹಾಗೆ ಒಪ್ಪದಿದ್ದರೆ ಸ್ವಲ್ಪ ಹೊತ್ತಿನಲ್ಲೇ ನೂರಾರು ದೀಪಜ್ವಾಲೆಗಳು ಅದೇ ಬತ್ತಿಯಲ್ಲಿ ಸಮಗೆ ಕಾಣಬೇಕಾಗಿಬರುವುದು.

ಹೀಗೆ ಪೂರ್ವಪೂರ್ವಜ್ವಾಲೆಗಳ ವಿನಾಶವೂ ಉತ್ತರೋತ್ತರಜ್ವಾಲೆಗಳ ಉತ್ಪತ್ತಿಯೂ ಅತಿಸೂಕ್ಷ್ಮವಾದುದರಿಂದ ಹೇಗೆ ಕಂಡುಹಿಡಿವುದು ಸುಲಭವಲ್ಲವೋ.—

ಮತ್ತು—**ಓ-ಉದ್ಧವನೇ!** ನದಿಯಲ್ಲಿ ಪ್ರವಾಹವನ್ನು ಗಮನಿಸಿ ನೋಡು—ಪೂರ್ವಪೂರ್ವಜಲದ ಪಲಾಯನವೂ ಉತ್ತರೋತ್ತರಜಲದ ಪ್ರಾಪ್ತಿಯೂ ಹೇಗೆ ಸುಲಭವಾಗಿ ತಿಳಿವುದಿಲ್ಲವೋ,—

ಮತ್ತು **ಓ-ಉದ್ಧವನೇ!** ವನಸ್ಪತಿಗಳ ಫಲವರ್ಗಗಳಲ್ಲಿ ದೃಷ್ಟಿಯನ್ನಿಟ್ಟು ನೋಡು—ಅವುಗಳಲ್ಲಿ ಹೇಗಾದರೆ ಪ್ರತಿಕ್ಷಣದಲ್ಲಿಯೂ ಉತ್ತರೋತ್ತರಪರಿಣಾಮಗಳು ಉಂಟಾಗುತ್ತಲೇ ಇದ್ದರೂ ಅವು ಸುಲಭವಾಗಿ ತಿಳಿಯಲು ಶಕ್ಯವಲ್ಲವೋ, **ಓ-ಉದ್ಧವನೇ!** ಅದರಂತೆಯೇ ಸಮಸ್ತಪ್ರಾಣಿಗಳ ಶರೀರಗಳಲ್ಲಿಯೂ ವಯೋವಸ್ಥಾತಾರತಮ್ಯದಿಂದ ಪ್ರತಿಕ್ಷಣದಲ್ಲಿಯೂ ಉಂಟಾಗುವ ಪರಿಣಾಮವಿಶೇಷಗಳು ಅತಿಸೂಕ್ಷ್ಮವಾದುದರಿಂದ ಸುಲಭವಾಗಿ ಕಾಣತಕ್ಕುವುಗಳಲ್ಲ. ಆದಮಾತ್ರಕ್ಕೆ ಆತ್ಮನಂತೆ ಅವುಗಳೂ ಅಪರಿಣಾಮಿಗಳೆಂದೂ ಸರ್ವದಾ ಏಕರೂಪವಾಗಿ ಇರುವುವೆಂದೂ ಹೇಳಲಾಗದು. ಪೂರ್ವಶ್ಲೋಕದಲ್ಲಿ **ನಿತ್ಯದಾ** ಎಂಬ ಪದದಿಂದ ಪ್ರತಿಕ್ಷಣದಲ್ಲಿಯೂ ಪರಿಣಾಮವುಂಟೆಂದು ತೋರಿಸಿದುದರಿಂದ ಬಾಲ್ಯಕೌಮಾರ ಮುಂತಾದ ಒಂದೊಂದು ಅವಸ್ಥೆಯಲ್ಲಿಯೂ ಆಂತರಾಳಿಕವಾದ ಪರಿಣಾಮಗಳು ಅನೇಕವಾಗಿ ಇರುವುವೆಂದು ವ್ಯಕ್ತವಾಯಿತು.

### ೩೫೩ (ಬಾಲತ್ವಾದ್ಯವಸ್ಥಾನಾಂ ಸ್ಥಿರತ್ವಗ್ರಾಹಿಪ್ರತ್ಯಭಿಜ್ಞಾಯಾಃ ಭ್ರಾಂತಿತ್ವೋಪಪಾದನಂ)

ಓಹೋ! ಹಾಗಾದರೆ—"**ಸ ಏವಾಯಂ ಬಾಲಕಃ ಸ ಏವಾಯಂ ತರುಣಃ**" (ಅದೇ ಬಾಲಕನಿವನು ಅದೇ ತರುಣನಿವನು) ಎಂದು ಆ ಆ

ಅವಸ್ಥೆಗಳ ಸ್ಥಿರತೆಯನ್ನು ತೋರಿಸುವ ಪ್ರತ್ಯಭಿಜ್ಞೆಯೂ ಲೋಕವ್ಯವಹಾರವೂ ಹೇಗೆ ಸಂಗತವಾಗುವುವು ? ಎಂಬ ಆಶಂಕೆಯನ್ನು ಸದೃಷ್ಟಾಂತವಾಗಿ ಪರಿಹರಿಸುತ್ತಾನೆ.—

**ಸೋಽಯಂ ದೀಪೋಽರ್ಚಿಷಾಂ ಯದ್ವತ್**
**ಸ್ರೋತಸಾಂ ತದಿದಂ ಜಲಂ ।**
**ಸೋಽಯಂ ಪುಮಾನಿತಿ ನೃಣಾಂ**
**ಮೃಷಾ ಧೀರ್ಗೀರ್ಮೃಷಾಯುಷಾಂ ॥**

**ಓ-ಉದ್ಧವನೇ!** ಹೇಗಾದರೆ ಒಂದೇ ಬತ್ತಿಯಲ್ಲಿ ಉಂಟಾಗಿರುವ ಪೂರ್ವಪೂರ್ವಜ್ವಾಲೆಗಳಿಗೂ ಉತ್ತರೋತ್ತರಜ್ವಾಲೆಗಳಿಗೂ ಪರಸ್ಪರಭೇದವನ್ನು ತಿಳಿದುಕೊಳ್ಳದಿರುವ ಪುರುಷನಿಗೆ ಅತ್ಯಂತಸಾದೃಶ್ಯವಶದಿಂದ ಅಭೇದಭ್ರಮವು ಪ್ರತ್ಯಕ್ಷದಲ್ಲಿ ಉಂಟಾಗಿ ತನ್ಮೂಲಕವಾಗಿಯೇ ಪ್ರತ್ಯಭಿಜ್ಞೆಯೂ ಐಕ್ಯವ್ಯವಹಾರವೂ ಜ್ವಾಲಾಸಮುದಾಯದ ವಿಷಯವಾಗಿ ಉಂಟಾಗುವುವೋ—

ಮತ್ತು—ಪ್ರವಾಹದಲ್ಲಿ ಪೂರ್ವಪೂರ್ವಜಲವ್ಯಕ್ತಿಗಳಿಗೂ ಉತ್ತರೋತ್ತರಜಲವ್ಯಕ್ತಿಗಳಿಗೂ ಭೇದವನ್ನು ತಿಳಿದುಕೊಳ್ಳದಿರುವ ಪುರುಷನಿಗೆ ಸಾದೃಶ್ಯದಿಂದಲೇ ಅಭೇದಭ್ರಮವು ಪ್ರತ್ಯಕ್ಷದಲ್ಲಿ ಉಂಟಾಗಿ ತನ್ಮೂಲಕವಾಗಿಯೇ ಪ್ರತ್ಯಭಿಜ್ಞೆಯೂ ಐಕ್ಯವ್ಯವಹಾರವೂ ಜಲವ್ಯಕ್ತಿಸಮುದಾಯವಿಷಯವಾಗಿ ಉಂಟಾಗುವುವೋ ; ಅದರಂತೆಯೇ-**ಓ-ಉದ್ಧವನೇ** ಅಸ್ಥಿರವಾದ ಆಯುಸ್ಸುಳ್ಳ ಅಂಥವರಿಗೆ ಅಯಥಾರ್ಥವಾದ ಭ್ರಾಂತಿಮೂಲಕವಾಗಿ ಅಂಥ ಪ್ರತ್ಯಭಿಜ್ಞೆಯೂ ಅಂಥ ವ್ಯವಹಾರವೂ ಉಂಟಾಗುವುವು. ದೀಪಜ್ವಾಲೆಗಳಿಗೂ ಪ್ರವಾಹಜಲವ್ಯಕ್ತಿಗಳಿಗೂ ಯುಕ್ತಿಯುಕ್ತವಾದ ಪ್ರಮಾಣದಿಂದ ಭೇದವೇ ಸಿದ್ಧವಾಗಿ ಇರುವಂತೆ ಬಾಲ್ಯಕೌಮಾರ ಮೊದಲಾದ ಅವಸ್ಥೆಗಳಿಗೂ ಸಯುಕ್ತಿಕವಾದ ಪ್ರಮಾಣದಿಂದ ಭೇದವೇ ಸುಪ್ರತಿಷ್ಠಿತವಾಗಿ ಇರುವಲ್ಲಿ ಅಭೇದವನ್ನು ತಿಳಿವುದಕ್ಕಾಗಲಿ ವ್ಯವಹರಿಸುವುದಕ್ಕಾಗಲಿ ಹೇಗೆ ಸಾಧ್ಯವಾದೀತು ?

## ೩೫೪. ಆತ್ಮನಿ ಜನ್ಮಾದ್ಯವಸ್ಥಾಸಂಬಂಧಸ್ಯ ಭ್ರಾಂತಿಮೂಲತ್ವೋಪಪಾದನಂ.

ಹೀಗೆ ಶರೀರವು ನಿರಂತರಪರಿಣಾಮಿ ಎಂಬುದನ್ನು ಉಪಪಾದನೆಮಾಡಿ ತೋರಿಸಲಾಯಿತು ; ಮತ್ತು ಬಾಲತ್ವ, ಯುವತ್ವ ಮುಂತಾದ ಅವಸ್ಥೆಗಳ ಸ್ಥಿರತಾಜ್ಞಾನವೂ ಸ್ಥಿರತ್ವವ್ಯವಹಾರವೂ ಭ್ರಾಂತಿಯಲ್ಲದೆ ಯಥಾರ್ಥವಲ್ಲವೆಂದೂ

ತೋರಿಸಲಾಯಿತು. ಅನಂತರದಲ್ಲಿ ಆತ್ಮನಿಗೆ ಜನ್ಮ ಮೊದಲಾದ ಅವಸ್ಥೆಗಳ ಸಂಬಂಧವನ್ನು ತೋರಿಸಿ ಈ ಸಂಬಂಧಜ್ಞಾನವೂ ಭ್ರಾಂತಿಮೂಲಕವಾಗಿಯೇ ಉಂಟಾಗಿರುವುದೆಂಬುದನ್ನು ವ್ಯಕ್ತಪಡಿಸುತ್ತಾನೆ—

**ಮೂಸ್ತ್ವಸ್ಯ ಕರ್ಮಬೀಜೇನ ಜಾಯತೇ ಸೋಽಪ್ಯಜಃ ಪುಮಾ್ ।**
**ಮ್ರಿಯತೇ ಚಾಮರೋ ಭ್ರಾಂತ್ಯಾಯಥಾಽಗ್ನಿರ್ದಾರುಸಂಯುತಃ॥**

**ಓ-ಉದ್ಧವನೇ! "ಅಸ್ಯ ಕರ್ಮಬೀಜೇನ ಸೋಪಿ ಪುಮಾ್ ಮೂಸ್ತು"** ಎಂದರೆ ಈ ದೇಹದ ಉತ್ಪತ್ತಿಗೆ ಕಾರಣವಾಗಿ ಇರುವ ಕರ್ಮವೆಂಬ ಬೀಜದಿಂದ ದೇಹಾತ್ಮಾಭಿಮಾನಿಯಾದ ಆ ಜೀವನು ಶರೀರದಂತೆ ನಿರಂತರ ಪರಿಣಾಮಸ್ವಭಾವವುಳ್ಳವನಾಗಿ ಆಗಬೇಡ; ಆದರೂ **ಭ್ರಾಂತ್ಯಾ ಜಾಯತೇ ಮ್ರಿಯತೇ ಚ** ಭ್ರಾಂತಿಯಿಂದ ಹುಟ್ಟುತ್ತಲೂ ಸಾಯುತ್ತಲೂ ಇರುವನು; ಎಂದರೆ, ಆತ್ಮನ ಉತ್ಪತ್ತಿಮರಣಗಳು ಭ್ರಾಂತಿಮಾತ್ರದಿಂದ ಸಿದ್ಧವಾಗಿ ಇರುವುವೇ ಹೊರತು ವಾಸ್ತವವಾಗಿ ಸಿದ್ಧವಾದುವುವಲ್ಲ.

ಲೋಕದಲ್ಲಿ ಉತ್ಪತ್ತಿವಿನಾಶಗಳು ಎರಡುಬಗೆಯಾಗಿ ಇರುವುವು—ಪರಿಣಾಮಿತ್ವಪ್ರಯುಕ್ತವಾದ ಅವಸ್ಥಾಂತರಪ್ರಾಪ್ತಿಯೆಂಬ ಉತ್ಪತ್ತಿವಿನಾಶಗಳು ಒಂದು ಬಗೆಯಾಗಿರುವುವು. ಶರೀರಸಂಯೋಗವಿಯೋಗಗಳೆಂಬ ಉತ್ಪತ್ತಿವಿನಾಶಗಳು ಮತ್ತೊಂದುಬಗೆಯಾಗಿರುವುವು. ಇವುಗಳಲ್ಲಿ ಮೊದಲನೆಯವಾದ ಉತ್ಪತ್ತಿವಿನಾಶಗಳು ಪರಿಣಾಮಿಯಾದ ಅಚೇತನವಸ್ತುವಿಗೇ ಸಂಭವಿಸುವುವಲ್ಲದೆ ಆತ್ಮನಿಗೆ ಎಂದಿಗೂ ಸಂಭವಿಸುವುವಲ್ಲ. ಎರಡನೆಯವಾದ ಉತ್ಪತ್ತಿವಿನಾಶಗಳಾದರೆ ಜೀವನಿಗೆ ಸಂಭವಿಸುವುವು. ಇಂಥ ಉತ್ಪತ್ತಿವಿನಾಶಗಳನ್ನು ಜೀವನಿಗೆ ಒಪ್ಪಿಕೊಳ್ಳುವುದರಲ್ಲಿ ಅವನ ನಿತ್ಯತ್ವಕ್ಕೆ ಸ್ವಲ್ಪವೂ ಕುಂದಕವಿಲ್ಲ. ದೇಹಕ್ಕೆ ಉಂಟಾಗುವ ಮೊದಲನೆಯ ಉತ್ಪತ್ತಿವಿನಾಶಗಳು ಆತ್ಮನಿಗೂ ಉಂಟೆಂದು ತಿಳಿಯಬೇಕಾದರೆ ದೇಹವೇ ಆತ್ಮನೆಂಬ ಭ್ರಾಂತಿಜ್ಞಾನವಿರಬೇಕು.

ಅಂಥ ಉತ್ಪತ್ತಿವಿನಾಶಗಳು ಉಕ್ತಭ್ರಾಂತಿಯಿಂದಲೇ ಆತ್ಮನಿಗೆ ಸಿದ್ಧಿಸಬೇಕಲ್ಲದೆ ವಾಸ್ತವದಲ್ಲಿ ಸಿದ್ಧಿಸಲಾರವೆಂಬುದನ್ನು ಸ್ಥಿರಪಡಿಸುವುದಕ್ಕಾಗಿ ಆತ್ಮನಿಗೆ "**ಅಜಃ ಅಮರಃ**" ಎಂದು ಎರಡು ವಿಶೇಷಣಗಳು ಕೊಡಲ್ಪಟ್ಟಿರುವುವು. ಜನನಮರಣಸ್ವಭಾವರಹಿತನಾದ ಜೀವನಿಗೆ ಜನನಮರಣಗಳು ಹೇಗೆ ಸಂಭವಿಸುವುವೆಂದು ಅಭಿಪ್ರಾಯವು. ಏತಕ್ಕೆಂದರೆ—ದೇಹೋತ್ಪತ್ತಿಗೆ ಪೂರ್ವದಲ್ಲಿಯೂ, ದೇಹವಿನಾಶದ ಅನಂತರದಲ್ಲಿಯೂ ಸ್ಥಿರನಾಗಿರುವ ಈ ಜೀವನಿಗೆ ದೇಹದ ಜತೆಯಲ್ಲಿ ಉತ್ಪತ್ತಿವಿನಾಶಗಳು ಹೇಗೆ ಸಂಭವಿಸುವುವೆಂದು ತಾತ್ಪರ್ಯವು.

ಈ ವಿಷಯದಲ್ಲಿ—(ಯಥಾಗ್ನಿರ್ದಾರುಸಂಯುತಃ) ಎಂದು ಒಂದು ದೃಷ್ಟಾಂತವನ್ನು ತೋರಿಸುತ್ತಾನೆ; ಹೇಗೆಂದರೆ—ಪಂಚಭೂತಗಳೊಳಗೆ ಮೂರನೆಯದಾದ ತೇಜೋಭೂತದ ಪರಿಣಾಮವಿಶೇಷವಾಗಿರುವ ಅಗ್ನಿ ಶಮೀ ವೃಕ್ಷದ ಕಾಷ್ಠದಲ್ಲಿ ಗುಪ್ತವಾಗಿ ಅಡಗಿಯೇ ಇರುವುದು; ಮಥನಮಾಡಿದರೆ ಆಗ ಆ ಅಗ್ನಿ ಅಭಿವ್ಯಕ್ತವಾಗುವುದು. ಅಷ್ಟೇ ಅಲ್ಲದೆ ಆ ಕಾಷ್ಠದ ಜತೆಯಲ್ಲಿಯೇ ಆ ಅಗ್ನಿಗೆ ಉತ್ಪತ್ತಿವಿನಾಶಗಳಿಲ್ಲ. ಆದರೂ ಆ ಕಾಷ್ಠದ ಜತೆಯಲ್ಲಿ ಆ ಅಗ್ನಿಗೆ ಉತ್ಪತ್ತಿವಿನಾಶಪ್ರತೀತಿ ಭ್ರಾಂತಿಮೂಲಕವಾಗಿ ಉಂಟಾಗುವುದಲ್ಲದೆ ಯಥಾರ್ಥ ವಾದುದಲ್ಲ. ಅದರಂತೆ ಆತ್ಮನಿಗೂ ತಿಳಿಯಬೇಕು.

## ೩೫೫. ಪ್ರಾಧಾನ್ಯೇನ ಶಾರೀರಾವಸ್ಥಾಪರಿಗಣನಂ.

ನಿರಂತರಪರಿಣಾಮಿಯಾದ ಶರೀರಕ್ಕೆ ವಯೋವಸ್ಥಾವಿಶೇಷಗಳು ಉಂಟೆಂದು ಹಿಂದೆ ಹೇಳಿದ ವಿಷಯವನ್ನು ವಿಶದಪಡಿಸುವುದಕ್ಕಾಗಿ ಅವಸ್ಥೆಗಳನ್ನು ಲೆಕ್ಕಮಾಡಿ ತೋರಿಸುತ್ತಾನೆ.—

**ನಿಷೇಕಗರ್ಭಜನ್ಮಾನಿ ಬಾಲ್ಯಕೌಮಾರಯೌವನಮ್ ।**
**ವಯೋ ಮಧ್ಯಂ ಜರಾ ಮೃತ್ಯುರಿತ್ಯವಸ್ಥಾಸ್ತನೋರ್ನವ ॥**

೧ (ನಿಷೇಕಃ) ರೇತೋರೂಪದಿಂದ ಪಂಚಮಾಹುತಿಯಲ್ಲಿ ನಾರಿಯ ಗರ್ಭಕೋಶದಲ್ಲಿ ಪ್ರವೇಶಿಸುವಿಕೆ. ೨ (ಗರ್ಭಃ) ಆ ಗರ್ಭಕೋಶದಲ್ಲಿ ಕ್ರಮ ಕ್ರಮವಾಗಿ ವೃದ್ಧಿಹೊಂದುವಿಕೆ. ೩ (ಜನ್ಮ) ಅವಯವಗಳೆಲ್ಲವೂ ತುಂಬಿದ ಮೇಲೆ ಒಂಬತ್ತನೆಯ ಅಥವಾ ಹತ್ತನೆಯ ತಿಂಗಳಲ್ಲಿ ಗರ್ಭಕೋಶದಿಂದ ಕ್ರಮ ದಲ್ಲಿ ಈಚೆಗೆ ಹೊರಡುವಿಕೆ. ೪ (ಬಾಲ್ಯಂ) ಹೊರಟಮೇಲೆ ಐದುವರ್ಷಗಳ ವರೆಗೂ ಇರುವ ಕಾಲದೊಡನೆ ಸಂಬಂಧವು. ೫ (ಕೌಮಾರಂ) ಆರನೆಯ ವರ್ಷದ ಪ್ರಾರಂಭದಿಂದ ಹದಿನಾರನೆಯ ವರ್ಷದ ಕೊನೆಯವರೆಗೂ ಇರುವ ಕಾಲ ದೊಡನೆ ಸಂಬಂಧವು. ೬ (ಯೌವನಂ) ಹದಿನೇಳನೆಯ ವರ್ಷದ ಪ್ರಾರಂಭ ದಿಂದ ಇಪ್ಪತ್ತನಾಲ್ಕನೆಯ ವರ್ಷದ ಕೊನೆಯವರೆಗೂ ಇರುವ ಕಾಲದೊಡನೆ ಸಂಬಂಧವು. ೭ (ವಯಃ ಮಧ್ಯಂ) ಮಧ್ಯಮವಯಸ್ಸು—ಎಂದರೆ ಇಪ್ಪತ್ತೈ ದನೆಯ ವರ್ಷದ ಪ್ರಾರಂಭದಿಂದ ಅರವತ್ತನೆಯ ವರ್ಷದ ಕೊನೆಯವರೆಗೂ ಇರುವ ಕಾಲದೊಡನೆ ಸಂಬಂಧವು. ೮ (ಜರಾ) ಮುಪ್ಪು. ೯ (ಮೃತ್ಯುಃ) ಶರೀರ ದಿಂದ ಆತ್ಮನ ನಿರ್ಗಮನವು. ಹೀಗೆ ಈ ಶರೀರಕ್ಕೆ ಈ ಒಂಬತ್ತು ಅವಸ್ಥೆಗಳು ಮುಖ್ಯವಾದ ಅವಸ್ಥೆಗಳಾಗಿ ಇರುವುವು.

## ೩೫೬. ಸ್ವತಃ ಶುದ್ಧಸ್ಯಾಪಿ ಜೀವಸ್ಯ ದೇಹಸಂಯೋಗವಿಯೋಗ ರೂಪಸಂಸಾರಪ್ರಾಪ್ತೌ ಕಾರಣನಿರೂಪಣಂ.

ಹಾಗಾದರೆ ಸ್ವಭಾವದಿಂದ ಪರಿಶುದ್ಧನಾದ ಜೀವಾತ್ಮನಿಗೆ ಇಂಥ ನಾನಾ ವಿಧವಾದ ಅವಸ್ಥೆಗಳೊಡನೆ ಕೂಡಿರುವ ದೇಹಸಂಬಂಧದೇಹವಿಯೋಗರೂಪ ವಾದ ಈ ಸಂಸಾರವು ಬಂದುದಕ್ಕೆ ಕಾರಣವೇನೆಂಬ ಪ್ರಶ್ನೆಗೆ ಸಮಾಧಾನವನ್ನು ಹೇಳುತ್ತಾನೆ—

**ಏತಾ ಮನೋರಥಮಯೀರ್ಹ್ಯನ್ಯಾಸ್ಯೋಚ್ಚಾವಚಾಸ್ತಥಾ |**
**ಗುಣಸಂಗಾದುಪಾದತ್ತೇ ಕ್ವಚಿತ್ಕಶ್ಚಿಜ್ಜಹಾತಿ ಚ ||**

**ಓ-ಉದ್ಧವನೇ !** ಜೀವನ ಸಂಸಾರಪ್ರಾಪ್ತಿಗೆ ಕಾರಣವನ್ನು ಕೇಳು— ಮನೋವೃತ್ತಿವಿಶೇಷಗಳಿಂದ ಸಂಭವಿಸುವ ಈ ಉಕ್ತವಾದ ಅವಸ್ಥೆಗಳನ್ನೂ, ಇನ್ನೂ ನಾನಾವಿಧವಾದ—ಶಯನ, ಆಸನ, ಗಮನ, ಹಸನ, ರೋದನ, ಮುಂತಾದ ನಾವಿರಾರು ಅವಸ್ಥೆಗಳನ್ನೂ, ಅಂಥ ಅವಸ್ಥೆಗಳಿಗೆಲ್ಲಾ ಆಶ್ರಯಗಳಾಗಿರುವ ಹಲವು ಬಗೆಯಾದ ಶರೀರಗಳನ್ನೂ ಬದ್ಧಜೀವನಾದವನು ಸತ್ತ್ವರಜಸ್ತಮೋಗುಣ ವಿಶಿಷ್ಟವಾದ ಪ್ರಕೃತಿಯ ಪರಿಣಾಮವಿಶೇಷಗಳಾಗಿರುವ ಶಬ್ದಾದಿವಿಷಯಗಳ ಭಾವನೆಯೆಂಬ ಗುಣಸಂಗದಿಂದಲೇ ತನ್ನ ಕರ್ಮದ ಪರಿಪಾಕಾವಸ್ಥೆಯಲ್ಲಿ ಸ್ವೀಕರಿ ಸುತ್ತಲೂ ಬಿಡುತ್ತಲೂ ಬರುವನು. ಎಂದರೆ—

**ಯಂ ಯಂ ವಾಪಿ ಸ್ಮರನ್ ಭಾವಂ ತ್ಯಜತ್ಯಂತೇ ಕಳೇಬರಂ |**
**ತಂತಮೇವೈತಿ ಕೌಂತೇಯ ಸದಾ ತದ್ಭಾವಭಾವಿತಃ ||**

ಎಂಬುದಾಗಿಯೂ—

**ಕಾರಣಂ ಗುಣಸಂಗೋಽಸ್ಯ ಸದಸದ್ಯೋನಿಜನ್ಮಸು |**

ಎಂಬುದಾಗಿಯೂ ಭಗವದ್ಗೀತೆಯಲ್ಲಿ ಶ್ರೀಕೃಷ್ಣನು ಉಪದೇಶಿಸಿದಂತೆ ಸತ್ತ್ವಾದಿ ಗುಣಗಳ ಪರಿಣಾಮರೂಪವಾದ ಶಬ್ದಾದಿವಿಷಯಗಳನ್ನು ಅಂತಿಮಕಾಲದಲ್ಲಿ ಧ್ಯಾನಿ ಸುವಿಕೆಯೇ ಈ ಸಂಸಾರಪ್ರಾಪ್ತಿಗೆ ಕಾರಣವಾಗಿ ಇರುವುದೆಂದು ಅಭಿಪ್ರಾಯವು. ಹೀಗೆ ಅಂತಿಮಕಾಲದಲ್ಲಿ ವಿಷಯಧ್ಯಾನವೆಂಬ ಗುಣಸಂಗವೂ, ಅದರಿಂದ ಉಚ್ಚ ನೀಚಜನ್ಮಪ್ರಾಪ್ತಿಯೂ, ಪುನಃ ಗುಣಸಂಗವೂ ಪುನಃ ಜನ್ಮವೂ ಈ ರೀತಿಯಲ್ಲಿ ಸುತ್ತಿಸುತ್ತಿ ಬರುತ್ತಿರುವ ಈ ಸಂಸಾರಚಕ್ರದಲ್ಲಿ ಅನಾದಿಕಾಲದಿಂದಲೂ ಈ ಬದ್ಧಜೀವನು ಸಿಕ್ಕಿಬಿದ್ದಿರುವನು. (**ಕಶ್ಚಿತ್**) ಎಂದು ಹೇಳಿದುದರಿಂದ ಮುಕ್ತಾ ತ್ಮವರ್ಗಕ್ಕೂ ನಿತ್ಯಾತ್ಮವರ್ಗಕ್ಕೂ ಈ ಸಂಸಾರಚಕ್ರದ ಸಂಬಂಧವು ಇಲ್ಲವೆಂಬುದು ಸೂಚಿತವಾಗುವುದು.

## ೩೫೭. ಜನನಮರಣಯೋಃ ಮೂಢಸ್ಯ ಜೀವಸ್ಯ ತತ್ಪರಿಜ್ಞಾನಾಸಾಮರ್ಥ್ಯಂ.

**ಆತ್ಮನಃ ಪಿತೃಪುತ್ರಾಭ್ಯಾಮನುಮೇಯೌ ಭವಾಪ್ಯಯೌ ।**
**ನ ಭವಾಪ್ಯಯವಸ್ತೂನಾಮಭಿಜ್ಞೋಽದ್ವಯಲಕ್ಷಣಃ ॥**

**ಓ ಉದ್ಧವನೇ!** ಹೀಗೆ ಈ ಬದ್ಧಾತ್ಮನು ಅನಾದಿಯಾದ ಕಾಲಪ್ರವಾಹದಲ್ಲಿ—ಪುನಃಪುನಃ ಶರೀರಪರಿಗ್ರಹಶರೀರಪರಿತ್ಯಾಗಗಳೆಂಬ ಈ ಕೆಲಸಗಳನ್ನು ನಡಸುವುದಕ್ಕೆ ಮಾತ್ರವೇ ಸಮರ್ಥನಾಗಿ ಇರುವನಲ್ಲದೆ ಅವುಗಳನ್ನು ಸಾಕ್ಷಾತ್ಕರಿಸುವ ಸಾಮರ್ಥ್ಯವುಳ್ಳವನಾಗಿಲ್ಲ. ಏತಕ್ಕೆಂದರೆ—ಜನನಕಾಲದಲ್ಲಿಯೂ ಮರಣಕಾಲದಲ್ಲಿಯೂ ಬಲವತ್ತರವಾದ ಮೋಹವು ಇವನನ್ನು ಆವರಿಸಿಕೊಂಡು ಇವನ ಜ್ಞಾನಪ್ರಸರಣಕ್ಕೆ ಸಂಪೂರ್ಣವಾಗಿ ಲೋಪವನ್ನು ಉಂಟುಮಾಡುವುದು.

ಆದರೆ ವಿವೇಕಿಯಾದ ಒಬ್ಬಾನೊಬ್ಬ ಚೇತನನು ತಾನು ಜೀವಿಸಿರುವ ಕಾಲದಲ್ಲಿ ತನ್ನ ತಂದೆಯನ್ನೂ ಮಗನನ್ನೂ ದೃಷ್ಟಾಂತವಾಗಿ ನೋಡಿಕೊಂಡು ಪುತ್ರಜನನಪ್ರತ್ಯಕ್ಷದಿಂದ ತನ್ನ ಜನನವನ್ನೂ, ಪಿತೃಮರಣಪ್ರತ್ಯಕ್ಷದಿಂದ ತನ್ನ ಮರಣವನ್ನೂ ಅನುಮಾನಪ್ರಮಾಣದಿಂದ ನಿರ್ಧರಿಸಿಕೊಳ್ಳುವನು; ಮನುಷ್ಯನೆನಿಸಿಕೊಂಡ ಪುತ್ರನಿಗೆ ನನ್ನ ಕಣ್ಣೆದುರಿನಲ್ಲಿ ಜನನವುಂಟಾದುದರಿಂದ ಮನುಷ್ಯನೆನಿಸಿಕೊಂಡ ನನಗೂ ಹಿಂದೆ ಜನನವಾಗಿಯೇ ಇರಬೇಕೆಂದೂ, ಹಾಗೆಯೇ ತಂದೆಗೆ ನನ್ನ ಕಣ್ಣೆದುರಿನಲ್ಲಿ ಮರಣವುಂಟಾದುದರಿಂದ ನನಗೂ ಒಂದಾನೊಂದುದಿನ ಮರಣವುಂಟಾಗುವುದೇ ನಿಶ್ಚಯವೆಂದೂ ಅವನು ತಿಳಿದುಕೊಳ್ಳುವನಷ್ಟೆ?

ಇಷ್ಟುಮಾತ್ರವೇ ಅಲ್ಲದೆ ತನ್ನ ಜನನಮರಣಗಳನ್ನು ಸಾಕ್ಷಾತ್ಕರಿಸಬಲ್ಲ ಚೇತನನು ಆವನೂ ಇಲ್ಲ. ಈಶ್ವರನಿಗೂ ನಿತ್ಯಚೇತನರಿಗೂ ಮುಕ್ತಚೇತನರಿಗೂ ಜನನಮರಣಗಳೇ ಇಲ್ಲವಾದುದರಿಂದ ಅವರು ತಮ್ಮ ಜನನಮರಣಗಳನ್ನು ಸಾಕ್ಷಾತ್ಕರಿಸಿದ ಚೇತನರೆನಿಸಿಕೊಳ್ಳಲಾರರು. ಬದ್ಧಜೀವನ ಜನನಮರಣಗಳನ್ನು ಅವರು ಸಾಕ್ಷಾತ್ಕರಿಸಬಲ್ಲರೆಂದರೆ ಇನ್ನೊಬ್ಬ ಬದ್ಧಜೀವನ ಜನನಮರಣಗಳನ್ನು ನಾವೂ ಸಾಕ್ಷಾತ್ಕರಿಸಬಲ್ಲೆವು. ಆದಕಾರಣ ತನ್ನ ಜನನಮರಣಗಳನ್ನು ಸಾಕ್ಷಾತ್ಕರಿಸುವವನು ಆವನೂ ಇಲ್ಲ.

ಹೀಗೆ ಬದ್ಧಜೀವನು ಜನನಮರಣಪರಂಪರೆಯನ್ನು ಪಡೆಯುತ್ತಿದ್ದರೂ ಇವನು **(ಅದ್ವಯಲಕ್ಷಣಃ)** ಎನಿಸಿಕೊಂಡೇ ಇರುವನು. ಎಂದರೆ (ದ್ವಯಂ ಲಕ್ಷಣಂ ಯಸ್ಯ, ಸ ನ ಭವತೀತಿ ಅದ್ವಯಲಕ್ಷಣಃ) ದ್ವಯವೆಂದರೆ ಜನನಮರಣ

ಗಳೆರಡು. ಈ ಜನನಮರಣಗಳೇ ಆವುದಕ್ಕೆ ಸ್ವಭಾವಸಿದ್ಧವಾಗಿ ಇರುವುವೋ ಅದು ದ್ವಯಲಕ್ಷಣವೆನಿಸಿಕೊಳ್ಳುವುದು. ಪರಿಣಾಮಪ್ರಯುಕ್ತವಾದ ಅವಸ್ಥಾಂತರಪ್ರಾಪ್ತಿಯನ್ನಲ್ಲವೆ ಜನನವೆಂದೂ ಮರಣವೆಂದೂ ಹೇಳುವುದು. ಇಂಥ ಜನನಮರಣಗಳು ಪರಿಣಾಮಿಯಾದ ಶರೀರಕ್ಕೆ ಸಂಘಟಿಸುವುವಲ್ಲದೆ ಅಪರಿಣಾಮಿಯಾದ ಜೀವನಿಗೆ ಎಂದಿಗೂ ಸಂಘಟಿಸಲಾರವೆಂದು ಹಿಂದೆಯೇ ಹೇಳಿರುವೆವು. ಆದುದರಿಂದ ಜೀವನು ಯಾವಾಗಲೂ ಅದ್ವಯಲಕ್ಷಣನಾಗಿಯೇ ಇರುವನು.

## ೩೫೪. ಜನನಮರಣಸ್ವಭಾವತ್ವತದಭಾವಾಭ್ಯಾಂ ದೇಹಾತ್ಮನೋಃ ಭೇದಸಿದ್ಧಿಃ.

**ಓ-ಉದ್ಧವನೇ!** ಜನನಮರಣಸ್ವಭಾವತ್ವವೆಂಬ ದ್ವಯಲಕ್ಷಣತ್ವವು ಶರೀರಕ್ಕೇ ಸಂಘಟಿಸುವುದಲ್ಲದೆ ಆತ್ಮನಿಗೆ ಸಂಘಟಿಸುವುದಿಲ್ಲವೆಂದು ಹಿಂದಿನಶ್ಲೋಕದಲ್ಲಿ ಹೇಳಿದೆನು—ಆದುದರಿಂದಲೇ ಆತ್ಮನು ದೇಹಕ್ಕಿಂತಲೂ ಬೇರೊಬ್ಬನಾಗಿಯೇ ಇರುವನೆಂಬುದನ್ನು ಸದೃಷ್ಟಾಂತವಾಗಿ ಈಗ ತೋರಿಸುವೆನು ಕೇಳು.—

**ತರೋರ್ಬೀಜವಿಪಾಕಾಭ್ಯಾಂ ಯೋ ವಿದ್ವಾನ್ ಜನ್ಮಸಂಯಮೌ ।**
**ತರೋರ್ವಿಲಕ್ಷಣೋ ದ್ರಷ್ಟಾ ಏವಂ ದ್ರಷ್ಟಾ ತನೋಃ ಪೃಥಕ್ ॥**

ಇಲ್ಲಿ—ಬೀಜವಿಪಾಕಾಭ್ಯಾಂ ತರೋಃ ಜನ್ಮಸಂಯಮೌ ಯಃ ವಿದ್ವಾನ್; ಸಃ ತರೋಃ ವಿಲಕ್ಷಣಃ ದ್ರಷ್ಟಾ, ಏವಂ ಬೀಜವಿಪಾಕಾಭ್ಯಾಂ ತನೋಃ ಜನ್ಮಸಂಯಮೌ ದ್ರಷ್ಟಾ ತನೋಃ ಪೃಥಕ್ (ಭವತಿ) ಎಂದು ಶ್ಲೋಕಾನ್ವಯವನ್ನು ತಿಳಿಯಬೇಕು. ದೃಷ್ಟಾಂತವಾಕ್ಯದಲ್ಲಿ ತರುಶಬ್ದವನ್ನು ಒಂದಾವರ್ತಿ ಷಷ್ಠೀವಿಭಕ್ತ್ಯಂತವಾಗಿಯೂ ಮತ್ತೊಂದಾವರ್ತಿ ಪಂಚಮೀವಿಭಕ್ತ್ಯಂತವಾಗಿಯೂ ಪ್ರಯೋಗಿಸಿ ಇರುವಂತೆ ದಾರ್ಷ್ಟಾಂತಿಕವಾಕ್ಯದಲ್ಲಿ ತನುಶಬ್ದವನ್ನು ಎರಡಾವರ್ತಿ ಪ್ರಯೋಗಿಸಬೇಕಾದುದು ನ್ಯಾಯ್ಯವಾಗಿದ್ದರೂ ಛಂದಸ್ಸಿನ ನಿಯಮವನ್ನು ಅನುಸರಿಸಿ ಲಾಘವಕ್ಕಾಗಿ ಒಂದೇ ಆವರ್ತಿ ಪ್ರಯೋಗಿಸಿರುವುದು. ಆದಕಾರಣ ಈ ತನುಶಬ್ದವು ಕಾಕಾಕ್ಷಿನ್ಯಾಯದಿಂದ ಷಷ್ಠೀವಿಭಕ್ತ್ಯಂತವಾಗಿ ಹಿಂದಿನ ಪದದೊಡನೆಯೂ ಪಂಚಮೀವಿಭಕ್ತ್ಯಂತವಾಗಿ ಮುಂದಿನ ಪದದೊಡನೆಯೂ ಸೇರುವುದು.

**(ಬೀಜವಿಪಾಕಾಭ್ಯಾಂ)** ವೃಕ್ಷದ ಉತ್ಪತ್ತಿಗೆ ಕಾರಣವಾಗಿ ಇರುವ ಬೀಜವೆಂಬ ವಸ್ತು ಲೋಕದಲ್ಲಿ ಪ್ರಸಿದ್ಧವಾಗಿಯೇ ಇರುವುದು; ವಿಪಾಕವೆಂದರೆ ಕಾಲದ ಪರಿಣಾಮವಿಶೇಷವು; ಇಂಥ ಬೀಜವಿಪಾಕಗಳಿಂದ—

**(ತರೋಃ ಜನ್ಮಸಂಯಮೌ ಯಃ ವಿದ್ವಾನ್)** ವೃಕ್ಷದ ಉತ್ಪತ್ತಿ ವಿನಾಶಗಳನ್ನು ಆವನು ತಿಳಿವನೋ—

**(ಸಃ ತರೋಃ ವಿಲಕ್ಷಣಃ ದೃಷ್ಟಃ)** ಆವನು ಅಂಥ ವೃಕ್ಷಕ್ಕಿಂತಲೂ ಬೇರೊಬ್ಬನಾಗಿ (ಲೋಕದಲ್ಲಿ) ಕಾಣಲ್ಪಟ್ಟಿರುವನು.

## ೩೫೯. ಉತ್ಪತ್ತಿವಿನಾಶಸ್ವರೂಪನಿರೂಪಣಂ.

ಜನ್ಮವೆಂದರೇನು ? ಸಂಯಮವೆಂದರೇನು ? ಆವುದಾದರೊಂದು ದ್ರವ್ಯವು ತನ್ನ ಪೂರ್ವಾವಸ್ಥೆಯನ್ನು ಬಿಟ್ಟು ತಾನೇ ಮತ್ತೊಂದು ಅವಸ್ಥೆಯನ್ನು ಹೊಂದುವುದಾದರೆ ಆ ಉತ್ತರಾವಸ್ಥೆ ಪೂರ್ವಾವಸ್ಥಾವಿಶಿಷ್ಟವಾದ ಅದೇ ವಸ್ತುವಿನ ನಾಶ ಅಥವಾ ಸಂಯಮವೆಂದೂ, ಸ್ವವಿಶಿಷ್ಟವಾದ ಅದೇ ವಸ್ತುವಿನ ಉತ್ಪತ್ತಿ ಅಥವಾ ಜನ್ಮವೆಂದೂ ಶಾಸ್ತ್ರದಲ್ಲಿಯೂ ಪ್ರತ್ಯಕ್ಷದಲ್ಲಿಯೂ ನಿಷ್ಕರ್ಷಿಸಲ್ಪಟ್ಟಿರುವುದು. ಇದರಿಂದ ಪ್ರತಿಯೊಂದು ಅವಸ್ಥೆಯೂ ನಾಶವೆಂದೂ ಉತ್ಪತ್ತಿಯೆಂದೂ ಹೇಳಿಸಿಕೊಳ್ಳುವುದೆಂದು ಸಿದ್ಧವಾಯಿತು. ಎಂದರೆ—" ಉತ್ಪತ್ತಿ-ನಾಶ-ಅವಸ್ಥೆ " ಈ ಎಲ್ಲಾ ಶಬ್ದಗಳೂ ಪರ್ಯಾಯಶಬ್ದಗಳಾಗಿಯೇ ಇರುವುವಲ್ಲದೆ ಇವುಗಳಿಗೆ ಅರ್ಥಭೇದವಿಲ್ಲವೆಂದು ಸಿದ್ಧವಾಯಿತು. ವಿಶಿಷ್ಟವಾದ ಪ್ರತಿಸಂಬಂಧಿ ಬೇರೆಬೇರೆಯಾದುದರಿಂದ ಒಂದೇ ಅವಸ್ಥೆ ಉಭಯರೂಪವಾಗಿ ಇರಲು ವಿರೋಧವೇನೂ ಇಲ್ಲ. ಒಂದೇ ಮನುಷ್ಯನು ಮಗನೆಂದೂ ತಂದೆಯೆಂದೂ ಹೇಳಿಸಿಕೊಳ್ಳುವುದರಲ್ಲಿ ವಿರೋಧವೇನೂ ಇಲ್ಲವಷ್ಟೆ ?

ದ್ರವ್ಯವು ತನ್ನ ಉತ್ಪತ್ತಿವಿನಾಶವ್ಯವಹಾರದ ನಿರ್ವಾಹಕ್ಕಾಗಿ ತನ್ನಲ್ಲಿ ಒಂದಾನೊಂದು ಅವಸ್ಥೆಯನ್ನು ಅಪೇಕ್ಷಿಸುವುದು ; ಅದಕ್ಕಾಗಿ ದ್ರವ್ಯಕ್ಕಿಂತಲೂ ಭಿನ್ನವಾದ ಒಂದಾನೊಂದು ಅವಸ್ಥೆ ದ್ರವ್ಯದಲ್ಲಿ ಉಂಟಾಗಿ ದ್ರವ್ಯದ ಉತ್ಪತ್ತಿ ವಿನಾಶವ್ಯವಹಾರವನ್ನು ನಿರ್ವಹಿಸಿಕೊಡುವುದು. ಇದರಂತೆ ಅವಸ್ಥೆಯಾದರೋ ತನ್ನ ಉತ್ಪತ್ತಿವಿನಾಶವ್ಯವಹಾರದ ನಿರ್ವಾಹಕ್ಕಾಗಿ ತನ್ನಲ್ಲಿ ಮತ್ತೊಂದು ಅವಸ್ಥೆಯನ್ನು ಅಪೇಕ್ಷಿಸುವುದಿಲ್ಲ. ಏತಕ್ಕೆಂದರೆ, ದ್ರವ್ಯಕ್ಕೆ ಅವಸ್ಥೆಯೆಂಬುದು ಉಂಟೇ ಹೊರತು ಅವಸ್ಥೆಗೆ ಅವಸ್ಥೆಯಿಲ್ಲ. ಹಾಗೆ ಅವಸ್ಥೆಗೂ ಮತ್ತೊಂದು ಅವಸ್ಥೆ ಇರುವುದಾದರೆ ಅವಸ್ಥೆಯೂ ದ್ರವ್ಯವೆನಿಸಿಕೊಂಡು ಲೋಕದಲ್ಲಿ ಇರುವುದೆಲ್ಲವೂ ದ್ರವ್ಯವೇ ಆಗಿಹೋಗುವುದರಿಂದ ದ್ರವ್ಯಾದ್ರವ್ಯವಿಭಾಗವೇ ತಪ್ಪಿಹೋಗುವುದು. ಆದಕಾರಣ ದ್ರವ್ಯದ ಉತ್ಪತ್ತಿವಿನಾಶವ್ಯವಹಾರಕ್ಕೂ ತನ್ನ ಉತ್ಪತ್ತಿವಿನಾಶ

ವ್ಯವಹಾರಕ್ಕೂ ಈ ಅವಸ್ಥೆಯೇ ಸಾಕಾಗಿರುವುದು. ಈ ಸ್ವಭಾವವನ್ನೇ ಶಾಸ್ತ್ರ ಕಾರರು ಸ್ವಪರನಿರ್ವಾಹಕತ್ವವೆನ್ನುವರು.

ಬೀಜದಿಂದ ವೃಕ್ಷವು ಹುಟ್ಟಿತೆಂದರೆ ಬೀಜವೂ ವೃಕ್ಷವೂ ಬೇರೆಬೇರೆ ಪದಾರ್ಥಗಳೆಂದು ತಿಳಿಯಬಾರದು; ಬೀಜವು ತನ್ನ ಬೀಜತ್ವಾವಸ್ಥೆಯನ್ನು ಬಿಟ್ಟು ವೃಕ್ಷತ್ವಾವಸ್ಥೆಯನ್ನು ಪಡೆಯಿತೆಂದೇ ತಿಳಿಯಬೇಕು. ಆದಕಾರಣ—"ಬೀಜವು ನಷ್ಟವಾಯಿತು" ಎಂಬ ವಾಕ್ಯಕ್ಕೂ, "ವೃಕ್ಷವು ಹುಟ್ಟಿತು" ಎಂಬ ವಾಕ್ಯಕ್ಕೂ ಲೇಶಮಾತ್ರವೂ ಅರ್ಥವ್ಯತ್ಯಾಸವಿಲ್ಲ. ಈ ಎರಡು ವಾಕ್ಯಗಳಿಗೂ—"ಬೀಜವು ಬೀಜತ್ವಾವಸ್ಥೆಯನ್ನು ಬಿಟ್ಟು ವೃಕ್ಷತ್ವಾವಸ್ಥೆಯನ್ನು ಪಡೆಯಿತು" ಎಂಬುದೊಂದೇ ಅರ್ಥವಾಗಿ ಇರುವುದು.

"ಬೀಜವು ಹುಟ್ಟಿತು, ವೃಕ್ಷವು ನಷ್ಟವಾಯಿತು" ಎಂಬ ವಾಕ್ಯಗಳಿಗೆ ಮಾತ್ರ ಅರ್ಥವ್ಯತ್ಯಾಸವುಂಟು. ಬೀಜವು ತನ್ನ ಪೂರ್ವಾವಸ್ಥೆಯನ್ನು ಬಿಟ್ಟು ಈಗ ಬೀಜತ್ವಾವಸ್ಥೆಯನ್ನು ಪಡೆಯಿತೆಂದು ಮೊದಲನೆಯ ವಾಕ್ಯದ ಅರ್ಥವು; ವೃಕ್ಷವು ತನಗೆ ಈಗ ಇರುವ ವೃಕ್ಷತ್ವಾವಸ್ಥೆಯನ್ನು ಬಿಟ್ಟು ಉತ್ತರಾವಸ್ಥೆಯನ್ನು ಪಡೆಯಿತೆಂದು ಎರಡನೆಯ ವಾಕ್ಯದ ಅರ್ಥವು. ಪೂರ್ವ ಪೂರ್ವಾವಸ್ಥೆಗಾಗಲಿ ತದ್ವಿಶಿಷ್ಟವಸ್ತುವಿಗಾಗಲಿ ಉತ್ತರೋತ್ತರಾವಸ್ಥೆ ವಿನಾಶ ರೂಪವಾಗುವುದಲ್ಲದೆ, ಉತ್ತರೋತ್ತರಾವಸ್ಥೆಗಾಗಲಿ ತದ್ವಿಶಿಷ್ಟವಸ್ತುವಿಗಾಗಲಿ ಪೂರ್ವಪೂರ್ವಾವಸ್ಥೆ ವಿನಾಶರೂಪವಾಗುವುದಿಲ್ಲ. ಅವುದೊಂದು ಅವಸ್ಥೆಯನ್ನು ತೆಗೆದುಕೊಂಡು ವಿಚಾರಮಾಡಿನೋಡಿದರೂ ತನ್ನ ಪೂರ್ವಾವಸ್ಥೆಗೆ ತಾನು ನಾಶ ರೂಪವಾಗಿಯೂ ತನಗೆ ತಾನು ಉತ್ಪತ್ತಿರೂಪವಾಗಿಯೂ ಇದ್ದುಕೊಂಡು ತನ್ನ ಉತ್ತರಾವಸ್ಥೆಯನ್ನು ತನಗೆ ವಿನಾಶರೂಪವಾಗಿ ಪಡೆವುದು.

ಒಂದೇ ವಸ್ತುವಿನಲ್ಲಿ ಅವಸ್ಥಾದ್ವಯವೂ ಕ್ರಮಿಕವಾಗಿ ಸೇರುವುದರಿಂದ ಪೂರ್ವಾವಸ್ಥಾವಿಶಿಷ್ಟವಾದ ಅದೇ ವಸ್ತುವನ್ನು ಉಪಾದಾನಕಾರಣವೆಂದೂ, ಉತ್ತರಾವಸ್ಥಾವಿಶಿಷ್ಟವಾದ ಅದೇ ವಸ್ತುವನ್ನು ಕಾರ್ಯವೆಂದೂ ವ್ಯವಹರಿಸುವ ರಾದಪ್ರಯುಕ್ತ ಕಾರ್ಯಕಾರಣಗಳು ಒಂದೇ ಪದಾರ್ಥವಲ್ಲದೆ ಬೇರೆಬೇರೆ ಪದಾರ್ಥವಲ್ಲವೆಂಬುದು ವ್ಯಕ್ತವಾಗಿ ಇರುವುದು. ಈ ಎರಡು ಅವಸ್ಥೆಗಳೂ ಪರಸ್ಪರವಿರುದ್ಧಗಳಾದುದರಿಂದ ಏಕಕಾಲದಲ್ಲಿ ಒಂದು ವಸ್ತುವಿನಲ್ಲಿ ಸಂಭವಿಸಲಾರವು; ಇದಕ್ಕಾಗಿ—ಕಾಲಭೇದವೂ ವೃಕ್ಷದ ಉತ್ಪತ್ತಿವಿನಾಶಗಳಿಗೆ ಸಹಕಾರಿಕಾರಣವಾಗಿ ಇರುವುದು.

ಹೀಗೆ—ವೃಕ್ಷವೆಂಬ ಒಂದು ಪದಾರ್ಥದ ಉತ್ಪತ್ತಿಗಾಗಿಯೂ ವಿನಾಶಕ್ಕಾಗಿಯೂ ಬೀಜ, ಕಾಲಪರಿಣಾಮವಿಶೇಷವೆಂಬ ವಿಪಾಕ ಈ ಎರಡೂ ಆವಶ್ಯಕವಾಗಿ ಇರುವುವೆಂದು ತಿಳಿದಿರುವ ಯಾವ ಮನುಷ್ಯನು ಆ ಎರಡೂ ಕೂಡಿದ ಕಾಲದಲ್ಲಿ ಬೀಜದಿಂದ ವೃಕ್ಷದ ಉತ್ಪತ್ತಿಯನ್ನೂ. ವಿಪಾಕದಿಂದ ವೃಕ್ಷದ ವಿನಾಶವನ್ನೂ ನಿರ್ಧರಿಸಿಕೊಳ್ಳುವನೋ ಅವನು ಆ ವೃಕ್ಷಕ್ಕಿಂತಲೂ ಬೇರೊಬ್ಬನಾಗಿಯೇ ಇರುವನಲ್ಲದೆ ವೃಕ್ಷಕ್ಕೂ ಅವನಿಗೂ ಐಕ್ಯವಿಲ್ಲ.

(ಏವಂ ಬೀಜವಿಪಾಕಾಭ್ಯಾಂ ತನೋಃ ಜನ್ಮನಾಶಯೌ ದೃಷ್ಟ್ವಾ ತನೋಃ ಪೃಥಕ್ ಭವತಿ) ಅದರಂತೆ—ಪಂಚಭೂತಗಳ ಪರಿಣಾಮವಿಶೇಷವಾದ ಈ ಶರೀರಕ್ಕೆ ಪಂಚಭೂತಗಳೇ ಬೀಜಸ್ಥಾನದಲ್ಲಿಯೂ, ಜೀವನ ಕರ್ಮವಿಶೇಷದೊಡನೆ ಕೂಡಿರುವ ಕಾಲಪರಿಣಾಮವೇ ಸಹಕಾರಿಸ್ಥಾನದಲ್ಲಿಯೂ ನಿಂತಿರುವುವೆಂದು ತಿಳಿದಿರುವ ಯಾವ ಮನುಷ್ಯನು ಆ ಎರಡೂ ಕೂಡಿದ ಕಾಲದಲ್ಲಿ ಉಕ್ತವಾದ ಬೀಜದಿಂದ ಶರೀರದ ಉತ್ಪತ್ತಿಯನ್ನೂ, ಉಕ್ತವಾದ ವಿಪಾಕದಿಂದ ಶರೀರದ ವಿನಾಶವನ್ನೂ ನಿರ್ಧರಿಸಿಕೊಳ್ಳುವನೋ ಅವನು ಆ ಶರೀರಕ್ಕಿಂತಲೂ ಬೇರೊಬ್ಬನಾಗಿ ಅತ್ಯಂತ ವಿಲಕ್ಷಣನೆನಿಸಿಕೊಳ್ಳುವನಲ್ಲದೆ ಶರೀರಕ್ಕೂ ಅವನಿಗೂ ಐಕ್ಯವು ಸಂಭವಿಸುವುದಿಲ್ಲ.

## ೩೬೦. ಉಕ್ತವಿಧದೇಹಾತ್ಮವಿವೇಕರಹಿತಸ್ಯ ಸಂಸಾರಾನುವೃತ್ತಿಪ್ರದರ್ಶನಂ.

ಹೀಗೆ ದೇಹಕ್ಕಿಂತಲೂ ಭಿನ್ನನಾದ ಆತ್ಮನನ್ನು ವಿವೇಚನೆಮಾಡಿ ಅವನು ತಿಳಿದುಕೊಳ್ಳುವುದಿಲ್ಲವೋ ಅವನು ನಿರಂತರವಾದ ಜನ್ಮಮರಣಪರಂಪರೆಯೆಂಬ ಸಂಸಾರವನ್ನೇ ಹೊಂದುತ್ತಿರುವನೆಂದು ಹೇಳುತ್ತಾನೆ.—

**ಪ್ರಕೃತೇರೇವಮಾತ್ಮಾನಮವಿವಿಚ್ಯಾಬುಧಃ ಪುಮಾನ್ ।**
**ತತ್ತ್ವೇನ ಸ್ಪರ್ಶಸಮ್ಮೂಢಃ ಸಂಸಾರಂ ಪ್ರತಿಪದ್ಯತೇ ॥**

**ಓ ಉದ್ಧವನೇ!** ದೇಹಾಕಾರವಾಗಿ ಪರಿಣಮಿಸಿರುವ ಪ್ರಕೃತಿಯ ದೆಸೆಯಿಂದ ಆತ್ಮನನ್ನು ಯಥಾವಸ್ಥಿತಸ್ವರೂಪವಾಗಿ ವಿವೇಚನೆಮಾಡಿ ತಿಳಿದುಕೊಳ್ಳದ ಮನುಷ್ಯನು ಅಬುಧನೆನಿಸಿಕೊಂಡು ಶಬ್ದಸ್ಪರ್ಶವಮುಂತಾದ ವಿಷಯಗಳ ಅನುಭವದಿಂದ ಸಂಮೂಢನಾಗಿ—ಎಂದರೆ ದೇಹಾತ್ಮಗಳ ಐಕ್ಯಾಭಿಮಾನವೆಂಬ ಮೋಹದಿಂದ ಆವೃತನಾಗಿ ಉಕ್ತರೂಪವಾದ ಸಂಸಾರವನ್ನೇ ಹೊಂದುತ್ತಿರುವನು. ಅದು ಹೇಗೆಂದರೆ—

**ಸತ್ತ್ವಸಂಗಾದೃಷೀನ್ ದೇವಾನ್ ರಜಸಾಽಸುರಮಾನುಷಾನ್ ।**
**ತಮಸಾ ಭೂತತಿರ್ಯಕ್ತ್ವಂ ಭ್ರಾಮಿತೋ ಯಾತಿ ಕರ್ಮಭಿಃ ॥**

**ಓ ಉದ್ಧವನೇ!** ನಾನಾವಿಧವಾದ ಕರ್ಮಗಳಿಂದ ಈ ಸಂಸಾರಮಂಡಲದಲ್ಲಿ ಪುನಃಪುನಃ ತಿರುಗಿಸಲ್ಪಟ್ಟ ಈ ಜೀವಾತ್ಮನು—ಈ ಸಂಸಾರಚಕ್ರದ ಪರಿಭ್ರಮಣದಲ್ಲಿ ಯಾವಾಗಲಾದರೂ ಒಂದುವೇಳೆ ಸತ್ತ್ವಗುಣದ ಸಂಬಂಧವು ತನಗೆ ದೊರೆತರೆ ಅದರಿಂದ ಉಂಟಾಗುವ— ಶಮ-ದಮ-ಕ್ಷಮೆ-ತಪಸ್ಸು-ಸತ್ಯ-ಅಹಿಂಸೆ ಮುಂತಾದ ಸದ್ಗುಣಸಂಪತ್ತಿಯ ಪ್ರಭಾವದಿಂದ ದೇವಜಾತಿಯಲ್ಲಿಯಾಗಲಿ ಋಷಿಜಾತಿಯಲ್ಲಿಯಾಗಲಿ ಜನ್ಮವನ್ನು ಪಡೆವನು. ಮತ್ತೊಂದು ಕಾಲದಲ್ಲಿ ಯಾವಾಗಲಾದರೂ ರಜೋಗುಣದ ಸಂಬಂಧವು ತನಗೆ ದೊರೆತರೆ ಅದರಿಂದ ಉಂಟಾಗುವ ಕಾಮ-ಕ್ರೋಧ-ಲೋಭ-ಮೋಹ-ಮದ-ಮಾತ್ಸರ್ಯ ಮುಂತಾದ ದುರ್ಗುಣಗಳ ಪ್ರಭಾವದಿಂದ ಅಸುರಜಾತಿಯಲ್ಲಿಯೂ ಮನುಷ್ಯಜಾತಿಯಲ್ಲಿಯೂ ಜನ್ಮವನ್ನು ಪಡೆವನು. ಇನ್ನೊಂದು ಸಮಯದಲ್ಲಿ ಯಾವಾಗಲಾದರೂ ತಮೋಗುಣದ ಸಂಬಂಧವು ತನಗೆ ಉಂಟಾದರೆ ಅದರಿಂದ ಸಂಭವಿಸುವ ಶೋಕ-ಮೋಹ-ಪರಹಿಂಸೆ-ಪರದ್ರೋಹ ಮುಂತಾದ ಪ್ರಬಲದುರ್ಗುಣಗಳ ಮಹಿಮೆಯಿಂದ ಭೂತಪ್ರೇತಪಿಶಾಚಗಳ ಜಾತಿಯಲ್ಲಿಯೂ ಪಶುಪಕ್ಷಿಮೃಗಾದಿಗಳ ಜಾತಿಯಲ್ಲಿಯೂ ಜನ್ಮವನ್ನು ಪಡೆವನು.

**೩೬೧. ಸ್ವತೋ ನಿಷ್ಕ್ರಿಯೇಽಪ್ಯಾತ್ಮನಿ ದೇಹಾತ್ಮಭ್ರಮವಶಾತ್ ದೇಹಗತವ್ಯಾಪಾರಾರೋಪಃ.**

ನಿರವಯವನಾದ ಆತ್ಮನಿಗೆ ಅವುದೊಂದು ವ್ಯಾಪಾರಕ್ಕೂ ಯೋಗ್ಯತೆ ಇಲ್ಲದಿರುವಲ್ಲಿ ಸಂಸಾರಮಂಡಲದೊಳಗೆ ಅಲ್ಲಲ್ಲಿ ಭ್ರಮಣವು ಹೇಗೆ ಸಂಭವಿಸೀತು? ಎಂಬ ಆಶಂಕೆಯನ್ನು ಪರಿಹರಿಸುತ್ತಾನೆ.—

**ನೃತ್ಯತೋ ಗಾಯತಃ ಪಶ್ಯನ್ ತಥೈವಾನುಕರೋತಿ ತಾನ್ ।**
**ಏವಂ ಬುದ್ಧಿಗುಣಾನ್ ಪಶ್ಯನ್ ಅನೀಹೋಽಪ್ಯನುಕಾರ್ಯತೇ ॥**

**ಓ ಉದ್ಧವನೇ!** ನರ್ತನಮಾಡುತ್ತಿರುವವರನ್ನು ಎಡೆಬಿಡದೆ ದೃಷ್ಟಿಸಿ ನೋಡುತ್ತಿರುವವನೂ, ಗಾಯಕರ ಗಾನವನ್ನು ಎಡೆಬಿಡದೆ ಏಕಾಗ್ರಮನಸ್ಸಿನಿಂದ ಕೇಳುತ್ತಿರುವವನೂ ಅವರಂತೆ ತಾನೂ ಅಭಿನಯಿಸಿ (ಅನುಕರಣಮಾಡಿ) ಸ್ವಯಂ ನರ್ತಕನಂತೆಯೇ ಗಾಯಕನಂತೆಯೇ ಆಗಿಬಿಡುತ್ತಾನೆ. ಅದರಂತೆ ಆತ್ಮನು ಸ್ವತಃ ನಿರ್ವ್ಯಾಪಾರನಾಗಿ ಇದ್ದರೂ ದೇಹಾತ್ಮಭ್ರಮವೆಂಬ ಬುದ್ಧಿಯಿಂದ ತನ್ನಲ್ಲಿ ತಂದಿರಿ

ಸಲ್ಪಟ್ಟ ಆ ಆ ಚೇಷ್ಟಾದಿಧರ್ಮಗಳನ್ನು ತನ್ನ ಧರ್ಮಗಳನ್ನಾಗಿಯೇ ತಿಳಿಯುತ್ತಿರುವವನಾಗಿ ಭ್ರಮಣಾದಿವ್ಯಾಪಾರಗಳನ್ನು ಅನುಕರಿಸುತ್ತಾನೆ.

ಅನ್ಯವಸ್ತುವಿನಲ್ಲಿ ಇರುವ ಧರ್ಮಗಳು ಮತ್ತೊಂದರಲ್ಲಿ ಪ್ರಕಾಶಿಸುವ ಬಗೆ ಹೇಗೆ ಎಂಬುದನ್ನು ದೃಷ್ಟಾಂತದಿಂದ ಸ್ಪಷ್ಟಪಡಿಸುತ್ತಾನೆ—

**ಯಥಾಽಂಭಸಾ ಪ್ರಚಲತಾ ತರವೋಽಪಿ ಚಲಾ ಇವ ।**
**ಚಕ್ಷುಷಾ ಭ್ರಾಮ್ಯಮಾಣೇನ ದೃಶ್ಯತೇ ಚಲತೀವ ಭೂಃ ॥**

**ಓ ಉದ್ಧವನೇ!** ನದೀತೀರದಲ್ಲಿ ನಿಂತಿರುವವನು ಪೂರ್ವಾಭಿಮುಖವಾಗಿ ಓಡುತ್ತಿರುವ ಜಲಪ್ರವಾಹವನ್ನು ಚನ್ನಾಗಿ ದೃಷ್ಟಿಸಿ ನೋಡುತ್ತಿದ್ದರೆ ಆಗ ಜಲದಲ್ಲಿ ಪ್ರತಿಫಲಿಸಿರುವ ತೀರವೃಕ್ಷಗಳು ಪಶ್ಚಿಮಾಭಿಮುಖವಾಗಿ ಓಡುನಂತೆ ತೋರುವುವು. ವೃಕ್ಷಗಳಲ್ಲಿ ನಿಜವಾಗಿ ಚಲನಕ್ರಿಯೆಯಿಲ್ಲದಿದ್ದರೂ—ನೀರಿನಲ್ಲಿ ವೃಕ್ಷಗಳಿರುವುವೆಂಬ ಒಂದಾನೊಂದು ಭ್ರಮದೊಡನೆ ಕೂಡಿದವನಿಗೆ ವೃಕ್ಷಚಲನ ಭ್ರಮಕ್ಕೆ ನೀರಿನ ಚಲನವೇ ಕಾರಣವಾಗಿ ನೀರಿನಲ್ಲಿ ಇರುವ ಚಲನಕ್ರಿಯೆಯನ್ನು ವೃಕ್ಷಗಳಲ್ಲಿಯೇ ನೈಜವೆಂದು ಹೇಗೆ ತಿಳಿವನೋ; ಮತ್ತು ಯಾವನಾದರೊಬ್ಬನು ಭೂಮಿಯನ್ನು ನೋಡುತ್ತ ಅತಿವೇಗದಿಂದ ಚಕ್ರಾಕಾರವಾಗಿ ಭ್ರಮಣಮಾಡುವವನಾದರೆ ಆಗ ಚಲನಕ್ರಿಯೆ ಅವನ ನೇತ್ರದಲ್ಲಿ ಇರುವುದಲ್ಲದೆ ಪೃಥಿವಿಯಲ್ಲಿ ಇಲ್ಲ; ಆದರೂ ಆ ಕ್ರಿಯೆ ಪೃಥಿವಿಯಲ್ಲಿ ತೋರಿ, ಪೃಥಿವಿಯೇ ತಿರುಗುತ್ತದೆಯೆಂದು ಹೇಗೆ ತಿಳಿವನೋ; ಅದರಂತೆಯೇ ದೇಹಕ್ಕೂ ಆತ್ಮನಿಗೂ ಅಭೇದವನ್ನು ನಿಶ್ಚಯಿಸಿಕೊಂಡಿರುವ ಬುದ್ಧಿಯಿಂದ ದೇಹದಲ್ಲಿ ಇರುವ ಚಲನಾದಿಧರ್ಮಗಳು ಆತ್ಮನಲ್ಲಿ ಆರೋಪಿಸಲ್ಪಟ್ಟು ಆತ್ಮನಿಗೇ ಅವು ನೈಜವಾದ ಧರ್ಮಗಳೆಂದು ತೋರುವುವು. ಆದಕಾರಣ ದೋಷವಶದಿಂದ ಅನ್ಯಧರ್ಮಗಳು ಅನ್ಯವಸ್ತುವಿನಲ್ಲಿ ತೋರಬಹುದು.

### ೩೬೨. ಆತ್ಮನಿ ದೇಹಧರ್ಮಾರೋಪಾತ್ಮಕಸ್ಯ ಸಂಸಾರಸ್ಯ ಅನಿತ್ಯತ್ವಂ.

**ಯಥಾ ಮನೋರಥಧಿಯಃ ವಿಷಯಾನುಭವೋ ಮೃಷಾ ।**
**ಸ್ವಪ್ನದೃಷ್ಟಶ್ಚ ದಾಶಾರ್ಹ ತಥಾ ಸಂಸಾರ ಆತ್ಮನಃ ॥**

**ಓ ಉದ್ಧವನೇ!** ವ್ಯರ್ಥವಾದ ಮನೋರಥಜ್ಞಾನಗಳೂ, ಸ್ವಪ್ನದಲ್ಲಿ ಕಾಣಲ್ಪಟ್ಟ ವಿಷಯಾನುಭವವೂ ಮಿಥ್ಯಾರ್ಥವಿಷಯಕಗಳಾಗಿ ಬಂದುವಾದುದರಿಂದ ಹೇಗಾದರೆ ಅನಿತ್ಯಗಳಾಗಿ ಇರುವುವೋ; ಆದರಂತೆ ಆತ್ಮನಿಗೆ ದೇಹಧರ್ಮಾರೋಪ

ರೂಪವಾದ ಸಂಸಾರವೂ ಅನಿತ್ಯವಾದುದು; ಆರೋಪಕ್ಕೆ ಹೇತುವಾದ ದೇಹಾತ್ಮ ಭ್ರಮವು ತೊಲಗಿದರೆ ಆರೋಪರೂಪವಾದ ಸಂಸಾರವೂ ತೊಲಗುವುದು.

**ಅರ್ಥೇ ಹ್ಯವಿದ್ಯಮಾನೇಽಪಿ ಸಂಸೃತಿರ್ನ ನಿವರ್ತತೇ |**
**ಧ್ಯಾಯತೋ ವಿಷಯಾನಸ್ಯ ಸ್ವಪ್ನೇಽನರ್ಥಾಗಮೋ ಯಥಾ ||**

ಇಲ್ಲಿ—"ಅರ್ಥೇ ಅವಿದ್ಯಮಾನೇಽಪಿ ವಿಷಯಾನ್ ಧ್ಯಾಯತಃ ಅಸ್ಯ ಸಂಸೃತಿಃ ನ ನಿವರ್ತತೇ "ಎಂದು ಶ್ಲೋಕಾನ್ವಯವು—ಓ **ಉದ್ಧವನೇ!** ಆತ್ಮನಲ್ಲಿ ದೇಹಧರ್ಮಗಳ ಆರೋಪಕ್ಕೆ ಕಾರಣವನ್ನು ಏನೆಂದು ತಿಳಿದಿರುವಿ? ನಾನು ಹೇಳುವೆನು ಕೇಳು—ದೇಹಾತ್ಮಗಳ ಅಭೇದವನ್ನೂ ಶಬ್ದಸ್ಪರ್ಶಾದಿವಿಷಯಗಳನ್ನೂ ನಿರಂತರವಾಗಿ ಮನನಮಾಡುತ್ತಿರುವ ಮನಇಂದ್ರಿಯದ ಸಂಬಂಧವೇ ಆತ್ಮನಲ್ಲಿ ದೇಹಧರ್ಮಾರೋಪಕ್ಕೆ ಕಾರಣವೆಂದು ತಿಳಿ. ಶಬ್ದಸ್ಪರ್ಶ ಮುಂತಾದ ಭೋಗ್ಯಪದಾರ್ಥವು ಸನ್ನಿಹಿತವಾಗಿ ಇಲ್ಲದಿದ್ದರೂ ಆ ವಿಷಯಗಳನ್ನೇ ಚಿಂತಿಸುತ್ತಿರುವ ಈ ಜೀವಾತ್ಮನಿಗೆ ಈ ಸಂಸಾರವು ಯಾವಾಗಲೂ ತೊಲಗುವುದೇ ಇಲ್ಲ. ಸ್ವಪ್ನವು ಮುಗಿಯದೆ ಅನುವರ್ತಿಸುತ್ತಲೇ ಇದ್ದರೆ, ಅಂಥ ಸ್ವಪ್ನದಲ್ಲಿ ಉಂಟಾಗುವ ದೇಶಾಂತರಗಮನ, ಶಿರಶ್ಛೇದನ ಮುಂತಾದ ಅನರ್ಥಪರಂಪರೆಯೂ ಅನುವರ್ತಿಸುತ್ತಲೇ ಇರುವುದಲ್ಲದೆ ಕೊನೆಗಾಣುವುದಿಲ್ಲ. ಆದಕಾರಣ ಆತ್ಮನಿಗೆ ದೇಹಧರ್ಮಾರೋಪವೆಂಬ ಸಂಸಾರವು ತೊಲಗಬೇಕಾದರೆ—ದೇಹಾತ್ಮಗಳ ಐಕ್ಯವನ್ನೂ ವಿಷಯಗಳನ್ನೂ ಧ್ಯಾನಿಸುತ್ತಿರುವ ಮನಇಂದ್ರಿಯದ ಸಂಬಂಧವನ್ನು ತಪ್ಪಿಸಿಕೊಂಡು, ದೇಹಾತ್ಮಗಳ ವೈಲಕ್ಷಣ್ಯವನ್ನೂ ಜೀವಾತ್ಮಪರಮಾತ್ಮ ವೈಲಕ್ಷಣ್ಯವನ್ನೂ ಧ್ಯಾನಿಸುತ್ತಿರುವ ಮನಇಂದ್ರಿಯದ ಸಂಬಂಧವನ್ನು ಪಡೆಯಬೇಕು.

**ತಸ್ಮಾದುದ್ಧವ ಮಾಭುಙ್ಕ್ಷ್ವ ವಿಷಯಾನಸದಿಂದ್ರಿಯೈಃ |**
**ಆತ್ಮಾಗ್ರಹಣನಿರ್ಭಾತಂ ಪಶ್ಯ ವೈಕಲ್ಪಿಕಂ ಭ್ರಮಂ ||**

**ಓ ಉದ್ಧವನೇ!** ಆತ್ಮನಿಗೆ ದುಃಖವನ್ನು ತಂದೊಡ್ಡುವ ಶಬ್ದಾದಿ ವಿಷಯಗಳನ್ನೇ ಏಕೆ ಈ ಮನಸ್ಸು ಚಿಂತಿಸುತ್ತದೆ? ಆತ್ಮನಿಗೆ ಶಾಶ್ವತಸುಖವನ್ನು ತಂದೀಯುವ ಸಂಸಾರನಿವೃತ್ತಿಕಾರಣವನ್ನು ಏಕೆ ಈ ಮನಸ್ಸು ಚಿಂತಿಸುವುದಿಲ್ಲ? ಎಂಬ ಜಿಜ್ಞಾಸೆ ನಿನಗೆ ಇರಬಹುದು; ಮನಸ್ಸು ಶಬ್ದಾದಿವಿಷಯಗಳನ್ನೇ ಚಿಂತಿಸುವುದಕ್ಕೆ ಕಾರಣವನ್ನು ಹೇಳುವೆನು ಕೇಳು—ವಿಷಯಾನುಭವವೇ ಕಾರಣವು. ವಿಷಯಾನುಭವವು ಎಷ್ಟೆಷ್ಟು ಬಲವಾಗುವುದೋ ವಿಷಯಧ್ಯಾನವೂ ಅಷ್ಟಷ್ಟು ಪ್ರಬಲ

ವಾಗುವುದು. ಅದು ಬಲಿಷ್ಠವಾದಹಾಗೆಲ್ಲಾ ಸಂಸಾರವು ಹೆಚ್ಚುವುದು. ಸಂಸಾರವು ಹೆಚ್ಚಿ ಹೆಚ್ಚಿ ದೀರ್ಘಾಯುಷ್ಯವನ್ನು ಪಡೆದಹಾಗೆಲ್ಲಾ ದುಃಖವು ಮಿತಿಮೀರುವುದು.

**ಓ ಉದ್ಧವನೇ!** ಆದಕಾರಣ ಸಂಸಾರದ ನಿರ್ಮೂಲನವನ್ನು ಬಯಸುವ ನೀನು ಅಸದ್ವಿಷಯಪ್ರವಣವಾದ ಈ ಕೆಟ್ಟ ಇಂದ್ರಿಯಗಳಿಂದ ಪ್ರಾಕೃತವಾದ ಶಬ್ದಾದಿವಿಷಯಗಳನ್ನು ಖಂಡಿತವಾಗಿಯೂ ಅನುಭವಿಸಬೇಡ.

ಆತ್ಮನಿಗೆ ಜನ್ಮಮರಣ ಮುಂತಾದ ಅವಸ್ಥೆಗಳ ಸಂಬಂಧವುಂಟೆಂಬ ತಿಳಿವು ಭ್ರಾಂತಿಮೂಲಕವೆಂದು ಹಿಂದೆ "**ನಾಸ್ತ್ಯಸ್ಯ ಕರ್ಮಬೀಜೇನ**" ಇತ್ಯಾದಿ ಶ್ಲೋಕಗಳಲ್ಲಿ ಉಪಪಾದನೆಮಾಡಿ ತೋರಿಸಲ್ಪಟ್ಟಿದ್ದಿತು; ಈಗ ಅದನ್ನು ಉಪಸಂಹಾರಮಾಡುವವನಾಗಿ ಅಂಥ ಭ್ರಾಂತಿಗೆ ಕಾರಣವನ್ನೂ ಹೇಳಿ—"ನೀನು ಹಾಗೆಯೇ ನಿಶ್ಚಯಿಸಿಕೊಳ್ಳು" ಎಂದು ಉತ್ತರಾರ್ಧದಲ್ಲಿ ಉಪದೇಶಿಸುತ್ತಾನೆ. **(ವಿಶೇಷೇಣ ಕಲ್ಪಯತೀತಿ ವೈಕಲ್ಪಿಕಂ)** ಎಂದರೆ—ಆತ್ಮನಲ್ಲಿ ಜನ್ಮಮರಣ ಮುಂತಾದ ಅವಸ್ಥೆಗಳ ಕಲ್ಪನೆಗೆ ನಿಮಿತ್ತವಾಗಿರುವ **(ಭ್ರಮಂ)** ಭ್ರಾಂತಿಯನ್ನು **(ಆತ್ಮಾಗ್ರಹಣನಿರ್ಭಾತಂ ಪಶ್ಯ)** ದೇಹಕ್ಕಿಂತಲೂ ಅತ್ಯಂತವಿಲಕ್ಷಣರಾಗಿರುವ ಜೀವಾತ್ಮಪರಮಾತ್ಮರುಗಳ ನಿಜಸ್ಥಿತಿಯನ್ನು ವಿಚಾರಮಾಡಿ ತಿಳಿದುಕೊಳ್ಳದಿರುವುದರಿಂದಲೇ ಉಂಟಾಗಿರುವುದಾಗಿ ನಿರ್ಧರಿಸು.

ಅಥವಾ—ಆತ್ಮನಲ್ಲಿ ಜನ್ಮಜರಾಮರಣಾದಿಭೇದಭ್ರಮವೂ, ದೇವತ್ವಮನುಷ್ಯತ್ವಾದಿಭೇದಭ್ರಮವೂ ಆತ್ಮಸ್ವರೂಪವನ್ನು ತಿಳಿಯದ ಪಕ್ಷದಲ್ಲಿಯೇ ಉಂಟಾಗುವುವಾದುದರಿಂದಲೂ, ಆತ್ಮಸ್ವರೂಪವನ್ನು ಚನ್ನಾಗಿ ವಿಚಾರಮಾಡಿ ತಿಳಿದುಕೊಳ್ಳುವ ಪಕ್ಷದಲ್ಲಿ ಅವು ಉಂಟಾಗುವುವಲ್ಲವಾದುದರಿಂದಲೂ ಆ ಭ್ರಮವನ್ನು ವೈಕಲ್ಪಿಕವನ್ನಾಗಿ ಎಂದರೆ ಸಾಕ್ಷಿಕವನ್ನಾಗಿ ತಿಳಿ—ಎಂಬುದಾಗಿಯೂ ಹೇಳಬಹುದು.

## ೩೬೩. ಉಕ್ತವಿಧಸಂಸಾರನಿವೃತ್ತಿಪೂರ್ವಕಶ್ರೇಯಃಪ್ರಾಪ್ತಯೇ ದೇಹಾತ್ಮವಿವೇಕಸ್ಯ ಅವಶ್ಯಸಂಪಾದನೀಯತಾ.

ಆತ್ಮಸ್ವರೂಪವನ್ನು ಯಥಾರ್ಥವಾಗಿ ತಿಳಿದುಕೊಳ್ಳದುದರಿಂದಲೇ ಅಂಥ ಭ್ರಮವು ಉಂಟಾಗಿರುವುದೆಂದು ಹೇಳಿದುದರಿಂದ—ಅಂಥ ಭ್ರಮದ ನಿವೃತ್ತಿಗಾಗಿ ಆತ್ಮಾವಲೋಕನದಲ್ಲಿ ಸರ್ವದಾ ಪ್ರಯತ್ನಪಡಬೇಕೆಂದು ಸೂಚಿತವಾಗಿರುವುದು; ಅಂಥ ಪ್ರಯತ್ನಕ್ಕೆ ಸಾವಿರಾರು ವಿಘ್ನಗಳು ಬಂದರೂ ಹೆದರದೆ ಧೈರ್ಯದಿಂದ ಆತ್ಮ

ಸಾಕ್ಷಾತ್ಕಾರವನ್ನೇ ಸಂಪಾದಿಸಿ ತನ್ನನ್ನು ಸಂಸಾರದಿಂದ ಬಿಡಿಸಬೇಕೆಂದು ಮುಂದಿನ ಎರಡು ಶ್ಲೋಕಗಳಿಂದ ಉಪದೇಶಿಸುತ್ತಾನೆ—

**ಕ್ಷಿಪ್ತೋಽಥ ನಿಂದಿತೋಽಸದ್ಭಿಃ ಪ್ರಲುಬ್ಧೋಽಸೂಯಿತೋಽಪಿವಾ।**
**ತಾಡಿತಃ ಸನ್ನಿರುದ್ಧೋ ವಾ ವೃತ್ತ್ಯಾ ವಾ ಪರಿಹಾಪಿತಃ॥**
**ನಿಷ್ಠ್ಯೂತೋ ಮೂತ್ರಿತೋ ವಾಽಜ್ಞೈಃ ಬಹುಧೈವಂ ಪ್ರಕಂಪಿತಃ।**
**ಶ್ರೇಯಸ್ಕಾಮಃ ಕೃಚ್ಛ್ರಗತಃ ಆತ್ಮನಾಽಽತ್ಮಾನಮುದ್ಧರೇತ್॥**

**ಓ ಉದ್ಧವನೇ!** ಆತ್ಮಾವಲೋಕನಸಕ್ಕಾಗಿ ಪ್ರಯತ್ನಪಡುತ್ತಿರುವ ಧೀರನು—ದುರ್ಜನರಿಂದ ಆಕ್ಷೇಪಿಸಲ್ಪಟ್ಟವನಾದರೂ, ನಿಂದಿಸಲ್ಪಟ್ಟವನಾದರೂ, ವಂಚಿಸಲ್ಪಟ್ಟವನಾದರೂ ಅಥವಾ ಹಾಸ್ಯಮಾಡಲ್ಪಟ್ಟವನಾದರೂ, ದೋಷಾರೋಪಣೆಮಾಡಲ್ಪಟ್ಟವನಾದರೂ, ಹೊಡೆಯಲ್ಪಟ್ಟವನಾದರೂ, ಬಂಧಿಸಲ್ಪಟ್ಟವನಾದರೂ, ಜೀವಿಕೆಯಿಂದ ಬಿಡಿಸಲ್ಪಟ್ಟವನಾದರೂ, ಉಗುಳಲ್ಪಟ್ಟವನಾದರೂ, ಮೂತ್ರದಿಂದ ನೆನೆಸಲ್ಪಟ್ಟವನಾದರೂ, ಹೀಗೆ ಅಜ್ಞಾನಿಗಳಾದ ಮೂರ್ಖರಿಂದ ನಾನಾವಿಧವಾಗಿ ಅಳ್ಳಾಡಿಸಲ್ಪಟ್ಟವನಾದರೂ—ತಾನು ಶಾಶ್ವತವಾದ ಶ್ರೇಯಸ್ಸನ್ನೇ ಬಯಸುವವನಾಗಿದ್ದರೆ ಬಂದ ಕಷ್ಟವನ್ನೆಲ್ಲಾ ಲಕ್ಷ್ಯಮಾಡದೆ ತನ್ನ ಪ್ರಯತ್ನವನ್ನು ಸಾಂಗೋಪಾಂಗವಾಗಿ ನಡಸಿ ಆತ್ಮಸಾಕ್ಷಾತ್ಕಾರವನ್ನು ಪಡೆದು ಭಗವದನುಗ್ರಹಕ್ಕೆ ಪಾತ್ರನಾಗಿ ತನ್ನನ್ನು ಪಾರಗೊಳಿಸಬೇಕು.

**ಇಂತು ತತ್ತ್ವಶುದ್ಧಿಯೆಂಬ ವಿಶಿಷ್ಟಾದ್ವೈತಪ್ರಕರಣಗ್ರಂಥದೊಳ್ ಜೀವಪರಿಚ್ಛೇದದಲ್ಲಿ ಆತ್ಮನಃ ದೇಹಾತಿರಿಕ್ತತ್ವಸಮರ್ಥನಪ್ರಕರಣಂ ದ್ವಿತೀಯಂ ೨**

# ತೃತೀಯಪ್ರಕರಣಂ.

## ೩೬೪. ಅಥ ಜೀವಸ್ಯ ಬಾಹ್ಯೇಂದ್ರಿಯಾನತಿರಿಕ್ತತ್ವಪೂರ್ವಪಕ್ಷಃ ॥೨॥

ಈ ರೀತಿಯಲ್ಲಿ—ದೇಹಕ್ಕೂ ಆತ್ಮನಿಗೂ ಐಕ್ಯವನ್ನು ಹೇಳುವವರ ಮತದಲ್ಲಿ ಇರುವ ಅನುಪಪತ್ತಿಗಳನ್ನು ತೋರಿಸಿ ಆತ್ಮತತ್ತ್ವವು ದೇಹಕ್ಕಿಂತಲೂ ಅತ್ಯಂತವಿಲಕ್ಷಣವಾದುದೆಂಬುದನ್ನು ಸ್ಥಾಪಿಸಿದೆವು. ಈ ಸಂದರ್ಭದಲ್ಲಿ ಇಂದ್ರಿ

ಯಕ್ಕಿಂತಲೂ ಅತಿರಿಕ್ತವಾದ ಆತ್ಮತತ್ತ್ವವಿಲ್ಲವೆಂದು ವಾದಿಸುವ ಇನ್ನು ಕೆಲವರು ಇಂದ್ರಿಯಗಳಿಗೇ ಆತ್ಮತ್ವವನ್ನು ಹೇಳುವರು,—

ಹೇಗೆಂದರೆ—ದೇಹವು ಆತ್ಮತತ್ತ್ವವೆನಿಸಿಕೊಳ್ಳಲಾರದಾದರೆ ಅದು ಹೋಗಲಿ; ಇಂದ್ರಿಯಗಳೇ ಆತ್ಮನೆನಿಸಿಕೊಳ್ಳಲು ಅಡ್ಡಿಯೇನು ? ದೇಹದಲ್ಲಿಯೇ ಚೈತನ್ಯವನ್ನು ಒಪ್ಪಿಕೊಳ್ಳುವುದಾದರೆ ದೇಹವಿರುವಾಗಲೆಲ್ಲಾ ಚೈತನ್ಯವು ಕಾಣಬೇಕು; ಸುಷುಪ್ತಿಸಮಯದಲ್ಲಿ ದೇಹವು ಹಾಸಿಗೆಯಮೇಲೆ ಬಿದ್ದಿದ್ದರೂ ಚೈತನ್ಯವು ಕಾಣುವುದಿಲ್ಲವಾದುದರಿಂದ ದೇಹಕ್ಕೆ ಚೈತನ್ಯವನ್ನು ಒಪ್ಪಿಕೊಳ್ಳಲು ಸಾಧ್ಯವಿಲ್ಲ; ಇಂದ್ರಿಯಗಳಿಗೆ ಚೈತನ್ಯವನ್ನು ಒಪ್ಪಿಕೊಳ್ಳುವುದಾದರೆ—ಜಾಗ್ರದವಸ್ಥೆಯಲ್ಲಿ ಇಂದ್ರಿಯಗಳೆಲ್ಲಾ ತಮ್ಮತಮ್ಮ ಕೆಲಸಗಳಲ್ಲಿ ಜಾಗರೂಕಗಳಾಗಿ ಇರುವಾಗ ಚೈತನ್ಯದ ಉಪಲಬ್ಧಿಯೂ, ಸುಷುಪ್ತಿಸಮಯದಲ್ಲಿ ಇಂದ್ರಿಯಗಳು ವಿಶ್ರಾಂತಿಯನ್ನು ಹೊಂದಿ ಇರುವಾಗ ಚೈತನ್ಯದ ಅನುಪಲಬ್ಧಿಯೂ ಈ ಎರಡೂ ಸಂಗತವಾಗುವುವು.

ಯಾವ ಪದಾರ್ಥದ ಸದ್ಭಾವಾಸದ್ಭಾವಗಳು ಯಾವ ಮತ್ತೊಂದು ಪದಾರ್ಥದ ಸದ್ಭಾವಾಸದ್ಭಾವಗಳಿಗೆ ಅಧೀನಗಳಾಗಿ ಇರುವುವೋ ಆ ಪದಾರ್ಥವು ಅಂಥ ಮತ್ತೊಂದು ಪದಾರ್ಥದ ಧರ್ಮವಾಗಿಯೇ ಇರುವುದೆಂಬ ನ್ಯಾಯವು ಲೋಕದಲ್ಲಿ ಅನುಭವಸಿದ್ಧವಾಗಿ ಇರುವುದಷ್ಟೆ.

ಮತ್ತು—ನೇತ್ರವಿದ್ದರೆ ದರ್ಶನವುಂಟೆಂಬುದೂ, ನೇತ್ರವಿಲ್ಲದಿದ್ದರೆ ದರ್ಶನವಿಲ್ಲವೆಂಬುದೂ,—ಇದರಂತೆಯೇ ಶ್ರೋತ್ರ ಮೊದಲಾದ ಇಂದ್ರಿಯಗಳಿದ್ದರೇನೇ ಶ್ರವಣ ಮೊದಲಾದ ಆ ಆ ಇಂದ್ರಿಯಗಳ ಕೆಲಸಗಳು ಉಂಟೆಂಬುದೂ, ಅವುಗಳಿಲ್ಲದಿದ್ದರೆ ಅವುಗಳ ಕಾರ್ಯಗಳೂ ಇಲ್ಲವೆಂಬುದೂ ಎಲ್ಲರಿಗೂ ತಿಳಿದ ವಿಷಯವೇ ಆಗಿರುವುದು. ದರ್ಶನ ಶ್ರವಣ ಮುಂತಾದ ಶಬ್ದಗಳೆಲ್ಲಾ ಒಂದೊಂದುಬಗೆಯ ಜ್ಞಾನವಿಶೇಷವನ್ನು ತೋರಿಸುವುವಾದುದರಿಂದ ಆ ಆ ಇಂದ್ರಿಯಗಳಿಗೆ ಅಧೀನಗಳಾಗಿ ಇರುವ ಆ ಆ ಜ್ಞಾನಗಳನ್ನು ಆ ಆ ಇಂದ್ರಿಯಗಳಿಗೇ ಒಪ್ಪಿಕೊಂಡು ಅವುಗಳನ್ನೇ ಆತ್ಮತತ್ತ್ವಗಳೆಂದು ಅಂಗೀಕರಿಸುವುದು ಉಚಿತವಾಗಿ ಇರುವುದಲ್ಲದೆ—ಚಕ್ಷುರಿಂದ್ರಿಯಕ್ಕಿಂತಲೂ ಬೇರೊಬ್ಬನು "ದ್ರಷ್ಟಾ" ಎನಿಸಿಕೊಳ್ಳುವುದಕ್ಕೆ ಯೋಗ್ಯನಾದವನಿಲ್ಲ. ಇದರಂತೆಯೇ ಶ್ರೋತ್ರ-ತ್ವಕ್-ಜಿಹ್ವೆ-ಘ್ರಾಣ ಇವುಗಳಿಗಿಂತಲೂ ಬೇರೊಬ್ಬನಾದ "ಶ್ರೋತಾ-ಸ್ಪ್ರಷ್ಟಾ-ರಸಯಿತಾ-ಘ್ರಾತಾ" (ಕೇಳುವವನು ಮುಟ್ಟುವವನು ರುಚಿನೋಡುವವನು ಮೂಸಿನೋಡುವವನು) ಎಂದು ಹೇಳಿಸಿಕೊಳ್ಳುವುದಕ್ಕೆ ಯೋಗ್ಯನಾದವನಿಲ್ಲ.

## ೩೬೫. ಇಂದ್ರಿಯಾತ್ಮವಾದಫಲಿತಾಂಶನಿರೂಪಣಂ.

ಇದರ ಫಲಿತಾಂಶವೇನಾಯಿತು? "ಯಾವನು ನೋಡಬಲ್ಲನೋ ಅವನಲ್ಲವೆ ಆತ್ಮನೆನಿಸಿಕೊಳ್ಳಲು ಅರ್ಹನಾಗುವನು; ಕಣ್ಣಿಗಿಂತಲೂ ಮತ್ತೊಂದಾದ ಪದಾರ್ಥಕ್ಕೆ ನೋಡುವ ಸಾಮರ್ಥ್ಯವಿಲ್ಲವಾದುದರಿಂದಲೂ, ಕಣ್ಣಿಗೇ ಆ ಸಾಮರ್ಥ್ಯವಿರುವುದರಿಂದಲೂ, "**ದ್ರಷ್ಟಾ**" ಎನಿಸಿಕೊಳ್ಳಲು ಯೋಗ್ಯವಾದ ಚಕ್ಷುರಿಂದ್ರಿಯವೇ ಆತ್ಮತತ್ತ್ವವೆಂದು ಒಪ್ಪಿಕೊಳ್ಳಬೇಕು. ಇದರಂತೆಯೇ "**ಶ್ರೋತಾ-ಸ್ಪ್ರಷ್ಟಾ-ರಸಯಿತಾ-ಘ್ರಾತಾ**" ಎನಿಸಿಕೊಳ್ಳಲು ಯೋಗ್ಯಗಳಾದ ಶ್ರೋತ್ರ, ತ್ವಕ್, ಜಿಹ್ವೆ, ಘ್ರಾಣ ಈ ಇಂದ್ರಿಯಗಳನ್ನೇ ಆತ್ಮವಸ್ತುವನ್ನಾಗಿ ಹೇಳಬೇಕಲ್ಲದೆ ಬೇರೆ ಇಲ್ಲ. ಆದುದರಿಂದಲೇ—ಕಣ್ಣು ನೋಡುತ್ತದೆ, ಕಿವಿ ಕೇಳುತ್ತದೆ, ತ್ವಗಿಂದ್ರಿಯವು ಸ್ಪರ್ಶಿಸುತ್ತದೆ, ನಾಲಿಗೆ ರುಚಿನೋಡುತ್ತದೆ, ಮೂಗು ವಾಸನೆನೋಡುತ್ತದೆ" ಇತ್ಯಾದಿಲೌಕಿಕಪ್ರಯೋಗಗಳೂ ಸಮಂಜಸವಾಗುವುವು. ನೇತ್ರ ಮೊದಲಾದ ಇಂದ್ರಿಯಗಳಿಗಿಂತಲೂ ಅತಿರಿಕ್ತವಾದ ಆತ್ಮತತ್ತ್ವವೊಂದನ್ನು ಒಪ್ಪಿಕೊಂಡು ದ್ರಷ್ಟೃತ್ವ ಮುಂತಾದ ಧರ್ಮಗಳನ್ನೂ ಅದಕ್ಕೇ ಹೇಳುವ ಪಕ್ಷದಲ್ಲಿ ಈ ಲೌಕಿಕಪ್ರಯೋಗಗಳೆಲ್ಲಾ ಅಸಮಂಜಸಗಳಾಗಿ ಅಮುಖ್ಯಗಳೆನಿಸಿಕೊಳ್ಳಬೇಕಾಗುವುವು. ಮುಖ್ಯತಯಾ ನಿರ್ವಾಹವು ಸಂಭವಿಸಬಹುದಾದರೆ ಅಮುಖ್ಯತ್ವವನ್ನು ಸ್ವೀಕರಿಸುವುದು ನ್ಯಾಯ್ಯವಲ್ಲ. ಮತ್ತು ಇಂದ್ರಿಯಗಳು ಪರಿಪೂರ್ಣಗಳಾಗಿ ಇದ್ದರೆ "ನಾನು ಪರಿಪೂರ್ಣನಾಗಿ ಇರುವೆನು" ಎಂಬ ವ್ಯವಹಾರವೂ, ಅವು ಅಪರಿಪೂರ್ಣಗಳಾಗಿ ಇರುವಾಗ "ನಾನು ವಿಕಲನಾಗಿ ಇರುವೆನು ಎಂದರೆ ಅಪರಿಪೂರ್ಣನಾಗಿ ಇರುವೆನು" ಎಂಬ ವ್ಯವಹಾರವೂ ಲೋಕದಲ್ಲಿ ಅಬಾಧಿತವಾಗಿ ನಡೆಯುತ್ತಿರುವುವು. ಇದರಿಂದಲೂ ಇಂದ್ರಿಯಗಳಿಗೇ ಆತ್ಮತ್ವವು ಸಿದ್ಧಿಸುವುದಲ್ಲದೆ ತದ್ಭಿನ್ನವಾದ ವಸ್ತುವಿಗಲ್ಲ. ಆದಕಾರಣ ಇಂದ್ರಿಯಗಳನ್ನೇ ಆತ್ಮವಸ್ತುವನ್ನಾಗಿ ಒಪ್ಪಿಕೊಳ್ಳಬೇಕು" ಎಂಬುದೇ ಇದರ ಫಲಿತಾಂಶವಾಗಿ ಇರುವುದು.

## ೩೬೬. ಆತ್ಮನ ಇಂದ್ರಿಯಾನತಿರಿಕ್ತತ್ವೇ ಅವಿಪಾದನಿಯಮಾನುಪಪತ್ತ್ಯಾ ಇಂದ್ರಿಯಭಿನ್ನಸ್ಯೈವಾತ್ಮತ್ವಂ.

ಹೀಗೆ ಹೇಳುವ ಇಂದ್ರಿಯಾತ್ಮವಾದಿಗಳ ಮತವೂ ಸಮಂಜಸವಾದುದಲ್ಲ. ಹೇಗೆಂದರೆ "**ಜ್ಞಾತಾ**" ಎನಿಸಿಕೊಳ್ಳುವ ಆತ್ಮನು ಚಕ್ಷುರಾದೀಂದ್ರಿಯಗಳಿಗಿಂತಲೂ ಭಿನ್ನನಾಗಿ ಇರಬೇಕಲ್ಲದೆ ಚಕ್ಷುರಾದೀಂದ್ರಿಯಗಳೇ ಆಗಿರಲಾರನು. ಏತಕ್ಕೆಂದರೆ ಈ ಶರೀರದಲ್ಲಿ ಚಕ್ಷುರಾದೀಂದ್ರಿಯಗಳೆಂಬ ಅನೇಕಾತ್ಮತತ್ತ್ವಗಳನ್ನು

ಒಪ್ಪಿಕೊಳ್ಳುವುದಾದರೆ ದೇಹಾತ್ಮವಾದದ ಮೊದಲನೆಯ ಪಕ್ಷದ ದೂಷಣದಲ್ಲಿ ತೋರಿಸಿದಂತೆ ಅಂಥ ಅನೇಕಾತ್ಮತತ್ತ್ವಗಳಿಗೆ ಅಭಿಪ್ರಾಯಭೇದಗಳು ಉಂಟಾಗಿ ಯಾವಾಗಲಾದರೂ ಪರಸ್ಪರವಿವಾದವು ಉಂಟಾಗಬೇಕಾಗುವುದು; ಆದರೆ ಈ ಶರೀರದಲ್ಲಿ ಯಾವಾಗಲೂ ಅಭಿಪ್ರಾಯಭೇದವಿಲ್ಲದೆ ಯಾವಾಗಲೂ ವಿವಾದವು ಉಂಟಾಗುವುದೇ ಇಲ್ಲವೆಂಬ ನಿಯಮವೇ ಸರ್ವರಿಗೂ ಅನುಭವಸಿದ್ಧವಾಗಿಯೇ ಇರುವುದು.

ನಮ್ಮ ಮತದಲ್ಲಿಯಾದರೆ ಇಂದ್ರಿಯಗಳಿಗಿಂತಲೂ ವಿಲಕ್ಷಣನಾದ ಒಬ್ಬನೇ ಒಬ್ಬ ಆತ್ಮನು ಈ ಶರೀರಕ್ಕೆ ಯಜಮಾನನಾಗಿ ಇರುವುದರಿಂದ ಅವನಿಗೆ ಅಭಿಪ್ರಾಯಭೇದವು ಉಂಟಾಗುವುದಕ್ಕೆ ಅವಕಾಶವಿಲ್ಲವಾಗಿ ಯಾವಾಗಲೂ ವಿವಾದವು ಉಂಟಾಗುವುದೇ ಇಲ್ಲವೆಂಬ ನಿಯಮವು ಸಂಗತವಾಗುವುದಲ್ಲದೆ—ಆತ್ಮಬಹುತ್ವಪ್ರಸಂಗಕ್ಕೆ ಅವಕಾಶವನ್ನು ಕೊಡುವ ಇಂದ್ರಿಯಾತ್ಮವಾದಿಗಳ ಮತದಲ್ಲಿ ಸಂಗತವಾಗಲಾರದು.

## ೩೬೭. ದ್ರಷ್ಟೃತ್ವಾದಿಸಕಲಧರ್ಮವೈಶಿಷ್ಟ್ಯಾತ್ ಆತ್ಮನ ಇಂದ್ರಿಯಾತಿರಿಕ್ತತ್ವಾವಶ್ಯಕತಾ

ಮತ್ತು ನಿಮ್ಮ ಮತದಲ್ಲಿ—ಚಕ್ಷುರಿಂದ್ರಿಯವೆಂಬ ಆತ್ಮನು ಕೇವಲ ನೋಡಬಲ್ಲನಲ್ಲದೆ ಕೇಳಲಾರನು, ಮುಟ್ಟಲಾರನು, ರುಚಿನೋಡಲಾರನು, ವಾಸನೆ ಹಿಡಿಯಲಾರನು, ಆದರೆ ಈ ಶರೀರದಲ್ಲಿ—ನೋಡುವ ಸಾಮರ್ಥ್ಯವು ಯಾವನಿಗೆ ಇರುವುದೋ ಅವನಿಗೇ ಕೇಳುವ ಸಾಮರ್ಥ್ಯವೂ, ಮುಟ್ಟುವ—ರುಚಿನೋಡುವ ವಾಸನೆಹಿಡಿಯುವ ಸಾಮರ್ಥ್ಯವೂ ಸಹ ಇರುವುದೆಂಬುದು ಸರ್ವರಿಗೂ ಅನುಭವ ಸಿದ್ಧವಾಗಿ ಇರುವುದು. "ಯಾವ ನಾನು ಪಟವನ್ನು ನೋಡಿದೆನೋ ಅದೇ ನಾನು ಈಗ ಪಟವನ್ನು ಮುಟ್ಟುವವನಾಗಿ ಇರುತ್ತೇನೆ" ಎಂಬ ಅನುಭವಕ್ಕೆ ಅಪವಾದವನ್ನು ಹೇಳುವವರು ಲೋಕದಲ್ಲಿ ಯಾರೂ ಇಲ್ಲವಷ್ಟೆ?

ನಮ್ಮ ಮತದಲ್ಲಿಯಾದರೆ ಇಂದ್ರಿಯಗಳಿಗಿಂತಲೂ ವಿಲಕ್ಷಣನಾಗಿ, ಆ ಆ ಇಂದ್ರಿಯಗಳಿಂದ ಉಂಟಾಗುವ ದರ್ಶನ, ಶ್ರವಣ, ಸ್ಪರ್ಶನ ಮೊದಲಾದ ಎಲ್ಲಾ ಬಗೆಯ ಜ್ಞಾನಗಳಿಗೂ ಆಶ್ರಯನಾಗಿ ಇರುವ ಒಬ್ಬನೇ ಒಬ್ಬ ಆತ್ಮನು ಈ ಶರೀರದಲ್ಲಿ ಇರುತ್ತಾನೆಂದು ಒಪ್ಪಿಕೊಂಡಿರುವುದರಿಂದ ಹಿಂದೆ ಹೇಳಿದ ಅನುಭವವು ಸಂಗತವಾಗುವುದು. ನಿಮ್ಮ ಮತದಲ್ಲಿಯಾದರೆ—ಒಂದೊಂದು ಇಂದ್ರಿಯಕ್ಕೂ

ವ್ಯವಸ್ಥಿತವಾಗಿ ಒಂದೊಂದೇ ವಿಷಯದಲ್ಲಿ ಸಾಮರ್ಥ್ಯವಿರುವುದಲ್ಲದೆ ಇತರೇಂದ್ರಿಯವಿಷಯಗಳಲ್ಲಿ ಇತರೇಂದ್ರಿಯಗಳಿಗೆ ಸಾಮರ್ಥ್ಯವಿಲ್ಲವಾದಕಾರಣ ಈ ಅನುಭವಕ್ಕೆ ಸಾಂಗತ್ಯವು ಉಂಟಾಗಲಾರದು.

## ೩೬೮. ಸರ್ವವಿಷಯಸ್ಮರ್ತೃತ್ವಾದಪಿ ಆತ್ಮನ ಇಂದ್ರಿಯಾತಿರಿಕ್ತತ್ವಾವಶ್ಯಕತಾ.

ಮತ್ತು—ಮತ್ತೊಂದು ಇಂದ್ರಿಯವೆಂಬ ಆತ್ಮನ ಅನುಭವವನ್ನು ಮತ್ತೊಂದು ಇಂದ್ರಿಯವೆಂಬ ಆತ್ಮನು ಸ್ಮರಿಸುತ್ತಾನೆಂದು ಹೇಳುವುದಕ್ಕೂ ಅವಕಾಶವಿಲ್ಲ. ಇನ್ನೊಬ್ಬನು ಅನುಭವಿಸಿದುದನ್ನು ಮತ್ತೊಬ್ಬನು ಸ್ಮರಿಸಲಾರನಷ್ಟೆ? ದೇಹಾತ್ಮವಾದದಲ್ಲಿ ತೋರಿಸಿದಂತೆಯೇ ಇಲ್ಲಿಯೂ ಮೂರು ಪಕ್ಷಗಳನ್ನೂ ಅವುಗಳ ದೂಷಣಗಳನ್ನೂ ಊಹಿಸಿಕೊಳ್ಳಬೇಕು.

## ೩೬೯. ಅನುಭವಕರ್ತುರಾತ್ಮನಃ ಅನುಭವಕರಣಾದಿಂದ್ರಿಯಾತ್ ಭಿನ್ನತ್ವಾವಶ್ಯಕತಾ.

ಮತ್ತು "ಎಲ್ಲಾ ಇಂದ್ರಿಯಗಳಿಂದಲೂ ಎಲ್ಲಾ ವಿಷಯಗಳನ್ನೂ ನಾನು ಅನುಭವಿಸುತ್ತೇನೆ" ಎಂಬ ಅನುಸಂಧಾನವು ಎಲ್ಲರಿಗೂ ಅಬಾಧಿತವಾಗಿ ಉಂಟಾಗುತ್ತಿರುವುದು; ಇಲ್ಲಿ "ನಾನು" ಎಂಬುದು ಕರ್ತೃಕಾರಕವಾಗಿಯೂ, "ಎಲ್ಲಾ ವಿಷಯಗಳನ್ನೂ" ಎಂಬುದು ಕರ್ಮಕಾರಕವಾಗಿಯೂ, "ಎಲ್ಲಾ ಇಂದ್ರಿಯಗಳಿಂದಲೂ" ಎಂಬುದು ಕರಣಕಾರಕವಾಗಿಯೂ, "ಅನುಭವಿಸುತ್ತೇನೆ" ಎಂಬುದು ಕ್ರಿಯಾಪದವಾಗಿಯೂ ಇರುವುದು. ಇದರಲ್ಲಿ ಕರ್ಮಕಾರಕವು ಹೇಗಾದರೆ ಕರ್ತೃಕಾರಕಕ್ಕಿಂತಲೂ ಭಿನ್ನವಾಗಿ ಇರುವುದೋ; ಹಾಗೆಯೇ ಕರಣಕಾರಕವೂ ಕರ್ತೃಕಾರಕಕ್ಕಿಂತಲೂ ಭಿನ್ನವಾಗಿಯೇ ಇರಬೇಕೆಂಬುದೂ ಸರ್ವಜನವಿದಿತವಾಗಿ ಇರುವುದು. "ದೇವದತ್ತನು ಕಟ್ಟಿಗೆಯಿಂದ ಅಡಿಗೆಮಾಡುತ್ತಾನೆ" ಎಂಬ ಸ್ಥಳದಲ್ಲಿ ಕಟ್ಟಿಗೆಯೇ ದೇವದತ್ತನಾಗುವುದಿಲ್ಲವಷ್ಟೆ? ಅದರಂತೆ ಇಲ್ಲಿಯೂ "ನಾನು" ಎಂದು ಹೇಳಿಕೊಳ್ಳುವ ಕರ್ತಾವಾದ ಆತ್ಮನಿಗೆ ವಿಷಯಾನುಭವವೆಂಬ ಕ್ರಿಯೆಯಲ್ಲಿ ಇಂದ್ರಿಯಗಳು ಕರಣಕಾರಕಗಳಾಗಿ ಇರುವುದರಿಂದ ಕರ್ತೃಭೂತನಾದ ಆತ್ಮನಿಗಿಂತಲೂ ಅವು ಭಿನ್ನಗಳಾಗುವುವಲ್ಲದೆ ಆತ್ಮನೆನಿಸಿಕೊಳ್ಳಲಾರವು. ಹೀಗಿದ್ದರೂ ಇಂದ್ರಿಯಗಳಿಗೇ ಆತ್ಮತ್ವವನ್ನು ಒಪ್ಪಿಕೊಳ್ಳುವುದಾದರೆ ಹಿಂದೆ ತೋರಿಸಿದ ಅನುಸಂಧಾನವು ಅನುಪಪನ್ನವಾಗಬೇಕಾಗಿ ಬರುವುದು.

## ೩೭೦. ಸ್ವಪ್ನದ್ರಷ್ಟೃತ್ವಾದಪಿ ಆತ್ಮನೋ ದೇಹೇಂದ್ರಿಯಾತಿರಿಕ್ತತ್ವಾವಶ್ಯಕತಾ.

ಮತ್ತು ಆತ್ಮನು ಸ್ವಪ್ನವನ್ನು (ಕನಸನ್ನು) ಕಾಣುತ್ತಾನೆಂಬುದನ್ನು ಆತ್ಮಸಾಕ್ಷಿಯಾಗಿ ಎಲ್ಲರೂ ಬಲ್ಲರು. ಇಂದ್ರಿಯಗಳೇ ಆತ್ಮನೆನಿಸಿಕೊಳ್ಳುವುವಾದರೆ ಇಂದ್ರಿಯಗಳೇ ಸ್ವಪ್ನವನ್ನು ಕಾಣುತ್ತವೆಯೆಂದು ಹೇಳಬೇಕಾಗುವುದು. ಆದರೆ ಅದು ಸಂಭವಿಸುವುದಿಲ್ಲ. ಏತಕ್ಕೆಂದರೆ ಸ್ವಪ್ನಾವಸ್ಥೆಯಲ್ಲಿ ಎಲ್ಲಾ ಬಾಹ್ಯೇಂದ್ರಿಯಗಳೂ ತಮ್ಮ ತಮ್ಮ ವ್ಯಾಪಾರವನ್ನು ಬಿಟ್ಟು ವಿಶ್ರಾಂತಿಯನ್ನು ಹೊಂದಿ ಇರುವುವು. ಇದಕ್ಕೋಸ್ಕರ " ಜಾಗ್ರಚ್ಛರೀರವೇ ಸ್ವಪ್ನದ್ರಷ್ಟಾವಾಗಿ ಇರುವುದು " ಎಂದೂ ಹೇಳುವುದಕ್ಕೆ ಅವಕಾಶವಿಲ್ಲ; ಜಾಗ್ರಚ್ಛರೀರವು **" ಅಹಂ "** ಎಂಬ ಬುದ್ಧಿಗೆ ಗೋಚರವಾದರಲ್ಲವೆ ಸ್ವಪ್ನದ್ರಷ್ಟೃತ್ವವನ್ನೂ ಅದಕ್ಕೆ ಹೇಳಬಹುದು. ಮೊತ್ತಮೊದಲು ಸ್ವಪ್ನಾವಸ್ಥೆಯಲ್ಲಿ ಜಾಗ್ರಚ್ಛರೀರಕ್ಕೆ ಪ್ರತೀತಿಯೇ ಇಲ್ಲ; ಒಂದುವೇಳೆ ಪ್ರತೀತಿಯುಂಟಾದರೂ **" ಇದಂ "** ಎಂಬುದಾಗಿ ತೋರುವುದಲ್ಲದೆ **" ಅಹಂ "** ಎಂಬುದಾಗಿ ತೋರುವುದಿಲ್ಲ. ಆದಕಾರಣ ಶರೀರಕ್ಕೂ ಸ್ವಪ್ನದ್ರಷ್ಟೃತ್ವವು ಸಂಭವಿಸುವುದಿಲ್ಲ. ಸ್ವಪ್ನದಲ್ಲಿ ಕಾಣಬರುವ ವ್ಯಾಘ್ರಾದಿಶರೀರಗಳಿಗೇ ಸ್ವಪ್ನದ್ರಷ್ಟೃತ್ವವನ್ನು ಹೇಳೋಣವೆಂದರೆ ಮೊತ್ತಮೊದಲು ಆ ಶರೀರಗಳೇ ವಿದ್ಯಮಾನಗಳಾಗಿ ಇಲ್ಲ; ಒಂದು ವೇಳೆ ವಿದ್ಯಮಾನಗಳಾಗಿ ಇದ್ದರೂ ಅವುಗಳು ಸ್ವಪ್ನದರ್ಶನಕ್ಕೆ ಕರ್ಮಕಾರಕಗಳಾಗಿ ಇರುವುವಲ್ಲದೆ ಕರ್ತೃಕಾರಕಗಳಲ್ಲ. ಕರ್ತೃಕಾರಕವಷ್ಟೆ ಆತ್ಮನೆನಿಸಿಕೊಳ್ಳಬಲ್ಲುದು. ಆದಕಾರಣ ಸ್ವಪ್ನದ್ರಷ್ಟಾವಾದ ಆತ್ಮನು ದೇಹಕ್ಕಿಂತಲೂ, ಬಾಹ್ಯೇಂದ್ರಿಯಗಳಿಗಿಂತಲೂ ಭಿನ್ನನಾಗಿಯೇ ಇರಬೇಕೆಂದು ಆವಶ್ಯಕವಾಗಿಯೂ ಒಪ್ಪಿಕೊಳ್ಳಬೇಕು.

## ೩೭೧. ಆತ್ಮನಿ ಸಾಕಲ್ಯವೈಕಲ್ಯವ್ಯವಹಾರಸ್ಯ ಭ್ರಾಂತಿಮೂಲಕತ್ವಾತ್ ವಿಶಿಷ್ಟವಿಷಯಕತ್ವಾದ್ವಾ ಉಪಪತ್ತಿಃ.

" ಹಾಗಾದರೆ ದೇಹದಲ್ಲಿ ಅಥವಾ ಇಂದ್ರಿಯಗಳಲ್ಲಿ ಸಾಕಲ್ಯವಿರುವಾಗ " ಸಕಲೋಽಹಂ "ಎಂದರೆ ನಾನು ಪರಿಪೂರ್ಣನಾಗಿ ಇರುವೆನು " ಎಂಬ ವ್ಯವಹಾರವೂ, ಅಥವಾ ದೇಹದಲ್ಲಿಯಾಗಲಿ ಇಂದ್ರಿಯಗಳಲ್ಲಿಯಾಗಲಿ ವೈಕಲ್ಯವಿರುವಾಗ " ವಿಕಲೋಽಹಂ " ಎಂದರೆ ನಾನು ಅಪರಿಪೂರ್ಣನಾಗಿ ಇರುವೆನು " ಎಂಬ ವ್ಯವಹಾರವೂ, ಹೇಗೆ ಸಂಗತವಾಗುವುವು ? ದೇಹವೇ ಆತ್ಮತತ್ತ್ವವಾಗಿ ಅಥವಾ ಇಂದ್ರಿಯಗಳೇ ಆತ್ಮತತ್ತ್ವಗಳಾಗಿ ಇದ್ದರಲ್ಲವೆ ಈ ವ್ಯವಹಾರವು ಸಂಗತವಾ

ದ್ದೀತು ? ಎಂದು ಆಶಂಕಿಸಬಾರದು. ದೇಹಾತ್ಮಭ್ರಾಂತಿಯಿಂದಲೂ, ಇಂದ್ರಿಯಾತ್ಮ ಭ್ರಾಂತಿಯಿಂದಲೂ ಈ ವ್ಯವಹಾರವು ಸಂಭವಿಸಬಹುದಷ್ಟೆ? ಅಥವಾ "ನಾನು ಪರಿಪೂರ್ಣವಾದ ದೇಹದೊಡನೆ ಕೂಡಿ ಇರುವೆನು ನಾನು ಪರಿಪೂರ್ಣಗಳಾದ ಇಂದ್ರಿಯಗಳೊಡನೆ ಕೂಡಿ ಇರುವೆನು" ಎಂಬುದಾಗಿ ವೈಶಿಷ್ಟ್ಯವಿವಕ್ಷೆಯಿಂದ ಲಾದರೂ ಸಂಭವಿಸಬಹುದಷ್ಟೆ? ಆದಕಾರಣ ಚಕ್ಷುರಾದಿಬಾಹ್ಯೇಂದ್ರಿಯಗಳು ಆತ್ಮನೆನಿಸಿಕೊಳ್ಳಲಾರವು.

## ೩೭೨. ಅಥ ಆತ್ಮನೋ ಮನಇಂದ್ರಿಯಾನತಿರಿಕ್ತತ್ವ ಪೂರ್ವಪಕ್ಷಃ. ॥೩॥

ಹೋಗಲಿ—ಅಂತರವಾದ ಮನಇಂದ್ರಿಯವನ್ನು ಆತ್ಮನನ್ನಾಗಿ ಒಪ್ಪಿ ಕೊಳ್ಳಲು ಅಡ್ಡಿಯೇನು ? ದರ್ಶನ, ಶ್ರವಣ, ಸ್ಪರ್ಶನ ಮೊದಲಾದ ಎಲ್ಲಾ ಬಗೆಯ ಜ್ಞಾನಗಳಿಗೂ ಆಶ್ರಯನಾಗಿ ಇರುವವನೇ ಆತ್ಮನೆನಿಸಿಕೊಳ್ಳಬೇಕಾಗಿ ಇರುವುದ ರಿಂದಲೂ, ಬಾಹ್ಯೇಂದ್ರಿಯಗಳಿಗಾದರೆ ಒಂದು ಇಂದ್ರಿಯದಿಂದ ಆಗುವ ಕೆಲಸದಲ್ಲಿ ಮತ್ತೊಂದು ಇಂದ್ರಿಯಕ್ಕೆ ಸಾಮರ್ಥ್ಯವಿಲ್ಲವಾದುದರಿಂದಲೂ, ಆತ್ಮತ್ವವನ್ನು ಹೇಳಲು ಅವಕಾಶವಿಲ್ಲ ; ಅಂತರಿಂದ್ರಿಯವಾದ ಮನಸ್ಸಿಗಾದರೆ ದರ್ಶನ, ಶ್ರವಣ, ಸ್ಪರ್ಶನ ಮುಂತಾದ ಸಕಲಕೆಲಸಗಳಲ್ಲಿಯೂ ಸಾಮರ್ಥ್ಯವು ಅನುಭವಸಿದ್ಧವಾಗಿ ಇರುವುದರಿಂದ ಮನಇಂದ್ರಿಯವನ್ನೇ ಆತ್ಮವನ್ನಾಗಿ ಹೇಳಲು ಯಾವ ಅಡ್ಡಿಯೂ ಇರುವುದಿಲ್ಲ.

## ೩೭೩. ಕರಣತ್ವಾನ್ಮನಸೋಽಪಿ ಆತ್ಮತ್ವಾನುಪಪತ್ತಿಃ.

ಈ ಮತವೂ ಸಂಗತವಾದುದಲ್ಲ. ಏತಕ್ಕೆಂದರೆ—ಮನಸ್ಸೆಂಬ ಪದಾರ್ಥವು ಸಿದ್ಧಿಸುವಾಗ ಶ್ರುತಿಪ್ರಮಾಣದಿಂದಲಾಗಲಿ ಅನುಮಾನಪ್ರಮಾಣದಿಂದಲಾಗಲಿ ಸಿದ್ಧಿಸುವುದು ; ಯಾವ ಪ್ರಮಾಣದಿಂದ ಅದು ಸಿದ್ಧಿಸುವುದೋ ಅದೇ ಪ್ರಮಾಣ ದಿಂದ ಅಂಥ ಮನಸ್ಸಿಗೆ ಕರಣತ್ವವೇ ಸಿದ್ಧಿಸುವುದಲ್ಲದೆ ಕರ್ತೃತ್ವವು ಸಿದ್ಧಿಸುವು ದಿಲ್ಲ. **"ಮನಸಾ ಹ್ಯೇವ ಪಶ್ಯತಿ"** ಎಂಬ ಶ್ರುತಿಯಿಂದ ಮನಸ್ಸಿಗೆ ಕರಣತ್ವ ವಲ್ಲವೆ ಅವಗತವಾಗುವುದು ? ಮತ್ತು "ಯಾವಯಾವುದು ಸಾಕ್ಷಾತ್ಕಾರವೆನಿಸಿ ಕೊಂಡಿರುವುದೋ ಅದೆಲ್ಲವೂ ಯಾವುದಾದರೊಂದು ಇಂದ್ರಿಯರೂಪವಾದ ಕರಣ ದಿಂದಲೇ ಉಂಟಾಗುತ್ತದೆಯೆಂಬುದನ್ನು ಚಕ್ಷುರಾದೀಂದ್ರಿಯಜನ್ಯವಾದ ರೂಪಾದಿಸಾಕ್ಷಾತ್ಕಾರದಲ್ಲಿ ನಾವು ನೋಡಿರುವೆವು. ಅದರಂತೆ ಸುಖಾದಿಸಾಕ್ಷಾ ತ್ಕಾರವೂ ಸಹ ಸಾಕ್ಷಾತ್ಕಾರವೆನಿಸಿಕೊಂಡಿರುವುದರಿಂದ ಯಾವುದಾದರೊಂದು

ಇಂದ್ರಿಯರೂಪವಾದ ಕರಣದಿಂದಲೇ ಉಂಟಾಗಿರಬೇಕು. ಅಭ್ಯಂತರವಾದ ಸುಖಾದಿಪದಾರ್ಥಗಳಲ್ಲಿ ಬಾಹ್ಯಗಳಾದ ಚಕ್ಷುರಾದೀಂದ್ರಿಯಗಳಿಗೆ ಪ್ರವೃತ್ತಿ ಸಾಮರ್ಥ್ಯವಿಲ್ಲವಾದುದರಿಂದ ಅವುಗಳಿಗಿಂತಲೂ ಭಿನ್ನವಾಗಿಯೂ ಅಭ್ಯಂತರವಾಗಿಯೂ ಇರುವ ಮತ್ತೊಂದು ಇಂದ್ರಿಯವು ಬೇಕಾಗಿರುವುದು ; ಅದೇ ಮನಸ್ಸೆನಿಸಿಕೊಳ್ಳುವುದು." ಇಂಥ ಅನುಮಾನಪ್ರಮಾಣದಿಂದಲೂ ಮನಸ್ಸಿಗೆ ಕರಣತ್ವವು ಅವಗತವಾಗುವುದಲ್ಲದೆ ಕರ್ತೃತ್ವವು ತೋರುವುದಿಲ್ಲ. ಛೇದನಕ್ರಿಯೆಯಲ್ಲಿ ಕರಣವಾದ ಕುಠಾರವು (ಕೊಡಲಿಯು) ಛೇದನಕ್ರಿಯೆಯಲ್ಲಿ ಕರ್ತಾವಾದವನಿಗಿಂತಲೂ ಭಿನ್ನವಾಗಿ ಇರುವುದೆಂಬುದು ಸರ್ವಜನಪ್ರತ್ಯಕ್ಷವಾಗಿ ಇರುವುದಲ್ಲವೆ ?

### ೩೭೪. ಅನಿತ್ಯತ್ವಾದಪಿ ಮನಸ ಆತ್ಮತ್ವಾನುಪಪತ್ತಿಃ.

ಮತ್ತು—

"ತೈಜಸಾನೀಂದ್ರಿಯಾಣ್ಯಾಹುರ್ದೇವಾ ವೈಕಾರಿಕಾ ದಶ |
ಏಕಾದಶಂ ಮನಶ್ಚಾತ್ರ ದೇವಾ ವೈಕಾರಿಕಾಃ ಸ್ಮೃತಾಃ ||"

ಇವೇ ಮೊದಲಾದ ಪ್ರಮಾಣಗಳಿಂದ ಮನಇಂದ್ರಿಯವು ಸಾತ್ತ್ವಿಕಾಹಂಕಾರಜನ್ಯವೆಂದು ಅವಗತವಾಗುವಕಾರಣ ಅನಿತ್ಯವಾಗಿ ಇರುವುದು. ಆತ್ಮನಾದರೆ ಉತ್ಪತ್ತಿವಿನಾಶಗಳಿಲ್ಲದವನಾಗಿ ನಿತ್ಯನಾಗಿ ಇರುವನು. ಆದಕಾರಣ ಅನಿತ್ಯವಾದ ಮನಸ್ಸೂ ನಿತ್ಯವಾದ ಆತ್ಮತತ್ತ್ವವಾಗಲಾರದು.

### ೩೭೫. ಅಥ ಪ್ರಾಣಸ್ಯೈವಾತ್ಮತ್ವಪೂರ್ವಪಕ್ಷಃ. ||೪||

ಆದರೆ ಅದೂ ಹೋಗಲಿ—ಪ್ರಾಣವೇ ಆತ್ಮನೆನಿಸಿಕೊಳ್ಳಲು ತಡೆಯೇನು ? ದೇಹ, ಇಂದ್ರಿಯ, ಮನಸ್ಸು ಇವುಗಳೆಲ್ಲದರ ಪ್ರವೃತ್ತಿನಿವೃತ್ತಿಗಳೂ ಪ್ರಾಣಾಧೀನಗಳಾಗಿ ಇರುವುವು; ಪ್ರಾಣವಿರುವ ಕಾಲದಲ್ಲಿಯೇ ದೇಹಾದಿಗಳಲ್ಲಿ ಪ್ರವೃತ್ತಿನಿವೃತ್ತಿಗಳು ಉಂಟಾಗುವುದೂ, ಪ್ರಾಣವಿಲ್ಲದಿದ್ದರೆ ದೇಹಾದಿಗಳಲ್ಲಿ ಪ್ರವೃತ್ತಿನಿವೃತ್ತಿಗಳಿಲ್ಲದಿರುವುದೂ ಪ್ರತ್ಯಕ್ಷಸಿದ್ಧವಾಗಿ ಇರುವುವಷ್ಟೆ?

ಮತ್ತು—ಪ್ರಾಣವಿದ್ದರೆ ಆಗ "ಜೀವನಿರುತ್ತಾನೆ" ಎಂಬ ವ್ಯವಹಾರವೂ, ಪ್ರಾಣವು ಹೊರಟುಹೋದರೆ—ಆಗ "ಜೀವನು ಹೊರಟುಹೋದನು" ಎಂಬ ವ್ಯವಹಾರವೂ ಅಬಾಧಿತವಾಗಿ ಲೋಕದಲ್ಲಿ ಕಾಣುವುವು. ಇದರಿಂದ—ಪ್ರಾಣವೇ ಜೀವನೆನಿಸಿಕೊಳ್ಳುವುದೆಂದು ತಿಳಿದುಬರುವಕಾರಣ ಪ್ರಾಣಕ್ಕಿಂತಲೂ ಅತಿರಿಕ್ತನಾದ ಜೀವನನ್ನು ಅಂಗೀಕರಿಸಲು ಪ್ರಮಾಣವಿಲ್ಲ.

## ೩೭೬ ದೇಹಾತ್ಮವಾದತುಲ್ಯತ್ವಪ್ರದರ್ಶನೇನ ಪ್ರಾಣಾತ್ಮವಾದಖಂಡನಂ

ಈ ಮತವೂ ಸಂಗತವಾದುದಲ್ಲ. ಪ್ರಾಣಗಳೂ ವಾಯ್ವವಯವಗಳ ಸಂಘಾತರೂಪವಾಗಿ ಇರುವುದರಿಂದ ದೇಹಾತ್ಮವಾದದಲ್ಲಿ ತೋರಿಸಿದಂತೆಯೇ ಪ್ರಾಣಗಳ ಪ್ರತ್ಯೇಕಾವಯವದಲ್ಲಿ ಚೈತನ್ಯವೋ? ಸಮುದಾಯದಲ್ಲಿ ಚೈತನ್ಯವೋ? ಅಥವಾ ಅವಯವಾತಿರಿಕ್ತವಾದ ಅವಯವಿಯಲ್ಲಿ ಚೈತನ್ಯವೋ? ಎಂಬ ವಿಕಲ್ಪವು ಇಲ್ಲಿಯೂ ಸಂಭವಿಸಿ ಮೂರು ಪಕ್ಷಗಳಲ್ಲಿಯೂ ಹಿಂದೆ ತೋರಿಸಿದ ದೋಷಗಳೇ ಇಲ್ಲಿಯೂ ಅವರ್ಜನೀಯಗಳಾಗಿ ಬರುವುವಷ್ಟೆ?

ಮತ್ತು—ಶರೀರಾವಯವಗಳಂತೆ ಪ್ರಾಣಗಳು ಬಹುವಾಗಿ ಇರುವುದರಿಂದ ಇಂಥ ಪ್ರಾಣಗಳನ್ನೇ ಆತ್ಮತತ್ತ್ವಗಳಾಗಿ ಹೇಳುವುದಾದರೆ ಅವುಗಳಿಗೆ ಯಾವಾಗಲಾದರೂ ಅಭಿಪ್ರಾಯಭೇದವುಂಟಾಗಿ ಪರಸ್ಪರವಿವಾದವೂ ಆವಶ್ಯಕವಾಗಿ ಉಂಟಾಗಬೇಕಾಗುವುದರಿಂದಲೂ, "**ಮಮ ದೇಹಃ**" ಎಂಬಂತೆ "**ಮಮ ಪ್ರಾಣಾಃ**" ಎಂಬುದಾಗಿ ಪ್ರಾಣಗಳಿಗೂ ಆತ್ಮನಿಗೂ ಭೇದವೇ ಸರ್ವರಿಗೂ ಸ್ವಾನುಭವವೇದ್ಯವಾಗಿ ಇರುವುದರಿಂದಲೂ, ಆತ್ಮನೆಂಬುವನು ಪ್ರಾಣಗಳಿಗಿಂತಲೂ ವಿಲಕ್ಷಣನಾಗಿಯೇ ಇರಬೇಕು.

ಮತ್ತು—ಸುಖವಾಗಿ ಮಲಗಿ ಇದ್ದವನು ನಿದ್ರೆಯನ್ನು ಬಿಟ್ಟು ಎದ್ದ ಮೇಲೆ ಪ್ರಬೋಧಾವಸ್ಥೆಯಲ್ಲಿ "ಇಷ್ಟು ಹೊತ್ತು ನಾನು ಸುಖವಾಗಿ ಮಲಗಿ ಇದ್ದೆನು" ಎಂದು ಸ್ವಾಪಕಾಲದ ಆನಂದವನ್ನು ಸ್ಮರಣೆಗೆ ತಂದುಕೊಳ್ಳುತ್ತಾನೆ; ಈಗ ಸ್ಮರಣೆಗೆ ತಂದುಕೊಳ್ಳುವುದಾದರೆ ಸ್ವಾಪಕಾಲದಲ್ಲಿ ಅವನು ಆ ಆನಂದವನ್ನು ಅನುಭವಿಸಿಯೇ ಇರಬೇಕು; ಸ್ವಾಪಕಾಲದಲ್ಲಿ ಅವನು ತನ್ನ ಸಕಲ ವ್ಯಾಪಾರಗಳನ್ನೂ ಬಿಟ್ಟು ವಿಶ್ರಾಂತನಾಗಿ ಇದ್ದ ಪಕ್ಷದಲ್ಲಿ ಆ ಆನಂದವನ್ನು ಅನುಭವಿಸುವುದಕ್ಕೆ ಆಗುತ್ತಿರಲಿಲ್ಲ. ಆದಕಾರಣ ಸ್ವಾಪಕಾಲದಲ್ಲಿಯೂ ವಿಶ್ರಾಂತನಾಗದೆ ಯಾವನು ತನ್ನ ವ್ಯಾಪಾರಗಳನ್ನು ನಡಸುತ್ತಲೇ ಇರುವನೋ ಅವನೇ ಆತ್ಮನೆನಿಸಿಕೊಳ್ಳಬೇಕು. ಶರೀರವೂ ಇಂದ್ರಿಯಗಳೂ ಸ್ವಾಪಕಾಲದಲ್ಲಿ ತಮ್ಮ ತಮ್ಮ ವ್ಯಾಪಾರಗಳನ್ನೆಲ್ಲಾ ಬಿಟ್ಟು ವಿಶ್ರಾಂತಿಯನ್ನು ಹೊಂದಿ ಇರುವುದರಿಂದ ಇವುಗಳು ಆತ್ಮನೆನಿಸಿಕೊಳ್ಳಲಾರವು. ಪ್ರಾಣವಾದರೆ ಸ್ವಾಪಕಾಲದಲ್ಲಿಯೂ ವಿಶ್ರಾಂತಿಯನ್ನು ಹೊಂದದೆ ಶ್ವಾಸೋಚ್ಛ್ವಾಸ ಮುಂತಾದ ತನ್ನ ಎಲ್ಲಾ ಕೆಲಸಗಳನ್ನೂ ನಡಸುತ್ತಲೇ ಇರುವುದಾದಕಾರಣ ಈ ಪ್ರಾಣವೇ ಆತ್ಮತತ್ತ್ವವೆಂದು

ಹೇಳಿಸಿಕೊಳ್ಳಲು ಯೋಗ್ಯವಾಗಿ ಇರುವುದೆಂಬ ಶಂಕೆ ಯದ್ಯಪಿ ಅಂಕುರಿಸು ವುದು; ಆದರೆ ಅದೂ ಯುಕ್ತವಲ್ಲ. ಏತಕ್ಕೆಂದರೆ—ಸ್ವಾಪಕಾಲದಲ್ಲಿಯೂ ತನ್ನ ವ್ಯಾಪಾರಗಳನ್ನು ನಡಸುತ್ತ ಜಾಗರೂಕವಾಗಿ ಇರುವ (ಎಚ್ಚರಗೊಂಡಿರುವ) ಪ್ರಾಣವೇ ಆತ್ಮತತ್ತ್ವವಾಗಿ ಇದ್ದ ಪಕ್ಷದಲ್ಲಿ ಆಗ ಪ್ರಾಣದ ಹೆಸರುಗಳನ್ನು ಹೇಳಿ ಸಂಬೋಧನೆಮಾಡಿ ಎಬ್ಬಿಸಿದರೆ ಆಗ ಆ ಪ್ರಾಣವೆಂಬ ಆತ್ಮನು ನಿದ್ರೆ ಯನ್ನು ಬಿಟ್ಟು ಏಳಬೇಕು; ಆದರೆ ಎಷ್ಟು ಕೂಗಿದರೂ ನಮ್ಮ ಕೂಗನ್ನು ಕೇಳ ದೆಯೇ ಆ ಪ್ರಾಣವು ತನ್ನ ಕೆಲಸವನ್ನೇ ನಡಸುತ್ತ ನಿದ್ರಾಸುಖದಲ್ಲೇ ಇರುವುದು.

ಈ ವಿಷಯವು ಬೃಹದಾರಣ್ಯಕೋಪನಿಷತ್ತಿನ ನಾಲ್ಕನೆಯ ಅಧ್ಯಾಯದ ಒಂದನೆಯ ಖಂಡದ ಹದಿನೈದನೆಯ ಮಂತ್ರದಲ್ಲಿ ಸ್ಪಷ್ಟವಾಗಿ ತೋರಿಸಲ್ಪಟ್ಟಿರು ವುದು ಹೇಗೆಂದರೆ—**“ಸ ಹೋವಾಚಾಜಾತಶತ್ರುಃ ಪ್ರತಿಲೋಮಂ ವೈತತ್ ಯದ್ಬ್ರಾಹ್ಮಣಃ ಕ್ಷತ್ರಿಯಮುಪೇಯಾತ್ ಬ್ರಹ್ಮ ಮೇ ವಕ್ಷ್ಯತೀತಿ ವ್ಯೇವ ತ್ವಾ ಜ್ಞಪಯಿಷ್ಯಾಮೀತಿ ತಂ ಪಾಣಾವಾದಾ ಯೋತ್ತಸ್ಥೌ ತೌ ಹ ಪುರುಷಂ ಸುಪ್ತಮಾಜಗ್ಮತುಃ ತಮೇತೈರ್ನಾ ಮಭಿರಾಮಂತ್ರಯಾಂಚಕ್ರೇ ಬೃಹನ್ ಪಾಂಡರವಾಸಃ ಸೋಮ ರಾಜನ್ನಿತಿ ಸ ನೋತ್ತಸ್ಥೌ ತಂ ಪಾಣಿನಾಪೇಷಂ ಬೋಧಯಾಂ ಚಕಾರ ಸ ಹೋತ್ತಸ್ಥೌ”**

**ಇದರ ಅಭಿಪ್ರಾಯವೇನೆಂದರೆ**—ಗಾರ್ಗ್ಯಗೋತ್ರದಲ್ಲಿ ಹುಟ್ಟಿದ ಬಲಾಕನೆಂಬುವನ ಪುತ್ರನಾದ **ಬಾಲಾಕಿ** ಎಂಬುವನು ಸಾಂಗವೇದಾಧ್ಯಯನ ವನ್ನು ಮಾಡಿ ಗರ್ವಿತನಾಗಿ ಬ್ರಹ್ಮಜ್ಞಾನಿಗಳೊಳಗೆ ತಾನೇ ಉತ್ಕೃಷ್ಟನಾಗಿ ಇರುವೆನೆಂದು ತಿಳಿದು—ಬ್ರಹ್ಮವಿದಗ್ರಗಣ್ಯನಾದ **ಅಜಾತಶತ್ರುವೆಂಬ** ಕಾಶೀ ರಾಜನ ಸಮೀಪಕ್ಕೆ ಹೋಗಿ ನಿನಗೆ ಬ್ರಹ್ಮತತ್ತ್ವವನ್ನು ಉಪದೇಶಿಸುತ್ತೇನೆಂದು ಹೇಳತೊಡಗಿದನು;

ಹೀಗೆ ಅವನೊಡನೆ ಬಹಳಹೊತ್ತು ವಿಚಾರವನ್ನು ನಡಸಿ ಕೊನೆಗೆ ತತ್ತ್ವ ವಿಷಯದಲ್ಲಿ ಆ ರಾಜನ ಜ್ಞಾನಕ್ಕಿಂತಲೂ ತನ್ನ ಜ್ಞಾನವು ಬಹಳ ಕಡಮೆಯಾ ದುದೆಂದು ತಿಳಿದುಕೊಂಡು ಬ್ರಹ್ಮಜ್ಞಾನವನ್ನು ಸಂಪೂರ್ಣವಾಗಿ ಸಂಪಾದಿಸ ಬೇಕೆಂಬ ಅಭಿಲಾಷೆಯಿಂದ ಅದೇ ರಾಜನನ್ನು ಆಚಾರ್ಯಭಾವದಿಂದ ವರಿಸಿ ತನ್ನ ವಿನಯಸಂಪತ್ತಿಯನ್ನೂ ತೋರಿಸಿದನು. ಆದರೆ ಪರಮಧಾರ್ಮಿಕನಾಗಿಯೂ ತತ್ತ್ವ ಜ್ಞಾನಿಗಳಲ್ಲಿ ಪ್ರಥಮಗಣನೆಗೆ ಅರ್ಹನಾಗಿಯೂ ಕ್ಷತ್ರಿಯಕುಲೋತ್ಪನ್ನನಾಗಿಯೂ

ಇರುವ ಆ ರಾಜಶ್ರೇಷ್ಠನು ಹೇಳಿದುದೇನೆಂದರೆ—"ಎಲೈ ಪೂಜ್ಯನೇ! ಆಚಾರ್ಯತ್ವದಲ್ಲಿ ಅಧಿಕಾರವನ್ನು ಪಡೆದಿರುವ ಬ್ರಾಹ್ಮಣವರ್ಣದವನು ಆಚಾರ್ಯತ್ವಕ್ಕೆ ಅರ್ಹನಲ್ಲದ ಕ್ಷತ್ರಿಯವರ್ಣದವನನ್ನು ಆಚಾರ್ಯಭಾವದಿಂದ ವರಿಸುವಿಕೆ ಶಾಸ್ತ್ರಮರ್ಯಾದೆಗೆ ವಿರುದ್ಧವಾಗಿ ಇರುವುದರಿಂದ ಇದನ್ನು ನಾನು ಒಪ್ಪಲಾರೆನು; ಆದರೆ ನಿನಗೆ ನನ್ನಲ್ಲಿ ಇರುವ ಬ್ರಹ್ಮವಿದ್ಯೆ ದೊರಕುವಬಗೆ ಹೇಗೆಂದು ಚಿಂತಿಸಬೇಡ. ಮೈತ್ರೀಭಾವದಿಂದಲೇ ನಿನ್ನ ಸನ್ನಿಧಿಯಲ್ಲಿ ಈ ಬ್ರಹ್ಮವಿದ್ಯೆಯನ್ನು ವಿಜ್ಞಾಪಿಸಿಕೊಳ್ಳುತ್ತೇನೆ" ಹೀಗೆಂದು ಹೇಳಿ ಆ ರಾಜೋತ್ತಮನು ಬಾಲಾಕಿಯ ಕೈಯನ್ನು ಹಿಡಿದುಕೊಂಡು—ತನ್ನ ಅರಮನೆಯೊಳಗೆ ಒಂದು ಪಕ್ಕದಲ್ಲಿ ಮಲಗಿ ನಿದ್ರಿಸುತ್ತಿರುವ ಒಬ್ಬ ಮನುಷ್ಯನ ಸಮೀಪಕ್ಕೆ ಬಂದು "**ಬೃಹನ್, ಪಾಂಡರವಾಸಃ, ಸೋಮ, ರಾಜನ್**" ಎಂಬ ನಾಲ್ಕು ಹೆಸರುಗಳಿಂದಲೂ ಅವನನ್ನು ಎಬ್ಬಿಸಿದನು; ಆದರೂ ಅವನು ಎಚ್ಚರಗೊಳ್ಳಲಿಲ್ಲ; ಆಗ ರಾಜನು ತನ್ನ ಕೈಯಿಂದ ಅವನನ್ನು ಅಮುಕಿ ಹಿಸಿಕಿ ಎಬ್ಬಿಸಿದನು; ಆಗ ಅವನು ಎಚ್ಚತ್ತು ಎದ್ದನು; ಈ ಕಥಾಸಂದರ್ಭದಲ್ಲಿ ರಾಜನ ಉದ್ದೇಶವೇನೆಂದರೆ—"ಈ ಬಾಲಾಕಿಯು—ದೇಹಕ್ಕಿಂತಲೂ ಇಂದ್ರಿಯಗಳಿಗಿಂತಲೂ ಆತ್ಮನು ಬೇರೊಬ್ಬನೆಂಬುದನ್ನು ಬಲ್ಲನು; ಆದರೆ ಪ್ರಾಣಕ್ಕಿಂತಲೂ ಬೇರೊಬ್ಬನಾಗಿ ಇರುವನೆಂಬ ಜ್ಞಾನವು ಇನ್ನೂ ಇವನಿಗೆ ದೃಢಪಟ್ಟದಾಗಿಲ್ಲ; ಪ್ರಾಣಕ್ಕಿಂತಲೂ ಆತ್ಮನು ಅತ್ಯಂತವಿಲಕ್ಷಣನಾಗಿ ಇರುವನೆಂಬ ಜ್ಞಾನದ ದಾರ್ಢ್ಯವನ್ನು ಇವನಿಗೆ ಉಂಟುಮಾಡಿಕೊಡುವೆನು" ಎಂಬುದೇ ರಾಜನ ಉದ್ದೇಶವಾಗಿ ಇದ್ದಿತು. ಇದಕ್ಕಾಗಿಯೇ—ಬಾಲಾಕಿಯನ್ನು ಮಲಗಿರುವವನ ಸಮೀಪಕ್ಕೆ ಕರೆದುಕೊಂಡು ಹೋಗಿ ಪ್ರಾಣದ ಹೆಸರುಗಳಿಂದಲೇ ಅವನನ್ನು ಎಬ್ಬಿಸಿ ಅದರಿಂದ ಅವನು ಎಚ್ಚರಗೊಳ್ಳಲಿಲ್ಲವೆಂಬುದನ್ನು ತೋರಿಸಿ ಉಪಾಯಾಂತರದಿಂದಲೇ ಅವನನ್ನು ಎಬ್ಬಿಸಿದನು. ನಿಜವಾಗಿಯೂ ಪ್ರಾಣವೇ ಆತ್ಮನಾಗಿ ಇದ್ದಪಕ್ಷದಲ್ಲಿ—ತನ್ನ ಹೆಸರುಗಳಿಂದಲೇ ತನ್ನನ್ನು ಕರೆದಾಗ ಆ ಪ್ರಾಣವು ಎದ್ದು ನಿಲ್ಲಬೇಕಾಗಿದ್ದಿತು. ಆ ಸಮಯದಲ್ಲಿ ಪ್ರಾಣವು ನಿದ್ರಿತವಾಗಿ ಇದ್ದಿತೆಂದು ಹೇಳಲಿಕ್ಕಿಲ್ಲ. ಶ್ವಾಸೋಚ್ಛ್ವಾಸಗಳೆಂಬ ತನ್ನ ಕೆಲಸಗಳನ್ನು ವಿಚ್ಛೇದವಿಲ್ಲದೆ ನಡಸುತ್ತ ಪ್ರಾಣವು ಆಗ ಜಾಗರೂಕವಾಗಿಯೇ ಇದ್ದಿತಷ್ಟೆ? ಜಾಗರೂಕನಾಗಿ ಇರುವವನ ಹೆಸರನ್ನು ಹೇಳಿ ಕೂಗಿದರೆ ಆಗ ಅವನು ತಪ್ಪದೆ ಅಭಿಮುಖನಾಗಿ ಎದ್ದು ಬರುವನಷ್ಟೆ? ಹೀಗೆ ತನ್ನ ಹೆಸರನ್ನು ಹಿಡಿದು ಕೂಗಿದರೂ ಪ್ರಾಣವು ಎದ್ದು ಬರಲಿಲ್ಲವಾದುದರಿಂದ ಆಹ್ವಾನವನ್ನು ಕೇಳುವ ಯೋಗ್ಯತೆಯೇ ಅದಕ್ಕೆ

ಇಲ್ಲವೆಂದೂ ಅತಏವ ಅದು ಅಚೇತನವೆಂದೂ ಹೇಳಿಸಿಕೊಳ್ಳುವುದಲ್ಲದೆ ಇದು ಚೇತನವೆನಿಸಿಕೊಳ್ಳಲಾರದು. ಆದುದರಿಂದಲೇ ಜೀವಶಬ್ದವಾಚ್ಯನಾದವನು ಪ್ರಾಣಕ್ಕಿಂತಲೂ ವಿಲಕ್ಷಣನಾಗಿ ಇರುವನು.

೧. ಉಕ್ತವಾದ ನಾಲ್ಕು ಹೆಸರುಗಳೂ ಪ್ರಾಣಕ್ಕೆ ಹೇಗೆ ಹೆಸರುಗಳಾದುವು? ಹೇಗೆ—"**ಪ್ರಾಣೋ ವಾವ ಜ್ಯೇಷ್ಠಶ್ಚ ಶ್ರೇಷ್ಠಶ್ಚ**" ಎಂದು ಪ್ರಾಣಕ್ಕೆ ಜ್ಯೇಷ್ಠತ್ವಶ್ರೇಷ್ಠತ್ವಗುಣಗಳನ್ನು ಹೇಳಿ ಇರುವುದರಿಂದ ಉಂಟಾದ ಮಹತ್ತ್ವವನ್ನು ಅನುಸರಿಸಿ "**ಬೃಹನ್**" ಎಂಬುದು ಪ್ರಾಣಕ್ಕೆ ಸಂಬೋಧನವಾಗಿ ಇರುವುದು;

೨. ಪ್ರಾಣವು—ನನಗೆ ವಸ್ತ್ರವು ಯಾವುದೆಂದು ಪ್ರಶ್ನೆಮಾಡಿದ ಸಂದರ್ಭದಲ್ಲಿ "**ಆಪೋ ವಾಸಃ**" ಎಂದು ಜಲವನ್ನೇ ಪ್ರಾಣಕ್ಕೆ ವಸ್ತ್ರವಾಗಿ ಹೇಳಿ ಇರುವುದರಿಂದಲೂ, "**ಯಚ್ಛುಕ್ಲಂ ತದಪಾಂ**" ಎಂದು ಜಲಕ್ಕೆ ಧಾವಳ್ಯವೇ ಸ್ವಾಭಾವಿಕರೂಪವೆಂದು ಹೇಳಿ ಇರುವುದರಿಂದಲೂ "**ಪಾಂಡರವಾಸಃ**" ಎಂಬುದೂ ಪ್ರಾಣಕ್ಕೆ ಸಂಬೋಧನವಾಗಿ ಇರುವುದು.

೩. "**ಅಥೈತಸ್ಯ ಪ್ರಾಣಸ್ಯಾಪಶ್ಶರೀರಂ ಜ್ಯೋತೀರೂಪಮಸೌ ಚಂದ್ರಃ**" ಎಂದು ಪ್ರಾಣಕ್ಕೆ ಚಂದ್ರಸಂಬಂಧವನ್ನು ಹೇಳಿ ಇರುವುದರಿಂದ "**ಸೋಮ**" ಎಂಬುದೂ ಪ್ರಾಣಕ್ಕೆ ಸಂಬೋಧನವಾಗಿ ಇರುವುದು.

೪. "**ಪ್ರಾಣೋ ವೈ ಸಮ್ರಾಟ್**" ಎಂದು ಪ್ರಾಣಕ್ಕೆ ಸಮ್ರಾಟ್ತ್ವವನ್ನು ಹೇಳಿ ಇರುವುದರಿಂದ "**ರಾಜನ್**" ಎಂಬುದೂ ಪ್ರಾಣಕ್ಕೆ ಸಂಬೋಧನವಾಗಿ ಇರುವುದು.

ಹೀಗೆ ಆಮಂತ್ರಣಶ್ರವಣಯೋಗ್ಯತೆಯಿಲ್ಲದ ಪ್ರಾಣಕ್ಕೆ ಅಚೇತನತ್ವವು ವ್ಯಕ್ತಪಟ್ಟುದರಿಂದ ಚೇತನನು ಪ್ರಾಣಕ್ಕಿಂತಲೂ ವಿಲಕ್ಷಣನೆಂಬುದು ಸ್ಫುಟವಾಯಿತು.

ಓಹೋ! "ಓ ಪ್ರತ್ಯಗಾತ್ಮನೇ! ಓ ವಿಜ್ಞಾನಸ್ವರೂಪನೇ!" ಎಂದು ಜೀವನ ಹೆಸರುಗಳನ್ನು ಹೇಳಿ ಕೂಗಿದಾಗ ಸ್ವಾಪಕಾಲದಲ್ಲಿ ಜೀವನೂ ಸಹ ಎದ್ದು ಬರುವುದಿಲ್ಲ; ಆಗ ನಿಮ್ಮ ಮನೋರಥದಂತೆ ಪ್ರಾಣವಿಲಕ್ಷಣನಾದವನಿಗೂ ಜೀವಶಬ್ದವಾಚ್ಯತ್ವವು ಸಿದ್ಧಿಸುವುದಿಲ್ಲವಷ್ಟೆ? ಎಂದು ಆಶಂಕಿಸಬೇಕಾದುದಿಲ್ಲ.

ಏತಕ್ಕೆಂದರೆ—ಈ ಸಂಸಾರಿಯಾದ ಜೀವನು ದೇಹೇಂದ್ರಿಯಪ್ರಾಣಗಳಿಗಿಂತಲೂ ವಿಲಕ್ಷಣವಾದ ಪರಿಶುದ್ಧಾತ್ಮಸ್ವರೂಪದಲ್ಲಿಯೇ ಆತ್ಮಾಭಿಮಾನವನ್ನು

ಇಟ್ಟಿದ್ದವನಾಗಿದ್ದರೆ ಅಂಥ ಹೆಸರುಗಳಿಂದ ಕರೆದಾಗ ಅವನು ಏಳುತ್ತಲೇ ಇದ್ದನು; ಆದರೆ ಅಂಥ ಶುದ್ಧಸ್ವರೂಪದಲ್ಲಿ ಇವನಿಗೆ ಆತ್ಮಾಭಿಮಾನವಿಲ್ಲವಾದುದರಿಂದ—ಶುದ್ಧಸ್ವರೂಪವನ್ನು ತೋರಿಸುವ ಹೆಸರುಗಳಿಂದ ಕರೆದಾಗ ಇವನು ಏಳದಿದ್ದುದು ದೋಷವಾಗುವುದಿಲ್ಲ. ದೇವದತ್ತ, ಯಜ್ಞದತ್ತ ಮುಂತಾದ ಸಂಕೇತನಾಮಗಳನ್ನು ಪಡೆದಿರುವ ಶರೀರೇಂದ್ರಿಯಪ್ರಾಣಾದಿಸಮುದಾಯದಲ್ಲಿಯೇ ಇವನಿಗೆ ಆತ್ಮಾಭಿಮಾನವಿರುವುದರಿಂದ ಅಂಥ ಹೆಸರುಗಳಿಂದ ಕರೆದರೆ ಆಗ ಇವನು ಎಚ್ಚರಗೊಂಡು ಎದ್ದುಬರುವುದನ್ನೂ ಲೋಕದಲ್ಲಿ ಪ್ರತ್ಯಕ್ಷವಾಗಿ ಕಂಡಿರುವೆವಷ್ಟೆ?

ಓಹೋ! ಜೀವನು ತನ್ನನ್ನು ಪ್ರತ್ಯಗಾತ್ಮನೆಂದೂ, ವಿಜ್ಞಾನಸ್ವರೂಪನೆಂದೂ ಅಭಿಮಾನಿಸುತ್ತಿರಲಿಲ್ಲವಾದಕಾರಣ ಆ ಶಬ್ದಗಳಿಂದ ಇವನು ಎಚ್ಚರಗೊಳ್ಳಲಿಲ್ಲವೆಂಬುದು ದೋಷವಲ್ಲವೆಂದು ಹೇಳುವುದಾದರೆ—ಇದೇ ನ್ಯಾಯವನ್ನು ಪ್ರಾಣದಲ್ಲಿಯೂ ಏಕೆ ಹೇಳಬಾರದು? ಪ್ರಾಣವೂ ಸಹ ತನ್ನನ್ನು—ಬೃಹನ್ ಎಂಬುದಾಗಿಯೂ, ಪಾಂಡರವಾಸಾಃ ಎಂಬುದಾಗಿಯೂ, ಸೋಮಃ ಎಂಬುದಾಗಿಯೂ, ರಾಜಾ ಎಂಬುದಾಗಿಯೂ ಅಭಿಮಾನಿಸುತ್ತಿರಲಿಲ್ಲವಾದಕಾರಣ ಈ ಹೆಸರುಗಳಿಂದ ಅದು ಎಚ್ಚರಗೊಳ್ಳಲಿಲ್ಲವೆಂಬುದು ದೋಷವಲ್ಲ; ಆದುದರಿಂದ ಪ್ರಾಣವೇ ಜೀವಶಬ್ದವಾಚ್ಯವಾಗಿ ಏಕೆ ಇರಬಾರದು? ಎಂದು ಆಶಂಕಿಸಲಾಗದು.

ಏತಕ್ಕೆಂದರೆ—ಶರೀರಾದಿಸಮುದಾಯದಲ್ಲಿ ಪ್ರಾಣಕ್ಕೆ ಆತ್ಮಾಭಿಮಾನವಿದ್ದುದಾದರೆ ಸ್ವಾಪಕಾಲದಲ್ಲಿಯೂ ಸ್ವವ್ಯಾಪಾರವಿಶ್ರಾಂತಿಯನ್ನು ಪಡೆಯದೆ ಎಚ್ಚರಗೊಂಡೇ ಇರುವ ಪ್ರಾಣಕ್ಕೆ ಕೈಯಿಂದ ಅಮುಕಿ ಹಿಸುಕಿದ ಮೇಲೆ ಪ್ರಬೋಧವೂ ಉತ್ಥಾನವೂ ಉಂಟಾದುವೆಂದು ಹೇಳಿದುದು ಅಸಂಗತವಾಗುವುದು. ಹಸ್ತಸಮ್ಮರ್ದಕ್ಕಿಂತಲೂ ಪೂರ್ವದಲ್ಲಿಯೇ ಎಚ್ಚರಗೊಂಡಿದ್ದ ಪ್ರಾಣಕ್ಕೆ—ಪೂರ್ವದಲ್ಲಿ ಇಲ್ಲದ ಪ್ರಬೋಧವು ಹಸ್ತಸಮ್ಮರ್ದಾನಂತರದಲ್ಲಿ ಉಂಟಾಯಿತೆಂದು ಹೇಳುವ ಮಾತು ಅಸಂಗತವಾಗುವುದಷ್ಟೆ? ಪ್ರಾಣವ್ಯತಿರಿಕ್ತನಾದ ಜೀವನಿಗಾದರೆ ಗಾಢನಿದ್ರೆಯನ್ನು ಅನುಭವಿಸುತ್ತಿರುವ ಕಾಲದಲ್ಲಿ ಇಲ್ಲದಿರುವ ಪ್ರಬೋಧವು ಹಸ್ತಸಮ್ಮರ್ದಾನಂತರದಲ್ಲಿ ಉಂಟಾಗಬಹುದಷ್ಟೆ?

ಓಹೋ! ಸ್ವಾಪಕಾಲದಲ್ಲಿ—ಹೇಗಾದರೆ ಪ್ರಾಣಕ್ಕೆ ಸ್ವವ್ಯಾಪಾರವಿಶ್ರಾಂತಿಯಿಲ್ಲವಾದುದರಿಂದ ಮೊದಲೇ ಪ್ರಬೋಧವಿರುವಕಾರಣ ಅನಂತರದಲ್ಲಿ ಪ್ರಬೋಧವೆಂಬುದು ಕೂಡುವುದಿಲ್ಲವೆಂದು ಹೇಳಿದಿರೋ—ಅದರಂತೆ ಜೀವನಿಗೂ ಸಹ ಸ್ವಾಪಕಾಲದಲ್ಲಿ ಸ್ವವ್ಯಾಪಾರವು ನಡೆಯುತ್ತಲೇ ಇರುವುದರಿಂದ ಮೊದಲೇ

ಪ್ರಬೋಧಪಿರುಪಕಾರಣ ಹಸ್ತಸಮ್ಮರ್ದಾನಂತರದಲ್ಲಿ ಪ್ರಬೋಧವೆಂಬುದು ಹೇಗೆ ಕೂಡೀತು? ಎಂದು ಆಶಂಕಿಸಲಾಗದು;

ಏತಕ್ಕೆಂದರೆ—ಸ್ವಾಪಕಾಲದಲ್ಲಿ ಸ್ವಸ್ವರೂಪಗ್ರಹಣವೆಂಬ ಸ್ಫುರಣವ್ಯಾಪಾರವು ಜೀವನಿಗೆ ಸಡೆಯುತ್ತಿದ್ದರೂ ಅದು ಪ್ರಬೋಧವಲ್ಲ. ಇಂದ್ರಿಯಗಳ ಮೂಲಕವಾಗಿ ಜ್ಞಾನದ ಪ್ರಸರಣವೇ ಪ್ರಬೋಧವೆನಿಸಿಕೊಳ್ಳುವುದು. ಅದು ಜೀವನಿಗೆ ಸ್ವಾಪಕಾಲದಲ್ಲಿ ಇರಲಿಲ್ಲವಾದುದರಿಂದ ಹಸ್ತಸಂಮರ್ದಾನಂತರದಲ್ಲಿ ಉಂಟಾಗಬಹುದು; ಪ್ರಾಣಕ್ಕಾದರೆ ಶರೀರದ ಸರ್ವಭಾಗದಲ್ಲಿಯೂ ಸಂಚಾರವು ಸ್ವಾಪಕಾಲದಲ್ಲಿಯೂ ಇದ್ದೇ ಇರುವುದರಿಂದ ಪ್ರಾಣದ ಎಲ್ಲಾ ಕೆಲಸಗಳೂ ಆಗಲೂ ಸಡೆಯುತ್ತಲೇ ಇರುವುವಾದಪ್ರಯುಕ್ತ ಹಸ್ತಸಂಮರ್ದಾನಂತರದಲ್ಲಿ ಉಂಟಾಗಬೇಕಾದ ಹೊಸ ವ್ಯಾಪಾರಗಳಾವುವೂ ಇಲ್ಲ. ಸರ್ವವ್ಯಾಪಾರಪ್ರವೃತ್ತಿಯೆಂಬ ಪ್ರಬೋಧವು ಮೊದಲೇ ಪ್ರಾಣಕ್ಕೆ ಇರುವುದು. ಅಂಥ ಸಮಯದಲ್ಲಿ ತನ್ನ ಹೆಸರುಗಳಿಂದ ತನ್ನನ್ನು ಆಮಂತ್ರಣಮಾಡಿದರೆ ಪ್ರಾಣವು ಅದನ್ನು ಆವಶ್ಯಕವಾಗಿಯೂ ಶ್ರವಣಮಾಡಬೇಕಾಗಿದ್ದಿತು. ಆದರೂ ಪ್ರಾಣವು ಶ್ರವಣಮಾಡಲಿಲ್ಲವೆಂಬುದು ಪ್ರಾಣಕ್ಕೆ ಅಚೇತನತ್ವವನ್ನೇ ವ್ಯಕ್ತಪಡಿಸುವುದಾದಕಾರಣ ಚೇತನನೆಂಬುವನು ಪ್ರಾಣಕ್ಕಿಂತಲೂ ವಿಲಕ್ಷಣನಾದವನೆಂಬುದು ಸಿದ್ಧವಾಗುವುದು. ಆದುದರಿಂದ ಪ್ರಾಣಗಳೇ ಆತ್ಮತತ್ತ್ವವಾಗಲಾರವು.

**ಇಂತು ತತ್ತ್ವಶುದ್ಧಿಯೆಂಬ ವಿಶಿಷ್ಟಾದ್ವೈತಪ್ರಕರಣಗ್ರಂಥದೊಳ್ ಜೀವಪರಿಚ್ಛೇದದಲ್ಲಿ ಆತ್ಮನಿಗೆ ಬಹಿರಿಂದ್ರಿಯಮನಃ ಪ್ರಾಣಭಿನ್ನತ್ವಸಮರ್ಥನಪ್ರಕರಣಂ ತೃತೀಯಂ ॥೩॥**

## ಚತುರ್ಥಪ್ರಕರಣಂ

**೩೭೭. ಲಾಘವಾದುಭಯವಾದಿಸಂಪ್ರತಿಪನ್ನಾಯಾ ಬುದ್ಧೇರೇವ ಆತ್ಮತ್ವಾಭ್ಯುಪಗಮಪೂರ್ವಪಕ್ಷಃ**

ಈ ಸಂದರ್ಭದಲ್ಲಿ ಬೌದ್ಧರು ಬುದ್ಧಿಯೇ ಆತ್ಮತತ್ತ್ವವೆನಿಸಿಕೊಳ್ಳುವುದೆಂದು ಪ್ರತ್ಯವಸ್ಥಾನವನ್ನು ಮಾಡುವರು (ಪ್ರತಿಯಾಗಿ ನಿಲ್ಲುವರು.)

ಹೇಗೆಂದರೆ—ದೇಹ, ಇಂದ್ರಿಯ, ಮನಸ್ಸು, ಪ್ರಾಣ, ಇವುಗಳು ಆತ್ಮತತ್ತ್ವವೆನಿಸಿಕೊಳ್ಳಲಾರವಾದರೆ ಹೋಗಲಿ: ಬುದ್ಧಿಯೇ ಆತ್ಮತತ್ತ್ವವೆನಿಸಿಕೊಳ್ಳಲು ಅಡ್ಡಿಯೇನು? ಏತಕ್ಕೆಂದರೆ ಬುದ್ಧಿಯೆಂಬುದು ವಾದಿಪ್ರತಿವಾದಿಗಳಿಬ್ಬರಿಂದಲೂ ವಿವಾದವಿಲ್ಲದೆ ಅಂಗೀಕರಿಸಲ್ಪಟ್ಟ ತತ್ತ್ವವಾಗಿ ಇರುವುದು. ಬುದ್ಧಿಗಿಂತಲೂ ಅತಿರಿಕ್ತವಾದ ಆತ್ಮತತ್ತ್ವವನ್ನು ಸ್ವೀಕರಿಸುವವರೂ ಬುದ್ಧಿತತ್ತ್ವವನ್ನು ಅಪಲಪಿಸುವುದಿಲ್ಲವಷ್ಟೆ. ಅತಿರಿಕ್ತವಾದ ಆತ್ಮತತ್ತ್ವವೊಂದನ್ನು ಒಪ್ಪಿಕೊಂಡು ಗೌರವವನ್ನು ವಹಿಸುವುದಕ್ಕಿಂತಲೂ ಉಭಯವಾದಿಸಂಪ್ರತಿಪನ್ನವಾದ ಬುದ್ಧಿತತ್ತ್ವಕ್ಕೆ ಆತ್ಮತ್ವವನ್ನು ಅಂಗೀಕರಿಸಿ ಲಾಘವವನ್ನು ಸ್ವೀಕರಿಸುವುದೇ ನ್ಯಾಯ್ಯವಾಗಿ ಇರುವುದು. "**ಧರ್ಮಿಕಲ್ಪನಾತೋ ವರಂ ಧರ್ಮಕಲ್ಪನಾ**" ಎಂದು ನ್ಯಾಯದರ್ಶಿಗಳಾದ ಮೀಮಾಂಸಕರೂ ಹೇಳುವರು; ಎಂದರೆ ಅತಿರಿಕ್ತವಾದ ಧರ್ಮಿಯೊಂದನ್ನು ಕಲ್ಪಿಸಿ ಅದರಲ್ಲಿ ಆತ್ಮತ್ವವೆಂಬ ಧರ್ಮವನ್ನು ಕಲ್ಪನೆಮಾಡುವುದಕ್ಕಿಂತಲೂ—ಉಭಯವಾದಿಗಳಿಂದಲೂ ವಿವಾದವಿಲ್ಲದೆ ಮೊದಲೇ ಅಂಗೀಕರಿಸಲ್ಪಟ್ಟಿರುವ ಬುದ್ಧಿಯೆಂಬ ಧರ್ಮಿಯಲ್ಲಿ ಆತ್ಮತ್ವವೆಂಬ ಧರ್ಮವನ್ನು ಮಾತ್ರ ಕಲ್ಪನೆ ಮಾಡಿದರೆ ಲಾಘವವಿರುವುದರಿಂದ ಇದೇ ಯುಕ್ತವಾಗಿ ಇರುವುದು. "ಆದಕಾರಣ ಬುದ್ಧಿಯೇ ಆತ್ಮತತ್ತ್ವವೆನಿಸಿಕೊಳ್ಳುವುದು" ಎಂಬುದು **ಬೌದ್ಧರ** ಸಿದ್ಧಾಂತವಾಗಿ ಇರುವುದು.

## ೩೭೮. ಆತ್ಮಧರ್ಮತ್ವಾತ್ ಅಸ್ಥಿರತ್ವಾಚ್ಚ ಬುದ್ಧೇರಾತ್ಮತ್ವಾನುಪಪತ್ತಿಃ.

ಬೌದ್ಧರ ಈ ಮತವು ಸಂಗತವಾದುದಲ್ಲ. ಏತಕ್ಕೆಂದರೆ—ಬುದ್ಧಿಯೆಂದರೆ ಜ್ಞಾನವು. ಇದು ಜ್ಞಾನಾಶ್ರಯನಾದ ಆತ್ಮನಿಗೆ ಯಾವಾಗಲೂ ಧರ್ಮವಾಗಿಯೇ ತೋರುವುದರಿಂದ ಧರ್ಮಿಯಾಗಲಾರದು. ಮತ್ತು—"ನನಗೆ ಜ್ಞಾನವು ಉಂಟಾಯಿತು, ನನಗೆ ಜ್ಞಾನವು ನಷ್ಟವಾಯಿತು" ಎಂಬ ಅಬಾಧಿತವಾದ ವ್ಯವಹಾರದಿಂದ ಜ್ಞಾನವು ನಶ್ವರವೆಂದು ತೋರುವುದು. ನಶ್ವರವಾದ ಜ್ಞಾನವು ಅನಶ್ವರವಾದ ಆತ್ಮತತ್ತ್ವವಾಗಲಾರದು. "ಯಾವ ನಾನು ಪೂರ್ವದಲ್ಲಿ ದುಃಖವನ್ನು ಅನುಭವಿಸಿದೆನೋ ಅದೇ ನಾನು ಈಗ ಸುಖವನ್ನು ಅನುಭವಿಸುತ್ತಿರುವೆನು" ಎಂಬ ಪ್ರತ್ಯಭಿಜ್ಞಾಪ್ರತ್ಯಕ್ಷದಿಂದ ಆತ್ಮತತ್ತ್ವವು ಜ್ಞಾನಾಶ್ರಯವೆಂಬುದಾಗಿಯೂ ಅನಶ್ವರ (ನಿತ್ಯ) ವೆಂಬುದಾಗಿಯೂ ಸಿದ್ಧವಾಗಿ ಇರುವುದಷ್ಟೆ.

## ೩೭೯. ಆತ್ಮಸ್ಥಿರತ್ವಗ್ರಾಹಿಪ್ರತ್ಯಭಿಜ್ಞಾಯಾಃ ಭ್ರಾಂತಿರೂಪತ್ವಾಸಂಭವಃ.

"ನೇದಂ ರಜತಂ" ಎಂಬ ಉತ್ತರಕಾಲಿಕವಾದ ಪ್ರತ್ಯಕ್ಷರೂಪಬಾಧಕಜ್ಞಾನದಿಂದ ಬಾಧಿಸಲ್ಪಡುವುದಾದಕಾರಣ "ಇದಂ ರಜತಂ" ಎಂಬ ಪೂರ್ವಕಾಲಿಕವಾದ ಪ್ರತ್ಯಕ್ಷವನ್ನು ಭ್ರಾಂತಿಯೆಂದು ಹೇಳಬಹುದು. ಅದರಂತೆ ಈ ಪ್ರತ್ಯಭಿಜ್ಞಾಪ್ರತ್ಯಕ್ಷವನ್ನು ಭ್ರಾಂತಿಯೆಂದು ಹೇಳಲು ಶಕ್ಯವಲ್ಲ. "ಸ ಏವಾಹಂ" ಎಂಬ ಈ ಪ್ರತ್ಯಕ್ಷಕ್ಕೆ "ನಾಹಂ ಸಃ" ಎಂಬ ಬಾಧಕಜ್ಞಾನವು ಅದರಂತೆ ಉತ್ತರಕಾಲದಲ್ಲಿ ಯಾವಾಗಲೂ ಉಂಟಾಗುವುದೇ ಇಲ್ಲವಷ್ಟೆ.

## ೩೮೦. ಉಕ್ತಪ್ರತ್ಯಭಿಜ್ಞಾವಿಷಯೇ ಯೌಕ್ತಿಕಬಾಧಸ್ಯಾಪ್ಯಸಂಭವಃ

ಪೂಜ್ಯರೇ! "ಈ ಪ್ರತ್ಯಭಿಜ್ಞಾಪ್ರತ್ಯಕ್ಷಕ್ಕೆ ಪ್ರಬಲಪ್ರಮಾಣದಿಂದ ಬಾಧೆಯನ್ನು ಹೇಳುವುದಕ್ಕೆ ಆಗದಿದ್ದರೂ ಪ್ರಬಲಯುಕ್ತಿಯಿಂದ ಬಾಧೆಯನ್ನು ಹೇಳಬಹುದು; ಅಚಿತ್ತತ್ತ್ವಪರಿಚ್ಛೇದದಲ್ಲಿ ಕ್ಷಣಿಕತ್ವವಾದವನ್ನು ನಡಸುವಾಗ ನಾವು ತೋರಿಸಿದ—"ಯತ್ ಸತ್ ತತ್ ಕ್ಷಣಿಕಂ ಯಥಾ ಜಲಧರಪಟಲಂ" ಎಂಬ ಅನುಮಾನದ ರೀತಿಯಲ್ಲಿ ಸತ್ತ್ವವೆಂಬ ಹೇತುವಿನಿಂದ ಆತ್ಮತತ್ತ್ವಕ್ಕೆ ಕ್ಷಣಿಕತ್ವವು ಸಿದ್ಧಿಸುವುದಾದಕಾರಣ ಇಂಥ ಆತ್ಮತತ್ತ್ವಕ್ಕೆ ಸ್ಥಿರತ್ವವನ್ನು ತೋರಿಸುವ ಪ್ರತ್ಯಭಿಜ್ಞಾಪ್ರತ್ಯಕ್ಷಕ್ಕೆ ಯೌಕ್ತಿಕಬಾಧೆ ಇರುವುದೆಂದು ಹೇಳಬಹುದಷ್ಟೆ?" ಎಂದು ಆಶಂಕಿಸುವುದಕ್ಕೂ ಅವಕಾಶವಿಲ್ಲ. ಏತಕ್ಕೆಂದರೆ ಕ್ಷಣಿಕತ್ವಸಾಧಕಗಳಾದ ಯುಕ್ತಿಗಳನ್ನೆಲ್ಲಾ ಹಿಂದೆಯೇ ನಾವು ಖಂಡಿಸಿರುವೆವಷ್ಟೆ.

## ೩೮೧. ಉಕ್ತಪ್ರತ್ಯಭಿಜ್ಞಾಯಾಃ ಭ್ರಾಂತಿತ್ವಾಭ್ಯುಪಗಮೇಽಪಿ ಆತ್ಮನಃ ಸ್ಥಿರತ್ವೋಪಪತ್ತಿಃ.

ಒಂದುವೇಳೆ ಈ ಪ್ರತ್ಯಭಿಜ್ಞಾಪ್ರತ್ಯಕ್ಷಕ್ಕೆ ಭ್ರಾಂತಿರೂಪತ್ವವನ್ನು ಅಂಗೀಕರಿಸಿದರೂ ಅದರಿಂದಲೂ ಆತ್ಮನಿಗೆ ಸ್ಥಿರತ್ವವೇ ಸಿದ್ಧಿಸುವುದಲ್ಲದೆ ಅಸ್ಥಿರತ್ವವೆಂಬ ನಿಮ್ಮ ಇಷ್ಟವು ಸಿದ್ಧಿಸುವುದಿಲ್ಲ. ಆತ್ಮವಿಷಯದಲ್ಲಿ ಪ್ರತ್ಯಭಿಜ್ಞೆಯುಂಟಾಗುವುದಾದರೂ, ಪೂರ್ವಾನುಭೂತವಾದ ಘಟಾದಿವಿಷಯಗಳಲ್ಲಿ ಪ್ರತ್ಯಭಿಜ್ಞೆಯುಂಟಾಗುವುದಾದರೂ, ಅಥವಾ ಸ್ಮರಣಸಾಮಾನ್ಯವುಂಟಾಗುವುದಾದರೂ ಅನುಭವಜನ್ಯವಾದ ಸಂಸ್ಕಾರವು ಬೇಕಾಗಿರುವುದು; ಅಂಥ ಸಂಸ್ಕಾರಕ್ಕೆ ಆಶ್ರಯನಾದ ಆತ್ಮನೊಬ್ಬನು ಸ್ಥಿರನಾಗಿ ಇದ್ದರಲ್ಲವೆ ಅವನಲ್ಲಿ ಪ್ರಥಮತಃ ಅನುಭವವೂ, ಅದರಿಂದ ಸಂಸ್ಕಾರವೂ, ಉಂಟಾಗಿ, ಕಾಲಾಂತರದಲ್ಲಿ ಅಂಥ ಸಂಸ್ಕಾರದಿಂದ ಆತ್ಮಪ್ರತ್ಯ

ಭಿಜ್ಞೆಯಾಗಲಿ ಘಟಾದಿವಿಷಯಪ್ರತ್ಯಭಿಜ್ಞೆಯಾಗಲಿ ಸ್ಮರಣಸಾಮಾನ್ಯವಾಗಲಿ ಉಂಟಾಗಬಹುದು? ಇವುಗಳೊಳಗೆ ಒಂದೊಂದರಿಂದಲೇ ಸ್ಥಿರತ್ವವು ಸಿದ್ಧಿಸುವುದಾದಕಾರಣ ಆತ್ಮನಿಗೆ ಅಸ್ಥಿರತ್ವವನ್ನು ಹೇಳಲಾಗುವುದಿಲ್ಲ.

## ೩೮೨. ಅನುಭವಸಂಸ್ಕಾರಸ್ಮರಣಾನಾಂ ಸಾಮಾನಾಧಿಕರಣ್ಯಾತ್ ಆತ್ಮನಃ ಸ್ಥಿರತ್ವಮೇವ.

ಇನ್ನೊಬ್ಬನು ಅನುಭವಿಸಿದ ಪದಾರ್ಥದ ವಿಷಯದಲ್ಲಿ ಮತ್ತೊಬ್ಬನಿಗೆ ಸ್ಮರಣವು ಉಂಟಾಗುವುದಿಲ್ಲವಾದುದರಿಂದ ಅನುಭವವುಳ್ಳವನಿಗೇ ಸ್ಮರಣವು ಉಂಟಾಗುವುದೆಂದು ನಾವೆಲ್ಲರೂ ತಿಳಿದಿರುವೆವು. ಆದರೆ ಸ್ಮರಣಕಾಲದಲ್ಲಿ ಅನುಭವವಿಲ್ಲವಾದುದರಿಂದ ಸ್ಮರಣಕ್ಕೆ ಅನುಭವವು ಹೇಗೆ ಕಾರಣವಾದೀತೆಂದು ಸಂದೇಹಿಸಬಾರದು; ಸ್ಮರಣಕಾಲದಲ್ಲಿ ಅನುಭವವು ನಿಜಸ್ವರೂಪದಿಂದ ಇಲ್ಲದಿದ್ದರೂ, ಅನುಭವಕ್ಕೆ ಆಶ್ರಯನಾದ ಆತ್ಮನಲ್ಲಿ ಸಂಸ್ಕಾರವೆಂಬ ಒಂದು ಅತಿಶಯವನ್ನು ಅದು ಉಂಟುಮಾಡಿ ಇರುವುದು. ಅಂಥ ಸಂಸ್ಕಾರವು ಈಗ ಸ್ಮರಣೆಯನ್ನು ಉಂಟುಮಾಡುವುದು. ಅಂತು ಅನುಭವ—ಸಂಸ್ಕಾರ—ಸ್ಮರಣೆಗಳು ಏಕಾಧಿಕರಣದಲ್ಲಿಯೇ ಉಂಟಾಗುವುವಾದುದರಿಂದ ಅಂಥ ಅಧಿಕರಣವಾದ ಆತ್ಮತತ್ತ್ವಕ್ಕೆ ಸ್ಥಿರತ್ವವೇ ಸಿದ್ಧಿಸುವುದು.

## ೩೮೩. ಆತ್ಮಾಸ್ಥಿರತ್ವವಾದಿನಾಂ ಕಾಲಾಂತರಭಾವಿಫಲೇ ಮದೀಯತ್ವಜ್ಞಾನಾಭಾವಾತ್ ಸ್ವಪ್ರವೃತ್ತಿವಿರೋಧಃ

ಮತ್ತು ಆತ್ಮತತ್ತ್ವಕ್ಕೆ ಅಸ್ಥಿರತ್ವವನ್ನು ಹೇಳುವವರು ಸ್ವಪ್ರವೃತ್ತಿವಿರೋಧವನ್ನೂ ಸಹ ಪರ್ಯಾಲೋಚಿಸದಷ್ಟು ವಿವೇಕಶೂನ್ಯರೆಂದು ಹೇಳಬೇಕಾಗುವುದು. ಏತಕ್ಕೆಂದರೆ—ಆತ್ಮನಿಗೆ ಅಸ್ಥಿರತ್ವವನ್ನು ಯಾರು ಹೇಳುವರೋ ಅವರೇ—ಕಾಲಾಂತರದಲ್ಲಿ ಉಂಟಾಗುವ ಫಲಪ್ರಾಪ್ತಿಗಾಗಿ ಈಗ ಸಾಧನಾನುಷ್ಠಾನದಲ್ಲಿ ಶಂಕೆಯಿಲ್ಲದೆ ಪ್ರವರ್ತಿಸುವರು—ಮುಂದಿನವರ್ಷದ ಸಸ್ಯಾದಿಪ್ರಾಪ್ತಿಗಾಗಿ ಈಗಲಿಂದಲೇ ಕೃಷಿ ಮುಂತಾದ ಸಾಧನಗಳ ಅನುಷ್ಠಾನದಲ್ಲಿ ಇವರು ಪ್ರವರ್ತಿಸುತ್ತಲೇ ಇರುವರೆಂಬುದು ಪ್ರತ್ಯಕ್ಷಸಿದ್ಧವಷ್ಟೆ? ಫಲಪ್ರಾಪ್ತಿಯವರೆಗೂ ನಾನು ಸ್ಥಿರನಾಗಿ ಇರುವೆನೆಂದು ದೃಢವಾಗಿ ತಿಳಿದುಕೊಂಡಿರುವವನಿಗಲ್ಲವೆ ಅದರ ಸಾಧನಾನುಷ್ಠಾನದಲ್ಲಿ ಪ್ರವೃತ್ತಿ ಸಂಭವಿಸಬಹುದು? ಮಳೆಗಾಲದವರೆಗೂ ತಾವೇ ಜೀವಿಸಿ ಇರುವೆವೆಂದು ತಿಳಿದು ಅಂಥ ಮಳೆಯಿಂದ ತಮಗೆ ಆವುದೊಂದು ತೊಂದರೆಯೂ ಸಂಭವಿಸದೆ ಇರಬೇಕೆಂಬ ಉದ್ದೇಶದಿಂದಲ್ಲವೆ ದೃಢತರವಾದ ಮನೆಯನ್ನು

ಕಟ್ಟುವರು. ಇಂಥ ಸಾಧನಾನುಷ್ಠಾನಗಳಲ್ಲಿ ಪ್ರವೃತ್ತಿ ನಿನಗೆ ಹೇಗೆ ಸಂಗತವಾದೀತೆಂದು ಕೇಳಿದರೆ ಆಗ ಆತ್ಮಾಸ್ಥಿರತ್ವವಾದಿಗಳು ಮೂಗರಾಗಬೇಕಾಗುವುದಲ್ಲದೆ ಸಮಂಜಸವಾದ ಉತ್ತರವನ್ನು ಹೇಳಲಾರರು.

ಅಂತು—ಆತ್ಮನಿಗೆ ಸ್ಥಿರತ್ವವನ್ನು ಒಪ್ಪಿಕೊಳ್ಳದೆ ಅಸ್ಥಿರತ್ವವನ್ನು ಹೇಳುವುದಾದರೆ ಕಾಲಾಂತರದಲ್ಲಿ ಉಂಟಾಗುವ ಫಲವು ಸಿದ್ಧಿಸುವುದಕ್ಕಿಂತಲೂ ಪೂರ್ವದಲ್ಲಿಯೇ ನಾನು ನಷ್ಟನಾಗಿ ಹೋಗುವೆನೆಂಬ ನಿಶ್ಚಯವೇ ಇವನಿಗೆ ಇರುವ ಕಾರಣ—ತನ್ನ ನಾಶಾನಂತರದಲ್ಲಿ ಉಂಟಾಗುವ ಫಲದಲ್ಲಿ ಮದೀಯತ್ವಜ್ಞಾನವಿಲ್ಲದೆ ಮದೀಯವಲ್ಲವೆಂಬ ನಿಶ್ಚಯವೇ ಇರುವುದರಿಂದ ಅನ್ಯದೀಯಫಲಕ್ಕಾಗಿ ಅನ್ಯನು ಅತ್ಯಂತಾಯಾಸಪ್ರದವಾದ ಸಾಧನಾನುಷ್ಠಾನದಲ್ಲಿ ಪ್ರವರ್ತಿಸಲಾಗದು.

## ೩೮೪. ಅನ್ಯದೀಯಫಲಾರ್ಥಮಪಿ ಅನ್ಯಸ್ಯ ಪ್ರವೃತ್ತ್ಯುಪಪತ್ತ್ಯಾಶಂಕಾ.

ಪೂಜ್ಯರೇ! ಫಲದಲ್ಲಿ ಸ್ವಸಂಬಂಧಿತ್ವಜ್ಞಾನವುಳ್ಳುವನೇ ಅದರ ಸಾಧನಾನುಷ್ಠಾನದಲ್ಲಿ ಪ್ರವರ್ತಿಸುವನೆಂಬ ನಿಯಮವನ್ನು ಹೇಳಲಾಗುವುದಿಲ್ಲ; ಅನ್ಯಸಂಬಂಧಿಫಲಕ್ಕಾಗಿಯೂ ಅನ್ಯನು ಪ್ರವರ್ತಿಸಬಹುದು. ಆದುದರಿಂದಲೇ ಶ್ರುತಿಯೂ ಸಹ **"ವೈಶ್ವಾನರಂ ದ್ವಾದಶಕಪಾಲಂ ನಿರ್ವಪೇತ್ಪುತ್ರೇ ಜಾತೇ"** ಎಂಬ ವಿಧಿವಾಕ್ಯದಿಂದ—ಆಹಿತಾಗ್ನಿಯಾದ ತಂದೆಗೆ ಪುತ್ರೋತ್ಪತ್ತಿರೂಪವಾದ ನಿಮಿತ್ತವುಂಟಾದ ಸಂದರ್ಭದಲ್ಲಿ ನೈಮಿತ್ತಿಕವಾದ ವೈಶ್ವಾನರೇಷ್ಟಿ ಅವಶ್ಯಕರ್ತವ್ಯವೆಂದು ವಿಧಿಸಿ, ಈ ಯಾಗವು ನೈಮಿತ್ತಿಕವಾಗಿ ಇದ್ದರೂ ಇದಕ್ಕೆ ಕಾಮ್ಯತ್ವವೂ ಇರುವುದರಿಂದ ಈ ಯಾಗದಿಂದ ಅನೇಕಫಲಗಳು ಉಂಟಾಗುವುವೆಂದೂ, ಆ ಫಲಗಳೂ ಸಹ ಪುತ್ರನಿಗಲ್ಲದೆ ಯಾಗಕರ್ತೃವಾದ ತಂದೆಗಲ್ಲವೆಂದೂ, **"ಯಸ್ಮಿನ್ ಜಾತ ಏತಾಮಿಷ್ಟಿಂ ನಿರ್ವಪತಿ ಪೂತ ಏವ ತೇಜಸ್ವ್ಯನ್ನಾದ ಇಂದ್ರಿಯಾವೀ ಪಶುಮಾನ್ ಭವತಿ"** ಎಂಬ ಮುಂದಿನ ವಾಕ್ಯಶೇಷದಿಂದ ಅದೇ ಶ್ರುತಿ ತೋರಿಸುವುದು. ಆದಕಾರಣ ಅನ್ಯಸಂಬಂಧಿಯಾದ ಫಲಕ್ಕಾಗಿಯೂ ಅನ್ಯನಿಗೆ ಸಾಧನಾನುಷ್ಠಾನದಲ್ಲಿ ಪ್ರವೃತ್ತಿಯುಂಟಾಗಲು ತಡೆಯಿಲ್ಲ.

ಪ್ರಕೃತದಲ್ಲಿ ಜ್ಞಾನವೆಂಬ ಆತ್ಮವಸ್ತು ಅನಿತ್ಯವಾಗಿ ಇದ್ದರೂ ಉತ್ತರೋತ್ತರಜ್ಞಾನವು ಪೂರ್ವಪೂರ್ವಜ್ಞಾನಜನ್ಯವಾದುದರಿಂದ ತನ್ನ ಸಂತತಿಯಾದ ಉತ್ತರೋತ್ತರಜ್ಞಾನದಲ್ಲಿ ಫಲವುಂಟಾಗುವುದಕ್ಕಾಗಿ ಪೂರ್ವಪೂರ್ವಜ್ಞಾನಕ್ಕೆ ಸಾಧನಾನುಷ್ಠಾನದಲ್ಲಿ ಪ್ರವೃತ್ತಿಯುಂಟಾಗಲು ಯಾವ ಅಡ್ಡಿಯೂ ಇಲ್ಲ" ಎಂದು ಆಶಂಕಿಸಬಾರದು.—

## ೩೮೫. ತನ್ನಿರಾಕರಣಂ.

ಏತಕ್ಕೆಂದರೆ—ಶ್ರುತಿರೂಪವಾದ ಉಕ್ತಪ್ರಬಲಪ್ರಮಾಣದಿಂದ ಕೆಲವು ಕಡೆಗಳಲ್ಲಿ ಅನ್ಯಸಂಬಂಧಿಫಲಕ್ಕಾಗಿ ಅನ್ಯನಿಗೆ ಪ್ರವೃತ್ತಿಯುಂಟಾದರೂ ಸರ್ವತ್ರ ಅದೇ ನ್ಯಾಯವು ಬರಲಾರದು. ಕಾಲಾಂತರಭಾವಿಯಾದ ಸ್ವಸಂಬಂಧಿಫಲಕ್ಕಾಗಿಯೂ ಪ್ರವೃತ್ತಿ ಲೋಕದಲ್ಲಿ ಕಾಣುವುದಷ್ಟೆ? ಕ್ಷುದ್ಬಾಧೆಯಿಂದ ಪೀಡಿತನಾದವನು—ಕ್ಷುನ್ನಿವೃತ್ತಿಯೆಂಬ ಫಲವು ತನಗೆ ಉಂಟಾಗಬೇಕೆಂಬ ಉದ್ದೇಶದಿಂದಲೇ ಭೋಜನಾದಿಸಾಧನಾನುಷ್ಠಾನದಲ್ಲಿ ಪ್ರವರ್ತಿಸುವನು. ಅಷ್ಟುಮಾತ್ರದಿಂದಲೇ ಫಲಪ್ರಾಪ್ತಿಪರ್ಯಂತವೂ ಆತ್ಮನಿಗೆ ಸ್ಥಿರತ್ವವೇ ಸಿದ್ಧವಾಗುವುದರಿಂದ ಕ್ಷಣಿಕತ್ವಕ್ಕೆ ಅವಕಾಶವಿಲ್ಲ.

ಆತ್ಮನಲ್ಲಿ ಸ್ಥಿರತ್ವಭ್ರಾಂತಿಯಿಂದ ಭೋಜನಾದಿಸಾಧನಾನುಷ್ಠಾನದಲ್ಲಿ ಪ್ರವರ್ತಿಸುವನೆಂದು ಹೇಳುವುದಾದರೆ ಇದಕ್ಕೆ ಸಮಾಧಾನವನ್ನು ಮೊದಲೇ ಹೇಳಿ ಇರುವೆವು. ಸ್ಥಿರತ್ವಪ್ರತ್ಯಕ್ಷಕ್ಕೆ ಯಾವಾಗಲೂ ಬಾಧಜ್ಞಾನವೇ ಉಂಟಾಗುವುದಿಲ್ಲವಾದುದರಿಂದ ಭ್ರಾಂತಿತ್ವವನ್ನು ಕಲ್ಪಿಸಲು ಅವಕಾಶವಿಲ್ಲವಷ್ಟೆ.

## ೩೮೬. ಅನುಭವಸಂಸ್ಕಾರಸ್ಮರಣಾನಾಂ ವೈಯಧಿಕರಣ್ಯಸಂಭವಾದಾತ್ಮನೋಽಸ್ಥಿರತ್ವಾಶಂಕಾ

ಪೂಜ್ಯರೇ! ಅನುಭವಸಂಸ್ಕಾರಸ್ಮರಣೆಗಳು ಏಕಾಧಿಕರಣದಲ್ಲಿ ಉಂಟಾಗಬೇಕಾಗಿ ಇರುವುದರಿಂದ ಅಂಥ ಅಧಿಕರಣವಾದ ಆತ್ಮತತ್ತ್ವಕ್ಕೆ ಸ್ಥಿರತ್ವವನ್ನು ಒಪ್ಪಿಕೊಂಡೇ ತೀರಬೇಕೆಂದಲ್ಲವೆ ಹಿಂದೆ ಹೇಳಿದಿರಿ; ಇದು ಆವಶ್ಯಕವಲ್ಲ. ಅನುಭವಸಂಸ್ಕಾರಸ್ಮರಣೆಗಳು ಭಿನ್ನಭಿನ್ನವಾದ ಅಧಿಕರಣದಲ್ಲಿಯೂ ಉಂಟಾಗಬಹುದಾದುದರಿಂದ ಇದಕ್ಕಾಗಿ ಆತ್ಮನಿಗೆ ಸ್ಥಿರತ್ವವನ್ನು ಅಂಗೀಕರಿಸಬೇಕಾದುದಿಲ್ಲ; ಹೇಗೆಂದರೆ ದೋಹದಶಾಸ್ತ್ರವೆಂದು ಪ್ರಸಿದ್ಧವಾದ ವನಸ್ಪತಿಶಾಸ್ತ್ರದಲ್ಲಿ ಎಂದರೆ ವೃಕ್ಷಾಯುರ್ವೇದದಲ್ಲಿ ಹೇಳಿ ಇರುವಂತೆ ಹತ್ತಿಯ ಬೀಜದಲ್ಲಿ ಕೆಲವು ದೋಹದಸಂಸ್ಕಾರಗಳನ್ನು ಮಾಡಿ ಅದನ್ನು ಉತ್ತಮಕ್ಷೇತ್ರದಲ್ಲಿ ನೆಟ್ಟು ಪಾಲಿಸುತ್ತಿದ್ದರೆ ಅದರಿಂದ ಉಂಟಾಗುವ ಫಲದಲ್ಲಿಯೂ ಹತ್ತಿಯಲ್ಲಿಯೂ ಕೆಂಪು ಬಣ್ಣವುಂಟಾಗುವುದು. ಇಲ್ಲಿ ಸಂಸ್ಕಾರವು ಬೀಜದಲ್ಲಿಯೂ ಅದರ ಫಲವಾದ ಆರುಣ್ಯವು ಹತ್ತಿಯಲ್ಲಿಯೂ ಪ್ರತ್ಯಕ್ಷದಲ್ಲಿ ಕಂಡುಬರುವುದರಿಂದ ಸಂಸ್ಕಾರಾದಿಗಳು ಏಕಾಧಿಕರಣದಲ್ಲಿಯೇ ಉಂಟಾಗಬೇಕೆಂಬ ನಿರ್ಬಂಧವಿಲ್ಲ.

ಅದರಂತೆ ಏಕಸಂತಾನಕ್ಕೆ ಸೇರಿದ ಅನೇಕಜ್ಞಾನಗಳೊಳಗೆ ಪೂರ್ವ ಪೂರ್ವಜ್ಞಾನದಲ್ಲಿ ಇರುವ ಅನುಭವಜನ್ಯವಾದ ಸಂಸ್ಕಾರವು ಉತ್ತರೋತ್ತರಜ್ಞಾನದಲ್ಲಿ ಸ್ಮರಣೆಯನ್ನು ಉಂಟುಮಾಡುವುದಕ್ಕೆ ಕಾರಣವಾಗಬಹುದು. ಮತ್ತು ಪೂರ್ವಪೂರ್ವಜ್ಞಾನದಲ್ಲಿ ಇರುವ ಸುಕೃತವಾಸನೆಯೂ ದುಃಷ್ಕೃತವಾಸನೆಯೂ ಉತ್ತರೋತ್ತರಜ್ಞಾನದಲ್ಲಿ ಸುಖವನ್ನೂ ದುಃಖವನ್ನೂ ಉಂಟುಮಾಡುವುದಕ್ಕೆ ಕಾರಣವಾಗಬಹುದು. ಅನುಭವವಾಸನೆ, ಸುಕೃತವಾಸನೆ, ದುಷ್ಕೃತವಾಸನೆ ಇವುಗಳಿಗೆ ಆಶ್ರಯನಾದ ಪೂರ್ವಪೂರ್ವಜ್ಞಾನವೆಂಬ ಆತ್ಮನು ಅಸ್ಥಿರನಾಗಿ ಇದ್ದರೂ ಅವುಗಳ ಫಲವಾದ ಸ್ಮರಣೆ, ಸುಖ, ದುಃಖ, ಇವುಗಳು ಉತ್ತರೋತ್ತರಜ್ಞಾನವೆಂಬ ಆತ್ಮನಲ್ಲಿ ಉಂಟಾಗಲು ಯಾವುದೊಂದು ಅಡ್ಡಿಯೂ ಇಲ್ಲದಿರುವಾಗ ಆತ್ಮನಿಗೆ ಸ್ಥಿರತ್ವವನ್ನು ಏತಕ್ಕೆ ಒಪ್ಪಿಕೊಳ್ಳಬೇಕು ? ಇದೇ ಅರ್ಥವನ್ನು ಹಿರಿಯರು—

"ಯಸ್ಮಿನ್ನೇವ ಹಿ ಸಂತಾನೇ ಆಹಿತಾ ಕರ್ಮವಾಸನಾ ।
ಫಲಂ ತತ್ರೈವ ಬಧ್ನಾತಿ ಕಾರ್ಪಾಸೇ ರಕ್ತತಾ ಯಥಾ"

ಎಂಬ ಕಾರಿಕೆಯಲ್ಲಿ ತೋರಿಸಿರುವರು.

## ೩೮೭ ಅನುಭವಸಂಸ್ಕಾರಸ್ಮರಣಾನಾಂ ವೈಯಧಿಕರಣ್ಯೇ ಕಾರ್ಪಾಸದೃಷ್ಟಾಂತಸ್ಯ ವಿರುದ್ಧದೃಷ್ಟಾಂತತ್ವಂ

ಹೀಗೆ ಆಶಂಕಿಸಿದರೂ ಈ ಪಕ್ಷದಲ್ಲಿ ಕಲ್ಪನಾಗೌರವವೆಂಬ ಒಂದು ದೋಷವು ಹೆಚ್ಚುವುದಲ್ಲದೆ ಪ್ರಯೋಜನಾಂಶವೇನೂ ಲಭಿಸುವುದಿಲ್ಲ. ಏತಕ್ಕೆಂದರೆ ನೀವು ತೋರಿಸಿದ ದೃಷ್ಟಾಂತವೇ ಮೊದಲು ನಿಮಗೆ ಅನುಕೂಲವಲ್ಲ; ಕಿಂತು ಪ್ರತಿಕೂಲವಾಗಿ ಇರುವುದು. ಹತ್ತಿಯ ಬೀಜದಲ್ಲಿ ಸಂಸ್ಕಾರವನ್ನು ಮಾಡುವಾಗ ಆ ಸಂಸ್ಕಾರವು ಆ ಬೀಜದ ಪ್ರತಿಯೊಂದು ಅವಯವದಲ್ಲಿಯೂ ವ್ಯಾಪಿಸುವುದು. ಅಂಥ ಸಂಸ್ಕಾರಕ್ಕೆ ಆಶ್ರಯಗಳಾದ ಅವಯವಗಳೇ ಫಲೋತ್ಪತ್ತಿ ಪರ್ಯಂತವೂ ಸ್ಥಿರಗಳಾಗಿ ಇದ್ದು ಫಲರೂಪವಾಗಿಯೂ ಹತ್ತಿಯ ರೂಪವಾಗಿಯೂ ಪರಿಣಮಿಸಿ ಪೂರ್ವದಲ್ಲಿ ಸಂಸ್ಕಾರಾಶ್ರಯಗಳಾಗಿ ಇದ್ದ ತಾವೇ ಈಗ ಆರುಣ್ಯವೆಂಬ ಫಲಕ್ಕೂ ಆಶ್ರಯಗಳಾಗಿ ಇರುವುದರಿಂದ ನಿಮ್ಮ ದೃಷ್ಟಾಂತಸ್ಥಳದಲ್ಲಿಯೂ ಸಂಸ್ಕಾರವೂ ಮತ್ತು ಅದರ ಫಲವೂ ಭಿನ್ನಾಧಿಕರಣದಲ್ಲಿ ಉಂಟಾಗಲಿಲ್ಲವಷ್ಟೆ ? ಉಭಯವಾದಿಗಳಿಗೂ ಸಮ್ಮತವಾದುದಲ್ಲವೆ ದೃಷ್ಟಾಂತವಾದೀತು ? ಕಾರ್ಯದಲ್ಲಿ ಉಂಟಾಗುವ ವಾಸನೆಗೆ ಕಾರಣಗತವಾದ ವಾಸನೆ ಹೇತುವಾಗುವುದೆಂಬ ನಿಮ್ಮ

ಮನೋರಥವು ಈ ದೃಷ್ಟಾಂತದಿಂದ ಸಿದ್ಧಿಸುವುದಿಲ್ಲ. ಕಾರಣದಲ್ಲಿ ಇರುವ ವಾಸನೆ ಕಾರಣದಲ್ಲಿಯೇ ಫಲವಿಶೇಷವನ್ನು ಉಂಟುಮಾಡುವುದಕ್ಕೆ ಹೇತುವಾಗುವುದೆಂಬ ಅರ್ಥವಲ್ಲವೆ ಈ ದೃಷ್ಟಾಂತದಿಂದ ಸಿದ್ಧಿಸುವುದು.

## ೩೮೮. ಬೌದ್ಧಮತೇ ಜ್ಞಾನಸಂತಾನೈಕ್ಯಸ್ಯ ದುರ್ವಚತ್ವಪ್ರತಿಜ್ಞಾ.

ಮತ್ತು ಪೂರ್ವಪೂರ್ವಜ್ಞಾನದಲ್ಲಿ ಇರುವ ಅನುಭವವಾಸನೆಯೂ, ಸುಕೃತವಾಸನೆಯೂ, ದುಃಷ್ಕೃತವಾಸನೆಯೂ ಭಿನ್ನಸಂತಾನಕ್ಕೆ ಸೇರಿದ ಉತ್ತರೋತ್ತರಜ್ಞಾನದಲ್ಲಿ ಸ್ಮರಣೆಗೂ ಸುಖಕ್ಕೂ ದುಃಖಕ್ಕೂ ಕಾರಣವಾಗಬೇಕಾದೀತೆಂಬ ಭಯದಿಂದಲ್ಲವೆ "**ಏಕಸಂತಾನಕ್ಕೆ ಸೇರಿದ**" ಎಂಬ ವಿಶೇಷಣವನ್ನು ಸೇರಿಸುತ್ತೀರಿ? ಈ ವಿಶೇಷಣವನ್ನು ಸೇರಿಸಿದರೂ ನಿಮ್ಮ ಮನೋರಥವು ಸಿದ್ಧಿಸುವುದಿಲ್ಲ ; ಭಿನ್ನಸಂತಾನಕ್ಕೆ ಸೇರಿದ ಉತ್ತರೋತ್ತರಜ್ಞಾನದಲ್ಲಿ ಉಂಟಾಗುವ ಸ್ಮರಣಾದಿಗಳಿಗೂ ಸಂತಾನಾಂತರದ ಪೂರ್ವಪೂರ್ವಜ್ಞಾನದಲ್ಲಿ ಇರುವ ಅನುಭವವಾಸನಾಕರ್ಮವಾಸನೆಗಳು ಕಾರಣಗಳಾಗಿಯೇ ಆಗಬೇಕಾಗಿ ಬರುವುದು. ಏತಕ್ಕೆಂದರೆ ನಿಮ್ಮ ಮತದಲ್ಲಿ ಸಂತಾನಕ್ಕೆ ಐಕ್ಯವನ್ನಾಗಲಿ ಭೇದವನ್ನಾಗಲಿ ನಿರೂಪಿಸಿ ತೋರಿಸಲು ಸಾಧ್ಯವಿಲ್ಲ.

## ೩೮೯. ಸಾನ್ವಯವಿನಾಶಪಕ್ಷೇ ಸಂತಾನೈಕ್ಯಸ್ಯ ಸುವಚತ್ವಂ.

ಹೇಗೆಂದರೆ—ವಿಶೇಷಣಕ್ಕೆ ನಾಶವುಂಟಾದರೂ ವಿಶೇಷ್ಯವಾದ ಧರ್ಮಿಗೆ ನಾಶವಿಲ್ಲ; ಆದುದರಿಂದಲೇ ವಿಶೇಷಣಮಾತ್ರನಾಶವೇ ವಿಶಿಷ್ಟನಾಶವ್ಯವಹಾರಕ್ಕೆ ಕಾರಣವಾಗುವುದಲ್ಲದೆ ವಿಶೇಷ್ಯನಾಶವೂ ಅದಕ್ಕೆ ಕಾರಣವಲ್ಲ. ಮೋಹದ ಸಂಸ್ಕಾರಕ್ಕೆ ಆಶ್ರಯವಾಗಿ ಇದ್ದ ಬೀಜದ್ರವ್ಯದಲ್ಲಿ ಬೀಜತ್ವಾವಸ್ಥೆಯೆಂಬ ವಿಶೇಷಣಕ್ಕೆ ನಾಶವುಂಟಾದರೂ ವಿಶೇಷ್ಯವಾದ ದ್ರವ್ಯವು ನಾಶಪ್ರತಿಯೋಗಿಯಾಗದೆ ಅನುವರ್ತಿಸುತ್ತಲೇ ಇರುವುದು. ಅದೇ ದ್ರವ್ಯದಲ್ಲಿ ಕ್ರಮವಾಗಿ ಕಾಲಭೇದದಿಂದ ಅಂಕುರತ್ವ, ವೃಕ್ಷತ್ವ, ಮೊದಲಾದ ಅವಸ್ಥೆಗಳೆಂಬ ಅನೇಕವಿಶೇಷಣಗಳು ಉಂಟಾಗುವುವು. ಪೂರ್ವಾವಸ್ಥೆಗೂ ಉತ್ತರಾವಸ್ಥೆಗೂ ಪರಸ್ಪರಸಂಬಂಧವಿಲ್ಲದಿದ್ದರೂ ಪೂರ್ವಾವಸ್ಥೆಗೆ ಆಶ್ರಯವಾಗಿ ಇದ್ದ ದ್ರವ್ಯಕ್ಕೂ ಉತ್ತರಾವಸ್ಥೆಗೂ ಸಂಬಂಧವಿರುವುದರಿಂದ ಕ್ರಮಿಕವಾದ ಅನೇಕಾವಸ್ಥೆಗಳಿಗೆ ಆಶ್ರಯವಾಗಿ ವಿಶೇಷ್ಯವೆನಿಸಿಕೊಂಡಿರುವ ದ್ರವ್ಯಸ್ವರೂಪದ ಐಕ್ಯವೇ ಅವಸ್ಥಾವಿಶಿಷ್ಟಸಂತಾನೈಕ್ಯವೆನಿಸಿಕೊಳ್ಳುವುದೆಂದು ನಮ್ಮ ಮತದಲ್ಲಿ ಆಯಾಸವಿಲ್ಲದೆ ಸಂತಾನೈಕ್ಯವನ್ನು ನಿರೂಪಿಸಿ ತೋರಿಸಬಹುದು—

## ೩೯೦. ನಿರನ್ವಯವಿನಾಶಪಕ್ಷೇ ಸಂತಾನೈಕ್ಯಸ್ಯ ದುರ್ವಚತ್ವೋಪಪಾದನಂ.

ನಿಮ್ಮ ಮತದಲ್ಲಿ ಇದು ಸಾಧ್ಯವಿಲ್ಲ. ವಿಶೇಷಣಮಾತ್ರಕ್ಕೆ ವಿನಾಶವನ್ನು ಸ್ವೀಕರಿಸಿ ವಿಶೇಷ್ಯಸ್ವರೂಪಕ್ಕೆ ಉತ್ತರೋತ್ತರಾನುವೃತ್ತಿಯನ್ನು ನಾವು ಸ್ವೀಕರಿಸುವೆವಾದುದರಿಂದ ನಮ್ಮ ಮತದಲ್ಲಿ ಹೇಳುವ ವಿನಾಶವು ಸಾನ್ವಯವಿನಾಶವೆನಿಸಿಕೊಳ್ಳುವುದು; ನಿಮ್ಮ ಮತದಲ್ಲಿಯಾದರೆ ವಿಶೇಷಣದಂತೆ ವಿಶೇಷ್ಯವಾದ ದ್ರವ್ಯಸ್ವರೂಪಕ್ಕೂ ವಿನಾಶವು ಸ್ವೀಕೃತವಾಗಿ ಇರುವುದರಿಂದ ಉತ್ತರೋತ್ತರ ವಿಶೇಷಣಗಳಿಗೆ ಭಾಗಿಯಾಗುವಂತೆ ಅನುವರ್ತಿಸಬಹುದಾದ ಒಂದು ಧರ್ಮಿಯೇ ಇಲ್ಲವಾದಕಾರಣ ನಿಮ್ಮ ಮತದಲ್ಲಿ ಹೇಳುವ ವಿನಾಶವು ನಿರನ್ವಯವಿನಾಶವೆನಿಸಿಕೊಳ್ಳುವುದಲ್ಲದೆ ಸಾನ್ವಯವಿನಾಶವೆನಿಸಿಕೊಳ್ಳಲಾರದು. ಯಾವಾಗ ಉತ್ತರೋತ್ತರ ವಿಶೇಷಣಗಳಲ್ಲಿ ಅನುವರ್ತಿಸುವ ವಿಶೇಷ್ಯವಾದ ಒಂದು ಧರ್ಮಿಯೇ ಇಲ್ಲವೋ ಆಗ ವಿಶೇಷ್ಯೈಕ್ಯವೇ ಅವಸ್ಥಾವಿಶಿಷ್ಟಸಂತಾನೈಕ್ಯವೆಂದು ಹೇಳಲು ಸಾಧ್ಯವಿಲ್ಲ.

## ೩೯೧. ಪೂರ್ವೋತ್ತರಭಾವಾಪನ್ನಜ್ಞಾನಸಮುದಾಯಸ್ಯಾಪಿ ಸಂತಾನೈಕ್ಯರೂಪತ್ವಾನುಪಪತ್ತಿಃ.

ಹಾಗಾದರೆ—ಪೂರ್ವೋತ್ತರಭಾವವನ್ನು ಹೊಂದಿ ಇರುವ ಜ್ಞಾನಸಮುದಾಯವೇ ಸಂತಾನಪದಾರ್ಥವೆನಿಸಿಕೊಂಡು ಅಂಥ ಜ್ಞಾನಸಮುದಾಯದ ಏಕತ್ವವೇ ಸಂತಾನೈಕ್ಯವೆನಿಸಿಕೊಳ್ಳುವುದೆಂದು ಹೇಳಲು ತಡೆಯೇನು?

ಹಾಗೆಯೂ ಹೇಳಲಾಗುವುದಿಲ್ಲ—ಏತಕ್ಕೆಂದರೆ ಏಕಸಂತಾನದೊಳಗೆ ಪೂರ್ವಜ್ಞಾನಾನಂತರಕಾಲಿಕವಾದ ಜ್ಞಾನವು ಹೇಗಾದರೆ ಉತ್ತರಜ್ಞಾನವೆನಿಸಿಕೊಳ್ಳುವುದೋ ಹಾಗೆಯೇ ಭಿನ್ನಸಂತಾನದಲ್ಲಿ ಉಂಟಾಗುವ ಜ್ಞಾನವೂ ಈ ಸಂತಾನದ ಪೂರ್ವಜ್ಞಾನಕ್ಕೆ ಅನಂತರಕಾಲಿಕವಾಗಿ ಉತ್ತರಜ್ಞಾನವೆನಿಸಿಕೊಳ್ಳಲು ತಡೆಯಿಲ್ಲವಾದುದರಿಂದ ಈ ಪೂರ್ವಜ್ಞಾನದಲ್ಲಿ ಉಂಟಾದ ಸಂಸ್ಕಾರದಿಂದ ಸಂತಾನಾಂತರದಲ್ಲಿ ಇರುವ ಉತ್ತರಜ್ಞಾನದಲ್ಲಿಯೂ ಫಲೋತ್ಪತ್ತಿಯುಂಟಾಗಬೇಕಾಗಿ ಬರುವುದೆಂಬ ಅತಿಪ್ರಸಂಗಕ್ಕೆ ಪರಿಹಾರವಿಲ್ಲದಂತಾಗುವುದು.

## ೩೯೨. ಪೂರ್ವೋತ್ತರಭಾವಾಪನ್ನೈಕದೇಶವೃತ್ತಿಜ್ಞಾನಸಮುದಾಯಸ್ಯಾಪ್ಯೇಕಸಂತಾನರೂಪತ್ವಾನುಪಪತ್ತಿಃ.

ಹಾಗಾದರೆ—ಪೂರ್ವೋತ್ತರಭಾವವನ್ನು ಹೊಂದಿ ಇರುವ ಏಕಪ್ರದೇಶದಲ್ಲಿ ಇರುವ ಜ್ಞಾನಸಮುದಾಯವೇ ಏಕಸಂತಾನಪದಾರ್ಥವೆನಿಸಿಕೊಳ್ಳಲು ತಡೆಯೇನು?

ಸಂತಾನಾಂತರಕ್ಕೆ ಸೇರಿದ ಜ್ಞಾನವಾದರೆ ಭಿನ್ನಪ್ರದೇಶದಲ್ಲಿ ಇರುವುದರಿಂದ ಪೂರ್ವೋಕ್ತವಾದ ಅತಿಪ್ರಸಂಗಕ್ಕೂ ಅವಕಾಶವಿಲ್ಲವಷ್ಟೆ ?

ಇಲ್ಲ. ಹಾಗೆಯೂ ಹೇಳಲಾಗುವುದಿಲ್ಲ—ಏತಕ್ಕೆಂದರೆ ನಿಮ್ಮ ಮತದಲ್ಲಿ ದೇಶವೆಂಬ ಪದಾರ್ಥವೂ ಕ್ಷಣಿಕವಾಗಿ ಇರುವುದರಿಂದ ಏಕಪ್ರದೇಶವೆಂಬುದೇ ಸಿದ್ಧಿಸುವುದಿಲ್ಲವಷ್ಟೆ ? ಯಾವಾಗ ಏಕಪ್ರದೇಶವೆಂಬುದೇ ಸಿದ್ಧಿಸಲಿಲ್ಲವೋ ಆಗ ಪೂರ್ವೋತ್ತರಜ್ಞಾನಗಳಿಗೆ ಏಕಪ್ರದೇಶಸ್ಥಿತಿಯೂ ಸಿದ್ಧಿಸುವುದಿಲ್ಲವಾಗಿ ಏಕ ಸಂತಾನವೆಂಬುದು ಸಿದ್ಧಿಸಲಾರದು.

## ೩೯೩. ಪರಸ್ಪರಕಾರ್ಯಕಾರಣಭಾವಾಪನ್ನಜ್ಞಾನಸಮುದಾಯಸ್ಯಾಪಿ ಏಕಸಂತಾನರೂಪತ್ವಾನುಪಪತ್ತಿಃ.

ಹಾಗಾದರೆ—ಪರಸ್ಪರಕಾರ್ಯಕಾರಣಭಾವವನ್ನು ಹೊಂದಿ ಇರುವ ಜ್ಞಾನ ಸಮುದಾಯವೇ ಏಕಸಂತಾನಪದಾರ್ಥವೆನಿಸಿಕೊಳ್ಳಲು ತಡೆಯೇನು ? ಭಿನ್ನಸಂತಾನವರ್ತಿಗಳಾದ ಎರಡು ಜ್ಞಾನಗಳಿಗೆ ಪರಸ್ಪರಕಾರ್ಯಕಾರಣಭಾವವಿಲ್ಲವಾದುದರಿಂದ ಪೂರ್ವೋಕ್ತವಾದ ಅತಿಪ್ರಸಂಗಕ್ಕೂ ಅವಕಾಶವಿಲ್ಲವಷ್ಟೆ ?

ಇಲ್ಲ. ಹಾಗೆಯೂ ಹೇಳಲಾಗುವುದಿಲ್ಲ.—ಏತಕ್ಕೆಂದರೆ ಪೂರ್ವಜ್ಞಾನಕ್ಕೆ ಸ್ವಸಂತಾನಾಂತರ್ಗತವಾದ ಅನಂತರಜ್ಞಾನವು ಹೇಗೆ ಉತ್ತರಜ್ಞಾನವೆನಿಸಿಕೊಳ್ಳುವುದರಿಂದ ಕಾರ್ಯವೆನಿಸಿಕೊಳ್ಳುವುದೋ ಹಾಗೆಯೇ ಇದಕ್ಕೆ ಭಿನ್ನಸಂತಾನಾಂತರ್ಗತವಾದ ಅನಂತರಜ್ಞಾನವೂ ಉತ್ತರಜ್ಞಾನವಾಗಿ ಕಾರ್ಯವೆನಿಸಿಕೊಳ್ಳಲು ತಡೆಯಿಲ್ಲದಿರುವಾಗ ಏಕಸಂತಾನಾಂತರ್ಗತವಾದ ಜ್ಞಾನಗಳಿಗೇ ಕಾರ್ಯಕಾರಣಭಾವ ವಿರುವುದೆಂಬುದರಲ್ಲಿಯೂ, ಭಿನ್ನಸಂತಾನಾಂತರ್ಗತವಾದ ಜ್ಞಾನಗಳಿಗೆ ಕಾರ್ಯಕಾರಣಭಾವವಿಲ್ಲವೆಂಬುದರಲ್ಲಿಯೂ ಯಾವುದೊಂದು ನಿಯಾಮಕವೂ ಇಲ್ಲ. ಏಕಸಂತಾನಾಂತರ್ಗತತ್ವವೇ ಕಾರ್ಯಕಾರಣಭಾವಕ್ಕೆ ನಿಯಾಮಕವಾಗುವುದೆಂದು ಹೇಳುವುದಾದರೆ—ಏಕಸಂತಾನಾಂತರ್ಗತವಾದುದರಿಂದ ಕಾರ್ಯಕಾರಣಭಾವವುಂಟೆಂದೂ, ಕಾರ್ಯಕಾರಣಭಾವವಿರುವುದರಿಂದ ಏಕಸಂತಾನಾಂತರ್ಗತವಾಗಿ ಇರುವುದೆಂದೂ ಅನ್ಯೋನ್ಯಾಶ್ರಯದೋಷವು ದುಷ್ಪರಿಹರವಾಗುವುದು.

## ೩೯೪. ಅತಏವ ಚಿತ್ತವಿಜ್ಞಾನಾಲಯವಿಜ್ಞಾನಕುಕಲ್ಪನಾಯಾ ಅಪಿ ನಿರಸ್ತತ್ವಂ.

ಹೀಗೆ ಬೌದ್ಧರು ಹೇಳುವ ಕ್ಷಣಿಕತ್ವಪಕ್ಷದಲ್ಲಿ ಸಂತಾನೈಕ್ಯವನ್ನಾಗಲಿ ಸಂತಾನಭೇದವನ್ನಾಗಲಿ ಉಪಪಾದನೆಮಾಡಿ ತೋರಿಸುವುದು ಶಕ್ಯವಲ್ಲವಾದುದ

ರಿಂದಲೇ ಚಿತ್ತವಿಜ್ಞಾನವೆಂದೂ, ಆಲಯವಿಜ್ಞಾನವೆಂದೂ ವಿಜ್ಞಾನದೊಳಗೆ ಭೇದ ವನ್ನು ಕಲ್ಪಿಸಿ—

"ತತ್ಸ್ಯಾದಾಲಯವಿಜ್ಞಾನಂ ಯದ್ಭವೇದಹಮಾಸ್ಪದಂ ।
ತತ್ಸ್ಯಾದ್ಧಿ ಚಿತ್ತವಿಜ್ಞಾನಂ ಯನ್ನೀಲಾದಿಕಮುಲ್ಲಿಖೇತ್ ॥

ಎಂದರೆ "ಅಹಂ" ಎಂಬುದಾಗಿ ಗೋಚರವಾಗುವ ಜ್ಞಾನವು ಆಲಯ ವಿಜ್ಞಾನವೆಂಬುದಾಗಿಯೂ, "ಇದಂ ನೀಲಂ ಇದಂ ಪೀತಂ" ಎಂಬು ದಾಗಿ ನೀಲಾದಿಪದಾರ್ಥಗಳನ್ನು ಗ್ರಹಿಸುವ ಜ್ಞಾನವು ಚಿತ್ತವಿಜ್ಞಾನವೆಂಬುದಾ ಗಿಯೂ ತೋರಿಸಿ, ಆಲಯವಿಜ್ಞಾನವನ್ನು ಧರ್ಮಿಯಾಗಿಯೂ, ಚಿತ್ತವಿಜ್ಞಾನ ವನ್ನು ಧರ್ಮವಾಗಿಯೂ ಅಂಗೀಕರಿಸಿ, ಇದರಿಂದಲೇ "ಅಹಂ ಜಾನಾಮಿ" ಎಂಬುದಾಗಿ ತೋರುವ ಧರ್ಮಧರ್ಮಿಭಾವಪ್ರತೀತಿಗೂ ಉಪಪತ್ತಿಯುಂಟಾಗುವು ದೆಂದು ಹೇಳುವ ಪ್ರಲಾಪವೂ ನಿರಾಕರಿಸಲ್ಪಟ್ಟಿರುವುದು.

ಪೂರ್ವೋತ್ತರಭಾವವನ್ನು ಹೊಂದಿ ಇರುವ ಅನೇಕಜ್ಞಾನಗಳ ಸಮು ದಾಯವಲ್ಲವೆ ಸಂತಾನಪದಾರ್ಥವಾಗಬೇಕು? ಜ್ಞಾನಮಾತ್ರವೇ ಆತ್ಮನೆಂದು ಹೇಳುವ ಬೌದ್ಧರ ಮತದಲ್ಲಿ ಆತ್ಮನಿಗೆ ಜ್ಞಾನಾಶ್ರಯತ್ವವೆಂಬ ಜ್ಞಾತೃತ್ವವಿಲ್ಲವಾ ದುದರಿಂದಲೂ, ಜ್ಞಾನಮಾತ್ರವೆಂಬ ಆತ್ಮನಿಗಾದರೂ ಸ್ಥಿರತ್ವವನ್ನು ಒಪ್ಪಿಕೊಳ್ಳದೆ ಕ್ಷಣಿಕತ್ವವನ್ನು ಹೇಳಿ ಇರುವುದರಿಂದ ಪೂರ್ವೋತ್ತರಭಾವಾಪನ್ನವಾದ ಅನೇಕ ಜ್ಞಾನಗಳಿಗೆ ಪ್ರತಿಸಂಧಾನವು ಸಂಭವಿಸುವುದಿಲ್ಲವಾದುದರಿಂದಲೂ, ಸಂತಾನರೂಪ ವಾದ ಜ್ಞಾನವೇ ಸಂಭವಿಸುವುದಿಲ್ಲ.

### ೩೯೫. ಉಕ್ತೈರೇವ ದೂಷಣೈರ್ಯೋಗಾಚಾರಮತಸ್ಯಾಪಿ ನಿರಾಕರಣಸಿದ್ಧಿಃ.

ಹೀಗೆ ತೋರಿಸಿದ ದೂಷಣಗಳಿಂದಲೇ ಯೋಗಾಚಾರಮತವೂ ಖಂಡಿಸ ಲ್ಪಟ್ಟುದಾಗಿ ಇರುವುದು. ಹೇಗೆಂದರೆ—

"ಅವಿಭಾಗೋಽಪಿ ಬುದ್ಧ್ಯಾತ್ಮಾ ವಿಪರ್ಯಾಸಿತದರ್ಶನೈಃ ।
ಗ್ರಾಹ್ಯಗ್ರಾಹಕಸಂವಿತ್ತಿಭೇದವಾನಿವ ಲಕ್ಷ್ಯತೇ ॥"

ಎಂದರೆ ಬುದ್ಧಿಯೆಂಬ ಆತ್ಮನು ಜ್ಞಾನ, ಜ್ಞೇಯ, ಜ್ಞಾತಾ, ಎಂಬ ಭೇದ ವಿಲ್ಲದವನಾಗಿ ಇದ್ದರೂ ಭ್ರಾಂತಿಜ್ಞಾನವುಳ್ಳ ಪುರುಷರಿಂದ ಜ್ಞೇಯ, ಜ್ಞಾತಾ, ಜ್ಞಾನವೆಂಬ ಭೇದವುಳ್ಳುವನಂತೆ ಎಣಿಸಲ್ಪಡುತ್ತಾನೆ ಎಂದಲ್ಲವೆ ಯೋಗಾಚಾರ ಮತವಿರುವುದು? ಈ ಮತದಲ್ಲಿಯೂ ಪೂರ್ವೋಕ್ತವಾದ ದೂಷಣಗಳು ಬಾಧ ಕಗಳಾಗಿಯೇ ಇರುವುದರಿಂದ ಹೀಗೆ ಹೇಳುವುದಕ್ಕೂ ಅವಕಾಶವಿಲ್ಲ.

## ೩೯೭. ಪ್ರಕಟಬೌದ್ಧಮತನಿರಾಸೇನೈವ ಪ್ರಚ್ಛನ್ನಬೌದ್ಧಮತನಿರಾಸಸ್ಯಾಪಿ ಸಿದ್ಧಿಃ.

ಹೀಗೆ ಪ್ರಕಟಬೌದ್ಧರ ಮತವನ್ನು ನಿರಾಕರಿಸಿದುದರಿಂದಲೇ ಪ್ರಚ್ಛನ್ನ ಬೌದ್ಧರ—ಎಂದರೆ ವೇದಾಂತಿಗಳೆಂಬ ಹೆಸರನ್ನಿಟ್ಟುಕೊಂಡು ಬೌದ್ಧರೊಡನೆ ಸಮಾನಯೋಗಕ್ಷೇಮವುಳ್ಳವರಾಗಿ ಇರುವವರ ಮತವೂ ನಿರಾಕರಿಸಲ್ಪಟ್ಟದಾಗಿ ಇರುವುದು.

## ೩೯೭. ಕೇವಲಜ್ಞಾನಸ್ಯ ಆತ್ಮತ್ವಾನುಪಪತ್ತಿಃ.

"ಕೇವಲಜ್ಞಾನವೇ ಆತ್ಮನೆನಿಸಿಕೊಳ್ಳುವುದು" ಎಂದಲ್ಲವೆ ಇವರ ಸಿದ್ಧಾಂತ ವಿರುವುದು; ಇವರ ಮತದಲ್ಲಿ ಕೇವಲಜ್ಞಾನವೆಂದರೆ—ಆವುದೊಂದು ವಿಷಯವನ್ನೂ ಗ್ರಹಿಸದೆ, ಆವುದೊಂದು ಆಶ್ರಯವನ್ನೂ ಅವಲಂಬಿಸದೆ ಇರುವ ಜ್ಞಾನವು. ಇದೇ ಆತ್ಮನೆನಿಸಿಕೊಳ್ಳುವುದೆಂದು ಹೇಳುವರು. ಇದೂ ಸಂಗತವಲ್ಲ. ಏತಕ್ಕೆಂದರೆ— ಆವುದಾದರೊಂದು ವಿಷಯವನ್ನು ಗ್ರಹಿಸುತ್ತ ಒಂದಾನೊಂದು ಆಶ್ರಯವನ್ನು ಅವಲಂಬಿಸಿ ಇರುವ ಜ್ಞಾಧಾತುವಿನ ಅರ್ಥವೇ ಜ್ಞಾನವೆನಿಸಿಕೊಳ್ಳುವುದೆಂದು ಲೋಕದಲ್ಲಿ ಪ್ರಸಿದ್ಧವಾಗಿ ಇರುವುದು. ಹೀಗಿಲ್ಲದೆ ನಿರ್ವಿಷಯಕವಾಗಿಯೂ, ನಿರಾಶ್ರಯವಾಗಿಯೂ ಇರುವ ಜ್ಞಾನವೆಂಬುದೊಂದು ಪದಾರ್ಥವುಂಟೆಂಬುದರಲ್ಲಿಯೇ ಪ್ರಮಾಣವಿಲ್ಲವಾದುದರಿಂದ ಅಪ್ರಾಮಾಣಿಕವಾದ ಅಂಥ ಕೇವಲಜ್ಞಾನವು ಅಹಂ ಬುದ್ಧಿಗೆ ಗೋಚರವಾಗಲಾರದಾದಪ್ರಯುಕ್ತ ಆತ್ಮನೆನಿಸಿಕೊಳ್ಳಲಾರದು; ಎಂದರೆ "ಘಟವನ್ನು ನಾನು ತಿಳಿಯುತ್ತೇನೆ= ಅಥವಾ ನಾನು ಘಟಜ್ಞಾನವುಳ್ಳವನಾಗಿ ಇರುತ್ತೇನೆ" ಎಂಬ ಅಹಂಬುದ್ಧಿಯಲ್ಲಿ ಘಟಜ್ಞಾನವು ಗೋಚರವಾಗಿ ಇರುವುದು; ಅಂಥ ಘಟಜ್ಞಾನವೂ ಘಟವೆಂಬ ವಿಷಯವನ್ನು ಗ್ರಹಿಸತಕ್ಕುದಾಗಿಯೂ, ಅಹಂ ಎಂದು ಹೇಳಿಕೊಳ್ಳುವ ಆತ್ಮಪದಾರ್ಥವನ್ನು ಆಶ್ರಯಿಸಿಕೊಂಡಿರತಕ್ಕುದಾಗಿಯೂ ತೋರುವುದಲ್ಲದೆ ನಿರ್ವಿಷಯಕವಾಗಿಯೂ ನಿರಾಶ್ರಯವಾಗಿಯೂ ತೋರುವುದಿಲ್ಲ. ಹೀಗೆಯೇ ಪ್ರತಿಯೊಂದು ಜ್ಞಾನವೂ ವಿಷಯಾಶ್ರಯಗಳೊಡನೆ ಸಹಿತವಾದುದಾಗಿಯೇ ತೋರುವುದರಿಂದ ಅಂಥ ಜ್ಞಾನಕ್ಕೆ ಆಶ್ರಯನಾದವನು ಆತ್ಮನಾಗಬೇಕಲ್ಲದೆ ಜ್ಞಾನಮಾತ್ರವೇ ಆತ್ಮತತ್ತ್ವವೆನಿಸಿಕೊಳ್ಳಲಾರದು.

## ೩೯೮. ಪ್ರಚ್ಛನ್ನಬೌದ್ಧಾನಾಂ ಮತಸ್ಯ ಪ್ರಕಟಬೌದ್ಧಮತಸಾಮ್ಯಾನುಪಪತ್ತಿಶಂಕಾಪರಿಹಾರಃ.

ಹೀಗೆ ದೂಷಣಾಂತರವನ್ನು ತೋರಿಸಿದುದರಿಂದಲೇ—"ಪೂಜ್ಯರೇ? ಪ್ರಕಟಬೌದ್ಧರ ಮತವನ್ನು ದೂಷಣೆಮಾಡಿದುದರಿಂದಲೇ ಪ್ರಚ್ಛನ್ನಬೌದ್ಧರ

ಮತವೂ ದೂಷಿಸಲ್ಪಟ್ಟಿದಾಗಿ ಇರುವುದೆಂದು ಹೇಗೆ ಹೇಳಲಾದೀತು? ಪ್ರಕಟ ಬೌದ್ಧರ ಮತದಲ್ಲಿ ಜ್ಞಾನವೆಂಬ ಆತ್ಮನಿಗೆ ಕ್ಷಣಿಕತ್ವವು ಅಂಗೀಕರಿಸಲ್ಪಟ್ಟಿರುವುದ ರಿಂದ "ಸ ಏವಾಹಂ" ಎಂಬ ಪ್ರತಿಸಂಧಾನಕ್ಕೆ ಅನುಪಪತ್ತಿಯುಂಟಾಗುವು ದೆಂಬ ದೋಷವು ತೋರಿಸಲ್ಪಟ್ಟಿತು; ಆದರೆ ಪ್ರಚ್ಛನ್ನಬೌದ್ಧರ ಮತದಲ್ಲಿ ಜ್ಞಾನ ವನ್ನೇ ಆತ್ಮತತ್ತ್ವವಾಗಿ ಒಪ್ಪಿಕೊಂಡಿದ್ದರೂ ಇಂಥ ಆತ್ಮನಿಗೆ ಬೌದ್ಧರಂತೆ ಕ್ಷಣಿಕ ತ್ವವನ್ನು ಹೇಳದೆ ಸ್ಥಿರತ್ವವನ್ನು ಅಂಗೀಕರಿಸಿರುವುದರಿಂದ "ಸ ಏವಾಹಂ" ಎಂಬ ಪ್ರತಿಸಂಧಾನಕ್ಕೆ ಯಾವುದೊಂದು ಅನುಪಪತ್ತಿಯೂ ಇಲ್ಲವಾಗಿ ಪ್ರಕಟ ಬೌದ್ಧರ ಸಾಮ್ಯವನ್ನು ಪ್ರಚ್ಛನ್ನಬೌದ್ಧರಿಗೆ ಹೇಗೆ ಹೇಳಲಾದೀತು?" ಎಂಬ ಆಶಂಕೆಯೂ ನಿರಾಕರಿಸಲ್ಪಟ್ಟಿರುವುದು.

ಪ್ರತಿಸಂಧಾನಾನುಪಪತ್ತಿಯೆಂಬ ದೋಷವಿಲ್ಲದಿದ್ದರೂ ವಿಷಯಶೂನ್ಯ ವಾಗಿಯೂ ಆಶ್ರಯಶೂನ್ಯವಾಗಿಯೂ ಇರುವ ಕೇವಲಜ್ಞಾನವು ಅಹಂಬುದ್ಧಿಗೆ ಗೋಚರವಾಗಲಾರದೆಂಬ ದೂಷಣವು ಪ್ರಚ್ಛನ್ನಬೌದ್ಧರ ಮತದಲ್ಲಿ ಅಪರ್ಜ ನೀಯವಾಗಿ ಇರುವುದಷ್ಟೆ? ವಸ್ತುತಃ ಇನ್ನೂ ವಿಮರ್ಶೆಮಾಡಿ ನೋಡಿದರೆ ಪ್ರತಿಸಂಧಾನಾನುಪಪತ್ತಿದೂಷಣವೂ ಇವರ ಮತದಲ್ಲಿ ಬಂದೇ ಒರುವುದು. ಆತ್ಮನಿಗೆ ಸ್ವಾಭಾವಿಕವಾದ ಜ್ಞಾತೃತ್ವವನ್ನು ಒಪ್ಪಲಿಲ್ಲವಾದುದರಿಂದ "ಘಟ ಜ್ಞಾನವುಳ್ಳವನಾಗಿ ಇದ್ದ ನಾನೇ ಈಗ ಪಟಜ್ಞಾನವುಳ್ಳವನಾಗಿ ಇರುತ್ತೇನೆ" ಎಂಬ ಪ್ರತಿಸಂಧಾನವು ಇವರ ಮತದಲ್ಲಿಯೂ ಸಂಭವಿಸುವುದಿಲ್ಲವಷ್ಟೆ?

### ೩೯. ಆತ್ಮನಿ ಪ್ರತೀಯಮಾನಸ್ಯ ಜ್ಞಾತೃತ್ವಸ್ಯ ಸ್ವಾಭಾವಿಕತ್ವಂ.

"ಅಹಂ ಜಾನಾಮಿ" ಎಂಬ ಅನುಭವದಲ್ಲಿ 'ಅಹಂ' ಎಂದು ತೋರಿ ಬರುವ ಆತ್ಮನೆಂಬ ಧರ್ಮಿಗೆ ಜ್ಞಾನವೆಂಬುದು ಧರ್ಮವಾಗಿ ತೋರುವುದರಿಂದ ಆತ್ಮ ನಿಗೆ ಜ್ಞಾನಾಶ್ರಯತ್ವವೆಂಬ ಜ್ಞಾತೃತ್ವವು ಸರ್ವರಿಗೂ ಸ್ವಾನುಭವಸಿದ್ಧವಾಗಿ ಇರು ವುದು. ಹೀಗೆ ಆತ್ಮವಿಷಯದಲ್ಲಿ ಉಂಟಾಗುವ ಜ್ಞಾತೃತ್ವಪ್ರತೀತಿ ಭ್ರಾಂತಿ ರೂಪವೆಂದೂ ಹೇಳಲು ಶಕ್ಯವಲ್ಲ. ಹೇಗೆಂದರೆ—ಒಂದು ಧರ್ಮಿಯಲ್ಲಿ ಮತ್ತೊಂದು ಧರ್ಮವನ್ನು ಆರೋಪಿಸಬೇಕಾದರೆ ಆರೋಪಣೀಯವಾದ ಆ ಧರ್ಮವು ಆವುದಾದ ರೊಂದು ಧರ್ಮಿಯಲ್ಲಿ ಸತ್ಯವಾಗಿ ಇರಬೇಕು. ಎಲ್ಲಿಯೂ ಅದು ಸತ್ಯವಾಗದಿದ್ದರೆ ಅದರ ಪ್ರತೀತಿಯೇ ಶುದ್ಧವಾಗಿ ಇಲ್ಲವಾದಕಾರಣ ಮತ್ತೊಂದು ಧರ್ಮಿಯಲ್ಲಿ ಅದನ್ನು ಆರೋಪಿಸುವುದಕ್ಕೂ ಆಗುವುದಿಲ್ಲ. ಆಪಣದಲ್ಲಿ (ಅಂಗಡಿಯಲ್ಲಿ) ಇರುವ ಸತ್ಯರಜ ತದಲ್ಲಿ ಸತ್ಯವಾದ ರಜತತ್ವವನ್ನು ಅನುಭವಿಸಿ ಇರುವವನಿಗಲ್ಲವೆ ಶುಕ್ತಿಕೆಯಲ್ಲಿ ರಜತ

ತ್ವದ ಆರೋಪದಿಂದ "ಇದಂ ರಜತಂ" ಎಂಬ ಭ್ರಾಂತಿಯುಂಟಾಗಬಹುದು?

ಅದರಂತೆ ಆತ್ಮನಲ್ಲಿ ಜ್ಞಾತೃತ್ವವನ್ನು ಆರೋಪಿಸಬೇಕಾದರೆ ಆತ್ಮೇತರವಾದ ಆವುದಾದರೊಂದು ವಸ್ತುವಿನಲ್ಲಿ ಜ್ಞಾತೃತ್ವವು ಸತ್ಯವಾಗಿ ಇರಬೇಕು. ಹಾಗೆ ಆವುದರಲ್ಲಿಯೂ ಅದು ಸತ್ಯವಾಗಿ ಇಲ್ಲವಾದಕಾರಣ ಆತ್ಮನಲ್ಲಿ ಜ್ಞಾತೃತ್ವಕ್ಕೆ ಆರೋಪವು ಸಂಭವಿಸುವುದಿಲ್ಲವಾಗಿ ಆತ್ಮನಲ್ಲಿ ತೋರಿಬರುತ್ತಿರುವ ಜ್ಞಾತೃತ್ವವು ಆತ್ಮನಿಗೆ ಸ್ವಾಭಾವಿಕವಾಗಿ ಪಾರಮಾರ್ಥಿಕವೆಂದೇ ಹೇಳಿಸಿಕೊಳ್ಳುವುದಲ್ಲದೆ ಭ್ರಾಂತಿಸಿದ್ಧವೆನಿಸಿಕೊಳ್ಳಲಾರದು. ಜ್ಞಾತೃತ್ವಭ್ರಾಂತಿಯುಂಟಾಗಬೇಕಾದರೂ ಮತ್ತೊಂದುಕಡೆಯಲ್ಲಿ ಸತ್ಯವಾದ ಜ್ಞಾತೃತ್ವವು ಅಪೇಕ್ಷಿತವಾಗಿ ಇರುವುದಷ್ಟೆ?

## ೪೦೦. ಜ್ಞಾನಸ್ಯ ಆಶ್ರಯಾಪೇಕ್ಷಾನೈಯತ್ಯಂ.

ಪೂಜ್ಯರೇ! ಜ್ಞಾನಕ್ಕೆ ವಿಷಯಾಪೇಕ್ಷೆಯೂ, ಆಶ್ರಯಾಪೇಕ್ಷೆಯೂ ನಿಯತವಾಗಿ ಇದ್ದೇ ಇರುವುವೆಂದು ಹೇಗೆ ಹೇಳಲಾದೀತು? ಶುಕ್ತಿಕೆಯಲ್ಲಿ ರಜತತ್ವವೆಂಬ ವಿಷಯುವಿಲ್ಲದಿದ್ದರೂ "ಇದಂ ರಜತಂ" ಎಂಬ ಜ್ಞಾನವು ಉಂಟಾಗುವುದಷ್ಟೆ?

ಹೀಗೆ ಆಶಂಕಿಸಲಾಗುವುದಿಲ್ಲ—"ಇದಂ ರಜತಂ" ಎಂಬ ಕೆಲವುಕಡೆಗಳಲ್ಲಿ ವಿಷಯುವಿಲ್ಲದುದರಿಂದ ವಿಷಯಾಪೇಕ್ಷೆಯಿಲ್ಲದಿದ್ದರೂ, ಆಶ್ರಯಾಪೇಕ್ಷೆ ಅಲ್ಲಿಯೂ ತಪ್ಪಿದುದಲ್ಲವಾದುದರಿಂದ ಜ್ಞಾನಕ್ಕೆ ಆಶ್ರಯನಾದವನೇ ಆತ್ಮನಾಗಬೇಕಲ್ಲದೆ ಜ್ಞಾನಮಾತ್ರವೇ ಆತ್ಮವಸ್ತುವಾಗಲಾರದು. ಜ್ಞಾನಕ್ಕೆ ಜ್ಞಾನಾಶ್ರಯತ್ವವೆಂಬ ಅನುಭವಿತೃತ್ವವು ಕೂಡುವುದಿಲ್ಲವಾಗಿ "ಸ ಏವಾಹಂ" ಎಂಬ ಪ್ರತಿಸಂಧಾತೃತ್ವವೂ ಈ ಜ್ಞಾನಕ್ಕೆ ಸಂಭವಿಸುವುದಿಲ್ಲ. ಹೀಗಿರುವಲ್ಲಿ ಜ್ಞಾನವೆಂಬ ಆತ್ಮನಿಗೆ ಸ್ಥಿರತ್ವವನ್ನು ಒಪ್ಪಿಕೊಂಡುದಕ್ಕೆ ಸ್ವಲ್ಪಮಾತ್ರವೂ ಪ್ರಯೋಜನವು ಸಿದ್ಧಿಸಲಿಲ್ಲವಾಗಿ ಪ್ರಚ್ಛನ್ನಬೌದ್ಧರಿಗೆ ಪ್ರಕಟಬೌದ್ಧರ ಸಾಮ್ಯವನ್ನು ತಡೆಯಿಲ್ಲದೆ ಹೇಳಬಹುದು.

## ೪೦೧. ಅಂತಃಕರಣೇ ಭ್ರಾಂತಿಸಿದ್ಧಸ್ಯ ಜ್ಞಾತೃತ್ವಸ್ಯ ಆತ್ಮನ್ಯಾರೋಪಸಂಭವಾಶಂಕಾ.

ಪೂಜ್ಯರೇ! ಭ್ರಾಂತಿಯುಂಟಾಗಬೇಕಾದರೆ ಭ್ರಾಂತಿಗೆ ವಿಷಯುವಾದ ಪದಾರ್ಥದ ಜ್ಞಾನಮಾತ್ರವಿದ್ದರೇನೇ ಸಾಕಾಗಿ ಇರುವದು; ಅಂಥ ಪದಾರ್ಥವು ಮತ್ತೊಂದುಕಡೆಯಲ್ಲಿ ಸತ್ಯವಾಗಿಯೂ, ಅಂಥ ಸತ್ಯಪದಾರ್ಥದ ಜ್ಞಾನವು ಪ್ರಮಾರೂಪವಾದ ಯಥಾರ್ಥಜ್ಞಾನವಾಗಿಯೂ, ಅಂಥ ಯಥಾರ್ಥಜ್ಞಾನವೇ

ಭ್ರಾಂತಿಗೆ ಕಾರಣವಾಗಿ ಅಪೇಕ್ಷಿತವಾಗಿಯೂ, ಇರಬೇಕೆಂಬ ನಿರ್ಬಂಧವಿಲ್ಲ. ನಮ್ಮ ಮತದಲ್ಲಿಯೂ ಜ್ಞಾತೃತ್ವವೆಂಬುದು ಎಲ್ಲಿಯೂ ವಾಸ್ತವಿಕವಾಗಿ ಇಲ್ಲ ದಿದ್ದರೂ ಭ್ರಾಂತಿಸಿದ್ಧವಾದ ಜ್ಞಾತೃತ್ವವೆಂಬುದು ಅಂತಃಕರಣದಲ್ಲಿ ಇರುವುದ ರಿಂದ ಅಂಥ ಜ್ಞಾತೃತ್ವವನ್ನು ಆತ್ಮನಲ್ಲಿ ಆರೋಪಿಸಲು ತಡೆಯೇನು ? ಎಂದು ಆಶಂಕಿಸಲಾಗುವುದಿಲ್ಲ.—

## ೪೦೨. ಅನವಸ್ಥಾದೋಷಾಪತ್ತ್ಯಾ ತದಸಂಭವಃ.

ಏತಕ್ಕೆಂದರೆ—ಆತ್ಮನಲ್ಲಿ ಜ್ಞಾತೃತ್ವಭ್ರಾಂತಿಯುಂಟಾಗುವುದಕ್ಕೆ ಕಾರಣ ವೇನೆಂದು ಕೇಳಿದಾಗ "ಮತ್ತೊಂದು ಜ್ಞಾತೃತ್ವಭ್ರಾಂತಿಯೇ ಕಾರಣವು" ಎಂದು ಉತ್ತರವನ್ನು ಹೇಳುವುದಾದರೆ—ಮತ್ತೊಂದು ಜ್ಞಾತೃತ್ವಭ್ರಾಂತಿಗೆ ಕಾರಣವೇನೆಂದು ಪುನಃ ಕೇಳಿದಾಗ "ಅದಕ್ಕೂ ಮತ್ತೊಂದು ಭ್ರಾಂತಿಯೇ ಕಾರಣವು" ಎಂದು ಉತ್ತರವನ್ನು ಹೇಳಬೇಕಾಗಿ ಬಂದು ಅನವಸ್ಥಾದೋಷ ವುಂಟಾಗುವುದು. ವಾಸ್ತವಿಕವಾದ ಜ್ಞಾತೃತ್ವವನ್ನು ಒಂದುಕಡೆಯಲ್ಲಿ ಒಪ್ಪಿ ಕೊಳ್ಳುವುದಾದರೆ ಈ ದೋಷಕ್ಕೆ ಪ್ರಸಕ್ತಿಯಿಲ್ಲ. ಅಂಥ ಜ್ಞಾತೃತ್ವಜ್ಞಾನಕ್ಕೆ ಪ್ರತ್ಯಕ್ಷಾದಿಪ್ರಮಾಣಗಳೇ ಕಾರಣಗಳಾಗಿ ಇರುವುದರಿಂದ ಭ್ರಾಂತಿಜ್ಞಾನವು ಕಾರಣವಾಗಲಿಲ್ಲವಾಗಿ ಕಾರಣಾಂತರಾಪೇಕ್ಷೆಯುಂಟಾಗುವುದಿಲ್ಲವಷ್ಟೆ ?

## ೪೦೩. ಕಾರಣಾನವಸ್ಥಾಯಾ ಅದೋಷತ್ವಾಶಂಕಾ.

"ಪೂಜ್ಯರೇ ! ಕಾರಣವಿಷಯದಲ್ಲಿ ಹೇಳುವ ಅನವಸ್ಥೆ ದೋಷವಾಗಲಾರದು ಹೇಗೆಂದರೆ—ವೃಕ್ಷಕ್ಕೆ ಕಾರಣವೇನೆಂದು ಪ್ರಶ್ನೆಮಾಡಿದಾಗ "ಬೀಜವೇ ಕಾರಣವು" ಎಂದು ಉತ್ತರವನ್ನು ಹೇಳುವುದಾದರೆ—ಅಂಥ ಬೀಜಕ್ಕೆ ಕಾರಣವೇನೆಂದು ಪುನಃ ಪ್ರಶ್ನೆಮಾಡಿದಾಗ "ಮತ್ತೊಂದು ವೃಕ್ಷವು ಕಾರಣವು" ಎಂದು ಉತ್ತರವನ್ನು ಹೇಳಬೇಕಾಗುವುದು; ಹೀಗೆಯೇ ಪ್ರಶ್ನ ಪರಂಪರೆಯೂ ಉತ್ತರಪರಂಪರೆಯೂ ಇದ್ದರೂ ಈ ವಿಷಯದಲ್ಲಿ ಈ ಅನವಸ್ಥೆ ಯೆಂಬುದು ದೋಷವಾಗಿ ಇರುವುದಿಲ್ಲ. ಹೀಗಿರುವಲ್ಲಿ ನಮ್ಮ ಮತದಲ್ಲಿ ಈ ಅನವ ಸ್ಥೆಯನ್ನು ದೋಷವಾಗಿ ಆರೋಪಿಸುವುದು ಹೇಗೆ ?" ಎಂದು ಆಶಂಕಿಸಲಾ ಗುವುದಿಲ್ಲ.—

## ೪೦೪. ಕಾರಣಾನವಸ್ಥಾಯಾ ಅದೋಷತ್ವೇ ಅವಿದ್ಯಾಯಾಃ ಅನಾದಿತ್ವಾನುಪಪತ್ತಿಃ.

ಏತಕ್ಕೆಂದರೆ—ನಿಮ್ಮ ಮತದಲ್ಲಿ ಸಕಲಪ್ರಪಂಚಭ್ರಮಕ್ಕೂ ಕಾರಣವು ಅವಿದ್ಯೆಯಷ್ಟೆ? ಇಂಥ ಅವಿದ್ಯೆಗೆ ಆದಿಯೊಂದಿರುವ ಪಕ್ಷದಲ್ಲಿ—ಆದಿಮತಿಯಾದ

ಈ ಅವಿದ್ಯೆಗೆ ಕಾರಣವೇನೆಂದು ಪ್ರಶ್ನೆಮಾಡಿದಾಗ ಮತ್ತೊಂದು ಅವಿದ್ಯೆ ಕಾರಣವೆಂದು ಪ್ರತ್ಯುತ್ತರವನ್ನು ಹೇಳುವುದಾದರೆ ಅದಕ್ಕೂ ಕಾರಣವೇನೆಂದು ಪುನಃ ಪ್ರಶ್ನೆಮಾಡಿದಾಗ ಮತ್ತೊಂದು ಅವಿದ್ಯೆ ಕಾರಣವೆಂದು ಉತ್ತರವನ್ನು ಹೇಳಬೇಕಾಗಿಬರುವುದಾದಕಾರಣ ಅನವಸ್ಥಾದೋಷವುಂಟಾಗುವುದೆಂಬ ಭೀತಿಯಿಂದಲ್ಲವೆ ನೀವು ಈ ದೋಷದಿಂದ ಬಿಡುಗಡೆಯನ್ನು ಹೊಂದುವುದಕ್ಕಾಗಿ ಅವಿದ್ಯೆಗೆ ಸಾದಿತ್ವವನ್ನು ಹೇಳದೆ ಅನಾದಿತ್ವವನ್ನು ಸ್ವೀಕರಿಸುತ್ತೀರಿ? ಕಾರಣಾನವಸ್ಥೆ ದೋಷವೇ ಆಗದಿದ್ದರೆ ಅವಿದ್ಯಾವಿಷಯದಲ್ಲಿಯೂ ಈ ಅನವಸ್ಥೆ ದೋಷವಲ್ಲವಾದುದರಿಂದ ಅವಿದ್ಯೆಗೆ ಅನಾದಿತ್ವವನ್ನು ಸ್ವೀಕರಿಸಿದುದು ವ್ಯರ್ಥವಾಗುವುದಾದಕಾರಣ ಅನಾದಿತ್ವವನ್ನು ಪರಿತ್ಯಜಿಸಬೇಕಾಗಿ ಬರುವದು. ಅವಿದ್ಯೆ ಅನಾದಿಯಾಗದಿದ್ದರೂ ದೋಷವಿಲ್ಲವಷ್ಟೆ.

### ೪೦೫. ತಥಾ ಅಧಿಷ್ಠಾನಸ್ಯಾಪಿ ಸತ್ಯತ್ವಾನುಪಪತ್ತಿಃ.

ಮತ್ತು—ನಿಮ್ಮ ಮತದಲ್ಲಿ ಅವಿದ್ಯಾಕಲ್ಪಿತವಾದ ಸಮಸ್ತಪ್ರಪಂಚವೂ ಅಸತ್ಯವಾದುದರಿಂದಲ್ಲವೆ ಆತ್ಮತತ್ತ್ವವೆಂಬ ಅಧಿಷ್ಠಾನದಲ್ಲಿ ಆರೋಪಿತವಾಗಿ ಇರುವುದು. ಆ ಅಧಿಷ್ಠಾನವೂ ಪ್ರಪಂಚದಂತೆ ಅಸತ್ಯವಾಗುವ ಪಕ್ಷದಲ್ಲಿ ಅದೂ ಮತ್ತೊಂದರಲ್ಲಿ ಆರೋಪಿತವೆನಿಸಿಕೊಳ್ಳುವುದಕ್ಕಾಗಿ ಮತ್ತೊಂದು ಅಧಿಷ್ಠಾನವು ಬೇಕಾಗಿ ಇರುವುದು. ಅದೂ ಅಸತ್ಯವಾಗುವುದಾದರೆ ಅದಕ್ಕಾಗಿ ಇನ್ನೊಂದು ಅಧಿಷ್ಠಾನವು ಬೇಕಾಗುವುದು: ಹೀಗೆ ಅನವಸ್ಥಾದೋಷವುಂಟಾಗುವುದೆಂಬ ಭೀತಿಯಿಂದಲ್ಲವೆ ಅಧಿಷ್ಠಾನಕ್ಕೆ ಸತ್ಯತ್ವವನ್ನು ಸ್ವೀಕರಿಸುತ್ತೀರಿ? ಈಗ ಹೇಳುವ ರೀತಿಯಲ್ಲಿ ಅನವಸ್ಥೆ ದೋಷವೇ ಆಗದಿದ್ದರೆ ಅಧಿಷ್ಠಾನಕ್ಕೆ ಸತ್ಯತ್ವವನ್ನು ಸ್ವೀಕರಿಸಿದುದೂ ವ್ಯರ್ಥವಾಗುವುದಾದಕಾರಣ ಅಧಿಷ್ಠಾನಸತ್ಯತ್ವವನ್ನು ಪರಿತ್ಯಜಿಸಬೇಕಾಗಿ ಬರುವುದು. ಅಧಿಷ್ಠಾನವು ಸತ್ಯವಾಗದಿದ್ದರೂ ದೋಷವೇನೂ ಇಲ್ಲವಷ್ಟೆ?

### ೪೦೬. ಅಂತತೋ ಮಾಧ್ಯಮಿಕಮತವತ್ ಶೂನ್ಯವಾದಾಪತ್ತಿಃ.

ಇದರಿಂದ ಏನು ಹೇಳಿದಹಾಗಾಯಿತು?—೧ ಜ್ಞಾನಕ್ಕಿಂತಲೂ ಭಿನ್ನನಾಗಿ "ಅಹಂ" ಎನಿಸಿಕೊಳ್ಳುವವನೇ ಆತ್ಮನಾಗಿ ಇರುವನೆಂದೂ, ೨ ಅಂಥ ಆತ್ಮನಿಗೆ ಸ್ವಾಭಾವಿಕವಾದ ಜ್ಞಾತೃತ್ವವನ್ನು ಅಂಗೀಕರಿಸಬೇಕೆಂದೂ, ೩ ಹಾಗೆ ಅಂಗೀಕರಿಸದೆ ಆರೋಪಿತವಾದ ಜ್ಞಾತೃತ್ವವನ್ನೇ ಹೇಳುವುದಾದರೆ ಮತ್ತೊಂದು ಕಡೆಯಲ್ಲಿ ವಾಸ್ತವಿಕವಾದ ಜ್ಞಾತೃತ್ವವನ್ನು ತೋರಿಸಬೇಕಾಗಿ ಬರುವುದೆಂದೂ,

ಳ ಪಾರಮಾರ್ಥಿಕವಾದ ಜ್ಞಾತೃತ್ವವನ್ನು ಎಲ್ಲಿಯೂ ಅಂಗೀಕರಿಸದೆ ಭ್ರಾಂತಿ ಪರಂಪರಾಸಿದ್ಧವಾದ ಜ್ಞಾತೃತ್ವವನ್ನೇ ಹೇಳುವುದಾದರೆ ಅನವಸ್ಥಾದೋಷವುಂಟಾಗುವುದೆಂದೂ, ೩ ಕಾರಣಾನವಸ್ಥೆ ದೋಷವೇ ಇಲ್ಲವೆಂದು ಹೇಳುವುದಾದರೆ ಅವಿದ್ಯಾವಿಷಯದಲ್ಲಿ ಅಂಗೀಕರಿಸಿರುವ ಅನಾದಿತ್ವವನ್ನೂ, ಅಧಿಷ್ಠಾನ ವಿಷಯದಲ್ಲಿ ಅಂಗೀಕರಿಸಿರುವ ಸತ್ಯತ್ವವನ್ನೂ ಪರಿತ್ಯಜಿಸಬೇಕಾಗಿ ಬರುವುದೆಂದೂ, ತೋರಿಸಿದುದರಿಂದ—ಮಾಧ್ಯಮಿಕರ ಮತದಂತೆ ಪ್ರಚ್ಛನ್ನಬೌದ್ಧರ ಮತದಲ್ಲಿಯೂ ಕೊನೆಗೆ ಶೂನ್ಯವಾದವೇ ನಿಲ್ಲುವುದೆಂದು ಹೇಳಿದಹಾಗಾಯಿತು.

## ೪೦೭. ಚಿಚ್ಛಾಯಾಪತ್ತ್ಯಾ ಅಂತಃಕರಣೇ ಜ್ಞಾತೃತ್ವಭ್ರಾಂತ್ಯುಪಪಾದನಂ.

ಹೀಗೆ ಅನವಸ್ಥಾದೋಷವನ್ನು ತೋರಿಸಿದ ಸಂದರ್ಭದಲ್ಲಿ ಇದೇ ಪ್ರಚ್ಛನ್ನಬೌದ್ಧರು ಸಾಂಖ್ಯರನ್ನು ತಮಗೆ ಸಹಾಯಕರಾಗಿ ಸೇರಿಸಿಕೊಂಡು ಅನವಸ್ಥಾದೋಷವು ಪ್ರಸಂಗಿಸದಂತೆ ಜ್ಞಾತೃತ್ವಭ್ರಾಂತಿಯನ್ನು ಅನೇಕವಿಧವಾಗಿ ಉಪಪಾದನೆ ಮಾಡುವರು. ಹೇಗೆಂದರೆ—ಚೇತನತ್ವಸಮಾನಾಧಿಕರಣವಾದ ಕರ್ತೃತ್ವವು ಜ್ಞಾತೃತ್ವವೆನಿಸಿಕೊಳ್ಳುವುದು; ಇದರಲ್ಲಿ—ಅಂತಃಕರಣದಲ್ಲಿ ಕರ್ತೃತ್ವವಿದ್ದರೂ ಚೈತನ್ಯವಿಲ್ಲ; ಆತ್ಮನಲ್ಲಿ ಚೈತನ್ಯವಿದ್ದರೂ ಕರ್ತೃತ್ವವಿಲ್ಲ; ಈ ಎರಡೂ ಒಂದು ಅಧಿಕರಣದಲ್ಲಿ ಇದ್ದರಲ್ಲದೆ ಜ್ಞಾತೃತ್ವದ ಸ್ವರೂಪವು ಸಿದ್ಧಿಸುವುದಿಲ್ಲ. ಆದರೂ ಕರ್ತೃತ್ವದೊಡನೆ ಕೂಡಿರುವ ಅಂತಃಕರಣದಲ್ಲಿಯೇ ಚಿಚ್ಛಾಯಾಪತ್ತಿಯಿಂದ ಚೈತನ್ಯವು ಆರೋಪಿಸಲ್ಪಡುವುದು. ಕನ್ನಡಿಯಲ್ಲಿ ಮುಖವೆಂಬ ಬಿಂಬದ ಸಂಕ್ರಮಣವು ಉಂಟಾಗುವಾಗ ಮುಖವು ಕನ್ನಡಿಯಲ್ಲಿ ಆರೋಪಿಸಲ್ಪಟ್ಟು ಕನ್ನಡಿಯಲ್ಲಿ ಮುಖಾಶ್ರಯತ್ವಭ್ರಾಂತಿಯುಂಟಾಗುವಂತೆ ಕರ್ತೃತ್ವವಿಶಿಷ್ಟವಾದ ಅಂತಃಕರಣದಲ್ಲಿ ಚಿಚ್ಛಬ್ದವಾಚ್ಯನಾದ ಆತ್ಮನೆಂಬ ಬಿಂಬದ ಸಂಸರ್ಗದಿಂದ ಚಿದ್ಗತವಾದ ಚೈತನ್ಯವು ಅಂತಃಕರಣದಲ್ಲಿ ಆರೋಪಿಸಲ್ಪಟ್ಟು ಅಂತಃಕರಣದಲ್ಲಿ ಜ್ಞಾತೃತ್ವಭ್ರಾಂತಿಯುಂಟಾಗುವುದು;—

## ೪೦೮. ಅಥವಾ ಚಿತ್ಸಂಪರ್ಕಾದಂತಃಕರಣೇ ಜ್ಞಾತೃತ್ವಭ್ರಾಂತ್ಯುಪಪಾದನಂ.

ಅಥವಾ—ಅಯಃಪಿಂಡಕ್ಕೆ ಉಷ್ಣದ್ರವ್ಯದ ಸಂಪರ್ಕವು ಉಂಟಾಗುವಾಗ ಉಷ್ಣದ್ರವ್ಯದಲ್ಲಿ ಇರುವ ಔಷ್ಣ್ಯವು ಅಯಃಪಿಂಡದಲ್ಲಿ ಆರೋಪಿಸಲ್ಪಟ್ಟು ಅಯಃಪಿಂಡದಲ್ಲಿ ಔಷ್ಣ್ಯಭ್ರಮವುಂಟಾಗುವಂತೆ—ಅಚೇತನವಾದ ಅಂತಃಕರಣ

ದಲ್ಲಿ ಚೈತನ್ಯಸಂಪರ್ಕವುಂಟಾದುದರಿಂದ ಚೈತನ್ಯವು ಆರೋಪಿಸಲ್ಪಟ್ಟು ಅದರಲ್ಲಿ ಚೈತನ್ಯಭ್ರಮವುಂಟಾಗುವುದಾದಕಾರಣ ಜ್ಞಾತೃತ್ವಭ್ರಾಂತಿಯುಂಟಾಗುವುದು :--

**೪೮೯. ಅಥವಾ ಚಿದಭಿವ್ಯಂಜಕತ್ವಾದಂತಃಕರಣೇ ಜ್ಞಾತೃತ್ವ ಭ್ರಾಂತ್ಯುಪಪಾದನಂ.**

ಅಥವಾ ಸೂರ್ಯಕಿರಣಕ್ಕೆ ಅಭಿಮುಖವಾಗಿ ಅಂಗೈಯನ್ನು ವಿಸ್ತರಿಸಿದರೆ ಅದರಿಂದ ಸೂರ್ಯಕಿರಣವು ಹೆಚ್ಚಾಗಿ ಪ್ರಕಾಶಪಡಿಸಲ್ಪಡುವುದರಿಂದ—ಕಿರಣಕ್ಕೆ ಅಭಿವ್ಯಂಜಕವಾಗಿ ಇರುವುದೆಂಬ ಇಷ್ಟುಮಾತ್ರಕಾರಣದಿಂದಲೇ ಕಿರಣವು ಅಂಗೈಯಲ್ಲಿ ಆರೋಪಿಸಲ್ಪಟ್ಟು ಅಂಗೈಯಲ್ಲಿ ಕಿರಣಾಶ್ರಯತ್ವಭ್ರಾಂತಿಯುಂಟಾಗುವಂತೆ ಚೈತನ್ಯಕ್ಕೆ ಅಭಿವ್ಯಂಜಕವಾದ ಅಂತಃಕರಣದಲ್ಲಿ—ಅಭಿವ್ಯಂಜಕತ್ವಬಲದಿಂದ ಚೈತನ್ಯವು ಆರೋಪಿಸಲ್ಪಟ್ಟು ಅದರಲ್ಲಿ ಚೈತನ್ಯಾಶ್ರಯತ್ವಭ್ರಮವುಂಟಾಗುವುದಾದಕಾರಣ ಜ್ಞಾತೃತ್ವಭ್ರಾಂತಿಯುಂಟಾಗುವುದು.

**೪೯೦. ಉಕ್ತಪಕ್ಷತ್ರಯೇಽಪಿ ಅನವಸ್ಥಾದೋಷಪ್ರಸಂಗಾಭಾವ ಪ್ರದರ್ಶನಂ.**

ಹೀಗೆ ಉಪಪಾದನೆ ಮಾಡಿ ತೋರಿಸಿದ ಮೂರು ಪಕ್ಷಗಳಲ್ಲಿಯೂ ಅನವಸ್ಥಾದೋಷದ ಪ್ರಸಕ್ತಿಯೇ ಇಲ್ಲ. ಹೇಗೆಂದರೆ—ಅಂತಃಕರಣದಲ್ಲಿ ಜ್ಞಾತೃತ್ವಭ್ರಮವು **ಚಿಚ್ಛಾಯಾಪತ್ತಿ-ಚಿತ್ಸಂಪರ್ಕ-ಚಿದಭಿವ್ಯಂಜಕತ್ವ**-ವೆಂಬ ಉಪಾಧಿಗಳಿಂದ ಉಂಟಾಗುವುದಾದಕಾರಣ ಔಪಾಧಿಕಭ್ರಾಂತಿಯೆನಿಸಿಕೊಳ್ಳುವುದು. ಔಪಾಧಿಕಭ್ರಾಂತಿಸ್ಥಳದಲ್ಲಿ ಉಪಾಧಿವ್ಯತಿರಿಕ್ತವಾದ ಆವುದೊಂದು ಕಾರಣವೂ ಭ್ರಾಂತಿಗೆ ಅಪೇಕ್ಷಿತವಲ್ಲವಾದುದರಿಂದ ಅನವಸ್ಥಾದೋಷಕ್ಕೆ ಪ್ರಸಕ್ತಿಯೇ ಇಲ್ಲ.

ಅಥವಾ—ಇಲ್ಲಿ ಅಂತಃಕರಣಕ್ಕೂ ಚೈತನ್ಯಕ್ಕೂ ಆಶ್ರಯಾಶ್ರಯಿಭಾವಸಂಬಂಧವೇ ಆರೋಪಣೀಯವಾಗಿ ಇರುವುದರಿಂದ—ಅಂಥ ಆಶ್ರಯಾಶ್ರಯಿಭಾವಸಂಬಂಧವು ವಾಸ್ತವಿಕವಾಗಿಯೇ ಅನ್ಯತ್ರ ಪ್ರಸಿದ್ಧವಾಗಿ ಇರುವಕಾರಣ ತಾವನ್ಮಾತ್ರದಿಂದಲೇ ಭ್ರಮವುಂಟಾಗಬಹುದಾದಪ್ರಯುಕ್ತ ಕಾರಣಾಂತರಾಪೇಕ್ಷೆಯೇ ಇಲ್ಲವಾಗಿ ಅನವಸ್ಥಾದೋಷಕ್ಕೆ ಪ್ರಸಕ್ತಿಯೇ ಇಲ್ಲ.

**೪೯೧. ಸಾಂಖ್ಯೈಸ್ಸಖ್ಯಮುಪೇಯುಷಾಂ ಪ್ರಚ್ಛನ್ನಬೌದ್ಧಾನಾಂ ಹಾರ್ದಭಾವಾವಿಷ್ಕರಣಂ.**

ಸಾಂಖ್ಯರೊಡನೆ ಏಕೀಭವಿಸಿ ಈ ಉಪಪಾದನಪ್ರಕಾರಗಳನ್ನು ತೋರಿಸುವ ಇವರಿಗೆ ಹಾರ್ದಿಕವಾದ ಅಭಿಪ್ರಾಯವೇನೆಂದರೆ—ಹೇಗಾದರೆ ಸಾಂಖ್ಯ

ಮತದಲ್ಲಿ ಪ್ರಪಂಚಕ್ಕೆ ಮಿಥ್ಯಾತ್ವವಿಲ್ಲವೋ ಹಾಗೆ ನಮ್ಮ ಮತದಲ್ಲಿಯೂ ಕೃತ್ಸ್ನ ಪ್ರಪಂಚಕ್ಕೂ ಮಿಥ್ಯಾತ್ವವು ಸಿದ್ಧಿಸದಿದ್ದರೂ ಜ್ಞಾತೃತ್ವಮಾತ್ರಕ್ಕೆ ಮಿಥ್ಯಾತ್ವವನ್ನು ಸುಲಲಿತವಾಗಿ ಆಯಾಸವಿಲ್ಲದೆ ಉಪಪಾದನೆ ಮಾಡಿ ತೋರಿಸಬಹುದೆಂಬುದೇ ಇವರ ಅಭಿಪ್ರಾಯವಾಗಿ ಇರುವುದು.

ಆದುದರಿಂದಲೇ—"ಆಕಾಶಾದಿಪ್ರಪಂಚವು ಹೇಗೆ ಅವಿದ್ಯಾಕಲ್ಪಿತವೋ ಅದರಂತೆ ಅವಿದ್ಯಾಕಲ್ಪಿತವಾದ ಜ್ಞಾತೃತ್ವವೂ ಸಂಭವಿಸಬಹುದಾದುದರಿಂದ ಚಿಚ್ಛಾಯಾಪತ್ತಿ ಮೊದಲಾದ ಕುಸೃಷ್ಟಿಕಲ್ಪನೆಯಿಂದ ಪ್ರಯೋಜನವೇನು?" ಎಂಬ ಆಶಂಕೆಗೂ ಅವಕಾಶವಿಲ್ಲ. ಸುಲಲಿತವಾಗಿ ಜ್ಞಾತೃತ್ವಕ್ಕೆ ಮಿಥ್ಯಾತ್ವವನ್ನು ಉಪಪಾದನೆಮಾಡಿ ತೋರಿಸುವಿಕೆಯೇ ಇದಕ್ಕೆ ಪ್ರಯೋಜನವಾಗಿ ಇರುವುದಲ್ಲವೆ? ಆದಕಾರಣ ನಾವು ಹೇಳಿದ ಮೂರು ಪಕ್ಷಗಳೊಳಗೆ ಯಾವ ಪಕ್ಷದಿಂದಲಾದರೂ ಜ್ಞಾತೃತ್ವಕ್ಕೆ ಅನಾಯಾಸವಾಗಿ ಭ್ರಾಂತಿಸಿದ್ಧತ್ವವನ್ನು ಹೇಳಿ ಮಿಥ್ಯಾತ್ವವನ್ನು ತೋರಿಸಬಹುದು.

## ೪೧೨. ಚಿಚ್ಛಾಯಾಪತ್ತಿಶಬ್ದಸ್ಯ ಮುಖ್ಯಾರ್ಥತ್ವಸ್ವೀಕಾರೇ ಆತ್ಮನಃ ಅಂತಃಕರಣೇ ಪ್ರತಿಫಲನಾಸಂಭವಃ

ಹೀಗೆ ಹೇಳುವ ಪ್ರಚನ್ನಬೌದ್ಧರ ಮತವು ಸಂಗತವಲ್ಲ—ಹೇಗೆಂದರೆ—ಚಿಚ್ಛಾಯಾಪತ್ತಿಶಬ್ದಕ್ಕೆ ಯಥಾಶ್ರುತಾರ್ಥವನ್ನು—ಎಂದರೆ ಚಿದ್ವಸ್ತುವಿನ ಛಾಯೆಯ ಪ್ರತಿಫಲನವೆಂಬ ಮುಖ್ಯಾರ್ಥವನ್ನು ವಿವಕ್ಷೆಮಾಡುವುದಾದರೆ ಇದು ಸಂಭವಿಸಲಾರದು; ಏತಕ್ಕೆಂದರೆ—ಪ್ರತಿಫಲನವುಂಟಾಗುವ ಸ್ಥಳದಲ್ಲಿ—ಎಂದರೆ ಬಿಂಬವು ಮತ್ತೊಂದರಲ್ಲಿ ಪ್ರತಿಬಿಂಬಿಸುವ ಸ್ಥಳದಲ್ಲಿ—ಪ್ರತಿಫಲಿಸುವ ಬಿಂಬವೂ, ಪ್ರತಿಫಲನಕ್ಕೆ ಅಧಿಕರಣವಾದ ಆ ಮತ್ತೊಂದು ವಸ್ತುವೂ, ಈ ಎರಡೂ ರೂಪವುಳ್ಳ ವಸ್ತುಗಳಾಗಿ ಚಕ್ಷುರಿಂದ್ರಿಯಕ್ಕೆ ಗೋಚರವಾಗತಕ್ಕ ಪದಾರ್ಥಗಳಾಗಿಯೇ ಇರಬೇಕು. ದೃಷ್ಟಾಂತದಲ್ಲಿ—ಮುಖವೆಂಬ ಬಿಂಬವೂ, ಅದರ ಪ್ರತಿಫಲನಕ್ಕೆ ಅಧಿಕರಣವಾದ ದರ್ಪಣವೂ ರೂಪವದ್ವಸ್ತುವಾಗಿ ಚಕ್ಷುರಿಂದ್ರಿಯಕ್ಕೆ ಗೋಚರವಾಗತಕ್ಕವುಗಳಾಗಿಯೇ ಇರುವುವಲ್ಲವೆ? ದಾರ್ಷ್ಟಾಂತಿಕದಲ್ಲಿಯಾದರೆ ಆತ್ಮನೆಂಬ ಬಿಂಬವೂ, ಅದರ ಪ್ರತಿಫಲನಕ್ಕೆ ಅಧಿಕರಣವಾದ ಅಂತಃಕರಣವೂ, ಈ ಎರಡೂ ರೂಪಶೂನ್ಯಗಳಾಗಿ ಚಕ್ಷುರಿಂದ್ರಿಯಕ್ಕೆ ಅಗೋಚರಗಳಾದ ವಸ್ತುಗಳಾಗಿ ಇರುವುದರಿಂದ ಮುಖ್ಯಾರ್ಥಸ್ವೀಕಾರಪಕ್ಷದಲ್ಲಿ ಬಿಂಬಪ್ರತಿಬಿಂಬಭಾವವು ಇಲ್ಲಿ ಹೇಗೆ ಸಂಭವಿಸೀತು?

## ೪೧೩. ಚಿಚ್ಛಾಯಾಪತ್ತಿಶಬ್ದಸ್ಯ ಅಮುಖ್ಯಾರ್ಥತ್ವಸ್ವೀಕಾರೇ ಷಷ್ಠೀತತ್ಪುರುಷಪಕ್ಷೇ ಚೈತನ್ಯಸ್ಯೈವ ಮಿಥ್ಯಾತ್ವಪ್ರಸಂಗಃ

ಚಿಚ್ಛಾಯಾಪತ್ತಿಶಬ್ದಕ್ಕೆ ಮುಖ್ಯಾರ್ಥವನ್ನು ಬಿಟ್ಟು ಆರೋಪವೆಂಬ ಗೌಣಾರ್ಥವನ್ನು ಸ್ವೀಕರಿಸುವುದಾದರೆ—ಯಾವ ವಸ್ತುವಿನಲ್ಲಿ ಯಾವ ವಸ್ತುವಿಗೆ ಆರೋಪವೆಂಬುದನ್ನು ವಿಶದಪಡಿಸುವುದಕ್ಕಾಗಿ ಚಿಚ್ಛಾಯಾಪತ್ತಿಯೆಂಬ ಸಮಾಸ ಪದದ ಅರ್ಥವನ್ನು ವಿವರಿಸಬೇಕು.

ಚಿದ್ಭಿನ್ನವಸ್ತುವಿನಲ್ಲಿ ಚಿದ್ವಸ್ತುವಿನ ಛಾಯಾಪತ್ತಿಯೆಂದು ತೋರಿಸುವ— "ಚಿತಃ ಛಾಯಾಪತ್ತಿಃ" ಎಂಬ ಷಷ್ಠೀತತ್ಪುರುಷಸಮಾಸವಾಗಲಿ, ಚಿದ್ವಸ್ತುವಿನಲ್ಲಿ ಚಿದ್ಭಿನ್ನವಸ್ತುವಿನ ಛಾಯಾಪತ್ತಿಯೆಂದು ತೋರಿಸುವ—"ಚಿತಿ ಛಾಯಾಪತ್ತಿಃ" ಎಂಬ ಸಪ್ತಮೀತತ್ಪುರುಷಸಮಾಸವಾಗಲಿ—ಈ ಎರಡು ಬಗೆಯಾದ ಸಮಾಸಗಳನ್ನು ಇಲ್ಲಿ ಹೇಳಬಹುದು. ಅದರಲ್ಲಿ ಷಷ್ಠೀತತ್ಪುರುಷಸಮಾಸವನ್ನು ಅಂಗೀಕರಿಸಿ ಅಂತಃಕರಣದಲ್ಲಿ ಚೈತನ್ಯದ ಆರೋಪವೆಂದು ಹೇಳುವುದಾದರೆ ಅಧಿಷ್ಠಾನವಾದ ಅಂತಃಕರಣಕ್ಕೆ ಸತ್ಯತ್ವವೂ, ಆರೋಪಿತವಾದ ಚೈತನ್ಯಕ್ಕೆ ಮಿಥ್ಯಾತ್ವವೂ ಪ್ರಾಪ್ತವಾಗುವುದು. ಅಧಿಷ್ಠಾನದಲ್ಲಿ ಆರೋಪಿತವಾದುದೆಲ್ಲಾ ಮಿಥ್ಯೆಯಾಗಬೇಕಷ್ಟೆ?

## ೪೧೪. ಆರೋಪಿತಚೈತನ್ಯಸ್ಯ ಮಿಥ್ಯಾತ್ವೇಽಪಿ ಅನಾರೋಪಿತ ಚೈತನ್ಯಸ್ಯ ಸತ್ಯತ್ವಾಶಂಕಾನಿರಾಕರಣಂ.

"ಪೂಜ್ಯರೇ! ಅಂತಃಕರಣದಲ್ಲಿ ಆರೋಪಿತವಾದ ಚೈತನ್ಯವು ಮಿಥ್ಯೆಯಾದರೂ ಹಾನಿಯಿಲ್ಲ; ಅದರಲ್ಲಿ ಆರೋಪಿತವಾಗದ ಸ್ವತಂತ್ರಚೈತನ್ಯವು ಮಿಥ್ಯೆಯಾಗದೆ ಸತ್ಯವಾಗಿಯೇ ಇರುವುದಲ್ಲವೆ?" ಎಂದು ಆಶಂಕಿಸಲಾಗುವುದಿಲ್ಲ.

ಏತಕ್ಕೆಂದರೆ—ಅನಾರೋಪಿತವಾದ ಸ್ವತಂತ್ರಚೈತನ್ಯವೆಂಬುದು ಆಕಾಶ ಪುಷ್ಪದ ಸೌರಭ್ಯದಂತೆ ಅತ್ಯಂತಾಪ್ರಸಿದ್ಧವಾಗಿ ಇರುವುದು. "ನಾನು ಘಟವನ್ನು ತಿಳಿಯುತ್ತೇನೆ" ಎಂಬುದಾಗಿ ಅಹಂಪದದ ಅರ್ಥವಾದ ಆತ್ಮನಿಗೆ ಧರ್ಮಭೂತವಾಗಿಯೇ ಚೈತನ್ಯವು ಎಲ್ಲಾ ಸ್ಥಳಗಳಲ್ಲಿಯೂ ತೋರುತ್ತಿರುವುದರಿಂದ ಆತ್ಮಭಿನ್ನವಾದ ಅಂತಃಕರಣದಲ್ಲಿ ಆರೋಪಿತವಾದ ಚೈತನ್ಯವೆಂಬುದೇ ಅಪ್ರಸಿದ್ಧವಾಗಿ ಇರುವಲ್ಲಿ ಸ್ವತಂತ್ರಚೈತನ್ಯವೆಂಬುದು ಅತ್ಯಂತಾಪ್ರಸಿದ್ಧವೆನ್ನುವುದರಲ್ಲಿ ತಡೆಯೇನು?

**೪೧೫. ಸಪ್ತಮೀತತ್ಪುರುಷಪಕ್ಷೇ ಚೈತನ್ಯೇ ಅಂತಃಕರಣಾಶ್ರಯತ್ವ ಭ್ರಮಸಂಭವೇಽಪಿ ಅಂತಃಕರಣೇ ಜ್ಞಾತೃತ್ವಭ್ರಮಾಸಿದ್ಧಿಃ.**

ಸಪ್ತಮೀತತ್ಪುರುಷಸಮಾಸವನ್ನು ಅಂಗೀಕರಿಸಿ—ದರ್ಪಣದಲ್ಲಿ ಮುಖದ ಆರೋಪದಂತೆ ಚೈತನ್ಯದಲ್ಲಿ ಅಂತಃಕರಣದ ಆರೋಪವೆಂದು ಹೇಳುವುದಾದರೆ—ಶುಕ್ತಿಕೆಯಲ್ಲಿ ರಜತತ್ವಾಶ್ರಯತ್ವಭ್ರಮವುಂಟಾಗುವಂತೆಯೂ, ದರ್ಪಣದಲ್ಲಿ ಮುಖಾಶ್ರಯತ್ವಭ್ರಮವುಂಟಾಗುವಂತೆಯೂ, "ಚೈತನ್ಯವು ಅಂತಃಕರಣಕ್ಕೆ ಆಶ್ರಯವಾಗಿ ಇರುವುದು" ಎಂದು ಚೈತನ್ಯದಲ್ಲಿ ಅಂತಃಕರಣಾಶ್ರಯತ್ವಭ್ರಮವು ಉಂಟಾಗಲಿ; ಆದಮಾತ್ರಕ್ಕೆ ಇದರಿಂದ—"ನಾನು ಜ್ಞಾನಾಶ್ರಯನಾಗಿ ಇರುವೆನು" ಎಂದು ಅಂತಃಕರಣದಲ್ಲಿ ಜ್ಞಾತೃತ್ವಭ್ರಮವು ಹೇಗೆ ಸಿದ್ಧಿಸುವುದು?

**೪೧೬. ಚೈತನ್ಯೇ ಅಂತಃಕರಣತಾದಾತ್ಮ್ಯಾರೋಪಪಕ್ಷೇಽಪಿ ಅಂತಃಕರಣೇ ಜ್ಞಾತೃತ್ವಭ್ರಮಾಸಿದ್ಧಿಃ.**

ಹೀಗೆ ಚೈತನ್ಯದಲ್ಲಿ ಅಂತಃಕರಣಕ್ಕೆ ಸಂಸರ್ಗಾರೋಪವನ್ನು ಹೇಳದೆ ತಾದಾತ್ಮ್ಯಾರೋಪವನ್ನೇ ಹೇಳುವುದಾದರೆ—**"ಜ್ಞಾನಮಹಂ" (ಜ್ಞಾನವು ಅಹಂಪದಾರ್ಥವಾಗಿ ಇರುವುದು)** ಎಂದು ಚೈತನ್ಯದಲ್ಲಿ ಅಂತಃಕರಣತಾದಾತ್ಮ್ಯಭ್ರಮವು ಉಂಟಾಗಲಿ; ಆದಮಾತ್ರಕ್ಕೆ ಇದರಿಂದ—"ನಾನು ಜ್ಞಾನಾಶ್ರಯನಾಗಿ ಇರುವೆನು" ಎಂದು ಅಂತಃಕರಣದಲ್ಲಿ ಜ್ಞಾತೃತ್ವಭ್ರಮವು ಹೇಗೆ ಸಿದ್ಧಿಸುವುದು? ಆದಕಾರಣ ಹಿಂದೆ ಹೇಳಿದ ಮೂರು ಪಕ್ಷಗಳೊಳಗೆ "ಚಿಚ್ಛಾಯಾಪತ್ತಿಯಿಂದ ಅಂತಃಕರಣದಲ್ಲಿ ಜ್ಞಾತೃತ್ವಭ್ರಾಂತಿಯುಂಟಾಗಬಹುದು" ಎಂಬ ಪ್ರಥಮ ಪಕ್ಷವು ಸಂಭವಿಸುವುದಿಲ್ಲ.

**೪೧೭. ಚಿತಿ ವಾಸ್ತವಜ್ಞಾತೃತ್ವಾಭಾವಾತ್ ಚಿತ್ಸಂಪರ್ಕೇಣಾಪಿ ಅಂತಃಕರಣೇ ಜ್ಞಾತೃತ್ವಭ್ರಮಾಸಂಭವಃ.**

ಇನ್ನು—"ಅಂತಃಕರಣದಲ್ಲಿ ಚಿತ್ಸಂಪರ್ಕದಿಂದ ಜ್ಞಾತೃತ್ವಭ್ರಾಂತಿಯುಂಟಾಗುವುದು" ಎಂಬ ದ್ವಿತೀಯಪಕ್ಷವನ್ನು ಪರೀಕ್ಷಿಸೋಣ. ತಾತ್ತ್ವಿಕವಾದ ಔಷ್ಣ್ಯಗುಣವುಳ್ಳ ಉಷ್ಣದ್ರವ್ಯದ ಸಂಪರ್ಕವಲ್ಲವೆ ಅಯಃಪಿಂಡದಲ್ಲಿ ಔಷ್ಣ್ಯಭ್ರಮಕ್ಕೆ ಕಾರಣವಾಗಿ ಇರುವುದು? ಅದರಂತೆ ಚಿತ್ಸಂಪರ್ಕದಿಂದ ಅಂತಃಕರಣದಲ್ಲಿ ಜ್ಞಾತೃತ್ವಭ್ರಾಂತಿಯುಂಟಾಗಬೇಕಾದರೆ ಚಿದ್ವಸ್ತುವಿನಲ್ಲಿ ವಾಸ್ತವಿಕವಾದ ಜ್ಞಾತೃತ್ವವಿರಬೇಕಲ್ಲವೆ? ಅಯಃಪಿಂಡದಲ್ಲಿ ಔಷ್ಣ್ಯವು ಮಿಥ್ಯೆಯಾಗಿ ಇದ್ದರೂ ಯಾವುದರ ಸಂಪರ್ಕವು ಔಷ್ಣ್ಯಭ್ರಾಂತಿಗೆ ಕಾರಣವಾಗಿ ಇರುವುದೋ ಆ

ದ್ರವ್ಯದಲ್ಲಿ ಔಷ್ಣ್ಯವು ತಾತ್ತ್ವಿಕವಾಗಿಯೇ ಇರುವುದು. ಪ್ರಕೃತದಲ್ಲಿಯಾದರೋ ಅಂತಃಕರಣ, ಚಿದ್ವಸ್ತು, ಈ ಎರಡರಲ್ಲಿಯೂ ತಾತ್ತ್ವಿಕವಾದ ಜ್ಞಾತೃತ್ವವನ್ನು ಅಂಗೀಕರಿಸದಿರುವ ನಿಮ್ಮ ಮತದಲ್ಲಿ ಚಿತ್ಸಂಪರ್ಕವು ಅಂತಃಕರಣದಲ್ಲಿ ಉಂಟಾದ ಮಾತ್ರಕ್ಕೆ ಚಿದ್ವಸ್ತುವಿನಲ್ಲಿ ಇಲ್ಲದಿರುವ ಜ್ಞಾತೃತ್ವಧರ್ಮಕ್ಕೆ ಅಂತಃಕರಣದಲ್ಲಿ ಆರೋಪವು ಹೇಗೆ ಸಂಭವಿಸೀತು ?

## ೪೧೮. ಚಿದಂತಃಕರಣಯೋರ್ಧರ್ಮಧರ್ಮಿಭಾವ ಸಂಬಂಧಾರೋಪಾಶಂಕಾ.

“ ಪೂಜ್ಯರೇ ? ಅಂತಃಕರಣದಲ್ಲಿ ಜ್ಞಾತೃತ್ವಕ್ಕೆ ಆರೋಪವೆಂದು ಹೇಳಿದ ರಲ್ಲವೆ ಆವುದಾದರೊಂದುಕಡೆಯಲ್ಲಿ ಜ್ಞಾತೃತ್ವವನ್ನು ಔಷ್ಣ್ಯದಂತೆ ತಾತ್ತ್ವಿಕ ವೆಂದು ಅಂಗೀಕರಿಸಬೇಕಾಗಿಬರುವುದು ; ಅಂತಃಕರಣದಲ್ಲಿ ಜ್ಞಾತೃತ್ವಕ್ಕೆ ಆರೋಪ ವೆಂದು ನಾವು ಹೇಳುವುದಿಲ್ಲ ; ಮತ್ತೇನೆಂದರೆ—ರೂಪವುಳ್ಳ ವಸ್ತುವಿಗೂ ಅದರಲ್ಲಿ ಇರುವ ರೂಪಕ್ಕೂ ಧರ್ಮಧರ್ಮಿಭಾವನೆಂಬ ಸಂಬಂಧವು ತಾತ್ತ್ವಿಕವಾಗಿಯೇ ಲೋಕ ದಲ್ಲಿ ಪ್ರಸಿದ್ಧವಾಗಿ ಇರುವುದು ; ಅಂಥ ಧರ್ಮಧರ್ಮಿಭಾವನೆಂಬ ಸಂಬಂಧವು ಘಟಕ್ಕೂ ಅದರ ರೂಪಕ್ಕೂ ತಾತ್ತ್ವಿಕವಾಗಿ ಇರುವಂತೆ ಅಂತಃಕರಣಕ್ಕೂ ಜ್ಞಾನಕ್ಕೂ ಸಹ ತಾತ್ತ್ವಿಕವಾಗಿಯೇ ಇರುವುದೆಂದು ತಿಳಿಯಬಾರದು ; ಕಿಂತು ಆರೋಪಿತವೆಂದು ತಿಳಿಯಬೇಕು ; ಹೀಗೆ ತಿಳಿವುದರಿಂದಲೇ ಅಂತಃಕರಣದಲ್ಲಿ ಜ್ಞಾತೃತ್ವಭ್ರಾಂತಿಯುಂಟಾಗುವುದು ; ಆದಕಾರಣ ಲೋಕದಲ್ಲಿ ಎರಡು ಪದಾರ್ಥ ಗಳಿಗೆ ಸಿದ್ಧವಾಗಿ ಇರುವ ಧರ್ಮಧರ್ಮಿಭಾವವು—ಜ್ಞಾನ, ಅಂತಃಕರಣ ಈ ಎರಡು ಪದಾರ್ಥಗಳಲ್ಲಿ ಆರೋಪಿತವಾಗಿ ಇರುವುದೆಂದು ಹೇಳುವೆವಾದುದರಿಂದ ಅನವಸ್ಥಾ ದೋಷವೂ ಇಲ್ಲ, ಜ್ಞಾತೃತ್ವವನ್ನು ತಾತ್ತ್ವಿಕವೆಂದು ಅಂಗೀಕರಿಸಬೇಕಾದುದೂ ಇಲ್ಲ. ”—

## ೪೧೯. ನಿಯಾಮಕಾಭಾವಾತ್ ಧರ್ಮಧರ್ಮಿಭಾವವೈಪರೀತ್ಯಸ್ಯಾ ಪ್ಯಾಪತ್ತ್ಯಾ ಉಕ್ತಾಶಂಕಾನಿರಾಕರಣಂ.

ಹೀಗೆ ಹೇಳಲೂ ಸಾಧ್ಯವಿಲ್ಲ. ಏತಕ್ಕೆಂದರೆ—ಜ್ಞಾನ, ಅಂತಃಕರಣ ಈ ಎರಡರಲ್ಲಿ ಧರ್ಮಧರ್ಮಿಭಾವವು ಆರೋಪಿತವಾಗಿ ಇರುವುದೆಂದು ಹೇಳುವುದಾದರೆ— ಈ ಎರಡರೊಳಗೆ ಧರ್ಮಿ ಆವುದು ? ಧರ್ಮವು ಆವುದು ಎಂದು ನಿರ್ಣಯಿಸಿ ತೋರಿಸಿ ಕೊಡುವ ಪ್ರಮಾಣವು ಆವುದೂ ಇಲ್ಲವಾದುದರಿಂದ ವ್ಯತ್ಯಸ್ತವಾಗಿಯೂ ತೋರ ಬಹುದಾಗಿ ಬರುವುದು ; ಎಂದರೆ—“ ಅಹಂ ಜಾನಾಮಿ ” ಎಂಬುದಾಗಿ

ಅಹಂಪದಾರ್ಥವು ಜ್ಞಾನಕ್ಕೆ ಆಶ್ರಯವಾಗಿ ಇರುವುದೆಂದು ಹೇಗೆ ತೋರುವುದೋ ಅದರಂತೆ—"ಜ್ಞಾನವಮಹಮರ್ಥಾಶ್ರಯಃ" ಎಂಬುದಾಗಿ ಜ್ಞಾನವು ಅಹಂಪದಾರ್ಥಕ್ಕೆ ಆಶ್ರಯವಾಗಿ ಇರುವುದೆಂದೂ ತೋರಬೇಕಾಗಿ ಬರುವುದು.

## ೪೨೦. ಜ್ಞಾನೇ ಅಂತಃಕರಣೇ ಚ ಧರ್ಮಭಿನ್ನತ್ವಧರ್ಮಿಭಿನ್ನತ್ವಾ ಗ್ರಹಣಯೋರೇವ ನಿಯಾಮಕತ್ವಾಶಂಕಾ.

"ಪೂಜ್ಯರೇ! ಇಲ್ಲಿ ನಿಯಾಮಕವಿಲ್ಲದಿದ್ದರಲ್ಲವೆ ವ್ಯತ್ಯಸ್ತವಾಗಿಯೂ ತೋರಬೇಕಾಗಿ ಬರುವುದೆಂದು ಹೇಳಲಾಗುವುದು; ಇಂಥದೇ ಧರ್ಮಿಯೆಂದೂ ಇಂಥದೇ ಧರ್ಮವೆಂದೂ ವ್ಯವಸ್ಥೆಯಿಂದ ತೋರಿಸಿಕೊಡುವ ನಿಯಾಮಕಹೇತು ಪ್ರಕೃತದಲ್ಲಿ ಇರುವುದು; ಹೇಗೆಂದರೆ—ಜ್ಞಾನಕ್ಕೆ ಆಶ್ರಯವಾದ ಧರ್ಮಿಗಿಂತಲೂ ಅಂತಃಕರಣವು ವಸ್ತುತಃ ಭಿನ್ನವಾಗಿ ಇದ್ದರೂ ಇದರಲ್ಲಿ ಧರ್ಮಿಭಿನ್ನತ್ವಜ್ಞಾನವು ಉಂಟಾಗಲಿಲ್ಲವಾಗಿ ಈ ಧರ್ಮಿಭೇದಾಗ್ರಹಣವೇ ಅಂತಃಕರಣದಲ್ಲಿ ಧರ್ಮಿತ್ವಾ ರೋಪಕ್ಕೆ ನಿಯಾಮಕವಾಗುವುದು; ಅಂತಃಕರಣವೆಂಬ ಧರ್ಮಿಯಲ್ಲಿ ಇರುವ ಧರ್ಮ ಪದಾರ್ಥಕ್ಕಿಂತಲೂ ಜ್ಞಾನವೆಂಬುದು ವಸ್ತುತಃ ಭಿನ್ನವಾಗಿ ಇದ್ದರೂ ಇದರಲ್ಲಿ ಧರ್ಮಭಿನ್ನತ್ವಜ್ಞಾನವು ಉಂಟಾಗಲಿಲ್ಲವಾಗಿ ಈ ಧರ್ಮಭೇದಾಗ್ರಹಣವೇ ಜ್ಞಾನ ದಲ್ಲಿ ಧರ್ಮತ್ವಾರೋಪಕ್ಕೆ ನಿಯಾಮಕವಾಗುವುದು; ಈ ನಿಯಾಮಕಗಳಿಂದ ಅಂ ತಃಕರಣವೇ ಧರ್ಮಿಯೆಂದೂ ಜ್ಞಾನವೇ ಧರ್ಮವೆಂದೂ ವ್ಯವಸ್ಥಿತವಾಗುವಕಾರಣ "ಅಹಂ ಜಾನಾಮಿ" ಎಂಬುದಾಗಿಯೇ ಪ್ರತೀತಿಯುಂಟಾಗುವುದಲ್ಲದೆ ವ್ಯತ್ಯಸ್ತ ವಾಗಿ ಪ್ರತೀತಿ ಉಂಟಾಗಲಾರದು."—

## ೪೨೧. ಸ್ವಯಂಪ್ರಕಾಶೇ ಜ್ಞಾನೇ ಧರ್ಮಭೇದಾಗ್ರಹಣಾನುಪಪತ್ತಿಃ ಸವಿಶೇಷತ್ವಪ್ರಸಂಗೋ ವಾ.

ಹಾಗೆ ಹೇಳಲೂ ಸಾಧ್ಯವಿಲ್ಲ. ಏತಕ್ಕೆಂದರೆ—ಅಂತಃಕರಣದಲ್ಲಿ ಇರುವ ಧರ್ಮಕ್ಕಿಂತಲೂ ಚೈತನ್ಯವೆಂಬುದು ವಸ್ತುತಃ ಭಿನ್ನವೆಂದು ಹೇಳುವಿರಾದರೆ ಚೈತನ್ಯ ದಲ್ಲಿ ಭೇದವೆಂಬ ಒಂದು ಪದಾರ್ಥವನ್ನು ಅಂಗೀಕರಿಸಿದಂತಾಗುವುದು. ಈ ಭೇದವೆಂಬುದು ಚೈತನ್ಯಸ್ವರೂಪವೇಯೋ? ಅಥವಾ ಚೈತನ್ಯದಲ್ಲಿ ಇರುವ ಒಂದು ಧರ್ಮವೋ? 'ಚೈತನ್ಯಸ್ವರೂಪವೇ' ಎಂದು ಹೇಳುವಿರಾದರೆ—ಚೈತನ್ಯವು ಸ್ವಯಂಪ್ರಕಾಶವಾದುದರಿಂದ ಸರ್ವದಾ ಸ್ವರೂಪಗ್ರಹಣವಿರುವಾಗ—ತದಭಿನ್ನ ವಾದ ಭೇದಕ್ಕೂ ಸರ್ವದಾ ಗ್ರಹಣವಿರಬೇಕಾಗಿ ಭೇದಾಗ್ರಹಣಕ್ಕೆ ಅವಕಾಶವಿಲ್ಲ; ಚೈತನ್ಯದಲ್ಲಿ ಇರುವ ಒಂದು ಧರ್ಮವೆಂದು ಹೇಳುವಿರಾದರೆ ಚೈತನ್ಯವು ಸಧರ್ಮಕ

ವಾಗುವುದಾದುದರಿಂದ ಸವಿಶೇಷವೆನಿಸಿಕೊಳ್ಳಬೇಕಾಗಿಬಂದು ನಿರ್ವಿಶೇಷಬ್ರಹ್ಮ ವಾದಕ್ಕೆ ಭಂಗವುಂಟಾಗಿ ನಿಮಗೆ ಅಪಸಿದ್ಧಾಂತವಾಗುವುದು. ಆದಕಾರಣ "ಅಂತಃಕರಣದಲ್ಲಿ ಚಿತ್ಸಂಪರ್ಕದಿಂದ ಜ್ಞಾತೃತ್ವಭ್ರಾಂತಿಯುಂಟಾಗುವುದು" ಎಂಬ ದ್ವಿತೀಯಪಕ್ಷವೂ ಸಂಭವಿಸುವುದಿಲ್ಲ.

## ೪೨೨. ಸ್ವಯಂಪ್ರಕಾಶಸ್ಯ ಚೈತನ್ಯಸ್ಯ ಇತರವ್ಯಂಗ್ಯತ್ವಾನುಪ ಪತ್ತಿಃ ಜಡಸ್ಯಾಂತಃಕರಣಸ್ಯ ಇತರಾಭಿವ್ಯಂಜಕತ್ವಾ ನುಪಪತ್ತಿಶ್ಚ.

ಇನ್ನು "ಚೈತನ್ಯಾಭಿವ್ಯಂಜಕವಾದ ಅಂತಃಕರಣದಲ್ಲಿ ಚೈತನ್ಯವು ಆರೋಪಿಸಲ್ಪಡುವುದರಿಂದ ಜ್ಞಾತೃತ್ವಭ್ರಾಂತಿಯುಂಟಾಗುವುದು" ಎಂಬ ತೃತೀಯ ಪಕ್ಷವನ್ನು ವಿಚಾರಿಸೋಣ—ಘಟಾದಿಪದಾರ್ಥಗಳು ಸ್ವಯಂಪ್ರಕಾಶಗಳಲ್ಲದೆ ಜಡಸ್ವರೂಪಗಳಾದುದರಿಂದ ತಾವಾಗಿಯೇ ಅಭಿವ್ಯಕ್ತಗಳಲ್ಲವಾಗಿ ಇವುಗಳಿಗೆ ಅಭಿವ್ಯಂಜಕಾಪೇಕ್ಷೆಯುಂಟಾದಾಗ ದೀಪಾದಿಪ್ರಕಾಶವೂ ಜ್ಞಾನವೂ ಇವುಗಳಿಗೆ ಅಭಿವ್ಯಂಜಕಗಳೆಂದು ಹೇಳಬಹುದು; ಚೈತನ್ಯವಾದರೆ ಘಟಾದಿಪದಾರ್ಥಗಳಂತೆ ಜಡಸ್ವರೂಪವಲ್ಲದೆ ಸ್ವಯಂಪ್ರಕಾಶವಾದುದರಿಂದ ತಾನಾಗಿಯೇ ಅಭಿವ್ಯಕ್ತವಾಗಿ ಇರುವಕಾರಣ ಇದಕ್ಕೆ ಅಭಿವ್ಯಂಜಕಾಂತರಾಪೇಕ್ಷೆಯೇ ಇಲ್ಲವಾಗಿ ಅಂತಃಕರಣಕ್ಕೆ ಚೈತನ್ಯಾಭಿವ್ಯಂಜಕತ್ವವೇ ಅಸಿದ್ಧವಾಗಿ ಇರುವುದು.

ಮತ್ತು—ಜಡವಾದ ಜ್ಞಾನೇತರಪದಾರ್ಥಕ್ಕೆ ಅಜಡವಾದ ಜ್ಞಾನವು ಅಭಿವ್ಯಂಜಕವಾಗಬಹುದಲ್ಲದೆ ಜ್ಞಾನೇತರಪದಾರ್ಥವು ಜ್ಞಾನಕ್ಕೆ ಎಂದಿಗೂ ಅಭಿವ್ಯಂಜಕವಾಗಲಾರದು. ಹೀಗಿರಲು ಜಡಸ್ವರೂಪವಾದ ಅಹಂಕಾರವು ಅಜಡ ಸ್ವರೂಪವಾದ ಎಂದರೆ ಸ್ವಯಂಪ್ರಕಾಶವಾದ ಚೈತನ್ಯಸ್ವರೂಪಕ್ಕೆ ಅಭಿವ್ಯಂಜಕವಾಗಿ ಇರುವುದೆಂದು ಹೇಳುವುದು ಅವಿಚಾರಿತರಮಣೀಯವಾಗಿಯೂ, ಯುಕ್ತಿಶೂನ್ಯವಾಗಿಯೂ, ಹಾಸ್ಯಾಸ್ಪದವಾಗಿಯೂ, ಇರುವುದು. ಜಗಜ್ಜ್ಯೋತಿಯಾಗಿ ದೇದೀಪ್ಯಮಾನನಾಗಿರುವ ಆದಿತ್ಯನು ಇದ್ದಲನ್ನು ಅಭಿವ್ಯಕ್ತಪಡಿಸುವನೋ? ಇದ್ದಲೇ ಅಂಥ ಆದಿತ್ಯನನ್ನು ಅಭಿವ್ಯಕ್ತಪಡಿಸುವುದೋ? ಎಂದು ಸಂದೇಹವುಂಟಾದರೆ ಗೋಪಾಲಾಂಗನೆಯರು ಕೂಡ ಈ ಸಂದೇಹವನ್ನು ನಿರಾಕರಿಸಬಲ್ಲರು.

ಅಂತು ಸ್ವಯಂಪ್ರಕಾಶವಸ್ತುವಿಗೆ ಇತರಾಭಿವ್ಯಂಗ್ಯತ್ವವು ಸಂಭವಿಸುವುದಿಲ್ಲವಾಗಿ—ಚೈತನ್ಯಕ್ಕೆ ಸ್ವಯಂಪ್ರಕಾಶತ್ವವನ್ನು ಒಪ್ಪಿರುವಿರಾದುದರಿಂದ ಅಹಂಕಾರಾಭಿವ್ಯಂಗ್ಯತ್ವವು ಕೂಡುವುದಿಲ್ಲ. ಹಾಗೆಯೇ ಜಡವಸ್ತುವಿಗೆ ಇತರಾಭಿವ್ಯಂಜ

ಕತ್ವವು ಸಂಭವಿಸುವುದಿಲ್ಲವಾಗಿ—ಅಹಂಕಾರಕ್ಕೆ ಜಡತ್ವವನ್ನು ಒಪ್ಪಿರುವಿರಾದುದ ರಿಂದ ಚೈತನ್ಯಾಭಿವ್ಯಂಜಕತ್ವವೂ ಕೂಡುವುದಿಲ್ಲ.

"ದರ್ಪಣವೇ ಮೊದಲಾದ ಜಡಪದಾರ್ಥಗಳು ಮುಖಾದಿಪದಾರ್ಥಗಳಿಗೆ ಅಭಿವ್ಯಂಜಕಗಳಾಗಿ ಇರುವುವೆಂಬುದು ಲೋಕಪ್ರಸಿದ್ಧವಾಗಿ ಇರುವಲ್ಲಿ ಜಡವಸ್ತು ವಿಗೆ ಇತರಾಭಿವ್ಯಂಜಕತ್ವವು ಸಂಭವಿಸುವುದಿಲ್ಲವೆಂದು ಹೇಗೆ ಹೇಳಲಾದೀತು" ಎಂದು ಆಶಂಕಿಸಬಾರದು. ಏತಕ್ಕೆಂದರೆ—ಜಡಶಬ್ದದಿಂದ ಅಸ್ವಚ್ಛಪದಾರ್ಥಗಳನ್ನೇ ವಿವಕ್ಷೆಮಾಡಿ ಇರುವೆವು. ದರ್ಪಣಾದಿಗಳು ಜಡವಾಗಿ ಇದ್ದರೂ ಸ್ವಚ್ಛಪದಾರ್ಥ ವಾದುದರಿಂದಲ್ಲವೆ ಮುಖಾದಿಗಳಿಗೆ ಅಭಿವ್ಯಂಜಕಗಳಾಗುವುವು.

**೪೨೩. ಚೈತನ್ಯಸ್ಯ ಇತರವ್ಯಂಗ್ಯತ್ವಾಭ್ಯುಪಗಮೇಽಪಿ ಅಂತಃಕರ ಣಸ್ಯ ಇತರಾಭಿವ್ಯಂಜಕತ್ವಾಭ್ಯುಪಗಮೇಽಪಿ ತಯೋಃ ಪರಸ್ಪರಂ ವ್ಯಂಗ್ಯವ್ಯಂಜಕಭಾವಾನುಪಪತ್ತಿಃ.**

ಅಂತು ಚೈತನ್ಯಕ್ಕೆ ಇತರಾಭಿವ್ಯಂಗ್ಯತ್ವವೂ, ಅಹಂಕಾರಕ್ಕೆ ಇತರಾಭಿವ್ಯಂ ಜಕತ್ವವೂ ಸಂಭವಿಸುವುದಿಲ್ಲವೆಂಬುದು ಸ್ಪಷ್ಟವಾಯಿತು; ಒಂದುವೇಳೆ ಚೈತ ನ್ಯಕ್ಕೆ ಇತರಾಭಿವ್ಯಂಗ್ಯತ್ವವನ್ನೂ ಅಹಂಕಾರಕ್ಕೆ ಇತರಾಭಿವ್ಯಂಜಕತ್ವವನ್ನೂ ಸ್ವೀಕರಿಸಿದರೂ ಚೈತನ್ಯ, ಅಹಂಕಾರ ಈ ಎರಡು ಪದಾರ್ಥಗಳಿಗೆ ಪರಸ್ಪರವಾಗಿ ವ್ಯಂಗ್ಯವ್ಯಂಜಕಭಾವವು ಸುತರಾಂ ಸಂಭವಿಸುವುದಿಲ್ಲ. ಹಾಗೆ ಸಂಭವಿಸುವುದಾ ದರೆ ಈ ಎರಡು ಪದಾರ್ಥಗಳ ಸ್ವಭಾವಗಳಿಗೂ ವಿರೋಧವು ದುಷ್ಪರಿಹರವಾಗು ವುದು; ಹೇಗೆಂದರೆ ಚೈತನ್ಯವ್ಯತಿರಿಕ್ತವಾದ ಸಮಸ್ತಪದಾರ್ಥಗಳ ಸಿದ್ಧಿಗೂ ಚೈತನ್ಯವೇ ಹೇತುವಾಗಿ ಇರುವುದರಿಂದ ಸ್ವವ್ಯತಿರಿಕ್ತಸಮಸ್ತಪದಾರ್ಥಸಿದ್ಧಿ ಹೇತುತ್ವವೇ ಚೈತನ್ಯಕ್ಕೆ ಸ್ವಭಾವವಾಗಿ ಇರುವುದು; ಅಹಂಕಾರವು ಚೈತನ್ಯ ವ್ಯತಿರಿಕ್ತವಸ್ತುವಾದುದರಿಂದ ಚೈತನ್ಯದಿಂದಲೇ ಸಿದ್ಧಿಸಬೇಕಾಗಿ ಇರುವಕಾರಣ ಚೈತನ್ಯಾಧೀನವಾದ ಸಿದ್ಧಿಯುಳ್ಳುದೇ ಅಹಂಕಾರಕ್ಕೆ ಸ್ವಭಾವವಾಗಿ ಇರು ವುದು. ಹೀಗೆ ಅತ್ಯಂತಪ್ರತಿಕೂಲವಾಗಿ ಇರುವ ಈ ಸ್ವಭಾವಗಳಿಗೆ ವಿರೋಧವು ದುಷ್ಪರಿಹರವಾಗುವುದಾದುದರಿಂದ ಚೈತನ್ಯಕ್ಕೂ ಅಹಂಕಾರಕ್ಕೂ ಪರಸ್ಪರವಾಗಿ ವ್ಯಂಗ್ಯವ್ಯಂಜಕಭಾವವು ಸಂಭವಿಸುವುದಿಲ್ಲ—ಎಂದರೆ ಚೈತನ್ಯದಿಂದಲೇ ಸಿದ್ಧಿಸಬೇ ಕಾದ ಅಹಂಕಾರವು ಚೈತನ್ಯಕ್ಕೆ ಅಭಿವ್ಯಂಜಕವಾಗಲಾರದು; ತಂದೆಯೆನಿಸಿಕೊಂ ಡವನು ತನ್ನ ತಂದೆಯನ್ನು ಕುರಿತು ಪುತ್ರನೆನಿಸಿಕೊಂಡರೂ ತನ್ನ ಪುತ್ರನನ್ನು ಕುರಿತು ಯಾವಾಗಲೂ ತಂದೆಯೆನಿಸಿಕೊಳ್ಳುವನೇ ಅಲ್ಲದೆ ಪುತ್ರನೆನಿಸಿಕೊಳ್ಳಲಾರನಷ್ಟೆ?

ಹಾಗೆಯೇ ಪುತ್ರನೆನಿಸಿಕೊಂಡವನು ತನ್ನ ಪುತ್ರನನ್ನು ಕುರಿತು ತಂದೆಯೆನಿಸಿಕೊಂಡರೂ ತನ್ನ ತಂದೆಯನ್ನು ಕುರಿತು ಯಾವಾಗಲೂ ಪುತ್ರನೆನಿಸಿಕೊಳ್ಳುವನೇ ಅಲ್ಲದೆ ತಂದೆಯೆನಿಸಿಕೊಳ್ಳಲಾರನಷ್ಟೆ? ಅದರಂತೆ ಚೈತನ್ಯ, ಅಹಂಕಾರ ಈ ಎರಡರೊಳಗೆ ಚೈತನ್ಯವು ಅಹಂಕಾರವನ್ನು ಕುರಿತು ವ್ಯಂಜಕವೆನಿಸಿಕೊಳ್ಳುವುದಲ್ಲದೆ ವ್ಯಂಗ್ಯವೆನಿಸಿಕೊಳ್ಳಲಾರದು; ಅಹಂಕಾರವು ಚೈತನ್ಯವನ್ನು ಕುರಿತು ವ್ಯಂಗ್ಯವೆನಿಸಿಕೊಳ್ಳುವುದಲ್ಲದೆ ವ್ಯಂಜಕವೆನಿಸಿಕೊಳ್ಳಲಾರದು.

**೪೨೪. ವ್ಯಂಗ್ಯತ್ವೇ ಚಾತ್ಮನೋಽನನುಭೂತಿತ್ವಪ್ರಸಂಗಃ.**

ಮತ್ತು ಜ್ಞಾನವೆಂಬ ಅನುಭೂತಿಸ್ವರೂಪನಾದ ಆತ್ಮನಿಗೆ ಇತರಾಭಿವ್ಯಂಗ್ಯತ್ವವನ್ನು ಸ್ವೀಕರಿಸುವುದಾದರೆ—ಘಟಾದಿಪದಾರ್ಥಗಳಂತೆ ಅನನುಭೂತಿತ್ವವು ಎಂದರೆ ಅನುಭೂತಿಭಿನ್ನತ್ವವು ಪ್ರಸಂಗಿಸುವುದೆಂಬ ಈ ಅಂಶವನ್ನು—ಆತ್ಮನಿಗೆ ಜ್ಞೇಯತ್ವವನ್ನು ನಿರಾಕರಿಸುವ ಪ್ರಕರಣದಲ್ಲಿ ನೀವೇ ಉಪಪಾದನೆಮಾಡಿ ತೋರಿಸಿರುವಿರಷ್ಟೆ? ಹೀಗಿರುವಲ್ಲಿ ಈಗ ಅಂಥ ಆತ್ಮನಿಗೆ ಅಹಂಕಾರಾಭಿವ್ಯಂಗ್ಯತ್ವವನ್ನು ಹೇಗೆ ಸ್ವೀಕರಿಸುವಿರಿ? ಆದರೂ ಸ್ವೀಕರಿಸುವುದಾದರೆ ಆತ್ಮನಿಗೆ ಅನನುಭೂತಿತ್ವದೋಷವು ಏತಕ್ಕೆ ಬರಲಾರದು? ಆ ದೋಷವು ಅವರ್ಜನೀಯವಲ್ಲವೆ?

ಹೀಗೆ—ಅಹಂಕಾರಕ್ಕೆ ಚೈತನ್ಯಾಭಿವ್ಯಂಜಕತ್ವವನ್ನು ಹೇಳುವ ತೃತೀಯಪಕ್ಷದಲ್ಲಿ ನಾವು ತೋರಿಸಿದ ದೂಷಣಗಳನ್ನೆಲ್ಲಾ **ಪರಮಾಚಾರ್ಯರಾದ ಯಾಮುನಮುನಿಗಳು** ಸಂಕ್ಷೇಪವಾಗಿ—

**"ಶಾಂತಾಂಗಾರ ಇವಾದಿತ್ಯಮಹಂಕಾರೋ ಜಡಾತ್ಮಕಃ |**
**ಸ್ವಯಂಜ್ಯೋತಿಷಮಾತ್ಮಾನಂ ವ್ಯನಕ್ತೀತಿ ನ ಯುಕ್ತಿಮತ್ ||**
**ವ್ಯಙ್ತ್ರ್ಯವ್ಯಂಗ್ಯತ್ವಮನ್ಯೋನ್ಯಂ ನಚ ಸ್ಯಾತ್ಪ್ರಾತಿಕೂಲ್ಯತಃ |**
**ವ್ಯಂಗ್ಯತ್ವೇಽನನುಭೂತಿತ್ವಮಿತ್ಯಪಿ ಸ್ಯಾದ್ಯಥಾ ಘಟೇ ||"**

ಎಂಬ ಎರಡು ಕಾರಿಕೆಗಳೊಳಗೆ ಅಡಗಿಸಿ ತೋರಿಸಿರುವರು. ಈ ಕಾರಿಕೆಗಳ ಅರ್ಥವನ್ನೇ ಹಿಂದೆ ವಿಶದವಾಗಿ ನಾವು ತೋರಿಸಿರುವೆವು. ಆದಕಾರಣ—"ಚೈತನ್ಯಾಭಿವ್ಯಂಜಕವಾದ ಅಂತಃಕರಣದಲ್ಲಿ ಚೈತನ್ಯವು ಆರೋಪಿಸಲ್ಪಡುವುದರಿಂದ ಜ್ಞಾತೃತ್ವಭ್ರಾಂತಿಯುಂಟಾಗುವುದು" ಎಂಬ ತೃತೀಯಪಕ್ಷವೂ ಸಂಭವಿಸುವುದಿಲ್ಲ.

**೪೨೫. ಆತ್ಮನೋ ಜ್ಞಾನಭಿನ್ನತ್ವಸಮರ್ಥನೋಪಸಂಹಾರಃ.**

ಆದುದರಿಂದ ಜ್ಞಾನಕ್ಕಿಂತಲೂ ಭಿನ್ನನಾಗಿಯೂ ಜ್ಞಾನಕ್ಕೆ ಆಶ್ರಯನಾಗಿಯೂ ಅಹಂಶಬ್ದಕ್ಕೆ ವಾಚ್ಯನಾಗಿಯೂ ಇರುವವನೇ ಆತ್ಮನೆನಿಸಿಕೊಳ್ಳುವನಲ್ಲದೆ ಜ್ಞಾನವೇ ಆತ್ಮನೆನಿಸಿಕೊಳ್ಳಲಾರದು.

## ೪೨೬. ಅಹಮರ್ಥಸ್ಯೈವಾತ್ಮತ್ವಸಮರ್ಥನಾರಂಭಃ ತತ್ರ ಪ್ರಥಮಂ ಮಾಯಿನಾಂ ಜ್ಞಾನಸ್ಯಾಲಿತ್ಯ ಪ್ರದರ್ಶನಂ.

ಈ ಸಂದರ್ಭದಲ್ಲಿ ಪ್ರಚ್ಛನ್ನಬೌದ್ಧರು ಅಹಂಶಬ್ದಾರ್ಥದ ತಿಳಿವಳಿಕೆಯಲ್ಲಿ ಮೋಸಹೋಗಿ-ತ್ರಿಗುಣದ್ರವ್ಯದ ಪರಿಣಾಮವಾದ ಇಪ್ಪತ್ತುನಾಲ್ಕು ತತ್ತ್ವಗಳೊಳಗೆ ಅಂತರ್ಗತವಾಗಿ ಇರುವ ಅಹಂಕಾರತತ್ತ್ವವೆಂಬ ಅಂತಃಕರಣವನ್ನೇ ಅಹಂ ಶಬ್ದಾರ್ಥವನ್ನಾಗಿ ತಿಳಿದು—"ಇದು ನಶ್ವರವಾದುದರಿಂದಲೂ, ಅವಿದ್ಯಾಕಲ್ಪಿತವಾದುದರಿಂದಲೂ ಆತ್ಮತತ್ತ್ವವಾಗಲಾರದಾದಕಾರಣ ಅಹಮರ್ಥವು ಆತ್ಮನಲ್ಲ; ಕಿಂತು ಜ್ಞಾನವೇ ಆತ್ಮನೆನಿಸಿಕೊಳ್ಳುವುದು." ಎಂದು ಹೇಳುವರು.

## ೪೨೭. ವ್ಯುತ್ಪತ್ತಿಭೇದಾತ್ ಅಹಂಕಾರಶಬ್ದಸ್ಯ ಅರ್ಥತ್ರಯವಾಚಕತ್ವಸ್ಮಾರಣಂ.

ಅಚಿತ್ತತ್ತ್ವಪರಿಚ್ಛೇದದೊಳಗೆ ಅಹಂಕಾರತತ್ತ್ವನಿರೂಪಣಪ್ರಸಂಗದಲ್ಲಿ ಅಹಂಕಾರಶಬ್ದಕ್ಕೆ ಮೂರುವಿಧವಾದ ವ್ಯುತ್ಪತ್ತಿಯಿಂದ ಮೂರು ಅರ್ಥಗಳನ್ನು ನಾವು ತೋರಿಸಿ ಇರುವೆವು. ಇದರಲ್ಲಿ ಮೊದಲನೆಯ ಅರ್ಥವು—ಅಹಂಶಬ್ದವಾಚ್ಯನಾದ ಆತ್ಮನಲ್ಲಿ ಅಹಂಬುದ್ಧಿಯನ್ನು ಮಾಡುವಿಕೆ ಅಹಂಕಾರವೆನಿಸಿಕೊಳ್ಳುವುದು ಎಂಬುದೇ. ಎರಡನೆಯದು—ಅಹಂಶಬ್ದವಾಚ್ಯನಾದ ಆತ್ಮನಲ್ಲದ ದೇಹದಲ್ಲಿ ಅಹಂಬುದ್ಧಿಯನ್ನು ಎಂದರೆ ಆತ್ಮಬುದ್ಧಿಯನ್ನು ಮಾಡುವಿಕೆ ಅಹಂಕಾರವೆನಿಸಿಕೊಳ್ಳುವುದು ಎಂಬುದೇ. ಮೂರನೆಯದು—ಹೀಗೆ ರಜೋಗುಣತಮೋಗುಣಕಾರ್ಯವಾದ—ದೇಹದಲ್ಲಿ ಅಹಂಬುದ್ಧಿಗೆ ಹೇತುವಾಗಿ ಇರುವ ಅಹಂಕಾರತತ್ತ್ವವು ಅಹಂಕಾರವೆನಿಸಿಕೊಳ್ಳುವುದು ಎಂಬುದೇ. ಈ ಮೂರನೆಯ ಅರ್ಥದಲ್ಲಿ ಅಹಂಶಬ್ದವು ಚ್ವಿಪ್ರತ್ಯಯಾಂತವಾಗಿಯೂ "ಕಾರಃ" ಎಂಬುದು ಕೃಞ್‌ಧಾತುವಿನ ಕರಣಾರ್ಥಕಘಞ್‌ಪ್ರತ್ಯಯಾಂತವಾಗಿಯೂ ವಿವಕ್ಷಿತವಾಗಿ ಇರುವುದರಿಂದ—"ಅನಹಂ-ಅಹಂ-ಕ್ರಿಯತೇ-ಅನೇನೇತಿ-ಅಹಂಕಾರಃ" ಎಂಬುದಾಗಿ ಉಕ್ತಾರ್ಥವು ಲಭಿಸುವುದು. ಮೊದಲನೆಯ ಅರ್ಥದಲ್ಲಿಯಾದರೆ ಅಹಂಶಬ್ದವು ಚ್ವಿಪ್ರತ್ಯಯಾಂತವಲ್ಲ. "ಕಾರ" ಎಂಬುದೂ ಕರಣೇ ಘಞ್‌ಪ್ರತ್ಯಯಾಂತವೂ ಅಲ್ಲ. ಕಿಂತು ಭಾವೇ ಘಞ್‌ಪ್ರತ್ಯಯಾಂತವಾಗಿ ಇರುವುದು.

## ೪೨೮. ಅಹಮರ್ಥಾನಾತ್ಮತ್ವಪ್ರಲಾಪಸ್ಯ ಅಹಂಕಾರಶಬ್ದ ವಾಚ್ಯಾರ್ಥಭೇದಾಪರಿಜ್ಞಾನನಿಬಂಧನತ್ವಂ.

ಹೀಗೆ ಅಹಂಕಾರಶಬ್ದಕ್ಕೆ ವ್ಯುತ್ಪತ್ತಿಭೇದದಿಂದ ಅರ್ಥಭೇದಗಳು ಪ್ರಾಮಾಣಿಕಗಳಾಗಿ ಸಂಭವಿಸುತ್ತಿದ್ದರೂ, ಅಹಂಕಾರತತ್ತ್ವವೊಂದೇ ಈ ಶಬ್ದಕ್ಕೆ ಅರ್ಥವೆಂದೂ, ಅಂಥ ಅಹಮರ್ಥವಾದ ಅಹಂಕಾರತತ್ತ್ವವು ಆತ್ಮವಾಗಲಾರದೆಂದೂ ಹೊರಡುತ್ತಿರುವ ಪ್ರಲಾಪಕ್ಕೆ—ಅಹಂಕಾರಶಬ್ದದ ವ್ಯುತ್ಪತ್ತಿಭೇದಗಳನ್ನೂ ಅರ್ಥಭೇದಗಳನ್ನೂ ಯಥಾವತ್ತಾಗಿ ತಿಳಿದುಕೊಳ್ಳದಿರುವಿಕೆಯೇ ಕಾರಣವಾಗಿ ಇರುವುದು.

## ೪೨೯. ಅಹಂಕಾರತತ್ತ್ವಸ್ಯ ಅನಾತ್ಮತ್ವೇಽಪಿ ಜ್ಞಾತುರಹಮರ್ಥಸ್ಯ ಆತ್ಮತ್ವೇ ನ ಕಿಂಚಿದ್ಬಾಧಕಂ.

ಅಹಂಕಾರತತ್ತ್ವವು—ಅವಿದ್ಯಾಕಲ್ಪಿತವಾದುದರಿಂದಲೂ, ಜಡಪದಾರ್ಥವಾದುದರಿಂದಲೂ, ಅನಿತ್ಯವಾದುದರಿಂದಲೂ, ಆತ್ಮವಸ್ತುವಾಗಲಾರದಾದರೆ—ಆಗಬೇಡ; ಪ್ರಥಮವ್ಯುತ್ಪತ್ತಿಯಂತೆ ಯಥಾರ್ಥಜ್ಞಾನವಾದ ಅಹಂಬುದ್ಧಿಗೆ ಗೋಚರವಾದ ಅಹಮರ್ಥವು ಅವಿದ್ಯಾಕಲ್ಪಿತವಲ್ಲವಾದುದರಿಂದಲೂ, ಅಜಡಪದಾರ್ಥವಾದುದರಿಂದಲೂ, ನಿತ್ಯವಾದುದರಿಂದಲೂ, ಆತ್ಮವಸ್ತುವೆನಿಸಿಕೊಳ್ಳಲು ಅಡ್ಡಿಯೇನು? ಹರಿಶಬ್ದವಾಚ್ಯವಾದ ಮಂಡೂಕವು—'ಗಜರಿಪು' ಎನಿಸಿಕೊಳ್ಳಲಾರದಾದಮಾತ್ರಕ್ಕೆ—ಹರಿಶಬ್ದವಾಚ್ಯವಾದ ಸಿಂಹವೂ—ಕಂಠೀರವನೆಂದೂ, ಗಜರಿಪುವೆಂದೂ ಪ್ರಸಿದ್ಧಿಯನ್ನು ಪಡೆಯಲಾರದೆ?

## ೪೩೦. ಅಹಮರ್ಥಸ್ಯೈವಾತ್ಮತ್ವವ್ಯವಸ್ಥಾಪಕಯುಕ್ತಿಸಂಗ್ರಹಃ ತತ್ರ ಪ್ರತ್ಯಕ್ತ್ವಾದಹಮರ್ಥಸ್ಯೈವಾತ್ಮತ್ವಂ.

೧. ಇಂಥ ಅಹಮರ್ಥವೇ ಆತ್ಮತತ್ತ್ವವೆನಿಸಿಕೊಳ್ಳುವುದೆಂಬುದರಲ್ಲಿ ಅನೇಕ ಪ್ರಮಾಣಗಳೂ, ಅನೇಕಯುಕ್ತಿಗಳೂ ಇದ್ದರೂ ಅವುಗಳಲ್ಲಿ ಮುಖ್ಯವಾದ ಕೆಲವನ್ನು ಇಲ್ಲಿ ತೋರಿಸುವೆವು.—

ದ್ರವ್ಯಗಳೊಳಗೆ "ಪ್ರತ್ಯಕ್" ಎಂಬುದಾಗಿಯೂ, "ಪರಾಕ್" ಎಂಬುದಾಗಿಯೂ, ಆಂತರಾಳಿಕವಾದ ವಿಭಾಗವುಂಟೆಂಬುದನ್ನೂ, ಅವುಗಳ ಲಕ್ಷಣಗಳನ್ನೂ ಅಚಿತ್ತತ್ತ್ವಪರಿಚ್ಛೇದದಲ್ಲಿ ತೋರಿಸಿರುವೆವಷ್ಟೆ. ಇದರಲ್ಲಿ "ಅಹಂ" ಎಂಬುದಾಗಿ ತನಗೋಸ್ಕರ ತಾನು ತೋರುವಿಕೆ "ಪ್ರತ್ಯಕ್" ಎಂಬ ವಿಭಾಗಕ್ಕೆ ಕಾರಣವಾಗಿ ಇರುವುದು. "ಇದು" ಎಂಬುದಾಗಿ ಮತ್ತೊಬ್ಬನಿಗೋಸ್ಕರ ತಾನು ತೋರುವಿಕೆ "ಪರಾಕ್" ಎಂಬ ವಿಭಾಗಕ್ಕೆ ಕಾರಣವಾಗಿ ಇರು

ವುದು. ಎಂದರೆ—ಅಹಂಬುದ್ಧಿ— ಇದಂಬುದ್ಧಿಗಳೇ —ಪ್ರತ್ಯಕ್— ಪರಾಕ್ ಎಂಬ ವಿಭಾಗಕ್ಕೆ ಕಾರಣವಾಗಿ ಇರುವುವೆಂದು ಫಲಿಸಿತು. ಆತ್ಮವಸ್ತು ಪ್ರತ್ಯಗ್ವಸ್ತುವೆನಿಸಿಕೊಳ್ಳುವುದೆಂಬುದು ವೇದಾಂತಿಗಳೆಲ್ಲರಿಗೂ ಸಂಮತವಾಗಿ ಇರುವುದು. ಹೀಗಿರುವಲ್ಲಿ ಪ್ರತ್ಯಕ್ ಎನಿಸಿಕೊಳ್ಳಲು ಯೋಗ್ಯವಾದ ಆತ್ಮವಸ್ತು ಆವುದಾಗಿ ಇರಬಹುದೆಂದು ವಿಚಾರಮಾಡಿ ನೋಡಿದರೆ—ಅಹಂಬುದ್ಧಿಗೆ ಗೋಚರವಾಗದ ಅಹಂಕಾರತತ್ತ್ವವಾಗಲಿ, ಜ್ಞಾನವಾಗಲಿ ಆತ್ಮವಾಗಲಾರದು ; ಅಹಂಬುದ್ಧಿಗೆ ಗೋಚರವಾಗುವ ಅಹಮರ್ಥವೇ ಆತ್ಮವಸ್ತುವಾಗಬೇಕು. ಇದಂಬುದ್ಧಿಗೆ ಗೋಚರವಾಗಿ ಇರುವ ಅಹಂಕಾರವೂ, ಜ್ಞಾನವೂ, "ಅಹಂ" ಎಂಬುದಾಗಿ ತನಗೆ ತಾನು ತೋರುವುದಿಲ್ಲವಾದಕಾರಣ ಪ್ರತ್ಯಕ್ ಎನಿಸಿಕೊಳ್ಳಲು ಯೋಗ್ಯವಲ್ಲವಷ್ಟೆ? ಅಹಮರ್ಥವಾದರೆ ಅಹಂಬುದ್ಧಿಗೆ ಗೋಚರವಾಗಿ ಪ್ರತ್ಯಕ್ ಎನಿಸಿಕೊಳ್ಳಲು ಯೋಗ್ಯವಾಗಿ ಇರುವಕಾರಣ ಇದೇ ಆತ್ಮತತ್ತ್ವವಾಗಬೇಕು.

ಅಹಮರ್ಥವೇ ಆತ್ಮತತ್ತ್ವವಾಗಿ ಇರುವುದೆಂದು ಹೇಳದೆ ತದ್ಭಿನ್ನವಸ್ತುವಿಗೆ ಆತ್ಮತ್ವವನ್ನು ಅಂಗೀಕರಿಸುವುದಾದರೆ ಆತ್ಮತತ್ತ್ವಕ್ಕೆ ಪ್ರತ್ಯಕ್ತ್ವವೇ ದುರ್ಲಭವಾಗುವುದು. ಆದಕಾರಣ ಅಹಮರ್ಥವೇ ಆತ್ಮತತ್ತ್ವವಾಗಬೇಕಲ್ಲದೆ ಜ್ಞಾನಮಾತ್ರವು ಆತ್ಮತತ್ತ್ವವಾಗಲಾರದು.

## ೪೩೧. ಅಹಂತ್ವಸಾಮಾನಾಧಿಕರಣ್ಯೇನೈವ ಜ್ಞಾತೃತ್ವಪ್ರತ್ಯಕ್ಷಾದಹಮರ್ಥಸ್ಯೈವಾತ್ಮತ್ವಂ.

೨. ಮತ್ತು "ಅಹಂ ಜ್ಞಾತಾ" ಎಂಬುದಾಗಿಯಾಗಲಿ, "ಅಹಂ ಜಾನಾಮಿ" ಎಂಬುದಾಗಿಯಾಗಲಿ, ಅಹಂತ್ವಕ್ಕೂ ಜ್ಞಾತೃತ್ವಕ್ಕೂ ಸಾಮಾನಾಧಿಕರಣ್ಯವು ಎಂದರೆ ಏಕಾಧಿಕರಣದಲ್ಲಿ ಸ್ಥಿತಿ ಅಬಾಧಿತವಾಗಿ ಪ್ರತ್ಯಕ್ಷಪ್ರಮಾಣಸಿದ್ಧವಾಗಿ ಇರುವುದರಿಂದ ಅಹಮರ್ಥವೇ ಆತ್ಮತತ್ತ್ವವಾಗಬೇಕು.

## ೪೩೨. ಮೋಕ್ಷೇಚ್ಛಾವತ್ತ್ವಾದಹಮರ್ಥಸ್ಯೈವಾತ್ಮತ್ವಂ.

೩. ಮತ್ತು—

**"ನಿರಸ್ತಾಖಿಲದುಃಖೋಽಹಮನಂತಾನಂದಭಾಕ್ ಸ್ವರಾಟ್ ಭವೇಯಮಿತಿ ಮೋಕ್ಷಾರ್ಥೀ ಶ್ರವಣಾದೌ ಪ್ರವರ್ತತೇ."**

ಎಂದರೆ—"ಈಗ ಕರ್ಮವಶ್ಯನಾಗಿಯೂ, ಅತಏವ ಅಪಾರವಾದ ದುಃಖಸಾಗರದಲ್ಲಿ ಮುಳುಗಿದವನಾಗಿಯೂ ಇರುವ ನಾನು ಈ ಸಮಸ್ತದುಃಖಗಳಿಂದಲೂ ಬಿಡುಗಡೆಯನ್ನು ಹೊಂದಿ ಅಕರ್ಮವಶ್ಯನಾಗಿ ಶಾಶ್ವತವಾದ ಆನಂದಕ್ಕೆ

ಭಾಗಿಯಾಗಬೇಕು" ಎಂಬ ಮೋಕ್ಷೇಚ್ಛೆ ಅಹಮರ್ಥಕ್ಕೇ ಉಂಟಾಗುವುದು. ಅಹಮರ್ಥವು ಆತ್ಮತತ್ತ್ವವಲ್ಲವಾದರೆ ಮೋಕ್ಷದಶೆಯಲ್ಲಿ ಅದಕ್ಕೆ ಅನುವೃತ್ತಿಯಿಲ್ಲ ವಾದುದರಿಂದ ಇಂಥ ಮೋಕ್ಷೇಚ್ಛೆ ಉಂಟಾಗಕೂಡದು.

"ಅಹಮರ್ಥವಿನಾಶಶ್ಚೇನ್ಮೋಕ್ಷ ಇತ್ಯಧ್ಯವಸ್ಯತಿ
ಅಪಸರ್ಪೇದಸೌ ಮೋಕ್ಷಕಥಾಪ್ರಸ್ತಾವಗಂಧತಃ"

ಅಹಮರ್ಥದ ವಿನಾಶವೇ ಮೋಕ್ಷವೆನಿಸಿಕೊಳ್ಳುವುದೆಂದು ಮೊದಲೇ ಇವ ನಿಗೆ ತಿಳಿದರೆ ಮೋಕ್ಷಕಥೆಯ ಪ್ರಸ್ತಾವನೆ ಲೇಶಮಾತ್ರದಿಂದ ನಡೆಯುತ್ತಿರುವ ಸ್ಥಳದಲ್ಲಿ ಕ್ಷಣಮಾತ್ರವೂ ನಿಲ್ಲಲಾರದೆ ಪಲಾಯನಸೂಕ್ತವನ್ನು ಜಪಿಸುವನೇ ಹೊರತು ಮೋಕ್ಷದ ಸಮಾಚಾರಕ್ಕೇ ಇವನು ಹೋಗಲಾರನಾದುದರಿಂದ ಮೋ ಕ್ಷೇಚ್ಛೆ ಇವನಿಗೆ ಉಂಟಾಗಲು ಅವಕಾಶವಿಲ್ಲ. ಇಂಥ ಇಚ್ಛೆಯಾದರೆ ಅಹಮ ರ್ಥಕ್ಕೆ ಉಂಟಾಗುತ್ತಿರುವುದು ಪ್ರತ್ಯಕ್ಷಸಿದ್ಧವಾದುದರಿಂದ ಅಹಮರ್ಥವೇ ಆತ್ಮ ತತ್ತ್ವವಾಗಬೇಕು.

## ೪೩೩. ಮುಕ್ತಬ್ರಹ್ಮಮುಮುಕ್ಷೂಣಾಂ ವ್ಯವಹಾರಾದಪಿ ಅಹಮರ್ಥಸ್ಯೈವಾತ್ಮತ್ವಂ

೪. ಮತ್ತು—ಸರ್ವಾತ್ಮನಾ ಅವಿದ್ಯಾಸಂಬಂಧದಿಂದ ವಿನಿರ್ಮುಕ್ತರಾದ ಮುಕ್ತಾತ್ಮರುಗಳಿಗೂ—"ಅಹಮನ್ನಮಹಮನ್ನಮಹಮನ್ನಂ" "ಅಹಮನ್ನಾ ದೋಽಹಮನ್ನಾದೋಽಹಮನ್ನಾದಃ" ಎಂಬುದಾಗಿ ತಮ್ಮೊಳಗೆ ಅಹಂಬು ದ್ಧಿಯೂ, ಅಹಂವ್ಯವಹಾರವೂ, ಅಬಾಧಿತವಾಗಿ ನಡೆವುತ್ತಿರುವುವೆಂದುವೇದವು ಉದ್ಘೋಷಿಸುತ್ತಿರುವುದು.

ಹಾಗೆಯೇ ಸಕಲಹೇಯಗಳಿಗೂ ಪ್ರತಿಭಟವಾಗಿ ಇರುವುದರಿಂದ ಅವಿದ್ಯಾ ಸಂಬಂಧದ ಗಂಧಕ್ಕೇ ಅನರ್ಹವಾದ ಪರಬ್ರಹ್ಮಕ್ಕೂ ತನ್ನಲ್ಲಿ "ಹಂತಾಹಮಿ ಮಾಸ್ತಿಸ್ರೋ ದೇವತಾ ಅನೇನ ಜೀವೇನಾತ್ಮನಾಽನುಪ್ರವಿಶ್ಯ ನಾಮರೂಪೇ ವ್ಯಾಕರವಾಣಿ" ಎಂಬುದಾಗಿ ಅಹಂಬುದ್ಧಿವ್ಯವಹಾರಗಳು ಅಬಾಧಿತಗಳಾಗಿ ಪ್ರತಿಕಲ್ಪಗಳಲ್ಲಿಯೂ ಉಂಟಾಗುತ್ತಲೇ ಇರುವುವೆಂದು ಅದೇ ವೇದವು ಮೊರೆಯಿಡುತ್ತಿರುವುದು.

ಹಾಗೆಯೇ ಮುಮುಕ್ಷುವಿಗೂ ಎಂದರೆ ಉತ್ಪನ್ನವಾದ ಮೋಕ್ಷೇಚ್ಛೆ ಯುಳ್ಳುವನಿಗೂ "ತ್ವಂ ವಾ ಅಹಮಸ್ಮಿ ಭಗವೋ ದೇವತೇ ಅಹಂ ವೈ ತ್ವಮಸಿ" "ಮುಮುಕ್ಷುರ್ವೈ ಶರಣಮಹಂ ಪ್ರಪದ್ಯೇ" ಎಂಬುದಾಗಿ

ಅಹಂಬುದ್ಧಿವ್ಯವಹಾರಗಳು ಅಬಾಧಿತಗಳಾಗಿ ಉಂಟಾಗುತ್ತಿರುವುವೆಂದೂ ಅದೇ ವೇದವು ಜಯಭೇರಿಯನ್ನು ಹೊಡೆಯುತ್ತಿರುವುದು.

ಹೀಗೆ ಅವಿದ್ಯಾಸಂಬಂಧವಿಲ್ಲದವರಿಗೂ ಅಹಮರ್ಥದಲ್ಲಿ ಅಹಂಬುದ್ಧಿ ವ್ಯವಹಾರಗಳು ನಡೆವುತ್ತಿರುವುವೆಂದು ಅಪೌರುಷೇಯಪ್ರಮಾಣದಿಂದ ಸಿದ್ಧವಾಗಿ ಇರುವಕಾರಣ ಅಹಮರ್ಥವು ಅವಿದ್ಯಾಕಲ್ಪಿತವಾಗಲಿಕ್ಕಿಲ್ಲ ಕಿಂತು ಆತ್ಮತತ್ತ್ವವೇ ಆಗಿರುವುದು.

## ೩೩೪. ಸುಪ್ತೋತ್ಥಿತಸ್ಯ ಸುಪ್ತೋಽಹಮಿತಿಪರಾಮರ್ಶಾತ್ ಅಹಮರ್ಥಸ್ಯೈವಾತ್ಮತ್ವಂ

೫೯ ಮತ್ತು ಮಲಗಿದ್ದು ಎದ್ದವನಿಗೆ—"**ಏತಾವಂತಂ ಕಾಲಂ ಸುಪ್ತೋಽಹಂ**" ಎಂದರೆ ನಾನು ಇಷ್ಟುಕಾಲದವರೆಗೂ ಸ್ವಾಪಸುಖಕ್ಕೆ ಆಶ್ರಯನಾಗಿ ಇದ್ದೆನು ಎಂಬ ವ್ಯವಹಾರವು ಅಬಾಧಿತವಾಗಿ ಉಂಟಾಗುತ್ತಿರುವುದು; ಅಂತಃಕರಣವೇ ಅಹಮರ್ಥವಾಗಿ ಇರುವ ಪಕ್ಷದಲ್ಲಿ ಸುಷುಪ್ತಿದಶೆಯಲ್ಲಿ ಅಂತಃಕರಣಕ್ಕೆ ನೀವು ವಿನಾಶವನ್ನು ಒಪ್ಪಿರುವಿರಾದುದರಿಂದ ಮಲಗಿದ್ದು ಎದ್ದವನಿಗೆ "ಏತಾವಂತಂ ಕಾಲಂ ನಷ್ಟೋಽಹಂ" ಎಂಬ ವ್ಯವಹಾರವು ಉಂಟಾಗಬೇಕಲ್ಲದೆ "ಸುಪ್ತೋಽಹಂ" ಎಂಬ ವ್ಯವಹಾರವು ಉಂಟಾಗಕೂಡದು. ಆದಕಾರಣ ಅಹಮರ್ಥವು ಅಂತಃಕರಣವಾಗಲಾರದು. ಕಿಂತು ಅದಕ್ಕಿಂತಲೂ ವಿಲಕ್ಷಣವಾಗಿ ತಾನೇ ಆತ್ಮತತ್ತ್ವವೆನಿಸಿಕೊಳ್ಳುವುದು.

## ೪೩೫. ಸುಷುಪ್ತಾವಪಿ ಅಹಮರ್ಥಸ್ಯಾನುವೃತ್ತತ್ವೇ ಮಾಮಪ್ಯಹಂ ನಜ್ಞಾತವಾನಿತಿಪ್ರತಿಸಂಧಾನಾನುಪಪತ್ತ್ಯಾಶಂಕಾ

"ಪೂಜ್ಯರೇ! "ಸುಪ್ತೋಽಹಂ" ಎಂಬ ವ್ಯವಹಾರವನ್ನು ತೋರಿಸಿದ ನಿಮಗೆ ಸ್ವಾಪಕಾಲದಲ್ಲಿಯೂ ಅಹಮರ್ಥದ ಅನುಭವವಿತ್ತೆಂದಲ್ಲವೆ ಅಭಿಪ್ರಾಯವು? ಮತ್ತು ಶ್ರುತ್ಯಾದಿಪ್ರಮಾಣಗಳಿಂದ ಆತ್ಮವಸ್ತುವಿಗೆ ಸ್ವಯಂಪ್ರಕಾಶತ್ವವು ಸಿದ್ಧವಾಗಿ ಇರುವುದರಿಂದಲೂ, ಅಹಮರ್ಥವನ್ನೇ ಆತ್ಮನನ್ನಾಗಿ ನೀವು ಒಪ್ಪಿ ಇರುವುದರಿಂದಲೂ, ಈ ಅಹಮರ್ಥಕ್ಕೆ ಸುಷುಪ್ತಿದಶೆಯಲ್ಲಿಯೂ ಪ್ರಕಾಶಮಾನತ್ವವನ್ನು ಹೇಳಬೇಕಲ್ಲದೆ ಬೇರೆ ಮಾರ್ಗವಿಲ್ಲ; ಹೀಗಿರುವುದಾದರೆ "**ಸುಪ್ತೋಽಹಮಿಯಂತಂ ಕಾಲಂ ಮಾಮಪಿ ನಾಜ್ಞಾಸಿಷಂ**" ಎಂದರೆ ಮಲಗಿದ್ದ ನಾನು ಇಷ್ಟು ಕಾಲದವರೆಗೂ ನನ್ನನ್ನೂ ತಿಳಿಯದವನಾಗಿ ಇದ್ದೆನು ಎಂದು

ಸ್ವಾಪಕಾಲದಲ್ಲಿ ಆತ್ಮನ ಪ್ರಕಾಶವಿರಲಿಲ್ಲವೆಂಬುದಾಗಿ ಪ್ರಬೋಧಕಾಲದಲ್ಲಿ ಸ್ಮರಣೆಯುಂಟಾಗಕೂಡದಷ್ಟೆ ? ಸ್ಮರಣೆಯಾದರೆ ಅಬಾಧಿತವಾಗಿ ಪ್ರತ್ಯಕ್ಷದಲ್ಲಿ ಉಂಟಾಗುತ್ತಿರುವುದು. ಇದು ನಿಮ್ಮ ಮತದಲ್ಲಿ ಹೇಗೆ ಸಂಗತವಾದೀತು" ಎಂದು ಆಶಂಕಿಸಬೇಕಾದುದಿಲ್ಲ.—

## ೪೩೬. ಉಕ್ತಪ್ರತಿಸಂಧಾನಸ್ಯ ವಿಶಿಷ್ಟವಿಷಯಕತ್ವಾತ್ ಸುಷುಪ್ತೌ ಅಹಮರ್ಥಾನುಭವಾನಪವಾದಕತ್ವಂ

ಏತಕ್ಕೆಂದರೆ—"**ಮಾಮಪಿ ನಾಜ್ಞಾಸಿಷಂ**" ಎಂಬ ಪ್ರಬೋಧಕಾಲಿಕಸ್ಮರಣವು—ಸ್ವಾಪಕಾಲದಲ್ಲಿ ಧರ್ಮಿಯಾದ ಆತ್ಮಸ್ವರೂಪವನ್ನು ತಿಳಿಯುತ್ತಿರಲಿಲ್ಲವೆಂದು ತೋರಿಸುವುದಿಲ್ಲ. ಮತ್ತೇನೆಂದರೆ—ಸ್ವಾಪಕಾಲದಲ್ಲಿ ನಾನು ನನ್ನನ್ನು ಅನುಭವಿಸುತ್ತಲೇ ಇದ್ದೆನು ; ಆದರೆ ನಾನು ಇಂಥವನೆಂದು ನನಗೆ ಗೊತ್ತಿರಲಿಲ್ಲ." ಎಂದರೆ ದೇವತ್ವಮನುಷ್ಯತ್ವಾದಿಜಾತಿಗಳನ್ನಾಗಲಿ, ಬ್ರಾಹ್ಮಣತ್ವಕ್ಷತ್ರಿಯತ್ವಮುಂತಾದ ಅವಾಂತರಜಾತಿಗಳನ್ನಾಗಲಿ, ಸ್ಥೂಲತ್ವಕೃಶತ್ವಾದಿಧರ್ಮಗಳನ್ನಾಗಲಿ, ಮಲಗಿದ್ದ ಸ್ಥಳವಿಶೇಷವನ್ನಾಗಲಿ, ಆಗ ಅಲ್ಲಿ ನಡೆದ ವಿಶೇಷ ಸಮಾಚಾರಗಳನ್ನಾಗಲಿ ನಾನು ತಿಳಿಯುತ್ತಿರಲಿಲ್ಲವೆಂದೇ ತೋರಿಸುವುದು. ಆದಕಾರಣ ಸ್ವಾಪಕಾಲದಲ್ಲಿಯೂ ಅಹಮರ್ಥದ ಅನುಭವವು ಇದ್ದೇ ಇರುವುದಲ್ಲದೆ ಅದಕ್ಕೆ ಯಾವಾಗಲೂ ಲೋಪವಿಲ್ಲ. ಆದುದರಿಂದ ಇದೇ ಆತ್ಮತತ್ತ್ವವೆನಿಸಿಕೊಳ್ಳುವುದು.

೧. ಅಂತು—ಅಹಮರ್ಥಕ್ಕೇ ಪ್ರತ್ಯಕ್ತ್ವವಿರುವುದರಿಂದಲೂ,—

೨. ಅಹಮರ್ಥಕ್ಕೇ '**ಅಹಂಜಾನಾಮಿ**' ಎಂಬ ಪ್ರತ್ಯಕ್ಷವಿರುವುದರಿಂದಲೂ,—

೩. ಅಹಮರ್ಥಕ್ಕೇ ಮೋಕ್ಷೇಚ್ಛೆಯುಂಟಾಗಿರುವುದರಿಂದಲೂ,—

೪. ಮುಕ್ತಾತ್ಮರಿಗೂ ಪರಬ್ರಹ್ಮಕ್ಕೂ ಮುಮುಕ್ಷುಗಳಿಗೂ ಅಹಂಬುದ್ಧಿವ್ಯವಹಾರಗಳಿರುವುವೆಂದು ಅಪೌರುಷೇಯವಚನದಿಂದ ಸಿದ್ಧವಾಗಿ ಇರುವುದರಿಂದಲೂ,—

೫. ಸ್ವಾಪಾನಂತರಕಾಲದಲ್ಲಿ "ನಷ್ಟೋಽಹಂ" ಎಂಬ ವ್ಯವಹಾರವಿಲ್ಲದೆ "ಸುಪ್ತೋಽಹಂ" ಎಂಬ ವ್ಯವಹಾರವಿರುವುದರಿಂದಲೂ,—ಈ ಐದು ಹೇತುಗಳಿಂದ ಅಹಮರ್ಥವೇ ಆತ್ಮತತ್ತ್ವವೆಂದು ಒಪ್ಪಿಯೇ ತೀರಬೇಕು.

ಈ ಹೇತುಗಳನ್ನೆಲ್ಲಾ ಶ್ರೀಮದ್ವೇದಾಂತದೇಶಿಕರು—" ಪ್ರತ್ಯ
ಕ್ತ್ವಾದುಪಲಂಭತೋ ಮಮ ಸುಖಂ ಭಾವೀತಿ ಮೋಕ್ಷೇಚ್ಛಯಾ
ಮುಕ್ತಬ್ರಹ್ಮಮುಮುಕ್ಷುವೇದವಚಸಾ ಸುಪ್ತೋಽಹಮಿತ್ಯುಕ್ತಿತಃ।
ಮಾಂ ನಾಜ್ಞಾಸಿಷಮಿತ್ಯಪಿ ಸ್ವಪುರಾದ್ಯಜ್ಞಾನಮಾತ್ರಾಶ್ರಯಾತ್
ಸ್ವಾಪಪ್ರಾಚ್ಯನಿಜಕ್ರಿಯಾಸ್ಮರಣತೋಽಪ್ಯಾತ್ಮಾಹಮರ್ಥಃ ಸ್ಥಿರಃ "
ಎಂಬ ಈ ಪದ್ಯದಲ್ಲಿ ಕ್ರೋಢೀಕರಿಸಿ ತೋರಿಸಿರುವರು.

### ೪೩೭. ಸ್ವಾಪಪ್ರಾಕ್ಕಾಲಿಕನಿಜಕ್ರಿಯಾಸ್ಮರಣಾತ್ ಅಹಮರ್ಥಸ್ಯ ಸ್ಥಿರತ್ವಂ.

ಇದರಂತೆಯೇ—ಮಲಗುವುದಕ್ಕಿಂತಲೂ, ಪೂರ್ವದಲ್ಲಿ ತಾನು ಮಾಡಿದ್ದ ಅರ್ಧಕೆಲಸವನ್ನು ಮಲಗಿ ಎದ್ದಮೇಲೆ ಸ್ಮರಿಸಿಕೊಂಡು ಅದನ್ನು ಪೂರ್ತಿಮಾಡಲು ಪ್ರಯತ್ನಪಡುತ್ತಾನೆ; ಸುಷುಪ್ತಿಯಲ್ಲಿ ಅಹಮರ್ಥಕ್ಕೆ ನಾಶವಿರುವ ಪಕ್ಷದಲ್ಲಿ ಮಲಗಿ ಎದ್ದಮೇಲೆ ಹಿಂದಿನ ಕೆಲಸವನ್ನು ಸ್ಮರಿಸಕೂಡದು; ಸ್ಮರಣವಾದರೆ ಎಲ್ಲರಿಗೂ ಅಬಾಧಿತವಾಗಿ ಉಂಟಾಗುತ್ತಿರುವುದಾದಕಾರಣ ಸುಷುಪ್ತಿಯಲ್ಲಿ ಅಹಮರ್ಥಕ್ಕೆ ವಿನಾಶವಿಲ್ಲದೆ ಸ್ಥಿರತ್ವವೇ ಸಿದ್ಧವಾಗುವುದು. ಇದರಿಂದ—" ಅಹಮರ್ಥವು ಅಸ್ಥಿರವಾದುದರಿಂದ ಇದಕ್ಕೆ ಆತ್ಮತ್ವವನ್ನು ಅಂಗೀಕರಿಸಲಾಗುವುದಿಲ್ಲ " ಎಂಬ ಆಶಂಕೆ ನಿರಾಕರಿಸಲ್ಪಟ್ಟಿರುವುದು.

### ೪೩೮. ಅನುಮಾನೇನಾತ್ಮನೋಽಹಂಪ್ರತ್ಯಯಗೋಚರತ್ವಾಭಾವಾಶಂಕಾ.

" ಪೂಜ್ಯರೇ ?—ಆತ್ಮನಲ್ಲಿ ಆತ್ಮತ್ವ, ಅಜಡತ್ವ, ನಿರ್ವಿಕಾರತ್ವ, ಸ್ವಯಂಪ್ರಕಾಶತ್ವವೆಂಬ ಹೇತುಗಳಿರುವುದರಿಂದ ಆತ್ಮತತ್ತ್ವವು ಅಹಂಪ್ರತ್ಯಯಕ್ಕೆ ಗೋಚರವಾಗಲಾರದು; ಯಾವುದು ಅಹಂಪ್ರತ್ಯಯಕ್ಕೆ ಗೋಚರವಾಗಲಾರದೆಂಬುದಿಲ್ಲದೆ ಅಹಂಪ್ರತ್ಯಯಕ್ಕೆ ಗೋಚರವಾಗತಕ್ಕುದಾಗಿಯೇ ಇರುವುದೋ ಅದರಲ್ಲಿ ಈ ಹೇತುಗಳಿರುವುದಿಲ್ಲ; ಅಂತಃಕರಣವೇ ಇದಕ್ಕೆ ದೃಷ್ಟಾಂತವಾಗಿ ಇರುವುದು. ಈ ಅಂತಃಕರಣವು ಅಹಂಪ್ರತ್ಯಯಕ್ಕೆ ಗೋಚರವಾಗುವುದರಿಂದ ಅನಾತ್ಮವಾಗಿಯೂ, ಜಡವಾಗಿಯೂ, ಸವಿಕಾರವಾಗಿಯೂ, ಅಸ್ವಯಂಪ್ರಕಾಶವಾಗಿಯೂ ಇರುವುದು."

ಇಂಥ ವ್ಯತಿರೇಕ್ಯನುಮಾನದಿಂದ ಆತ್ಮತತ್ತ್ವಕ್ಕೆ ಅಹಂಪ್ರತ್ಯಯಗೋಚರತ್ವವಿಲ್ಲವೆಂದು ಸಿದ್ಧಿಸುತ್ತಿರುವಾಗ. ನೀವು ಅಹಂಪ್ರತ್ಯಯಗೋಚರತ್ವವನ್ನು ಹೇಗೆ ಹೇಳುತ್ತೀರಿ? " ಎಂದು ಆಶಂಕಿಸಲಾಗುವುದಿಲ್ಲ.

## ೪೩೯. ಉಕ್ತಾನುಮಾನಸ್ಯ ಪ್ರತ್ಯಕ್ಷಾಗಮಾಭ್ಯಾಂ ಬಾಧಿತತ್ವಾದಪ್ರಾಮಾಣ್ಯಂ

ಏತಕ್ಕೆಂದರೆ—ನೀವು ಹೇಳುವ ಅನುಮಾನಪ್ರಮಾಣವು ಪ್ರತ್ಯಕ್ಷಪ್ರಮಾಣದಿಂದಲೂ ಆಗಮಪ್ರಮಾಣದಿಂದಲೂ ಬಾಧಿಸಲ್ಪಡುವುದು. ಆತ್ಮನಿಗೆ ಅಹಂ ಪ್ರತ್ಯಯಗೋಚರತ್ವವೇ ಉಂಟೆಂದು ತೋರಿಸಿಕೊಡುವ "ಅಹಂ ಜಾನಾಮಿ" ಎಂಬ ಪ್ರತ್ಯಕ್ಷವನ್ನೂ, ಮುಕ್ತರಿಗೂ ಪರಬ್ರಹ್ಮಕ್ಕೂ ಮುಮುಕ್ಷುಗಳಿಗೂ ಅಹಂಪ್ರತ್ಯಯಗೋಚರತ್ವವೇ ಉಂಟೆಂದು ತೋರಿಸಿಕೊಡುವ ಆಗಮಪ್ರಮಾಣವನ್ನೂ ಹಿಂದೆ ನಾವು ತೋರಿಸಿದೆವಷ್ಟೆ?

## ೪೪೦. ಉಕ್ತಹೇತೂನಾಮಸಾಧಾರಣಾನೈಕಾಂತಿಕತ್ವಾದಸದ್ಧೇತುತ್ವೇನಾಸಾಧಕತ್ವಂ.

ಮತ್ತು ನಿಮ್ಮಿಂದ ಉಕ್ತವಾದ ಹೇತುಗಳು ಸಪಕ್ಷವಾದ (ದೃಷ್ಟಾಂತವಾದ) ಘಟಾದಿಪದಾರ್ಥಕ್ಕಿಂತಲೂ ವ್ಯಾವೃತ್ತಿಯನ್ನು ಹೊಂದಿ ಎಂದರೆ ಸಪಕ್ಷದಲ್ಲಿ ಇರದೆ ಆತ್ಮನೆಂಬ ಪಕ್ಷಮಾತ್ರದಲ್ಲಿ ಇರುವುವಾದುದರಿಂದ ಅಸಾಧಾರಣವೆನಿಸಿಕೊಂಡು ಅಸದ್ಧೇತುಗಳಾಗಿ ಇರುವಕಾರಣ ಅಹಂಪ್ರತ್ಯಯಗೋಚರತ್ವಾಭಾವವೆಂಬ ಸಾಧ್ಯವನ್ನು ಸಾಧಿಸಲು ಸಮರ್ಥವಾಗಲಾರವು.

## ೪೪೧. ಅತಏವೋಕ್ತಾನಾಂ ಹೇತೂನಾಂ ಆತ್ಮನಿ ಜ್ಞಾತೃತ್ವಾಭಾವ ಕರ್ತೃತ್ವಾಭಾವಾಸಾಧಕತ್ವಂ.

ಆದುದರಿಂದಲೇ—ಇದೇ ಹೇತುಗಳಿಂದ ಆತ್ಮನಿಗೆ ಕರ್ತೃತ್ವಾಭಾವವನ್ನೂ ಜ್ಞಾತೃತ್ವಾಭಾವವನ್ನೂ ಸಹ ಸಾಧಿಸಲು ಸಾಧ್ಯವಿಲ್ಲ. ಪೂರ್ವೋಕ್ತಗಳಾದ ಪ್ರತ್ಯಕ್ಷಬಾಧೆ, ಆಗಮಬಾಧೆ ಮುಂತಾದ ದೂಷಣಗಳು ಅಲ್ಲಿಯೂ ಅವರ್ಜನೀಯಗಳಾಗಿ ಬರುವುವಷ್ಟೆ?

## ೪೪೨. ಅನುಮಾನಾಂತರೇಣ ಜ್ಞಾತೃತ್ವಾದೀನಾಮಂತಃಕರಣವೃತ್ತಿತ್ವಾಶಂಕಾನಿರಾಕರಣಂ.

ಮತ್ತು—"ಯಾವಯಾವುದು ಧರ್ಮವೆನಿಸಿಕೊಂಡೂ, ದೃಶ್ಯವೆನಿಸಿಕೊಂಡೂ ಇರುವುದೋ ಅದೆಲ್ಲವೂ ಆತ್ಮಭಿನ್ನವಾದ ಧರ್ಮಿಯಲ್ಲಿಯೇ ಇರುವ ಧರ್ಮಗಳಾಗಿ ಇರಬೇಕು; ಇದಕ್ಕೆ ದೃಷ್ಟಾಂತವು ಘಟಾದಿಗಳಲ್ಲಿರುವ ರೂಪಾದಿಗಳೇ. ಜ್ಞಾತೃತ್ವ, ಕರ್ತೃತ್ವ, ಅಹಂಪ್ರತ್ಯಯಗೋಚರತ್ವ ಇವುಗಳಲ್ಲಿ ಧರ್ಮತ್ವ ದೃಶ್ಯತ್ವಹೇತುಗಳು ಇರುವುದರಿಂದ ಇವುಗಳು ಆತ್ಮಭಿನ್ನವಾದ ಅಂತಃಕರಣಕ್ಕೇ

ಧರ್ಮಗಳಾಗಿ ಇರಬೇಕಲ್ಲದೆ ಆತ್ಮನಿಗೆ ಧರ್ಮಗಳಾಗಲಾರವು. ” ಎಂದೂ ಹೇಳ ಲಾಗುವುದಿಲ್ಲ. ಏತಕ್ಕೆಂದರೆ, ಇಂಥ ಅನುಮಾನಕ್ಕೂ—ಆತ್ಮನಿಗೆ ಜ್ಞಾತೃತ್ವವೂ ಕರ್ತೃತ್ವವೂ ಅಹಂಪ್ರತ್ಯಯಗೋಚರತ್ವವೂ ಉಂಟೆಂದು ತೋರಿಸುವ “ **ಅಹಂ ಜಾನಾಮಿ-ಅಹಂ ಕರೋಮಿ** ” ಎಂಬ ಪ್ರಬಲವಾದ ಪ್ರತ್ಯಕ್ಷಪ್ರಮಾಣ ದಿಂದ ಬಾಧೆಯುಂಟಾಗುವುದಷ್ಟೆ ?

## ೪೪೩. ಪ್ರತ್ಯನುಮಾನೇನ ಜ್ಞಾತೃತ್ವಾದೀನಾಮಂತಃಕರಣ ವೃತ್ತಿತ್ವಾಭಾವಾಪಾದನಂ.

ಘಟಾದಿಗಳಲ್ಲಿ ಇರುವ ಅದೇ ರೂಪಾದಿಗಳನ್ನು ದೃಷ್ಟಾಂತಗಳನ್ನಾಗಿ ತೋರಿಸಿ ಅದೇ ಹೇತುಗಳಿಂದ ಜ್ಞಾತೃತ್ವಾದಿಗಳು ಅಂತಃಕರಣಕ್ಕೆ ಧರ್ಮಗಳಾಗ ಲಾರವೆಂದು ಪ್ರತ್ಯನುಮಾನವನ್ನು ನಾವು ಹೇಳುವೆವಾದರೆ ಆಗ ನೀವು ಯಾವ ಪ್ರತ್ಯುತ್ತರವನ್ನು .ಹೇಳಬಲ್ಲಿರಿ ? .

## ೪೪೪. ತತ್ರೇಷ್ಟಾಪತ್ತೌ ಸ್ವಾಜ್ಞಾನಾವಿಷ್ಕರಣಾಪತ್ತಿಪ್ರದರ್ಶನಂ.

“ ಓಹೋ—ಈ ಪ್ರತ್ಯನುಮಾನವನ್ನು ನಾವು ನಿರಾಕರಿಸಿಯೇ ಆಗ ಬೇಕೆಂಬ ನಿರ್ಬಂಧವು ನಮಗಿಲ್ಲ. ಈ ಪ್ರತ್ಯನುಮಾನವು ನಮಗೆ ಪ್ರತಿಕೂಲವಾಗಿ ಇದ್ದರಲ್ಲವೆ ನಿರಾಕರಿಸಬೇಕು ; ಇದು ನಮಗೆ ಅನುಕೂಲವಾಗಿಯೇ ಇರುವುದು. ಹೇಗೆಂದರೆ—ಜ್ಞಾತೃತ್ವ, ಕರ್ತೃತ್ವಾದಿಗಳಾಗಲಿ, ಅವು ಅಂತಃಕರಣಕ್ಕೆ ಧರ್ಮ ಗಳಾಗಿ ಇರುವುವೆಂಬ ಅಂಶವಾಗಲಿ—ಬ್ರಹ್ಮವ್ಯತಿರಿಕ್ತವಾದುದರಿಂದ ಅವಿದ್ಯಾ ಕಲ್ಪಿತಗಳಾಗಿ ಮಿಥ್ಯೆಯೆನಿಸಿಕೊಂಡಿರುವುವು. ಮಿಥ್ಯೆಯಾದ ಪದಾರ್ಥಗಳು ಇಲ್ಲ ವೆಂದು ಹೇಳಿದರೆ ಅದು ನಮಗೆ ಅನುಕೂಲವಾಗಿ ಇರುವುದಲ್ಲದೆ ಪ್ರತಿಕೂಲವಲ್ಲ. ಆದಕಾರಣ ಅದನ್ನು ನಾವು ನಿರಾಕರಿಸಬೇಕಾದುದಿಲ್ಲ. ”—

ಎಂಬ ಪ್ರತ್ಯುತ್ತರವನ್ನು ಹೇಳುವಿರಾದರೆ ಹವುದು ಅವಿದ್ಯೆಯೇ ಸರಿ ಎಂದರೆ ಅವಿದ್ಯಾಶಬ್ದವು ಅಜ್ಞಾನವಾಚಿಯಾದುದರಿಂದ ಈ ಪ್ರತ್ಯುತ್ತರದ ಮೂಲಕ ನಿಮ್ಮ ಅಜ್ಞಾನವನ್ನೇ ಹೊರಪಡಿಸಿದಂತಾಗುವುದು. ಹೇಗೆಂದರೆ— “ ಅಂತಃಕರಣದಲ್ಲಿ ಕರ್ತೃತ್ವಾದಿಗಳಿಲ್ಲ ” ಎಂಬ ನಿಷೇಧವಾಕ್ಯವು—ಅವಿದ್ಯಾ ಕಲ್ಪಿತಗಳಲ್ಲದೆ ಪಾರಮಾರ್ಥಿಕಗಳಾಗಿ ಇರುವ ಕರ್ತೃತ್ವಾದಿಗಳನ್ನು ನಿಷೇಧಿಸುವು ದೆಂದು ನಿಮಗೆ ಅಭಿಪ್ರಾಯವೋ ? ಅಥವಾ ಅವಿದ್ಯಾಕಲ್ಪಿತಗಳಾದ ಅಪಾರಮಾ ರ್ಥಿಕಗಳಾಗಿರುವ ಕರ್ತೃತ್ವಾದಿಗಳನ್ನೇ ನಿಷೇಧಿಸುವುದೆಂದು ಅಭಿಪ್ರಾಯವೋ ? ನಿಮ್ಮ ಮತದಲ್ಲಿ ಪಾರಮಾರ್ಥಿಕಗಳಾದ ಕರ್ತೃತ್ವಾದಿಗಳು ಎಲ್ಲಿಯೂ ಇಲ್ಲವಾದು

ದರಿಂದ ಅಂತಃಕರಣದಲ್ಲಿಯೂ ಅವುಗಳಿಗೆ ಪ್ರಸಕ್ತಿಯೇ ಇಲ್ಲವಾಗಿ ಅಪ್ರಸಕ್ತ ಪ್ರತಿಷೇಧವು ಕೂಡುವುದಿಲ್ಲವಾದಕಾರಣ ಪ್ರಥಮಾಭಿಪ್ರಾಯವು ಅನುಚಿತವಾಗುವುದು. ಇದಕ್ಕೋಸ್ಕರ ಅವಿದ್ಯಾಕಲ್ಪಿತಗಳಾದ ಕರ್ತೃತ್ವಾದಿಗಳನ್ನೇ ನಿಷೇಧಿಸುವುದೆಂಬ ದ್ವಿತೀಯಾಭಿಪ್ರಾಯವನ್ನು ತೋರಿಸುವುದಾದರೆ—ಆವಿದ್ಯಕವಾದ ಕರ್ತೃತ್ವಾದಿಗಳನ್ನು ವಿಧಿಸುವ "ಸ್ವರ್ಗಕಾಮೋ ಯಜೇತ" ಇತ್ಯಾದಿಶಾಸ್ತ್ರಗಳಿಗೆ ವಿರೋಧವುಂಟಾದೀತೆಂಬ ಪರಿಜ್ಞಾನವೂ ಇಲ್ಲವಾಗಿ ಸ್ವಾಜ್ಞಾನವನ್ನು ಹೊರಪಡಿಸಿಕೊಂಡಂತಾಗುವುದು.

ಇದರಿಂದ—"ವಿಧಿಶಾಸ್ತ್ರವು ಅನಾವಿದ್ಯಕಗಳಾದ ಕರ್ತೃತ್ವಾದಿಗಳನ್ನು ವಿಧಿಸುತ್ತಿರುವುದೆಂದೂ, ನಿಷೇಧವಾಕ್ಯವು ಆವಿದ್ಯಕಗಳಾದ ಕರ್ತೃತ್ವಾದಿಗಳನ್ನು ನಿಷೇಧಿಸುತ್ತಿರುವುದೆಂದೂ, ಹೇಳಿ ಹೀಗೆ ವಿಷಯಭೇದವಿರುವುದರಿಂದ ಇವೆರಡಕ್ಕೂ ವಿರೋಧವಿಲ್ಲ." ಎಂದು ತೋರಿಸುವ ಶಂಕೆಗೆ ಅವಕಾಶವಿಲ್ಲವೆಂಬುದು ವ್ಯಕ್ತವಾಯಿತು.

ಅಂತು ಶಾಸ್ತ್ರವಿರುದ್ಧವಾದ ಅನುಮಾನವು ಬಾಧಿತಾನುಮಾನವೆನಿಸಿಕೊಂಡು ಅಪ್ರಮಾಣವಾಗುವುದಾದುದರಿಂದ ಆತ್ಮನಲ್ಲಿ ಕರ್ತೃತ್ವಾದಿಗಳನ್ನು ಪ್ರತಿಷೇಧಿಸಲು ಅದು ಸಮರ್ಥವಾಗಲಾರದು.

## ೪೪೫. ಆತ್ಮನೋ ಜ್ಞಾತೃತ್ವಸ್ಯ ಸ್ವಾಭಾವಿಕತ್ವೇ ಸೂತ್ರಕಾರಸಮ್ಮತಿಃ.

ಹಾಗಾದರೆ—ಆತ್ಮನಿಗೆ ಜ್ಞಾತೃತ್ವಧರ್ಮವಿರಲಿ; ಆದರೂ ಅದು ಅವನಿಗೆ ಆಗಂತುಕವಾಗಿ ಇರುವುದಲ್ಲದೆ ಸ್ವಾಭಾವಿಕವಲ್ಲವೆಂದು ಏತಕ್ಕೆ ಹೇಳಬಾರದು?

ಹಾಗೆ ಹೇಳಲಾಗುವುದಿಲ್ಲ—"**ಜ್ಞೋಽತ ಏವ**" ಎಂಬ ಅಧಿಕರಣದಲ್ಲಿ ಆತ್ಮನು ಜ್ಞಾತೃಸ್ವರೂಪನಾಗಿಯೇ ಇರುವನಲ್ಲದೆ ಜ್ಞಾನಮಾತ್ರಸ್ವರೂಪನಾಗಿಯಾಗಲಿ, ಜಡಸ್ವರೂಪನಾಗಿಯಾಗಲಿ ಇಲ್ಲ" ಎಂಬ ಅಂಶವನ್ನೂ,—"ಅಥ ಯೋ ವೇದೇದಂ ಜಿಘ್ರಾಣೀತಿ ಸ ಆತ್ಮಾ" "ವಿಜ್ಞಾತಾರಮರೇ ಕೇನ ವಿಜಾನೀಯಾತ್" "ಜಾನಾತ್ಯೇವಾಯಂ ಪುರುಷಃ" "ಏಷ ಹಿ ದ್ರಷ್ಟಾ ಸ್ಪ್ರಷ್ಟಾ ಶ್ರೋತಾ ಘ್ರಾತಾ. ರಸಯಿತಾ ಮಂತಾ ಬೋದ್ಧಾ ಕರ್ತಾ ವಿಜ್ಞಾನಾತ್ಮಾ ಪುರುಷಃ" ಎಂಬುವೇ ಮೊದಲಾದ ಅನೇಕಶ್ರುತಿಗಳಿಂದ ಆತ್ಮನಿಗೆ ಜ್ಞಾತೃತ್ವವು ಸ್ವಾಭಾವಿಕಧರ್ಮವಾಗಿಯೇ ಇರುವುದೆಂಬುದನ್ನೂ ಸ್ಪಷ್ಟವಾಗಿ ಸೂತ್ರಕಾರರು ತೋರಿಸಿರುವರಷ್ಟೆ.

## ೪೪೩. ಪರಮಪುರುಷಾಯತ್ತಂ ಕರ್ತೃತ್ವಂ ಭೋಕ್ತೃತ್ವಂ ಚ ಜೀವಸ್ಯೈವ.

ಇದರಂತೆಯೇ—ಸುಖದುಃಖಭೋಕ್ತೃತ್ವವೂ, ಅಂಥ ಭೋಕ್ತೃತ್ವಕ್ಕೆ ಕಾರಣವಾದ ಪುಣ್ಯಪಾಪಕರ್ತೃತ್ವವೂ ಸಹ ಜೀವನಿಗೇ ಇರುವುವಲ್ಲದೆ ಪುತ್ತೊಂ ದಕ್ಕೆ ಇಲ್ಲವೆಂಬ ಅಂಶವನ್ನೂ, ಜೀವನಲ್ಲಿ ಇರುವ ಅಂಥ ಕರ್ತೃತ್ವವು ಪರಮಪುರುಷ ನಾದ ಸರ್ವೇಶ್ವರನಿಗೆ ಅಧೀನವಾಗಿಯೇ ಇರುವುದೆಂಬ ಅಂಶವನ್ನೂ— "ಕರ್ತಾ ಶಾಸ್ತ್ರಾರ್ಥವತ್ತ್ವಾತ್" "ಪರಾತ್ತು ತಚ್ಛ್ರುತೇಃ" ಎಂಬ ಅಧಿಕರಣ ಗಳಲ್ಲಿ ಆದೇ ಸೂತ್ರಕಾರರು ನಿರೂಪಿಸಿರುವರು.

## ೪೪೭. ಜೀವನಿಷ್ಠಕರ್ತೃತ್ವಸ್ಯ ಪರಮಾತ್ಮಾಧೀನತ್ವೇ ತಸ್ಯ ವೈಷಮ್ಯನೈರ್ಘೃಣ್ಯಾಪತ್ತ್ಯಾಶಂಕಾ.

ಪೂಜ್ಯರೇ ! ಜೀವನಲ್ಲಿ ಇರುವ ಪುಣ್ಯಪಾಪಕರ್ತೃತ್ವವು ಪರಮಪುರುಷಾ ಧೀನವಾಗಿ ಇರುವುದಾದರೆ—ಪುಣ್ಯಪಾಪಗಳನ್ನು ಮಾಡುವ ವಿಷಯದಲ್ಲಿ ಜೀವ ನಿಗೆ ಸ್ವಾತಂತ್ರ್ಯವಿಲ್ಲವೆಂದೂ, ಪರಮಪುರುಷನು ಹೇಗೆ ಮಾಡಿಸುವನೋ ಹಾಗೆ ಜೀವನು ಮಾಡುವನೆಂದೂ ಹೇಳಿದಂತಾಯಿತು. ಹಾಗಾದರೆ ಏನೂ ಅರಿ ಯದ ಆ ಜೀವನ ಕೈಯಿಂದ ಪಾಪಕೃತ್ಯಗಳನ್ನು ಬಲಾತ್ಕಾರವಾಗಿ ಮಾಡಿಸಿ ಅದಕ್ಕೆ ನರಕಾದಿದುಃಖಾನುಭವವೆಂಬ ಶಿಕ್ಷೆಯನ್ನು ಕೊಡುವುದು ಅತ್ಯಂತದಯಾಳು ವಾದ ಪರಮಪುರುಷನಿಗೆ ನ್ಯಾಯವಾಗಿ ಇರುವುದೋ ? ಮತ್ತು—ಒಬ್ಬ ಜೀವ ನಿಂದ ಪುಣ್ಯವನ್ನೂ ಮತ್ತೊಬ್ಬ ಜೀವನಿಂದ ಪಾಪವನ್ನೂ ಮಾಡಿಸುವ ಈಶ್ವರನಿಗೆ ವೈಷಮ್ಯನೈರ್ಘೃಣ್ಯದೋಷಗಳು ಬರುವುದಿಲ್ಲವೋ ?

## ೪೪೮. ಜೀವಗತಕರ್ತೃತ್ವಂ ಪ್ರತಿ ಕಾಲಾದಿವತ್ ಈಶ್ವರಸ್ಯ ಸಾಧಾರಣಕಾರಣತ್ವಾತ್ ನೋಕ್ತದೋಷಾಪತ್ತಿಃ.

ಈ ರೀತಿಯಾದ ಆಶಂಕೆ ಮಂದಬುದ್ಧಿಗಳಿಗೆ ಉಂಟಾಗಬಹುದಲ್ಲದೆ ವಿಚಾರ ಪರರಾದ ಸೂಕ್ಷ್ಮಬುದ್ಧಿಗಳಿಗೆ ಉಂಟಾಗುವುದೇ ಇಲ್ಲ. ಹೇಗೆಂದರೆ—ಲೋಕ ದಲ್ಲಿ ಆವುದೊಂದು ಕಾರ್ಯವುಂಟಾಗಬೇಕಾಗಿದ್ದರೂ—ಅದಕ್ಕೆ ಕೆಲವು ಸಾಧಾರಣ ಕಾರಣಗಳೂ, ಕೆಲವು ಅಸಾಧಾರಣಕಾರಣಗಳೂ ಬೇಕಾಗಿರುವುವು. ಸಕಲಕಾರ್ಯ ಗಳಲ್ಲಿಯೂ ಅನ್ವಯಿಸುವ ಕಾರಣಗಳು ಸಾಧಾರಣಕಾರಣಗಳೆನಿಸಿಕೊಳ್ಳುವುವು. ಆ ಆ ಕಾರ್ಯಗಳಲ್ಲಿಮಾತ್ರ ಅನ್ವಯಿಸುವ ಕಾರಣಗಳು ಅಸಾಧಾರಣಕಾರಣಗಳೆನಿಸಿ ಕೊಳ್ಳುವುವು. ಈಶ್ವರನೂ ಕಾಲವೂ, ದೇಶವೂ, ಸಹ ಸಕಲಕಾರ್ಯೋತ್ಪತ್ತಿಗೂ

ಸಾಧಾರಣಕಾರಣಗಳಾಗಿ ಇರುವುವು. ಘಟದ ಉತ್ಪತ್ತಿಗೆ ಘಟದ ಪ್ರಾಗಭಾವವೂ, ಮೃತ್ಪಿಂಡವೂ, ಕುಲಾಲನೂ, ಅವನ ಅದೃಷ್ಟವಿಶೇಷವೂ, ದಂಡಚಕ್ರಾದಿಸಾಮಗ್ರಿಗಳೂ ಸಹ ಅಸಾಧಾರಣಕಾರಣಗಳಾಗಿ ಇರುವುವು. ಹೀಗೆಯೇ ಪಟಮೊದಲಾದ ಸಕಲಕಾರ್ಯಗಳಿಗೂ ಅಸಾಧಾರಣಕಾರಣಗಳನ್ನು ಊಹಿಸಿಕೊಳ್ಳಬೇಕು. ಇಂಥ ಅಸಾಧಾರಣಕಾರಣಗಳು ಒದಗಿದರಲ್ಲದೆ, ಸಾಧಾರಣಕಾರಣಗಳು ಆವಕಾರ್ಯವನ್ನೂ ಉಂಟುಮಾಡುವುದಿಲ್ಲ. ಸಸ್ಯೋತ್ಪತ್ತಿಗೆ ಕಾರಣವಾದ ವರ್ಷಾಕಾಲವು ಬಂದರೂ, ಈಶ್ವರನೂ ಇದ್ದರೂ, ಜಲಸಂಯುಕ್ತವಾದ ಕ್ಷೇತ್ರದಲ್ಲಿ ಬೀಜವನ್ನು ಬಿತ್ತಿದರಲ್ಲದೆ ಸಸ್ಯವುಂಟಾಗುವುದಿಲ್ಲವಷ್ಟೆ?

ಆದಕಾರಣ ಸರ್ವದಾ ಸಿದ್ಧವಾಗಿರುವ ಸಾಧಾರಣಕಾರಣಗಳು ಆ ಆ ಕಾಲಗಳಲ್ಲಿ ಬಂದೊದಗುವ ಅಸಾಧಾರಣಕಾರಣಗಳೊಡನೆ ಯಾವಾಗ ಕೂಡುವುವೋ ಆಗ ಆ ಆ ಕಾರ್ಯವಿಶೇಷಗಳನ್ನು ಅವು ಉಂಟುಮಾಡುವುವು. ಹಾಗೆ ಉಂಟುಮಾಡಲ್ಪಟ್ಟ ಕಾರ್ಯವಿಶೇಷಗಳಲ್ಲಿ ವ್ಯತ್ಯಾಸವೇನಾದರೂ ಕಂಡುಬಂದರೆ ಅಂಥ ವ್ಯತ್ಯಾಸದೋಷಕ್ಕೆ ಅವುಗಳ ಅಸಾಧಾರಣಕಾರಣಗಳೇ ಭಾಗಿಗಳಾಗುವುವಲ್ಲದೆ ಸಾಧಾರಣಕಾರಣವು ಎಂದಿಗೂ ಭಾಗಿಯಾಗಲಾರದು.

ಜೀವನಲ್ಲಿ ಇರುವ ಕರ್ತೃತ್ವಕ್ಕೆ ಈಶ್ವರನು ಕಾಲದೇಶಗಳಂತೆ ಸಾಧಾರಣಕಾರಣವಾಗಿ ಇರುವನಲ್ಲದೆ ಅಸಾಧಾರಣಕಾರಣವಲ್ಲ. ಜೀವನಿಗೆ ಅನಾದಿಕಾಲದಿಂದಲೂ, ಬಂದಿರುವ ಕರ್ಮವಾಸನೆಯೇ ಈ ಕರ್ತೃತ್ವಕ್ಕೆ ಅಸಾಧಾರಣಕಾರಣವಾಗಿ ಇರುವುದು. ಇಂಥ ಕರ್ತೃತ್ವವು ಸತ್ಕರ್ಮವಿಷಯದಲ್ಲಿ ಪ್ರವರ್ತಿಸದೆ ದುಷ್ಕರ್ಮವಿಷಯದಲ್ಲಿ ಪ್ರವರ್ತಿಸುವುದಾದರೆ, ಇಂಥ ವ್ಯತ್ಯಾಸದೋಷಕ್ಕೆ ಆ ಜೀವನ ಪ್ರಾಚೀನಕರ್ಮವಾಸನೆಯೇ ಭಾಗಿಯಾಗಿ ಆ ಜೀವವನ್ನು ನರಕಾದಿದುಃಖಗಳಿಗೆ ಅದೇ ಗುರಿಪಡಿಸುವುದಲ್ಲದೆ ಈಶ್ವರನಲ್ಲ.

ಆದಕಾರಣ ಆ ಆ ಜೀವನ ಪ್ರಾಚೀನಕರ್ಮವಾಸನೆಯೆಂಬ ಅಸಾಧಾರಣಕಾರಣವನ್ನು ಅನುಸರಿಸಿ ತಾನು ಸಾಧಾರಣಕಾರಣವಾಗಿ ಇದ್ದುಕೊಂಡು ಕಾರ್ಯಗಳನ್ನು ನಡೆಸುವ ಈಶ್ವರನಲ್ಲಿ ವೈಷಮ್ಯನೈರ್ಘೃಣ್ಯಾದಿದೋಷಗಳನ್ನು ಆರೋಪಿಸಲು ಸೂಕ್ಷ್ಮಬುದ್ಧಿಗಳಾದವರಿಗೆ ಎಂದಿಗೂ ನಾಲಿಗೆ ಹೊರಡಲಾರದು. ಆದುದರಿಂದ ಜೀವನಲ್ಲಿ ಇರುವ ಕರ್ತೃತ್ವವು ಪರಮಪುರುಷನಾದ ಸರ್ವೇಶ್ವರನಿಗೆ ಅಧೀನವಾಗಿ ಇರುವುದೆಂದು ಹೇಳಿದುದರಲ್ಲಿ ಯಾವ ದೋಷವೂ ಇರುವುದಿಲ್ಲ

## ೪೪೯. ಜೀವಸ್ಯ ಕರ್ತೃತ್ವಾನಭ್ಯುಪಗಮೇ ವಿಧಿನಿಷೇಧರೂಪಶಾಸ್ತ್ರವೈಯರ್ಥ್ಯಂ.

ಸುಖದುಃಖಭೋಕ್ತೃತ್ವವು ಜೀವನಿಗೆ ಇರುವುದೆಂದು ಯಾವಾಗ ಸಿದ್ಧವಾಯಿತೋ ಆಗಲೇ ಅಂಥ ಭೋಕ್ತೃತ್ವಕ್ಕೆ ಕಾರಣವಾದ ಕರ್ತೃತ್ವವೂ ಜೀವನಿಗೆ ಇದ್ದೇ ಇರುವುದೆಂದು ಸಿದ್ಧವೇ ಆಗಿರುವುದು. ಮಾಡಿದವನಲ್ಲವೆ ಫಲವನ್ನು ಅನುಭವಿಸುವನು ?

ಮತ್ತು ಜೀವನಿಗೆ ಕರ್ತೃತ್ವವನ್ನು ಒಪ್ಪಿಕೊಳ್ಳದಿದ್ದರೆ—" ಅಹರಹಸ್ಸಂಧ್ಯಾಮುಪಾಸೀತ " " ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ " " ನ ಕಳಂಜಂ ಭಕ್ಷಯೇತ್ " " ನಾನೃತಂ ವದೇತ್ " ಇವೇ ಮೊದಲಾದ ವಿಧಿನಿಷೇಧಶಾಸ್ತ್ರಗಳಿಗೆ ವೈಯರ್ಥ್ಯವೇ ಪ್ರಸಂಗಿಸುವುದು. ಪ್ರೇರಣೆಯನ್ನೂ ನಿವಾರಣೆಯನ್ನೂ ಮಾಡುವುವಾದರಲ್ಲವೆ ಈ ಶಾಸ್ತ್ರಗಳಿಗೆ ಸಾರ್ಥಕ್ಯವು ದೊರಕುವುದು. ಪ್ರೇರಣಾನಿವಾರಣೆಗಳೂ ಜ್ಞಾನವನ್ನು ಉಂಟುಮಾಡುವುದರ ಮೂಲಕವೇ ಸಂಭವಿಸುವುವು. ಅಚೇತನವಸ್ತುವಿಗೆ ಜ್ಞಾನವನ್ನು ಉಂಟುಮಾಡುವುದು ಶಕ್ಯವಲ್ಲವಾದುದರಿಂದ ಪ್ರವರ್ತಕನಿವರ್ತಕಶಾಸ್ತ್ರಗಳು ಅಚೇತನವಸ್ತುವನ್ನು ಕುರಿತು ಪ್ರವರ್ತಿಸಲಾರವಾಗಿ ಚೇತನನನ್ನು ಕುರಿತೇ ಪ್ರವರ್ತಿಸಿ ಸಾರ್ಥಕ್ಯವನ್ನು ಪಡೆವುವುಗಳಾಗಿ ಇರುವುವು. ಅಂಥ ಚೇತನನಿಗೆ ಕರ್ತೃತ್ವವನ್ನೇ ಒಪ್ಪದಿದ್ದರೆ ಶಾಸ್ತ್ರಗಳಿಗೆ ಪ್ರವರ್ತಕತ್ವನಿವರ್ತಕತ್ವಗಳೇ ದುರ್ಲಭಗಳಾಗಿ ಸಾರ್ಥಕ್ಯವು ದೂರಭ್ರಷ್ಟವಾಗಿ ವೈಯರ್ಥ್ಯವೇ ಪ್ರಸಂಗಿಸುವುದು. ಆದಕಾರಣ ಚೇತನನಿಗೆ ಕರ್ತೃತ್ವವನ್ನು ಆವಶ್ಯಕವಾಗಿ ಒಪ್ಪಿಕೊಳ್ಳಬೇಕು. ಇದೇ ಅರ್ಥವು—" ಕರ್ತಾ ಶಾಸ್ತ್ರಾರ್ಥವತ್ತ್ವಾತ್ " ಎಂಬ ಹಿಂದೆ ಹೇಳಿದ ಸೂತ್ರದಿಂದ ಹೇಳಲ್ಪಡುವುದು.

## ೪೫೦. ಕರ್ತೃತ್ವಸ್ಯ ಪರಮಪುರುಷಾಯತ್ತತ್ವೇ ಶ್ರುತಿಪ್ರಮಾಣಪ್ರದರ್ಶನಂ.

ಇಂಥ ಕರ್ತೃತ್ವವು—" ಅಂತಃಪ್ರವಿಷ್ಟಶ್ಶಾಸ್ತಾ ಜನಾನಾಂ ಸರ್ವಾತ್ಮಾ " " ಯ ಆತ್ಮಾನಮಂತರೋ ಯಮಯತಿ " ಇತ್ಯಾದಿಶ್ರುತಿಗಳ ಬಲದಿಂದ ಪರಮಪುರುಷಾಧೀನವಾಗಿ ಇರುವುದೆಂಬ ಈ ಅರ್ಥವು " ಪರಾತ್ತು ತಚ್ಛ್ರುತೇಃ " ಎಂದು ಹಿಂದೆ ಹೇಳಿದ ಸೂತ್ರದಿಂದ ಹೇಳಲ್ಪಡುವುದು.

ಆದಕಾರಣ—"ಸ್ವಾಭಾವಿಕಜ್ಞಾತೃತ್ವಕರ್ತೃತ್ವಭೋಕ್ತೃತ್ವವಿಶಿಷ್ಟನಾದವನೇ ಆತ್ಮನೆನಿಸಿಕೊಳ್ಳುವನಲ್ಲದೆ ಜ್ಞಾನಮಾತ್ರವು ಆತ್ಮತತ್ತ್ವವಾಗಲಾರದು."

**ಇಂತು ತತ್ತ್ವಶುದ್ಧಿಯೆಂಬ ವಿಶಿಷ್ಟಾದ್ವೈತಪ್ರಕರಣಗ್ರಂಥದೊಳ್ ಜೀವಪರಿಚ್ಛೇದದಲ್ಲಿ ಆತ್ಮನಿಗೆ ಜ್ಞಾನಭಿನ್ನತ್ವಜ್ಞಾತೃತ್ವಕರ್ತೃತ್ವಭೋಕ್ತೃತ್ವಸಮರ್ಥನಪ್ರಕರಣಂ ಚತುರ್ಥಂ ೪**

# ಪಂಚಮಪ್ರಕರಣಂ.

## ೪೫೧. ಅಥ ಜೀವಸ್ಯ ಸ್ವಯಂಪ್ರಕಾಶತ್ವಾದಿ ಸಮರ್ಥನಾರಂಭಃ ||೬||

ಇಂಥ ಜೀವಾತ್ಮನಿಗೆ—೧ ಸ್ವಯಂಪ್ರಕಾಶತ್ವವೂ, ೨ ನಿತ್ಯತ್ವವೂ, ೩ ಅನೇಕತ್ವವೂ, ೪ ಅಣುತ್ವವೂ, ೫ ನಿರವಯವತ್ವವೂ, ೬ ಛೇದನ, ದಹನ, ಕ್ಲೇದನ, ಶೋಷಣಾನರ್ಹತ್ವವೂ ಸಹ ಶ್ರುತ್ಯಾದಿಪ್ರಮಾಣಬಲದಿಂದಲೂ ಉಪಪತ್ತಿಯಿಂದಲೂ ಸಿದ್ಧವಾಗಿ ಇರುವಕಾರಣ ಇವುಗಳನ್ನು ಅಪಲಪಿಸಲಾಗುವುದಿಲ್ಲ.

## ೪೫೨. ಸ್ವಯಂಪ್ರಕಾಶತ್ವಾದೌ ಪ್ರಮಾಣಪ್ರದರ್ಶನಂ.

೧ "ಅತ್ರಾಯಂ ಪುರುಷಃ ಸ್ವಯಂಜ್ಯೋತಿರ್ಭವತಿ" ಎಂಬ ಶ್ರುತಿಯಿಂದ ಸ್ವಯಂಪ್ರಕಾಶತ್ವವು ಸಿದ್ಧವಾಗಿ ಇರುವುದು. ಇಲ್ಲಿ—ಜ್ಞಾನಕ್ಕೆ ಅಧೀನವಲ್ಲದ ಪ್ರಕಾಶವುಳ್ಳೋಣವೇ ಸ್ವಯಂಪ್ರಕಾಶತ್ವವು ಎಂದು ತಿಳಿಯಬೇಕು.

೨-೩ "ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಮೇಕೋ ಬಹೂನಾಂ ಯೋ ವಿದಧಾತಿ ಕಾಮಾನ್" ಎಂಬ ಶ್ರುತಿಯಿಂದ ನಿತ್ಯತ್ವವೂ ಅನೇಕತ್ವವೂ ಸಿದ್ಧವಾಗಿ ಇರುವುವು.

೪ "ಏಷೋಽಣುರಾತ್ಮಾ ಚೇತಸಾ ವೇದಿತವ್ಯಃ" "ಆರಾಗ್ರಮಾತ್ರೋ ಹ್ಯವರೋಽಪಿ ದೃಷ್ಟಃ"

**"ವಾಲಾಗ್ರಶತಭಾಗಸ್ಯ ಶತಧಾ ಕಲ್ಪಿತಸ್ಯ ಚ |**
**ಭಾಗೋ ಜೀವಃ ಸ ವಿಜ್ಞೇಯಃ ಸ ಚಾನಂತ್ಯಾಯ ಕಲ್ಪತೇ || "**

ಇವೇ ಮೊದಲಾದ ಶ್ರುತಿಗಳಿಂದ ಅಣುತ್ವವು ಸಿದ್ಧವಾಗಿ ಇರುವುದು.

೫ "ವಿಜ್ಞಾನಂ ಯಜ್ಞಂ ತನುತೇ" ಎಂಬ ಶ್ರುತಿಯಿಂದಲೂ,

**"ಜ್ಞಾನಾನಂದಮಯಸ್ತ್ವಾತ್ಮಾ ಶೇಷೋ ಹಿ ಪರಮಾತ್ಮನಃ"**

**"ನಿರ್ವಾಣಮಯ ಏವಾಯಮಾತ್ಮಾ ಜ್ಞಾನಮಯೋಽಮಲಃ"**

ಇತ್ಯಾದಿಸ್ಮೃತ್ಯನುಮಿತವಾದ ಶ್ರುತಿಯಿಂದಲೂ ಜ್ಞಾನಸ್ವರೂಪತ್ವವೂ ಆನಂದಸ್ವರೂಪತ್ವವೂ ಸಿದ್ಧವಾಗಿ ಇರುವುದರಿಂದಲೇ ನಿರವಯವತ್ವವು ಅರ್ಥಾತ್ ಸಿದ್ಧವಾಗುವುದು.

೬ "ಅಚ್ಛೇದ್ಯೋಽಯಮದಾಹ್ಯೋಽಯಮಕ್ಲೇದ್ಯೋಽಶೋಷ್ಯ ಏವ ಚ" ಇತ್ಯಾದಿಸ್ಮೃತ್ಯನುಮಿತಶ್ರುತಿಯಿಂದ ಛೇದನ, ದಹನ, ಕ್ಲೇದನ, ಶೋಷಣ ಇವುಗಳಿಗೆ ಅನರ್ಹತ್ವವು ಸಿದ್ಧವಾಗಿ ಇರುವುದು. ಹೀಗೆ ಈ ಅರ್ಥಗಳಲ್ಲಿ ಶ್ರುತಿಗಳನ್ನು ತೋರಿಸಿದೆವು; ಉಪಪತ್ತಿಗಳನ್ನೂ ಮುಂದೆ ತೋರಿಸುವೆವು.

### ೪೫೩. ಜೀವಸ್ಯ ಸ್ವಂ ಪ್ರತ್ಯೇವ ಸ್ವಯಂಪ್ರಕಾಶತ್ವಂ ನಾನ್ಯಂ ಪ್ರತಿ

"ಪೂಜ್ಯರೇ! ಆತ್ಮನು ಸ್ವಯಂಪ್ರಕಾಶನಾಗಿ ಇರುವ ಪಕ್ಷದಲ್ಲಿ ಅನ್ಯಶರೀರದಲ್ಲಿ ಇರುವ ಆತ್ಮನು ಅನ್ಯರಿಗೆ ಜ್ಞಾನಾಂತರಸಹಾಯವಿಲ್ಲದೆಯೇ ತೋರಬೇಕಲ್ಲವೆ? ಆದರೆ ಲೋಕದಲ್ಲಿ ಹಾಗೆ ಕಾಣುವುದಿಲ್ಲ; ಅನ್ಯಶರೀರದಲ್ಲಿ ನಡೆವ ಚೇಷ್ಟೆ ಮುಂತಾದ ಚಿಹ್ನೆಗಳನ್ನು ಕಂಡು ಅಲ್ಲಿ ಆತ್ಮನು ಇರುವನೆಂದು ಅನುಮಾನಪ್ರಮಾಣದಿಂದ ನಿಷ್ಕರ್ಷಿಸುವೆವು. ಹೀಗೆ ಅನುಮಿತಿಯೆಂಬ ಜ್ಞಾನಾಂತರಕ್ಕೆ ಗೋಚರನಾದ ಆತ್ಮನನ್ನು ಸ್ವಯಂಪ್ರಕಾಶನೆಂದು ಹೇಗೆ ಹೇಳುವುದು?" ಎಂದು ಆಶಂಕಿಸಬೇಕಾದುದಿಲ್ಲ—

ಏತಕ್ಕೆಂದರೆ—ಆತ್ಮನು ಸ್ವಯಂಪ್ರಕಾಶನಾಗಿ ಇರುವನೆಂದು ಹೇಳುವ ಶಾಸ್ತ್ರವು ಎಲ್ಲರಿಗೂ ಇವನು ಸ್ವಯಂಪ್ರಕಾಶನಾಗಿ ಇರುವನೆಂದು ಹೇಳುವುದಿಲ್ಲ: ತನ್ನ ಮಟ್ಟಿಗೆ ತಾನು ಸ್ವಯಂಪ್ರಕಾಶನಾಗಿ ಇರುವನೆಂದೇ ಹೇಳುತ್ತಿರುವುದು. ಆದಕಾರಣ ಅನ್ಯಶರೀರದಲ್ಲಿ ಇರುವ ಆತ್ಮನು ಅನ್ಯರಿಗೆ ಜ್ಞಾನಾಂತರಕ್ಕೆ ಗೋಚರನಾದರೂ ಸ್ವಯಂಪ್ರಕಾಶತ್ವಕ್ಕೆ ಚ್ಯುತಿಯಿಲ್ಲ.

### ೪೫೪. ಅಣುತ್ವಾದಿಧರ್ಮವಿಶಿಷ್ಟತ್ವಾಕಾರೇಣ ಸ್ವಯಂಪ್ರಕಾಶತ್ವಾಪತ್ತ್ಯಾಶಂಕಾ.

"ಪೂಜ್ಯರೇ!—ಆತ್ಮನು ತನ್ನ ಮಟ್ಟಿಗೆ ತಾನು ಸ್ವಯಂಪ್ರಕಾಶನೆಂದು ಹೇಳಿದಿರಿ; ಮತ್ತು ಈ ಆತ್ಮನಿಗೆ ಅಣುತ್ವ, ಶೇಷತ್ವ, ನಿತ್ಯತ್ವ, ನಿಯಾಮ್ಯತ್ವ ಮುಂತಾದ ಧರ್ಮಗಳು ಪ್ರಮಾಣಸಿದ್ಧವಾಗಿ ಇರುವುವೆಂಬೂ ಹೇಳಿದಿರಿ; ಹೀಗಾದರೆ "ಅಣು

ತ್ವಾದಿವಿಶಿಷ್ಟವಾದ ಆತ್ಮಸ್ವರೂಪವು ತನಗೆ ಸ್ವಯಂಪ್ರಕಾಶವಾಗಿ ಇರುವುದು' ಎಂದು ಹೇಳಿದಂತಾಯಿತು; ಸ್ವಯಂಪ್ರಕಾಶವಾದ ವಸ್ತುವಿನ ವಿಷಯದಲ್ಲಿ ಸಂದೇಹವುಂಟಾಗಲು ಅವಕಾಶವಿಲ್ಲ "ನಾನು" ಎಂಬುದಾಗಿ ತೋರಿಬರುತ್ತಿರುವ ಸ್ವಯಂಪ್ರಕಾಶವಾದ ಆತ್ಮವಸ್ತುವಿನಲ್ಲಿ "ನಾನು ನಾನೇ ಹವುದೋ ಅಲ್ಲವೋ" ಎಂಬ ಸಂದೇಹವು ಉಂಟಾಗುವುದಿಲ್ಲವಷ್ಟೆ? ಅದರಂತೆ ಅಣುತ್ವಾದಿವಿಶಿಷ್ಟನಾದ ಆತ್ಮನು ಸ್ವಯಂಪ್ರಕಾಶನಾಗಿ ಇರುವ ಪಕ್ಷದಲ್ಲಿ ಅಣುತ್ವಾದಿಧರ್ಮಗಳ ವಿಷಯದಲ್ಲಿಯೂ ಸಂದೇಹವುಂಟಾಗಕೂಡದು. ಆದರೆ—"ಆತ್ಮನು ಅಣುವೋ, ಶರೀರಸಮಪರಿಮಾಣನೋ ವಿಭುವೋ" ಎಂಬ ಸಂದೇಹವುಂಟಾಗಿ ಈ ವಿಷಯದಲ್ಲಿ ಅನೇಕವಾದಿಗಳು ಪರಸ್ಪರವಾಗಿ ವಿವದಿಸುತ್ತಿರುವರು. ಮತ್ತು—"ಆತ್ಮನು ಶೇಷಭೂತನೋ ಸ್ವತಂತ್ರನೋ, ನಿತ್ಯನೋ ಅನಿತ್ಯನೋ, ನಿಯಾಮ್ಯನೋ ಅನಿಯಾಮ್ಯನೋ, ಇತ್ಯಾದಿ ಸಂದೇಹಗಳು ಲೋಕದಲ್ಲಿ ಉಂಟಾಗುತ್ತಲೇ ಇರುವುವು. ಆತ್ಮನಿಗೆ ಸ್ವಯಂಪ್ರಕಾಶತ್ವವನ್ನು ಹೇಳುವ ಪಕ್ಷದಲ್ಲಿ ಇವೆಲ್ಲವೂ ಹೇಗೆ ಸಂಗತವಾಗುವುವು? ಎಂದು ಆಶಂಕಿಸಲಾಗುವುದಿಲ್ಲ.

### ೪೫೫. ಅಣುತ್ವಾದೀನಾಂ ಪ್ರಮಾಣಾಂತರಗ್ರಾಹ್ಯತ್ವಾತ್ ನ ತದ್ವಿಶಿಷ್ಟತ್ವಾಕಾರೇಣಾತ್ಮನಃ ಸ್ವಯಂಪ್ರಕಾಶತ್ವಂ.

ಏತಕ್ಕೆಂದರೆ—ಆತ್ಮಸ್ವರೂಪಜ್ಞಾನವು ಉಂಟಾಗುವುದಕ್ಕೆ ಆತ್ಮಸ್ವರೂಪಮಾತ್ರವೇ ಪುಷ್ಕಳವಾದ ಸಾಮಗ್ರಿಯಾಗಿ ಇರುವುದು; ಇದಕ್ಕಾಗಿ ಧರ್ಮಭೂತಜ್ಞಾನವು ಬೇಕಾಗಿಲ್ಲ; ಆದುದರಿಂದಲೇ ಆತ್ಮಸ್ವರೂಪವು ಸರ್ವದಾ ಸ್ವಯಂಪ್ರಕಾಶವಾಗಿ ಇರುವುದು. ಅಣುತ್ವಾದ್ಯಾಕಾರವಿಶಿಷ್ಟವಾದ ಆತ್ಮಸ್ವರೂಪಜ್ಞಾನವು ಉಂಟಾಗುವುದಕ್ಕಾದರೆ ಸ್ವರೂಪಮಾತ್ರವೇ ಪುಷ್ಕಳವಾದ ಸಾಮಗ್ರಿಯಾಗಲಾರದು; ವಿಶೇಷಣೀಭೂತವಾದ ಅಣುತ್ವಾದ್ಯಾಕಾರಗಳು ಪ್ರಮಾಣಾಂತರಜನ್ಯವಾದ ಧರ್ಮಭೂತಜ್ಞಾನದಿಂದಲೇ ಗ್ರಹಿಸಲ್ಪಡತಕ್ಕುವುಗಳಾಗಿ ಇರುವುದರಿಂದ ಅಂಥ ಜ್ಞಾನವಿಲ್ಲದ ಕಾಲದಲ್ಲಿ ಅಣುತ್ವಾದ್ಯಾಕಾರಗಳು ಪ್ರಕಾಶಿಸಲಾರವು. ಆದುದರಿಂದಲೇ ಇವುಗಳು ಸರ್ವದಾ ಪ್ರಕಾಶಿಸಲಾರದೆ ಪ್ರಮಾಣಾಂತರಜನ್ಯಜ್ಞಾನವುಂಟಾದಮೇಲೆಯೇ ಪ್ರಕಾಶಿಸುವುವು.

ಮಾವಿನಹಣ್ಣಿನ ಸ್ವರೂಪವು ಸರ್ವದಾ ರಸವಿಶಿಷ್ಟವಾಗಿಯೇ ಇದ್ದರೂ, ಚಕ್ಷುರಿಂದ್ರಿಯದಿಂದ ಅದನ್ನು ಗ್ರಹಿಸುತ್ತಿರುವಾಗ ಅದರ ಸ್ವರೂಪಮಾತ್ರವೇ ಪ್ರಕಾಶಿಸುವುದಲ್ಲದೆ ತತ್ಸಮಕಾಲದಲ್ಲಿಯೇ ಅದರ ರಸವೂ ಸಹ ನಮಗೆ ಪ್ರಕಾಶಿಸ

ಲಾರದು. ರಸಗ್ರಹಣಕ್ಕೆ ಅಪೇಕ್ಷಿತವಾಗಿ ಇರುವ ರಸನೇಂದ್ರಿಯಸಂಯೋಗವು ಉಂಟಾದಮೇಲೆಯೇ ರಸವು ಪ್ರಕಾಶಿಸುವುದು. ಅಂತು ರಸವಿಶಿಷ್ಟಾಕಾರವು ಹೇಗಾದರೆ ರಸನೇಂದ್ರಿಯಗ್ರಾಹ್ಯವೇ ಆಗಿರುವುದರಿಂದ ಚಕ್ಷುರಿಂದ್ರಿಯಗ್ರಾಹ್ಯ ವಾಗುವುದಿಲ್ಲವೋ, ಅದರಂತೆ ಅಣುತ್ವಾದಿವಿಶಿಷ್ಟಾಕಾರವು ಜ್ಞಾನಾಂತರಗ್ರಾಹ್ಯವೇ ಆಗಿರುವುದರಿಂದ ಸ್ವರೂಪಮಾತ್ರಗ್ರಾಹ್ಯವಾಗುವುದಿಲ್ಲವಾಗಿ ಅಣುತ್ವಾದ್ಯಾಕಾರಗಳು ಸ್ವಯಂಪ್ರಕಾಶಗಳಾಗಲಾರವು.

## ೪೫೩. ಏಕತ್ವಪ್ರತ್ಯಕ್ತ್ವಾನುಕೂಲತ್ವವಿಶಿಷ್ಟತಯಾ ಆತ್ಮನಃ ಸ್ವಯಂಪ್ರಕಾಶತ್ವಂ.

ಹಾಗಾದರೆ ಜೀವನು ಯಾವ ಯಾವ ಆಕಾರದಿಂದ ಸ್ವಯಂಪ್ರಕಾಶನೆನಿಸಿ ಕೊಳ್ಳುವನು ? ಏಕತ್ವಾಕಾರದಿಂದಲೂ ಪ್ರತ್ಯಕ್ತ್ವಾಕಾರದಿಂದಲೂ ಅನುಕೂಲ ತ್ವಾಕಾರದಿಂದಲೂ ಜೀವನು ಸ್ವಯಂಪ್ರಕಾಶನಾಗಿ ಇರುವನೆಂದು ತಿಳಿಯ ಬಹುದು. ಆದುದರಿಂದಲೇ ಅಣುತ್ವಾದ್ಯಾಕಾರಗಳಿಗಿಂತಲೂ ಪ್ರತ್ಯಕ್ತ್ವ, ಏಕತ್ವ, ಅನುಕೂಲತ್ವಾಕಾರಗಳು ವಿಲಕ್ಷಣಗಳಾಗಿ ಸ್ವರೂಪಮಾತ್ರದಿಂದಲೇ ಗ್ರಾಹ್ಯ ಗಳಾಗಿ ಇರುವುವು. ಯಾವ ವಿಷಯಕ್ಕೆ ಪ್ರಕಾಶವು (ಸ್ಫೂರ್ತಿ) ಉಂಟಾಗ ಲಿಲ್ಲವೋ ಆ ವಿಷಯದಲ್ಲಿ ಸಂಶಯವುಂಟಾಗುವಿಕೆಯೂ, ಯಾವ ವಿಷಯದಲ್ಲಿ ಸಂಶಯವಿಲ್ಲವೋ ಆ ವಿಷಯಕ್ಕೆ ಪ್ರಕಾಶವುಂಟಾಗಿ ಇರುವಿಕೆಯೂ ಲೋಕದಲ್ಲಿ ನಿಶ್ಚಿತವಾಗಿ ಇರುವುವು. ಮತ್ತು ಅಂಥ ವಿಷಯದ ಪ್ರಕಾಶಕ್ಕೆ ಮತ್ತೊಂದು ಸಾಮಗ್ರಿ (ಸಾಧನವು) ಬೇಕಾಗದೆ ತನ್ನಿಂದಲೇ ಅದು ಪ್ರಕಾಶಿಸುವುದಾದರೆ ಆ ವಿಷಯವು ಸ್ವಯಂಪ್ರಕಾಶವೆಂದೂ ನಿಶ್ಚಿತವಾಗುವುದು. ಯಾವ ಚೇತನನಿಗೂ ತನ್ನ ಏಕತ್ವ, ಪ್ರತ್ಯಕ್ತ್ವ, ಅನುಕೂಲತ್ವಗಳ ವಿಷಯದಲ್ಲಿ ಸಂಶಯವಿಲ್ಲ ; ಎಂದರೆ "ನಾನು ಒಬ್ಬನೇ ಹವುದೋ ಅಲ್ಲವೋ, ನಾನು ನನಗೆ ತೋರುತ್ತಿರುವೆನೋ ಅಥವಾ ಇಲ್ಲವೋ, ನಾನು ನನಗೆ ಅನುಕೂಲನೋ ಅಥವಾ ಪ್ರತಿಕೂಲನೋ" ಎಂಬ ಸಂಶಯವು ಲೋಕದಲ್ಲಿ ಆವನಿಗೂ ಇಲ್ಲ. ಮತ್ತು ಇವುಗಳ ಪ್ರಕಾಶಕ್ಕೆ ಇಂದ್ರಿಯಮುಂತಾದ ಆವುದೊಂದು ಸಾಮಗ್ರಿಯೂ ಬೇಕಾಗಿಲ್ಲ. ತಮ್ಮಿಂದಲೇ ತಾವು ಪ್ರಕಾಶಿಸುವುವು. ಆದುದರಿಂದ ಉಕ್ತವಾದ ಈ ಮೂರು ಆಕಾರಗಳೊಡನೆ ಕೂಡಿ ಆತ್ಮಸ್ವರೂಪವು ಸ್ವಯಂಪ್ರಕಾಶವೆನಿಸಿಕೊಳ್ಳಲು ಅಡ್ಡಿಯಿಲ್ಲ.

## ೪೫೭. ಪ್ರತ್ಯಕ್ತ್ವಾದಿವಿಷಯೇ ಪೂರ್ವಾಚಾರ್ಯಾಣಾಂ ಮತಭೇದನಿರೂಪಣಂ.

ಇಲ್ಲಿ ಕೆಲವರು ಆಚಾರ್ಯರು—"ಆತ್ಮಸ್ವರೂಪವು ಹೇಗೆ ಸ್ವಯಂಪ್ರಕಾಶವೋ ಆದರಂತೆಯೇ ಸ್ವರೂಪದಲ್ಲಿ ಇರುವ ಏಕತ್ವಪ್ರತ್ಯಕ್ತ್ವಾನುಕೂಲತ್ವಧರ್ಮಗಳೂ ಸ್ವಯಂಪ್ರಕಾಶಗಳಾಗಿ ಇರುವುವು." ಎಂದು ಹೇಳುವರು.

ಇನ್ನು ಕೆಲವರು ಆಚಾರ್ಯರು—"ಆತ್ಮಸ್ವರೂಪವು ಸ್ವಯಂಪ್ರಕಾಶವಾಗಿ ಇದ್ದರೂ ಪ್ರತ್ಯಕ್ತ್ವಾದಿಧರ್ಮಗಳು ಆತ್ಮಸ್ವರೂಪದಿಂದಲೇ ಪ್ರಕಾಶಪಡಿಸಲ್ಪಡುವುವಲ್ಲದೆ ಸ್ವಯಂಪ್ರಕಾಶಗಳಲ್ಲ" ಎಂದು ಹೇಳುವರು.

ಈ ಎರಡು ಪಕ್ಷಗಳಿಗೂ ಉಪಪತ್ತಿಗಳನ್ನು ಇಲ್ಲಿ ಬರೆವೆವಾದರೆ ಶಾಸ್ತ್ರಪರಿಚಯವನ್ನು ವಿಶೇಷವಾಗಿ ಪಡೆದಿಲ್ಲದವರಿಗೆ ಅದು ಸುಲಭವಾಗಿ ಗ್ರಾಹ್ಯವಾಗುವುದಿಲ್ಲ; ಆದರೂ ಜಿಜ್ಞಾಸುಗಳ ಕುತೂಹಲಕ್ಕಾಗಿ ಸಂಕ್ಷೇಪಿಸಿ ಇಲ್ಲಿ ಬರೆವೆವು. ಹೇಗೆಂದರೆ—"ಪ್ರತ್ಯಕ್ತ್ವಾದಿವಿಶಿಷ್ಟತಯಾ ಸ್ವಯಂಪ್ರಕಾಶತ್ವಂ" ಎಂಬ ಸ್ಥಳದಲ್ಲಿ ವಿಶಿಷ್ಟಪದದಿಂದ—ಪ್ರತ್ಯಕ್ತ್ವಾದಿಧರ್ಮಗಳು ವಿಶೇಷಣಗಳಾಗಿಯೂ, ಧರ್ಮಿಯಾದ ಆತ್ಮಸ್ವರೂಪವು ವಿಶೇಷ್ಯವಾಗಿಯೂ ತೋರುವುವು. ಪ್ರತ್ಯಕ್ತ್ವಾದಿಧರ್ಮನಿಷ್ಠವಾದ ಪ್ರಕಾರತೆಯೆಂಬ ವಿಷಯತೆಯೂ, ಪ್ರತ್ಯಕ್ತ್ವಾದಿಸ್ವರೂಪಾಪೃಥಕ್ಸಿದ್ಧಿಸಂಬಂಧನಿಷ್ಠವಾದ ಸಾಂಸರ್ಗಿಕವಿಷಯತೆಯೂ, ಪ್ರತ್ಯಕ್ತ್ವಾದಿಧರ್ಮನಿರೂಪಿತಗಳಾಗಿಯೇ ಇರುವುವು; ಧರ್ಮಿನಿಷ್ಠವಾದ ವಿಶೇಷ್ಯತೆಯೆಂಬ ವಿಷಯತೆಯಾದರೆ ಧರ್ಮಿಸ್ವರೂಪನಿರೂಪಿತವಾಗಿಯೇ ಇರುವುದು. ಪ್ರಾಭಾಕರಮತದಂತೆ ಸಿದ್ಧಾಂತದಲ್ಲಿಯೂ ಭಿನ್ನಭಿನ್ನಜ್ಞಾನವಿಷಯತೆಗಳಿಗೂ ಪರಸ್ಪರವಾಗಿ ನಿರೂಪ್ಯನಿರೂಪಕಭಾವವನ್ನು ಒಪ್ಪಬಹುದೆಂದು ಶ್ರುತಪ್ರಕಾಶಿಕೆಯಲ್ಲಿ ಸ್ಪಷ್ಟವಾಗಿ ಅಪ್ಪಣೆಕೊಡಿಸಿ ಇರುವುದರಿಂದ ಇಲ್ಲಿಯೂ ಉಕ್ತಗಳಾದ ಈ ವಿಷಯತೆಗಳಿಗೆ ಪರಸ್ಪರವಾಗಿ ನಿರೂಪ್ಯನಿರೂಪಕಭಾವವನ್ನು ಅಂಗೀಕರಿಸುವೆವು.

ಸ್ವಯಂಪ್ರಕಾಶತ್ವವೆಂದರೆ ಸ್ವನಿರೂಪಿತವಿಷಯತೆ. ಘಟಾದಿಪದಾರ್ಥಗಳಲ್ಲಿ ಇರುವ ವಿಷಯತೆ ಜ್ಞಾನನಿರೂಪಿತವಾದುದರಿಂದ ಸ್ವನಿರೂಪಿತವಲ್ಲವಾಗಿ ಅವುಗಳಿಗೆ ಸ್ವಯಂಪ್ರಕಾಶತ್ವವಿಲ್ಲ; ಜ್ಞಾನನಿಷ್ಠವಾದ ವಿಷಯತೆಯೂ ಆತ್ಮನಿಷ್ಠವಾದ ವಿಷಯತೆಯೂ ಸ್ವನಿರೂಪಿತವಾದುದರಿಂದ ಅವುಗಳಿಗೆ ಸ್ವಯಂಪ್ರಕಾಶತ್ವವುಂಟು. ಈ ಸ್ವಯಂಪ್ರಕಾಶಶಬ್ದಕ್ಕೆ—"ಸ್ವಯಂ ಪ್ರಕಾಶಃ ಯಸ್ಯ ಸಃ ಸ್ವಯಂಪ್ರಕಾಶಃ" ಎಂಬ ವ್ಯುತ್ಪತ್ತಿಯನ್ನು ತಿಳಿಯಬೇಕು. ಸ್ವಯಂ—ಸ್ವನಿರೂಪಿತಾ, ಪ್ರ

ಕಾಶಃ—ವಿಷಯಿತಾ, ಯಸ್ಯ ಸಃ ಸ್ವಯಂಪ್ರಕಾಶಃ" ಎಂಬುದೇ ಇದರ ಅರ್ಥ ವಾಗಿ ಇರುವುದು. ಎಂದರೆ—ಸ್ವನಿರೂಪಿತವಾದ ವಿಷಯಿತೆ ಆವುದಕ್ಕೆ ಉಂಟೋ ಅದು ಸ್ವಯಂಪ್ರಕಾಶವೆನಿಸಿಕೊಳ್ಳುವುದು. ಇದರಿಂದ ಫಲಿತವಾದುದೇನೆಂದರೆ— "ಆತ್ಮಸ್ವರೂಪನಿಷ್ಠವಾಗಿಯೂ, ಸ್ವನಿರೂಪಿತವಾಗಿಯೂ, ಇರುವ ವಿಶೇಷ್ಯತೆಯೆಂಬ ಯಾವ ವಿಷಯತೆಯುಂಟೋ—ಅದು ಪ್ರತ್ಯಕ್ತ್ವಾದಿಸಂಬಂಧನಿಷ್ಠವಾದ ಸಾಂಸರ್ಗಿಕವಿಷಯತೆಯಿಂದ ನಿರೂಪಿತವಾಗಿ ಇರುವುದು" ಎಂಬುದು ಫಲಿತವಾಗಿ ಇರುವುದು. ಈ ಅಭಿಪ್ರಾಯವೇ ಪ್ರತ್ಯಕ್ತ್ವಾದಿಧರ್ಮಗಳಿಗೆ ಸ್ವಯಂಪ್ರಕಾಶತ್ವವನ್ನು ಹೇಳುವ ಆಚಾರ್ಯರ ಅಭಿಪ್ರಾಯವಾಗಿ ಇರುವುದು.

"ಪ್ರತ್ಯಕ್ತ್ವಾದಿಧರ್ಮಗಳು ಧರ್ಮಿಸ್ವರೂಪದಿಂದ ಪ್ರಕಾಶಪಡಿಸಲ್ಪಡುವುವಲ್ಲದೆ ಸ್ವಯಂಪ್ರಕಾಶಗಳಲ್ಲ" ಎಂದು ಹೇಳುವ ಆಚಾರ್ಯರ ಅಭಿಪ್ರಾಯವೇನೆಂದರೆ—"ಧರ್ಮಿನಿಷ್ಠವಾದ ವಿಶೇಷ್ಯತೆಯೆಂಬ ವಿಷಯತೆ ಹೇಗಾದರೆ ಧರ್ಮಿಸ್ವರೂಪನಿರೂಪಿತವೋ—ಅದರಂತೆ ಪ್ರತ್ಯಕ್ತ್ವಾದಿಧರ್ಮನಿಷ್ಠವಾದ ಪ್ರಕಾರತೆಯೆಂಬ ವಿಷಯತೆಯೂ, ಅಪೃಥಕ್ಸಿದ್ಧಿಸಂಬಂಧನಿಷ್ಠವಾದ ಸಾಂಸರ್ಗಿಕವಿಷಯತೆಯೂ ಧರ್ಮಿಸ್ವರೂಪನಿರೂಪಿತಗಳಾಗಿಯೇ ಇರುವುವಲ್ಲದೆ ಸ್ವನಿರೂಪಿತಗಳಲ್ಲ" ಎಂಬುದೇ.

## ೪೫೮. ದ್ವಿತೀಯಪಕ್ಷೇ ಸ್ವರೂಪಭೂತಜ್ಞಾನಸ್ಯ ಧರ್ಮಭೂತಜ್ಞಾನವತ್ ಸ್ವಭಿನ್ನಪದಾರ್ಥಪ್ರಕಾಶಕತ್ವರೂಪವಿಷಯಿತ್ವಾಪತ್ತ್ಯಾಶಂಕಾ.

ಪೂಜ್ಯರೇ! ಈ ಎರಡು ಪಕ್ಷಗಳೊಳಗೆ ಎರಡನೆಯ ಪಕ್ಷದಲ್ಲಿ ಒಂದು ಅನುಪಪತ್ತಿ ಅಥವಾ ಆಶಂಕೆ ತಲೆದೋರುವುದು. ಹೇಗೆಂದರೆ—ಪ್ರತ್ಯಕ್ತ್ವಾದಿಗಳು ಮೂರೂ ಆತ್ಮಸ್ವರೂಪವೇಯೋ? ಅಥವಾ ಆತ್ಮಸ್ವರೂಪದಲ್ಲಿ ಇರುವ ಧರ್ಮಗಳೋ? 'ಆತ್ಮಸ್ವರೂಪವೇ' ಎಂದು ಹೇಳುವುದಾದರೆ—ಪ್ರತ್ಯಕ್ತ್ವಾದಿಗಳಿಗೂ ಆತ್ಮಸ್ವರೂಪಕ್ಕೂ ಧರ್ಮಧರ್ಮಿಭಾವವೂ, ವಿಶೇಷಣವಿಶೇಷ್ಯಭಾವವೂ ಸಂಭವಿಸುವುದಿಲ್ಲ. ಪ್ರತ್ಯಕ್ತ್ವಾದಿಗಳಿಗೂ ಆತ್ಮಸ್ವರೂಪಕ್ಕೂ ಅಭೇದವಿದ್ದರೂ ವಿಶೇಷಣವಿಶೇಷ್ಯಭಾವವಾಗಲಿ, ಧರ್ಮಧರ್ಮಿಭಾವವಾಗಲಿ, ಸಂಭವಿಸಬಹುದೆಂದು ಹೇಳುವುದಾದರೆ—"ಭೇದವ್ಯಪದೇಶಾಚ್ಚಾನ್ಯಃ" "ಉಭಯೇಽಪಿ ಹಿ ಭೇದೇನೈನಮಧೀಯತೇ" ಇವೇ ಮೊದಲಾದ ವೇದಾಂತಸೂತ್ರಗಳಲ್ಲಿ "ಯ ಆದಿತ್ಯೇ ತಿಷ್ಠನ್" "ಯ ಆತ್ಮನಿ ತಿಷ್ಠನ್" ಎಂದು ಪರಮಾತ್ಮನಿಗೂ ಆದಿತ್ಯನಿಗೂ, ಪರಮಾತ್ಮ

ನಿಗೂ ಜೀವಾತ್ಮನಿಗೂ, ಆಶ್ರಯಾಶ್ರಯಿಭಾವವನ್ನು (ಧರ್ಮಧರ್ಮಿಭಾವವನ್ನು) ಬೋಧಿಸುವ ವಾಕ್ಯಗಳು ಭೇದಪ್ರತಿಪಾದಕವಾಕ್ಯಗಳಾಗಿಯೇ ಇರುವುವೆಂದು ಉಪನ್ಯಾಸಮಾಡಿದುದು ಅಸಂಗತವಾಗುವುದು. ಮತ್ತು—ಏಕತ್ವವೆಂಬುದು ಸಂಖ್ಯಾರೂಪವಾದುದರಿಂದಲೂ, ಆತ್ಮಸ್ವರೂಪವು ಸಂಖ್ಯೆಯಲ್ಲವಾದುದರಿಂದಲೂ ಏಕತ್ವವು ಆತ್ಮಸ್ವರೂಪಕ್ಕಿಂತಲೂ ಭಿನ್ನವಾದುದೆಂದು ಅವಶ್ಯಕವಾಗಿಯೂ ಒಪ್ಪಿಕೊಳ್ಳಬೇಕು ;—

"ಪ್ರತ್ಯಕ್ತ್ವಾದಿಗಳು ಆತ್ಮಸ್ವರೂಪವಲ್ಲ; ಕಿಂತು ಅದಕ್ಕಿಂತಲೂ ಭಿನ್ನಗಳಾಗಿ ಅದರಲ್ಲಿ ಇರುವ ಧರ್ಮಗಳಾಗಿ ಇರುವುವು" ಎಂದು ಹೇಳುವುದಾದರೆ—ಸ್ವಪ್ರಕಾಶನಾದ ಆತ್ಮನು ಸ್ವರೂಪಮಾತ್ರಕ್ಕೆ ಸಾಕ್ಷಿಯಾಗಿ ಇದ್ದರೂ ಸ್ವವ್ಯತಿರಿಕ್ತಧರ್ಮಪ್ರಕಾಶಕತ್ವವು ಈ ಸ್ವರೂಪಕ್ಕೆ ಸಂಭವಿಸುವುದಿಲ್ಲ ; ಆತ್ಮಸ್ವರೂಪವು—ಸ್ವರೂಪಕ್ಕಿಂತಲೂ ಭಿನ್ನಗಳಾದ ಏಕತ್ವಾನುಕೂಲತ್ವಪ್ರತ್ಯಕ್ತ್ವಧರ್ಮಗಳನ್ನು ಪ್ರಕಾಶಪಡಿಸುವುದಾದರೆ, ಸ್ವಭಿನ್ನಪದಾರ್ಥಪ್ರಕಾಶಕತ್ವವೆಂಬವಿಷಯಿತ್ವವನ್ನು ಸ್ವರೂಪಕ್ಕೆ ಒಪ್ಪಿಕೊಂಡಂತೆ ಆಗುವುದು : ಅದೂ ಆಗಲೆಂದರೆ—"ಜ್ಞಾನಭಿನ್ನಗಳಾದ ಘಟಾದಿಪದಾರ್ಥಗಳನ್ನು ಪ್ರಕಾಶಪಡಿಸುವ ಧರ್ಮಭೂತಜ್ಞಾನವೆಂಬುದಕ್ಕೇ ಸ್ವಭಿನ್ನಪದಾರ್ಥಪ್ರಕಾಶಕತ್ವವೆಂಬ ವಿಷಯಿತ್ವವು ಅಸಾಧಾರಣವಾಗಿ ಇರುವುದಲ್ಲದೆ ಮತ್ತೊಂದಕ್ಕೆ ಇದು ಕೂಡುವುದಿಲ್ಲ" ಎಂಬ ಶಾಸ್ತ್ರಕಾರರ ಸಿದ್ಧಾಂತವು ಹೇಗೆ ಸಂಗತವಾದೀತು?—ಎಂದು ಆಶಂಕಿಸಲಾಗದು—

## ೪೫೯. ಸ್ವಭಿನ್ನಪದಾರ್ಥಪ್ರಕಾಶಕತ್ವಸ್ಯ ಸ್ವಾಪೃಥಕ್ಸಿದ್ಧಧರ್ಮಭಿನ್ನಪ್ರಕಾಶಕತ್ವೇ ಪರ್ಯವಸಾನಾತ್ ಉಕ್ತಾಶಂಕಾನಿರಾಕರಣಂ.

ಏತಕ್ಕೆಂದರೆ—ಸ್ವಭಿನ್ನಪದಾರ್ಥಪ್ರಕಾಶಕತ್ವವೆಂಬ ಪದಕ್ಕೆ ಸ್ವಾಪೃಥಕ್ಸಿದ್ಧವಾದ ಧರ್ಮಕ್ಕಿಂತಲೂ ಭಿನ್ನವಾದ ಪದಾರ್ಥಪ್ರಕಾಶಕತ್ವವೆಂದೇ ತಾತ್ಪರ್ಯವಿರುವುದು; ಏಕತ್ವಪ್ರತ್ಯಕ್ತ್ವಾನುಕೂಲತ್ವಗಳು ಸ್ವಾಪೃಥಕ್ಸಿದ್ಧಗಳಾದ ಧರ್ಮಗಳೇ ಆಗಿ ಇರುವುದರಿಂದ ತದ್ಭಿನ್ನಗಳಾಗಲಿಲ್ಲವಾಗಿ ಸ್ವಭಿನ್ನಪ್ರಕಾಶಕತ್ವವೆಂಬ ವಿಷಯಿತ್ವವು ಧರ್ಮಿಸ್ವರೂಪಕ್ಕೆ ಪ್ರಸಂಗಿಸಲಿಲ್ಲ. ಧರ್ಮಭೂತಜ್ಞಾನದಿಂದ ಪ್ರಕಾಶಪಡಿಸಲ್ಪಡುವ ಘಟಾದಿಪದಾರ್ಥಗಳು ಧರ್ಮಭೂತಜ್ಞಾನಕ್ಕೆ ಅಪೃಥಕ್ಸಿದ್ಧವಾದ ಧರ್ಮಗಳಲ್ಲವಾಗಿ ಧರ್ಮಭೂತಜ್ಞಾನಕ್ಕಿಂತಲೂ ಅತ್ಯಂತಭಿನ್ನಗಳಾಗಿಯೇ ಇರುವುವಾದಕಾರಣ ಸ್ವಭಿನ್ನಪದಾರ್ಥಪ್ರಕಾಶಕತ್ವವೆಂಬ ವಿಷಯಿತ್ವವು ಧರ್ಮಭೂತಜ್ಞಾನಕ್ಕೇ ಅಸಾಧಾರಣವಾಗಿ ಇರಲು ತಡೆಯೇನೂ ಇಲ್ಲ.

ಆದುದರಿಂದ ಜೀವನು ಅಣುತ್ವಾದ್ಯಾಕಾರಗಳೊಡನೆ ಕೂಡಿದವನಾಗಿ ಸ್ವಯಂಪ್ರಕಾಶನಾಗುವುದಿಲ್ಲವೆಂದೂ, ಏಕತ್ವಾನುಕೂಲತ್ವಪ್ರತ್ಯಕ್ತ್ವಾಕಾರಗಳೊಡನೆ ಕೂಡಿದವನಾಗಿ ಸರ್ವಕಾಲದಲ್ಲಿಯೂ ಸ್ವಯಂಪ್ರಕಾಶನಾಗುವನೆಂದೂ ಸಿದ್ಧವಾಯಿತು. 'ಸರ್ವಕಾಲದಲ್ಲಿಯೂ' ಎಂದು ಹೇಳಿದುದರಿಂದ—ಜಾಗ್ರತ್ಸ್ವಪ್ನಸುಷುಪ್ತಿಮರಣಮೂರ್ಛಾಪ್ರಳಯಾದಿಸಮಸ್ತಾವಸ್ಥೆಗಳಲ್ಲಿಯೂ ಆತ್ಮಸ್ವರೂಪವು ಸ್ವಯಂಪ್ರಕಾಶವಾಗಿ ಪ್ರತ್ಯಕ್ಷವಾಗಿಯೇ ಇರುವುದೆಂದು ತೋರುವುದಾದಪ್ರಯುಕ್ತ ಉಕ್ತವಾದ ಆಕಾರಗಳೊಡನೆ ಆತ್ಮಸ್ವರೂಪವು ಸ್ವಯಂಪ್ರಕಾಶವಾಗದಿರುವ ಕಾಲವೇ ಇಲ್ಲವೆಂಬುದು ಸಿದ್ಧವಾಯಿತು.

## ೪೬೦. ಸಮಾಧ್ಯವಸ್ಥಾಯಾಂ ಅಣುತ್ವಾದಿಸಮಸ್ತಾಕಾರ ವೈಶಿಷ್ಟ್ಯೇನ ಆತ್ಮಸಾಕ್ಷಾತ್ಕಾರಸಿದ್ಧಿಃ.

ಯೋಗಾಭ್ಯಾಸಬಲದಿಂದ ಸಮಾಧಿಯೆಂಬ ಎಂಟನೆಯ ಅವಸ್ಥೆ ಸಿದ್ಧಿಸಿದರೆ ಆಗ ಅತ್ಯಂತಾನುಕೂಲತ್ವ ಅಣುತ್ವ ಮುಂತಾದ ಸಮಸ್ತಾಕಾರಗಳೊಡನೆಯೂ ಕೂಡಿದ ಆತ್ಮಸ್ವರೂಪವು ಯೋಗಜನ್ಯವಾದ ಪ್ರತ್ಯಕ್ಷಜ್ಞಾನಕ್ಕೆ ಗೋಚರವಾಗುವುದು. ಇದನ್ನೇ ಆತ್ಮಸಾಕ್ಷಾತ್ಕಾರವೆಂದು ಶಾಸ್ತ್ರಕಾರರು ಹೇಳುವರು. ಇದೇ ಅರ್ಥವನ್ನು ಶ್ರೀಮದ್ಯಾಮುನಾಚಾರ್ಯರು ಆತ್ಮಸಿದ್ಧಿಗ್ರಂಥದಲ್ಲಿ—

"ಏವಮಾತ್ಮಾ ಸ್ವತಸ್ಸಿದ್ಧ್ಯನ್ನಾಗಮೇನಾನುಮಾನತಃ ।
ಯೋಗಾಭ್ಯಾಸಭುವಾ ಸ್ಪಷ್ಟಂ ಪ್ರತ್ಯಕ್ಷೇಣ ಪ್ರಕಾಶತೇ ॥

ಎಂದು ಅಪ್ಪಣೆಕೊಡಿಸಿ ಇರುವರು. "ಸ್ವಯಂಪ್ರಕಾಶರೂಪವಾದ ಪ್ರತ್ಯಕ್ಷಪ್ರಮಾಣದಿಂದಲೂ, "ಪ್ರಕೃತಿಂ ಪುರುಷಂ ಚೈವ ವಿದ್ಧ್ಯನಾದೀ ಉಭಾವಪಿ" ಎಂಬುದೇ ಮೊದಲಾದ ಆಗಮ (ಶಾಸ್ತ್ರ) ಪ್ರಮಾಣದಿಂದಲೂ, ಅನುಮಾನಪ್ರಮಾಣದಿಂದಲೂ ಈ ರೀತಿಯಲ್ಲಿ ಸಾಮಾನ್ಯಾಕಾರವಾಗಿ ಸಿದ್ಧಿಸುತ್ತಿರುವ ಈ ಆತ್ಮನು ಯೋಗಾಭ್ಯಾಸಜನ್ಯವಾದ ಸಾಕ್ಷಾತ್ಕಾರರೂಪಪ್ರತ್ಯಕ್ಷವಿಶೇಷದಿಂದ ಅತ್ಯಂತಸ್ಫುಟವಾಗಿ ಪ್ರಕಾಶಿಸಲು ಅರ್ಹನಾಗಿ ಇರುತ್ತಾನೆ" ಎಂಬುದು ಶ್ಲೋಕಾರ್ಥವಾಗಿ ಇರುವುದು.

## ೪೬೧. ಜೀವಸ್ವರೂಪಸ್ಯ ಪ್ರಮಾತೃತ್ವಪ್ರಮೇಯತ್ವಪ್ರಮಾಣತ್ವ ರೂಪಧರ್ಮತ್ರಯಸಂಭವಃ.

ಹೀಗೆ ಧರ್ಮಿಯಾದ ಜೀವಸ್ವರೂಪವು ಧರ್ಮಭೂತಜ್ಞಾನದ ಸಹಾಯದಿಂದ ಘಟಾದಿಪದಾರ್ಥಗಳನ್ನೂ, ಅದರ ಸಹಾಯವಿಲ್ಲದೆ ತಾನಾಗಿಯೇ ತನ್ನ

ಸ್ವರೂಪವನ್ನೂ ಏಕತ್ವಾನುಕೂಲತ್ವಪ್ರತ್ಯಕ್ತ್ವಧರ್ಮಗಳನ್ನೂ ಗ್ರಹಿಸುವುದರಿಂದ "ಪ್ರಮಾತೃ" ಎನಿಸಿಕೊಳ್ಳುವುದು. ಘಟಾದಿಪದಾರ್ಥಗಳಂತೆ ಸ್ವಸ್ವರೂಪವೂ ಗ್ರಾಹ್ಯವಾಗಿ ಇರುವುದರಿಂದ 'ಪ್ರಮೇಯ' ಎಂದೂ ಹೇಳಿಸಿಕೊಳ್ಳುವುದು. ಇದೇ ಧರ್ಮಿಸ್ವರೂಪವು ಜ್ಞಾನಾಕಾರವಾಗಿಯೂ ಇರುವುದರಿಂದ 'ಪ್ರಮಾಣ' ಎಂದೂ ಹೇಳಿಸಿಕೊಳ್ಳುವುದು. ಅಂತು ಪ್ರಮಾತೃತ್ವಪ್ರಮೇಯತ್ವಪ್ರಮಾಣತ್ವವೆಂಬ ಮೂರು ಧರ್ಮಗಳೂ (ಸ್ವಭಾವಗಳೂ) ಧರ್ಮಿಗೆ ಸಂಭವಿಸುವುವು.

## ೪೬೨. ಧರ್ಮಭೂತಜ್ಞಾನಸ್ಯ ಪ್ರಮಾಣತ್ವಪ್ರಮೇಯತ್ವರೂಪ ಧರ್ಮದ್ವಯಮಾತ್ರಸಂಭವಃ

ಧರ್ಮಭೂತಜ್ಞಾನಕ್ಕಾದರೆ—ಪ್ರಮಾಣತ್ವಪ್ರಮೇಯತ್ವಗಳೆಂಬ ಎರಡೇ ಸ್ವಭಾವಗಳು ಸಂಭವಿಸುವುವಲ್ಲದೆ ಪ್ರಮಾತೃತ್ವವು ಸಂಭವಿಸುವುದಿಲ್ಲ. ಘಟಾದಿ ಪದಾರ್ಥಗಳ ಸಿದ್ಧಿಗೆ ಈ ಧರ್ಮಭೂತಜ್ಞಾನವು ಹೇತುವಾಗಿ ಇರುವುದರಿಂದ ಪ್ರಮಾಣತ್ವವು ಇದಕ್ಕೆ ಸಂಗತವಾಗಿ ಇರುವುದು. ಜ್ಞಾನಪ್ರಸರಣವಿರುವ ಕಾಲ ದಲ್ಲಿ ಈ ಜ್ಞಾನವು ಸ್ವಯಂಪ್ರಕಾಶವಾದುದರಿಂದಲೂ, ಅತಿಕ್ರಾಂತವಾದ ಜ್ಞಾನವು ಜ್ಞಾನಾಂತರಕ್ಕೆ ಗೋಚರವಾಗುವುದರಿಂದಲೂ, ಪ್ರಮೇಯತ್ವವೂ ಸಹ ಇದಕ್ಕೆ ಸಂಗತವಾಗಿ ಇರುವುದು. ಜ್ಞಾನವು ಜ್ಞಾನಾಶ್ರಯನಾದ ಆತ್ಮನಿಗೆ ಪ್ರಕಾಶಿಸುವು ದಲ್ಲದೆ ತನಗೆ ತಾನು ಪ್ರಕಾಶಿಸುವುದಿಲ್ಲವಾದುದರಿಂದ ಇದಕ್ಕೆ ಪ್ರಮಾತೃತ್ವವು ಸಂಭವಿಸುವುದಿಲ್ಲ.

## ೪೬೩ ಘಟಾದೀನಾಂ ಪ್ರಮೇಯತ್ವಮಾತ್ರಸಂಭವಃ

ಘಟಾದಿಪದಾರ್ಥಗಳಿಗಾದರೆ—ಪ್ರಮೇಯತ್ವವೆಂಬ ಒಂದೇ ಸ್ವಭಾವವು ಸಂಭವಿಸುವುದಲ್ಲದೆ ಪ್ರಮಾತೃತ್ವವಾಗಲಿ ಪ್ರಮಾಣತ್ವವಾಗಲಿ ಸಂಭವಿಸುವುದಿಲ್ಲ. ಏತಕ್ಕೆಂದರೆ—ಇವುಗಳು ಸರ್ವಕಾಲದಲ್ಲಿಯೂ ಜ್ಞಾನದಿಂದಲೇ ಗ್ರಹಿಸಲ್ಪಡತಕ್ಕು ವುಗಳಾಗಿ ಇರುವುದರಿಂದ ಪ್ರಮೇಯತ್ವವು ಸಂಗತವು. ಇವು ಅಚೇತನಗಳಾದುದ ರಿಂದ ತಮ್ಮನ್ನಾಗಲಿ ಇತರಪದಾರ್ಥಗಳನ್ನಾಗಲಿ ತಿಳಿದುಕೊಳ್ಳಲು ಅಸಮರ್ಥ ಗಳಾದಪ್ರಯುಕ್ತ ಇವುಗಳಿಗೆ ಪ್ರಮಾತೃತ್ವವು ಸಂಭವಿಸುವುದಿಲ್ಲ; ಆತ್ಮನು ಯಾವ ಪದಾರ್ಥಗಳನ್ನು ತಿಳಿದುಕೊಳ್ಳುವುದಕ್ಕೂ ಇವುಗಳು ಸಾಧನಗಳಾಗಿಯೂ ಉಪಯೋಗಿಸಲ್ಪಡುವುದಿಲ್ಲವಾದುದರಿಂದ ಇವುಗಳಿಗೆ ಪ್ರಮಾಣತ್ವವೂ ಕೂಡು ವುದಿಲ್ಲ.

### ೪೩೪. ಉಕ್ತಾರ್ಥೇ ಪೂರ್ವಾಚಾರ್ಯಸಮ್ಮತಿಪ್ರದರ್ಶನಂ.

ಹೀಗೆ ಜೀವಸ್ವರೂಪಕ್ಕೂ ಧರ್ಮಭೂತಜ್ಞಾನಕ್ಕೂ ಘಟಾದಿಪದಾರ್ಥಗಳಿಗೂ ಇರುವ ಸ್ವಭಾವತಾರತಮ್ಯಗಳನ್ನು ಪ್ರಜ್ಞಾಪರಿತ್ರಾಣವೆಂಬ ಗ್ರಂಥದಲ್ಲಿ ವರದನಾರಾಯಣಭಟ್ಟಾರಕಸ್ವಾಮಿಗಳು—

"ಪ್ರಮಾತಾ ಚ ಪ್ರಮೇಯಂ ಚ ಪ್ರಮಾಣಂ ಚ ಭವೇತ್ಸ್ವಯಂ
ಪ್ರಮಾ ಮೇಯಾ ಚ ಧೀರೇವ ಮೇಯಾ ಏವ ಘಟಾದಯಃ

ಎಂದು ಸ್ಪಷ್ಟವಾಗಿ ಅಪ್ಪಣೆಕೊಡಿಸಿರುವರು.

### ೪೩೫. ಜೀವಸ್ಯ ಜ್ಞಾನಸ್ವರೂಪತ್ವೇ ಪ್ರಮಾಣಾಭಾವಾತ್ ತದನುಪಪತ್ತಿಪೂರ್ವಪಕ್ಷಃ

"ಪೂಜ್ಯರೇ! ಜೀವಸ್ವರೂಪವು ಜ್ಞಾನಾಶ್ರಯವಾಗಿ ಇರುವುದೆಂದು ಹೇಳಿದಿರಿ; ಅದರಮೇಲೆ ಜ್ಞಾನಸ್ವರೂಪವಾಗಿಯೂ ಇರುವುದೆಂದು ಹೇಳುತ್ತೀರಿ. ಇದು ಹೇಗೆ ಸಂಗತವಾದೀತು? ಯಾವ ಪದಾರ್ಥವೂ ತನಗೆ ತಾನೇ ಆಶ್ರಯವಾಗುವುದಿಲ್ಲವಷ್ಟೆ? ಮತ್ತು ಜೀವನು ಜ್ಞಾನಸ್ವರೂಪನಾಗಿ ಇರುವನೆಂಬುದರಲ್ಲಿ ಪ್ರಮಾಣವೇನು?

### ೪೩೬. ಜೀವಸ್ಯ ಜ್ಞಾನಸ್ವರೂಪತ್ವೇ ಸತ್ಯಜ್ಞಾನಾದಿವಾಕ್ಯಸ್ಯ ಪ್ರಮಾಣತ್ವಾಭಾವಪ್ರದರ್ಶನಂ

"ತೈತ್ತಿರೀಯೋಪನಿಷತ್ತಿನಲ್ಲಿ ಇರುವ "ಸತ್ಯಂ ಜ್ಞಾನಮನಂತಂ ಬ್ರಹ್ಮ" ಎಂಬ ವಾಕ್ಯದಲ್ಲಿ ಜ್ಞಾನಶಬ್ದವು ಬ್ರಹ್ಮಶಬ್ದವಾಚ್ಯನಾದ ಪರಮಾತ್ಮನಿಗೆ ಜ್ಞಾನಾಕಾರತ್ವವನ್ನು ಹೇಳುವುದಾದುದರಿಂದ ಜೀವಾತ್ಮನಲ್ಲಿಯೂ ಇದಕ್ಕೆ ಬಾಧೆಯಿಲ್ಲವಾದಕಾರಣ "ಜೀವನು ಜ್ಞಾನಸ್ವರೂಪನಾಗಿ ಇರುವನು" ಎಂಬ ವಿಷಯದಲ್ಲಿ ಈ ತೈತ್ತಿರೀಯಶ್ರುತಿಯೇ ಪ್ರಮಾಣವಾಗಿ ಇರುವುದು" ಎಂದು ಹೇಳಬೇಡಿರಿ, ವ್ಯಾಕರಣಶಾಸ್ತ್ರಾನಭಿಜ್ಞರಾದವರು ಹೀಗೆ ಹೇಳಬಹುದಲ್ಲದೆ ವ್ಯಾಕರಣದ ಮರ್ಮವನ್ನು ತಿಳಿದವರು ಎಂದಿಗೂ ಹೀಗೆ ಹೇಳಲಾರರು.—

ಹೇಗೆಂದರೆ—ಜ್ಞಾನಶಬ್ದವು ಸ್ವಾಭಾವಿಕವಾಗಿ ಆದ್ಯುದಾತ್ತಸ್ವರದೊಡನೆ ಕೂಡಿ ಇರುವುದು. ಇಂಥ ಜ್ಞಾನಶಬ್ದದಮೇಲೆ "ಜ್ಞಾನಂ ಅಸ್ಯ ಅಸ್ತಿ" ಎಂಬ ಅರ್ಥವನ್ನು ವಿವಕ್ಷೆಮಾಡಿ—"ಅರ್ಶಆದಿಭ್ಯೋಽಚ್" (೫—೨—೧೨೭) ಎಂಬ ಪಾಣಿನಿಸೂತ್ರದಿಂದ ಅಚ್ಪ್ರತ್ಯಯವನ್ನು ಹಚ್ಚಿದರೆ—"ಜ್ಞಾನಂ"

ಎಂಬುದಾಗಿ ರೂಪವು ಸಿದ್ಧಿಸಿದಮೇಲೆ ಇಂಥ ಜ್ಞಾನಶಬ್ದವು "ಚಿತಃ" (೬—೧—೧೬೩) ಎಂಬ ಸೂತ್ರದಿಂದ ಅಂತೋದಾತ್ತಸ್ವರವನ್ನು ಪಡೆದು ಆದರಮೇಲೆ "ಅನುದಾತ್ತಂ ಪದಮೇಕವರ್ಜಂ" (೬—೧—೧೫೮) ಎಂಬ ಸೂತ್ರದಿಂದ ಜ್ಞಾಕಾರದ ಆ ಎಂಬ ಸ್ವರಾಕ್ಷರವು ಅನುದಾತ್ತಸ್ವರವನ್ನು ಪಡೆವುದು—

ಅಂತು ಜ್ಞಾನಶಬ್ದದಲ್ಲಿ ಇರುವ ಎರಡು ಸ್ವರಾಕ್ಷರಗಳೊಳಗೆ ಮೊದಲನೆಯದಾದ ಆಕಾರವು ಅನುದಾತ್ತವಾಗಿಯೂ, ಎರಡನೆಯದಾದ ಆಕಾರವು ಉದಾತ್ತವಾಗಿಯೂ ಇರುವುದು. ಅರ್ಶಆದ್ಯಚ್ಪ್ರತ್ಯಯವನ್ನು ಮಾಡದಿದ್ದರೆ ಸ್ವಾಭಾವಿಕವಾಗಿ ಆದ್ಯುದಾತ್ತವಾಗಿರುವ ಜ್ಞಾನಶಬ್ದಕ್ಕೆ ದ್ವಿತೀಯಾವಿಭಕ್ತಿಯ ಏಕವಚನಪ್ರತ್ಯಯವಾದ "ಅಮ್" ಎಂಬುದನ್ನು ಸೇರಿಸಿದರೆ "ಜ್ಞಾನ+ಅಮ್" ಎಂಬುದಾಗಿ ಲಭಿಸಿ ಇವುಗಳಿಗೆ ಸಂಧಿಮಾಡುವ ಕಾಲದಲ್ಲಿ "ಪ್ರಥಮಯೋಃ ಪೂರ್ವಸವರ್ಣಃ" (೬-೧-೧೦೨) ಎಂಬ ಸೂತ್ರದಿಂದ ಪೂರ್ವಸವರ್ಣದೀರ್ಘವು ಏಕಾದೇಶವಾಗಿ ಬಂದು "ಜ್ಞಾನಾಮ್" ಎಂಬುದಾಗಿ ಶಬ್ದರೂಪವು ಪ್ರಸಕ್ತವಾಗಲು ಇಂಥ ಅಪಭ್ರಂಶರೂಪವನ್ನು ತಪ್ಪಿಸುವುದಕ್ಕಾಗಿ "ಅಮಿ ಪೂರ್ವಃ" (೬-೧-೧೦೭) ಎಂಬ ಸೂತ್ರದಿಂದ ಪೂರ್ವರೂಪವು ಏಕಾದೇಶವಾಗಿ ವಿಧಿಸಲ್ಪಟ್ಟಮೇಲೆ ಇಂಥ ಏಕಾದೇಶವು ಅನುದಾತ್ತೈಕಾದೇಶವಾದುದರಿಂದ "ಉದಾತ್ತಾದನುದಾತ್ತಸ್ಯ ಸ್ವರಿತಃ" (೮-೪-೬೬) ಎಂಬ ಸೂತ್ರದಿಂದ ಸ್ವರಿತಸ್ವರವನ್ನು ಪಡೆವುದಾದಕಾರಣ ಜ್ಞಾನಶಬ್ದವು ಸ್ವರಿತಾಂತವಾಗಬೇಕಾಗಿಬರುವುದು. ಉದಾಹೃತವಾದ ತೈತ್ತಿರೀಯಶ್ರುತಿಯಲ್ಲಿಯಾದರೋ ಈ ಜ್ಞಾನಪದವು ಅನಾದಿಯಾದ ವೈದಿಕಪರಂಪರೆಯಿಂದ ಅಂತೋದಾತ್ತವಾಗಿಯೇ ಪಠ್ಯಮಾನವಾಗಿ ಇರುವುದು. ಅರ್ಶಆದ್ಯಚ್ಪ್ರತ್ಯಯವನ್ನು ಮಾಡಿದರಲ್ಲದೆ ಜ್ಞಾನಶಬ್ದದಲ್ಲಿ ಇಂಥ ಸ್ವರವು ಬರಲಾರದು. ಇಂಥ ಸ್ವರಬಲದಿಂದಲೇ ಜ್ಞಾನಪದದ ಅರ್ಥವು ನಿಷ್ಕರ್ಷಿಸಲ್ಪಡುವುದಾದುದರಿಂದ "ಜ್ಞಾನಮಸ್ಯಾಸ್ತೀತಿ ಜ್ಞಾನಂ" ಎಂಬ ವ್ಯುತ್ಪತ್ತಿಯಿಂದ ಜ್ಞಾನಾಶ್ರಯತ್ವವು ಪರಮಾತ್ಮನಿಗೆ ತೋರಿಸಲ್ಪಡುವುದಲ್ಲದೆ ಜ್ಞಾನಸ್ವರೂಪತ್ವವು ಇದರಿಂದ ಸಿದ್ಧಿಸುವುದಿಲ್ಲವಾಗಿ ಆತ್ಮತ್ವಸಾಮ್ಯದಿಂದ ಜೀವಾತ್ಮನಲ್ಲಿಯೂ ಇದೇ ಶ್ರುತಿಯನ್ನು ಅವಲಂಬಿಸಿದರೂ ಜೀವನಿಗೆ ಜ್ಞಾನಾಶ್ರಯತ್ವವು ಉಂಟೆಂಬುದರಲ್ಲಿ ಇದು ಪ್ರಮಾಣವಾಗಬಹುದಲ್ಲದೆ ಜ್ಞಾನಸ್ವರೂಪತ್ವದಲ್ಲಿ ಇದು ಪ್ರಮಾಣವಾಗಲಾರದು ;

## ೪೬೭. ಬೃಹದಾರಣ್ಯಕವಾಕ್ಯಸ್ಯಾಪಿ ತತ್ರ ಪ್ರಮಾಣತ್ವಾಸಂಭವ ಪ್ರದರ್ಶನಂ.

"ಹಾಗಾದರೆ—" ಸ ಯಥಾ ಸೈಂಧವಘನೋಽನಂತರೋಽಬಾಹ್ಯಃ ಕೃತ್ಸ್ನೋ ರಸಘನ ಏವ-ಏವಂ ವಾ ಅರೇ ಅಯಮಾತ್ಮಾಽನಂತರೋಽಬಾಹ್ಯಃ ಕೃತ್ಸ್ನಃ ಪ್ರಜ್ಞಾನಘನ ಏವ ವಿಜ್ಞಾನಘನ ಏವ" ಇತ್ಯಾದಿಬೃಹದಾರಣ್ಯಕೋಪ ನಿಷದ್ವಾಕ್ಯವು ಆತ್ಮನಿಗೆ ಜ್ಞಾನಸ್ವರೂಪತ್ವವನ್ನು ತೋರಿಸುವ ವಿಷಯದಲ್ಲಿ ಪ್ರಮಾ ಣವಾಗಲಿ ಎಂದೂ ಹೇಳಬೇಡಿರಿ; ಏತಕ್ಕೆಂದರೆ—ಇಲ್ಲಿ ರಸಘನದೃಷ್ಟಾಂತಸ್ವಾರಸ್ಯ ದಿಂದ ಉಪ್ಪಿನ ಗಟ್ಟಿಯಲ್ಲಿ ಲವಣರಸವೇ ಸರ್ವಭಾಗದಲ್ಲಿಯೂ ವ್ಯಾಪಿಸಿ ಇರುವಂತೆ ಜೀವನಲ್ಲಿಯೂ ಜ್ಞಾನಗುಣವು ವ್ಯಾಪಿಸಿ ಇರುವುದೆಂದು ತಿಳಿದುಬರುವುದರಿಂದ ಇದರಿಂದಲೂ ಜ್ಞಾನಾಶ್ರಯತ್ವವು ಸಿದ್ಧಿಸುವುದಲ್ಲದೆ ಜ್ಞಾನಸ್ವರೂಪತ್ವವು ಸಿದ್ಧಿ ಸುವುದಿಲ್ಲ.

## ೪೬೮. ವಿಜ್ಞಾನಂ ಯಜ್ಞಮಿತಿತೈತ್ತಿರೀಯವಾಕ್ಯಸ್ಯಾಪಿ ತತ್ರ ಪ್ರಮಾಣತ್ವಾಭಾವಪ್ರದರ್ಶನಂ

"ಹಾಗಾದರೆ—ತೈತ್ತಿರೀಯದ ಆನಂದವಲ್ಲಿಯಲ್ಲಿ ಇರುವ "ವಿಜ್ಞಾನಂ ಯಜ್ಞಂ ತನುತೇ "ಎಂಬ ವಾಕ್ಯವು ಪ್ರಮಾಣವಾಗಲಿ ಎಂದೂ ಹೇಳಬೇಡಿರಿ; ಏತ ಕ್ಕೆಂದರೆ—ಪರಮಾತ್ಮನಲ್ಲಿ ಆನಂದಗುಣವೇ ಪ್ರಧಾನಗುಣವಾದುದರಿಂದ "ಯದೇಷ ಆಕಾಶ ಆನಂದೋ ನ ಸ್ಯಾತ್" ಎಂಬ ವಾಕ್ಯದಲ್ಲಿ ಆನಂದಶಬ್ದವು ಪರಮಾತ್ಮ ನಲ್ಲಿ ಹೇಗೆ ಪ್ರಯೋಗಿಸಲ್ಪಟ್ಟಿರುವುದೋ ; ಆದರಂತೆ ಜೀವಾತ್ಮನಲ್ಲಿ ವಿಜ್ಞಾನವೇ ಪ್ರಧಾನಗುಣವಾದುದರಿಂದ ವಿಜ್ಞಾನಶಬ್ದವು ಇವನಲ್ಲಿ ಪ್ರಯೋಗಿಸಲ್ಪಟ್ಟಿರುವು ದಲ್ಲದೆ ಜೀವಾತ್ಮನು ಜ್ಞಾನಸ್ವರೂಪನಾದುದರಿಂದಲ್ಲ. ಈ ಅರ್ಥವನ್ನು ಸೂತ್ರಕಾ ರರೇ "ತದ್ಗುಣಸಾರತ್ವಾತ್ತು ತದ್ವ್ಯಪದೇಶಃ ಪ್ರಾಜ್ಞವತ್ "ಎಂಬ ಸೂತ್ರ ದಲ್ಲಿ ತೋರಿಸಿ ಇರುವರು ;

## ೪೬೯. ಜ್ಞಾನಸ್ವರೂಪತ್ವಾನುಪಪತ್ತಿಪೂರ್ವಪಕ್ಷೋಪಸಂಹಾರಃ.

ಹೀಗೆ ಈ ವಿಷಯದಲ್ಲಿ ಪ್ರಮಾಣವೇ ಇಲ್ಲವಾದಕಾರಣ ಜೀವನಿಗೆ ಜ್ಞಾನಾಶ್ರಯತ್ವವು ಸಂಭವಿಸಿದರೂ ಜ್ಞಾನಸ್ವರೂಪತ್ವವು ಸಂಭವಿಸುವುದಿಲ್ಲ ವಾದುದರಿಂದ ಜೀವನು ಜ್ಞಾನಸ್ವರೂಪನೆಂದು ಹೇಗೆ ಹೇಳುತ್ತೀರಿ? ಎಂದು ಆಶಂಕಿಸಬೇಕಾದುದಿಲ್ಲ—

## ೪೭೦. ಸ್ಪಷ್ಟತರಪ್ರಶ್ನೋಪನಿಷದ್ವಾಕ್ಯಾತ್ ಜೀವಸ್ಯ ಜ್ಞಾನಸ್ವರೂಪತ್ವಸಿದ್ಧಿಃ.

ಏತಕ್ಕೆಂದರೆ—ಉದಾಹರಿಸಿದ ಪ್ರಮಾಣಗಳಿಂದ ಈ ಅರ್ಥವು ಸಿದ್ಧಿಸದಿದ್ದರೂ "ಏಷ ಹಿ ದ್ರಷ್ಟಾ ಸ್ಪ್ರಷ್ಟಾ ಶ್ರೋತಾ ಘ್ರಾತಾ ರಸಯಿತಾ ಮಂತಾ ಬೋದ್ಧಾ ಕರ್ತಾ ವಿಜ್ಞಾನಾತ್ಮಾ ಪುರುಷಃ" ಎಂಬ ಪ್ರಶ್ನೋಪನಿಷದ್ವಾಕ್ಯದಿಂದ ಜೀವಾತ್ಮನಿಗೆ ಜ್ಞಾನಸ್ವರೂಪತ್ವವು ಸಿದ್ಧಿಸಲು ಯಾವುದೊಂದು ಅಭ್ಯಂತರವೂ ಇಲ್ಲ. ಇಲ್ಲಿ "ಬೋದ್ಧಾ" ಎಂಬ ಪದದಿಂದ ಜೀವನಿಗೆ ಸಾಮಾನ್ಯರೂಪವಾದ ಜ್ಞಾತೃತ್ವವನ್ನೂ, 'ದ್ರಷ್ಟಾ ಸ್ಪ್ರಷ್ಟಾ' ಇತ್ಯಾದಿಯಾದ ಆರು ಪದಗಳಿಂದ ವಿಶೇಷರೂಪವಾದ ಜ್ಞಾತೃತ್ವವನ್ನೂ ಹೇಳಿದ ಮೇಲೆ "ವಿಜ್ಞಾನಾತ್ಮಾ" ಎಂಬ ಪದದಿಂದಲೂ ಜ್ಞಾನಾಶ್ರಯತ್ವವೇ ಹೇಳಲ್ಪಡುವುದಾದರೆ ಈ ಪದವು ವ್ಯರ್ಥವಾಗುವುದಾದಕಾರಣ ಇದು ಜೀವಾತ್ಮನಿಗೆ ಜ್ಞಾನಾಕಾರತ್ವವನ್ನೇ ಅಬಾಧಿತವಾಗಿ ಬೋಧಿಸುತ್ತಿರುವುದು.

## ೪೭೧. ಪ್ರಭಾಶ್ರಯಸ್ಯಾಪಿ ದೀಪಸ್ಯ ತೇಜಸ್ತ್ವವತ್ ಜ್ಞಾನಾಶ್ರಯಸ್ಯಾಪ್ಯಾತ್ಮನೋ ಜ್ಞಾನಸ್ವರೂಪತ್ವೋಪಪತ್ತಿಃ.

ಮತ್ತು—"ಯಾವಸ್ತುವೂ ತನಗೆ ತಾನೇ ಆಶ್ರಯವಾಗಲಾರದಾದುದರಿಂದ ಜ್ಞಾನಾಶ್ರಯನಾದ ಆತ್ಮನಿಗೆ ಜ್ಞಾನಸ್ವರೂಪತ್ವವು ಹೇಗೆ ಸಂಭವಿಸೀತು" ಎಂದು ಆಶಂಕಿಸ ಕೆಲಸವಿಲ್ಲ. ತೇಜೋರೂಪವಾದ ದೀಪಪ್ರಭೆಗೆ ಆಶ್ರಯವಾಗಿ ಇರುವ ದೀಪವೂ ತೇಜೋರೂಪವಾಗಿ ಇರುವಂತೆ ಧರ್ಮಭೂತಜ್ಞಾನಕ್ಕೆ ಆಶ್ರಯವಾದ ಧರ್ಮಿಸ್ವರೂಪವೂ ಜ್ಞಾನಾಕಾರವಾಗಿ ಇರುವುದರಲ್ಲಿ ಅನುಪಪತ್ತಿಯೇನೂ ಇಲ್ಲವಷ್ಟೆ ?

## ೪೭೨. ಆತ್ಮನೋ ಜ್ಞಾನಸ್ವರೂಪತ್ವಾಭ್ಯುಪಗಮ ಏವ ಸ್ವಯಂಪ್ರಕಾಶತ್ವಸಿದ್ಧಿಃ.

ಹೀಗೆ ಆತ್ಮನಿಗೆ ಜ್ಞಾನಾಕಾರತ್ವವನ್ನು ಅಂಗೀಕರಿಸಿದರಲ್ಲವೆ ಸ್ವಯಂಪ್ರಕಾಶತ್ವವು ಸಿದ್ಧಿಸುವುದು. "ಚಿತ್ಸ್ವರೂಪತಾ ಹಿ ಸ್ವಯಂಪ್ರಕಾಶತಾ" ಎಂದಲ್ಲವೆ ಭಾಷ್ಯಕಾರರೂ ಅಪ್ಪಣೆಕೊಡಿಸಿರುವುದು. "ಅತ್ರಾಯಂ ಪುರುಷಃ ಸ್ವಯಂಜ್ಯೋತಿರ್ಭವತಿ ಕತಮ ಆತ್ಮಾ ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಂತರ್ಜ್ಯೋತಿಃ" ಇವೇ ಮೊದಲಾದ ಶ್ರುತಿವಾಕ್ಯಗಳ ಸ್ವಾರಸ್ಯದಿಂದಲೂ ಸ್ವಯಂಪ್ರಕಾಶತ್ವವು ಸಿದ್ಧವಾಗಿ ಇರುವುದು.

## ೪೭೩. ಆತ್ಮನಃ ಸ್ವಯಂಪ್ರಕಾಶತ್ವಬೋಧಕಪ್ರಮಾಣಾನು ಗ್ರಾಹಕಯುಕ್ತಿಪ್ರದರ್ಶನಂ.

ಉಕ್ತವಾದ ಶ್ರುತಿವಾಕ್ಯಗಳಿಗೆ ಅನುಗ್ರಾಹಕವಾದ ಯುಕ್ತಿಯನ್ನು ಶ್ರೀ ವಿಷ್ಣುಚಿತ್ತಸ್ವಾಮಿಗಳು—"ಜ್ಞಾನತ್ವವೆಂಬ ಧರ್ಮವು ಎಲ್ಲಿ ಇರುವುದೋ ಅಲ್ಲಿ ಸ್ವಯಂಪ್ರಕಾಶತ್ವವೂ ಇದ್ದೇ ಇರುವುದೆಂಬುದನ್ನು ಧರ್ಮಭೂತಜ್ಞಾನದಲ್ಲಿ ನೋಡಿರುವೆವು; ಅದರಂತೆ ಆತ್ಮನಲ್ಲಿಯೂ ಜ್ಞಾನತ್ವವು ಇರುವುದರಿಂದ ಸ್ವಯಂ ಪ್ರಕಾಶತ್ವವೂ ಸಿದ್ಧವಾಗಿ ಇರುವುದು." ಈ ರೀತಿಯಾಗಿ ತೋರಿಸಿರುವರು.

ಇಲ್ಲಿ—ಜ್ಞಾನಾಂತರಕ್ಕೆ ಅನಧೀನವಾದ ಪ್ರಕಾಶವತ್ತ್ವವೆಂಬ ಹೇತುವಿ ನಿಂದ—ಸ್ವಾಧೀನಪ್ರಕಾಶವತ್ತ್ವವನ್ನು ಸಾಧಿಸುವೆವಾದುದರಿಂದ—ಹೇತುಸಾಧ್ಯ ಗಳಿಗೆ ಐಕ್ಯಪ್ರಸಂಗಾಶಂಕೆ ದೂರೀಕೃತವಾಗಿ ಇರುವುದು.

## ೪೭೪. ಆತ್ಮನಃ ಸ್ವಪ್ರಕಾಶಕತ್ವೇಽಪಿ ಸ್ವೇತರವಸ್ತುಪ್ರಕಾಶಕತ್ವಾ ಸಂಭವಃ.

"ಪೂಜ್ಯರೇ—ಜ್ಞಾನತ್ವಹೇತುವಿನಿಂದ ಧರ್ಮಭೂತಜ್ಞಾನದಂತೆ ಧರ್ಮಿ ಸ್ವರೂಪದಲ್ಲಿಯೂ ಸ್ವಯಂಪ್ರಕಾಶತ್ವವು ಸಿದ್ಧಿಸುವುದಾದರೆ ಅದೇ ಹೇತುವಿನಿಂದ ಪರಪ್ರಕಾಶಕತ್ವವೂ ಅವರ್ಜನೀಯವಾಗಿ ಬರುವುದಲ್ಲವೆ? ಧರ್ಮಭೂತಜ್ಞಾನವು ಸ್ವಪ್ರಸರಣಕಾಲದಲ್ಲಿ ತನ್ನನ್ನು ತಾನು ಪ್ರಕಾಶಪಡಿಸುವುದುಮಾತ್ರವಲ್ಲದೆ ಸ್ವೇ ತರವಾದ ಘಟಾದಿಪದಾರ್ಥಗಳನ್ನೂ ಪ್ರಕಾಶಪಡಿಸುವುದಷ್ಟೆ? ಅದರಂತೆ ಧರ್ಮಿ ಜ್ಞಾನವೂ, ಸ್ವೇತರವಸ್ತುವನ್ನೂ ಪ್ರಕಾಶಪಡಿಸಬೇಕಲ್ಲವೆ?"

ಇಂಥ ಆಶಂಕೆ ಸಂಗತವಲ್ಲ—ದೀಪಕ್ಕೂ ದೀಪಪ್ರಭೆಗೂ ತೇಜಸ್ತ್ವ ಸಾಮ್ಯವಿದ್ದರೂ, ಧರ್ಮಿಯಾದ ದೀಪವು ತನ್ನ ಸ್ವರೂಪವನ್ನು ಮಾತ್ರ ಪ್ರಕಾಶಪಡಿ ಸುವುದು; ಪ್ರಭೆಯಾದರೆ ತನ್ನ ಸ್ವರೂಪವನ್ನೂ ಸ್ವೇತರವಾದ ಆ ಆ ಪದಾರ್ಥಗಳನ್ನೂ ಪ್ರಕಾಶಪಡಿಸುವುದು. ಇದರಂತೆ ಧರ್ಮಿಯಾದ ಆತ್ಮಸ್ವರೂಪಕ್ಕೂ ಧರ್ಮಭೂತ ಜ್ಞಾನಕ್ಕೂ ಸಹ ಜ್ಞಾನತ್ವಸಾಮ್ಯವಿದ್ದರೂ ಧರ್ಮಿ ತನ್ನನ್ನುಮಾತ್ರ ಪ್ರಕಾಶ ಪಡಿಸುವುದೆಂದೂ, ಧರ್ಮಭೂತಜ್ಞಾನವು ತನ್ನನ್ನೂ ಸ್ವೇತರಪದಾರ್ಥಗಳನ್ನೂ ಸಹ ಪ್ರಕಾಶಪಡಿಸುವುದೆಂದೂ, ಅನುಭವಬಲದಿಂದ ಒಪ್ಪಿಕೊಳ್ಳುವೆವಾದರೆ ನಮ್ಮ ತಲೆ ಯನ್ನು ಹಿಡಿಯಲು ಒಡೆಯಲಾರದು.

## ೪೦೫. ಆತ್ಮನಃ ಪ್ರತ್ಯಕ್ತ್ವಾದ್ಯಾಕಾರೇಣ ಸ್ವಯಂಪ್ರಕಾಶತ್ವಾಭ್ಯುಪಗಮ ಏವ ಸುಖಮಹಮಸ್ವಾಪ್ಸಮಿತಿ ಪರಾಮರ್ಶಸ್ವಾರಸ್ಯಸಿದ್ಧಿಃ.

ಪ್ರತ್ಯಕ್ತ್ವ, ಅನುಕೂಲತ್ವ, ಏಕತ್ವವೆಂಬ ಈ ಧರ್ಮಗಳೊಡನೆ ಕೂಡಿದುದಾಗಿಯೇ ಆತ್ಮಸ್ವರೂಪವು ಸ್ವಯಂಪ್ರಕಾಶವಾಗಿ ಇರುವುದನ್ನು ಹಿಂದೆ ತೋರಿಸಿರುವೆವು ; ಹೀಗೆ ಪ್ರತ್ಯಕ್ತ್ವಾದ್ಯಾಕಾರದಿಂದ ಸ್ವಯಂಪ್ರಕಾಶತ್ವವನ್ನು ಒಪ್ಪಿಕೊಂಡರೇನೇ "ಏತಾವಂತಂ ಕಾಲಂ ಸುಖಮಹಮಸ್ವಾಪ್ಸಂ" ಎಂಬುದಾಗಿ ಪ್ರಬೋಧಕಾಲದಲ್ಲಿ ಉಂಟಾಗುವ ಪರಾಮರ್ಶರೂಪವಾದ ಜ್ಞಾನಕ್ಕೆ ಸ್ವಾರಸ್ಯವುಂಟಾಗುವುದು. ಹೇಗೆಂದರೆ—

ಸ್ಮರಣರೂಪವಾದ ಈ ಪರಾಮರ್ಶಜ್ಞಾನದಲ್ಲಿ—ಕಾಲ, ಸುಖ, ಅಹಂಪದಾರ್ಥ, ಸ್ವಾಪಪದಾರ್ಥ ಈ ನಾಲ್ಕು ಪದಾರ್ಥಗಳೂ ತೋರಿಬರುತ್ತಿರುವುವು. ಅನನುಭೂತವಾದ ಪದಾರ್ಥಗಳ ವಿಷಯದಲ್ಲಿ ಸ್ಮರಣವುಂಟಾಗುವುದಿಲ್ಲವಾದುದರಿಂದ ಈ ನಾಲ್ಕು ಪದಾರ್ಥಗಳಿಗೂ ಸ್ವಾಪಕಾಲದಲ್ಲಿ ಅನುಭವವುಂಟಾಗಿ ಇದ್ದಿತೆಂದು ಒಟ್ಟು ಮೊದಲು ಹೇಳಬೇಕಾಗಿ ಬಂದರೂ ಅವುಗಳಲ್ಲಿ ಸ್ವಲ್ಪ ವಿಶೇಷವುಂಟೆಂಬುದನ್ನು ವಿವೇಚನೆಮಾಡಿ ತಿಳಿದುಕೊಳ್ಳಬೇಕು. ಈ ನಾಲ್ಕರೊಳಗೆ ಯಾವ ಪದಾರ್ಥವು ಸ್ವಾಪಕಾಲದಲ್ಲಿ ಅನುಭವಿಸಲ್ಪಡುವುದಕ್ಕೆ ಯೋಗ್ಯವಾಗುವುದಿಲ್ಲವೋ ಅಂಥ ಪದಾರ್ಥದ ವಿಷಯದಲ್ಲಿ ಈಗ ಸ್ಮರಣೆ ಉಂಟಾಗಲಿಲ್ಲವೆಂದು ಹೇಳಿ ಈ ಸ್ಮರಣರೂಪಜ್ಞಾನದ ಸ್ವಾರಸ್ಯವನ್ನು ಸ್ವಲ್ಪಮಟ್ಟಿಗೆ ತಗ್ಗಿಸಿದರೂ, ಯಾವ ಪದಾರ್ಥವಾದರೆ ಸ್ವಾಪಕಾಲದಲ್ಲಿಯೂ ಅನುಭವಿಸಲ್ಪಡುವುದಕ್ಕೆ ಯೋಗ್ಯವಾಗಿ ಇರುವುದೋ ಅಂಥ ಪದಾರ್ಥದ ವಿಷಯದಲ್ಲಿಯೂ ಇದರ ಸ್ವಾರಸ್ಯವನ್ನು ತಗ್ಗಿಸಬೇಕೆಂಬ ಅಂಶವನ್ನು ನ್ಯಾಯವಿಮರ್ಶಿಗಳು ಒಪ್ಪುವುದಿಲ್ಲ.

ಇವುಗಳೊಳಗೆ ಸ್ವಾಪವೆಂಬುದು—ಅಂತರಿಂದ್ರಿಯಬಹಿರಿಂದ್ರಿಯಗಳೆಂಬ ಸಮಸ್ತೇಂದ್ರಿಯಗಳ ವ್ಯಾಪಾರವಿಶ್ರಾಂತಿರೂಪವಾದುದರಿಂದ ಇಂಥ ಸ್ವಾಪವನ್ನು ಸ್ವಾಪಕಾಲದಲ್ಲಿ ಅನುಭವಿಸಲು ಸಾಧ್ಯವಿಲ್ಲ. ಹಾಗೆ ಅನುಭವಿಸುವುದಾದರೆ ಇಂದ್ರಿಯವ್ಯಾಪಾರದ ಸಹಾಯದಿಂದಲ್ಲವೆ ಅನುಭವಿಸಬೇಕು ; ಇದಕ್ಕಾಗಿ ಇಂದ್ರಿಯವ್ಯಾಪಾರವು ಆಗ ಇರುವುದಾದರೆ, ಅದು ಪ್ರಬೋಧವೆನಿಸಿಕೊಳ್ಳುವುದರಿಂದ ಇಂದ್ರಿಯವ್ಯಾಪಾರವಿಶ್ರಾಂತಿರೂಪವಾದ ಸ್ವಾಪಪದಾರ್ಥವು ಆಗ ಇರಲು ಅವಕಾಶವಿಲ್ಲ.

ಅಂತು—ಅನುಭಾವ್ಯವಾದ ಸ್ವಾಪಸದಾರ್ಥವಿರುವುದಾದರೆ ಆಗ ಅನುಭವ ಸಾಧನವಿರುವುದಿಲ್ಲವೆಂತಲೂ, ಅನುಭವಸಾಧನವಾದ ಇಂದ್ರಿಯವ್ಯಾಪಾರವಿದ್ದರೆ ಆಗ ಅನುಭಾವ್ಯವಿರುವುದಿಲ್ಲವೆಂತಲೂ, ಸ್ಪಷ್ಟವಾದುದರಿಂದ ಸ್ವಾಪಕಾಲದಲ್ಲಿ ಸ್ವಾಪವನ್ನು ಅನುಭವಿಸಲು ಎಂದಿಗೂ ಶಕ್ಯವಲ್ಲ. ಆದಕಾರಣ ಈ ಸ್ವಾಪಪದಾರ್ಥದ ವಿಷಯದಲ್ಲಿ ಸ್ಮರಣಾತ್ಮಕವಾದ ಪರಾಮರ್ಶಜ್ಞಾನದ ಸ್ವಾರಸ್ಯವನ್ನು ತಗ್ಗಿಸಬೇಕು. ಹೀಗೆ ಉಕ್ತವಾದ ನ್ಯಾಯವು ಕಾಲವಿಷಯದಲ್ಲಿಯೂ ತುಲ್ಯವಾದುದರಿಂದ ಕಾಲಾಂಶದಲ್ಲಿಯೂ ಇದರ ಸ್ವಾರಸ್ಯವನ್ನು ತಗ್ಗಿಸಬೇಕು.

ಸುಖಪದಾರ್ಥ, ಅಹಂಪದಾರ್ಥ- ಇವುಗಳನ್ನಾದರೆ ಇಂದ್ರಿಯವ್ಯಾಪಾರಾಪೇಕ್ಷೆಯಿಲ್ಲದೆಯೇ ಅನುಭವಿಸಬಹುದಾದುದರಿಂದ ಅವೆರಡರ ವಿಷಯದಲ್ಲಿಯೂ ಪರಾಮರ್ಶದ ಸ್ವಾರಸ್ಯವನ್ನು ಸಂಕೋಚಪಡಿಸಲು ನ್ಯಾಯವಿಲ್ಲ.

ಆದಕಾರಣ—ಸ್ವಾಪಕ್ಕಿಂತಲೂ ಪೂರ್ವಕಾಲದಲ್ಲಿ ಅನುಭೂತಗಳಾದ ಪದಾರ್ಥಗಳ ಪ್ರತ್ಯಭಿಜ್ಞೆ ಸ್ವಾಪೋತ್ತರಕಾಲದಲ್ಲಿ ಉಂಟಾಗುವುದರಿಂದ ಇಂಥ ಲಿಂಗದಿಂದ ಸ್ವಾಪಕಾಲಸಂಬಂಧವು ಈಗ ಅನುಮಾನಪ್ರಮಾಣದಿಂದ ಗ್ರಹಿಸಲ್ಪಟ್ಟರೂ—ಆ ಕಾಲದಲ್ಲಿ ಜ್ಞಾನಪ್ರಸರಣವಿದ್ದಿತೆಂದು ಒಪ್ಪಿಕೊಳ್ಳುವುದಾದರೆ ಅಂಥ ಜ್ಞಾನಕ್ಕೆ ಗೋಚರಗಳಾದ ಪದಾರ್ಥಗಳ ಸ್ಫೂರ್ತಿಯೂ ಇದ್ದೇ ಇರಬೇಕಾಗಿ ಬರುವುದರಿಂದಲೂ, ಸ್ಫೂರ್ತಿಯಾದರೆ ಇಲ್ಲವಾದುದರಿಂದಲೂ ಯೋಗ್ಯಾನುಪಲಬ್ಧಿಯೆಂಬ ಲಿಂಗದಿಂದ ಐಂದ್ರಿಯಿಕಸಕಲಜ್ಞಾನಾಭಾವರೂಪವಾದ ಸ್ವಾಪಪದಾರ್ಥವು ಈಗ ಅನುಮಾನಪ್ರಮಾಣದಿಂದ ಗ್ರಹಿಸಲ್ಪಟ್ಟರೂ, ಏಕತ್ವ ಪ್ರತ್ಯಕ್ತ್ವವಿಶಿಷ್ಟವಾದ ಆತ್ಮಸ್ವರೂಪವು ಆಗಲೂ ಸ್ವಯಂಪ್ರಕಾಶವಾಗಿಯೇ ಇದ್ದುದರಿಂದ ಆ ಅಂಶದಲ್ಲಿಯೂ ಸ್ಮರಣಕ್ಕೆ ಸ್ವಾರಸ್ಯವನ್ನು ತಗ್ಗಿಸುವುದು ಯುಕ್ತವಲ್ಲ. ಆದಕಾರಣ ಪ್ರತ್ಯಕ್ತ್ವಾದ್ಯಾಕಾರದಿಂದ ಆತ್ಮನಿಗೆ ಸರ್ವದಾ ಸ್ವಯಂಪ್ರಕಾಶತ್ವವನ್ನು ಪ್ರಾಮಾಣಿಕರಾದವರೆಲ್ಲರೂ ಒಪ್ಪದಿರಲಾರರು.

## ೪೭೬. ಉಕ್ತಪರಾಮರ್ಶೇ ಸ್ಮರ್ಯಮಾಣಸುಖಸ್ಯ ಸ್ವಾಪಕಾಲಿಕತ್ವ ಸ್ಥಿರೀಕರಣಂ.

ಪೂಜ್ಯರೇ ! ಸ್ವಾಪಕಾಲದಲ್ಲಿ ಅನುಭೂತವಾದ ಸುಖವೇ " ಸುಖಮಹಮಸ್ವಾಪ್ಸಂ " ಎಂಬ ಪ್ರಬೋಧಕಾಲಿಕಸ್ಮರಣಕ್ಕೆ ಗೋಚರವಾಗಿ ಇರುವುದೆಂದು ಹೇಳಿದಿರಿ; ಆದರೆ ಇದು ಯುಕ್ತವಲ್ಲ; ಸ್ವಾಪಕಾಲದಲ್ಲಿಯೇ ಸುಖವಿತ್ತೆಂಬ ನಿರ್ಬಂಧವನ್ನು ಏತಕ್ಕೆ ಒಪ್ಪಬೇಕು? " ಈಗ ಸುಖವುಂಟಾಗುವಂತೆ ಆಗ ಮಲ

ಗಿದ್ದೆನು" ಎಂಬುದಾಗಿಯೇ ಈ ಪರಾಮರ್ಶವಾಕ್ಯಕ್ಕೆ ಏತಕ್ಕೆ ಅರ್ಥವಾಗ ಬಾರದು ?" ಎಂದು ಹೇಳಲಾಗುವುದಿಲ್ಲ.

ಏತಕ್ಕೆಂದರೆ—"ಮಂದಮಗಚ್ಛಂ, ಮಧುರಮಗಾಯಂ" ಇತ್ಯಾದಿ ಲೋಕಪ್ರಯೋಗಗಳಲ್ಲಿ ಗಮನಸಮಕಾಲಿಕವಾದ ಮಾಂದ್ಯವೂ ಗಾನಸಮಕಾಲಿಕ ವಾದ ಮಾಧುರ್ಯವೂ ತೋರುವುವಲ್ಲದೆ ಈಗ ಮಾಂದ್ಯವುಂಟಾಗುವಂತೆ ಆಗ ಹೋದೆ ನೆಂದಾಗಲಿ ಈಗ ಮಾಧುರ್ಯವುಂಟಾಗುವಂತೆ ಆಗ ಗಾನಮಾಡಿದೆನೆಂದಾಗಲಿ ತೋರುವುದಿಲ್ಲ. ಅದರಂತೆ—"ಸುಖಮಹಮಸ್ವಾಪ್ಸಂ" ಎಂಬ ಸ್ಥಳದಲ್ಲಿಯೂ ಸ್ವಾಪಸಮಕಾಲಿಕವಾದ ಸುಖವೇ ತೋರುವುದಲ್ಲದೆ—"ಈಗ ಸುಖವುಂಟಾಗು ವಂತೆ ಆಗ ಮಲಗಿದ್ದೆನು" ಎಂದು ತೋರುವುದಿಲ್ಲವಷ್ಟೆ ?

## ೪೭೭. ಸ್ವಾಪಕ್ರಿಯಾವಿಶೇಷಣತ್ವೇಽಪಿ ಸುಖತ್ವಸ್ಯಾತ್ಮವೃತ್ತಿತ್ವಮೇವ.

ಯದ್ಯಪಿ "ಸುಖಮಹಮಸ್ವಾಪ್ಸಂ" ಎಂಬ ಪರಾಮರ್ಶವಾಕ್ಯದಲ್ಲಿ ಸುಖಪದಾರ್ಥವು ಸ್ವಾಪಕ್ರಿಯೆಗೆ ವಿಶೇಷಣವಾಗಿ ಇರುವುದರಿಂದ "ಅತೀತಕಾಲಸಂ ಬಂಧಿಯಾಗಿಯೂ ಸುಖರೂಪವಾಗಿಯೂ ಇದ್ದ ಸ್ವಾಪಕ್ರಿಯೆಗೆ ನಾನು ಆಶ್ರಯ ನಾಗಿ ಇದ್ದೆನು' ಎಂಬುದಾಗಿ ಸ್ವಾಪಕ್ರಿಯೆಯಲ್ಲಿಯೇ ಸುಖತ್ವವು ತೋರಿಬರು ವುದು; ಆದರೂ ಸ್ವಾಪಕ್ರಿಯೆ ಅಚೇತನವಾದುದರಿಂದ ಅದರಲ್ಲಿ ಸುಖತ್ವವು ಸಂಭವಿಸುವುದಿಲ್ಲ; ಸುಖತ್ವಕ್ಕೆ ಆಶ್ರಯನಾದ ಆತ್ಮನೇ ಸ್ವಾಪಕ್ರಿಯೆಗೂ ಆಶ್ರಯ ನಾಗಿ ಇರುವುದರಿಂದ ಆತ್ಮಗತವಾದ ಸುಖತ್ವವೇ ಆತ್ಮಗತವಾದ ಸ್ವಾಪಕ್ರಿಯೆಯಲ್ಲಿ ತೋರುವುದು. ಅಂತು ಸುಖಪದದಿಂದ ಸುಖವೃತ್ತಿತ್ವವೇ ವಿವಕ್ಷಿತವಾಗಿ ಇರುವುದ ರಿಂದ ಸುಖಶಬ್ದವಾಚ್ಯನಾದ ಆತ್ಮನಲ್ಲಿಯೇ ಸುಖತ್ವವು ತೋರುವುದೆಂದು ಫಲಿತ ವಾಗಿ ಇರುವುದು.

## ೪೭೮. ಸಸಂಬಂಧಿಕೇಽರ್ಥೇ ವೃತ್ತಸ್ಯಾಸ್ಯ ಜ್ಞಾನಶಬ್ದಸ್ಯ ಅಸಂ ಬಂಧಿಕೇ ಆತ್ಮನಿ ಪ್ರವೃತ್ತ್ಯನುಪಪತ್ತ್ಯಾಶಂಕಾ.

"ಪೂಜ್ಯರೇ! ಜೀವಸ್ವರೂಪವೂ ಜ್ಞಾನಾಕಾರವಾಗಿ ಇರುವುದೆಂದು ತೋರಿ ಸಿದಿರಿ, ಇದರಿಂದ—ಜ್ಞಾನಶಬ್ದವು ಧರ್ಮಭೂತಜ್ಞಾನದಲ್ಲಿ ಹೇಗೆ ಪ್ರವರ್ತಿಸು ವುದೋ, ಹಾಗೆಯೇ ಜೀವಸ್ವರೂಪದಲ್ಲಿಯೂ ಪ್ರವರ್ತಿಸುವುದೆಂದು ಹೇಳಿದಂತಾ ಯಿತು; ಆದರೆ—"ದೇವದತ್ತನಿಗೆ ಘಟಜ್ಞಾನವುಂಟಾಯಿತು; ಯಜ್ಞದತ್ತನಿಗೆ ಪಟಜ್ಞಾನವುಂಟಾಯಿತು." ಎಂಬ ಇವೇ ಮೊದಲಾದ ಲೋಕವ್ಯವಹಾರಗಳಿಂದ ಒಂದು ಕರ್ತೃಕಾರಕದೊಡನೆಯೂ, ಒಂದು ಕರ್ಮಕಾರಕದೊಡನೆಯೂ ಕೂಡಿರುವ

ಜ್ಞಾ ಧಾತ್ವರ್ಥವೇ ಜ್ಞಾನಪದಕ್ಕೆ ಮುಖ್ಯಾರ್ಥವೆಂದು ತೋರುವುದಾದಕಾರಣ ಜ್ಞಾನಶಬ್ದವು ಸಸಂಬಂಧಿಕಶಬ್ದವಾಗಿ ಇರುವುದೆಂದು ಒಪ್ಪಿಕೊಳ್ಳಬೇಕು ; ಧರ್ಮ ಭೂತಜ್ಞಾನವಾದರೆ ಕರ್ತೃಕರ್ಮಗಳೊಡನೆ ಕೂಡಿಯೇ ಇರುವುದರಿಂದ ಜ್ಞಾನ ಶಬ್ದವು ನಿರರ್ಗಳವಾಗಿ ಅದರಲ್ಲಿ ಪ್ರವರ್ತಿಸಬಹುದು ; ಸ್ವರೂಪಭೂತಜ್ಞಾನವಾದರೆ ಕರ್ತೃಕರ್ಮಗಳೊಡನೆ ಕೂಡಿ ಇಲ್ಲವಾದುದರಿಂದ ಇದರಲ್ಲಿ ಜ್ಞಾನಶಬ್ದವು ಹೇಗೆ ಪ್ರವರ್ತಿಸಬಲ್ಲುದು ?

## ೪೭೯. ಕರ್ಮಕರ್ತೃಸಂಬಂಧಿಜ್ಞಾನತ್ವಸ್ಯ ಜ್ಞಾನಪದವ್ಯುತ್ಪತ್ತಿ ಮಾತ್ರೋಪಯೋಗಿತ್ವಂ ನ ತು ಜ್ಞಾನಪದಪ್ರವೃತ್ತಿನಿಮಿತ್ತತ್ವಂ.

ಎಂದು ಆಶಂಕಿಸಲಾಗದು—ಕರ್ಮಕರ್ತೃಸಂಬಂಧಿಜ್ಞಾನತ್ವವು ಜ್ಞಾನ ಪದಕ್ಕೆ ಪ್ರವೃತ್ತಿನಿಮಿತ್ತವಲ್ಲ. ಯಾವುದಾದರೊಂದು ಪದಾರ್ಥವು ವ್ಯವಹಾರಾ ರ್ಹವಾಗುವುದಕ್ಕೆ ಯಾವುದು ಸಾಕ್ಷಾತ್‌ಕಾರಣವಾಗುವುದೋ ಅದು ಜ್ಞಾನ ವೆನಿಸಿಕೊಳ್ಳುವುದು, ಘಟಪದಾರ್ಥವು ನಮ್ಮ ವ್ಯವಹಾರಕ್ಕೆ ಅರ್ಹವಾಗಬೇಕಾ ದರೆ ಘಟಜ್ಞಾನವು ನಮಗೆ ಮೊದಲು ಇರಬೇಕು. ಅನಂತರದಲ್ಲಿ ವ್ಯವಹಾರೇಚ್ಛೆ ಇರಬೇಕು. ಅನಂತರದಲ್ಲಿ ವ್ಯವಹಾರಪ್ರಯತ್ನವಿರಬೇಕು. ಇಷ್ಟು ಸಾಮಗ್ರಿ ಇದ್ದರಲ್ಲದೆ ಘಟವಿಷಯದಲ್ಲಿ ನಾವು ವ್ಯವಹಾರವನ್ನು ನಡಸಲಾಗುವುದಿಲ್ಲ. ಹೀಗೆ ಘಟಪದಾರ್ಥದ ವ್ಯವಹಾರಾರ್ಹತೆಗೆ ಧರ್ಮಭೂತಜ್ಞಾನವು ಸಾಕ್ಷಾತ್‌ಕಾರಣ ವಾಗಿ ಇರುವುದರಿಂದ ಇದರಲ್ಲಿ ಲಕ್ಷಣಸಮನ್ವಯವಾಗುವುದು. ಇದರಂತೆ ಸ್ವಯಂ ಪ್ರಕಾಶವಾದ ಆತ್ಮಸ್ವರೂಪವೂ ಸ್ವವ್ಯವಹಾರಾರ್ಹತೆಗೆ ಸಾಕ್ಷಾತ್ ಕಾರಣವಾಗಿ ಇರುವುದರಿಂದ ಜ್ಞಾನಶಬ್ದಕ್ಕೆ ಇದೂ ಮುಖ್ಯಾರ್ಥವಾಗಲು ತಡೆಯಿಲ್ಲ. “ಯಃ ಪಂಜರಸ್ಥಃ ಸ ಸಿಂಹಃ” ಎಂದರೆ ಯಾವುದು ಪಂಜರದಲ್ಲಿ ಇರುವುದೋ ಅದು ಸಿಂಹ ವೆನಿಸಿಕೊಳ್ಳುವುದು ಎಂದು ಹೇಳಿದರೆ—ಇದು ಸಿಂಹಶಬ್ದದ ಅರ್ಥವನ್ನು ಅರಿಯದ ಬಾಲಕನಿಗೆ ಸಿಂಹಶಬ್ದದ ವ್ಯುತ್ಪತ್ತಿಯನ್ನು ಉಂಟುಮಾಡಿಕೊಡುವುದಕ್ಕೆ ಉಪಾ ಯವಾಗಿಮಾತ್ರ ಇರುವುದಲ್ಲದೆ ಪಂಜರಸ್ಥತ್ವವೆಂಬ ವಿಶೇಷಣವೂ ಸಿಂಹಶಬ್ದದ ವಾಚ್ಯಕೋಟಿಯಲ್ಲಿ ಸೇರುವುದಿಲ್ಲ. ಹಾಗೆ ಸೇರುವುದಾದರೆ ವನದಲ್ಲಿ ಇರುವ ಸಿಂಹದಲ್ಲಿ ಅಂಥ ವಿಶೇಷಣವಿಲ್ಲವಾದುದರಿಂದ ಅಂಥ ಸಿಂಹದಲ್ಲಿ ಸಿಂಹಶಬ್ದವನ್ನು ಪ್ರಯೋಗಿಸಕೂಡದೆಂದು ಬಂದೊದಗುವುದು. ಅದರಂತೆ ಕರ್ಮಕರ್ತೃಸಂಬಂಧಿ ಜ್ಞಾನತ್ವವು ಜ್ಞಾನಪದದ ವ್ಯುತ್ಪತ್ತಿಗೆ ಉಪಯೋಗಿಯಾಗಿ ಇರುವುದಲ್ಲದೆ ಜ್ಞಾನ ಪದವಾಚ್ಯವೂ ಆಗುವುದಿಲ್ಲ.

## ೪೮೦. ಯಸ್ಯ ಕಸ್ಯ ಚಿದ್ವ್ಯವಹಾರಾನುಗುಣ್ಯೇ ನಿರಪೇಕ್ಷ ಹೇತುತ್ವಸ್ಯೈವ ಜ್ಞಾನಪದಪ್ರವೃತ್ತಿನಿಮಿತ್ತತ್ವಂ.

ಆದಕಾರಣ ಯಾವುದಾದರೊಂದುಪದಾರ್ಥದ ವ್ಯವಹಾರಾನುಗುಣ್ಯಕ್ಕೆ ನಿರಪೇಕ್ಷ ಹೇತುವಾಗಿ ಇರುವಿಕೆಯೇ ಜ್ಞಾನಪದದ ಪ್ರವೃತ್ತಿನಿಮಿತ್ತವಾಗಿ ಇರುವುದ ರಿಂದ ಇಂಥ ನಿಮಿತ್ತವು ಧರ್ಮಭೂತಜ್ಞಾನದಲ್ಲಿಯೂ ಧರ್ಮಿಸ್ವರೂಪದಲ್ಲಿಯೂ ಅಬಾಧಿತವಾಗಿ ಇರುವುದಾದಕಾರಣ ಇವೆರಡರಲ್ಲಿಯೂ ಜ್ಞಾನಪದವು ಮುಖ್ಯರೀತಿ ಯಾಗಿಯೇ ಪ್ರವರ್ತಿಸುವುದೆಂಬುದಕ್ಕೆ ಅಪೋಹವಿಲ್ಲ.

## ೪೮೧. ಧರ್ಮಭೂತಜ್ಞಾನತ್ವಮೇವ ವಿಷಯಾಶ್ರಯವೈಶಿಷ್ಟ್ಯ ಪ್ರಯೋಜಕಂ ನ ತು ಜ್ಞಾನತ್ವಮಾತ್ರಂ.

"ಪೂಜ್ಯರೇ! ಎಲ್ಲಿ ಜ್ಞಾನತ್ವವಿರುವುದೋ ಅಲ್ಲಿ ವಿಷಯಾಶ್ರಯವೈಶಿಷ್ಟ್ಯ ವೂ ಇದ್ದೇ ಇರಬೇಕೆಂಬುದನ್ನು ಧರ್ಮಭೂತಜ್ಞಾನದಲ್ಲಿ ನೋಡಿ ಇರುವೆವಾದುದ ರಿಂದ ಧರ್ಮಿಸ್ವರೂಪದಲ್ಲಿಯೂ ಜ್ಞಾನತ್ವವನ್ನು ಒಪ್ಪಿಕೊಳ್ಳುವುದಾದರೆ ವಿಷಯಾ ಶ್ರಯವೈಶಿಷ್ಟ್ಯವೂ ಇದರಲ್ಲಿ ಇರಬೇಕಲ್ಲವೆ?"

ಇಲ್ಲ—ಆ ನಿರ್ಬಂಧವಿಲ್ಲ. ಧರ್ಮಭೂತಜ್ಞಾನತ್ವಕ್ಕೂ ವಿಷಯಾಶ್ರಯ ವೈಶಿಷ್ಟ್ಯಕ್ಕೂ ವ್ಯಾಪ್ಯವ್ಯಾಪಕಭಾವವಿರುವುದಲ್ಲದೆ ಜ್ಞಾನತ್ವಸಾಮಾನ್ಯಕ್ಕೂ ವಿಷಯಾಶ್ರಯವೈಶಿಷ್ಟ್ಯಕ್ಕೂ ವ್ಯಾಪ್ಯವ್ಯಾಪಕಭಾವವಿಲ್ಲ. ಆದುದರಿಂದ ಧರ್ಮಿ ಸ್ವರೂಪದಲ್ಲಿ ಜ್ಞಾನತ್ವವಿದ್ದರೂ ಧರ್ಮಭೂತಜ್ಞಾನತ್ವವಿಲ್ಲವಾದುದರಿಂದ ವಿಷ ಯಾಶ್ರಯವೈಶಿಷ್ಟ್ಯವೂ ಇಲ್ಲದಿರಬಹುದು.

## ೪೮೨. ವಿಷಯಾಶ್ರಯಶೂನ್ಯಜ್ಞಾನಾಭ್ಯುಪಗಮೇಽಪಿ ನಿರ್ವಿಶೇಷ ಬ್ರಹ್ಮವಾದಿಮತಾತ್ ಅಸ್ಮನ್ಮತಸ್ಯ ವೈಲಕ್ಷಣ್ಯಸಿದ್ಧಿಃ.

"ಓಹೋ—ಹೀಗೆ ವಿಷಯಶೂನ್ಯವಾಗಿಯೂ, ಆಶ್ರಯಶೂನ್ಯವಾಗಿಯೂ ಇರುವ ಜ್ಞಾನವೆಂಬುದೊಂದು ಉಂಟೆಂದು ಒಪ್ಪಿಕೊಳ್ಳುವುದಾದರೆ ಪ್ರಚ್ಛನ್ನ ಬೌದ್ಧಮತಪ್ರವೇಶವು ಪ್ರಸಕ್ತವಾಗುವುದಿಲ್ಲವೋ? ಅವರ ಮತದಲ್ಲಿಯೂ—ವಿಷ ಯಾಶ್ರಯಶೂನ್ಯವಾಗಿಯೂ, ನಿರ್ವಿಶೇಷವಾಗಿಯೂ ಇರುವ ಜ್ಞಾನವೆಂಬು ದೊಂದನ್ನು ಒಪ್ಪಿಕೊಂಡು ಅದೇ ಆತ್ಮತತ್ತ್ವವೆಂದು ಹೇಳಿ ಇರುವುದಷ್ಟೆ.

ಇಲ್ಲ—ಪರಮತಪ್ರವೇಶಪ್ರಸಕ್ತಿಯೇ ಇಲ್ಲ. ಅವರ ಮತಕ್ಕಿಂತಲೂ ನಮ್ಮ ಮತಕ್ಕೆ ಬಹಳ ವ್ಯತ್ಯಾಸವುಂಟು; ಆತ್ಮನೆನಿಸಿಕೊಂಡ ಈ ಧರ್ಮಿಸ್ವರೂಪದಲ್ಲಿ ವಿಷಯಾಶ್ರಯಶೂನ್ಯತ್ವವಿದ್ದರೂ ಅವರ ಮತದಂತೆ ನಮ್ಮ ಮತದಲ್ಲಿ ಈ ಆತ್ಮ

ತತ್ತ್ವವು ನಿರ್ವಿಶೇಷವಲ್ಲ ; ಇದರಲ್ಲಿ ಜ್ಞಾನತ್ವ, ಜ್ಞಾನದ್ರಷ್ಟೃತ್ವ, ಜ್ಞಾನದ್ರವ್ಯಾಶ್ರಯತ್ವ, ನಿತ್ಯತ್ವ, ಅಣುತ್ವ, ನಿಯಾಮ್ಯತ್ವ, ಆಧೇಯತ್ವ, ಶೇಷತ್ವ, ಪರತಂತ್ರತ್ವ, ಇವೇ ಮೊದಲಾಗಿ ಪ್ರಾಮಾಣಿಕಗಳಾದ ಅನೇಕವಿಶೇಷಗಳನ್ನು ನಾವು ಒಪ್ಪಿ ಇರುವೆವಷ್ಟೆ ?

## ೪೮೩. ಆತ್ಮನೋ ನಿತ್ಯತ್ವಸಮರ್ಥನಂ. ||೭||

ಆದರೆ ಈ ಆತ್ಮತತ್ತ್ವವು ನಿತ್ಯವೋ ? ಯಾವಾಗಲೂ ಇದಕ್ಕೆ ವಿನಾಶವು ಸಂಭವಿಸುವುದಿಲ್ಲವೋ ? ವಿನಾಶವು ಸಂಭವಿಸುವುದಿಲ್ಲವೆಂಬುದರಲ್ಲಿ ಯುಕ್ತಿಗಳೇನಾದರೂ ಉಂಟೋ ? ಹವುದು ಅನೇಕಯುಕ್ತಿಗಳುಂಟು. ಆಯುಕ್ತಿಗಳೆಲ್ಲಾ—

" ಅವಿನಾಶಿ ತು ತದ್ವಿದ್ಧಿ ಯೇನ ಸರ್ವಮಿದಂ ತತಂ,
ವಿನಾಶಮವ್ಯಯಸ್ಯಾಸ್ಯ ನ ಕಶ್ಚಿತ್ ಕರ್ತುಮರ್ಹತಿ " (೨-೧೭)

ಎಂಬ ಭಗವದ್ಗೀತಾವಚನದಲ್ಲಿ ಸೂಚಿತಗಳಾಗಿಯೂ ಭಾಷ್ಯಕಾರರಿಂದ ವಿವರಿಸಲ್ಪಟ್ಟುವುಗಳಾಗಿಯೂ ಇರುವುವು.

ಮತ್ತು—ಆತ್ಮನಿಗೆ ನಿತ್ಯತ್ವವನ್ನು ಅಂಗೀಕರಿಸದೆ ಉತ್ಪತ್ತಿವಿನಾಶಗಳನ್ನು ಕಲ್ಪಿಸುವುದಾದರೆ—ಉತ್ಪತ್ತಿಪಕ್ಷದಲ್ಲಿ ಅಕೃತಾಭ್ಯಾಗಮವೆಂಬ ದೋಷವೂ, ವಿನಾಶಪಕ್ಷದಲ್ಲಿ ಕೃತವಿಪ್ರಣಾಶವೆಂಬ ದೋಷವೂ ದುಷ್ಪರಿಹರವಾಗಿ ಬಂದೊದಗುವುವು. ಎಂದರೆ—ಶರೀರವು ಹುಟ್ಟಿದ ಕಾಲದಲ್ಲಿ ಆತ್ಮನೂ ಹುಟ್ಟಿದವನಾಗಿ ಇದ್ದರೆ ಈಗ ಹುಟ್ಟಿದ ಇವನಿಗೆ ಪೂರ್ವಜನ್ಮವೇ ಇಲ್ಲವಾದುದರಿಂದ ಈ ಜನ್ಮದಲ್ಲಿ ಅನುಭವಿಸುತ್ತಿರುವ ಸುಖದುಃಖಗಳಿಗೆ ಕಾರಣವಾದ ಪುಣ್ಯಪಾಪಗಳು ಪೂರ್ವದಲ್ಲಿ ಕೃತವಲ್ಲವಾದಕಾರಣ ಅಕೃತವಾದ ಪುಣ್ಯಪಾಪಗಳಿಂದಲೇ ಈಗ ಸುಖದುಃಖಗಳ ಅಭ್ಯಾಗಮವು (ಪ್ರಾಪ್ತಿ) ಉಂಟಾಗಿರುವುದೆಂದು ಹೇಳಬೇಕಾಗುವುದು.

ವಿನಾಶಪಕ್ಷದಲ್ಲಿ—ಈ ಜನ್ಮದಲ್ಲಿ ಕೃತವಾದ ಪುಣ್ಯಪಾಪಗಳಿಗೆ ಫಲವು ದೊರೆವುದಕ್ಕಿಂತಲೂ ಮೊದಲೇ ಆತ್ಮನು ವಿನಾಶವನ್ನು ಹೊಂದುವವನಾದರೆ ಕೃತವಾದ ಪುಣ್ಯಪಾಪಗಳಿಗೆ ಫಲವಿಲ್ಲದೆಯೇ ವಿನಾಶವನ್ನು ಹೇಳಬೇಕಾಗಿಬಂದು " ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ " ಇತ್ಯಾದಿಶಾಸ್ತ್ರಗಳಿಗೆ ನೈಷ್ಫಲ್ಯವುಂಟಾಗುವುದು ; ಆದಕಾರಣ ಇವನಿಗೆ ನಿತ್ಯತ್ವವೇ ಸಿದ್ಧವಾಗಿ ಇರುವುದು.

## ೪೮೪. ಯುಕ್ತಿಬಲಾದಪ್ಯಾತ್ಮನೋಽಣುತ್ವಸಮರ್ಥನಂ. ||೮||

ಇಂಥ ಆತ್ಮನಿಗೆ ಅಣುತ್ವವೇ ಸ್ವಾಭಾವಿಕವಾಗಿ ಇರುವುದೆಂಬ ವಿಷಯದಲ್ಲಿ ಶ್ರುತಿವಾಕ್ಯಗಳನ್ನು ಹಿಂದೆಯೇ ಉದಾಹರಿಸಿ ತೋರಿಸಿರುವೆವು. ಯುಕ್ತಿಬಲ

ದಿಂದಲೂ ಅಣುತ್ವವನ್ನು ಸಾಧಿಸಬಹುದು. ಹೇಗೆಂದರೆ—ಜೀವನಿಗೆ ಈ ಶರೀರ ದಿಂದ ಉತ್ಕ್ರಮಣವೂ, ಪರಲೋಕಗಮನವೂ, ಪುನರಾಗಮನವೂ ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿರುವುವು ; ಆತ್ಮನು ವಿಭುವಾಗಿ ಇದ್ದಪಕ್ಷದಲ್ಲಿ ಮೊದಲೇ ಸರ್ವತ್ರ ವ್ಯಾಪ್ತನಾಗಿ ಇರುವುದರಿಂದ ಚಲಿಸುವುದಕ್ಕೂ ಸಹ ಸ್ಥಳವಿಲ್ಲದೆ ಹೋಗಿ ಉತ್ಕ್ರಮಣಾದಿಗಳು ಕೂಡಲಾರವು. ಆದಕಾರಣ ಅಣುತ್ವವನ್ನೇ ಒಪ್ಪಿಕೊಳ್ಳಬೇಕು.

## ೩೮೫. ಆತ್ಮನಃ ಶರೀರಸಮಪರಿಮಾಣತ್ವಾನುಪಪತ್ತಿಃ

"ಓಹೋ—ವಿಭುತ್ವವಿಲ್ಲದಿದ್ದರೆ ಅಣುತ್ವವನ್ನೇ ಅಂಗೀಕರಿಸಬೇಕೆಂದು ರಾಜಾಜ್ಞೆಯೋ ? ಜೈನಮತದಂತೆ ಮಧ್ಯಮಪರಿಮಾಣವನ್ನು ಎಂದರೆ ಶರೀರ ಸಮಪರಿಮಾಣವನ್ನು ಏತಕ್ಕೆ ಅಂಗೀಕರಿಸಬಾರದು ?" ಇಲ್ಲ—ಶರೀರಸಮಪರಿ ಮಾಣವನ್ನು ಅಂಗೀಕರಿಸಲಾಗುವುದಿಲ್ಲ. ಹಾಗೆ ಅಂಗೀಕರಿಸುವುದಾದರೆ—ಗಜ ಶರೀರದಲ್ಲಿ ಇದ್ದ ಆತ್ಮನು ಆ ಶರೀರವನ್ನು ಬಿಟ್ಟು ಪಿಪೀಲಿಕಾ (ಇರುವೆ) ಶರೀರಕ್ಕೆ ಬರುವ ಕಾಲದಲ್ಲಿ ತನ್ನ ಅನೇಕಾವಯವಗಳನ್ನು ಛೇದಿಸಿಕೊಳ್ಳಬೇಕಾಗಿಯೂ, ಪಿಪೀ ಲಿಕಾಶರೀರದಲ್ಲಿ ಇದ್ದವನು ಅದನ್ನು ಬಿಟ್ಟು ಗಜಶರೀರಕ್ಕೆ ಬರುವ ಕಾಲದಲ್ಲಿ ಅನೇಕಾವಯವಗಳನ್ನು ಸೇರಿಸಿಕೊಳ್ಳಬೇಕಾಗಿಯೂ ಬರುವುದರಿಂದ ಆತ್ಮನು ಅಚ್ಛೇದ್ಯನಾಗಿಯೂ ನಿರವಯವನಾಗಿಯೂ ಇರುವನೆಂದು ತೋರಿಸುವ ಪ್ರಮಾ ಣಕ್ಕೆ ವಿರೋಧವುಂಟಾಗುವುದು.

## ೩೮೬. ವಿಭುತ್ವಪಕ್ಷೇ ಪ್ರದೇಶವಿಶೇಷೇ ಆತ್ಮನಃ ಪ್ರತೀತ್ಯನುಪಪತ್ತಿಃ

ಮತ್ತು ಸ್ವಯಂಪ್ರಕಾಶನಾದ ಆತ್ಮನಿಗೆ ವಿಭುತ್ವವನ್ನು ಒಪ್ಪುವುದಾದರೆ ಸರ್ವಪ್ರದೇಶದಲ್ಲಿಯೂ ಆತ್ಮನು ತೋರಿಬರಬೇಕಾಗಿ ಬರುವುದು. ಆಗ ಹೃದಯ ಪ್ರದೇಶದಲ್ಲಿ ಮಾತ್ರ ಉಂಟಾಗುತ್ತಿರುವ ಆತ್ಮಪ್ರತೀತಿಯ ಸ್ವಾರಸ್ಯವು ಕೆಡು ವುದು.

"ಆತ್ಮನಿಗೆ ಸುಖವಾಗಲಿ ದುಃಖವಾಗಲಿ ಸಕಲಲೋಕಗಳಲ್ಲಿಯೂ ಏಕ ಕಾಲದಲ್ಲಿಯೇ ಸಿದ್ಧಿಸುವುದಕ್ಕಾಗಿ ಅದೃಷ್ಟವು ಬೇಕಾಗಿ ಇರುವುದರಿಂದ ಅಂಥ ಅದೃ ಷ್ಟಕ್ಕೆ ಆಶ್ರಯನಾದ ಆತ್ಮನಿಗೆ ಏಕಕಾಲದಲ್ಲಿ ಸಕಲಪ್ರದೇಶಸಂಯೋಗವನ್ನು ಒಪ್ಪಬೇಕಾಗಿ ಇರುವಕಾರಣ ಇವನಿಗೆ ವಿಭುತ್ವವು ಸಿದ್ಧಿಸುವುದು" ಎಂದು ಭ್ರಾಂತಿಪಡಬಾರದು. ಸರ್ವೇಶ್ವರನ ಕೋಪಪ್ರಸಾದಗಳೇ ಅದೃಷ್ಟವೆನಿಸಿಕೊಳ್ಳು ವುದರಿಂದಲೂ, ಅಂಥ ಅದೃಷ್ಟಕ್ಕೆ ಆಶ್ರಯವಾದ ಈಶ್ವರಸ್ವರೂಪವು ವಿಭುವಾಗಿ

ಇರುವುದರಿಂದಲೂ, ಅಷ್ಟುಮಾತ್ರದಿಂದಲೇ ಜೀವನಿಗೆ ಸರ್ವತ್ರ ಸುಖದುಃಖಗಳು ಸಂಭವಿಸಬಹುದಾದುದರಿಂದಲೂ, ಜೀವಸ್ವರೂಪಕ್ಕೆ ವಿಭುತ್ವವಿರಬೇಕೆಂಬ ನಿರ್ಬಂಧ ವಿಲ್ಲ. ಆದರೂ ವಿಭುತ್ವವನ್ನು ಒಪ್ಪುವುದಾದರೆ ಇದಕ್ಕೆ ವೈಯರ್ಥ್ಯವುಂಟಾ ಗುವುದಲ್ಲದೆ "ಅಹಮಿಹೈವಾಸ್ಮಿ ಸದನೇ ಜಾನಾನಃ" ಎಂದು ಅಬಾಧಿತವಾಗಿ ಉಂಟಾಗುತ್ತಿರುವ ಪ್ರತೀತಿಯ ಸ್ವಾರಸ್ಯಕ್ಕೂ ಭಂಗವುಂಟಾಗುವುದು.

## ೪೮೭. ಶರೀರೇಣಸಹಾತ್ಮನೋ ಗಮನಾಗಮನಕಲ್ಪನಾಪೇಕ್ಷಯಾ ಲಾಘವಾದ್ವಿಭುತ್ವಕಲ್ಪನಾಶಂಕಾ.

ಪೂಜ್ಯರೇ! ಆತ್ಮನು ಅಣುವೇ ಆಗಿದ್ದಪಕ್ಷದಲ್ಲಿ ಯಾವುದಾದರೊಂದು ಪ್ರದೇಶದಲ್ಲಿ ಇವನಿರಬೇಕು; ಶರೀರವು ಮತ್ತೊಂದು ಪ್ರದೇಶಕ್ಕೆ ಹೋದಾಗ ಅಲ್ಲಿ ಯೂ ಸುಖದುಃಖಗಳು ಲೋಕದಲ್ಲಿ ಕಂಡುಬರುವುವು; ಸುಖದುಃಖಗಳು ಆತ್ಮನಿಗೆ ಉಂಟಾಗುವುವಲ್ಲದೆ ಶರೀರಕ್ಕಲ್ಲ. ಆದಕಾರಣ ತಾನು ಮೊದಲು ಇದ್ದ ಪ್ರದೇಶ ವನ್ನು ಬಿಟ್ಟು ಶರೀರದ ಜತೆಯಲ್ಲಿಯೇ ಆತ್ಮನೂ ಪ್ರದೇಶಾಂತರಕ್ಕೆ ಹೋಗಿರುವ ನೆಂದು ಹೇಳುವುದಕ್ಕಾಗಿ ಆತ್ಮನಿಗೂ ಗಮನಾಗಮನಗಳನ್ನು ಕಲ್ಪಿಸಬೇಕಾಗಿ ಬರುವುದರಿಂದ ಗೌರವವುಂಟಾಗುವುದು. ಇದಕ್ಕಿಂತಲೂ ಆತ್ಮನಿಗೆ ವಿಭುತ್ವವನ್ನೇ ಕಲ್ಪಿಸುವುದು ಉಚಿತವಾಗಿಲ್ಲವೆ?

## ೪೮೮. ಶ್ರುತಿವಶಾತ್ಪ್ರತ್ಯಕ್ಷವಶಾಚ್ಚ ಗಮನಾಗಮನಕಲ್ಪನೇಽಪಿ ಗೌರವದೋಷಾಭಾವಃ.

ಇಲ್ಲ— ವಿಭುತ್ವಕಲ್ಪನೆ ಉಚಿತವಲ್ಲ. ಅದಕ್ಕಿಂತಲೂ ಗಮನಾಗಮನಾದಿ ಕಲ್ಪನವೇ ಉಚಿತವಾಗಿ ಇರುವುದು. ಶರೀರದ ಜತೆಯಲ್ಲಿ ಜೀವನಿಗೂ ಗಮನಾಗಮನ ಗಳನ್ನು ಕಲ್ಪಿಸಿದರಲ್ಲವೆ "ಅಹಂ ಗಚ್ಛಾಮಿ, ಅಹಮಾಗಚ್ಛಾಮಿ" ಎಂಬ ಪ್ರತ್ಯ ಕ್ಷಕ್ಕೂ "ಚಂದ್ರಮಸಮೇವ ತೇ ಸರ್ವೇ ಗಚ್ಛಂತಿ" ಎಂಬ ಶಾಸ್ತ್ರಕ್ಕೂ ಸಾಮಂ ಜಸ್ಯವುಂಟಾಗುವುದು. ಶರೀರವು ಅನ್ಯತ್ರ ಹೋಗುವಾಗ ಶರೀರಖಚಿತಗಳಾದ ಇಂದ್ರಿಯಗಳಿಗೂ ಗಮನಾಗಮನಗಳನ್ನು ಹೇಗೆ ಒಪ್ಪಿರುವೆವೋ ಅದರಂತೆ ಶರೀರ ಖಚಿತನಾದ ಆತ್ಮನಿಗೂ ಗಮನಾಗಮನಗಳನ್ನು ಹೇಳುವುದರಲ್ಲಿ ಗೌರವದೋಷ ವೇನೂ ಇಲ್ಲ.

## ೪೮೯. ಆತ್ಮನಃ ಕ್ರಿಯಾಶ್ರಯತ್ವಾನುಪಪತ್ತಿಶಂಕಾಪರಿಹಾರಃ

ಪೂಜ್ಯರೇ! ಆತ್ಮನಿಗೆ ಗಮನಾಗಮನಾದಿಕ್ರಿಯೆಗಳು ಸಂಭವಿಸುವುದಿಲ್ಲ ವೆಂದು ಹಿಂದೆ ಅಚಿತ್ತತ್ತ್ವಪರಿಚ್ಛೇದದಲ್ಲಿಯೇ ಹೇಳಿರುತ್ತೀರಿ; ಮತ್ತು ಯಾವ

ಪದಾರ್ಥದಲ್ಲಿ ಸ್ಪರ್ಶಗುಣವಿಲ್ಲವೋ ಆ ಪದಾರ್ಥದಲ್ಲಿ ಕ್ರಿಯೆ ಸಂಭವಿಸುವುದಿಲ್ಲ ವೆಂಬುದನ್ನು ಕಾಲಾದಿಗಳಲ್ಲಿ ನಾವು ಕಾಣುತ್ತಿರುವೆವು; ಕಾಲದಲ್ಲಿ ಸ್ಪರ್ಶಗುಣ ವಿಲ್ಲದುದರಿಂದ ಕ್ರಿಯೆಯೂ ಇಲ್ಲವೆಂಬುದು ಪ್ರತ್ಯಕ್ಷಸಿದ್ಧವಷ್ಟೆ? ಆದರಂತೆ ಜೀವನೂ ಸ್ಪರ್ಶಗುಣಶೂನ್ಯನಾದುದರಿಂದ ಕ್ರಿಯಾಶೂನ್ಯನಾಗಿಯೇ ಇರಬೇಕಾ ದುದು ಯುಕ್ತವಾಗಿ ಇರುವಲ್ಲಿ ಗಮನಾಗಮನಾದಿಕ್ರಿಯೆಗಳು ಜೀವನಲ್ಲಿ ಹೇಗೆ ಕೂಡುವುವು? ಎಂದು ಆಶಂಕಿಸಲಾಗದು.— .

ಏತಕ್ಕೆಂದರೆ—ಮನಇಂದ್ರಿಯದಲ್ಲಿ ಸ್ಪರ್ಶಗುಣವಿಲ್ಲದಿದ್ದರೂ ಕ್ರಿಯಾ ಶ್ರಯತ್ವವು ದೃಷ್ಟವಾಗಿ ಇರುವುದರಿಂದ ಸ್ಪರ್ಶಶೂನ್ಯತ್ವವೆಂಬ ಹೇತು ವ್ಯಭಿಚರಿತ ವಾದಪ್ರಯುಕ್ತ ಕ್ರಿಯಾಶ್ರಯತ್ವಾಭಾವವೆಂಬ ಸಾಧ್ಯವನ್ನು ಸಾಧಿಸಿಕೊಡಲಾರ ದಾದಕಾರಣ ಆತ್ಮನಲ್ಲಿ ಸ್ಪರ್ಶಗುಣವಿಲ್ಲದಿದ್ದರೂ ಕ್ರಿಯಾಶ್ರಯತ್ವವನ್ನು ತಪ್ಪಿಸ ಲಾಗುವುದಿಲ್ಲ. ಹಾಗಾದರೆ ಅಚಿತ್ತತ್ತ್ವಪರಿಚ್ಛೇದದಲ್ಲಿ ಕ್ರಿಯಾಶ್ರಯತ್ವವಿಲ್ಲ ವೆಂದು ಹೇಳಿದುದಕ್ಕೆ ವಿರೋಧವುಂಟಾಗುವುದಿಲ್ಲವೆ? ಇಲ್ಲ; ಲೇಶಮಾತ್ರವೂ ವಿರೋಧವಿಲ್ಲ; ಸಾಕ್ಷಾತ್ತಾಗಿ ಕ್ರಿಯಾಶ್ರಯತ್ವವು ಆತ್ಮನಿಗೆ ಇಲ್ಲವೆಂದು ಅಲ್ಲಿ ಹೇಳಿದೆವಲ್ಲದೆ ಪರಂಪರೆಯಾಗಿಯೂ ಕ್ರಿಯಾಶ್ರಯತ್ವವು ಇಲ್ಲವೆಂದು ಹೇಳಲಿಲ್ಲ ಶರೀರಕ್ಕೆ ಗಮನಾಗಮನಾದಿಕ್ರಿಯೆಗಳು ಸಂಭವಿಸಿದಾಗ ಶರೀರದಲ್ಲಿ ಖಚಿತಗ ಳಾದ ಇಂದ್ರಿಯಗಳಿಗೂ ಶರೀರದ ಜತೆಯಲ್ಲೇ ಗಮನಾಗಮನಾದಿಕ್ರಿಯೆಗಳು ಉಂಟಾದುವೆಂದು ಹೇಗೆ ಒಪ್ಪಿಕೊಳ್ಳುವೆವೋ; ಆದರಂತೆಯೇ ಶರೀರಖಚಿತನಾದ ಆತ್ಮನನ್ನೂ ಸೆಳೆದುಕೊಂಡೇ ಶರೀರವು ಗಮನಾಗಮನಾದಿ ಕ್ರಿಯೆಗಳನ್ನು ನಡಸು ವುದರಿಂದ ಶರೀರದ ಮೂಲಕವಾಗಿ ಆತ್ಮನಲ್ಲಿಯೂ ಗಮನಾಗಮನಾದಿಕ್ರಿಯೆಗಳು ಉಂಟೆಂದು ವ್ಯವಹರಿಸುವುದರಲ್ಲಿ ವಿರೋಧವೇನೂ ಇಲ್ಲ. ಶಕಟವು ವೇಗದಿಂದ ಓಡುತ್ತಿರುವಾಗ ಅದರಲ್ಲಿ ಕುಳಿತಿರುವ ಮನುಷ್ಯನಿಗೆ ಗಮನಕ್ರಿಯಾಶ್ರಯತ್ವವು ಸಾಕ್ಷಾತ್ತಾಗಿ ಇಲ್ಲದಿದ್ದರೂ ಶಕಟದ್ವಾರಾ ಗಮನಕ್ರಿಯಾಶ್ರಯತ್ವವ್ಯವ ಹಾರವು ಲೋಕದಲ್ಲಿ ಅಬಾಧಿತವಾಗಿ ಕಾಣುತ್ತಿರುವುದಷ್ಟೆ? ಆದರಂತೆ ಶರೀರದಲ್ಲಿ ಇರುವ ಆತ್ಮನಿಗೆ ಶರೀರವೇ ಶಕಟಸಮಾನವಾದುದರಿಂದ ಶರೀರಗಮನದಿಂದ ಆತ್ಮ ನಿಗೂ ಗಂತೃತ್ವವುಂಟೆಂದು ಹೇಳಲು ಯಾವ ಅಡ್ಡಿಯೂ ಇಲ್ಲ. ಗಮನಕ್ರಿಯೆ ಸಾಕ್ಷಾತ್ತಾಗಿ ಆತ್ಮನಲ್ಲಿ ಇಲ್ಲದಿದ್ದರೂ ಗಮನಕ್ರಿಯಾಫಲವಾದ ಪೂರ್ವಪ್ರದೇ ಶವಿಭಾಗವೂ, ಉತ್ತರಪ್ರದೇಶಸಂಯೋಗವೂ ಆತ್ಮನಲ್ಲಿ ಉಂಟಾಗುವುವಾದ ಕಾರಣ ಗಂತೃತ್ವವುಂಟೆಂದು ವ್ಯವಹರಿಸಲು ಅಡ್ಡಿಯಿಲ್ಲ.

ಓಹೋ! ಗಮನಕ್ರಿಯೆ ಶರೀರದಲ್ಲಿಯೂ, ಅಂಥ ಕ್ರಿಯೆಯ ಫಲವಾದ ಸಂಯೋಗವಿಭಾಗಗಳು ಆತ್ಮನಲ್ಲಿಯೂ ಉಂಟಾಗುವುವೋ? ಹಾಗಾದರೆ ಭೋಜನ ಕ್ರಿಯೆ ಚೈತ್ರನಲ್ಲಿಯೂ, ಅದರ ಫಲವಾದ ತೃಪ್ತಿಯೆಂಬುದು ಮೈತ್ರನಲ್ಲಿಯೂ ಉಂಟಾಗಬಹುದಲ್ಲವೆ? ಹೇತುವೂ ಸಾಧ್ಯವೂ ಏಕತ್ರ ಇರಬೇಡವೋ? ಹವುದು ಇರಬೇಕು; ಇಲ್ಲಿಯೂ ಹಾಗೆಯೇ ಇರುವುವು. ಗಮನಕ್ರಿಯೆಗೆ ಆಶ್ರಯವಾದ ಶರೀರದಲ್ಲಿ ಗಮನಕ್ರಿಯಾಫಲವಾದ ಸಂಯೋಗವಿಭಾಗಗಳು ಇಲ್ಲದೆ ಹೋಗಲಿಲ್ಲವಷ್ಟೆ!

ಓಹೋ! ಹಾಗಾದರೆ ಗಮನಕ್ರಿಯೆಯಂತೆ ಅದರ ಫಲವೂ ಶರೀರದಲ್ಲಿಯೇ ಉಂಟಾದುದಾದಕಾರಣ ಆತ್ಮನಲ್ಲಿ ಅವುಗಳ ಪ್ರಸಕ್ತಿಯೇ ಇಲ್ಲದೆ ಹೋಯಿತಲ್ಲವೆ? ಹಾಗಿಲ್ಲ; ಆತ್ಮನಲ್ಲಿಯೂ ಅವುಗಳ ಪ್ರಸಕ್ತಿಯುಂಟು. ಶರೀರವು ಆತ್ಮನಿಗೆ ಅಪೃಥಕ್ಸಿದ್ಧವಿಶೇಷಣವಾದುದರಿಂದ ಶರೀರಗತವಾದ ಕ್ರಿಯೆ ಆತ್ಮನಿಗೆ ಉಂಟೆಂದು ಹೇಗೆ ವ್ಯವಹರಿಸುವೆವೋ; ಅದರಂತೆ ಶರೀರಗತವಾದ ಸಂಯೋಗವಿಭಾಗರೂಪಕ್ರಿಯಾಫಲಗಳೂ ಶರೀರಿಯಾದ ಆತ್ಮನಿಗೆ ಉಂಟೆಂದು ವ್ಯವಹರಿಸುವುದರಲ್ಲಿ ಅಡ್ಡಿಯೇನು? ಮೈತ್ರನಿಗೆ ಚೈತ್ರನು ಅಪೃಥಕ್ಸಿದ್ಧವಿಶೇಷಣವಲ್ಲವಾದುದರಿಂದ— ಚೈತ್ರಗತವಾದ ಭೋಜನಕ್ರಿಯೆಯೂ, ಅದರ ಫಲವಾದ ತೃಪ್ತಿಯೂ ಮೈತ್ರನಿಗೆ ಉಂಟಾಗುವುವಲ್ಲ. ಚೈತ್ರನು ಮೈತ್ರನಿಗೆ ಸರ್ವದಾ ಅಧೀನನಲ್ಲ; ಸ್ವತಂತ್ರನಾಗಿ ಇರುವನು. ಶರೀರವು ಹಾಗಲ್ಲ; ಯಾವಾಗಲೂ ಆತ್ಮನಿಗೆ ಅಧೀನವಾಗಿಯೇ ಇರುವುದು. ಆದಕಾರಣ ಇಂಥ ಸ್ಥಳಗಳಲ್ಲಿ ಅಪೃಥಕ್ಸಿದ್ಧವಿಶೇಷಣಗತವಾದ ಧರ್ಮವನ್ನು ವಿಶಿಷ್ಟವಸ್ತುವಿನಲ್ಲಿ ವ್ಯವಹರಿಸಲು ತಡೆಯಿಲ್ಲ. ಆದರೂ ಇಂಥ ವ್ಯವಹಾರವನ್ನು ಮುಖ್ಯವಲ್ಲವೆಂದು (ಗೌಣವೆಂದು) ಭಾವಿಸಲಾಗದು; ಮುಖ್ಯಸದೃಶವೆಂದೇ ತಿಳಿಯಬೇಕು. ಹೇಗೆಂದರೆ—"**ಕಾಠಿನ್ಯವಾನ್ ಯೋ ಬಿಭರ್ತಿ**" (ಪರಮಾತ್ಮನು ಜ್ಞಾನಾನಂದಸ್ವರೂಪನಾದುದರಿಂದ ನಿರವಯವನಾಗಿ ಇದ್ದರೂ ತನ್ನ ಸರ್ವಾಧಾರತೆಯನ್ನು ನಿರ್ವಹಿಸಿಕೊಳ್ಳುವುದಕ್ಕಾಗಿ ಕಾಠಿನ್ಯಗುಣವನ್ನು ತಾನೇ ಪಡೆದು ಸ್ವವ್ಯತಿರಿಕ್ತಸಮಸ್ತವಸ್ತುಗಳನ್ನೂ ಧರಿಸುತ್ತಿರುವನು.) ಎಂದು ವಿಷ್ಣುಪುರಾಣದಲ್ಲಿ ವಚನವಿರುವುದು. "ನಿರವಯವನಾದ ಪರಮಾತ್ಮನಿಗೆ ಕಾಠಿನ್ಯಗುಣಸಂಬಂಧವು ಸಾಕ್ಷಾತ್ತಾಗಿ ಸಂಭವಿಸತಕ್ಕುದಲ್ಲ; ಆದರೂ ಅದು ಪರಮಾತ್ಮಸ್ವರೂಪಕ್ಕೇ ವಿಶೇಷಣವಾಗಿ ಇಲ್ಲಿ ಮುಖ್ಯರೀತಿಯಲ್ಲೇ ಉಪದೇಶಿಸಲ್ಪಟ್ಟಿರುವುದು. ಕಾಠಿನ್ಯವೆಂಬುದು ಪೃಥಿವಿಯಲ್ಲಿ ಇರುವ ಗುಣವಿಶೇಷವು. ಜಲಕ್ಕೆ ಇಂಥ ಗುಣವಿಲ್ಲದುದರಿಂದಲೇ ಪೃಥಿವಿಯಂತೆ ಧಾರಣಸಾಮರ್ಥ್ಯವಿಲ್ಲ. ಪೃಥಿವಿಗೇ ಇಂಥ ಗುಣ

ವಿರುವುದರಿಂದ ಪೃಥಿವಿಯೇ ಧಾರಣಸಾಮರ್ಥ್ಯವನ್ನು ಪಡೆದಿರುವುದು. ಹೀಗೆ ಪೃಥಿವಿಯ ಕಡೆಯಿಂದ ನಡೆದುಬರುತ್ತಿರುವ ಧಾರಣವನ್ನು ಪೃಥಿವಿಯೇ ಸ್ವತಂತ್ರವಾಗಿ ನಡಸುತ್ತಿರುವುದೆಂದು ಭಾವಿಸಲಾಗದು; ಪೃಥಿವಿ ಪರಮಾತ್ಮನಿಗೆ ಅಪೃಥಕ್ಸಿದ್ಧವಿಶೇಷಣವಾಗಿ ಪರಮಾತ್ಮನಿಗೆ ಶರೀರವೆನಿಸಿಕೊಂಡು ಅವನಿಗೆ ಪರತಂತ್ರವಾಗಿಯೇ ಇರುವುದರಿಂದ ಪೃಥಿವಿಯಲ್ಲಿ ಇರುವ ಧಾರಣಸಾಮರ್ಥ್ಯವೂ, ಅದಕ್ಕೆ ಕಾರಣವಾಗಿ ಇರುವ ಕಾಠಿನ್ಯಗುಣವೂ ಪರಮಾತ್ಮನದೇ ಆಗಿ ಇರುವುವು'' ಎಂಬುದು ವಿಷ್ಣುಪುರಾಣವಚನದ ತಾತ್ಪರ್ಯವಾಗಿ ಇರುವುದು. ಹೀಗೆ ಅಪೃಥಕ್ಸಿದ್ಧವಿಶೇಷಣವಾದ ಪೃಥಿವಿಯೆಂಬ ಶರೀರದಲ್ಲಿ ಇರುವ ಕಾಠಿನ್ಯಗುಣವು ಶರೀರಿಯಾದ ಪರಮಾತ್ಮನಿಗೇ ಉಂಟೆಂದು ತೋರಿಸುತ್ತಿರುವ ಈ ವ್ಯವಹಾರವು ಮುಖ್ಯಸದೃಶವಾದಂತೆ ಆತ್ಮನಿಗೂ ಶರೀರಗತವಾದ ಕ್ರಿಯೆಯೂ, ಅದರ ಫಲವಾದ ಸಂಯೋಗವಿಭಾಗಗಳೂ ಉಂಟೆಂಬ ವ್ಯವಹಾರವು ಮುಖ್ಯಸದೃಶವಾಗುವುದರಲ್ಲಿ ತಡೆಯಿಲ್ಲ. ಆದ ಕಾರಣ ಕ್ರಿಯಾವಿಶಿಷ್ಟಶರೀರವಿಶಿಷ್ಟತ್ವವೇ ಆತ್ಮನಲ್ಲಿ ಕ್ರಿಯಾವಿಶಿಷ್ಟತ್ವವ್ಯವಹಾರಕ್ಕೆ ಮೂಲಾಧಾರವಾಗಿ ಇರುವುದು. "ತದವಸ್ಥತದ್ವಿಶಿಷ್ಟತ್ವಂ" ಎಂದು ಪರಮಾತ್ಮನಲ್ಲಿ ಶಾಸ್ತ್ರಕಾರರು ತೋರಿಸಿರುವ ನ್ಯಾಯವನ್ನು ಜೀವಾತ್ಮನಲ್ಲಿಯೂ ಅಂಗೀಕರಿಸುವೆವಾದರೆ ಬಾಧಕವೇನೂ ಇಲ್ಲವಷ್ಟೆ? ಹೀಗೆ ಉಕ್ತರೀತಿಯಲ್ಲಿ ಗಮನಾದಿಕ್ರಿಯಾಶ್ರಯತ್ವವು ಆತ್ಮನಿಗೆ ಸಂಭವಿಸಬಹುದಾದುದರಿಂದ ಇವನಿಗೆ ಅಣುತ್ವವು ಸುಸ್ಥಿರವಾಗಿ ಇರುವುದು.

## ೪೯೦ ಜೀವಸ್ಯಾಣುತ್ವೇಽಪಿ ಸರ್ವಗತತ್ವವ್ಯವಹಾರಸ್ಯ ತ್ರೇಧಾ ಉಪಪತ್ತಿಪ್ರದರ್ಶನಂ

"ಓಹೋ! ಜೀವನಿಗೆ ಅಣುತ್ವವೇ ಸ್ವಾಭಾವಿಕವೋ? ಹಾಗಾದರೆ—

"ನಿತ್ಯಸ್ಸರ್ವಗತಃ ಸ್ಥಾಣುಸ್ತದ್ವಜ್ಜೀವೋ ನಭೋಽಪಿ ಚ"
"ನಿತ್ಯಸ್ಸರ್ವಗತಃ ಸ್ಥಾಣುರಚಲೋಽಯಂ ಸನಾತನಃ"
"ಯಥಾ ಕ್ಷೇತ್ರಜ್ಞಶಕ್ತಿಸ್ಸಾ ವೇಷ್ಟಿತಾ ನೃಪ ಸರ್ವಗಾ"

ಎಂಬುವೇ ಮೊದಲಾದ ಶ್ರುತಿಸ್ಮೃತಿಪ್ರಮಾಣಗಳಲ್ಲಿ ಸರ್ವಗತತ್ವವ್ಯವಹಾರವು ಹೇಗೆ ಸಂಗತವಾದೀತು?'' ಎಂಬುದಾಗಿ ಆಶಂಕಿಸಲಾಗದು; ಅಗ್ನಿವ್ಯಕ್ತಿಗಳೂ ವಾಯುವ್ಯಕ್ತಿಗಳೂ ಹೇಗೆ ಲೋಕದಲ್ಲೆಲ್ಲಾ ವ್ಯಾಪಿಸಿ ಇರುವುವೋ, ಹಾಗೆಯೇ ಅಸಂಖ್ಯಾತಗಳಾದ ಜೀವವ್ಯಕ್ತಿಗಳು ಎಲ್ಲೆಲ್ಲಿಯೂ ವ್ಯಾಪಿಸಿ ಇರುವುದರಿಂದ ಸರ್ವಗತತ್ವವ್ಯವಹಾರವು ಸಂಗತವಾಗಬಹುದು.

ಅಥವಾ ಪ್ರಕೃತಿಸಂಬಂಧದಿಂದ ಏನಿರ್ಮುಕ್ತನಾದಮೇಲೆ ಪರಿಶುದ್ಧನಾದ ಜೀವನ ಧರ್ಮಭೂತಜ್ಞಾನವು ಸರ್ವವ್ಯಾಪಕವಾಗಿ ಇರುವುದರಿಂದ ಸದ್ವಾರಕ ವಾಗಿ ಸರ್ವಗತತ್ವವ್ಯವಹಾರವು ಸಂಗತವಾಗಬಹುದು.

ಅಥವಾ—ಅತಿಸೂಕ್ಷ್ಮವಾದ ವಸ್ತುವಿನಲ್ಲಿಯೂ ಪ್ರವೇಶಿಸಲು ಯೋಗ್ಯ ವಾದ ಜೀವಸ್ವರೂಪಕ್ಕೆ ಸರ್ವವಸ್ತುಗಮನಾರ್ಹತ್ವವಿರುವುದರಿಂದ ಸರ್ವಗತತ್ವ ವ್ಯವಹಾರವು ಸಂಗತವಾಗಬಹುದು.

ಹೀಗೆ ಉಕ್ತವಾದ ಮೂರು ರೀತಿಗಳೊಳಗೆ ಆವುದಾದರೊಂದು ರೀತಿ ಯಲ್ಲಿ ಸರ್ವಗತತ್ವವ್ಯವಹಾರಕ್ಕೆ ಅನ್ಯಥೋಪಪತ್ತಿ ಇರುವುದರಿಂದ ಅನನ್ಯಥಾ ಸಿದ್ಧವಾದ ಪ್ರಮಾಣಗಳಿಂದ ಅವಗತವಾಗಿ ಇರುವ ಅಣುತ್ವವನ್ನೇ ಸೂತ್ರಕಾರರು **“ಉತ್ಕ್ರಾಂತಿಗತ್ಯಾಗತೀನಾಂ”** ಎಂಬುವೇ ಮೊದಲಾದ ಅನೇಕಸೂತ್ರ ಗಳಲ್ಲಿ ಸ್ಪಷ್ಟವಾಗಿ ತೋರಿಸಿರುವರು.

## ೪೯೧ ಏಕದೇಶಸ್ಥಸ್ಯಾಪಿ ಜೀವಸ್ಯ ಧರ್ಮಭೂತಜ್ಞಾನದ್ವಾರಾ ಯಾವಚ್ಛರೀರದೇಶೇ ಕಾರ್ಯಕಾರಿತ್ವಂ

ಅಣುವಾದ ಜೀವನು ಶರೀರದ ಏಕದೇಶದಲ್ಲಿ ಇದ್ದರೂ ತನ್ನ ಧರ್ಮಭೂತ ಜ್ಞಾನದಮೂಲಕ ಶರೀರದ ಯಾವದ್ಭಾಗವನ್ನೂ ಆಕ್ರಮಿಸಿ ಅಲ್ಲಲ್ಲಿ ಆ ಆ ಕೆಲಸ ಗಳನ್ನು ನಡಸಬಲ್ಲನು. ಏಕಕಾಲದಲ್ಲಿ ಅನೇಕಶರೀರಗಳನ್ನು ಪರಿಗ್ರಹಿಸುವ ಸಾಮ ರ್ಥ್ಯವುಳ್ಳ ಸೌಭರ್ಯಾದಿಮಹರ್ಷಿಗಳ ಆತ್ಮಸ್ವರೂಪವು ಯಾವುದೋ ಒಂದು ಶರೀರದಲ್ಲಿ ಇದ್ದರೂ ಅವರ ಧರ್ಮಭೂತಜ್ಞಾನವು ಸರ್ವಶರೀರಗಳಲ್ಲಿಯೂ ವ್ಯಾಪಿಸಿ ಇರುವುದರಿಂದ ಆದರ ಮೂಲಕವಾಗಿ ಆ ಶರೀರಗಳಲ್ಲಿ ಕೆಲಸಗಳನ್ನು ನಡಸಲು ಯಾವ ತೊಂದರೆಯೂ ಇರುವುದಿಲ್ಲ. ಆದಕಾರಣ ಆತ್ಮಸ್ವರೂಪಕ್ಕೆ ವಿಭುತ್ವವನ್ನು ಕಲ್ಪಿಸಬೇಕಾದುದಿಲ್ಲ.

## ೪೯೨ ಉಕ್ತಾರ್ಥೇ ಸೂತ್ರಕಾರಸಮ್ಮತಿಃ

ಈ ಅಭಿಪ್ರಾಯಗಳನ್ನೆಲ್ಲಾ ಮನಸ್ಸಿನಲ್ಲಿ ಇಟ್ಟುಕೊಂಡು ಸೂತ್ರಕಾರರು “ಗುಣಾದ್ವಾಽಽಲೋಕವತ್” “ಪ್ರದೀಪವದಾವೇಶಸ್ತಥಾ ಹಿ ದರ್ಶಯತಿ” ಇತ್ಯಾದಿಸೂತ್ರಗಳನ್ನು ಅನುಗ್ರಹಿಸಿರುವರು.—“ಜೀವನು ತನ್ನ ಗುಣದಿಂದ (ಧರ್ಮಭೂತಜ್ಞಾನದಿಂದ) ಸಕಲದೇಹವನ್ನೂ ವ್ಯಾಪಿಸಿಕೊಂಡಿರುವನು; ಮಣಿ ದ್ಯುಮಣಿ ಮೊದಲಾದ ಪದಾರ್ಥಗಳು ಏಕಪ್ರದೇಶದಲ್ಲಿ ಇದ್ದರೂ ಅವುಗಳ ಪ್ರಕಾಶವು ಅನೇಕಪ್ರದೇಶಗಳನ್ನು ವ್ಯಾಪಿಸಿಕೊಂಡು ಇರುವಂತೆ ಹೃದಯ

ಪ್ರದೇಶದಲ್ಲಿ ಇರುವ ಆತ್ಮನ ಜ್ಞಾನವು ಶರೀರದ ಸರ್ವಭಾಗಗಳನ್ನೂ ವ್ಯಾಪಿಸಿ ಕೊಂಡಿರುವುದು." ಎಂದು ಪ್ರಥಮಸೂತ್ರಾರ್ಥವು.

"ಏಕಪ್ರದೇಶದಲ್ಲಿ ಇರುವ ದೀಪವು ತನ್ನ ಪ್ರಭೆಯಿಂದ ಪ್ರದೇಶಾಂತರ ವನ್ನು ಆಕ್ರಮಿಸುವಂತೆ ಏಕಪ್ರದೇಶದಲ್ಲಿ ಇರುವ ಆತ್ಮನು ಪ್ರಭಾಸ್ಥಾನೀಯ ವಾದ ತನ್ನ ಜ್ಞಾನದಿಂದ ಏಕಕಾಲದಲ್ಲಿ ಅನೇಕಶರೀರಗಳನ್ನು ಆಕ್ರಮಿಸಬಹುದು. ಇದೇ ಅರ್ಥವನ್ನು "ವಾಲಾಗ್ರಶತಭಾಗಸ್ಯ" ಇತ್ಯಾದಿಶ್ರುತಿಯೂ ತೋರಿ ಸುತ್ತಿರುವುದು." ಎಂದು ದ್ವಿತೀಯಸೂತ್ರಾರ್ಥವು.

## ೪೯೩. ಏವಮಾತ್ಮನೋಽಣುತ್ವಸ್ಥಾಪನಾದೇವ ದೇಹಸಮಾನಪರಿಮಾಣತ್ವನಿರಾಕರಣಸಿದ್ಧಿಃ.

ಹೀಗೆ ಆತ್ಮನಿಗೆ ಅಣುತ್ವವನ್ನು ಸ್ಥಾಪಿಸಿದುದರಿಂದಲೇ—"ಸ್ಥೂಲೋಽಹಂ, ಕೃಶೋಽಹಂ" ಎಂಬ ಪ್ರತೀತಿಯನ್ನು ಅವಲಂಬಿಸಿ ದೇಹಾತ್ಮಾಭಿಮಾನಿಗಳಾಗಿ ಇರುವ ಜೈನರು ಪ್ರಲಪಿಸುತ್ತಿರುವ ಶರೀರಸಮಪರಿಮಾಣತ್ವವೂ ನಿರಾಕರಿಸಲ್ಪಟ್ಟುದಾಗಿ ಇರುವುದು. "ಸ್ಥೂಲೋಽಹಂ, ಕೃಶೋಽಹಂ" ಎಂಬ ಭ್ರಾಂತಿಪ್ರತೀತಿಯನ್ನು ಪ್ರಮಾಣವಾಗಿ ಅವಲಂಬಿಸಿ ಆತ್ಮನಿಗೆ ಸ್ಥೂಲತ್ವಾದಿ ಧರ್ಮಗಳನ್ನು ಹೇಳುವುದಾದರೆ—"ಗೌರೋಽಹಂ, ನೀಲೋಽಹಂ" ಇತ್ಯಾದಿ ಪ್ರತೀತಿಗಳಿಂದ ಶುಕ್ಲತ್ವಾದಿಧರ್ಮಗಳನ್ನೂ ಆತ್ಮನಿಗೆ ಏತಕ್ಕೆ ಹೇಳಬಾರದು? ಸೂತ್ರಕಾರರೂ ಸಹ ಈ ಮತವನ್ನು ಮೂಲಸಹಿತವಾಗಿ ಕಿತ್ತುಹಾಕಿರುವರು.

## ೪೯೪. ಈದೃಶಸ್ಯಾತ್ಮನಃ ಪ್ರತಿಶರೀರಂ ಭಿನ್ನತ್ವಸಮರ್ಥನಂ. ॥೯॥

ಇಂಥ ಜೀವಾತ್ಮನು ಸೌಭರಿಮೊದಲಾದ ಕೆಲವು ಯೋಗಿಗಳ ಶರೀರವನ್ನು ಬಿಟ್ಟು ಇತರ ಎಲ್ಲಾ ಶರೀರಗಳಲ್ಲಿಯೂ ಒಂದೊಂದು ಶರೀರದಲ್ಲಿ ಒಬ್ಬೊಬ್ಬ ಆತ್ಮನಂತೆ ಬಹುವಾಗಿ ಇರುವನು. ಹಾಗಿಲ್ಲದೆ ಸರ್ವಶರೀರಗಳಲ್ಲಿಯೂ ಒಬ್ಬನೇ ಇರುವಪಕ್ಷದಲ್ಲಿ ಒಬ್ಬನಿಗೆ ಘಟಜ್ಞಾನವುಂಟಾದರೆ ಎಲ್ಲರಿಗೂ ಘಟಜ್ಞಾನ ವುಂಟಾಗಬೇಕು; ಪೂರ್ವಾನುಭೂತವಾದ ಪದಾರ್ಥದ ಸ್ಮರಣೆ ಒಬ್ಬನಿಗೆ ಉಂಟಾದರೆ ಎಲ್ಲರಿಗೂ ಉಂಟಾಗಬೇಕು; ಒಬ್ಬನು ಕುರುಡನಾದರೆ ಎಲ್ಲರೂ ಕುರುಡ ರಾಗಿ ಇರಬೇಕು; ಒಬ್ಬನು ಸುಖವನ್ನಾಗಲಿ ದುಃಖವನ್ನಾಗಲಿ ಅನುಭವಿಸುತ್ತಿದ್ದರೆ ಎಲ್ಲರೂ ಅದನ್ನೇ ಅನುಭವಿಸಬೇಕು, ಒಬ್ಬನು ಹುಟ್ಟಿದರೆ ಎಲ್ಲರೂ ಆಗಲೇ ಹುಟ್ಟಬೇಕು; ಒಬ್ಬನು ಸತ್ತರೆ ಆಗಲೇ ಎಲ್ಲರೂ ಸಾಯಬೇಕು; ಒಬ್ಬನು ಒಂದು ಕೆಲಸಕ್ಕಾಗಿ ಪ್ರಯತ್ನಪಟ್ಟರೆ ಎಲ್ಲರೂ ಆಗಲೇ ಪ್ರಯತ್ನಪಡಬೇಕು; ಒಬ್ಬನು

ಸತ್ತ್ವಗುಣನಿಷ್ಠನಾಗಿ ಇದ್ದರೆ ಎಲ್ಲರೂ ಸತ್ತ್ವಗುಣನಿಷ್ಠರಾಗಿ ಇರಬೇಕಾದುದ ರಿಂದ ಸನಕಸನಂದನಾದಿಗಳೆಂಬ ಕೆಲವರುಮಾತ್ರ ಸತ್ತ್ವನಿಷ್ಠರಾಗಿ ಇರ ಕೂಡದು; ಒಬ್ಬನು ರಜೋಗುಣನಿಷ್ಠನಾದರೆ ಎಲ್ಲರೂ ರಜೋಗುಣನಿಷ್ಠರಾಗಬೇ ಕಾದುದರಿಂದ ಮನುಷ್ಯರುಮಾತ್ರ ರಜೋನಿಷ್ಠರಾಗಿ ಇರಕೂಡದು; ಒಬ್ಬನು ತಮೋನಿಷ್ಠನಾದರೆ ಎಲ್ಲರೂ ತಮೋಗುಣನಿಷ್ಠರಾಗಬೇಕಾದುದರಿಂದ ತಿರ್ಯಗ್ಜಾತಿ ಮಾತ್ರವೇ ತಮೋಗುಣನಿಷ್ಠವಾಗಿ ಇರಕೂಡದು; ಇವೇ ಮೊದಲಾದ ಯುಕ್ತಿ ಗಳಿಂದ ಆತ್ಮಬಹುತ್ವವು ವ್ಯವಸ್ಥಿತವಾಗಿ ಇರುವುದು. ಇದೇ ಅರ್ಥವನ್ನು ನ್ಯಾಯ ಸೂತ್ರಕಾರರೂ "ನಾನಾಽಽತ್ಮಾನೋ ವ್ಯವಸ್ಥಾತಃ" ಎಂಬ ಸೂತ್ರದಿಂದ ತೋರಿಸಿರುವರು. ಸಾಂಖ್ಯಶಾಸ್ತ್ರಪ್ರವರ್ತಕರೂ ಸಹ—

**"ಜನನಮರಣಕರಣಾನಾಂ ಪ್ರತಿನಿಯಮಾದಯುಗಪತ್ಪ್ರವೃತ್ತೇಶ್ಚ**
**ಪುರುಷಬಹುತ್ವಂ ಸಿದ್ಧಂ ತ್ರೈಗುಣ್ಯವಿಪರ್ಯಯಾಚ್ಚೈವ ॥**

ಎಂಬ ಕಾರಿಕೆಯಿಂದ ಇದೇ ಅರ್ಥವನ್ನು ತೋರಿಸಿರುವರು.

## ೪೯೫ ಏವಂ ಜೀವಬಹುತ್ವೇ ಸಿದ್ಧೇ ಜೀವಾದ್ವೈತಬೋಧಕ ಶಾಸ್ತ್ರಾಣಾಂ ಪ್ರಕಾರಾದ್ವೈತಪರತ್ವಂ

ಪೂಜ್ಯರೇ! ಆತ್ಮನಿಗೆ ಬಹುತ್ವವನ್ನು ಒಪ್ಪಿಕೊಳ್ಳುವುದಾದರೆ ಏಕತ್ವವನ್ನು ಬೋಧಿಸುವ—

**"ಯದ್ಯನ್ಯೋಽಸ್ತಿ ಪರಃ ಕೋಽಪಿ ಮತ್ತಃ ಪಾರ್ಥಿವಸತ್ತಮ ॥**
**ತದೈಷೋಽಹಮಯಂ ಚಾನ್ಯೋ ವಕ್ತುಮೇವಮಪೀಷ್ಯತೇ।"**
**"ತಸ್ಯಾತ್ಮಪರದೇಹೇಷು ಸತೋಽಪ್ಯೇಕಮಯಂ ಹಿ ಯತ್"**

ಇತ್ಯಾದಿವಚನಗಳ ಗತಿಯೇನು? ಪ್ರಕಾರೈಕ್ಯವೇ ಗತಿ. (ಪ್ರಕಾರ—ವಿಶೇ ಷಣ) ಪಿಪೀಲಿಕಾಶರೀರದಲ್ಲಿ ಇರುವ ಜೀವನು ಎಂಥ ಪ್ರಕಾರದೊಡನೆ ಎಂದರೆ ಅಣುತ್ವ, ಜ್ಞಾನಸ್ವರೂಪತ್ವ, ಜ್ಞಾನಾಶ್ರಯತ್ವ, ಆಧೇಯತ್ವ, ವಿಧೇಯತ್ವ, ಶೇಷತ್ವ, ಪ್ರತ್ಯಕ್ತ್ವ, ಅನುಕೂಲತ್ವ, ಮುಂತಾದ ಸ್ವಭಾವವಿಶೇಷಗಳೊಡನೆ ಕೂಡಿ ಇರುವನೋ, ತದಿತರವಾದ ಸಮಸ್ತಶರೀರಗಳಲ್ಲಿಯೂ ಇರುವ ಆತ್ಮಸ್ವ ರೂಪವೂ ಅಂಥ ಸ್ವಭಾವಗಳೊಳಗೆ ಸ್ವಲ್ಪವೂ ಹೆಚ್ಚುಕಡಮೆಯಿಲ್ಲದುದಾಗಿ ಇರು ವುದರಿಂದ ಅತ್ಯಂತಸಾದೃಶ್ಯವಿರುವುದಾದಪ್ರಯುಕ್ತ ಏಕತ್ವವ್ಯವಹಾರವೂ ನಿರರ್ಗಳವಾಗಿ ಸಂಘಟಿಸಬಹುದು. ಆತ್ಯಂತಿಕವಾದ ಸ್ವಭಾವಸಾದೃಶ್ಯವಿದ್ದರೆ ವ್ಯಕ್ತಿಭೇದವಿದ್ದರೂ ಐಕ್ಯವ್ಯವಹಾರವು—"ಈ ಬತ್ತವೂ ಆ ಬತ್ತವೂ ಒಂದೇ"

ಎಂಬುದಾಗಿ ಲೋಕದಲ್ಲಿ ಅಬಾಧಿತವಾಗಿ ಇರುವುದು. "ರಾಮಸುಗ್ರೀವಯೋ ರೈಕ್ಯಂ" ಎಂಬುದಾಗಿ ವಾಲ್ಮೀಕಿಮಹರ್ಷಿಯೂ ಈ ಅರ್ಥವನ್ನು ಸೂಚಿಸಿರುವರು.

## ೪೯೬. ವ್ಯಕ್ತಿಭೇದೇ ಸತ್ಯಪ್ಯೈಕ್ಯವ್ಯವಹಾರೇ ನಿಯಾಮಕಾಃ ಕಾರಣವಿಶೇಷಾಃ.

ಆದರೆ ಐಕ್ಯವ್ಯವಹಾರಕ್ಕೆ ನಿಯಾಮಕಗಳಾದ ಕಾರಣಗಳು ಯಾವುವು? ಅಂಥ ಕಾರಣಗಳನ್ನು ಸಂಗ್ರಹವಾಗಿ ಅಭಿಯುಕ್ತರು ತೋರಿಸಿರುವರು—

"ಅವಿರೋಧಾನ್ತರಂಗತ್ವಜಾತಿಭೋಗಾದ್ಯಭೇದತಃ |
ಐಕ್ಯೋಕ್ತಿರಪೃಥಕ್ಸಿದ್ಧೇರ್ದೇಶಕಾಲದಶಾದಿಭಿಃ" ||

೧. ಪರಸ್ಪರವಿರೋಧವನ್ನು ಬಿಟ್ಟು ಇಬ್ಬರು ಒಂದಾಗಿಕೂಡಿದರೆ ಆ ಎರಡು ಪಂಗಡದವರಿಗೂ ಐಕ್ಯವ್ಯವಹಾರವು ರಾಜರುಗಳಲ್ಲಿ ದೃಷ್ಟವಾಗಿ ಇರುವುದರಿಂದ ಅವಿರೋಧವು ಐಕ್ಯವ್ಯವಹಾರಕ್ಕೆ ನಿಯಾಮಕವಾಗಿ ಇರುವುದು.

೨. ಇಬ್ಬರಿಗೆ ಪರಸ್ಪರ ಅಂತರಂಗತ್ವವಿದ್ದರೆ ಐಕ್ಯವ್ಯವಹಾರವುಂಟಾಗುವುದೆಂಬುದು ರಾಮಸುಗ್ರೀವರಲ್ಲಿ ದೃಷ್ಟವಾಗಿ ಇರುವುದರಿಂದ ಅಂತರಂಗತ್ವವೂ ಐಕ್ಯವ್ಯವಹಾರಕ್ಕೆ ನಿಯಾಮಕವಾಗಿ ಇರುವುದು.

೩. ಎರಡರ ಜಾತಿಯೂ ಒಂದಾಗಿದ್ದಪಕ್ಷದಲ್ಲಿ ಐಕ್ಯವ್ಯವಹಾರವುಂಟೆಂಬುದು "ಏಕೋ ವ್ರೀಹಿಃ" ಎಂಬುದಾಗಿ ವ್ರೀಹ್ಯಾದಿರಾಶಿಯಲ್ಲಿ ದೃಷ್ಟವಾಗಿ ಇರುವುದರಿಂದ ಜಾತ್ಯೈಕ್ಯವೂ ಐಕ್ಯವ್ಯವಹಾರಕ್ಕೆ ನಿಯಾಮಕವಾಗಿ ಇರುವುದು.

೪. ಭೋಗವು ಇಬ್ಬರಿಗೆ ಸಮಾನವಾಗಿ ಇದ್ದರೆ ಐಕ್ಯವ್ಯವಹಾರವುಂಟಾಗುವುದೆಂಬುದು "ಬ್ರಹ್ಮ ವೇದ ಬ್ರಹ್ಮೈವ ಭವತಿ" ಇತ್ಯಾದಿಸ್ಥಳಗಳಲ್ಲಿ ದೃಷ್ಟವಾಗಿ ಇರುವುದರಿಂದ ಭೋಗೈಕ್ಯವೂ ಐಕ್ಯವ್ಯವಹಾರಕ್ಕೆ ನಿಯಾಮಕವಾಗಿ ಇರುವುದು.

೫. ಸರ್ವದೇಶ-ಸರ್ವಕಾಲ-ಸರ್ವಾವಸ್ಥೆಗಳಲ್ಲಿಯೂ ಎರಡು ಪದಾರ್ಥಗಳಿಗೆ ಅಪೃಥಕ್ಸಿದ್ಧಿ ಇದ್ದರೆ ಐಕ್ಯವ್ಯವಹಾರವುಂಟಾಗುವುದೆಂಬುದು "ಸರ್ವಂ ಖಲ್ವಿದಂ ಬ್ರಹ್ಮ" ಇತ್ಯಾದಿಸ್ಥಳಗಳಲ್ಲಿ ದೃಷ್ಟವಾಗಿ ಇರುವುದರಿಂದ ಅಪೃಥಕ್ಸಿದ್ಧಿಯೂ ಐಕ್ಯವ್ಯವಹಾರಕ್ಕೆ ನಿಯಾಮಕವಾಗಿ ಇರುವುದು. ಹೀಗೆ ಇನ್ನೂ ಕಾರಣಾಂತರಗಳನ್ನು ಊಹಿಸಿಕೊಳ್ಳಬಹುದು.

## ೪೯೭. ಬದ್ಧಮುಕ್ತೋಭಯಾವಸ್ಥಾಯಾಂ ಸ್ವರೂಪತಃ ಮುಕ್ತೌ ಸ್ವರೂಪತಸ್ಸ್ವಭಾವತಶ್ಚ ಸರ್ವಜೀವಾನಾ ಮತ್ಯಂತಸಾದೃಶ್ಯಂ

ಸಕಲಜೀವರಿಗೂ ಅತ್ಯಂತಸಾದೃಶ್ಯವಾದರೆ—ಬದ್ಧಾವಸ್ಥೆಯಲ್ಲಿಯೂ ಮು ಕ್ತಾವಸ್ಥೆಯಲ್ಲಿಯೂ ಸ್ವರೂಪವು ಅಣುವಾದುದರಿಂದ ಸ್ವರೂಪದಿಂದಲೂ, ಮುಕ್ತಾವಸ್ಥೆಯಲ್ಲಿ ವಿಭುವಾದ ಧರ್ಮಭೂತಜ್ಞಾನದಿಂದಲೂ ಉಂಟೆಂಬುದು ಶ್ರುತಿ, ಸ್ಮೃತಿ, ಮೊದಲಾದ ಪ್ರಮಾಣಗಳಿಂದ ಸಿದ್ಧವಾಗಿ ಇರುವುದು. ದೇವ, ಮನುಷ್ಯ, ತಿರ್ಯಕ್, ಸ್ಥಾವರ ಇತ್ಯಾದಿವೈಷಮ್ಯಕ್ಕೆ ಕಾರಣವಾದ ಕರ್ಮಸಂಬಂ ಧವು ಆತ್ಯಂತಿಕವಾಗಿ ನಾಶಹೊಂದಿದ ಮೇಲೆ ಸಕಲಜೀವರಿಗೂ ಸ್ವರೂಪದಿಂ ದಲೂ ಸ್ವಭಾವದಿಂದಲೂ ಸಾಮ್ಯವು ತಪ್ಪಲಾರದಷ್ಟೆ ?

## ೪೯೮ ಜೀವಭೇದನಿಷೇಧಕವಚನಾನಾಂ ದೇವತ್ವಮನುಷ್ಯ ತ್ವಾದಿಭೇದನಿಷೇಧಕತ್ವಮೇವ ನ ತು ಜೀವವ್ಯಕ್ತಿ ಭೇದನಿಷೇಧಕತ್ವಂ.

ಆದರೆ ಜೀವಭೇದವನ್ನು ಪ್ರತಿಷೇಧಿಸುವ ವಚನಗಳ ಗತಿಯೇನು ? ದೇವ ತ್ವಮನುಷ್ಯತ್ವಾದಿಭೇದಗಳನ್ನು ನಿಷೇಧಿಸುವಿಕೆಯೇ ಗತಿ. ಜೀವವ್ಯಕ್ತಿಭೇದವು ಪ್ರಮಾಣಸಿದ್ಧವಾಗಿ ಇರುವಕಾರಣ ಪ್ರಬಲವಾದುದರಿಂದ ಇಂಥ ಭೇದವನ್ನು ಆ ವಚನಗಳು ಪ್ರತಿಷೇಧಿಸಲಾರವು. “ ಮಾ ಹಿಂಸ್ಯಾತ್ ” ಎಂಬ ಹಿಂಸಾಪ್ರತಿ ಷೇಧಶಾಸ್ತ್ರವು ಅಗ್ನೀಷೋಮೀಯಹಿಂಸೆಯನ್ನು ಪ್ರತಿಷೇಧಿಸಲಾರದಷ್ಟೆ ?

ದೇವತ್ವಮನುಷ್ಯತ್ವಾದಿಭೇದಗಳು “ ದೇವೋಽಹಂ ಮನುಷ್ಯೋಽಹಂ ” ಎಂಬುದಾಗಿ ದೇಹಾತ್ಮಾಭಿಮಾನದ ಮೂಲಕವಾಗಿ ಬರುವುವಾದಕಾರಣ ದುರ್ಬ ಲಗಳಾದುದರಿಂದ ಇಂಥ ಭೇದಗಳನ್ನೇ ಆ ವಚನಗಳು ಪ್ರತಿಷೇಧಿಸುವುವು. “ ಮಾ ಹಿಂಸ್ಯಾತ್ ” ಎಂಬ ಹಿಂಸಾಪ್ರತಿಷೇಧಶಾಸ್ತ್ರವು ರಾಗಪ್ರಾಪ್ತವಾಗಿ ದುರ್ಬಲವಾಗಿರುವ ಲೌಕಿಕಹಿಂಸೆಯನ್ನೇ ಪ್ರತಿಷೇಧಿಸುವುದಷ್ಟೆ ?

## ೪೯೯. ಭೇದಸಾಮಾನ್ಯನಿಷೇಧಕಶಾಸ್ತ್ರಸ್ಯ ಕಂಠೋಕ್ತಭೇದ ವಿಶೇಷನಿಷೇಧಕಶಾಸ್ತ್ರೇಣೈಕವಾಕ್ಯತ್ವಂ

“ ಚತುರ್ವಿಧೋಽಪಿ ಭೇದೋಽಯಂ ಮಿಥ್ಯಾಜ್ಞಾನನಿಬಂಧನಃ ‖
ದೇವಾದಿಭೇದೇಽಪಧ್ವಸ್ತೇ ನಾಸ್ತ್ಯೇವಾವರಣೋ ಹಿ ಸಃ | ”
“ ನಾಯಂ ದೇವೋ ನ ಗಂಧರ್ವೋ ನ ತಿರ್ಯಕ್ ಸ್ಥಾವರೋಽಪಿ ವಾ”

ಎಂಬುದಾಗಿ ಕಂಠೋಕ್ತವಾಗಿರುವ ಭೇದವಿಶೇಷನಿಷೇಧವಾಕ್ಯಗಳೊಡನೆ ಭೇದ ಸಾಮಾನ್ಯನಿಷೇಧವಾಕ್ಯಗಳಿಗೆ ಐಕಕಂಠ್ಯವನ್ನು ಹೇಳುವುದು ನ್ಯಾಯಪಕ್ಷಪಾತಿಗಳಿಗೆ ಉಚಿತವಲ್ಲವೆ ?

## ೫೦೦. ನಿರ್ವಿಶೇಷೈಕಾತ್ಮವಾದಿನಾಂ ಬದ್ಧಮುಕ್ತವ್ಯವಸ್ಥಾನುಪಪತ್ತಿಃ

ಹೀಗೆ ಪ್ರಾಮಾಣಿಕವಾಗಿ ತೋರಿಸಿದ ಆತ್ಮವ್ಯಕ್ತಿಭೇದವನ್ನು ಅಂಗೀಕರಿಸದೆ ನಿರ್ವಿಶೇಷೈಕಾತ್ಮವಾದವನ್ನು ಸ್ವಗೋಷ್ಠಿಯಲ್ಲಿ ಹರಡುತ್ತಿರುವ ಪ್ರಚ್ಛನ್ನಬೌದ್ಧರ ಮತದಲ್ಲಿ ಸಂಸಾರಾವಸ್ಥೆಗೂ, ಮೋಕ್ಷಾವಸ್ಥೆಗೂ ತಾರತಮ್ಯವಿಲ್ಲದೆ ಹೋಗುವುದು ; ಎಂದರೆ ಮೋಕ್ಷಸ್ವರೂಪವು ಇಂಥದೆಂದು ನಿರೂಪಿಸಿ ತೋರಿಸುವುದು ಅವರ ಮತದಲ್ಲಿ ಶಕ್ಯವಲ್ಲ ;—ಬಂಧಾವಸ್ಥೆಯಲ್ಲಿಯೂ ಮೋಕ್ಷವಿರಬಹುದು ; ಮುಕ್ತಾವಸ್ಥೆಯಲ್ಲಿಯೂ ಬಂಧವಿರಬಹುದು ; ಹೇಗೆಂದರೆ—

ವಾಸ್ತವಿಕವಾದ (ಪಾರಮಾರ್ಥಿಕವಾದ) ಅವಿದ್ಯಾಽಭಾವವು ಮೋಕ್ಷವೆಂದು ನಿಮಗೆ ಅಭಿಮತವೋ ? ಅಥವಾ ಪಾರಮಾರ್ಥಿಕವಾದ ಅವಿದ್ಯಾವ್ಯವಹಾರಾಭಾವವೇ ಮೋಕ್ಷವೆಂದು ಅಭಿಮತವೋ ? ಇಲ್ಲಿ ಪ್ರಥಮಪಕ್ಷವು ಸಂಭವಿಸುವುದಿಲ್ಲ ; ಏತಕ್ಕೆಂದರೆ—ಬಂಧವೆಂಬ ಸಂಸಾರಕ್ಕೆ ವಿಪರೀತವಾದ ಆಕಾರವು ಮೋಕ್ಷವೆಂದೂ, ಮೋಕ್ಷಕ್ಕೆ ವಿಪರೀತವಾದ ಆಕಾರವು ಸಂಸಾರವೆಂದೂ, ಸಮಸ್ತವಾದಿಗಳೂ ಒಪ್ಪುವರು ; ಪಾರಮಾರ್ಥಿಕವಾದ ಅವಿದ್ಯಾಽಭಾವವೇ ಮೋಕ್ಷವಾಗುವುದಾದರೆ ಪಾರಮಾರ್ಥಿಕವಾದ ಅವಿದ್ಯಾಸದ್ಭಾವವೇ ಸಂಸಾರವೆನಿಸಿಕೊಳ್ಳಬೇಕು ; ನಿಮ್ಮ ಮತದಲ್ಲಿ ಬಂಧಾವಸ್ಥೆಯಲ್ಲಿಯೂ ಆತ್ಮನಿಗೆ ಅಪಾರಮಾರ್ಥಿಕವಾದ ಅವಿದ್ಯಾಸಂಬಂಧವೇ ಇರುವುದಲ್ಲದೆ ಪಾರಮಾರ್ಥಿಕವಾದ ಅವಿದ್ಯಾಸಂಬಂಧವಿಲ್ಲ ; ಪಾರಮಾರ್ಥಿಕವಾದ ಅವಿದ್ಯಾಽಭಾವವೇ ಇರುವುದು. ಅದೇ ನಿಮಗೆ ಮೋಕ್ಷಪದಾರ್ಥವಾದುದರಿಂದ ಬಂಧಾವಸ್ಥೆಯಲ್ಲಿಯೂ ಮೋಕ್ಷವುಂಟೆಂಬುದು ಪ್ರಸಕ್ತವಾಗುವುದು. ಪಾರಮಾರ್ಥಿಕವಾದ ಅವಿದ್ಯಾವ್ಯವಹಾರಾಭಾವವೇ ಮೋಕ್ಷವೆಂಬ ಎರಡನೆಯ ಪಕ್ಷವೂ ಸಂಭವಿಸುವುದಿಲ್ಲ. ಏತಕ್ಕೆಂದರೆ—ಪಾರಮಾರ್ಥಿಕವಾದ ಅವಿದ್ಯಾವ್ಯವಹಾರಾಭಾವಕ್ಕೆ ಅಪಾರಮಾರ್ಥಿಕವಾದ ಅವಿದ್ಯಾವ್ಯವಹಾರವು ವಿರುದ್ಧವಲ್ಲವಾದುದರಿಂದ—ಪಾರಮಾರ್ಥಿಕವಾದ ಅವಿದ್ಯಾವ್ಯವಹಾರಾಭಾವವೆಂಬ ಮೋಕ್ಷಾವಸ್ಥೆಯಲ್ಲಿಯೂ, ಅಪಾರಮಾರ್ಥಿಕವಾದ ಅವಿದ್ಯಾವ್ಯವಹಾರವೆಂಬ ಸಂಸಾರವು (ಬಂಧವು) ಉಂಟೆಂಬುದು ಪ್ರಸಕ್ತವಾಗು

ವುದು. "ಶುಕೋ ಮುಕ್ತಃ, ವಾಮದೇವೋ ಮುಕ್ತಃ" ಎಂದು ಶುಕಾದಿಗಳಿಗೆ ಮೋಕ್ಷಾವಸ್ಥೆ ಸಿದ್ಧಿಸಿ ಇರುವಾಗಲೂ, ಲೋಕದಲ್ಲಿ ಸಂಸಾರವ್ಯವಹಾರವು ಇದ್ದೇ ಇರುವುದಷ್ಟೆ? ಶುಕಾದಿಗಳಿಗೆ ಮೋಕ್ಷವಿದ್ದರೂ ಅಸ್ಮದಾದಿಗಳಿಗೆ ಸಂಸಾರವ್ಯವಹಾರವಿರಬಹುದೆಂದು ನಮ್ಮ ಮತದಲ್ಲಿ ಹೇಳಬಹುದಲ್ಲದೆ ಏಕಾತ್ಮವಾದಿಗಳಾದ ನಿಮ್ಮ ಮತದಲ್ಲಿ ಹೇಳಲು ಸಾಧ್ಯವಿಲ್ಲವಷ್ಟೆ?

ಸಕಲಭ್ರಾಂತಿಯ ಉಚ್ಛೇದವೇ ಮೋಕ್ಷವೆಂದು ಹೇಳುವಿರಾದರೆ—ಈ ಉಚ್ಛೇದವೆಂಬುದು ಬ್ರಹ್ಮಸ್ವರೂಪವೇಯೋ? ಅಥವಾ ಬ್ರಹ್ಮಕ್ಕಿಂತಲೂ ಭಿನ್ನವೋ? ಬ್ರಹ್ಮಸ್ವರೂಪವೇ ಎಂದು ಹೇಳುವುದಾದರೆ ಅಂಥ ಬ್ರಹ್ಮಸ್ವರೂಪಾತ್ಮಕವಾದ ಉಚ್ಛೇದವು ಸಂಸಾರಾವಸ್ಥೆಯಲ್ಲಿಯೂ ಇದ್ದೇ ಇರುವುದರಿಂದ ಅಂಥಾವಸ್ಥೆಯಲ್ಲಿಯೂ ಮೋಕ್ಷವುಂಟೆಂದು ಪ್ರಸಕ್ತವಾಗುವುದು.

ಇದಕ್ಕಾಗಿ—ಉಚ್ಛೇದವೆಂಬುದು ಬ್ರಹ್ಮಸ್ವರೂಪಕ್ಕಿಂತಲೂ, ಭಿನ್ನವಾದುದೆಂದು ಹೇಳುವುದಾದರೆ—ಆ ಉಚ್ಛೇದವು ಅಯಥಾರ್ಥರೂಪವಾದ ಭ್ರಾಂತಿಜ್ಞಾನದಿಂದ ಸಿದ್ಧವಾದುದೋ? ಅಥವಾ ಯಥಾರ್ಥರೂಪವಾದ ಪ್ರಮೆಯೆಂಬ ಜ್ಞಾನದಿಂದ ಸಿದ್ಧವಾದುದೋ? ಭ್ರಾಂತಿಸಿದ್ಧವೆಂದು ಹೇಳುವುದಾದರೆ—ಶುಕ್ತಿಕೆಯಲ್ಲಿ ಭ್ರಾಂತಿಸಿದ್ಧವಾದ ರಜತವು ಮಿಥ್ಯೆಯಾಗುವಂತೆ ಈ ಸಕಲಭ್ರಾಂತ್ಯುಚ್ಛೇದವೂ ಮಿಥ್ಯೆಯಾದುದರಿಂದ ವಾಸ್ತವಿಕವಾದ ಸಕಲಭ್ರಾಂತ್ಯುಚ್ಛೇದವು ಸಿದ್ಧಿಸಲಿಲ್ಲವಾಗಿ—ಮೋಕ್ಷಾವಸ್ಥೆಯಲ್ಲಿಯೂ, ಸಂಸಾರವುಂಟೆಂದು ಪ್ರಸಕ್ತವಾಗುವುದು.

ಮತ್ತು—ಉಚ್ಛೇದವಿರುವಕಾಲದಲ್ಲಿಯೂ—ಉಚ್ಛೇದಭ್ರಾಂತಿಯನ್ನೂ, ಅಂಥ ಭ್ರಾಂತಿಗೆ ವಿಷಯಭೂತವಾದ ಉಚ್ಛೇದವೆಂಬ ದೃಶ್ಯಪದಾರ್ಥವನ್ನೂ ಆವಶ್ಯಕವಾಗಿ ಒಪ್ಪಿಕೊಳ್ಳಬೇಕಾಗಿ ಇರುವುದರಿಂದ ಸಕಲಭ್ರಾಂತ್ಯುಚ್ಛೇದವಾಗಲಿ ಸಕಲದೃಶ್ಯೋಚ್ಛೇದವಾಗಲಿ ನಿಮ್ಮ ಮತದಲ್ಲಿ ಯಾವಾಗಲೂ ಸಿದ್ಧಿಸಲಾರದು.

ಉಚ್ಛೇದವೆಂಬುದು ಯಥಾರ್ಥರೂಪವಾದ ಪ್ರಮೆಯೆಂಬ ಜ್ಞಾನದಿಂದ ಸಿದ್ಧವಾದುದೆಂದು ಹೇಳುವುದಾದರೆ—ಬ್ರಹ್ಮಸ್ವರೂಪಕ್ಕಿಂತಲೂ ಭಿನ್ನವಾಗಿ ಸತ್ಯಭೂತವಾದ ಉಚ್ಛೇದವೆಂಬ ಒಂದು ಪದಾರ್ಥವನ್ನು ಒಪ್ಪಿದಂತೆ ಆಗಿ ನಿಮಗೆ ಅಪಸಿದ್ಧಾಂತವಾಗುವುದು. ಆಗ ನಿಮಗೆ ಅತ್ಯಂತಾಭಿಮತವಾಗಿ ಇರುವ ಬ್ರಹ್ಮಾದ್ವಿತೀಯತ್ವಕ್ಕೆ ಭಂಗವುಂಟಾಗಿ—ಬ್ರಹ್ಮವೊಂದೇ ಸತ್ಯವೆಂಬ ನಿಮ್ಮ ಸಿದ್ಧಾಂತವು ಕೆಟ್ಟುಹೋಗುವುದು ಉಕ್ತವಾದ ಈ ಅಭಿಪ್ರಾಯಗಳನ್ನೆಲ್ಲಾ

ಶ್ರೀಮದ್ವೇದಾಂತದೇಶಿಕರು—

"ಭ್ರಾಂತ್ಯಾ ಸರ್ವಸಮುಚ್ಛೇದೇ ನೋಚ್ಛೇದಸ್ತತ್ತ್ವತೋ ಭವೇತ್।
ಪ್ರಮಯಾ ತ್ವಪಸಿದ್ಧಾಂತಾತ್ ದ್ವೈತಭಂಗಾದ್ಯಸಂಭವಃ ॥"

ಎಂಬ ಕಾರಿಕೆಯಲ್ಲಿ ಸಂಗ್ರಹಿಸಿ ತೋರಿಸಿರುವರು. ಈ ಮತದಲ್ಲಿ ಇರುವ ಇನ್ನೂ ಅನೇಕದೋಷಗಳನ್ನು ಮುಂದೆ ವಿವರವಾಗಿ ತೋರಿಸುವೆವು.

ಆದಕಾರಣ—ಪ್ರತ್ಯಕ್ಷಾನುಭವದಿಂದಲೂ, ಅನುಮಾನಪ್ರಮಾಣದಿಂದಲೂ, ಶಾಸ್ತ್ರಪ್ರಮಾಣದಿಂದಲೂ ಸಿದ್ಧವಾಗಿರುವ ಆತ್ಮಬಹುತ್ವಕ್ಕೆ ಅಪವಾದವನ್ನು ಹೇಳಲಾಗುವುದಿಲ್ಲವಾದುದರಿಂದ ಅನಂತವಾದ ಜೀವವ್ಯಕ್ತಿಗಳು ಪರಸ್ಪರಭಿನ್ನಗಳಾಗಿಯೂ ಈಶ್ವರಸ್ವರೂಪಕ್ಕಿಂತಲೂ ಭಿನ್ನಗಳಾಗಿಯೂ ಇರುವುವೆಂದು ಸಿದ್ಧವಾಯಿತು.

## ೫೦೧. ಔಪಾಧಿಕಭೇದವಾದಿಭಾಸ್ಕರಮತೇಽಪಿ ಬಂಧಮೋಕ್ಷವ್ಯವಸ್ಥಾನುಪಪತ್ತಿಃ

ಹೀಗೆಯೇ ಭಾಸ್ಕರಮತದಲ್ಲಿಯೂ ಬಂಧಮೋಕ್ಷವ್ಯವಸ್ಥೆ ಸಂಭವಿಸುವುದಿಲ್ಲವೆಂದು ತಿಳಿಯಬಹುದು. ಹೇಗೆಂದರೆ—ಭಾಸ್ಕರಮತದಲ್ಲಿ ಜೀವಬ್ರಹ್ಮಸ್ವರೂಪಗಳಿಗೆ ಸ್ವಾಭಾವಿಕವಾದ ಭೇದವಿಲ್ಲ. ಎಂದರೆ ಬ್ರಹ್ಮವ್ಯತಿರಿಕ್ತವಾದ ಜೀವಸ್ವರೂಪವೆಂಬುದೇ ಪಾರಮಾರ್ಥಿಕವಾಗಿ ಇಲ್ಲ. ಅಂತಃಕರಣ, ಶರೀರ, ಇಂದ್ರಿಯಗಳು ಎಂಬ ಉಪಾಧಿಗಳು ಬ್ರಹ್ಮಸ್ವರೂಪದ ಯಾವಭಾಗದಲ್ಲಿ ಸಂಬಂಧಿಸುವುವೋ ಆ ಭಾಗವು ಜೀವನೆಂದು ವ್ಯವಹರಿಸಲ್ಪಡುವುದರಿಂದ ಜೀವಬ್ರಹ್ಮಸ್ವರೂಪಗಳಿಗೆ ಔಪಾಧಿಕವಾದ ಭೇದವಿರುವುದು ; ಆದರೂ ಅಭೇದವೇ ಸ್ವಾಭಾವಿಕವಾಗಿ ಇರುವುದು; ಆದಕಾರಣ ಬ್ರಹ್ಮಕ್ಕೆ ಉಪಾಧಿಸಂಬಂಧವೇ ಸಂಸಾರವೆಂದೂ, ಉಪಾಧಿಸಂಬಂಧದ ಬಿಡುಗಡೆಯೇ ಮೋಕ್ಷವೆಂದೂ ಇವರು ಹೇಳುವರು.

ಇವರ ಮತದಲ್ಲಿ—ಬ್ರಹ್ಮಕ್ಕೆ ಉಪಾಧಿಸಂಬಂಧವನ್ನು ಹೇಳುವುದೇ ಮೊತ್ತಮೊದಲು ಹಾಸ್ಯಾಸ್ಪದವಾಗಿ ಇರುವುದು; ಏತಕ್ಕೆಂದರೆ—ಹೇಯಪ್ರತಿಭಟತ್ವ, ಸರ್ವಜ್ಞತ್ವ, ಆನಂದಿತ್ವ, ಮುಂತಾದ ಸತ್ಸ್ವಭಾವಗಳೊಡನೆ ಕೂಡಿರುವ ಬ್ರಹ್ಮಸ್ವರೂಪಕ್ಕೆ—ಅನಂತಹೇಯಾಕರತ್ವ, ಅಜ್ಞತ್ವ, ದುಃಖಿತ್ವ ಮುಂತಾದ ದುಸ್ಸ್ವಭಾವಗಳನ್ನು ತಂದೊಡ್ಡುವ ಉಪಾಧಿಸಂಬಂಧವನ್ನು ವಿವೇಚಕರಾದವರು ಹೇಳಲಾರರಷ್ಟೆ ?

ಬ್ರಹ್ಮಸ್ವರೂಪದ ಒಂದೊಂದು ಭಾಗಗಳಲ್ಲಿ ಸಂಬಂಧಿಸುವ ಉಪಾಧಿಗಳು ಆ ಆ ಭಾಗಗಳನ್ನು ಬ್ರಹ್ಮಸ್ವರೂಪದಿಂದ ಕತ್ತರಿಸಿಕೊಂಡು ಪ್ರತ್ಯೇಕಪಡಿಸಿ ಅವುಗಳಲ್ಲಿ ಅಜ್ಞತ್ವ-ದುಃಖಿತ್ವಾದಿಗಳನ್ನು ಉಂಟುಮಾಡುತ್ತವೆಯೆಂದು ಇವರು ಹೇಳಿದ್ದ ಪಕ್ಷದಲ್ಲಿ ಆಗ ಉಪಾಧಿಸಂಬಂಧವಿಲ್ಲದ ಬ್ರಹ್ಮಸ್ವರೂಪಕ್ಕೆ ಹೇಯಸಂಬಂಧವೂ ಇಲ್ಲವೆಂದು ತೋರಿಸಬಹುದಾಗಿ ಇದ್ದಿತು; ನಿರವಯವವಾದ ಬ್ರಹ್ಮಸ್ವರೂಪವು ಛೇದನಾದಿಗಳಿಗೆ ಅನರ್ಹವಾದುದರಿಂದ ಉಪಾಧಿಸಂಬಂಧವನ್ನು ಬ್ರಹ್ಮಸ್ವರೂಪಕ್ಕೇ ಹೇಳಬೇಕಾಗಿ ಇರುವಕಾರಣ ಬ್ರಹ್ಮಸ್ವರೂಪದಲ್ಲಿಯೇ ಹೇಯಸಂಬಂಧವು ಅವರ್ಜನೀಯವಾಗಿ ಬಂದೊದಗುವುದು.

ಮತ್ತು ಘಟಾದಿಪದಾರ್ಥಗಳು ಒಂದು ಕಡೆಯಿಂದ ಮತ್ತೊಂದುಕಡೆಗೆ ಚಲಿಸುವಾಗ ತಮ್ಮೊಳಗೆ ಅಡಗಿರುವ ಆಕಾಶವನ್ನೂ ಸೆಳೆದುಕೊಂಡೇ ಚಲಿಸುವುವಲ್ಲ; ಪೂರ್ವಪೂರ್ವಾಕಾಶಭಾಗಗಳನ್ನು ಅಲ್ಲಲ್ಲಿಯೇ ಬಿಟ್ಟು ಉತ್ತರೋತ್ತರಾಕಾಶಭಾಗಗಳೊಡನೆ ಸಂಬಂಧಿಸುತ್ತಲೇ ಹೋಗುವುವು; ಇದರಂತೆ ಬ್ರಹ್ಮಸ್ವರೂಪದಲ್ಲಿ ಸಂಬಂಧಿಸಿಕೊಂಡಿರುವ ಉಪಾಧಿಗಳು ಒಂದು ಕಡೆಯಿಂದ ಮತ್ತೊಂದುಕಡೆಗೆ ಸಂಚರಿಸುವುವಾದರೆ ಆಗ ಬ್ರಹ್ಮಸ್ವರೂಪದ ಆ ಆ ಭಾಗಗಳಿಗೆ ಆಕರ್ಷಣವು ಸಂಭವಿಸುವುದಿಲ್ಲವಾದಪ್ರಯುಕ್ತ ಆ ಆ ಭಾಗಗಳನ್ನು ಅಲ್ಲಲ್ಲಿಯೇ ಬಿಟ್ಟು ಉತ್ತರೋತ್ತರಭಾಗಗಳೊಡನೆ ಸಂಬಂಧಿಸುತ್ತಲೇ ಸಂಚರಿಸಬೇಕು; ಹೀಗಾದರೆ—ಬ್ರಹ್ಮಕ್ಕೆ ಪ್ರತಿಕ್ಷಣದಲ್ಲಿಯೂ ಉಪಾಧಿಗಳೊಡನೆ ಸಂಬಂಧವೂ ಸಂಬಂಧದ ಬಿಡುಗಡೆಯೂ ಇರುವುದರಿಂದ ಪ್ರತಿಕ್ಷಣದಲ್ಲಿಯೂ ಬಂಧವೂ ಮೋಕ್ಷವೂ ನಿರಂತರವಾಗಿ ಪ್ರಸಕ್ತವಾಗುವುವು.

ಮತ್ತು—ಒಂದು ಉಪಾಧಿಯಿಂದ ಆಕ್ರಮಿಸಲ್ಪಟ್ಟ ಬ್ರಹ್ಮಪ್ರದೇಶದಲ್ಲಿ ಉಂಟಾದ ಸುಖದುಃಖಗಳನ್ನು ಮತ್ತೊಂದು ಉಪಾಧಿಯಿಂದ ಆಕ್ರಮಿಸಲ್ಪಟ ಬ್ರಹ್ಮಪ್ರದೇಶವೆಂಬ ಆತ್ಮನು ಸ್ಮರಿಸಬೇಕಾಗಿ ಬರುವುದು. ಶರೀರಾದಿರೂಪವಾದ ಉಪಾಧಿ ಭಿನ್ನಭಿನ್ನವಾದುದರಿಂದ ಸ್ಮರಣೆಯುಂಟಾಗುವುದಿಲ್ಲವೆಂದು ಹೇಳುವುದು ಶಕ್ಯವಲ್ಲ. ಆತ್ಮಸ್ವರೂಪಭೇದವನ್ನು ಅಂಗೀಕರಿಸದೆ ಏಕಾತ್ಮವಾದವನ್ನು ಹೇಳುವವರ ಮತದಲ್ಲಿ ಉಪಾಧಿಭೇದವು ಸ್ಮರಣಕ್ಕೆ ಪ್ರತಿಬಂಧಕವಾಗುವುದೆಂದು ಹೇಳಲಾಗುವುದಿಲ್ಲ. ಸೌಭರಿಯೆಂಬ ಒಬ್ಬ ಆತ್ಮನಿಗೆ ಶರೀರಾದ್ಯುಪಾಧಿಗಳು ಭಿನ್ನಭಿನ್ನಗಳಾಗಿ ಇದ್ದರೂ ಎಲ್ಲಾ ಶರೀರಗಳಲ್ಲಿಯೂ ಉಂಟಾಗುವ ಸುಖದುಃಖಗಳನ್ನು ಆ ಒಬ್ಬನೇ ಆತ್ಮನು ಸ್ಮರಿಸುವನಷ್ಟೆ? ಉಪಾಧಿಸಂಬಂಧದಿಂದ ಆತ್ಮಸ್ವರೂಪಕ್ಕೆ

ಭೇದವನ್ನೇ ಒಪ್ಪಿಕೊಳ್ಳುವುದಾದರೆ ಬ್ರಹ್ಮಸ್ವರೂಪಕ್ಕೆ ಅಚ್ಛೇದ್ಯತ್ವಾದಿಗಳನ್ನು ಬೋಧಿಸುವ ಶ್ರುತಿಯೊಡನೆ ವಿರೋಧವು ದುಷ್ಪರಿಹರವಾಗುವುದು. ಆದಕಾರಣ ಭಾಸ್ಕರಮತದಲ್ಲಿಯೂ ಬಂಧಮೋಕ್ಷವ್ಯವಸ್ಥೆ ಸಂಭವಿಸುವುದಿಲ್ಲ.

## ೫೦೨. ಸ್ವಾಭಾವಿಕಭೇದಾಭೇದವಾದಿಯಾದವಪ್ರಕಾಶಮತೇಽಪಿ ಬಂಧಮೋಕ್ಷವ್ಯವಸ್ಥಾನುಪಪತ್ತಿಃ.

ಹೀಗೆಯೇ—ಚಿದಚಿದೀಶ್ವರರೂಪವಾದ ಸಮಸ್ತಪದಾರ್ಥಗಳಿಗೂ ಬ್ರಹ್ಮಸ್ವರೂಪದೊಡನೆ ಸ್ವಾಭಾವಿಕಭೇದಾಭೇದಗಳನ್ನು ಅಂಗೀಕರಿಸುವ ಯಾದವಪ್ರಕಾಶಮತದಲ್ಲಿಯೂ ಬಂಧಮೋಕ್ಷವ್ಯವಸ್ಥೆ ಸಂಭವಿಸುವುದಿಲ್ಲ; ಹೇಗೆಂದರೆ—ಮುಕ್ತಾತ್ಮನಿಗೆ ಸಚ್ಛಬ್ದವಾಚ್ಯವಾದ ಬ್ರಹ್ಮಸ್ವರೂಪದೊಡನೆ ತಾದಾತ್ಮ್ಯಾಪತ್ತಿಯನ್ನು ಇವರು ಹೇಳುವರು; ಮತ್ತು—ಸೃಷ್ಟಿಪ್ರಾಕ್ಕಾಲವೆಂಬ ಪ್ರಳಯಕಾಲದಲ್ಲಿ "ಸದೇವ ಸೋಮ್ಯೇದಮಗ್ರ ಆಸೀತ್" ಎಂಬ ಪ್ರಮಾಣವನ್ನು ಅನುಸರಿಸಿ ಬದ್ಧಾತ್ಮನಿಗೂ ಮುಕ್ತಾತ್ಮನಂತೆ ಸದಾಪತ್ತಿಯನ್ನು ಹೇಳುವರು; ಹೀಗಾದರೆ—ಬದ್ಧಾತ್ಮನ ಸ್ವಭಾವವಾದ ಭೇದತಾದಾತ್ಮ್ಯವನ್ನು ಸರ್ವಜ್ಞನಾದ ಮುಕ್ತಾತ್ಮನೂ, ಮುಕ್ತಾತ್ಮನ ಸ್ವಭಾವವಾದ ಅಭೇದತಾದಾತ್ಮ್ಯವನ್ನು ಬದ್ಧಾತ್ಮನೂ ಅನುಸಂಧಿಸಬೇಕಾದುದು ಆವಶ್ಯಕವಾದುದರಿಂದ ಬದ್ಧಾತ್ಮನಿಗೂ ಮುಕ್ತಾತ್ಮನಿಗೂ ತಾರತಮ್ಯವಿಲ್ಲದೆ ಹೋಗುವುದು.

"ಓಹೋ ಮುಕ್ತಾತ್ಮನಿಗೆ ಮೋಕ್ಷಾವಸ್ಥೆಯಲ್ಲಿ ಸಕಲವಿಧವಾದ ಭೇದವೂ ನಿಶ್ಶೇಷವಾಗಿ ಲೋಪಿಸಿ ಸಚ್ಛಬ್ದವಾಚ್ಯಬ್ರಹ್ಮತಾದಾತ್ಮ್ಯಾಪತ್ತಿಯುಂಟಾಗಿರುವುದು; ಬದ್ಧಾತ್ಮನಿಗಾದರೆ ಸಕಲವಿಧವಾದ ಭೇದವೂ ಇರುವಾಗಲೇ ಅಂಥ ತಾದಾತ್ಮ್ಯಾಪತ್ತಿಯುಂಟಾಗಿರುವುದು; ಹೀಗಿರಲು ಬದ್ಧಾತ್ಮನಿಗೆ ಮುಕ್ತಾತ್ಮತುಲ್ಯವಾದ ಸದಾಪತ್ತಿಯನ್ನು ಹೇಗೆ ಹೇಳಲಾದೀತು?" ಎಂದು ಆಶಂಕಿಸಬೇಕಾದುದಿಲ್ಲ. ಏತಕ್ಕೆಂದರೆ,—

**"ಶುಕಸ್ಸರ್ವಗತೋ ಭೂತ್ವಾ ಸರ್ವಾತ್ಮಾ ಸರ್ವತೋಮುಖಃ ಪ್ರತ್ಯಭಾಷತ ಧರ್ಮಾತ್ಮಾ ಭೋಶ್ಶಬ್ದೇನಾನುನಾದಯನ್"**

ಎಂಬ ಪ್ರಮಾಣವಚನದಲ್ಲಿ ಶುಕನೆಂಬ ಮುಕ್ತಾತ್ಮನು ನಿರಂಕುಶವಾದ ಜ್ಞಾನವಿಕಾಸವನ್ನು ಪಡೆದು ಜ್ಞಾನದ್ವಾರಾ ಸರ್ವವ್ಯಾಪಕನಾಗಿ ಸರ್ವಾತ್ಮಭಾವವನ್ನು ಪಡೆದು ಧರ್ಮಾತ್ಮನೆನಿಸಿಕೊಂಡು "ಭೋಃ" ಎಂಬ ಶಬ್ದವನ್ನು ಉಪಕ್ರಮದಲ್ಲಿ ಉಚ್ಚರಿಸಿ ಸಂಭಾಷಣೆಯನ್ನು ಮಾಡಿದನೆಂದು ಅವಗತವಾಗುವಕಾರಣ

ಇಂಥ ಭೇದವ್ಯವಹಾರಕ್ಕೆ ವಿರೋಧವು ಬಾರದಿರುವುದಕ್ಕಾಗಿ ಮೋಕ್ಷಾವಸ್ಥೆ ಯಲ್ಲಿಯೂ ಭೇದವನ್ನು ಒಪ್ಪಿಕೊಂಡೇ ತೀರಬೇಕಾಗಿ ಇರುವುದರಿಂದ ಬದ್ಧಾತ್ಮನಿಗೆ ಮುಕ್ತಾತ್ಮತುಲ್ಯವಾದ ಸದಾಪತ್ತಿಯನ್ನು ಹೇಳಲು ತಡೆಯಿಲ್ಲ.

"ಮೋಕ್ಷಾವಸ್ಥೆಯಲ್ಲಿ—ವಿಭಾಗವನ್ನು ಹೊಂದಲು ಯೋಗ್ಯತಾರೂಪವಾದಶಕ್ತಿಮಾತ್ರವೇ ಇರುವುದಲ್ಲದೆ ಅಂಥ ಶಕ್ತಿಗಿಂತಲೂ ಅತಿರಿಕ್ತವಾದ ಭೇದವೆಂಬುದು ಲೇಶಮಾತ್ರವೂ ಇರುವುದಿಲ್ಲ" ಎಂದೂ ಹೇಳಲು ಶಕ್ಯವಲ್ಲ; ಹಾಗೆ ಹೇಳುವುದಾದರೆ ಪ್ರಳಯಾವಸ್ಥೆಯಲ್ಲಿಯೂ ಶಕ್ತಿಮಾತ್ರವೇ ಇರುವುದಲ್ಲದೆ ಭೇದವೆಂಬುದು ಲೇಶಮಾತ್ರವೂ ಇಲ್ಲವೆಂದು ಹೇಳಬಹುದಾದಪ್ರಯುಕ್ತ ಬಂಧಮೋಕ್ಷಗಳಿಗೆ ತಾರತಮ್ಯವಿಲ್ಲವೆಂಬ ದೋಷವು ಪುನಃ ಹಾಗೆಯೇ ನಿಲ್ಲುವುದು.

## ೫೦೩. ವಿಶಿಷ್ಟಾದ್ವೈತಮತೇ ತು ಬಂಧಮೋಕ್ಷವ್ಯವಸ್ಥಾಯಾಃ ಸಾಮಂಜಸ್ಯೇನೋಪಪತ್ತಿಃ

ನಮ್ಮ ಮತದಲ್ಲಿಯಾದರೆ—ನಿಶ್ಶೇಷವಾದ ಕರ್ಮಸಂಬಂಧನಿವೃತ್ತಿಯೇ ಅವಿದ್ಯಾನಿವೃತ್ತಿಯೆನಿಸಿಕೊಳ್ಳುವುದು. ಅಭಾವರೂಪವಾದ ಈ ನಿವೃತ್ತಿಯೆಂಬುದು ನಮ್ಮ ಮತದಲ್ಲಿ ಭಾವಾಂತರರೂಪವಾಗಿ ಇರುವುದು; ನಿಶ್ಶೇಷಕರ್ಮಸಂಬಂಧನಿವೃತ್ತಿ ಎಂದರೆ—ಅರ್ಚಿರಾದಿಮಾರ್ಗಗಮನವೆಂದೂ, ವಿರಜಾನದೀಸ್ನಾನವೆಂದೂ, ಸೂಕ್ಷ್ಮಶರೀರಪರಿತ್ಯಾಗವೆಂದೂ, ಅಪ್ರಾಕೃತದಿವ್ಯಶರೀರಗ್ರಹಣವೆಂದೂ ಬ್ರಹ್ಮಾಲಂಕಾರಧಾರಣವೆಂದೂ. ಅಪ್ರಾಕೃತದಿವ್ಯಲೋಕಪ್ರಾಪ್ತಿಯೆಂದೂ, ಪರಿಪೂರ್ಣಬ್ರಹ್ಮಾನಂದಾನುಭವವೆಂದೂ, ಪರಮಪುರುಷನಾದ ಶ್ರಿಯಃಪತಿಯ ಚರಣಾರವಿಂದಗಳಲ್ಲಿ ಯಾವದಾತ್ಮಭಾವಿಯಾದ ಕೈಂಕರ್ಯವೆಂದೂ, ಮತ್ತು ಕೌಷೀತಕ್ಯುಪನಿಷತ್ತಿನಲ್ಲಿ ಹೇಳಿರುವ ಅನಂತಾತಿಶಯಪ್ರಾಪ್ತಿಯೆಂದೂ ಅರ್ಥವು. ಇಂಥ ಅತಿಶಯನೆಲ್ಲವೂ ಬಂಧಾವಸ್ಥೆಯಲ್ಲಿ ಇಲ್ಲವಾದುದರಿಂದಲೂ, ಮೋಕ್ಷಾವಸ್ಥೆಯಲ್ಲಿಯೇ ಉಂಟಾಗುವುವಾದುದರಿಂದಲೂ ಬಂಧಮೋಕ್ಷವ್ಯವಸ್ಥೆಯೆಂಬುದು ವಿಶಿಷ್ಟಾದ್ವೈತಸಿದ್ಧಾಂತದಲ್ಲಿಯೇ ಬಹಳ ಸಮಂಜಸವಾಗಿ ಇರುವುದು. ಮುಕ್ತಾತ್ಮನಿಗೂ ಬ್ರಹ್ಮಸ್ವರೂಪಕ್ಕೂ ಶರೀರಶರೀರಿಭಾವವಿರುವುದರಿಂದ—ಮೋಕ್ಷಾವಸ್ಥೆಯಲ್ಲಿ ಬ್ರಹ್ಮತಾದಾತ್ಮ್ಯೋಪದೇಶವೂ ಅತ್ಯಂತಸ್ವಾರಸಿಕವಾಗಿ ಇರುವುದು.

ಆದುದರಿಂದಲೇ—"ಬ್ರಹ್ಮೋಪಾಸನೆಯನ್ನು ಮಾಡಿದವನು ಬ್ರಹ್ಮವೇ ಆಗುತ್ತಾನೆ" ಎಂದು ಬೋಧಿಸುವ "**ಬ್ರಹ್ಮ ವೇದ ಬ್ರಹ್ಮೈವ ಭವತಿ**" ಎಂಬ ವಾಕ್ಯವೂ "ಬ್ರಹ್ಮೋಪಾಸನೆಯನ್ನು ಮಾಡಿದವನು ಸಂಸಾರಬಂಧನದಿಂದ

ಬಿಡುಗಡೆಯನ್ನು ಹೊಂದಿ ತನ್ನ ಸ್ವರೂಪದಲ್ಲಿ ನಿತ್ಯವಾಗಿ ಸಾಕ್ಷಾತ್ಕರಿಸಲ್ಪಟ್ಟ ಬ್ರಹ್ಮಶರೀರತ್ವವುಳ್ಳುವನಾಗಿ ಆಗುತ್ತಾನೆ" ಎಂದೇ ಉಪದೇಶಿಸುತ್ತಿರುವುದು. ಬಂಧಾವಸ್ಥೆಯಲ್ಲಿ—ಶಾಸ್ತ್ರವಾಸನೆಯಿಲ್ಲದ ಚೇತನರಿಗೆ "ಜೀವಾತ್ಮನು ಬ್ರಹ್ಮ ಶರೀರಭೂತನು" ಎಂಬ ಪರಿಜ್ಞಾನವೇ ಇಲ್ಲ; ಶಾಸ್ತ್ರವಾಸನೆ ಇರುವ ಚೇತನರಿಗೂ ಅಂಥ ಜ್ಞಾನವು ಶಬ್ದಜನ್ಯವಾದುದರಿಂದ ಪರೋಕ್ಷರೂಪವಾಗಿ ಇರುವುದೇ ಅಲ್ಲದೆ ಪ್ರತ್ಯಕ್ಷರೂಪವಲ್ಲ; ಮುಕ್ತಾತ್ಮನಿಗಾದರೆ ಅಂಥ ಜ್ಞಾನವು ಸಾಕ್ಷಾತ್ಕಾರ ರೂಪವಾಗಿ ಪ್ರತ್ಯಕ್ಷಜ್ಞಾನವೆನಿಸಿಕೊಂಡು ಯಾವಾಗಲೂ ವಿಚ್ಛೇದವನ್ನು ಹೊಂದದೆ ಯಾವದಾತ್ಮಭಾವಿಯಾಗಿ ಅನುವರ್ತಿಸುವುದು.

ಓಹೋ—"ಅಪೃಥಕ್ಸಿದ್ಧವಾದ ವಿಶೇಷಣವನ್ನು ಬೋಧಿಸುವ ಶಬ್ದವು ಅಂಥ ವಿಶೇಷಣವಿಶಿಷ್ಟವಾದ ವಿಶೇಷ್ಯವನ್ನು ಬೋಧಿಸುವುದೆಂದು ಮೀಮಾಂಸಕರು ಆಕೃತ್ಯಧಿಕರಣದಲ್ಲಿ ನಿಷ್ಕರ್ಷಿಸಿ ಇರುವಂತೆ ಇಲ್ಲಿಯೂ ಪರಮಾತ್ಮನಿಗೆ ಶರೀರವಾಗಿ ಅಪೃಥಕ್ಸಿದ್ಧವಿಶೇಷಣವೆನಿಸಿಕೊಂಡಿರುವ ಜೀವಾತ್ಮನನ್ನು ಬೋಧಿಸುವ ಶಬ್ದವನ್ನು ಅಂಥ ವಿಶೇಷಣವಿಶಿಷ್ಟನಾದ ಪರಮಾತ್ಮನಲ್ಲಿ ಪ್ರಯೋಗಿಸುವುದು ಯುಕ್ತವಾಗಿ ಇರುವುದು; ಎಂದರೆ ಶರೀರವಾಚಕಶಬ್ದವನ್ನು ಶರೀರಿಯಲ್ಲಿ ಪ್ರಯೋಗಿಸಬಹುದು; ಆದರೆ—"ಬ್ರಹ್ಮ ವೇದ ಬ್ರಹ್ಮೈವ ಭವತಿ" ಎಂಬ ವಾಕ್ಯದಲ್ಲಿ ಶರೀರಿವಾಚಕವಾದ ಬ್ರಹ್ಮಶಬ್ದವನ್ನು ಶರೀರಭೂತನಾದ ಜೀವಾತ್ಮನಲ್ಲಿ ಪ್ರಯೋಗಿಸಿದುದು ಹೇಗೆ ಸಂಗತವಾದೀತು? ಮತ್ತು "ಬ್ರಹ್ಮೈವ ಭವತಿ" ಎಂಬ ಪದಗಳಿಗೆ—"ನಿತ್ಯವಾಗಿ ಸಾಕ್ಷಾತ್ಕರಿಸಲ್ಪಟ್ಟ ಬ್ರಹ್ಮಶರೀರತ್ವವುಳ್ಳುವನಾಗಿ ಆಗುತ್ತಾನೆ" ಎಂದು ಅರ್ಥಕಲ್ಪನೆ ಮಾಡುವುದು ಕ್ಲಿಷ್ಟಕಲ್ಪನೆಯಾಗುವುದಿಲ್ಲವೋ?" ಎಂಬ ಈ ಆಶಂಕೆಯನ್ನು ಪರಿಹರಿಸುವುದಕ್ಕಾಗಿ **ನ್ಯಾಯ ಸುದರ್ಶನವೆಂಬ** ಗ್ರಂಥದಲ್ಲಿ ಪಕ್ಷಾಂತರವು ತೋರಿಸಲ್ಪಟ್ಟಿರುವುದು ಹೇಗೆಂದರೆ—

"ಬ್ರಹ್ಮ ವೇದ ಬ್ರಹ್ಮೈವ ಭವತಿ" ಎಂಬ ವಾಕ್ಯದಲ್ಲಿ ಇರುವ "ಏವ" ಎಂಬ ಪದವು ಅಭೇದವನ್ನು ತೋರಿಸುವುದಿಲ್ಲ; ಸಾಮ್ಯವನ್ನೇ ಬೋಧಿಸುವುದು. "ಸಾಮ್ಯೇ ಚೈವ ಕ್ವಚಿಚ್ಛಬ್ದಃ" ಎಂದು ನಿಘಂಟುಕಾರರು ಏವಶಬ್ದಕ್ಕೆ ಸಾಮ್ಯವೆಂಬ ಅರ್ಥವನ್ನು ಉಪದೇಶಿಸಿ ಇರುವರಷ್ಟೆ? ಮತ್ತು ವೈಜಯಂತೀ ಕೋಶದಲ್ಲಿ "ಸಾಮ್ಯೇ ವದ್ವೈವಮೇವೇವ" ಎಂಬುದಾಗಿ—ವತಿಪ್ರತ್ಯಯು, ವಾಶಬ್ದ, ಏವಂಶಬ್ದ, ಏವಶಬ್ದ, ಇವಶಬ್ದ, ಈ ಐದಕ್ಕೂ ಸಾಮ್ಯವಾಚಕತ್ವವನ್ನು

ಕೋಶಕಾರರು ಉಪದೇಶಿಸಿ ಇರುವರಷ್ಟೆ? ಆದಕಾರಣ "ಬ್ರಹ್ಮವೇದ ಬ್ರಹ್ಮೈವ ಭವತಿ" ಎಂಬ ವಾಕ್ಯಕ್ಕೆ—"ಬ್ರಹ್ಮೋಪಾಸನೆಯನ್ನು ಮಾಡಿದವನು ಮುಕ್ತನಾಗಿ ಬ್ರಹ್ಮಸಾಮ್ಯವನ್ನು ಪಡೆದವನಾಗುತ್ತಾನೆ" ಎಂಬುದೇ ಅರ್ಥವಾಗಿ ಇರುವುದು. ಈ ಅರ್ಥವನ್ನು ಅಂಗೀಕರಿಸಿದರೇನೇ "ನಿರಂಜನಃ ಪರಮಂ ಸಾಮ್ಯಮುಪೈತಿ" ಎಂಬ ಮುಂಡಕೋಪನಿಷದ್ವಾಕ್ಯವೂ ಈ ತೈತ್ತಿರೀಯೋಪನಿಷದ್ವಾಕ್ಯವೂ ಏಕಾರ್ಥಕವಾಗುವುವು.

ಮತ್ತು—ಏವಕಾರಕ್ಕೆ ಸಾಮ್ಯವಾಚಕತ್ವವುಂಟೆಂಬುದು ನಿಘಂಟುಕಾರರ ಉಕ್ತಿಮಾತ್ರದಿಂದಲೇ ಸಿದ್ಧವಾದುದೆಂದು ಭಾವಿಸಲಾಗದು; ಶ್ರೌತಪ್ರಯೋಗದಿಂದಲೂ ಸಿದ್ಧವಾಗಿ ಇರುವುದು; ಹೇಗೆಂದರೆ—"ಶತ್ರುವಿನೊಡನೆ ಸ್ಪರ್ಧೆಯನ್ನು ವಹಿಸಿರುವ ಆಹಿತಾಗ್ನಿಯಾದ ತ್ರೈವರ್ಣಿಕನು ಶತ್ರುಜಯವನ್ನು ಬಯಸುವವನಾದರೆ ವಿಷ್ಣುದೇವತಾಕವಾದ ವಾಮನಪಶುಯಾಗವನ್ನು ಮಾಡಬೇಕು ಹಾಗೆ ಮಾಡಿದವನಾದರೆ ವಿಷ್ಣುವೇ ಆದವನಾಗಿ ಈ ಲೋಕಗಳನ್ನೆಲ್ಲಾ ಜಯಿಸುವವನಾಗುತ್ತಾನೆ" ಎಂಬ ಅರ್ಥವುಳ್ಳ "ವೈಷ್ಣವಂ ವಾಮನಮಾಲಭೇತ ಸ್ಪರ್ಧಮಾನೋ ವಿಷ್ಣುರೇವ ಭೂತ್ವೇಮಾಁ ಲೋಕಾನಭಿಜಯತಿ" ಎಂಬ ಶ್ರುತಿವಾಕ್ಯದಲ್ಲಿ ಏವಕಾರವನ್ನು ಇವಶಬ್ದಕ್ಕೆ ಸಮಾನಾರ್ಥಕವಾಗಿ ಅಂಗೀಕರಿಸಿ ಸಾಮ್ಯವೆಂಬ ಅರ್ಥದಲ್ಲಿ ಪ್ರಯೋಗಿಸಿ ಇರುವುದು. ಅಲ್ಲಿ "ವಿಷ್ಣುರೇವ ಭೂತ್ವಾ" ಎಂಬುದಕ್ಕೆ "ವಿಷ್ಣುರಿವ ಭೂತ್ವಾ" ಎಂದು ಸಾಮ್ಯಾರ್ಥಕತ್ವವನ್ನು ವೇದಭಾಷ್ಯಕಾರರೂ ಅಂಗೀಕರಿಸಿರುವರು.

ಅದೇತಕ್ಕೆ? ಉಕ್ತವಾದ ಈ ಶ್ರುತಿವಾಕ್ಯದಲ್ಲಿಯೂ ಏವಕಾರಕ್ಕೆ ಅಭೇದಾರ್ಥಕತ್ವವನ್ನೇ ಅಂಗೀಕರಿಸಿ ವಿಷ್ಣುವೇ ಆಗುತ್ತಾನೆಂದು ಏಕೆ ಹೇಳಬಾರದು? ಇಲ್ಲ; ಹಾಗೆಹೇಳಲಾಗುವುದಿಲ್ಲ; ಸ್ಪರ್ಧಾಳುವಾಗಿ ಶತ್ರುಜಯವೆಂಬ ಐಹಿಕಫಲವನ್ನು ಅಪೇಕ್ಷಿಸಿ ಪಶುಯಾಗವೆಂಬ ಸಾಧನಾನುಷ್ಠಾನವನ್ನು ಮಾಡಿದವನಿಗೆ ವಿಷ್ಣ್ವಭೇದಾಪತ್ತಿ ಫಲವಾಗಲಾರದಷ್ಟೆ? ಎರಡು ವಿಶೇಷ್ಯಗಳಲ್ಲಿ ಇರುವ ವಿಶೇಷಣವು ಏಕರೂಪವಾಗಿ ಇದ್ದರೆ ಅಂಥ ಸ್ಥಳದಲ್ಲಿ ಆ ಎರಡು ವಿಶೇಷ್ಯಗಳಿಗೂ ಅಭೇದವ್ಯವಹಾರವು ಮುಖ್ಯವಾಗಿಯೇ ಬರಬಹುದು ಎಂದರೆ ಮುಖ್ಯಸದೃಶವಾಗಿಯೇ ಬರಬಹುದು—ಎರಡು ಗೋವ್ಯಕ್ತಿಗಳನ್ನು ನೋಡಿ—"ಇಯಂ ಗೌಃ—ಇಯಮಪಿ ಗೌಃ" ಎಂದು ಅಭೇದವನ್ನು ವ್ಯವಹರಿಸುವ ಕಾಲದಲ್ಲಿ—ವಿಶೇಷ್ಯವಾದ ಎರಡು ವ್ಯಕ್ತಿಗಳಲ್ಲಿಯೂ ಗೋತ್ವವೆಂಬ ವಿಶೇಷಣವು ಏಕರೂಪವಾಗಿ ಇರುದ

ಕೆಯೇ ಅಲ್ಲವೆ. ಅಂಥ ವ್ಯವಹಾರದ ಮುಖ್ಯತ್ವಕ್ಕೆ ಕಾರಣವಾಗಿ ಇರುವುದು. ಅದರಂತೆ ಮೋಕ್ಷಾವಸ್ಥೆಯಲ್ಲಿ ಮುಕ್ತಾತ್ಮನಿಗೂ ಪರಮಾತ್ಮನಿಗೂ—ಆನಂದ ಭೋಗವಿಷಯದಲ್ಲಿಯೂ, ದಿವ್ಯಮಂಗಳವಿಗ್ರಹವಿಷಯದಲ್ಲಿಯೂ, ಅಪಹತಪಾಪ್ಮತ್ವಮುಂತಾದ ಎಂಟು ಗುಣಗಳ ವಿಷಯದಲ್ಲಿಯೂ, ಅತ್ಯಂತಸಾಮ್ಯವಿರುವುದರಿಂದ—ಏಕಪ್ರಕಾರವಾದ ವಿಶೇಷಣಸಾಮ್ಯವನ್ನು ನಿಮಿತ್ತಮಾಡಿಕೊಂಡು ವಿಶೇಷ್ಯಗಳೆರಡಕ್ಕೂ ಅಭೇದವ್ಯವಹಾರವನ್ನು ನಿರಾತಂಕವಾಗಿ ಮಾಡಬಹುದು. ಆದಕಾರಣ ಅನಂತವಾದ ಜೀವವ್ಯಕ್ತಿಗಳಿಗೆ ಈಶ್ವರಸ್ವರೂಪಕ್ಕಿಂತಲೂ ಭೇದವು ಅಭೇದ್ಯವಾಗಿ ಇರುವುದು.

**೫೦೪. ಈದೃಶಸ್ಯಾತ್ಮನಃ ಸ್ವತಸ್ಸುಖಿತ್ವಂ ||೧೦||**

ಇಂಥ ಜೀವಾತ್ಮನು ಸ್ವಭಾವದಿಂದಲೇ ಆನಂದಸ್ವರೂಪನಾಗಿಯೂ ಆನಂದಗುಣಕ್ಕೆ ಆಶ್ರಯನಾಗಿಯೂ ಇರುವುದರಿಂದ ಅನುಕೂಲವೇದನೀಯನಾಗಿ ಇರುವಕಾರಣ 'ಸ್ವತಸ್ಸುಖೀ' ಎನಿಸಿಕೊಳ್ಳುವನು. ಅನುಕೂಲವೇದನೀಯತ್ವವಲ್ಲವೆ ಸುಖಿತ್ವವು. ಪ್ರತಿಯೊಬ್ಬ ಆತ್ಮನೂ ತನಗೆ ತಾನು ಅನುಕೂಲನಾಗಿಯೇ ಇರುವನೆಂದಲ್ಲವೆ ಸ್ವಯಂಪ್ರಕಾಶತ್ವನಿರೂಪಣಸಮಯದಲ್ಲಿ ತೋರಿಸಿರುವೆವು? ಕರ್ಮಸಂಬಂಧವೆಂಬ ಉಪಾಧಿವಶದಿಂದಲಾದರೆ ಇವನು ದುಃಖಿಯಾಗುವನು; ಎಂದರೆ ಸಂಸಾರಿಯಾಗುವನು. ಕರ್ಮಸಂಬಂಧಕ್ಕೆ ಆತ್ಯಂತಿಕವಾದ ವಿಚ್ಛೇದವುಂಟಾದರೆ ಸ್ವಾಭಾವಿಕವಾದ ಸುಖಿತ್ವವು ಆಗ ಅಭಿವ್ಯಕ್ತವಾಗುವುದು.

**ಇಂತು ತತ್ತ್ವಶುದ್ಧಿಯೆಂಬ ವಿಶಿಷ್ಟಾದ್ವೈತಪ್ರಕರಣಗ್ರಂಥದೊಳ್ ಜೀವಪರಿಚ್ಛೇದದಲ್ಲಿ ಜೀವನಿಗೆ ಸ್ವಯಂಪ್ರಕಾಶತ್ವ-ನಿತ್ಯತ್ವ-ಅಣುತ್ವ- ಪ್ರತಿಶರೀರಂಭಿನ್ನತ್ವ-ಸ್ವತಸ್ಸುಖಿತ್ವ ಸಮರ್ಥನಪ್ರಕರಣಂ ಪಂಚಮಂ ||೫||**

## ಷಷ್ಠಪ್ರಕರಣಂ.

**೫೦೫. ಅಥ ಜೀವವಿಭಾಗಃ.**

ಈ ಜೀವಪರಿಚ್ಛೇದದ ಎರಡನೆಯ ಪ್ರಕರಣದ ಪ್ರಾರಂಭದಲ್ಲಿ ಪ್ರತಿಜ್ಞೆ ಮಾಡಿದ ಹತ್ತು ವಿಷಯಗಳನ್ನೂ ಇಲ್ಲಿಯವರೆಗೆ ನಿರೂಪಣಮಾಡಿ ತೋರಿಸಿದೆವು;

ಇನ್ನು ಮುಂದೆ ಈ ಜೀವವಿಷಯದಲ್ಲಿ ಹೇಳಬೇಕಾಗಿರುವ ಅವಶಿಷ್ಟವಾದ ಪ್ರಕೀರ್ಣಕವಿಷಯುಗಳನ್ನು ಈ ಆರನೆಯ ಪ್ರಕರಣದಲ್ಲಿ ಸ್ಫುಟಪಡಿಸಿ ಈ ಜೀವಪರಿಚ್ಛೇದವನ್ನು ಮುಗಿಸುವೆವು. ಇಂಥ ಜೀವತತ್ತ್ವವನ್ನು ಸಾಮಾನ್ಯತಃ ಸಂಸಾರಿಯೆಂದೂ, ಅಸಂಸಾರಿಯೆಂದೂ ಎರಡು ರಾಶಿಯಾಗಿ ವಿಂಗಡಿಸಬಹುದು. ಪುಣ್ಯವುಳ್ಳವನು, ಅಥವಾ ಪಾಪವುಳ್ಳುವನು, ಅಥವಾ ಜ್ಞಾನಸಂಕೋಚವುಳ್ಳವನು ಸಂಸಾರಿಜೀವನೆನಿಸಿಕೊಳ್ಳುವನು. ಪುಣ್ಯವಿಲ್ಲದವನು, ಅಥವಾ ಪಾಪವಿಲ್ಲದವನು, ಅಥವಾ ಜ್ಞಾನಸಂಕೋಚವಿಲ್ಲದವನು ಅಸಂಸಾರಿಜೀವನೆನಿಸಿಕೊಳ್ಳುವನು. ಸಂಸಾರಿಜೀವನನ್ನು ನಿತ್ಯಸಂಸಾರಿಯೆಂದೂ. ಸಂಸಾರದಿಂದ ಬಿಡುಗಡೆಯನ್ನು ಹೊಂದತಕ್ಕವನೆಂದೂ ಎರಡುವಿಧವಾಗಿ ವಿಂಗಡಿಸಬಹುದು.

### ೫೦೬. ನಿತ್ಯಸಂಸಾರಿಚೇತನಸದ್ಭಾವಕಥಂತಾಶಂಕಾ.

"ಪೂಜ್ಯರೇ! ಅನಾದಿಯಾಗಿಯೂ ಅನಂತವಾಗಿಯೂ ನಡೆದುಬರುತ್ತಿರುವ ಈ ಕಾಲಚಕ್ರಪ್ರವಾಹದಲ್ಲಿ ಸಮಸ್ತಪ್ರಾಣಿಗಳಿಗೂ ಆವುದಾದರೊಂದು ಸಮಯದಲ್ಲಿ ಮೋಕ್ಷಕ್ಕೆ ಸಾಧನಗಳಾದ ಭಕ್ತಿಪ್ರಪತ್ತಿಗಳೊಳಗೆ ಅನ್ಯತರಸಾಧನವು ಬಂದೊದಗಬಹುದಾದುದರಿಂದ ಎಲ್ಲರೂ ಸಂಸಾರದಿಂದ ಬಿಡುಗಡೆಯನ್ನು ಹೊಂದತಕ್ಕವರಾಗಿಯೇ ಇರುವಲ್ಲಿ ನಿತ್ಯಸಂಸಾರಿಯಾದ ಜೀವನೂ ಉಂಟೆಂದು ಒಪ್ಪಿಕೊಳ್ಳುವ ಬಗೆ ಹೇಗೆ?"

### ೫೦೭. ಕೇಷಾಂ ಚಿದಾಚಾರ್ಯಾಣಾಂ ಮತೇನ ನಿತ್ಯಸಂಸಾರಿ ಸದ್ಭಾವಸಮರ್ಥನಂ.

ಇಂಥ ಆಕ್ಷೇಪಕ್ಕೆ ಕೆಲವರು ಆಚಾರ್ಯರು ಹೇಳುವ ಸಮಾಧಾನವೇನೆಂದರೆ—"ಇದಕ್ಕೆ ಮೊದಲು ಅತೀತಗಳಾದ ಅನಂತಕಲ್ಪಗಳಲ್ಲಿಯೂ ಇವನಿಗೆ ಮೋಕ್ಷಸಾಧನವು ಹೇಗೆ ಬಂದೊದಗಲಿಲ್ಲವೋ: ಅದರಂತೆ ಆಗಾಮಿಗಳಾದ ಕಲ್ಪಗಳಲ್ಲಿಯೂ ಮೋಕ್ಷಸಾಧನವು ಇವನಿಗೆ ಕೈಸೇರದಿರಬಹುದು. ಮುಂದಕ್ಕೆ ಬಂದೊದಗುವುದಾದರೆ ಇದುವರೆಗೂ ಬಾರದಿರುವುದಕ್ಕೆ ಕಾರಣವೇನು?" ಮುಂದೆ ಬರುವ ಕಾಲವು ಅನಂತವಾದುದರಿಂದ ಆಗ ಮೋಕ್ಷಸಾಧನವು ಕೈಸೇರುವುದಕ್ಕೆ ಸಾಕಾದಷ್ಟು ಅವಕಾಶವಿರುವಕಾರಣ ಮುಂದೆ ಬರಬಹುದೆಂದೂ, ಅತೀತಕಾಲವಾದರೆ ಸ್ವಲ್ಪವಾದುದರಿಂದ ಮೋಕ್ಷಸಾಧನವು ಕೈಸೇರುವುದಕ್ಕೆ ಸಾಕಾದಷ್ಟು ಅವಕಾಶವು ಇನ್ನೂ ಆಗಿಲ್ಲವಾದುದರಿಂದ ಹಿಂದೆ ಬರಲಿಲ್ಲವೆಂದೂ ಹೇಳಲಾಗುವುದಿಲ್ಲ; ಆಗಾಮಿಗಳಾದ ಕಲ್ಪಗಳು ಅನಂತಗಳಾಗಿ ಇರುವಂತೆ ಅತೀತಕಲ್ಪಗಳೂ ಅನಂತಗ

ಳಾಗಿ ಇರುವಲ್ಲಿ ಅತೀತಕಾಲವನ್ನು ಸ್ವಲ್ಪಕಾಲವೆಂದು ಭಾವಿಸಿ ಹಾಗೆ ಹೇಳು ವುದಕ್ಕೆ ಯಾರಿಗೆತಾನೆ ನಾಲಿಗೆ ಹೊರಟೀತು ?

ಮತ್ತು—ಉಭಯವಿಭೂತಿಗೆ ಒಡೆಯನಾದ ಶ್ರೀಮನ್ನಾರಾಯಣನಿಗೆ ಭೋಗವಿಭೂತಿ ಹೇಗೆ ನಿತ್ಯವಾಗಿ ಇರುವುದೋ ಅದರಂತೆ ಲೀಲಾವಿಭೂತಿಯೂ ನಿತ್ಯವಾಗಿಯೇ ಇರಬೇಕು. ಮೋಕ್ಷಸ್ಥಾನವನ್ನು ಹೊಂದಿದವರಿಗೆ ಪುನಃ ಸಂಸಾರಪ್ರಾಪ್ತಿ ಇಲ್ಲವಾದುದರಿಂದ ಅನಾದಿಕಾಲದಿಂದಲೂ ಇಲ್ಲಿಯೇ ಬಿದ್ದಿರುವ ಚೇತನರೇ ಅನಂತಕಾಲದವರೆಗೂ ಇಲ್ಲಿಯೇ ಬಿದ್ದಿದ್ದರಲ್ಲವೆ ಲೀಲಾವಿಭೂತಿ ನಿತ್ಯವೆನಿಸಿಕೊಳ್ಳಬಹುದು ? ಹಾಗಿಲ್ಲದೆ ಇದು ಅನಿತ್ಯವಾಗುವುದಾದರೆ ಇಲ್ಲಿ ಇರುವ ಸಮಸ್ತ ಚೇತನರಿಗೂ ಮೋಕ್ಷವನ್ನು ಕೊಟ್ಟಮೇಲೆ ಸೃಷ್ಟಿಸ್ಥಿತಿಸಂಹಾರಗಳಿಗೆ ಭಾಗಿಗಳಾಗುವ ಚೇತನರೇ ಇಲ್ಲಿ ಇಲ್ಲವಾಗಿ—"ನಿಶ್ಶೇಷಾತ್ಮಾಪವರ್ಗೇ ವಿರತವಿಹರಣೋ ವಿಶ್ವಕರ್ತಾ ತದಾ ಸ್ಯಾತ್" ಎಂಬಂತೆ ಈಶ್ವರನು ಸೃಷ್ಟಿಸ್ಥಿತಿಸಂಹಾರವ್ಯಾಪಾರ ಶೂನ್ಯನಾಗಿ ಸುಮ್ಮನೆ ಕುಳಿತುಕೊಳ್ಳಬೇಕಾಗುವುದು ; ಆಗ ಸೃಷ್ಟಿಸ್ಥಿತಿಸಂಹಾರ ಕಾರಣತ್ವವೆಂಬ ಈಶ್ವರಲಕ್ಷಣವೇ ಈಶ್ವರನಿಗೆ ತಪ್ಪಿಹೋಗುವುದು. ಆದಕಾರಣ ಲೀಲಾವಿಭೂತಿಗೆ ಅನಿತ್ಯತ್ವವನ್ನು ಹೇಳಲಾಗುವುದಿಲ್ಲ.

ಮತ್ತು—"ಅವ್ಯಚ್ಛಿನ್ನಾಸ್ತತಸ್ತ್ವೇತೇ ಸರ್ಗಸ್ಥಿತ್ಯಂತಸಂಯಮಾಃ" ಎಂಬ ಪರಾಶರವಚನದಿಂದ ಲೀಲಾವಿಭೂತಿಗೆ ನಿತ್ಯತ್ವವು ಸಿದ್ಧವಾಗಿರುವುದರಿಂದಲೂ,

"ತಾನಹಂ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್ ।
ಕ್ಷಿಪಾಮ್ಯಜಸ್ರಮಶುಭಾನಾಸುರೀಷ್ವೇವ ಯೋನಿಷು ॥"
"ಕಲ್ಪಕೋಟಿಶತೇನಾಪಿ ನ ಕ್ಷಮಾಮಿ ವಸುಂಧರೇ ।"

ಎಂಬುದಾಗಿ ಕ್ರೂರರಾದ ತಾಮಸರನ್ನು ಯಾವಾಗಲೂ ಸಂಸಾರದಲ್ಲಿಯೇ ತಳ್ಳುತ್ತಿರುವೆನೆಂದೂ, ಯಾವಾಗಲೂ ಅವರ ವಿಷಯದಲ್ಲಿ ಕ್ಷಮೆಯನ್ನು ನಾನು ತೋರಿಸುವುದಿಲ್ಲವೆಂದೂ ಭಗವದ್ವಾಕ್ಯವಿರುವುದರಿಂದಲೂ, ನಿತ್ಯಸಂಸಾರಿಯಾದ ಚೇತನನೂ ಉಂಟೆಂದು ಹೇಳುವುದರಲ್ಲಿ ತಡೆಯಿಲ್ಲ. ಎಂದು ಕೆಲವರು ಹೇಳುವರು.

## ೫೦೮. ಅನ್ಯೇಷಾಮಾಚಾರ್ಯಾಣಾಂ ಮತೇನ ನಿತ್ಯಸಂಸಾರಿಸದ್ಭಾವನಿರಾಕರಣಂ

ಇನ್ನು ಕೆಲವರು ಆಚಾರ್ಯರು ಹೇಳುವುದೇನೆಂದರೆ—ಹಿಂದೆ ತೋರಿಸಿದ ವಚನಗಳಿಗೆಲ್ಲಾ "ಅಂಥ ಕ್ರೂರರು ಅತಿದೀರ್ಘಕಾಲದವರೆಗೂ ಇಲ್ಲಿಯೇ ಇರು

ವರು " ಎಂದು ತಾತ್ಪರ್ಯವಲ್ಲದೆ " ನಿತ್ಯಸಂಸಾರಿಗಳಾಗಿ ಎಂದೆಂದಿಗೂ ಇಲ್ಲಿಯೇ ಇರುವರು " ಎಂದು ತಾತ್ಪರ್ಯವಲ್ಲ. ಹೇಗೆಂದರೆ—

## ೫೦೯. ಅವಿರುದ್ಧಯೋರಸಂಸರ್ಗಸ್ಯ ಕಾಲವಿಪ್ರಕರ್ಷ ವ್ಯಾಪ್ತತ್ವೋಪಪಾದನಂ

" ತತ್ಸಂಬಂಧಪ್ರತಿಬಂಧಕರಹಿತತ್ವೇ ಸತಿ ತತ್ಸಂಬಂಧಾಭಾವವತ್ತ್ವಂ ಯತ್ರ ತತ್ರ ತದಧಿಕರಣಕಾಲಾವೃತ್ತಿತ್ವಂ " ಎಂಬುದಾಗಿ ಒಂದಾನೊಂದು ವ್ಯಾಪ್ತಿ (ನ್ಯಾಯವು) ಲೋಕದಲ್ಲಿ ಕಾಣುತ್ತಿರುವುದು: ಎಂದರೆ " ಯಾವ ಪದಾರ್ಥವು ಯಾವ ಮತ್ತೊಂದು ಪದಾರ್ಥದೊಡನೆ ಸಂಬಂಧವನ್ನು ಪಡೆವುದಕ್ಕೆ ಯೋಗ್ಯತೆಯನ್ನು ಪಡೆದಿದ್ದರೂ ಪ್ರತಿಬಂಧಕರಹಿತವಾಗಿ ಇರುವಾಗಲೂ ಸಂಬಂಧವನ್ನು ಪಡೆಯದಿರುವುದೋ ಆ ಪದಾರ್ಥವು ಅಂಥ ಮತ್ತೊಂದು ಪದಾರ್ಥದ ಸಮಕಾಲದಲ್ಲಿ ಇರಲಿಲ್ಲವೆಂದು ಒಪ್ಪಿಕೊಳ್ಳಬೇಕು " ಎಂಬುದಾಗಿ ಒಂದಾನೊಂದು ಲೋಕನ್ಯಾಯವು ಅನುಭವಸಿದ್ಧವಾಗಿ ಇರುವುದು ;—

ಉದಾಹರಣೆ—" ಬಣ್ಣಗಾರನು ಬಟ್ಟೆಗಳಿಗೆ ಬಣ್ಣದ ಸಂಬಂಧವನ್ನು ಉಂಟುಮಾಡಬೇಕೆಂದು ನಿಶ್ಚಯಿಸಿ ಹೊಸಬಟ್ಟೆಗಳನ್ನು ತಂದು ಪ್ರಾತಃಕಾಲದಲ್ಲಿ ತನ್ನ ಮನೆಯಲ್ಲಿ ಮಡಗಿ ಮಧ್ಯಾಹ್ನದಲ್ಲಿ ಬಣ್ಣಗಳನ್ನೆಲ್ಲಾ ಸಿದ್ಧಪಡಿಸಿ ಬಟ್ಟೆಗಳನ್ನು ತರುವುದಕ್ಕಾಗಿ ಮನೆಯೊಳಗೆ ಹೋಗಿ ನೋಡುವಷ್ಟರಲ್ಲಿ ಬಟ್ಟೆಗಳೆಲ್ಲಾ ಸುಟ್ಟು ಬೂದಿಯಾಗಿ ಇದ್ದವು ; ಆ ಬಟ್ಟೆಗಳಿಗೆ ಬಣ್ಣವನ್ನು ಹಾಕಲು ಸಾಧ್ಯವಾಗಲಿಲ್ಲ.

ಇಲ್ಲಿ ಬಟ್ಟೆಗಳು ಬಣ್ಣದೊಡನೆ ಸಂಬಂಧವನ್ನು ಪಡೆವುದಕ್ಕೆ ಯೋಗ್ಯತೆಯನ್ನು ಪಡೆದೇ ಇದ್ದುವಲ್ಲದೆ ಅಯೋಗ್ಯಗಳಾಗಿ ಇರಲಿಲ್ಲ. ಮತ್ತು ಅವುಗಳಲ್ಲಿ ಬಣ್ಣದ ಸಂಬಂಧವುಂಟಾಗುವುದಕ್ಕೆ ಪ್ರತಿಬಂಧಕವೂ ಸಹ ಆವುದೂ ಇರಲಿಲ್ಲ. ಬಟ್ಟೆಗಳು ಸುಟ್ಟುಹೋಗದೆ ಮಧ್ಯಾಹ್ನಕಾಲದವರೆಗೂ ಇರುತ್ತಿದ್ದಪಕ್ಷದಲ್ಲಿ ಬಣ್ಣದ ಸಂಬಂಧವು ತಪ್ಪದೆ ಅವುಗಳಿಗೆ ಉಂಟಾಗುತ್ತಿದ್ದಿತು. ಆದರೂ—ಬಣ್ಣದ ಸಂಬಂಧವುಂಟಾಗುವುದಕ್ಕಾಗಿ ಏರ್ಪಟ್ಟಿದ್ದ ಮಧ್ಯಾಹ್ನಕಾಲದಲ್ಲಿ ಇರದೆ ಭಿನ್ನ ಕಾಲದಲ್ಲಿ ಇದ್ದುದೇ ಬಟ್ಟೆಗಳಿಗೆ ಬಣ್ಣದ ಸಂಬಂಧವುಂಟಾಗದಿದ್ದುದಕ್ಕೆ ಕಾರಣವಾಗಿ ಇರುವುದು "

ಈ ಲೋಕಾನುಭವದ ನಿಷ್ಕೃಷ್ಟಸ್ವರೂಪವು ಏನಾಗಿರುವುದೆಂದರೆ— " ಯಾವುದಾದರೊಂದು ಪದಾರ್ಥವು ಪದಾರ್ಥಾಂತರದೊಡನೆ ಸಂಸರ್ಗವನ್ನು

ಪಡೆವುದಕ್ಕೆ ಅರ್ಹವಾಗಿ ಇದ್ದು ಪ್ರತಿಬಂಧಕರಹಿತವಾಗಿರುವಾಗಲೂ ತತ್ಸಂಸರ್ಗಾಭಾವವನ್ನು ಪಡೆದಿರುವುದೋ ಆ ಪದಾರ್ಥವು ಅಂಥ ಪದಾರ್ಥಾಂತರದ ಸಮಕಾಲದಲ್ಲಿ ಇಲ್ಲದಿರಬೇಕು " ಎಂದು ನಿಷ್ಕೃಷ್ಟವಾಗಿ ಇರುವುದು. ಇದರಲ್ಲಿ—ತತ್ಸಮಕಾಲಾವೃತ್ತಿತ್ವವು ವ್ಯಾಪಕಧರ್ಮವಾಗಿಯೂ ಉಳಿದುದು ವ್ಯಾಪ್ಯಧರ್ಮವಾಗಿಯೂ ಇರುವುದು. ಬಟ್ಟೆಗಳಲ್ಲಿ ತತ್ಸಮಕಾಲಾವೃತ್ತಿತ್ವವೆಂಬ ವ್ಯಾಪಕಧರ್ಮವಿದ್ದುದರಿಂದಲೇ ಸಂಬಂಧಾಭಾವಪರ್ಯಂತವಾದ ವ್ಯಾಪ್ಯಧರ್ಮವೂ ಅವುಗಳಲ್ಲಿ ಬಂದಿರುವುದು. ಎಂದರೆ—ತತ್ಸಮಕಾಲದಲ್ಲಿ ಇರದೆ ತದ್ಭಿನ್ನಕಾಲದಲ್ಲಿ ಇದ್ದುದರಿಂದಲೇ ತತ್ಸಂಬಂಧವು ಉಂಟಾಗಲಿಲ್ಲವೆಂದು ಫಲಿಸಿತು.

## ೫೧೦. ಸರ್ವಕಾಲವರ್ತಿನ ಆತ್ಮನಃ ಉಕ್ತವ್ಯಾಪ್ತಿಪ್ರತ್ಯುದಾಹರಣತ್ವಂ.

ವ್ಯಾಪಕಧರ್ಮವಿಲ್ಲದಿದ್ದರೆ ವ್ಯಾಪ್ಯಧರ್ಮವೂ ಇರುವುದಿಲ್ಲವೆಂಬುದೂ ಲೋಕಸಿದ್ಧವಾಗಿ ಇರುವುದು. ಬೆಂಕಿಯಿಲ್ಲದಿದ್ದರೆ ಹೊಗೆಯೂ ಇರುವುದಿಲ್ಲವಷ್ಟೆ? ಬಟ್ಟೆಗಳು ಅನಿತ್ಯಪದಾರ್ಥಗಳಾದುದರಿಂದ ತತ್ಸಮಕಾಲಾವೃತ್ತಿತ್ವವು ಅವುಗಳಲ್ಲಿ ಕೂಡಬಹುದಾದಪ್ರಯುಕ್ತ ಈ ನ್ಯಾಯವು ಅವುಗಳಲ್ಲಿ ಸಂಘಟಿಸಬಹುದಾದರೂ, ಆತ್ಮವಸ್ತು ನಿತ್ಯಪದಾರ್ಥವಾದುದರಿಂದ ಸರ್ವಕಾಲವರ್ತಿಯಾದ ಆತ್ಮನಲ್ಲಿ ತತ್ಸಮಕಾಲಾವೃತ್ತಿತ್ವವು ಕೂಡುವುದಿಲ್ಲವಾಗಿ ಬಟ್ಟೆಗಳಿಗೆ ಹೇಳಿದ ನ್ಯಾಯವು ಇಲ್ಲಿ ಬರಲಾರದು. ವ್ಯಾಪಕವಿಲ್ಲದಿದ್ದರೆ ವ್ಯಾಪ್ಯವಿರುವುದಿಲ್ಲವೆಂಬುದು ಮಾತ್ರ ಇಲ್ಲಿಯೂ ಬರುವುದು.

## ೫೧೧. ಜೀವಸ್ಯ ಮೋಕ್ಷೋಪಾಯಸಂಬಂಧಾವಿರುದ್ಧತ್ವೋಪಪಾದನಂ.

೧ ಭಾವಾಭಾವಪದಾರ್ಥಗಳಿಗೆ ಪರಸ್ಪರಸ್ವಭಾವವಿರೋಧವಿರುವಂತೆ—ಜೀವ, ಮೋಕ್ಷೋಪಾಯ ಈ ಎರಡಕ್ಕೂ ಸ್ವಭಾವವಿರೋಧವಿದ್ದಿದ್ದಪಕ್ಷದಲ್ಲಿ ಈ ಎರಡಕ್ಕೂ ಸಂಸರ್ಗವುಂಟಾಗಲಿಲ್ಲವೆಂದು ಹೇಳಬಹುದಾಗಿದ್ದಿತು; ಆದರೆ ಅಂಥ ಸ್ವಭಾವವಿರೋಧವೇನೂ ಇವುಗಳಿಗೆ ಇಲ್ಲ. ವಾಸ್ತವವಾಗಿಯೂ ಅಂಥ ಸ್ವಭಾವವಿರೋಧವಿದ್ದಪಕ್ಷದಲ್ಲಿ " ಮೋಕ್ಷೋಪಾಯಸಿದ್ಧಿಗಾಗಿ ಪ್ರಯತ್ನಪಡಬೇಕೆಂದು " ಜೀವನನ್ನು ಕುರಿತು ಶಾಸ್ತ್ರವುತಾನೆ ಹೇಗೆ ವಿಧಿಸೀತು ?

೨ ಮತ್ತು—ಶೀತತ್ವೋಷ್ಣತ್ವಗಳಿಗೆ ನಿಯಮವಾಗಿ ಭಿನ್ನಾಧಿಕರಣವೃತ್ತಿತ್ವರೂಪವಾದ ಸ್ವಭಾವವಿರೋಧವಿರುವಂತೆ ಜೀವ, ಮೋಕ್ಷೋಪಾಯ ಈ

ಎರಡಕ್ಕೂ ಭಿನ್ನಾಧಿಕರಣವೃತ್ತಿತ್ವರೂಪಸ್ವಭಾವವಿರೋಧವಿದ್ದಿದ್ದರೆ ಈ ಎರಡಕ್ಕೂ ಸಂಸರ್ಗವುಂಟಾಗಲಿಲ್ಲವೆಂದು ಹೇಳಬಹುದಾಗಿದ್ದಿತು. ಆದರೆ ಅಂಥ ಸ್ವಭಾವವಿರೋಧವೇನೂ ಇವುಗಳಿಗಿಲ್ಲ. ವಸ್ತುಸ್ಥಿತಿಯನ್ನು ವಿಚಾರಮಾಡಿ ನೋಡಿದರೆ ಮೋಕ್ಷೋಪಾಯವೆಂಬುದು ಜ್ಞಾನವಿಶೇಷಾತ್ಮಕವಾದುದರಿಂದ ಜ್ಞಾನಾಶ್ರಯನಾದ ಚೇತನನೆಂಬ ಅಧಿಕರಣದಲ್ಲಿಯೇ ಇದಕ್ಕೆ ಸ್ಥಿತಿಸಂಭವಿಸಬೇಕಲ್ಲದೆ ಚೇತನಭಿನ್ನವಾದ ಜಡಪದಾರ್ಥದಲ್ಲಿ ಇದಕ್ಕೆ ಸ್ಥಿತಿಯೇ ಅಪ್ರಸಿದ್ಧವಾಗಿ ಇರುವುದು.

೩ ಮತ್ತು—ತೇಜಸ್ಸಿಗೂ ಅಂಧಕಾರಕ್ಕೂ ಭಿನ್ನಾಧಿಕರಣವೃತ್ತಿತ್ವವಿದ್ದರೂ ಪರ್ಯಾಯದಿಂದ ಏಕಾಧಿಕರಣವೃತ್ತಿತ್ವವು ಸಂಭವಿಸಬಹುದು; ಆದರೂ ಸಹಸ್ಥಿತಿಯಿಲ್ಲವೆಂಬ ವಿರೋಧವಿರುವುದು. ಅದರಂತೆ ಜೀವ, ಮೋಕ್ಷೋಪಾಯ ಈ ಎರಡಕ್ಕೂ ಸಹಸ್ಥಿತಿಯಿರುವುದಿಲ್ಲವೆಂಬ ವಿರೋಧವಿದ್ದಿದ್ದಪಕ್ಷದಲ್ಲಿ ಈ ಎರಡಕ್ಕೂ ಸಂಸರ್ಗವುಂಟಾಗಲಿಲ್ಲವೆಂದು ಹೇಳಬಹುದಾಗಿದ್ದಿತು. ಆದರೆ ಅಂಥ ಸಹಸ್ಥಿತಿಯಿರುವುದಿಲ್ಲವೆಂಬ ವಿರೋಧವೇನೂ ಇವುಗಳಿಗಿಲ್ಲ. ವಸ್ತುತಃ ವಿಚಾರಮಾಡಿ ನೋಡಿದರೆ ಜ್ಞಾನವೆಂಬುದು ಜೀವನಿಗೇ ಅಪೃಥಕ್ಸಿದ್ಧವಾದ ವಿಶೇಷಣವಾದುದರಿಂದಲೂ, ಮೋಕ್ಷೋಪಾಯವೆಂಬುದು ಜ್ಞಾನವಿಶೇಷಾತ್ಮಕವಾದುದರಿಂದಲೂ ಜೀವನಿಗೂ ಇದಕ್ಕೂ ಸಹಸ್ಥಿತಿಯೇ ಇರಬೇಕಲ್ಲದೆ ಪೃಥಕ್‌ಸ್ಥಿತಿಗೆ ಪ್ರಸಕ್ತಿಯೇ ಇಲ್ಲ.

೪ ಮತ್ತು—ತೃಣಕ್ಕೂ ಅಗ್ನಿಗೂ ನಾಶ್ಯನಾಶಕಭಾವರೂಪವಾದ ವಿರೋಧವಿರುವಂತೆ ಜೀವ, ಮೋಕ್ಷೋಪಾಯ ಈ ಎರಡಕ್ಕೂ ನಾಶ್ಯನಾಶಕಭಾವರೂಪವಾದ ವಿರೋಧವಿದ್ದಿದ್ದಪಕ್ಷದಲ್ಲಿ ಈ ಎರಡಕ್ಕೂ ಸಂಸರ್ಗವುಂಟಾಗಲಿಲ್ಲವೆಂದು ಹೇಳಬಹುದಾಗಿದ್ದಿತು. ಆದರೆ ಅಂಥ ವಿರೋಧವೇನೂ ಇವುಗಳಿಗಿಲ್ಲ. ವಸ್ತುತಃ ವಿಚಾರಮಾಡಿನೋಡಿದರೆ ಸಾಂಸಾರಿಕದುಃಖಸಾಗರದಲ್ಲಿ ಮುಳುಗಾಡುತ್ತಿರುವ ಜೀವಸ್ವರೂಪಕ್ಕೆ ಈ ಮೋಕ್ಷೋಪಾಯವೆಂಬುದು ಉಜ್ಜೀವಕವಾಗಿಯೇ ಇರುವುದರಿಂದ ನಾಶಕತ್ವಪ್ರಸಕ್ತಿಯೇ ಇಲ್ಲ.

ಹೀಗೆ ಜೀವಸ್ವರೂಪಕ್ಕೂ ಮೋಕ್ಷೋಪಾಯಕ್ಕೂ ಯಾವ ವಿಧವಾದ ವಿರೋಧವೂ ಇಲ್ಲವಾದಪ್ರಯುಕ್ತ ಮೋಕ್ಷೋಪಾಯದೊಡನೆ ಸಂಬಂಧವನ್ನು ಪಡೆವುದಕ್ಕೆ ಅರ್ಹನಾಗಿಯೇ ಇರುವ ಜೀವನಿಗೆ ಮೋಕ್ಷೋಪಾಯಸಂಬಂಧಪ್ರತಿಬಂಧಕವಿಲ್ಲದಿದ್ದರೂ ಮೋಕ್ಷೋಪಾಯಸಂಬಂಧವು ಉಂಟಾಗದಿದ್ದರೆ—

ಇದಕ್ಕೆ ಜೀವನು ಮೋಕ್ಷೋಪಾಯಸಂಬಂಧಕ್ಕಾಗಿ ಏರ್ಪಟ್ಟಿರುವ ಕಾಲದಲ್ಲಿ ಇರ ಲಿಲ್ಲವೆಂಬುದೇ ಕಾರಣವೆಂದು ಹೇಳಬೇಕು; ಆದರೆ ಸರ್ವಕಾಲವರ್ತಿಯಾದ ಜೀವ ನಲ್ಲಿ ಇದು ಕೂಡುವುದಿಲ್ಲವೆಂಬುದನ್ನು ಈಗತಾನೆ ಸೂಚಿಸಿರುವೆವು. ಅಂತು ತತ್ಸವು ಕಾಲಾವೃತ್ತಿತ್ವವೆಂಬ ವ್ಯಾಪಕಧರ್ಮವು ನಿತ್ಯನಾದ ಜೀವನಲ್ಲಿ ಬರಲಾರದಾದುದ ರಿಂದ ಪ್ರತಿಬಂಧಕರಾಹಿತ್ಯವಿಶಿಷ್ಟವಾದ ಮೋಕ್ಷೋಪಾಯಸಂಬಂಧಾಭಾವವೆಂಬ ವ್ಯಾಪ್ಯಧರ್ಮವೂ ಜೀವನಲ್ಲಿ ಬರಲಾರದು.

## ೫೧೨. ವಿಶೇಷಣವತಿ ವಿಶಿಷ್ಟಾಭಾವಸ್ಯ ವಿಶೇಷ್ಯಾಭಾವ ಪ್ರಯುಕ್ತತಯಾ ಜೀವೇ ಮೋಕ್ಷೋಪಾಯ ಸಂಬಂಧೋಪಪತ್ತಿಃ

ಈ ವ್ಯಾಪ್ಯಶರೀರದಲ್ಲಿ. ಪ್ರತಿಬಂಧಕರಾಹಿತ್ಯವೆಂಬುದು ವಿಶೇಷಣವಾ ಗಿಯೂ ಮೋಕ್ಷೋಪಾಯಸಂಬಂಧಾಭಾವವೆಂಬುದು ವಿಶೇಷ್ಯವಾಗಿಯೂ ಇರು ವುದರಿಂದ ವಿಶಿಷ್ಟವೇ ವ್ಯಾಪ್ಯವಾಗಿ ಇರುವುದು. "ವಿಶಿಷ್ಟಪದಾರ್ಥವು ಇಲ್ಲ" ಎಂಬ ವ್ಯವಹಾರವು ಉಂಟಾಗಬೇಕಾದರೆ ಮೂರುವಿಧವಾಗಿ ಉಂಟಾಗಬಹುದು; ಹೇಗೆಂದರೆ—

೧ ವಿಶೇಷಣವಿಶೇಷ್ಯಗಳೆರಡೂ ಇಲ್ಲದಿದ್ದರೆ ವಿಶಿಷ್ಟವಿಲ್ಲವೆಂಬ ವ್ಯವಹಾರವು ಬರಬಹುದು; ದಂಡವೂ ಪುರುಷನೂ ಇಲ್ಲದಿದ್ದರೆ ದಂಡವಿಶಿಷ್ಟನಾದ ಪುರುಷ ನಿಲ್ಲವೆಂಬ ವ್ಯವಹಾರವು ಉಂಟಷ್ಟೆ?

೨ ವಿಶೇಷ್ಯವಿದ್ದು ವಿಶೇಷಣಮಾತ್ರವಿಲ್ಲದಿದ್ದರೂ ವಿಶಿಷ್ಟವಿಲ್ಲವೆಂಬ ವ್ಯವ ಹಾರವು ಬರಬಹುದು; ಪುರುಷನಿದ್ದರೂ ದಂಡವಿಲ್ಲದಿದ್ದರೆ ದಂಡವಿಶಿಷ್ಟನಾದ ಪುರುಷನಿಲ್ಲವೆಂಬ ವ್ಯವಹಾರವು ಉಂಟಷ್ಟೆ?

೩ ವಿಶೇಷಣವಿದ್ದು ವಿಶೇಷ್ಯಮಾತ್ರವಿಲ್ಲದಿದ್ದರೂ ವಿಶಿಷ್ಟವಿಲ್ಲವೆಂಬ ವ್ಯವ ಹಾರವು ಬರಬಹುದು. ದಂಡವಿದ್ದರೂ ಪುರುಷನಿಲ್ಲದಿದ್ದರೆ ದಂಡವಿಶಿಷ್ಟನಾದ ಪುರುಷನಿಲ್ಲವೆಂಬ ವ್ಯವಹಾರವು ಉಂಟಷ್ಟೆ?

ಪ್ರಕೃತದಲ್ಲಿ ಪ್ರತಿಬಂಧಕರಾಹಿತ್ಯವೆಂಬ ವಿಶೇಷಣವಿದ್ದರೂ ವಿಶಿಷ್ಟವಾದ ವ್ಯಾಪ್ಯವಿಲ್ಲವೆಂಬ ವ್ಯವಹಾರವು ವಿಶೇಷ್ಯವಿಲ್ಲದುದರಿಂದಲೇ ಎಂದು ಹೇಳಬೇಕು; ಮೋಕ್ಷೋಪಾಯಸಂಬಂಧಾಭಾವವೆಂಬ ವಿಶೇಷ್ಯವು ಇಲ್ಲವೆಂದರೆ—ಸಂಬಂಧಾ ಭಾವದ ಅಭಾವವೆಂಬುದು ಸಂಬಂಧರೂಪವಾದುದರಿಂದ ಪ್ರತಿಬಂಧಕರಹಿತನಾದ ಚೇತನನಿಗೆ ಮೋಕ್ಷೋಪಾಯಸಂಬಂಧವೇ ಉಂಟೆಂದು ಪರ್ಯವಸಾನವಾಗಿ ಅಂಥ

ಮೋಕ್ಷೋಪಾಯದಿಂದ ಸಕಲಚೇತನರಿಗೂ ಮೋಕ್ಷಪ್ರಾಪ್ತಿ ತಡೆಯಿಲ್ಲದೆ ಉಂಟಾಗುವುದಾಗಿ ಇರುವಲ್ಲಿ ನಿತ್ಯಸಂಸಾರಿಯಾದ ಚೇತನನೊಬ್ಬನು ಉಂಟೆಂದು ಹೇಗೆ ಹೇಳಲಾದೀತು? ಕೆಲವು ಜೀವರಿಗೆ ಮಾತ್ರ ಮೋಕ್ಷೋಪಾಯಸಂಬಂಧಕ್ಕೆ ಪ್ರತಿಬಂಧಕವುಂಟೆಂದು ಹೇಳಲು ಆವುದೊಂದು ಗಮಕವೂ ಇಲ್ಲವಷ್ಟೆ?

## ೫೧೩. ಈಶ್ವರನಿಗ್ರಹವಿಶೇಷವಿಷಯಾಣಾಂ ನಿತ್ಯಸಂಸಾರಿತ್ವೋಪಪತ್ತ್ಯಾಶಂಕಾ.

ಅದೇತಕ್ಕೆ? "ಇವರಿಗೆ ಮೋಕ್ಷೋಪಾಯಸಂಬಂಧವುಂಟಾಗಬೇಡ" ಎಂಬುದಾಗಿ ಕೆಲವು ಚೇತನರ ವಿಷಯದಲ್ಲಿ ಈಶ್ವರನಿಗೆ ಸಂಕಲ್ಪವಿರುವುದಾದರೆ ಅಂಥ ಚೇತನರಿಗೆ ಮೋಕ್ಷೋಪಾಯಸಂಬಂಧವು ಎಂದಿಗೂ ಉಂಟಾಗಲಾರದಾಗಿ ಅಂಥವರು ನಿತ್ಯಸಂಸಾರಿಗಳಾಗಿ ಇರಬಹುದಲ್ಲವೆ?

## ೫೧೪. ತಾದೃಶಸ್ಯ ಈಶ್ವರನಿಗ್ರಹವಿಶೇಷಸ್ಯ ಅಸಂಭವಾತ್ ನಿತ್ಯಸಂಸಾರಿಸದ್ಭಾವಾನುಪಪತ್ತಿಃ.

ಇಲ್ಲ—ಅಂಥ ಭಗವತ್ಸಂಕಲ್ಪವೇ ಸಂಭವಿಸುವುದಿಲ್ಲ; ಹಾಗೆ ಸಂಭವಿಸುವುದಾದರೆ ಸಂದೇಹದಿಂದ ಯಾವ ಚೇತನನಿಗೂ ಮೋಕ್ಷಶಾಸ್ತ್ರದಲ್ಲಿ ಪ್ರವೃತ್ತಿಯೇ ಸಂಭವಿಸುವುದಿಲ್ಲವಾಗಿ ಸಮುದ್ರಘೋಷದಂತೆ ಮೋಕ್ಷಶಾಸ್ತ್ರವೇ ವ್ಯರ್ಥವಾಗುವುದು, ಕೆಲವು ಚೇತನರ ವಿಷಯದಲ್ಲಿ ಅಂಥ ಭಗವತ್ಸಂಕಲ್ಪವಿರುವುದಾದರೆ ಅಂಥ ಚೇತನರು ಯಾರೆಂಬುದು ಗೊತ್ತಾಗುವುದಿಲ್ಲವಾದುದರಿಂದ ಪ್ರತಿಯೊಬ್ಬ ಚೇತನನಿಗೂ ಸಂದೇಹವುಂಟಾಗಿ "ನನ್ನ ವಿಷಯದಲ್ಲಿ ಅಂಥ ಭಗವತ್ಸಂಕಲ್ಪವಿದ್ದುದಾದರೆ ನಾನು ಮೋಕ್ಷೋಪಾಯಕ್ಕಾಗಿ ಪಡುವ ಶ್ರಮವೆಲ್ಲವೂ ವ್ಯರ್ಥವಾದೀತು" ಎಂಬ ಭೀತಿ ಸಕಲಚೇತನರಿಗೂ ಉಂಟಾಗಬಹುದಾದಕಾರಣ ಮೋಕ್ಷಶಾಸ್ತ್ರದಲ್ಲಿ ಪ್ರವರ್ತಿಸುವವನೇ ದುರ್ಲಭನಾಗುವನಷ್ಟೆ?

## ೫೧೫. ಇಯತಾಽಪಿ ಕಾಲೇನ ಅಲಬ್ಧಮೋಕ್ಷೋಪಾಯಾನಾಂ ಭಾವಿಕಾಲೇಽಪಿ ಮೋಕ್ಷೋಪಾಯಸಂಭವಶ್ರದ್ಧಾರಹಿತಾನಾಂ ನಿತ್ಯಸಂಸಾರಿತ್ವೋಪಪತ್ತ್ಯಾಶಂಕಾತತ್ಪರಿಹಾರೌ.

ಅದೇತಕ್ಕೆ? ಅನಂತಗಳಾದ ಅತೀತಕಲ್ಪಗಳಲ್ಲಿ ಇದುವರೆಗೂ ಉಂಟಾಗದಿದ್ದ ಮೋಕ್ಷವಾಗಲಿ, ಮೋಕ್ಷೋಪಾಯವಾಗಲಿ ಇನ್ನು ಮುಂದಕ್ಕೆ ಉಂಟಾದೀತೆಂಬುದರಲ್ಲಿ ಏನು ನಂಬಿಕೆ? ಆದುದರಿಂದಲೇ ಮೋಕ್ಷೇಚ್ಛೆಯಾಗಲಿ ಮೋ

ಕ್ಷೋಪಾಯಪ್ರವೃತ್ತಿಯಾಗಲಿ ಯಾವ ಚೇತನರಿಗೂ ಉಂಟಾಗುವುದಿಲ್ಲವಾದ ಪ್ರಯುಕ್ತ ಅವರೆಲ್ಲರೂ ನಿತ್ಯಸಂಸಾರಿಗಳಾಗಿ ಇರಬಹುದಲ್ಲವೆ?

ಇಲ್ಲ—ನಿತ್ಯಸಂಸಾರಿಗಳಾಗಿ ಯಾರೂ ಇರಲಾರರು. ಅತೀತಗಳಾದ ಅನಂತಕಲ್ಪಗಳಲ್ಲಿಯೂ, ನಮಗೆ ದೊರೆಯದಿದ್ದ ಈ ವರ್ತಮಾನಶರೀರವು ಅನಾದಿಯಾದ ಕರ್ಮಪ್ರವಾಹದ ವಿಚಿತ್ರವಾದ ಪರಿವರ್ತನೆಯೆಂಬ ಕಾರಣಸಾಮಗ್ರೀ ಬಲದಿಂದ ಈ ಜನ್ಮದಲ್ಲಿ ನಮಗೆ ದೊರೆತಿರುವಂತೆಯೇ—ಅನಾದಿಯಾದ ಸುಕೃತ ಪ್ರವಾಹದ ಪರಿಪಾಕವಿಶೇಷದಿಂದ ಮೋಕ್ಷರುಚಿಯೂ, ತತ್ಸಾಧನಾನುಷ್ಠಾನದಲ್ಲಿ ಪ್ರವೃತ್ತಿಯೂ ಕಾಲವಿಶೇಷದಲ್ಲಿ ಉಂಟಾದೀತೆಂಬುದರಲ್ಲಿ ತಡೆಯೇನೂ ಇಲ್ಲ.

## ೫೧೬. ಶಾಸ್ತ್ರಪ್ರಾಮಾಣ್ಯಾನ್ಯಥಾನುಪಪತ್ತ್ಯಾ ನಿತ್ಯಸಂಸಾರಿ ಸದ್ಭಾವಾನುಪಪತ್ತಿಃ

ಓಹೋ—ಹಾಗೆ ಹೇಳಲಾಗುವುದಿಲ್ಲ; ವರ್ತಮಾನಶರೀರವು ಪ್ರತ್ಯಕ್ಷ ಪ್ರಮಾಣಸಿದ್ಧವಾಗಿ ಇರುವುದರಿಂದ ನೀವು ಹೇಳಿದಂತೆ ಕರ್ಮದ ವಿಚಿತ್ರಪರಿವರ್ತನೆಯನ್ನು ಇದಕ್ಕೆ ಕಾರಣವಾಗಿ ಕಲ್ಪಿಸಬಹುದು; ಆದರೆ ಅದರಂತೆ ಮೋಕ್ಷರುಚಿಯಾಗಲಿ, ತತ್ಸಾಧನಪ್ರವೃತ್ತಿಯಾಗಲಿ ಪ್ರಮಾಣಸಿದ್ಧವಲ್ಲವಾದುದರಿಂದ ಇದಕ್ಕೆ ಸುಕೃತಪರಿಪಾಕವನ್ನು ಕಾರಣವಾಗಿ ಕಲ್ಪಿಸುವುದು ಹೇಗೆ? ಎಂದು ಆಶಂಕಿಸಲಾಗದು—

ಏತಕ್ಕೆಂದರೆ—ಪ್ರತ್ಯಕ್ಷಪ್ರಮಾಣದಿಂದ ಇದು ಸಿದ್ಧವಾಗಿ ಇಲ್ಲವಾದರೂ "ಬ್ರಹ್ಮವಿದಾಪ್ನೋತಿ ಪರಂ" ಎಂಬುವೇ ಮೊದಲಾದ ಶಬ್ದಪ್ರಮಾಣಗಳಿಂದ ಸಿದ್ಧವಾಗಿ ಇರುವಕಾರಣ ಸುಕೃತಪರಿಪಾಕವೆಂಬ ಕಾರಣಸಾಮಗ್ರಿಯನ್ನು ಇದಕ್ಕೂ ಕಲ್ಪನೆಮಾಡುವುದರಲ್ಲಿ ಅನುಪಪತ್ತಿಯೇನೂ ಇಲ್ಲ. ಮೋಕ್ಷವೂ, ತತ್ಸಾಧನ ಪ್ರವೃತ್ತಿಯೂ ಕೆಲವರಿಗೆ ಯಾವಾಗಲೂ ಉಂಟಾಗುವುದೇ ಇಲ್ಲವೆಂದು ಹೇಳುವುದಾದರೆ—ಬ್ರಹ್ಮಜ್ಞಾನಿಯಾದವನಿಗೆ ಮೋಕ್ಷವು ತಪ್ಪುವುದಿಲ್ಲವೆಂದು ಹೇಳುವ ಶಾಸ್ತ್ರಗಳಿಗೆ ಪ್ರಾಮಾಣ್ಯವೇ ದುರ್ಲಭವಾಗುವುದಲ್ಲವೆ?

ಆದಕಾರಣ ಈಗ ಸಂಸಾರಿಗಳಾಗಿ ಇರುವ ಸಕಲಚೇತನರಿಗೂ ಕಾಲ ವಿಶೇಷದಲ್ಲಿ ಮೋಕ್ಷೋಪಾಯಪ್ರವೃತ್ತಿಯೂ, ಅದರಿಂದ ಮೋಕ್ಷವೂ ಸಂಭವಿಸುವುವೆಂಬುದರಲ್ಲಿ ಸಂದೇಹವೇ ಇಲ್ಲವಾದಪ್ರಯುಕ್ತ ಯಾವ ಚೇತನನೂ ನಿತ್ಯ ಸಂಸಾರಿಯಾಗಿ ಇರಲಾರನು.

## ೫೧೭. ನಿತ್ಯಸಂಸಾರ್ಯನಭ್ಯುಪಗಮೇ ಕಾಲವಿಶೇಷೇ ಈಶ್ವರಸ್ಯ ಜಗತ್ಕಾರಣತ್ವಹಾನ್ಯಾಶಂಕಾತತ್ಪರಿಹಾರೌ.

ಓಹೋ—ಹಾಗೆ ಸಕಲಚೇತನರಿಗೂ ಮೋಕ್ಷವು ದೊರೆವುದಾದರೆ ಒಂದಾನೊಂದು ಕಾಲವಿಶೇಷದಲ್ಲಿ ಲೀಲಾವಿಭೂತಿಗೇ ಅಭಾವವುಂಟಾಗಿ ಆಗ ಸೃಷ್ಟ್ಯಾದಿವ್ಯಾಪಾರಶೂನ್ಯನಾದ ಅಚ್ಯುತನೆಂಬ ಈಶ್ವರನು ಜಗತ್ಕಾರಣತ್ವವೆಂಬ ತನ್ನ ಅಸಾಧಾರಣಲಕ್ಷಣದಿಂದಲೇ ಚ್ಯುತನಾಗಬೇಕಾಗಿ ಬರುವುದಲ್ಲವೆ?

ಇಲ್ಲ—ಅಚ್ಯುತನು ಯಾವಾಗಲೂ ಚ್ಯುತನಾಗುವುದಿಲ್ಲ. ಚೇತನರಿಗೆ ಸಂಖ್ಯೆಯಿಲ್ಲವಾದುದರಿಂದ ಒಂದೊಂದುಕಲ್ಪದಲ್ಲಿ—ಒಬ್ಬೊಬ್ಬ ಚೇತನನಿಗೇನು ಕೋಟಿಕೋಟಿ ಚೇತನರಿಗೆ ಮೋಕ್ಷವನ್ನು ಕೊಡುತ್ತಿದ್ದರೂ ಈ ಲೀಲಾವಿಭೂತಿಯಲ್ಲಿ ಚೇತನರು ಕಡಮೆಯಾಗುವುದಿಲ್ಲ; ಲೀಲಾವಿಭೂತಿಗೆ ಅಭಾವವೂ ಉಂಟಾಗುವುದಿಲ್ಲ; ಈಶ್ವರನು ಜಗತ್ಕಾರಣತ್ವಲಕ್ಷಣದಿಂದ ಚ್ಯುತನಾಗುವುದೂ ಇಲ್ಲ. ಸಮುದ್ರದಿಂದ ಎಷ್ಟೆಷ್ಟೇ ನೀರನ್ನು ಹೊರಗೆ ತರುತ್ತಿದ್ದರೂ ಸಮುದ್ರದಲ್ಲಿ ಜಲವು ಕಡಮೆಯಾಯಿತೆಂಬುದಿಲ್ಲವಷ್ಟೆ? ಆದಕಾರಣ ಸಂಸಾರಿಗಳು ಉಂಟೇ ಹೊರತು ನಿತ್ಯಸಂಸಾರಿಗಳು ಇಲ್ಲವೆಂಬುದು ವೇದಾಂತಸಿದ್ಧಾಂತವಾಗಿ ಇರುವುದು.

## ೫೧೮. ವೈರಾಗ್ಯಜನನಾರ್ಥಂ ಘಟೀಯಂತ್ರದೃಷ್ಟಾಂತೇನ ಸಂಸಾರಿಣಾಂ ದುರವಸ್ಥಾವರ್ಣನಂ.

ಇಂಥ ಸಂಸಾರಿಚೇತನರ ದುರವಸ್ಥಾಕ್ರಮವು ಹೇಗಿರುವುದೆಂದರೆ—ರೈತನು ಗದ್ದೆಗೆ ನೀರನ್ನು ಹಾಯಿಸುವುದಕ್ಕಾಗಿ ಬಾವಿಯನ್ನು ತೋಡಿ ರಾಟಣವನ್ನಿಟ್ಟು ಬಲವಾದ ಹಗ್ಗದ ಎರಡು ತುದಿಗಳಲ್ಲಿಯೂ ಒಂದೊಂದು ಬಿಂದಿಗೆಯನ್ನು ಕಟ್ಟಿ ರಾಟಣದ ಮೇಲೆ ಇಟ್ಟು ಒಂದು ತುದಿಯನ್ನು ಮೊದಲು ಬಾವಿಯೊಳಕ್ಕೆ ಬಿಟ್ಟು ಆ ಬಿಂದಿಗೆಯೊಳಗೆ ನೀರುತುಂಬಿದ ಮೇಲೆ ಅದನ್ನು ಮೇಲಕ್ಕೆ ಎಳೆಯುವಾಗಲೇ ಮೇಲೆ ರಿಕ್ತವಾಗಿದ್ದ ಮತ್ತೊಂದು ಬಿಂದಿಗೆ ಕೆಳಗೆ ಹೋಗುವುದು. ಬಾವಿಯ ಮಧ್ಯಭಾಗದಲ್ಲಿ ಈ ಎರಡು ಬಿಂದಿಗೆಗಳೂ ಒಂದಕ್ಕೊಂದು ಸಂಧಿಸಿದಾಗ ಜಲಪೂರ್ಣವಾದ ಬಿಂದಿಗೆ ರಿಕ್ತವಾದ ಬಿಂದಿಗೆಯನ್ನು ನೋಡಿ "ಅಯ್ಯೋ ನಿನ್ನ ಯೋಗ್ಯತೆ ಇಷ್ಟೇಯೋ? ನನ್ನನ್ನು ನೋಡು ಪರಿಪೂರ್ಣನಾಗಿ ಇರುವೆನು" ಎಂದು ಪರಿಹಾಸ್ಯಮಾಡುವಂತೆ ತೋರುವುದು. ಆಗ—ರಿಕ್ತವಾಗಿದ್ದ ಈ ಬಿಂದಿಗೆಯೂ ಮೌನದಿಂದಿರದೆ ಆ ಬಿಂದಿಗೆಯನ್ನು ನೋಡಿ "ಎಲೈ ಮದಾಂಧನೇ? ನಿನ್ನ ಈ ದರ್ಪವು ಸ್ವಲ್ಪಹೊತ್ತಿನಲ್ಲಿಯೇ ಮುರಿದು ನನ್ನ ಈಗಿನ ಅವಸ್ಥೆಯನ್ನು

ನೀನೂ ಶೀಘ್ರದಲ್ಲಿಯೇ ಹೊಂದುವಿ; ನನ್ನ ಈ ದುರ್ದಶೆಯೂ ಸ್ವಲ್ಪಹೊತ್ತಿನಲ್ಲಿ ನಿವೃತ್ತವಾಗಿ ನಿನ್ನ ಈಗಿನ ಅವಸ್ಥೆಯನ್ನು ನಾನೂ ಶೀಘ್ರದಲ್ಲಿ ಹೊಂದಿದವನಾಗಿ ಮೇಲಕ್ಕೆ ಬರುವೆನು; ಆಗ ನನ್ನ ಎದುರಿಗೆ ಬರುತ್ತಿರುವ ನಿನ್ನನ್ನು ಕೀಳುಮಾಡಿ ನಾನು ಮೇಲಕ್ಕೆ ಹೋಗುವೆನೆಂಬುದನ್ನು ನೀನು ಈಗಲೇ ತಿಳಿದುಕೊಳ್ಳಬೇಕು'' ಎಂಬ ಪ್ರತ್ಯುತ್ತರವನ್ನು ಹೇಳುತ್ತಿರುವುದೋ ಎಂಬಂತೆ ತಲೆದೂಗುತ್ತ ಕೆಳಗೆ ಹೋಗುವುದು. ಅಂತು ಕೆಳಗೆ ಹೋದಾಗ ತುಂಬಿಕೊಳ್ಳುವುದೂ, ತುಂಬಿಕೊಂಡ ಮೇಲೆ ರಿಕ್ತವಾಗುವುದಕ್ಕೋಸ್ಕರ ಮೇಲಕ್ಕೆ ಬರುವುದೂ ಇವೇ ಈ ಬಿಂದಿಗೆಗಳ ಕೆಲಸಗಳಾಗಿ ಇರುವುವು.

ಲೋಕಪ್ರಸಿದ್ಧವಾದ ಈ ಘಟೀಯಂತ್ರದೃಷ್ಟಾಂತವನ್ನು ಸಂಸಾರಿಚೇತನರ ವಿಷಯದಲ್ಲಿ ಊಹಿಸಿಕೊಳ್ಳಬೇಕು—ಹೇಗೆಂದರೆ—ಬ್ರಹ್ಮಾಂಡದ ಒಳಭಾಗವೆಂಬ ಮಹಾಬಿಲದೊಳಗೆ ನಿರಂತರವಾಗಿ ಉರುಳುತ್ತಿರುವ ಕಾಲಚಕ್ರವೆಂಬ ರಾಟಣದಲ್ಲಿ ಕರ್ಮಪಾಶವೆಂಬ ಬಲವಾದ ಹಗ್ಗದಿಂದ ಕಟ್ಟಲ್ಪಟ್ಟಿರುವ ಸಂಸಾರಿಚೇತನರು ಬಿಂದಿಗೆಗಳಂತೆ ಮೇಲಕ್ಕೂ ಕೆಳಕ್ಕೂ ತಿರುಗುತ್ತ ಕೆಳಗೆ ಹೋದಾಗ ಪುಣ್ಯಪಾಪ ಗಳೆಂಬ ನೀರನ್ನು ತಮ್ಮೊಳಗೆ ತುಂಬಿಕೊಂಡು ಪರಲೋಕವೆಂಬ ಆ ಆ ಸ್ಥಾನಗಳಿಗೆ ಹೋಗಿ ಸುಖದುಃಖಾನುಭವದಿಂದ ಪುಣ್ಯಪಾಪಗಳನ್ನು ಕಳೆದುಕೊಂಡು ಪುನಃ ತುಂಬಿಕೊಳ್ಳುವುದಕ್ಕೆ ಕೆಳಗೆ ಬರುತ್ತ ಮಧ್ಯದಲ್ಲಿ ಸಂಧಿಸಿದವರಿಂದ ಪರಿಹಾಸ್ಯ ಮಾಡಿಸಿಕೊಂಡು ತಾವೂ ಅವರನ್ನು ಪರಿಹಾಸ್ಯಮಾಡುತ್ತ ತಮ್ಮ ತಮ್ಮ ದಾರಿ ಯನ್ನು ಹಿಡಿದು ಹೋಗುವರು.

## ೫೮೧. ಪುಣ್ಯವತಾಮಾರೋಹಾವರೋಹಕ್ರಮಃ

ಇವರಲ್ಲಿ—ಪುಣ್ಯವೆಂಬ ನೀರನ್ನು ತುಂಬಿಕೊಂಡವರು—''ಧೂಮ, ರಾತ್ರಿ, ಕೃಷ್ಣಪಕ್ಷ, ದಕ್ಷಿಣಾಯನ, ಪಿತೃಲೋಕ, ಆಕಾಶ, ಚಂದ್ರಮಂಡಲ ಈ ಕ್ರಮ ದಲ್ಲಿ ಮೇಲಕ್ಕೆ ಹತ್ತಿದವರಾಗಿ ಸುಖಾನುಭವಯೋಗ್ಯವಾದ ಸ್ವರ್ಗಲೋಕವನ್ನು ಸೇರುವರು. ಮತ್ತು ಇಳಿದುಬರುವ ಸಮಯದಲ್ಲಿ—ಪಂಚಾಗ್ನಿವಿದ್ಯೆಯಲ್ಲಿ ತೋ ರಿಸಿದ ಕ್ರಮದಿಂದ ಇಳಿದುಬರುವರು. ಪಂಚಮಾಹುತ್ಯಪೇಕ್ಷಾನಿಯಮವು ಯೋನಿಜ ಶರೀರಕ್ಕೇ ಇರುವುದಲ್ಲದೆ ಅಯೋನಿಜಶರೀರಕ್ಕೆ ಇಲ್ಲವೆಂಬುದನ್ನು ಅಚಿತ್ತತ್ತ್ವ ಪರಿಚ್ಛೇದದಲ್ಲಿಯೇ ತೋರಿಸಿರುವೆವು. ಆದುದರಿಂದಲೇ ದ್ರೌಪದಿ ಧೃಷ್ಟದ್ಯುಮ್ನ ಮುಂತಾದವರ ಶರೀರಕ್ಕೆ ಪಂಚಮಾಹುತ್ಯಪೇಕ್ಷೆಯಿಲ್ಲದೆಯೇ ಉತ್ಪತ್ತಿ ಉಂಟಾ ಗಬಹುದು.

### ೫೨೦. ಪಾಪಿನಾಂ ನಾರಕದುಃಖಾನುಭವಸೂಚನಂ.

ಹೀಗೆಯೇ ಪಾಪವೆಂಬ ನೀರನ್ನು ತುಂಬಿಕೊಂಡವರಿಗೆ ಅತಿಕ್ರೂರವಾಗಿ ಇರುವ ನರಕಮಾರ್ಗಪ್ರಾಪ್ತಿಯೂ, ನರಕದುಃಖಾನುಭವವೂ ಪುರಾಣಾದಿಗಳಲ್ಲಿ ಅತಿವಿಸ್ತರವಾಗಿ ವರ್ಣಿಸಲ್ಪಟ್ಟಿರುವುವು; ಅವುಗಳನ್ನು ಸ್ಮರಿಸಿಕೊಂಡಮಾತ್ರಕ್ಕೆ ನಮ್ಮ ಶರೀರವು ಕದಂಬಪುಷ್ಪದ ಮೊಗ್ಗಿನಂತೆ ರೋಮಾಂಚಿತವಾಗಿ ನಡುಗುವು ದರಿಂದ ಅವುಗಳನ್ನು ಇಲ್ಲಿ ವಿಶದವಾಗಿ ಬರೆಯಲಾರೆವು.

### ೫೨೧. ಅಸಂಸಾರಿಚೇತನಸ್ಯ ನಿತ್ಯಮುಕ್ತಭೇದೇನ ದ್ವೈವಿಧ್ಯಂ ತಲ್ಲಕ್ಷಣಂ ಚ.

ಹೀಗೆ ಸಂಸಾರಿಯಾದ ಜೀವನ ಕಥೆಯನ್ನು ಸಂಕ್ಷೇಪವಾಗಿ ತೋರಿಸಿ ದೆವು; ಅಸಂಸಾರಿಯಾದ ಜೀವತತ್ತ್ವವನ್ನು ಸಾಮಾನ್ಯತಃ ನಿತ್ಯರೆಂಬುದಾಗಿ ಯೂ, ಮುಕ್ತರೆಂಬುದಾಗಿಯೂ ಎರಡುವಿಧವಾಗಿ ವಿಂಗಡಿಸಬಹುದು. ಸಂಸಾ ರಕ್ಕೆ ಕಾರಣವಾದ ಕರ್ಮಸಂಬಂಧವು ಯಾವಾಗಲೂ ಸಂಭವಿಸುವುದಿಲ್ಲವಾದುದ ರಿಂದ ಕಾಲತ್ರಯದಲ್ಲಿಯೂ ಸಂಸಾರಸಂಬಂಧವಿಲ್ಲದವರು ನಿತ್ಯರೆನಿಸಿಕೊಳ್ಳುವರು. ಭಕ್ತಿಪ್ರಪತ್ತಿಗಳೆರಡರಲ್ಲಿ ಅನ್ಯದಾದರೊಂದನ್ನು ಅವಲಂಬಿಸಿ ಭಗವದನುಗ್ರಹ ದಿಂದ ಸಂಸಾರನಿವೃತ್ತಿಪೂರ್ವಕವಾಗಿ ಭಗವತ್ಸಾನ್ನಿಧ್ಯವನ್ನು ಹೊಂದಿದವರು ಮುಕ್ತರೆನಿಸಿಕೊಳ್ಳುವರು.

### ೫೨೨. ಸ್ವರೂಪತೋ ಗುಣತೋ ವಿಭೂತಿತಶ್ಚ ಈಶ್ವರಸ್ಯ ಅಪರಿಚ್ಛಿನ್ನತ್ವಾತ್ ನಿತ್ಯವತ್ ಮುಕ್ತವಚ್ಚ ಸಂಸಾರಿಣಾಮಪ್ಯಾನಂತ್ಯಂ.

ಅನಂತಶಬ್ದವಾಚ್ಯನಾದ ಸರ್ವೇಶ್ವರನಿಗೆ—ಸ್ವರೂಪದಿಂದಲೂ, ಗುಣದಿಂ ದಲೂ, ವಿಭೂತಿಯಿಂದಲೂ ಅಪರಿಚ್ಛಿನ್ನತ್ವವು ತೋರುವುದರಿಂದ ಭಗವದ್ವಿಭೂತಿಗೆ ಒಳಪಟ್ಟ ನಿತ್ಯರಿಗೂ ಮುಕ್ತರಿಗೂ ಆನಂತ್ಯವು ತೋರುವಂತೆ ಸಂಸಾರಿಚೇತನರಿಗೂ ಆನಂತ್ಯವು ತುಲ್ಯವಾಗಿ ಇರುವುದರಿಂದ ಒಂದೊಂದು ದಿನದಲ್ಲಿಯೂ ಸಾವಿರಾರು ಚೇತನರಿಗೆ ಮೋಕ್ಷವನ್ನು ಕೊಡುತ್ತಿದ್ದರೂ ಬದ್ಧಚೇತನರು ಮುಗಿದುಹೋಗು ವವರಲ್ಲವೆಂಬುದನ್ನು ಹಿಂದೆಯೇ ಹೇಳಿ ಇರುವೆವು.

### ೫೨೩. ಬದ್ಧಮುಕ್ತನಿತ್ಯಾನಾಮಾನಂತ್ಯೇ ತುಲ್ಯೇ ತ್ರಿಪಾದ್ವಿಭೂತಿ ಸ್ಥಾನಾಮಾಧಿಕ್ಯಕಥಂತಾಪ್ರಶ್ನಃ.

ಓಹೋ—ಬದ್ಧಮುಕ್ತನಿತ್ಯರೆಂಬ ತ್ರಿವಿಧಚೇತನರಿಗೂ ಆನಂತ್ಯವು ತುಲ್ಯ ವಾಗಿ ಇರುವುದಾದರೆ—"ಪಾದೋಽಸ್ಯ ವಿಶ್ವಾ ಭೂತಾನಿ-ತ್ರಿಪಾದಸ್ಯಾಮೃತಂ

ದಿವಿ" ಎಂಬ ಶ್ರುತಿಯಲ್ಲಿ—ಲೀಲಾವಿಭೂತಿಯೊಳಗೆ ಇರುವ ಬದ್ಧಚೇತನರ ಸಂಖ್ಯೆಗಿಂತಲೂ, ನಿತ್ಯವಿಭೂತಿಯಲ್ಲಿ ಇರುವ ನಿತ್ಯಮುಕ್ತರ ಸಂಖ್ಯೆ ಮೂರುಪಾಲು ಹೆಚ್ಚಾಗಿ ಇರುವುದೆಂದು ತೋರಿಬರುವುದು ಹೇಗೆ ಸಂಗತವಾದೀತು? ಹೀಗೆ ಸಂಗತವಾದೀತು—

## ೫೨೪. ಆನಂತ್ಯೇ ತುಲ್ಯೇಽಪಿ ದೃಷ್ಟಾಂತಮುಖೇನ ತ್ರಿಪಾದ್ವಿಭೂತಿ ಸ್ಥಾನಾಮಾಧಿಕ್ಯೋಪಪಾದನಂ.

ಬ್ರಹ್ಮಕಲ್ಪಗಳಿಗೂ, ಅವುಗಳಿಗೆ ಒಳಪಟ್ಟ ಸಂವತ್ಸರಗಳಿಗೂ ಆನಂತ್ಯವು ತುಲ್ಯವಾಗಿ ಇದ್ದರೂ ಕಲ್ಪಗಳ ಸಂಖ್ಯೆಗಿಂತಲೂ ಸಂವತ್ಸರಗಳ ಸಂಖ್ಯೆಗೆ ಆಧಿಕ್ಯವು ಸಂಗತವಾಗುವಂತೆ ಇಲ್ಲಿಯೂ ಸಂಗತವಾಗಲು ತಡೆಯಿಲ್ಲ. ಬ್ರಹ್ಮ ಕಲ್ಪದ ಸಂಖ್ಯೆ ಒಂದಾದರೆ ಅದಕ್ಕೆ ಒಳಪಟ್ಟ ವರ್ಷಗಳ ಸಂಖ್ಯೆ ಒಂದಾಗಿರುವು ದಿಲ್ಲ; ಕಿಂತು ನಲವತ್ತಮೂರುಲಕ್ಷದ ಇಪ್ಪತ್ತುಸಾವಿರವರ್ಷಗಳನ್ನು ಸಾವಿರ ಸಂಖ್ಯೆಯಿಂದ ಗುಣಿಸಿದರೆ ಯಾವ ಸಂಖ್ಯೆ ಲಬ್ಧವಾಗುವುದೋ ಅಷ್ಟು ಸಂಖ್ಯೆ ಯಾಗಿ ಇರುವುದು; ಎಂದರೆ ನಾನೂರಮೂವತ್ತೆರಡುಕೋಟಿ ವರ್ಷಗಳಾಗು ವುವು.

ಇದರಂತೆಯೇ ವರ್ಷಗಳಿಗೂ ತಿಂಗಳುಗಳಿಗೂ ಆನಂತ್ಯವು ತುಲ್ಯವಾಗಿ ಇದ್ದರೂ ವರ್ಷಗಳಿಗಿಂತಲೂ ತಿಂಗಳುಗಳ ಸಂಖ್ಯೆ ಹೆಚ್ಚಾಗಿ ಇರುವಂತೆಯೂ, ತಿಂಗಳುಗಳ ಸಂಖ್ಯೆಗಿಂತಲೂ ದಿನಗಳ ಸಂಖ್ಯೆ ಹೆಚ್ಚಾಗಿ ಇರುವಂತೆಯೂ, ದಿನ ಗಳ ಸಂಖ್ಯೆಗಿಂತಲೂ ಯಾಮಗಳ ಸಂಖ್ಯೆ ಹೆಚ್ಚಾಗಿ ಇರುವಂತೆಯೂ. ಅವುಗಳಿ ಗಿಂತಲೂ ಮುಹೂರ್ತಗಳ ಸಂಖ್ಯೆ ಹೆಚ್ಚಾಗಿ ಇರುವಂತೆಯೂ, ನಿಮಿಷ ಕ್ಷಣ ಮೊದಲಾದುವುಗಳ ಸಂಖ್ಯೆ ಇನ್ನೂ ಹೆಚ್ಚಾಗಿ ಇರುವಂತೆಯೂ—ಬದ್ಧ, ಮುಕ್ತ, ನಿತ್ಯರಿಗೆ ಆನಂತ್ಯವು ತುಲ್ಯವಾಗಿ ಇದ್ದರೂ ಬದ್ಧರಿಗಿಂತಲೂ ನಿತ್ಯಮುಕ್ತರ ಸಂಖ್ಯೆ ಹೆಚ್ಚಾಗಿ ಇರುವುದೆಂದರೆ ವಿರೋಧವೇನೂ ಇಲ್ಲ. ಆದುದರಿಂದಲೇ ಮುಕ್ತರಿ ಗಿಂತಲೂ ನಿತ್ಯರ ಸಂಖ್ಯೆ ಇನ್ನೂ ಹೆಚ್ಚಾಗಿ ಇರಲು ತಡೆಯಿಲ್ಲ.

## ೫೨೫. ನಿತ್ಯಸೂರಿಸದ್ಭಾವೇ ಪ್ರಮಾಣಪ್ರದರ್ಶನಂ.

ಹೀಗೆ ಚೇತನರೊಳಗೆ ಬದ್ಧರೆಂದೂ, ಮುಕ್ತರೆಂದೂ, ನಿತ್ಯರೆಂದೂ ಆಂತರಾಳಿ ಕಭೇದವು ಸಿದ್ಧವಾಗಿ ಇದ್ದರೂ ಕೆಲವರು ಮೊದಲಿನ ಎರಡು ಭೇದಗಳನ್ನು ಮಾತ್ರ ಅಂಗೀಕರಿಸುವರಲ್ಲದೆ ನಿತ್ಯಸೂರಿಗಳನ್ನು ಒಪ್ಪುವುದಿಲ್ಲ. ಅಂಥವರು "ತದ್ವಿಷ್ಣೋಃ ಪರಮಂ ಪದಂ ಸದಾ ಪಶ್ಯಂತಿ ಸೂರಯಃ" ಎಂದು ನಿತ್ಯಸೂರಿಗಳ ಸದ್ಭಾವ

ಏವಸ್ಸು ತೋರಿಸುತ್ತಿರುವ ಶ್ರುತಿಯಿಂದ ಬಹಿಷ್ಕೃತರಾಗುವರು. ಈ ಶ್ರುತಿ ಬಹುತ್ವವಿಶಿಷ್ಟರಾದ ಸದಾದರ್ಶನಕರ್ತೃಗಳೊಡನೆ ಕೂಡಿರುವ ಸ್ಥಾನವಿಶೇಷವು ಸರ್ವೇಶ್ವರನಿಗೆ ಉಂಟೆಂದು ತೋರಿಸುವುದು. ಬದ್ಧಚೇತನರನ್ನು ತೆಗೆದುಕೊಂಡು ಈ ಶ್ರುತಿಯನ್ನು ನಿರ್ವಹಿಸಬಹುದೆಂದರೆ ಅದು ಸಾಧ್ಯವಿಲ್ಲ. ಬದ್ಧಚೇತನರಲ್ಲಿ ಬಹುತ್ವವಿದ್ದರೂ ಪರಮಪದದ್ರಷ್ಟೃತ್ವವಿಲ್ಲವಾದುದರಿಂದ ಸದಾದ್ರಷ್ಟೃತ್ವವು ಸುತರಾಂ ಸಂಭವಿಸುವುದಿಲ್ಲವಷ್ಟೆ? ಮುಕ್ತಾತ್ಮರನ್ನು ತೆಗೆದುಕೊಂಡು ಇದನ್ನು ನಿರ್ವಹಿಸಬಹುದೆಂದರೆ ಅದೂ ಸಾಧ್ಯವಲ್ಲ. ಮುಕ್ತಾತ್ಮರಿಗೆ ಬಹುತ್ವವೂ, ಪರಮ ಪದದ್ರಷ್ಟೃತ್ವವೂ ಇದ್ದರೂ ಸದಾದ್ರಷ್ಟೃತ್ವವಿಲ್ಲ. ಇವರು ಪೂರ್ವಾವಸ್ಥೆಯಲ್ಲಿ ಪರಮಪದವನ್ನು ನೋಡುತ್ತಿರಲಿಲ್ಲವಷ್ಟೆ? ಇನ್ನು ಈಶ್ವರನನ್ನೇ ತೆಗೆದುಕೊಂಡು ಈ ಶ್ರುತಿಯನ್ನು ನಿರ್ವಹಿಸಬಹುದೆಂದರೆ ಅದೂ ಸಾಧ್ಯವಲ್ಲ. ಈಶ್ವರನಿಗೆ ಸದಾ ದರ್ಶನಕರ್ತೃತ್ವವಿದ್ದರೂ ಬಹುತ್ವವಿಲ್ಲವಷ್ಟೆ? ಆದಕಾರಣ ಬದ್ಧಚೇತನರಿಗಿಂತಲೂ ಮುಕ್ತಚೇತನರಿಗಿಂತಲೂ, ಈಶ್ವರನಿಗಿಂತಲೂ ವಿಲಕ್ಷಣರಾದ ನಿತ್ಯಚೇತನರನ್ನು ಅಂಗೀಕರಿಸಿದರಲ್ಲದೆ ಈ ಶ್ರುತಿಗೆ ನಿರ್ವಾಹವು ಸಂಭವಿಸುವುದಿಲ್ಲ.

## ೫೨೬. ಅನುಮಾನಪ್ರಮಾಣೇನ ನಿತ್ಯಸೂರೀಣಾಂ ಸಂಸಾರಿತ್ವಾಶಂಕಾ.

ಓಹೋ—"ಕಾಲತ್ರಯದಲ್ಲಿಯೂ ಸಂಸಾರಸಂಬಂಧವಿಲ್ಲದ ಚೇತನರು ನಿತ್ಯರೆನಿಸಿಕೊಳ್ಳುವರು" ಎಂದು ನಿತ್ಯಸೂರಿಗಳಿಗೆ ಲಕ್ಷಣವನ್ನು ಹೇಳಿದಿರಿ; ಆದರೆ ಇದು ಸಂಗತವಲ್ಲ. ಹೇಗೆಂದರೆ—ಜೀವತ್ವವಾಗಲಿ, ಈಶ್ವರಾತಿರಿಕ್ತಾತ್ಮತ್ವ ವಾಗಲಿ ಎಲ್ಲೆಲ್ಲಿ ಇರುವುದೋ ಅಲ್ಲಲ್ಲಿ ಸಂಸಾರಸಂಬಂಧವು ಇದ್ದೇ ಇರುವು ದೆಂಬುದನ್ನು ಬದ್ಧಚೇತನರಲ್ಲಿ ನಾವು ನೋಡಿ ಇರುವೆವು; ನಿತ್ಯಸೂರಿಗಳಲ್ಲಿಯೂ ಜೀವತ್ವವೂ, ಈಶ್ವರಾತಿರಿಕ್ತಾತ್ಮತ್ವವೂ ಇರುವುದರಿಂದ ಇವರಿಗೂ ಸಂಸಾರ ಸಂಬಂಧವು ಅವರ್ಜನೀಯವಾಗಿ ಇರುವಲ್ಲಿ ಇವರಿಗೆ ನೀವು ಹೇಳಿ ಇರುವ ಲಕ್ಷಣವು ಹೇಗೆ ಸಂಗತವಾದೀತು? ಇಂಥ ಆಶಂಕೆ ಯುಕ್ತವಾದುದಲ್ಲ. ಹೇಗೆಂದರೆ—

## ೫೨೭. ಉಕ್ತಾನುಮಾನಸ್ಯ ಧರ್ಮಿಗ್ರಾಹಕಮಾನಬಾಧಿತತ್ವಾತ್ ನಿತ್ಯಸೂರೀಣಾಂ ಸಂಸಾರಿತ್ವಾನುಪಪತ್ತಿಃ.

"ಸಂಸಾರಸಂಬಂಧವು ಅವರ್ಜನೀಯವಾದುದು" ಎಂಬುದನ್ನು ಜೀವ ವಿಶೇಷದಲ್ಲಿ ಆಪಾದನೆಮಾಡುತ್ತೀರೋ? ಅಥವಾ ಜೀವಸಾಮಾನ್ಯದಲ್ಲಿಯೋ? ಪ್ರಥಮಪಕ್ಷದಲ್ಲಿ—ಬದ್ಧಜೀವರಲ್ಲಿ ಸಿದ್ಧಸಾಧನದೋಷವುಂಟಾಗುವುದು. ಬದ್ಧ

ರಲ್ಲಿ ಸಂಸಾರಸಂಬಂಧವುಂಟೆಂಬುದನ್ನು ನಾವೂ ಒಪ್ಪಿರುವೆವಷ್ಟೆ. ದ್ವಿತೀಯಪಕ್ಷ ದಲ್ಲಿ ಸದಾದರ್ಶನಕರ್ತೃತ್ವವನ್ನು ಬೋಧಿಸುವ "ಸದಾ ಪಶ್ಯಂತಿ" ಎಂಬ ಶ್ರುತಿ ಯಿಂದಲೇ ನಿತ್ಯಸೂರಿಗಳಿಗೆ ಸಂಸಾರಸಂಬಂಧವಿಲ್ಲವೆಂದು ನಿಶ್ಚಿತವಾಗಿ ಇರುವಲ್ಲಿ ಅನುಮಾನಪ್ರಮಾಣದಿಂದ ಅವರಿಗೆ ಸಂಸಾರಸಂಬಂಧವನ್ನು ಸಾಧಿಸುವುದಾದರೆ ಶ್ರುತಿಯಿಂದ ಅನುಮಾನಪ್ರಮಾಣವು ಬಾಧಿಸಲ್ಪಡುವುದು.

ಮತ್ತು—ನಿತ್ಯಸೂರಿಗಳೆಂಬುವರು ಕೆಲವರು ಇರುವರೆಂದು ಅಂಗೀಕರಿಸಿ ಅವರಲ್ಲಿ ಸಂಸಾರಸಂಬಂಧವನ್ನು ಆರೋಪಿಸುವಿರೋ? ಅಥವಾ ಅವರನ್ನು ಅಂ ಗೀಕರಿಸದೆಯೇ ಆರೋಪಿಸುವಿರೋ? ದ್ವಿತೀಯಪಕ್ಷದಲ್ಲಿ ಧರ್ಮಿಯನ್ನೇ ಒಪ್ಪ ದಿರುವಾಗ ಧರ್ಮವನ್ನು ಆರೋಪಿಸಲಾಗುವುದಿಲ್ಲ. ಪರ್ವತವನ್ನೇ ಒಪ್ಪದಿರುವಾಗ ಪರ್ವತದಲ್ಲಿ ಅಗ್ನಿಯನ್ನು ಆರೋಪಿಸಲಾಗುವುದಿಲ್ಲವಷ್ಟೆ, ಪ್ರಥಮಪಕ್ಷದಲ್ಲಿಯಾದ ರೋ ನಿತ್ಯಸೂರಿಗಳೆಂಬುವರು ಪ್ರತ್ಯಕ್ಷದಿಂದಲಾಗಲಿ, ಅನುಮಾನಪ್ರಮಾಣದಿಂದ ಲಾಗಲಿ ಸಿದ್ಧಿಸುವರಲ್ಲವಾದಕಾರಣ "ಸದಾ ಪಶ್ಯಂತಿ" ಎಂಬ ಶಬ್ದಪ್ರಮಾಣದಿಂ ದಲೇ ಅವರನ್ನು ಒಪ್ಪಿಕೊಂಡು ಅನಂತರದಲ್ಲಿ ಅನುಮಾನಪ್ರಮಾಣದಿಂದ ಸಂ ಸಾರಸಂಬಂಧವನ್ನು ಅವರಲ್ಲಿ ಆರೋಪಿಸಬೇಕು; ಆಗ ಧರ್ಮಿಗ್ರಾಹಕವಾದ ಶಬ್ದ ಪ್ರಮಾಣದಿಂದಲೇ ಅವರಿಗೆ ಸಂಸಾರಸಂಬಂಧವಿಲ್ಲವೆಂಬುದೇ ಮೊತ್ತಮೊದಲು ನಿಶ್ಚಿತವಾಗಿ ಇರುವಲ್ಲಿ ಅದಕ್ಕೆ ವಿಪರೀತವಾಗಿ ಅವರಿಗೆ ಸಂಸಾರಸಂಬಂಧವುಂಟೆಂದು ಸಾಧಿಸುವ ಅನುಮಾನವು ಧರ್ಮಿಗ್ರಾಹಕಪ್ರಮಾಣದಿಂದ ಬಾಧಿತವಾಗಿ ಅದರ ಮುಂದೆ ನಿಲ್ಲಲಾರದು. ಅಗ್ನಿಸ್ವರೂಪವನ್ನು ತೋರಿಸಿಕೊಡುವ ಪ್ರತ್ಯಕ್ಷಪ್ರಮಾ ಣವು ಉಷ್ಣತ್ವವಿಶಿಷ್ಟವಾಗಿಯೇ ಅಗ್ನಿಯನ್ನು ತೋರಿಸುತ್ತಿರುವ ಕಾಲದಲ್ಲಿ ಅದಕ್ಕೆ ವಿಪರೀತವಾಗಿ ಅನುಮಾನಪ್ರಮಾಣವು ಅಗ್ನಿಯಲ್ಲಿ ಶೈತ್ಯವನ್ನು ತೋರಿಸಲಾರ ದಷ್ಟೆ? ಆದಕಾರಣ ನಿತ್ಯಸೂರಿಗಳಿಗೆ ನಾವು ತೋರಿಸಿದ ಲಕ್ಷಣವು ಎಂದಿಗೂ ಅಸಂಗತವಾಗಲಾರದು.

## ೫೨೮. ನಿತ್ಯಸೂರೀಣಾಂ ವೈವಿಧ್ಯಕಥನಪೂರ್ವಕಂ ಸರ್ವದಾ ಭಗವದ್ದಾಸ್ಯಮುಹಾರಸಾನುಭವಧುರಂಧರತ್ವಸೂಚನಂ.

ಅನಂತ್ಯವಿಶಿಷ್ಟರಾದ ಇಂಥ ನಿತ್ಯಸೂರಿಗಳೊಳಗೆ ಕೆಲವರು ಸರ್ವೇಶ್ವರನಿಗೆ ಪತ್ನೀಪರಿಜನರಾಗಿಯೂ, ಇನ್ನು ಕೆಲವರು ವಾಹನಾಸನಶಯನರೂಪರಾಗಿಯೂ, ಮತ್ತೆ ಕೆಲವರು ಭೂಷಣಾದಿರೂಪಿಗಳಾಗಿಯೂ, ಇನ್ನು ಕೆಲವರು ಆಯುಧರೂಪಿ ಗಳಾಗಿಯೂ, ಕೆಲವರು ಸೇನಾಸೇನಾನಾಯಕರೂಪಿಗಳಾಗಿಯೂ, ಕೆಲವರು ದ್ವಾರ

ಪಾಲಕರಾಗಿಯೂ, ಕೆಲವರು ಗಣಾಧಿಪರಾಗಿಯೂ, ಕೆಲವರು ನಗರಪಾಲಕ ರಾಗಿಯೂ, ಕೆಲವರು ಸ್ರಕ್ಚಂದನತಾಂಬೂಲ ಮೊದಲಾದ ಅಪ್ರಾಕೃತಭೋಗ್ಯ ಪದಾರ್ಥರೂಪಿಗಳಾಗಿಯೂ, ಕೆಲವರು ವಿಮಾನಗೋಪುರಮಂಟಪಪ್ರಾಸಾದ ವಾಪೀಕೂಪತಟಾಕೋದ್ಯಾನಾದಿಭೋಗಸ್ಥಾನರೂಪಿಗಳಾಗಿಯೂ, ಹೀಗೆ ಸ ರ್ವರೂ ಸರ್ವಕಾಲದಲ್ಲಿಯೂ ಶ್ರಿಯಃಪತಿಯ ಸೇವಾರಸಾನುಭವದಲ್ಲಿ ಧುರಂಧರ ರಾಗಿ ಇರುವರೆಂದು ವೇದೋಪಬೃಹ್ಮಣವಾದ ಪಾಂಚರಾತ್ರಸಂಹಿತೆಗಳಲ್ಲಿ ಅತಿ ಸ್ಫುಟವಾಗಿ ನಿರೂಪಿಸಿ ಇರುವುದನ್ನು ಇಲ್ಲಿ ಅತಿಸಂಕ್ಷೇಪವಾಗಿ ಸೂಚನಾ ಮಾತ್ರದಿಂದ ತೋರಿಸಿರುವೆವು.

## ೫೨೯. ನಿತ್ಯಸೂರ್ಯಾನಂದಾಪೇಕ್ಷಯಾ ಮುಕ್ತಾನಂದಸ್ಯ ನ್ಯೂನತ್ವಾಶಂಕಾ.

"ಪೂಜ್ಯರೇ ! ನಿತ್ಯಸೂರಿಗಳ ಆಂತರಾಳಿಕಭೇದವು ಹೀಗೆ ವ್ಯವಸ್ಥಿತವಾಗಿ ಇರುವುದಾದರೆ ಅನಂತಗರುಡವಿಷ್ವಕ್ಸೇನಾದಿಗಳಿಗೆ ನಿಯತವಾಗಿ ಇರುವ ಅಧಿಕಾ ರವು ಮುಕ್ತಾತ್ಮವರ್ಗಕ್ಕೆ ಇಲ್ಲವಾದುದರಿಂದ ಅನಂತಗರುಡವಿಷ್ವಕ್ಸೇನಾದಿಗಳು ತಮ್ಮ ತಮ್ಮ ಅಧಿಕಾರದ ಕಾರ್ಯನಿರ್ವಹಣದಿಂದ ಈಶ್ವರನ ಮನಸ್ಸನ್ನು ಹೇಗೆ ಸಂತೋಷಪಡಿಸುವರೋ ಹಾಗೆ ಮುಕ್ತರು ಸಂತೋಷಪಡಿಸಲಾಗುವುದಿಲ್ಲ ವಾದಕಾರಣ ಈಶ್ವರನು ಅನಂತಗರುಡವಿಷ್ವಕ್ಸೇನಾದಿಗಳ ವಿಷಯದಲ್ಲಿ ಅಧಿಕಪ್ರೀತಿ ಯನ್ನೂ, ಮುಕ್ತಾತ್ಮರ ವಿಷಯದಲ್ಲಿ ನ್ಯೂನವಾದ ಪ್ರೀತಿಯನ್ನೂ ಮಾಡುವನೆಂ ಬುದು ಸಯುಕ್ತಿಕವಾಗಿ ಇರುವುದರಿಂದ ನಿತ್ಯಸೂರಿಗಳಿಗೆ ಇರುವ ಆನಂದವು ಮುಕ್ತರಿಗೆ ಇಲ್ಲವೆಂದು ಹೇಳಬೇಕಾಗುವುದಲ್ಲವೆ? ಹಾಗಾದರೆ "ಮೋಕ್ಷಾನಂದ ದಲ್ಲಿ ತಾರತಮ್ಯವಿಲ್ಲ" ಎಂಬ ಪರಮವೈದಿಕಸಿದ್ಧಾಂತವು ಜೀವಿಸುವ ಬಗೆ ಹೇಗೆ?

## ೫೩೦. ನಿತ್ಯೇಷು ಮುಕ್ತೇಷು ಚ ಈಶ್ವರಪ್ರೀತೇಸ್ತುಲ್ಯತ್ವಾತ್ ನ ತೇಷಾಮಾನಂದತಾರತಮ್ಯಪ್ರಸಕ್ತಿಃ

ಇಂಥ ಆಶಂಕೆ ಸಂಗತವಲ್ಲ—ನಿತ್ಯವಾದ ಜ್ಞಾನಾನಂದಾದಿಗುಣಗಳೊಡನೆ ಕೂಡಿದವರಾಗಿಯೂ, ನಿಯತವಾದ ಅಧಿಕಾರವನ್ನು ಪಡೆದವರಾಗಿಯೂ ಇರುವ ನಿತ್ಯಸೂರಿಗಳಿಗೆ ಯಾವ ಆನಂದವುಂಟೋ ಅಂಥ ಆನಂದದಲ್ಲಿ ಒಂದು ಬಿಂದು ಮಾತ್ರವೂ ಮುಕ್ತಾತ್ಮರಿಗೆ ಕಡಮೆಯಾಗುವುದಿಲ್ಲ. ಆನಂದಾನುಭವವಿಷಯದಲ್ಲಿ ಮುಕ್ತರೂ ನಿತ್ಯರೂ ಈಶ್ವರನೂ ಸಮಾನರಾಗಿಯೇ ಇರುವರು. ಹೇಗೆಂದರೆ ಪರಮಶೇಷಿಯ ಮನಸ್ಸನ್ನು ಸರ್ವಪ್ರಕಾರದಿಂದಲೂ ಉಲ್ಲಾಸಪಡಿಸುವಿಕೆ

ಯಲ್ಲವೆ ಶೇಷಭೂತರಾದ ಸರ್ವರಿಗೂ ಪರಮಫಲವಾಗಿಯೂ ಆನಂದರೂಪವಾಗಿಯೂ ಇರುವುದು. ಅನಂತಗರುಡವಿಷ್ವಕ್ಸೇನಾದಿಗಳ ಅಧಿಕಾರದ ಕೆಲಸವನ್ನು ಒಂದುವೇಳೆ ಮುಕ್ತರು ನಿರ್ವಹಿಸುತ್ತಿದ್ದರೆ ಪರಮಶೇಷಿ ಅವರ ವಿಷಯದಲ್ಲಿ ಎಷ್ಟು ಪ್ರೀತಿಯನ್ನು ವಹಿಸುತ್ತಿದ್ದನೋ; ಈಗಲೂ ಅಷ್ಟು ಪ್ರೀತಿಯನ್ನೇ ವಹಿಸುತ್ತಿರುವುದರಿಂದ ಅನಂತಗರುಡಾದಿಗಳಲ್ಲಿ ಹೆಚ್ಚಾದ ಪ್ರೀತಿಯನ್ನು ತೋರಿಸುವುದಕ್ಕೂ, ಮುಕ್ತಾತ್ಮರಲ್ಲಿ ನ್ಯೂನವಾದ ಪ್ರೀತಿಯನ್ನು ತೋರಿಸುವುದಕ್ಕೂ ಅವಕಾಶವಿಲ್ಲವಾಗಿ ಸರ್ವರಲ್ಲಿಯೂ ಏಕರೂಪವಾದ ಪ್ರೀತಿಯೇ ಪರಮಶೇಷಿಯಾದ ಶ್ರಿಯಃಪತಿಗೆ ಇರುವುದರಿಂದ ಆನಂದದಲ್ಲಿ ತಾರತಮ್ಯವುಂಟಾಗುವುದಕ್ಕೆ ಕಾರಣವಿಲ್ಲ. ಈ ಅರ್ಥವನ್ನು ಶ್ರೀಮದ್ವೇದಾಂತದೇಶಿಕರು—

"ಅನಂತವಿಷ್ವಕ್ಸೇನಾದ್ಯೈರ್ನಿಯತಾಧಿಕ್ರಿಯೈರಪಿ|
ಜ್ಞಾನಾನಂದಾದಿಭಿರ್ಮುಕ್ತಾ ನಿತ್ಯೈರಾನಂದಸೋದರಾಃ"

ಎಂಬ ಕಾರಿಕೆಯಿಂದ ಸಂಕ್ಷೇಪವಾಗಿ ತೋರಿಸಿರುವರು.

## ೫೩೧ ಸುಷುಪ್ತಾವಿವ ಪ್ರಳಯೇ ನಿತ್ಯಮುಕ್ತೇಶ್ವರಾಣಾಂ ಜ್ಞಾನಶೂನ್ಯತ್ವಾಶಂಕಾ.

ನಿತ್ಯಮುಕ್ತೇಶ್ವರರ ವಿಷಯದಲ್ಲಿ ಕೆಲವರು ವಾದಿಗಳು "ಪ್ರಳಯಕಾಲದಲ್ಲಿ ಆವುದೊಂದು ಕಾರ್ಯವಸ್ತುವೂ ಇರಲಾರದು; ಜ್ಞಾನವೆಂಬುದೂ ಒಂದು ಕಾರ್ಯಪದಾರ್ಥವಾಗಿಯೇ ಇರುವುದು: ಆದಕಾರಣ ಸುಷುಪ್ತ್ಯವಸ್ಥೆಯಲ್ಲಿ ಪ್ರಾಣಿಗಳು ಹೇಗಾದರೆ ಜ್ಞಾನಶೂನ್ಯರಾಗಿ ಬಿದ್ದಿದ್ದು ಸುಷುಪ್ತಿ ಕಳೆದಮೇಲೆ ಜ್ಞಾನವನ್ನು ಪಡೆವರೋ ಅದರಂತೆಯೇ ಪ್ರಳಯಕಾಲದಲ್ಲಿ ಈಶ್ವರನೂ ನಿತ್ಯರೂ ಮುಕ್ತರೂ ಸಹ ಜ್ಞಾನಶೂನ್ಯರಾಗಿ ಬಿದ್ದಿದ್ದು ಪ್ರಳಯಕಾಲವು ಕಳೆದಮೇಲೆ ಜ್ಞಾನಪ್ರಸರಣವನ್ನು ಪಡೆವರು" ಎಂಬುದಾಗಿ ಹೇಳುವರು.

## ೫೩೨. ಸದಾದರ್ಶನಕರ್ತೃತ್ವಶ್ರುತ್ಯಾ ನಿತ್ಯಮುಕ್ತೇಶ್ವರಾಣಾಂ ಕದಾಚಿದಪಿ ಜ್ಞಾನವಿಲೋಪಾಸಂಭವಪ್ರದರ್ಶನಂ.

ಇಂಥ ವಾದಿಗಳು ನಿತ್ಯಮುಕ್ತೇಶ್ವರರಿಗೆ ಸದಾದರ್ಶನಕರ್ತೃತ್ವವನ್ನು ಬೋಧಿಸುತ್ತಿರುವ ಶ್ರುತಿಯಿಂದಲೇ ಬಹಿಷ್ಕೃತರಾಗಿ ಇರುವರು. ಅವರಲ್ಲಿ ಈಶ್ವರನಿಗೂ ನಿತ್ಯರಿಗೂ ಸದಾದರ್ಶನಕರ್ತೃತ್ವವು ಅತ್ಯಂತಸ್ವಾರಸಿಕವಾಗಿಯೇ ಇರುವುದು. ಮುಕ್ತಾತ್ಮರಿಗೆ ಪೂರ್ವದಲ್ಲಿ ದರ್ಶನಕರ್ತೃತ್ವವಿಲ್ಲದಿದ್ದರೂ ಮುಕ್ತ್ಯುತ್ತರಕಾಲದಲ್ಲಿ ಯಾವದಾತ್ಮಭಾವಿಯಾಗಿ ಸದಾದರ್ಶನವು ಸಂಭವಿಸುವುದರಿಂದ

ಮೂವರಲ್ಲಿಯೂ ಸದಾದರ್ಶನಕರ್ತೃತ್ವಕ್ಕೆ ಚ್ಯುತಿಯಿಲ್ಲವಾದಕಾರಣ ಪ್ರಳಯ
ಕಾಲದಲ್ಲಿ ಇವರಿಗೆ ಜ್ಞಾನಲೋಪವುಂಟಾಗಲು ಅವಕಾಶವಿಲ್ಲ. ಮತ್ತು ಇವರ
ಜ್ಞಾನವು ಕಾರ್ಯಕೋಟಿಗೆ ಸೇರಿ ಇದ್ದರಲ್ಲವೆ ಪ್ರಳಯಕಾಲದಲ್ಲಿ ಇತರಕಾರ್ಯಗ
ಳಂತೆ ಇದಕ್ಕೂ ನಾಶವನ್ನು ಕಲ್ಪಿಸಬಹುದಾಗಿ ಇದ್ದಿತು? ಇವರ ಜ್ಞಾನವು
ನಿತ್ಯವಾದುದರಿಂದ ಜನ್ಯಕೋಟಿಗೆ ಸೇರಲಿಲ್ಲವಾಗಿ ವಿನಾಶವನ್ನು ಊಹಿಸುವು
ದಕ್ಕೂ ಅವಕಾಶವಿಲ್ಲ. ಮತ್ತು ಜ್ಞಾನಸಂಕೋಚಕ್ಕೆ ಕಾರಣವಾದ ಕರ್ಮಸಂಬಂ
ಧವು ಲೇಶಮಾತ್ರವೂ ಇವರಿಗೆ ಇಲ್ಲವಾಗಿ ಜ್ಞಾನಸಂಕೋಚವನ್ನು ಸುತರಾಂ
ಹೇಳಲಾಗುವುದಿಲ್ಲ.

## ೫೩೩. ಮೋಕ್ಷಸಾಧನತ್ವೇನಾವಗತಯೋಃ ಭಕ್ತಿಪ್ರಪತ್ತ್ಯೋಃ ಪ್ರಥಮಂ ಭಕ್ತಿಸ್ವರೂಪನಿರೂಪಣಂ.

ನಿತ್ಯಸಂಸಾರಿಯಾದ ಚೇತನನೇ ಇಲ್ಲವೆಂದು ತೋರಿಸುವುದಕ್ಕಾಗಿ ಎಲ್ಲಾ
ಬದ್ಧಚೇತನರಿಗೂ ಮೋಕ್ಷೋಪಾಯಸಂಬಂಧಯೋಗ್ಯತೆ ಉಂಟೆಂದು ಹಿಂದೆ
ಹೇಳಿದೆವು. ಅಂಥ ಮೋಕ್ಷೋಪಾಯವು ಆವುದೆಂಬುದನ್ನು ನಿಷ್ಕರ್ಷಿಸುವುದ
ಕ್ಕಾಗಿ ಇಲ್ಲಿ ಅದನ್ನು ಸಂಕ್ಷೇಪವಾಗಿ ತೋರಿಸುವೆವು—ಭಕ್ತಿಯಾಗಲಿ ಪ್ರಪತ್ತಿ
ಯಾಗಲಿ ಮೋಕ್ಷೋಪಾಯವೆನಿಸಿಕೊಳ್ಳುವುದು. ತನಗಿಂತಲೂ ಉತ್ಕೃಷ್ಟರಾದ
ಪೂಜ್ಯರಲ್ಲಿ ತನಗಿರುವ ಅನುರಾಗವು ಭಕ್ತಿಯೆನಿಸಿಕೊಳ್ಳುವುದು. ಈ ಅನುರಾಗ
ವೆಂಬುದು ಆ ಆ ವಿಷಯಗಳಿಗೆ ಅನುಸಾರವಾಗಿ ಸಾಧಾರಣರೂಪವಾಗಿಯೂ
ತೀವ್ರವಾಗಿಯೂ ತೀವ್ರತರವಾಗಿಯೂ ತೀವ್ರತಮವಾಗಿಯೂ ಲೋಕದಲ್ಲಿ
ಕಾಣುತ್ತಿರುವುದು. ಆದರೂ ವೇದಾಂತಶಾಸ್ತ್ರದಲ್ಲಿ ಈ ಭಕ್ತಿಶಬ್ದವನ್ನು ಒಂದಾ
ನೊಂದು ಅರ್ಥವಿಶೇಷದಲ್ಲಿ ಸಂಕೇತಪಡಿಸಿ ಅಂಥ ಭಕ್ತಿಯೇ ಮೋಕ್ಷಕ್ಕೆ ಸಾಧನ
ವಾಗಿ ಇರುವುದೆಂದು ನಿಷ್ಕರ್ಷಿಸಿ ಇರುವರು. ಆ ಅರ್ಥವಿಶೇಷದ ಸ್ವರೂಪವು
ಹೇಗಿರುವುದೆಂದರೆ—"೧ ಧ್ಯೇಯವಸ್ತುವಿನ ವಿಷಯದಲ್ಲಿ ತೈಲಧಾರೆಯಂತೆ ಅವಿ
ಚ್ಛಿನ್ನವಾಗಿರುವ ಸ್ಮರಣಸಂತತಿರೂಪವಾಗಿಯೂ, ೨ ಅಷ್ಟಾಂಗಯೋಗದೊಡನೆ
ಕೂಡಿ ಮರಣಪರ್ಯಂತವಾಗಿ ಪ್ರತಿನಿತ್ಯವೂ ಕ್ಲುಪ್ತಕಾಲದಲ್ಲಿ ಅಭ್ಯಸಿಸಲ್ಪಡತಕ್ಕು
ದಾಗಿಯೂ, ೩ ವರ್ಣಾಶ್ರಮಧರ್ಮಗಳೆಂಬ ಅಂಗಕಲಾಪಗಳೊಡನೆ ಕೂಡಿದುದಾ
ಗಿಯೂ, ೪ ವೇದನ ಉಪಾಸನ ಇವೇ ಮೊದಲಾದ ಶಬ್ದಗಳಿಂದ ವ್ಯವಹರಿಸಲ್ಪಡ
ತಕ್ಕುದಾಗಿಯೂ, ೫ ಪ್ರತ್ಯಕ್ಷಜ್ಞಾನಸಮಾನಾಕಾರವಾಗಿಯೂ, ೬ ಪ್ರೀತಿ
ರೂಪಾಪನ್ನವಾಗಿಯೂ ಇರುವ ಜ್ಞಾನವಿಶೇಷವು ಭಕ್ತಿಯೆನಿಸಿಕೊಂಡು ಮೋಕ್ಷ
ಸಾಧನವಾಗುವುದು."

ಉಕ್ತವಾದ ಈ ಆರು ವಿಶೇಷಣಗಳೊಳಗೆ ಆವುದಾದರೊಂದು ವಿಶೇಷಣ ವಿಲ್ಲದಿದ್ದರೂ ಭಕ್ತಿಶರೀರದಲ್ಲಿ ವೈಕಲ್ಯವುಂಟಾಗಿ ಫಲಸಿದ್ಧಿಯೂ ಆಗುವುದಿಲ್ಲ.

## ೫೩೪. ಉಕ್ತಪ್ರಕಾರಭಕ್ತಿವ್ಯತಿರೇಕೇಣ ಜ್ಞಾನಮಾತ್ರಸ್ಯ ಮೋಕ್ಷಕಾರಣತ್ವವಾದನಿರಾಸಃ

ಇಂಥ ಭಕ್ತಿಯೇ ಮೋಕ್ಷಕ್ಕೆ ಸಾಧನವಾಗುವುದಲ್ಲದೆ ತತ್ತ್ವದ ಜ್ಞಾನ ಮಾತ್ರವೇ ಮೋಕ್ಷಸಾಧನವಾಗಲಾರದು. ಸಾಂಗವೇದಾಧ್ಯಯನವನ್ನು ಮಾಡಿ ದುದರಿಂದ ತತ್ತ್ವಜ್ಞಾನವು ಆಪಾತರೂಪವಾಗಿ ಉಂಟಾದಮೇಲೆ ಅದರ ನಿರ್ಣ ಯಕ್ಕೋಸ್ಕರ ರಾಗಪ್ರೇರಿತನಾದ ಪುರುಷನು ಗುರುಮುಖದಿಂದ ವೇದಾಂತ ವಾಕ್ಯಾರ್ಥಶ್ರವಣವನ್ನು ಮಾಡಿದರೆ ನಿರ್ಣಯರೂಪವಾದ ತತ್ತ್ವಜ್ಞಾನವು ಸ್ವತ ಏವ (ತಾನಾಗಿಯೇ) ಉಂಟಾಗುವುದರಿಂದ ಅದು ವಿಧಿಶಾಸ್ತ್ರದಿಂದ ವಿಧಿಸಲ್ಪಡ ಲಾರದಷ್ಟೆ? ಆದಕಾರಣ—ವಿಧಿಶಾಸ್ತ್ರದಿಂದ ವಿಧಿಸಲ್ಪಡುವುದಕ್ಕೆ ಯೋಗ್ಯವಾದ ಮೋಕ್ಷಸಾಧನವು—ಉಕ್ತವಾದ ವಿಶೇಷಣಗಳೊಡನೆ ಕೂಡಿರುವ ಉಪಾಸನಾ ರೂಪವಾಗಿಯೇ ಇರುವುದಲ್ಲದೆ ತತ್ತ್ವಜ್ಞಾನಮಾತ್ರರೂಪವಲ್ಲ. ತತ್ತ್ವಜ್ಞಾನ ವಿಲ್ಲದಿದ್ದರೆ ತತ್ತ್ವದ ಉಪಾಸನೆ ಸಂಭವಿಸುವುದಿಲ್ಲವಾದುದರಿಂದ ಉಪಾಸನೆಗೆ ತತ್ತ್ವಜ್ಞಾನವು ಪೂರ್ವಾಂಗವಾಗಿ ಇರುವುದಲ್ಲದೆ—ತಾನೇ ಸಾಕ್ಷಾತ್ತಾಗಿ ಮೋಕ್ಷಸಾಧನವಾಗಲಾರದು.

## ೫೩೫. ಉಕ್ತಾರ್ಥಸ್ಯ ದೃಷ್ಟಾಂತಮುಖೇನೋಪಪಾದನಂ.

ಕಲುಷವಾದ ನೀರನ್ನು ನಿರ್ಮಲಪಡಿಸುವುದಕ್ಕೆ ಚಿಲ್ಲದ ಬೀಜವೇನೋ ಸಾಧ ನವಾಗಿಯೇ ಇರುವುದು; ಆದರೆ ಪರಿಶ್ರಮವನ್ನು ಸಹಿಸಿಕೊಂಡು ಆ ಚಿಲ್ಲದ ಬಿತ್ತ ವನ್ನು ನುಣುಪಾಗಿ ಅರೆದು ನೀರಿನಲ್ಲಿ ಮಿಶ್ರಮಾಡಿದರೆ ಆಗ ನೀರು ನಿರ್ಮಲವಾಗುವು ದಲ್ಲದೆ—ನೀರಿನ ಮುಂದೆ ನಿಂತು ಕೈಮುಗಿದು ಚಿಲ್ಲದ ಬೀಜದ ನಾಮಧೇಯವನ್ನು ಸಹಸ್ರಾವೃತಿಯಲ್ಲ ಲಕ್ಷಾವೃತ್ತಿ ಜಪಿಸಿದರೂ ನೀರು ನಿರ್ಮಲವಾಗುವುದಿಲ್ಲ. ಈ ಅರ್ಥವನ್ನು ಸ್ವಾಯಂಭುವಮನುಚಕ್ರವರ್ತಿ—

> "ಫಲಂ ಕತಕವೃಕ್ಷಸ್ಯ ಯದ್ಯಪ್ಯಂಬುಪ್ರಸಾದಕಂ |
> ನ ನಾಮಗ್ರಹಣಾದೇವ ತಸ್ಯ ವಾರಿ ಪ್ರಸೀದತಿ ||"

ಎಂಬ ತಮ್ಮ ಸ್ಮೃತಿವಚನದಲ್ಲಿ ತೋರಿಸಿರುವರು. ಇದರಂತೆ ಗುರುಸನ್ನಿಧಿ ಯಲ್ಲಿ ವೇದಾಂತವಾಕ್ಯಾರ್ಥವಿಚಾರವನ್ನು ಮಾಡಿ ತತ್ತ್ವಜ್ಞಾನವನ್ನು ಸಂಪಾದಿಸಿ ಕೊಂಡಮೇಲೆ ಅನೇಕಪರಿಶ್ರಮಗಳನ್ನೆಲ್ಲಾ ಸಹಿಸಿಕೊಂಡು ಉಕ್ತವಿಶೇಷಣವಿಶಿಷ್ಟ

ವಾದ ಉಪಾಸನವನ್ನು ತನ್ನ ಮರಣಾವಧಿಯಾಗಿ ಪ್ರತಿನಿತ್ಯವೂ ನಿಯತ ವಾದ ಕಾಲದಲ್ಲಿ ಅಭ್ಯಸಿಸುವವನಾದರೆ ಆಗ ಆತ್ಮನು ನಿರ್ಮಲನಾಗಿ ಮೋಕ್ಷ ಪ್ರಾಪ್ತಿಗೆ ಯೋಗ್ಯನಾಗುವನಲ್ಲದೆ ತತ್ತ್ವಜ್ಞಾನಮಾತ್ರದಿಂದಲೇ ನೈರ್ಮಲ್ಯವನ್ನೂ ಮೋಕ್ಷವನ್ನೂ ಪಡೆಯಲಾರನು.

**೫೩೬. ಪ್ರತ್ಯಕ್ಷವಿರೋಧಾತ್ ಶಾಸ್ತ್ರವಿರೋಧಾಚ್ಚ ಜ್ಞಾನಮಾತ್ರಸ್ಯ ಮೋಕ್ಷಸಾಧನತ್ವಾಸಂಭವಃ.**

ವೇದಾಂತವಾಕ್ಯಾರ್ಥಶ್ರವಣವುಂಟಾದ ಮೇಲೆ ತತ್ತ್ವಜ್ಞಾನವು ಉಂಟಾಗಿ ಇದ್ದರೂ ಸಂಸಾರಸಂಬಂಧವೇ ಅನುವರ್ತಿಸುತ್ತಿರುವುದಲ್ಲದೆ ಮೋಕ್ಷಸಿದ್ಧಿ ಕಾಣುವುದಿಲ್ಲವಾದ್ದರಿಂದಲೂ ಜ್ಞಾನಮಾತ್ರವು ಮೋಕ್ಷಕ್ಕೆ ಸಾಧನವಾಗಲಾರದು.

ಜ್ಞಾನಮಾತ್ರಕ್ಕೆ ಮೋಕ್ಷಸಾಧನತ್ವವಿಲ್ಲವೆಂಬ ಅಂಶವನ್ನು ಆಪಸ್ತಂಬ ಮಹರ್ಷಿ ತಮ್ಮ ಧರ್ಮಸೂತ್ರದಲ್ಲಿ ಪೂರ್ವಪಕ್ಷಸಿದ್ಧಾಂತರೂಪವಾಗಿ ಅಪ್ಪಣೆಕೊಡಿಸಿರುವರು—"ಬುದ್ಧೇ ಕ್ಷೇಮಪ್ರಾಪಣಂ, ತಚ್ಛಾಸ್ತ್ರೈರ್ವಿಪ್ರತಿಷಿದ್ಧಂ, ಬುದ್ಧೇ ಚೇತ್ ಕ್ಷೇಮಪ್ರಾಪಣಮಿಹೈವ ನ ದುಃಖಮುಪಲಭೇತ" ಎಂಬ ಈ ಮೂರು ಸೂತ್ರಗಳೊಳಗೆ ಪ್ರಥಮಸೂತ್ರದಿಂದ ಕೆಲವರ ಮತವನ್ನು ಅನುವಾದಮಾಡಿ ಆದರಲ್ಲಿ ಶಾಸ್ತ್ರವಿರೋಧವೆಂಬ ದೂಷಣವನ್ನು ದ್ವಿತೀಯಸೂತ್ರದಿಂದ ತೋರಿಸಿ ತೃತೀಯಸೂತ್ರದಿಂದ ಪ್ರತ್ಯಕ್ಷವಿರೋಧವೆಂಬ ದೂಷಣವನ್ನೂ ತೋರಿಸಿರುವರು.

**೫೩೭. ಏತೇನ ವಾಕ್ಯಾರ್ಥಜ್ಞಾನಮಾತ್ರಸ್ಯ ಮೋಕ್ಷಸಾಧನತ್ವವಾದನಿರಾಸಸಿದ್ಧಿಃ.**

ಇದರಿಂದ—ವಾಕ್ಯಾರ್ಥಜ್ಞಾನಮಾತ್ರಕ್ಕೆ ಮೋಕ್ಷಸಾಧನತ್ವವನ್ನು ಹೇಳುವ ಪ್ರಚ್ಛನ್ನಬೌದ್ಧರ ಮತವು ಶಾಸ್ತ್ರವಿರುದ್ಧವೆಂದೂ ಪ್ರತ್ಯಕ್ಷವಿರುದ್ಧವೆಂದೂ ಸ್ಪಷ್ಟವಾಯಿತು.

**೫೩೮. ಉಕ್ತವಿಧಾಯಾ ಮೋಕ್ಷಸಾಧನಭಕ್ತೇರ್ವೈವಿಧ್ಯಂ.**

ಆದಕಾರಣ ಪೂರ್ವೋಕ್ತಸಕಲವಿಶೇಷಣವಿಶಿಷ್ಟವಾದ ಜ್ಞಾನವಿಶೇಷವೆಂಬ ಭಕ್ತಿಯೇ ಮೋಕ್ಷಸಾಧನವಾಗಿ ಇರುವುದೆಂಬುದು ವೇದಾಂತಶಾಸ್ತ್ರದ ಸಿದ್ಧಾಂತವಾಗಿ ಇರುವುದು. ಇಂಥ ಭಕ್ತಿಯೇ ಬ್ರಹ್ಮವಿದ್ಯೆಯೆಂಬ ಹೆಸರನ್ನು ಪಡೆದು ಮೂವತ್ತನಾಲ್ಕುವಿಧವಾಗಿ ವೇದಾಂತಶಾಸ್ತ್ರದಲ್ಲಿ ಉಪದೇಶಿಸಲ್ಪಟ್ಟಿರುವುದು ;

ಜಿಜ್ಞಾಸುಗಳ ತಿಳುವಳಿಕೆಗೋಸ್ಕರ ಅವುಗಳ ಹೆಸರುಗಳನ್ನು ಮಾತ್ರ ಆಕರಸಹಿತ ವಾಗಿ ಇಲ್ಲಿ ಬರೆವೆವು—

| | | |
|---|---|---|
| ೧ | ಅಜಾವಿದ್ಯಾ | ಶ್ವೇತಾಶ್ವತರ ಮತ್ತು ಅಂಭಸಿ |
| ೨ | ಅಕ್ಷರಪರವಿದ್ಯಾ | ಮುಂಡಕೋಪನಿಷತ್ |
| ೩ | ಅಕ್ಷಿಸ್ಥಸತ್ಯಬ್ರಹ್ಮವಿದ್ಯಾ | ಬೃಹದಾರಣ್ಯಕ ಸಪ್ತಮಾಧ್ಯಾಯ |
| ೪ | ಅಂಗುಷ್ಠಪ್ರಮಿತವಿದ್ಯಾ | ಕಠೋಪನಿಷತ್ |
| ೫ | ಅಂತರಾದಿತ್ಯವಿದ್ಯಾ | ಛಾಂದೋಗ್ಯ-ಪ್ರಥಮಪ್ರಪಾಠಕ |
| ೬ | ಆಕಾಶವಿದ್ಯಾ | ,, ,, |
| ೭ | ಆದಿತ್ಯಮಂಡಲಸ್ಥಸತ್ಯಬ್ರಹ್ಮವಿದ್ಯಾ | ಬೃಹದಾರಣ್ಯಕ-ಸಪ್ತಮಾಧ್ಯಾಯ |
| ೮ | ಆನಂದಮಯವಿದ್ಯಾ | ತೈತ್ತಿರೀಯ-ಆನಂದವಲ್ಲೀ |
| ೯ | ಈಶಾವಾಸ್ಯವಿದ್ಯಾ | ಈಶಾವಾಸ್ಯೋಪನಿಷತ್ |
| ೧೦ | ಉದ್ದಾಲಕಾಂತರ್ಯಾಮಿವಿದ್ಯಾ | ಬೃಹದಾರಣ್ಯಕ-ಪಂಚಮಾಧ್ಯಾಯ |
| ೧೧ | ಉಪಕೋಸಲವಿದ್ಯಾ | ಛಾಂದೋಗ್ಯ-ಚತುರ್ಥಪ್ರಪಾಠಕ |
| ೧೨ | ಉಷಸ್ತಿಕಹೋಳವಿದ್ಯಾ | ಬೃಹದಾರಣ್ಯಕ-ಪಂಚಮಾಧ್ಯಾಯ |
| ೧೩ | ಗಾರ್ಗ್ಯಕ್ಷರವಿದ್ಯಾ | ,, ,, |
| ೧೪ | ಚತುರ್ಮುಖವಿದ್ಯಾ (ಪ್ರಜಾಪತಿ ವಿದ್ಯಾ) | ಛಾಂದೋಗ್ಯ-ಪಂಚಮಪ್ರಪಾಠಕ |
| ೧೫ | ಜ್ಯೋತಿಷಾಂ ಜ್ಯೋತಿರ್ವಿದ್ಯಾ | ಬೃಹದಾರಣ್ಯಕ-ಷಷ್ಠಾಧ್ಯಾಯ |
| ೧೬ | ದಹರವಿದ್ಯಾ | ಛಾಂದೋಗ್ಯ-ಅಷ್ಟಮಪ್ರಪಾಠಕ |
| ೧೭ | ನಾಚಿಕೇತವಿದ್ಯಾ | ಕಠೋಪನಿಷತ್ |
| ೧೮ | ನ್ಯಾಸವಿದ್ಯಾ | ಅಂಭಸಿ |
| ೧೯ | ಪರಂಜ್ಯೋತಿರ್ವಿದ್ಯಾ | ಛಾಂದೋಗ್ಯ-ತೃತೀಯಪ್ರಪಾಠಕ |
| ೨೦ | ಪರ್ಯಂಕವಿದ್ಯಾ | ಕೌಷೀತಕ್ಯುಪನಿಷತ್ |
| ೨೧ | ಪುರುಷವಿದ್ಯಾ | ಅಂಭಸಿ ಮತ್ತು ಛಾಂದೋಗ್ಯ ೩ ಪ್ರಪಾಠಕ |
| ೨೨ | ಪಂಚಾಗ್ನಿವಿದ್ಯಾ | ಛಾಂದೋಗ್ಯ-ಪಂಚಮಪ್ರಪಾಠಕ |
| ೨೩ | ಪ್ರತರ್ದನವಿದ್ಯಾ | ಕೌಷೀತಕೀ-ತೃತೀಯಾಧ್ಯಾಯ |
| ೨೪ | ಪ್ರಾಣವಿದ್ಯಾ | ಛಾಂದೋಗ್ಯ-ಪ್ರಥಮಪ್ರಪಾಠಕ |
| ೨೫ | ಬಾಲಾಕಿವಿದ್ಯಾ | ಕೌಷೀತಕೀ-ಚತುರ್ಥಾಧ್ಯಾಯ |

| | |
|---|---|
| ೨೬ ಭೂಮವಿದ್ಯಾ | ಛಾಂದೋಗ್ಯ-ಸಪ್ತಮಪ್ರಪಾಠಕ |
| ೨೭ ಮಧುವಿದ್ಯಾ | „ ತೃತೀಯಪ್ರಪಾಠಕ |
| ೨೮ ಮೈತ್ರೇಯೀವಿದ್ಯಾ | ಬೃಹದಾರಣ್ಯಕ-ಷಷ್ಠಾಧ್ಯಾಯ |
| ೨೯ ರುದ್ರವಿದ್ಯಾ | ಅಥರ್ವಶಿರಉಪನಿಷತ್ |
| ೩೦ ವೈಶ್ವಾನರವಿದ್ಯಾ | ಛಾಂದೋಗ್ಯ-ಪಂಚಮಪ್ರಪಾಠಕ |
| ೩೧ ಶಾಂಡಿಲ್ಯವಿದ್ಯಾ | „ ತೃತೀಯಪ್ರಪಾಠಕ |
| ೩೨ ಸತ್ಯಕಾಮವಿದ್ಯಾ | ಪ್ರಶ್ನೋಪನಿಷತ್ |
| ೩೩ ಸದ್ವಿದ್ಯಾ | ಛಾಂದೋಗ್ಯ-ಷಷ್ಠಪ್ರಪಾಠಕ |
| ೩೪ ಸಂವರ್ಗವಿದ್ಯಾ | „ ಚತುರ್ಥಪ್ರಪಾಠಕ |

ಈ ವಿದ್ಯೆಗಳಲ್ಲಿ ಪ್ರತಿಯೊಂದರ ಸ್ವರೂಪವನ್ನೂ, ಅವುಗಳಲ್ಲಿ ಉಪಾಸ್ಯಗಳಾದ ಗುಣವಿಶೇಷಗಳನ್ನೂ ಮತ್ತು ಅದಕ್ಕೆ ಅಪೇಕ್ಷಿತಗಳಾಗಿ ಇರುವ ಅಂಗೋಪಾಂಗಗಳನ್ನೂ ಉಪನಿಷತ್ತುಗಳ ಮೂಲಕವಾಗಿ ಸದಾಚಾರ್ಯೋಪದೇಶದಿಂದಲೇ ತಿಳಿದುಕೊಳ್ಳಬೇಕಾಗಿ ಇರುವುದರಿಂದ ಅವುಗಳನ್ನು ಇಲ್ಲಿ ಬರೆಯದೆ ಬಿಟ್ಟಿರುವೆವು.

## ೫೩೯. ಉಕ್ತವಿದ್ಯಾಸು ಅನ್ಯತಮವಿದ್ಯಾನಿಷ್ಠಸ್ಯ ಮೋಕ್ಷಪ್ರಾಪ್ತಿಕ್ರಮಪ್ರದರ್ಶನಂ.

ಇಂಥ ಮೂವತ್ತನಾಲ್ಕು ವಿದ್ಯೆಗಳಿಗೂ ಮೋಕ್ಷವೆಂಬ ಫಲವು ತುಲ್ಯವಾಗಿ ಇರುವಕಾರಣ ಇವುಗಳೊಳಗೆ ಅವುದಾದರೊಂದು ವಿದ್ಯೆಯನ್ನು ಅವಲಂಬಿಸಿ ಸಾಂಗವಾಗಿ ಆಚರಿಸಿದ ಚೇತನನು—ಸಂಚಿತವಾದ ಪಾಪದಿಂದಲೂ, ಅನಭ್ಯುಪಗತಪ್ರಾರಬ್ಧದಿಂದಲೂ ವಿಮುಕ್ತನಾಗಿ—ಆಗಾಮಿಯಾದ ಪಾಪದ ಅಶ್ಲೇಷವನ್ನು ಪಡೆದು, ಅಭ್ಯುಪಗತಪ್ರಾರಬ್ಧವನ್ನು ಅನುಭವದಿಂದ ಕೊನೆಗಾಣಿಸಿ, ಚರಮವಾದ ಸ್ಥೂಲಶರೀರವನ್ನು ಬಿಟ್ಟು, ಸೂಕ್ಷ್ಮಶರೀರದೊಡನೆ ಅರ್ಚಿರಾದಿಮಾರ್ಗವಾಗಿ ಅಂಡಕಟಾಹವನ್ನೂ ಆವರಣತತ್ತ್ವಗಳನ್ನೂ ಉಲ್ಲಂಘಿಸಿ, ಪ್ರಕೃತಿಮಂಡಲದ ಎಲ್ಲೆಯಾದ ವಿರಜಾನದಿಯನ್ನು ಹೊಂದಿ, ಅಲ್ಲಿ ಸ್ನಾನಮಾಡಿದ ಮೇಲೆ ಸೂಕ್ಷ್ಮಶರೀರವನ್ನು ಬಿಟ್ಟು, ಅಮಾನವಕರಸ್ಪರ್ಶದಿಂದ ಅಪ್ರಾಕೃತವಾದ ದಿವ್ಯಶರೀರವನ್ನು ಪರಿಗ್ರಹಿಸಿ, ಬ್ರಹ್ಮಾನುಭವಕ್ಕೆ ಯೋಗ್ಯಗಳಾದ ದಿವ್ಯಾಲಂಕಾರಗಳಿಂದ ಅಲಂಕರಿಸಲ್ಪಟ್ಟವನಾಗಿ, ಶ್ರೀವೈಕುಂಠದಿವ್ಯನಗರಮಧ್ಯದಲ್ಲಿ ಕಂಗೊಳಿಸುತ್ತಿರುವ ದಿವ್ಯಮಹಾಮಣಿಮಂಟಪವನ್ನು ಸೇರಿ, ಪರ್ಯಂಕವಿದ್ಯೆಯಲ್ಲಿ ಹೇಳಿ ಇರುವಂತೆ ಆದಿಶೇಷನೆಂಬ ಶಯ್ಯೆಯನ್ನು ತನ್ನ ಕಾಲುಗಳಿಂದ ತುಳಿದು ಮೇಲಕ್ಕೆ

ಹತ್ತಿ, ಪರಮಪುರುಷನ ದಿವ್ಯಭುಜಗಳಿಂದ ಆಲಿಂಗಿತನಾಗಿ, ಅವನ ಮಡಿಯಲ್ಲಿ ಕುಳಿತು, ಶ್ರಿಯಃಪತಿಯೊಡನೆ ಸ್ವಲ್ಪಹೊತ್ತು ಪ್ರಶ್ನೋತ್ತರಗಳನ್ನು ನಡಸಿ, ಅಪಹತಪಾಪ್ಮತ್ವ ಮೊದಲಾದ ಎಂಟು ಗುಣಗಳ ಆವಿರ್ಭಾವವನ್ನು ಪಡೆದು, ಗುಣ-ವಿಗ್ರಹ-ವಿಭೂತಿವಿಶಿಷ್ಟಪರಿಪೂರ್ಣಬ್ರಹ್ಮಾನಂದಾನುಭವದಿಂದ ಪರವಶೀಭೂತನಾಗಿ, ಪರಮಪುರುಷನ ಕಲ್ಯಾಣಗುಣಾನುಭವದಲ್ಲಿಯೂ ಕೈಂಕರ್ಯದಲ್ಲಿಯೂ ಪ್ರವರ್ತಿಸಿದವನಾಗಿ ಯಾವದಾತ್ಮಭಾವಿಯಾದ ಆನಂದಸಾಗರದಲ್ಲಿ ಮಗ್ನನಾಗುವನು.

## ೫೪೦. ಉಕ್ತವಿಧಾಯಾಂ ಭಕ್ತೌ ಸ್ವರೂಪವಿರುದ್ಧತ್ವಜ್ಞಾನವತಃ ಮೋಕ್ಷೋಪಾಯಭೂತಪ್ರಪತ್ತಿಸ್ವರೂಪನಿರೂಪಣಂ.

ಶ್ರಿಯಃಪತಿಯಾದ ಸರ್ವಶೇಷಿಗೆ ಈ ಜೀವಾತ್ಮಸ್ವರೂಪವು ಅತ್ಯಂತಪರತಂತ್ರವಾದುದರಿಂದ ಇಂಥ ಪರತಂತ್ರವಸ್ತುವಿಗೆ ಸ್ವರಕ್ಷಣದಲ್ಲಿ ಸ್ವಪ್ರವೃತ್ತಿ ಕೂಡುವುದಿಲ್ಲವಾಗಿ ಪೂರ್ವೋಕ್ತವಾದ ಭಕ್ತಿಯೆಂಬ ಮೋಕ್ಷೋಪಾಯವು ಅಪಾಯಬಹುಳವೆಂದೂ, ದುಷ್ಕರವೆಂದೂ, ಸ್ವರೂಪವಿರುದ್ಧವೆಂದೂ ತಿಳಿದು ಅಂಬುವವನಿಗೆ ಮಾತಾಪಿತೃಸಹಸ್ರಕ್ಕಿಂತಲೂ ವತ್ಸಲತರನಾದ ವೇದಪುರುಷನು "ಹಾಗಾದರೆ ಪೂರ್ವೋಕ್ತವಾದ ಮೋಕ್ಷೋಪಾಯನನ್ನು ಬಿಟ್ಟು ಶ್ರಿಯಃಪತಿಯಾದ ನಾರಾಯಣನನ್ನೇ ಮೋಕ್ಷೋಪಾಯವಾಗಿ ಅಧ್ಯವಸಾಯಗೊಂಡು (ನಿಶ್ಚಯಿಸಿ), ಇಂಥ ಅಧ್ಯವಸಾಯವೂ ಅವನ ಕೃಪೆಯಿಂದ ಉಂಟಾಗಿ ಇರುವುದೆಂದೂ, ಅತಏವ ಸ್ವರೂಪಾನುರೂಪವೆಂದೂ ತಿಳಿದು, ಇದರಲ್ಲಿ ಉಪಾಯತ್ವಭ್ರಾಂತಿಯನ್ನು ತಾಳದೆ ಅವನಲ್ಲಿಯೇ ಉಪಾಯತ್ವಬುದ್ಧಿಯನ್ನೂ ಉಪೇಯತ್ವಬುದ್ಧಿಯನ್ನೂ ವಹಿಸಿ ನಿರ್ಭರನಾಗಿ ಇದ್ದು, ಸಹಿಸಲಾರದಷ್ಟು ಉಪೇಯತ್ವರಾವಿಶಿಷ್ಟನಾಗುವಿಯಾದರೆ—ಆನುಕೂಲ್ಯಸಂಕಲ್ಪವೂ, ಪ್ರಾತಿಕೂಲ್ಯತ್ಯಾಗವೂ, ಅವನು ರಕ್ಷಿಸುವನೆಂಬ ದೃಢತರವಾದ ನಂಬಿಕೆಯೂ, ಅವನಲ್ಲಿ ರಕ್ಷಕತ್ವಸ್ವೀಕಾರವೂ, ಆಕಿಂಚನ್ಯ ಅನನ್ಯಗತಿತ್ವಗಳೆಂಬ ಕಾರ್ಪಣ್ಯವೂ, ಅವನ ಕೃಪೆಯಿಂದಲೇ ಸಂಭಾವಿತಸ್ವಭಾವಗಳಾಗಿ ನಿನಗೆ ಸ್ವತಏವ ಸಿದ್ಧಿಸುವುವು; ಮತ್ತು ಪೂರ್ವೋಕ್ತರೀತಿಯಲ್ಲಿ ಅರ್ಚಿರಾದಿಮಾರ್ಗಪ್ರಾಪ್ತಿಯೂ, ಪರಮಪುರುಷಚರಣಾರವಿಂದಪ್ರಾಪ್ತಿಯೂ, ಮತ್ತೂ ಆವಶ್ಯಕಗಳಾದ ಸಕಲಾತ್ಮಗುಣಗಳೂ ಸಿದ್ಧಿಸಿ, ಯಾವದಾತ್ಮಭಾವಿಯಾದ ಭಗವತ್ಕೈಂಕರ್ಯವೆಂಬ ಮಹಾಪುರುಷಾರ್ಥವೂ ಲಭಿಸುವುದು" ಎಂದು ಕಠವಲ್ಲಿ, ಮಹಾನಾರಾಯಣ ಮುಂತಾದ ಉಪನಿಷತ್ತುಗಳಲ್ಲಿ ವಿಶದವಾಗಿ ಉಪದೇಶಿಸಿ ಇರುವುದರಿಂದ ಪ್ರಪತ್ತಿಯೂ ಒಂದುವಿಧವಾಗಿ "ನ್ಯಾಸ

ವಿದ್ಯೆ, ಪ್ರಪತ್ತಿವಿದ್ಯೆ" ಎಂಬುವೇ ಮೊದಲಾದ ಹೆಸರುಗಳನ್ನು ಪಡೆದು ಇದೂ ಮೋಕ್ಷಕ್ಕೆ ಸಾಕ್ಷಾತ್ತಾಗಿ ಸಾಧನವಾಗುವುದು.

"ಅತ್ಯಂತಪರತಂತ್ರವಾದ ಆತ್ಮಸ್ವರೂಪಕ್ಕೆ ಅನುರೂಪವಾಗಿಯೂ ಸ್ವಾಭಿಮತವಾದ ಮೋಕ್ಷವನ್ನು ಸಾಧಿಸಿಕೊಡತಕ್ಕುದಾಗಿಯೂ ಇರುವ ಮತ್ತೊಂದು ಉಪಾಯವು (ಸಾಧನವು) ಆವುದೂ ಇಲ್ಲವಾದುದರಿಂದ ಉಪಾಯಾಂತರಸಾಧ್ಯವಲ್ಲದ ಸ್ವಾಭಿಲಷಿತವಾದ ಮೋಕ್ಷಫಲವನ್ನು ಸಾಧಿಸಿಕೊಳ್ಳುವುದಕ್ಕೋಸ್ಕರ ಮಹಾವಿಶ್ವಾಸಪೂರ್ವಕವಾಗಿ—ಶ್ರಿಯಃಪತಿಯೊಬ್ಬನೇ ಉಪಾಯಭೂತನಾಗಿ ಇರುವನೆಂದು ನಿಶ್ಚಯಿಸಿ ಅವನನ್ನೇ ಉಪಾಯೋಪೇಯಭಾವದಿಂದ ವರಿಸುವಿಕೆ" ಪ್ರಪತ್ತಿಯೆನಿಸಿಕೊಳ್ಳುವುದು.

ಈ ಲಕ್ಷಣದ ಫಲಿತಾಂಶವೇನೆಂದರೆ—

**"ಸ್ವತ್ವಮಾತ್ಮನಿ ಸಂಜಾತಂ ಸ್ವಾಮಿತ್ವಂ ಬ್ರಹ್ಮಣಿ ಸ್ಥಿತಂ।**
**ಉಭಯೋರೇಷ ಸಂಬಂಧೋ ನೇತರೋಽಭಿಮತೋ ಮಮ॥**

ಎಂಬ ಶಾಸ್ತ್ರಮರ್ಯಾದೆಯನ್ನು ಅನುಸರಿಸಿ ಈ ಜೀವಾತ್ಮನಲ್ಲಿ ಸ್ವತ್ವವೂ ಈಶ್ವರನಲ್ಲಿ ಸ್ವಾಮಿತ್ವವೂ ವ್ಯವಸ್ಥಿತವಾಗಿಯೇ ಇರುವುವಲ್ಲದೆ ಈ ಸ್ವಭಾವಗಳಿಗೆ ಯಾವಾಗಲೂ ವಿಪರ್ಯಾಸ (ಬದಲಾವಣೆ) ವುಂಟಾಗುವುದಿಲ್ಲ. ಹೀಗೆ ಅತ್ಯಂತಪರತಂತ್ರವಾದ ವಸ್ತು ತನ್ನ ರಕ್ಷಣೆಗಾಗಿ ತಾನೇ ಪ್ರವರ್ತಿಸುವುದಾದರೆ—ತನ್ನಲ್ಲಿ ಇರುವ ಸ್ವತ್ವಕ್ಕೂ ಸ್ವಾಮಿಯಲ್ಲಿ ಇರುವ ಸ್ವಾಮಿತ್ವಕ್ಕೂ ವಿನಿಮಯವನ್ನು ಮಾಡಿಕೊಂಡಂತೆ ಆಗಿ ಇಬ್ಬರಿಗೂ ಸ್ವರೂಪಹಾನಿ ಪ್ರಸಕ್ತವಾಗುವುದು. ಆದಕಾರಣ ಸ್ವಾಮಿಯಾದವನು ಸ್ವತ್ತಿನ ರಕ್ಷಣೆಗಾಗಿ ಸ್ವತ್ತಿನಿಂದ ಅಪ್ರೇರಿತನಾಗಿ ತಾನಾಗಿಯೇ ಪ್ರವರ್ತಿಸುವನು. ಇದನ್ನು ತಿಳಿದುಕೊಳ್ಳದೆ ಸ್ವತ್ತು ತನ್ನ ರಕ್ಷಣೆಗೆ ತಾನೇ ಪ್ರವರ್ತಿಸುವುದಾದರೆ ಸ್ವಾಮಿಯಾದವನು ತನ್ನ ಪ್ರವೃತ್ತಿಯನ್ನು ನಿಲ್ಲಿಸುವನು. ಹೀಗೆ ಸ್ವಾಮಿಯಾದ ಭಗವಂತನ ಪ್ರವೃತ್ತಿಗೆ ವಿರುದ್ಧವಾದ (ಅಡ್ಡಿಯನ್ನು ಮಾಡುವ) ಸ್ವಪ್ರವೃತ್ತಿಯನ್ನು ನಿಲ್ಲಿಸುವಿಕೆಯೇ ಪ್ರಪತ್ತಿಯೆನಿಸಿಕೊಳ್ಳುವುದೆಂಬುದು ಈ ಪ್ರಪತ್ತಿಲಕ್ಷಣದ ಫಲಿತಾಂಶವಾದ ನಿಷ್ಕೃಷ್ಟಸ್ವರೂಪವಾಗಿ ಇರುವುದು. ಇದೇ ಅರ್ಥವನ್ನು—"**ಭಗವತ್ಪ್ರವೃತ್ತಿವಿರೋಧಿಸ್ವಪ್ರವೃತ್ತಿನಿವೃತ್ತಿಃ ಪ್ರಪತ್ತಿಃ**"

ಎಂಬುದಾಗಿ ಪೂರ್ವಾಚಾರ್ಯರು ತೋರಿಸಿರುವರು.

ಆದರೆ—ಪ್ರಪತ್ತಿಗೆ ಇದೇ ಲಕ್ಷಣವೆಂದು ತೋರಿಸುವ ಪ್ರಮಾಣವಚನವು ಆವುದೂ ಇಲ್ಲವೆಂದು ಭ್ರಮಿಸಬಾರದು ; ವೇದೋಪಬೃಹ್ಮಣವಾದ ಶ್ರೀರಾಮಾಯಣದಲ್ಲಿ ಜಗನ್ಮಾತೆಯಾದ **ಶ್ರೀಜಾನಕಿ** ಅಪ್ಪಣೆಕೊಡಿಸಿರುವ ವಚನವೇ ಇದಕ್ಕೆ ಪ್ರಮಾಣವಾಗಿ ಇರುವುದು. ಹೇಗೆಂದರೆ—

ರಾಮವಿರಹದಿಂದ ಕರ್ಶಿತೆಯಾಗಿ ತಚ್ಚರಣಾರವಿಂದಪ್ರಾಪ್ತಿಸಮಯವನ್ನೇ ಚಿಂತಿಸುತ್ತ ಅಶೋಕವನದಲ್ಲಿ ಕಾಲವನ್ನು ಕಳೆಯುತ್ತಿರುವ **ಶ್ರೀಸೀತಾ** ದೇವಿಯನ್ನು ಕಂಡು **ಆಂಜನೇಯನು**—ಎಲೈ ಲೋಕಮಾತೆಯೇ! ರಾಮದೂತನೆಂದು ಲೋಕಪ್ರಸಿದ್ಧನಾಗಿಯೂ, ವೀರಾಗ್ರಣಿಯಾಗಿಯೂ, ದಂಪತಿಗಳಾದ ನಿಮ್ಮಿಬ್ಬರ ಚರಣಸೇವಕನಾಗಿಯೂ, ಇರುವ ನಾನು ಸನ್ನಿಹಿತನಾಗಿ ಇರುವಲ್ಲಿ ನೀನು ಇಷ್ಟು ಚಿಂತಿಸುವುದೇಕೆ? ನಿನ್ನ ಚರಣಧೂಳಿಗಳಿಂದ ಈ ನನ್ನ ಶರೀರವನ್ನು ಪವಿತ್ರಪಡಿಸಿ ನನ್ನ ಬೆನ್ನಿನ ಮೇಲೆ ನೀನು ಕುಳಿತುಕೊಳ್ಳುವಿಯಾದರೆ ಒಂದೇ ಒಂದು ನಿಮಿಷಮಾತ್ರದಲ್ಲಿ **ಶ್ರೀರಾಘವನ** ಚರಣಸನ್ನಿಧಿಗೆ ನಿನ್ನನ್ನು ಒಯ್ಯುವೆನು" ಎಂದು ಅಂಜಲಿಪೂರ್ವಕವಾಗಿ ವಿಜ್ಞಾಪಿಸಿದ ಸಂದರ್ಭದಲ್ಲಿ—ಇವನ ಅಭಿಪ್ರಾಯದಂತೆ ನಾನು ಸಮ್ಮತಿಯನ್ನು ಕೊಟ್ಟೆನಾದರೆ ಸ್ವರಕ್ಷಣಕ್ಕೆ ಸ್ವಯಂ ಪ್ರವೃತ್ತಿಮಾಡಿದಂತಾಗಿ ಸ್ವ-ಸ್ವಾಮಿಗಳಿಬ್ಬರಿಗೂ ಸ್ವರೂಪಹಾನಿಯಾದೀತೆಂದು ಮತ್ತಷ್ಟು ಕ್ಲೇಶಗೊಂಡು **ಶ್ರೀಜಾನಕಿ**—

**"ಶರೈಸ್ತು ಸಂಕುಲಾಂ ಕೃತ್ವಾ ಲಂಕಾಂ ಪರಬಲಾರ್ದನಃ |**
**ಮಾಂ ನಯೇದ್ಯದಿ ಕಾಕುತ್ಸ್ಥಃ ತತ್ತಸ್ಯ ಸದೃಶಂ ಭವೇತ್"**

ಎಂಬುದಾಗಿ ಆಂಜನೇಯನ ಮಾತಿಗೆ ಪ್ರತ್ಯುತ್ತರವನ್ನು ಅಪ್ಪಣೆಕೊಡಿಸಿರುವಳು. ಇದರ ಅಭಿಪ್ರಾಯವೇನೆಂದರೆ—

ಎಲೈ ಆಂಜನೇಯನೇ! ಈಗ ನನಗೆ ಪ್ರಾಪ್ತವಾಗಿ ಇರುವ ಸಮಸ್ತಕ್ಲೇಶಗಳೂ ಶ್ರೀರಾಘವನಿಗೆ ತಿಳಿದಿಲ್ಲವೆಂದು ಭಾವಿಸುತ್ತೀಯಾ? ಸರ್ವಜ್ಞನಾದ ಅವನಿಗೆ ತಿಳಿಯದ ಅಂಶವೂ ಒಂದುಂಟೆ? ಹಾಗೆ ತಿಳಿದಿದ್ದರೂ ಈ ಕ್ಲೇಶಗಳನ್ನು ಪರಿಹರಿಸುವಷ್ಟು ಸಾಮರ್ಥ್ಯವು ಅವನಿಗೆ ಇಲ್ಲವೆಂದು ಭಾವಿಸುತ್ತೀಯಾ? ಅವನು ಕಕುತ್ಸ್ಥವಂಶದಲ್ಲಿ ಹುಟ್ಟಿದವನಲ್ಲವೆ? ಮತ್ತು ಶತ್ರುಬಲವನ್ನು ಮರ್ದಿಸುವವನೆಂದು ಲೋಕಪ್ರಸಿದ್ಧನಲ್ಲವೆ? ಅವನ ಶಕ್ತಿಗೆ ಅಸಾಧ್ಯವಾದ ಕೆಲಸವು ಆವುದುಂಟು? ಹೀಗೆ ಅಪ್ರತಿಹತವಾದ ಜ್ಞಾನಶಕ್ತಿಗಳೆರಡರಿಂದಲೂ ಕೂಡಿರುವ ಆ ಶ್ರೀರಾಘವೇಂದ್ರನೇ ಇಲ್ಲಿಗೆ ಬಂದು ಅಮೋಘವಾದ ತನ್ನ ಬಾಣಗಳಿಂದ ಈ

ಲಂಕಾನಗರಿಯನ್ನು ಆಲೋಲಕಲ್ಲೋಲಪಡಿಸುವುದರಮೂಲಕ ನನ್ನ ಕ್ಲೇಶಗಳನ್ನೆಲ್ಲಾ ಪರಿಹರಿಸಿ ನನ್ನನ್ನು ತನ್ನ ಸನ್ನಿಧಿಗೆ ಕರೆದುಕೊಳ್ಳುವನಾದರೆ ಅಂಥ ವ್ಯಾಪಾರವೇ ಸ್ವಾಮಿಯಾದ ಅವನ ಸ್ವರೂಪಕ್ಕೂ, ಸ್ವತ್ವಾದ ನನ್ನ ಸ್ವರೂಪಕ್ಕೂ ಅನುರೂಪವಾಗಿ ಇರುವುದೆಂದೂ, ಅಷ್ಟೇ ಅಲ್ಲದೆ ನನ್ನ ರಕ್ಷಣೆಗಾಗಿ ನಾನೇ ಪ್ರವರ್ತಿಸಿ ನಿನ್ನ ಮಾತಿನಂತೆ ನಡಸುವೆನಾದರೆ ಇಬ್ಬರ ಸ್ವರೂಪಕ್ಕೂ ಹಾನಿ ಪ್ರಸಕ್ತವಾಗುವುದೆಂದೂ ನೀನು ತಿಳಿಯಬೇಕು." ಎಂಬುದು ಶ್ಲೋಕಾಭಿಪ್ರಾಯವಾಗಿ ಇರುವುದು. ಆದಕಾರಣ ಪೂರ್ವಾಚಾರ್ಯೋಕ್ತವಾದ ಲಕ್ಷಣವೇ ಪ್ರಪತ್ತಿಯ ನಿಷ್ಕೃಷ್ಟಲಕ್ಷಣವೆಂಬುದು ಪ್ರಮಾಣಸಿದ್ಧವಾಗಿ ಇರುವುದು.

ಇಂಥ ಪ್ರಪತ್ತಿಯಲ್ಲಿ ಆಕಿಂಚನ್ಯ, ಅನನ್ಯಗತಿತ್ವಗಳೆಂಬ ಎರಡು ಸ್ವಭಾವಗಳುಳ್ಳ ಚೇತನಸಾಮಾನ್ಯಕ್ಕೂ ಅಧಿಕಾರವುಂಟು. ಆಕಿಂಚನ್ಯವೆಂದರೆ ಉಪಾಯಾಂತರಶೂನ್ಯತ್ವ. ಅನನ್ಯಗತಿತ್ವವೆಂದರೆ ರಕ್ಷಕಾಂತರಶೂನ್ಯತ್ವ. ಉಪಾಯಾಂತರವೂ ರಕ್ಷಕಾಂತರವೂ ಉಂಟೆಂದು ತಿಳಿದುಕೊಂಡಿರುವ ಗರ್ವಿತನು ಪ್ರಪತ್ತಿಗೆ ಅಧಿಕಾರಿಯಾಗಲಾರನು. ಅಂಥ ಗರ್ವವನ್ನು ತೊರೆದು ಭಗ್ನಾಭಿಮಾನನೆನಿಸಿಕೊಂಡವನೇ ಪ್ರಪತ್ತಿಗೆ ಅಧಿಕಾರಿಯಾಗುವನು; ಈ ವಿಷಯಗಳನ್ನೆಲ್ಲಾ —

"ಅನನ್ಯಸಾಧ್ಯೇ ಸ್ವಾಭೀಷ್ಟೇ ಮಹಾವಿಶ್ವಾಸಪೂರ್ವಕಂ |
ತದೇಕೋಪಾಯತಾಯಾಚ್ಞಾ ಪ್ರಪತ್ತಿಶ್ಶರಣಾಗತಿಃ"
"ಅಹಮಸ್ಮ್ಯಪರಾಧಾನಾಮಾಲಯೋಽಕಿಂಚನೋಽಗತಿಃ |
ತ್ವಮೇವೋಪಾಯಭೂತೋ ಮೇ ಭವೇತಿಪ್ರಾರ್ಥನಾಮತಿಃ ||
ಶರಣಾಗತಿರಿತ್ಯುಕ್ತಾ ಸಾ ದೇವೇಽಸ್ಮಿನ್ ಪ್ರಯುಜ್ಯತಾಂ"
"ಆನುಕೂಲ್ಯಸ್ಯ ಸಂಕಲ್ಪಃ ಪ್ರಾತಿಕೂಲ್ಯಸ್ಯ ವರ್ಜನಂ |
ರಕ್ಷಿಷ್ಯತೀತಿ ವಿಶ್ವಾಸೋ ಗೋಪ್ತೃತ್ವವರಣಂ ತಥಾ ||
ಆತ್ಮನಿಕ್ಷೇಪಕಾರ್ಪಣ್ಯೇ ಷಡ್ವಿಧಾ ಶರಣಾಗತಿಃ"

ಇವೇ ಮೊದಲಾದ ಶ್ರೀಪಾಂಚರಾತ್ರ (ಅಹಿರ್ಬುಧ್ನ್ಯಸಂಹಿತಾ) ವಚನಗಳಿಂದ ಪೂರ್ವಾಚಾರ್ಯರು ಉಪಪಾದನೆಮಾಡಿ ಇರುವುದನ್ನು ರಹಸ್ಯಾದಿಗ್ರಂಥಗಳಿಂದ ಸದಾಚಾರ್ಯೋಪದೇಶದ ಮೂಲಕವಾಗಿ ತಿಳಿಯಬೇಕು.

## ೫೮೧. ಪ್ರಪತ್ತೇರುಪಾಯತ್ವಸದ್ಭಾವಾಸದ್ಭಾವಬೋಧಕವಚನಾನಾಂ ವಿರೋಧಪ್ರಸಕ್ತ್ಯಭಾವಃ.

ಪ್ರಪತ್ತಿಪ್ರಕರಣದಲ್ಲಿ ಪ್ರಪತ್ತಿಗೆ ಉಪಾಯತ್ವವು ಉಂಟೆಂದೂ ಇಲ್ಲವೆಂದೂ ಹೇಳುವ ಎರಡುಬಗೆಯ ವಚನಗಳೂ ಕೆಲವು ಉಂಟು; ಶ್ರೀಮನ್ನಾರಾ

ಯಣನೇ ಉಪಾಯಭೂತನೆಂದು ಹೇಳುವ ವಚನಗಳೂ ಉಂಟು. ಆದರೆ ಈ ವಚನಗಳಿಗೆ ಪರಸ್ಪರವಿರೋಧವಿರುವುದೆಂದು ಭ್ರಮಿಸಬಾರದು. ಪ್ರಪತ್ತಿಗೆ ಸಾಧ ನತ್ವವು ಉಂಟೆಂದು ಬೋಧಿಸುವ ವಚನಗಳಲ್ಲಿ ಪ್ರಯುಕ್ತಗಳಾಗಿ ಇರುವ ಪ್ರಪತ್ತಿ ಶರಣಾಗತಿ ನ್ಯಾಸ ಇತ್ಯಾದಿಶಬ್ದಗಳು ಪ್ರಪತ್ತವ್ಯನಾದ (ಪ್ರಪತ್ತಿಗೆ ವಿಷಯನಾದ) ಶ್ರೀಮನ್ನಾರಾಯಣನನ್ನೇ ಬೋಧಿಸುವುವಾದುದರಿಂದ ಎಲ್ಲಾ ವಚನಗಳಿಗೂ ಐಕಕಂಠ್ಯವೇ ಇರುವುದಲ್ಲದೆ ವಿರೋಧಪ್ರಸಕ್ತಿಯೇ ಇಲ್ಲ.

ಈ ಪ್ರಪತ್ತಿಯ ವಿಷಯದಲ್ಲಿ ಹೇಳಬೇಕಾದ ಸಕಲವಿಷಯಗಳನ್ನೂ ಪೂರ್ವಾಚಾರ್ಯರುಗಳ ರಹಸ್ಯಾದಿಗ್ರಂಥಗಳಲ್ಲಿ ಆಚಾರ್ಯೋಪದೇಶಪರಂಪರಾ ಕ್ರಮದಿಂದ ಅರಿಯಬೇಕಾಗಿ ಇರುವಕಾರಣ ಅವುಗಳನ್ನು ಇಲ್ಲಿ ಬರೆಯಲಾರೆವು. ಅಂತು ಭಕ್ತಿಯಾಗಲಿ ಪ್ರಪತ್ತಿಯಾಗಲಿ ಮೋಕ್ಷೋಪಾಯವೆನಿಸಿಕೊಳ್ಳುವುದೆಂದು ಮೊದಲು ಪ್ರತಿಜ್ಞೆಮಾಡಿದ ಅರ್ಥವನ್ನು ಸಂಕ್ಷೇಪವಾಗಿ ಇಲ್ಲಿ ನಿರೂಪಿಸಲಾಯಿತು.

## ೫೪೨. ದೇಶವಿಶೇಷೇ ಪರಮಪುರುಷಚರಣಾರವಿಂದ ಕೈಂಕರ್ಯಸ್ಯೈವ ಪರಮಪುರುಷಾರ್ಥತ್ವಂ.

ಈ ಪ್ರಸ್ತಾವದಲ್ಲಿ ಪರಮಪುರುಷಚರಣಾರವಿಂದಗಳಲ್ಲಿ ಯಾವದಾತ್ಮ ಭಾವಿಯಾಗಿ ಮಾಡಲ್ಪಡುವ ವಿಚ್ಛೇದವಿಲ್ಲದ ಕೈಂಕರ್ಯವೇ ಭಕ್ತಿಪ್ರಪತ್ತಿಗಳೊಳಗೆ ಅನ್ಯತರವಾದ ಉಪಾಯದಿಂದ ಲಭಿಸುವುದಾದಕಾರಣ ಅಂಥ ಕೈಂಕರ್ಯವೇ ಜೀವಾತ್ಮಸ್ವರೂಪಕ್ಕೆ ಪರಮಪುರುಷಾರ್ಥವಾಗಿ ಇರುವುದೆಂದೂ, ಸತ್ತ್ವರಜ ಸ್ತಮೋಗುಣಗಳ ಕೋಲಾಹಲದಿಂದಲೇ ತುಂಬಿರುವ ಈ ಲೀಲಾವಿಭೂತಿಯಲ್ಲಿ ಅಂಥ ಕೈಂಕರ್ಯವು ನಿರಾತಂಕವಾಗಿ ನಡೆಯಲಾರದಾದುದರಿಂದ ಅಪ್ರಾಕೃತವಾದ ಶ್ರೀ ವೈಕುಂಠವೆಂದೂ, ಪರಮವ್ಯೋಮವೆಂದೂ, ಪರಮಪದವೆಂದೂ, ನಿತ್ಯವಿಭೂತಿ ಯೆಂದೂ ಪ್ರಸಿದ್ಧವಾದ ಲೋಕವಿಶೇಷದಲ್ಲಿಯೇ ಅದು ಸಿದ್ಧಿಸುವುದೆಂದೂ, ಇದ ಕ್ಕಿಂತಲೂ ಉತ್ತಮವಾದ ಮತ್ತೊಂದು ಪುರುಷಾರ್ಥವಿಲ್ಲವೆಂದೂ ಇಲ್ಲಿ ಸೂಚನೆ ಯಾಗಿ ತೋರಿಸಿರುವೆವು.

## ೫೪೩. ವಿರೋಧಿನಿವೃತ್ತ್ಯಾದೀನಾಂ ಸಾಯುಜ್ಯಾಂತಾನಾಂ ಸಪ್ತಾನಾಂ ಕೈಂಕರ್ಯಪೂರ್ವಭಾವಿತ್ವನಿಯಮಃ.

ಇಂಥ ಕೈಂಕರ್ಯಪ್ರಾಪ್ತಿಗೆ—೧ ಮೋಕ್ಷಶಬ್ದದಿಂದ ವಿವಕ್ಷಿತವಾಗಿ ಇರುವ ಸಂಸಾರನಿವೃತ್ತಿಯೂ, ೨ ಅರ್ಚಿರಾದಿಮಾರ್ಗಪ್ರಾಪ್ತಿಯೂ, ೩ ಅಪ್ರಾಕೃತ ದಿವ್ಯಮಂಗಳವಿಗ್ರಹಧಾರಣವೂ, ೪ ಸಾಲೋಕ್ಯಪ್ರಾಪ್ತಿಯೂ, ೫ ಸಾಮೀಪ್ಯ

ಪ್ರಾಪ್ತಿಯೂ, ೬ ಸಾರೂಪ್ಯಪ್ರಾಪ್ತಿಯೂ, ೭ ಸಾಯುಜ್ಯಪ್ರಾಪ್ತಿಯೂ, ಅಂತು ಈ ಏಳೂ ಪೂರ್ವಾಂಗಗಳಾದುದರಿಂದ ಅವಶ್ಯಂಭಾವಿಗಳಾಗಿ ಇರುವುವು.

## ೫೪೪. ಸಾಯುಜ್ಯಶಬ್ದಸ್ಯ ಸಮಾನಗುಣಕತ್ವಪರತ್ವಂ ನ ತು ಬ್ರಹ್ಮಣಿ ಜೀವಸ್ಯ ಲಯಪ್ರತಿಪಾದಕತ್ವಂ.

ಸಾಲೋಕ್ಯಪ್ರಾಪ್ತಿ ಎಂದರೆ ಸಮಾನಲೋಕಪ್ರಾಪ್ತಿ. ಸಾಮೀಪ್ಯ ಪ್ರಾಪ್ತಿ ಎಂದರೆ ಸಮೀಪಪ್ರದೇಶಪ್ರಾಪ್ತಿ. ಸಾರೂಪ್ಯಪ್ರಾಪ್ತಿ ಎಂದರೆ ಸಮಾನ ವಾದ ದಿವ್ಯಮಂಗಳವಿಗ್ರಹಪ್ರಾಪ್ತಿ. ಸಾಯುಜ್ಯಪ್ರಾಪ್ತಿ ಎಂದರೆ ಸಮಾನ ಗುಣಕತ್ವಪ್ರಾಪ್ತಿ. "ಏಷ ಆತ್ಮಾ ಅಪಹತಪಾಪ್ಮಾ ವಿಜರೋ ವಿಮೃತ್ಯು ರ್ವಿಶೋಕೋ ವಿಜಿಘತ್ಸೋಽಪಿಪಾಸಃ ಸತ್ಯಕಾಮಃ ಸತ್ಯಸಂಕಲ್ಪಃ" ಎಂಬ ವಾಕ್ಯ ದಲ್ಲಿ ಹೇಳಿರುವ ಎಂಟು ಗುಣಗಳು ಪರಮಾತ್ಮನಿಗೂ ಜೀವಾತ್ಮನಿಗೂ ಸಾಧಾರಣ ಗುಣಗಳಾಗಿ ಇರುವುವು. ಸಂಸಾರಾವಸ್ಥೆಯಲ್ಲಿ ಜೀವನಿಗೆ ಈ ಗುಣಗಳು ಕರ್ಮ ವಶದಿಂದ ತಿರೋಹಿತವಾಗಿ ಇದ್ದು ಆತ್ಯಂತಿಕಕರ್ಮವಿಲಯವುಂಟಾದ ಮೇಲೆ ಆವಿರ್ಭಾವಾವಸ್ಥೆಯನ್ನು ಹೊಂದುವುವು. "ಯುಜ್ಯತೇ ಪ್ರಾಪ್ಯತೇ ಇತಿ ಯುಕ್ ಗುಣಾಷ್ಟಕಂ, ಸಮಾನಂ ಯುಕ್ ಯಯೋಃ ತೌ ಸಯುಜೌ, ಸಯುಜೋಃ ಭಾವಃ ಸಾಯುಜ್ಯಂ" ಎಂಬ ವ್ಯುತ್ಪತ್ತಿಯಿಂದ ಸಾಯುಜ್ಯಶಬ್ದವು ಜೀವಾತ್ಮ ಪರಮಾತ್ಮರುಗಳಿಗೆ ಸಮಾನಗುಣಕತ್ವವನ್ನು ತೋರಿಸುವುದಲ್ಲದೆ ಪರಮಾತ್ಮನಲ್ಲಿ ಜೀವನಿಗೆ ಲಯವನ್ನು ತೋರಿಸಲಾರದು.

## ೫೪೫. ಜೀವಸ್ಯ ನಿತ್ಯತ್ವಾತ್ ವಸ್ತ್ವಂತರೇ ವಸ್ತ್ವಂತರಸ್ಯ ಲಯಾಸಂಭವಾಚ್ಚ ನ ಸಾಯುಜ್ಯಸ್ಯ ಲಯರೂಪತ್ವಂ.

ಜೀವವಸ್ತು ನಿತ್ಯವಾದುದರಿಂದ ಇದರ ಸ್ವರೂಪಕ್ಕೆ ಯಾವಾಗಲೂ ಲಯವು ಸಂಭವಿಸುವುದಿಲ್ಲ. ಮತ್ತು ಅನ್ಯವಸ್ತುವಿನಲ್ಲಿ ಅನ್ಯವಸ್ತುವಿಗೆ ಲಯ ವೆಂಬುದು ಸುತರಾಂ ಸಂಭವಿಸುವುದಿಲ್ಲ. ಕರ್ಮೋಪಾಧಿಕವಾದ ದೇವತ್ವಮನುಷ್ಯ ತ್ವಾದಿಭೇದಗಳನ್ನು ತೊರೆದಮೇಲೆ ಉಂಟಾಗುವ ಸ್ವಾಭಾವಿಕಸ್ವರೂಪಪ್ರಾಪ್ತಿ ಯನ್ನೇ ಲಯವೆಂದು ಹೇಳುವುದಾದರೆ ಧಾರಾಳವಾಗಿ ಹೇಳಬಹುದು; ಇದು ನಮಗೆ ಅನಿಷ್ಟವಲ್ಲ. ಈ ಅರ್ಥವನ್ನು ವಿಷ್ಣುಪುರಾಣದಲ್ಲಿ—

"ಪರಮಾತ್ಮಾತ್ಮನೋರ್ಯೋಗಃ ಪರಮಾರ್ಥ ಇತೀಷ್ಯತೇ |
ಮಿಥ್ಯೈತದನ್ಯದ್ರವ್ಯಂ ಹಿ ನೈತಿ ತದ್ದ್ರವ್ಯತಾಂ ಯತಃ"

ಎಂಬ ಪರಾಶರವಚನದಿಂದ ತಿಳಿಯಬಹುದು. ಇಂಥ ಪೂರ್ವಾಂಗಸಪ್ತಕದೊಡನೆ ಕೂಡಿರುವ ಕೈಂಕರ್ಯವೇ ಪುರುಷಾರ್ಥದ ಎಲ್ಲೆಯಾಗಿ ಇರುವುದೆಂಬುದೇ ಸಕಲ ವೇದಾಂತಗಳ ರಹಸ್ಯವಾಗಿ ಇರುವುದು.

## ೫೪೬. ಕೈಂಕರ್ಯಸ್ಯ ದುಃಖರೂಪತ್ವಪ್ರಯುಕ್ತಾಪುರುಷಾರ್ಥತ್ವ ಶಂಕಾತತ್ಪರಿಹಾರೌ.

"ಓಹೋ ! ಕೈಂಕರ್ಯವೆಂಬುದು ಸೇವಾರೂಪವಾದುದರಿಂದ ದುಃಖರೂಪವಾಗಿಯೇ ಅಲ್ಲವೆ ಇರುವುದು ? ಇದು ಸಾಮಾನ್ಯವಾಗಿ ಪುರುಷಾರ್ಥವೆನಿಸಿಕೊಳ್ಳುವುದಕ್ಕೇ ಅರ್ಹವಲ್ಲದಿರುವಲ್ಲಿ ಪರಮಪುರುಷಾರ್ಥವೆನಿಸಿಕೊಳ್ಳುವ ಬಗೆ ಹೇಗೆ ? "

ಇಂಥ ಆಶಂಕೆ ಸಂಗತವಲ್ಲ—ಸೇವಾಸಾಮಾನ್ಯದಲ್ಲಿ ದುಃಖರೂಪತ್ವವನ್ನು ಸಾಧಿಸುವುದಾದರೆ ಸಕಲಸೇವೆಯೂ ಪಕ್ಷಕೋಟಿಗೆ ಸೇರುವುದರಿಂದ ಇದಕ್ಕೆ ದೃಷ್ಟಾಂತವು ದೊರೆವುದಿಲ್ಲ. ಸೇವಾವಿಶೇಷದಲ್ಲಿ ದುಃಖರೂಪತ್ವವನ್ನು ಸಾಧಿಸುವುದಾದರೆ ಅನೀಶ್ವರಸೇವೆಯಲ್ಲಿ ಸಿದ್ಧಸಾಧನವಾಗುವುದು. ಈಶ್ವರಸೇವೆಯಲ್ಲಿ ದುಃಖರೂಪತ್ವವನ್ನು ಸಾಧಿಸುವುದಾದರೆ ಧರ್ಮಿಗ್ರಾಹಕಪ್ರಮಾಣದಿಂದ ಬಾಧೆಯುಂಟಾಗುವುದು. ಲೋಕದಲ್ಲಿ ಉದಾರನಾದ ಪುರುಷನ ಸೇವೆಯಲ್ಲಿ ಸುಖರೂಪತ್ವಜ್ಞಾನವೇ ಎಲ್ಲರಿಗೂ ಇರುವುದರಿಂದ ಸೇವಾತ್ವವೆಂಬ ಹೇತು ಅಲ್ಲಿ ವ್ಯಭಿಚರಿತವಾಗುವುದು. ಆದಕಾರಣ ನಿರುಪಾಧಿಕೇಶ್ವರನಾದ ಶ್ರಿಯಃಪತಿಯ ಸೇವೆ ಜೀವಸ್ವರೂಪಕ್ಕೆ ಅತ್ಯಂತಾನುರೂಪವಾಗಿಯೂ ಅವರ್ಜನೀಯವಾಗಿಯೂ ಇರುವುದರಿಂದ ಇದು ಸರ್ವದಾ ಸುಖರೂಪವಾಗಿಯೇ ಇರುವುದಲ್ಲದೆ ಎಂದಿಗೂ ದುಃಖರೂಪವಾಗಲಾರದು.

## ೫೪೭. ಸ್ವಾತ್ಮಾನುಭವರೂಪಸ್ಯ ಕೈವಲ್ಯಸ್ಯ ನಿತ್ಯತ್ವಂ ಪುರುಷಾರ್ಥಾಭಾಸತ್ವಂ ಚ.

ಪಂಚಾಗ್ನಿವಿದ್ಯಾನಿಷ್ಠನಾದವನಿಗೆ ಕೈವಲ್ಯವೆಂಬ ಒಂದು ಪುರುಷಾರ್ಥವಿರುವುದೆಂದು ಶಾಸ್ತ್ರಗಳಲ್ಲಿ ತೋರಿಸಲ್ಪಟ್ಟಿರುವುದು ; ಆದರೆ ಇದು ಕೇವಲ ಆತ್ಮಸ್ವರೂಪಾನುಭವರೂಪವಾದುದರಿಂದ ಪತಿವಿಹೀನೆಯಾದ ಅಬಲೆಯ ಭೋಗದಂತೆ ಅತ್ಯಂತಜುಗುಪ್ಸಿತವಾಗಿ ಇರುವಕಾರಣ ಪೂರ್ವಾಚಾರ್ಯರು ಇದನ್ನು ತೃಣೀಕರಿಸಿ ಇರುವುದು ಮಾತ್ರವಲ್ಲದೆ ಪರಮಪುರುಷಾರ್ಥಪ್ರಾಪ್ತಿಗೆ ಅತ್ಯಂತವಿಘ್ನಕಾರಿಯಾದುದರಿಂದ ಇದರಲ್ಲಿ ಆತ್ಮಹಾನಿಯನ್ನೂ ಎಣಿಸುವರು. ಏತಕ್ಕೆಂದರೆ

ಶ್ರೀಭಾಷ್ಯಕಾರರ ಸೂಕ್ತಿಸ್ವಾರಸ್ಯದಿಂದ ಈ ಕೈವಲ್ಯಪದಪ್ರಾಪ್ತಿ ನಿತ್ಯವೆಂದು ತೋರಿಬರುವಕಾರಣ ಈ ಪದವನ್ನು ಹೊಂದಿದವರಿಗೆ ಸಂಸಾರಪ್ರಾಪ್ತಿಗೂ ಭಗವಚ್ಚರಣಾರವಿಂದಪ್ರಾಪ್ತಿಗೂ ಅವಕಾಶವಿಲ್ಲದೆ ಯಾವದಾತ್ಮಭಾವಿಯಾಗಿ ಅಲ್ಲೇ ಇರಬೇಕಾಗಿ ಇರುವುದು.

ಶ್ರೀಮದ್ವೇದಾಂತದೇಶಿಕಸಂಪ್ರದಾಯಾನುಯಾಯಿಗಳು—" ಶ್ರೀಭಾಷ್ಯಕಾರರ ಸೂಕ್ತಿಗೆ ಪ್ರಕಾರಾಂತರವಾಗಿ ತಾತ್ಪರ್ಯವನ್ನು ಕಲ್ಪಿಸಬೇಕು ; ಕೈವಲ್ಯಪದವಿಯನ್ನು ಪಡೆದವರಿಗೆ ಪುನಃ ಸಂಸಾರಪ್ರಾಪ್ತಿಗೆ ಅವಕಾಶವಿಲ್ಲದಿದ್ದರೂ ಅಲ್ಲೇ ಇದ್ದುಕೊಂಡು ಭಗವದುಪಾಸನೆಯನ್ನು ಮಾಡಿ ಭಗವತ್ಸಾನ್ನಿಧ್ಯವನ್ನು ಪಡೆಯಬಹುದು " ಎಂದು ಹೇಳುವರು.

ಈ ವಿಷಯದಲ್ಲಿ ಹೇಳಬೇಕಾದ ಅಂಶಗಳು ಇನ್ನೂ ಬಹಳವಾಗಿ ಇದ್ದರೂ, ರಹಸ್ಯಾದಿಗ್ರಂಥಗಳಲ್ಲಿ ವಿಪುಲವಾಗಿ ನಿರೂಪಿಸಿರುವ ಈ ವಿಷಯಗಳು ಶಾಸ್ತ್ರಪರಿಚಯವಿಲ್ಲದವರ ಬುದ್ಧಿಗೆ ಅತಿಗಹನವಾದುದರಿಂದ ಅವುಗಳನ್ನು ಇಲ್ಲಿ ಬರೆಯದೆ ಬಿಟ್ಟಿರುವೆವು.

ಸಂಪ್ರತಿ ತತ್ತ್ವಂ ಮಲಿನಂ
ಮಿಥ್ಯಾವಾದೋ ಯದಾಽಽಗತೋ ಮಲಿನಃ ।
ಸಂಪ್ರತಿ ತತ್ತ್ವಂ ವಿಮಲಂ
ತತ್ತ್ವವಿಶುದ್ಧಿರ್ಯದಾಽಽಗತಾ ವಿಮಲಾ ॥

ಓಂ

ಇಂತು ತತ್ತ್ವಶುದ್ಧಿಯೆಂಬ ವಿಶಿಷ್ಟಾದ್ವೈತಪ್ರಕರಣಗ್ರಂಥದೊಳ್
ಜೀವಪರಿಚ್ಛೇದದಲ್ಲಿ ಜೀವವಿಷಯಕಪ್ರಕೀರ್ಣಕ
ವಿಚಾರನಿರೂಪಣಪ್ರಕರಣಂ ಷಷ್ಠಂ ॥೬॥

## ಇತಿ ಜೀವಪರಿಚ್ಛೇದೋ ದ್ವಿತೀಯಃ ಸಮಾಪ್ತಃ.

ಓಂ

ಶ್ರೀಮತೇ ರಾಮಾನುಜಾಯ ನಮಃ

॥ ಶ್ರೀಃ ॥

ಶ್ರೀಮತೇ ರಾಮಾನುಜಾಯ ನಮಃ.

# ತತ್ತ್ವಶುದ್ಧಿ.

## ೩. ಈಶ್ವರಪರಿಚ್ಛೇದಂ.

### ೫೪೮. ತತ್ರಾದೌ ಈಶ್ವರನಿರೂಪಣಪ್ರತಿಜ್ಞಾ.

ಕಳೆದ ಎರಡು ಪರಿಚ್ಛೇದಗಳಿಂದ—ಪ್ರಕೃತಿ, ಕಾಲ, ಜೀವ ಎಂಬ ಮೂರು ದ್ರವ್ಯಗಳನ್ನು ವಿಶದವಾಗಿ ನಿರೂಪಿಸಿದೆವು; ಈಗ ಕ್ರಮಪ್ರಾಪ್ತವಾದ ಈಶ್ವರ ತತ್ತ್ವವನ್ನು ಈ ಮೂರನೆಯ ಪರಿಚ್ಛೇದದಲ್ಲಿ ನಿರೂಪಿಸುವೆವು. ಈಶ್ವರತತ್ತ್ವಕ್ಕೆ ಅನೇಕ ಲಕ್ಷಣಗಳನ್ನು ಶಾಸ್ತ್ರಕಾರರು ಹೇಳಿರುವರು; ಅವುಗಳೊಳಗೆ ಕೆಲವು ಲಕ್ಷಣಗಳನ್ನು ಇಲ್ಲಿ ಬರೆವೆವು.

### ೫೪೯. ಈಶ್ವರಸ್ಯ ಪ್ರಥಮಂ ಲಕ್ಷಣಂ.

ಸ್ವವ್ಯತಿರಿಕ್ತವಾದ ಸಮಸ್ತಪದಾರ್ಥಗಳಿಗೂ ಯಾವನು ನಿಯಾಮಕ ನಾಗಿ ಇರುವನೋ, ಅವನು ಈಶ್ವರತತ್ತ್ವವೆನಿಸಿಕೊಳ್ಳುವನು; ಎಂದರೆ— ಸ್ವವ್ಯತಿರಿಕ್ತವಾದ ಸಮಸ್ತಪದಾರ್ಥಗಳ ಸ್ವರೂಪಸ್ಥಿತಿ ಪ್ರವೃತ್ತಿನಿವೃತ್ತಿಗಳೆಲ್ಲವೂ ಯಾವನೊಬ್ಬನ ಸಂಕಲ್ಪಕ್ಕೆ ಅಧೀನಗಳಾಗಿ ಇರುವುವೋ ಅವನು ಈಶ್ವರತತ್ತ್ವ ವೆನಿಸಿಕೊಳ್ಳುವನು. ಅಚಿದ್ವಸ್ತು ಚೈತನ್ಯಶೂನ್ಯವಾದುದರಿಂದ ಸಂಕಲ್ಪವೆಂಬುದು ಅದಕ್ಕೆ ಸಂಭವಿಸುವುದಿಲ್ಲವಾದಕಾರಣ ಈ ಲಕ್ಷಣವು ಅದರಲ್ಲಿ ಪ್ರಸಂಗಿಸಲಾರದು. ಚಿದ್ವಸ್ತು ಚೈತನ್ಯಾಶ್ರಯವಾದುದರಿಂದ ಸಂಕಲ್ಪವೆಂಬುದು ಅದರಲ್ಲಿ ಸಂಭವಿಸುವು ದಾದರೂ, ಸಮಸ್ತಪದಾರ್ಥಗಳ ಪ್ರವೃತ್ತಿನಿವೃತ್ತಿಗಳೂ ಚಿದ್ವಸ್ತುವಿನ ಸಂಕಲ್ಪಕ್ಕೆ ಅಧೀನಗಳಲ್ಲವಾದುದರಿಂದ ಚಿದ್ವಸ್ತುವೆನಿಸಿಕೊಂಡ ಜೀವನಲ್ಲಿಯೂ ಈ ಲಕ್ಷಣವು ಪ್ರಸಂಗಿಸಲಾರದು. ಪರಿಶೇಷಾತ್ ಚಿದಚಿದ್ವಿಲಕ್ಷಣನಾದ ಪರಮಚೇತನನೆಂಬುವ ನಲ್ಲಿಯೇ ಈ ಲಕ್ಷಣವು ಸಂಭವಿಸುವುದರಿಂದ ಅವನೇ ಈಶ್ವರತತ್ತ್ವವೆನಿಸಿ ಕೊಳ್ಳುವನು.

## ೫೫೦. ಅಥ ದ್ವಿತೀಯಂ ಲಕ್ಷಣಂ.

ಸ್ವವ್ಯತಿರಿಕ್ತವಾದ ಸಮಸ್ತದ್ರವ್ಯಗಳೊಡನೆಯೂ ಸಂಯೋಗವನ್ನು ಪಡೆದುದಾಗಿಯೂ, ಅಪೃಥಕ್ಸಿದ್ಧಿಸಂಬಂಧದಿಂದ ಜ್ಞಾನವನ್ನು ಪಡೆದುದಾಗಿಯೂ ಇರುವ ದ್ರವ್ಯವು ಈಶ್ವರತತ್ತ್ವವೆನಿಸಿಕೊಳ್ಳುವುದು. ಇಲ್ಲಿ ಮೊದಲನೆಯ ದಳವನ್ನು ಲಕ್ಷಣದಲ್ಲಿ ಸೇರಿಸದಿದ್ದರೆ. ಅಪೃಥಕ್ಸಿದ್ಧಿಸಂಬಂಧದಿಂದ ಜ್ಞಾನವನ್ನು ಪಡೆದಿರುವ ಜೀವನಲ್ಲಿ ಈ ಲಕ್ಷಣವು ಅತಿಪ್ರಸಕ್ತವಾಗುವುದು; ಅದನ್ನು ತಪ್ಪಿಸುವುದಕ್ಕಾಗಿ ಪ್ರಥಮದಳವು ಸೇರಿಸಲ್ಪಟ್ಟಿರುವುದು. ಜೀವನು ಅಣುಸ್ವರೂಪನಾದುದರಿಂದ ಸಕಲದ್ರವ್ಯಗಳೊಡನೆ ಏಕಕಾಲದಲ್ಲಿ ಸಂಯೋಗವನ್ನು ಪಡೆಯಲಾರನಾಗಿ ಅವನಲ್ಲಿ ಲಕ್ಷಣವು ಅತಿಪ್ರಸಕ್ತವಾಗದು.

ಹಾಗೆಯೇ—ದ್ವಿತೀಯದಳವನ್ನು ಲಕ್ಷಣದಲ್ಲಿ ಸೇರಿಸದಿದ್ದರೆ—ಸಕಲ ದ್ರವ್ಯಗಳೊಡನೆ ಏಕಕಾಲದಲ್ಲಿ ಸಂಯೋಗವನ್ನು ಪಡೆದಿರುವ ಕಾಲವೆಂಬ ದ್ರವ್ಯದಲ್ಲಿ ಈ ಲಕ್ಷಣವು ಅತಿಪ್ರಸಕ್ತವಾಗುವುದು. ಅದನ್ನು ತಪ್ಪಿಸುವುದಕ್ಕಾಗಿ ದ್ವಿತೀಯದಳವು ಸೇರಿಸಲ್ಪಟ್ಟಿರುವುದು. ಅಚೇತನವಾದ ಕಾಲವು ಅಪೃಥಕ್ಸಿದ್ಧಿಸಂಬಂಧದಿಂದ ಜ್ಞಾನವನ್ನು ಪಡೆಯಲಾರದಾದಕಾರಣ ಅದರಲ್ಲಿ ಲಕ್ಷಣವು ಅತಿಪ್ರಸಕ್ತವಾಗದು.

ಮತ್ತು—ಪ್ರಥಮದಳದಲ್ಲಿ "ಸ್ವವ್ಯತಿರಿಕ್ತವಾದ" ಎಂಬ ಪದವನ್ನು ಸೇರಿಸದಿದ್ದರೆ "ಸಮಸ್ತದ್ರವ್ಯಗಳೊಡನೆ ಯಾವುದು ಸಂಯೋಗವನ್ನು ಪಡೆದಿರುವುದೋ ಅದು ಈಶ್ವರತತ್ತ್ವವೆನಿಸಿಕೊಳ್ಳುವುದು" ಎಂದು ಅರ್ಥವಾಗುವುದು; ಆಗ ತನ್ನೊಡನೆ ತನಗೆ ಸಂಯೋಗವಿಲ್ಲವಾದುದರಿಂದ—ಲಕ್ಷ್ಯನಾದ ಈಶ್ವರನಲ್ಲಿ ಲಕ್ಷಣಕ್ಕೆ ಅಸಂಭವದೋಷವುಂಟಾಗುವುದು. ಅದನ್ನು ತಪ್ಪಿಸುವುದಕ್ಕಾಗಿ "ಸ್ವವ್ಯತಿರಿಕ್ತವಾದ" ಎಂಬ ಪದವು ಸೇರಿಸಲ್ಪಟ್ಟಿರುವುದು. ಸ್ವವ್ಯತಿರಿಕ್ತವಾದ ದ್ರವ್ಯದೊಡನೆ ಸಂಯೋಗವೇ ಲಕ್ಷಣದಲ್ಲಿ ವಿವಕ್ಷಿತವಾಗಿ ಇರುವುದರಿಂದ ಈಶ್ವರನಲ್ಲಿ ತನ್ನೊಡನೆ ತನಗೆ ಸಂಯೋಗವಿಲ್ಲದಿದ್ದರೂ ಲಕ್ಷಣಕ್ಕೆ ಅಸಂಭವದೋಷವು ಪ್ರಸಂಗಿಸಲಾರದು.

ಮತ್ತು—ಪ್ರಥಮದಳದಲ್ಲಿ ದ್ರವ್ಯಪದವನ್ನು ಸೇರಿಸದಿದ್ದರೆ "ಸ್ವವ್ಯತಿರಿಕ್ತವಾದ ಸಮಸ್ತದೊಡನೆಯೂ ಯಾವುದು ಸಂಯೋಗವನ್ನು ಪಡೆದಿರುವುದೋ ಅದು ಈಶ್ವರತತ್ತ್ವವೆನಿಸಿಕೊಳ್ಳುವುದು" ಎಂದು ಅರ್ಥವಾಗುವುದು; ಆಗ ಅದ್ರವ್ಯಗಳೊಡನೆ ಈಶ್ವರನಿಗೆ ಸಂಯೋಗವಿಲ್ಲವಾದಕಾರಣ ಪುನಃ ಈಶ್ವರನಲ್ಲಿ ಲಕ್ಷ

ಣಕ್ಕೆ ಅಸಂಭವದೋಷವುಂಟಾಗುವುದು. ಅದನ್ನು ತಪ್ಪಿಸುವುದಕ್ಕಾಗಿ ದ್ರವ್ಯ ಪದವು ಸೇರಿಸಲ್ಪಟ್ಟಿರುವುದು. ದ್ರವ್ಯಸಂಯೋಗವೇ ಲಕ್ಷಣದಲ್ಲಿ ವಿವಕ್ಷಿತವಾಗಿ ಇರುವುದರಿಂದ ಅದ್ರವ್ಯಗಳೊಡನೆ ಈಶ್ವರನಿಗೆ ಸಂಯೋಗವಿಲ್ಲದಿದ್ದರೂ ಲಕ್ಷಣಕ್ಕೆ ಅಸಂಭವದೋಷವು ಪ್ರಸಂಗಿಸಲಾರದು.

ಮತ್ತು—ಪ್ರಥಮದಳದಲ್ಲಿ "ಸಮಸ್ತ" ಎಂಬ ಪದವನ್ನು ಸೇರಿಸದಿದ್ದರೆ ಸ್ವವ್ಯತಿರಿಕ್ತವಾದ ದ್ರವ್ಯದೊಡನೆ ಯಾವುದು ಸಂಯೋಗವನ್ನು ಪಡೆದಿರುವುದೋ ಅದು ಈಶ್ವರತತ್ತ್ವವೆನಿಸಿಕೊಳ್ಳುವುದು" ಎಂದು ಅರ್ಥವಾಗುವುದು; ಆಗ ಸ್ವವ್ಯತಿರಿಕ್ತವಾದ ಶರೀರವೆಂಬ ದ್ರವ್ಯದೊಡನೆ ಸಂಯೋಗವನ್ನು ಪಡೆದಿರುವ ಜೀವನಲ್ಲಿ ಲಕ್ಷಣವು ಅತಿಪ್ರಸಕ್ತವಾಗುವುದು. ಅದನ್ನು ತಪ್ಪಿಸುವುದಕ್ಕಾಗಿ "ಸಮಸ್ತ" ಎಂಬ ಪದವು ಸೇರಿಸಲ್ಪಟ್ಟಿರುವುದು. ಶರೀರವೆಂಬ ಒಂದು ದ್ರವ್ಯದೊಡನೆ ಜೀವನಿಗೆ ಸಂಯೋಗವಿದ್ದರೂ ಸಮಸ್ತದ್ರವ್ಯಗಳೊಡನೆ ಸಂಯೋಗವಿಲ್ಲವಾದಕಾರಣ ಲಕ್ಷಣವು ಅತಿಪ್ರಸಕ್ತವಾಗಲಾರದು.

## ೫೫೧. ತೃತೀಯಂ ಲಕ್ಷಣಂ.

"ಸ್ವವ್ಯತಿರಿಕ್ತವಾದ ಸಮಸ್ತಪದಾರ್ಥಗಳಿಗೂ ಯಾವುದು ಶೇಷಿಯಾಗಿ ಇರುವುದೋ ಅದು ಈಶ್ವರತತ್ತ್ವವೆನಿಸಿಕೊಳ್ಳುವುದು." ಇಲ್ಲಿಯೂ ಲಕ್ಷಣದಲ್ಲಿ ಸಮಸ್ತಪದವನ್ನು ಸೇರಿಸದಿದ್ದರೆ ಕೆಲವು ಪದಾರ್ಥಗಳಿಗೆ ಶೇಷಿಯೆನಿಸಿಕೊಂಡಿರುವ ಜೀವನಲ್ಲಿ ಲಕ್ಷಣವು ಅತಿಪ್ರಸಕ್ತವಾಗುವುದು. ಅದನ್ನು ತಪ್ಪಿಸುವುದಕ್ಕಾಗಿ ಲಕ್ಷಣದಲ್ಲಿ ಸಮಸ್ತಪದವು ಸೇರಿಸಲ್ಪಟ್ಟಿರುವುದು. ಜೀವನು ಕೆಲವು ಪದಾರ್ಥಗಳಿಗೆ ಶೇಷಿಯಾಗಿ ಇದ್ದರೂ ಸ್ವವ್ಯತಿರಿಕ್ತಸಮಸ್ತಪದಾರ್ಥಗಳಿಗೂ ಶೇಷಿಯಾಗಲಾರನಾದುದರಿಂದ ಲಕ್ಷಣವು ಅತಿಪ್ರಸಕ್ತವಾಗದು.

## ೫೫೨. ಚತುರ್ಥಂ ಲಕ್ಷಣಂ.

"ಯಾವನೊಬ್ಬನು ಸರ್ವಕರ್ಮಸಮಾರಾಧ್ಯನೋ ಅವನು ಈಶ್ವರನೆನಿಸಿಕೊಳ್ಳುವನು." ಎಂದರೆ—ಶಾಸ್ತ್ರವಿಹಿತಗಳಾದ ಸಕಲಕರ್ಮಗಳಿಂದಲೂ ಉಂಟಾಗುವ ಪ್ರೀತಿಗೆ ಯಾವನು ಆಶ್ರಯನಾಗಿ ಇರುವನೋ ಅವನು ಈಶ್ವರತತ್ತ್ವವೆನಿಸಿಕೊಳ್ಳುವನು. ಅಗ್ನಿಹೋತ್ರ, ದರ್ಶಪೂರ್ಣಮಾಸ, ಜ್ಯೋತಿಷ್ಟೋಮ ಮುಂತಾದ ಶಾಸ್ತ್ರೀಯಸಕಲಕರ್ಮಗಳಲ್ಲಿ ಅಗ್ನೀಂದ್ರಾದಿದೇವತೆಗಳೇ ಆರಾಧನೀಯರೆಂದು ಮೊತ್ತಮೊದಲು ತೋರಿಬಂದರೂ ಪರ್ಯವಸಾನದಲ್ಲಿ—ಆ ಆ ದೇವತೆಗಳಿಗೆ ಅಂತರ್ಯಾಮಿಯಾಗಿ ಶರೀರಿಯೆನಿಸಿಕೊಂಡಿರುವ ಸರ್ವೇಶ್ವರನೇ ಸಕಲಕರ್ಮ

ಗಳಲ್ಲಿಯೂ ಆರಾಧನೀಯನಾಗಿ ಇರುವನೆಂದು ವ್ಯಕ್ತವಾಗುವುದು. ಈ ಅರ್ಥ ವನ್ನು ಭಗವದ್ಗೀತೆಯಲ್ಲಿ "ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ" ಎಂದು ತಾನೇ ಉಪದೇಶಿಸಿರುವನು. ಅಗ್ನೀಂದ್ರಾದಿಸಮಸ್ತದೇವತೆಗಳೂ ಈಶ್ವರ ನಿಗೆ ಶರೀರಭೂತರಾದುದರಿಂದ ಶರೀರದಲ್ಲಿ ಮಾಡಿದ ಪೂಜೆ ಶರೀರಿಗೆ ತಲುಪುವುದೆಂ ಬುದು ಯುಕ್ತವಷ್ಟೆ.

## ೫೫೩. ಪಂಚಮಂ ಲಕ್ಷಣಂ.

"ಯಾವನೊಬ್ಬನು ಸಕಲಫಲಪ್ರದನಾಗಿ ಇರುವನೋ ಅವನು ಈಶ್ವರ ತತ್ತ್ವವೆನಿಸಿಕೊಳ್ಳುವನು." ಎಂದರೆ ಆ ಆ ಕರ್ಮಗಳನ್ನು ಆಚರಿಸಿದ ಚೇತನನಿಗೆ ಆ ಆ ಕರ್ಮಫಲಗಳು ಸಿದ್ಧಿಸುವುದಕ್ಕೆ ಯಾವನೊಬ್ಬನ ಸಂಕಲ್ಪವು ಕಾರಣವಾಗಿ ಇರುವುದೋ, ಅವನು ಈಶ್ವರತತ್ತ್ವವೆನಿಸಿಕೊಳ್ಳುವನು. ಈ ಅರ್ಥವನ್ನು ಪೂರ್ವೋಕ್ತವಾದ ಭಗವದ್ಗೀತಾವಚನದ ಅವಶಿಷ್ಟಭಾಗವಾದ "ಪ್ರಭುರೇವಚ" ಎಂಬ ಪದದಿಂದ ಸ್ಪಷ್ಟವಾಗಿ ತಾನೇ ಉಪದೇಶಿಸಿರುವನು,

## ೫೫೪. ಷಷ್ಠಂ ಲಕ್ಷಣಂ.

"ಯಾವನೊಬ್ಬನು ಸ್ವವ್ಯತಿರಿಕ್ತವಾದ ಸಮಸ್ತವಸ್ತುಗಳಿಗೂ ಆಧಾರ ನಾಗಿ ಇರುವನೋ, ಅವನು ಈಶ್ವರತತ್ತ್ವವೆನಿಸಿಕೊಳ್ಳುವನು; ಎಂದರೆ ಸ್ವವ್ಯತಿ ರಿಕ್ತವಾದ ಸಮಸ್ತಪದಾರ್ಥಗಳನ್ನು ಕುರಿತು ಅಪೃಥಕ್ಸಿದ್ಧಿಸಂಬಂಧದಿಂದ ಯಾವ ನೊಬ್ಬನು ಅಧಿಕರಣಭೂತನಾಗಿ ಇರುವನೋ, ಅವನು ಈಶ್ವರತತ್ತ್ವವೆನಿಸಿ ಕೊಳ್ಳುವನು. ಕಾಲವು ಸಕಲಪದಾರ್ಥಗಳಿಗೂ ಆಧಾರವಾಗಿ ಇದ್ದರೂ ಅಪೃಥ ಕ್ಸಿದ್ಧಿಸಂಬಂಧದಿಂದ ಆಧಾರವಲ್ಲವಾದಕಾರಣ, ಈ ಲಕ್ಷಣಕ್ಕೆ ಕಾಲದಲ್ಲಿ ಅತಿ ಪ್ರಸಂಗವಿಲ್ಲ.

## ೫೫೫. ಸಪ್ತಮಂ ಲಕ್ಷಣಂ.

"ಯಾವನೊಬ್ಬನು ನಿಖಿಲಕಾರ್ಯವಸ್ತುಗಳಲ್ಲಿಯೂ ಇರುವ ಕಾರ್ಯತ್ವಧರ್ಮ ದಿಂದ ನಿರೂಪಿಸಲ್ಪಟ್ಟ ಕಾರಣತ್ವಕ್ಕೆ ಆಶ್ರಯನಾಗಿ ಇರುವನೋ, ಅವನು ಈಶ್ವರ ತತ್ತ್ವವೆನಿಸಿಕೊಳ್ಳುವನು." ದಂಡ-ಚಕ್ರ-ಕುಲಾಲ ಮುಂತಾದುವುಗಳು ಘಟವೇ ಮೊದಲಾದ ಕೆಲವು ಕಾರಣಗಳಲ್ಲಿ ಇರುವ ಕಾರ್ಯತ್ವಧರ್ಮದಿಂದ ನಿರೂಪಿಸಲ್ಪಟ್ಟ ಕಾರಣತ್ವಕ್ಕೆ ಆಶ್ರಯಗಳಾಗಿ ಇದ್ದರೂ ನಿಖಿಲಕಾರ್ಯಗಳಲ್ಲಿ ಇರುವ ಕಾರ್ಯತ್ವ ಧರ್ಮದಿಂದ ನಿರೂಪಿಸಲ್ಪಟ್ಟ ಕಾರಣತ್ವಕ್ಕೆ ಆಶ್ರಯಗಳಲ್ಲವಾದುದರಿಂದ ಅವುಗಳಲ್ಲಿ ಈ ಲಕ್ಷಣಕ್ಕೆ ಅತಿಪ್ರಸಂಗವಿಲ್ಲ.

ಆದರೆ ಕಾಲವು ನಿಖಿಲಕಾರ್ಯಗಳಲ್ಲಿಯೂ ಇರುವ ಕಾರ್ಯತ್ವಧರ್ಮದಿಂದ ನಿರೂಪಿಸಲ್ಪಟ್ಟ ಕಾರಣತ್ವಕ್ಕೆ ಆಶ್ರಯವಾಗಿ ಇರುವುದರಿಂದ ಕಾಲದಲ್ಲಿ ಈ ಲಕ್ಷಣವು ಅತಿಪ್ರಸಕ್ತವಾಗುವುದಲ್ಲವೆ ? ಇಲ್ಲ; ಕಾಲದಲ್ಲಿಯೂ ಅತಿಪ್ರಸಕ್ತವಾಗುವುದಿಲ್ಲ. ಕಾಲವು ಲೀಲಾವಿಭೂತಿಗೆ ಒಳಪಟ್ಟ ನಿಖಿಲಕಾರ್ಯಗಳಲ್ಲಿಯೂ ಇರುವ ಕಾರ್ಯತ್ವಧರ್ಮದಿಂದ ನಿರೂಪಿಸಲ್ಪಟ್ಟ ಕಾರಣತ್ವಕ್ಕೆ ಆಶ್ರಯವಾಗಿ ಇದ್ದರೂ ನಿತ್ಯವಿಭೂತಿಗೆ ಒಳಪಟ್ಟ ಕಾರ್ಯಗಳನ್ನು ಕುರಿತು ಈ ಕಾಲವು ಕಾರಣವಾಗಲಾರದಾದ ಪ್ರಯುಕ್ತ ಸರ್ವಕಾರಣತ್ವವು ಕಾಲದಲ್ಲಿ ಪ್ರಸಕ್ತವಾಗಲಾರದು. ಆದುದರಿಂದಲೇ ಅಲ್ಲವೆ **"ಕಾಲಂ ಸ ಪಚತೇ ತತ್ರ ನ ಕಾಲಸ್ತತ್ರ ವೈ ಪ್ರಭುಃ"** ಎಂಬುವೇ ಮೊದಲಾದ ವಿಷ್ಣುಪುರಾಣಾದಿವಚನಗಳಿಂದ ಕಾಲಕ್ಕೆ ನಿತ್ಯವಿಭೂತಿಯಲ್ಲಿ ಅಧಿಕಾರವಿಲ್ಲವೆಂದು ಉದ್ಘೋಷಿಸಲ್ಪಡುತ್ತಿರುವುದು. ಈಶ್ವರತತ್ತ್ವವಿಲ್ಲದೆ ಯಾವ ಕಾರ್ಯವೂ ಹುಟ್ಟಲಾರದಾದುದರಿಂದ ನಿಖಿಲಕಾರಣತ್ವವು ಈಶ್ವರತತ್ತ್ವದಲ್ಲಿ ಅಬಾಧಿತವಾಗಿ ಇರುವುದು

## ೫೫೭. ಅಷ್ಟಮಂ ಲಕ್ಷಣಂ.

"ತಾನು, ಮತ್ತು ತನ್ನ ಧರ್ಮಭೂತಜ್ಞಾನ, ಈ ಎರಡು ದ್ರವ್ಯಗಳನ್ನು ಬಿಟ್ಟು ಉಳಿದ ಸಮಸ್ತದ್ರವ್ಯಗಳೂ ಯಾವನೊಬ್ಬನಿಗೆ ಶರೀರಗಳಾಗಿ ಇರುವುವೋ, ಅವನು ಈಶ್ವರತತ್ತ್ವವೆನಿಸಿಕೊಳ್ಳುವನು. ತನ್ನನ್ನು ಕುರಿತು ತಾನು ಶರೀರವೆನಿಸಿಕೊಳ್ಳಲಾರನಾದುದರಿಂದ ಈ ಲಕ್ಷಣಕ್ಕೆ ಈಶ್ವರನಲ್ಲಿ ಅಸಂಭವದೋಷವು ಪ್ರಸಕ್ತವಾಗುವುದು ; ಅದನ್ನು ತಪ್ಪಿಸುವುದಕ್ಕಾಗಿ "ತನ್ನನ್ನು ಬಿಟ್ಟು" ಎಂಬ ಪದವು ಲಕ್ಷಣದಲ್ಲಿ ಸೇರಿಸಲ್ಪಟ್ಟಿರುವುದು. ಆದುದರಿಂದಲೇ ಈಶ್ವರನು ಈಶ್ವರನಿಗೆ ಶರೀರವಾಗದಿದ್ದರೂ ಈಶ್ವರವ್ಯತಿರಿಕ್ತಗಳಾದ ಸಮಸ್ತದ್ರವ್ಯಗಳೂ ಈಶ್ವರನಿಗೆ ಶರೀರಗಳಾಗಲಿಲ್ಲವೆಂಬುದಿಲ್ಲವಾದುದರಿಂದ ಲಕ್ಷಣಕ್ಕೆ ಚ್ಯುತಿಯಿಲ್ಲ.

ಇದರಂತೆಯೇ ತನ್ನ ಧರ್ಮಭೂತಜ್ಞಾನವು ತನ್ನನ್ನು ಕುರಿತು ಶರೀರವೆನಿಸಿಕೊಳ್ಳಲಾರದೆಂಬುದನ್ನು ಅಚಿತ್ತತ್ತ್ವಪರಿಚ್ಛೇದದಲ್ಲಿ ತೋರಿಸಿರುವೆವಾದುದರಿಂದ ಪುನಃ ಈ ಲಕ್ಷಣಕ್ಕೆ ಈಶ್ವರನಲ್ಲಿ ಅಸಂಭವದೋಷವು ಪ್ರಸಂಗಿಸುವುದು ; ಅದನ್ನು ತಪ್ಪಿಸುವುದಕ್ಕಾಗಿ "ತನ್ನ ಧರ್ಮಭೂತಜ್ಞಾನವನ್ನು ಬಿಟ್ಟು" ಎಂಬ ಪದವು ಲಕ್ಷಣದಲ್ಲಿ ಸೇರಿಸಲ್ಪಟ್ಟಿರುವುದು. ಆದುದರಿಂದಲೇ ಈಶ್ವರನ ಧರ್ಮಭೂತಜ್ಞಾನವು ಈಶ್ವರನಿಗೆ ಶರೀರವಾಗದಿದ್ದರೂ ಈಶ್ವರಧರ್ಮಭೂತಜ್ಞಾನಭಿನ್ನವಾದ ಸಮಸ್ತ

ದ್ರವ್ಯಗಳೂ ಈಶ್ವರನಿಗೆ ಶರೀರವಾಗಲಿಲ್ಲವೆಂಬುದಿಲ್ಲವಾದುದರಿಂದ ಲಕ್ಷಣಕ್ಕೆ ಚ್ಯುತಿಯಿಲ್ಲ.

## ೫೫೭. ನವಮಂ ಲಕ್ಷಣಂ.

"ಯಾವನೊಬ್ಬನ ಸಂಕಲ್ಪವು ಅಪ್ರತಿಹತವಾಗುವುದಕ್ಕೆ ತನ್ನ ಇಚ್ಛೆಯೇ ಕಾರಣವಾಗಿ ಇರುವುದೋ, ಅವನು ಈಶ್ವರತತ್ತ್ವವೆನಿಸಿಕೊಳ್ಳುವನು." ಈ ಲಕ್ಷಣದಲ್ಲಿ "ತನ್ನ" ಎಂಬ ಪದವನ್ನು ಸೇರಿಸದಿದ್ದರೆ ಮೋಕ್ಷಾವಸ್ಥೆಯಲ್ಲಿ ಜೀವನ ಸಂಕಲ್ಪವು ಅಪ್ರತಿಹತವಾಗುವುದಕ್ಕೆ ಈಶ್ವರೇಚ್ಛೆ ಕಾರಣವಾಗಿ ಇರುವುದರಿಂದ ಈ ಲಕ್ಷಣವು ಜೀವನಲ್ಲಿ ಅತಿಪ್ರಸಕ್ತವಾಗುವುದು ; ಅದನ್ನು ತಪ್ಪಿಸುವುದಕ್ಕಾಗಿ ಲಕ್ಷಣದಲ್ಲಿ "ತನ್ನ" ಎಂಬ ಪದವು ಸೇರಿಸಲ್ಪಟ್ಟಿರುವುದು. ಮೋಕ್ಷಾವಸ್ಥೆಯಲ್ಲಿ ಜೀವನಸಂಕಲ್ಪವು ಅಪ್ರತಿಹತವಾಗುವುದಕ್ಕೆ ಈಶ್ವರೇಚ್ಛೆ ಕಾರಣವಾಗಿ ಇದ್ದರೂ ತನ್ನ ಇಚ್ಛೆ ಕಾರಣವಾಗಲಿಲ್ಲವಾದುದರಿಂದ ಲಕ್ಷಣಕ್ಕೆ ಅತಿಪ್ರಸಂಗ ದೋಷವಿಲ್ಲ.

## ೫೫೮. ದಶಮಂ ಲಕ್ಷಣಂ.

ಯಾವನೊಬ್ಬನಿಗೆ ಪಾಪಸಂಬಂಧರಾಹಿತ್ಯವು ತನ್ನ ಇಚ್ಛೆಯಿಂದಲೇ ಉಂಟಾಗಿರುವುದೋ ಅವನು ಈಶ್ವರತತ್ತ್ವವೆನಿಸಿಕೊಳ್ಳುವನು. ಮೋಕ್ಷಾವಸ್ಥೆಯಲ್ಲಿ ಜೀವನಿಗೆ ಉಂಟಾಗುವ ಪಾಪಸಂಬಂಧರಾಹಿತ್ಯವು ಈಶ್ವರೇಚ್ಛಾಧೀನವಾಗಿ ಇದ್ದರೂ ತನ್ನ ಇಚ್ಛೆಗೆ ಅಧೀನವಲ್ಲವಾದಕಾರಣ ಜೀವನಲ್ಲಿ ಅತಿಪ್ರಸಂಗವಿಲ್ಲವೆಂಬುದನ್ನು ತೋರಿಸುವುದಕ್ಕಾಗಿ ಇಲ್ಲಿಯೂ "ತನ್ನ" ಎಂಬ ಪದವು ಸೇರಿಸಲ್ಪಟ್ಟಿರುವುದು.

## ೫೫೯. ಏಕಾದಶಂ ಲಕ್ಷಣಂ.

ಸಂಸಾರಸಂಬಂಧದ ಆತ್ಯಂತಿಕನಿವೃತ್ತಿಪೂರ್ವಕವಾಗಿ ಶಾಶ್ವತವಾದ ಬ್ರಹ್ಮಾನಂದವನ್ನು ಪಡೆಯಬೇಕೆಂದು ಅಪೇಕ್ಷಿಸುವ ಮುಮುಕ್ಷುಚೇತನರಿಗೆ ಅಂಥ ಫಲದ ಪ್ರಾಪ್ತಿಗಾಗಿ ಯಾವನು ಉಪಾಸ್ಯನಾಗಿ ಇರುವನೋ ಅವನು ಈಶ್ವರತತ್ತ್ವವೆನಿಸಿಕೊಳ್ಳುವನು. ಈ ಹನ್ನೊಂದನೆಯ ಲಕ್ಷಣದಿಂದ ಈಶ್ವರತತ್ತ್ವಕ್ಕೆ ಮೋಕ್ಷಪ್ರದತ್ವವೆಂಬ ಮತ್ತೊಂದು ಲಕ್ಷಣವೂ ಫಲಿತವಾಗುವುದು. ಉಪಾಸ್ಯವಸ್ತುವಲ್ಲವೆ ಉಪಾಸನಾಫಲವನ್ನು ಕೊಡುವುದು.

### ೫೬೦. ದ್ವಾದಶಂ ಲಕ್ಷಣಂ.

ಮುಕ್ತರಾದವರಿಗೆ ಯಾವನು ಪ್ರಾಪ್ಯನಾಗಿ ಇರುವನೋ ಅವನು ಈಶ್ವರ ತತ್ತ್ವವೆನಿಸಿಕೊಳ್ಳುವನು. ಶ್ರಿಯಃಪತಿಯಾದ ಪರಮಪುರುಷನ ಚರಣಾರವಿಂದ ಗಳಲ್ಲಿ ಮಾಡುವ ಸರ್ವತೋಮುಖವಾದ ಕೈಂಕರ್ಯವೇ ಪರಮಪ್ರಾಪ್ಯವೆಂದು ಯಾವಾಗ ನಿಷ್ಕರ್ಷಿಸಲ್ಪಟ್ಟಿತೋ ಆಗಲೇ ಶ್ರಿಯಃಪತಿಯೆಂಬ ಈಶ್ವರತತ್ತ್ವಕ್ಕೆ ಪ್ರಾಪ್ಯತ್ವವು ಅರ್ಥಾತ್ ಸಿದ್ಧವಾಯಿತು. ಅದರಂತೆಯೇ—ಕೈಂಕರ್ಯಕ್ಕೆ ವಿಘ್ನ ಬಾರದಂತೆ ಜ್ಞಾನವನ್ನು ವೃದ್ಧಿಪಡಿಸುವ ಶುದ್ಧಸತ್ತ್ವಮಯವಾದ ಪರಮ ಪದಕ್ಕೂ, ಅಂಥ ಪರಮಪದದಲ್ಲಿ ಇದ್ದುಕೊಂಡು ಕೈಂಕರ್ಯವರ್ಧಕರಾಗಿರುವ ನಿತ್ಯಸೂರಿಗಳೇ ಮೊದಲಾದ ಸಮಸ್ತಭಾಗವತೋತ್ತಮರಿಗೂ ಪ್ರಾಪ್ಯತ್ವವು ಅರ್ಥಾತ್ ಸಿದ್ಧವಾಗಿ ಇರುವುದು.

ಹೀಗೆಯೇ ಇನ್ನೂ ಅನೇಕ ಲಕ್ಷಣಗಳನ್ನು ಶಾಸ್ತ್ರಕಾರರು ಹೇಳಿದ್ದರೂ ದಿಙ್ಮಾತ್ರಪ್ರದರ್ಶನವನ್ನು ಮಾಡುವುದಕ್ಕಾಗಿ ಕೆಲವು ಲಕ್ಷಣಗಳನ್ನು ಇಲ್ಲಿ ತೋರಿಸಿರುವೆವು.

**ಇಂತು ತತ್ತ್ವಶುದ್ಧಿಯೆಂಬ ವಿಶಿಷ್ಟಾದ್ವೈತಪ್ರಕರಣಗ್ರಂಥದೊಳ್**
**ಈಶ್ವರಪರಿಚ್ಛೇದದಲ್ಲಿ ಈಶ್ವರಲಕ್ಷಣನಿರೂಪಣ**
**ಪ್ರಕರಣಂ ಪ್ರಥಮಂ ॥೧॥**

## ದ್ವಿತೀಯಪ್ರಕರಣಂ.

### ೫೬೧. ಸೃಷ್ಟಿಸ್ಥಿತಿಲಯಸಮುದಾಯಕಾರಣತ್ವಸ್ಯ ಬ್ರಹ್ಮಲಕ್ಷಣ ತ್ವೋಕ್ತೇಃ ತ್ರಿಮೂರ್ತಿಸಾಮ್ಯವಾದಿಶಂಕಾನಿರಾಸಾರ್ಥತ್ವಂ.

"ಹಿಂದೆ ಹೇಳಿದ ಏಳನೆಯ ಲಕ್ಷಣವನ್ನು ವಿಚಾರಮಾಡಿ ನೋಡಿದರೆ— "ಸಕಲಪದಾರ್ಥಗಳ ಸೃಷ್ಟಿಗೂ ಯಾವನು ಕಾರಣವಾಗಿ ಇರುವನೋ ಅವನು ಈಶ್ವರತತ್ತ್ವವೆನಿಸಿಕೊಳ್ಳುವನು" ಎಂಬ ಅಭಿಪ್ರಾಯವು ಹೊರಡುವುದು ; ಆದರೆ ಸೃಷ್ಟಿಕಾರಣತ್ವವನ್ನು ಮಾತ್ರವೇ ಈಶ್ವರಲಕ್ಷಣವಾಗಿ ಹೇಗೆ ಹೇಳಲಾದೀತು ? ಸೂತ್ರಕಾರರು ವೇದಾಂತಸೂತ್ರದಲ್ಲಿ—ಸೃಷ್ಟಿಕಾರಣತ್ವ, ಸ್ಥಿತಿಕಾರಣತ್ವ, ಲಯ ಕಾರಣತ್ವ ಈ ಮೂರೂ ಒಟ್ಟಿಗೆ ಸೇರಿ ಒಂದು ಲಕ್ಷಣವಾಗುವುದೆಂದೂ, ಸೃಷ್ಟಿ

ಕಾರಣತ್ವಮಾತ್ರವೇ ಪ್ರತ್ಯೇಕವಾಗಿ ಈಶ್ವರತತ್ತ್ವಕ್ಕೆ ಲಕ್ಷಣವಾಗಲಾರದೆಂದೂ ಅಭಿಪ್ರಾಯಗೊಂಡಲ್ಲವೆ "ಜನ್ಮಾದ್ಯಸ್ಯ ಯತಃ" ಎಂಬ ದ್ವಿತೀಯಸೂತ್ರದಲ್ಲಿ ಮೂರನ್ನೂ ಸೇರಿಸಿ ಒಂದು ಲಕ್ಷಣವಾಗಿ ಹೇಳಿರುವರು? ಹೀಗಿರುವಲ್ಲಿ ಉತ್ಪತ್ತಿ ಕಾರಣತ್ವವನ್ನು ಮಾತ್ರವೇ ಲಕ್ಷಣವಾಗಿ ಹೇಳಿದುದು ಹೇಗೆ ಸಂಗತವಾದೀತು?" ಎಂದು ಆಶಂಕಿಸಬೇಕಾದುದಿಲ್ಲ.—

ಏತಕ್ಕೆಂದರೆ—ಮೂರನ್ನೂ ಒಟ್ಟಿಗೆ ಸೇರಿಸಿ ಒಂದು ಲಕ್ಷಣವಾಗಿ ಹೇಳಿದ ಸೂತ್ರಕಾರರಿಗೆ—ಇವು ಪ್ರತ್ಯೇಕವಾಗಿ ಈಶ್ವರತತ್ತ್ವಕ್ಕೆ ಲಕ್ಷಣವಾಗಲಾರ ವೆಂದು ಅಭಿಪ್ರಾಯವಲ್ಲ; ಹಾಗೆ ಲಕ್ಷಣಗಳಾಗುವುವಾದರೆ ಮತ್ತೊಂದರಲ್ಲಿ ಅತಿ ಪ್ರಸಕ್ತಗಳಾಗುವುವೆಂದೂ ಅಭಿಪ್ರಾಯವಲ್ಲ; ಅತಿಪ್ರಸಂಗವನ್ನು ತಪ್ಪಿಸುವು ದಕ್ಕಾಗಿ ಮೂರನ್ನೂ ಸೇರಿಸಿ ಒಂದು ಲಕ್ಷಣವಾಗಿ ಹೇಳಬೇಕೆಂದೂ ಅಭಿ ಪ್ರಾಯವಲ್ಲ; ಈ ಮೂರನ್ನೂ ಈಶ್ವರತತ್ತ್ವಕ್ಕೆ ಪ್ರತ್ಯೇಕಪ್ರತ್ಯೇಕವಾಗಿ ಮೂರು ಲಕ್ಷಣಗಳಾಗಿ ಒಪ್ಪಿಕೊಂಡರೂ ಈಶ್ವರನೊಬ್ಬನಲ್ಲಿಯೇ ಇವು ಸಂಗತಗಳಾಗುವು ವಲ್ಲದೆ ಈಶ್ವರಭಿನ್ನವಾದ ಆವುದೊಂದರಲ್ಲಿಯೂ ಅತಿಪ್ರಸಕ್ತಗಳಾಗಲಾರವು; ಈಶ್ವರಭಿನ್ನವಾದ ಸೃಷ್ಟಿಕಾರಣವಾಗಲಿ, ಈಶ್ವರಭಿನ್ನವಾದ ಸ್ಥಿತಿಕಾರಣವಾಗಲಿ, ಈಶ್ವರಭಿನ್ನವಾದ ಲಯಕಾರಣವಾಗಲಿ ಅಪ್ರಸಿದ್ಧವಷ್ಟೆ? ಆದಕಾರಣ ಇವು ಪ್ರತ್ಯೇಕಲಕ್ಷಣಗಳಾದರೂ ಅತಿಪ್ರಸಕ್ತಿಯ ಗಂಧವೇ ಇಲ್ಲವಾದಪ್ರಯುಕ್ತ— ಸೂತ್ರಕಾರರು ಅತಿಪ್ರಸಂಗಪರಿಹಾರಕ್ಕಾಗಿಯೇ ಮೂರನ್ನೂ ಸೇರಿಸಿ ಒಂದು ಲಕ್ಷಣವಾಗಿ ಹೇಳಿ ಇರುವರೆಂದು ತಿಳಿಯಕೂಡದು.

ಮತ್ತೇನೆಂದರೆ—ತ್ರಿಮೂರ್ತಿಗಳಿಗೆ ಸಾಮ್ಯವನ್ನು ಹೇಳುವವರು ಬ್ರಹ್ಮ, ವಿಷ್ಣು, ಮಹೇಶ್ವರ, ಎಂಬ ಮೂವರಲ್ಲಿ ಮೊದಲನೆಯವನು ಸೃಷ್ಟಿಕಾರಣವೆಂದೂ, ಎರಡನೆಯವನು ಸ್ಥಿತಿಕಾರಣವೆಂದೂ, ಮೂರನೆಯವನು ಲಯಕಾರಣವೆಂದೂ, ಹೇಳುತ್ತಿರುವರಾದುದರಿಂದ ಅವರ ಮತದಲ್ಲಿ ಸೃಷ್ಟಿಕಾರಣತ್ವವು ಒಬ್ಬನಲ್ಲಿಯೂ, ಸ್ಥಿತಿಕಾರಣತ್ವವು ಮತ್ತೊಬ್ಬನಲ್ಲಿಯೂ, ಲಯಕಾರಣತ್ವವು ಇನ್ನೊಬ್ಬನಲ್ಲಿಯೂ ಸಿದ್ಧಿಸುವುವಲ್ಲದೆ ಈ ಮೂರೂ ಒಬ್ಬನಲ್ಲಿ ಸಿದ್ಧಿಸುವುದಿಲ್ಲ; ಇವರ ಮತವನ್ನು ನಿರಾಕರಿಸಿ ಈ ಮೂರೂ ಒಬ್ಬನಲ್ಲಿಯೇ ಇರುವುವೆಂದು ತೋರಿಸುವುದರಮೂಲಕ ಸರ್ವೇಶ್ವರನ ಸರ್ವತೋಮುಖವಾದ ಪ್ರಭಾವಾತಿಶಯವನ್ನು ವ್ಯಕ್ತಪಡಿಸುವುದ ಕ್ಕಾಗಿ ಈ ಮೂರನ್ನೂ ಒಟ್ಟಿಗೆ ಸೇರಿಸಿ ಒಂದೇ ಲಕ್ಷಣವಾಗಿ ಸೂತ್ರಕಾರರು ಹೇಳಿರುವರು. ಆದಕಾರಣ ಸೃಷ್ಟಿಕಾರಣತ್ವವನ್ನು ಮಾತ್ರವೇ ನಾವು ಪ್ರತ್ಯೇಕ

ಲಕ್ಷಣವಾಗಿ ತೋರಿಸಿದುದು ಅಸಂಗತವಲ್ಲ. ಆದುದರಿಂದಲೇ ಸೂತ್ರಕಾರರೂ ಸಹ ಮತ್ತೊಂದುಕಡೆಯಲ್ಲಿ "ಅತ್ತಾ ಚರಾಚರಗ್ರಹಣಾತ್" ಎಂಬ ಸೂತ್ರದಲ್ಲಿ ಸಂಹಾರಕಾರಣತ್ವವೆಂಬ ಒಂದೇ ಗುರುತಿನಿಂದ ಈಶ್ವರಸ್ವರೂಪವನ್ನು ನಿಷ್ಕರ್ಷಿಸಿ ಇರುವರು.

## ೫೬೨. ಸತ್ಯಾದಿವಾಕ್ಯೇಽಪಿ ಶಂಕಿತದೋಷವ್ಯಾವೃತ್ತಿಫಲಕತಯಾ ವಿಶೇಷಣಸಾರ್ಥಕ್ಯಂ.

ಒಂದೇವಿಶೇಷಣದಿಂದ ಎಲ್ಲಾ ಆಶಂಕೆಗಳಿಗೂ ಪರಿಹಾರವು ಸಂಭವಿಸುತ್ತಿದ್ದರೂ, ಶಿಷ್ಯರ ಬುದ್ಧಿಯಲ್ಲಿ ಅಂಕುರಿಸುತ್ತಿರುವ ಅನೇಕವಾದ ಆಶಂಕೆಗಳನ್ನು ಕ್ರಮವಾಗಿ ಪರಿಹರಿಸುವುದಕ್ಕೋಸ್ಕರ ಇನ್ನೂ ಕೆಲವು ವಿಶೇಷಣಗಳನ್ನು ಹೇಳುವ ವಾಡಿಕೆ ಶ್ರುತಿಯೊಳಗೆ ಅನೇಕಸ್ಥಳಗಳಲ್ಲಿ ಕಂಡುಬರುವುದು.

ಇದಕ್ಕೆ ಉದಾಹರಣವಾಗಿ "ಸತ್ಯಂ ಜ್ಞಾನಮನಂತಂ ಬ್ರಹ್ಮ" ಎಂಬ ವಾಕ್ಯವನ್ನು ನೋಡಬಹುದು. ಈ ವಾಕ್ಯದಲ್ಲಿ ಅಡಗಿರುವ ನಾಲ್ಕು ಪದಗಳೂ ದ್ವಿತೀಯಾವಿಭಕ್ತಿಯ ಏಕವಚನಾಂತಗಳಾಗಿ ಇರುವುವು. ಇವುಗಳೊಳಗೆ ಅನಂತಪದವು ಎರಡಾವರ್ತಿ ಅನುಸಂಧಿಸಲ್ಪಡುವುದು. ಪುಂಲಿಂಗವಾದ ಈ ಶಬ್ದವು ಒಂದಾವರ್ತಿ ತನ್ನ ರೂಢಿಶಕ್ತಿಯಿಂದ ನಾರಾಯಣನನ್ನು ತೋರಿಸುವುದರ ಮೂಲಕ ವಿಶೇಷ್ಯವಾಚಕಶಬ್ದವಾಗಿ ಇರುವುದು; ಮತ್ತೊಂದಾವರ್ತಿಯಲ್ಲಿ ತನ್ನ ಯೋಗಶಕ್ತಿಯಿಂದ (ಅವಯವವ್ಯುತ್ಪತ್ತಿಯಿಂದ) ಆ ನಾರಾಯಣನಲ್ಲಿ ದೇಶಪರಿಚ್ಛೇದ—ಕಾಲಪರಿಚ್ಛೇದ—ವಸ್ತುಪರಿಚ್ಛೇದಗಳೆಂಬ ತ್ರಿವಿಧಪರಿಚ್ಛೇದದ ರಾಹಿತ್ಯವನ್ನು ಬೋಧಿಸುವುದರಮೂಲಕ ವಿಶೇಷಣವಾಚಕಶಬ್ದವಾಗಿಯೂ ಇರುವುದು.

ತ್ರಿವಿಧಪರಿಚ್ಛೇದಶೂನ್ಯನಾದುದರಿಂದಲೇ ಈ ನಾರಾಯಣನಿಗೇ ನಿರತಿಶಯಬೃಹತ್ತ್ವವು ಉಪಪನ್ನವಾಗಿ ಇರುವುದೆಂಬ ಈ ಅರ್ಥವನ್ನು ಬೋಧಿಸುವುದರ ಮೂಲಕ ಬ್ರಹ್ಮಶಬ್ದವು ಅನಂತಪದಕ್ಕೆ ವಿಶೇಷಣವಾಗಿ ಇರುವುದು. ಈ ಬ್ರಹ್ಮಶಬ್ದವು ನಿತ್ಯನಪುಂಸಕವಾದುದರಿಂದ ತನ್ನ ಲಿಂಗವನ್ನು ಬಿಡದೆಯೇ ಪುಂಲಿಂಗಾಂತವಾದ ಅನಂತಪದಕ್ಕೆ ವಿಶೇಷಣವಾಗಬಹುದು.

ಸತ್ಯಶಬ್ದವೂ ಜ್ಞಾನಶಬ್ದವೂ ಪುಂಲಿಂಗಾಂತವಾಗಿಯೇ ಇದ್ದುಕೊಂಡು ಅನಂತಪದಕ್ಕೆ ವಿಶೇಷಣಗಳಾಗಿ ಇರುವುವು. "ಜ್ಞಾನಶಬ್ದವು ನಪುಂಸಕಲಿಂಗವೆಂದು ಸುಪ್ರಸಿದ್ಧವಾಗಿ ಇರುವಾಗ ಇಲ್ಲಿ ಪುಂಲಿಂಗಾಂತವು ಹೇಗೆ ಆಯಿತು?" ಎಂದು ಮರುಳಾಗಬಾರದು; ಈ ವಾಕ್ಯದಲ್ಲಿ ಪ್ರಯುಕ್ತವಾಗಿರುವ ಜ್ಞಾನಶಬ್ದವು

"ಜ್ಞಾನಂ ಅಸ್ಯ ಅಸ್ತೀತಿ ಜ್ಞಾನಃ" ಎಂಬುದಾಗಿ ಅರ್ಶಆದ್ಯಚ್ಪ್ರತ್ಯಯಾಂತ ವಾಗಿರುವುದೆಂಬ ಅಂಶವನ್ನು ಜೀವಪರಿಚ್ಛೇದದಲ್ಲಿ ತೋರಿಸಿರುವೆವಾದುದರಿಂದ ಈ ಜ್ಞಾನಪದವು ಪುಂಲಿಂಗಾಂತವಾಗಿರಲು ತಡೆಯಿಲ್ಲ.

"ಜಗತ್ಕಾರಣವಸ್ತು ಯಾವುದೋ ಅದೇ ಬ್ರಹ್ಮವೆನಿಸಿಕೊಳ್ಳುವುದು" ಎಂದು ಸಾಮಾನ್ಯರೂಪವಾಗಿ ಕೇಳಿದ್ದ ಶಿಷ್ಯನಿಗೆ ನಾಲ್ಕು ಬಗೆಯಾದ ಆಶಂಕೆ ಗಳುಂಟಾಗುವುವು ; ಇವುಗಳೊಳಗೆ—ನಾನಾವಿಧವಾದ ವಿಕಾರಗಳಿಗೆ ಆಶ್ರಯ ವಾಗಿ ಇದ್ದುಕೊಂಡು ಸ್ಥೂಲರೂಪವಾಗಿ ಮೊತ್ತಮೊದಲು ದೃಷ್ಟಿಗೆ ಗೋಚರ ವಾಗುವ ಅಚೇತನಪದಾರ್ಥವನ್ನು ಅವಲಂಬಿಸಿ—"ಒಂದು ವಸ್ತು ಕಾರಣವೆನಿಸಿ ಕೊಳ್ಳುವುದಾದರೆ ಅದು ವಿಕಾರಗಳಿಗೆ ಭಾಗಿಯಾಗಿಯೇ ಇರಬೇಕು; ವಿಕಾರವಾ ದರೆ ಸ್ಥೂಲವಾದ ಅಚೇತನಪದಾರ್ಥದಲ್ಲಿ ಪ್ರತ್ಯಕ್ಷವಾಗಿ ಕಂಡುಬರುವುದು; ಅದ ಕಾರಣ ಇದೇ ಕಾರಣವಾಗಿಯೂ ಕೊನೆಗೆ ಇದೇ ಬ್ರಹ್ಮವೂ ಆಗಿರಬೇಕು." ಎಂದು ಶಿಷ್ಯನಿಗೆ ಮೊದಲನೆಯ ಆಶಂಕೆ ಉಂಟಾಗುವುದು.

ಇನ್ನೂ ಸ್ವಲ್ಪವಿಮರ್ಶೆಮಾಡಿ ನೋಡುವಲ್ಲಿ—"ಸ್ಥೂಲವಾದ ಈ ಅಚೇತನ ವಸ್ತುವಿಗಿಂತಲೂ ಸೂಕ್ಷ್ಮನಾಗಿ ಇದರೊಳಗೆ ಅಡಗಿರುವ ಬದ್ಧಜೀವನೇ ಜಗ ತ್ಕಾರಣವಾಗಿಯೂ ಬ್ರಹ್ಮಶಬ್ದವಾಚ್ಯನಾಗಿಯೂ ಇರಬಹುದು" ಎಂದು ಎರ ಡನೆಯ ಆಶಂಕೆ ಉಂಟಾಗುವುದು.

ಇನ್ನೂ ದೀರ್ಘವಾಗಿ ವಿಮರ್ಶೆಮಾಡಿ ನೋಡಿದರೆ—"ಅಲ್ಪಜ್ಞನಾ ಗಿಯೂ ಅಲ್ಪಶಕ್ತಿಕನಾಗಿಯೂ ಕರ್ಮವಶ್ಯನಾಗಿಯೂ ಇರುವ ಈ ಬದ್ಧಜೀವನಿಗೆ ಜಗತ್ಕಾರಣತ್ವವೂ ಬ್ರಹ್ಮಶಬ್ದವಾಚ್ಯತ್ವವೂ ಕೂಡುವುದಿಲ್ಲವಾದುದರಿಂದ ಸರ್ವಜ್ಞ ನಾಗಿಯೂ ಸರ್ವಶಕ್ತನಾಗಿಯೂ ಅಕರ್ಮವಶ್ಯನಾಗಿಯೂ ಇರುವ ಪ್ರಕೃತಿವಿನಿ ರ್ಮುಕ್ತನಾದ ಶುದ್ಧಜೀವನೇ ಜಗತ್ಕಾರಣವಾಗಿಯೂ ಬ್ರಹ್ಮಶಬ್ದವಾಚ್ಯನಾಗಿಯೂ ಇರಬಹುದು" ಎಂದು ಮೂರನೆಯ ಆಶಂಕೆ ಉಂಟಾಗುವುದು. ಇಂಥ ಮುಕ್ತಾ ತ್ಮಸ್ವರೂಪವು ಪೂರ್ವೋಕ್ತವಾದ ಬದ್ಧಜೀವನೆಂಬ ಸೂಕ್ಷ್ಮವಸ್ತುವಿನಂತೆ ಲೋಕದಲ್ಲಿ ವಿಶೇಷಪ್ರಸಿದ್ಧಿಗೆ ಬಾರದೆ ಕೇವಲ ಶಾಸ್ತ್ರಪ್ರಸಿದ್ಧಿಗೆ ಗೋಚರವಾಗಿ ಇರುವುದರಿಂದ ಸೂಕ್ಷ್ಮನಾದ ಬದ್ಧಜೀವನಿಗಿಂತಲೂ ಸೂಕ್ಷ್ಮತರವೆನಿಸಿಕೊಳ್ಳು ವುದು. ಆದುದರಿಂದಲೇ ಸೂಕ್ಷ್ಮವಸ್ತುವನ್ನು ಅವಲಂಬಿಸಿ ಉಂಟಾಗಿರುವ ಎರ ಡನೆಯ ಆಶಂಕೆಯ ಅನಂತರದಲ್ಲಿ ಸೂಕ್ಷ್ಮತರವಸ್ತುವನ್ನು ಅವಲಂಬಿಸಿ ಮೂರ ನೆಯ ಆಶಂಕೆ ಉಂಟಾಗಬಹುದು.

ಇನ್ನೂ ಅತ್ಯಂತದೀರ್ಘವಾಗಿ ವಿಮರ್ಶೆಮಾಡಿ ನೋಡಿದರೆ " ಸೂಕ್ಷ್ಮತರನೆನಿಸಿಕೊಂಡ ಮುಕ್ತಾತ್ಮನು ಮುಕ್ತತ್ವಾವಸ್ಥೆಯಲ್ಲಿ ಸರ್ವಜ್ಞನಾಗಿಯೂ ಸರ್ವಶಕ್ತನಾಗಿಯೂ ಅಕರ್ಮವಶ್ಯನಾಗಿಯೂ ಇರುವವನಾದರೂ ಅದೇ ಚೇತನನು ಪೂರ್ವಾವಸ್ಥೆಯಲ್ಲಿ ಅಲ್ಪಜ್ಞನಾಗಿಯೂ ಅಲ್ಪಶಕ್ತಿಕನಾಗಿಯೂ ಕರ್ಮವಶ್ಯನಾಗಿಯೂ ಇದ್ದವನಾದುದರಿಂದ ಇವನು ಜಗತ್ಕಾರಣವಾಗಲಾರನು; ಬ್ರಹ್ಮಶಬ್ದವಾಚ್ಯನೂ ಆಗಲಾರನು: ಆದಕಾರಣ ಯಾವಾಗಲೂ ಸಂಸಾರದುಃಖಸಂಬಂಧವೇ ಇಲ್ಲದೆ ಯಾವಾಗಲೂ ಸರ್ವಜ್ಞರಾಗಿ ಯಾವಾಗಲೂ ಸರ್ವಶಕ್ತರಾಗಿ ಯಾವಾಗಲೂ ಅಕರ್ಮವಶ್ಯರಾಗಿ ಅತ್ಯಂತವಿಲಕ್ಷಣರಾಗಿ ಇರುವ ನಿತ್ಯಸೂರಿಗಳೇ ಜಗತ್ಕಾರಣಭೂತರಾಗಿಯೂ ಬ್ರಹ್ಮಶಬ್ದವಾಚ್ಯರಾಗಿಯೂ ಇರಬಹುದು '' ಎಂದು ನಾಲ್ಕನೆಯ ಆಶಂಕೆ ಉಂಟಾಗುವುದು.

ಇಂಥ ನಿತ್ಯಾತ್ಮಸ್ವರೂಪವು ಪೂರ್ವೋಕ್ತವಾದ ಮುಕ್ತಾತ್ಮಸ್ವರೂಪವೆಂಬ ಸೂಕ್ಷ್ಮತರವಸ್ತುವಿನಂತೆ ಬಹುಶಾಸ್ತ್ರಪ್ರಸಿದ್ಧಿಗೆ ಬಾರದೆ ಕೆಲವು ಶಾಸ್ತ್ರಗಳ ಪ್ರಸಿದ್ಧಿಗೆ ಮಾತ್ರ ಗೋಚರವಾಗಿರುವುದರಿಂದ ಸೂಕ್ಷ್ಮತರವಾದ ಮುಕ್ತಾತ್ಮಸ್ವರೂಪಕ್ಕಿಂತಲೂ ಸೂಕ್ಷ್ಮತಮವೆನಿಸಿಕೊಳ್ಳುವುದು. ಆದುದರಿಂದಲೇ ಸೂಕ್ಷ್ಮತರವಸ್ತುವನ್ನು ಅವಲಂಬಿಸಿ ಉಂಟಾಗಿರುವ ಮೂರನೆಯ ಆಶಂಕೆಯ ಅನಂತರದಲ್ಲಿ ಸೂಕ್ಷ್ಮತಮವಸ್ತುವನ್ನು ಅವಲಂಬಿಸಿ ನಾಲ್ಕನೆಯ ಆಶಂಕೆ ಉಂಟಾಗಬಹುದು.

ಹೀಗೆ—ಸ್ಥೂಲ ಸೂಕ್ಷ್ಮ ಸೂಕ್ಷ್ಮತರ ಸೂಕ್ಷ್ಮತಮಗಳೆಂಬ ನಾಲ್ಕು ವಸ್ತುಗಳನ್ನು ಅವಲಂಬಿಸಿ ಶಿಷ್ಯಬುದ್ಧಿಯಲ್ಲಿ ಕ್ರಮವಾಗಿ ಅಂಕುರಿಸಿರುವ ನಾಲ್ಕು ಆಶಂಕೆಗಳನ್ನೂ ಕ್ರಮದಿಂದ ಪರಿಹರಿಸುವುದಕ್ಕಾಗಿ ಈ ವಾಕ್ಯದಲ್ಲಿ ಸತ್ಯಜ್ಞಾನಾನಂತಶಬ್ದಗಳು ಪ್ರಯೋಗಿಸಲ್ಪಟ್ಟಿರುವುವು. ಇವುಗಳೊಳಗೆ ಸತ್ಯಶಬ್ದದಿಂದ ಮೊದಲನೆಯ ಎರಡು ಆಶಂಕೆಗಳೂ, ಜ್ಞಾನಪದದಿಂದ ಮೂರನೆಯ ಆಶಂಕೆಯೂ, ಅನಂತಪದದಿಂದ ನಾಲ್ಕನೆಯ ಆಶಂಕೆಯೂ ಕ್ರಮವಾಗಿ ಪರಿಹರಿಸಲ್ಪಡುವುವು. ಹೇಗೆಂದರೆ—

ಸತ್ಯಪದವು—ಬ್ರಹ್ಮದಲ್ಲಿ ನಿರುಪಾಧಿಕಸತ್ತೆಯೆಂಬ ವಿಶೇಷಣದ ಸಂಬಂಧವನ್ನು ಬೋಧಿಸುವುದು; ಎಂದರೆ ಬ್ರಹ್ಮದಲ್ಲಿ ಯಾವಾಗಲೂ ಏಕರೂಪವಾದ ಸತ್ತೆ ಇರುವುದೆಂದು ಬೋಧಿಸುವುದು. ಇದರಿಂದ ಬ್ರಹ್ಮದಲ್ಲಿ ವಿಕಾರಕ್ಕೆ ಅವಕಾಶವಿಲ್ಲವಾದಕಾರಣ ಸ್ವರೂಪವಿಕಾರಗಳಿಗೂ ಸ್ವಭಾವವಿಕಾರಗಳಿಗೂ ಆಸ್ಪದ

ವಾಗಿಯೂ ಸ್ಥೂಲವಾಗಿಯೂ ಇರುವ ಅಚಿದ್ವಸ್ತುವಿನಲ್ಲಿಯೂ, ಕೇವಲ ಸ್ವಭಾವ ವಿಕಾರಗಳಿಗೆ ಆಸ್ಪದವಾಗಿಯೂ ಸೂಕ್ಷ್ಮವಾಗಿಯೂ ಇರುವ ಬದ್ಧಚೇತನ ನಲ್ಲಿಯೂ, ಜಗತ್ಕಾರಣತ್ವವೂ ಬ್ರಹ್ಮತ್ವವೂ ಸಂಭವಿಸುವುವಲ್ಲವೆಂದು ಸಿದ್ಧವಾಗು ವುದು. ಏತಕ್ಕೆಂದರೆ ನಾಮಾಂತರವನ್ನು ಪಡೆವುದಕ್ಕೆ ಅರ್ಹವಾದ ಅವಸ್ಥಾಂತರ ವನ್ನು ಪಡೆಯುತ್ತಲೇ ಇರುವ ಸ್ಥೂಲಸೂಕ್ಷ್ಮವಸ್ತುಗಳಿಗೆ ಯಾವಾಗಲೂ ಏಕ ರೂಪವಾದ ಸತ್ತೆ ಇಲ್ಲವಷ್ಟೆ? ಆದಕಾರಣ ಕಾರಣವೆನಿಸಿಕೊಳ್ಳುವ ವಸ್ತು ವಿಕಾ ರಕ್ಕೆ ಭಾಗಿಯಾಗಿ ಇರುವುದೆಂದು ಲೋಕದಲ್ಲಿ ಕಂಡುಬಂದರೂ ಶಾಸ್ತ್ರದಲ್ಲಿ ಬೋಧಿಸಲ್ಪಡುವ ಈ ಜಗತ್ಕಾರಣವಸ್ತು ಲೋಕದೃಷ್ಟವಾದ ಸ್ಥೂಲಸೂಕ್ಷ್ಮ ವಸ್ತುಗಳಿಗಿಂತಲೂ ವಿಲಕ್ಷಣವಾಗಿ ಸರ್ವದಾ ನಿರ್ವಿಕಾರವಾಗಿಯೇ ಇರುವುದಾ ದುದರಿಂದ ಮೊದಲನೆಯ ಎರಡು ಆಶಂಕೆಗಳಿಗೆ ಅವಕಾಶವಿಲ್ಲ.

ಜ್ಞಾನಪದವು ಸರ್ವದಾ ಅಸಂಕುಚಿತವಾದ ಜ್ಞಾನೈಕಾಕಾರವನ್ನು ಪಡೆ ದಿರುವ ವಸ್ತುವನ್ನು ತೋರಿಸುವುದು; ಇದರಿಂದ ಪೂರ್ವಾವಸ್ಥೆಯಲ್ಲಿ ಜ್ಞಾನ ಸಂಕೋಚವನ್ನು ಪಡೆದಿದ್ದ ಮುಕ್ತಾತ್ಮಸ್ವರೂಪವೆಂಬ ಸೂಕ್ಷ್ಮತರ ವಸ್ತುವಿನಲ್ಲಿ ಯೂ ಜಗತ್ಕಾರಣತ್ವವೂ ಬ್ರಹ್ಮತ್ವವೂ ಸಂಭವಿಸುವುವಲ್ಲವೆಂದು ಸಿದ್ಧವಾಯಿತು. ಮುಕ್ತಾತ್ಮಸ್ವರೂಪಕ್ಕಿಂತಲೂ ಅತ್ಯಂತವಿಲಕ್ಷಣವಾದ ಈ ಜಗತ್ಕಾರಣವಸ್ತು ಸರ್ವದಾ ಅಸಂಕುಚಿತವಾದ ಜ್ಞಾನವುಳ್ಳುದಾಗಿ ಇರುವುದರಿಂದ ಮೂರನೆಯ ಆಶಂಕೆಗೂ ಅವಕಾಶವಿಲ್ಲ.

ಅನಂತಪದವು ಹಿಂದೆ ಹೇಳಿದಂತೆ ತ್ರಿವಿಧಪರಿಚ್ಛೇದಶೂನ್ಯವಾದ ವಸ್ತು ವನ್ನು ಬೋಧಿಸುವುದು. ಇದರಿಂದ ಹಿಂದಣ ಪದಗಳಲ್ಲಿ ವ್ಯಾವರ್ತಿಸಲ್ಪಟ್ಟ ಬದ್ಧ ಮುಕ್ತಚೇತನರಿಗಿಂತಲೂ ನಿತ್ಯಚೇತನರು ಅತ್ಯಂತವಿಲಕ್ಷಣರಾಗಿದ್ದರೂ ಜಗ ತ್ಕಾರಣಭೂತನಾದ ಈಶ್ವರನಿಗಿಂತಲೂ ಉತ್ಕೃಷ್ಟರಾಗರು; ಏತಕ್ಕೆಂದರೆ ಅವರ ಸ್ವರೂಪಸ್ವಭಾವಗಳೆಲ್ಲವೂ ಈಶ್ವರಸಂಕಲ್ಪಾಧೀನಗಳಾಗಿ ಪರಿಚ್ಛಿನ್ನಗಳಾಗಿಯೇ ಇರುವುವು. ಆದುದರಿಂದ ನಿರುಪಾಧಿಕವಾದ ಜಗತ್ಕಾರಣತ್ವವೂ ಬ್ರಹ್ಮತ್ವವೂ ಇವರಲ್ಲಿಯೂ ಸಂಭವಿಸುವುದಿಲ್ಲ; ನಿತ್ಯಾತ್ಮಸ್ವರೂಪಕ್ಕಿಂತಲೂ ಅತ್ಯಂತವಿಲಕ್ಷಣ ವಾದ ಈಜಗತ್ಕಾರಣವಸ್ತುವಾದರೆ ಸ್ವರೂಪ, ರೂಪ, ಗುಣ, ವಿಭೂತಿ, ಚೇಷ್ಟೆ ಇವುಗಳೊಳಗೆ ಆವುದೊಂದರಲ್ಲಿಯೂ ನ್ಯೂನತೆಯಿಲ್ಲದೆ ಸರ್ವದಾ ತ್ರಿವಿಧಪರಿ ಚ್ಛೇದಶೂನ್ಯವಾಗಿ ಇರವುದರಿಂದ ಜಗತ್ಕಾರಣವೂ ಬ್ರಹ್ಮಶಬ್ದವಾಚ್ಯವೂ ಇದೇ ಆಗಿರುವುದೆಂದು ಸಿದ್ಧಿಸುವಕಾರಣ ನಾಲ್ಕನೆಯ ಆಶಂಕೆಗೆ ಅವಕಾಶವಿಲ್ಲ.

ಇಲ್ಲಿ ಅನಂತಪದವೊಂದರಿಂದಲೇ ಎಲ್ಲಾ ಆಶಂಕೆಗಳಿಗೂ ಸಮಾಧಾನವು ದೊರೆವುದಾಗಿದ್ದರೂ ಸತ್ಯಜ್ಞಾನಪದಗಳಿಗೆ ವೈಯರ್ಥ್ಯವನ್ನು ಕಲ್ಪಿಸುವುದಿಲ್ಲ; ಮತ್ತೇನೆಂದರೆ—ಶಿಷ್ಯನ ಬುದ್ಧಿಯಲ್ಲಿ ಕ್ರಮಕ್ರಮವಾಗಿ ಅಂಕುರಿಸುವ ಆಶಂಕೆಗಳನ್ನು ಕ್ರಮಕ್ರಮವಾಗಿ ಪರಿಹರಿಸುವುದಕ್ಕೋಸ್ಕರ ಈ ಮೂರು ಪದಗಳೂ ಪ್ರವರ್ತಿಸಿರುವುವಾದುದರಿಂದ ಆ ಆ ಆಶಂಕೆಯ ಪರಿಹಾರವೇ ಆ ಆ ಪದದ ಪ್ರವೃತ್ತಿಗೆ ಪ್ರಯೋಜನವಾಗಿ ಇರುವಕಾರಣ ಎಲ್ಲಾ ಪದಗಳಿಗೂ ಸಾರ್ಥಕ್ಯವೇ ಉಂಟು.

ಇದರಂತೆಯೇ—“ನಿತ್ಯಂ ವಿಜ್ಞಾನಮಾನಂದಂ ಬ್ರಹ್ಮ” “ಅವಿಕಾರಾಯ ಶುದ್ಧಾಯ ನಿತ್ಯಾಯ ಪರಮಾತ್ಮನೇ” ಇವೇ ಮೊದಲಾದ ಸ್ಥಳಗಳಲ್ಲಿಯೂ ಹಿಂದೆ ತೋರಿಸಿದ ಕ್ರಮದಲ್ಲಿಯೇ ಪದಗಳ ಪ್ರಯೋಜನಗಳನ್ನು ತಿಳಿಯಬಹುದು.

ಆದಕಾರಣ ಉತ್ಪತ್ತಿಕಾರಣತ್ವವನ್ನು ಮಾತ್ರವೇ ನಾವು ಪ್ರತ್ಯೇಕಲಕ್ಷಣವಾಗಿ ತೋರಿಸಿದುದು ಅಸಂಗತವಲ್ಲ.

ಹೀಗೆ ಈಶ್ವರತತ್ತ್ವದಲ್ಲಿ ಕಾರಣತ್ವವು ಸಿದ್ಧವಾದಮೇಲೆ ಕಾರಣತ್ವಪ್ರಯುಕ್ತಗಳಾದ ವಿಕಾರಿತ್ವಾದಿಗಳು ಈಶ್ವರನಲ್ಲಿ ಪ್ರಸಕ್ತಗಳಾದರೆ ಅಂಥ ಕಾರಣಸ್ವರೂಪನ್ನು ಶೋಧಿಸುವುದರ ಮೂಲಕ ಶೋಧಕವಾಕ್ಯವೆನಿಸಿಕೊಂಡ ಈ ಸತ್ಯಜ್ಞಾನಾದಿವಾಕ್ಯವೂ ಈಶ್ವರಸ್ವರೂಪಲಕ್ಷಣವನ್ನೇ ಬೋಧಿಸುತ್ತಿರುವುದಾದುದರಿಂದ ಈಶ್ವರಲಕ್ಷಣವನ್ನು ತೋರಿಸುವ ಪೂರ್ವಪ್ರಕರಣಕ್ಕೆ ಶೇಷವಾಗಿ ಸತ್ಯಜ್ಞಾನಾದಿವಾಕ್ಯದ ಅರ್ಥವನ್ನು ಜಿಜ್ಞಾಸುಗಳ ತಿಳಿವಳಿಕೆಗಾಗಿ ಇಲ್ಲಿ ನಿರೂಪಿಸಿ ತೋರಿಸಿರುವೆವು.

**ಇಂತು ತತ್ತ್ವಶುದ್ಧಿಯೆಂಬ ವಿಶಿಷ್ಟಾದ್ವೈತಪ್ರಕರಣಗ್ರಂಥದೊಳ್**
**ಈಶ್ವರಪರಿಚ್ಛೇದದಲ್ಲಿ ಈಶ್ವರಲಕ್ಷಣಪರಿಶಿಷ್ಟ**
**ನಿರೂಪಣಪ್ರಕರಣಂ ದ್ವಿತೀಯಂ ೨**



# ತೃತೀಯಪ್ರಕರಣಂ.

## ೫೬೩. ತ್ರಿಮೂರ್ತಿಸಾಮ್ಯಾಶಂಕಾ.

“ಪೂಜ್ಯರೆ! ತ್ರಿಮೂರ್ತಿಸಾಮ್ಯವಾದಿಗಳ ಆಶಂಕೆಯನ್ನು ಪರಿಹರಿಸುವುದಕ್ಕಾಗಿ ಸೂತ್ರಕಾರರು ಸೃಷ್ಟಿಸ್ಥಿತಿಸಂಹಾರಕಾರಣತ್ವವನ್ನು ಒಟ್ಟಿಗೆ ಸೇರಿಸಿ ಒಂದು ಲಕ್ಷಣವಾಗಿ ತೋರಿಸಿರುವರೆಂದು ಹಿಂದೆ ಹೇಳಿದಿರಿ; ಆದರೆ ಇದು ಸಂಗತವಾಗುವುದಿಲ್ಲ; ಏತಕ್ಕೆಂದರೆ—ರಜೋಗುಣಪ್ರಧಾನನಾದ ಈಶ್ವರನೊಬ್ಬನು ಸೃಷ್ಟಿಕಾರ್ಯವನ್ನು ಅವಲಂಬಿಸಿರುವನು; ಸತ್ತ್ವಗುಣಪ್ರಧಾನನಾದ ಮತ್ತೊಬ್ಬ ಈಶ್ವರನು ಸ್ಥಿತಿಕಾರ್ಯವನ್ನು ಎಂದರೆ ಪಾಲನಕಾರ್ಯವನ್ನು ಅವಲಂಬಿಸಿರುವನು; ತಮೋಗುಣಪ್ರಧಾನನಾದ ಮಗದೊಬ್ಬ ಈಶ್ವರನು ಸಂಹಾರಕಾರ್ಯವನ್ನು ಅವಲಂಬಿಸಿರುವನು; ಹೀಗೆ ಈ ಮೂವರನ್ನೂ ಈಶ್ವರರೆಂದು ಒಪ್ಪಿಕೊಳ್ಳಬೇಕಾದುದರಿಂದ ಈಶ್ವರನೆಂಬುವನು ಒಬ್ಬನೇ ಅಲ್ಲ; ಮತ್ತು ಈ ಮೂವರೊಳಗೆ ಆ ಆ ಗುಣಸಂಬಂಧವು ಅವರವರಿಗೆ ಎಂದೆಂದಿಗೂ ವ್ಯವಸ್ಥಿತವಾಗಿ ಇರುವುದಾಗಿದ್ದರೆ ಈ ಮೂವರಿಗೂ ಪರಸ್ಪರವಾಗಿ ಉತ್ಕರ್ಷನಿಕರ್ಷಗಳನ್ನು ಹೇಳಬಹುದಾಗಿದ್ದಿತು; ಅದೂ ಇಲ್ಲ; ತಿರುಗುತ್ತಿರುವ ಬಂಡಿಯ ಚಕ್ರದ ಯಾವ ಅವಯವವು ಈಗ ತಗ್ಗಿರುವುದೋ ಅದೇ ಅವಯವವು ಮತ್ತೊಂದು ಪರ್ಯಾಯದಲ್ಲಿ ಉಚ್ಚಸ್ಥಿತಿಗೆ ಬರುವುದು; ಮೊದಲು ಉಚ್ಚಸ್ಥಿತಿಯಲ್ಲಿದ್ದ ಅವಯವವು ಈಗ ನೀಚಸ್ಥಿತಿಗೆ ಬರುವುದು. ಇದನ್ನು ತಪ್ಪಿಸಲು ಯಾರಿಗೂ ಸಾಧ್ಯವಿಲ್ಲ; ಇದರಂತೆಯೇ ಜಗತ್ಕಾರ್ಯದಲ್ಲಿ ಪ್ರವರ್ತಿಸಿರುವ ಈ ಮೂವರು ಈಶ್ವರರೂ ಪರ್ಯಾಯಕ್ರಮದಿಂದ ಸತ್ತ್ವರಜಸ್ತಮೋಗುಣಗಳ ಪರಿವರ್ತನೆಯನ್ನು ಹೊಂದುತ್ತಲೇ ಇರುವರಾದುದರಿಂದ ಉತ್ಕರ್ಷವಾಗಲಿ ನಿಕರ್ಷವಾಗಲಿ ಮಧ್ಯಮಸ್ಥಿತಿಯಾಗಲಿ ಒಬ್ಬರಿಗೂ ವ್ಯವಸ್ಥಿತವಾಗಿ ನೆಲೆನಿಂತುದಲ್ಲ. ಒಟ್ಟಿನಲ್ಲಿ ವಿಮರ್ಶೆಮಾಡಿ ನೋಡಿದರೆ ಬಂಡಿಯ ಚಕ್ರದ ಅವಯವಗಳಂತೆ ಈ ಮೂವರಿಗೂ ಸಾಮ್ಯವೇ ಏರ್ಪಡುವುದಲ್ಲದೆ ಹೆಚ್ಚುಕಡಮೆ ಇಲ್ಲ. ಹೀಗಿರುವಲ್ಲಿ ತ್ರಿಮೂರ್ತಿಸಾಮ್ಯಪಕ್ಷವನ್ನು ನಿರಾಕರಿಸಲು ಹೇಗೆ ಸಾಧ್ಯವಾದೀತು?” ಎಂದು ಆಶಂಕಿಸಲಾಗದು.

## ೫೬೪. ತನ್ನಿರಾಕರಣಪೂರ್ವಕಮೀಶ್ವರಸ್ಯ ಏಕತ್ವಸಮರ್ಥನಂ.

ಏತಕ್ಕೆಂದರೆ ಒಬ್ಬನೇ ಒಬ್ಬನು ಈಶ್ವರನೆನಿಸಿಕೊಳ್ಳುವನಲ್ಲದೆ ನೀವು ಹೇಳುವಂತೆ ಈಶ್ವರರೆಂಬುವರು ಮೂವರಲ್ಲ. ಹಾಗೆ ಅನೇಕೇಶ್ವರರಿರುವ ಪಕ್ಷದಲ್ಲಿ

ಏಕಮೇವಾದ್ವಿತೀಯಂ ಎಂಬುದಾಗಿಯೂ, "ನ ತತ್ಸಮಶ್ಚಾಭ್ಯಧಿಕಶ್ಚ ದೃಶ್ಯತೇ" ಎಂಬುದಾಗಿಯೂ ಎರಡನೆಯ ಈಶ್ವರನನ್ನು ನಿಷೇಧಿಸುವ ಶ್ರುತಿ ಸಂಗತವಾಗಲಾರದಲ್ಲವೆ ?

### ೫೬೫. ಅತಏವ ಲಕ್ಷ್ಮ್ಯಾ ಈಶ್ವರಕೋಟ್ಯಂತರ್ಭಾವ ಪಕ್ಷಸ್ಯ ಅವೈದಿಕತ್ವಂ.

ಹೀಗೆ ಸಮಾನಾಧಿಕನಿಷೇಧಶ್ರುತಿ ಇರುವುದರಿಂದಲೇ ಲಕ್ಷ್ಮಿಗೆ ಈಶ್ವರ ಸಮಾಸತ್ವವನ್ನು ಅಂಗೀಕರಿಸಿ ಈಶ್ವರಕೋಟಿಯಲ್ಲಿಯೇ ಅಂತರ್ಭಾವವನ್ನು ಹೇಳುವ ಪಕ್ಷವು ಶ್ರುತಿಬಹಿಷ್ಕೃತವೆಂದು ಹೇಳಲು ಯಾವ ತಡೆಯೂ ಇಲ್ಲ.

ಶ್ರೀಮದ್ವೇದಾಂತದೇಶಿಕರ ಸಂಪ್ರದಾಯದಲ್ಲಿ—"ಅಗ್ನೀಷೋಮೀಯಂ ಪಶುಮಾಲಭೇತ" ಎಂಬ ಶ್ರುತಿಯಿಂದ ವಿಧಿಸಲ್ಪಟ್ಟ ಯಾಗದೊಳಗೆ ದೇವತಾತ್ವವೆಂಬ ಧರ್ಮವು—ಅಗ್ನಿ, ಸೋಮ ಇವರಿಬ್ಬರಲ್ಲಿಯೂ ಪ್ರತ್ಯೇಕವಾಗಿ ಇರದೆ ಇಬ್ಬರಲ್ಲಿ ವ್ಯಾಸಕ್ತವಾಗಿ ಇರುವುದರಿಂದ ಈ ದೇವತಾತ್ವಧರ್ಮಕ್ಕೆ ಆಶ್ರಯಗಳಾದ ಧರ್ಮಿಗಳು ಎರಡಾಗಿದ್ದರೂ ದೇವತಾತ್ವಧರ್ಮವು ಹೇಗೆ ಒಂದೇ ಆಗಿರುವುದೋ ; ಅದರಂತೆ ಇಲ್ಲಿಯೂ ಲಕ್ಷ್ಮೀತತ್ಪತಿಗಳಲ್ಲಿ ಈಶ್ವರತ್ವಧರ್ಮವು ಪ್ರತ್ಯೇಕವಾಗಿ ಇರದೆ ಇಬ್ಬರಲ್ಲಿ ವ್ಯಾಸಕ್ತವಾಗಿ ಇರುವುದರಿಂದ ಈಶ್ವರತ್ವಧರ್ಮಕ್ಕೆ ಆಶ್ರಯಗಳಾದ ಧರ್ಮಿಗಳು ಎರಡಾಗಿದ್ದರೂ ಈಶ್ವರತ್ವವೆಂಬ ಧರ್ಮವು ಒಂದೇ ಆಗಿರುವುದರಿಂದ "ಏಕಮೇವಾದ್ವಿತೀಯಂ" ಎಂಬ ಶ್ರುತಿಗಾಗಲಿ "ನ ತತ್ಸಮಶ್ಚಾಭ್ಯಧಿಕಶ್ಚದೃಶ್ಯತೇ" ಎಂಬ ಶ್ರುತಿಗಾಗಲಿ ವಿರೋಧವಿಲ್ಲವಾದಕಾರಣ ಲಕ್ಷ್ಮಿಗೆ ಈಶ್ವರಕೋಟಿಯಲ್ಲಿ ಅಂತರ್ಭಾವವನ್ನು ಹೇಳುವಪಕ್ಷವು ಶ್ರುತಿಬಹಿಷ್ಕೃತವಲ್ಲವೆಂದು ಉಪಪತ್ತಿಯನ್ನು ಹೇಳುವರು. ಆದಕಾರಣ ಈ ವಿಷಯದಲ್ಲಿ ಅವರವರ ಸಂಪ್ರದಾಯಾನುಸಾರವಾಗಿ ಸಾಮಂಜಸ್ಯವನ್ನು ತಿಳಿಯಬಹುದು.

ಹೀಗೆಯೇ—"ಸಸ್ವರಾಡ್ಭವತಿ" "ನಿರಂಜನಃ ಪರಮಂ ಸಾಮ್ಯಮುಪೈತಿ" ಇತ್ಯಾದಿಶ್ರುತಿಗಳನ್ನು ಆಪಾತರೂಪವಾಗಿ ನೋಡಿ ಮರುಳುಗೊಂಡು "ಮುಕ್ತಾತ್ಮರುಗಳೂ ಈಶ್ವರರೆನಿಸಿಕೊಳ್ಳುವರು" ಎಂದು ಹೇಳುವವರ ಮತವೂ ಅವೈದಿಕವೆಂಬುದು ಸ್ಪಷ್ಟವಾಗಿರುವುದು. ಆದಕಾರಣ ಈಶ್ವರನೆಂಬುವನು ಒಬ್ಬನೇ ಇರುವನಲ್ಲದೆ ಅನೇಕೇಶ್ವರರಿಲ್ಲ.

### ೫೬೬. ಈಶ್ವರಸ್ಯ ಬ್ರಹ್ಮಾಂಶತ್ವಾದ್ಬ್ರಹ್ಮಣ ಈಶ್ವರಭಿನ್ನತ್ವಾಶಂಕಾ

"ಪೂಜ್ಯರೆ ? ಅನೇಕೇಶ್ವರರಿಲ್ಲವಾದರೆ ಬೇಡ ; ಈಶ್ವರನೆಂಬುವನೊಬ್ಬನೇ ಆಗಲಿ ; ಆದರೆ ಆ ಈಶ್ವರನೆಂಬುವನು ಬ್ರಹ್ಮದ ಅಂಶವೇ ಆಗಿರುವನಲ್ಲದೆ ಬ್ರಹ್ಮವಲ್ಲ.

ಹೇಗೆಂದರೆ—ಯಾವುದೊಂದು ಪದಾರ್ಥವನ್ನು ತಿಳಿದುಕೊಂಡರೆ ಚಿದಚಿದಾತ್ಮಕ ವಾದ ಸಮಸ್ತಪ್ರಪಂಚವನ್ನೂ ತಿಳಿದುಕೊಂಡಂತೆ ಆಗುವುದೋ ಅದೇ ಬ್ರಹ್ಮ ವೆಂದು ಏಕವಿಜ್ಞಾನದಿಂದ ಸರ್ವವಿಜ್ಞಾನವನ್ನು ಪ್ರತಿಜ್ಞೆಮಾಡಿ ಇದಕ್ಕೆ ದೃಷ್ಟಾಂ ತವಾಗಿ ಮೃತ್ಪಿಂಡವನ್ನು ತೋರಿಸಿ, ಹೇಗಾದರೆ ಕಾರಣೀಭೂತವಾದ ಒಂದಾ ನೊಂದು ಮೃತ್ಪಿಂಡವನ್ನು ಚನ್ನಾಗಿ ತಿಳಿದುಕೊಂಡರೆ ಆ ಮೃತ್ಪಿಂಡದ ಕಾರ್ಯ ವಾದ ಘಟಶರಾವಾದಿಸಮಸ್ತಪದಾರ್ಥಗಳನ್ನೂ ತಿಳಿದುಕೊಂಡಂತೆ ಆಗುವುದೋ ಹಾಗೆಯೇ ಕಾರಣೀಭೂತವಾದ ಬ್ರಹ್ಮದ ಸ್ವರೂಪವನ್ನು ತಿಳಿದುಕೊಂಡರೆ ಅದರ ಕಾರ್ಯವಾಗಿ ಚಿದಚಿದಾತ್ಮಕವಾಗಿರುವ ಸಮಸ್ತಪ್ರಪಂಚವನ್ನೂ ತಿಳಿದುಕೊಂಡಂತೆ ಆಗುವುದೆಂದು ಹೇಳಿರುವುದರಿಂದ ಚಿದಚಿದೀಶ್ವರರು ಬ್ರಹ್ಮದ ಕಾರ್ಯಭೂತರಾಗಿ ಬ್ರಹ್ಮಾಂಶಭೂತರೆನಿಸಿಕೊಳ್ಳುವರಲ್ಲದೆ ಬ್ರಹ್ಮವೆನಿಸಿಕೊಳ್ಳಲಾರರು. ಬ್ರಹ್ಮವೆಂ ಬುದು ಈಶ್ವರಭಿನ್ನವಲ್ಲದೆ ಈಶ್ವರನೇ ಬ್ರಹ್ಮವಾಗಿರುವ ಪಕ್ಷದಲ್ಲಿ—ಈಶ್ವರನೆಂಬ ಏಕಪದಾರ್ಥದ ವಿಜ್ಞಾನದಿಂದ ಸರ್ವವಿಜ್ಞಾನವು ಸಿದ್ಧಿಸಬೇಕು; ಆದರೆ ಅದು ಸಿದ್ಧಿಸಲಾರದು; ಚಿದಚಿತ್ಪದಾರ್ಥಗಳಂತೆ ಈಶ್ವರಪದಾರ್ಥವೂ ಕಾರ್ಯಕೋಟಿಯಲ್ಲಿ ಸೇರಿರುವುದಲ್ಲದೆ ಕಾರಣಕೋಟಿಯಲ್ಲಿ ಸೇರಿಲ್ಲ. ಏಕಕಾರಣಜ್ಞಾನದಿಂದ ನಿಖಿಲ ಕಾರ್ಯವಿಜ್ಞಾನವು ಸಂಭವಿಸುವುದಲ್ಲದೆ ಏಕಕಾರ್ಯವಿಜ್ಞಾನದಿಂದ ಸಕಲಕಾರ್ಯ ವಿಜ್ಞಾನವು ಸಂಭವಿಸುವದಿಲ್ಲ. ಮೃತ್ಪಿಂಡಜ್ಞಾನದಿಂದ ಘಟ ಶರಾವ ಮಣಿ ಕಾದಿಜ್ಞಾನವು ಸಂಭವಿಸುವುದಲ್ಲದೆ ಘಟಜ್ಞಾನದಿಂದ ಶರಾವಮಣಿಕಾದಿಜ್ಞಾನವು ಸಂಭವಿಸುವುದಿಲ್ಲವಷ್ಟೆ ?

ಆದಕಾರಣ ಅಂಶಿಯಾದ ಸಮುದ್ರಕ್ಕೆ ತರಂಗ, ಬುದ್ಬುದ, ಫೇನಗಳು ಅಂಶಗಳಾಗಿರುವಂತೆ ಚಿದಚಿದೀಶ್ವರರು ಬ್ರಹ್ಮದ ಅಂಶಭೂತರಾಗಿಯೂ ಬ್ರಹ್ಮವು ಅಂಶಿಯಾಗಿಯೂ ಇರುವುದರಿಂದ ಅಂಶಭೂತನಾದ ಈಶ್ವರನಿಗಿಂತಲೂ ಅಂಶಿ ಯಾದ ಬ್ರಹ್ಮವು ಭಿನ್ನವಾಗಿಯೇ ಇರುವುದಲ್ಲದೆ ಈಶ್ವರನೇ ಬ್ರಹ್ಮವಾಗಲಾ ರನು. ”

## ೫೬೭. ತನ್ನಿರಾಕರಣಪೂರ್ವಕಮೀಶ್ವರಸ್ಯೈವ ಬ್ರಹ್ಮತ್ವಸಮರ್ಥನಂ.

ಇಂಥ ಆಶಂಕೆ ಸಂಗತವಲ್ಲ. ಸಮುದ್ರಕ್ಕೆ ತರಂಗಬುದ್ಬುದಫೇನಗಳಂತೆ ಬ್ರಹ್ಮಕ್ಕೆ ಚಿದಚಿದೀಶ್ವರರು ಅಂಶವೆನಿಸಿಕೊಳ್ಳುವ ಪಕ್ಷದಲ್ಲಿ ತರಂಗಬುದ್ಬುದ ಫೇನಗಳು ಹೇಗೆ ಅನಿತ್ಯಗಳೋ ಅದರಂತೆ ಚಿದಚಿದೀಶ್ವರರೂ ಅನಿತ್ಯರಾಗಬೇಕಾಗಿ

ಬಂದು ಇವರಿಗೆ ನಿತ್ಯತ್ವವನ್ನು ಉಪದೇಶಿಸುವ ಶ್ರುತಿಯೊಡನೆ ವಿರೋಧವುಂಟಾಗುವುದು.

ಮತ್ತು "ನಾರಾಯಣಪರಂ ಬ್ರಹ್ಮ" ಇವೇ ಮೊದಲಾದ ಶ್ರುತಿಗಳೊಡನೆಯೂ ವಿರೋಧವು ಪ್ರಸಂಗಿಸುವುದು. ಸತ್ಯಜ್ಞಾನಾದಿವಾಕ್ಯದಲ್ಲಿ ಪುಂಲಿಂಗಾಂತವಾದ ಅನಂತಪದದ ರೂಢಿಶಕ್ತಿಯಿಂದ ವಿಷ್ಣುಶಬ್ದವಾಚ್ಯನಾದ ನಾರಾಯಣನನ್ನು ಬೋಧಿಸಿ ಅವಯವಶಕ್ತಿಯಿಂದ ತ್ರಿವಿಧಪರಿಚ್ಛೇದರಾಹಿತ್ಯವನ್ನೂ ಅವನಲ್ಲಿಯೇ ತೋರಿಸಿರುವುದರಿಂದ ಸರ್ವೋತ್ಕೃಷ್ಟತ್ವವೂ, ಸರ್ವಾತ್ಮತ್ವವೂ, ಸರ್ವಶೇಷಿತ್ವವೂ, ಸರ್ವಾಧಾರತ್ವವೂ ಅವನಲ್ಲಿಯೇ ಸ್ಪಷ್ಟವಾಗಿ ತೋರುವುವು.

ಆದಕಾರಣ ನಿರತಿಶಯಬೃಹತ್ತ್ವಬೃಹ್ಮಣತ್ವಗಳೆಂಬ ಬ್ರಹ್ಮಶಬ್ದಪ್ರವೃತ್ತಿನಿಮಿತ್ತವು ಅವನಲ್ಲಿಯೇ ಪುಷ್ಕಲವಾಗಿ ಇರುವುದರಿಂದ ಅವನೇ ಬ್ರಹ್ಮಶಬ್ದಕ್ಕೆ ಮುಖ್ಯಾರ್ಥವಾಗಿ ಇರುವನಲ್ಲದೆ ಮತ್ತೊಬ್ಬರನ್ನೂ ಬ್ರಹ್ಮಶಬ್ದವು ಮುಟ್ಟಲಾರದು. ಈ ಅರ್ಥವು—

"ವೇದೇ ಭೂರಿಪ್ರಯೋಗಾಚ್ಚ ಗುಣಯೋಗಾಚ್ಚ ಶಾರ್ಙ್ಗಿಣಿ ।
ತಸ್ಮಿನ್ನೇವ ಬ್ರಹ್ಮಶಬ್ದೋ ಮುಖ್ಯವೃತ್ತೋ ಮಹಾಮುನೇ"
"ಯಸ್ಮಿನ್ ಪ್ರಯುಜ್ಯಮಾನೇ ತು ಗುಣಯೋಗಸ್ಸುಪುಷ್ಕಳಃ ।
ತತ್ರೈವ ಮುಖ್ಯವೃತ್ತೋಽಯಮನ್ಯತ್ರ ಹ್ಯುಪಚಾರತಃ"

ಎಂಬ ಶ್ರೀಮದ್ಗಾರುಡಪುರಾಣವಚನದಿಂದ ಅತಿಸ್ಫುಟವಾಗಿ ಅವಗತವಾಗುವುದು.

## ೫೬೮. ನಾರಾಯಣವ್ಯತಿರಿಕ್ತಾನಾಂ ನಿರತಿಶಯಬೃಹತ್ತ್ವ ಬೃಹ್ಮಣತ್ವಾಭಾವಃ

ಪೂಜ್ಯರೆ? ನಾರಾಯಣನೇ ಸರ್ವೋತ್ಕೃಷ್ಟನೆಂದು ನಿರ್ಧರಿಸಲಾಗದು— "ಅಗ್ನಿಸ್ಸರ್ವಾ ದೇವತಾಃ" "ಆಪೋ ವಾ ಇದಂ ಸರ್ವಂ" "ಬ್ರಾಹ್ಮಣೋ ವೈ ಸರ್ವಾ ದೇವತಾಃ" "ನ ಕಿರಿಂದ್ರ ತ್ವದುತ್ತರಃ" ಇವೇ ಮೊದಲಾದ ಅನೇಕವಾಕ್ಯಗಳಲ್ಲಿ ಅಗ್ನಿ-ಇಂದ್ರ ಮೊದಲಾದ ಅನೇಕರಿಗೆ ಸರ್ವದೇವತಾತಾದಾತ್ಮ್ಯವನ್ನೂ ಸರ್ವೋತ್ಕರ್ಷವನ್ನೂ ಹೇಳಿ ನಿರತಿಶಯಬೃಹತ್ತ್ವವನ್ನು ತೋರಿಸಿರುವುದರಿಂದ ಅವರೂ ಸರ್ವೋತ್ಕೃಷ್ಟರೆಂದು ತೋರುವುದಲ್ಲವೆ? ಇಲ್ಲ. ಶ್ರುತಿ ಅನೇಕರಿಗೆ ಏಕರೂಪವಾದ ಸರ್ವೋತ್ಕೃಷ್ಟತ್ವವನ್ನು ಬೋಧಿಸಲಾರದು. ಹಾಗೆ ಬೋಧಿಸುವುದಾದರೆ ಆ ವಾಕ್ಯಗಳಿಗೆ ಪರಸ್ಪರ ವ್ಯಾಘಾತವುಂಟಾಗಿ ಒಬ್ಬರಿಗೂ ಸರ್ವೋತ್ಕೃಷ್ಟತ್ವವು ಸಿದ್ಧಿಸಲಾರದೆಹೋದೀತು. ಮತ್ತು ಆ ವಾಕ್ಯ

ಗಳು ಕರ್ಮಪ್ರಕರಣದಲ್ಲಿ ಪಠಿತಗಳಾಗಿರುವುದರಿಂದ ಕರ್ಮಾಂಗಭೂತರಾದ ಅಗ್ನೀಂದ್ರಾದಿಗಳ ಪ್ರಾಶಸ್ತ್ಯವನ್ನು ಹೇಳುವುದಕ್ಕೆ ಪ್ರವರ್ತಿಸಿರುವುದಲ್ಲದೆ ಅಗ್ನೀಂದ್ರಾದಿಗಳಿಗೆ ವಾಸ್ತವವಾಗಿ ನಿರತಿಶಯಬೃಹತ್ತ್ವವನ್ನು ಹೇಳುವುದಕ್ಕಲ್ಲ. ಆದಕಾರಣ ನಾರಾಯಣನೊಬ್ಬನೇ ಸರ್ವೋತ್ಕೃಷ್ಟನೆಂದು ನಿರ್ಧರಿಸಲು ಯಾವ ಅಡ್ಡಿಯೂ ಇಲ್ಲ.

**೫೭೯. ಕಾರಣವಾಕ್ಯಗತಾನಾಂ ಸದ್ಬ್ರಹ್ಮಾತ್ಮಶಿವಶಂಭ್ವಾದಿ ಪದಾನಾಮಪಿ ನಾರಾಯಣ ಏವ ಪರ್ಯವಸಾಯಿತ್ವಂ.**

"ಪೂಜ್ಯರೆ? ಕರ್ಮಪ್ರಕರಣದಲ್ಲಿರುವ ವಾಕ್ಯಗಳು ಅನ್ಯಪರಗಳಾದರೂ ಆಗಲಿ; ಆದರೆ ಬ್ರಹ್ಮಪ್ರಕರಣದಲ್ಲಿಯೇ ಕಾರಣವಾಕ್ಯಗಳೊಳಗೆ "ಸದೇವ ಸೋಮ್ಯೇದಮಗ್ರ ಆಸೀತ್, ಅಸದ್ವಾ ಇದಮಗ್ರ ಆಸೀತ್, ತದ್ಧೇದಂ ತರ್ಹ್ಯವ್ಯಾಕೃತಮಾಸೀತ್, ಬ್ರಹ್ಮವಾ ಇದಮಗ್ರ ಆಸೀತ್, ಆತ್ಮಾವಾ ಇದಮೇಕ ಏವಾಗ್ರ ಆಸೀತ್, ಸರ್ವಾಣಿ ಹವಾ ಇಮಾನಿ ಭೂತಾನ್ಯಾಕಾಶಾದೇವ ಸಮುತ್ಪದ್ಯಂತೇ, ಸರ್ವಾಣಿ ಹ ವಾ ಇಮಾನಿ ಭೂತಾನಿ ಪ್ರಾಣಮೇವಾಭಿಸಂವಿಶಂತಿ, ನ ಸನ್ನಚಾಸಚ್ಛಿವ ಏವ ಕೇವಲಃ, ಶಂಭುರಾಕಾಶಮಧ್ಯೇ ಧ್ಯೇಯಃ" ಇವೇ ಮೊದಲಾದ ಸ್ಥಳಗಳಲ್ಲಿ—"ಸತ್-ಅಸತ್-ಅವ್ಯಾಕೃತ-ಬ್ರಹ್ಮ-ಆತ್ಮ-ಆಕಾಶ-ಪ್ರಾಣ-ಶಿವ-ಶಂಭು" ಮೊದಲಾದ ಶಬ್ದಗಳಿಂದ ಆ ಆ ಅರ್ಥಗಳನ್ನು ನಿರ್ದೇಶಿಸಿ ಅವುಗಳಿಗೆ ಕಾರಣತ್ವವನ್ನು ಹೇಳಿರುವುದು. ಕಾರಣತ್ವವೇ ಬ್ರಹ್ಮಕ್ಕೆ ಲಕ್ಷಣವಾದುದರಿಂದ ಕಾರಣತ್ವವಿಶಿಷ್ಟವಾದ ಅವುಗಳೆಲ್ಲವೂ ಬ್ರಹ್ಮವೆಂದು ತೋರಿಬರುತ್ತಿರುವಲ್ಲಿ ನಾರಾಯಣನೇ ಬ್ರಹ್ಮಶಬ್ದಾರ್ಥವೆಂದು ನಿರ್ಧರಪಡಿಸುವುದು ಹೇಗೆ? ಎಂದು ಆಶಂಕಿಸುವುದು ಯುಕ್ತವಲ್ಲ;

ಏತಕ್ಕೆಂದರೆ—ನೀವು ತೋರಿಸಿದ ಒಂಬತ್ತು ಶಬ್ದಗಳೂ ಸಾಮಾನ್ಯಶಬ್ದಗಳಾದುದರಿಂದ ಕಾರಣವಸ್ತುವನ್ನು ವಿಶೇಷರೂಪವಾಗಿ ತೋರಿಸಲಾರವು. "ಏಕೋ ಹ ವೈ ನಾರಾಯಣ ಆಸೀತ್" ಎಂಬ ಕಾರಣವಾಕ್ಯದಲ್ಲಿ ಪಠಿತವಾಗಿರುವ ನಾರಾಯಣಶಬ್ದವಾದರೆ ಅವುಗಳಂತೆ ಸಾಮಾನ್ಯಶಬ್ದವಾಗದೆ ವಿಶೇಷಶಬ್ದವಾಗಿರುವುದರಿಂದ ಕಾರಣವಸ್ತುವನ್ನು ವಿಶೇಷರೂಪವಾಗಿ ತೋರಿಸಬಲ್ಲುದಾದಪ್ರಯುಕ್ತ ಕಾರಣವಾಕ್ಯಗಳಲ್ಲಿರುವ ಎಲ್ಲಾ ಸಾಮಾನ್ಯಶಬ್ದಗಳೂ ನಾರಾಯಣನಲ್ಲಿಯೇ ಪರ್ಯವಸಾನವನ್ನು ಹೊಂದುವುವು.

ಹಾಗಿಲ್ಲದೆ ಪ್ರತಿಯೊಂದು ವಾಕ್ಯವೂ ಒಂದೊಂದು ಕಾರಣವಸ್ತು ತೋರಿಸುವುದಾದರೆ ಆ ವಾಕ್ಯಗಳಿಗೆ ಪರಸ್ಪರ ವಿರೋಧವುಂಟಾಗಿ ಸರ್ವಕಾರಣತ್ವವು

ಯಾವುದೊಂದಕ್ಕೂ ಸಿದ್ಧಿಸದೆ ಬ್ರಹ್ಮತ್ವವೂ ಯಾವುದಕ್ಕೂ ಇಲ್ಲದೆ ಹೋಗಬೇಕಾಗಿ ಬರುವುದು.

ಆದಕಾರಣ—ಕಾರಣವಸ್ತುವನ್ನು ತೋರಿಸುವ ಎಲ್ಲಾ ಸಾಮಾನ್ಯಶಬ್ದಗಳೂ ಒಂದೇ ಕಾರಣವನ್ನು ತೋರಿಸುವುವೆಂದು ಒಪ್ಪಿಕೊಳ್ಳಬೇಕಾಗಿರುವುದರಿಂದ—"**ಪಶುನಾ ಯಜೇತ**" ಎಂಬ ವಿಧಿವಾಕ್ಯದಲ್ಲಿ ಪ್ರಯೋಗಿಸಲ್ಪಟ್ಟಿರುವ ಪಶುಸಾಮಾನ್ಯವಾಚಿಯಾದ ಪಶುಶಬ್ದಕ್ಕೆ "**ಛಾಗಸ್ಯ ವಪಾಯಾ ಮೇದಸೋಽನುಬ್ರೂಹಿ**" ಎಂಬ ಮಂತ್ರವರ್ಣದಲ್ಲಿ ಪ್ರಯೋಗಿಸಲ್ಪಟ್ಟಿರುವ ಛಾಗಶಬ್ದಾನುಸಾರದಿಂದ ಛಾಗರೂಪವಾದ ವಿಶೇಷಾರ್ಥದಲ್ಲಿ ಪರ್ಯವಸಾನವನ್ನು ಅಂಗೀಕರಿಸುವಂತೆ—ಕಾರಣವಾಕ್ಯಗಳಲ್ಲಿರುವ ಎಲ್ಲಾ ಸಾಮಾನ್ಯಶಬ್ದಗಳಿಗೂ ನಾರಾಯಣಶಬ್ದಾರ್ಥದಲ್ಲಿ ಪರ್ಯವಸಾನವನ್ನು ಮಾಡಿಯೇ ತೀರಬೇಕು. ಹೀಗೆ ಸಕಲವಾಕ್ಯಗಳಿಗೂ ಐಕಕಂಠ್ಯವು ಸಂಭವಿಸುವುದರಿಂದ ನಿಖಿಲಜಗತ್ಕಾರಣತ್ವವೂ, ನಿರತಿಶಯಬೃಹತ್ತ್ವವೆಂಬ ಬ್ರಹ್ಮತ್ವವೂ ನಾರಾಯಣನಿಗೇ ಸಿದ್ಧಿಸುವುವಲ್ಲದೆ ಮತ್ತೊಬ್ಬರಿಗೆ ಸಿದ್ಧಿಸಲಾರವು.

### ೫೭೦. ಕಲ್ಪಭೇದೇನಾಂಡಭೇದೇನ ವಾ ಬಹೂನಾಂ ಕಾರಣತ್ವಸಂಭವಾಶಂಕಾನಿರಾಸಃ

"ಪೂಜ್ಯರೆ? ಸಮಸ್ತವಾದ ಜಗತ್ತಿಗೂ ಒಬ್ಬನೇ ಕಾರಣವಾಗಿರಬೇಕೆಂಬ ನಿರ್ಬಂಧವನ್ನು ಒಪ್ಪಿಕೊಂಡರಲ್ಲವೆ ಎಲ್ಲಾ ಕಾರಣವಾಕ್ಯಗಳಿಗೂ ಒಬ್ಬನಲ್ಲಿ ಪರ್ಯವಸಾನವನ್ನು ಮಾಡಬೇಕಾಗಿ ಬರುವುದು; ಈ ನಿರ್ಬಂಧವು ಬೇಕಾಗಿಲ್ಲ;

ಎಲ್ಲಾ ಅಂಡಗಳಿಗೂ ಒಬ್ಬನೇ ಕಾರಣನಾಗಿರಬೇಕೆಂಬ ಆಗ್ರಹವು ನಿಮಗೆ ಇರುವುದಾದರೆ—ಒಂದು ಕಲ್ಪದಲ್ಲಿ ಎಲ್ಲಾ ಅಂಡಗಳಿಗೂ ಒಬ್ಬನು ಕಾರಣವಾಗಿರಲಿ; ಮತ್ತೊಂದು ಕಲ್ಪದಲ್ಲಿ ಮತ್ತೊಬ್ಬನೂ, ಇನ್ನೊಂದು ಕಲ್ಪದಲ್ಲಿ ಇನ್ನೊಬ್ಬನೂ ಹೀಗೆ ಕಲ್ಪಭೇದಗಳಿಂದ ಅನೇಕರು ಕಾರಣಭೂತರಾಗಿರಲು ಯಾವ ಅಡ್ಡಿಯೂ ಇಲ್ಲ.

ಎಲ್ಲಾ ಕಲ್ಪಗಳಲ್ಲಿಯೂ ಒಬ್ಬನೇ ಕಾರಣವಾಗಿರಬೇಕೆಂಬ ಆಗ್ರಹವು ನಿಮಗೆ ಇರುವುದಾದರೆ ಒಂದು ಅಂಡಕ್ಕೆ ಎಲ್ಲಾ ಕಲ್ಪಗಳಲ್ಲಿಯೂ ಒಬ್ಬನೇ ಕಾರಣವಾಗಿರಲಿ; ಮತ್ತೊಂದು ಅಂಡಕ್ಕೆ ಮತ್ತೊಬ್ಬನೂ, ಇನ್ನೊಂದು ಅಂಡಕ್ಕೆ ಇನ್ನೊಬ್ಬನೂ ಹೀಗೆ ಅಂಡಭೇದಗಳಿಂದ ಅನೇಕರು ಕಾರಣಭೂತರಾಗಿರಲು ಯಾವ ಅಡ್ಡಿಯೂ ಇಲ್ಲ.

ವೃಶ್ಚಿಕಕ್ಕೆ ವೃಶ್ಚಿಕವು ಕಾರಣವಾಗಿದ್ದರೂ ಮತ್ತೊಂದು ಸಂದರ್ಭದಲ್ಲಿ ಗೋಮಯವೂ ವೃಶ್ಚಿಕಕ್ಕೆ ಕಾರಣವಾಗುತ್ತಿರುವುದನ್ನು ಪ್ರತ್ಯಕ್ಷವಾಗಿ ನಾವು ನೋಡುತ್ತಲೇ ಇರುವೆವು. ಹೀಗೆ ಕಲ್ಪಭೇದದಿಂದಲಾಗಲಿ ಅಂಡಭೇದದಿಂದಲಾಗಲಿ ಅನೇಕರಿಗೆ ಕಾರಣತ್ವವು ಸಂಭವಿಸುವುದಾಗಿರುವಲ್ಲಿ ಎಲ್ಲಾ ಕಾರಣವಾಕ್ಯಗಳಿಗೂ ಒಬ್ಬನಲ್ಲಿ ಪರ್ಯವಸಾನವನ್ನು ಮಾಡಿಯೇ ತೀರಬೇಕೆಂಬ ನಿರ್ಬಂಧಕ್ಕೆ ಅವಶ್ಯಕತೆ ಯಿಲ್ಲವಷ್ಟೆ ? ''

ಇಂಥ ಆಶಂಕೆ ಸಂಗತವಲ್ಲ; ಎಲ್ಲಾ ಕಾಲಗಳಲ್ಲಿಯೂ ಎಲ್ಲಾ ಅಂಡ ಗಳಿಗೂ ಒಬ್ಬನೇ ಕಾರಣವೆನಿಸಿಕೊಂಡರಲ್ಲವೆ ಕಾಲದಿಂದಲೂ ದೇಶದಿಂದಲೂ ಅಪರಿಚ್ಛಿನ್ನವಾದ ಬೃಹತ್ತ್ವವು ಅವನಿಗೆ ಸಿದ್ಧಿಸೀತು. ವೇದಾಂತಿಗಳ ಮತದಲ್ಲಿ ಪ್ರತ್ಯಕ್ಷ ಅನುಮಾನ ಶಬ್ದಗಳೆಂಬ ಮೂರೇ ಪ್ರಮಾಣಗಳಂಗೀಕರಿಸಲ್ಪಟ್ಟಿರುವುವು; ಜಗತ್ಕಾರಣವಸ್ತು ಅತೀಂದ್ರಿಯವಾದುದರಿಂದ ಆ ವಿಷಯದಲ್ಲಿ ಪ್ರತ್ಯಕ್ಷಾನು ಮಾನಗಳು ಪ್ರವರ್ತಿಸಲಾರವಾದಪ್ರಯುಕ್ತ ಕಲ್ಪಭೇದದಿಂದಲಾಗಲಿ ಅಂಡಭೇದ ದಿಂದಲಾಗಲಿ ಅನೇಕಕಾರಣಗಳು ಸಂಭವಿಸಬಹುದೆಂಬ ಈ ಅರ್ಥವು ಪ್ರತ್ಯಕ್ಷಾ ನುಮಾನಗಳಿಂದ ಸಿದ್ಧಿಸುವುದಿಲ್ಲ. ಶಬ್ದಪ್ರಮಾಣದಿಂದಲಾದರೆ ಸುತರಾಂ ಕಾರಣ ಭೇದವು ಸಿದ್ಧಿಸುವುದಿಲ್ಲ. ಕಿಂತು ಸರ್ವಕಾರಣವಾಕ್ಯಗಳಲ್ಲಿಯೂ ಕಾರಣಪ್ರತ್ಯ ಭಿಜ್ಞೆಯಿರುವುದರಿಂದ—ಕಾರಣದ ಭೇದವು ಸಿದ್ಧಿಸುವುದಕ್ಕೆ ಬದಲಾಗಿ ಅಭೇದವೇ ಎಂದರೆ ಕಾರಣೈಕ್ಯವೇ ಸಿದ್ಧಿಸುವುದು.

ಸರ್ವಶಾಖಾಪ್ರತ್ಯಯನ್ಯಾಯದಿಂದ ಎಲ್ಲಾ ಶಾಖೆಗಳಲ್ಲಿಯೂ ವಿಧಿಸಲ್ಪ ಡುತ್ತಿರುವ ಅಗ್ನಿಹೋತ್ರದರ್ಶಪೂರ್ಣಮಾಸಾದಿಕರ್ಮಸ್ವರೂಪವು ಒಂದೇ ಆಗಿರುವುದೆಂದು ಹೇಗೆ ನಿಶ್ಚಯಿಸಲ್ಪಡುವುದೋ— ;

ಮತ್ತು—ಸರ್ವವೇದಾಂತಪ್ರತ್ಯಯನ್ಯಾಯದಿಂದ ಎಲ್ಲಾ ಉಪನಿಷತ್ತು ಗಳಲ್ಲಿಯೂ ವಿಧಿಸಲ್ಪಡುತ್ತಿರುವ ದಹರವಿದ್ಯೆ, ಪುರುಷವಿದ್ಯೆ ಮೊದಲಾದ ಆ ಆ ವಿದ್ಯೆಗಳ ಸ್ವರೂಪವು ಒಂದೇ ಆಗಿರುವುದೆಂದು ಹೇಗೆ ನಿಶ್ಚಯಿಸಲ್ಪಡುವುದೋ—

ಹಾಗೆಯೇ ಸರ್ವಕಾರಣವಾಕ್ಯಗಳಿಂದಲೂ ಹೇಳಲ್ಪಡುತ್ತಿರುವ ಕಾರಣ ವಸ್ತುವೂ ಒಂದೇ ಆಗಿರುವುದೆಂದು ಪ್ರತ್ಯಭಿಜ್ಞೆಯಿರುವುದರಿಂದ ಭಿನ್ನಭಿನ್ನಕಾರ ಣಗಳನ್ನು ಅಂಗೀಕರಿಸಲು ಪ್ರಮಾಣವಿಲ್ಲ. ಆದಕಾರಣ ಪ್ರಕೃತಿಯಾಗಲಿ ಮತ್ತೊಂದಾಗಲಿ ದೇವತಾಂತರವಾಗಲಿ ನಿರತಿಶಯಬೃಹತ್ತ್ವರೂಪವಾದ ಬ್ರಹ್ಮ ತ್ವವನ್ನು ಪಡೆಯಲಾರದು.

## ೫೭೧. ಬ್ರಹ್ಮರುದ್ರಾದೀನಾಮಪಿ ನ ಜಗತ್ಕಾರಣತ್ವ ಬ್ರಹ್ಮತ್ವಾದಿಸಂಭವಃ

ಅಚೇತನವಾದ ಪ್ರಧಾನಕ್ಕೆ ಸೃಷ್ಟ್ಯಾದ್ಯನುಕೂಲವಾದ ಜ್ಞಾನವಿಲ್ಲವಾದುದರಿಂದ ಜಗತ್ಕಾರಣತ್ವವೂ ನಿರತಿಶಯಬೃಹತ್ತ್ವವೂ ಸಂಭವಿಸದಿದ್ದರೂ, ಚೇತನರೆನಿಸಿಕೊಂಡ ಬ್ರಹ್ಮರುದ್ರಾದಿಗಳಿಗೆ ಅವು ಸಂಭವಿಸಲು ಅಡ್ಡಿಯೇನೆಂದೂ ಆಶಂಕಿಸಲಾಗದು ; ಬ್ರಹ್ಮರುದ್ರಾದಿಗಳೆಲ್ಲರೂ ಪ್ರಾಕೃತಸೃಷ್ಟಿಸಂಹಾರಗಳಿಗೆ ಒಳಪಟ್ಟವರಾದುದರಿಂದ ಇವರೆಲ್ಲರಿಗೂ ಸೃಜ್ಯತ್ವವೂ ಸಂಹಾರ್ಯತ್ವವೂ ಕರ್ಮವಶ್ಯತ್ವವೂ ತಪ್ಪಿದುದಲ್ಲವಾದಕಾರಣ ಬದ್ಧಜೀವಕೋಟಿಯಲ್ಲಿ ಸೇರಿರುವ ಇವರಿಗೆ ಜಗತ್ಕಾರಣತ್ವವಾಗಲಿ ನಿರತಿಶಯಬೃಹತ್ತ್ವವಾಗಲಿ ಸಂಭವಿಸಲಾರದು.

## ೫೭೨. ಬ್ರಹ್ಮರುದ್ರಾದೀನಾಮಿವ ವಿಷ್ಣೋರಪಿ ಸೃಜ್ಯತ್ವಾದಿಸದ್ಭಾವಾತ್ಕಾರಣತ್ವಬ್ರಹ್ಮತ್ವಾನುಪಪತ್ತ್ಯಾಶಂಕಾ

"ಪೂಜ್ಯರೆ ? ಬ್ರಹ್ಮರುದ್ರಾದಿಗಳಿಗೆ ಜಗತ್ಕಾರಣತ್ವವೂ ನಿರತಿಶಯಬೃಹತ್ತ್ವವೂ ಸಂಭವಿಸುವುದಿಲ್ಲವೆಂಬುದಕ್ಕೆ ಸೃಜ್ಯತ್ವಕರ್ಮವಶ್ಯತ್ವಾದಿಗಳೇ ಕಾರಣವಾಗಿರುವ ಪಕ್ಷದಲ್ಲಿ—"ಬ್ರಹ್ಮವಿಷ್ಣುರುದ್ರೇಂದ್ರಾಸ್ತೇ ಸರ್ವೇ ಸಂಪ್ರಸೂಯಂತೇ" ಎಂದು ಅಥರ್ವಶಿಖೋಪನಿಷತ್ತಿನಲ್ಲಿ ಬ್ರಹ್ಮರುದ್ರೇಂದ್ರರ ಜತೆಯಲ್ಲಿ ವಿಷ್ಣುವನ್ನೂ ಸೇರಿಸಿ ನಾಲ್ವರಿಗೂ ಸೃಜ್ಯತ್ವವು ಹೇಳಲ್ಪಟ್ಟಿರುವುದರಿಂದ ಇತರರಂತೆ ವಿಷ್ಣುವಿಗೂ ಸೃಜ್ಯತ್ವವು ತಪ್ಪಿದುದಲ್ಲ ;

ಮತ್ತು—ಆ ಆ ಅವತಾರಕಾಲಗಳಲ್ಲಿ ಶಾಸ್ತ್ರೀಯಕರ್ಮಾಚರಣೆಯೂ ತತ್ತತ್ಫಲಾನುಭವವೂ ವಿಷ್ಣುವಿಗೆ ಅವಗತವಾಗುತ್ತಿರುವುವಲ್ಲದೆ—ರಾಮಕೃಷ್ಣಾದ್ಯವತಾರಗಳಲ್ಲಿ ಅನೇಕ ದುಃಖಾನುಭವವೂ ಅವಗತವಾಗಿರುವುದರಿಂದ ಕರ್ಮವಶ್ಯತ್ವವೂ ತಪ್ಪಿದುದಲ್ಲ ; ಹೀಗಿರುವಲ್ಲಿ ವಿಷ್ಣುವಿಗೆಮಾತ್ರ ಜಗತ್ಕಾರಣತ್ವವೂ ನಿರತಿಶಯಬೃಹತ್ತ್ವವೂ ಹೇಗೆ ಕೂಡುವುವು ?" ಎಂದು ಆಶಂಕಿಸಬಾರದು.

## ೫೭೩. ವಿಷ್ಣೋಃ ಸೃಜ್ಯತ್ವಾದೇರಿಚ್ಛಾಪ್ರಯುಕ್ತತ್ವೇನ ಕರ್ಮಪ್ರಯುಕ್ತತ್ವಾಭಾವಾತ್ಕಾರಣತ್ವಬ್ರಹ್ಮತ್ವೋಪಪತ್ತಿಃ

ಏತಕ್ಕೆಂದರೆ ಜಗತ್ಕಾರ್ಯನಿರ್ವಹಣವೆಂಬ ಲೀಲೆಯನ್ನು ನಡಸುವುದಕ್ಕೋಸ್ಕರ ನಾರಾಯಣನು ವಿಷ್ಣುವೆಂಬ ಹೆಸರಿನಿಂದ ಅವತರಿಸುವನೆಂದು ಅಥರ್ವಶಿಖಾ

ವಾಕ್ಯವು ಹೇಳುತ್ತಿರುವುದಲ್ಲದೆ ನಾರಾಯಣನಿಗೆ ಉತ್ಪತ್ತಿಯನ್ನು ಹೇಳಲಿಲ್ಲವಾಗಿ ವಿಷ್ಣುವಿಗೆ ಸೃಜ್ಯತ್ವವಿಲ್ಲ.

ಅವತಾರಕಾಲಗಳಲ್ಲಿ ದುಃಖಾನುಭವವೂ ನಟನಾಮಾತ್ರವಲ್ಲದೆ ವಾಸ್ತವವಲ್ಲವಾದುದರಿಂದ ಕರ್ಮವಶ್ಯತ್ವವು ಇವನಿಗೆ ಉಂಟಾಗಲಾರದು. ಇದೇ ಅರ್ಥವನ್ನು—"**ಅಜಾಯಮಾನೋ ಬಹುಧಾ ವಿಜಾಯತೇ, ಸ ಉ ಶ್ರೇಯಾನ್ ಭವತಿ ಜಾಯಮಾನಃ, ನ ಮೇ ಪಾರ್ಥಾಸ್ತಿ ಕರ್ತವ್ಯಂ, ಧರ್ಮಸಂಸ್ಥಾಪನಾರ್ಥಾಯ, ಇಚ್ಛಾಗೃಹೀತಾಭಿಮತೋರುದೇಹಃ**" ಇವೇ ಮೊದಲಾದ ಶ್ರುತಿಸ್ಮೃತಿಗಳು ತೋರಿಸುತ್ತಿರುವುವು. ಆದುದರಿಂದಲೇ ಇವನಿಗೆ ಜಗತ್ಕಾರಣತ್ವವನ್ನು ಸ್ಥಿರಪಡಿಸುವುದಕ್ಕೋಸ್ಕರ "**ಹ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ**" ಎಂಬುದಾಗಿ ಲಕ್ಷ್ಮೀಪತಿತ್ವವನ್ನು ಶ್ರುತಿ ಉದ್ಘೋಷಿಸುತ್ತಿರುವುದು.

ಆದುದರಿಂದಲೇ—"**ಹಿರಣ್ಯಗರ್ಭಸ್ಸಮವರ್ತತಾಗ್ರೇ ಭೂತಸ್ಯ ಜಾತಃ ಪತಿರೇಕ ಆಸೀತ್, ಕಾರಣಂ ತು ಧ್ಯೇಯಃ, ಸರ್ವೈಶ್ವರ್ಯಸಂಪನ್ನಸ್ಸರ್ವೇಶ್ವರಶ್ಶಂಭುರಾಕಾಶಮಧ್ಯೇ ಧ್ಯೇಯಃ,** ಇತ್ಯಾದಿವಾಕ್ಯಗಳಲ್ಲಿ—ಹಿರಣ್ಯಗರ್ಭ-ರುದ್ರ-ಮೊದಲಾದ ದೇವತಾಂತರಗಳಲ್ಲಿಯೂ—ಕಾರಣತ್ವವೂ ಮುಮುಕ್ಷುಧ್ಯೇಯತ್ವವೂ ಶ್ರುತವಾಗಿರುವುದರಿಂದ ದೇವತಾಂತರಗಳಲ್ಲಿಯೂ ಪರ್ಯವಸಾನವು ಸಂಭವಿಸುವುದಾಗಿರುವಲ್ಲಿ ನಾರಾಯಣನಲ್ಲಿಯೇ ಪರ್ಯವಸಾನವೆಂದು ಹೇಳುವುದು ಹೇಗೆ?" ಎಂಬ ಆಶಂಕೆಯೂ ಪರಿಹೃತವಾಗಿರುವುದು. ಆ ವಾಕ್ಯಗಳಲ್ಲಿರುವ ಹಿರಣ್ಯಗರ್ಭರುದ್ರಶಬ್ದಗಳು ತತ್ತದಂತರ್ಯಾಮಿಯಾದ ನಾರಾಯಣನನ್ನೇ ತೋರಿಸುವುವಷ್ಟೆ?

ಪರಮಾತ್ಮಪ್ರಕರಣದಲ್ಲಿರುವ ಸಕಲವಾಕ್ಯಗಳಿಗೂ ಐಕಕಂಠ್ಯವನ್ನು ಒಪ್ಪುವುದಕ್ಕಾಗಿ ಒಂದು ನ್ಯಾಯವನ್ನು ತಿಳಿದುಕೊಳ್ಳಬೇಕು. ಹೇಗೆಂದರೆ—"ಪರಮಾತ್ಮಪ್ರಕರಣದಲ್ಲಿ ಪರಮಾತ್ಮನೇ ಮುಖ್ಯವೃತ್ತಿಯಿಂದ ಪ್ರತಿಪಾದ್ಯನಾಗಿರುವನಲ್ಲದೆ ಜೀವನು ಪ್ರತಿಪಾದ್ಯನಾಗುವುದಿಲ್ಲ. ಒಂದುವೇಳೆ ಜೀವವಾಚಕಶಬ್ದಗಳು ಅಲ್ಲಿ ಪ್ರಯುಕ್ತಗಳಾಗಿದ್ದರೆ ಅವುಗಳಿಗೂ ಅವಯವವ್ಯುತ್ಪತ್ತಿನಿರ್ವಚನದಿಂದ ಪರಮಾತ್ಮನಲ್ಲಿಯೇ ಪರ್ಯವಸಾನವನ್ನು ಹೇಳಬೇಕು. ಒಂದುವೇಳೆ ಆ ಪ್ರಕರಣದಲ್ಲಿ ಜೀವನಿಗೇ ಸಂಬಂಧಿಸುವ ಅನನ್ಯಥಾಸಿದ್ಧಗಳಾದ ಲಿಂಗಗಳು ದೊರೆವುವಾಗಿದ್ದರೆ ಆಗ ಅಂಥ ಜೀವವಾಚಕಶಬ್ದಗಳಿಗೆ ಜೀವಶರೀರಕನಾದ ಪರಮಾತ್ಮನಲ್ಲಿ ಪರ್ಯವಸಾನವನ್ನು ಹೇಳಬೇಕು. ಅಂತು ಅದು ಪರಮಾತ್ಮಪ್ರಕರಣವೇ ಆಗುವುದು"

ಹೀಗೆ ದೇವತಾಂತರಕ್ಕೆ ಜಗತ್ಕಾರಣತ್ವಾದಿಗಳು ಸಂಭವಿಸುವವಲ್ಲವಾದುದರಿಂದ ಪರತ್ವವಿಲ್ಲವೆಂಬುದನ್ನೂ, ನಾರಾಯಣನಿಗೇ ಸರ್ವಸ್ಮಾತ್ಪರತ್ವವೂ ಅತಏವ ಜಗತ್ಕಾರಣತ್ವವೂ ಮುಮುಕ್ಷೂಪಾಸ್ಯತ್ವವೂ ಸರ್ವಾಂತರ್ಯಾಮಿತ್ವವೂ ಸಂಭವಿಸುವುವೆಂಬುದನ್ನೂ, ಸಂಕ್ಷೇಪವಾಗಿ ತೋರಿಸಿದೆವು.

## ೫೭೪. ನಾರಾಯಣಸ್ಯೈವ ಪರತ್ವೋಪಪಾದಕಃ ಪ್ರಶ್ನೋತ್ತರ ಸಂವಾದಃ.

ಈ ಸಂದರ್ಭದಲ್ಲಿ ಸಕಲಾರ್ಥಗಳನ್ನೂ ಕ್ರೋಡೀಕರಿಸಿ ಪೂರ್ವಾಚಾರ್ಯರಿಂದ ಅನುಗೃಹೀತವಾಗಿರುವ ಒಂದು ಪದ್ಯವನ್ನು ಉಕ್ತವಾದ ಅರ್ಥಸ್ವರೂಪದ ಧಾರಣೆಯುಂಟಾಗುವುದಕ್ಕಾಗಿ ಇಲ್ಲಿ ಬರೆದು ತೋರಿಸುವೆವು.—

**"ಕಸ್ತ್ವಂ ತತ್ತ್ವವಿದಸ್ಮಿ ವಸ್ತು ಪರಮಂ ಕಿಂ ತರ್ಹಿ ವಿಷ್ಣುಃ ಕಥಂ**
**ತತ್ತ್ವೇದಂಪರತೈತ್ತಿರೀಯಕಮುಖತ್ರಯ್ಯಂತಸಂದರ್ಶನಾತ್ ॥**
**ಅನ್ಯಾಸ್ತರ್ಹಿ ಗಿರಃ ಕಥಂ ಗುಣವಶಾದತ್ರಾಹ ರುದ್ರಃ ಕಥಂ**
**ತದ್ದೃಷ್ಟ್ಯಾ ಕಥಮುದ್ಭವತ್ಯವತರತ್ಯನ್ಯತ್ಕಥಂ ನೀಯತಾಂ ॥**

ಈ ಪದ್ಯದ ಅಭಿಪ್ರಾಯವೇನೆಂದರೆ—ಈ ಪದ್ಯವು ಪ್ರಶ್ನೋತ್ತರರೂಪವಾಗಿರುವುದು; ಇದರಲ್ಲಿ ಮೊದಲು—"**ಕಸ್ತ್ವಂ**" ಎಂಬುದು ಪ್ರಶ್ನವಾಕ್ಯವು ನೀನು ಯಾರೆಂದು ಇದರ ಅರ್ಥವು. ಅನಂತರದಲ್ಲಿ—"**ತತ್ತ್ವವಿದಸ್ಮಿ**" ಎಂಬುದು ಉತ್ತರವಾಕ್ಯವು; ತತ್ತ್ವವನ್ನು ತಿಳಿದವನಾಗಿರುತ್ತೇನೆ ಎಂದು ಇದರ ಅರ್ಥವು.

ಅನಂತರದಲ್ಲಿ—"**ವಸ್ತು ಪರಮಂ ಕಿಂ ತರ್ಹಿ**" ಎಂದು ಪ್ರಶ್ನವಾಕ್ಯವು; ಆದರೆ ಉತ್ಕೃಷ್ಟವಾದ ತತ್ತ್ವವು ಯಾವುದೆಂದು ಇದರ ಅರ್ಥವು. "**ವಿಷ್ಣುಃ**" ಎಂದು ಉತ್ತರವಾಕ್ಯವು; ವ್ಯಾಪಕತ್ವಗುಣವಿಶಿಷ್ಟನಾದ ನಾರಾಯಣನೇ ಉತ್ಕೃಷ್ಟತತ್ತ್ವವೆನಿಸಿಕೊಳ್ಳುವನೆಂದು ಇದರ ಅರ್ಥವು.

ಪುನಃ "**ಕಥಂ**" ಎಂಬುದಾಗಿ ಪ್ರಶ್ನವಾಕ್ಯವು. ನಾರಾಯಣನೇ ಉತ್ಕೃಷ್ಟತತ್ತ್ವವೆನಿಸಿಕೊಳ್ಳುವನೆಂದು ನಿಷ್ಕರ್ಷಿಸುವ ಬಗೆ ಹೇಗೆ ಎಂದು ಇದರ ಅರ್ಥವು. ಅನಂತರದಲ್ಲಿ—"**ತತ್ತ್ವೇದಂಪರತೈತ್ತಿರೀಯಕಮುಖತ್ರಯ್ಯಂತಸಂದರ್ಶನಾತ್**" ಎಂದು ಉತ್ತರವಾಕ್ಯವು; ಇದರ ಅರ್ಥವೇನೆಂದರೆ—"ಕೇವಲ ತತ್ತ್ವನಿರ್ಣಯಕ್ಕಾಗಿಯೇ ಹೊರಟಿರುವ ನಾರಾಯಣಾನುವಾಕದಲ್ಲಿ-

" ಸಹಸ್ರಶೀರ್ಷಂ ದೇವಂ ವಿಶ್ವಾಕ್ಷಂ ವಿಶ್ವಶಂಭುವಂ ।
ವಿಶ್ವಂ ನಾರಾಯಣಂ ದೇವಮಕ್ಷರಂ ಪರಮಂ ಪ್ರಭುಂ "

ಇತ್ಯಾದಿಮಂತ್ರಗಳಿಂದ ಪುರುಷಸೂಕ್ತವೇ ಮೊದಲಾದ ಸಕಲಬ್ರಹ್ಮ ವಿದ್ಯಾಪ್ರಕರಣಗಳಲ್ಲಿಯೂ ಪ್ರತಿಪಾದ್ಯನಾಗಿರುವ ಪುರುಷನನ್ನು ಆ ಆ ಶಬ್ದ ಗಳಿಂದ ಜ್ಞಾಪಕಪಡಿಸಿ ಅವನಲ್ಲಿ ಪುನಃಪುನಃ ನಾರಾಯಣತ್ವವನ್ನು ಅಭ್ಯಾಸ ರೂಪವಾಗಿ ಹೇಳಿರುವುದು; ಆದುದರಿಂದ ಪರವಿದ್ಯಾಪ್ರಕರಣದಲ್ಲಿ ಎಲ್ಲೆಲ್ಲಿ " ಪರಬ್ರಹ್ಮ-ಪರತತ್ತ್ವ-ಪರಜ್ಯೋತಿಃ-ಪರಮಾತ್ಮ " ಮೊದಲಾದ ಶಬ್ದ ಗಳು ಪ್ರಯೋಗಿಸಲ್ಪಟ್ಟಿರುವುವೋ ಅಲ್ಲಲ್ಲಿ ಸರ್ವತ್ರ ನಾರಾಯಣನೇ ಪ್ರತಿಪಾದ್ಯ ನಾಗಿರುವನೆಂದು ನಿಶ್ಚಯಿಸಲ್ಪಡುವುದು " ಎಂಬುದು ಈ ಉತ್ತರವಾಕ್ಯದ ಅರ್ಥ ವಾಗಿರುವುದು.

ಹೀಗೆ ಪೂರ್ವಾರ್ಧದಲ್ಲಿ ಅಡಗಿರುವ ಮೂರು ಪ್ರಶ್ನವಾಕ್ಯಗಳಿಗೂ ಮೂರು ಉತ್ತರವಾಕ್ಯಗಳಿಗೂ ಅರ್ಥವನ್ನು ತೋರಿಸಿದೆವು. ಇನ್ನು ಉತ್ತರಾ ರ್ಧವನ್ನು ನಿರೀಕ್ಷಿಸೋಣ. " ಅನ್ಯಾಸ್ತರ್ಹಿ ಗಿರಃ ಕಥಂ " ಎಂಬುದಾಗಿ ಪ್ರಶ್ನ ವಾಕ್ಯವು ; ಹೀಗೆ ನಾರಾಯಣನೇ ಸರ್ವೋತ್ಕೃಷ್ಟತತ್ತ್ವವೆಂದು ನಿಷ್ಕರ್ಷಿಸಿಬಿಟ್ಟರೆ " ಇಂದ್ರೋ ಮಾಯಾಭಿಃ ಪುರುರೂಪ ಈಯತೇ ನ ಸನ್ನ ಚಾಸಚ್ಛಿವ ಏವ ಕೇವಲಃ " ಎಂಬುದಾಗಿ ಇಂದ್ರ-ರುದ್ರಾದಿಗಳನ್ನೇ ತತ್ತ್ವವಾಗಿ ಉಪದೇ ಶಿಸುವ ವಾಕ್ಯಗಳ ಗತಿಯೇನು ? ಎಂದು ಈ ಪ್ರಶ್ನವಾಕ್ಯದ ಅರ್ಥವು. " ಗುಣ ವಶಾತ್ " ಎಂದು ಉತ್ತರವಾಕ್ಯವು ; " ಇದಿ ಪರಮೈಶ್ವರ್ಯೇ " ಎಂಬ ಧಾತು ವಿನಿಂದ ಹುಟ್ಟಿದ ಇಂದ್ರಶಬ್ದವೂ ಪರಮೈಶ್ವರ್ಯಗುಣವುಳ್ಳ ನಾರಾಯಣನನ್ನೇ ಹೇಳುವುದೆಂದೂ, ಮಂಗಳತ್ವಗುಣಸಂಬಂಧದಿಂದ ಶಿವಶಬ್ದವೂ ನಾರಾಯಣನನ್ನೇ ಹೇಳುವುದೆಂದೂ ಅಂಗೀಕರಿಸುವೆವಾದುದರಿಂದ ಇಂದ್ರ-ಶಿವಾದಿಪದಸಂಯುಕ್ತ ಗಳಾದ ವಾಕ್ಯಾಂತರಗಳಿಗೆ ಯಾವ ಅನುಪಪತ್ತಿಯೂ ಇಲ್ಲವೆಂದು ಪ್ರತ್ಯುತ್ತರ ವಾಕ್ಯದ ಅರ್ಥವು.

" ಅತ್ರಾಹ ರುದ್ರಃ ಕಥಂ " ಎಂಬುದಾಗಿ ಪುನಃ ಪ್ರಶ್ನವಾಕ್ಯವು; ಇದರ ಅರ್ಥವೇನೆಂದರೆ—" ಹೀಗೆ ಇಂದ್ರಶಿವಾದಿಶಬ್ದಗಳು ನಾರಾಯಣನಲ್ಲಿಯೇ ಪರ್ಯವಸಾನವನ್ನು ಹೊಂದುವುವಾದರೆ ನಾರಾಯಣನೇ ಜಗತ್ಕಾರಣವೆಂದು ಹೇಳುವುದೇ ನ್ಯಾಯವಾಗಿದ್ದರೂ ಅದನ್ನು ಬಿಟ್ಟು ಅಥರ್ವಶಿರಸ್ಸಿನಲ್ಲಿ ರುದ್ರನು— " ಅಹಮೇಕಃ ಪ್ರಥಮಮಾಸಂ ವರ್ತಾಮಿ ಚ ಭವಿಷ್ಯಾಮಿ ಚ " ಎಂಬ ವಾಕ್ಯದಲ್ಲಿ ತನ್ನನ್ನೇ ಜಗತ್ಕಾರಣವಾಗಿ ನಿರ್ದೇಶಮಾಡುವುದು ಹೇಗೆ ಸಂಗತ

ಪಾದೀತು ? ಎಂದು ಈ ಪ್ರಶ್ನವಾಕ್ಯದ ಅರ್ಥವು. ಇದಕ್ಕೆ "ತದ್ದೃಷ್ಟ್ಯಾ" ಎಂಬುದಾಗಿ ಪ್ರತ್ಯುತ್ತರವು ; ರುದ್ರನು ತನ್ನನ್ನು ಶರೀರವನ್ನಾಗಿ ಪಡೆದ ಅಂತ ರ್ಯಾಮಿಯಾದ ಪರಮಾತ್ಮನನ್ನು ಅನುಸಂಧಿಸುತ್ತ ಅಹಂಶಬ್ದಪ್ರಯೋಗವನ್ನು ಮಾಡಿರುವನಾದುದರಿಂದ ಈ ವಾಕ್ಯಕ್ಕೂ ಯಾವುದೊಂದು ಅನುಪಪತ್ತಿಯೂ ಇಲ್ಲವೆಂದು ಇದರ ಅರ್ಥವು.

ಪುನಃ—"ಕಥಮುದ್ಭವತಿ" ಎಂದು ಪ್ರಶ್ನವಾಕ್ಯವು; ಹೀಗೆ ನಾರಾ ಯಣನೇ ತತ್ತ್ವವೆನಿಸಿಕೊಳ್ಳುವನಾದರೆ ಇವನು ಉತ್ಪತ್ತಿಶೂನ್ಯನಾಗಿರಬೇಕಲ್ಲವೆ? ಹೀಗಿದ್ದರೂ "ಬ್ರಹ್ಮವಿಷ್ಣುರುದ್ರೇಂದ್ರಾಸ್ತೇ ಸರ್ವೇ ಸಂಪ್ರಸೂಯಂತೇ" ಎಂಬ ವಾಕ್ಯದಲ್ಲಿ ಬ್ರಹ್ಮರುದ್ರೇಂದ್ರರಿಗೆ ಸಮಾನವಾಗಿ ಇವನಿಗೂ ಉತ್ಪತ್ತಿ ಯನ್ನು ಹೇಳಿರುವುದು ಹೇಗೆ ಸಂಗತವಾದೀತು ಎಂದು ಇದರ ಅರ್ಥವು. "ಅವ ತರತಿ" ಎಂಬುದು ಇದಕ್ಕೆ ಪ್ರತ್ಯುತ್ತರವಾಗಿರುವುದು; ಉಕ್ತವಾದ ವಾಕ್ಯ ದಲ್ಲಿ ವಿಷ್ಣುವಿಗೆ ಹೇಳಿರುವ ಉತ್ಪತ್ತಿ ಕರ್ಮವಶ್ಯರಾದ ಬ್ರಹ್ಮರುದ್ರೇಂದ್ರಾದಿ ಜೀವರ ಉತ್ಪತ್ತಿಯಂತೆ ಕರ್ಮಾಧೀನವಾಗಿ ಬಂದುದಲ್ಲ; ಸುಖದುಃಖಭೋಗಕ್ಕಾ ಗಿಯೂ ಬಂದುದಲ್ಲ; ಸ್ವೇಚ್ಛೆಯಿಂದ ಲೋಕೋಜ್ಜೀವನಕ್ಕಾಗಿ ಮಾಡಿದ ಅವ ತಾರರೂಪವಾಗಿರುವುದು; ಆದಕಾರಣ ತತ್ತ್ವವೆನಿಸಿಕೊಂಡ ನಾರಾಯಣನಿಗೆ ಉತ್ಪತ್ತಿರೂಪದೋಷವಿಲ್ಲವೆಂದು ಇದರ ಅರ್ಥವು.

ಪುನಃ—"ಅನ್ಯತ್ಕಥಂ" ಎಂಬುದಾಗಿ ಪ್ರಶ್ನವಾಕ್ಯವು; ಹೀಗೆ ನಾರಾಯಣನೇ ತತ್ತ್ವವೆನಿಸಿಕೊಂಡು ನಾರಾಯಣನೇ ಜಗತ್ಕಾರಣವೆನಿಸಿ ಕೊಂಡು, ನಾರಾಯಣನೇ ಬ್ರಹ್ಮವೆನಿಸಿಕೊಳ್ಳುವನಾದರೆ—ಶ್ವೇತಾಶ್ವತರೋಪ ನಿಷತ್ತಿನಲ್ಲಿ—ಶಿವಮಹೇಶ್ವರಾದಿಶಬ್ದಗಳಿಂದ ಹೇಳಲ್ಪಟ್ಟವನಿಗೆ ಬ್ರಹ್ಮತ್ವವನ್ನು ಹೇಳುವ ವಾಕ್ಯದ ಗತಿಯೇನು ಎಂದು ಇದರ ಅರ್ಥವು. "ನೀಯತಾಂ" ಎಂಬುದು ಇದಕ್ಕೆ ಪ್ರತ್ಯುತ್ತರವಾಗಿರುವುದು. ಪುರುಷಸೂಕ್ತವನ್ನು ಜ್ಞಾಪಕ ಪಡಿಸುವ ಅನೇಕಪದಗಳು ಈಶ್ವೇತಾಶ್ವತರಪ್ರಕರಣದಲ್ಲಿ ಪಠಿತಗಳಾಗಿರುವುದರಿಂದ ಅವುಗಳನ್ನು ಅನುಸರಿಸಿ ಶಿವಮಹೇಶ್ವರಾದಿಶಬ್ದಗಳಿಗೂ ನಾರಾಯಣನಲ್ಲಿ ಪರ್ಯ ವಸಾನವನ್ನು ಹೇಳಿ ಸರ್ವವಾಕ್ಯಗಳನ್ನೂ ನಿರ್ವಹಿಸಬೇಕೆಂದು ಇದರ ಅರ್ಥವು.

ಅಂತು ಪರಮಕಾರಣತ್ವವೂ, ಮುಮುಕ್ಷೂಪಾಸ್ಯತ್ವವೂ, ಸರ್ವಾಂತರ್ಯಾ ಮಿತ್ವವೂ ಶ್ರೀಮನ್ನಾರಾಯಣನಿಗೇ ಸಲ್ಲುವುವಲ್ಲದೆ ಮತ್ತೊಬ್ಬರಿಗೆ ಸಲ್ಲಲಾರವು.

ಆದುದರಿಂದಲೇ ಈ ಕೆಳಗೆ ತೋರಿಸುವ ಅವೈದಿಕಗಳಾದ ನಾಲ್ಕುಪಕ್ಷಗಳಿಗೂ ನಿರಾಕರಣವು ಸಿದ್ಧವಾಗಿರುವುದು.—

## ೫೭೫. ತ್ರಿಮೂರ್ತಿಸಾಮ್ಯಪಕ್ಷಾನುವಾದಃ.

ಹೇಗೆಂದರೆ—ಬ್ರಹ್ಮನು ವಿಷ್ಣುವು ಮಹೇಶ್ವರನು ಎಂಬ ಈ ಮೂವರು ಪರಸ್ಪರ ವಿಲಕ್ಷಣರಾಗಿ ಸಮಾನವಾದ ಅಧಿಕಾರವುಳ್ಳವರಾಗಿರುವುದರಿಂದ ಒಬ್ಬರಿಗೆ ಮತ್ತೊಬ್ಬರು ಕಡಮೆಯಾದವರಲ್ಲ. ಈ ಮೂವರೂ ಸಮಾನರಾಗಿ ಮೂವರೂ ಈಶ್ವರರೆನಿಸಿಕೊಳ್ಳುವರೆಂಬ ತ್ರಿಮೂರ್ತಿಸಾಮ್ಯಪಕ್ಷವು ಪ್ರಥಮ ಪಕ್ಷವಾಗಿರುವುದು.

## ೫೭೬. ತ್ರಿಮೂರ್ತ್ಯೈಕ್ಯಪಕ್ಷಾನುವಾದಃ.

ಒಬ್ಬನು ರಾಮಕೃಷ್ಣಾದ್ಯವತಾರಗಳನ್ನು ಮಾಡಿದನಾದರೆ ಆಗ ಅವನಿಗೆ ಶರೀರಗಳುಮಾತ್ರವೇ ಹೇಗೆ ಭಿನ್ನಭಿನ್ನಗಳಾಗಿ ಆತ್ಮಸ್ವರೂಪವು ಭಿನ್ನವಲ್ಲವೋ— ಆದರಂತೆ ಬ್ರಹ್ಮ-ವಿಷ್ಣು-ಮಹೇಶ್ವರರೆಂಬ ತ್ರಿಮೂರ್ತಿಗಳೊಳಗೆ ಶರೀರಮಾತ್ರವು ಭಿನ್ನಭಿನ್ನವಾಗಿರುವುದಲ್ಲದೆ ಆತ್ಮಸ್ವರೂಪವು ಭಿನ್ನಭಿನ್ನವಲ್ಲ; ಆದುದರಿಂದ ತ್ರಿಮೂರ್ತಿಗಳಿಗೆ ಐಕ್ಯವನ್ನೇ ಒಪ್ಪಿಕೊಳ್ಳುವುದು ಉಚಿತವೆಂಬುದು ದ್ವಿತೀಯಪಕ್ಷವಾಗಿರುವುದು.

## ೫೭೭. ತತ್ತ್ವಸ್ಯ ತ್ರಿಮೂರ್ತ್ಯುತ್ತೀರ್ಣತ್ವಪಕ್ಷಾನುವಾದಃ.

ತ್ರಿಮೂರ್ತಿಗಳಿಗಿಂತಲೂ ಭಿನ್ನನಾದವನೊಬ್ಬನು ಅಥವಾ ಚಿನ್ಮಾತ್ರವಸ್ತು ಪರತತ್ತ್ವವೆನಿಸಿಕೊಳ್ಳಬಹುದಲ್ಲದೆ ತ್ರಿಮೂರ್ತಿಗಳೊಳಗೆ ಒಬ್ಬನೂ ಪರತತ್ತ್ವವೆನಿಸಿಕೊಳ್ಳಲಾರನೆಂಬ ತ್ರಿಮೂರ್ತ್ಯುತ್ತೀರ್ಣತ್ವಪಕ್ಷವು ತೃತೀಯಪಕ್ಷವಾಗಿರುವುದು.

## ೫೭೮. ನಾರಾಯಣಭಿನ್ನಸ್ಯೈವ ಪರತ್ವಪಕ್ಷಾನುವಾದಃ.

ಬ್ರಹ್ಮನಾಗಲಿ ರುದ್ರನಾಗಲಿ ಪರತತ್ತ್ವವಾಗಿರಬಹುದು; ಅಥವಾ ತ್ರಿಮೂರ್ತಿಗಳಿಗಿಂತಲೂ ಅತಿರಿಕ್ತನಾದವನೊಬ್ಬನು ಪರತತ್ತ್ವವಾಗಿರಬಹುದು. ಹೇಗಾದರೂ ಸರಿ—ಅಂಥ ಪರತತ್ತ್ವವೆನಿಸಿಕೊಳ್ಳತಕ್ಕವನು ವಿಷ್ಣುಭಿನ್ನನಾಗಿರಬೇಕಲ್ಲದೆ ವಿಷ್ಣುವು ಎಂದಿಗೂ ಪರತತ್ತ್ವವೆನಿಸಿಕೊಳ್ಳಲಾರನೆಂಬುದು ಚತುರ್ಥಪಕ್ಷವಾಗಿರುವುದು.

**೫೭೯. ಅನೂದಿತಪಕ್ಷಚತುಷ್ಟಯಸ್ಯಾಪಿ ಅವೈದಿಕತ್ವೇನ ನಾರಾಯಣಸ್ಯೈವ ಪರತ್ವೋಪಸಂಹಾರಃ.**

ಹಿಂದೆ ತೋರಿಸಿದಂತೆ ಪರಮಕಾರಣತ್ವವೂ ಮುಮುಕ್ಷೂಪಾಸ್ಯತ್ವವೂ ಸರ್ವಾಂತರ್ಯಾಮಿತ್ವವೂ ಶ್ರೀಮನ್ನಾರಾಯಣನಿಗೇ ಅಸಾಧಾರಣಧರ್ಮಗಳೆಂದು ಸಕಲಶ್ರುತಿಗಳಿಂದಲೂ ಅಪ್ರಕಂಪ್ಯವಾಗಿ ಸಿದ್ಧವಾಗಿರುವುದರಿಂದ ಈಗ ಹೇಳಿದ ನಾಲ್ಕು ಪಕ್ಷಗಳೂ ಮೂಲಪ್ರಮಾಣಶೂನ್ಯಗಳಾಗಿಯೂ ಸ್ವಕಪೋಲಕಲ್ಪಿತಗಳಾಗಿಯೂ ಅವೈದಿಕಗಳಾಗಿಯೂ ಇರುವುವೆಂದು ಸುಸ್ಪಷ್ಟವಾಗಿರುವುದು. ಆದಕಾರಣ ಶ್ರೀಮನ್ನಾರಾಯಣನೇ ಸರ್ವಸ್ಮಾತ್ಪರನೆಂಬುದೇ ವೇದಾಂತಸಿದ್ಧಾಂತವು.

**ಇಂತು ತತ್ತ್ವಶುದ್ಧಿಯೆಂಬ ವಿಶಿಷ್ಟಾದ್ವೈತಪ್ರಕರಣಗ್ರಂಥದೊಳ್ ಈಶ್ವರಪರಿಚ್ಛೇದದಲ್ಲಿ ಶ್ರೀಮನ್ನಾರಾಯಣನಿಗೆ ಸರ್ವಸ್ಮಾತ್ಪರತ್ವನಿರೂಪಣ.**

**ಪ್ರಕರಣಂ ತೃತೀಯಂ ॥೩॥**

## ಚತುರ್ಥಪ್ರಕರಣಂ.

**೫೮೦. ಸರ್ವೇಷ್ವಪಿ ವಸ್ತುಷು ಈಶ್ವರಸ್ಯ ಪರಿಪೂರ್ಣತಯಾ ವೃತ್ತಿಃ**

ಇಂಥ ಸರ್ವೇಶ್ವರನು ಬ್ರಹ್ಮ-ವಿಷ್ಣು-ಮಹೇಶ್ವರರೆಂಬ ತ್ರಿಮೂರ್ತಿಗಳಲ್ಲಿಯೂ ಪರಿಪೂರ್ಣನಾಗಿಯೇ ಇರುವನಲ್ಲದೆ ಹೆಚ್ಚುಕಡಮೆಯಾಗಿಲ್ಲ; ಎಂದರೆ ಪ್ರತಿಯೊಂದು ಪದಾರ್ಥದಲ್ಲಿಯೂ ಏಕತ್ವಸಂಖ್ಯೆ ಹೇಗೆ ಪರಿಪೂರ್ಣವಾಗಿ ಪರ್ಯಾಪ್ತಿಸಂಬಂಧದಿಂದಿರುವುದೋ ಅದರಂತೆ ಈಶ್ವರನೂ ಪ್ರತಿಯೊಂದರಲ್ಲಿಯೂ ಪರ್ಯಾಪ್ತಿಸಂಬಂಧದಿಂದ ಇರುವನಲ್ಲದೆ ದ್ವಿತ್ವಾದಿಸಂಖ್ಯೆಗಳಂತೆ ವ್ಯಾಸಜ್ಯವೃತ್ತಿಸಂಬಂಧದಿಂದ ಇಲ್ಲ.

**೫೮೧. ಪ್ರಜಾಪತಿ-ಪಶುಪತಿ-ಮೂರ್ತ್ಯೋರ್ಜೀವವ್ಯವಧಾನೇನ ವಿಷ್ಣುಮೂರ್ತಾವವ್ಯವಧಾನೇನ ಚ ಪರಮಾತ್ಮನೋ ವೃತ್ತಿಃ.**

“ಹಾಗಾದರೆ ತ್ರಿಮೂರ್ತಿಗಳಿಗೆ ಸಾಮ್ಯವು ಪ್ರಸಕ್ತವಾದೀತು” ಎಂದು ಆಶಂಕಿಸ ಕೆಲಸವಿಲ್ಲ. ತ್ರಿಮೂರ್ತಿಗಳೊಳಗೆ ಪ್ರಜಾಪತಿಮೂರ್ತಿಯಲ್ಲಿಯೂ ಪಶುಪತಿಮೂರ್ತಿಯಲ್ಲಿಯೂ ಜೀವವಿಶೇಷವನ್ನು ವ್ಯವಧಾನಮಾಡಿಕೊಂಡು ಪರಿಪೂರ್ಣ

ನಾಗಿ ಪ್ರವೇಶಿಸಿರುವನೆಂದೂ, ವಿಷ್ಣುವೆಂಬ ಮೂರ್ತಿಯಲ್ಲಿ ಜೀವವ್ಯವಧಾನವಿಲ್ಲದೆ ತಾನೇ ಪರಿಪೂರ್ಣನಾಗಿ ಪ್ರವೇಶಿಸಿರುವನೆಂದೂ, ಪ್ರಮಾಣಗಳು ಮೊರೆಯಿಡುತ್ತಿರುವಲ್ಲಿ ತ್ರಿಮೂರ್ತಿಗಳಿಗೆ ಸಾಮ್ಯಪ್ರಸಕ್ತಿ ಹೇಗೆ ಉಂಟಾದೀತು. ಹೀಗೆಯೇ ಘಟಪಟಾದಿಸಮಸ್ತಪದಾರ್ಥಗಳಲ್ಲಿ ಪ್ರತಿಯೊಂದರಲ್ಲಿಯೂ ಜೀವವಿಶೇಷವನ್ನು ವ್ಯವಧಾನಮಾಡಿಕೊಂಡು ಪರಿಪೂರ್ಣನಾಗಿ ಇರುವನು.

**೫೮೨. ಅನ್ಯತ್ರ ವಿದ್ಯಮಾನಸ್ಯ ಅನ್ಯತ್ರ ಪೂರ್ಣತ್ವಕಥಂತಾಃ ಶಂಕಾ.**

ಪೂಜ್ಯರೆ! ಮತ್ತೊಂದುವಸ್ತುವಿನಲ್ಲಿಯೂ ಇರುವವನಿಗೆ ಈ ವಸ್ತುವಿನಲ್ಲಿ ಪರಿಪೂರ್ಣವೃತ್ತಿ ಸಂಭವಿಸಲಾರದಾಗಿರುವಲ್ಲಿ ಇಲ್ಲಿಯೂ ಪರಿಪೂರ್ಣವೃತ್ತಿಯನ್ನು ಹೇಗೆ ಹೇಳುವಿರಿ?

**೫೮೪. ಉಕ್ತಾಶಂಕಾಯಾಶ್ಚತುರ್ಧಾ ವಿಕಲ್ಪಃ.**

ಮತ್ತೊಂದುಕಡೆಯಲ್ಲಿಯೂ ಇರುವ ವಸ್ತುವಿಗೆ ಇಲ್ಲಿ ಪರಿಪೂರ್ಣವೃತ್ತಿಯನ್ನು ನಿಷೇಧಿಸುವ ನಿಮಗೆ ತಾತ್ಪರ್ಯವೇನು? ಇಲ್ಲಿಯೇ ಪೂರ್ಣವೃತ್ತಿಯಿಲ್ಲವೆಂದು ತಾತ್ಪರ್ಯವೋ? ಅಥವಾ ಇಲ್ಲಿ ಪರಿಪೂರ್ಣಜ್ಞಾನಕ್ಕೆ ಗೋಚರವಾಗುವುದಿಲ್ಲವೆಂದು ತಾತ್ಪರ್ಯವೋ? ಅಥವಾ ಇಲ್ಲಿ ಪರಿಪೂರ್ಣವಾದ ಕಾರ್ಯೋತ್ಪಾದನೆಗೆ ಸಮರ್ಥವಾಗಲಾರದೆಂದು ತಾತ್ಪರ್ಯವೋ? ಅಥವಾ ಇಲ್ಲಿ ಪರಿಪೂರ್ಣಗುಣವಿಶಿಷ್ಟವಾಗಲಿಲ್ಲವೆಂದು ತಾತ್ಪರ್ಯವೋ?

**೫೮೫. ಅತ್ರೈವ ವಿದ್ಯಮಾನತ್ವಂ ಪ್ರತಿಷಿಧ್ಯತ ಇತಿ ಪ್ರಥಮವಿಕಲ್ಪೇ ಇಷ್ಟಾಪತ್ತಿಃ.**

ಇವುಗಳೊಳಗೆ ಮೊದಲನೆಯ ತಾತ್ಪರ್ಯವನ್ನು ನೀವು ಹೇಳುವುದಾದರೆ ಸರ್ವವ್ಯಾಪಕನಾದವನಿಗೆ ಎಲ್ಲೆಲ್ಲಿಯೂ ಪರಿಪೂರ್ಣವೃತ್ತಿಯನ್ನು ಒಪ್ಪುತ್ತಿರುವ ನಮ್ಮ ಮತಕ್ಕೆ "ಇಲ್ಲಿಯೇ ಪರಿಪೂರ್ಣವೃತ್ತಿಯಿಲ್ಲ" ಎಂದು ಹೇಳುವ ನಿಮ್ಮ ತಾತ್ಪರ್ಯವು ಅನುಕೂಲವಾಗಿಯೇ ಇರುವುದಲ್ಲದೆ ಅನಿಷ್ಟವಾಗಿಲ್ಲ. ಇಲ್ಲಿಯೇ ಪರಿಪೂರ್ಣವೃತ್ತಿಯುಂಟೆಂದು ನಾವು ಹೇಳುವುದಾಗಿದ್ದರಲ್ಲವೆ ಇಲ್ಲಿ ಪರಿಪೂರ್ಣವೃತ್ತಿ ಇಲ್ಲವೆಂದು ಹೇಳುವ ನಿಮ್ಮ ಮಾತು ಅನಿಷ್ಟವಾದೀತು?

**೫೮೫. ಅತ್ರ ಪರಿಪೂರ್ಣೋಪಲಬ್ಧಿವಿಷಯತ್ವಂ ಪ್ರತಿಷಿಧ್ಯತ ಇತಿ ದ್ವಿತೀಯಪಕ್ಷೇ ತ್ರೇಧಾ ವಿಕಲ್ಪಃ.**

"ಇಲ್ಲಿ ಪರಿಪೂರ್ಣಜ್ಞಾನಕ್ಕೆ ಗೋಚರವಾಗುವುದಿಲ್ಲ" ಎಂಬ ಎರಡನೆಯ ತಾತ್ಪರ್ಯವನ್ನು ಹೇಳುವುದಾದರೆ ಅದರಲ್ಲಿ "ಇಲ್ಲಿ ಸ್ವರೂಪವು ಜ್ಞಾನಕ್ಕೆ ಗೋಚರ

ವಾಗುವುದಿಲ್ಲ" ಎಂದು ಅಭಿಪ್ರಾಯವೋ ? "ಇಲ್ಲಿ ಕೃತ್ಸ್ನಭಾಗವು ಗೋಚರವಾಗುವುದಿಲ್ಲ" ಎಂದು ಅಭಿಪ್ರಾಯವೋ ? "ಇಲ್ಲಿ ಅಂಶವು ಗೋಚರವಾಗಲಿಲ್ಲವೆಂಬುದಿಲ್ಲ" ಎಂದು ಅಭಿಪ್ರಾಯವೋ ?

**೫೮೬. ಸ್ವರೂಪಾನುಪಲಂಭಸ್ಯ ಸಾಮಗ್ರ್ಯಭಾವಪ್ರಯುಕ್ತತ್ವಾದಾದ್ಯವಿಕಲ್ಪಸ್ಯಾಪ್ರಯೋಜಕತ್ವಂ.**

ಇಲ್ಲಿ ಮೊದಲನೆಯ ಅಭಿಪ್ರಾಯವು ಸಂಗತವಲ್ಲ; ಏತಕ್ಕೆಂದರೆ ಸ್ವರೂಪವು ಜ್ಞಾನಕ್ಕೆ ಗೋಚರವಾಗುವುದಕ್ಕಾಗಿ ಯಾವ ಸಾಮಗ್ರಿ ಬೇಕಾಗಿರುವುದೋ ? ಆ ಸಾಮಗ್ರಿ ಇಲ್ಲದಿರುವಾಗ ಸ್ವರೂಪವು ಜ್ಞಾನಕ್ಕೆ ಗೋಚರವಾಗಲಿಲ್ಲವೆಂಬುದು ದೋಷವಾಗುವುದಿಲ್ಲವಷ್ಟೆ? ಸಾಮಗ್ರಿ ಇರುತ್ತಿದ್ದರೆ ಸ್ವರೂಪವು ಜ್ಞಾನಕ್ಕೆ ಗೋಚರವಾಗುತ್ತಿದ್ದಿತಲ್ಲವೆ?

**೫೮೭. ದ್ವಿತೀಯವಿಕಲ್ಪೇಽಪಿ ಸಾವಯವತ್ವಪಕ್ಷೇ ನಿರವಯವತ್ವಪಕ್ಷೇ ಚೇಷ್ಟಾಪತ್ತಿಃ**

"ಇಲ್ಲಿ ಕೃತ್ಸ್ನಭಾಗವು ಗೋಚರವಾಗುವುದಿಲ್ಲ" ಎಂಬ ಎರಡನೆಯ ಅಭಿಪ್ರಾಯದಲ್ಲಿ—ಈಶ್ವರನಿಗೆ ಸಾವಯವತ್ವವನ್ನು ಒಪ್ಪಿಕೊಂಡು ಇಲ್ಲಿ ಕೃತ್ಸ್ನಾವಯವವು ಗೋಚರವಾಗುವುದಿಲ್ಲವೆಂದು ಹೇಳುವುದಾದರೆ ಏತತ್ಪದಾರ್ಥಾಸಂಬಂಧಿಗಳಾದ ಅವಯವಗಳೂ ಕೆಲವು ಉಂಟೆಂದು ಸಿದ್ಧವಾದುದರಿಂದ ಇಲ್ಲಿ ಕೃತ್ಸ್ನಾವಯವವೂ ಗೋಚರವಾಗದಿದ್ದುದು ತಪ್ಪಿತವಲ್ಲ; ನಿರವಯವತ್ವವನ್ನು ಒಪ್ಪಿಕೊಂಡು ಇಲ್ಲಿ ಕೃತ್ಸ್ನಾವಯವವು ಗೋಚರವಾಗುವುದಿಲ್ಲವೆಂದು ಹೇಳುವುದಾದರೆ ನಿರವಯವವಸ್ತುವಿನ ಅವಯವವು ಗೋಚರವಾಗಲಿಲ್ಲವೆಂಬುದು ಸುತರಾಂ ದೋಷವಲ್ಲ.

**೫೮೮. ತೃತೀಯವಿಕಲ್ಪೇ ತು ನಿರಂಶೇ ವಸ್ತುನ್ಯಂಶಾನುಪಲಬ್ಧೇರ್ನಿರಂಶತ್ವಪ್ರಯುಕ್ತತ್ವಾದದೋಷಃ**

"ಅಂಶವು ಗೋಚರವಾಗಲಿಲ್ಲವೆಂಬುದಿಲ್ಲ" ಎಂಬ ಮೂರನೆಯ ಅಭಿಪ್ರಾಯವನ್ನು ಹೇಳುವಿರಾದರೆ—ನಿರಂಶವಾದ ವಸ್ತುವಿನಲ್ಲಿ ಅಂಶವು ಗೋಚರವಾಗಲಿಲ್ಲವೆಂಬುದು ತಪ್ಪಿತವಲ್ಲವಾದುದರಿಂದ ಅದನ್ನು ನಿಷೇಧಿಸಲಾಗುವುದಿಲ್ಲ. ಆದುದರಿಂದ ಎರಡನೆಯ ತಾತ್ಪರ್ಯವೂ ಸಂಗತವಲ್ಲ.

**೫೮೯. ವ್ಯಾಪ್ತ್ಯೇನ ಬಹುಸಂಬಂಧಿತ್ವೇನ ವ್ಯಾಪಕಸ್ಯ ಸಾವಯವತ್ವಸ್ಯ ಆಪತ್ತ್ಯಾಶಂಕಾ.**

ಪೂಜ್ಯರೆ! ಯಾವ ಪದಾರ್ಥಕ್ಕೆ ಅನೇಕಪದಾರ್ಥಗಳೊಡನೆ ಸಂಬಂಧವುಂಟೋ ಆ ಪದಾರ್ಥವು ಸಾವಯವವಾಗಿರಬೇಕೆಂದು ಲೋಕದಲ್ಲಿ ವ್ಯಾಪ್ತಿ

ಯಿರುವುದರಿಂದ ಈಶ್ವರಸಿಗೆ ಅನೇಕಪದಾರ್ಥಗಳೊಡನೆ ಸಂಬಂಧವನ್ನು ಒಪ್ಪುವು ಪಾದರೆ ಸಾವಯುವತ್ವವನ್ನು ಒಪ್ಪಬೇಕಾಗಿ ಬರುವುದಲ್ಲವೆ ? ಮತ್ತು ಆ ಆ ಪದಾರ್ಥಭಾಗದಲ್ಲಿ ಈಶ್ವರಸಿಗೆ ಅಂಶತ್ವವು ಅವರ್ಜನೀಯವಾಗಿರುವುದಲ್ಲವೆ ? ಎಂದು ಆಶಂಕಿಸಬಾರದು.—

## ೫೪೦. ದ್ರವ್ಯಜಾತ್ಯಾದಿಷು ವ್ಯಭಿಚಾರಾದುಕ್ತಯೋರ್ದ್ವಯೋರ್ವ್ಯಾಪ್ಯವ್ಯಾಪಕಭಾವಾಭಾವಃ

ಒಂದು ಪದಾರ್ಥಕ್ಕೆ ಅನೇಕಪದಾರ್ಥಗಳೊಡನೆ ಸಂಬಂಧವಿದ್ದಮಾತ್ರಕ್ಕೆ ಆ ಪದಾರ್ಥವು ಸಾವಯುವವಾಗಿಯೇ ಇರಬೇಕೆಂಬ ನಿರ್ಬಂಧವು ಲೋಕದಲ್ಲಿಲ್ಲ. ಪರಮಾಣುವೆಂಬ ಒಂದು ಪದಾರ್ಥಕ್ಕೆ ರೂಪ-ರಸ-ಗಂಧ-ಸ್ಪರ್ಶಗಳೆಂಬ ಅನೇಕ ಪದಾರ್ಥಗಳೊಡನೆ ಸಂಬಂಧವಿದ್ದರೂ ಪರಮಾಣುವಿಗೆ ನಿರವಯುವತ್ವವನ್ನೇ ಒಪ್ಪಿರುವರಲ್ಲದೆ ಸಾವಯುವತ್ವವನ್ನು ನ್ಯಾಯದರ್ಶನಕಾರರು ಒಪ್ಪಲಿಲ್ಲ.

ಜಾತಿಯೆಂಬ ಒಂದು ಪದಾರ್ಥಕ್ಕೆ ಅನೇಕವ್ಯಕ್ತಿಸಂಬಂಧವನ್ನು ಸ್ವೀಕರಿಸಿದ್ದರೂ ಜಾತಿಗೆ ನಿರವಯುವತ್ವವನ್ನು ಒಪ್ಪಿರುವರಲ್ಲದೆ ಸಾವಯುವತ್ವವನ್ನು ಒಪ್ಪಲಿಲ್ಲ.

ಅಭಾವವೆಂಬ ಒಂದು ಪದಾರ್ಥಕ್ಕೆ ಅನೇಕಪ್ರತಿಯೋಗಿಗಳೊಡನೆ ಸಂಬಂಧವನ್ನು ಸ್ವೀಕರಿಸಿದ್ದರೂ ಅಭಾವವನ್ನು ನಿರವಯುವವೆಂದು ಒಪ್ಪಿರುವರಲ್ಲದೆ ಸಾವಯುವವೆಂದು ಒಪ್ಪಲಿಲ್ಲ.

ಜ್ಞಾನವೆಂಬ ಒಂದು ಪದಾರ್ಥಕ್ಕೆ ಅನೇಕವಿಷಯಗಳೊಡನೆ ಸಂಬಂಧವನ್ನು ಸ್ವೀಕರಿಸಿದ್ದರೂ ಜ್ಞಾನಕ್ಕೆ ನಿರವಯುವತ್ವವನ್ನು ಒಪ್ಪಿರುವರಲ್ಲದೆ ಸಾವಯುವತ್ವವನ್ನು ಒಪ್ಪಲಿಲ್ಲ.

ಸಂಯೋಗವೆಂಬ ಒಂದು ಪದಾರ್ಥಕ್ಕೆ ಅನುಯೋಗಿಪ್ರತಿಯೋಗಿಗಳೆಂಬ ಅನೇಕಪದಾರ್ಥಗಳೊಡನೆ ಸಂಬಂಧವನ್ನು ಸ್ವೀಕರಿಸಿದ್ದರೂ ಸಂಯೋಗವನ್ನು ನಿರವಯುವವೆಂದು ಒಪ್ಪಿರುವರಲ್ಲದೆ ಸಾವಯುವವೆಂದು ಒಪ್ಪಲಿಲ್ಲ.

ಆದಕಾರಣ ಇವುಗಳಂತೆ ಪರಮಾತ್ಮನೂ ನಿರಂಶನಾಗಿದ್ದರೂ ಇವನಿಗೆ ಅನೇಕಪದಾರ್ಥಗಳೊಡನೆ ಎಂದರೆ ಸಮಸ್ತಪದಾರ್ಥಗಳೊಡನೆ ಸಂಬಂಧವು ಸಂಭವಿಸಬಹುದು.

ಆಕಾಶವು ನಿರಂಶವಾಗಿರುವುದೆಂಬುದನ್ನು ವಾದಿಗಳು ಒಪ್ಪಿರುವರು. ಇಂಥ ಆಕಾಶದಲ್ಲಿ ಪ್ರದೇಶಭೇದದಿಂದ ಘಟಸಂಯೋಗವನ್ನೂ ಘಟಸಂಯೋಗಾಭಾವ

ವಸ್ತೂ ಏಕಕಾಲದಲ್ಲಿಯೇ ನಾವು ಒಪ್ಪುವೆವು. ಎಲ್ಲಿಯಾದರೆ ಒಂದೇ ವಸ್ತುವಿನಲ್ಲಿ ಭಾವಾಭಾವಸಂಬಂಧವು ವಿರುದ್ಧವೆಂದು ತೋರುವುದೋ ಅಂಥ ಸಂಬಂಧವನ್ನೂ ನಿರಂಶವಾದ ಆಕಾಶದಲ್ಲಿ ಏಕಕಾಲದಲ್ಲಿಯೇ ಒಪ್ಪುವೆವಾದರೆ ಅವಿರುದ್ಧವಾದ ಅನೇಕಸಂಬಂಧವನ್ನು ನಿರಂಶನಾದ ಪರಮಾತ್ಮನಲ್ಲಿ ಸ್ವೀಕರಿಸಲು ತಡೆಯೇನು?

## ೫೧. ನಿರಂಶಸ್ಯಾಪಿ ಅನೇಕಪ್ರತಿಯೋಗಿಕಸಂಬಂಧಾನಭ್ಯುಪಗಮೇ ಅನಿಷ್ಟಾಪತ್ತಿಪ್ರದರ್ಶನಂ.

ನಿರಂಶವಾದ ಒಂದು ಪದಾರ್ಥಕ್ಕೆ ಅನೇಕಪದಾರ್ಥಗಳೊಡನೆ ಸಂಬಂಧವನ್ನು ಸ್ವೀಕರಿಸದಿದ್ದರೆ ಅತ್ಯಂತಹಾನಿಯುಂಟಾಗುವುದು. ಹೇಗೆಂದರೆ—ಮೊತ್ತ ಮೊದಲು ಸಂಬಂಧವೆಂಬ ಒಂದು ಪದಾರ್ಥವೇ ಲೋಕದಲ್ಲಿ ನಿರ್ನಾಮವಾಗಿ ಹೋಗುವುದು. ಆಗ ಕಾರ್ಯಕಾರಣಭಾವವೆಂಬ ಸಂಬಂಧವಿಶೇಷವೂ ಲುಪ್ತವಾಗಿ ಯಾವ ಎರಡು ಪದಾರ್ಥಗಳಿಗೂ ಕಾರ್ಯಕಾರಣಭಾವಸಂಬಂಧವೇ ಉಂಟಾಗುವುದಕ್ಕೆ ಅವಕಾಶವಿಲ್ಲವಾಗಿ ಕೊನೆಗೆ ಮಾಧ್ಯಮಿಕರ ಮತದಂತೆ ಶೂನ್ಯವಾದವೇ ಬಂದೊದಗುವುದು. ಆದಕಾರಣ ಎರಡನೆಯ ತಾತ್ಪರ್ಯವೂ ಸಂಗತವಲ್ಲ.

## ೫೨. ಅತ್ರ ಪರಿಪೂರ್ಣಕಾರ್ಯಜನನಸಾಮರ್ಥ್ಯಂ ಪ್ರತಿಷಿಧ್ಯತ ಇತಿ ತೃತೀಯವಿಕಲ್ಪದೂಷಣಂ.

"ಇಲ್ಲಿ ಪರಿಪೂರ್ಣವಾದ ಕಾರ್ಯೋತ್ಪಾದನೆಗೆ ಸಮರ್ಥವಾಗಲಾರದು." ಎಂಬ ಮೂರನೆಯ ತಾತ್ಪರ್ಯವನ್ನು ಹೇಳುವಿರಾದರೆ—ಆಗ ಏತದ್ದೇಶಾವಸ್ಥಿತನಾದ ಪರಮಾತ್ಮನಲ್ಲಿ ಸಕಲಕಾರ್ಯೋತ್ಪತ್ತಿಯುಂಟಾಗಬೇಕಾಗಿದ್ದಿತೆಂದು ಅಭಿಪ್ರಾಯವೋ? ಅಥವಾ ಏತದ್ದೇಶಾವಸ್ಥಿತನಾದ ಪರಮಾತ್ಮನಲ್ಲಿ ಸರ್ವಕಾರ್ಯೋತ್ಪತ್ತಿಗೆ ಅನುಕೂಲವಾದ ಶಕ್ತಿಯಿರಬೇಕಾಗಿದ್ದಿತೆಂದು ಅಭಿಪ್ರಾಯವೋ?

ಪರಿಚ್ಛಿನ್ನವಾದ ಏಕಪ್ರದೇಶದಲ್ಲಿ ಸಕಲಕಾರ್ಯೋತ್ಪತ್ತಿಯಿಲ್ಲವೆಂದು ಹೇಳುವ ನಿಮ್ಮ ಮಾತು ನಮಗೂ ಇಷ್ಟವಾಗಿರುವುದಲ್ಲದೆ ಅನಿಷ್ಟವಲ್ಲವಾದುದರಿಂದ ಮೊದಲನೆಯ ಅಭಿಪ್ರಾಯದಿಂದ ನಿಮಗೇನೂ ಪ್ರಯೋಜನವಿಲ್ಲ.

ಸರ್ವಕಾರ್ಯೋತ್ಪತ್ತಿಗೆ ಅನುಕೂಲವಾದ ಶಕ್ತಿಯುಳ್ಳವನು ಇಲ್ಲಿಯೂ ಇರುತ್ತಾನೆಂದು ಸ್ವೀಕರಿಸಿದರೆ ಯಾವುದೊಂದು ವಿರೋಧವೂ ಇಲ್ಲವಾದಕಾರಣ ಎರಡನೆಯ ಅಭಿಪ್ರಾಯದಿಂದಲೂ ನಮಗೇನೂ ಹಾನಿಯಿಲ್ಲ.

## ೫೯೩. ಸರ್ವಾವಚ್ಛೇದೇನ ಬ್ರಹ್ಮಣಿ ಸರ್ವಾನುಕೂಲಶಕ್ತಿಸ್ವೀಕಾರೇ ಆಕಾಶಾದೌ ಸ್ಪರ್ಶಾದ್ಯಾಪತ್ತ್ಯಾಶಂಕಾ.

"ಪೂಜ್ಯರೆ ? ಪರಮಾತ್ಮನಲ್ಲಿ ಸರ್ವಪ್ರದೇಶದಲ್ಲಿಯೂ ಸರ್ವಕಾರ್ಯೋತ್ಪತ್ತಿಗೆ ಅನುಕೂಲವಾದ ಶಕ್ತಿಯನ್ನು ಸ್ವೀಕರಿಸುವುದಾದರೆ—ಆಕಾಶಪ್ರದೇಶದಲ್ಲಿಯೂ ಸ್ಪರ್ಶವೆಂಬ ಕಾರ್ಯವು ಉಂಟಾಗಬೇಕಾಗಿ ಬರುವುದು. ಆದರೆ ಆಕಾಶದಲ್ಲಿ ಸ್ಪರ್ಶವು ಕಂಡುಬರುವುದಿಲ್ಲ; ವಾಯುಪ್ರದೇಶದಲ್ಲಿಯೇ ಸ್ಪರ್ಶವು ಕಂಡುಬರುವುದು ಇದು ಹೇಗೆ ಸಂಗತವಾಗುವುದು ?" ಎಂದು ಆಶಂಕಿಸಬಾರದು.

## ೫೯೪. ವಿಸ್ತರೇಣ ತತ್ಪರಿಹಾರಃ.

ಏತಕ್ಕೆಂದರೆ—ಸರ್ವಕಾರ್ಯೋತ್ಪತ್ತಿಗೆ ಅನುಕೂಲವಾದ ಶಕ್ತಿಯನ್ನು ಈಶ್ವರನಲ್ಲಿ ಸರ್ವಪ್ರದೇಶದಲ್ಲಿಯೂ ಸ್ವೀಕರಿಸಿದರೂ ಕಾರ್ಯೋತ್ಪತ್ತಿಗೆ ಶಕ್ತಿಮಾತ್ರವೇ ಕಾರಣವಲ್ಲ; ಆ ಆ ಅಧಿಕರಣಪ್ರದೇಶವೂ ಕಾರಣಕೋಟಿಯಲ್ಲಿ ಸೇರಿರುವುದು. ಆದಕಾರಣ ಯಾವ ಯಾವ ಕಾರ್ಯವು ಯಾವ ಯಾವ ಪ್ರದೇಶದಲ್ಲಿ ದೃಷ್ಟವಾಗಿರುವುದೋ ಆ ಆ ಪ್ರದೇಶದೊಡನೆ ಕೂಡಿರುವ ಶಕ್ತಿ ಆ ಆ ಕಾರ್ಯಕ್ಕೆ ಕಾರಣವಾಗಿರುವುದರಿಂದ ವಾಯುಪ್ರದೇಶದಲ್ಲಿ ಸ್ಪರ್ಶವೆಂಬ ಕಾರ್ಯವುಂಟಾಗುವುದಲ್ಲದೆ ಆಕಾಶಪ್ರದೇಶದಲ್ಲಿ ಅದು ಉಂಟಾಗಲು ಅವಕಾಶವಿಲ್ಲ.

ಕಾರಣಾಂತರಸಹಾಯವಿಲ್ಲದೆ ಒಂದೇ ಕಾರಣವು ಕಾರ್ಯೋತ್ಪಾದನೆಯಲ್ಲಿ ಸಮರ್ಥವಾಗಿರುವುದೆಂದು ಒಪ್ಪುವುದಾದರೆ ಸರ್ವದಾ ಕಾರ್ಯೋತ್ಪತ್ತಿಪ್ರಸಂಗವುಂಟಾಗಿ—ಕಾರ್ಯೋತ್ಪತ್ತಿಯಾದರೆ ಸರ್ವದಾ ಕಾಣುವುದಿಲ್ಲವಾದುದರಿಂದ ಕೊನೆಗೆ ಬೌದ್ಧಮತದಂತೆ ಕ್ಷಣಿಕತ್ವವಾದವೇ ಬಂದೊದಗುವುದು. ಕ್ಷಣಿಕವಾದದಲ್ಲಾದರೆ ಫಲಾವ್ಯವಹಿತಪೂರ್ವವೃತ್ತಿಯಾದುದೇ ಕಾರಣವಾದುದರಿಂದ ಸರ್ವದಾ ಕಾರ್ಯೋತ್ಪತ್ತಿಪ್ರಸಂಗವಿಲ್ಲ.

ಕ್ಷಣಭಂಗವಾದವು ಬಂದರೂ ಬರಲಿ ಎಂದು ಎದುರುಬೀಳುವುದಾದರೆ ಕ್ಷಣಭಂಗವಾದವನ್ನು ಜಡದ್ರವ್ಯಪ್ರಕರಣದಲ್ಲಿಯೇ ನಿರಾಕರಿಸಿರುವೆವಾದುದರಿಂದ—ಹೀಗೆ ಎದುರುಬೀಳುವುದೂ ನಿರಾಕೃತವಾಗಿಯೇ ಇರುವುದು.

"ಪೂಜ್ಯರೆ ? ಕ್ಷಣಭಂಗವಾದಪರಿಹಾರಕ್ಕಾಗಿ—ಆ ಆ ಕಾಲವಿಶೇಷವನ್ನು ಸಹಕಾರಿಕಾರಣವಾಗಿ ಸ್ವೀಕರಿಸುವೆವು. ಕಾರಣಾಂತರವು ಆವಶ್ಯಕವಿಲ್ಲ. ಅಂತು ಸರ್ವಕಾರ್ಯೋತ್ಪತ್ತಿಗೆ ಅನುಕೂಲವಾದ ಶಕ್ತಿಗೆ ಸಹಾಯಕರವಾದ ವಿಶೇಷಣವಾಗಿ ಕಾಲವಿಶೇಷವನ್ನು ಸ್ವೀಕರಿಸುವೆವಾದುದರಿಂದ ಒಂದೇ ಕಡೆಯಲ್ಲಿ

ಕಾಲಕ್ರಮದಿಂದ ಸಕಲಕಾರ್ಯೋತ್ಪತ್ತಿಪ್ರಸಂಗವು ದುಷ್ಪರಿಹರವಾಗಿ ಬರುವು ದಲ್ಲವೆ?"

ಈ ಆಶಂಕೆಯಲ್ಲಿ—ಸಕಲಪ್ರದೇಶದಲ್ಲಿಯೂ ಉಂಟಾಗುವ ಕಾರ್ಯವು ಈ ಪ್ರದೇಶದಲ್ಲಿಯೇ ಉಂಟಾಗಲೆಂದು ತಾತ್ಪರ್ಯವೋ? ಅಥವಾ ಸಕಲಕಾಲದಲ್ಲಿ ಯೂ ಉಂಟಾಗುವ ಕಾರ್ಯಗಳು ಈ ಪ್ರದೇಶದಲ್ಲಿಯೇ ಉಂಟಾಗಲೆಂದು ತಾತ್ಪ ರ್ಯವೋ? ಈ ಎರಡು ಪಕ್ಷಗಳಲ್ಲಿಯೂ ಸ್ವೋಕ್ತಿವಿರೋಧವು ಬರುವುದರಿಂದ ಈ ಆಶಂಕೆ ಸಮಂಜಸವಲ್ಲ.

"ಪೂಜ್ಯರೆ? ಲೀಲಾವಿಭೂತಿಪ್ರದೇಶವರ್ತಿಯಾದ ಪರಮಾತ್ಮನಿಗೆ ನಿತ್ಯ ವಿಭೂತ್ಯಂತರ್ಗತವಾದ ಕಾರ್ಯವನ್ನು ಉತ್ಪಾದನೆ ಮಾಡುವುದರಲ್ಲಿಯೂ ಸಾಮ ರ್ಥ್ಯವಿರುವುದರಿಂದ ನಿತ್ಯವಿಭೂತಿಯಲ್ಲಿರುವ ಕಾರ್ಯಕ್ಕೆ ಸಮಾನವಾದ ಕಾರ್ಯವು ಲೀಲಾವಿಭೂತಿಯಲ್ಲಿಯೂ ಉಂಟಾಗಲಿ; ಇಷ್ಟಾಪತ್ತಿಯನ್ನಾದರೆ ಹೇಳಲಾಗು ವುದಿಲ್ಲ; ತ್ರಿಗುಣದ್ರವ್ಯವು ಶುದ್ಧಸತ್ತ್ವದ್ರವ್ಯಕ್ಕಿಂತಲೂ ಅತ್ಯಂತವಿಜಾತೀಯ ವಾಗಿರುವುದೆಂಬ ಅಂಶವು ಅಚಿದ್ದ್ರವ್ಯಪರಿಚ್ಛೇದದಲ್ಲಿಯೇ ಹೇಳಲ್ಪಟ್ಟಿರುವುದಷ್ಟೆ" ಎಂದು ಆಶಂಕಿಸಬೇಕಾದುದಿಲ್ಲ.

ರಾಮಕೃಷ್ಣಾದ್ಯವತಾರಸಮಯಗಳಲ್ಲಿ ತನ್ನ ಅಪ್ರಾಕೃತವಾದ ದಿವ್ಯ ಮಂಗಳವಿಗ್ರಹದೊಡನೆಯೇ ಈ ಲೀಲಾವಿಭೂತಿಯಲ್ಲಿ ಬಂದು ಅವತರಿಸಿ, ಮಂದ ಭಾಗ್ಯರಾದ ಕೆಲವರ ದೃಷ್ಟಿಗೆ ಆ ದಿವ್ಯವಿಗ್ರಹವನ್ನು ಮರೆಸುವುದಕ್ಕಾಗಿ ಪ್ರಾಕೃತ ವಾದ ಮತ್ತೊಂದು ಶರೀರವನ್ನು ಅದರ ಮೇಲೆ ಕವಚರೂಪವಾಗಿ ಧರಿಸುತ್ತ ವಿಭೂತಿದ್ವಯಸಂಸರ್ಗವನ್ನು ಎಂದರೆ ಪ್ರಾಕೃತಾಪ್ರಾಕೃತಸಂಸರ್ಗವನ್ನು ಈಶ್ವ ರನು ಕಲಾಮಾತ್ರದಿಂದ ನಡಸುತ್ತಲೇ ಇರುವನಷ್ಟೆ? ಆದಕಾರಣ ಮೂರನೆಯ ಪಕ್ಷದ ತಾತ್ಪರ್ಯವೂ ಪ್ರಯೋಜನಕಾರಿಯಲ್ಲ.

## ೫೧೫. ಅತ್ರ ಸಮಸ್ತಗುಣವಿಶಿಷ್ಟತ್ವಂ ಪ್ರತಿಷಿಧ್ಯತ ಇತಿ ಚತುರ್ಥವಿಕಲ್ಪದೂಷಣಂ.

"ಅಥವಾ ಇಲ್ಲಿ ಪರಿಪೂರ್ಣಗುಣವಿಶಿಷ್ಟನಾಗಿಲ್ಲ" ಎಂದು ಹೇಳುವ ನಾಲ್ಕನೆಯ ತಾತ್ಪರ್ಯವೂ ಸಮಂಜಸವಲ್ಲ. ಏತಕ್ಕೆಂದರೆ—ಶಬ್ದ-ಸ್ಪರ್ಶ-ರೂಪ-ರಸ- ಗಂಧ-ಪರಿಮಾಣ ಮುಂತಾದ ಗುಣಗಳು ಸ್ವಾಶ್ರಯವನ್ನು ಸಂಪೂರ್ಣವಾಗಿ ವ್ಯಾಪಿಸಿಕೊಂಡಿರುವುವಲ್ಲದೆ ಏಕದೇಶದಲ್ಲಿ ಇಲ್ಲ. ಅದರಂತೆ ಸರ್ವವ್ಯಾಪಕನಾದ ಪರಮಾತ್ಮನಲ್ಲಿರುವ ಗುಣಗಳೂ ಸ್ವಾಶ್ರಯದ ಯಾವತ್ಪ್ರದೇಶವನ್ನೂ ವ್ಯಾಪಿಸಿ

ಕೊಂಡೇ ಇರುವುದರಿಂದ ಅನ್ಯತ್ರ ವಿದ್ಯಮಾನನಾದ ಪರಮಾತ್ಮನಿಗೆ ಇಲ್ಲಿಯೂ ಸಮಸ್ತಗುಣವಿಶಿಷ್ಟತ್ವವನ್ನು ಅಂಗೀಕರಿಸಿದರೆ ಯಾವ ಹಾನಿಯೂ ಇಲ್ಲವಷ್ಟೆ? ಆದಕಾರಣ ಶ್ರುತಿಮೊದಲಾದ ಪ್ರಮಾಣಗಳನ್ನು ಅನುಸರಿಸಿ ಪರಮಾತ್ಮನು ಸರ್ವತ್ರ ಪರಿಪೂರ್ಣನಾಗಿರುವನೆಂದು ಒಪ್ಪುವುದರಲ್ಲಿ ಅಣುಮಾತ್ರವೂ ವಿರೋಧ ವಿಲ್ಲ.

**ಇಂತು ತತ್ತ್ವಶುದ್ಧಿಯೆಂಬ ವಿಶಿಷ್ಟಾದ್ವೈತಪ್ರಕರಣಗ್ರಂಥದೊಳ್ ಈಶ್ವರಪರಿಚ್ಛೇದದಲ್ಲಿ ಈಶ್ವರನಿಗೆ ಸರ್ವತ್ರ ಪರಿಪೂರ್ಣತ್ವ ವ್ಯವಸ್ಥಾಪನಪ್ರಕರಣಂ ಚತುರ್ಥಂ ೪**

# ಪಂಚಮಪ್ರಕರಣಂ.

### ೫೧೭. ಸಗುಣನಿರ್ಗುಣಶಾಸ್ತ್ರಯೋರ್ವಿಷಯಭೇದೇನ ಅವಿರೋಧಸಮರ್ಥನಪ್ರಾರಂಭಃ

ಆದುದರಿಂದಲೇ—"ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ" "ಸತ್ಯಕಾಮಸ್ಸತ್ಯಸಂಕಲ್ಪಃ" ಇತ್ಯಾದಿಶಾಸ್ತ್ರವಿರೋಧವು ಪ್ರಸಕ್ತವಾಗುವುದಾದುದರಿಂದ—ಪರಮಾತ್ಮನಲ್ಲಿ ನಿರ್ಗುಣತ್ವವಾದಕ್ಕೂ ಅವಕಾಶವಿಲ್ಲ.

ಆದರೆ—ಗುಣವಿಧಾಯಕಶಾಸ್ತ್ರ, ಗುಣನಿಷೇಧಕಶಾಸ್ತ್ರ ಈ ಎರಡೂ ಹೇಗೆ ಅವಿರುದ್ಧಗಳಾಗಿ ಸಂಗತವಾದಾವು?

### ೫೧೭. ಸಗುಣನಿರ್ಗುಣಶಾಸ್ತ್ರಯೋಸ್ಸಮಾನವಿಷಯಕತ್ವೇ ಸಮುಚ್ಚಯಾನುಪಪತ್ತಿಃ

ಇವು ಹೇಗೆ ಸಂಗತವಾದಾವೆಂಬುದನ್ನು ನಾವಿಬ್ಬರೂ ಸೇರಿ ವಿಚಾರಿಸೋಣ; ಈ ಎರಡು ಶಾಸ್ತ್ರಗಳನ್ನೂ ಇಟ್ಟುಕೊಳ್ಳೋಣವೆಂದರೆ—ಉಂಟೆಂದೂ ಇಲ್ಲವೆಂದೂ ಹೇಳುವ ಈ ಎರಡು ಶಾಸ್ತ್ರಗಳಿಗೂ ವಿರೋಧವು ಶಾಂತವಾಗುವುದೇ ಇಲ್ಲವಾದುದರಿಂದ ಈ ಎರಡಕ್ಕೂ ಸಮುಚ್ಚಯವು ಕೂಡುವುದಿಲ್ಲ;

### ೫೧೮. ಉಭಯಪರಿತ್ಯಾಗಸ್ಯಾಪ್ಯನುಪಪತ್ತಿಃ

ಆದರೆ ಈ ಎರಡು ಶಾಸ್ತ್ರಗಳನ್ನೂ ಬಿಟ್ಟುಬಿಡೋಣವೆಂದರೆ ಅದೂ ಸಂಘಟಿಸುವುದಿಲ್ಲ; ವಿರೋಧವು ದುಷ್ಪರಿಹರವಾದುದರಿಂದಲೇ. ಹೇಗೆಂದರೆ—ಎರಡು

ಶಾಸ್ತ್ರಗಳನ್ನೂ ಬಿಡುವಾಗ ಸಗುಣಶಾಸ್ತ್ರವನ್ನು ಬಿಡುವುದರಿಂದ ಪರಮಾತ್ಮನಲ್ಲಿ ನಿರ್ಗುಣತ್ವವು ಸಿದ್ಧವಾಗುವುದು; ನಿರ್ಗುಣಶಾಸ್ತ್ರವನ್ನು ಬಿಡುವುದರಿಂದ ಪರಮಾತ್ಮನಲ್ಲಿ ಸಗುಣತ್ವವು ಸಿದ್ಧವಾಗುವುದು; ಸಗುಣನಿರ್ಗುಣಶಾಸ್ತ್ರಗಳೆರಡನ್ನೂ ಬಿಡುವುದಾದರೆ ಪುನಃ ನಿರ್ಗುಣತ್ವಸಗುಣತ್ವಗಳೆರಡೂ ಪರಮಾತ್ಮನಲ್ಲಿ ಪ್ರಸಕ್ತಗಳಾಗಿ ವಿರೋಧವು ದುಷ್ಪರಿಹರವಾಗುವುದಷ್ಟೆ.

### ೫೯೯. ಉಭಯೋರವ್ಯವಸ್ಥಿತವಿಕಲ್ಪಸ್ಯಾಪ್ಯನುಪಪತ್ತಿಃ

ಈ ತೊಂದರೆಗಾಗಿ ಈ ಎರಡುಶಾಸ್ತ್ರಗಳೊಳಗೆ ಅವ್ಯವಸ್ಥಿತವಿಕಲ್ಪವಾಗಿ ಯಾವುದಾದರೊಂದು ಶಾಸ್ತ್ರವನ್ನು ಇಟ್ಟುಕೊಳ್ಳೋಣವೆಂದೂ ಹೇಳಲಾಗುವುದಿಲ್ಲ; ಸಿದ್ಧವಸ್ತುವಿಷಯದಲ್ಲಿ—"ಹೀಗೋ-ಹಾಗೋ" ಎಂದು ವಿಕಲ್ಪವು ಸಂಭವಿಸುವುದಿಲ್ಲವಷ್ಟೆ ?

### ೬೦೦. ನಿಯಾಮಕಾಭಾವಾದ್ವ್ಯವಸ್ಥಿತವಿಕಲ್ಪಸ್ಯಾಪ್ಯನುಪಪತ್ತಿಃ

ಆದರೆ ವ್ಯವಸ್ಥಿತವಿಕಲ್ಪಕ್ಕಾಗಿ—ಯಾವುದಾದರೊಂದು ಶಾಸ್ತ್ರವನ್ನು ಕ್ಲಿಪ್ತವಾಗಿ ಬಿಟ್ಟುಬಿಡೋಣವೆಂದರೆ ಯಾವುದನ್ನು ಬಿಡಬೇಕೆಂಬುದರಲ್ಲಿ ನಿಯಾಮಕಪ್ರಮಾಣವಿಲ್ಲವಾದುದರಿಂದ ಇಂಥದನ್ನೇ ಬಿಡಬೇಕೆಂದು ನಿರ್ಣಯವಾಗುವುದಿಲ್ಲ.

### ೬೦೧. ಅಪಚ್ಛೇದನ್ಯಾಯಾತ್ಸಗುಣಶಾಸ್ತ್ರಪರಿತ್ಯಾಗಾಶಂಕಾ

"ವಿಧಿಶಾಸ್ತ್ರದಿಂದ ಗುಣಗಳು ಪ್ರಸಕ್ತಗಳಾದರೆ—ನಿಷೇಧಶಾಸ್ತ್ರವು ಅಂಥ ಗುಣಗಳನ್ನು ನಿಷೇಧಿಸುವುದರಿಂದ ಗುಣಪ್ರಸಂಜಕವಾದ ವಿಧಿಶಾಸ್ತ್ರವು ಪೂರ್ವಶಾಸ್ತ್ರವಾಗಿಯೂ ನಿಷೇಧಶಾಸ್ತ್ರವು ಪರಶಾಸ್ತ್ರವಾಗಿಯೂ ಇರುವುವು; ಪೂರ್ವಶಾಸ್ತ್ರಕ್ಕಿಂತಲೂ ಪರಶಾಸ್ತ್ರವು ಪ್ರಬಲವೆಂಬುದನ್ನು ಮೀಮಾಂಸಕರು ಅಪಚ್ಛೇದನ್ಯಾಯದಲ್ಲಿ ತೋರಿಸಿರುವರು; ಆದುದರಿಂದ ಪರವಾದ ನಿರ್ಗುಣಶಾಸ್ತ್ರವನ್ನು ಇಟ್ಟುಕೊಂಡು ಪೂರ್ವವಾದ ಸಗುಣಶಾಸ್ತ್ರವನ್ನು ನಿರಾಕರಿಸಬಹುದು" ಎಂದು ಹೇಳಲೂ ಸಾಧ್ಯವಿಲ್ಲ—

### ೬೦೨. ನಿಯತಪೌರ್ವಾಪರ್ಯವಿಷಯೇ ಅಪಚ್ಛೇದನ್ಯಾಯಪ್ರವೃತ್ತ್ಯಾ ಪ್ರತ್ಯುತ ಶ್ರುತಿಲಿಂಗಾದಿನ್ಯಾಯಸ್ಯೈವ ಪ್ರವೃತ್ತ್ಯಾ ಪೂರ್ವಸ್ಯ ಸಗುಣಶಾಸ್ತ್ರಸ್ಯೈವ ಪ್ರಾಬಲ್ಯಂ

ಯಾವ ಎರಡುಶಾಸ್ತ್ರಗಳಿಗೆ ಪರಸ್ಪರ ಪೌರ್ವಾಪರ್ಯವೂ ವಿರೋಧವೂ ನಿಯತವಲ್ಲವೋ ಅಲ್ಲಿಯೇ ಅಪಚ್ಛೇದನ್ಯಾಯವು ಪ್ರವರ್ತಿಸುವುದೆಂದೂ—ಯಾವ

ಎರಡು ಶಾಸ್ತ್ರಗಳಿಗೆ ಪರಸ್ಪರವಿರೋಧವೂ ಪೌರ್ವಾಪರ್ಯವೂ ನಿಯತವಾಗಿರುವುವೋ ಅಲ್ಲಿ ಶ್ರುತಿಲಿಂಗಾಧಿಕರಣನ್ಯಾಯದಿಂದ ಪೂರ್ವಶಾಸ್ತ್ರಕ್ಕೇ ಪ್ರಾಬಲ್ಯವುಂಟಾಗುವುದೆಂದೂ ಮೀಮಾಂಸಕರು ವ್ಯವಸ್ಥೆಮಾಡಿರುವುದರಿಂದ ಸಗುಣ ನಿರ್ಗುಣಶಾಸ್ತ್ರಗಳಿಗೆ ವಿರೋಧವೂ ಪೌರ್ವಾಪರ್ಯವೂ ನಿಯತವಾಗಿರುವುದರಿಂದ ಇಲ್ಲಿ ಅಪಚ್ಛೇದನ್ಯಾಯವು ಪ್ರವರ್ತಿಸಲಾರದಾಗಿ ನಿರ್ಗುಣಶಾಸ್ತ್ರಕ್ಕೆ ಪ್ರಾಬಲ್ಯವು ಸಿದ್ಧಿಸುವುದಿಲ್ಲ; ಶ್ರುತಿಲಿಂಗನ್ಯಾಯದಿಂದ ಸಗುಣಶಾಸ್ತ್ರಕ್ಕೇ ಪ್ರಾಬಲ್ಯವು ಸಿದ್ಧಿಸುವುದರಿಂದ ಅದಕ್ಕೆ ವಿರುದ್ಧವಾಗಿ ಅದರ ಎದುರಿಗೆ ನಿರ್ಗುಣಶಾಸ್ತ್ರವು ನಿಲ್ಲಲಾರದು. ೧

---

೧. ಅಪಚ್ಛೇದನ್ಯಾಯದ ಸ್ವರೂಪವನ್ನು ಪೂರ್ವಮೀಮಾಂಸೆಯ ಆರನೆಯ ಅಧ್ಯಾಯದಲ್ಲಿ ಮೀಮಾಂಸಕರು ತೋರಿಸಿರುವರು. ಹೇಗೆಂದರೆ—ಸಾಮಗಾನಸಹಿತವಾಗಿ ಋಙ್ಮಂತ್ರವನ್ನು ಉಚ್ಚರಿಸಿದರೆ ಅಂಥ ಮಂತ್ರಾಕ್ಷರಗಳಿಂದ ಗುಣಿಯಲ್ಲಿರುವ ಗುಣಗಳ ಸಂಕೀರ್ತನವಾಗುವದು ; ಇಂಥ ಗುಣಸಂಕೀರ್ತನಕ್ಕೆ ಸ್ತೋತ್ರವೆಂದು ಸಂಕೇತವು. ಇಂಥ ಸ್ತೋತ್ರಗಳು ಜ್ಯೋತಿಷ್ಟೋಮಯಾಗದಲ್ಲಿ ಹನ್ನೆರಡು ಇರುವುವು; ಅವುಗಳೊಳಗೆ ಬಹಿಷ್ಪವಮಾನವೆಂಬ ಒಂದು ಸ್ತೋತ್ರವುಂಟು. ಇತರ ಸ್ತೋತ್ರಗಳು ಸದಸ್ಸೆಂಬ ಒಂದಾನೊಂದು ಮಂಟಪದ ಒಳಭಾಗದಲ್ಲಿ ಕುಳಿತುಕೊಂಡೇ ಋತ್ವಿಕ್ಕುಗಳಿಂದ ನಡಸಲ್ಪಡಬೇಕೆಂದೂ, ಈ ಬಹಿಷ್ಪವಮಾನಸ್ತೋತ್ರವಾದರೆ ಹಾಗಿಲ್ಲದೆ ಆ ಮಂಟಪದ ಹೊರಗಡೆಯಲ್ಲಿ ಪ್ರದಕ್ಷಿಣಮಾಡುತ್ತಲೇ ಋತ್ವಿಕ್ಕುಗಳಿಂದ ನಡಸಲ್ಪಡಬೇಕೆಂದೂ ವಿಧಿಯಿರುವುದು.

ಈಕ್ರಮದಿಂದ ಬಹಿಷ್ಪವಮಾನಸ್ತೋತ್ರವನ್ನು ನಡಸುವ ಕಾಲದಲ್ಲಿ ಐದು ಋತ್ವಿಕ್ಕುಗಳು ಯಜಮಾನನೊಡನೆ ಸೇರಿ ಒಬ್ಬರಹಿಂದೆ ಮತ್ತೊಬ್ಬರು ಹೋಗಬೇಕೆಂದೂ, ಹಾಗೆ ಹೋಗುವಾಗ ಮುಂದೆ ಹೋಗುವವರ ಕಟಿವಸ್ತ್ರವನ್ನು ಹಿಂದೆ ಹೋಗುವವರು ಹಿಡಿದುಕೊಂಡುಹೋಗಬೇಕೆಂದೂ ವಿಧಿಯಿರುವುದು. ಆಗ ಎಲ್ಲರಿಗಿಂತಲೂ ಮೊದಲು ಅಧ್ವರ್ಯು ಹೋಗುವನು ; ಅವನ ಹಿಂದೆ ಪ್ರಸ್ತೋತಾ, ಅವನ ಹಿಂದೆ ಪ್ರತಿಹರ್ತಾ, ಅವನ ಹಿಂದೆ ಉದ್ಗಾತಾ, ಅವನ ಹಿಂದೆ ಬ್ರಹ್ಮಾ, ಅವನ ಹಿಂದೆ ಯಜಮಾನನು.

ಹೀಗೆ ಹೋಗುತ್ತಿರುವ ಇವರೊಳಗೆ ಉದ್ಗಾತಾ, ಪ್ರತಿಹರ್ತಾ, ಇವರಿಬ್ಬರಲ್ಲಿ ಆವನಾದರೊಬ್ಬನಿಗೆ ಅಥವಾ ಇಬ್ಬರಿಗೂ ಕೈಬಿಟ್ಟುಹೋದರೆ ಅದಕ್ಕೆ ಅಪಚ್ಛೇದವೆಂದು ಹೆಸರು. ಇಂಥ ಅಪಚ್ಛೇದವು ಯಜ್ಞಕ್ಕೆ ವೈಕಲ್ಯವನ್ನು ಉಂಟುಮಾಡುವುದಾದಪ್ರಯುಕ್ತ ಆ ದೋಷದ ನಿವಾರಣೆಗಾಗಿ ಪ್ರಾಯಶ್ಚಿತ್ತವೂ ಉಪದೇಶಿಸಲ್ಪಟ್ಟಿರುವುದು ; ಅದರಲ್ಲಿ ಉದ್ಗಾತೃವಿನಿಂದ ಅಪಚ್ಛೇದವುಂಟಾದರೆ ಆಗ ಆ ಯಜ್ಞಪ್ರಯೋಗವನ್ನು ದಕ್ಷಿಣೆಯಿಲ್ಲದೆಯೇ ಸಮಾಪ್ತಿಮಾಡಿ ಪುನಃ ಅದೇ ಯಜ್ಞವನ್ನು ಆಚರಿಸಿ ಆ ದ್ವಿತೀಯಪ್ರಯೋಗದಲ್ಲಿ ಪೂರ್ವದಕ್ಷಿಣೆಯನ್ನು ಕೊಡಬೇಕು; ಇದೇ ಉದ್ಗಾತ್ರಪಚ್ಛೇದಕ್ಕೆ ಪ್ರಾಯಶ್ಚಿತ್ತವು ; ಪ್ರತಿಹರ್ತಾವಿನಿಂದ ಅಪಚ್ಛೇದವುಂಟಾದರೆ ಅದೇ ಪ್ರಯೋಗದಲ್ಲಿ ಸರ್ವಸ್ವವನ್ನೂ ದಕ್ಷಿಣೆಯಾಗಿ ಕೊಡಬೇಕು ; ಇದೇ ಪ್ರತಿಹರ್ತ್ರಪಚ್ಛೇದಕ್ಕೆ ಪ್ರಾಯಶ್ಚಿತ್ತವು.

## ೬೦೪. ದ್ವಯೋರಪಿ ವಿಷಯಭೇದೇನಾವಿರೋಧೋಪಪತ್ತೌ ಅನ್ಯತರಬಾಧಾನೌಚಿತ್ಯಂ.

ಮತ್ತು ವಿಷಯವ್ಯವಸ್ಥೆಯಿಂದ ಸಗುಣನಿರ್ಗುಣಶಾಸ್ತ್ರಗಳೆರಡಕ್ಕೂ ಅವಿರೋಧವೂ ಪ್ರಾಮಾಣ್ಯವೂ ಸಂಭವಿಸುವುವಾಗಿರುವಲ್ಲಿ ಅಪಚ್ಛೇದಾದಿನ್ಯಾಯವನ್ನು ಅವಲಂಬಿಸಿ ಅನ್ಯತರಶಾಸ್ತ್ರಕ್ಕೆ ಅತ್ಯಂತಬಾಧೆಯನ್ನು ಹೇಳುವುದು ನ್ಯಾಯಪಕ್ಷಪಾತಿಗಳಿಗೆ ಯುಕ್ತವಲ್ಲ.

ಗುಣವಿಧಾಯಕಶಾಸ್ತ್ರಕ್ಕೆ ಸಮಸ್ತಕಲ್ಯಾಣಗುಣಗಳು ವಿಷಯವೆಂದೂ, ಗುಣನಿಷೇಧಶಾಸ್ತ್ರಕ್ಕೆ ಉತ್ಸರ್ಗಾಪವಾದನ್ಯಾಯದಿಂದ ವಿಹಿತಕಲ್ಯಾಣಗುಣವ್ಯತಿರಿಕ್ತಗಳಾದ ಹೇಯಗುಣಗಳು ವಿಷಯವೆಂದೂ ವ್ಯವಸ್ಥೆಯನ್ನು ಅಂಗೀಕರಿಸಿ ಎರಡುಶಾಸ್ತ್ರಗಳಿಗೂ ಅವಿರೋಧವನ್ನೂ ಪ್ರಾಮಾಣ್ಯವನ್ನೂ ಹೇಳುವುದೇ ಸೂಕ್ಷ್ಮದರ್ಶಿಗಳಾದ ಮಧ್ಯಸ್ಥರಿಗೆ ಯುಕ್ತವಾಗಿರುವುದು.

---

ಬೇರೆ ಬೇರೆ ಪ್ರಯೋಗದಲ್ಲಿ ಉದ್ಗಾತೃಪ್ರತಿಹರ್ತೃಗಳಿಗೆ ಅಪಚ್ಛೇದವುಂಟಾದರೆ ಆಗ ಆ ಆ ಪ್ರಾಯಶ್ಚಿತ್ತವೇ ವ್ಯವಸ್ಥೆಯಿಂದ ಪ್ರಾಪ್ತವಾಗುವುದು ; ಒಂದೇ ಪ್ರಯೋಗದೊಳಗೆ ಏಕಕಾಲದಲ್ಲಿ ಇಬ್ಬರಿಗೂ ಅಪಚ್ಛೇದವುಂಟಾದರೆ ಆಗ ಉದ್ಗಾತ್ರಪಚ್ಛೇದಪ್ರಾಯಶ್ಚಿತ್ತವೇ ಪ್ರಾಪ್ತವಾಗುವುದು. ಏಕೆಂದರೆ ಉದ್ಗಾತೃವರ್ಗದಲ್ಲಿ ಉದ್ಗಾತೃವೇ ಪ್ರಧಾನನೆನಿಸಿಕೊಂಡಿರುವನು ; ಪ್ರಧಾನಾಪಚ್ಛೇದಕ್ಕಲ್ಲವೆ ಪರಿಹಾರವು ಬೇಕಾಗಿರುವುದು. ಅಥವಾ ವಿಕಲ್ಪವಾಗಿ ಆವುದಾದರೊಂದು ಪ್ರಾಯಶ್ಚಿತ್ತವನ್ನು ಮಾಡಬಹುದು.

ಒಂದೇ ಪ್ರಯೋಗದೊಳಗೆ ಭಿನ್ನಭಿನ್ನಕಾಲದಲ್ಲಿ ಇಬ್ಬರಿಗೂ ಅಪಚ್ಛೇದವುಂಟಾದರೆ ಆಗ ಪೂರ್ವಾಪಚ್ಛೇದಪ್ರಾಯಶ್ಚಿತ್ತಶಾಸ್ತ್ರಕ್ಕೆ ದೌರ್ಬಲ್ಯವನ್ನೂ ಪರಶಾಸ್ತ್ರಕ್ಕೆ ಪ್ರಾಬಲ್ಯವನ್ನೂ ಮೀಮಾಂಸಕರು "ಪೌರ್ವಾಪರ್ಯೇ ಪೂರ್ವದೌರ್ಬಲ್ಯಂ ಪ್ರಕೃತಿವತ್" ಎಂಬ ಸೂತ್ರದಲ್ಲಿ ಹೇಳಿರುವರು.

ಇಲ್ಲಿ—ಪೂರ್ವಶಾಸ್ತ್ರವು—ತನಗೆ ವಿರೋಧಿಯಾದ ಉತ್ತರಶಾಸ್ತ್ರವು ಅಂಕುರಿಸುವುದಕ್ಕಿಂತಲೂ ಪೂರ್ವದಲ್ಲಿಯೇ ಹುಟ್ಟಿದುದರಿಂದ ಪ್ರಬಲವಾಗುವುದೆಂದೂ, ಉತ್ತರಶಾಸ್ತ್ರವಾದರೆ ತನಗೆ ವಿರೋಧಿಯಾದ ಪೂರ್ವಶಾಸ್ತ್ರವು ಹುಟ್ಟಿದಮೇಲೆಯೇ ಹುಟ್ಟಿರುವುದರಿಂದ ಸಶತ್ರುವಾಗಿ ದುರ್ಬಲವಾಗುವುದೆಂದೂ ಪೂರ್ವಪಕ್ಷಿಗಳ ಅಭಿಪ್ರಾಯವು.

ಸಿದ್ಧಾಂತಿಗಳು ಹೇಳುವುದೇನೆಂದರೆ—ಪೂರ್ವಶಾಸ್ತ್ರವು—ತಾನು ಹುಟ್ಟುವಕಾಲದಲ್ಲಿ ತನಗೆ ವಿರೋಧಿಯಾದ ಉತ್ತರಶಾಸ್ತ್ರದ ಪ್ರಸಕ್ತಿಯೇ ಇಲ್ಲವಾದುದರಿಂದ ಅದನ್ನು ಬಾಧಿಸದೆಯೇ ತಾನು ಸತ್ತೆಯನ್ನು ಪಡೆವುದು. ಉತ್ತರಶಾಸ್ತ್ರವಾದರೆ ತನ್ನ ಉತ್ಪತ್ತಿಕಾಲದಲ್ಲಿ ತನಗೆ ವಿರೋಧಿಯಾದ ಪೂರ್ವಶಾಸ್ತ್ರವು ಹುಟ್ಟಿಯೇ ಇರುವುದರಿಂದ ಅದನ್ನು ಬಾಧಿಸದೆ ತಾನು ಉತ್ಪತ್ತಿಯನ್ನೇ ಪಡೆಯಲಾರದಾದ ಪ್ರಯುಕ್ತ ಪೂರ್ವಶಾಸ್ತ್ರವನ್ನು ಬಾಧಿಸಿಯೇ ತಾನು ಹುಟ್ಟಿರುವುದರಿಂದ ಅನನ್ಯಥಾಸಿದ್ಧವಾಗಿ ಪ್ರಬಲವೆನಿಸಿಕೊಳ್ಳುವುದು.

ಇದರಿಂದ ಪರಮಾತ್ಮನಲ್ಲಿ ಅಸಂಖ್ಯಾತಗಳಾದ ಕಲ್ಯಾಣಗುಣಗಳಿರುವು ವೆಂದೂ, ಹೇಯಗುಣಗಳು ಸುತರಾಂ ಇಲ್ಲವೆಂದೂ ಸಿದ್ಧವಾಯಿತು.

ಹೀಗೆ ಸಗುಣನಿರ್ಗುಣಶಾಸ್ತ್ರವಿಷಯದಲ್ಲಿ ತೋರಿಸಿದ ಇದೇ ನ್ಯಾಯವನ್ನು ಸವಿಕಾರತ್ವನಿರ್ವಿಕಾರತ್ವವಿಷಯದಲ್ಲಿಯೂ, ಅಶರೀರತ್ವಸಶರೀರತ್ವವಿಷಯದಲ್ಲಿಯೂ, ಇನ್ನೂ ಇದಕ್ಕೆ ಸಮಾನವಾದ ಇತರವಿಷಯಗಳಲ್ಲಿಯೂ ಸೇರಿಸಿಕೊಳ್ಳಬೇಕು.

ಇದರಿಂದ —ಪರಮಾತ್ಮಸ್ವರೂಪದಲ್ಲಿ ನಿರ್ವಿಕಾರತ್ವವೂ, ವಿಶಿಷ್ಟವಸ್ತುವಿನಲ್ಲಿ ಸವಿಕಾರತ್ವವೂ ಇರುವುವಾದರೆ ಸವಿಕಾರನಿರ್ವಿಕಾರಶಾಸ್ತ್ರಗಳಿಗೆ ವಿರೋಧವಿಲ್ಲ ವೆಂದು ಫಲಿಸಿತು. ವಿಶಿಷ್ಟವಸ್ತುವಿನಲ್ಲಿ ವಿಕಾರವಿದ್ದರೂ ಹಾನಿಯಿಲ್ಲ. ವಿಶೇಷಣ

---

"ಓಹೋ—ಉತ್ತರಶಾಸ್ತ್ರವು ಹುಟ್ಟದರಲ್ಲವೆ ಪೂರ್ವಶಾಸ್ತ್ರವನ್ನು ಬಾಧಿಸಿಯೇ ಹುಟ್ಟು ವುದು; ಪೂರ್ವದಲ್ಲಿಯೇ ಹುಟ್ಟಿರುವ ಪೂರ್ವಶಾಸ್ತ್ರವು ಸ್ವವಿರೋಧಿಯಾದ ಉತ್ತರಶಾಸ್ತ್ರದ ಉತ್ಪತ್ತಿಯನ್ನೇ ಏಕೆ ತಡೆಯುವುದಿಲ್ಲ" ಎಂದು ಆಶಂಕಿಸಲಾಗದು—ಏತಕ್ಕೆಂದರೆ ಅಪಚ್ಛೇದ ವೆಂಬ ನಿಮಿತ್ತವು ಹುಟ್ಟದಮೇಲೆ ನೈಮಿತ್ತಿಕಶಾಸ್ತ್ರವು ಹುಟ್ಟದಂತೆಯೇ ಆಯಿತು—ಅಂಥ ಉತ್ತರಶಾಸ್ತ್ರವು ಸ್ವವಿರೋಧಿಪೂರ್ವಶಾಸ್ತ್ರವನ್ನು ಬಾಧಿಸದೆ ಹುಟ್ಟಲಾರದಾದ್ದರಿಂದಯುಕ್ತ ಪೂರ್ವ ಶಾಸ್ತ್ರವು ಉತ್ತರಶಾಸ್ತ್ರದಿಂದ ಬಾಧಿತವಾಗಿಯೇ ಇರುವುದು.

ಮತ್ತು—ಸ್ವಾಭಾವಿಕವಾದ ದಕ್ಷಿಣೆಯೊಡನೆ ಕರ್ಮಸಮಾಪ್ತಿಮಾಡುವಿಕೆ ಸಾಮಾನ್ಯತಃ ಸ್ವತಏವ ಪ್ರಾಪ್ತವಾಗಿರುವುದು ; ಅದು ಪ್ರಾಯಶ್ಚಿತ್ತಶಾಸ್ತ್ರದಿಂದ ಸ್ವಲ್ಪ ಬದಲಾಯಿಸಲ್ಪಟ್ಟಿತು ; ಹೀಗೆ ಪೂರ್ವಸಿದ್ಧವಾದ ಅರ್ಥಕ್ಕೆ ಬದಲಾವಣೆಯನ್ನು ಮಾಡುವ ಪ್ರಕರಣವಾದುದರಿಂದ ಇಲ್ಲಿಯೂ ಪೂರ್ವಶಾಸ್ತ್ರವೇ ಬಾಧಿಸಲ್ಪಡುವುದೆಂದು ಪೂರ್ವಮೀಮಾಂಸೆಯಲ್ಲಿ ನಿಷ್ಕರ್ಷಿಸಲ್ಪ ಟ್ಟಿರುವುದು.

ಮಾಯಾವಾದಿಗಳು ಸಗುಣನಿರ್ಗುಣಶಾಸ್ತ್ರಗಳ ವಿಷಯದಲ್ಲಿ ಅಪಚ್ಛೇದನ್ಯಾಯದ ಸಂಚಾ ಲನವನ್ನು ಮಾಡುವರು ; ಅದರಲ್ಲೂ ನಿಷೇಧರೂಪವಾದ ನಿರ್ಗುಣಶಾಸ್ತ್ರಕ್ಕೆ ನಿಷೇಧನೀಯವಾದ ಗುಣಗಳ ಪ್ರಸಕ್ತಿ ಅಪೇಕ್ಷಿತವಾಗಿರುವುದರಿಂದ ಗುಣಪ್ರಾಪಕವಾದ ಸಗುಣಶಾಸ್ತ್ರವು ಪೂರ್ವ ಶಾಸ್ತ್ರವಾಗಿರುವುದೆಂದೂ, ಉತ್ತರಶಾಸ್ತ್ರವಾದ ನಿರ್ಗುಣಶಾಸ್ತ್ರಕ್ಕೆ ಸಮಾನವಿಷಯವಾದುದರಿಂದ ನಿಯತವಿರೋಧಿಯಾದಕಾರಣ ಅದರಿಂದ ಬಾಧಿಸಲ್ಪಟ್ಟು ದುರ್ಬಲವೆನಿಸಿಕೊಳ್ಳುವುದೆಂದೂ, ಉತ್ತರ ವಾದ ನಿರ್ಗುಣಶಾಸ್ತ್ರವೇ ಪ್ರಬಲವಾಗಿರುವುದೆಂದೂ ಹೇಳುವರು.

ಇದಕ್ಕೆ ಸಿದ್ಧಾಂತಿಗಳು ಹೇಳುವುದೇನೆಂದರೆ—ಈ ಎರಡು ಶಾಸ್ತ್ರಗಳಿಗೂ ವಿಷಯವು ಭಿನ್ನಭಿನ್ನವಾದುದರಿಂದ ಸಮಾನವಿಷಯಕತ್ವವೇ ಇಲ್ಲವಾಗಿ ವಿರೋಧಪ್ರಸಕ್ತಿಯೇ ಇಲ್ಲದೆ ಎರಡಕ್ಕೂ ಪ್ರಾಮಾಣ್ಯವೂ ಸಮಾನಬಲತ್ವವೂ ಅಬಾಧಿತವಾಗಿ ಸಿದ್ಧಿಸುತ್ತಿರುವಾಗ ಒಂದಕ್ಕೆ ದೌರ್ಬಲ್ಯವನ್ನೂ ಮತ್ತೊಂದಕ್ಕೆ ಪ್ರಾಬಲ್ಯವನ್ನೂ ಅಂಗೀಕರಿಸಲಾಗುವುದಿಲ್ಲ ;

ಅದ್ವೈತಿಗಳ ಅಭಿಪ್ರಾಯದಂತೆ ಒಂದುವೇಳೆ ಈ ಎರಡು ಶಾಸ್ತ್ರಗಳಿಗೂ ಸಮಾನವಿಷಯ ಕತ್ವವನ್ನೂ ವಿರೋಧವನ್ನೂ ಒಪ್ಪಿದರೂ ಅಪಚ್ಛೇದನ್ಯಾಯದಿಂದ ಸಗುಣಶಾಸ್ತ್ರಕ್ಕೆ ದೌರ್ಬಲ್ಯ ವನ್ನು ಹೇಳಲಾಗುವುದಿಲ್ಲ ; ಏತಕ್ಕೆಂದರೆ ಅದ್ವೈತಿಗಳ ಅಭಿಪ್ರಾಯದಲ್ಲಿ ಈ ಎರಡು ಶಾಸ್ತ್ರ

ವಾದ ಶರೀರದಲ್ಲಿರುವ ಬಾಲ್ಯಕೌಮಾರಯೌವನವಾರ್ಧಕಾದಿವಿಕಾರಗಳು ವಿಶೇಷ್ಯವಾದ ಆತ್ಮನಲ್ಲಿ ಹೇಗೆ ಅಂಟುವುವಲ್ಲವೋ ಅದರಂತೆ ವಿಶೇಷಣಗಳಾದ ಚಿದಚಿದ್ವಸ್ತುಗಳಲ್ಲಿರುವ ವಿಕಾರಗಳು ವಿಶೇಷ್ಯನಾದ ಪರಮಾತ್ಮನಲ್ಲಿ ವ್ಯಾಪಿಸುವುವಲ್ಲವಾದುದರಿಂದ ಅವನ ನಿರ್ವಿಕಾರತ್ವಕ್ಕೆ ಹಾನಿಯಿಲ್ಲ.

ಇದರಂತೆ—ಪರಮಾತ್ಮನಿಗೆ ಅಪ್ರಾಕೃತವಾದ ದಿವ್ಯಮಂಗಳವಿಗ್ರಹವುಂಟೆಂದೂ, ಕರ್ಮನಿಮಿತ್ತಕವಾಗಿ ಬರುವ ಪ್ರಾಕೃತವಾದ ಹೇಯಶರೀರವಿಲ್ಲವೆಂದೂ, ಅಂಗೀಕರಿಸಿ ಶರೀರವಿಷಯಕವಾದ ಶಾಸ್ತ್ರಗಳೆರಡಕ್ಕೂ ಉಪಪತ್ತಿಯನ್ನು ತಿಳಿಯಬೇಕು.

### ೬೦೪. ಉಕ್ತಾರ್ಥೇ ಪೂರ್ವಾಚಾರ್ಯಸಂಮತಿಪ್ರದರ್ಶನಂ.

ಇದೇ ಅರ್ಥವನ್ನು ಪೂರ್ವಾಚಾರ್ಯರು—

" ಯದ್ಬ್ರಹ್ಮಣೋ ಗುಣವಿಕಾರಶರೀರಜನ್ಮ
ಕರ್ಮಾದಿಗೋಚರವಿಧಿಪ್ರತಿಷೇಧವಾಚಃ ||
ಅನ್ಯೋನ್ಯಭಿನ್ನವಿಷಯಾ ನ ವಿರೋಧಗಂಧ
ಮರ್ಹಂತಿ ತನ್ನ ವಿಧಯಃ ಪ್ರತಿಷೇಧಬಾಧ್ಯಾಃ "

ಎಂಬ ಕಾರಿಕೆಯಲ್ಲಿ ಸಂಗ್ರಹವಾಗಿ ತೋರಿಸಿರುವರು.

### ೬೦೫. ಪರತ್ವೇನ ನಿರ್ಗುಣಶಾಸ್ತ್ರಪ್ರಾಬಲ್ಯೇ ಮಾಧ್ಯಮಿಕಸ್ಯೈವ ವಿಜಯಿತ್ವಾಪತ್ತಿಃ

ಪ್ರಸಕ್ತಿಸಾಪೇಕ್ಷವಾದ ನಿಷೇಧಸ್ವಭಾವದಿಂದ ನಿಷೇಧಶಾಸ್ತ್ರಕ್ಕೆ ಬಂದೊದಗುವ ಪರತ್ವವನ್ನು ಅವಲಂಬಿಸಿ ಸಗುಣಶಾಸ್ತ್ರಕ್ಕೆ ಅದರಿಂದ ಬಾಧೆಯನ್ನು ಹೇಳುವುದಾದರೆ " ಶೂನ್ಯಮೇವ ತತ್ತ್ವಂ" ಎಂಬುದಾಗಿ ಹೇಳುವ ಮಾಧ್ಯಮಿಕರ

---

ಗಳಿಗೂ ಪೌರ್ವಾಪರ್ಯವೂ ವಿರೋಧವೂ ನಿಯತವಾಗಿರುವುವು; ಅಪಚ್ಛೇದನ್ಯಾಯವಾದರೆ ಅನಿಯತಪೌರ್ವಾಪರ್ಯವಿಷಯದಲ್ಲಿ ಪ್ರವರ್ತಿಸುವುದಲ್ಲದೆ ನಿಯತಪೌರ್ವಾಪರ್ಯವಿಷಯದಲ್ಲಿ ಪ್ರವರ್ತಿಸುವುದಿಲ್ಲ. ನಿಯತವಿರೋಧವೂ ನಿಯತಪೌರ್ವಾಪರ್ಯವೂ ಉಳ್ಳ ವಿಷಯದಲ್ಲಿ ಶ್ರುತಿಲಿಂಗಾದಿನ್ಯಾಯವೇ ಪ್ರವರ್ತಿಸಿ ಸಗುಣಶಾಸ್ತ್ರಕ್ಕೇ ಪ್ರಾಬಲ್ಯವುಂಟಾಗಿ ನಿರ್ಗುಣಶಾಸ್ತ್ರವೇ ಅಪ್ರಮಾಣವಾಗುವುದು; ಆದುದರಿಂದ ಇಂಥ ವಿಷಯದಲ್ಲಿ ಅಪಚ್ಛೇದನ್ಯಾಯಸಂಚಾಲನೆಮಾಡಿದುದು ಭಗವದ್ಗುಣತಿರಸ್ಕರರ ಮತಿಗೇಡನ್ನು ಸೂಚಿಸುತ್ತಿರುವುದೆಂದು ಮೀಮಾಂಸಕರು ಪರಿಹಸಿಸುತ್ತಿರುವರು.

ಶ್ರುತಿಲಿಂಗಾದಿನ್ಯಾಯವೆಂದರೆ—" ಶ್ರುತಿ, ಲಿಂಗ, ವಾಕ್ಯ, ಪ್ರಕರಣ, ಸ್ಥಾನ, ಸಮಾಖ್ಯೆ ಈ ಆರರೊಳಗೆ ಯಾವ ಎರಡಕ್ಕಾದರೂ ಪರಸ್ಪರ ವಿರೋಧವಿದ್ದರೆ ಆಗ ಪೂರ್ವಪ್ರಮಾಣವೇ ಪ್ರಬಲವಾಗಿ ಉತ್ತರಪ್ರಮಾಣವೇ ದುರ್ಬಲವಾಗುವುದು " ಎಂಬುದೇ.

ವಚನಕ್ಕೇ ಸರ್ವಾಪೇಕ್ಷೆಯಾ ಪರತ್ವವಿರುವುದರಿಂದ ಅದೇ ಪ್ರಬಲವಾಗಿ ಅವರಿಗೇ ವಿಜಯವುಂಟಾಗಬೇಕಾಗಿ ಬರುವುದು. ಮಾಧ್ಯಮಿಕರ ವಚನವು ಅವಿದ್ಯಾಕಲ್ಪಿತವಾದುದರಿಂದ ಅಪ್ರಮಾಣವೆಂದು ಹೇಳುವುದಕ್ಕಿಲ್ಲ; ನಿರ್ಗುಣಶಾಸ್ತ್ರಕ್ಕೆ ಪರತ್ವವನ್ನು ಹೇಳುವವರ ಮತದಲ್ಲಿ ವೇದವಾಕ್ಯವೂ ಅವಿದ್ಯಾಕಲ್ಪಿತವಾದುದರಿಂದ ಮಾಧ್ಯಮಿಕ ವಚನಕ್ಕೂ ವೇದವಾಕ್ಯಕ್ಕೂ ತಾರತಮ್ಯವೇನೂ ಇಲ್ಲವಷ್ಟೆ? ಪರತ್ವಮಾತ್ರದಿಂದಲೇ ಪ್ರಾಬಲ್ಯವನ್ನು ಹೇಳುವವರಿಗೆ ವೇದವಾಕ್ಯಕ್ಕಿಂತಲೂ ಶೂನ್ಯವಾದಿಯ ವಾಕ್ಯಕ್ಕೇ ಪರತ್ವವಿರುವುದರಿಂದ ಅದಕ್ಕೇ ಪ್ರಾಬಲ್ಯವನ್ನು ಅಂಗೀಕರಿಸಬೇಕಾಗಿ ಬರುವುದು.

## ೬೦೭ ಅತೋ ಬ್ರಹ್ಮಣಃ ಸರ್ವತ್ರ ಸರ್ವದಾ ಚೋಭಯಲಿಂಗತ್ವಂ

ಹೀಗೆ ನಿರ್ಗುಣವಾಕ್ಯಗಳಿಗೆ ಹೇಯಗುಣಗಳು ವಿಷಯಗಳೆಂದೂ, ಸಗುಣ ವಾಕ್ಯಗಳಿಗೆ ಕಲ್ಯಾಣಗುಣಗಳು ವಿಷಯಗಳೆಂದೂ ತೋರಿಸಿದ ಈ ವ್ಯವಸ್ಥೆ ಯುಕ್ತಿಕಲ್ಪಿತವಲ್ಲದೆ ಶ್ರುತಿಸಿದ್ಧವೇ ಆಗಿರುವುದರಿಂದ ಪರಮಾತ್ಮನು ಸರ್ವತ್ರ ಸರ್ವದಾ ಹೇಯಗುಣರಹಿತನಾಗಿಯೂ, ಕಲ್ಯಾಣಗುಣಭೂಷಿತನಾಗಿಯೂ ಇರುವ ಕಾರಣ ಹೇಯಪ್ರತಿಭಟತ್ವಕಲ್ಯಾಣಗುಣಾಕರತ್ವಗಳೆಂಬ ಈ ಅಸಾಧಾರಣ ಧರ್ಮಗಳು ಪರಮಾತ್ಮನಿಗೆ ಉಭಯಲಿಂಗತ್ವಪದದಿಂದ ಪ್ರಸಿದ್ಧವಾಗಿ ವೇದಾಂತ ಶಾಸ್ತ್ರದಲ್ಲಿ ಉದ್ಘೋಷಿಸಲ್ಪಡುತ್ತಿರುವುವು.

## ೬೦೭. ಬ್ರಹ್ಮಣ ಉಭಯಲಿಂಗತ್ವಸಮರ್ಥನಾದೇವ ಅವಿದ್ಯಾದಿದೋಷಸಂಬಂಧಾನುಪಪತ್ತಿಃ

ಹೀಗೆ ಪರಮಾತ್ಮನಿಗೆ ಉಭಯಲಿಂಗತ್ವವನ್ನು ಸಮರ್ಥನೆಮಾಡಿ ತೋರಿಸಿದುದರಿಂದಲೇ—ಅವಿದ್ಯೆಯೆಂಬುದೊಂದನ್ನು ಕಲ್ಪಿಸಿಕೊಂಡು ಪ್ರಲಾಪಿಸುವವರ ಪ್ರಲಾಪಕ್ಕೆ ಸ್ವಲ್ಪಮಾತ್ರವೂ ಅವಕಾಶವಿಲ್ಲ. ಸೂರ್ಯಮಂಡಲದ ಸಮೀಪಕ್ಕೆ ಅಂಧಕಾರವು ಹೇಗೆ ಕಾಲನ್ನು ಇಡಲಾರದೋ ಅದರಂತೆ ಸಮಸ್ತಹೇಯಪ್ರತಿಭಟನಾದ ಪರಮಾತ್ಮನ ಸಮೀಪಕ್ಕೆ ಅವಿದ್ಯಾದಿದೋಷಲೇಶವೂ ಬರಲಾರದು.

ಅವಿದ್ಯೆಗೆ ಆವಾರಕಶಕ್ತಿ, ವಿಕ್ಷೇಪಶಕ್ತಿಗಳೆಂಬ ಎರಡು ಶಕ್ತಿಗಳುಂಟೆಂದೂ, ಇದರಲ್ಲಿ ಆವಾರಕಶಕ್ತಿ ಯಥಾವಸ್ಥಿತವಾದ ವಸ್ತುಸ್ವರೂಪವನ್ನು ಪ್ರಕಾಶಗೊಳಿಸದೆ ಮರೆಸುವುದೆಂದೂ, ವಿಕ್ಷೇಪಶಕ್ತಿ ಅಯಥಾವಸ್ಥಿತವಾದ ವಸ್ತುಸ್ವರೂಪವನ್ನು ಎಂದರೆ ಅವಿದ್ಯಮಾನವಾದ ವಸ್ತುಸ್ವರೂಪವನ್ನು ಪ್ರಕಾಶಗೊಳಿಸಿ

ಭ್ರಾಂತಿಯನ್ನು ಉಂಟುಮಾಡುವುದೆಂದೂ ಅಂಗೀಕರಿಸಿ, ಅವಿದ್ಯೆಯಿಂದ ಕಬಳೀ ಕರಿಸಲ್ಪಟ್ಟ ಬ್ರಹ್ಮಕ್ಕೆ ನಿಜವಾದ ಸ್ವಸ್ವರೂಪವು ಪ್ರಕಾಶಿಸದೆ ಅವಿದ್ಯಮಾನವಾದ ಎಂದರೆ ಮಿಥ್ಯಾಭೂತವಾದ ಪ್ರಪಂಚವು ತೋರುತ್ತಿರುವುದಾದುದರಿಂದ ಬ್ರಹ್ಮ ತತ್ತ್ವದಲ್ಲಿ ಪ್ರಪಂಚದ ಅಧ್ಯಾಸವೇ ಪ್ರಪಂಚಸೃಷ್ಟಿಯೆನಿಸಿಕೊಳ್ಳುವುದು ಎಂದು ಅವಿದ್ಯಾವಾದಿಗಳು ಸ್ವಗೋಷ್ಠಿಯಲ್ಲಿ ಪ್ರಲಾಪಿಸುತ್ತಿರುವರು.

ಪರಮಾತ್ಮನಿಗೆ ಉಭಯಲಿಂಗತ್ವವನ್ನು ಸಮರ್ಥನೆ ಮಾಡಿದುದರಿಂದಲೇ ಯಥಾವಸ್ಥಿತವಾದ ನಿಜಸ್ವರೂಪದ ಅಪ್ರಕಾಶವೆಂಬ ಅಜ್ಞಾನಕ್ಕಾಗಲಿ, ಅವಿದ್ಯ ಮಾನವಾದ ಪ್ರಪಂಚದ ಪ್ರಕಾಶವೆಂಬ ಭ್ರಾಂತಿಗಾಗಲಿ, ಅವಕಾಶವಿಲ್ಲ. ಸರ್ವ ಜ್ಞನಲ್ಲಿ ಅಜ್ಞಾನವೂ ಭ್ರಾಂತಿಯೂ ಉಂಟಾಗಲಾರವಷ್ಟೆ? ಆದುದರಿಂದಲೇ ಪರ ಮಾತ್ಮನಲ್ಲಿ ವಿಶೇಷಣವಾಗಿ ತೋರುತ್ತಿರುವ ಪ್ರಪಂಚಕ್ಕೆ ಸತ್ಯತ್ವವೇ ಸಿದ್ಧಿಸು ವುದಲ್ಲದೆ ಮಿಥ್ಯಾತ್ವವು ಎಂದಿಗೂ ಬರಲಾರದು. ಅಚಿತ್ತತ್ತ್ವಪರಿಚ್ಛೇದದ ಆರಂಭ ದಲ್ಲಿಯೇ ಐದುವಿಧವಾದ ಪ್ರಾಮಾಣಿಕಭೇದಗಳನ್ನು ತಾತ್ತ್ವಿಕಗಳಾಗಿ ತೋರಿಸಿ ರುವಲ್ಲಿ ಪ್ರಪಂಚಕ್ಕೆ ಮಿಥ್ಯಾತ್ವವನ್ನು ಯಾರು ತಾನೆ ಹೇಳಬಲ್ಲರು.

**ಇಂತು ತತ್ತ್ವಶುದ್ಧಿಯೆಂಬ ವಿಶಿಷ್ಟಾದ್ವೈತಪ್ರಕರಣಗ್ರಂಥದೊಳ್ ಈಶ್ವರಪರಿಚ್ಛೇದದಲ್ಲಿ ಈಶ್ವರನಿಗೆ ಉಭಯಲಿಂಗತ್ವ ಸಮರ್ಥನಪ್ರಕರಣಂ ಪಂಚಮಂ॥ ೫**

# ಷಷ್ಠಪ್ರಕರಣಂ.

**೭೦೮. ಬ್ರಹ್ಮಣೋ ನಿಮಿತ್ತತ್ವೋಪಾದಾನತ್ವಸಮರ್ಥನಾರಂಭಃ ತತ್ರ ಸದೇವೇತ್ಯಾದಿವಾಕ್ಯಸ್ಯ ದ್ವಿತೀಯವಸ್ತು ನಿಷೇಧಪರತ್ವಾಶಂಕಾ.**

ಪೂಜ್ಯರೆ? "ಸದೇವ ಸೋಮ್ಯೇದಮಗ್ರ ಆಸೀದೇಕಮೇವಾ ದ್ವಿತೀಯಂ" ಎಂಬುದಾಗಿ ಛಾಂದೋಗ್ಯೋಪನಿಷತ್ತಿನಲ್ಲಿ—ಸೃಷ್ಟಿಗೆ ಪೂರ್ವ ದಲ್ಲಿ ಚೇತನಬಹುತ್ವಮೊದಲಾದ ಪ್ರಪಂಚವನ್ನು ನಿಷೇಧಿಸಿರುವಲ್ಲಿ ಚೇತನಬಹು ತ್ವಕ್ಕೆ ನಿತ್ಯತ್ವವು ಹೇಗೆ ಸಂಭವಿಸೀತು? ಮತ್ತು "ಅದ್ವಿತೀಯಂ" ಎಂಬ ಶ್ರುತಿ ಗುಣವೆಂಬ ದ್ವಿತೀಯಪದಾರ್ಥವನ್ನು ಕೂಡ ಸಹಿಸಲಾರದಾಗಿರುವಲ್ಲಿ ಬ್ರಹ್ಮಕ್ಕೆ ಸರ್ವಜ್ಞತ್ವಾದಿಗುಣವೈಶಿಷ್ಟ್ಯವನ್ನು ಹೇಗೆ ಒಪ್ಪಿಕೊಳ್ಳಲಾದೀತು?

## ೬೦೯. ಉಕ್ತಶ್ರುತಾವೇಕಪದಸ್ಯ ಅವಿಭಕ್ತನಾಮರೂಪಾವಸ್ಥಾಪರತಯಾ ಉಪಾದನತ್ವಪರತ್ವಂ.

ಹೀಗೆ ಆಶಂಕಿಸಲಾಗುವುದಿಲ್ಲ; ಉಕ್ತವಾದ ಶ್ರುತಿಯಲ್ಲಿ ಏಕಪದವು—ಸೃಷ್ಟಿಗೆ ಪೂರ್ವದಲ್ಲಿ ಚೇತನಬಹುತ್ವವಿಲ್ಲವೆಂದು ತೋರಿಸುವುದಿಲ್ಲ; ಮತ್ತೇನೆಂದರೆ—"ತದೈಕ್ಷತ ಬಹು ಸ್ಯಾಂ ಪ್ರಜಾಯೇಯೇತಿ" ಎಂದು ಮೇಲೆ ಹೇಳಲ್ಪಡುವ ನಾಮರೂಪವಿಭಾಗಾರ್ಹವಾದ ಬಹುತ್ವಾವಸ್ಥೆಗೆ ಪ್ರತಿಕೋಟಿಯಾದ ನಾಮರೂಪವಿಭಾಗಾನರ್ಹವಾದ ಏಕತ್ವಾವಸ್ಥಾವಿಶಿಷ್ಟಬ್ರಹ್ಮವನ್ನು ತೋರಿಸುವುದು. ಇದರಿಂದ ಬ್ರಹ್ಮಕ್ಕೆ ಉಪಾದಾನತ್ವವು ಸಿದ್ಧವಾಗುವುದು. ಭಾವಿಯಾದ ಅವಸ್ಥೆಯೊಡನೆ ಕೂಡುವ ವಸ್ತುವಿಗೆ ಪೂರ್ವಾವಸ್ಥಾವೈಶಿಷ್ಟ್ಯವಲ್ಲವೆ ಉಪಾದಾನತ್ವವು.

## ೬೧೦. ಅದ್ವಿತೀಯಪದಸ್ಯ ನಿಮಿತ್ತಾಂತರವ್ಯಾವೃತ್ತಿಪರತ್ವಂ.

ಹೀಗೆ ಏಕಪದದಲ್ಲಿ ಉಪಾದಾನಕಾರಣವು ಪ್ರಸ್ತುತವಾದುದರಿಂದ ನಿಮಿತ್ತಕಾರಣವೂ ಬುದ್ಧಿಸ್ಥವಾಗುವುದು. ಲೋಕದಲ್ಲಿ ಉಪಾದಾನಕಾರಣವೂ ನಿಮಿತ್ತಕಾರಣವೂ ಭಿನ್ನಭಿನ್ನವಾಗಿದ್ದರೂ ಪ್ರಪಂಚವಿಷಯದಲ್ಲಿ ಹಾಗಿಲ್ಲ; ಪ್ರಪಂಚಕ್ಕೆ ಯಾವುದು ಉಪಾದಾನಕಾರಣವಾಗಿರುವುದೋ ಅದೇ ನಿಮಿತ್ತಕಾರಣವಾಗಿಯೂ ಆಗುವುದಲ್ಲದೆ ಉಪಾದಾನಕಾರಣಭಿನ್ನವಾದ ನಿಮಿತ್ತಕಾರಣವು ಪ್ರಪಂಚಕ್ಕೆ ಇಲ್ಲವೆಂಬ ಈ ಅರ್ಥವನ್ನು ಅದ್ವಿತೀಯಪದವು ತೋರಿಸುವುದಲ್ಲದೆ ದ್ವಿತೀಯವಸ್ತುವನ್ನೇ ನಿಷೇಧಿಸುವುದಿಲ್ಲ. ಬ್ರಹ್ಮತತ್ತ್ವಕ್ಕೆ ಪರತಂತ್ರಗಳಾದ ವಿಶೇಷಣಗಳನ್ನು ವಿಧಿಸಿರುವುದರಿಂದಲೂ, ನಿಷೇಧಕ್ಕೆ ವಿಹಿತವ್ಯತಿರಿಕ್ತವಿಷಯದಲ್ಲಿ ಸಂಕೋಚವನ್ನು ಆವಶ್ಯಕವಾಗಿ ಹೇಳಬೇಕಾಗಿರುವುದರಿಂದಲೂ, ಮೇಲಿನ ವಾಕ್ಯಗಳ ಸಂದರ್ಭವನ್ನೂ ಆವಶ್ಯಕವಾಗಿ ಪರಾಮರ್ಶಿಸಬೇಕಾಗಿರುವುದರಿಂದಲೂ ಅದ್ವಿತೀಯಪದಕ್ಕೆ ನಿಮಿತ್ತಕಾರಣಾಂತರನಿಷೇಧದಲ್ಲಿಯೇ ತಾತ್ಪರ್ಯವಲ್ಲದೆ ಬೇರೆ ಇಲ್ಲ.

## ೬೧೧. ಏಕಾದ್ವಿತೀಯಪದಯೋರುಕ್ತಾರ್ಥಪರತ್ವೇ ಪ್ರಮಾಣಪ್ರದರ್ಶನಂ.

ಏಕಶಬ್ದವು ಅವಿಭಕ್ತನಾಮರೂಪತ್ವಾವಸ್ಥೆಯೊಡನೆ ಕೂಡಿದ ಬ್ರಹ್ಮವನ್ನು ತೋರಿಸುತ್ತದೆಯೆಂಬುದು—"ಬಹುಸ್ಯಾಂ" ಎಂಬ ಮೇಲಿನ ವಾಕ್ಯದಿಂದ ಸ್ಪಷ್ಟವಾಗಿ ತಿಳಿದುಬರುವುದು.

ಅದ್ವಿತೀಯಪದವು ನಿಷಿತ್ತಾಂತರವಿಲ್ಲವೆಂಬ ಅರ್ಥವನ್ನು ತೋರಿಸುತ್ತದೆ ಯೆಂಬುದು "ತದೈಕ್ಷತ" "ತತ್ತೇಜೋಽಸೃಜತ" ಇವೇ ಮೊದಲಾದ ಮೇಲಿನ ವಾಕ್ಯಗಳಿಂದ ತಿಳಿದುಬರುವುದು.

## ೬೧೨. ಸಚ್ಛಬ್ದಸ್ಯಾಸತ್ಕಾರ್ಯವಾದನಿಷೇಧಪರತ್ವಂ.

ಪರಬ್ರಹ್ಮತತ್ತ್ವವು ನಿತ್ಯವಾಗಿರುವುದರಿಂದ ಅನಿತ್ಯತ್ವಸಂದೇಹವೇ ಇಲ್ಲ ದಿರುವಲ್ಲಿ ಸದೇವ ಎಂಬ ಪದವು ಅನಾವಶ್ಯಕವಾಗಿದ್ದರೂ ಈ ಅವಧಾರಣವು ಗೌತಮಾದಿಮತಸಿದ್ಧವಾದ ಅಸತ್ಕಾರ್ಯವಾದವನ್ನು ನಿರಾಕರಿಸುತ್ತದೆಯೆಂಬು ದು "ಕಥಮಸತಸ್ಸಜ್ಜಾಯೇತ" ಎಂಬ ಮೇಲಿನ ವಾಕ್ಯದಿಂದ ತಿಳಿದು ಬರುವುದು.

## ೬೧೩ ಸದೇಕಾದ್ವಿತೀಯಪದಾನಾಂ ಸಜಾತೀಯವಿಜಾತೀಯ ಸ್ವಗತಭೇದವ್ಯಾವೃತ್ತಿಪರತ್ವಾನುಪಪತ್ತಿಃ

ಉಕ್ತವಾದ ಛಾಂದೋಗ್ಯವಾಕ್ಯದಲ್ಲಿ 'ಸದೇವ-ಏಕಮೇವ-ಅದ್ವಿತೀಯಂ' ಎಂಬ ಪದಗಳಿಂದ ಬ್ರಹ್ಮದಲ್ಲಿ ಸಜಾತೀಯ-ವಿಜಾತೀಯ-ಸ್ವಗತಭೇದಶೂನ್ಯತ್ವವೇ ವಿವಕ್ಷಿತವಾಗಿರುವುದೆಂದು ಹೇಳುವಲ್ಲಿ—'ಅಗ್ರೇ' ಎಂಬುದಾಗಿ ಹೇಳಕೂಡದಾಗಿ ಬರುವುದು; ನಿಮ್ಮ ಮತದಲ್ಲಿ ಬ್ರಹ್ಮಕ್ಕೆ ಸಜಾತೀಯ-ವಿಜಾತೀಯ-ಸ್ವಗತಭೇದ ಶೂನ್ಯತ್ವವು ಸರ್ವದಾ ಇರುವುದರಿಂದ 'ಅಗ್ರೇ' ಎಂಬುದಾಗಿ ಕಾಲವಿಶೇಷದಲ್ಲಿ ಮಾತ್ರ ಉಕ್ತಭೇದಶೂನ್ಯತ್ವವು ಇದ್ದಿತೆಂದು ಹೇಳುವುದು ಸರಿಯಲ್ಲವಷ್ಟೆ? ವಿಷ ಮರೂಪವಾದ ಪ್ರಪಂಚಸೃಷ್ಟಿಯನ್ನು ಮೇಲೆ ಹೇಳುವುದರಿಂದ ಇಂಥ ಸೃಷ್ಟಿವೈಚಿ ತ್ರ್ಯಕ್ಕೆ ಕಾರಣವಾದ ಚೇತನಬಹುತ್ವವೂ, ಅವರ ಅನಾದಿವಿಚಿತ್ರಕರ್ಮಪ್ರವಾಹವೂ ಸಹ ಸೃಷ್ಟಿಗಿಂತಲೂ ಪೂರ್ವದಲ್ಲಿಯೇ ಇದ್ದುವೆಂದು ಒಪ್ಪಿಕೊಳ್ಳಬೇಕು. ಹಾಗೆ ಒಪ್ಪಿಕೊಳ್ಳದಿದ್ದರೆ ವಿಷಮಸೃಷ್ಟಿಗೆ ಕಾರಣವಿಲ್ಲವಾಗಿ ಬ್ರಹ್ಮತತ್ತ್ವಕ್ಕೆ ವೈಷಮ್ಯ ನೈರ್ಘೃಣ್ಯಗಳು ಪರಿಹರಿಸಲಶಕ್ಯಗಳಾಗುವುವು.

ಸೃಷ್ಟಿಗಿಂತಲೂ ಪೂರ್ವದಲ್ಲಿ ಚೇತನಬಹುತ್ವವಿದ್ದರೂ ಅದು ಅಪಾರಮಾ ರ್ಥಿಕವೆಂದು ಹೇಳುವುದಾದರೆ—ಸೃಷ್ಟ್ಯನಂತರಕಾಲದಲ್ಲಿಯೂ ಚೇತನಬಹುತ್ವವು ನಿಮ್ಮ ಮತದಲ್ಲಿ ಅಪಾರಮಾರ್ಥಿಕವಾಗಿಯೇ ಇರುವುದರಿಂದ ಪುನಃ 'ಅಗ್ರೇ' ಎಂಬ ಪದವು ವ್ಯರ್ಥವಾಗುವುದು. ಅಗ್ರಶಬ್ದವು ಅವಿವಕ್ಷಿತಾರ್ಥಕವಾದುದರಿಂದ ವ್ಯರ್ಥವಾಗಿಯೇ ಇರಲೆಂದು ಹೇಳಲಾಗುವುದಿಲ್ಲ; ಮೊದಲು 'ಅಗ್ರೇ' ಎಂದು ಹೇಳಿ ಅವಿಭಕ್ತನಾಮರೂಪತ್ವಾವಸ್ಥೆಯನ್ನು ತೋರಿಸಿ ಅನಂತರದಲ್ಲಿ ವಿಭಕ್ತ

ನಾಮರೂಪತ್ವಾವಸ್ಥಾಪನ್ನವಾದ ಸೃಷ್ಟಿಯನ್ನು ಹೇಳಿರುವಲ್ಲಿ ಅಗ್ರೇಶಬ್ದವು ಅವಿವಕ್ಷಿತಾರ್ಥಕವೆಂದೂ ಅನರ್ಥಕವೆಂದೂ ಹೇಗೆ ಹೇಳಲಾದೀತು ?

ಆದಕಾರಣ—ಕಾಲರೂಪವಾದ ವಿಜಾತೀಯಭೇದವೂ, ಚೇತನರೂಪವಾದ ಸಜಾತೀಯಭೇದವೂ, ಸರ್ವಜ್ಞತ್ವ-ಸರ್ವಶಕ್ತಿತ್ವ ಮೊದಲಾದ ಸೃಷ್ಟ್ಯುಪಯೋಗಿಗುಣರೂಪವಾದ ಸ್ವಗತಭೇದವೂ ಸಹ ಸೃಷ್ಟಿಪೂರ್ವಕಾಲದಲ್ಲಿಯೂ ಪರಮಾತ್ಮನಲ್ಲಿ ಇದ್ದುವೆಂಬುದಾಗಿಯೇ ಈ ವಾಕ್ಯದಲ್ಲಿ ಸ್ಪಷ್ಟವಾಗಿ ತೋರಿಬರುವುದರಿಂದ ಉಕ್ತವಾದ ಭೇದತ್ರಯವನ್ನು ಈ ವಾಕ್ಯವು ನಿರಾಕರಿಸುತ್ತದೆಯೆಂಬ ಪ್ರಲಾಪವು ಶ್ರುತಿತಾತ್ಪರ್ಯವಿರುದ್ಧವಾಗಿಯೂ, ಈ ಪ್ರಕರಣಕ್ಕೂ ವಿಶೇಷವಿರುದ್ಧವಾಗಿಯೂ ಇರುವುದರಿಂದ ಆಂಥ ಪ್ರಲಾಪವು ಶ್ರುತಿಬಹಿಷ್ಕೃತವಾಗಿ ಅವೈದಿಕವೆನಿಸಿಕೊಂಡು ವಿದ್ವದ್ಗೋಷ್ಠಿಗೆ ಯೋಗ್ಯವಾಗಲಾರದು.

## ೩೧೪. ನಿರ್ವಿಶೇಷವಸ್ತುವಾದಿನಾಂ ಬ್ರಹ್ಮಣಃ ಪ್ರಪಂಚಭ್ರಮಾನುಪಪತ್ತಿನಿರೂಪಣಾರಂಭಃ

ಅವಿದ್ಯೆಯಿಂದ ಆವರಿಸಲ್ಪಟ್ಟೂ ವಿಕ್ಷೇಪಿಸಲ್ಪಟ್ಟೂ ಇರುವ ಬ್ರಹ್ಮಕ್ಕೆ ವಿದ್ಯಮಾನವಾದ ನಿಜಸ್ವರೂಪದ ಪ್ರಕಾಶವು ಉಂಟಾಗದೆಯೂ, ಅವಿದ್ಯಮಾನವಾದ ಪ್ರಪಂಚದ ಭ್ರಾಂತಿ ಉಂಟಾಗುತ್ತಲೂ ಇರುವುದೆಂದು ನೀವು ಹೇಳುತ್ತೀರಷ್ಟೆ ? ಈ ವಿಷಯದಲ್ಲಿ ನಿಮ್ಮನ್ನು ಕುರಿತು ಪ್ರಶ್ನೆಮಾಡಬೇಕಾದ ಕೆಲವು ಅಂಶಗಳುಂಟು; ಅವುಗಳಿಗೆ ನೀವು ದಯವಿಟ್ಟು ಪ್ರತ್ಯುತ್ತರವನ್ನು ಹೇಳಬೇಕು—

## ೩೧೫. ತತ್ರ ತ್ರೇಧಾ ವಿಕಲ್ಪಃ

ನಿಖಿಲಪ್ರಪಂಚಭ್ರಮಕ್ಕೆ ಅಧಿಷ್ಠಾನವಾದ ಬ್ರಹ್ಮಸ್ವರೂಪವು ಸಂಪೂರ್ಣವಾಗಿ ಪ್ರಕಾಶಿಸುತ್ತಿರುವುದೋ ? ಅಥವಾ ಸಂಪೂರ್ಣವಾಗಿ ಪ್ರಕಾಶಿಸಲೇ ಇಲ್ಲವೋ ? ಅಥವಾ ಏಕಭಾಗವು ಪ್ರಕಾಶಿಸಿ ಏಕಭಾಗವು ಪ್ರಕಾಶಿಸದೇ ಇರುವುದೋ ?

## ೩೧೬. ಆದ್ಯಪಕ್ಷದ್ವಯೇ ಭ್ರಮಾನುಪಪತ್ತಿಃ

ಪ್ರಥಮಪಕ್ಷದಲ್ಲಿ ಇಂಥ ಬ್ರಹ್ಮಕ್ಕೆ ಪ್ರಪಂಚಭ್ರಮವುಂಟಾಗಲು ಅವಕಾಶವಿಲ್ಲ; ಪುರೋವರ್ತಿಯಾದ ಶುಕ್ತಿಕೆಯ ಸ್ವರೂಪವು ಸಂಪೂರ್ಣವಾಗಿ ಪ್ರಕಾಶಿಸುವುದಾದರೆ ಅದರಲ್ಲಿ ರಜತಭ್ರಮವುಂಟಾಗಲು ಅವಕಾಶವಿಲ್ಲವಷ್ಟೆ ?

ದ್ವಿತೀಯಪಕ್ಷದಲ್ಲಿಯೂ ಭ್ರಮವುಂಟಾಗಲು ಅವಕಾಶವಿಲ್ಲ; ಪುರೋವರ್ತಿಯಾದ ಪದಾರ್ಥವು ಸ್ವಲ್ಪಮಾತ್ರವೂ ತೋರದೆಯೇ ಇದ್ದರೆ ಅಧಿಷ್ಠಾನಪ್ರತೀತಿಯೇ ಇಲ್ಲವಾದುದರಿಂದ ಭ್ರಾಂತಿಯುಂಟಾಗಲು ಅವಕಾಶವಿಲ್ಲವಷ್ಟೆ ?

## ೬೧೭. ತೃತೀಯಪಕ್ಷೇ ಬ್ರಹ್ಮಣಃ ಸವಿಶೇಷತ್ವಸ್ಯ ಅವರ್ಜನೀಯತಯಾ ನಿರ್ವಿಶೇಷತ್ವಭಂಗಾಪತ್ತಿಃ.

ತೃತೀಯಪಕ್ಷದಲ್ಲಿ—ಅಧಿಷ್ಠಾನವಾದ ಬ್ರಹ್ಮದ ಒಂದಂಶವು ತೋರಿ ಮತ್ತೊಂದಂಶವು ತೋರಲಿಲ್ಲವೆಂದು ಹೇಳಬೇಕಾಗುವುದರಿಂದ ಅಂಶಭೇದಸಹಿತ ವಾದ ಬ್ರಹ್ಮವು ಸವಿಶೇಷವೆನಿಸಿಕೊಂಡು ನಿರ್ವಿಶೇಷತ್ವವೆಂಬ ನಿಮ್ಮ ಸಿದ್ಧಾಂತವು ಭಗ್ನವಾಗುವುದು. ಪುರೋವರ್ತಿಯಾದ ಪದಾರ್ಥದಲ್ಲಿ ಇದಂತ್ವವೆಂಬ ಸಾಧಾರ ಣಾಕಾರರೂಪವಾದ ಒಂದು ವಿಶೇಷವೂ, ಶುಕ್ತಿತ್ವವೆಂಬ ಅಸಾಧಾರಣಾಕಾರ ರೂಪವಾದ ಮತ್ತೊಂದು ವಿಶೇಷವೂ ಇರುವುವಾದುದರಿಂದಲ್ಲವೆ ಸಾಧಾರಣಾ ಕಾರಮಾತ್ರಜ್ಞಾನದಿಂದ ರಜತಭ್ರಮವೂ, ಅಸಾಧಾರಣಾಕಾರಜ್ಞಾನದಿಂದ ರಜತ ಭ್ರಮನಿವೃತ್ತಿಯೂ ಉಂಟಾಗುವುವು.

ಇದರಂತೆ ಬ್ರಹ್ಮದಲ್ಲಿಯೂ—ಪ್ರಪಂಚ ಭ್ರಮವೂ, ಪ್ರಪಂಚಭ್ರಮನಿವೃ ತ್ತಿಯೂ ಉಂಟಾಗಬೇಕಾದರೆ—ಸಾಧಾರಣಾಕಾರ ಅಸಾಧಾರಣಾಕಾರಗಳೆಂಬ ವಿಶೇಷಗಳನ್ನು ಬ್ರಹ್ಮದಲ್ಲಿಯೂ ಆವಶ್ಯಕವಾಗಿ ಒಪ್ಪಬೇಕಾಗುವುದರಿಂದ ಆಗ ಬ್ರಹ್ಮವು ಸವಿಶೇಷವಾಗುವುದಲ್ಲದೆ ಸಮಸ್ತವಿಶೇಷಶೂನ್ಯವಾಗಲಾರದು.

## ೬೧೮. ನಿರ್ವಿಶೇಷವಸ್ತುನೋऽವಿದ್ಯಯಾ ತಿರೋಧಾನೇ ಸ್ವರೂಪಹಾನ್ಯಾಪತ್ತಿಃ

ಮತ್ತು ಸಮಸ್ತವಿಶೇಷಶೂನ್ಯವಾದ ಬ್ರಹ್ಮದಲ್ಲಿ—ಅವಿದ್ಯೆಯಿಂದ ಮರೆ ಸಲ್ಪಡಬಹುದಾದ ಆಕಾರಾಂತರವಿಲ್ಲವಾದುದರಿಂದ ಬ್ರಹ್ಮಸ್ವರೂಪವನ್ನೇ ಅವಿದ್ಯೆ ಮರೆಸುತ್ತದೆಯೆಂದು ಹೇಳಬೇಕಾಗುವುದು; ಆಗ ಸ್ವಯಂಪ್ರಕಾಶವಾದ ವಸ್ತು ವಿಗೆ ಸ್ವರೂಪತಿರೋಧಾನವೆಂಬುದು ಸ್ವರೂಪದ ಅಪ್ರಕಾಶವೆಂದೇ ಪರ್ಯವಸಾನ ವಾಗಿ ಸ್ವಯಂಪ್ರಕಾಶವಸ್ತು ಅಸ್ವಯಂಪ್ರಕಾಶವೆನಿಸಿಕೊಂಡು ಕೊನೆಗೆ ಸ್ವರೂಪ ಹಾನಿಯನ್ನೇ ಪಡೆಯಬೇಕಾಗುವುದು.

## ೬೧೯. ಸ್ವರೂಪಾತ್ಮಕನಿತ್ಯಜ್ಞಾನಸ್ಯ ಭ್ರಮನಿವರ್ತಕತ್ವಾಂಗೀಕಾರೇ ನಿತ್ಯಮೋಕ್ಷಾಪತ್ತಿಃ

ಬ್ರಹ್ಮಸ್ವರೂಪವು ಮೊದಲೇ ಸ್ವಯಂಪ್ರಕಾಶವೆನಿಸಿಕೊಂಡು ಅತ್ಯಂತವಿಶ ದಪ್ರಕಾಶರೂಪವಾಗಿರುವುದರಿಂದ—ತತ್ತ್ವಜ್ಞಾನದಿಂದ ಅದರಲ್ಲಿ ತಿಳಿಯಲ್ಪಡ ಬೇಕಾದ ಅಂಶಾಂತರವಿಲ್ಲವಾದಕಾರಣ ತತ್ತ್ವಜ್ಞಾನದಿಂದ ಉಂಟಾಗುವ ಭ್ರಮ ನಿವೃತ್ತಿಯೆಂಬ ಮೋಕ್ಷವು ಸ್ವರೂಪಾತ್ಮಕಜ್ಞಾನದಿಂದಲೇ ಉಂಟಾಗಬೇಕಾಗಿ

ಸ್ವರೂಪವು ನಿತ್ಯವಾದುದರಿಂದ ಬ್ರಹ್ಮಕ್ಕೆ ನಿತ್ಯಮೋಕ್ಷವೇ ಇರಬೇಕಲ್ಲದೆ ಭ್ರಾಂತಿ ಯೆಂಬ ಸಂಸಾರವು ಇರಕೂಡದು.

## ೬೨೦. ತದನಂಗೀಕಾರೇ ತತ್ತುಲ್ಯಸ್ಯ ತತ್ತ್ವಜ್ಞಾನಸ್ಯಾಪಿ ಭ್ರಮಾನಿವಾರಕತಯಾ ನಿತ್ಯಸಂಸಾರಾಪತ್ತಿಃ.

ಸ್ವರೂಪಾತ್ಮಕವಾದ ಜ್ಞಾನಕ್ಕೆ ಭ್ರಾಂತಿನಿವಾರಣೆ ಮಾಡುವ ಸಾಮರ್ಥ್ಯ ವಿಲ್ಲವೆಂದು ಹೇಳುವುದಾದರೆ ಆಂಥ ಜ್ಞಾನಕ್ಕೆ ಅನ್ಯೂನಾನತಿರಿಕ್ತವಾಗಿರುವ ತತ್ತ್ವ ಜ್ಞಾನವೂ ಭ್ರಾಂತಿಯನ್ನು ನಿವಾರಣೆ ಮಾಡಲಾರದಾದುರಿಂದ ಬ್ರಹ್ಮಕ್ಕೆ ಭ್ರಾಂ ತಿಯೆಂಬ ನಿತ್ಯಸಂಸಾರವೇ ಇರಬೇಕಲ್ಲದೆ ಭ್ರಾಂತಿನಿವೃತ್ತಿಯೆಂಬ ಮೋಕ್ಷವು ಉಂಟಾಗಕೂಡದು.

## ೬೨೧. ಉಕ್ತಾರ್ಥಸ್ಯ ಸದೃಷ್ಟಾಂತಮುಪಪಾದನಂ.

"ಇದಂ ರಜತಂ" ಎಂಬ ಜ್ಞಾನವು—ಅಸಾಧಾರಣಾಕಾರವಾದ ಶುಕ್ತಿ ತ್ವವನ್ನು ಗ್ರಹಿಸದೆ ಸಾಧಾರಣಾಕಾರವಾದ ಇದಂತ್ವವನ್ನು ಮಾತ್ರ ಗ್ರಹಿಸಿದುದ ರಿಂದಲ್ಲವೆ ಭ್ರಮನಿವಾರಣಕ್ಕೆ ಸಮರ್ಥವಾಗದೆ ಭ್ರಮಸಹಿಷ್ಣುವಾಗಿರುವುದು ?

"ನೇದಂ ರಜತಂ" ಎಂಬ ಜ್ಞಾನವಾದರೆ ಸಾಧಾರಣಾಕಾರದಲ್ಲಿ ಮಾತ್ರ ವೇ ನಿಲ್ಲದೆ ರಜತಭೇದರೂಪವಾದ ಶುಕ್ತಿತ್ವವೆಂಬ ಅಸಾಧಾರಣಾಕಾರವನ್ನೂ ಗ್ರಹಿ ಸಿದುದರಿಂದಲ್ಲವೆ ಭ್ರಮನಿವಾರಣಸಾಮರ್ಥ್ಯವನ್ನು ಪಡೆದು ಭ್ರಮವನ್ನು ನಿರ್ಮೂಲ ಮಾಡುವುದು.

ಇದರಂತೆ—ನಿತ್ಯವಾದ ಸ್ವರೂಪಾತ್ಮಕಜ್ಞಾನವು ಭ್ರಮನಿವಾರಣೆಯನ್ನು ಮಾಡಬಲ್ಲುದಾದರೆ—ಭ್ರಮನಿವೃತ್ತಿಯೂ ನಿತ್ಯವಾಗಿ ನಿತ್ಯಮೋಕ್ಷವೇ ಇರ ಬೇಕು; ಸ್ವರೂಪಜ್ಞಾನವು ಭ್ರಮನಿವಾರಣೆಯನ್ನು ಮಾಡಲಾರದಾದರೆ ಅದಕ್ಕೆ ಅನ್ಯೂನಾನತಿರಿಕ್ತವಾದ ಪ್ರಮಾಣಜ್ಞಾನವೂ ಭ್ರಮನಿವಾರಣೆಯನ್ನು ಮಾಡ ಲಾರದಾದುದರಿಂದ ನಿತ್ಯಸಂಸಾರವೇ ಇರಬೇಕಾಗುವುದು.

## ೬೨೨. ತತ್ತ್ವಜ್ಞಾನಸ್ಯ ಸ್ವರೂಪಜ್ಞಾನಾವಿಷಯವಿಷಯಕತ್ವೇ ಬ್ರಹ್ಮಣಃ ಸವಿಶೇಷತ್ವಮುವರ್ಜನೀಯಂ.

ಅಥವಾ—ಸ್ವರೂಪಜ್ಞಾನಕ್ಕೆ ಗೋಚರವಾಗದಿರುವ ಒಂದಾನೊಂದು ವಿಶೇಷಾಕಾರವು ಪ್ರಮಾಣಜ್ಞಾನಕ್ಕೆ ಗೋಚರವಾಗಿರುವುದರಿಂದ ಪ್ರಮಾಣ ಜ್ಞಾನಕ್ಕೆ ಭ್ರಮನಿವಾರಣಸಾಮರ್ಥ್ಯವುಂಟೆಂದು ಹೇಳುವುದಾದರೆ ಆಗ ಬ್ರಹ್ಮ ಸ್ವರೂಪವು ಸವಿಶೇಷವಾಗುವುದಲ್ಲದೆ ನಿರ್ವಿಶೇಷವಾಗಿರಲಾರದು.

## ೬೨೩. ಬ್ರಹ್ಮಣಿ ನಿರ್ವಿಶೇಷತ್ವಸ್ಯ ಸದ್ಭಾವೇ ಅಸದ್ಭಾವೇ ಚ ಬ್ರಹ್ಮಣಸ್ಸವಿಶೇಷತ್ವಸಿದ್ಧಿಃ

ಮತ್ತು—"ಬ್ರಹ್ಮವು ನಿರ್ವಿಶೇಷವಾಗಿರುವುದು" ಎಂಬುದಾಗಿ ಹೇಳುವ ನಿಮ್ಮ ವಾಕ್ಯದಿಂದ ಬ್ರಹ್ಮದಲ್ಲಿ ನಿರ್ವಿಶೇಷತ್ವವೆಂಬ ಧರ್ಮವಿರುವುದೆಂದು ಬೋಧಿಸಲ್ಪಡುತ್ತದೆಯೋ? ಅಥವಾ ಬೋಧಿಸಲ್ಪಡುವುದಿಲ್ಲವೋ? ಪ್ರಥಮಪಕ್ಷದಲ್ಲಿ ನಿರ್ವಿಶೇಷತ್ವವೆಂಬ ಧರ್ಮಕ್ಕೆ ಆಶ್ರಯವಾದ ಬ್ರಹ್ಮವು ಸವಿಶೇಷವೇ ಆಗುವುದಲ್ಲದೆ ನಿರ್ವಿಶೇಷವಾಗಲಾರದು. ದ್ವಿತೀಯಪಕ್ಷದಲ್ಲಿ—ಬ್ರಹ್ಮದಲ್ಲಿ ನಿರ್ವಿಶೇಷತ್ವ ಪ್ರಸಕ್ತಿಯೇ ಇಲ್ಲವಾದುದರಿಂದ ಸವಿಶೇಷತ್ವಕ್ಕೆ ಸುತರಾಂ ಹಾನಿಯಿಲ್ಲ.

## ೬೨೪. ನಿರ್ವಿಶೇಷತ್ವಶ್ರುತೇಶ್ಚಿದಚಿದ್ಗತವಿಕಾರರೂಪವಿಶೇಷರಾಹಿತ್ಯಪರತ್ವಂ.

"ಪೂಜ್ಯರೆ" ಬ್ರಹ್ಮದಲ್ಲಿ ನಿರ್ವಿಶೇಷತ್ವವನ್ನು ಸರ್ವಾತ್ಮನಾ ಖಂಡಿಸಿ ಸವಿಶೇಷತ್ವವನ್ನು ತೋರಿಸುವುದಾದರೆ "ಸತ್ತಾಮಾತ್ರಂ ನಿರ್ವಿಶೇಷಂ ನಿರೀಹಂ" ಎಂಬ ಶ್ರುತಿ ಬ್ರಹ್ಮದಲ್ಲಿ ನಿರ್ವಿಶೇಷತ್ವವನ್ನು ಹೇಳುತ್ತಿರುವುದು ಹೇಗೆ ಸಂಗತವಾದೀತು?"

ಹೀಗೆ ಸಂಗತವಾದೀತು;—ಪ್ರಪಂಚರೂಪವಾದ ವಿಶೇಷವು ಪ್ರತ್ಯಕ್ಷಾದಿಪ್ರಮಾಣಗಳಿಂದ ಸಿದ್ಧವಾಗಿರುವಲ್ಲಿ ಇಂಥ ವಿಶೇಷವನ್ನು ಬ್ರಹ್ಮದಲ್ಲಿ ಈ ವಾಕ್ಯವು ನಿಷೇಧಿಸಲಾರದು; ಮತ್ತೇನೆಂದರೆ—ಜಡವಾದ ಅಚಿದ್ವಸ್ತುವಿನಲ್ಲಿರುವ ಸ್ವರೂಪಸ್ವಭಾವವಿಕಾರಗಳೆಂಬ ವಿಶೇಷಗಳೂ, ಅಜಡವಾದ ಚಿದ್ವಸ್ತುವಿನಲ್ಲಿರುವ ಸ್ವಭಾವವಿಕಾರಗಳೆಂಬ ವಿಶೇಷಗಳೂ ಬ್ರಹ್ಮದಲ್ಲಿ ಇಲ್ಲವೆಂದು ಉಕ್ತಶ್ರುತಿ ಹೇಳುತ್ತಿರುವುದರಿಂದ ನಿರ್ವಿಶೇಷತ್ವಶ್ರುತಿಯಿಂದಲೂ ಬ್ರಹ್ಮಕ್ಕೆ ಸವಿಶೇಷತ್ವವೇ ಸಿದ್ಧವಾಗುವುದು.

## ೬೨೫. ಪ್ರಪಂಚಮಿಥ್ಯಾತ್ವಪ್ರತಿಜ್ಞಾವಾಕ್ಯಸ್ಯ ಮಿಥ್ಯಾತ್ವಾಭ್ಯುಪಗಮೇಽನಭ್ಯುಪಗಮೇ ಚ ಪ್ರಪಂಚಸತ್ಯತ್ವಸಿದ್ಧಿಃ

ಪ್ರಪಂಚಕ್ಕೆ ಮಿಥ್ಯಾತ್ವವನ್ನು ಹೇಳುವ ನಿಮ್ಮ ಮತದಲ್ಲಿ—ಪ್ರಪಂಚದ ಮಿಥ್ಯಾತ್ವವನ್ನು ಎಲ್ಲರಿಗೂ ಉಪದೇಶಿಸುವುದಕ್ಕಾಗಿ—"**ಬ್ರಹ್ಮವ್ಯತಿರಿಕ್ತವಾದುದರಿಂದ ಸಮಸ್ತ ಪ್ರಪಂಚವೂ ಮಿಥ್ಯೆಯಾಗಿರುವುದು.**" ಎಂಬ ಪ್ರತಿಜ್ಞಾವಾಕ್ಯವನ್ನು ಹೇಳಬೇಕಲ್ಲವೆ? ಇಲ್ಲಿ ಬ್ರಹ್ಮವ್ಯತಿರಿಕ್ತತ್ವವೆಂಬ ಹೇತು

ನಿಮ್ಮ ಈ ಪ್ರತಿಜ್ಞಾವಾಕ್ಯದಲ್ಲಿಯೂ ಇರುವುದರಿಂದ ಈ ಪ್ರತಿಜ್ಞಾವಾಕ್ಯಕ್ಕೂ ಮಿಥ್ಯಾತ್ವವು ಸಿದ್ಧಿಸಬೇಕು. ಪ್ರಪಂಚಕ್ಕೆ ಮಿಥ್ಯಾತ್ವವನ್ನು ಹೇಳುವ ಪ್ರತಿಜ್ಞಾ ವಾಕ್ಯವೇ ಮಿಥ್ಯೆಯಾದರೆ ಪ್ರಪಂಚದ ಸತ್ಯತ್ವಕ್ಕೆ ಚ್ಯುತಿಯೇ ಉಂಟಾಗಲಿಲ್ಲ.

ಈ ಪ್ರತಿಜ್ಞಾವಾಕ್ಯದಲ್ಲಿ ಬ್ರಹ್ಮವ್ಯತಿರಿಕ್ತತ್ವವೆಂಬ ಹೇತುವಿದ್ದರೂ ಈ ವಾಕ್ಯಕ್ಕೆ ಮಿಥ್ಯಾತ್ವವನ್ನು ಅಂಗೀಕರಿಸದೆ ಸತ್ಯತ್ವವನ್ನು ಹೇಳುವಿರಾದರೆ ಬ್ರಹ್ಮ ವ್ಯತಿರಿಕ್ತತ್ವಹೇತು ಮಿಥ್ಯಾತ್ವವನ್ನು ಸಾಧಿಸಿಕೊಡುವ ಹೇತುವಾಗಲಿಲ್ಲವಾಗಿ ಪ್ರಪಂಚದಲ್ಲಿಯೂ ಮಿಥ್ಯಾತ್ವವನ್ನು ಸಾಧಿಸಲಾರದಾದುದರಿಂದ ಆಗಲೂ ಪ್ರಪಂಚದ ಸತ್ಯತ್ವಕ್ಕೆ ಚ್ಯುತಿಯುಂಟಾಗಲಿಲ್ಲ.

## ೬೨೬. ದೃಶ್ಯತ್ವಹೇತೋಃ ಪ್ರಪಂಚಮಿಥ್ಯಾತ್ವಾಸಾಧಕತ್ವ ನಿರೂಪಣಾರಂಭಃ.

"ಎಲ್ಲಿ ದೃಶ್ಯತ್ವಧರ್ಮವಿರುವುದೋ ಅಲ್ಲಿ ಮಿಥ್ಯಾತ್ವವೂ ಇರುವುದೆಂಬುದನ್ನು ಶುಕ್ತಿರಜತದಲ್ಲಿ ಕಂಡಿರುವೆವು; ಪ್ರಪಂಚದಲ್ಲಿ ದೃಶ್ಯತ್ವವಿರುವುದರಿಂದ ಮಿಥ್ಯಾತ್ವವೂ ಪ್ರಪಂಚಕ್ಕೆ ಸಿದ್ಧವಾಗುವುದು" ಎಂದು ಹೇಳುವುದಾದರೆ—

ಪ್ರಪಂಚದಲ್ಲಿ ನಿಮ್ಮಿಂದ ಸಾಧಿಸಲ್ಪಡುವ ಮಿಥ್ಯಾತ್ವದಲ್ಲಿಯೂ ದೃಶ್ಯತ್ವ ಹೇತುವಿರುವುದರಿಂದ ಮಿಥ್ಯಾತ್ವಕ್ಕೆ ಮಿಥ್ಯಾತ್ವವು ಸಿದ್ಧಿಸುವಕಾರಣ ಪ್ರಪಂಚ ಸತ್ಯತ್ವಕ್ಕೆ ಚ್ಯುತಿಯಿಲ್ಲ.

ಮಿಥ್ಯಾತ್ವದಲ್ಲಿ ಮಿಥ್ಯಾತ್ವವನ್ನು ಅಂಗೀಕರಿಸದೆ ಸತ್ಯತ್ವವನ್ನು ಅಂಗೀಕರಿಸುವುದಾದರೆ—ಮಿಥ್ಯಾತ್ವದಲ್ಲಿ ದೃಶ್ಯತ್ವಹೇತು ಮಿಥ್ಯಾತ್ವವನ್ನು ಸಾಧಿಸಲಿಲ್ಲವಾಗಿ ಪ್ರಪಂಚದಲ್ಲಿಯೂ ಮಿಥ್ಯಾತ್ವವನ್ನು ಸಾಧಿಸಲಾರದಾದಕಾರಣ ಪ್ರಪಂಚದ ಸತ್ಯತ್ವಕ್ಕೆ ಚ್ಯುತಿಯಿಲ್ಲ.

## ೬೨೭. ಮಿಥ್ಯಾತ್ವಸ್ಯ ಬ್ರಹ್ಮಸ್ವರೂಪತ್ವಾನುಪಪತ್ತಿಃ.

"ಪ್ರಪಂಚದಲ್ಲಿ ನಮ್ಮಿಂದ ಸಾಧಿಸಲ್ಪಡುವ ಮಿಥ್ಯಾತ್ವವು ಸತ್ಯಬ್ರಹ್ಮ ಸ್ವರೂಪವಾದುದರಿಂದ ಸತ್ಯವಾಗಿರುವುದು" ಎಂದು ಹೇಳುವಿರಾದರೆ—ಅಪ್ರಸಿದ್ಧವಾದ ಮಿಥ್ಯಾತ್ವವೆಂಬುದೊಂದು ಧರ್ಮವನ್ನು ಕಲ್ಪಿಸಿ ಅದಕ್ಕೆ ಸತ್ಯಬ್ರಹ್ಮಸ್ವರೂಪತ್ವವನ್ನು ಹೇಳಿ ಸತ್ಯತ್ವವನ್ನು ಸ್ಥಾಪಿಸುವುದಕ್ಕಿಂತಲೂ—ಪ್ರಸಿದ್ಧವಾಗಿರುವ ಪ್ರಪಂಚಕ್ಕೇ ಸತ್ಯಬ್ರಹ್ಮಸ್ವರೂಪತ್ವವನ್ನು ಹೇಳಿ ಸತ್ಯತ್ವವನ್ನು ಏತಕ್ಕೆ ಸ್ಥಾಪಿಸಬಾರದು?

"ಜಡಸ್ವರೂಪವಾದ ಪ್ರಪಂಚಕ್ಕೆ ಅಜಡಸ್ವರೂಪವಾದ ಬ್ರಹ್ಮದೊಡನೆ ಐಕ್ಯವು ಸಂಭವಿಸುವುದಿಲ್ಲವಾದುದರಿಂದ ಹಾಗೆ ಹೇಳಲಾಗುವುದಿಲ್ಲ" ಎಂದು ಹೇಳುವಿರಾದರೆ—

ಜಡಸ್ವರೂಪವಾದ ಮಿಥ್ಯಾತ್ವಕ್ಕೂ ಅಜಡಸ್ವರೂಪವಾದ ಬ್ರಹ್ಮದೊಡನೆ ಐಕ್ಯವು ಸಂಭವಿಸುವುದಿಲ್ಲವಾದುದರಿಂದ ಮಿಥ್ಯಾತ್ವಕ್ಕೂ ಸತ್ಯತ್ವವು ಸಿದ್ಧಿಸುವುದಿಲ್ಲ.

### ೬೨೮. ದೃಶ್ಯತ್ವಹೇತುವಶಾದ್ಬ್ರಹ್ಮಣೋಽಪಿ ಮಿಥ್ಯಾತ್ವಾಪತ್ತಿಃ.

"ಘಟಸ್ಸನ್" "ಪಟಸ್ಸನ್" ಎಂಬ ಪ್ರಪಂಚಪ್ರತೀತಿಯಲ್ಲಿಯೂ ಅವಿದ್ಯೋಪಹಿತವಾದ ಬ್ರಹ್ಮವೇ ಗೋಚರವಾಗಿರುವುದೆಂದು ನೀವು ಒಪ್ಪಿರುವುದರಿಂದ ಉಪಹಿತಬ್ರಹ್ಮದಲ್ಲಿ ದೃಶ್ಯತ್ವಹೇತುವಿರುವುದು; "ತತ್ತ್ವಮಸಿ" ಇತ್ಯಾದಿ ವೇದಾಂತವಾಕ್ಯದಿಂದ ಉಂಟಾಗುವ ಪ್ರತೀತಿಯಲ್ಲಿ ಶುದ್ಧಬ್ರಹ್ಮವು ಗೋಚರವಾಗಿರುವುದೆಂದು ನೀವು ಒಪ್ಪಿರುವುದರಿಂದ ಶುದ್ಧಬ್ರಹ್ಮದಲ್ಲಿಯೂ ದೃಶ್ಯತ್ವಹೇತುವಿರುವುದು. ಆದುದರಿಂದ ದೃಶ್ಯತ್ವಹೇತುವಿಗೆ ಆಶ್ರಯವಾದ ಪ್ರಪಂಚದಂತೆ ಅದೇ ದೃಶ್ಯತ್ವಹೇತುವಿಗೆ ಆಶ್ರಯವಾದ ಬ್ರಹ್ಮವೂ ನಿಮ್ಮ ಮತದಲ್ಲಿ ಮಿಥ್ಯೆಯಾಗಬೇಕು.

### ೬೨೯. ಶುದ್ಧೋಪಹಿತಯೋರಭೇದಾದುಪಹಿತಸ್ಯ ಸತ್ಯತ್ವಾಪತ್ತಿಃ ಶುದ್ಧಸ್ಯ ವಾ ಮಿಥ್ಯಾತ್ವಾಪತ್ತಿಃ.

"ಉಪಹಿತಬ್ರಹ್ಮದಲ್ಲಿ ಮಿಥ್ಯಾತ್ವವನ್ನೇ ನಾವು ಒಪ್ಪಿರುವುದರಿಂದ ಅದರಲ್ಲಿ ದೃಶ್ಯತ್ವಹೇತುವಿದ್ದರೂ ಹಾನಿಯಿಲ್ಲ, ಎಂದೂ—"ದೃಶ್ಯತ್ವಾದಿಧರ್ಮಗಳೆಲ್ಲಾ ಉಪಹಿತಬ್ರಹ್ಮದಲ್ಲಿಯೇ ಸಂಭವಿಸುವುವಲ್ಲದೆ ಶುದ್ಧಬ್ರಹ್ಮದಲ್ಲಿ ಸಂಭವಿಸುವುವಲ್ಲವಾದುದರಿಂದ ಶುದ್ಧಬ್ರಹ್ಮದಲ್ಲಿ ದೃಶ್ಯತ್ವಹೇತುವೇ ಬರಲಿಲ್ಲವಾಗಿ ಅಲ್ಲಿ ಮಿಥ್ಯಾತ್ವವಿಲ್ಲದೆ ಸತ್ಯತ್ವವಿದ್ದರೂ ಹಾನಿಯಿಲ್ಲ" ಎಂದೂ ಹೇಳುವಿರಾದರೆ—ಉಪಹಿತಬ್ರಹ್ಮಕ್ಕೂ ಶುದ್ಧಬ್ರಹ್ಮಕ್ಕೂ ಭೇದವಿಲ್ಲವಾದುದರಿಂದ ಉಪಹಿತಬ್ರಹ್ಮದಲ್ಲಿ ಮಿಥ್ಯಾತ್ವವನ್ನು ಹೇಳುವ ನಿಮಗೆ ಶುದ್ಧಬ್ರಹ್ಮದಲ್ಲಿಯೂ ಮಿಥ್ಯಾತ್ವವೇ ಸಿದ್ಧಿಸುವಕಾರಣ ಶುದ್ಧಬ್ರಹ್ಮದಲ್ಲಿ ಸತ್ಯತ್ವವು ದುರ್ಲಭವಾಗುವುದು; ಅಥವಾ ಶುದ್ಧಬ್ರಹ್ಮದಲ್ಲಿ ಸತ್ಯತ್ವವನ್ನು ಹೇಳುವಿರಾದರೆ ಅದರೊಡನೆ ಅಭಿನ್ನವಾದ ಉಪಹಿತಬ್ರಹ್ಮದಲ್ಲಿಯೂ ಸತ್ಯತ್ವವೇ ಸಿದ್ಧಿಸುವಕಾರಣ ಉಪಹಿತಬ್ರಹ್ಮದಲ್ಲಿ ಮಿಥ್ಯಾತ್ವವು ನಿಮಗೆ ದುರ್ಲಭವಾಗುವುದು.

## ೬೩೦. ಬ್ರಹ್ಮಣೋಽವೇದ್ಯತ್ವಾನುಪಪತ್ತಿಃ.

ಬ್ರಹ್ಮವು ಅನುಭೂತಿಸ್ವರೂಪವಾದುದರಿಂದ ಅನುಭೂತಿಗೆ ವೇದ್ಯವಾಗುವುದಿಲ್ಲವೆಂದು ಹೇಳುವಿರಾದರೆ—“ಬ್ರಹ್ಮವು ವೇದ್ಯವಾಗುವುದಿಲ್ಲ” ಎಂಬ ಈ ವಾಕ್ಯದಲ್ಲಿ ಬ್ರಹ್ಮವು ವೇದ್ಯವೋ ? ವೇದ್ಯವಲ್ಲವೋ ? ವೇದ್ಯವೆಂದು ಹೇಳುವುದಾದರೆ ವೇದ್ಯತ್ವನಿಷೇಧಮಾಡಲಾಗುವುದಿಲ್ಲ ; ವೇದ್ಯವಲ್ಲವೆಂದು ಹೇಳುವುದಾದರೆ ಈ ವಾಕ್ಯದಲ್ಲಿ ಬ್ರಹ್ಮವು ಉಪಸ್ಥಿತವಾಗಲಿಲ್ಲವಾಗಿ ಧರ್ಮಿಯೇ ಅಪ್ರಸಿದ್ಧವಾದುದರಿಂದ ಅವೇದ್ಯತ್ವಧರ್ಮವನ್ನು ಯಾವುದರಲ್ಲಿ ವಿಧಾನಮಾಡುವುದು ?

ಮತ್ತು ಬ್ರಹ್ಮವು ಸುತರಾಂ ವೇದ್ಯವೇ ಆಗುವುದಿಲ್ಲವಾಗಿದ್ದರೆ ಬ್ರಹ್ಮಜ್ಞಾನವನ್ನು ಉಂಟುಮಾಡುವುದಕ್ಕಾಗಿ ಪ್ರವರ್ತಿಸಿರುವ “ಅಥಾತೋ ಬ್ರಹ್ಮಜಿಜ್ಞಾಸಾ” “ಬ್ರಹ್ಮವೇದ ಬ್ರಹ್ಮೈವ ಭವತಿ” “ಬ್ರಹ್ಮವಿದಾಪ್ನೋತಿ ಪರಂ” “ಆತ್ಮಾ ವಾ ಅರೇ ದ್ರಷ್ಟವ್ಯಃ” ಇತ್ಯಾದಿವೇದಾಂತಶಾಸ್ತ್ರಗಳು ಸಮುದ್ರಘೋಷದಂತೆ ನಿರರ್ಥಕಗಳಾಗುವುವು.

ಆದಕಾರಣ ಯುಕ್ತಿಶೂನ್ಯವಾಗಿಯೂ ಪ್ರಮಾಣಶೂನ್ಯವಾಗಿಯೂ ಇರುವ ಇಂಥ ಅಸತ್ಪ್ರಲಾಪಗಳೆಂಬ ಶಿವಾರುತಗಳು ವೇದಾಂತಿಸಿಂಹದ ಘರ್ಜನೆಯ ಮುಂದೆ ನಿಲ್ಲಲಾರವು.

## ೬೩೧. ಅಂತಿಮಯುಗವೇದಾಂತಿನಾಂ ಜನ್ಮರಹಸ್ಯಾವಿಷ್ಕರಣಂ.

ಅಂತಿಮಯುಗಪ್ರಾಬಲ್ಯಕ್ಕೆ ಸಹಾಯವನ್ನು ಮಾಡತಕ್ಕವರಾದುದರಿಂದ ಅಂತಿಮಯುಗವೇದಾಂತಿಗಳೆಂಬ ಹೆಸರನ್ನು ಪಡೆದಿರುವ ಇವರ ಮತದ ಜನ್ಮರಹಸ್ಯವನ್ನು ಎಂದರೆ ಆಭಿಜಾತ್ಯವನ್ನು ಪ್ರಾಚೀನರು ಈ ರೀತಿಯಲ್ಲಿ ವ್ಯಕ್ತಪಡಿಸಿರುವರು—

“ಸಾಂಖ್ಯಸೌಗತಚಾರ್ವಾಕಸಂಕರಾಚ್ಛಂಕರೋದಯಃ ।
ದೂಷಣಾನ್ಯಪಿ ತಾನ್ಯೇವ ಭೂಯಸ್ತದಧಿಕಾನಿ ಚ”

“ಪದ್ಮಪತ್ರದಂತೆ ನಿರ್ಲೇಪನಾದ ಆತ್ಮನಿಗೆ ಚಿಚ್ಛಾಯಾಪತ್ತಿಯಿಂದಲಾಗಲಿ, ಚಿತ್ಸಂಪರ್ಕದಿಂದಲಾಗಲಿ, ಚಿದಭಿವ್ಯಂಜಕತ್ವದಿಂದಲಾಗಲಿ ಜ್ಞಾತೃತ್ವ-ಕರ್ತೃತ್ವ-ಭೋಕ್ತೃತ್ವಗಳು ಉಂಟಾಗುವುವಲ್ಲದೆ ಆತ್ಮನಿಗೆ ಇವು ಸ್ವಾಭಾವಿಕವಲ್ಲ” ಎಂದು ಸಾಂಖ್ಯರು ಹೇಳುವರು—ಅವರೊಡನೆ ಸ್ನೇಹಭಾವವನ್ನು ಬೆಳಸಿದವರಾಗಿ ಮಿಥ್ಯಾವಾದಿಗಳೂ ಅದೇರೀತಿಯಲ್ಲಿ ಜ್ಞಾತೃತ್ವಾದಿಗಳನ್ನು ಆತ್ಮನಿಗೆ ತೋರಿ

ಸುವರಲ್ಲದೆ ಇವುಗಳನ್ನು ಸ್ವಾಭಾವಿಕಗಳಾಗಿ ಒಪ್ಪುವುದಿಲ್ಲ. ಜೀವಪರಿಚ್ಛೇದದಲ್ಲಿ ಈ ವಿಷಯವನ್ನು ವಿಶದವಾಗಿ ನಾವು ತೋರಿಸಿರುವೆವು.

ಮತ್ತು—ಪ್ರಪಂಚಮಿಥ್ಯಾತ್ವವನ್ನು ಹೇಳುವ ವಿಷಯದಲ್ಲಿ ಯೋಗಾಚಾರರೇ ಮೊದಲಾದ ಬೌದ್ಧರೇ ಇವರಿಗೆ ಆಚಾರ್ಯರಾಗಿರುವುದರಿಂದ ಈ ವಿಷಯದಲ್ಲಿ ಮಿಥ್ಯಾವಾದಿಗಳು ಬೌದ್ಧಶಿಷ್ಯರಾಗಿರುವರು.

ಮತ್ತು—ಅಹಮರ್ಥಕ್ಕೆ ವಿನಾಶವನ್ನು ಹೇಳುವ ವಿಷಯದಲ್ಲಿ ಇದೇ ಮಿಥ್ಯಾವಾದಿಗಳು ಚಾರ್ವಾಕರಲ್ಲಿ ಗುರುಕುಲವಾಸವನ್ನು ಮಾಡಿ ಅಹಮರ್ಥವಿನಾಶೋಪದೇಶವನ್ನು ಕಲಿತು ಆ ವಿಷಯದಲ್ಲಿ ಚಾರ್ವಾಕರಿಗೆ ಅಂತರಂಗಶಿಷ್ಯರಾಗಿರುವರು.

ಹೀಗೆ—ಸಾಂಖ್ಯಸೌಗತಚಾರ್ವಾಕರೆಂಬ ಮೂವರ ಮತವೂ ಒಂದಾಗಿ ಕಲೆತು ಮಿಥ್ಯಾವಾದಿಮತವೆಂಬ ಒಂದಾನೊಂದು ಲೋಕವಿಲಕ್ಷಣವಾದ ಮತರೂಪವಾಗಿ ಪರಿಣಮಿಸಿರುವುದರಿಂದ ಸಾಂಖ್ಯ-ಸೌಗತ-ಚಾರ್ವಾಕರ ಸಾಂಕರ್ಯದಿಂದ ಹುಟ್ಟಿದ ಈ ಮತವು ಸಂಕರಜಾತಿಯಾಗಿರುವುದೆಂಬುದೇ ಈ ಮತದ ಜನ್ಮರಹಸ್ಯವಾಗಿರುವುದು.

ಆದುದರಿಂದಲೇ---ಸಾಂಖ್ಯಾದಿಮತತ್ರಯದಲ್ಲಿಯೂ ಪ್ರತ್ಯೇಕವಾಗಿ ಬರುವ ದೂಷಣಗಳೆಲ್ಲಾ ಒಟ್ಟಾಗಿ ಸೇರಿ ಈ ಮತದಲ್ಲಿ ಅಪರಿಹಾರ್ಯಗಳಾಗಿ ನಿಲ್ಲುವುವು.

ಅಷ್ಟೇ ಅಲ್ಲದೆ—ಸಾಂಖ್ಯಾದಿಮತತ್ರಯದವರೂ ಸಹ ಹೇಳದೆ ಇರುವ ಅನೇಕವಾದ ಅಸಂಗತಾರ್ಥಗಳನ್ನು ಎಂದರೆ—ಅವಿದ್ಯೆಯೆಂಬುದೊಂದನ್ನೂ, ಅದರಿಂದ ಬ್ರಹ್ಮಕ್ಕೆ ಅಜ್ಞಾನವನ್ನೂ, ಅದರಿಂದ ಭೇದವಾಸನೆ ಮೊದಲಾದ ಅನೇಕ ಅಸಂಬದ್ಧಾರ್ಥಗಳನ್ನೂ ಇವರು ಅಂಗೀಕರಿಸಿರುವುದರಿಂದ ಸಾಂಖ್ಯಾದಿಮತಗಳ ದೂಷಣಗಳಿಗಿಂತಲೂ ಸಾವಿರಪಾಲು ಹೆಚ್ಚಾದ ದೂಷಣಗಳು ಇವರಮೇಲೆ ಅಪರಿಹರಣೀಯಗಳಾಗಿ ನಿಲ್ಲುವುವು.

## ೬೩೨. ಭಗವದಾಜ್ಞಾಪರತಂತ್ರೇಣ ರುದ್ರೇಣ ಮಾಯಾವಾದಸ್ಯ ಅಸುರವಿಮೋಹನಾರ್ಥಂ ಪ್ರವರ್ತಿತತ್ವಪ್ರಪಂಚನಮ್.

ಮನು, ಯಾಜ್ಞವಲ್ಕ್ಯ, ವಸಿಷ್ಠ, ಪರಾಶರ ವ್ಯಾಸ, ವಾಲ್ಮೀಕಿ ಶುಕ, ಶೌನಕ, ಭರದ್ವಾಜ, ಆಪಸ್ತಂಬ, ಬೋಧಾಯನ ಇವರೇ ಮುಂತಾಗಿ ಪರಮವೈದಿಕೋತ್ತಮರೆನಿಸಿಕೊಂಡ ಮಹರ್ಷಿಗಳಿಂದಲೂ, ಟಂಕ, ದ್ರಮಿಡ, ಗುಹದೇವ, ಭಾರುಚಿ ಮುಂತಾದ ಪೂರ್ವಾಚಾರ್ಯರುಗಳಿಂದಲೂ, ನಿಷ್ಕಂಟಕವಾಗಿ ಪ್ರಚುರ

ಪಡಿಸಲ್ಪಟ್ಟ ಪರಮವೈದಿಕಸಿದ್ಧಾಂತವನ್ನು ಅನ್ಯಥಾಕರಿಸುವ ಉದ್ದೇಶದಿಂದ ಅಸುರ ಜನವಿಮೋಹನಕ್ಕಾಗಿ ಪ್ರವರ್ತಿಸಿರುವ ಪುಂಡರೀಕಾಕ್ಷನ ಅನುಲ್ಲಂಘನೀಯವಾದ ಅಪ್ಪಣೆಯಿಂದ ಪಾರ್ವತೀವಲ್ಲಭನಾದ ವಿರೂಪಾಕ್ಷನು ಕಲಿಯುಗದಲ್ಲಿ ಬ್ರಾಹ್ಮಣ ರೂಪದಿಂದ ಅವತರಿಸಿ ಮಾಯಾವಾದವನ್ನು ಲೋಕದಲ್ಲಿ ಹರಡಿದನು; ಮತ್ತು ಕಪಿಲ, ಗೌತಮ, ಕಣಾದ ಮುಂತಾದ ಅನೇಕರಿಗೆ ತನ್ನ ಶಕ್ತಿಯಿಂದ ಮತಿ ಗೇಡನ್ನು ಉಂಟುಮಾಡಿ ಅವರ ಮೂಲಕವಾಗಿಯೂ ಶಾಸ್ತ್ರಾಭಾಸಗಳನ್ನು ಪ್ರಚುರಪಡಿಸಿದನು. ಹೇಗೆಂದರೆ—

ಪದ್ಮಪುರಾಣದ ಉತ್ತರಖಂಡದೊಳಗೆ ಉಮಾಮಹೇಶ್ವರಸಂವಾದಪ್ರಕರಣದಲ್ಲಿ ರುದ್ರನು ಏಕಾದಶೀಮಾಹಾತ್ಮ್ಯವನ್ನು ವಿಸ್ತರವಾಗಿ ಪಾರ್ವತಿಗೆ ಉಪದೇಶಿಸಿ, ಹರಿದಿನದಲ್ಲಿ ಪಾಷಂಡರ ದರ್ಶನಸ್ಪರ್ಶನಸಲ್ಲಾಪಸಹವಾಸಗಳನ್ನು ವೈದಿಕನಾದವನು ಮಾಡಕೂಡದೆಂದು ಪ್ರಸಂಗವಶಾತ್ ನಿರೂಪಿಸಲು ನಾರೀಮಣಿಯಾದ ಪಾರ್ವತಿ ಸಂದೇಹಗೊಂಡು ಎಲೈ ಪ್ರಾಣವಲ್ಲಭನೆ! ಜಟೆ, ಕಪಾಲ, ಭಸ್ಮ, ಚರ್ಮ, ಅಸ್ಥಿ, ರುದ್ರಾಕ್ಷ ಮುಂತಾದ ಪಾಷಂಡಚಿಹ್ನಗಳು ಶಾಸ್ತ್ರದಲ್ಲಿ ವೈದಿಕೋತ್ತಮರಿಗೆ ನಿಷಿದ್ಧಗಳಾಗಿದ್ದರೂ ಪರಮಭಾಗವತೋತ್ತಮನಾದ ನೀನೇ ಅವುಗಳನ್ನು ಹೇಗೆ ಧರಿಸುತ್ತಿರುವಿ? ಎಂದು ಪ್ರಶ್ನೆಮಾಡಿದ ಸಂದರ್ಭದಲ್ಲಿ **"ನಮುಚ್ಯಾದ್ಯಾ ಮಹಾದೈತ್ಯಾಃ ಪುರಾ ಸ್ವಾಯಂಭುವೇಽನ್ತರೇ"** ಎಂದು ಉಪಕ್ರಮಿಸಿ ಅತಿವಿಪುಲವಾದ ಗ್ರಂಥಸಂದರ್ಭದಿಂದ ಪಾರ್ವತಿಯ ಪ್ರಶ್ನೆಗೆ ಪ್ರತ್ಯುತ್ತರವನ್ನು ಹೇಳಿದ ಕ್ರಮವೆಂತೆಂದರೆ—ಎಲೈ ಪ್ರಾಣಕಾಂತೆಯೆ! ಅತಿಬಲಿಷ್ಠರಾದ **ನಮುಚಿಯೇ** ಮೊದಲಾದ ದೈತ್ಯರುಗಳು ವಿಷ್ಣುಭಕ್ತಿಬಲವನ್ನು ಅವಲಂಬಿಸಿ, ಇಂದ್ರನೇ ಮೊದಲಾದ ವಿಷ್ಣುಭಕ್ತರ ಸ್ವರ್ಗಾದಿರಾಜ್ಯಗಳನ್ನು ಬಲಾತ್ಕಾರದಿಂದ ಕಿತ್ತುಕೊಂಡು ತಾವೇ ಅನುಭವಿಸುತ್ತಿರುವಾಗ ದೇವತೆಗಳು ಶ್ರೀಮನ್ನಾರಾಯಣನನ್ನು ಮರೆಹೊಕ್ಕು ತಮ್ಮ ದುಃಖವನ್ನು ಪರಿಹರಿಸಿಕೊಡಬೇಕೆಂದು ಪ್ರಾರ್ಥಿಸಿಕೊಂಡ ಸಂದರ್ಭದಲ್ಲಿ ಶರಣಾಗತರಕ್ಷಣೆಗಾಗಿ ದೀಕ್ಷೆಯನ್ನು ವಹಿಸಿರುವ ಪುಂಡರೀಕಾಕ್ಷನು ಭಗವದ್ಭಕ್ತಿಯುಕ್ತರಾಗಿರುವ ನಮುಚಿ ಮೊದಲಾದ ದೈತ್ಯರನ್ನು ಭಕ್ತಿಸಮಕಾಲದಲ್ಲಿ ನಿಗ್ರಹಿಸುವುದು ಅಯುಕ್ತವೆಂದು ತಿಳಿದು, ಮೊತ್ತಮೊದಲು ತನ್ನಲ್ಲಿ ಅವರಿಗೆ ಅಭಿಮುಖ್ಯವನ್ನು ತಪ್ಪಿಸಿ ವೈಮುಖ್ಯವನ್ನು ಉಂಟುಮಾಡುವುದಕ್ಕಾಗಿಯೂ, ಅನಂತರದಲ್ಲಿ ಅವರನ್ನು ಆಯಾಸವಿಲ್ಲದೆ ನಿಗ್ರಹಿಸುವುದಕ್ಕಾಗಿಯೂ ಸಂಕಲ್ಪಿಸಿದವನಾಗಿ ನನ್ನನ್ನು ಕುರಿತು ಹೀಗೆ ಆಜ್ಞಾಪಿಸಿದನು—

ಇತ್ಯಾಕರ್ಣ್ಯ ಹರಿರ್ವಾಕ್ಯಂ ದೇವಾನಾಮುಭಯಾರ್ಥಿನಾಂ ।
ತಾಂಶ್ಚ ವೃದ್ಧಾರ್ಥವಿದಿತ್ವಾಥ ಮಾಮಾಹ ಪುರುಷೋತ್ತಮಃ ॥

ಶ್ರೀ ಭಗವಾನುವಾಚ—

ತ್ವಂ ಚ ರುದ್ರ ಮಹಾಬಾಹೋ ಮೋಹನಾರ್ಥಂ ಸುರದ್ವಿಷಾಂ ।
ಪಾಷಂಡಾಚರಣಂ ಧರ್ಮಂ ಕುರುಷ್ವ ಸುರಸತ್ತಮ ॥
ತಾಮಸಾನಿ ಪುರಾಣಾನಿ ರಚಯಸ್ವ ಚ ತಾನ್ ಪ್ರತಿ ।
ಮೋಹನಾನಿ ಚ ಶಾಸ್ತ್ರಾಣಿ ತ್ವಂ ಕುರುಷ್ವ ಮಹಾಮತೇ ॥

ದೇವಶ್ರೇಷ್ಠನಾದ ಎಲೈ ರುದ್ರನೆ! ಸಾತ್ತ್ವಿಕಪ್ರಕೃತಿಗಳಾದ ದೇವತೆಗಳಿಗೆ ದ್ರೋಹವನ್ನು ನಡಸುತ್ತಿರುವ ದೈತ್ಯರಿಗೆ ಮೋಹವುಂಟಾಗುವಂತೆ ಎಂದರೆ ಮತಿಗೇಡು ಉಂಟಾಗುವಂತೆ ನೀನೂ ಪಾಷಂಡರ ಆಚರಣೆಯನ್ನು ಅವಲಂಬಿಸು; ಅವರಿಗಾಗಿ ಅನೇಕವಾದ ತಾಮಸಪುರಾಣಗಳನ್ನು ಬರೆದಿಡು; ಬುದ್ಧಿಮೋಹಕವಾದ ಶಾಸ್ತ್ರಗಳನ್ನೂ ರಚಿಸು; ಇವೇ ಮೊದಲಾಗಿ ಅನೇಕಾಜ್ಞೆಗಳನ್ನಿತ್ತು ಪುನಃ ಹೇಳಿದುದೇನೆಂದರೆ—

................ .. ...................ವಂಶಂ ತಾಂಶ್ಚ ಮಹಾಮುನೀನ್ ।
ತವ ಶಕ್ತ್ಯಾ ಸಮಾವಿಶ್ಯ ಕುರುಷ್ವ ಜಗತೋ ಹಿತಂ ।
ಕಥಯಿಷ್ಯಂತಿ ತೇ ವಿಪ್ರಾಸ್ತಾಮಸಾನಿ ಜಗತ್ರಯೇ ॥
ಪುರಾಣಾನಿ ಚ ಶಾಸ್ತ್ರಾಣಿ ತ್ವದ್ಬಲೇನೋಪಬೃಹ್ಮಿತಾಃ ।
ತಥಾ ಪಾಶುಪತಂ ಶಾಸ್ತ್ರಂ ತ್ವಮೇವಕುರು ಸುವ್ರತ ॥
ಕಂಕಾಲಂ ಚೈವ ಪಾಷಂಡಮಹಾಶೈವಾದಿಭೇದತಃ ।
ಅವಲಂಬ್ಯ ಮತಂ ಸಮ್ಯಗ್ವೇದಬಾಹ್ಯಾ ದ್ವಿಜಾಧಮಾಃ ॥
ಭಸ್ಮಾದಿಧಾರಣಾತ್ಸರ್ವೇ ಭವೇಯುಸ್ತೇ ನ ಸಂಶಯಃ ।
ತ್ವಾಂ ಪರತ್ವೇನ ಶಂಸಂತಿ ಸರ್ವಶಾಸ್ತ್ರೇಷು ತಾಮಸಾಃ ॥
ಅಹಮಪ್ಯವತಾರೇಷು ತ್ವಾಂ ಚ ರುದ್ರ ಮಹಾಬಲ ।
ತಾಮಸಾನಾಂ ಮೋಹನಾರ್ಥಂ ಪೂಜಯಾಮಿ ಯುಗೇಯುಗೇ ॥
ಮತಮೇತದವಷ್ಟಭ್ಯ ಚರನ್ನೇವ ನ ಸಂಶಯಃ ।

ಎಲೈ ಭಾಗವತೋತ್ತಮನಾದ ಮಹಾಶಿವನೆ! ತಾಮಸಪ್ರಕೃತಿಗಳಾದ ದೈತ್ಯರ ಕಡೆಯಿಂದ ಸಾತ್ತ್ವಿಕಜನರಿಗೆ ಉಂಟಾಗಿರುವ ತೊಂದರೆಗಳನ್ನು ತಪ್ಪಿಸಿ ಲೋಕಕ್ಕೆಲ್ಲಾ ಹಿತವನ್ನು ಮಾಡುವುದಕ್ಕೋಸ್ಕರ ನೀನು ಈಗ ಮಾಡಬೇಕಾದ ಕೆಲಸಗಳೇನೆಂದರೆ—ಅನೇಕಮಹಾಮುನಿಗಳನ್ನೂ, ಅವರ ವಂಶದವರನ್ನೂ ನಿನ್ನ ಶಕ್ತಿಯಿಂದ ಆಕ್ರಮಿಸಿ ಅವರಿಗೆ ಮತಿಗೇಡನ್ನು ಉಂಟುಮಾಡು; ಆಗ ಅವರು

ನಿನ್ನ ಬಲದಿಂದ ಉತ್ತೇಜಿತರಾಗಿ ತಾಮಸಪುರಾಣಗಳನ್ನೂ, ತಾಮಸಶಾಸ್ತ್ರಗಳನ್ನೂ ರಚಿಸುವರು; ಮತ್ತು ಪಾಶುಪತ, ಕಂಕಾಳ, ಪಾಷಂಡ, ಶೈವ, ಮಹಾಶೈವ, ಕಾಪಾಲ, ಲಾಗುಡ ಮೊದಲಾದ ತಾಮಸಶಾಸ್ತ್ರಗಳನ್ನೂ ನೀನೇ ರಚಿಸು; ಆಗ ಆ ಬ್ರಾಹ್ಮಣಾಧಮರೆಲ್ಲರೂ ಈ ಮತವನ್ನವಲಂಬಿಸಿ ವೇದವಿರುದ್ಧವಾದ ಭಸ್ಮಾದಿಧಾರಣದಿಂದ ವೇದಬಾಹ್ಯರಾಗುವರು; ಇದರಲ್ಲಿ ಸಂಶಯವಿಲ್ಲ; ತಮೋಗುಣದಿಂದ ಆವರಿಸಲ್ಪಟ್ಟ ಅವರು ಆ ಆ ಶಾಸ್ತ್ರಗಳಲ್ಲಿ ನಿನ್ನನ್ನೇ ಸಾಕ್ಷಾತ್ಪರತತ್ತ್ವವಾಗಿ ಹೊಗಳುವರು; ತಾಮಸಪುರುಷರಿಗೆ ಮತ್ತಷ್ಟು ಮೋಹವನ್ನು (ಅಜ್ಞಾನವನ್ನು) ಹೆಚ್ಚಿಸುವುದಕ್ಕೋಸ್ಕರ ನಾನೂ ಸಹ ಅನೇಕಾವತಾರಗಳಲ್ಲಿ ಈ ತಾಮಸಮತವನ್ನೇ ಅವಲಂಬಿಸಿದವನಾಗಿ ಅದರಂತೆಯೇ ಆಚರಿಸುತ್ತ ನಿನ್ನನ್ನು ಯುಗಯುಗದಲ್ಲಿಯೂ ಪೂಜಿಸುವೆನು. ಆದಕಾರಣ ನಮುಚಿಮೊದಲಾದ ದೈತ್ಯರಿಗೆ ಶ್ರದ್ಧೆಯೂ ನಂಬಿಕೆಯೂ ಉಂಟಾಗುವುದಕ್ಕಾಗಿ ಪಾಷಂಡಚಿಹ್ನೆಗಳನ್ನು ಆವಶ್ಯಕವಾಗಿಯೂ ನೀನು ಧರಿಸಬೇಕು. ಎಂದು ಅಪ್ಪಣೆಯನ್ನಿತ್ತನು;

ಆದಕಾರಣ ಎಲೈ ಕಾಂತೆಯೆ! ಪರಮವೈದಿಕೋತ್ತಮತ್ವವೇ ನನ್ನ ನಿಜಸ್ವರೂಪವಾಗಿ ಇದ್ದರೂ ಬಹಿರಂಗವಾಗಿ ಈ ಪಾಷಂಡಚಿಹ್ನೆಗಳನ್ನು ಧರಿಸುತ್ತಿರುವ ವಿಷಯದಲ್ಲಿ ಭಗವಂತನ ಅನುಲ್ಲಂಘನೀಯವಾದ ಆಜ್ಞಾವಿಶೇಷವೇ ಕಾರಣವಾಗಿ ಇರುವುದೆಂದು ತಿಳಿ. ಎಂಬುದಾಗಿ ಪಾರ್ವತಿಯ ಪ್ರಶ್ನೆಗೆ ಪ್ರತ್ಯುತ್ತರವನ್ನು ಹೇಳಿ ಉಪಸಂಹಾರದಲ್ಲಿ ಪುನಃ ಈ ರೀತಿ ಹೇಳುತ್ತಾನೆ.—

ಪ್ರಥಮಂ ಹಿ ಮಯೈವೋಕ್ತಂ ಶೈವಂ ಪಾಶುಪತಾದಿಕಂ।
ಮಚ್ಛಕ್ತ್ಯಾವೇಶಿತೈರ್ವಿಪ್ರೈಃ ಸಂಪ್ರೋಕ್ತಾನಿ ತತಃಪರಂ॥
ಮಾಯಾವಾದಮಸಚ್ಛಾಸ್ತ್ರಂ ಪ್ರಚ್ಛನ್ನಂ ಬೌದ್ಧಮುಚ್ಯತೇ।
ಮಯೈವ ಕಥ್ಯತೇ ದೇವಿ ಕಲೌ ಬ್ರಾಹ್ಮಣರೂಪಿಣಾ॥
ಅಪಾರ್ಥಂ ಶ್ರುತಿವಾಕ್ಯಾನಾಂ ದರ್ಶಿತಂ ಲೋಕಗರ್ಹಿತಂ।
ಕರ್ಮಸ್ವರೂಪಂ ತ್ಯಾಜ್ಯಂ ಯದತ್ರೈವ ಪ್ರತಿಪಾದ್ಯತೇ॥
ಸರ್ವಕರ್ಮಪರಿಭ್ರಷ್ಟಂ ವಿಕರ್ಮಸ್ಥಂ ತದುಚ್ಯತೇ।
ಪರೇಶಜೀವಯೋರೈಕ್ಯಂ ಮಯಾಽತ್ರ ಪ್ರತಿಪಾದ್ಯತೇ॥
ಬ್ರಹ್ಮಣೋಽಪ್ಯಪರಂ ರೂಪಂ ನೈರ್ಗುಣ್ಯಂ ವಕ್ಷ್ಯತೇ ಮಯಾ।
ಸರ್ವಸ್ಯ ಜಗತೋಽಪ್ಯತ್ರ ಮೋಹನಾರ್ಥಂ ಕಲೌ ಯುಗೇ॥
ವೇದಾರ್ಥವನ್ಮಹಾಶಾಸ್ತ್ರಂ ಮಾಯಾವಾದಮವೈದಿಕಂ।
ಮಯೈವ ವಕ್ಷ್ಯತೇ ದೇವಿ ಜಗತಾಂ ನಾಶಕಾರಣಾತ್॥

ಕೇಳು ಪಾರ್ವತಿ ! ಶೈವ ಪಾಶುಪತ ಮುಂತಾದ ಮೋಹಶಾಸ್ತ್ರಗಳನ್ನು ಮೊತ್ತಮೊದಲು ನಾನೇ ಹೇಳಿದೆನು ; ಅನಂತರದಲ್ಲಿ ನನ್ನ ಶಕ್ತಿಯಿಂದ ಮೋಹ ಗೊಳಿಸಲ್ಪಟ್ಟ ಕೆಲವು ಋಷಿಗಳಿಂದಲೂ ತಾಮಸಶಾಸ್ತ್ರಗಳು ರಚಿಸಲ್ಪಟ್ಟವು ; ಕಲಿ ಯುಗದಲ್ಲಿ ಬ್ರಾಹ್ಮಣರೂಪಿಯಾಗಿ ನಾನು ಅವತರಿಸಿ ಹೇಳುವ ಮಾಯಾವಾದ ವೆಂಬ ಅಸಚ್ಛಾಸ್ತ್ರವು ಪ್ರಚ್ಛನ್ನಬೌದ್ಧಮತವೆಂದು ಲೋಕದಲ್ಲಿ ವ್ಯವಹರಿಸಲ್ಪಡು ವುದು ; ವೇದವಾಕ್ಯಗಳಿಗೆಲ್ಲಾ ಲೋಕವಿದ್ವಿಷ್ಟವಾದ ಅಪಾರ್ಥವನ್ನೇ ನಾನು ಆ ಶಾಸ್ತ್ರದಲ್ಲಿ ಕಲ್ಪಿಸಿರುವೆನು ; ಜ್ಞಾನಮಾರ್ಗಕ್ಕೆ ಕರ್ಮಮಾರ್ಗವು ಅತ್ಯಂತವಿರುದ್ಧ ವೆಂದು ಕಲ್ಪಿಸಿ ಅಂಥ ಕರ್ಮಮಾರ್ಗವು ಸರ್ವಥಾ ತ್ಯಾಜ್ಯವೆಂಬುದನ್ನು ಆ ಶಾಸ್ತ್ರ ದಲ್ಲಿ ನಾನು ಹೇಳುವೆನು ; ಜೀವಾತ್ಮನಿಗೆ ಪರಮಾತ್ಮನೊಡನೆ ಸ್ವರೂಪೈಕ್ಯವನ್ನೂ ಅದರಲ್ಲಿ ಕಲ್ಪಿಸುವೆನು ; ಮತ್ತು ಸರ್ವಜ್ಞತ್ವ ಸರ್ವಶಕ್ತಿತ್ವ ನಿರತಿಶಯಬೃಹತ್ತ್ವ ಮೊದಲಾದ ಸ್ವಾಭಾವಿಕಾನಂತಕಲ್ಯಾಣಗುಣಗಳೊಡನೆ ಕೂಡಿರುವ ಬ್ರಹ್ಮಕ್ಕೂ ನಿರ್ಗುಣವಾದ ಮತ್ತೊಂದು ಸ್ವರೂಪವುಂಟೆಂದು ಕಲ್ಪಿಸುವೆನು ; ದುಷ್ಟರಾದ ತಾಮಸಪುರುಷರನ್ನು ನಾಶಗೊಳಿಸುವುದಕ್ಕಾಗಿ ಕಲಿಯುಗದಲ್ಲಿ ಸರ್ವರಿಗೂ ಮೋಹವುಂಟಾಗುವಂತೆ ಅವೈದಿಕವಾದ ಮಾಯಾವಾದಶಾಸ್ತ್ರವನ್ನು ನಿಜವಾದ ವೇದಾರ್ಥವುಳ್ಳದಾಗಿ ತೋರುವಂತೆಯೇ ನಾನು ಹೇಳುವೆನು ಪಾರ್ವತಿ ! ಎಂದು ಹೇಳಿ ಉಪಸಂಹಾರಮಾಡಿರುವನು. ಈ ವಿಷಯವನ್ನೇ ಪೂರ್ವಾಚಾರ್ಯರೂ ಸಹ—

"ಶ್ರೀಶೈಲಬ್ಧ್ವಾ ತ್ರಿಪುರವಿಜಯೀ ಮೋಹನಾರ್ಥಾಮನುಜ್ಞಾಂ
ವಿಶ್ವಂ ಮಿಥ್ಯಾ ಜಗದಿತಿ ಜಗೌ ಶಂಕರೀಭೂಯ ಭೂಯಃ"

ಎಂಬ ಪದ್ಯದಲ್ಲಿ ಸಂಕ್ಷೇಪವಾಗಿ ತೋರಿಸಿರುವರು.

ಶ್ರೀಭಾಷ್ಯಕಾರರ ಭಾಗಿನೇಯರ ಮೊಮ್ಮಕ್ಕಳಾದ ಶ್ರೀವರದರಾಜಸ್ವಾಮಿ ಗಳು ತತ್ತ್ವಸಾರವೆಂಬ ಗ್ರಂಥದಲ್ಲಿ—

"ಕ್ವ ವೇದಾಂತಾಃ ಕ್ವಾಮೀ ನಿಹಿತಮತಯಶ್ಶಂಕರಮತೇ
ವದಂತಃ ಪ್ರಾಮಾಣ್ಯಂ ಭ್ರಮವಿಲಸಿತಂ ವೇದವಚಸಾಂ ।
ಅಹೋ ಯದ್ವದ್ವೃದ್ಧಗ್ರಥಿತಫಣಿತೀನಾಮಥ ಚ ತೇ
ಕಲಿಗ್ರಾಹಗ್ರಸ್ತೈರಗಣಿಷತ ವೇದಾಂತಿನ ಇತಿ ॥"

ಎಂಬ ಈ ಪದ್ಯದಲ್ಲಿ ಮಹಾದೇವಪ್ರಣೀತವಾದ ಮಾಯಾವಾದಶಾಸ್ತ್ರಕ್ಕೂ ವೇದಾಂತಗಳಿಗೂ ಲೇಶಮಾತ್ರವೂ ಸಂಬಂಧವಿಲ್ಲವೆಂದೂ, ಆ ಮತವನ್ನು ಅವಲಂ ಬಿಸಿದವರಿಗೆ ವೇದಾಂತಿಗಳೆಂಬ ಹೆಸರನ್ನು ತಾಮಸಪುರುಷರು ಕಲ್ಪಿಸಿರುವರೆಂದೂ ತೋರಿಸಿರುವರು. ಇವರ ಆಶಯವೇನೆಂದರೆ—

" ಪ್ರತ್ಯಕ್ಷಾದಿಪ್ರಮಾಸಿದ್ಧವಿರುದ್ಧಾರ್ಥಾಭಿಧಾಯಿನಃ ।
ವೇದಾಂತಾ ಯದಿ ಶಾಸ್ತ್ರಾಣಿ ಬೌದ್ಧೈಃ ಕಿಮುಪರಾಧ್ಯತೇ ॥ "

ಎಂಬಂತೆ ಪ್ರತ್ಯಕ್ಷ ಅನುಮಾನ ಆಗಮಗಳೆಂಬ ಸಕಲಪ್ರಮಾಣಗಳಿಗೂ ವಿರುದ್ಧವಾದ ಅರ್ಥಗಳನ್ನು ಹೇಳುತ್ತಿರುವ ಗ್ರಂಥಗಳೂ ಸಹ ವೇದಾಂತಗಳೆಂದೂ, ಶಾಸ್ತ್ರಗಳೆಂದೂ ಗಣನೆಯಲ್ಲಿ ಬರುವುವಾದರೆ—ಬೌದ್ಧರ ಅಪರಾಧವೇನು ? ಅವರ ಗ್ರಂಥಗಳನ್ನೂ ಸಹ ವೇದಾಂತಗಳೆಂದೂ ಶಾಸ್ತ್ರಗಳೆಂದೂ ಏಕೆ ಪರಿಗಣಿಸಬಾರದು ? ಎಂಬುದು ಇವರ ಆಶಯವಾಗಿರುವುದು.

ಯಾದವಪ್ರಕಾಶರೂ—ಈ ಅಭಿಪ್ರಾಯವನ್ನು—

" ವೇದೋಽನೃತೋ ಬುದ್ಧಕೃತಾಗಮೋಽನೃತಃ
ಪ್ರಾಮಾಣ್ಯಮೇತಸ್ಯ ಚ ತಸ್ಯ ಚಾನೃತಂ ।
ಬೋದ್ಧಾಽನೃತೋ ಬುದ್ಧಿಫಲೇ ತಥಾಽನೃತೇ
ಯೂಯಂ ಚ ಬೌದ್ಧಾಶ್ಚ ಸಮಾನಸಂಸದಃ ॥ "

ಎಂಬ ಈ ಪದ್ಯದಿಂದ ವ್ಯಕ್ತವಾಗಿ ಹೇಳಿರುವರು ; ಇದರ ಅರ್ಥವೇನೆಂದರೆ—ಬುದ್ಧಸಿದ್ಧಾಂತದಲ್ಲಿ—ಜ್ಞಾನವೆಂಬ ಒಳಗಿನ ಪದಾರ್ಥವೊಂದೇ ಸತ್ಯವೆಂದೂ ಜ್ಞಾನವ್ಯತಿರಿಕ್ತವಾದ ಬಾಹ್ಯಪದಾರ್ಥವೆಲ್ಲವೂ ಮಿಥ್ಯೆಯಾಗಿರುವುವೆಂದೂ ನಿಶ್ಚಿತವಾಗಿರುವುದು. ಆದುದರಿಂದಲೇ—ವೇದವೂ, ಬುದ್ಧಾಗಮವೂ, ಇವೆರಡರ ಪ್ರಾಮಾಣ್ಯವೂ, ಬುದ್ಧಿಗೆ ಆಶ್ರಯನಾದವನೂ, ಪ್ರಮಾಣಜನ್ಯವಾದ ಬುದ್ಧಿಯೂ, ಅಂಥ ಬುದ್ಧಿಯ ಫಲವೂ, ಇವೆಲ್ಲವೂ ಜ್ಞಾನವ್ಯತಿರಿಕ್ತಗಳಾದ ಬಾಹ್ಯಪದಾರ್ಥಗಳಾದುದರಿಂದ ಮಿಥ್ಯೆಯಾಗಿರುವುವು ; ನಿಮ್ಮ ಸಿದ್ಧಾಂತದಲ್ಲಿ ಜ್ಞಾನಸ್ವರೂಪವಾದ ಬ್ರಹ್ಮವೊಂದೇ ಸತ್ಯವೆಂದೂ ಬ್ರಹ್ಮವ್ಯತಿರಿಕ್ತವಾದುದೆಲ್ಲವೂ ಮಿಥ್ಯೆಯೆಂದೂ ನಿಶ್ಚಿತವಾಗಿರುವುದು ; ಆದುದರಿಂದಲೇ ವೇದವೂ, ಬುದ್ಧಾಗಮವೂ, ಇವೆರಡರ ಪ್ರಾಮಾಣ್ಯವೂ, ಬುದ್ಧಿಗೆ ಆಶ್ರಯನಾದವನೂ, ಪ್ರಮಾಣಜನ್ಯವಾದ ಬುದ್ಧಿಯೂ, ಅಂಥ ಬುದ್ಧಿಯ ಫಲವೂ, ಇವೆಲ್ಲವೂ ಬ್ರಹ್ಮವ್ಯತಿರಿಕ್ತಗಳಾದುದರಿಂದ ಮಿಥ್ಯೆಯಾಗಿರುವುವು ; ಆದಕಾರಣ ನೀವೂ ಬೌದ್ಧರೂ ಒಂದೇ ಗೋಷ್ಠಿಗೆ ಸೇರಿದವರು ; ಎಂಬುದು ಶ್ಲೋಕದ ಅರ್ಥವಾಗಿರುವುದು.

## ೬೩೩. ಅಸುರವಿಮೋಹನಾರ್ಥಂ ಪ್ರವೃತ್ತಸ್ಯ ಮಾಯಾವಾದಸ್ಯ ಮುಮುಕ್ಷ್ವನುಪಾದೇಯತ್ವಂ.

ಹೀಗೆ ಅಂತಿಮಯುಗವೇದಾಂತಿಗಳ ಜನ್ಮರಹಸ್ಯವು ಶ್ರೀಮತ್ಪದ್ಮಪುರಾಣದಲ್ಲಿಯೂ, ಪೂರ್ವಾಚಾರ್ಯರ ಶ್ರೀಸೂಕ್ತಿಗಳಲ್ಲಿಯೂ ಸ್ಫುಟವಾಗಿರುವುದರಿಂದ ಜಗ

ನ್ಮೋಹನಾರ್ಥವಾಗಿ ಹರಡಲ್ಪಟ್ಟ ಈ ಮತವು ಸಾತ್ತ್ವಿಕರಾದ ಮುಮುಕ್ಷು ಗಳಿಗೆ ಗ್ರಾಹ್ಯವಾಗಲಾರದು; ತತ್ತ್ವಜ್ಞಾನದಿಂದ ಮೋಕ್ಷಸಿದ್ಧಿಯಾಗುವುದಲ್ಲದೆ ಅತತ್ತ್ವಜ್ಞಾನದಿಂದ ಮೋಕ್ಷವು ಸಿದ್ಧಿಸಲಾರದಷ್ಟೆ. ಸರ್ವಜ್ಞತ್ವ, ಸರ್ವಶಕ್ತಿತ್ವ, ಸರ್ವಶೇಷಿತ್ವ, ಸರ್ವಶರೀರಕತ್ವ, ಸೃಷ್ಟ್ಯಾದಿಕಾರಣತ್ವ, ಸರ್ವಾಂತರ್ಯಾಮಿತ್ವ ಪ್ರಯುಕ್ತಸರ್ವನಿಯಂತೃತ್ವ, ಸರ್ವಾಧಾರತ್ವ ಮುಂತಾದ ಅನಂತಕಲ್ಯಾಣಗುಣ ವಿಶಿಷ್ಟವಾದ ಬ್ರಹ್ಮತತ್ತ್ವವನ್ನು ಸರ್ವವೇದಪರಿಗೃಹೀತವಾದ ಪುರುಷಸೂಕ್ತದಲ್ಲಿ ಉಪದೇಶಿಸಿ—" **ತಮೇವಂ ವಿದ್ವಾನಮೃತ ಇಹ ಭವತಿ-ನಾನ್ಯಃ ಪಂಥಾ ಅಯನಾಯ ವಿದ್ಯತೇ**" ಎಂಬುದಾಗಿ ಉಕ್ತಸಮಸ್ತಗುಣವಿಶಿಷ್ಟಪರಮಾತ್ಮೋ ಪಾಸನವೇ ಮೋಕ್ಷಸಾಧನವೆಂದು **ಏವಂ** ಶಬ್ದದಿಂದ ತೋರಿಸಿ, ಅಂಥ ವಿಶಿಷ್ಟೋ ಪಾಸನವನ್ನು ಬಿಟ್ಟರೆ ಮೋಕ್ಷಕ್ಕೆ ಬೇರೊಂದು ಮಾರ್ಗವೂ ಇಲ್ಲವೆಂದೂ ಉಪದೇ ಶಿಸಿರುವಾಗ ನಿರ್ಗುಣಬ್ರಹ್ಮವು ತತ್ತ್ವವೆಂದಾಗಲಿ ನಿರ್ಗುಣೋಪಾಸನವು ಮೋಕ್ಷ ಸಾಧನವೆಂದಾಗಲಿ ಸಿದ್ಧವಾಗಲಾರದಷ್ಟೆ. ಮತ್ತು ಅಂಥ ಅತತ್ತ್ವವನ್ನು ಉಪ ದೇಶಿಸುವ ಗ್ರಂಥವು ತತ್ತ್ವೋಪದೇಶಕಶಾಸ್ತ್ರವೆಂದೂ ಹೇಳಿಸಿಕೊಳ್ಳಲಾರದಷ್ಟೆ.

ಆದಕಾರಣ ಸ್ವಯಂಪ್ರಕಾಶವಾಗಿಯೂ ನಿತ್ಯನಿರ್ದೋಷವಾಗಿಯೂ ಸಮಸ್ತಕಲ್ಯಾಣಗುಣಾಕರವಾಗಿಯೂ ಇರುವ ಬ್ರಹ್ಮಕ್ಕೆ ಅವಿದ್ಯಾದಿದೋಷ ಸಂಬಂಧವುಂಟಾಗಲು ಅವಕಾಶವಿಲ್ಲವಾದುದರಿಂದಲೂ, ಪ್ರಪಂಚಕ್ಕೆ ಮಿಥ್ಯಾ ತ್ವವು ಸಂಭವಿಸಲಾರದೆ ಸತ್ಯತ್ವವೇ ಸ್ಥಿರವಾಗಿರುವುದರಿಂದಲೂ, ಬ್ರಹ್ಮವು ಪ್ರಪಂಚಭ್ರಮಕ್ಕೆ ಆಶ್ರಯವಾಗಲಾರದಾದಕಾರಣ "ಪ್ರಪಂಚಾಧ್ಯಾಸವೇ ಪ್ರ ಪಂಚಸೃಷ್ಟಿ" ಎಂಬ ಪ್ರಲಾಪಕ್ಕೆ ಅವಕಾಶವಿಲ್ಲ; ಪಾರಮಾರ್ಥಿಕವಾಗಿಯೇ ಬ್ರಹ್ಮವು ಪ್ರಪಂಚಕ್ಕೆ ಉಪಾದಾನಕಾರಣವಾಗಿಯೂ ನಿಮಿತ್ತಕಾರಣವಾಗಿಯೂ ಇರುವುದು.

## ೬೩೪. ಸದ್ರೂಪಸ್ಯ ಬ್ರಹ್ಮಣಶ್ಚಿದಚಿದೀಶ್ವರಾಖ್ಯಪ್ರಪಂಚರೂಪೇಣ ಪರಿಣಾಮ ಇತಿ ಯಾದವಪ್ರಕಾಶಮತಸ್ಯ ಖಂಡನಂ

ಈ ಸಂದರ್ಭದಲ್ಲಿ ಯಾದವಪ್ರಕಾಶಮತದವರು—" ಮೃತ್ಪಿಂಡವು ಘಟ- ಶರಾವ-ಮಣಿಕಾದಿರೂಪವಾಗಿ ಪರಿಣಮಿಸುವಂತೆಯೂ, ಸಮುದ್ರವು ಫೇನ- ತರಂಗ-ಬುದ್ಬುದರೂಪವಾಗಿ ಪರಿಣಮಿಸುವಂತೆಯೂ, ಸತ್ಸ್ವರೂಪವಾದ ಬ್ರಹ್ಮವು ಚಿದಚಿದೀಶ್ವರರೆಂಬ ಪ್ರಪಂಚಾಕಾರವಾಗಿ ಪರಿಣಮಿಸುವುದು" ಎಂದು ಹೇಳು ವರು.

ಇದು ಸಂಗತವಲ್ಲ. ಬ್ರಹ್ಮಸ್ವರೂಪಕ್ಕೆ ಪರಿಣಾಮವನ್ನು ಒಪ್ಪಿಕೊಳ್ಳುವುದಾದರೆ ವಿಕಾರಿತ್ವಾದಿದೋಷಗಳೆಲ್ಲಾ ಸ್ವರೂಪದಲ್ಲಿಯೇ ಅವರ್ಜನೀಯಗಳಾಗಿ ಬಂದೊದಗುವುವು. ಆಗ ಶ್ರುತಿಪ್ರಮಾಣದಿಂದ ಅವಗತನಾಗಿರುವ ನಿರ್ವಿಕಾರತ್ವವೂ, ಕ್ಲೇಶಕರ್ಮಾದಿದೋಷರಾಹಿತ್ಯವೂ, ಸ್ವಾಭಾವಿಕಾನವಧಿಕಾತಿಶಯಾಸಂಖ್ಯೇಯಕಲ್ಯಾಣಗುಣಗಣವೂ, ನಿತ್ಯೈಶ್ವರ್ಯವೂ ವಿರುದ್ಧವಾಗುವುವು.

## ೬೩೫. ಉಪಾಧ್ಯುಪಹಿತಸ್ಯ ಬ್ರಹ್ಮಣೋ ಜಗದುಪಾದಾನತ್ವಮಿತಿ ಭಾಸ್ಕರಮತಸ್ಯ ಖಂಡನಂ.

ಈ ಸಂದರ್ಭದಲ್ಲಿ ಭಾಸ್ಕರಮತದವರು—"ಶಕ್ತಿಯೆಂಬ ಉಪಾಧಿಯಿಂದ ಆಕ್ರಾಂತವಾದ ಬ್ರಹ್ಮವು ಜಗತ್ತಿಗೆ ಉಪಾದಾನಕಾರಣವಾಗುವುದಲ್ಲದೆ ಸ್ವರೂಪದಿಂದಲೇ ಉಪಾದಾನಕಾರಣವಲ್ಲ; ಉಪಾಧಿಗೆ ಪರಿಣಾಮವುಂಟಾಗುವುದಲ್ಲದೆ ಸ್ವರೂಪಕ್ಕೆ ಪರಿಣಾಮವಿಲ್ಲವಾದುದರಿಂದ ನಿರ್ವಿಕಾರತ್ವಾದಿಶ್ರುತಿಗಳಿಗೂ ವಿರೋಧವಿಲ್ಲ" ಎಂದು ಹೇಳುವರು.

ಇದೂ ಸಂಗತವಲ್ಲ—ಕಾರ್ಯೋಪಯೋಗಿಯಾದ ಅಪೃಥಕ್ಸಿದ್ಧವಿಶೇಷಣವಲ್ಲವೆ ಶಕ್ತಿಯೆನಿಸಿಕೊಳ್ಳುವುದು. ಇಂಥ ಶಕ್ತಿಯನ್ನು ಬ್ರಹ್ಮಸ್ವರೂಪಾತ್ಮಕವಾಗಿ ನೀವು ಅಂಗೀಕರಿಸುವಿರೋ? ಅಥವಾ ಸ್ವರೂಪಕ್ಕಿಂತಲೂ ಭಿನ್ನವಾಗಿ ಹೇಳುವಿರೋ? ಅಥವಾ ಭಿನ್ನಾಭಿನ್ನವನ್ನಾಗಿ ಹೇಳುವಿರೋ?

ಪ್ರಥಮಪಕ್ಷದಲ್ಲಿ ಬ್ರಹ್ಮಸ್ವರೂಪಕ್ಕೇ ಪರಿಣಾಮವನ್ನು ಹೇಳಿದಂತೆ ಆಗುವುದಾದುದರಿಂದ ನಿರ್ವಿಕಾರತ್ವಾದಿಶ್ರುತಿವಿರೋಧವೆಂಬ ದೋಷಕ್ಕೆ ಪರಿಹಾರವೇ ಆಗಲಿಲ್ಲ.

ದ್ವಿತೀಯಪಕ್ಷವನ್ನು ಅವಲಂಬಿಸುವಿರಾದರೆ ನಮ್ಮ ಮತವನ್ನು ಪ್ರವೇಶಿಸಿದಂತಾಗುವುದು. ನಮ್ಮ ಮತದಲ್ಲಿ ಬ್ರಹ್ಮಸ್ವರೂಪಕ್ಕಿಂತಲೂ ಭಿನ್ನವಾದ ಪ್ರಕೃತಿಯೆಂಬ ಶಕ್ತಿಯಿಂದ ಉಪಹಿತವಾದ ಬ್ರಹ್ಮಕ್ಕೆ ಉಪಾದಾನಕಾರಣತ್ವವನ್ನು ಒಪ್ಪಿರುವೆವಾದುದರಿಂದ ಶಕ್ತಿವಿಶಿಷ್ಟಬ್ರಹ್ಮಕ್ಕೆ ಪರಿಣಾಮವೂ, ಶಕ್ತಿವಿಶಿಷ್ಟಬ್ರಹ್ಮಕ್ಕೆ ವಿಕಾರಿತ್ವಾದಿಗಳೂ ಉಂಟಾದರೂ ವಿಶೇಷ್ಯಸ್ವರೂಪಕ್ಕೆ ಪರಿಣಾಮವಾಗಲಿ ವಿಕಾರಿತ್ವಾದಿಗಳಾಗಲಿ ಪ್ರಸಂಗಿಸಲಾರವು.

ತೃತೀಯಪಕ್ಷದಲ್ಲಿ—ಅಭಿನ್ನತ್ವಾಂಶವನ್ನು ತೆಗೆದುಕೊಂಡು ಪುನಃ ಸವಿಕಾರತ್ವಾದಿಗಳು ಬ್ರಹ್ಮಸ್ವರೂಪಕ್ಕೆ ಬಂದೇ ಬರುವುವು. ಇದರಿಂದಲೇ ಸಮಸ್ತಪದಾರ್ಥಗಳಿಗೂ ಬ್ರಹ್ಮಸ್ವರೂಪದೊಡನೆ ಭಿನ್ನಾಭಿನ್ನತ್ವವನ್ನು ಅಂಗೀಕರಿಸುವ

ಪಕ್ಷವೂ ಅಸಂಗತವೆಂದು ತಿಳಿಯಬಹುದು. ಸನ್ಮಾತ್ರವೇ ಬ್ರಹ್ಮವೆಂದೂ ಈಶ್ವರನು ಬ್ರಹ್ಮವಲ್ಲವೆಂದೂ ಹೇಳುತ್ತಿರುವ ಪಕ್ಷವು ಈಶ್ವರನಿಗೇ ನಾವು ಬ್ರಹ್ಮತ್ವವನ್ನು ಸಾಧಿಸಿದುದರಿಂದ ನಿರಾಕೃತವಾಗಿರುವುದು.

### ೬೩೬. ಪರಮತೇ ಸಾಮಾನಾಧಿಕರಣ್ಯಸ್ಯ ಏಕರೂಪತ್ವಾಭಾವ ಪ್ರದರ್ಶನಂ.

ಉಕ್ತವಾದ ಶಂಕರ-ಭಾಸ್ಕರ-ಯಾದವರೆಂಬ ಮೂವರ ಮತದಲ್ಲಿಯೂ ಎಲ್ಲಾ ಸಾಮಾನಾಧಿಕರಣ್ಯವಾಕ್ಯಗಳಿಗೂ ಏಕರೂಪವಾದ ಅರ್ಥವನ್ನು ಅಂಗೀಕರಿಸದೆ ವೈರೂಪ್ಯವನ್ನು ಅಂಗೀಕರಿಸುವುದರಿಂದ ವೈರೂಪ್ಯವೇ ದೋಷವಾಗಿರುವುದು.

ಮತ್ತು—"ಜ್ಯೋತೀಂಷಿ ವಿಷ್ಣುರ್ಭುವನಾನಿ ವಿಷ್ಣುಃ" ಇತ್ಯಾದಿ ಸ್ಥಳದಲ್ಲಿ ಸಾಮಾನಾಧಿಕರಣ್ಯಕ್ಕೆ ಬಾಧಾರ್ಥತ್ವವನ್ನು ಹೇಳುವರು ಎಂದರೆ— "ರಾತ್ರೌ ಚೋರಃ ಸ್ಥಾಣುಃ" ಎಂಬ ಸ್ಥಳದಲ್ಲಿ "ರಾತ್ರಿಯಲ್ಲಿ ನಾವು ಯಾವ ವಸ್ತುವನ್ನು ಚೋರನೆಂದು ತಿಳಿದಿದ್ದೆವೋ ಅದು ಚೋರನಲ್ಲ; ಕಿಂತು ಮೋಟು ಮರ" ಎಂಬುದಾಗಿ ಅಭಿಪ್ರಾಯವನ್ನು ಅಂಗೀಕರಿಸಿ ಚೋರತ್ವಕ್ಕೆ ಬಾಧೆಯನ್ನು ಹೇಳುವಕಾರಣ ಇಂಥ ಸಾಮಾನಾಧಿಕರಣ್ಯವನ್ನು ಬಾಧಾರ್ಥದಲ್ಲಿ ಸಾಮಾನಾಧಿಕರಣ್ಯವೆಂದು ಹೇಳುವರು.

ಅದರಂತೆ—"ಜ್ಯೋತೀಂಷಿ ವಿಷ್ಣುಃ" ಇತ್ಯಾದಿಸ್ಥಳಗಳಲ್ಲಿಯೂ "ಜ್ಯೋತಿಸ್ಸು ಮೊದಲಾದ ಸಮಸ್ತಪದಾರ್ಥಗಳಿಗೂ ವಿಷ್ಣುವು ಅಂತರ್ಯಾಮಿಯಾಗಿರುವಪ್ರಯುಕ್ತ ವಿಷ್ಣುವಿನೊಡನೆ ತಾದಾತ್ಮ್ಯವಿರುವುದರಿಂದ ಈ ಸಾಮಾನಾಧಿಕರಣ್ಯವು ಪ್ರವರ್ತಿಸಿರುವುದು" ಎಂದು ಹೇಳದೆ "ನಾವು ಯಾವುದನ್ನು ಜ್ಯೋತಿಸ್ಸೆಂದು ತಿಳಿಯುತ್ತಿದ್ದೆವೋ ಅದು ಜ್ಯೋತಿಸ್ಸಲ್ಲ ಕಿಂತು ವಿಷ್ಣುವು; ಮತ್ತು ನಾವು ಯಾವುದನ್ನು ಭುವನವೆಂದು ತಿಳಿಯುತ್ತಿದ್ದೆವೋ ಅದು ಭುವನವಲ್ಲ ಕಿಂತು ವಿಷ್ಣುವು" ಈ ರೀತಿಯಾಗಿ ಬಾಧಾರ್ಥದಲ್ಲಿಯೇ ಸಾಮಾನಾಧಿಕರಣ್ಯವು ಪ್ರವರ್ತಿಸಿರುವುದೆಂದು ಹೇಳುವರು.

ಈ ಪಕ್ಷದಲ್ಲಿ—ಜ್ಯೋತಿಃಪದಕ್ಕೂ ಭುವನಪದಕ್ಕೂ ಜ್ಯೋತಿರ್ಭ್ರಮಾಧಿಷ್ಠಾನದಲ್ಲಿಯೂ ಭುವನಭ್ರಮಾಧಿಷ್ಠಾನದಲ್ಲಿಯೂ ಲಕ್ಷಣಾವೃತ್ತಿಯನ್ನು ಅಂಗೀಕರಿಸಿ "ವಿಷ್ಣುವು ಜ್ಯೋತಿರ್ಭ್ರಮಕ್ಕೆ ಅಧಿಷ್ಠಾನವು; ವಿಷ್ಣುವು ಭುವನಭ್ರಮಕ್ಕೆ ಅಧಿಷ್ಠಾನವು" ಎಂದು ಅರ್ಥವನ್ನು ಹೇಳಬೇಕಾಗುವುದರಿಂದ ಜ್ಯೋತಿರಾದಿಶಬ್ದ

ಗಳಿಗೆ ಮುಖ್ಯಾರ್ಥವನ್ನು ಪರಿತ್ಯಜಿಸಿ ಲಕ್ಷಣಾವೃತ್ತಿಯನ್ನು ಸ್ವೀಕರಿಸಿದುದೇ ದೋಷವಾಗುವುದು.

ಅಥವಾ "ಇತಿ ಭ್ರಮಾಧಿಷ್ಠಾನಂ" ಎಂಬ ಎರಡು ಪದಗಳನ್ನು ಅಧ್ಯಾಹಾರಮಾಡಿಕೊಂಡು "ವಿಷ್ಣುಃ ಜ್ಯೋತೀಂಷೀತಿ ಭ್ರಮಾಧಿಷ್ಠಾನಂ ; ವಿಷ್ಣುಃ ಭುವನಾನೀತಿ ಭ್ರಮಾಧಿಷ್ಠಾನಂ" ಎಂಬುದಾಗಿ ಅನ್ವಯಿಸಿ ವಿಷ್ಣುವು ಜ್ಯೋತಿಸ್ಸೆಂಬ ಭ್ರಮಕ್ಕೂ ಭುವನವೆಂಬ ಭ್ರಮಕ್ಕೂ ಅಧಿಷ್ಠಾನವಾಗಿರುವನೆಂದು ಅರ್ಥವನ್ನು ಅಂಗೀಕರಿಸಬೇಕಾಗಿರುವುದರಿಂದ ಅಧ್ಯಾಹಾರವೇ ದೋಷವಾಗುವುದು.

ಮತ್ತು **"ಸದೇವ ಸೋಮ್ಯೇದಮಗ್ರ ಆಸೀದೇಕಮೇವಾದ್ವಿತೀಯಂ"** ಎಂಬ ವಾಕ್ಯದಿಂದ ಸಜಾತೀಯವಿಜಾತೀಯಸ್ವಗತಭೇದಶೂನ್ಯವಾದ ಸನ್ಮಾತ್ರವೇ ಬ್ರಹ್ಮವೆಂದು ತೋರಿಸಿ ಇಂಥ ಬ್ರಹ್ಮಕ್ಕೆ **"ತದೈಕ್ಷತ ಬಹುಸ್ಯಾಂ ಪ್ರಜಾಯೇಯ"** ಎಂದು ಜಗದಾಕಾರದಿಂದ ಬಹುಭವನವನ್ನು ತೋರಿಸುವುದರ ಮೂಲಕ ಯಾವಪ್ರಮಾಣಾಂತರದಿಂದಲೂ ಬುದ್ಧಿಗೆ ಗೋಚರವಾಗದಿರುವ ಪ್ರಪಂಚಾತ್ಮಕತ್ವವನ್ನು ಶ್ರುತಿ ಬಹುಪ್ರಯತ್ನದಿಂದ ತಾನೇ ಬೋಧಿಸಿ ಬುದ್ಧಿಯಲ್ಲಿ ಚನ್ನಾಗಿ ಹತ್ತಿಸಿ ಪುನಃ ಅದೇ ಶ್ರುತಿ ಅದೇ ಅರ್ಥವನ್ನು ನಿಷೇಧಿಸುತ್ತದೆ ಎಂಬುದು ಪೂರ್ವಾಪರವಿವೇಚನಾಶಕ್ತಿ ಇಲ್ಲದ ಮೂರ್ಖರ ಮಾತಿನಂತೆ ಪರಿಹಾಸ್ಯಕ್ಕೆ ಗುರಿಯಾಗುವುದಲ್ಲದೆ ಪಂಡಿತರ ಮಾತಾಗಲಾರದು

## ೬೩೭. ಪರಮತರೀತ್ಯಾ ಸಾಮಾನಾಧಿಕರಣ್ಯಸ್ಯ ಭೇದನಿರಾಸಪರತ್ವಾಶಂಕಾ

"ಚಿದ್ವಸ್ತುಗಳಿಗೆ ಪರಸ್ಪರಭೇದವು, ಅಚಿದ್ವಸ್ತುಗಳಿಗೆ ಪರಸ್ಪರಭೇದವು, ಚಿದಚಿತ್ತುಗಳಿಗೆ ಪರಸ್ಪರಭೇದವು, ಚಿದ್ಬ್ರಹ್ಮಗಳಿಗೆ ಪರಸ್ಪರಭೇದವು, ಅಚಿದ್ಬ್ರಹ್ಮಗಳಿಗೆ ಪರಸ್ಪರಭೇದವು" ಎಂಬುದಾಗಿ ಭೇದವು ಐದುಪ್ರಕಾರವಾಗಿರುವುದೆಂಬುದನ್ನು ಅಚಿತ್ತತ್ತ್ವಪರಿಚ್ಛೇದದಲ್ಲಿ ನಾವು ತೋರಿಸಿರುವೆವಷ್ಟೆ? "ಇಂಥ ಐದುಪ್ರಕಾರವಾದ ಭೇದವೂ ಶ್ರುತಿಯಲ್ಲಿ ಸಾಮಾನಾಧಿಕರಣ್ಯದಿಂದ ನಿರಾಕರಿಸಲ್ಪಡುವುದು" ಎಂದು ಮಿಥ್ಯಾವಾದಿಗಳೊಳಗೆ ಒಂದು ಪ್ರವಾದವುಂಟು.

## ೬೩೮. ವಿವರಣಕಾರಮತೇ ಸಾಮಾನಾಧಿಕರಣ್ಯೇನ ಜಡಪ್ರಪಂಚಸ್ಯ ಸ್ವರೂಪತೋ ಮಿಥ್ಯಾತ್ವಪ್ರದರ್ಶನಂ

"ಜಡರೂಪವಾದ ಸಮಸ್ತಪ್ರಪಂಚವೂ ಬ್ರಹ್ಮದಲ್ಲಿ ಅಧ್ಯಸ್ತವಾಗಿರುವುದರಿಂದ ಶುಕ್ತಿಕೆಯಲ್ಲಿ ಅಧ್ಯಸ್ತವಾದ ರಜತದಂತೆ ಸ್ವರೂಪದಿಂದಲೇ ಮಿಥ್ಯಾಭೂತವಾಗಿರುವುದು" ಎಂದು ಪರಮತದವರು ಹೇಳುವರು.

## ೬೩೯. ಅಜಡಪ್ರಪಂಚಸ್ಯ ಬ್ರಹ್ಮಪ್ರತಿಬಿಂಬತ್ವಪ್ರದರ್ಶನಂ.

ಇನ್ನು ಜೀವವಿಷಯದಲ್ಲಿ ವಿಚಾರಮಾಡಿ ನೋಡಿದರೆ—

"ಯಥಾ ಹ್ಯಯಂ ಜ್ಯೋತಿರಾತ್ಮಾ ವಿವಸ್ವಾ೯
ಅಪೋ ಭಿನ್ನಾ ಬಹುಧೈಕೋಽನುಗಚ್ಛ೯ |
ಉಪಾಧಿನಾ ಕ್ರಿಯತೇ ಭೇದರೂಪೋ
ದೇವಃ ಕ್ಷೇತ್ರೇಷ್ವೇವಮಜೋಽಯಮಾತ್ಮಾ"

ಇತ್ಯಾದಿಶ್ರುತಿಯ ಆಪಾತಪ್ರತೀತವಾದ ಅರ್ಥದಲ್ಲಿ ತೃಪ್ತರಾದ ವಿವರಣ ಕಾರಮತಾನುಸಾರಿಗಳು ಈಶ್ವರನನ್ನು ಬಿಂಬಸ್ಥಾನೀಯನೆಂದೂ, ಜೀವರುಗಳನ್ನು ಪ್ರತಿಬಿಂಬಸ್ಥಾನೀಯರೆಂದೂ, ಹೇಳುವರು; ಎಂದರೆ "ಆಕಾಶದಲ್ಲಿ ಜ್ಯೋತಿರ್ಮ ಯನಾಗಿ ಪ್ರಜ್ವಲಿಸುತ್ತಿರುವ ಸೂರ್ಯನು ಸ್ವಯಂ ಒಬ್ಬನೇ ಆಗಿದ್ದರೂ ಕೂಪ, ತಟಾಕ, ನದಿ, ಸಮುದ್ರ ಮುಂತಾದ ಅನೇಕಜಲಾಶಯಗಳಲ್ಲಿ ಪ್ರತಿಫಲಿಸಿ ತತ್ತ ಜ್ಜಲರೂಪವಾದ ಉಪಾಧಿಭೇದದಿಂದ ತಾನೂ ಭಿನ್ನಭಿನ್ನನಾಗಿರುವನೆಂದೆನಿಸಿಕೊ ಳ್ಳುವಂತೆ ಪರಮಾತ್ಮನೆಂಬುವನು ಒಬ್ಬನೇ ಆಗಿದ್ದರೂ ಆ ಆ ಭಿನ್ನಭಿನ್ನ ಶರೀರಗಳಲ್ಲಿ ಪ್ರತಿಫಲಿಸಿ ಭಿನ್ನಭಿನ್ನಜೀವನಾಗಿರುವನೆಂದೆನಿಸಿಕೊಳ್ಳುವನು.' ಎಂದು ಹೇಳುವರು.

## ೬೪೦. ಭಾಮತೀಕಾರಮತೇ ಅವಿದ್ಯಾವಚ್ಛಿನ್ನಸ್ಯಾಂತಃಕರಣಾವ ಚ್ಛಿನ್ನಸ್ಯ ವಾ ಬ್ರಹ್ಮಾಂಶಸ್ಯ ಜೀವತ್ವಂ.

ಭಾಮತೀಕಾರರಾದ ವಾಚಸ್ಪತಿಮಿಶ್ರರ ಮತವನ್ನು ಅನುಸರಿಸಿದವರು—

"ಘಟಸಂಪೃಕ್ತಮಾಕಾಶಂ ನೀಯಮಾನೇ ಯಥಾ ಘಟೇ
ಘಟೋ ನೀಯೇತ ನಾಕಾಶಂ ತದ್ವಜ್ಜೀವೋ ನಭೋಪಮಃ"

ಎಂಬ ಶ್ರುತಿಯ ಆಪಾತಪ್ರತೀತಾರ್ಥದಲ್ಲಿ ತೃಪ್ತರಾಗಿ—ಅವಿದ್ಯೆಯಿಂದ ಲಾಗಲಿ ಅಂತಃಕರಣದಿಂದಲಾಗಲಿ ಅವಚ್ಛಿನ್ನವಾದ ಬ್ರಹ್ಮಾಂಶಗಳೇ ಜೀವಗಳೆನಿಸಿ ಕೊಳ್ಳುವುವೆಂದು ಹೇಳುವರು ಎಂದರೆ—ತನ್ನ ಒಳಭಾಗದಲ್ಲಿ ಆಕಾಶವನ್ನು ಪಡೆ ದಿರುವ ಘಟವು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಒಯ್ಯಲ್ಪಡುವಾಗ ಘಟಮಾತ್ರವೇ ಒಯ್ಯಲ್ಪಡುವುದಲ್ಲದೆ ಅದರೊಳಗಿನ ಆಕಾಶವೂ ಒಯ್ಯಲ್ಪಡುವು ದಿಲ್ಲ; ಕಿಂತು ಪೂರ್ವಪೂರ್ವಾಕಾಶವು ಅಲ್ಲಲ್ಲಿಯೇ ಬಿಡಲ್ಪಟ್ಟು ಉತ್ತರೋತ್ತರಾ ಕಾಶವು ಅದರಲ್ಲಿ ತುಂಬಿಕೊಳ್ಳುತ್ತಾ ಹೋಗುವುದು;

ಅದರಂತೆ ಜೀವವಿಶಿಷ್ಟವಾದ ಶರೀರವು ಸಂಚರಿಸುವಾಗ ಜೀವನಿಗೆ ಅವ ಚ್ಛೇದಕವಾದ ತಾನುಮಾತ್ರ ಸಂಚರಿಸುವುದಲ್ಲದೆ ಜೀವನನ್ನೂ ಎಳೆದುಕೊಂಡು

ಹೋಗುವುದಿಲ್ಲ; ಜೀವನು ಆಕಾಶಕ್ಕೆ ಸಮಾನನಾಗಿ ಅಚಲನಾಗಿರುವನು. ಆದುದರಿಂದ "ಅವಿದ್ಯೆ ಅಥವಾ ಅಂತಃಕರಣದಿಂದ ಅವಚ್ಛಿನ್ನವಾದ ಬ್ರಹ್ಮಭಾಗವೇ ಜೀವನೆನಿಸಿಕೊಳ್ಳುವುದು" ಎಂದು ಹೇಳುವರು.

### ೬೪೧. ತತ್ರ ವಿವರಣಕಾರಮತೇ ಬಿಂಬಪ್ರತಿಬಿಂಬಯೋರೈಕ್ಯಾಭಾವಾತ್ಸಾಮಾನಾಧಿಕರಣ್ಯಾನುಪಪತ್ತಿಃ.

ಇದರಲ್ಲಿ ವಿವರಣಕಾರಮತಾನುಸಾರವಾಗಿ ಜೀವನಿಗೆ ಪ್ರತಿಬಿಂಬತ್ವವನ್ನು ಅಂಗೀಕರಿಸುವವರ ಮತದಲ್ಲಿ ಜೀವಬ್ರಹ್ಮಸಾಮಾನಾಧಿಕರಣ್ಯವು ಸಂಗತವಾಗುವುದಿಲ್ಲ; ಲೋಕದಲ್ಲಿ ಬಿಂಬಕ್ಕೂ ಪ್ರತಿಬಿಂಬಕ್ಕೂ ಅಭೇದವಿಲ್ಲವಾದುದರಿಂದ ಸಾಮಾನಾಧಿಕರಣ್ಯವು ಪ್ರಸಿದ್ಧವಲ್ಲವಷ್ಟೆ?

### ೬೪೨. ಪ್ರತಿಬಿಂಬಾನಾಮಪಿ ಪರಸ್ಪರೈಕ್ಯಾಭಾವಾತ್ ಸಾಮಾನಾಧಿಕರಣ್ಯಾನುಪಪತ್ತಿಃ.

ಮತ್ತು ಪ್ರತಿಬಿಂಬಗಳಿಗೆ ಪರಸ್ಪರೈಕ್ಯವು ಸಂಭವಿಸುವುದಿಲ್ಲವಾದುದರಿಂದ ಪ್ರತಿಬಿಂಬಸ್ಥಾನೀಯರಾದ ಜೀವರುಗಳಿಗೆ ಪರಸ್ಪರಾಭೇದಕ್ಕೆ ಅವಕಾಶವಿಲ್ಲವಾಗಿ ಜೀವರುಗಳಿಗೂ ಪರಸ್ಪರಸಾಮಾನಾಧಿಕರಣ್ಯವು ಸಂಗತವಾಗುವುದಿಲ್ಲ.

### ೬೪೩ ವಾಚಸ್ಪತಿಮಿಶ್ರಮತೇ ಘಟಾಕಾಶಮಹಾಕಾಶಯೋಃ ಐಕ್ಯಾಭಾವಾತ್ ಜೀವಬ್ರಹ್ಮಣೋಸ್ಸಾಮಾನಾಧಿಕರಣ್ಯಾನುಪಪತ್ತಿಃ

ವಾಚಸ್ಪತಿಮಿಶ್ರಮತವನ್ನು ಅನುಸರಿಸಿ ಉಪಾಧ್ಯವಚ್ಛಿನ್ನಬ್ರಹ್ಮಭಾಗವೇ ಜೀವನೆಂದು ಹೇಳುವವರ ಪಕ್ಷದಲ್ಲಿಯೂ ಘಟಾಕಾಶಸ್ಥಾನೀಯನಾದ ಜೀವನಿಗೂ ಮಹಾಕಾಶಸ್ಥಾನೀಯವಾದ ಬ್ರಹ್ಮಕ್ಕೂ ಐಕ್ಯವು ಸಂಭವಿಸುವುದಿಲ್ಲವಾದುದರಿಂದ ಐಕ್ಯಬೋಧಕವಾದ ಸಾಮಾನಾಧಿಕರಣ್ಯವು ಸಂಗತವಾಗುವುದಿಲ್ಲ.

### ೬೪೪ ಘಟಾಕಾಶಮಹಾಕಾಶಯೋಃ ಐಕ್ಯಾಭಾವಾತ್ ಜೀವಾನಾಮಪಿ ಪರಸ್ಪರಸಾಮಾನಾಧಿಕರಣ್ಯಾನುಪಪತ್ತಿಃ

ಮತ್ತು ಘಟಾಕಾಶಕ್ಕೂ ಮಹಾಕಾಶಕ್ಕೂ ಐಕ್ಯವು ಹೇಗೆ ಸಂಭವಿಸುವುದಿಲ್ಲವೋ ಹಾಗೆಯೇ ಘಟಾಕಾಶಮಹಾಕಾಶಸ್ಥಾನೀಯರಾದ ಜೀವರುಗಳಿಗೂ ಪರಸ್ಪರವಾಗಿ ಐಕ್ಯವು ಸಂಭವಿಸುವುದಿಲ್ಲವಾದುದರಿಂದ ಜೀವರುಗಳಿಗೂ ಪರಸ್ಪರ ಸಾಮಾನಾಧಿಕರಣ್ಯವು ಸಂಗತವಾಗುವುದಿಲ್ಲ.

### ೬೫೫ ಅವಚ್ಛೇದ್ಯಾವಚ್ಛೇದಕಯೋಃ ಐಕ್ಯಾಭಾವಾತ್ ಚಿದ ಚಿತೋಃ ಸಾಮಾನಾಧಿಕರಣ್ಯಾನುಪಪತ್ತಿಃ

ಮತ್ತು—ಘಟಾಕಾಶಕ್ಕೂ ಉಪಾಧಿಭೂತವಾದ ಘಟಕ್ಕೂ ಹೇಗೆ ಐಕ್ಯವು ಸಂಭವಿಸುವುದಿಲ್ಲವೋ ಅದರಂತೆ ಘಟಾಕಾಶಸ್ಥಾನೀಯನಾದ ಜೀವನಿಗೂ ಅಂಥ ಜೀವನಿಗೆ ಉಪಾಧಿಭೂತವಾಗಿ ಘಟಾದಿಸ್ಥಾನೀಯಗಳಾದ ಅವಿದ್ಯಾಂತಃಕರಣಾದಿಗಳಿಗೂ ಐಕ್ಯವು ಸಂಭವಿಸುವುದಿಲ್ಲವಾದುದರಿಂದ ಚಿದಚಿದ್ವಸ್ತುಗಳಿಗೆ ಪರಸ್ಪರ ಸಾಮಾನಾಧಿಕರಣ್ಯವು ಸಂಗತವಾಗುವುದಿಲ್ಲ.

### ೬೫೬ ಉಪಾಧೀನಾಮೈಕ್ಯಾಭಾವಾತ್ ಅಚಿತಾಮಪಿ ಸಾಮಾನಾಧಿಕರಣ್ಯಾನುಪಪತ್ತಿಃ

ಮತ್ತು ಆಕಾಶಕ್ಕೆ ಉಪಾಧಿಯೆನಿಸಿಕೊಂಡಿರುವ ಘಟ, ಮಠ ಮೊದಲಾದ ಅನೇಕೋಪಾಧಿಗಳಿಗೆ ಪರಸ್ಪರೈಕ್ಯವು ಹೇಗೆ ಸಂಭವಿಸುವುದಿಲ್ಲವೋ ಅದರಂತೆ ಜೀವನಿಗೆ ಉಪಾಧಿಯೆನಿಸಿಕೊಂಡಿರುವ ಅವಿದ್ಯೆ ಅಂತಃಕರಣ ಮೊದಲಾದ ಅನೇಕೋಪಾಧಿಗಳಿಗೆ ಪರಸ್ಪರೈಕ್ಯವು ಸಂಭವಿಸುವುದಿಲ್ಲವಾದುದರಿಂದ ಅಚಿದ್ವಸ್ತುಗಳಿಗೆ ಪರಸ್ಪರಾಭೇದಕ್ಕೆ ಅವಕಾಶವಿಲ್ಲವಾಗಿ ಇವುಗಳಿಗೂ ಸಾಮಾನಾಧಿಕರಣ್ಯವು ಸಂಗತವಾಗುವುದಿಲ್ಲ.

### ೬೫೭ ಸತ್ಯಮಿಥ್ಯಾರ್ಥಯೋಃ ಐಕ್ಯಾಸಂಭವಾತ್ ಅಚಿದ್ಬ್ರಹ್ಮಣೋಸ್ಸಾಮಾನಾಧಿಕರಣ್ಯಾನುಪಪತ್ತಿಃ

ಸಂಪೂರ್ಣವಾದ ಜಡಪ್ರಪಂಚವು ಬ್ರಹ್ಮದಲ್ಲಿ ಅಧ್ಯಸ್ತವಾಗಿರುವುದರಿಂದ ಶುಕ್ತಿರಜತದಂತೆ ಸ್ವರೂಪದಿಂದಲೇ ಮಿಥ್ಯೆಯಾಗಿರುವಕಾರಣ ಸತ್ಯಮಿಥ್ಯಾರ್ಥಗಳಿಗೆ ಐಕ್ಯವು ಸಂಭವಿಸುವುದಿಲ್ಲವಾಗಿ ಅಚಿದ್ಬ್ರಹ್ಮಗಳಿಗೂ ಸಾಮಾನಾಧಿಕರಣ್ಯವು ಸಂಗತವಾಗುವುದಿಲ್ಲ.

ಆದುದರಿಂದ "ಉಕ್ತವಾದ ಪಂಚವಿಧಭೇದವೂ ಸಾಮಾನಾಧಿಕರಣ್ಯದಿಂದ ನಿರಾಕರಿಸಲ್ಪಡುವುದು" ಎಂಬ ಪ್ರವಾದವು ಅವಿಚಾರಿತರಮಣೀಯವಾಗಿರುವುದಲ್ಲದೆ ವಿಚಾರಾರ್ಹವಲ್ಲ.

### ೬೫೮. ಪರಮತೇ ಗೌಣಸಾಮಾನಾಧಿಕರಣ್ಯಸ್ಯಾಪ್ಯನುಪಪತ್ತಿಪ್ರದರ್ಶನಂ ತತ್ರಾಧ್ಯಸ್ತಾಧಿಷ್ಠಾನವಾಚಕಶಬ್ದಯೋಸ್ಸಾಮಾನಾಧಿಕರಣ್ಯಾನುಪಪತ್ತಿಃ

ಆದರೆ—ಹೀಗೆ ಮುಖ್ಯರೂಪವಾದ ಸಾಮಾನಾಧಿಕರಣ್ಯವು ಸಂಭವಿಸದಿದ್ದರೂ ಗೌಣವಾದ ಸಾಮಾನಾಧಿಕರಣ್ಯವಾದರೂ ಇವರ ಮತದಲ್ಲಿ ಸಂಭವಿಸ

ಬಹುದೋ ಎಂದು ವಿಮರ್ಶೆಮಾಡಿ ನೋಡಿದರೆ ಅದಕ್ಕೂ ಅವಕಾಶವಿಲ್ಲ; ಹೇಗೆಂದರೆ—"ಸರ್ವಂ ಖಲ್ವಿದಂ ಬ್ರಹ್ಮ" ಎಂಬುದಾಗಿ ಸಮಸ್ತಪ್ರಪಂಚಕ್ಕೂ ಬ್ರಹ್ಮಕ್ಕೂ ಅವಗತವಾಗುವ ಸಾಮಾನಾಧಿಕರಣ್ಯವು ಗೌಣರೂಪವಾಗಿಯಾದರೂ ಏಕರೂಪವಾಗಿ ಇವರ ಮತದಲ್ಲಿ ಸಂಭವಿಸಲಾರದು; ಏತಕ್ಕೆಂದರೆ—ಪ್ರಪಂಚಭ್ರಮಕ್ಕೆ ಬ್ರಹ್ಮವು ಅಧಿಷ್ಠಾನವೆಂದೂ, ಅಂಥ ಬ್ರಹ್ಮದಲ್ಲಿ ಪ್ರಪಂಚವು ಅಧ್ಯಸ್ತವೆಂದೂ ಇವರು ಹೇಳುವರು. ಹೀಗಾದರೆ ಅಧಿಷ್ಠಾನವಾಚಕಶಬ್ದಕ್ಕೂ ಅಧ್ಯಸ್ತವಾಚಕಶಬ್ದಕ್ಕೂ ಸಾಮಾನಾಧಿಕರಣ್ಯವು ಸಂಭವಿಸುವುದೇ ಇಲ್ಲ. "ಇದಂ ರಜತಂ" ಎಂಬುದಾಗಿ ಸಾಮಾನಾಧಿಕರಣ್ಯವು ಲೋಕದಲ್ಲಿ ಕಂಡುಬಂದರೂ "ಶುಕ್ತಿಃ ರಜತಂ" ಎಂಬುದಾಗಿ ಸಾಮಾನಾಧಿಕರಣ್ಯವು ಲೋಕದಲ್ಲಿ ಅದೃಷ್ಟಚರವಲ್ಲವೆ?

### ೩೪೯. ಪ್ರತಿಬಿಂಬಸ್ಥಾನೀಯಾನಾಂ ಜೀವಾನಾಂ ಮಿಥಸ್ಸಾಮಾನಾಧಿಕರಣ್ಯಾನುಪಪತ್ತಿಃ

ಮತ್ತು ಪ್ರತಿಬಿಂಬಸ್ಥಾನಾಪನ್ನರಾದ ಜೀವರುಗಳಿಗೆ ಪರಸ್ಪರಸಾಮಾನಾಧಿಕರಣ್ಯವು ಸಂಭವಿಸುವುದಿಲ್ಲ. ತರಂಗಗಳಲ್ಲಿ ಕಾಣುವ ಚಂದ್ರಪ್ರತಿಬಿಂಬಗಳಿಗೆ ಪರಸ್ಪರಸಾಮಾನಾಧಿಕರಣ್ಯವು ಲೋಕದಲ್ಲಿ ಅದೃಷ್ಟಚರವಾಗಿರುವುದಲ್ಲವೆ?

### ೩೫೦. ಬಿಂಬಪ್ರತಿಬಿಂಬಭೂತಯೋರ್ಬ್ರಹ್ಮಜೀವಯೋರಪಿ ಸಾಮಾನಾಧಿಕರಣ್ಯಾನುಪಪತ್ತಿಃ

ಮತ್ತು ಬಿಂಬಸ್ಥಾನಾಪನ್ನವಾದ ಬ್ರಹ್ಮಕ್ಕೂ ಪ್ರತಿಬಿಂಬಸ್ಥಾನಾಪನ್ನವಾದ ಜೀವತತ್ತ್ವಕ್ಕೂ ಸಾಮಾನಾಧಿಕರಣ್ಯವು ಸಂಭವಿಸುವುದಿಲ್ಲ. ಮುಖಕ್ಕೂ ಕನ್ನಡಿಯಲ್ಲಿ ಕಾಣುವ ಮುಖಪ್ರತಿಬಿಂಬಕ್ಕೂ ಪರಸ್ಪರಸಾಮಾನಾಧಿಕರಣ್ಯವು ಲೋಕದಲ್ಲಿ ಅದೃಷ್ಟಚರವಾಗಿರುವುದಲ್ಲವೆ?

"ಪೂಜ್ಯರೆ! ಅಚಿತ್ತತ್ತ್ವಪರಿಚ್ಛೇದದಲ್ಲಿ ಬಿಂಬಕ್ಕಿಂತಲೂ ಅತಿರಿಕ್ತವಾದ ಪ್ರತಿಬಿಂಬವೆಂಬುದೊಂದು ಪದಾರ್ಥವಿಲ್ಲವೆಂದು ನಿರೂಪಿಸಿ ತೋರಿಸಿರುವುದರಿಂದ ಬಿಂಬಪ್ರತಿಬಿಂಬಗಳಿಗೆ ಐಕ್ಯವನ್ನು ಹೇಳಿದಂತಾಯಿತು; ಹೀಗೆ ಐಕ್ಯವು ಸಂಭವಿಸುವುದಾದರೆ ಬಿಂಬಪ್ರತಿಬಿಂಬಗಳಿಗೆ ಸಾಮಾನಾಧಿಕರಣ್ಯವೂ ಸಂಭವಿಸಬಹುದಾಗಿರುವಲ್ಲಿ ಅದನ್ನು ನಿರಾಕರಿಸುವುದು ಹೇಗೆ?"

ಎಂದು ಆಶಂಕಿಸಲಾಗುವುದಿಲ್ಲ. ಏತಕ್ಕೆಂದರೆ—ಋಜುವಾಗಿ ಹೊರಟಿರುವ ನೇತ್ರರಶ್ಮಿಗಳು ಸ್ವಚ್ಛವಾದ ದರ್ಪಣದಿಂದ ತಡೆಯಲ್ಪಟ್ಟು ಹಿಂದಿರುಗಿಸಲ್ಪಟ್ಟ

ವಾಗಿ ಪುನಃ ತಮ್ಮ ಸ್ಥಾನಕ್ಕೆ ಬರುತ್ತಿರುವಾಗ ತಮಗೆ ಎದುರಾಗಿರುವ ಮುಖ ವನ್ನು ಗ್ರಹಿಸುವುವಾದುದರಿಂದ ಅಂಥ ಮುಖವೇ ಪ್ರತಿಬಿಂಬವೆನಿಸಿಕೊಳ್ಳುವುದಲ್ಲದೆ ಮುಖಕ್ಕಿಂತಲೂ ಅತಿರಿಕ್ತವಾದ ಪ್ರತಿಬಿಂಬವೆಂಬುದೊಂದು ಇಲ್ಲವೆಂದು ಅಚಿತ್ತ ತ್ತ್ವಪರಿಚ್ಛೇದದಲ್ಲಿ ನಾವು ತೋರಿಸಿದೆವು. ಹೀಗೆ ಚಕ್ಷುಸ್ಸಿನಿಂದ ಗ್ರಹಿಸುವುದಕ್ಕೆ ಯೋಗ್ಯವಾದ ಮುಖಾದಿಸ್ಥಳಗಳಲ್ಲಿ ಬಿಂಬಪ್ರತಿಬಿಂಬಪದಾರ್ಥಗಳಿಗೆ ಉಕ್ತರೀತಿ ಯಲ್ಲಿ ಐಕ್ಯವು ಸಂಭವಿಸಿದರೂ ಚಕ್ಷುಸ್ಸಿನಿಂದ ಗ್ರಹಿಸುವುದಕ್ಕೆ ಸರ್ವಥಾ ಅಯೋಗ್ಯವಾದ ಜೀವಬ್ರಹ್ಮವಿಷಯದಲ್ಲಿ ಬಿಂಬಪ್ರತಿಬಿಂಬವ್ಯವಹಾರವಾಗಲಿ, ಅವ ವುಗಳಿಗೆ ಐಕ್ಯವಾಗಲಿ ಸುತರಾಂ ಸಂಭವಿಸುವುದಿಲ್ಲವಾದಕಾರಣ ಸಾಮಾನಾಧಿ ಕರಣ್ಯವೂ ಸಂಭವಿಸುವುದಿಲ್ಲವೆಂಬುದು ಅತ್ಯಂತಸಮಂಜಸವಾಗಿರುವುದು. ಅಚಾ ಕ್ಷುಷವಾದ ಪದಾರ್ಥಗಳಿಗೂ ಬಿಂಬಪ್ರತಿಬಿಂಬಭಾವವನ್ನೂ, ಅವುಗಳಿಗೆ ಭೇದ ವನ್ನೂ ನೀವು ಒಪ್ಪಿರುವಿರಾದುದರಿಂದ ನಿಮ್ಮ ಮತರೀತಿಯಾಗಿಯೂ ಅವುಗಳಿಗೆ ಐಕ್ಯವು ಸಂಭವಿಸುವುದಿಲ್ಲವಷ್ಟೆ?

## ೬೫೧. ವಾಚಸ್ಪತಿಮಿಶ್ರಮತೇಽಪಿ ಜೀವತದುಪಾಧ್ಯೋಃ ಸಾಮಾನಾಧಿಕರಣ್ಯಾನುಪಪತ್ತಿಃ

ಮತ್ತು—ಜೀವನಿಗೆ ಅವಚ್ಛೇದಕವಾದ ಅಂತಃಕರಣವೆಂಬ ಉಪಾಧಿಗೂ ಅದರಿಂದ ಅವಚ್ಛಿನ್ನನಾದ ಜೀವನಿಗೂ ಐಕ್ಯವು ಸಂಭವಿಸುವುದಿಲ್ಲವಾದುದರಿಂದ ಸಾಮಾನಾಧಿಕರಣ್ಯವೂ ಸಂಭವಿಸಲಾರದು; ಆಕಾಶಕ್ಕೆ ಅವಚ್ಛೇದಕವಾದ ಘಟಕ್ಕೂ ಅದರಿಂದ ಅವಚ್ಛಿನ್ನವಾದ ಆಕಾಶಕ್ಕೂ ಐಕ್ಯವು ಸಂಭವಿಸುವುದಿಲ್ಲವಾದುದರಿಂದ ಪರಸ್ಪರಸಾಮಾನಾಧಿಕರಣ್ಯವು ಲೋಕದಲ್ಲಿ ಅದೃಷ್ಟಚರವಾಗಿರುವುದಲ್ಲವೆ?

## ೬೫೨. ಜೀವಾನಾಂ ಮಿಥಸ್ಸಾಮಾನಾಧಿಕರಣ್ಯಾನುಪಪತ್ತಿಃ

ಮತ್ತು ಒಂದು ಉಪಾಧಿಯಿಂದ ಅವಚ್ಛಿನ್ನನಾದ ಜೀವನಿಗೆ ಮತ್ತೊಂದು ಉಪಾಧಿಯಿಂದ ಅವಚ್ಛಿನ್ನನಾದ ಜೀವನೊಡನೆ ಭೇದವೇ ಸಿದ್ಧವಾಗಿರುವುದರಿಂದ ಐಕ್ಯವು ಸಂಭವಿಸುವುದಿಲ್ಲವಾಗಿ ಜೀವದ್ವಯಕ್ಕೆ ಸಾಮಾನಾಧಿಕರಣ್ಯವು ಸಂಭವಿಸು ವುದಿಲ್ಲ; ಪ್ರತ್ಯೇಕವಾದ ಎರಡು ಘಟಗಳಿಂದ ಅವಚ್ಛಿನ್ನವಾದ ಆಕಾಶದ್ವಯಕ್ಕೆ ಔಪಾಧಿಕಭೇದವನ್ನೇ ಅಂಗೀಕರಿಸಿರುವುದರಿಂದ ಐಕ್ಯವು ಸಂಭವಿಸುವುದಿಲ್ಲವಾಗಿ ಪರಸ್ಪರಸಾಮಾನಾಧಿಕರಣ್ಯವು ಲೋಕದಲ್ಲಿ ಅದೃಷ್ಟಚರವಾಗಿರುವುದಲ್ಲವೆ?

## ೬೫೩. ಜೀವಬ್ರಹ್ಮಣೋರಪಿ ಸಾಮಾನಾಧಿಕರಣ್ಯಾನುಪಪತ್ತಿಃ

ಮತ್ತು ಘಟಾಕಾಶಸ್ಥಾನೀಯನಾದ ಜೀವನಿಗೂ ಮಹಾಕಾಶಸ್ಥಾನೀಯ ವಾದ ಬ್ರಹ್ಮಕ್ಕೂ ಐಕ್ಯವು ಸಂಭವಿಸುವುದಿಲ್ಲವಾದುದರಿಂದ ಸಾಮಾನಾಧಿಕರಣ್ಯವು

ಸಂಭವಿಸುವುದಿಲ್ಲ ; ಘಟಾಕಾಶಕ್ಕೂ ಮಹಾಕಾಶಕ್ಕೂ ಐಕ್ಯವು ಸಂಭವಿಸುವುದಿಲ್ಲವಾದುದರಿಂದ ಪರಸ್ಪರಸಾಮಾನಾಧಿಕರಣ್ಯವು ಲೋಕದಲ್ಲಿ ಅದೃಷ್ಟಚರವಾಗಿರುವುದಲ್ಲವೆ ?

## ೬೫೪. ಯಾದವಪ್ರಕಾಶಮತೇ ಸದ್ರೂಪಬ್ರಹ್ಮಣಾ ಸಹ ಚಿದಚಿದೀಶ್ವರಾಣಾಂ ಸಾಮಾನಾಧಿಕರಣ್ಯಾನುಪಪತ್ತಿಃ.

ಮತ್ತು ಭೇದಾಭೇದವಾದಿಗಳಾದ ಯಾದವಪ್ರಕಾಶರ ಮತದಲ್ಲಿ ಪಿಂಡಸ್ಥಾನೀಯವಾದ ಸದ್ರೂಪಬ್ರಹ್ಮಕ್ಕೂ ಘಟಸ್ಥಾನೀಯರಾದ ಚಿದಚಿದೀಶ್ವರರಿಗೂ ಭೇದವೇ ಇರುವುದರಿಂದ ಐಕ್ಯವು ಸಂಭವಿಸುವುದಿಲ್ಲವಾಗಿ ಸಾಮಾನಾಧಿಕರಣ್ಯಕ್ಕೆ ಅವಕಾಶವಿಲ್ಲ; "ಪಿಂಡೋ ಘಟಃ" ಎಂಬ ವ್ಯವಹಾರವಿಲ್ಲದಿರುವಕಾರಣ ಪಿಂಡಕ್ಕೂ ಘಟಕ್ಕೂ ಭೇದವೇ ಇರುವುದಲ್ಲದೆ ಐಕ್ಯವಿಲ್ಲವಾದುದರಿಂದ ಅವುಗಳಿಗೆ ಪರಸ್ಪರಸಾಮಾನಾಧಿಕರಣ್ಯವು ಲೋಕದಲ್ಲಿ ಅದೃಷ್ಟಚರವಾಗಿರುವುದಲ್ಲವೆ ? ಪಿಂಡಕ್ಕೂ ಘಟಕ್ಕೂ ಐಕ್ಯವಿರುವಪಕ್ಷದಲ್ಲಿ "ಪಿಂಡೋ ಘಟಃ" ಎಂಬ ವ್ಯವಹಾರವೂ ಉಂಟಾಗಬೇಕಲ್ಲವೆ ?

## ೬೫೫. ಜೀವೇಶ್ವರಯೋರ್ಮಿಥಸ್ಸಾಮಾನಾಧಿಕರಣ್ಯಾನುಪಪತ್ತಿಃ.

ಮತ್ತು ಪಿಂಡದಿಂದ ಘಟಶರಾವಗಳು ಉಂಟಾಗುವಂತೆ ಸದ್ರೂಪಬ್ರಹ್ಮದಿಂದ ಜೀವೇಶ್ವರರು ಉಂಟಾಗುವವರಾದುದರಿಂದ ಘಟಶರಾವಸ್ಥಾನೀಯರಾದ ಜೀವೇಶ್ವರರಿಗೆ ಭೇದವೇ ಸಿದ್ಧವಾಗಿರುವುದಲ್ಲದೆ ಐಕ್ಯಕ್ಕೆ ಅವಕಾಶವಿಲ್ಲದಿರುವ ಕಾರಣ ಸಾಮಾನಾಧಿಕರಣ್ಯವು ಸಂಭವಿಸುವುದಿಲ್ಲ; "ಘಟಃ ಶರಾವಃ" ಎಂಬ ವ್ಯವಹಾರವಿಲ್ಲದಿರುವಕಾರಣ ಘಟಕ್ಕೂ ಶರಾವಕ್ಕೂ ಭೇದವೇ ಇರುವುದಲ್ಲದೆ ಐಕ್ಯವಿಲ್ಲವಾದುದರಿಂದ ಅವುಗಳಿಗೆ ಪರಸ್ಪರಸಾಮಾನಾಧಿಕರಣ್ಯವು ಲೋಕದಲ್ಲಿ ಅದೃಷ್ಟಚರವಾಗಿರುವುದಲ್ಲವೆ? ಘಟಕ್ಕೂ ಶರಾವಕ್ಕೂ ಐಕ್ಯವಿರುವಪಕ್ಷದಲ್ಲಿ "ಘಟಃ ಶರಾವಃ" ಎಂಬ ವ್ಯವಹಾರವೂ ಉಂಟಾಗಬೇಕಲ್ಲವೆ ?

## ೬೫೬. ಭಾಸ್ಕರಮತೇ ಬ್ರಹ್ಮಣಾ ಸಹ ಚಿದಚಿದೀಶ್ವರಾಣಾಂ ಸಾಮಾನಾಧಿಕರಣ್ಯಾನುಪಪತ್ತಿಃ.

ಮತ್ತು ಉಪಾಧಿವಿಶಿಷ್ಟವಾದ ಬ್ರಹ್ಮಕ್ಕೆ ಕಾರಣತ್ವವನ್ನು ಹೇಳುವ ಭಾಸ್ಕರಮತದಲ್ಲಿ ಬ್ರಹ್ಮಾಂಶಭೂತರಾದ ಚಿದಚಿದೀಶ್ವರರಿಗೆ ಭೇದವೇ ಇರುವುದರಿಂದ ಐಕ್ಯವು ಸಂಭವಿಸುವುದಿಲ್ಲವಾಗಿ ಸಾಮಾನಾಧಿಕರಣ್ಯವು ಬರಲಾರದು; ಪಿಂಡದ ಅಂಶಗಳಾದ ಘಟಶರಾವಾದಿಗಳಿಗೆ ಸಾಮಾನಾಧಿಕರಣ್ಯವು ಲೋಕದಲ್ಲಿ ಅದೃಷ್ಟಚರವಾಗಿರುವುದಲ್ಲವೆ ?

## ೬೫೭. ಉಪಾಧಿಬ್ರಹ್ಮಣೋಃ ಸಾಮಾನಾಧಿಕರಣ್ಯಾನುಪಪತ್ತಿಃ

ಮತ್ತು ಪಿಂಡದ ಅಂಶಗಳಾದ ಅವಯುವಗಳಿಗೆ ಪರಸ್ಪರೈಕ್ಯವು ಸಂಭವಿಸುವುದಿಲ್ಲವಾಗಿ ಸಾಮಾನಾಧಿಕರಣ್ಯವು ಹೇಗೆ ಬರಲಾರದೋ ಹಾಗೆ ಉಪಾಧಿವಿಶಿಷ್ಟವಾದ ಬ್ರಹ್ಮದಲ್ಲಿ ವಿಶೇಷ್ಯಾಂಶವಾದ ಬ್ರಹ್ಮಕ್ಕೂ ವಿಶೇಷಣಾಂಶವಾದ ಉಪಾಧಿಗೂ ಐಕ್ಯವು ಸಂಭವಿಸುವುದಿಲ್ಲವಾಗಿ ಸಾಮಾನಾಧಿಕರಣ್ಯವು ಬರಲಾರದು.

## ೬೫೮. ಪುನರ್ಯಾದವಮತೇ ಜೀವಾನಾಂ ಮಿಥಸ್ಸಾಮಾನಾಧಿಕರಣ್ಯಾನುಪಪತ್ತಿಃ.

ಮತ್ತು—ಪುನಃ ಯಾದವಪ್ರಕಾಶಮತದಲ್ಲಿ ಸನ್ಮಾತ್ರವೆಂಬ ಒಂದೇ ಬ್ರಹ್ಮದ ಪರಿಣಾಮಭೂತರಾದ ಅನೇಕಜೀವರಿಗೆ ಐಕ್ಯವು ಸಂಭವಿಸುವುದಿಲ್ಲವಾಗಿ ಸಾಮಾನಾಧಿಕರಣ್ಯವು ಬರಲಾರದು; ಒಂದೇ ಮೃತ್ಪಿಂಡದ ಪರಿಣಾಮವಾದ ಅನೇಕಘಟಗಳಿಗೆ ಐಕ್ಯವಿಲ್ಲವಾಗಿ ಪರಸ್ಪರಸಾಮಾನಾಧಿಕರಣ್ಯವು ಲೋಕದಲ್ಲಿ ಅದೃಷ್ಟಚರವಾಗಿರುವುದಲ್ಲವೆ?

## ೬೫೯. ಅಚಿತಾಮಪಿ ಮಿಥಸ್ಸಾಮಾನಾಧಿಕರಣ್ಯಾನುಪಪತ್ತಿಃ

ಮತ್ತು ಬ್ರಹ್ಮಪರಿಣಾಮಭೂತವಾದ ಆಕಾಶಾದಿಜಡವಸ್ತುಗಳಿಗೆ ಐಕ್ಯವಿಲ್ಲವಾದುದರಿಂದ ಪರಸ್ಪರಸಾಮಾನಾಧಿಕರಣ್ಯವು ಸಂಗತವಾಗುವುದಿಲ್ಲ.

## ೬೬೦ ಏಕವಸ್ತುಪರಿಣಾಮಾನಾಮಪಿ ಪರಸ್ಪರೈಕ್ಯ ಸಂಭವಾಶಂಕಾತತ್ಪರಿಹಾರೌ.

"ಪೂಜ್ಯರೆ! ಮೃತ್ಪಿಂಡದ ಪರಿಣಾಮವಾದ ಘಟಕ್ಕೂ ಶರಾವಕ್ಕೂ ಪರಸ್ಪರೈಕ್ಯವು ಸಂಭವಿಸುವುದಿಲ್ಲವೆಂದು ಹೇಳಿದಿರಿ; ಇದು ಸಂಗತವಲ್ಲ; ಘಟಾಕಾರದಿಂದಲೂ ಶರಾವಾಕಾರದಿಂದಲೂ ಇವುಗಳಿಗೆ ಪರಸ್ಪರೈಕ್ಯವು ಸಂಭವಿಸದಿದ್ದರೂ ಮೃದಾಕಾರದಿಂದ ಐಕ್ಯವು ಸಂಭವಿಸುವುದರಲ್ಲಿ ತಡೆಯೇನೂ ಇಲ್ಲ. ಹೇಗೆಂದರೆ "ತದಭಿನ್ನಾಭಿನ್ನಸ್ಯ ತದಭಿನ್ನತ್ವಂ" ಎಂಬುದೊಂದು ನ್ಯಾಯವುಂಟು; ಎಂದರೆ ಮತ್ತೊಂದರೊಡನೆ ಅಭಿನ್ನವಾದ ವಸ್ತುವಿನೊಡನೆ ಯಾವವಸ್ತು ಅಭಿನ್ನವಾಗಿರುವುದೋ ಆ ಮತ್ತೊಂದರೊಡನೆ ತಾನೂ ಅಭಿನ್ನವಾಗಿರುವುದೆಂಬುದು ಈ ನ್ಯಾಯದ ಅಭಿಪ್ರಾಯವಾಗಿರುವುದು. "ಮೃದ್ಘಟಃ" ಎಂಬ ವ್ಯವಹಾರದಿಂದ ಮೃತ್ಪಿಂಡಕ್ಕೂ ಘಟಕ್ಕೂ ಅಭೇದವು ವ್ಯಕ್ತವಾಗಿರುವುದು; ಇದರಂತೆಯೇ "ಮೃಚ್ಛರಾವಃ" ಎಂಬ ವ್ಯವಹಾರದಿಂದ ಮೃತ್ಪಿಂಡಕ್ಕೂ ಶರಾವಕ್ಕೂ ಅಭೇದವು ವ್ಯಕ್ತವಾಗಿರುವುದು; ಈಗ ಶರಾವದೊಡನೆ ಅಭಿನ್ನವಾಗಿ

ರುವ ಮೃತ್ಪಿಂಡದೊಡನೆ ಘಟವು ಅಭಿನ್ನವಾಗಿರುವುದರಿಂದ ಅಂಥ ಶರಾವದೊಡನೆ ಘಟವೂ ಅಭಿನ್ನವಾಗಿರುವುದೆಂಬುದು ಉಕ್ತನ್ಯಾಯದಿಂದ ಸಿದ್ಧವಾಗುವ ಕಾರಣ ಘಟಶರಾವವ್ಯಕ್ತಿಗಳಿಗೆ ಐಕ್ಯವು ಸಂಭವಿಸುವುದಿಲ್ಲವೆಂದು ಹೇಳಿದುದು ಸಂಗತವಲ್ಲ.

ಇಂಥ ಆಶಂಕೆ ಯುಕ್ತವಲ್ಲ. ಹೇಗೆಂದರೆ—ಘಟವ್ಯಕ್ತಿಗೂ ಶರಾವವ್ಯಕ್ತಿಗೂ ಐಕ್ಯವ್ಯವಹಾರಸಿದ್ಧಿಯಲ್ಲವೆ ಉಕ್ತನ್ಯಾಯಕ್ಕೆ ಫಲವಾಗಿರುವುದು? ಈ ವ್ಯವಹಾರದಲ್ಲಿ ವ್ಯಕ್ತಿದ್ವಯಕ್ಕೆ ಐಕ್ಯವು ಬೋಧಿಸಲ್ಪಡುವುದಿಲ್ಲ; ಮತ್ತೇನೆಂದರೆ ವ್ಯಕ್ತಿದ್ವಯಕ್ಕೂ ಪರಸ್ಪರಭೇದವನ್ನೇ ಅಂಗೀಕರಿಸಿ ಭಿನ್ನಭಿನ್ನವಾದ ಈ ಎರಡು ವ್ಯಕ್ತಿಗಳಲ್ಲಿಯೂ ಮೃತ್ತ್ವವೆಂಬ ಒಂದೇ ಜಾತಿಯಿರುವುದೆಂದು ತೋರಿಸುವುದಕ್ಕಾಗಿ "**ಘಟವೂ ಶರಾವವೂ ಒಂದೇ**" ಎಂಬ ಐಕ್ಯವ್ಯವಹಾರವು ಪ್ರವರ್ತಿಸುವುದಾದುದರಿಂದ ಘಟಶರಾವವ್ಯಕ್ತಿಗಳಿಗೆ ಐಕ್ಯವು ಸಂಭವಿಸುವುದಿಲ್ಲವೆಂದು ಹೇಳಿದುದು ಅತ್ಯಂತಸಂಗತವಾಗಿರುವುದಲ್ಲದೆ ಅಸಂಗತವಲ್ಲ.

## ೬೬೧. ಉಕ್ತಮತತ್ರಯಾದಪಿ ಗೌತಮಾದಿಮತಸ್ಯ ಕಿಂಚಿದುತ್ತಮತ್ವಂ

ಹೀಗೆ ಶಂಕರ ಭಾಸ್ಕರ ಯಾದವರೆಂಬ ಮೂವರ ಮತದಲ್ಲಿಯೂ-ಸಾಮಾನಾಧಿಕರಣ್ಯರೂಪವಾಗಿ ಪ್ರವರ್ತಿಸಿರುವ ಅಭೇದಶ್ರುತಿ ಯಾವಯಾವ ರೀತಿಯಲ್ಲಿಯೂ ಸಂಗತವಾಗುವುದಿಲ್ಲವೆಂಬುದನ್ನು ತೋರಿಸಿದೆವು. ಬ್ರಹ್ಮಸೂತ್ರದಲ್ಲಿ ಈ ಮೂವರ ಮತಕ್ಕೂ ನಿರಾಸವು ಸಿದ್ಧವಾಗಿರುವಂತೆ ನೈಯಾಯಿಕಾದಿಮತಗಳಿಗೂ ನಿರಾಸವು ಸಿದ್ಧವಾಗಿದ್ದರೂ ಈ ಮೂವರ ಮತಕ್ಕಿಂತಲೂ ನೈಯಾಯಿಕಾದಿಮತಗಳೇ ಸ್ವಲ್ಪಮಟ್ಟಿಗೆ ಉತ್ತಮವಾಗಿರುವುವೆಂದು ಹೇಳಬಹುದು,—

ಹೇಗೆಂದರೆ "**ಇದಂ ಸರ್ವಂ ಯದಯಮಾತ್ಮಾ**" ಎಂಬ ಅಭೇದಶ್ರುತಿ ಸಮಸ್ತಪ್ರಪಂಚಕ್ಕೂ ಬ್ರಹ್ಮಕ್ಕೂ ಅಭೇದವನ್ನು ಬೋಧಿಸುತ್ತಿರುವುದು; ಆದರೆ ಈ ಅಭೇದವು ಹೇಗೆ ಸಂಭವಿಸೀತೆಂದು ವಿಮರ್ಶೆಮಾಡಿ ನೋಡಿದರೆ ಶಾಂಕರಮತದಲ್ಲಿ ಪ್ರಪಂಚಭ್ರಮಕ್ಕೆ ಬ್ರಹ್ಮವು ಅಧಿಷ್ಠಾನವಾದುದರಿಂದಲೂ, ಇಂಥ ಬ್ರಹ್ಮದಲ್ಲಿ ಪ್ರಪಂಚವು ಅಧ್ಯಸ್ತವಾದುದರಿಂದಲೂ, ಅಧ್ಯಸ್ತಕ್ಕೂ ಅಧಿಷ್ಠಾನಕ್ಕೂ ತಾದಾತ್ಮ್ಯವಿರುವುದರಿಂದ ಈ ಅಭೇದಶ್ರುತಿಗೆ ಯಥಾಶ್ರುತಾರ್ಥವನ್ನೇ ಅಂಗೀಕರಿಸಿ ಇದಕ್ಕೆ ಸಾಮಂಜಸ್ಯವುಂಟೆಂದು ಹೇಳುವರು :

ಭೇದಾಭೇದವಾದಿಗಳಾದ ಭಾಸ್ಕರಯಾದವರ ಮತದಲ್ಲಿಯಾದರೋ "ನೀಲೋ ಘಟಃ" ಎಂಬುವೇ ಮೊದಲಾದ ಅಭೇದವಾಕ್ಯಗಳಲ್ಲಿ ನಿರ್ವಹಿಸುವಂತೆಯೇ ಈ ಅಭೇದಶ್ರುತಿಯನ್ನು ನಿರ್ವಹಿಸುವರು;

ಆದರೆ ಶಾಂಕರಮತದಲ್ಲಿ ಪ್ರತ್ಯಕ್ಷಾದಿಪ್ರಮಾಣಗಳಿಂದ ಸತ್ಯತ್ವೇನ ಅವಗತವಾಗಿರುವ ಪ್ರಪಂಚಕ್ಕೆ ಬ್ರಹ್ಮದಲ್ಲಿ ಅಧ್ಯಾಸವನ್ನು ಕಲ್ಪಿಸುವುದೂ; ಅದರಿಂದ ಅದಕ್ಕೆ ಮಿಥ್ಯಾತ್ವವನ್ನು ಕಲ್ಪಿಸುವುದೂ ವ್ಯಾಹತವಾಗಿರುವುದು. ಭಾಸ್ಕರಯಾದವಮತದಲ್ಲಿ ಭೇದಾಭೇದಗಳಿಗೆ ವ್ಯಾಹತಿಯೆಂಬುದು ಸ್ಪಷ್ಟವಾಗಿ ತಿಳಿದೇ ಇರುವುದು;

ನೈಯಾಯಿಕಮತದಲ್ಲಿಯಾದರೆ—ಪ್ರಪಂಚಕ್ಕೆ ಸತ್ಯತ್ವವೂ, ಪ್ರಪಂಚಕ್ಕೂ ಬ್ರಹ್ಮಕ್ಕೂ ಅತ್ಯಂತಭೇದವೂ ಇರುವುದರಿಂದ ಅಭೇದಶ್ರುತಿಯಲ್ಲಿ ಬ್ರಹ್ಮಕ್ಕೂ ಪ್ರಪಂಚಕ್ಕೂ ಮುಖ್ಯವಾದ ಅಭೇದವನ್ನು ಬೋಧಿಸುವುದಕ್ಕಾಗದಿದ್ದರೂ ಪರಮಾತ್ಮಾಧೀನವ್ಯಾಪಾರತ್ವವನ್ನು ಬೋಧಿಸುವುದರಮೂಲಕ ಔಪಚಾರಿಕವಾದ ಅಭೇದವನ್ನು ಬೋಧಿಸಬಹುದಾದ್ದುದರಿಂದ ವ್ಯಾಹತಿಯೇನೂ ಇಲ್ಲ; ಆದರೆ ಕ್ಲಿಷ್ಟಕಲ್ಪನೆಮಾತ್ರ ನಿಲ್ಲುವುದು. ಆದಕಾರಣ ಶಾಂಕರಾದಿಮತಕ್ಕಿಂತಲೂ ನೈಯಾಯಿಕಮತವು ಇದ್ದುದರಲ್ಲಿ ಸ್ವಲ್ಪಮಟ್ಟಿಗೆ ಉತ್ತಮವೆಂದು ಹೇಳಬಹುದು ಏತಕ್ಕೆಂದರೆ ವ್ಯಾಹತವಾದ ಅರ್ಥವನ್ನು ಸ್ವೀಕರಿಸುವುದಾದರೆ ವಾಕ್ಯಕ್ಕೇ ಅಪ್ರಾಮಾಣ್ಯದೋಷವುಂಟಾಗುವುದು; ಕ್ಲಿಷ್ಟಾರ್ಥಕಲ್ಪನೆಯಲ್ಲಿಯಾದರೆ ಅಮುಖ್ಯಾರ್ಥಸ್ವೀಕಾರವು ಮಾತ್ರ ಪ್ರಸಂಗಿಸುವುದಲ್ಲದೆ ವಾಕ್ಯಕ್ಕೆ ಅಪ್ರಾಮಾಣ್ಯದೋಷವಿಲ್ಲ.

"ಆದಿತ್ಯೋ ಯೂಪಃ" ಎಂಬ ವಾಕ್ಯದಲ್ಲಿ ಯೂಪಕ್ಕೂ ಆದಿತ್ಯನಿಗೂ ಐಕ್ಯವನ್ನು ಸ್ವೀಕರಿಸುವುದಾದರೆ ವಾಕ್ಯಕ್ಕೆ ಕ್ಲೇಶವಿರುವುದಿಲ್ಲ; ಆದರೆ ಪ್ರತ್ಯಕ್ಷಾದಿಪ್ರಮಾಣವಿರೋಧದಿಂದ ವಾಕ್ಯಕ್ಕೇ ಅಪ್ರಾಮಾಣ್ಯವು ಪ್ರಸಕ್ತವಾಗುವುದು;

ಯೂಪಕ್ಕೂ ಆದಿತ್ಯನಿಗೂ ಐಕ್ಯವನ್ನು ಸ್ವೀಕರಿಸದೆ ಗೌಣಾರ್ಥವನ್ನು ಸ್ವೀಕರಿಸಿ ಅಭೇದವಾಕ್ಯಕ್ಕೆ ನಿರ್ವಾಹವನ್ನು ತೋರಿಸಿದರೆ ವಾಕ್ಯಕ್ಕೆ ಅಪ್ರಾಮಾಣ್ಯವಿಲ್ಲ; ಆದರೆ ಗೌಣಾರ್ಥತ್ವವೆಂಬ ದೋಷವಿರುವುದು.

ಹೀಗೆ ಎರಡುಪಕ್ಷಗಳಲ್ಲಿಯೂ ಒಂದೊಂದು ದೋಷವಿದ್ದರೂ ಮೀಮಾಂಸಕರು—ವಾಕ್ಯಕ್ಕೆ ಅಪ್ರಾಮಾಣ್ಯದೋಷವನ್ನು ಉಂಟುಮಾಡುವ ಅಭೇದಪಕ್ಷವನ್ನು ಅಂಗೀಕರಿಸದೆ—ಗೌಣಾರ್ಥವಾದರೂ ಚಿಂತೆಯಿಲ್ಲ; ವಾಕ್ಯಕ್ಕೆ ಪ್ರಾಮಾ

ಣ್ಯವಿದ್ದರೆ ಸಾಕೆಂದು ಗೌಣಾರ್ಥಪಕ್ಷವನ್ನೇ ಸ್ವೀಕರಿಸಿರುವರು. ಅದರಂತೆ ಇಲ್ಲಿಯೂ ತಿಳಿಯಬಹುದು.

### ೬೬೨. ವಿಶಿಷ್ಯ ಭಾಸ್ಕರ-ಯಾದವ-ಮತನಿರಾಕರಣಂ.

ಭಾಸ್ಕರಯಾದವರನ್ನು ಕುರಿತು ಮುಖ್ಯವಾಗಿ ಹೇಳುವುದೇನೆಂದರೆ—"ನಿಮಗೆ ಅಭಿಮತವಾಗಿರುವ ಭೇದಾಭೇದವು ಅತ್ಯಂತವಿರುದ್ಧವಾಗಿರುವುದು" ಎಂದು ಹೇಳುವುದಕ್ಕೆ ಸಹ ನಾವು ಲಜ್ಜಿಪಡುವೆವು. ಆದರೂ ಸ್ವಲ್ಪಮಟ್ಟಿಗೆ ಹೇಳುವೆವು. ಅಭೇದವೆಂದರೆ ಭೇದಾಭಾವವು. ಭೇದವಿರುವ ಕಡೆಯಲ್ಲಿ ಭೇದಾಭಾವವಿರುವುದಿಲ್ಲ; ಭೇದಾಭಾವವಿರುವಕಡೆಯಲ್ಲಿ ಭೇದವಿರುವುದಿಲ್ಲ; ಹೀಗೆ ಪರಸ್ಪರವಿರುದ್ಧವಾದ ಈ ಎರಡನ್ನೂ ಒಂದು ವಸ್ತುವಿನಲ್ಲಿ ಸ್ವೀಕರಿಸುವ ನಿಮಗೆ ಲಜ್ಜೆಯುಂಟಾಗುವುದಿಲ್ಲವೋ ?" ಎಂದು ಹೇಳುವೆವು.

### ೬೬೩. ಭೇದವದಭೇದಸ್ಯಾಪಿ ಭಾವರೂಪತ್ವಾದುಭಯೋಃ ಅವಿರುದ್ಧತ್ವಾಶಂಕಾ.

"ಪೂಜ್ಯರೆ ? ಅಭೇದವೆಂಬುದು ಭೇದಾಭಾವರೂಪವಾಗಿದ್ದರಲ್ಲವೆ—ಭೇದಕ್ಕೂ, ಭೇದಾಭಾವರೂಪವಾದ ಅಭೇದಕ್ಕೂ ವಿರೋಧವಿರುವುದೆಂದು ಹೇಳುವುದು ? ಅಭೇದವೆಂಬುದು ಭೇದಾಭಾವರೂಪವಲ್ಲ ; ಕಿಂತು ಭೇದವೆಂಬುದು ಹೇಗೆ ಭಾವರೂಪವಾದ ಒಂದಾನೊಂದು ಧರ್ಮವೋ ಆದರಂತೆ ಅಭೇದವೆಂಬುದೂ ಭಾವರೂಪವಾದ ಒಂದಾನೊಂದು ಧರ್ಮಾಂತರರೂಪವಾಗಿರುವುದು. ಇವೆರಡಕ್ಕೂ ಪರಸ್ಪರವಿರೋಧವೇನೂ ಇಲ್ಲವಷ್ಟೆ ?" ಎಂದು ಆಶಂಕಿಸಲಾಗುವುದಿಲ್ಲ.

### ೬೬೪. ತತ್ಪರಿಹಾರಃ.

ಏತಕ್ಕೆಂದರೆ—ಭೇದಾಭಾವಕ್ಕಿಂತಲೂ ಅತಿರಿಕ್ತವಾದ ಅಭೇದವೆಂಬ ಧರ್ಮಾಂತರವೆಂಬುದು ಅಪ್ರಸಿದ್ಧವಾಗಿರುವುದಷ್ಟೆ ? ಒಂದುವೇಳೆ ಅತಿರಿಕ್ತವೆಂದು ಹೇಳಿದರೂ ಭೇದಾಭಾವಕ್ಕೆ ಮತ್ತೊಂದು ಹೆಸರನ್ನು ಪರಿಭಾಷೆಯಾಗಿ ಇಟ್ಟಂತೆ ಆಗುವುದಲ್ಲದೆ ಅದರಿಂದ ಸಾಮಾನಾಧಿಕರಣ್ಯನಿರ್ವಾಹಕ್ಕೆ ಏನೂ ಉಪಯೋಗವಿಲ್ಲ.

### ೬೬೫. ವ್ಯಕ್ತ್ಯಾತ್ಮನಾ ಭಿನ್ನಸ್ಯಾಪಿ ಜಾತ್ಯಾತ್ಮನಾಽಭಿನ್ನತ್ವಾದುಭಯೋರವಿರುದ್ಧತ್ವಾಶಂಕಾ.

ಪೂಜ್ಯರೆ ? ಅನೇಕಘಟಗಳೊಳಗೆ ಘಟತ್ವವೆಂಬ ಒಂದೇ ಜಾತಿ ಇರುವುದರಿಂದ ಆ ಘಟಗಳಲ್ಲಿ ಜಾತ್ಯಾಕಾರದಿಂದ ಅಭೇದವೂ ವ್ಯಕ್ತ್ಯಾಕಾರದಿಂದ ಭೇದವೂ

ಸಂಭವಿಸಬಹುದಾಗಿರುವಲ್ಲಿ ಒಂದು ವಸ್ತುವಿನಲ್ಲಿ ಭೇದಾಭೇದವಿಲ್ಲವೆಂದು ಹೇಗೆ ಹೇಳಲಾದೀತು ?

### ೬೬೬. ತತ್ಪರಿಹಾರಃ

ಹೀಗೆ ಹೇಳಲಾದೀತು—ಜಾತ್ಯಾಕಾರದಿಂದ ಅಭೇದವನ್ನೂ ವ್ಯಕ್ತ್ಯಾಕಾರದಿಂದ ಭೇದವನ್ನೂ ಅಂಗೀಕರಿಸುವಿರಾದರೆ—ಜಾತಿಯಲ್ಲಿ ಅಭೇದವೂ ವ್ಯಕ್ತಿಯಲ್ಲಿ ಭೇದವೂ ಸಂಭವಿಸಿತಲ್ಲದೆ ಒಂದರಲ್ಲಿ ಎರಡೂ ಸಂಭವಿಸಲಿಲ್ಲವಷ್ಟೆ ?

### ೬೬೭. ಜಾತಿವ್ಯಕ್ತ್ಯೋರಪಿ ಭಿನ್ನಾಭಿನ್ನತ್ವಾದ್ಭೇದಾಭೇದಯೋಃ ಅವಿರುದ್ಧತ್ವಾಶಂಕಾ

ಪೂಜ್ಯರೆ ! ಜಾತಿವ್ಯಕ್ತಿಗಳಿಗೂ ಪರಸ್ಪರವಾಗಿ ಭಿನ್ನಾಭಿನ್ನತ್ವವನ್ನು ಅಂಗೀಕರಿಸುವೆವಾದುದರಿಂದ ಜಾತಿಗತವಾದ ಅಭೇದವೂ ವ್ಯಕ್ತಿಗತವಾದ ಭೇದವೂ ಒಂದರಲ್ಲಿಯೇ ಸಂಭವಿಸಿದಂತಾಗುವುದರಿಂದ ಭಿನ್ನಾಭಿನ್ನತ್ವವು ಉಪಪನ್ನವಾಗುವುದಲ್ಲವೆ ?

### ೬೬೮. ತತ್ಪರಿಹಾರಃ

ಇಲ್ಲ ಉಪಪನ್ನವಾಗುವುದಿಲ್ಲ. ಹೇಗೆಂದರೆ—ಘಟವ್ಯಕ್ತಿಗಳಿಗೆ ಸ್ವರೂಪದಿಂದ ಭಿನ್ನಾಭಿನ್ನತ್ವವನ್ನು ನೀವು ಹೇಳಿದಾಗ ಭೇದಕ್ಕೂ ಭೇದಾಭಾವಕ್ಕೂ ವಿರೋಧವನ್ನು ಪರಿಹರಿಸುವುದಕ್ಕೋಸ್ಕರ ನೀವು ಆಕಾರಭೇದವನ್ನು ಅವಲಂಬಿಸಿ ಜಾತ್ಯಾಕಾರದಿಂದ ಅಭೇದವನ್ನೂ ವ್ಯಕ್ತ್ಯಾಕಾರದಿಂದ ಭೇದವನ್ನೂ ತೋರಿಸಿದಿರಿ; ಹಾಗಾದರೆ ಜಾತಿಯಲ್ಲಿ ಅಭೇದವೂ ವ್ಯಕ್ತಿಯಲ್ಲಿ ಭೇದವೂ ಸಂಭವಿಸಿತಲ್ಲದೆ ಎರಡೂ ಒಂದರಲ್ಲಿ ಸಂಭವಿಸಲಿಲ್ಲವೆಂದು ಪುನಃ ನಾವು ತೋರಿಸಿದೆವು; ಇದನ್ನು ಸರಿಪಡಿಸುವುದಕ್ಕಾಗಿ ಎಂದರೆ ಭೇದಾಭೇದಗಳೆರಡನ್ನೂ ಒಂದರಲ್ಲಿ ತೋರಿಸುವುದಕ್ಕಾಗಿ ಜಾತಿವ್ಯಕ್ತಿಗಳಿಗೆ ಭಿನ್ನಾಭಿನ್ನತ್ವವನ್ನು ಈಗ ಹೇಳುತ್ತೀರಿ; ಈ ವಿಷಯದಲ್ಲಿ ಪುನಃ ನಾವು—" ಜಾತಿವ್ಯಕ್ತಿಗಳಿಗೆ ಭಿನ್ನಾಭಿನ್ನತ್ವವು ಸ್ವರೂಪದಿಂದಲೋ ಅಥವಾ ಆಕಾರಾಂತರದಿಂದಲೋ " ಎಂದು ಪ್ರಶ್ನೆ ಮಾಡುವೆವಾದರೆ—ಆಗ ನೀವು " ಸ್ವರೂಪದಿಂದಲೇ ಜಾತಿವ್ಯಕ್ತಿಗಳಿಗೆ ಭಿನ್ನಾಭಿನ್ನತ್ವವು " ಎಂದು ಉತ್ತರವನ್ನು ಹೇಳುವಿರಾದರೆ-ಪರಸ್ಪರವಿರೋಧವೆಂಬ ದೋಷವು ತಪ್ಪಲೇ ಇಲ್ಲವೆಂದು ನಾವೂ ಹೇಳುವೆವು; " ಆಕಾರಾಂತರದಿಂದಲೇ ಜಾತಿವ್ಯಕ್ತಿಗಳಿಗೆ ಭಿನ್ನಾಭಿನ್ನತ್ವವು " ಎಂದು ಹೇಳುವಿರಾದರೆ—" ಒಂದು ಆಕಾರದಲ್ಲಿ ಅಭೇದವೂ ಮತ್ತೊಂದು ಆಕಾರದಲ್ಲಿ ಭೇದವೂ ಬಂತಲ್ಲದೆ ಎರಡೂ ಒಂದರಲ್ಲಿ ಬರಲಿಲ್ಲ " ವೆಂದು ಪುನಃ ನಾವು ದೋಷವನ್ನು ತೋರಿಸುವೆವು. ಇದನ್ನು ಪರಿಹರಿಸುವುದಕ್ಕಾಗಿ ಪುನಃ ಆಕಾರಾಂ

ತರವನ್ನು ಸ್ವೀಕರಿಸುವಿರಾದರೆ ಅನವಸ್ಥಾದೋಷದಿಂದ ಬಿಡುಗಡೆಯಾಗುವುದಿಲ್ಲ ವೆಂದು ಹೇಳುವೆವಾದುದರಿಂದ ಭಿನ್ನಾಭಿನ್ನತ್ವವು ಒಂದುವಸ್ತುವಿನಲ್ಲಿ ಎಂದೆಂದಿಗೂ ಉಪಪನ್ನವಾಗುವುದಿಲ್ಲ.

### ೬೬೯. ಜಗದ್ಬ್ರಹ್ಮಣೋರೈಕ್ಯಾಭಾವೇ ಬ್ರಹ್ಮಣಸ್ತ್ರಿವಿಧಪರಿಚ್ಛೇದರಾಹಿತ್ಯಾಸಿದ್ಧ್ಯಾಶಂಕಾ.

ಪೂಜ್ಯರೆ! "ಸತ್ಯಂ ಜ್ಞಾನಮನಂತಂ ಬ್ರಹ್ಮ" ಎಂಬ ವಾಕ್ಯದಲ್ಲಿ ಅನಂತಪದದಿಂದ ತ್ರಿವಿಧಪರಿಚ್ಛೇದರಾಹಿತ್ಯವು ಬ್ರಹ್ಮಕ್ಕೆ ಹೇಳಲ್ಪಡುವುದೆಂದು ಹಿಂದೆ ತೋರಿಸಿದಿರಿ. ಪ್ರಪಂಚಕ್ಕೂ ಬ್ರಹ್ಮಕ್ಕೂ ನೀವು ಅಭೇದವನ್ನು ಅಂಗೀಕರಿಸದೆ ಕೇವಲ ಭೇದವನ್ನೇ ಒಪ್ಪುವಿರಾದರೆ ತ್ರಿವಿಧಪರಿಚ್ಛೇದರಾಹಿತ್ಯವು ಬ್ರಹ್ಮಕ್ಕೆ ಸಿದ್ಧಿಸಲಾರದು. ಹೇಗೆಂದರೆ—ದೇಶಪರಿಚ್ಛೇದ, ಕಾಲಪರಿಚ್ಛೇದ, ವಸ್ತುಪರಿಚ್ಛೇದವೆಂಬ ತ್ರಿವಿಧಪರಿಚ್ಛೇದದ ಶೂನ್ಯತೆಯಲ್ಲವೆ ತ್ರಿವಿಧಪರಿಚ್ಛೇದರಾಹಿತ್ಯವು. ಪ್ರಪಂಚಾಂತರ್ಗತವಾದ ಸಮಸ್ತವಸ್ತುವಿಗೂ ಬ್ರಹ್ಮಕ್ಕೂ ಅಭೇದವನ್ನು ಅಂಗೀಕರಿಸಿದರಲ್ಲದೆ ವಸ್ತುಪರಿಚ್ಛೇದರಾಹಿತ್ಯವು ಸಿದ್ಧಿಸುವುದಿಲ್ಲ; ನೀವಾದರೆ ಪ್ರಪಂಚಕ್ಕೂ ಬ್ರಹ್ಮಕ್ಕೂ ಆತ್ಯಂತಿಕಭೇದವನ್ನೇ ಅಂಗೀಕರಿಸುವಿರಲ್ಲದೆ ಅಭೇದವನ್ನು ಅಂಗೀಕರಿಸುವುದಿಲ್ಲ; ಹೀಗಾದರೆ ವಸ್ತುಪರಿಚ್ಛೇದರಾಹಿತ್ಯವು ಸಿದ್ಧಿಸಲಿಲ್ಲವಾದುದರಿಂದ ತ್ರಿವಿಧಪರಿಚ್ಛೇದರಾಹಿತ್ಯವು ನಿಮ್ಮ ಮತದಲ್ಲಿ ದುರ್ಲಭವಾಗಿರುವುದು."

### ೬೭೦. ತತ್ಪರಿಹಾರಕಥನಾಯ ಪ್ರಥಮಂ ದೇಶಕಾಲಪರಿಚ್ಛೇದರಾಹಿತ್ಯಸಿದ್ಧಿಪ್ರದರ್ಶನಂ.

ಇಂಥ ಆಶಂಕೆ ಸಂಗತವಲ್ಲ. ಏತಕ್ಕೆಂದರೆ-ಬ್ರಹ್ಮವು ಒಂದು ಕಾಲದಲ್ಲಿಯೂ ಒಂದು ಪ್ರದೇಶದಲ್ಲಿಯೂ ಇದ್ದು ಮತ್ತೊಂದು ಕಾಲದಲ್ಲಿಯೂ ಮತ್ತೊಂದು ಪ್ರದೇಶದಲ್ಲಿಯೂ ಇಲ್ಲದಿದ್ದರೆ ಕಾಲಪರಿಚ್ಛೇದವೂ ದೇಶಪರಿಚ್ಛೇದವೂ ಬಂದು ಅವುಗಳ ಅಪರಿಚ್ಛೇದವು ಸಿದ್ಧಿಸದೆಹೋದೀತು; ಆದರೆ ಹಾಗಿಲ್ಲದೆ ಬ್ರಹ್ಮವು ಸರ್ವಕಾಲದಲ್ಲಿಯೂ ಸರ್ವದೇಶದಲ್ಲಿಯೂ ವ್ಯಾಪಕವಾಗಿರುವುದರಿಂದ ಕಾಲಪರಿಚ್ಛೇದರಾಹಿತ್ಯವೂ ದೇಶಪರಿಚ್ಛೇದರಾಹಿತ್ಯವೂ ಸಿದ್ಧವಾಗಿಯೇ ಇರುವುವೆಂದು ಸ್ಪಷ್ಟವಾಗಿರುವುದು;—

### ೬೭೧. ಅದ್ವೈತಮತರೀತ್ಯಾ ವಸ್ತುಪರಿಚ್ಛೇದರಾಹಿತ್ಯಸ್ಯ ಚತುರ್ಧಾ ಉಪಪಾದನಂ.

ಇನ್ನು ವಸ್ತುಪರಿಚ್ಛೇದರಾಹಿತ್ಯವು ಹೇಗೆ ಸಿದ್ಧಿಸುವುದೆಂದು ವಿಚಾರಿಸಬೇಕು. ಇದಕ್ಕೋಸ್ಕರ ಮೊದಲು ವಸ್ತುಪರಿಚ್ಛೇದರಾಹಿತ್ಯವೆಂದರೇನು? ಎಂಬು

ದನ್ನು ನಿಷ್ಕರ್ಷಿಸಿಕೊಳ್ಳಬೇಕು. ಈ ವಸ್ತುಪರಿಚ್ಛೇದರಾಹಿತ್ಯವನ್ನು ನಾಲ್ಕುಪ್ರಕಾರವಾಗಿ ಮೃಷಾವಾದಿಗಳು ಹೇಳುವರು ; ಹೇಗೆಂದರೆ—

**ಮೊದಲನೆಯದು**—ಕಿಂಚಿದ್ವಸ್ತುವಿನೊಡನೆ ತಾದಾತ್ಮ್ಯವಿಲ್ಲದಿರುವಿಕೆ ವಸ್ತುಪರಿಚ್ಛೇದವೆನಿಸಿಕೊಳ್ಳುವುದರಿಂದ ಅಂಥ ವಸ್ತುಪರಿಚ್ಛೇದವಿಲ್ಲದಿರುವಿಕೆ ಎಂದರೆ—ಸರ್ವವಸ್ತುವಿನೊಡನೆ ತಾದಾತ್ಮ್ಯವನ್ನು ಪಡೆದಿರುವಿಕೆ ವಸ್ತುಪರಿಚ್ಛೇದರಾಹಿತ್ಯವೆನಿಸಿಕೊಳ್ಳುವುದು.

**ಎರಡನೆಯದು**—ಅಥವಾ ಕಿಂಚಿದ್ವಸ್ತುವಿನ ಅಧ್ಯಾಸಕ್ಕೆ (ಭ್ರಮಕ್ಕೆ) ಅಧಿಷ್ಠಾನವಾಗದಿರುವಿಕೆ ವಸ್ತುಪರಿಚ್ಛೇದವೆನಿಸಿಕೊಳ್ಳುವುದರಿಂದ ಅಂಥ ವಸ್ತುಪರಿಚ್ಛೇದವಿಲ್ಲದಿರುವಿಕೆ ಎಂದರೆ ಸರ್ವವಸ್ತುವಿನ ಅಧ್ಯಾಸಕ್ಕೆ ಅಧಿಷ್ಠಾನವಾಗಿರುವಿಕೆ ವಸ್ತುಪರಿಚ್ಛೇದರಾಹಿತ್ಯವೆನಿಸಿಕೊಳ್ಳುವುದು.

**ಮೂರನೆಯದು**—ಅಥವಾ ಸತ್ಯವಸ್ತುವಿಗಿಂತಲೂ ತನಗೆ ಉಂಟಾಗಿರುವ ಭೇದಕ್ಕೆ ತಾನು ಆಶ್ರಯವಾಗಿರುವಿಕೆ ವಸ್ತುಪರಿಚ್ಛೇದವೆನಿಸಿಕೊಳ್ಳುವುದರಿಂದ ಅಂಥ ವಸ್ತುಪರಿಚ್ಛೇದವಿಲ್ಲದಿರುವಿಕೆ ಎಂದರೆ ಸ್ವವ್ಯತಿರಿಕ್ತವಾದ ಸಮಸ್ತಪದಾರ್ಥವೂ ಮಿಥ್ಯೆಯಾಗಿರುವಿಕೆ ವಸ್ತುಪರಿಚ್ಛೇದರಾಹಿತ್ಯವೆನಿಸಿಕೊಳ್ಳುವುದು.

**ನಾಲ್ಕನೆಯದು**— ಅಥವಾ ನಿತ್ಯವಾದ ವಸ್ತುವಿಗಿಂತಲೂ ತನಗೆ ಉಂಟಾಗಿರುವ ಭೇದಕ್ಕೆ ತಾನು ಆಶ್ರಯವಾಗಿರುವಿಕೆ ವಸ್ತುಪರಿಚ್ಛೇದವೆನಿಸಿಕೊಳ್ಳುವುದರಿಂದ ಅಂಥ ವಸ್ತುಪರಿಚ್ಛೇದವಿಲ್ಲದಿರುವಿಕೆ ಎಂದರೆ ಸ್ವವ್ಯತಿರಿಕ್ತವಾದ ಸಮಸ್ತಪದಾರ್ಥವೂ ಅನಿತ್ಯವಾಗಿರುವಿಕೆ ವಸ್ತುಪರಿಚ್ಛೇದರಾಹಿತ್ಯವೆನಿಸಿಕೊಳ್ಳುವುದು.

## ೬೭೨. ಉಕ್ತಸ್ಯ ಪಕ್ಷಚತುಷ್ಟಯಸ್ಯಾಪಿ ಅಸಮಂಜಸತ್ವೋಪಪಾದನಂ.

ಹೀಗೆ ಹೇಳುವ ನಾಲ್ಕುಪಕ್ಷಗಳೂ ಸಮಂಜಸಗಳಲ್ಲ; ಹೇಗೆಂದರೆ—ಜಡವಾದ ಪ್ರಪಂಚಕ್ಕೂ ಅಜಡವಾದ ಬ್ರಹ್ಮಕ್ಕೂ ತಾದಾತ್ಮ್ಯವು ಸಂಭವಿಸುವುದಿಲ್ಲವಾದುದರಿಂದಲೂ—ಜೀವನು ಜಡನಲ್ಲದೆ ಅಜಡನಾಗಿಯೇ ಇದ್ದರೂ ಅಲ್ಪಜ್ಞನಾಗಿಯೂ ಅಲ್ಪಶಕ್ತಿಕನಾಗಿಯೂ ಕರ್ಮವಶ್ಯನಾಗಿಯೂ ಇರುವ ಇವನೊಡನೆ ಸರ್ವಜ್ಞವಾಗಿಯೂ ಸರ್ವಶಕ್ತಿಯಾಗಿಯೂ ಅಕರ್ಮವಶ್ಯವಾಗಿಯೂ ಇರುವ ಬ್ರಹ್ಮಕ್ಕೆ ತಾದಾತ್ಮ್ಯವು ಸಂಭವಿಸುವುದಿಲ್ಲವಾದುದರಿಂದಲೂ—ಮತ್ತು ಪೂರ್ವೋ

ಕ್ತಗಳಾದ ಸಾವಿರಾರು ದೋಷಗಳು ಜಾಗರೂಕಗಳಾಗಿರುವುದರಿಂದಲೂ— "ಸರ್ವವಸ್ತುವಿನೊಡನೆ ತಾದಾತ್ಮ್ಯವನ್ನು ಪಡೆದಿರುವಿಕೆ ವಸ್ತುಪರಿಚ್ಛೇದರಾಹಿತ್ಯವೆನಿಸಿಕೊಳ್ಳುವುದು" ಎಂಬ **ಪ್ರಥಮಪಕ್ಷವು ಸಮಂಜಸವಲ್ಲ.**

ಪ್ರತ್ಯಕ್ಷಾನುಮಾನಾಗಮಗಳೆಂಬ ಸಕಲಪ್ರಮಾಣಗಳಿಂದಲೂ ಸಿದ್ಧವಾಗಿರುವ ಪ್ರಪಂಚದ ಜ್ಞಾನವು ಯಥಾರ್ಥಜ್ಞಾನವಾಗಿಯೇ ಇರುವುದಲ್ಲದೆ ಭ್ರಮರೂಪಜ್ಞಾನವಾಗುವುದಿಲ್ಲವಾದಕಾರಣ ಬ್ರಹ್ಮವು ಸರ್ವವಸ್ತುವಿನ ಯಥಾರ್ಥಜ್ಞಾನಕ್ಕೆ ಆಶ್ರಯವಾಗಿರುವುದಲ್ಲದೆ ಸರ್ವವಸ್ತುವಿನ ಭ್ರಮಕ್ಕೆ ಅಧಿಷ್ಠಾನವಲ್ಲವಾದುದರಿಂದಲೂ,—ಪೂರ್ವೋಕ್ತಗಳಾದ ಸಾವಿರಾರು ದೋಷಗಳು ಜಾಗರೂಕಗಳಾಗಿರುವುದರಿಂದಲೂ—"ಸರ್ವವಸ್ತುವಿನ ಅಧ್ಯಾಸಕ್ಕೆ ಅಧಿಷ್ಠಾನವಾಗಿರುವಿಕೆ ವಸ್ತುಪರಿಚ್ಛೇದರಾಹಿತ್ಯವೆನಿಸಿಕೊಳ್ಳುವುದು." ಎಂಬ **ದ್ವಿತೀಯಪಕ್ಷವೂ ಸಮಂಜಸವಲ್ಲ.**

ಪೂರ್ವೋಕ್ತಗಳಾದ ಸಕಲಪ್ರಮಾಣಗಳಿಂದಲೂ ಸಿದ್ಧವಾಗಿರುವುದರಿಂದಲೇ ಬ್ರಹ್ಮವ್ಯತಿರಿಕ್ತವಾದ ಸಮಸ್ತಪ್ರಪಂಚವೂ ಸತ್ಯವಾಗಿಯೇ ಇರುವಕಾರಣ ಇದಕ್ಕೆ ಮಿಥ್ಯಾತ್ವವು ಸಂಭವಿಸುವುದಿಲ್ಲವಾದುದರಿಂದಲೂ—ಪೂರ್ವೋಕ್ತಗಳಾದ ಸಾವಿರಾರು ದೋಷಗಳು ಜಾಗರೂಕಗಳಾಗಿರುವುದರಿಂದಲೂ "ಸ್ವವ್ಯತಿರಿಕ್ತವಾದ ಸಮಸ್ತಪದಾರ್ಥವೂ ಮಿಥ್ಯೆಯಾಗಿರುವಿಕೆ ವಸ್ತುಪರಿಚ್ಛೇದರಾಹಿತ್ಯವೆನಿಸಿಕೊಳ್ಳುವುದು" ಎಂಬ **ತೃತೀಯಪಕ್ಷವೂ ಸಮಂಜಸವಲ್ಲ.**

ನಿತ್ಯವಿಭೂತಿ, ಲೀಲಾವಿಭೂತಿ ಎಂಬ ವಿಭೂತಿದ್ವಯವೂ ಬ್ರಹ್ಮಕ್ಕೆ ನಿತ್ಯವಾದುದರಿಂದ ಬ್ರಹ್ಮವ್ಯತಿರಿಕ್ತವಾದ ಪ್ರಪಂಚಕ್ಕೆ ನೀವು ಹೇಳುವ ಅನಿತ್ಯತ್ವವು ಸಿದ್ಧಿಸುವುದಿಲ್ಲವಾದುದರಿಂದಲೂ— ಪೂರ್ವೋಕ್ತಗಳಾದ ಸಾವಿರಾರು ದೋಷಗಳು ಜಾಗರೂಕಗಳಾಗಿರುವುದರಿಂದಲೂ—"ಸ್ವವ್ಯತಿರಿಕ್ತವಾದ ಸಮಸ್ತಪದಾರ್ಥವೂ ಅನಿತ್ಯವಾಗಿರುವಿಕೆ ವಸ್ತುಪರಿಚ್ಛೇದರಾಹಿತ್ಯವೆನಿಸಿಕೊಳ್ಳುವುದು" **ಎಂಬ ನಾಲ್ಕನೆಯ ಪಕ್ಷವೂ ಸಮಂಜಸವಲ್ಲ.**

## ೭೭೩. ವಿವರಣಕಾರೋಕ್ತವಸ್ತುಪರಿಚ್ಛೇದರಾಹಿತ್ಯ ಪರಿಷ್ಕರಣಪ್ರದರ್ಶನಂ.

ಆದಕಾರಣ ವಸ್ತುಪರಿಚ್ಛೇದರಾಹಿತ್ಯವೆಂಬುದನ್ನು ಮತ್ತೊಂದು ಬಗೆಯಾಗಿಯೇ ಪರಿಷ್ಕರಿಸಬೇಕು, ವಿವರಣಕಾರರು ಜನ್ಮಾದ್ಯಧಿಕರಣದಲ್ಲಿ ಅದನ್ನು ಈ ರೀತಿಯಲ್ಲಿ ಪರಿಷ್ಕರಿಸಿರುವರು—"ವಸ್ತುಪರಿಚ್ಛೇದವೆಂದರೆ ವಸ್ತುಪರಿಮಾ

ಣವು—ಎಂದರೆ ವಸ್ತುವಿನ ಇಯತ್ತೆ—ಅಥವಾ ಅಲ್ಪಪರಿಮಾಣವುಳ್ಳೋಣವು. ಇಂಥ ವಸ್ತುಪರಿಚ್ಛೇದವೇ ದೇಶಪರಿಚ್ಛೇದಕ್ಕೆ ಕಾರಣವಾಗುವುದು. ವಸ್ತು ಅಲ್ಪಪರಿಮಾಣವುಳ್ಳದಾದುದರಿಂದಲ್ಲವೆ ಸಕಲದೇಶವ್ಯಾಪ್ತಿಗೆ ಅನರ್ಹವಾಗಿ ದೇಶಪರಿಚ್ಛೇದಕ್ಕೆ ಭಾಗಿಯಾಗುವುದು. ಇಂಥ ವಸ್ತುಪರಿಚ್ಛೇದವಿಲ್ಲದಿರುವಿಕೆಯೇ ಎಂದರೆ ನಿರವಧಿಕವಾದ ಪರಿಮಾಣವುಳ್ಳೋಣವೇ ವಸ್ತುಪರಿಚ್ಛೇದರಾಹಿತ್ಯವೆನಿಸಿಕೊಳ್ಳುವುದು. ವೇದಾರ್ಥಸಂಗ್ರಹವ್ಯಾಖ್ಯಾನದಲ್ಲಿಯೂ ಇದೇ ಅರ್ಥವು ಸ್ಪಷ್ಟವಾಗಿ ಹೇಳಲ್ಪಟ್ಟಿರುವುದು.

## ೬೭೪. ವರದನಾರಾಯಣಭಟ್ಟಾರಕೋಕ್ತವಸ್ತುಪರಿಚ್ಛೇದರಾಹಿತ್ಯಪರಿಷ್ಕರಣಪ್ರದರ್ಶನಂ.

ನ್ಯಾಯಸುದರ್ಶನವೆಂಬ ಗ್ರಂಥದಲ್ಲಿ ವರದನಾರಾಯಣಭಟ್ಟಾರಕರು ಹೇಳುವುದೇನೆಂದರೆ—" ವಸ್ತುಪರಿಚ್ಛೇದವೆಂದರೆ—ಪರಮಾತ್ಮನು ಇಷ್ಟು ಗುಣವುಳ್ಳವನು ; ಇಷ್ಟು ವಿಭೂತಿಯುಳ್ಳವನು ; ಎಂದು ನಿಶ್ಚಯಿಸುವಿಕೆ. ಇಂಥ ವಸ್ತುಪರಿಚ್ಛೇದವಿಲ್ಲದಿರುವಿಕೆಯೇ ಎಂದರೆ ಎಣಿಸಲಶಕ್ಯವಾದ ಗುಣವಿಭೂತಿಗಳುಳ್ಳವನಾಗಿರುವಿಕೆಯೇ ವಸ್ತುಪರಿಚ್ಛೇದರಾಹಿತ್ಯವೆನಿಸಿಕೊಳ್ಳುವುದು.

ಅಥವಾ—" ವಸ್ತುಪರಿಚ್ಛೇದವೆಂದರೆ—ತನ್ನೊಡನೆ ಅಪೃಥಕ್ಸಿದ್ಧಿಸಂಬಂಧವನ್ನು ಪಡೆಯದೆ ಸ್ವತಂತ್ರವಾಗಿರುವ ವಸ್ತ್ವಂತರವುಳ್ಳೋಣವು. ಇಂಥ ವಸ್ತುಪರಿಚ್ಛೇದವಿಲ್ಲದಿರುವಿಕೆಯೇ ಎಂದರೆ—ಸ್ವವ್ಯತಿರಿಕ್ತವಾದ ಸಮಸ್ತಪದಾರ್ಥವೂ ತನಗೆ ಶರೀರವಾಗಿ ಅಪೃಥಕ್ಸಿದ್ಧವಾದುದರಿಂದ ತನಗೆ ಪರತಂತ್ರವಾಗಿಯೇ ಇರುವ ಕಾರಣ ಸ್ವವ್ಯತಿರಿಕ್ತಸ್ವತಂತ್ರವಸ್ತುಶೂನ್ಯತ್ವವೇ ವಸ್ತುಪರಿಚ್ಛೇದರಾಹಿತ್ಯವೆನಿಸಿಕೊಳ್ಳುವುದು." ಎಂದು ಹೇಳುವರು.

ಇದರ ಪರ್ಯವಸಾನವೇನಾಗಿರುವುದೆಂದರೆ—" ಪರಮಾತ್ಮನು ಘಟವೆನಿಸಿಕೊಳ್ಳಲಾರನು ; ಪರಮಾತ್ಮನು ಪಟವೆನಿಸಿಕೊಳ್ಳಲಾರನು—" ಎಂಬುದಿಲ್ಲದೆ ಘಟವೆಂದೂ ಎನಿಸಿಕೊಳ್ಳುವನು ; ಪಟವೆಂದೂ ಎನಿಸಿಕೊಳ್ಳುವನು—' ಎಂಬುವಿಕೆಯೇ ವಸ್ತುಪರಿಚ್ಛೇದರಾಹಿತ್ಯವು ; ಜೀವನು ದೇವಶರೀರದಲ್ಲಿ ಪ್ರವೇಶಿಸದಿರುವಾಗ ದೇವನೆನಿಸಿಕೊಳ್ಳಲಾರನು ; ಮನುಷ್ಯಶರೀರದಲ್ಲಿ ಪ್ರವೇಶಿಸದಿರುವಾಗ ಮನುಷ್ಯನೆನಿಸಿಕೊಳ್ಳಲಾರನು. ಹೀಗೆಯೇ ಯಾವಯಾವ ಶರೀರದಲ್ಲಿ ಯಾವಾಗ ಪ್ರವೇಶಿಸಿಲ್ಲವೋ ಆಗ ಆ ಆ ಶರೀರವಾಚಕವಾದ ಶಬ್ದಗಳಿಂದ ವ್ಯವಹರಿಸಲ್ಪಡಲಾರನು. ಆ ಆ ಶರೀರಗಳಲ್ಲಿ ಪ್ರವೇಶಿಸಿದನಾದರೆ ಆ ಆ ಶಬ್ದಗಳಿಂದ ವ್ಯವಹರಿ

ಸಲ್ಪಟ್ಟೇಪಡುವನು. ಇದರಂತೆ ಪರಮಾತ್ಮನು ಘಟ, ಪಟ ಮುಂತಾದ ಸಮಸ್ತ ಶರೀರಗಳಲ್ಲಿಯೂ ಪ್ರವೇಶಿಸದಿದ್ದ ಪಕ್ಷದಲ್ಲಿ ಆ ಆ ಸಮಸ್ತಶಬ್ದಗಳಿಂದಲೂ ವ್ಯವಹರಿಸಲ್ಪಡಲಾರನೆಂದು ಹೇಳಬಹುದಾಗಿದ್ದಿತು ; ಆದರೆ ಹಾಗಿಲ್ಲದೆ ಸರ್ವಕಾಲದಲ್ಲಿಯೂ ಸರ್ವವಸ್ತುಗಳಲ್ಲಿಯೂ ಪ್ರವೇಶಿಸಿರುವನಾದುದರಿಂದ ಆ ಆ ಸಮಸ್ತಶಬ್ದಗಳಿಂದಲೂ ವ್ಯವಹರಿಸಲ್ಪಟ್ಟೇಪಡುವನು. ಇದರಿಂದ—"**ಘಟಃ ಪರಮಾತ್ಮಾ-ಪಟಃ ಪರಮಾತ್ಮಾ-ಕುಡ್ಯಂ ಪರಮಾತ್ಮಾ-ಸರ್ವಂ ಪರಮಾತ್ಮಾ**" ಎಂಬುದಾಗಿ ಸರ್ವವಸ್ತುವಿನೊಡನೆಯೂ ಸಾಮಾನಾಧಿಕರಣ್ಯಕ್ಕೆ ಅರ್ಹನಾಗಿರುವಿಕೆಯೇ ವಸ್ತುಪರಿಚ್ಛೇದರಾಹಿತ್ಯವೆಂಬುದು ನಿಷ್ಕೃಷ್ಟವಾಯಿತು.

## ೬೭೫. ಉಕ್ತಪಕ್ಷದ್ವಯೇ ಅನಂತರೋಕ್ತಪಕ್ಷಸ್ಯೈವ ಜ್ಯಾಯಸ್ತ್ವಂ.

ಹೀಗೆ ತೋರಿಸಿದ ಎರಡು ಪಕ್ಷಗಳಲ್ಲಿಯೂ ಎಂದರೆ ವಿವರಣಕಾರಪಕ್ಷ, ವರದನಾರಾಯಣಭಟ್ಟಾರಕಪಕ್ಷ ಈ ಎರಡು ಪಕ್ಷಗಳಲ್ಲಿಯೂ ವರದನಾರಾಯಣಭಟ್ಟಾರಕರ ಪಕ್ಷವೇ ಮುಖ್ಯವಾಗಿಯೂ ಶ್ರೇಷ್ಠವಾಗಿಯೂ ಇರುವುದು. ವಿವರಣಕಾರರ ಅಭಿಪ್ರಾಯಾನುಸಾರವಾಗಿ "ನಿರವಧಿಕವಾದ ಪರಿಮಾಣವುಳ್ಳೋಣವೇ ವಸ್ತುಪರಿಚ್ಛೇದರಾಹಿತ್ಯವು" ಎಂದು ಒಪ್ಪುವುದಾದರೆ—ದೇಶಪರಿಚ್ಛೇದರಾಹಿತ್ಯವೂ ಏತದ್ರೂಪವೇ ಆದುದರಿಂದ ವಸ್ತುಪರಿಚ್ಛೇದರಾಹಿತ್ಯಕ್ಕೂ ದೇಶಪರಿಚ್ಛೇದರಾಹಿತ್ಯಕ್ಕೂ ವ್ಯತ್ಯಾಸವಿಲ್ಲದೆ ಹೋಗುವುದಾದಕಾರಣ ಅವರ ಪಕ್ಷವು ಸಮಂಜಸವಲ್ಲವಾಗಿ ಭಟ್ಟಾರಕರ ಪಕ್ಷವೇ ಸರ್ವಶ್ರೇಷ್ಠವಾಗಿರುವುದು.

ಅಂತು—ಪರಮಾತ್ಮನಿಗೆ ಸ್ವರೂಪದಿಂದಲಾಗಲಿ ಗುಣದಿಂದಲಾಗಲಿ ವಿಭೂತಿಯಿಂದಲಾಗಲಿ ಯಾವುದೊಂದು ಆಕಾರದಿಂದಲೂ ಕಿಂಚಿನ್ಮಾತ್ರವೂ ಅಪಕರ್ಷವಿಲ್ಲದಿರುವಿಕೆಯೇ ವಸ್ತುಪರಿಚ್ಛೇದರಾಹಿತ್ಯವೆಂದು ಸಿದ್ಧವಾಯಿತು. ವಿವರಣಕಾರರ ಪಕ್ಷಕ್ಕೂ ಇದೇ ಅರ್ಥದಲ್ಲಿ ತಾತ್ಪರ್ಯವನ್ನು ಹೇಳಬಹುದು—ಪರಿಮಾಣಪದಕ್ಕೆ ಇಯತ್ತೆಯೆಂಬ ಅರ್ಥದಲ್ಲಿ ಸ್ವಾರಸ್ಯವಿರುವುದರಿಂದಲೂ ಇಯತ್ತೆಯೆಂಬುದು ಅಪಕರ್ಷರೂಪವಾಗಿರುವುದೆಂದು ಪ್ರಸಿದ್ಧವಾದುದರಿಂದಲೂ ತದ್ರಾಹಿತ್ಯವೇ ವಸ್ತುಪರಿಚ್ಛೇದರಾಹಿತ್ಯವಾಗಿರುವುದೆಂಬುದಾಗಿ ಅವರ ವಾಕ್ಯಕ್ಕೆ ತಾತ್ಪರ್ಯವು ಸಂಭವಿಸಬಹುದಷ್ಟೆ ?

ಹೀಗೆಯೇ ವರದನಾರಾಯಣಭಟ್ಟಾರಕರು ಹೇಳಿದ ಎರಡು ಪಕ್ಷಗಳೊಳಗೆ "ಸ್ವವ್ಯತಿರಿಕ್ತಸ್ವತಂತ್ರವಸ್ತುಶೂನ್ಯತ್ವವೇ ವಸ್ತುಪರಿಚ್ಛೇದರಾಹಿತ್ಯವು"

ಎಂಬ ದ್ವಿತೀಯಪಕ್ಷಕ್ಕೂ ಅವರ ಪ್ರಥಮಪಕ್ಷದಲ್ಲಿಯೇ ಅಂತರ್ಭಾವವಾಗು ವಂತೆ ತಾತ್ಪರ್ಯವನ್ನು ಹೇಳಬೇಕು. ಸ್ವವ್ಯತಿರಿಕ್ತಸ್ವತಂತ್ರವಸ್ತುಶೂನ್ಯತ್ವವೆಂದರೆ- "ಸ್ವವ್ಯತಿರಿಕ್ತಗಳಾದ ಸಮಸ್ತವಸ್ತುಗಳನ್ನೂ ತನಗೆ ಶರೀರಗಳನ್ನಾಗಿ ಮಾಡಿ ಕೊಂಡು ಅವುಗಳಿಗೆ ತಾನು ಶರೀರಿಯಾಗಿರುವುದರಿಂದ ಸರ್ವವಸ್ತುಗಳೊಡನೆ ಉಂಟಾಗಿರುವ ಅಪೃಥಕ್ಸಿದ್ಧಿಸಂಬಂಧಕ್ಕೆ ತಾನು ಆಶ್ರಯನಾಗಿರುವಿಕೆಯೆಂಬ ಸರ್ವಾತ್ಮಕತ್ವವು." ಇಂಥ ಸರ್ವಾತ್ಮಕತ್ವವು ಸರ್ವನಿಯಂತೃತ್ವವೆಂಬ ಪರಮಾ ತ್ಮಾಸಾಧಾರಣಗುಣದ ಪರಾಕಾಷ್ಠೆಯಾಗಿರುವುದರಿಂದ ಗುಣಾಪಕರ್ಷವಿಲ್ಲವೆಂಬು ದರಲ್ಲಿಯೇ ಈ ಪಕ್ಷಕ್ಕೂ ತಾತ್ಪರ್ಯವನ್ನು ಹೇಳಬಹುದಷ್ಟೆ ?

ಅಂತು ಅಪಕರ್ಷರಾಹಿತ್ಯವೇ ವಸ್ತುಪರಿಚ್ಛೇದರಾಹಿತ್ಯವೆಂಬುದು ಸಿದ್ಧ ವಾಯಿತು. ಆದುದರಿಂದ ಬ್ರಹ್ಮಕ್ಕಿಂತಲೂ ಅತ್ಯಂತಭಿನ್ನಗಳಾದ ಅನಂತಾನಂತ ವಸ್ತುಗಳಿದ್ದರೂ ಬ್ರಹ್ಮಕ್ಕೆ ತ್ರಿವಿಧಪರಿಚ್ಛೇದರಾಹಿತ್ಯವು ಉಪಪನ್ನವಾಗುವುದರಲ್ಲಿ ತಡೆಯಿಲ್ಲ.

## ೬೭೬. ತ್ರಿವಿಧಪರಿಚ್ಛೇದಶೂನ್ಯತ್ವಸ್ಯೋಪಾದಾನತ್ವೋಪ ಯೋಗಿತ್ವಂ.

ಹೀಗೆ ಪರಮಾತ್ಮನಿಗೆ ತ್ರಿವಿಧಪರಿಚ್ಛೇದರಾಹಿತ್ಯವನ್ನು ತೋರಿಸುವುದರ ಮೂಲಕ ಸರ್ವಾತ್ಮಕತ್ವವನ್ನು ಉಪಪಾದನೆಮಾಡಿ ತೋರಿಸಿದುದರಿಂದಲೇ ಉಪಾ ದಾನಕಾರಣತ್ವವೂ ಅಬಾಧಿತವಾಗಿ ಸಿದ್ಧವಾದುದರಿಂದ—ಪರಮಾತ್ಮನಿಗೆ ಉಪಾ ದಾನಕಾರಣತ್ವವನ್ನು ಒಪ್ಪದೆ ನಿಮಿತ್ತಕಾರಣತ್ವವನ್ನು ಮಾತ್ರ ಹೇಳುವ ಶೈವರ, ಕಾಣಾದರ, ನೈಯಾಯಿಕರ, ಮತ್ತು ಸೇಶ್ವರಸಾಂಖ್ಯರ ಮತಪ್ರಲಾಪಗಳು ಶ್ರುತಿ ವಿರುದ್ಧಗಳಾದಕಾರಣ ವೇದಬಹಿಷ್ಕೃತಗಳಾಗಿರುವುವೆಂದು ವ್ಯಕ್ತವಾಯಿತು.

## ೬೭೭. ಬ್ರಹ್ಮಣೋ ಜಗದುಪಾದಾನತ್ವೇ ಪ್ರಮಾಣಪ್ರದರ್ಶನಂ.

"ಪೂಜ್ಯರೆ! ಸರ್ವಾತ್ಮಕತ್ವವನ್ನೇನೋ ಉಪಪಾದನೆಮಾಡಿ ತೋರಿಸಿ ದಿರಿ ; ಆದರೆ—ಪ್ರಮಾಣವಿಲ್ಲದೆ ಯಾವಪ್ರಮೇಯವೂ ಸಿದ್ಧಿಸುವುದಿಲ್ಲ ; ಪ್ರಬಲ ವಾದ ಪ್ರಮಾಣದಿಂದ ಪರಮಾತ್ಮನಿಗೆ ಉಪಾದಾನಕಾರಣತ್ವವು ಒಂದುವೇಳೆ ಸಿದ್ಧವಾಗುವುದಾದರೆ ಆಗ ಈ ಸರ್ವಾತ್ಮಕತ್ವವು ಅದಕ್ಕೆ ಉಪಪಾದಕವಾಗಿ ಆಗ ಬಹುದಲ್ಲದೆ ಇದೇ ಅದಕ್ಕೆ ಪ್ರಮಾಣವಾಗಲಾರದಷ್ಟೆ ?" ಎಂದು ಆಶಂಕಿಸಬೇಕಾ ದುದಿಲ್ಲ; ಏತಕ್ಕೆಂದರೆ—

"ಸೋಽಕಾಮಯತ ಬಹು ಸ್ಯಾಂ ಪ್ರಜಾಯೇಯೇತಿ, ಬ್ರಹ್ಮ ವನಂ ಬ್ರಹ್ಮ ಸ ವೃಕ್ಷ ಆಸೀತ್, ತದಾತ್ಮಾನಂ ಸ್ವಯಮಕುರುತ, ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಂ" ಇವೇ ಮೊದಲಾದ ಸಾವಿರಾರು ಶ್ರುತಿಗಳು ಕಾರಣಾವಸ್ಥಾಪನ್ನವಾದ ಸೂಕ್ಷ್ಮಚಿದಚಿದ್ವಿಶಿಷ್ಟಬ್ರಹ್ಮವೇ ಉಪಾದಾನಕಾರಣವೆಂದು ಘಂಟಾಘೋಷವಾಗಿ ಮೊರೆಯಿಡುತ್ತಿರುವುವಷ್ಟೆ?

## ೬೭೮. ಸತ್ಯಪಿ ಬ್ರಹ್ಮಣೋ ಜಗದುಪಾದಾನತ್ವೇ ನಿರ್ವಿಕಾರ ಶ್ರುತ್ಯವಿರೋಧಪ್ರದರ್ಶನಂ

ಪೂಜ್ಯರೆ? ಪರಮಾತ್ಮನಿಗೆ ಉಪಾದಾನಕಾರಣತ್ವವನ್ನು ಒಪ್ಪಿಕೊಳ್ಳುವುದಾದರೆ ವಿಕಾರಿತ್ವವನ್ನೂ ಒಪ್ಪಿಕೊಳ್ಳಬೇಕಾಗಿಬರುವುದರಿಂದ ನಿರ್ವಿಕಾರತ್ವಶ್ರುತಿಗೆ ವಿರೋಧವುಂಟಾಗುವುದಿಲ್ಲವೆ?

ಇಲ್ಲ—ವಿರೋಧಲೇಶವೂ ಇಲ್ಲ. ಉಪಾದಾನತ್ವಶ್ರುತಿ ಚಿದಚಿದ್ವಿಶಿಷ್ಟ ವಸ್ತುವಿಗೆ ಉಪಾದಾನತ್ವವನ್ನು ತೋರಿಸುವುದು; ನಿರ್ವಿಕಾರತ್ವಶ್ರುತಿ ವಿಶೇಷ್ಯ ಸ್ವರೂಪವಾದ ಅಂತರ್ಯಾಮ್ಯಂಶದಲ್ಲಿ ನಿರ್ವಿಕಾರತ್ವವನ್ನು ತೋರಿಸುವುದು. ಉಪಾದಾನತ್ವಶ್ರುತಿ ಕೇವಲವಿಶೇಷ್ಯಾಂಶದಲ್ಲಿ ಉಪಾದಾನಕಾರಣತ್ವವನ್ನು ತೋರಿಸಿದ್ದುದಾದರೆ ಆಗ ನಿರ್ವಿಕಾರತ್ವಶ್ರುತಿಯೊಡನೆ ಇದು ವಿರುದ್ಧವಾಗಿರುವುದೆಂದು ಹೇಳಬಹುದಾಗಿದ್ದಿತು. ಅಥವಾ ನಿರ್ವಿಕಾರತ್ವಶ್ರುತಿ ವಿಶಿಷ್ಟಸ್ವರೂಪದಲ್ಲಿ ನಿರ್ವಿಕಾರತ್ವವನ್ನು ತೋರಿಸಿದ್ದುದಾದರೂ ಆಗ ಉಪಾದಾನತ್ವಶ್ರುತಿಯೊಡನೆ ಇದು ವಿರುದ್ಧವಾಗಿರುವುದೆಂದು ಹೇಳಬಹುದಾಗಿದ್ದಿತು. ಹಾಗಿಲ್ಲದೆ ಈ ಎರಡುಶ್ರುತಿಗಳೂ ಭಿನ್ನಭಿನ್ನವಿಷಯಗಳಾದುದರಿಂದ ಇವುಗಳಿಗೆ ವಿರೋಧಪ್ರಸಕ್ತಿಯೇ ಇಲ್ಲ. ಉಪಾದಾನತ್ವಶ್ರುತಿ ಕೇವಲ ವಿಶೇಷ್ಯಾಂಶಕ್ಕೆ ಉಪಾದಾನತ್ವವನ್ನು ತೋರಿಸಲಿಲ್ಲವಾದುದರಿಂದ—ನಿರ್ವಿಕಾರತ್ವಶ್ರುತಿಬೋಧಿತವಾದ ವಿಕಾರರಾಹಿತ್ಯವು ವಿಶೇಷ್ಯಾಂಶದಲ್ಲಿ ಇರಲು ತಡೆಯಿಲ್ಲ; ನಿರ್ವಿಕಾರತ್ವಶ್ರುತಿ ವಿಶಿಷ್ಟಸ್ವರೂಪದಲ್ಲಿ ನಿರ್ವಿಕಾರತ್ವವನ್ನು ತೋರಿಸಲಿಲ್ಲವಾದುದರಿಂದ—ಉಪಾದಾನತ್ವಶ್ರುತಿಬಲದಿಂದ ಅವರ್ಜನೀಯವಾಗಿ ಬಂದೊದಗುವ ವಿಕಾರಸಾಹಿತ್ಯವೂ ವಿಶಿಷ್ಟಸ್ವರೂಪದಲ್ಲಿ ಇರಲು ತಡೆಯಿಲ್ಲ.

## ೬೭೯. ಸ್ಥೂಲಚಿದಚಿದ್ವಿಶಿಷ್ಟತ್ವಸ್ಯ ವಿಶಿಷ್ಟವೇಷೇಣ ಜನ್ಯತ್ವೇಽಪಿ ಸ್ವರೂಪೇಣಾಜನ್ಯತಯಾ ವಿಕಾರತ್ವಾಭಾವಾದ್ಬ್ರಹ್ಮಣೋ ನಿರ್ವಿಕಾರತ್ವೋಪಪತ್ತಿಃ

ಈ ಸಂದರ್ಭದಲ್ಲಿ ಅವಶ್ಯಕವಾಗಿ ತಿಳಿದುಕೊಳ್ಳಬೇಕಾದ ವೇದಾಂತರಹಸ್ಯವನ್ನು ಇಲ್ಲಿ ಸಂಕ್ಷೇಪವಾಗಿ ತೋರಿಸುವೆವು.—ಪ್ರಾತಃಕಾಲದಲ್ಲಿ ಮೃತ್ಪಿಂಡವೆಂಬ

ನಾಮಧೇಯವನ್ನು ಧರಿಸಿದ್ದ ಒಂದಾನೊಂದು ವಸ್ತು ಮಧ್ಯಾಹ್ನದ ವೇಳೆಗೆ ಘಟವೆಂಬ ಮತ್ತೊಂದು ನಾಮಧೇಯವನ್ನು ಧರಿಸಬೇಕಾದರೆ—ಅದಕ್ಕೆ ಅನುಕೂಲವಾದ ಒಂದಾನೊಂದು ಅವಸ್ಥೆ ಎಂದರೆ ಬದಲಾವಣೆ ಆ ವಸ್ತುವಿನಲ್ಲಿ ಉಂಟಾಗಬೇಕು ಇದರಿಂದ ನಾಮಾಂತರಪ್ರಾಪ್ತಿಗೆ ಅರ್ಹವಾದ ಅವಸ್ಥೆಯೇ ವಿಕಾರವೆನಿಸಿಕೊಳ್ಳುವುದೆಂದು ಸಿದ್ಧವಾಯಿತು. ಅವಸ್ಥೆಯೆಂಬುದು ವಸ್ತುವಿಗೆ ಆಗಂತುಕವಾದ ಅಪೃಥಕ್ಸಿದ್ಧಧರ್ಮವೆಂಬುದನ್ನು ಅಚಿತ್ತತ್ತ್ವಪರಿಚ್ಛೇದದಲ್ಲಿಯೇ ತೋರಿಸಿರುವೆವು. ಆಗುಂತುಕವೆಂದರೆ ಜನ್ಯವಾಗಿರುವುದೆಂದು ಅರ್ಥವು.

ಅಂತು—ಇಂಥ ಅವಸ್ಥೆಯೆಂಬ ಧರ್ಮವು—ಅಚಿದ್ವಸ್ತುವಿನಲ್ಲಿ,-ಮಹತ್ತ್ವ, ಅಹಂಕಾರತ್ವ-ಇಂದ್ರಿಯತ್ವ-ಆಕಾಶತ್ವ-ವಾಯುತ್ವ-ಮೊದಲಾದ ಧರ್ಮರೂಪವಾಗಿ ಇರುವುದು. ಚಿದ್ವಸ್ತುವಿನಲ್ಲಿಯಾದರೆ ಅದರ ಧರ್ಮಭೂತಜ್ಞಾನದಲ್ಲಿರುವ ಸಂಕೋಚ ವಿಕಾಸರೂಪವಾಗಿರುವುದು.

ಹೀಗೆ ಅಚಿದ್ವಸ್ತುವಿನಲ್ಲಿರುವ ಮಹತ್ತ್ವಾಹಂಕಾರತ್ವಾದಿಗಳೂ, ಚಿದ್ವಸ್ತುವಿನ ಧರ್ಮಭೂತಜ್ಞಾನದಲ್ಲಿರುವ ಸಂಕೋಚವಿಕಾಸಗಳೂ ಸಹ ಸ್ವರೂಪದಿಂದಲೇ ಜನ್ಯವಾಗಿರುವುದರಿಂದ ಅವಸ್ಥೆಯೆನಿಸಿಕೊಂಡು ವಿಕಾರಶಬ್ದವಾಚ್ಯಗಳಾಗುವುವು. ಇಷ್ಟೇ ಅಲ್ಲದೆ—ಈಶ್ವರನಲ್ಲಿರುವ ಸ್ಥೂಲಚಿದಚಿದ್ವಿಶಿಷ್ಟತ್ವವು ಅವಸ್ಥೆಯೆನಿಸಿಕೊಳ್ಳುವುದೂ ಇಲ್ಲ; ವಿಕಾರಶಬ್ದವಾಚ್ಯವೂ ಆಗುವುದಿಲ್ಲ. ಏತಕ್ಕೆಂದರೆ ಚಿದಚಿದ್ವಿಶಿಷ್ಟತ್ವಕ್ಕಿಂತಲೂ ಸ್ಥೂಲಚಿದಚಿದ್ವಿಶಿಷ್ಟತ್ವವೆಂಬುದು ಅತಿರಿಕ್ತವಲ್ಲ. ಚಿದಚಿದ್ವಿಶಿಷ್ಟತ್ವವು ಈಶ್ವರನಿಗೆ ಸ್ವರೂಪಪ್ರಯುಕ್ತವಾದುದರಿಂದ ನಿತ್ಯವಾಗಿರುವುದು. ಸ್ಥೂಲತ್ವಾಕಾರವಿಶಿಷ್ಟವಾದ ಚಿದಚಿದ್ವಿಶಿಷ್ಟತ್ವವು—ಕಾದಾಚಿತ್ಕವಾದುದರಿಂದ ಜನ್ಯವೆನಿಸಿಕೊಂಡರೂ ಚಿದಚಿದ್ವಿಶಿಷ್ಟತ್ವಸ್ವರೂಪವು ಜನ್ಯವಲ್ಲ. ಸ್ವರೂಪದಿಂದ ಜನ್ಯವಾದ ಧರ್ಮವೇ ವಿಕಾರವೆನಿಸಿಕೊಳ್ಳುವುದೆಂದು ವಿಕಾರಲಕ್ಷಣವಿರುವುದು. ಈಶ್ವರನು ಒಂದುಕಾಲದಲ್ಲಿ ಚಿದಚಿದ್ವಿಶಿಷ್ಟನಲ್ಲದೆಯೂ, ಮತ್ತೊಂದು ಕಾಲದಲ್ಲಿ ಚಿದಚಿದ್ವಿಶಿಷ್ಟನಾಗಿಯೂ ಇರುವನಾದರೆ ಇಂಥ ಕಾದಾಚಿತ್ಕವಾದ ಚಿದಚಿದ್ವಿಶಿಷ್ಟತ್ವವು ಈಶ್ವರನಲ್ಲಿ ಜನ್ಯಧರ್ಮವಾದುದರಿಂದ ವಿಕಾರವೆಂದು ಹೇಳಿಸಿಕೊಳ್ಳಲು ಅರ್ಹವಾದೀತು. ಹಾಗಿಲ್ಲದೆ ಇದು ಈಶ್ವರನಿಗೆ ನಿತ್ಯವಾದುದರಿಂದ ವಿಶಿಷ್ಟವೇಷದಿಂದ ಜನ್ಯವಾಗಿದ್ದರೂ ಸ್ವರೂಪದಿಂದ ಜನ್ಯವಲ್ಲವಾದಕಾರಣ ಎಂದಿಗೂ ವಿಕಾರವೆನಿಸಿಕೊಳ್ಳಲಾರದು. ಆದಕಾರಣ ಉಕ್ತವಾದ ವಿಕಾರವು ಬ್ರಹ್ಮದಲ್ಲಿ ಇಲ್ಲವೆಂಬುದಕ್ಕೆ ಯಾವುದೊಂದು ಬಾಧಕವೂ ಇಲ್ಲ.

## ೬೮೦. ಸ್ಥೂಲಚಿದಚಿದ್ವಿಶಿಷ್ಟತ್ವಸ್ಯ ವಿಕಾರರೂಪತ್ವಾಭಾವೇಽಪಿ ಬ್ರಹ್ಮಣ ಉಪಾದಾನತ್ವೋಪಪತ್ತಿಃ

ಪೂಜ್ಯರೆ ? ಸ್ಥೂಲಚಿದಚಿದ್ವಿಶಿಷ್ಟತ್ವವು ವಿಕಾರವೆನಿಸಿಕೊಳ್ಳದಿದ್ದಪಕ್ಷದಲ್ಲಿ ವಿಶಿಷ್ಟಬ್ರಹ್ಮದಲ್ಲಿಯೂ ವಿಕಾರವು ಬರಲಿಲ್ಲವಾದುದರಿಂದ ವಿಶಿಷ್ಟಬ್ರಹ್ಮಕ್ಕೆ ಉಪಾದಾನತ್ವವೂ ಇಲ್ಲದೆ ಹೋಗುವುದಲ್ಲವೆ?

ಇಲ್ಲ—ಹೋಗುವುದಿಲ್ಲ ವಿಶಿಷ್ಟವಸ್ತುವಿಗೆ ಉಪಾದಾನತ್ವವು ಸಿದ್ಧಿಸಿಯೇ ಸಿದ್ಧಿಸುವುದು. ಹೇಗೆಂದರೆ—ಭಾವಿಯಾದ ಅವಸ್ಥೆಗೆ ಆಶ್ರಯವಾಗುವ ವಸ್ತುವಿನಲ್ಲಿರುವ ಪೂರ್ವಾವಸ್ಥಾಶ್ರಯತ್ವವೇ ಉಪಾದಾನತ್ವವೆಂದು ವ್ಯವಹರಿಸಲ್ಪಡುವುದು. ಈ ಉಪಾದಾನತ್ವಲಕ್ಷಣದಲ್ಲಿ ಪ್ರವಿಷ್ಟವಾಗಿರುವ ಅವಸ್ಥೆಯೆಂಬುದು ಸ್ವರೂಪದಿಂದಲಾದರೂ ವಿಶಿಷ್ಟವೇಷದಿಂದಲಾದರೂ ಕಾದಾಚಿತ್ಕವಾಗಿದ್ದರೆ ಸಾಕಾಗಿರುವುದಲ್ಲದೆ ಸ್ವರೂಪದಿಂದಲೇ ಜನ್ಯವಾಗಿರಬೇಕೆಂಬ ನಿರ್ಬಂಧವಿಲ್ಲ. ಬ್ರಹ್ಮದಲ್ಲಿ ಚಿದಚಿದ್ವಿಶಿಷ್ಟತ್ವಸ್ವರೂಪವು ಮೊದಲೇ ಇದ್ದರೂ ಸ್ಥೂಲತ್ವವಿಶಿಷ್ಟವೇಷದಿಂದ ಮೊದಲು ಬ್ರಹ್ಮದಲ್ಲಿ ಇಲ್ಲದೆಯೂ ಅನಂತರದಲ್ಲಿ ಉಂಟಾಗುವುದಾಗಿಯೂ ಇರುವುದರಿಂದ ಕಾದಾಚಿತ್ಕವಾದಕಾರಣ ಇದು ಉಪಾದಾನತ್ವಲಕ್ಷಣದಲ್ಲಿ ಸೇರಿರುವ ಉತ್ತರಾವಸ್ಥೆಯೆನಿಸಿಕೊಳ್ಳಲು ತಡೆಯಿಲ್ಲ. ಹೀಗೆ ಅವಸ್ಥೆಯೆನಿಸಿಕೊಂಡರೂ ಈ ಸ್ಥೂಲಚಿದಚಿದ್ವಿಶಿಷ್ಟತ್ವವು ಸ್ವರೂಪೇಣ ನಿತ್ಯವಾದುದರಿಂದ ವಿಕಾರವೆನಿಸಿಕೊಳ್ಳುವುದಿಲ್ಲವೆಂಬುದನ್ನು ಮೊದಲೇ ತೋರಿಸಿರುವೆವು. ಇಂಥ ಉತ್ತರಾವಸ್ಥೆಗೆ ಪೂರ್ವಾವಸ್ಥೆಯಾದ ಸೂಕ್ಷ್ಮಚಿದಚಿದ್ವಿಶಿಷ್ಟತ್ವಕ್ಕೆ ಬ್ರಹ್ಮವು ಆಶ್ರಯವಾಗಿರುವುದರಿಂದ ಬ್ರಹ್ಮಕ್ಕೆ ಉಪಾದಾನತ್ವವು ತಡೆಯಿಲ್ಲದೆ ಉಂಟಾಗಬಹುದು.

ಅಂತು ವಿಕಾರವಿಲ್ಲದಿದ್ದರೂ ಬ್ರಹ್ಮಕ್ಕೆ ಉಪಾದಾನಕಾರಣತ್ವವು ಉಪಪನ್ನವಾದುದರಿಂದ ಉಪಾದಾನಕಾರಣತ್ವವನ್ನು ಅಂಗೀಕರಿಸಿದರೂ ನಿರ್ವಿಕಾರತ್ವಶ್ರುತಿಗೆ ವಿರೋಧವೇನೂ ಇಲ್ಲ.

ಅಥವಾ ಉಪಾದಾನತ್ವಲಕ್ಷಣದಲ್ಲಿ ಸೇರಿರುವ ಅವಸ್ಥೆಯೂ ವಿಕಾರರೂಪವಾಗಿಯೇ ಇರುವುದೆಂದು ಅಂಗೀಕರಿಸಿದರೂ ಸಾಕ್ಷಾತ್ಸಂಬಂಧದಿಂದಲಾಗಲಿ ಪರಂಪರಾಸಂಬಂಧದಿಂದಲಾಗಲಿ ಅವಸ್ಥಾಶ್ರಯತ್ವವು ಉಪಾದಾನತ್ವವಾಗುವುದೆಂದು ಒಪ್ಪುವೆವಾದುದರಿಂದ ಮಹತ್ತ್ವ-ಅಹಂಕಾರತ್ವ ಮೊದಲಾದ ಅವಸ್ಥಾಶ್ರಯತ್ವವು ಬ್ರಹ್ಮದಲ್ಲಿ ಪರಂಪರಾಸಂಬಂಧದಿಂದ ಇರುವಕಾರಣ ಬ್ರಹ್ಮವು ಉಪಾದಾನಕಾರಣವೆನಿಸಿಕೊಳ್ಳಲು ತಡೆಯಿಲ್ಲ. ನಿರ್ವಿಕಾರತ್ವಶ್ರುತಿಯಾದರೆ

ಸಾಕ್ಷಾತ್ಸಂಬಂಧದಿಂದ ವಿಕಾರರಾಹಿತ್ಯವನ್ನು ಬೋಧಿಸುವುದಾದುದರಿಂದ ಇದ ಕ್ಕೂ ಯಾವುದೊಂದು ವಿರೋಧವೂ ಇಲ್ಲ.

ಮನುಷ್ಯಾದಿಶರೀರದೊಡನೆ ಕೂಡಿರುವ ಜೀವನಿಗೆ ಬಾಲತ್ವ-ಯುವತ್ವ-ವೃದ್ಧತ್ವವೊದಲಾದ ವಿಕಾರಗಳಿದ್ದರೂ ಜೀವಸ್ವರೂಪದಲ್ಲಿ ನಿರ್ವಿಕಾರತ್ವವೇ ಇರುವಂತೆ ಚಿದಚಿದ್ವಿಶಿಷ್ಟವಾದ ಬ್ರಹ್ಮದಲ್ಲಿ ವಿಕಾರಗಳಿದ್ದರೂ ವಿಶೇಷ್ಯವಾದ ಬ್ರಹ್ಮಸ್ವರೂಪದಲ್ಲಿ ನಿರ್ವಿಕಾರತ್ವಕ್ಕೆ ಚ್ಯುತಿಯಿಲ್ಲವಷ್ಟೆ?

## ೩೮೧. ನಿಮಿತ್ತೋಪಾದಾನಯೋರ್ಭೇದಾವಶ್ಯಂಭಾವಾದೀಶ್ವರಸ್ಯ ಉಪಾದಾನತ್ವಾಭಾವಾಶಂಕಾ.

"ಪೂಜ್ಯರೆ? ಯಾವುದು ಯಾವಕಾರ್ಯದ ಉತ್ಪತ್ತಿಗೆ ನಿಮಿತ್ತಕಾರಣವೆನಿಸಿಕೊಂಡಿರುವುದೋ ಅದು ಅದೇ ಕಾರ್ಯಕ್ಕೆ ಉಪಾದಾನಕಾರಣವಾಗಲಾರದು. ಘಟವೆಂಬ ಕಾರ್ಯಕ್ಕೆ ಕುಲಾಲನು ನಿಮಿತ್ತಕಾರಣವಾಗಿಯೂ, ಮೃತ್ಪಿಂಡವು ಉಪಾದಾನಕಾರಣವಾಗಿಯೂ ಲೋಕದಲ್ಲಿ ಕಾಣಬರುವುದಲ್ಲದೆ ನಿಮಿತ್ತಕಾರಣವಾದ ಕುಲಾಲನೇ ಉಪಾದಾನಕಾರಣವಾಗಿಯೂ ಆಗುವನೆಂಬುದು ಲೋಕದಲ್ಲಿ ಕಾಣುವುದಿಲ್ಲ; ಹೀಗಿರುವಲ್ಲಿ ಪ್ರಪಂಚಕ್ಕೆ ನಿಮಿತ್ತಕಾರಣವಾಗಿ ಅಂಗೀಕರಿಸಲ್ಪಟ್ಟ ಈಶ್ವರನು ಅದೇ ಪ್ರಪಂಚಕ್ಕೆ ಉಪಾದಾನಕಾರಣವಾಗಲು ಅರ್ಹನಲ್ಲ. ನಿಮಿತ್ತೋಪಾದಾನಕಾರಣಗಳು ಭಿನ್ನಭಿನ್ನಗಳಾಗಿಯೇ ಇರಬೇಕಲ್ಲವೆ?"

## ೩೮೨. ಧರ್ಮಿಗ್ರಾಹಕಮಾನಬಾಧಾದೀಶ್ವರಸ್ಯೋಪಾದಾನತ್ವಾಭಾವಸಾಧಕಾನುಮಾನಸ್ಯಾಪ್ರವೃತ್ತಿಃ.

ಇಂಥ ಆಶಂಕೆ ಸಂಗತವಲ್ಲ; ಹೇಗೆಂದರೆ—ಈಶ್ವರನೆಂಬ ಒಂದಾನೊಂದು ಧರ್ಮಿಯನ್ನು ಅಂಗೀಕರಿಸದೆಯೇ ಉಪಾದಾನಕಾರಣತ್ವಾಭಾವವನ್ನು ಸಾಧಿಸುವಿರೋ? ಅಥವಾ ಈಶ್ವರನನ್ನು ಅಂಗೀಕರಿಸಿ ಅದನ್ನು ಸಾಧಿಸುವಿರೋ? ಪ್ರಥಮ ಪಕ್ಷದಲ್ಲಿ ಧರ್ಮಿಯೇ ಅಪ್ರಸಿದ್ಧವಾದುದರಿಂದ ಧರ್ಮವನ್ನು ಯಾವುದರಲ್ಲಿ ಸಾಧಿಸುವಿರಿ?

ದ್ವಿತೀಯಪಕ್ಷದಲ್ಲಿ—ಈಶ್ವರನೆಂಬ ಧರ್ಮಿ ಪ್ರತ್ಯಕ್ಷಪ್ರಮಾಣಕ್ಕೆ ಗೋಚರವಲ್ಲವಾದುದರಿಂದ—ಅನುಮಾನಪ್ರಮಾಣದಿಂದಲಾಗಲಿ ಶ್ರುತಿಪ್ರಮಾಣದಿಂದಲಾಗಲಿ ಅದನ್ನು ಅಂಗೀಕರಿಸಿ ಉಪಾದಾನತ್ವಾಭಾವವನ್ನು ಸಾಧಿಸಬೇಕು; ಈಶ್ವರನು ಶಾಸ್ತ್ರೈಕವೇದ್ಯನಾಗಿ ಇರುವನಲ್ಲದೆ ಅನುಮಾನಪ್ರಮಾಣಕ್ಕೂ ಗೋಚರನಾಗುವವನಲ್ಲವೆಂದು ಶಾಸ್ತ್ರಯೋನಿತ್ವಾಧಿಕರಣದಲ್ಲಿ ಸೂತ್ರಕಾರರು ಸ್ಥಾಪಿಸಿರು

ಪರಾದುದರಿಂದ ಈಶ್ವರಸಿದ್ಧಿಗೋಸ್ಕರ ಶಾಸ್ತ್ರಪ್ರಮಾಣವನ್ನೇ ಅವಲಂಬಿಸಬೇಕಾಯಿತು; ಹಾಗೆ ಅವಲಂಬಿಸುವಲ್ಲಿ ಶಾಸ್ತ್ರಪ್ರಮಾಣದಿಂದ ಈಶ್ವರನೆಂಬ ಧರ್ಮಿ ಸಿದ್ಧಿಸುವಾಗ ನಿಮಿತ್ತಕಾರಣತ್ವ ಉಪಾದಾನಕಾರಣತ್ವವೆಂಬ ಉಭಯವಿಧಕಾರಣತ್ವವಿಶಿಷ್ಟವಾಗಿಯೇ ಸಿದ್ಧಿಸುವುದರಿಂದ ಇಂಥ ಧರ್ಮಿಗ್ರಾಹಕಪ್ರಮಾಣಕ್ಕೆ ವಿರುದ್ಧವಾಗಿ ಅನುಮಾನಪ್ರಮಾಣದಿಂದ ಉಪಾದಾನಕಾರಣತ್ವಾಭಾವವನ್ನು ಸಾಧಿಸಲಾಗುವುದಿಲ್ಲ. ಅಗ್ನಿ ಉಷ್ಣತ್ವಗುಣವಿಶಿಷ್ಟವಾಗಿರುವುದೆಂದು ಪ್ರತ್ಯಕ್ಷಪ್ರಮಾಣದಿಂದ ಸಿದ್ಧವಾಗಿರುವಾಗ ಅನುಮಾನಾಭಾಸದಿಂದ ಶೈತ್ಯಗುಣವಿಶಿಷ್ಟವೆಂದು ಸಾಧಿಸಲಾಗುವುದಿಲ್ಲವಷ್ಟೆ?

## ೬೮೩. ಪ್ರತ್ಯಕ್ಷವಿರೋಧಾದುಪಾದಾನತ್ವಶ್ರುತೇರ್ಗೌಣಾರ್ಥಪರತ್ವಾಶಂಕಾ.

"ಪೂಜ್ಯರೆ? ಪ್ರಮಾಣಾಂತರವಿರುದ್ಧವಾದ ಅರ್ಥವನ್ನು ಶ್ರುತಿಯಾದರೂ ಹೇಗೆ ಬೋಧಿಸಬಲ್ಲುದು? ಹಾಗೆ ಬೋಧಿಸುವುದಾದರೆ—"ಆದಿತ್ಯೋ ಯೂಪಃ, ಯಜಮಾನಃ ಪ್ರಸ್ತರಃ" ಇವೇ ಮೊದಲಾದ ಶ್ರುತಿಗಳಿಗೂ ಮುಖ್ಯಾರ್ಥಪರತ್ವವನ್ನು ಅಂಗೀಕರಿಸಿ ಅಭೇದಪರತ್ವವನ್ನು ಹೇಳಬಹುದಲ್ಲವೆ? ಹಾಗಿದ್ದರೂ ಮೀಮಾಂಸಕರು ಈ ಶ್ರುತಿಗಳಿಗೆ ಮುಖ್ಯಾರ್ಥತ್ವವನ್ನು ತ್ಯಜಿಸಿ ಗೌಣಾರ್ಥತ್ವವನ್ನು ಏಕೆ ಸ್ವೀಕರಿಸಿರುವರು? ಆದಕಾರಣ ಶ್ರುತಿಗೆ ಪ್ರಮಾಣಾಂತರವಿರುದ್ಧಾರ್ಥಪ್ರತಿಪಾದಕತ್ವವು ಕೂಡುವುದಿಲ್ಲ. ಹೀಗಿರಲು ಪ್ರತ್ಯಕ್ಷಪ್ರಮಾಣದಿಂದ ನಿಮಿತ್ತೋಪಾದಾನಕಾರಣಗಳು ಭಿನ್ನಭಿನ್ನಗಳಾಗಿರಬೇಕೆಂದು ಸ್ಪಷ್ಟವಾಗಿ ತಿಳಿದುಬಂದಿರುವಲ್ಲಿ ಈಶ್ವರನೆಂಬ ಒಂದೇವಸ್ತುವಿಗೆ ಉಭಯವಿಧಕಾರಣತ್ವವನ್ನೂ ಶ್ರುತಿ ಹೇಗೆ ಬೋಧಿಸಬಲ್ಲುದು? ಆದಕಾರಣ ಅನುಮಾನಪ್ರಮಾಣದಿಂದಲೇ—ನಿಮಿತ್ತಕಾರಣಭೂತನೆಂದು ನಿಷ್ಕರ್ಷಿಸಲ್ಪಟ್ಟ ಈಶ್ವರನಲ್ಲಿ ಪುನಃ ಅನುಮಾನಾಂತರದಿಂದ ಉಪಾದಾನಕಾರಣತ್ವಾಭಾವವನ್ನು ಸಾಧಿಸಿದೆವಾದರೆ ಯೂಪಾದಿತ್ಯವಾಕ್ಯದಂತೆ ಉಪಾದಾನಕಾರಣತ್ವಬೋಧಕವಾಕ್ಯಕ್ಕೂ ಮುಖ್ಯಾರ್ಥವನ್ನು ಬಿಟ್ಟು ಗೌಣಾರ್ಥವನ್ನು ಸ್ವೀಕರಿಸಬೇಕು."

## ೬೮೪. ಈಶ್ವರಸ್ಯ ಶಾಸ್ತ್ರೈಕವೇದ್ಯತ್ವೇನಾನುಮಾನಗಮ್ಯತ್ವಾಭಾವಾತ್ತದಸಂಭವಃ.

ಇಂಥ ಆಶಂಕೆ ಸಂಗತವಲ್ಲ. ಏತಕ್ಕೆಂದರೆ—ಈಶ್ವರವಿಷಯದಲ್ಲಿ ಪ್ರವರ್ತಿಸಲು ಅನುಮಾನಪ್ರಮಾಣಕ್ಕೆ ಸಾಮರ್ಥ್ಯವಿಲ್ಲವೆಂದೂ, ಈಶ್ವರನು ಶಾಸ್ತ್ರೈಕ

ವೇದ್ಯನಲ್ಲದೆ ಪ್ರಮಾಣಾಂತರಕ್ಕೆ ಗೋಚರನಲ್ಲವೆಂದೂ, ಶಾಸ್ತ್ರಯೋನಿತ್ವಾಧಿಕರಣದಲ್ಲಿ ಸೂತ್ರಕಾರರು ಸ್ಥಾಪಿಸಿರುವರೆಂದು ಮೊದಲೇ ಹೇಳಿದೆವಷ್ಟೆ?

### ೭೮೫. ಈಶ್ವರಸ್ಯಾನುಮಾನಗಮ್ಯತ್ವಸಂಭವಾಶಂಕಾ.

ಪೂಜ್ಯರೆ? ಯಾವುದು ಕಾರ್ಯವೆನಿಸಿಕೊಂಡಿರುವುದೋ ಅದಕ್ಕೆ ಒಬ್ಬ ಕರ್ತಾ ಇದ್ದೇ ಇರಬೇಕೆಂಬ ವ್ಯಾಪ್ತಿಯನ್ನು ಘಟಾದಿಕಾರ್ಯವಸ್ತುಗಳಲ್ಲಿ ನಾವು ನೋಡಿರುವೆವು. ಮಹೀ, ಮಹೀಧರ, ಮಹಾರ್ಣವ ಮುಂತಾದ ವಸ್ತುಗಳೂ ಕಾರ್ಯವಸ್ತುಗಳಾಗಿರುವುದರಿಂದ ಇವುಗಳಿಗೂ ಒಬ್ಬಾನೊಬ್ಬನು ಕರ್ತಾವಾಗಿ ಇರಬೇಕು. ಇಂಥ ಮಹಾಕಾರ್ಯವಸ್ತುಗಳಿಗೆ ಯಾವನು ಕರ್ತಾವಾಗಿ ಸಿದ್ಧಿಸುವನೋ ಅವನೇ ಈಶ್ವರನೆನಿಸಿಕೊಳ್ಳುವನು. ಇಂಥ ಅನುಮಾನಪ್ರಮಾಣದಿಂದ ಈಶ್ವರನು ಸಿದ್ಧಿಸುವವನಾಗಿರುವಲ್ಲಿ ಈಶ್ವರನು ಪ್ರಮಾಣಾಂತರಗಮ್ಯನಲ್ಲವೆಂದು ಹೇಗೆ ಹೇಳಲಾದೀತು?

### ೭೮೬. ಅನುಮಾನಪ್ರಮಾಣಾದಭಿಮತಕರ್ತೃವಿಶೇಷಾಸಿದ್ಧಿಃ

ಹೀಗೆ ಹೇಳಲಾದೀತು.—ದೃಷ್ಟಾಂತವಾದ ಘಟಾದಿವಸ್ತುವಿನಲ್ಲಿ ಕೆಲವು ವಿಶೇಷಣಗಳೊಡನೆ ಕೂಡಿರುವ ಎಂಥ ಕರ್ತಾ ಪ್ರಸಿದ್ಧನಾಗಿರುವನೋ ಅಂಥ ಕರ್ತಾವನ್ನೇ ಮಹೀಮಹಾರ್ಣವಾದಿಗಳಲ್ಲಿಯೂ ಅನುಮಾನದಿಂದ ಸಾಧಿಸುವಿರೋ? ಅಥವಾ ಪ್ರಸಿದ್ಧಕರ್ತಾವಿನಲ್ಲಿರುವ ಕೆಲವು ವಿಶೇಷಣಗಳನ್ನು ಬಿಟ್ಟು ಜ್ಞಾನೇಚ್ಛಾಪ್ರಯತ್ನಗಳುಳ್ಳ ಕರ್ತಾವನ್ನು ಸಾಧಿಸುವಿರೋ?

ಪ್ರಥಮಪಕ್ಷದಲ್ಲಿ—ದೃಷ್ಟಾಂತಗಳಾದ ಘಟಾದಿಗಳಿಗೆ ಕರ್ತಾವಾಗಿರುವ ಕುಲಾಲನು ಅಲ್ಪಜ್ಞನಾಗಿಯೂ, ಅಲ್ಪಶಕ್ತಿಕನಾಗಿಯೂ, ಕರ್ಮವಶ್ಯನಾಗಿಯೂ, ಶರೀರವಿಶಿಷ್ಟನಾಗಿಯೂ, ಸಾಪೇಕ್ಷನಾಗಿಯೂ ಇರುವನೆಂಬುದು ಪ್ರತ್ಯಕ್ಷಸಿದ್ಧವಾಗಿರುವಕಾರಣ ಮಹೀಮಹಾರ್ಣವಾದಿಗಳಿಗೂ ಅಂಥ ಕರ್ತಾವೇ ಅನುಮಾನದಿಂದ ಸಿದ್ಧಿಸುವನಲ್ಲದೆ—ಸರ್ವಜ್ಞನಾಗಿಯೂ ಸರ್ವಶಕ್ತನಾಗಿಯೂ ಅಕರ್ಮವಶ್ಯನಾಗಿಯೂ, ಶರೀರರಹಿತನಾಗಿಯೂ, ನಿರಪೇಕ್ಷನಾಗಿಯೂ ಎಂದರೆ ಅವಾಪ್ತಸಮಸ್ತಕಾಮನಾಗಿಯೂ ಇರುವ ಕರ್ತಾ ಸಿದ್ಧಿಸಲಾರನಾದುದರಿಂದ ಈಶ್ವರನನ್ನು ಅನುಮಾನದಿಂದ ಸಾಧಿಸುವವರಿಗೆ ಅನಿಷ್ಟಸಿದ್ಧಿಯಾಗುವುದಲ್ಲದೆ ಇಷ್ಟಸಿದ್ಧಿಯಾಗಲಾರದು.

ದ್ವಿತೀಯಪಕ್ಷದಲ್ಲಿ—ದೃಷ್ಟಾಂತಸ್ಥಳದಲ್ಲಿ ಕುಲಾಲನಲ್ಲಿರುವ ಶರೀರವೊದಲಾದ ಕೆಲವು ವಿಶೇಷಣಗಳನ್ನು ಬಿಟ್ಟು ಜ್ಞಾನೇಚ್ಛಾಪ್ರಯತ್ನಗಳೊಡನೆ ಕೂಡಿ

ರುವ ಕರ್ತೃವನ್ನು ಸಾಧಿಸುವುದಾದರೆ—ಯಾವ ನ್ಯಾಯವನ್ನು ಅವಲಂಬಿಸಿ ಶರೀರವೊದಲಾದ ಕೆಲವು ವಿಶೇಷಣಗಳನ್ನು ಪರಿತ್ಯಜಿಸುವಿರೋ—ಅದೇ ನ್ಯಾಯದಿಂದ ಜ್ಞಾನ ಮತ್ತು ಇಚ್ಛೆ ಈ ಎರಡು ವಿಶೇಷಣಗಳನ್ನೂ ಬಿಡಬೇಕಾಗಿ ಬರುವುದರಿಂದ ಪ್ರಯತ್ನಮಾತ್ರ ವಿಶಿಷ್ಟನಾದ ಕರ್ತೃ ಸಿದ್ಧಿಸುವನಾದಕಾರಣ ಆಗಲೂ ಇಷ್ಟಸಿದ್ಧಿಯಿಲ್ಲ.

ಪೂಜ್ಯರೆ! ಘಟವಿಷಯದಲ್ಲಿ ಕುಲಾಲನಿಗೆ ಉಂಟಾಗುವ ಜ್ಞಾನೇಚ್ಛಾಪ್ರಯತ್ನಗಳು ನಿತ್ಯವಲ್ಲದೆ ಜನ್ಯಗಳಾಗಿರುವುದರಿಂದ ಇವುಗಳ ಉತ್ಪತ್ತಿಗೋಸ್ಕರ ಕುಲಾಲನಿಗೆ ಶರೀರವು ಅಪೇಕ್ಷಿತವಾಗಿದ್ದರೂ, ಮಹೀಮಹಾರ್ಣವಾದಿವಿಷಯದಲ್ಲಿ ಈಶ್ವರನಿಗೆ ಉಂಟಾಗುವ ಜ್ಞಾನೇಚ್ಛಾಪ್ರಯತ್ನಗಳು ಜನ್ಯವಲ್ಲದೆ ನಿತ್ಯಗಳಾಗಿರುವುದರಿಂದ ಇವುಗಳಿಗೆ ಉತ್ಪತ್ತಿಯೇ ಇಲ್ಲವಾಗಿ ಇವುಗಳ ಉತ್ಪತ್ತಿಗೋಸ್ಕರ ಈಶ್ವರನಿಗೆ ಶರೀರವು ಅಪೇಕ್ಷಿತವಾಗಿರುವುದೆಂದು ಹೇಳಬೇಕಾದುದಿಲ್ಲವಾದಕಾರಣ ಅಶರೀರನಾದ ಈಶ್ವರನು ಸಿದ್ಧಿಸಬಹುದಾದುದರಿಂದ ಇಷ್ಟಸಿದ್ಧಿಯಾಗುವುದಲ್ಲವೆ?

ಇಲ್ಲ. ಜ್ಞಾನೇಚ್ಛೆಗಳು ನಿತ್ಯವಾದುದರಿಂದ ಇವುಗಳ ಉತ್ಪತ್ತಿಗಾಗಿ ಶರೀರವು ಹೇಗೆ ಅಪೇಕ್ಷಿತವಲ್ಲವೋ ಅದರಂತೆ ಪ್ರಯತ್ನವೂ ನಿತ್ಯವಾದುದರಿಂದ ಇದರ ಉತ್ಪತ್ತಿಗಾಗಿಯೂ ಶರೀರವು ಅಪೇಕ್ಷಿತವಾಗಿಲ್ಲವೆಂಬುದು ಮಾತ್ರವಲ್ಲದೆ ಜ್ಞಾನೇಚ್ಛೆಗಳೂ ಅದಕ್ಕೆ ಅಪೇಕ್ಷಿತಗಳಲ್ಲವಾದುದರಿಂದ ಈಶ್ವರನಲ್ಲಿ ಜ್ಞಾನೇಚ್ಛೆಗಳನ್ನೂ ಬಿಡಬೇಕಾಗಿಬರುವುದರಿಂದ ಅನಿಷ್ಟಸಿದ್ಧಿ ತಪ್ಪಲಿಲ್ಲ; ಇಷ್ಟಸಿದ್ಧಿಯೂ ಆಗಲಿಲ್ಲ.

## ೬೮೭. ನಿತ್ಯಸ್ಯಾಪಿ ಪ್ರಯತ್ನಸ್ಯ ಸವಿಷಯಕತ್ವಸಿದ್ಧ್ಯರ್ಥಂ ಜ್ಞಾನೇಚ್ಛಯೋರಪೇಕ್ಷಿತತ್ವಾಶಂಕಾ.

ಪೂಜ್ಯರೆ! ಈಶ್ವರನ ಪ್ರಯತ್ನವು ನಿತ್ಯವಾದುದರಿಂದ ಇದರ ಉತ್ಪತ್ತಿಗೋಸ್ಕರ ಜ್ಞಾನೇಚ್ಛೆಗಳು ಅಪೇಕ್ಷಿತಗಳಲ್ಲವಾದರೂ ಈ ಪ್ರಯತ್ನವೆಂಬುದಕ್ಕೆ ವಿಷಯವು ಯಾವುದೆಂಬುದನ್ನು ನಿರ್ಧರಿಸುವುದಕ್ಕೋಸ್ಕರ ಮೊದಲು ಇದಕ್ಕೆ ಸವಿಷಯಕತ್ವವನ್ನು ಹೇಳಬೇಕು. ಜ್ಞಾನಕ್ಕೆ ಯಾವುದು ವಿಷಯವಾಗಿರುವುದೋ ಅದೇ ಇಚ್ಛೆಗೆ ವಿಷಯವಾಗುವುದು; ಇಚ್ಛೆಗೆ ಯಾವುದು ವಿಷಯವಾಗುವುದೋ ಅದೇ ಪ್ರಯತ್ನಕ್ಕೂ ವಿಷಯವಾಗುವುದು. ಆದಕಾರಣ ಜ್ಞಾನವೆಂಬುದು ಇತರಾಪೇಕ್ಷೆಯಿಲ್ಲದೆ ಸ್ವತಏವ ಸವಿಷಯಕವೆನಿಸಿಕೊಳ್ಳುವುದು. ಇಚ್ಛೆ ಜ್ಞಾನಾಧೀನ

ವಾಗಿದ್ದುಕೊಂಡು ಜ್ಞಾನದ ವಿಷಯವನ್ನೇ ತಾನೂ ವಿಷಯವಾಗಿ ಮಾಡಿಕೊಂಡು ಸವಿಷಯಕವಾಗುವುದಲ್ಲದೆ ಸ್ವತಃ ಸವಿಷಯಕವೆನಿಸಿಕೊಳ್ಳಲಾರದು. ಪ್ರಯತ್ನವಾದರೆ ಜ್ಞಾನ ಇಚ್ಛೆ ಈ ಎರಡಕ್ಕೂ ಅಧೀನವಾಗಿದ್ದುಕೊಂಡು ಅವುಗಳ ವಿಷಯವನ್ನೇ ತಾನೂ ವಿಷಯವಾಗಿ ಪಡೆದು ಸವಿಷಯಕವೆನಿಸಿಕೊಳ್ಳುವುದಲ್ಲದೆ ಸ್ವತಃ ಸವಿಷಯಕವೆನಿಸಿಕೊಳ್ಳಲಾರದು. ಪ್ರಯತ್ನವು ಸ್ವತಏವ ಸವಿಷಯಕವಾಗುವುದಾದರೆ ಇದೂ ಜ್ಞಾನವೆನಿಸಿಕೊಳ್ಳಬೇಕಾಗಿಬರುವುದರಿಂದ "**ಇದು ಜ್ಞಾನವು ಇದು ಇಚ್ಛೆ ಇದು ಪ್ರಯತ್ನವು**" ಎಂಬ ವಿಭಾಗವೇ ತಪ್ಪಿಹೋಗುವುದು. ಯಾವ ವಿಷಯದಲ್ಲಿ ಪ್ರಯತ್ನವುಂಟಾಗುವುದೋ ಆ ವಿಷಯದಲ್ಲಿ ಪ್ರಯತ್ನಕ್ಕಿಂತಲೂ ಮೊದಲು ಇಚ್ಛೆ ಇರಬೇಕು; ಯಾವ ವಿಷಯದಲ್ಲಿ ಇಚ್ಛೆಯುಂಟಾಗುವುದೋ ಆ ವಿಷಯದಲ್ಲಿ ಇಚ್ಛೆಗಿಂತಲೂ ಮೊದಲು ಜ್ಞಾನವಿರಬೇಕು; ಜ್ಞಾನವು ಯಾವ ವಿಷಯದಲ್ಲಿ ಉಂಟಾಗುವುದೋ ಅದೇ ವಿಷಯದಲ್ಲಿ ಇಚ್ಛೆಯುಂಟಾಗುವದು; ಇಚ್ಛೆ ಯಾವ ವಿಷಯದಲ್ಲಿ ಉಂಟಾಗಿರುವುದೋ ಅದೇ ವಿಷಯದಲ್ಲಿ ಪ್ರಯತ್ನವುಂಟಾಗುವುದು, ಪ್ರಯತ್ನಕ್ಕೆ. ಯಾವುದು ವಿಷಯವಾಗಿರುವುದೆಂಬುದನ್ನು ನಿರ್ಧರಿಸುವುದಕ್ಕಾಗಿ ಇಚ್ಛೆಗೆ ಯಾವುದು ವಿಷಯವೆಂಬುದನ್ನು ನಿರ್ಧರಿಸಿಕೊಳ್ಳಬೇಕು; ಇಚ್ಛೆಗೆ ಯಾವುದು ವಿಷಯವೆಂಬುದನ್ನು ನಿರ್ಧರಿಸುವುದಕ್ಕಾಗಿ ಜ್ಞಾನಕ್ಕೆ ಯಾವುದು ವಿಷಯವೆಂಬುದನ್ನು ನಿರ್ಧರಿಸಿಕೊಳ್ಳಬೇಕು. ಹೀಗೆ ಜ್ಞಾನವು ಸವಿಷಯಕವಾದುದರಿಂದ ಇಚ್ಛೆ ಸವಿಷಯಕವಾಗುವುದು; ಜ್ಞಾನೇಚ್ಛೆಗಳು ಸವಿಷಯಕಗಳಾದುದರಿಂದ ಪ್ರಯತ್ನವು ಸವಿಷಯಕವಾಗುವುದು. ಮತ್ತು ಜ್ಞಾನವು ಯಾವನಿಗೆ ಇರುವುದೋ ಅವನಿಗೇ ಇಚ್ಛೆಯೂ, ಇಚ್ಛೆ ಯಾವನಿಗೆ ಇರುವುದೋ ಅವನಿಗೇ ಪ್ರಯತ್ನವೂ ಉಂಟಾಗುವುವಲ್ಲದೆ ಜ್ಞಾನವು ಒಬ್ಬನಿಗೂ, ಇಚ್ಛೆ ಮತ್ತೊಬ್ಬನಿಗೂ, ಪ್ರಯತ್ನವು ಮಗದೊಬ್ಬನಿಗೂ ಉಂಟಾಗುವುವಲ್ಲ. ಈಶ್ವರಪ್ರಯತ್ನಕ್ಕೆ ಮಹೀಮಹಾರ್ಣವಾದಿಗಳೇ ವಿಷಯಗಳಾಗಬೇಕು; ಈ ಮಹೀಮಹಾರ್ಣವಾದಿಗಳು ಈಶ್ವರನ ಜ್ಞಾನೇಚ್ಛೆಗಳಿಗೆ ವಿಷಯಗಳಾದರಲ್ಲದೆ ಈಶ್ವರನ ಪ್ರಯತ್ನಕ್ಕೆ ವಿಷಯಗಳಾಗಲಾರವು. ಮಹೀಮಹಾರ್ಣವಾದಿಗಳನ್ನು ತೆಗೆದುಕೊಂಡು ಈಶ್ವರಪ್ರಯತ್ನಕ್ಕೆ ಸವಿಷಯಕತ್ವವನ್ನು ಹೇಳಬೇಕಾದರೆ ಮಹೀಮಹಾರ್ಣವಾದಿಗಳನ್ನು ವಿಷಯಗಳನ್ನಾಗಿ ಪಡೆದಿರುವ ಈಶ್ವರಜ್ಞಾನಕ್ಕೆ ಸಮಾನಾಧಿಕರಣವಾದ ಇಚ್ಛೆಗೆ ಈ ಪ್ರಯತ್ನವು ಸಮಾನಾಧಿಕರಣವಾಗಿರಬೇಕು. ಇಂಥ ಸಾಮಾನಾಧಿಕರಣ್ಯವೇ ಪ್ರಯತ್ನಕ್ಕೆ ಸವಿಷಯಕತ್ವ

ವೆಂದು ಹೇಳಲ್ಪಡುವುದು. ಆದಕಾರಣ ಈ ಪ್ರಯತ್ನಕ್ಕೆ ಇಂಥ ಸವಿಷಯಕತ್ವವು ಸಿದ್ಧಿಸುವುದಕ್ಕೋಸ್ಕರ ಜ್ಞಾನೇಚ್ಛೆಗಳು ಅಪೇಕ್ಷಿತಗಳಾಗಿಯೇ ಇರುವುದರಿಂದ ಜ್ಞಾನೇಚ್ಛೆಗಳನ್ನು ಬಿಡಲಾಗುವುದಿಲ್ಲವಾದಕಾರಣ ಅನಿಷ್ಟಸಿದ್ಧಿ ತಪ್ಪಿ ಇಷ್ಟಸಿದ್ಧಿಯಾಗುವುದಲ್ಲವೆ ? "

## ೬೮೮ ಜ್ಞಾನೇಚ್ಛಾಭ್ಯಾಂ ವಿನಾಪಿ ಪ್ರಯತ್ನಸ್ಯ ಸವಿಷಯಕತ್ವೋಪಪತ್ತ್ಯಾತದರ್ಥಂ ಜ್ಞಾನೇಚ್ಛಯೋರನಪೇಕ್ಷಿತತ್ವಮೇವ

ಇಲ್ಲ, ಇದರಿಂದಲೂ ಇಷ್ಟಸಿದ್ಧಿಯಾಗುವುದಿಲ್ಲ. ಹೇಗೆಂದರೆ—ಜೀವನಿಗೆ ಸುಷುಪ್ತ್ಯವಸ್ಥೆಯಲ್ಲಿ ಶರೀರದೊಳಗೆ ಶ್ವಾಸೋಚ್ಛ್ವಾಸಗಳು ನಡೆವುದಕ್ಕೋಸ್ಕರ ವಿಜಾತೀಯವಾದ ಒಂದಾನೊಂದು ಪ್ರಯತ್ನವನ್ನು ನೀವು ಒಪ್ಪಿರುತ್ತೀರಿ. ಈ ಪ್ರಯತ್ನಕ್ಕೆ ಶ್ವಾಸೋಚ್ಛ್ವಾಸಗಳೇ ವಿಷಯಗಳಾಗಿರುವುವು. ಸುಷುಪ್ತ್ಯವಸ್ಥೆಯಲ್ಲಿ ಜ್ಞಾನವೂ ಇಚ್ಛೆಯೂ ಇಲ್ಲವಾದುದರಿಂದ ಶ್ವಾಸೋಚ್ಛ್ವಾಸವಿಷಯದಲ್ಲಿ ಜ್ಞಾನೇಚ್ಛೆಗಳು ಉಂಟಾಗುವುದಕ್ಕೆ ಅವಕಾಶವೇ ಇಲ್ಲ. ಪ್ರಯತ್ನವಾದರೆ ಆ ವಿಷಯದಲ್ಲಿ ಉಂಟಾಗುತ್ತಿರುವುದು. ಹೀಗೆ ಸುಷುಪ್ತ್ಯವಸ್ಥೆಯಲ್ಲಿ ಜ್ಞಾನೇಚ್ಛೆಗಳ ಅಪೇಕ್ಷೆಯೇ ಇಲ್ಲದೆ ಪ್ರಯತ್ನಕ್ಕೆ ಸವಿಷಯಕತ್ವವು ಸಿದ್ಧವಾಗುವುದೆಂದು ಹೇಗೆ ಹೇಳುವಿರೋ ಅದರಂತೆ ಈಶ್ವರಪ್ರಯತ್ನಕ್ಕೆ ಮಹೀಮಹಾರ್ಣವಾದಿವಿಷಯಕತ್ವವು ಸಿದ್ಧಿಸುವುದಕ್ಕಾಗಿಯೂ ಜ್ಞಾನೇಚ್ಛೆಗಳು ಅಪೇಕ್ಷಿತಗಳಲ್ಲವೆಂದು ಹೇಳಬಹುದಾದುದರಿಂದ ಅನಿಷ್ಟಸಿದ್ಧಿ ತಪ್ಪಿದುದಲ್ಲ.

ಇವೇ ಮೊದಲಾದ ಇನ್ನೂ ಅನೇಕದೂಷಣಗಳನ್ನು ತೋರಿಸಿ ನೈಯಾಯಿಕೋಕ್ತವಾದ ಈಶ್ವರಾನುಮಾನವನ್ನು ನಿರಾಕರಿಸಿ ಈಶ್ವರನಿಗೆ ಶಾಸ್ತ್ರೈಕವೇದ್ಯತ್ವವನ್ನು ಶಾಸ್ತ್ರಯೋನಿತ್ವಾಧಿಕರಣದಲ್ಲಿ ಸ್ಥಾಪಿಸಿರುವುದರಿಂದ ಈಶ್ವರನು ಶಾಸ್ತ್ರದಿಂದ ಸಿದ್ಧಿಸುವಕಾಲದಲ್ಲಿ ನಿಮಿತ್ತಕಾರಣತ್ವ, ಉಪಾದಾನಕಾರಣತ್ವವೆಂಬ ಉಭಯವಿಧಕಾರಣತ್ವವಿಶಿಷ್ಟನಾಗಿಯೇ ಸಿದ್ಧಿಸುವುದರಿಂದ ಈಶ್ವರನಿಗೆ ಉಪಾದಾನಕಾರಣತ್ವವಿಲ್ಲವೆಂದು ಆಶಂಕಿಸಲು ಅವಕಾಶವಿಲ್ಲ.

## ೬೮೯ ಸ್ವವ್ಯತಿರಿಕ್ತಸಮಸ್ತವಸ್ತುವಿಲಕ್ಷಣತ್ವಾದೀಶ್ವರಸ್ಯ ಉಭಯವಿಧಕಾರಣತ್ವೋಪಪತ್ತಿಃ

ಆದರೆ ಪ್ರತ್ಯಕ್ಷಪ್ರಮಾಣದಿಂದ ನಿಮಿತ್ತೋಪಾದಾನಕಾರಣಗಳಿಗೆ ಭೇದವೇ ತಿಳಿದುಬರುತ್ತಿರುವಲ್ಲಿ ಇದಕ್ಕೆ ವಿರುದ್ಧವಾಗಿ ಶ್ರುತಿ ನಿಮಿತ್ತೋಪಾದಾನಗಳಿಗೆ ಐಕ್ಯವನ್ನು ಹೇಗೆ ಬೋಧಿಸಬಲ್ಲುದೆಂಬ ಆಕ್ಷೇಪಕ್ಕೆ ಸಮಾಧಾನವೇನು ?

ಲೋಕದಲ್ಲಿ ನಿಮಿತ್ತೋಪಾದಾನಗಳಿಗೆ ಐಕ್ಯವು ಕಾಣದಿದ್ದರೂ ಲೋಕದೃಷ್ಟವಾದ ಸಮಸ್ತವಸ್ತುಗಳಿಗಿಂತಲೂ ಅತ್ಯಂತವಿಲಕ್ಷಣನಾಗಿಯೂ, ವಿಲಕ್ಷಣ ಶಕ್ತಿಯುಕ್ತನಾಗಿಯೂ ಇರುವ ಸರ್ವೇಶ್ವರನೊಬ್ಬನೇ ಪ್ರಪಂಚಕ್ಕೆ ನಿಮಿತ್ತಕಾರಣವಾಗಿಯೂ ಉಪಾದಾನಕಾರಣವಾಗಿಯೂ ಇರಲು ತಡೆಯಿಲ್ಲವೆಂಬುದೇ ಈ ಆಕ್ಷೇಪಕ್ಕೆ ಸಮಾಧಾನವಾಗಿರುವುದೆಂದು ತಿಳಿಯಬಹುದು. ಎಂದರೆ ಈಶ್ವರನ ಅಘಟಿತಘಟನಾಸಾಮರ್ಥ್ಯದಿಂದ ಈಶ್ವರನಲ್ಲಿ ಸಮಸ್ತವೂ ಸಂಗತವಾಗಿಯೇ ಇರುವುದಲ್ಲದೆ ಅನುಪಪನ್ನವಾದುದು ಯಾವುದೂ ಇಲ್ಲವೆಂದು ತಿಳಿಯಬಹುದು.

## ೩೯೦ ಈಶ್ವರಾನುಮಾನನಿರಾಕರಣಸ್ಯ ನಿಷ್ಪ್ರಯೋಜನತ್ವಾಶಂಕಾ

"ಪೂಜ್ಯರೆ? ಈಶ್ವರಸಿದ್ಧಿ ನಿಮಗೂ ಅಭಿಮತವಾಗಿಯೇ ಇರುವುದಲ್ಲದೆ ಅನಭಿಮತವಲ್ಲ; ಅನುಮಾನಪ್ರಮಾಣದಿಂದಲೂ ಈಶ್ವರಸಿದ್ಧಿಯನ್ನು ನೈಯಾಯಿಕರು ತೋರಿಸಿದರೆ ಇದನ್ನು ನೀವು ಯಾವ ಪ್ರಯೋಜನಕ್ಕೋಸ್ಕರ ಖಂಡಿಸಬೇಕು ? ಎಂದರೆ ಇಷ್ಟೊಂದು ಮಹಾಪ್ರಯತ್ನವನ್ನು ಮಾಡಿ ಈಶ್ವರಾನುಮಾನವನ್ನು ನಿರಾಕರಿಸಿದುದಕ್ಕೆ ಪ್ರಯೋಜನವೇನು ? ಪ್ರಯೋಜನವಿಲ್ಲವೆಂಬುದು ಮಾತ್ರವೇ ಅಲ್ಲ; ಅತ್ಯಂತಹಾನಿಯೂ ಉಂಟಾಗುವುದು; ಹೇಗೆಂದರೆ—ಯಾರಾದರೂ ಕೆಲವರು ಆಸ್ತಿಕರಾಗಿದ್ದು ಅನುಮಾನಪ್ರಮಾಣದಿಂದ ಈಶ್ವರನನ್ನು ಸಾಧಿಸಿ ಅಂಥ ಈಶ್ವರನನ್ನು ಭಜಿಸುತ್ತಿದ್ದರೆ—ಈಶ್ವರಾನುಮಾನವನ್ನು ನಿರಾಕರಿಸುವುದರ ಮೂಲಕ ಅವರಲ್ಲಿ ನಾಸ್ತಿಕತ್ವವನ್ನು ಆಪಾದನೆಮಾಡಿದಂತಾಗುವುದು. ಆಗ ಇಂಥ ಅನುಮಾನವನ್ನು ನಿರಾಕರಿಸಿದವರಿಗೂ ಅದನ್ನು ಕೇಳುವವರಿಗೂ ಪ್ರಬಲವಾದ ಪಾಪವು ಸಂಭವಿಸುವುದಾದುದರಿಂದ ವಿಶೇಷವಾದ ಹಾನಿಯೂ ಉಂಟಲ್ಲವೆ ?"

## ೩೯೧ ಈಶ್ವರಾನುಮಾನನಿರಾಕರಣಸ್ಯ ಸಪ್ರಯೋಜನತ್ವಪ್ರಪಂಚನಂ

ಇಂಥ ಆಶಂಕೆಯನ್ನು ಮಾಡುವವರು ಬಹಳ ಕರುಣೆಯುಳ್ಳವರೆಂದು ತೋರುವುದು—ಹಾಗಿರುವುದಾದರೆ ಈಶ್ವರಾನುಮಾನವನ್ನು ನಿರಾಕರಿಸತಕ್ಕ ಯುಕ್ತಿಗಳನ್ನು ಕೇಳಿದಮಾತ್ರಕ್ಕೆ ವಿಶ್ವಾಸಶೈಥಿಲ್ಯವನ್ನು ಹೊಂದತಕ್ಕವರು ಯಾರಾದರೂ ಇರುವರಾದರೆ ಅಂಥವರಿಗೆ ಈ ಯುಕ್ತಿಗಳನ್ನು ನೀವು ಉಪದೇಶಿಸದೆಯೇ ಇರಬಹುದು. ಆಗ ನಿಮಗೆ ಪಾಪವುಂಟಾಗುವುದಿಲ್ಲ.

ಈಶ್ವರಾನುಮಾನನಿರಾಕರಣಕ್ಕೆ ಪ್ರಯೋಜನವೇ ಇಲ್ಲವೆಂದು ನೀವು ಆಶಂಕಿಸಿದ ವಿಷಯದಲ್ಲಿ—ಇಲ್ಲಿ ನಾವು ವಿಶದವಾಗಿ ತೋರಿಸುವ ಅನೇಕಪ್ರಯೋಜನಗಳನ್ನು ಸಾವಧಾನವಾಗಿ ನೀವು ಗ್ರಹಿಸಿ ನಿಮ್ಮ ಆಶಂಕೆಯನ್ನು ಪರಿಹರಿಸಿಕೊಳ್ಳಬೇಕು.

**ಈಶ್ವರಾನುಮಾನನಿರಾಕರಣಕ್ಕೆ ಪ್ರಥಮಪ್ರಯೋಜನವು**—ಇದ್ದುದನ್ನು ಇದ್ದಹಾಗೆ ತಿಳಿಯಪಡಿಸಿ ಯಥಾವಸ್ಥಿತವಾದ ತತ್ತ್ವಜ್ಞಾನವನ್ನುಂಟುಮಾಡವಿಕೆ. ಘ್ರಾಣೇಂದ್ರಿಯದಿಂದ ಗ್ರಹಿಸಲ್ಪಡುವುದಕ್ಕೆ ಯೋಗ್ಯವಾದ ಗಂಧವನ್ನು ಯಾವನಾದರೊಬ್ಬನು—ಶ್ರೋತ್ರೇಂದ್ರಿಯದಿಂದ ಗ್ರಹಿಸಲ್ಪಡುವುದಕ್ಕೆ ಯೋಗ್ಯವನ್ನಾಗಿ ತಿಳಿದುಕೊಂಡನಾದರೆ ಅಂಥವನ ಭ್ರಾಂತಿಯನ್ನು ಹೋಗಲಾಡಿಸಿ ಯಥಾವಸ್ಥಿತವಾದ ಜ್ಞಾನವನ್ನು ಉಂಟುಮಾಡುವುದಕ್ಕಾಗಿ ಗಂಧಕ್ಕೆ ಶ್ರೋತ್ರೇಂದ್ರಿಯಗ್ರಾಹ್ಯತ್ವವನ್ನು ನಿರಾಕರಿಸುವಂತೆ ಶಬ್ದೈಕವೇದ್ಯವಾದ ಬ್ರಹ್ಮವನ್ನು ಅನುಮಾನಪ್ರಮಾಣವೇದ್ಯವನ್ನಾಗಿ ತಿಳಿದುಕೊಂಡಿರುವ ನೈಯಾಯಿಕರ ಭ್ರಮವನ್ನೂ, ಇವರ ವಾಗಾಡಂಬರಕ್ಕೆ ಮರುಳಾಗುವ ಇನ್ನೂ ಇತರರಾದವರ ಭ್ರಾಂತಿಯನ್ನೂ ಹೋಗಲಾಡಿಸಿ ಬ್ರಹ್ಮವು ಶಬ್ದೈಕವೇದ್ಯವೆಂಬ ಯಥಾರ್ಥಜ್ಞಾನವನ್ನು ಉಂಟುಮಾಡುವುದಕ್ಕೋಸ್ಕರ ಈಶ್ವರಾನುಮಾನವನ್ನು ಆವಶ್ಯಕವಾಗಿಯೂ ನಿರಾಕರಿಸಬೇಕು.

**ದ್ವಿತೀಯಪ್ರಯೋಜನವು**—" ಈಶ್ವರನು ಅನುಮಾನಪ್ರಮಾಣಕ್ಕೇ ಗೋಚರನಾಗಲು ಅರ್ಹನಾದವನು " ಎಂಬ ದೃಢನಿಶ್ಚಯವುಳ್ಳ ಒಬ್ಬಾನೊಬ್ಬನಿಗೆ ಈ ಅನುಮಾನಪ್ರಮಾಣವು ದುರ್ಬಲಪ್ರಮಾಣವಾಗಿರುವುದೆಂಬ ಜ್ಞಾನವುಂಟಾದರೆ—" ಆದರೆ ಈಶ್ವರನನ್ನು ಗ್ರಹಿಸುವ ಪ್ರಮಾಣವೇ ಯಾವುದೂ ಇಲ್ಲವಾದುದರಿಂದ ಈಶ್ವರನು ಅಪ್ರಾಮಾಣಿಕನಾಗಿರುವನು " ಎಂಬುದಾಗಿ ಅವನಿಗೆ ಉಂಟಾಗುವ ಅವಿಶ್ವಾಸವನ್ನು ಹೋಗಲಾಡಿಸುವಿಕೆಯೇ ಎರಡನೆಯ ಪ್ರಯೋಜನವಾಗಿರುವುದು. ಅನುಮಾನವೇದ್ಯತ್ವವನ್ನು ನಿರಾಕರಿಸಿ ಶಾಸ್ತ್ರೈಕವೇದ್ಯತ್ವವನ್ನು ಸ್ಥಿರಪಡಿಸಿದರೆ ಅಪ್ರಾಮಾಣಿಕತ್ವಭ್ರಾಂತಿಯನ್ನು ಹೋಗಲಾಡಿಸಿಕೊಂಡು ಈಶ್ವರನಲ್ಲಿ ಪುನಃ ಅವನು ವಿಶ್ವಾಸವನ್ನು ಪಡೆವನಷ್ಟೆ ?

**ತೃತೀಯಪ್ರಯೋಜನವು**—ಈಶ್ವರಾನುಮಾನವನ್ನು ನಿರಾಕರಿಸದಿದ್ದರೆ ಅನುಮಾನಪ್ರಮಾಣದಿಂದ ಅವಗತನಾಗುವ ಈಶ್ವರನನ್ನೇ ಶಾಸ್ತ್ರವೂ ತೋರಿಸುತ್ತಿರುವುದೆಂದು ಶಾಸ್ತ್ರಕ್ಕೆ ಅನುವಾದತ್ವವು ಪ್ರಸಂಗಿಸುವುದು. ಈಶ್ವರವಿಷಯ

ದಲ್ಲಿ ಪ್ರವರ್ತಿಸಲು ಅನುಮಾನಕ್ಕೆ ಸಾಮರ್ಥ್ಯವಿಲ್ಲವೆಂದು ತೋರಿಸಿ ಅನುಮಾನ ವನ್ನು ನಿರಾಕರಿಸಿಬಿಟ್ಟರೆ ಆಗ ಶಾಸ್ತ್ರಕ್ಕೆ ಅನುವಾದಕತ್ವವೆಂಬ ಅಪ್ರಾಮಾಣ್ಯಕ್ಕೆ ಪ್ರಸಕ್ತಿಯಿಲ್ಲದೆ ಅಜ್ಞಾತಾರ್ಥಜ್ಞಾಪಕತ್ವವೆಂಬ ಪ್ರಾಮಾಣ್ಯವು ಸಿದ್ಧಿಸುವುದು.

## ೬೯೨ ಈಶ್ವರಾನುಮಾನಾನಿರಾಕರಣೇ ಅನಿಷ್ಟಾಪತ್ತಿಪ್ರದರ್ಶನಂ

ಪೂಜ್ಯರೆ? ಅನುವಾದವೆಂದರೆ ಪ್ರಮಾಣಾಂತರದಿಂದ ಅವಗತವಾಗಿರುವ ಅರ್ಥವನ್ನು ಪುನಃ ಬೋಧಿಸುವಿಕೆ; ಹೀಗೆ ಪುನಃ ಬೋಧಿಸುವುದರಿಂದ ಆ ಅರ್ಥವು ಇನ್ನೂ ದೃಢಪಡುವುದಾದಕಾರಣ ಲಾಭವೇ ಇರುವುದಲ್ಲದೆ ಹಾನಿ ಯೇನೂ ಇಲ್ಲವಷ್ಟೆ? ಹೀಗಿರುವಲ್ಲಿ ಈಶ್ವರಾನುಮಾನವನ್ನು ಏತಕ್ಕೆ ನಿರಾ ಕರಿಸಬೇಕು?

ಹವುದು—ಆದರೂ ಆವಶ್ಯಕವಾಗಿ ನಿರಾಕರಿಸಬೇಕು. ಹಾಗೆ ನಿರಾಕರಿಸ ದಿದ್ದರೆ ಅನುಮಾನಪ್ರಮಾಣದಿಂದ ಸಿದ್ಧಿಸುವ ಕರ್ತಾ ಒಬ್ಬನು ನಿಮಿತ್ತಕಾರಣ ವಾಗಿ ಸಿದ್ಧಿಸುವನಲ್ಲದೆ ನಿಮಿತ್ತ ಮತ್ತು ಉಪಾದಾನವೆಂಬ ಉಭಯವಿಧಕಾರಣ ವಾಗಿ ಸಿದ್ಧಿಸುವುದಿಲ್ಲವಾದುದರಿಂದ ನಿಮಿತ್ತೋಪಾದಾನಗಳಿಗೆ ಐಕ್ಯವು ಸಿದ್ಧಿಸದೆ ಹೋಗುವುದು; ಅನುವಾದರೂಪವಾದ ಶಾಸ್ತ್ರವು ಪುರೋವಾದರೂಪವಾದ ಅನು ಮಾನಕ್ಕೆ ವಿರುದ್ಧವಾಗಿ ನಿಮಿತ್ತೋಪಾದಾನೈಕ್ಯವನ್ನು ಬೋಧಿಸಲಾರದೆ ಹೋಗು ವುದು. ಅನುಮಾನವನ್ನು ನಿರಾಕರಿಸಿಬಿಟ್ಟರೆ ಆಗ ಶಾಸ್ತ್ರವು ಅನುವಾದವೆನಿಸಿಕೊ ಳ್ಳದೆ ಪುರೋವಾದರೂಪವಾಗಿಯೇ ಇರುವುದರಿಂದ ಸ್ವತಂತ್ರವಾಗಿ ನಿಮಿತ್ತೋ ಪಾದಾನಗಳ ಐಕ್ಯವನ್ನು ಬೋಧಿಸಬಲ್ಲುದು. ಇದಕ್ಕೋಸ್ಕರವಾಗಿಯೂ ಈಶ್ವರಾ ನುಮಾನವನ್ನು ನಿರಾಕರಿಸಬೇಕು.

## ೬೯೩. ಶ್ರುತೇರುಪಾದಾನತ್ವರೂಪಧರ್ಮಮಾತ್ರಬೋಧ ಕತ್ವಾಶಂಕಾ

ಪೂಜ್ಯರೆ? ಪ್ರತ್ಯಕ್ಷಾದಿಪ್ರಮಾಣದಿಂದ ಸಿದ್ಧವಾಗಿರುವ ಪೃಥಿವ್ಯಾದಿ ಪ್ರಪಂಚವನ್ನು ಅನುವಾದಮಾಡಿಕೊಂಡು ಇಂಥ ಪ್ರಪಂಚಕ್ಕೆ ಶ್ರುತಿಯಲ್ಲಿ ಭಗವದ್ಭೇದತ್ವವನ್ನು ವಿಧಿಸುವಂತೆ ಅನುಮಾನಪ್ರಮಾಣದಿಂದ ನಿಮಿತ್ತಕಾರಣ ವಾಗಿ ಸಿದ್ಧವಾದ ಈಶ್ವರನನ್ನು ಅನುವಾದಮಾಡಿಕೊಂಡು ಶ್ರುತಿಯಲ್ಲಿ ಉಪಾ ದಾನಕಾರಣತ್ವವನ್ನು ವಿಧಿಸಬಹುದಲ್ಲವೆ? ಹೀಗಿರುವಲ್ಲಿ ಈಶ್ವರಾನುಮಾನವನ್ನು ಏತಕ್ಕೆ ನಿರಾಕರಿಸಬೇಕು?

## ೬೯೪. ಶ್ರುತೇರುಭಯವಿಧಕಾರಣತ್ವವಿಶಿಷ್ಟಧರ್ಮಿಬೋಧಕತ್ವವ್ಯವಸ್ಥಾಪನಂ

ಹವುದು; ಆದರೂ ಅವಶ್ಯಕವಾಗಿ ನಿರಾಕರಿಸಬೇಕು. ಹಾಗೆ ನಿರಾಕರಿಸದಿದ್ದರೆ ಅನುಮಾನಪ್ರಮಾಣದಿಂದ ನಿಮಿತ್ತಕಾರಣವಾಗಿ ಈಶ್ವರನು ಸಿದ್ಧಿಸಿದ ಮೇಲೆ ಅಂಥವನನ್ನು ಅನುವಾದಮಾಡಿ ಉಪಾದಾನಕಾರಣತ್ವವನ್ನು ವಿಧಿಸುವುದಕ್ಕಾಗಿ ಶ್ರುತಿ ಪ್ರವರ್ತಿಸುವ ಸಮಯದಲ್ಲಿಯೇ ಇದಕ್ಕೆ ವಿರುದ್ಧವಾಗಿ ಮತ್ತೊಂದು ಅನುಮಾನವು ಪೂರ್ವಾನುಮಾನದಿಂದ ಸಿದ್ಧವಾದ ನಿಮಿತ್ತಕಾರಣವನ್ನು ಅನುವಾದಮಾಡಿಕೊಂಡು ಅದಕ್ಕೆ ಉಪಾದಾನಕಾರಣತ್ವಾಭಾವವನ್ನು ಸಾಧಿಸುವುದಾದರೆ ಅಂಥ ಅನುಮಾನಕ್ಕೆ ವಿರುದ್ಧವಾಗಿ ಶ್ರುತಿ ಬ್ರಹ್ಮಕ್ಕೆ ಉಪಾದಾನಕಾರಣತ್ವವನ್ನು ಸಾಧಿಸುವ ಸಾಮರ್ಥ್ಯವನ್ನು ಕಳೆದುಕೊಳ್ಳುವುದು. ಅನುಮಾನವೇ ಧರ್ಮಿಗ್ರಾಹಕಪ್ರಮಾಣವಾಗಿರುವುದರಿಂದ ಅದೇ ಪ್ರಬಲವಾಗುವುದಲ್ಲದೆ ಧರ್ಮಿಗ್ರಾಹಕವಲ್ಲದ ಶಾಸ್ತ್ರವು ಪ್ರಬಲವಾಗಲಾರದಷ್ಟೆ? ಆಗ ಬ್ರಹ್ಮಕ್ಕೆ ಉಪಾದಾನಕಾರಣತ್ವವೇ ದುರ್ಲಭವಾಗುವುದು. ಉಭಯವಿಧಕಾರಣತ್ವದೊಡನೆ ಕೂಡಿದ ಬ್ರಹ್ಮವೆಂಬ ಧರ್ಮಿ ಶಾಸ್ತ್ರದಿಂದಲೇ ಸಿದ್ಧಿಸುವುದಾದರೆ ಆಗ ಶಾಸ್ತ್ರವೇ ಧರ್ಮಿಗ್ರಾಹಕಪ್ರಮಾಣವಾದುದರಿಂದ ಪ್ರಬಲವಾಗಿ ತನಗೆ ವಿರುದ್ಧವಾದ ಎಲ್ಲಾ ಅನುಮಾನಗಳನ್ನೂ ನಿರಾಕರಿಸಿ ತಾನೇ ಸ್ವತಂತ್ರವಾಗಿ ನಿಲ್ಲುವುದರಿಂದ ಆಗ ಬ್ರಹ್ಮಕ್ಕೆ ಉಪಾದಾನಕಾರಣತ್ವವು ಸುಲಭವಾಗುವುದು. ಆದುದರಿಂದ ಉಪಾದಾನಕಾರಣತ್ವಸಿದ್ಧಿಗೋಸ್ಕರವಾಗಿಯೂ ಈಶ್ವರಾನುಮಾನವನ್ನು ನಿರಾಕರಿಸಬೇಕು.

## ೬೯೫. ಧರ್ಮಿಗ್ರಾಹಕತ್ವಾಭಾವೇऽಪಿ ಶ್ರುತಿತ್ವಾದೇವ ಶ್ರುತೇಃ ಪ್ರಾಬಲ್ಯಸಂಭವಾಶಂಕಾ.

"ಪೂಜ್ಯರೆ? ಎಲ್ಲಿ ಪ್ರಮೇಯತ್ವವಿರುವುದೋ ಅಲ್ಲಿ ಈಶ್ವರಶೇಷತ್ವವಿಲ್ಲವೆಂಬುದನ್ನು ಈಶ್ವರನಲ್ಲಿ ನಾವು ನೋಡಿರುವೆವು. ಈಶ್ವರನಲ್ಲಿ ಪ್ರಮೇಯತ್ವವಿರುವುದು; ಈಶ್ವರನು ಈಶ್ವರನಿಗೆ ಶೇಷನಲ್ಲವಾದುದರಿಂದ ಈಶ್ವರಶೇಷತ್ವಾಭಾವವೂ ಈಶ್ವರನಲ್ಲಿರುವುದು. ಇದರಿಂದ—ಈಶ್ವರಶೇಷತ್ವಾಭಾವಕ್ಕೂ ಪ್ರಮೇಯತ್ವಕ್ಕೂ ಸಾಧ್ಯಸಾಧನಭಾವವಿರುವುದೆಂದು ಸ್ಪಷ್ಟವಾಯಿತು. ಪ್ರಪಂಚದಲ್ಲಿಯಾದರೆ ಪ್ರಮೇಯತ್ವವಿರುವುದರಲ್ಲಿ ವಿವಾದವಿಲ್ಲ. ಆದುದರಿಂದ ಈಶ್ವರಶೇಷತ್ವಾಭಾವವೂ ಪ್ರಪಂಚದಲ್ಲಿ ಇರಬೇಕಾದುದರಿಂದ ಪ್ರಪಂಚವು ಈಶ್ವರಶೇಷವಲ್ಲವೆಂಬುದು ಈ ಅನುಮಾನದಿಂದ ಸಿದ್ಧಿಸುವುದು. ಇಂಥ ಅನುಮಾನವನ್ನು "ಪತಿಂ ವಿಶ್ವಸ್ಯ"

ಎಂಬ ಶ್ರುತಿಯಿಂದ ನೀವು ನಿರಾಕರಿಸುತ್ತೀರಿ; ಈ ಶ್ರುತಿಯಾದರೆ—ಧರ್ಮಿಗ್ರಾಹಕಪ್ರಮಾಣವಾಗಿಲ್ಲ. ಆದರೂ ಶ್ರುತಿತ್ವವೆಂಬ ಹೇತುವಿನಿಂದಲೇ ಈ ಶ್ರುತಿಗೆ ಪ್ರಾಬಲ್ಯವನ್ನು ಅಂಗೀಕರಿಸಿ ಉಕ್ತವಾದ ಅನುಮಾನವನ್ನು ನಿರಾಕರಿಸಬೇಕು, ಹೀಗಾಗುವುದಾದರೆ—ಪೂರ್ವೋಕ್ತವಿಷಯದಲ್ಲಿಯೂ ಉಪಾದಾನಕಾರಣತ್ವವನ್ನು ವಿಧಿಸುವ ಶ್ರುತಿಗೆ ಧರ್ಮಿಗ್ರಾಹಕತ್ವವಿಲ್ಲದಿದ್ದರೂ ಶ್ರುತಿತ್ವನೆಂಬ ಹೇತುವಿನಿಂದಲೇ ಪ್ರಾಬಲ್ಯವನ್ನು ಅಂಗೀಕರಿಸಿ ಉಪಾದಾನಕಾರಣತ್ವಾಭಾವಸಾಧಕವಾದ ಅನುಮಾನವನ್ನು ನಿರಾಕರಿಸಬಹುದಲ್ಲವೆ?"

## ೬೯೬. ಶ್ರುತಿತ್ವಮಾತ್ರಾದೇವ ಶ್ರುತೇಃ ಪ್ರಾಬಲ್ಯಾಸಿದ್ಧ್ಯಾ ಧರ್ಮಿಗ್ರಾಹಕತ್ವಾದೇವ ಪ್ರಾಬಲ್ಯೋಪಪಾದನಂ.

ಇಲ್ಲ—ಹಾಗೆ ಸರಿಬೀಳುವುದಿಲ್ಲ ಶ್ರುತಿತ್ವಮಾತ್ರವೇ ಪ್ರಾಬಲ್ಯಕ್ಕೆ ಕಾರಣವಾಗುವುದಾದರೆ—"ಆದಿತ್ಯೋ ಯೂಪಃ" ಎಂಬ ಶ್ರುತಿಯೂ ಪ್ರಬಲವಾಗಿ ಯೂಪಾದಿತ್ಯರುಗಳಿಗೆ ಐಕ್ಯವನ್ನು ಬೋಧಿಸಿ; ಯೂಪಾದಿತ್ಯರುಗಳಿಗೆ ಭೇದವನ್ನು ತೋರಿಸತಕ್ಕ ಪ್ರತ್ಯಕ್ಷವನ್ನು ನಿರಾಕರಿಸಬೇಕಾಗಿಬರುವುದು. ಆದಕಾರಣ ಪ್ರಮಾಣಾಂತರದಿಂದ ಸಾಧಿಸಲ್ಪಟ್ಟ ಅರ್ಥದಲ್ಲಿಯಾಗಲಿ—ಪ್ರಮಾಣಾಂತರದಿಂದ ಬಾಧಿಸಲ್ಪಟ್ಟ ಅರ್ಥದಲ್ಲಿಯಾಗಲಿ ಶಾಸ್ತ್ರಕ್ಕೆ ತಾತ್ಪರ್ಯವು ಸಂಭವಿಸುವುದಿಲ್ಲ. ಆದುದರಿಂದ ಶಾಸ್ತ್ರದಲ್ಲಿ ಬೋಧಿಸಲ್ಪಡುವ ಅರ್ಥವು ಅಪೂರ್ವವಾಗಿಯೇ ಇರುವುದು. ಎಂದರೆ—ಪ್ರಮಾಣಾಂತರದಿಂದ ಬಾಧಿಸಲ್ಪಡದೆಯೂ ಪ್ರಮಾಣಾಂತರದಿಂದ ಸಾಧಿಸಲ್ಪಡದೆಯೂ ಇರುವುದು. ಆದಕಾರಣ ಶ್ರುತಿಗೆ ಶ್ರುತಿತ್ವವೆಂಬ ಹೇತುಮಾತ್ರದಿಂದಲೇ ಪ್ರಾಬಲ್ಯವು ದೊರೆಯಲಾರದಾದುದರಿಂದ ಉಪಾದಾನತ್ವವಿಧಾಯಕಶ್ರುತಿ ಧರ್ಮಿಗ್ರಾಹಕವಾಗದಿದ್ದರೆ ಉಪಾದಾನತ್ವಪ್ರತಿಷೇಧಕವಾದ ಅನುಮಾನವನ್ನು ಬಾಧಿಸಲಾರದು.

## ೬೯೭ ಕ್ವಚಿದ್ಧರ್ಮಿಗ್ರಾಹಕತ್ವಾಭಾವೇಪ್ಯುಪಜೀವ್ಯತ್ವಾದೇವ ಶ್ರುತೇಃ ಪ್ರಾಬಲ್ಯಸಿದ್ಧಿಃ

ಹಾಗಾದರೆ—ಪ್ರಪಂಚಕ್ಕೆ ಭಗವಚ್ಛೇಷತ್ವವನ್ನು ಬೋಧಿಸುವ "ಪತಿಂ ವಿಶ್ವಸ್ಯ" ಎಂಬ ಶ್ರುತಿ ಪ್ರಪಂಚಕ್ಕೆ ಭಗವಚ್ಛೇಷತ್ವವನ್ನು ಪ್ರತಿಷೇಧಿಸುವ ಅನುಮಾನಕ್ಕಿಂತಲೂ ಪ್ರಬಲವಾಗುವ ಬಗೆ ಹೇಗೆ?

ಹೀಗೆ—ಮನುಷ್ಯಪದಾರ್ಥವನ್ನು ಅರಿಯದವನು ಮನುಷ್ಯಾಭಾವವನ್ನೂ ಅರಿಯಲಾರನು. ಎಂದರೆ ಅಭಾವವನ್ನು ತಿಳಿದುಕೊಳ್ಳುವುದಕ್ಕೆ ಅದರ ಪ್ರತಿಯೋ

ಗಿಷಯಾದ ಭಾವವನ್ನೂ ತಿಳಿದುಕೊಂಡಿರಬೇಕು. ಪ್ರಪಂಚಕ್ಕೆ ಭಗವಚ್ಛೇಷತ್ವಾ ಭಾವವನ್ನು ಅನುಮಾನಪ್ರಮಾಣದಿಂದ ಸಾಧಿಸುವವನು ಮೊದಲು ಅದರ ಭಗವ ಚ್ಛೇಷತ್ವವನ್ನು ತಿಳಿದುಕೊಂಡಿರಬೇಕು. ಸಮಸ್ತಪ್ರಪಂಚಕ್ಕೂ ಭಗವಚ್ಛೇಷತ್ವವು ಶ್ರುತಿಪ್ರಮಾಣದಿಂದಲ್ಲದೆ ಮತ್ತೊಂದು ಪ್ರಮಾಣದಿಂದಲೂ ಸಿದ್ಧಿಸುವುದಿಲ್ಲ. ಇದ ಕ್ಕೋಸ್ಕರ ಮೊದಲು "ಪತಿಂ ವಿಶ್ವಸ್ಯ" ಇತ್ಯಾದಿಶ್ರುತಿಗಳಿಂದಲೇ ಪ್ರಪಂಚಕ್ಕೆ ಭಗವಚ್ಛೇಷತ್ವವನ್ನು ತಿಳಿದುಕೊಳ್ಳಬೇಕು. ಆದಕಾರಣ ಭಗವಚ್ಛೇಷತ್ವವನ್ನು ನಿಷೇಧಿಸುವ ಅನುಮಾನಪ್ರಮಾಣಕ್ಕೆ ಭಗವಚ್ಛೇಷತ್ವವನ್ನು ವಿಧಿಸುವ ಶ್ರುತಿ ಅಪೇಕ್ಷಿತವಾದುದರಿಂದ ಉಪಜೀವ್ಯವೆನಿಸಿಕೊಂಡು ಈ ಶ್ರುತಿಯೇ ಪ್ರಬಲವಾಗು ವುದಾದಕಾರಣ ಅನುಮಾನವು ಅದಕ್ಕೆ ವಿರುದ್ಧವಾಗಿ ಭಗವಚ್ಛೇಷತ್ವವನ್ನು ನಿಷೇ ಧಿಸಲಾರದು.

## ೬೯೮ ಶ್ರುತ್ಯನುಮಾನಯೋಸ್ತುಲ್ಯಬಲತ್ವೇನ ಪರಸ್ಪರಬಾಧ್ಯ ತ್ವಾದುಪಾದಾನತ್ವವದುಪಾದಾನತ್ವಾಭಾವಸ್ಯಾಪ್ಯಸಿದ್ಧ್ಯಾಶಂಕಾ

"ಪೂಜ್ಯರೆ? ಉಪಾದಾನಕಾರಣತ್ವವನ್ನು ಪ್ರತಿಷೇಧಿಸುವ ಅನುಮಾನ ಕ್ಕಿಂತಲೂ, ಉಪಾದಾನಕಾರಣತ್ವವನ್ನು ವಿಧಿಸುವ ಶ್ರುತಿ ಪ್ರಬಲವಾಗದಿದ್ದರೆ ಹೋಗಲಿ, ಆದರೆ ಈ ಶ್ರುತಿಯೂ ಆ ಅನುಮಾನವೂ ತುಲ್ಯಬಲವಾಗಿ ಇದ್ದು ಕೊಂಡು ಸುಂದೋಪಸುಂದರ ನ್ಯಾಯವನ್ನು ಅವಲಂಬಿಸಿ ಒಂದನ್ನು ಮತ್ತೊಂದು ನಿರಾಕರಿಸುವುದೆಂದು ಹೇಳಬಹುದಾದುದರಿಂದ "ಶ್ರುತಿಪ್ರಾಬಲ್ಯವಿಲ್ಲವಾದಕಾರಣ ಉಪಾದಾನತ್ವವು ಸಿದ್ಧಿಸುವುದಿಲ್ಲ" ಎಂದು ನೀವು ಹೇಳುವಂತೆ—"ಅನುಮಾನ ಪ್ರಾಬಲ್ಯವಿಲ್ಲವಾದಕಾರಣ ಉಪಾದಾನತ್ವಾಭಾವವೂ ಸಿದ್ಧಿಸುವುದಿಲ್ಲ" ಎಂದು ನಾವೂ ಹೇಳಬಹುದಲ್ಲವೆ?"

## ೬೯೯ ಉಪಜೀವ್ಯತ್ವೇನಾನುಮಾನಸ್ಯೈವ ಪ್ರಾಬಲ್ಯಾದುಪಾ ದಾನತ್ವಾಭಾವಸ್ಯೈವ ಸಿದ್ಧಿಪ್ರಸಂಗಃ

ಇಲ್ಲ—ಹಾಗೆ ಹೇಳಲಾಗುವುದಿಲ್ಲ. ಈಶ್ವರನು ಅನುಮಾನೈಕವೇದ್ಯನೆಂದು ಯಾವಾಗ ಅಂಗೀಕರಿಸುತ್ತೀರೋ ಆಗ ಉಪಾದಾನತ್ವವಿಧಾಯಕವಾದ ಶಾಸ್ತ್ರಕ್ಕೆ ಅನುಮಾನಪ್ರಮಾಣವು ಉಪಜೀವ್ಯವಾದುದರಿಂದ ಉಪಾದಾನತ್ವನಿಷೇಧಕವಾದ ಅನುಮಾನವೂ ಉಪಜೀವ್ಯಜಾತಿಗೆ ಸೇರಿದುದರಿಂದ ಶಾಸ್ತ್ರಕ್ಕಿಂತಲೂ ಅದೇ ಪ್ರಬ ಲವಾಗುವುದಲ್ಲದೆ ಶಾಸ್ತ್ರದೊಡನೆ ತುಲ್ಯಬಲವಾಗಲಾರದಾದಕಾರಣ ಸುಂದೋಪ ಸುಂದನ್ಯಾಯಕ್ಕೆ ಇಲ್ಲಿ ಅವಕಾಶವಿಲ್ಲ.

## ೭೦೦ ಈಶ್ವರಾನುಮಾನಸ್ಯಾವಶ್ಯನಿರಾಕರಣೀಯತ್ವೋಪಸಂಹಾರಃ.

ಹೀಗೆ ಅನುಮಾನವು ಪ್ರಬಲವಾದ ಮೇಲೆ ಅದಕ್ಕೆ ವಿರುದ್ಧವಾಗಿ ಉಪಾದಾನತ್ವವಿಧಾಯಕವಾದ ಶ್ರುತಿ ತಲೆಯೆತ್ತಲಾರದಾದುದರಿಂದ ಯೂಪಾದಿತ್ಯಶಾಸ್ತ್ರದಂತೆ ಇದಕ್ಕೂ ಅನ್ಯಾರ್ಥದಲ್ಲಿ ತಾತ್ಪರ್ಯವನ್ನು ಕಲ್ಪಿಸಿ ನಿರ್ವಹಿಸಬಹುದಾದುದರಿಂದ ನಿಮಿತ್ತೋಪಾದಾನೈಕ್ಯವು ಸಿದ್ಧಿಸದೆ ಹೋಗುವುದಾದಕಾರಣ "ಪ್ರಪಂಚಕ್ಕೆ ಬ್ರಹ್ಮವೇ ತ್ರಿವಿಧಕಾರಣವೂ ಆಗಿರುವುದು" ಎಂಬ ವೈದಿಕ ಸಿದ್ಧಾಂತವೇ ಲುಪ್ತವಾದೀತೆಂಬ ಭೀತಿಯಿಂದ ಸೂತ್ರಕಾರರು—"ಜನ್ಮಾದ್ಯಸ್ಯ ಯತಃ" ಎಂಬ ಸೂತ್ರದಿಂದ ಬ್ರಹ್ಮಕ್ಕೆ ತ್ರಿವಿಧಕಾರಣತ್ವವನ್ನು ಹೇಳಿದ ಉತ್ತರಕ್ಷಣದಲ್ಲಿಯೇ—"ಶಾಸ್ತ್ರಯೋನಿತ್ವಾತ್" ಎಂಬ ಸೂತ್ರದಿಂದ ಪ್ರಮಾಣಾಂತರವೇದ್ಯತ್ವವನ್ನು ನಿರಾಕರಿಸಿರುವರು. ಆದುದರಿಂದ ನಿಮಿತ್ತೋಪಾದಾನಕಾರಣಗಳಿಗೆ ಐಕ್ಯವು ಸಿದ್ಧಿಸುವುದಕ್ಕಾಗಿಯೂ ಈಶ್ವರಾನುಮಾನವನ್ನು ನಿರಾಕರಿಸಿಯೇ ತೀರಬೇಕು.

## ೭೦೧ ಲಕ್ಷಣವಿರೋಧಾನ್ನಿಮಿತ್ತೋಪಾದಾನಯೋರೈಕ್ಯಾನುಪಪತ್ತ್ಯಾಶಂಕಾ.

ಪೂಜ್ಯರೆ! ಘಟವೆಂಬ ಒಂದಾನೊಂದು ಕಾರ್ಯವಸ್ತು ಉಂಟಾಗುವ ಕಾಲದಲ್ಲಿ ಎರಡು ಕಪಾಲಗಳ ಆಕಾರವಾಗಿ ಪರಿಣಮಿಸಿರುವ ಮೃತ್ಪಿಂಡವು ಸಮವಾಯಿಕಾರಣವಾಗಿಯೂ ಎಂದರೆ ಉಪಾದಾನಕಾರಣವಾಗಿಯೂ, ಕಪಾಲದ್ವಯದ ಸಂಯೋಗವು ಅಸಮವಾಯಿಕಾರಣವಾಗಿಯೂ, ಕುಲಾಲಾದಿಗಳು ನಿಮಿತ್ತಕಾರಣವಾಗಿಯೂ ಲೋಕಾನುಭವದಲ್ಲಿ ತಿಳಿದುಬರುತ್ತಿರುವುದು. ಇದರಿಂದ ಉಪಾದಾನಾಸಮವಾಯಿಕಾರಣಗಳಿಗಿಂತಲೂ ಭಿನ್ನವಾದ ಕಾರಣವು ನಿಮಿತ್ತಕಾರಣವೆಂದೂ, ನಿಮಿತ್ತಾಸಮವಾಯಿಕಾರಣಗಳಿಗಿಂತಲೂ ಭಿನ್ನವಾದ ಕಾರಣವು ಉಪಾದಾನಕಾರಣವೆಂದೂ ಇವುಗಳಿಗೆ ಲಕ್ಷಣವು ಫಲಿಸುವುದು. ಈ ಲಕ್ಷಣಗಳಿಂದ ನಿಮಿತ್ತೋಪಾದಾನಕಾರಣಗಳು ಪರಸ್ಪರವಾಗಿ ಭಿನ್ನಭಿನ್ನಗಳಾಗಿಯೇ ಇರಬೇಕೆಂಬುದು ಲೋಕಾನುಭವಸಿದ್ಧವೆಂದು ತೋರುವುದರಿಂದ ಇದಕ್ಕೆ ವಿರುದ್ಧವಾಗಿ ನಿಮಿತ್ತೋಪಾದಾನಗಳಿಗೆ ಐಕ್ಯವನ್ನು ಬೋಧಿಸುವ ಶ್ರುತಿಗೆ ಮುಖ್ಯಾರ್ಥದಲ್ಲಿ ತಾತ್ಪರ್ಯವನ್ನು ಹೇಳಲಾಗುವುದಿಲ್ಲವಾದುದರಿಂದ ಯೂಪಾದಿತ್ಯವಾಕ್ಯದಂತೆ ಗೌಣವಾದ ಅರ್ಥವನ್ನೇ ಸ್ವೀಕರಿಸಿ ಈ ಶ್ರುತಿಯನ್ನು ನಿರ್ವಹಿಸಬೇಕು. ಹಾಗಿಲ್ಲದೆ

ಆದಕ್ಕೆ ಮುಖ್ಯಾರ್ಥತ್ವವನ್ನೇ ಸ್ವೀಕರಿಸುವುದಾದರೆ ನಿಮಿತ್ತೋಪಾದಾನಕಾರಣ ಗಳ ಲಕ್ಷಣಗಳೊಳಗೆ ವಿರೋಧವುಂಟಾಗುವುದಲ್ಲವೆ?"

## ೭೦೨. ನೈಯಾಯಿಕೋಕ್ತಲಕ್ಷಣಾನಭ್ಯುಪಗಮಾನ್ನತಯೋರೈಕ್ಯಾನುಪಪತ್ತಿಃ

ಇಂಥ ಆಶಂಕೆ ಸಂಗತವಲ್ಲ. ನಿಮಿತ್ತೋಪಾದಾನಕಾರಣಗಳಿಗೆ ನೀವು ತೋರಿಸಿದಂತೆಯೇ ಲಕ್ಷಣವಿದ್ದರಲ್ಲವೆ ಆದರೊಡನೆ ಶ್ರುತಿಗೆ ವಿರೋಧವುಂಟಾದೀತೆಂದು ಆಶಂಕಿಸಬಹುದಾಗಿದ್ದಿತು? ನಿಮಿತ್ತೋಪಾದಾನಕಾರಣಗಳಿಗೆ ಅಂಥ ಲಕ್ಷಣವೇ ಇಲ್ಲ. ನೀವು ಹೇಳಿದ ಲಕ್ಷಣವನ್ನೇ ಅಂಗೀಕರಿಸುವುದಾದರೆ—ದಂಡಚಕ್ರ ಮೊದಲಾದುವುಗಳು ಘಟಕ್ಕೆ ನಿಮಿತ್ತಕಾರಣಗಳಾಗದೆ ಹೋಗಬೇಕಾಗಿ ಬರುವುದು. ಅವುಗಳು ತಮ್ಮಲ್ಲಿ ಉಂಟಾಗುವ ರೂಪಾದಿಗಳನ್ನು ಕುರಿತು ಉಪಾದಾನಕಾರಣಗಳಾಗಿಯೇ ಇರುವುದರಿಂದ ತದ್ಭಿನ್ನತ್ವವು ಬರಲಿಲ್ಲವಾಗಿ ನಿಮಿತ್ತಕಾರಣಲಕ್ಷಣವು ಅವುಗಳಲ್ಲಿ ಬರಲಾರದಷ್ಟೆ? ಭಿನ್ನತ್ವವನ್ನೇ ಅಂಗೀಕರಿಸಿ ಅವುಗಳಿಗೆ ನಿಮಿತ್ತಕಾರಣತ್ವವನ್ನೇ ಸ್ವೀಕರಿಸುವುಧಾದರೆ ತಮ್ಮಲ್ಲಿ ಉಂಟಾಗುವ ರೂಪಾದಿಗಳನ್ನು ಕುರಿತು ಅವುಗಳು ಉಪಾದಾನಕಾರಣಗಳಾಗದೆ ಹೋಗಬೇಕಾಗಿ ಬರುವುದಷ್ಟೆ? ಆದಕಾರಣ ನಿಮಿತ್ತೋಪಾದಾನಕಾರಣಗಳಿಗೆ ನೀವು ಹೇಳಿದ ಲಕ್ಷಣವು ಸಮಂಜಸವಾದುದಲ್ಲ.

## ೭೦೩. ನಿಮಿತ್ತೋಪಾದಾನಯೋಶ್ಶ್ರುತಿಸಿದ್ಧಸ್ವಾಭಿಮತಾದುಷ್ಟಲಕ್ಷಣಪ್ರದರ್ಶನಂ.

ಆದರೆ ಅವುಗಳಿಗೆ ಸಮಂಜಸವಾದ ಲಕ್ಷಣವೇನು? ಯಾವುದು ಪರಿಣಾಮಕ್ಕೆ ಆಶ್ರಯವಾಗಿರುವುದೋ ಅದು ಉಪಾದಾನಕಾರಣವಾಗುವುದು. ಪರಿಣಾಮವೆಂದರೆ ಅವಸ್ಥಾಂತರಪ್ರಾಪ್ತಿ; ಆಗಂತುಕವಾದ ಎಂದರೆ ಜನ್ಯವಾದ ಅಪೃಥಕ್ಸಿದ್ಧಧರ್ಮವು ಅವಸ್ಥೆಯೆನಿಸಿಕೊಳ್ಳುವುದೆಂಬುದನ್ನು ಅಚಿತ್ತತ್ತ್ವಪರಿಚ್ಛೇದದಲ್ಲಿಯೇ ತೋರಿಸಿರುವೆವು.

ಅಂತು ಉತ್ತರೋತ್ತರಾವಸ್ಥಾವಿಶಿಷ್ಟವಾದ ವಸ್ತುಸ್ವರೂಪವನ್ನು ಕುರಿತು ಅದಕ್ಕೆ ಅನುಕೂಲವಾದ ಪೂರ್ವಪೂರ್ವಾವಸ್ಥೆಯೊಡನೆ ಕೂಡಿರುವ ಅದೇ ವಸ್ತುಸ್ವರೂಪವು ಉಪಾದಾನಕಾರಣವೆನಿಸಿಕೊಳ್ಳುವುದು. ಘಟತ್ವಾವಸ್ಥೆಯೊಡನೆ ಕೂಡಿರುವ ಮೃದ್ದ್ರವ್ಯವನ್ನು ಕುರಿತು ಪಿಂಡತ್ವಾವಸ್ಥೆಯೊಡನೆ ಕೂಡಿರುವ ಅದೇ ಮೃದ್ದ್ರವ್ಯವು ಉಪಾದಾನಕಾರಣವೆನಿಸಿಕೊಂಡಿರುವುದಷ್ಟೆ?

ಈ ಲಕ್ಷಣದ ಪರ್ಯವಸಾನವೇನಾಗಿರುವುದೆಂದರೆ—ಅಪೃಥಕ್ಸಿದ್ಧಿಸಂಬಂಧ ದಿಂದಲಾಗಲಿ, ತಾದಾತ್ಮ್ಯಸಂಬಂಧದಿಂದಲಾಗಲಿ ಕಾರ್ಯವುಂಟಾಗುವುದಕ್ಕೆ ತಾದಾತ್ಮ್ಯಸಂಬಂಧದಿಂದ ಯಾವುದು ಕಾರಣವಾಗುವುದೋ ಅದು ಉಪಾದಾನ ಕಾರಣವೆನಿಸಿಕೊಳ್ಳುವುದು. ಘಟಾದಿಗಳಲ್ಲಿ ಉಂಟಾಗುವ ರೂಪಾದಿಗಳನ್ನು ಕುರಿತು ಘಟಾದಿಗಳಿಗೆ ಉಪಾದಾನಕಾರಣತ್ವವು ಸಿದ್ಧಿಸುವುದಕ್ಕೋಸ್ಕರ "ಅಪೃಥಕ್ಸಿದ್ಧಿಸಂಬಂಧದಿಂದಲಾಗಲಿ" ಎಂಬ ಪದವು ಲಕ್ಷಣದಲ್ಲಿ ಸೇರಿಸಲ್ಪಟ್ಟಿರುವುದು. ಉತ್ತರಾವಸ್ಥಾವಿಶಿಷ್ಟವಾದ ದ್ರವ್ಯವನ್ನು ಕುರಿತು ಪೂರ್ವಾವಸ್ಥಾವಿಶಿಷ್ಟವಾದ ಅದೇ ದ್ರವ್ಯವು ಉಪಾದಾನಕಾರಣವಾಗುವುದಕ್ಕೋಸ್ಕರ "ತಾದಾತ್ಮ್ಯಸಂಬಂಧ ದಿಂದಲಾಗಲಿ" ಎಂಬ ಪದವು ಸೇರಿಸಲ್ಪಟ್ಟಿರುವುದು.

ಮತ್ತು—"ತಾದಾತ್ಮ್ಯಸಂಬಂಧದಿಂದ" ಎಂಬುದನ್ನು ಲಕ್ಷಣದಲ್ಲಿ ಸೇರಿಸದಿದ್ದರೆ ಘಟವೆಂಬ ಕಾರ್ಯವನ್ನು ಕುರಿತು ಪಿಂಡದಲ್ಲಿ ಉಂಟಾಗುವ ಚಕ್ರಸಂಯೋಗಕ್ಕೆ ಉಪಾದಾನಕಾರಣತ್ವವು ಪ್ರಾಪ್ತವಾಗುವುದು. ಅದನ್ನು ತಪ್ಪಿಸುವುದಕ್ಕಾಗಿ "ತಾದಾತ್ಮ್ಯಸಂಬಂಧದಿಂದ" ಎಂಬ ಪದವು ಸೇರಿಸಲ್ಪಟ್ಟಿರುವುದು. ಚಕ್ರಸಂಯೋಗವು ಕಾರಣವಾಗಿದ್ದರೂ ಅದು ಪಿಂಡದಲ್ಲಿ ಅಪೃಥಕ್ಸಿದ್ಧಿಸಂಬಂಧ ದಿಂದ ಉಂಟಾಗಿರುವುದಲ್ಲದೆ ತಾದಾತ್ಮ್ಯಸಂಬಂಧದಿಂದ ಅಲ್ಲ. ಆದುದರಿಂದ ಚಕ್ರ ಪಿಂಡಗಳ ಸಂಯೋಗವು ಘಟಕ್ಕೆ ಉಪಾದಾನಕಾರಣವಾಗಲಾರದು.

ಮತ್ತು—ಪಾಕದಿಂದ ಘಟದಲ್ಲಿ ಉಂಟಾಗುವ ರೂಪವನ್ನು ಕುರಿತು ಘಟದಲ್ಲಿ ಉಂಟಾಗುವ ಅಗ್ನಿಸಂಯೋಗವು ಉಪಾದಾನಕಾರಣವಾಗಬೇಕಾಗಿ ಬರುವುದು; ಅದನ್ನು ತಪ್ಪಿಸುವುದಕ್ಕಾಗಿಯೂ "ತಾದಾತ್ಮ್ಯಸಂಬಂಧದಿಂದ" ಎಂಬ ಪದವು ಸೇರಿಸಲ್ಪಟ್ಟಿರುವುದು. ಅಗ್ನಿಸಂಯೋಗವು ಕಾರಣವಾಗಿದ್ದರೂ ಅದು ಘಟದಲ್ಲಿ ಅಪೃಥಕ್ಸಿದ್ಧಿಸಂಬಂಧದಿಂದ ಉಂಟಾಗುವುದಲ್ಲದೆ ತಾದಾತ್ಮ್ಯ ಸಂಬಂಧದಿಂದ ಅಲ್ಲ. ಆದುದರಿಂದ ಅಗ್ನಿಘಟಗಳ ಸಂಯೋಗವು ರೂಪೋತ್ಪತ್ತಿಗೆ ಉಪಾದಾನಕಾರಣವಾಗಲಾರದು.

ಹೀಗಿರುವಲ್ಲಿ—ಇಂಥ ಉಪಾದಾನಕಾರಣದ ವಿಷಯದಲ್ಲಿ ಎರಡುಬಗೆಯಾದ ಕಾರ್ಯಕಾರಣಭಾವವು ಸಂಭವಿಸುವುದು. ಹೇಗೆಂದರೆ—ತಾದಾತ್ಮ್ಯಸಂಬಂಧದಿಂದ ಉಂಟಾಗುವ ಘಟವನ್ನು ಕುರಿತು ತಾದಾತ್ಮ್ಯಸಂಬಂಧದಿಂದ ಪಿಂಡವು ಉಪಾದಾನಕಾರಣವೆನಿಸಿಕೊಳ್ಳುವಂತೆ ತಾದಾತ್ಮ್ಯಸಂಬಂಧದಿಂದ ಉಂಟಾಗುವ ಸ್ಥೂಲ ಚಿದಚಿದ್ವಿಶಿಷ್ಟಬ್ರಹ್ಮವನ್ನು ಕುರಿತು ತಾದಾತ್ಮ್ಯಸಂಬಂಧದಿಂದ ಸೂಕ್ಷ್ಮಚಿದಚಿ

ದ್ವಿಶಿಷ್ಟಬ್ರಹ್ಮವು ಉಪಾದಾನಕಾರಣವೆನಿಸಿಕೊಳ್ಳುವುದೆಂದು ಒಂದುಬಗೆಯಾದ ಕಾರ್ಯಕಾರಣಭಾವವು.—

ಹಾಗೆಯೇ—ಅಪೃಥಕ್ಸಿದ್ಧಿಸಂಬಂಧದಿಂದ ಉಂಟಾಗುವ ರೂಪಾದಿಗಳನ್ನು ಕುರಿತು ತಾದಾತ್ಮ್ಯಸಂಬಂಧದಿಂದ ಘಟಾದಿಗಳು ಉಪಾದಾನಕಾರಣವೆನಿಸಿಕೊಳ್ಳುವಂತೆ—ಅಪೃಥಕ್ಸಿದ್ಧಿಸಂಬಂಧದಿಂದ ಉಂಟಾಗುವ ಕಾರ್ಯಸಾಮಾನ್ಯವನ್ನು ಕುರಿತು ತಾದಾತ್ಮ್ಯಸಂಬಂಧದಿಂದ ಬ್ರಹ್ಮವು ಉಪಾದಾನಕಾರಣವೆನಿಸಿಕೊಳ್ಳುವುದೆಂದು ಮತ್ತೊಂದುಬಗೆಯಾದ ಕಾರ್ಯಕಾರಣಭಾವವು.

"ಘಟಾದಿಗಳಲ್ಲಿ ಅಪೃಥಕ್ಸಿದ್ಧಿಸಂಬಂಧದಿಂದ ಉಂಟಾಗುವ ರೂಪಾದಿಗಳಿಗೆ ಘಟಾದಿಗಳೇ ಉಪಾದಾನಕಾರಣಗಳಾಗಿರುವುವಲ್ಲದೆ ಬ್ರಹ್ಮವು ಉಪಾದಾನಕಾರಣವಾಗಲಿಲ್ಲ" ಎಂದು ಭ್ರಮಿಸಬಾರದು. ಸಾಕ್ಷಾತ್ತಾಗಿಯಾಗಲಿ ಪರಂಪರೆಯಿಂದಲಾಗಲಿ ಅಪೃಥಕ್ಸಿದ್ಧಿಸಂಬಂಧವನ್ನು ಲಕ್ಷಣದಲ್ಲಿ ವಿವಕ್ಷೆಮಾಡಿರುವುದರಿಂದ ಘಟಾದಿಗಳಲ್ಲಿ ಉಂಟಾಗುವ ರೂಪಾದಿಗಳೊಡನೆ ಬ್ರಹ್ಮಕ್ಕೆ ಪರಂಪರೆಯಾಗಿ ಅಪೃಥಕ್ಸಿದ್ಧಸಂಬಂಧವು ಇದ್ದೇ ಇರುವುದಾದುದರಿಂದ ಅವುಗಳನ್ನು ಕುರಿತು ಬ್ರಹ್ಮವು ಉಪಾದಾನಕಾರಣವೆನಿಸಿಕೊಳ್ಳಲು ತಡೆಯಿಲ್ಲ. ಅಂತು ಉಕ್ತವಾದ ದ್ವಿವಿಧಕಾರ್ಯಕಾರಣಭಾವವೂ ಬ್ರಹ್ಮಕ್ಕೆ ತಡೆಯಿಲ್ಲದೆ ಸಿದ್ಧಿಸುವುದು.

ಇನ್ನು ನಿಮಿತ್ತಕಾರಣವನ್ನು ಪರೀಕ್ಷಿಸೋಣ; ಯಾವ ಆಕಾರದೊಡನೆ ಕೂಡಿಕೊಂಡು ಪರಿಣಾಮೋನ್ಮುಖವಾಗಿ ಉಪಾದಾನಕಾರಣವೆನಿಸಿಕೊಂಡಿದ್ದಿತೋ ಅಂಥ ಆಕಾರಕ್ಕಿಂತಲೂ ಭಿನ್ನವಾದ ಆಕಾರದೊಡನೆ ಅಪೇಕ್ಷಿಸಲ್ಪಡುವ ಕಾರಣವು ನಿಮಿತ್ತಕಾರಣವೆನಿಸಿಕೊಳ್ಳುವುದು. ಸೂಕ್ಷ್ಮಚಿದಚಿದ್ವಿಶಿಷ್ಟತ್ವಾಕಾರದೊಡನೆ ಕೂಡಿಕೊಂಡು ಪರಿಣಾಮೋನ್ಮುಖವಾದ ಬ್ರಹ್ಮವು ಸ್ಥೂಲಚಿದಚಿದ್ವಿಶಿಷ್ಟಬ್ರಹ್ಮಕ್ಕೆ ಉಪಾದಾನಕಾರಣವೆನಿಸಿಕೊಂಡಿದ್ದಿತು. ಅಂಥ ಆಕಾರಕ್ಕಿಂತಲೂ ಭಿನ್ನವಾದ ಸಂಕಲ್ಪವಿಶಿಷ್ಟತ್ವಾಕಾರದೊಡನೆ ಎಂದರೆ ಜ್ಞಾನಶಕ್ತ್ಯಾದಿವಿಶಿಷ್ಟತ್ವಾಕಾರದೊಡನೆ ಅಪೇಕ್ಷಿತವಾದುದರಿಂದ ಅಂಥ ಬ್ರಹ್ಮವು ನಿಮಿತ್ತಕಾರಣವೆನಿಸಿಕೊಳ್ಳುವುದು. ಜ್ಞಾನಶಕ್ತ್ಯಾದಿಗುಣಗಳೊಡನೆ ಕೂಡಿದವನಲ್ಲವೆ ಸೃಷ್ಟಿಯನ್ನು ಮಾಡಬಲ್ಲನು.

## ೭೦೪. ಅಸಮವಾಯಿಕಾರಣಾನಭ್ಯುಪಗಮಾನ್ನ ತತ್ರ ನಿಮಿತ್ತಕಾರಣಲಕ್ಷಣಸ್ಯಾತಿಪ್ರಸಂಗಃ

ಪೂಜ್ಯರೆ! ಉಪಾದಾನತ್ವಕ್ಕಿಂತಲೂ ಭಿನ್ನವಾದ ಕಾರಣತ್ವವು ನಿಮಿತ್ತಕಾರಣತ್ವವೆಂದು ಹೇಳುವಿರಾದರೆ ಅಸಮವಾಯಿಕಾರಣತ್ವದಲ್ಲಿ ಈ ಲಕ್ಷಣವು ಅತಿಪ್ರಸಕ್ತವಾಗುವುದಲ್ಲವೆ?

ಇಲ್ಲ ಅತಿಪ್ರಸಕ್ತವಾಗುವುದಿಲ್ಲ. ಹೇಗೆಂದರೆ "ಅಸಮವಾಯಿಕಾರಣವು ಸಮವಾಯಿಕಾರಣಕ್ಕೆ ಪ್ರತ್ಯಾಸನ್ನವಾದ ಕಾರಣವಾಗಿರುವುದು" ಎಂಬುದು ನೈಯಾಯಿಕರ ಸಂಕೇತರೂಪವಾಗಿರುವುದರಿಂದ ವೇದಾಂತಿಗಳು ಅದನ್ನು ಅಂಗೀಕರಿಸುವುದಿಲ್ಲ. ಸಮವಾಯಿಕಾರಣಕ್ಕೆ ಪ್ರತ್ಯಾಸನ್ನವಾದ ಕಾರಣವು ಅಸಮವಾಯಿಕಾರಣವೆನಿಸಿಕೊಳ್ಳುವುದೆಂದು ಆಂತರಾಳಿಕವಿಭಾಗವನ್ನು ಹೇಳುವುದಾದರೆ ನಿಮಿತ್ತಕಾರಣಕ್ಕೆ ಪ್ರತ್ಯಾಸನ್ನವಾದ ಕಾರಣವು ಅನಿಮಿತ್ತಕಾರಣವಾಗಿರುವುದೆಂಬುದಾಗಿಯೂ ಮತ್ತೊಂದು ಆಂತರಾಳಿಕವಿಭಾಗವನ್ನೂ ಏಕೆ ಹೇಳಬಾರದು? ಆದಕಾರಣ ಅಸಮವಾಯಿಕಾರಣವೆಂಬುದಾಗಿ ಒಂದುಕಾರಣವು ಉಂಟೆಂದು ನೈಯಾಯಿಕರು ಹೇಳುವುದು ಸಮಂಜಸವಲ್ಲ.

## ೭೦೫ ನಿಮಿತ್ತಕಾರಣಲಕ್ಷಣಸ್ಯ ತಂತುಸಂಯೋಗಾದಾವತಿ ಪ್ರಸಂಗಾಶಂಕಾ

ಪೂಜ್ಯರೆ? ಅಸಮವಾಯಿಕಾರಣವೆಂಬ ಅವಾಂತರವಿಭಾಗವನ್ನು ಅಂಗೀಕರಿಸದಿದ್ದರೆ ಅದು ಹೋಗಲಿ ಆದರೆ—ತಂತುಸಂಯೋಗವಿಲ್ಲದೆ ಪಟವು ಉಂಟಾಗುವುದಿಲ್ಲವಾದುದರಿಂದ ಪಟಕ್ಕೆ ತಂತುಸಂಯೋಗವು ಅಪೇಕ್ಷಿತವಾದ ಕಾರಣವಾಗಿರುವುದು. ಇದು ಉಪಾದಾನಕಾರಣಕ್ಕಿಂತಲೂ ಭಿನ್ನವಾದ ಕಾರಣವಾದುದರಿಂದ ನೀವು ಹೇಳಿದ ನಿಮಿತ್ತಕಾರಣಲಕ್ಷಣಕ್ಕೆ ಇದರಲ್ಲಿ ಅತಿಪ್ರಸಂಗವುಂಟಾಗುವುದಲ್ಲವೆ?

## ೭೦೬ ಅವಯವಾತಿರಿಕ್ತಾವಯವ್ಯಭಾವಾನ್ನೋಕ್ತಾತಿಪ್ರಸಂಗಃ.

ಇಲ್ಲ ಅತಿಪ್ರಸಂಗವುಂಟಾಗುವುದಿಲ್ಲ—ತಂತುವಿಗಿಂತಲೂ ಅತಿರಿಕ್ತವಾದ ಪಟವೆಂಬ ಅವಯವಿಯೊಂದು ಇರುವ ಪಕ್ಷದಲ್ಲಿಯೂ, ಅಂಥ ಅವಯವಿಗೆ ತಂತುಸಂಯೋಗವು ಕಾರಣವಾಗಿರುವ ಪಕ್ಷದಲ್ಲಿಯೂ ನೀವು ಹೇಳುವಂತೆ ಅತಿಪ್ರಸಂಗವುಂಟಾಗುತ್ತಿದ್ದಿತು; ಅವಯವಕ್ಕಿಂತಲೂ ಅತಿರಿಕ್ತವಾದ ಅವಯವಿಯೆಂಬುದಿಲ್ಲವೆಂದು ಹಿಂದಿನ ಪ್ರಕರಣಗಳಲ್ಲಿಯೇ ತೋರಿಸಿರುವೆವು. ಸಂಯೋಗವಿಶೇಷದೊಡನೆ ಕೂಡಿದ ತಂತುಗಳೇ ಪಟವೆನಿಸಿಕೊಳ್ಳುವುದರಿಂದ ಪಟಸಮಕಾಲದಲ್ಲಿ ಇರುವ ಸಂಯೋಗವು ಪಟಕ್ಕೆ ಕಾರಣವಾಗಲಾರದು. ಕಾರಣವಾಗುವುದಾದರೆ ಕಾರ್ಯವಸ್ತುವಿಗಿಂತಲೂ ಪೂರ್ವದಲ್ಲಿ ಇರಬೇಕಲ್ಲವೆ? ಆದಕಾರಣ ನಿಮಿತ್ತಕಾರಣದ ಲಕ್ಷಣಕ್ಕೆ ತಂತುಸಂಯೋಗದಲ್ಲಿ ಅತಿಪ್ರಸಂಗವಿಲ್ಲ.

## ೭೦೭ ತಂತುವಾಯಕ್ರಿಯಾಯಾಮತಿಪ್ರಸಂಗಾಪಾದನೇ ಇಷ್ಟಾಪತ್ತಿಃ.

ಪೂಜ್ಯರೆ? ನೇಯುವವನ ಶಾರೀರಕ್ರಿಯೆಯಿಲ್ಲದೆ ತಂತುಸಂಯೋಗವು ಉಂಟಾಗುವುದಿಲ್ಲವಾದುದರಿಂದ ಈ ಸಂಯೋಗಕ್ಕಾಗಿ ಚೇತನಕ್ರಿಯೆ ಅಪೇಕ್ಷಿತವಾದ ಕಾರಣವಾಗಿರುವುದು; ಇದು ಉಪಾದಾನಕ್ಕಿಂತಲೂ ಭಿನ್ನಕಾರಣವೆಂಬುದು ಸ್ಪಷ್ಟವಾಗಿರುವುದರಿಂದ ಇದರಲ್ಲಿ ನಿಮಿತ್ತಕಾರಣದ ಲಕ್ಷಣಕ್ಕೆ ಅತಿಪ್ರಸಂಗವು ತಪ್ಪಿದುದಲ್ಲವಷ್ಟೆ?

ಇಲ್ಲ ಅತಿಪ್ರಸಂಗದೋಷವಿಲ್ಲ—ನೇಯುವವನ ಕ್ರಿಯೆಯೂ ಸಹ ಪಟದ ನಿಮಿತ್ತಕಾರಣಗಳ ಗುಂಪಿಗೆ ಸೇರಿದುದಾದುದರಿಂದ ಅದರಲ್ಲಿ ಈ ಲಕ್ಷಣವು ಬಂದರೆ ಲಕ್ಷ್ಯದಲ್ಲಿ ಲಕ್ಷಣಸಮನ್ವಯುವಾಯಿತಲ್ಲದೆ ಅತಿಪ್ರಸಂಗವಾಗುವುದಿಲ್ಲ. ಲಕ್ಷ್ಯಭಿನ್ನದಲ್ಲಿ ಲಕ್ಷಣವು ಹೋದರಲ್ಲವೆ ಅತಿಪ್ರಸಂಗವಾಗುವುದು.

## ೭೦೮ ಅಭಿನ್ನನಿಮಿತ್ತೋಪಾದಾನತ್ವೋಪಸಂಹಾರಃ.

ಆದಕಾರಣ ಸೂಕ್ಷ್ಮಚಿದಚಿದ್ವಿಶಿಷ್ಟನಾದ ಈಶ್ವರನಲ್ಲಿ ಉಪಾದಾನಕಾರಣತ್ವವೂ, ಸಂಕಲ್ಪವಿಶೇಷವಿಶಿಷ್ಟನಾದ ಅದೇ ಈಶ್ವರನಲ್ಲಿ ನಿಮಿತ್ತಕಾರಣತ್ವವೂ ಇರುವುದರಿಂದ ಈಶ್ವರನಿಗೆ ಆಕಾರಭೇದದಿಂದ ಉಭಯವಿಧಕಾರಣತ್ವವೂ ಉಪಪನ್ನವಾಗಿರುವಪ್ರಯುಕ್ತ ವೇದಾಂತಿಗಳು ಹೇಳುವ ಅಭಿನ್ನನಿಮಿತ್ತೋಪಾದಾನತ್ವಕ್ಕೆ ಆವುದೊಂದು ಚ್ಯುತಿಯೂ ಇಲ್ಲ.

## ೭೦೯ ನೈಯಾಯಿಕಾನಾಮಪಿ ನಿಮಿತ್ತೋಪಾದಾನಯೋಃ ಕ್ವಚಿದೈಕ್ಯಾಭ್ಯುಪಗಮೋಽವಶ್ಯಂಭಾವಃ

ನಿಮಿತ್ತೋಪಾದಾನಕಾರಣಗಳು ಸರ್ವತ್ರ ಬೇರೆಬೇರೆಯಾಗಿಯೇ ಇರಬೇಕೆಂಬ ನಿಯಮವನ್ನು ನೈಯಾಯಿಕರೂ ಸಹ ಹೇಳಲಾಗುವುದಿಲ್ಲ; ಕೆಲವು ಕಡೆಯಲ್ಲಿ ಅವುಗಳಿಗೆ ಐಕ್ಯವನ್ನು ಅವರೂ ಒಪ್ಪಬೇಕು; ಸರ್ವವ್ಯಾಪಕನಾದ ಈಶ್ವರನಿಗೆ ಸರ್ವದ್ರವ್ಯಗಳೊಡನೆ ಸಂಯೋಗವಿದ್ದೇ ಇರುವುದು; ಇಂಥ ಸಂಯೋಗಗಳಲ್ಲಿ ಈಶ್ವರನಿಗೆ ಉಭಯವಿಧಕಾರಣತ್ವವನ್ನು ಹೇಳದಿದ್ದರೆ ಅವರಿಗೂ ನಿರ್ವಾಹವಾಗುವುದಿಲ್ಲ. ಅಂಥ ಸಂಯೋಗಗಳಿಗೆ ಈಶ್ವರನು ಸಮವಾಯಿಯಾದುದರಿಂದ ಉಪಾದಾನಕಾರಣವಾಗಿಯೂ, ಸರ್ವಕಾರ್ಯಗಳಿಗೂ ಕರ್ತಾವಾದುದರಿಂದ ನಿಮಿತ್ತಕಾರಣವಾಗಿಯೂ ಇರುವನಷ್ಟೆ?

ಆದುದರಿಂದ ಸೂಕ್ಷ್ಮಚಿದಚಿದ್ವಸ್ತುಗಳನ್ನು ಶರೀರವಾಗಿ ಪಡೆದಿರುವ ಬ್ರಹ್ಮವು ಸ್ಥೂಲಚಿದಚಿದ್ವಸ್ತುಶರೀರಕವಾಗಿ ಪರಿಣಮಿಸುವುದೆಂದು ಸಮಸ್ತ ವೇದಾಂತಗಳೂ ಉದ್ಘೋಷಿಸುತ್ತಿರುವುವೆಂಬ ಅಂಶವು ಆವುದೊಂದು ಈತಿಬಾಧೆಯೂ ಇಲ್ಲದೆ ಸಿದ್ಧವಾಗಿರುವುದು.

## ೭೧೦ ಅಭಿನ್ನನಿಮಿತ್ತೋಪಾದಾನತ್ವಫಲಿತಾಃ ಜಗದ್ಬ್ರಹ್ಮಣೋಃ ಸಂಬಂಧವಿಶೇಷಾಃ

ಆದಕಾರಣದಿಂದಲೇ ವಿಶೇಷ್ಯವಾದ ಬ್ರಹ್ಮಸ್ವರೂಪಕ್ಕೂ, ವಿಶೇಷಣಗಳಾದ ಚೇತನಾಚೇತನಾತ್ಮಕಸಮಸ್ತಪದಾರ್ಥಗಳಿಗೂ ಆಧಾರಾಧೇಯಭಾವ, ಈಶ್ವರೇಶಿತವ್ಯಭಾವ ಎಂದರೆ ನಿಯಂತೃನಿಯಾಮ್ಯಭಾವ, ಶೇಷಶೇಷಿಭಾವ, ಶರೀರಶರೀರಿಭಾವ, ಕಾರ್ಯಕಾರಣಭಾವ, ಇವೇ ಮೊದಲಾದ ಅನೇಕವಿಧವಾದ ಸಂಬಂಧಗಳನ್ನು ಆ ಆ ಪ್ರಮಾಣಗಳಿಗೆ ಅನುಸಾರವಾಗಿ ತಿಳಿಯಬೇಕು.

## ೭೧೧. ಜೀವಸ್ವರೂಪಪ್ರಯುಕ್ತಾ ಬ್ರಹ್ಮಪ್ರತಿಯೋಗಿಕ ಸಂಬಂಧಾಸ್ಸರ್ವೇ ಲಕ್ಷ್ಮ್ಯಾ ಅಪ್ಯವಿಶಿಷ್ಟಾಃ

ಲಕ್ಷ್ಮೀವ್ಯತಿರಿಕ್ತರಾದ ಸಮಸ್ತಚೇತನರಿಗೂ ಈಶ್ವರನೊಡನೆ ಯಾವ ಯಾವ ಸಂಬಂಧಗಳು ಪ್ರಮಾಣಸಿದ್ಧಗಳಾಗಿರುವುವೋ ಅಂಥ ಸಂಬಂಧಗಳೆಲ್ಲವೂ ಲಕ್ಷ್ಮಿಗೂ ಸಹ ಸಿದ್ಧವಾಗಿರುವುವು. ಎಂದರೆ ಈಶ್ವರನನ್ನು ಕುರಿತು ಸಮಸ್ತ ಚೇತನರಿಗೂ ಆಧೇಯತ್ವನಿಯಾಮ್ಯತ್ವಶೇಷತ್ವಗಳೂ, ಅತಏವ ಶರೀರತ್ವವೂ, ಕಾರ್ಯತ್ವವೂ ಇರುವಂತೆ, ಲಕ್ಷ್ಮಿಗೂ ಈಶ್ವರನನ್ನು ಕುರಿತು ಆಧೇಯತ್ವಾದಿ ಸಮಸ್ತಸಂಬಂಧಗಳೂ ಇರುವುವು. ಜೀವಸಾಮಾನ್ಯಕ್ಕೆ ಸ್ವರೂಪಪ್ರಯುಕ್ತಗಳಾಗಿಬರುವ ಸಕಲಧರ್ಮಗಳೂ ಜೀವಕೋಟ್ಯಂತರ್ಗತಗಳಾದ ಲಕ್ಷ್ಮಿಯಲ್ಲಿಯೂ ತಡೆಯಿಲ್ಲದೆ ಬರುವುವಷ್ಟೆ ?

## ೭೧೨. ಅತಏವ ಲಕ್ಷ್ಮ್ಯಾ ಅಂತರ್ಯಾಮಿತ್ವಾದಿಕಲ್ಪನಸ್ಯಾವೈದಿಕತ್ವಾನ್ಮುಮುಕ್ಷುಭಿರನಾದರಣೀಯತ್ವಂ

ಆದುದರಿಂದಲೇ ಲಕ್ಷ್ಮಿಗೆ ಅಂತರ್ಯಾಮಿತ್ವವನ್ನೂ ಜಗತ್ಕಾರಣತ್ವವನ್ನೂ ವಿಭುತ್ವವನ್ನೂ ಅಂಗೀಕರಿಸುವ ಮತವು ಕೇವಲಕುತರ್ಕಗಳಿಂದ ಕಲ್ಪಿತಗಳಾಗಿಯೂ ಪ್ರಮಾಣವಿರುದ್ಧಗಳಾಗಿಯೂ ಇರುವುದರಿಂದ ಅವೈದಿಕಗಳಾಗಿರುವ ಕಾರಣ ಮುಮುಕ್ಷುಜನಗಳಿಗೆ ಆದರಣೀಯಗಳಾಗಲಾರವು. ಈ ವಿಷಯದಲ್ಲಿ ಆವಶ್ಯಕವಾಗಿ ತಿಳಿದುಕೊಳ್ಳಬೇಕಾದ ಇನ್ನೂ ಅನೇಕವಿಷಯಗಳನ್ನು ಸದಾಚಾರ್ಯ

ಮುಖದಿಂದ ಉಪದೇಶರೂಪವಾಗಿಯೇ ತಿಳಿದುಕೊಳ್ಳಬೇಕಾಗಿರುವುದರಿಂದ ಅವು ಗಳನ್ನು ಇಲ್ಲಿ ಬರೆಯದೆ ಬಿಟ್ಟಿರುವೆವು.

ಶ್ರೀಮದ್ವೇದಾಂತದೇಶಿಕರ ಸಂಪ್ರದಾಯದಲ್ಲಿ ಪೂರ್ವೋಕ್ತರೀತಿ ಯಿಂದ ಉಪಪತ್ತಿಗಳನ್ನು ತೋರಿಸಿಕೊಂಡು ಅವರವರ ಸಂಪ್ರದಾಯಾನುಸಾರ ವಾಗಿ ಈ ವಿಷಯವನ್ನು ವ್ಯವಸ್ಥೆಪಡಿಸಿಕೊಳ್ಳಬಹುದು.

**ಇಂತು ತತ್ತ್ವಶುದ್ಧಿಯೆಂಬ ವಿಶಿಷ್ಟಾದ್ವೈತಪ್ರಕರಣಗ್ರಂಥದೊಳ್ ಈಶ್ವರಪರಿಚ್ಛೇದದಲ್ಲಿ ಅಭಿನ್ನನಿಮಿತ್ತೋಪಾದಾನತ್ವ ಸಮರ್ಥನಪ್ರಕರಣಂ ಷಷ್ಠಂ ೬**

## ಸಪ್ತಮಪ್ರಕರಣಂ.

**೭೧೩ ಸವಿಗ್ರಹಸ್ಯೇಶ್ವರಸ್ವರೂಪಸ್ಯ ಜಗತ್ಕಾರ್ಯನಿರ್ವಹಣಾರ್ಥೋ ಭಕ್ತಾನುಗ್ರಹಾರ್ಥಶ್ಚ ಪಂಚಧಾ ವಿಭಾಗಃ.**

ಹೀಗೆ—ಸರ್ವಾಧಾರತ್ವ-ಸರ್ವನಿಯಂತೃತ್ವ-ಸರ್ವಶೇಷಿತ್ವ-ಸರ್ವಶರೀರಿತ್ವ-ಸರ್ವ ಕಾರಣತ್ವ ಮೊದಲಾದ ಅಸಾಧಾರಣಧರ್ಮಗಳೊಡನೆ ಕೂಡಿರುವ ಪರಮಾತ್ಮ ಸ್ವರೂಪವು ಉಭಯವಿಭೂತಿಗಳ ಕಾರ್ಯನಿರ್ವಾಹಕಕ್ಕಾಗಿಯೂ, ಭಕ್ತಾನುಗ್ರಹ ಕ್ಕಾಗಿಯೂ ಅಮೋಘವಾದ ತನ್ನ ಸಂಕಲ್ಪವಿಶೇಷದಿಂದ-" **ಪರ-ವ್ಯೂಹ-ವಿಭವ ಅಂತರ್ಯಾಮಿ ಅರ್ಚೆ** " ಎಂದು ಐದುಪ್ರಕಾರವಾಗಿ ವಿಭಾಗಿಸಲ್ಪಟ್ಟಿರುವುದು.

**೭೧೪ ಉಕ್ತಪಂಚಪ್ರಕಾರತ್ವಸ್ಯ ದೃಷ್ಟಾಂತಮುಖೇನೌಚಿತ್ಯ ಪ್ರಪಂಚನಂ.**

ಸಮಸ್ತಭೂಮಂಡಲವನ್ನೂ ಸ್ವಾಧೀನಪಡಿಸಿಕೊಂಡು ಅದ್ವಿತೀಯನಾದ ಚಕ್ರವರ್ತಿಯೆನಿಸಿಕೊಂಡ ಧಾರ್ಮಿಕನಾದ ರಾಜನು—ರಾಜಕಾರ್ಯನಿರ್ವಾಹಕಕ್ಕಾಗಿ ಐದು ವೇಷಗಳನ್ನು ಧರಿಸಿ ಆ ಆ ಕಾರ್ಯಗಳನ್ನು ನಿರ್ವಹಿಸುವನೆಂಬುದು ರಾಜನೀತಿ ಯಲ್ಲಿ ಪ್ರಸಿದ್ಧವಾದ ವಿಷಯವಾಗಿರುವುದು. ಹೇಗೆಂದರೆ—

೧. ಪರಿಪೂರ್ಣವಾದ ತನ್ನ ಐಶ್ವರ್ಯ ಅಟ್ಟಹಾಸಗಳೊಡನೆ ಆಸ್ಥಾನಮಂಟ ಪದಲ್ಲಿ ಸಿಂಹಾಸನಾರೂಢನಾಗಿ, ಸಮಸ್ತರಾಜರುಗಳಿಂದಲೂ, ಪ್ರಜೆಗಳಿಂದಲೂ

ಸೇವ್ಯಮಾನನಾಗಿ ಸರ್ವರಿಗೂ ನೇತ್ರಾನಂದಕರನಾಗಿ, ಅಪ್ರತಿಹತವಾದ ತನ್ನ ಆಜ್ಞಾಪ್ರಭಾವದೊಡನೆ ದೇದೀಪ್ಯಮಾನನಾಗಿರುವ ಸ್ಥಿತಿ ಮೊದಲನೆಯ ವೇಷವಾಗಿರುವುದು.

೨. ದುಷ್ಟನಿಗ್ರಹಶಿಷ್ಟಪರಿಪಾಲನಗಳೆಂಬ ರಾಜಧರ್ಮನಿರ್ವಾಹಕ್ಕಾಗಿ ನ್ಯಾಯಸ್ಥಾನಗಳನ್ನು ಏರ್ಪಡಿಸಿ ಅಲ್ಲಿ ಪ್ರಜೆಗಳ ಸುಖದುಃಖಗಳನ್ನು ನ್ಯಾಯವಿಮರ್ಶನಪೂರ್ವಕವಾಗಿ ವಿಚಾರಮಾಡುವುದರ ಮೂಲಕ ದುಷ್ಟರಿಗೆ ದಂಡನೆಯನ್ನೂ ಶಿಷ್ಟರಿಗೆ ರಕ್ಷಣೆಯನ್ನೂ ಕಲ್ಪಿಸುವುದಕ್ಕಾಗಿ ಸ್ವೀಕರಿಸುವ ಸ್ಥಿತಿ ಎರಡನೆಯ ವೇಷವಾಗಿರುವುದು.

೩. ಅರಣ್ಯದಲ್ಲಿ ವೃದ್ಧಿಹೊಂದಿ ಸ್ವೇಚ್ಛಾಪ್ರವೃತ್ತಿಯನ್ನು ಮಾಡುತ್ತಿರುವ ದುಷ್ಟಮೃಗಗಳಿಂದ ರಾಜ್ಯಕ್ಕೆ ತೊಂದರೆಯುಂಟಾದಾಗ ಅಂಥ ದುಷ್ಟಮೃಗಗಳನ್ನು ಸಂಹರಿಸುವುದಕ್ಕಾಗಿ ಬೇಟೆಯಾಡುವ ವ್ಯಾಜದಿಂದ ಅದಕ್ಕೆ ಅನುಕೂಲವಾಗಿ ಸ್ವೀಕರಿಸುವ ವೇಷವು ಮೂರನೆಯ ವೇಷವಾಗಿರುವುದು.

೪. ತನ್ನ ರಾಜ್ಯದಲ್ಲಿ ಅಂತರ್ಗತರಾಗಿರುವ ಪ್ರಜೆಗಳೊಳಗೆ ಯಾರು ಯಾರು ನಿಷ್ಕಪಟವಾದ ರಾಜಭಕ್ತಿಯುಳ್ಳವರಾಗಿರುವರೆಂಬುದನ್ನೂ, ಯಾರು ಯಾರು ರಾಜದ್ರೋಹಿಗಳಾಗಿರುವರೆಂಬುದನ್ನೂ ಕಂಡುಹಿಡಿಯುವುದಕ್ಕಾಗಿ ರಾತ್ರಿಕಾಲದಲ್ಲಿ ಅಲ್ಲಲ್ಲಿ ಸಂಚರಿಸುವುದಕ್ಕೆ ಅನುಕೂಲಿಸುವಂತೆ ಸ್ವೀಕರಿಸುವ ಪ್ರಚ್ಛನ್ನವಾದ ವೇಷವು ನಾಲ್ಕನೆಯ ವೇಷವಾಗಿರುವುದು.

೫. ಸಮಸ್ತರಾಜಕಾರ್ಯಗಳನ್ನೂ ನಿರ್ವಹಿಸಿ ಕೃತಕೃತ್ಯನಾದುದರಿಂದ ಮನೋವಿನೋದಕ್ಕಾಗಿ ಲೀಲೆಯಲ್ಲಿ ಪ್ರವರ್ತಿಸಿ ಮಿತವಾದ ಅಂತರಂಗಪರಿವಾರದೊಡನೆ ಕೂಡಿದವನಾಗಿ ರಮಣೀಯಗಳಾದ ಉದ್ಯಾನವನಗಳಲ್ಲಿಯೂ ಆರಾಮಭೂಮಿಗಳಲ್ಲಿಯೂ ಪರ್ವತಪ್ರದೇಶಗಳಲ್ಲಿಯೂ ಆಟಪಾಟಗಳನ್ನಾಡುವುದಕ್ಕೆ ಅನುಕೂಲಿಸುವಂತೆ ಸ್ವೀಕರಿಸುವ ವೇಷವು ಐದನೆಯ ವೇಷವಾಗಿರುವುದು.

ಸಾಧಾರಣನಾದ ಒಬ್ಬ ಭೂಮಂಡಲಾಧಿಪತಿಗೂ ಕಾರ್ಯಸೌಕರ್ಯಕ್ಕಾಗಿ ಈ ಐದು ವೇಷಗಳು ಆವಶ್ಯಕಗಳಾಗಿರುವುವಾದರೆ ಅಖಿಲಾಂಡಕೋಟಿಬ್ರಹ್ಮಾಂಡನಾಯಕನೆಂದೂ, ಉಭಯವಿಭೂತಿಗೆ ಒಡೆಯನೆಂದೂ ಪ್ರಸಿದ್ಧನಾಗಿರುವ ಶ್ರೀಮನ್ನಾರಾಯಣನಿಗೆ ಈ ಐದು ರೂಪಗಳು ಅತ್ಯಂತಾವಶ್ಯಕಗಳಾಗಿರುವುವೆಂದು ಹೇಳಬೇಕಾದುದೇ ಇಲ್ಲ. ಆದುದರಿಂದಲೇ ವಿಷ್ವಕ್ಸೇನಸಂಹಿತೆಯಲ್ಲಿ—

"ಮಮ ಪ್ರಕಾರಾಃ ಪಂಚೇತಿ ಪ್ರಾಹುರ್ವೇದಾಂತಪಾರಗಾಃ |
ಪರೋ ವ್ಯೂಹಶ್ಚ ವಿಭವೋ ನಿಯಂತಾ ಸರ್ವದೇಹಿನಾಮ್ ||
ಅರ್ಚಾವತಾರಶ್ಚ ತಥಾ—"

ಎಂಬ ವಚನದಿಂದ ಈ ವಿಭಾಗವು ಸ್ಪಷ್ಟವಾಗಿ ನಿರ್ದೇಶಿಸಲ್ಪಟ್ಟಿರುವುದು.

### ೭೧೫ ತತ್ರ ಪರಸ್ವರೂಪನಿರೂಪಣಂ ೧

ಇವುಗಳೊಳಗೆ ಕಾಲದಿಂದ ಪಕ್ವವಾಗದೆ ಎಂದರೆ ಕಾಲಾಧೀನವಾದ ಚ್ಯುತಿಯಿಲ್ಲದೆ ಸರ್ವದಾ ನಿರತಿಶಯಾನಂದವರ್ಧಕವಾದ ಶ್ರೀವೈಕುಂಠವೆಂಬ ಅಪ್ರಾಕೃತವಾದ ಪರಮಪದಸ್ಥಾನದಲ್ಲಿ ಶ್ರೀಭೂನೀಳಾದ್ಯಸಂಖ್ಯೇಯಪತ್ನೀವರ್ಗಪರಿಷ್ವಕ್ತನಾಗಿ, ಚತುರ್ಭುಜನಾಗಿ, ತೇಜೋಮಯವಾದ ದಿವ್ಯಮಂಗಳ ವಿಗ್ರಹವಿಶಿಷ್ಟನಾಗಿ, ಶಂಖಚಕ್ರಗದಾಶಾರ್ಙ್ಗಾದ್ಯಸಂಖ್ಯೇಯದಿವ್ಯಾಯುಧ ಧಾರಿಯಾಗಿ, ಕಿರೀಟಾದಿನೂಪುರಾಂತವಾದ ದಿವ್ಯಭೂಷಣಗಣದಿಂದ ಭೂಷಿತನಾಗಿ, ಛತ್ರಧಾರಿಣಿ ಚಾಮರಧಾರಿಣಿ ತಾಂಬೂಲಧಾರಿಣಿ ಮೊದಲಾದ ಅಪರಿಮಿತಪರಿಜನಪರಿವೃತನಾಗಿ, ಅನಂತ ಗರುಡ ವಿಷ್ವಕ್ಸೇನ ಮೊದಲಾದ ನಿತ್ಯಸೂರಿಗಳೆಂಬ ಮತ್ತು ಮುಕ್ತಾತ್ಮರೆಂಬ ಸಭಿಕವರ್ಗದಿಂದ ಸೇವ್ಯಮಾನನಾಗಿ, ಅವರಿಗೆ ದರ್ಶನವನ್ನು ಕೊಡುವುದರ ಮೂಲಕ ಅಪರಿಮಿತನೇತ್ರಾನಂದಜನಕನಾದುದರಿಂದ ಅವರಿಗೆ ಪರಮಭೋಗ್ಯನಾಗಿ, ಪರಿಪೂರ್ಣವಾದ ತನ್ನ ಉಭಯವಿಭೂತ್ಯೈಶ್ವರ್ಯವನ್ನೂ ಅಪ್ರತಿಹತವಾದ ಆಜ್ಞಾವೈಭವವನ್ನೂ ತೋರಿಸುವುದಕ್ಕೋಸ್ಕರ ಸಹಸ್ರಫಣಾಮಣಿಮಂಡಲಮಂಡಿತನಾದ ಆದಿಶೇಷನೆಂಬ ದಿವ್ಯಶಯ್ಯೆಯಲ್ಲಿ ಧರ್ಮಾದಿ ಪೀಠರೂಪವಾದ ದಿವ್ಯಸಿಂಹಾಸನದಲ್ಲಿ ದೇದೀಪ್ಯಮಾನನಾಗಿರುವಂತೆ ಸ್ವೀಕರಿಸಿರುವ ಸ್ಥಿತಿ ಪ್ರಥಮಸ್ವರೂಪವಾಗಿರುವುದು. ಪರವಾಸುದೇವನೆಂಬ ಹೆಸರಿನಿಂದ ಶಾಸ್ತ್ರಗಳಲ್ಲಿ ಪ್ರಸಿದ್ಧವಾಗಿರುವ ಇದೇ ರೂಪವು ಪರಸ್ವರೂಪವೆನಿಸಿಕೊಳ್ಳುವುದು.

### ೭೧೬. ವ್ಯೂಹಸ್ವರೂಪನಿರೂಪಣಂ ೨.

ಲೀಲಾವಿಭೂತಿಯ ಕಾರ್ಯನಿರ್ವಾಹಸೌಕರ್ಯಕ್ಕಾಗಿಯೂ, ಬ್ರಹ್ಮಾದಿದೇವತೆಗಳ ವಿವಾದಗಳನ್ನು ವಿಮರ್ಶೆಮಾಡಿ ನ್ಯಾಯಾನ್ಯಾಯಗಳನ್ನು ನಿಷ್ಕರ್ಷಿಸುವುದಕ್ಕಾಗಿಯೂ, ಕ್ಷೀರಾಬ್ಧಿಯೆಂಬ ನ್ಯಾಯಸ್ಥಾನವನ್ನು ಏರ್ಪಡಿಸಿ ದುಷ್ಟನಿಗ್ರಹ ಶಿಷ್ಟಪರಿಪಾಲನೆಗಳ ವ್ಯವಸ್ಥೆಗಾಗಿ ಅಲ್ಲಿ ಸ್ವೀಕರಿಸಿರುವ ಸ್ಥಿತಿ ದ್ವಿತೀಯಸ್ವರೂಪವಾಗಿರುವುದು. ಇದೇ ವ್ಯೂಹಸ್ವರೂಪವೆನಿಸಿಕೊಳ್ಳುವುದು.

## ೭೧೭. ವಿಭವಸ್ವರೂಪನಿರೂಪಣಂ ೩.

ಹೀಗೆ ಕ್ಷೀರಾಬ್ಧಿಯೆಂಬ ನ್ಯಾಯಸ್ಥಾನದಲ್ಲಿ ನಿರ್ಣಯಿಸಿದ ವಿಷಯವನ್ನು ಆಚರಣೆಯಲ್ಲಿ ತರುವುದಕ್ಕೋಸ್ಕರ ರಾಮಕೃಷ್ಣಾದ್ಯವತಾರಗಳನ್ನೆತ್ತಿ ರಾವಣ ಶಿಶುಪಾಲ ಮೊದಲಾದ ದುಷ್ಟಮೃಗಗಳನ್ನು ಮೃಗಯಾವಿನೋದಕ್ಕೆ ಗುರಿಮಾಡುವುದರ ಮೂಲಕವಾಗಿಯೂ, ಸಾತ್ತ್ವಿಕಾಗ್ರೇಸರರಾದ ದಂಡಕಾರಣ್ಯವಾಸಿ ಋಷಿಗಳನ್ನೂ, ಪಾಂಡವಾದಿಗಳನ್ನೂ ರಕ್ಷಿಸುವುದರ ಮೂಲಕವಾಗಿಯೂ ದುಷ್ಟನಿಗ್ರಹಶಿಷ್ಟಪರಿಪಾಲನೆಗಳನ್ನು ಕ್ರಿಯಾಪರ್ಯವಸಾಯಿಗಳನ್ನಾಗಿ ಮಾಡುವುದಕ್ಕೆ ಸ್ವೀಕರಿಸುವ ರೂಪವು ತೃತೀಯಸ್ವರೂಪವಾಗಿರುವುದು. ಇದೇ ವಿಭವವೆಂದೂ ಅವತಾರವೆಂದೂ ವ್ಯವಹರಿಸಲ್ಪಡುವುದು.

## ೭೧೮. ಅಂತರ್ಯಾಮಿಸ್ವರೂಪನಿರೂಪಣಂ ೪.

ಸಮಸ್ತಚೇತನರ ಹೃದಯವನ್ನು ಪರಿಶೋಧಿಸಿ ಅವರವರ ದುರ್ಭಾವಗಳನ್ನೂ ಸದ್ಭಾವಗಳನ್ನೂ ಕಂಡುಹಿಡಿಯುವುದಕ್ಕಾಗಿ ಕಣ್ಣಿಗೆ ಕಾಣದಿರುವ ಪ್ರಚ್ಛನ್ನರೂಪದಿಂದ ಸಮಸ್ತಚೇತನರ ಹೃದಯದಲ್ಲಿಯೂ ವಾಸಮಾಡುವುದಕ್ಕಾಗಿ ಸ್ವೀಕರಿಸುವ ರೂಪವು ನಾಲ್ಕನೆಯ ರೂಪವಾಗಿರುವುದು. ಇದೇ ಅಂತರ್ಯಾಮಿಸ್ವರೂಪವೆಂದು ವ್ಯವಹರಿಸಲ್ಪಡುವುದು.

## ೭೧೯. ಅರ್ಚಾಸ್ವರೂಪನಿರೂಪಣಂ ೫.

ಶ್ರಿಯಃಪತಿಯಾಗಿಯೂ, ಉಭಯವಿಭೂತಿಗೆ ಒಡೆಯನಾಗಿಯೂ, ಇರುವುದರಿಂದ ಪರಿಪೂರ್ಣನಾಗಿ ಅವಾಪ್ತಸಮಸ್ತಕಾಮನೆನಿಸಿಕೊಂಡು ನಿತ್ಯತೃಪ್ತನಾಗಿರುವ ಸರ್ವೇಶ್ವರನು ಕರ್ತವ್ಯಶೇಷವಿಲ್ಲವಾದುದರಿಂದ ತನ್ನ ಆಪ್ತವಾದ ಅಂತರಂಗಪರಿವಾರದೊಡನೆ ಕೂಡಿದವನಾಗಿ ಶ್ರೀವೇಂಕಟಾದ್ರಿ, ಯಾದವಾದ್ರಿ, ಹಸ್ತ್ಯದ್ರಿ, ವೃಷಭಾದ್ರಿ, ಮೊದಲಾದ ರಮಣೀಯಗಳಾದ ಪರ್ವತಪ್ರದೇಶಗಳಲ್ಲಿಯೂ ಕಾವೇರಿ, ತಾಮ್ರಪರ್ಣಿ, ಮೊದಲಾದ ಸಾತ್ತ್ವಿಕನದೀತೀರಪ್ರದೇಶಗಳಲ್ಲಿಯೂ ವಿಹರಿಸಬೇಕೆಂಬ ಅಭಿಲಾಷೆಯಿಂದ ಸ್ವೀಕರಿಸುವ ರೂಪವು ಐದನೆಯ ರೂಪವಾಗಿರುವುದು. ಇದೇ ಅರ್ಚಾಸ್ವರೂಪವೆಂದು ವ್ಯವಹರಿಸಲ್ಪಡುವುದು.

## ೭೨೦ ಬ್ರಹ್ಮಣಃ ಕಲ್ಯಾಣಗುಣಾನಾಮವಾಂತರವಿಭಾಗಃ

ಇಂಥ ಪರಮಾತ್ಮನು ಹೇಯಗುಣಸಂಬಂಧವಿಲ್ಲದವನೆಂದೂ, ಕಲ್ಯಾಣಗುಣಗಳಿಗೆ ಆಕರನಾಗಿರುವನೆಂದೂ ಉಭಯಲಿಂಗತ್ವಸಮರ್ಥನಪ್ರಕರಣದಲ್ಲಿಯೇ ವ್ಯಕ್ತ

ವಾಗಿ ತೋರಿಸಿರುವೆವು. ಇಂಥ ಕಲ್ಯಾಣಗುಣಗಳನ್ನು ಸ್ವರೂಪಗುಣಗಳೆಂದೂ, ವಿಗ್ರಹಗುಣಗಳೆಂದೂ ಎರಡುಬಗೆಯಾಗಿ ವಿಂಗಡಿಸಬಹುದು.

ಇವುಗಳಲ್ಲಿ, ಸ್ವರೂಪಗತವಾದ ಗುಣಗಳನ್ನು—ಪ್ರತಿಕೂಲರಿಗೆ ಮೋಹ ಜನಕಗಳಾದ ಗುಣಗಳೆಂದೂ, ಅನುಕೂಲರಿಗೆ ಮೋಹಜನಕಗಳಾದ ಗುಣಗಳೆಂದೂ ಎರಡುಬಗೆಯಾಗಿ ಗುಣತತ್ತ್ವಜ್ಞರಾದ ಜ್ಞಾನಿಗಳು ವಿಂಗಡಿಸುವರು. ಶೌರ್ಯ, ಧೈರ್ಯ, ಪರಾಕ್ರಮ, ಮೊದಲಾದ ಗುಣಗಳು ಪ್ರತಿಕೂಲರನ್ನು ಮೋಹಗೊಳಿಸುವ ಗುಣಗಳಾಗಿರುವುವು; ವಾತ್ಸಲ್ಯ, ಸೌಶೀಲ್ಯ, ಸೌಲಭ್ಯ ಮೊದಲಾದ ಗುಣಗಳು ಅನುಕೂಲರನ್ನು ಮೋಹಗೊಳಿಸುವ ಗುಣಗಳಾಗಿರುವುವು. ಸೌಂದರ್ಯ, ಲಾವಣ್ಯ, ಯೌವನ ಮೊದಲಾದ ಗುಣಗಳು ವಿಗ್ರಹಗತವಾದ ಗುಣಗಳಾಗಿರುವುವು.

### ೭೨೧ ಸರ್ವೇಷಾಮೇವ ಗುಣಾನಾಂ ಜ್ಞಾನಾದಿಷಾಡ್ಗುಣ್ಯ ಮೂಲಕತ್ವಂ

ಇಂಥ ಉಭಯವಿಧವಾದ ಗುಣಗಳಿಗೂ ಜ್ಞಾನ, ಶಕ್ತಿ, ಐಶ್ವರ್ಯ, ಬಲ, ವೀರ್ಯ, ತೇಜಸ್ಸು, ಎಂಬ ಆರು ಗುಣಗಳು ಮೂಲಕಾರಣಗಳಾಗಿರುವುವೆಂಬುದನ್ನು ಪ್ರಾಚೀನರು—

"ಪ್ರಕೃಷ್ಟಂ ವಿಜ್ಞಾನಂ ಬಲಮತುಲಮೈಶ್ವರ್ಯಮಖಿಲಂ
ವಿಮರ್ಯಾದಂ ವೀರ್ಯಂ ವರದ ಪರಮಾ ಶಕ್ತಿರಪಿಚ ।
ಪರಂ ತೇಜಶ್ಚೇತಿ ಪ್ರವರಗುಣಷಟ್ಕಂ ಪ್ರಥಮಜಂ
ಗುಣಾನಾಂ ನಿಸ್ಸೀಮ್ನಾಂ ಗಣನವಿಗುಣಾನಾಂ ಪ್ರಸವಭೂಃ ॥

ಎಂದು ಅಪ್ಪಣೆಕೊಡಿಸಿರುವರು.—

### ೭೨೨. ಜ್ಞಾನಾದಿಗುಣಷಟ್ಕಸ್ವರೂಪನಿರೂಪಣಂ.

ಈ ಆರು ಗುಣಗಳ ಸ್ವರೂಪಸ್ವಭಾವಗಳನ್ನು ವಿಶದವಾಗಿ ತಿಳಿಯಪಡಿಸುವುದಕ್ಕೋಸ್ಕರ ಅಹಿರ್ಬುಧ್ನ್ಯಸಂಹಿತೆಯಲ್ಲಿ ನಾರದರಿಗೂ ಅಹಿರ್ಬುಧ್ನ್ಯನಿಗೂ ನಡೆದ ಪ್ರಶ್ನೋತ್ತರಸಂವಾದವನ್ನು ಇಲ್ಲಿ ಪ್ರಕಾಶಪಡಿಸುವೆವು— ನಾರದರು ಪ್ರಶ್ನೆಮಾಡುತ್ತಾರೆ—

**ಶ್ರೀ ನಾರದಃ—**

೧. ಕಿಂ ತತ್ ಷಾಡ್ಗುಣ್ಯಮಿತ್ಯುಕ್ತಂ ದೇವದೇವ ಜಗತ್ಪತೇ ।
ಕಥಂ ಚ ಗುಣಹೀನಂ ತತ್ ಷಾಡ್ಗುಣ್ಯಂ ಪರಿಗೀಯತೇ ॥

---

೧. ಈ ಶ್ಲೋಕದ ಪೂರ್ವಾರ್ಧೋತ್ತರಾರ್ಧಗಳಲ್ಲಿ ಪ್ರಯೋಗಿಸಿರುವ ಷಾಡ್ಗುಣ್ಯಪದಗಳೆರಡರಲ್ಲಿಯೂ—ಸ್ವಾರ್ಥದಲ್ಲಿಯೇ ತದ್ಧಿತಪ್ರತ್ಯಯವು ಬಂದಿರುವುದಲ್ಲದೆ ಭಾವಾರ್ಥದಲ್ಲಿ

ಓ ದೇವಶ್ರೇಷ್ಠನಾದ ಅಹಿರ್ಬುಧ್ನ್ಯನೆ! ಪರಮಾತ್ಮನಲ್ಲಿರುವ ಜ್ಞಾನ ಮೊದಲಾದ ಆರು ಗುಣಗಳ ಸ್ವರೂಪವೆಂಥದು? ಮತ್ತು ಪರಮಾತ್ಮಸ್ವರೂಪವು ನಿರ್ಗುಣವಾಗಿರುವುದೆಂದು ಶ್ರುತಿಗಳು ಮೊರೆಯಿಡುತ್ತಿರುವಾಗ ಅದು ಷಡ್ಗುಣ ವಿಶಿಷ್ಟವಾಗಿರುವುದೆಂದು ಹೇಗೆ ಹೇಳಲಾದೀತು?

ಅಹಿರ್ಬುಧ್ನ್ಯಃ—

ಅಪ್ರಾಕೃತಗುಣಸ್ಪರ್ಶಂ ನಿರ್ಗುಣಂ ಪರಿಗೀಯತೇ ।
ಶೃಣು ನಾರದ ಷಾಡ್ಗುಣ್ಯಂ ಕಥ್ಯಮಾನಂ ಮಯಾಽನಘ ॥

ನಾರದರ ಪ್ರಶ್ನೆಗೆ ಅಹಿರ್ಬುಧ್ನ್ಯನು ಪ್ರತ್ಯುತ್ತರವನ್ನು ಹೇಳುತ್ತಾನೆ—

ಓ ನಾರದನೆ! ಶ್ರುತಿಗಳು—ನಿರ್ಗುಣಂ ಎಂದು ಮೊರೆಯಿಡುತ್ತಿರುವುದನ್ನು ಕೇಳಿ ಪರಮಾತ್ಮನಲ್ಲಿ ಆವ ಗುಣವೂ ಇಲ್ಲವೆಂದು ಭ್ರಮಿಸಬೇಡ. ಗುಣ ಸಾಮಾನ್ಯವನ್ನು ಇಲ್ಲಗೊಳಿಸುವುದಕ್ಕಾಗಿ ಅವು ಮೊರೆಯಿಡುತ್ತಿಲ್ಲ; ಮತ್ತೇನೆಂದರೆ—ಪ್ರಾಕೃತಗಳಾದ ಹೇಯಗುಣಗಳ ಸ್ಪರ್ಶವೇ ಪರಮಾತ್ಮಸ್ವರೂಪಕ್ಕೆ ಇಲ್ಲವಾದುದರಿಂದ ನಿರ್ಗುಣಂ ಎಂದು ಅವು ಸಾರುತ್ತಿರುವುವು. ಅನಂತವಾದ ಕಲ್ಯಾಣಗುಣಗಳು ಪರಮಾತ್ಮನಲ್ಲಿ ತುಂಬಿರುವುವಾದುದರಿಂದ ಅವುಗಳಿಗೆಲ್ಲಾ ಮೂಲಭೂತವಾಗಿರುವ ಷಡ್ಗುಣಗಳ ಸ್ವರೂಪವನ್ನು ಉಪದೇಶಿಸುವೆನು ಕೇಳು. ಏಕೆಂದರೆ—ಪರಮಾತ್ಮಸ್ವರೂಪವು ನಿರ್ಗುಣವೆಂದು ಭ್ರಮಿಸುವುದಕ್ಕೆ ಕಾರಣವಾದ ಪಾಪವಿಶೇಷವು ನಿನ್ನಲ್ಲಿ ಇಲ್ಲವಾದುದರಿಂದ ನೀನು ಅನಘನೆನಿಸಿಕೊಂಡು ಪರಮಾತ್ಮನ ಗುಣಶ್ರವಣಕ್ಕೆ ಅರ್ಹನಾಗಿರುತ್ತೀಯೆ.

ಅಜಡಂ ಸ್ವಾತ್ಮಸಂಬೋಧಿ ನಿತ್ಯಂ ಸರ್ವಾವಗಾಹನಂ ।
ಜ್ಞಾನಂ ನಾಮ ಗುಣಂ ಪ್ರಾಹುಃ ಪ್ರಥಮಂ ಗುಣಚಿಂತಕಾಃ ॥
ಸ್ವರೂಪಂ ಬ್ರಹ್ಮಣಸ್ತಚ್ಚ ಗುಣಶ್ಚ ಪರಿಗೀಯತೇ ।

ಓ ನಾರದನೆ! ಭಗವದ್ಗುಣಗಳನ್ನು ನಿರಂತರವಾಗಿ ಮನನಮಾಡುತ್ತಿರುವ ಪ್ರಾಜ್ಞರು—ಜ್ಞಾನವೆಂಬ ಒಂದಾನೊಂದು ಗುಣವನ್ನು ಇತರ ಗುಣಗಳಿಗೆಲ್ಲಾ ಮೂಲಭೂತವಾದ ಪ್ರಥಮಗುಣವೆಂದು ಹೇಳುವರು; ಈ ಜ್ಞಾನವೆಂಬುದು ಅಜಡವಾಗಿರುವುದು; ಎಂದರೆ—ಜ್ಞಾನಾಂತರದ ಸಹಾಯವನ್ನು ಅಪೇಕ್ಷಿಸದೆಯೇ ತನ್ನನ್ನು ತಾನೇ ಪ್ರಕಾಶಪಡಿಸುವುದಾದುದರಿಂದ ಸ್ವಯಂಪ್ರಕಾಶವೆನಿಸಿ

---

ಅಲ್ಲ. ಅದರಲ್ಲಿ—ಪೂರ್ವಾರ್ಧದೊಳಗೆ ಷಡ್ಗುಣಾ ಏವ ಷಾಡ್ಗುಣ್ಯಂ ಎಂಬ ವ್ಯುತ್ಪತ್ತಿಯನ್ನೂ, ಉತ್ತರಾರ್ಧದೊಳಗೆ ಷಟ್ ಗುಣಾಃ ಯಸ್ಯ ತತ್ ಷಡ್ಗುಣಂ ಷಡ್ಗುಣಮೇವ ಷಾಡ್ಗುಣ್ಯಂ ಎಂಬ ವ್ಯುತ್ಪತ್ತಿಯನ್ನೂ ತಿಳಿಯಬೇಕು

ಕೊಂಡಿರುವುದು; ಮತ್ತು ಇದು ಸ್ವಾತ್ಮಸಂಬೋಧಿ ಎಂದರೆ—ತನಗೋಸ್ಕರ ತಾನು ಪ್ರಕಾಶಿಸದೆ ತನಗೆ ಆಶ್ರಯನಾಗಿರುವ ಆತ್ಮನಿಗೋಸ್ಕರ ತನ್ನ ಸ್ವರೂಪ ವನ್ನು ತಾನೇ ಪ್ರಕಾಶಪಡಿಸುವುದು; ಮತ್ತು ಇದು ಆತ್ಮಸ್ವರೂಪಕ್ಕೆ ಆಗಂತುಕ ಧರ್ಮವಾಗಿ ಅನಿತ್ಯವೆನಿಸಿಕೊಳ್ಳುವುದಿಲ್ಲ; ಆತ್ಮಸ್ವರೂಪಾನುಬಂಧಿಯಾದುದರಿಂದ ನಿತ್ಯವಾಗಿರುವುದು; ಮತ್ತು ಕರ್ಮಸಂಬಂಧವಶದಿಂದ ಬರುವ ಸಂಕೋಚಾವಸ್ಥೆ ಇದಕ್ಕೆ ಇಲ್ಲವಾದುದರಿಂದ ಸಕಲವಿಷಯಗಳನ್ನೂ ಇದು ಗ್ರಹಿಸುತ್ತಲೇ ಇರು ವುದು; ಮತ್ತು "ನಿತ್ಯಂ ಸರ್ವಾವಗಾಹನಂ" ಎಂದು ಎರಡು ಪದಗಳ ಜೋಡ ಣೆಯಿಂದ ಇನ್ನೂ ಒಂದು ಅರ್ಥವಿಶೇಷವು ಲಭಿಸುವುದು; ಅದೇನೆಂದರೆ—ಬದ್ಧ ಜೀವನ ಜ್ಞಾನವು ಬಂಧಾವಸ್ಥೆಯಲ್ಲಿ ಸಂಕುಚಿತವಾಗಿದ್ದು ಮುಕ್ತಾವಸ್ಥೆಯಲ್ಲಿ ಮಾತ್ರವೇ ಸಕಲವಿಷಯಗಳನ್ನು ಗ್ರಹಿಸುವುದು; ಪರಮಾತ್ಮನ ಜ್ಞಾನವಾದರೆ ಕಾಲಪರಿಚ್ಛೇದವಿಲ್ಲದೆ ಸರ್ವಕಾಲದಲ್ಲಿಯೂ ಸಕಲವಿಷಯಗಳನ್ನೂ ಗ್ರಹಿಸುವುದು; ಮತ್ತು 'ಅವಗಾಹನಂ' ಎಂಬ ಪದದಲ್ಲಿ 'ಅವ' ಎಂಬ ಉಪಸರ್ಗಸ್ವಾರಸ್ಯದಿಂದ ಸರ್ವಕಾಲದಲ್ಲಿಯೂ ಸಕಲವಿಷಯಗಳನ್ನೂ ಪ್ರತ್ಯಕ್ಷವಾಗಿ ಸಾಕ್ಷಾತ್ಕರಿಸುವು ದೆಂದು ಲಭಿಸುವುದು. ಆದುದರಿಂದಲೇ ಪ್ರಾಜ್ಞರಾದವರು "**ಯೋ ವೇತ್ತಿ ಯುಗಪತ್ಸರ್ವಂ ಪ್ರತ್ಯಕ್ಷೇಣ ಸದಾ ಸ್ವತಃ**" ಎಂದು ಉದ್ಘೋಷಿಸುವರು. ಮತ್ತು ಈ ಜ್ಞಾನವೆಂಬುದು ಪರಮಾತ್ಮನ ಸ್ವರೂಪಾತ್ಮಕವಾಗಿಯೂ, ಅಂಥ ಸ್ವರೂಪಕ್ಕೆ ಧರ್ಮಭೂತವಾಗಿಯೂ ಇರುವುದು. ಎಂದರೆ—ಒಂದೇ ಜ್ಞಾನವ್ಯಕ್ತಿ ಎರಡು ಅವಸ್ಥೆಗಳನ್ನು ಪಡೆದಿರುವುದೆಂದು ತಿಳಿಯಬಾರದು; ಜ್ಞಾನತ್ವವೆಂಬ ಏಕ ಜಾತಿಗೆ ಆಶ್ರಯಗಳಾಗಿರುವ ಎರಡು ವ್ಯಕ್ತಿಗಳು ನಿಯತವಾಗಿ ಧರ್ಮಧರ್ಮಿಭಾವ ವನ್ನು ಪಡೆದು ನಿತ್ಯಗಳಾಗಿರುವುವೆಂದು ತಿಳಿಯಬೇಕು.

**ಜಗತ್ಪ್ರಕೃತಿಭಾವೋ ಯಃ ಸಾ ಶಕ್ತಿಃ ಪರಿಕೀರ್ತಿತಾ ।**

**ಓ ನಾರದನೆ!** ಇಂಥ ಜ್ಞಾನಗುಣವಿಶಿಷ್ಟನಾದ ಪರಮಾತ್ಮನಲ್ಲಿ ಜಗ ತ್ತನ್ನು ಕುರಿತು ಉಪಾದಾನಕಾರಣತ್ವವೆಂಬ ಯಾವ ಧರ್ಮವುಂಟು ಆ ಧರ್ಮವು ಶಕ್ತಿಯೆಂಬ ಗುಣವೆನಿಸಿಕೊಳ್ಳುವುದೆಂದು ಪ್ರಾಜ್ಞರಿಂದ ಹೇಳಲ್ಪಟ್ಟಿರುವುದು.

**ಕರ್ತೃತ್ವಂ ನಾಮ ಯತ್ತಸ್ಯ ಸ್ವಾತಂತ್ರ್ಯಪರಿಬೃಂಹಿತಂ ।**
**ಐಶ್ವರ್ಯಂ ನಾಮ ತತ್ಪ್ರೋಕ್ತಂ ಗುಣತತ್ತ್ವಾರ್ಥಚಿಂತಕೈಃ ॥**

**ಓ ನಾರದನೆ!** ಇಂಥ ಜ್ಞಾನಶಕ್ತಿವಿಶಿಷ್ಟನಾದ ಪರಮಾತ್ಮನಲ್ಲಿ ನಿರಂ ಕುಶಸ್ವಾತಂತ್ರ್ಯದಿಂದ ಉತ್ತೇಜಿತವಾಗಿರುವ ಜಗತ್ಕರ್ತೃತ್ವವೆಂಬ ಆವ ಧರ್ಮ

ವುಂಟೋ ಎಂದರೆ ಚೇತನಾಚೇತನಾತ್ಮಕವಾದ ಪ್ರಪಂಚವನ್ನು ಕುರಿತು ನಿಮಿತ್ತ ಕಾರಣತ್ವವೆಂಬ ಆವ ಧರ್ಮವುಂಟೋ ಅದು ಐಶ್ವರ್ಯವೆಂಬ ಗುಣವೆನಿಸಿಕೊಳ್ಳುವು ದೆಂದು ಗುಣಚಿಂತಕರಿಂದ ಉಕ್ತವಾಗಿರುವುದು.

**ಶ್ರಮಹಾನಿಸ್ತು ಯಾ ತಸ್ಯ ಸತತಂ ಕುರ್ವತೋ ಜಗತ್ ।**
**ಬಲಂ ನಾಮ ಗುಣಸ್ತಸ್ಯ ಕಥಿತೋ ಗುಣಚಿಂತಕೈಃ ॥**

ಓ ನಾರದನೆ! ಹೀಗೆ ಎಡೆಬಿಡದೆ ಸರ್ವಕಾಲದಲ್ಲಿಯೂ ಜಗದ್ವ್ಯಾಪಾರ ವನ್ನು ನಡಸುತ್ತಲೇ ಇರುವ ಪರಮಾತ್ಮನಲ್ಲಿ ಲೇಶಮಾತ್ರವೂ ಶ್ರಮವಿಲ್ಲದಿರುವಿಕೆ ಯೆಂಬ ಯಾವ ಧರ್ಮವುಂಟೋ ಅದು ಬಲವೆಂಬ ಗುಣವೆನಿಸಿಕೊಳ್ಳುವುದೆಂದು ಗುಣಚಿಂತಕರು ನಿರೂಪಿಸುವರು.

**ತಸ್ಯೋಪಾದಾನಭಾವೇಽಪಿ ವಿಕಾರವಿರಹೋ ಹಿ ಯಃ ।**
**ವೀರ್ಯಂ ನಾಮ ಗುಣಸ್ಸೋಽಯಮಚ್ಯುತತ್ವಾಪರಾಹ್ವಯಂ ॥**

ಓ ನಾರದನೆ! ಚರಾಚರಾತ್ಮಕವಾದ ನಿಖಿಲಪ್ರಪಂಚವನ್ನು ಕುರಿತು ಉಪಾದಾನಕಾರಣಭೂತನಾಗಿದ್ದರೂ, ಅಂಥ ಪರಮಾತ್ಮನಲ್ಲಿ ಉಪಾದಾನತ್ವ ಪ್ರಯುಕ್ತವಾದ ವಿಕಾರವಿಲ್ಲದಿರುವಿಕೆಯೆಂಬ ನಿರ್ವಿಕಾರತ್ವಧರ್ಮವು ಆವುದುಂಟೋ ಅದು ವೀರ್ಯವೆಂಬ ಗುಣವೆನಿಸಿಕೊಳ್ಳುವುದು. ಈ ಗುಣವೇ ಅಚ್ಯುತತ್ವವೆಂಬ ಮತ್ತೊಂದು ಹೆಸರಿನಿಂದಲೂ ವ್ಯವಹರಿಸಲ್ಪಡುವುದು; ಎಂದರೆ ಲೋಕದಲ್ಲಿ ಘಟಾದಿಗಳನ್ನು ಕುರಿತು ಉಪಾದಾನಕಾರಣವೆನಿಸಿಕೊಳ್ಳುವ ಮೃತ್ಪಿಂಡಾದಿಗಳು ವಿಕಾರಿತ್ವವನ್ನು ಅವರ್ಜನೀಯವಾಗಿ ಹೊಂದಿದರೂ, ನಿಖಿಲಜಗತ್ತಿಗೂ ಉಪಾದಾನ ಕಾರಣವೆನಿಸಿಕೊಂಡಿರುವ ಪರಮಾತ್ಮನು ನೈಜವಾದ ಸ್ವಭಾವದಿಂದ ಲೇಶಮಾ ತ್ರವೂ ಚ್ಯುತನಾಗದೆ ಅಜಹತ್ಸ್ವಸ್ವಭಾವನಾಗಿಯೇ ಇರುವನು. ಇವನ ಇಂಥ ಸ್ವಭಾವವೇ ವೀರ್ಯಗುಣವೆನಿಸಿಕೊಳ್ಳುವುದು.

**ಸಹಕಾರ್ಯನಪೇಕ್ಷಾ ಯಾ ತತ್ತೇಜಸ್ಸಮುದಾಹೃತಂ ।**

ಓ ನಾರದನೆ! ಹೀಗೆ ಜಗತ್ಕಾರ್ಯಗಳನ್ನು ನಿರ್ವಹಿಸುವ ವಿಷಯದಲ್ಲಿ ಆವಮತ್ತೊಂದು ಸಹಕಾರಿಯನ್ನೂ ಅಪೇಕ್ಷಿಸದೆ ತಾನೇ ಸಹಕಾರಿಕಾರಣಭೂತ ನಾಗಿಯೂ ಇರುವನೆಂಬ ಅವನ ನೈರಪೇಕ್ಷ್ಯವೆಂಬ ಆವ ಧರ್ಮವುಂಟೋ ಅದು ತೇಜಸ್ಸೆಂಬ ಗುಣವಾಗಿ ಹೇಳಲ್ಪಡುವುದು.

**ಏತೇ ಶಕ್ತ್ಯಾದಯಃ ಪಂಚ ಗುಣಾ ಜ್ಞಾನಸ್ಯ ಕೀರ್ತಿತಾಃ ।**
**ಜ್ಞಾನಮೇವ ಪರಂ ರೂಪಂ ಬ್ರಹ್ಮಣಃ ಪರಮಾತ್ಮನಃ ॥**

ಓ ನಾರದನೆ ! ಶಕ್ತಿ, ಐಶ್ವರ್ಯ, ಬಲ, ವೀರ್ಯ, ತೇಜಸ್ಸು, ಎಂಬ ಈ ಐದು ಗುಣಗಳೂ ಜ್ಞಾನದಿಂದ ಉತ್ಪನ್ನವಾದ ಗುಣವಿಶೇಷಗಳಾಗಿರುವುವು ; ಜ್ಞಾನವೆಂಬುದೊಂದು ಗುಣವೇ ಪರಮಾತ್ಮನಿಗೆ ಅತ್ಯಂತಪ್ರಧಾನವಾದ ಗುಣವಾಗಿರುವುದು.

## ೭೨೩ ಅನುಕೂಲಪ್ರತಿಕೂಲವಿಭಾಗಾನಾದರೇಣ ಜ್ಞಾನಾದೀನಾಂ ಷಣ್ಣಾಂ ಸರ್ವವಿಷಯಕತ್ವಂ

ಅನುಕೂಲರಾದ ಚೇತನರನ್ನು ರಕ್ಷಿಸುವಾಗಲೂ, ಪ್ರತಿಕೂಲರಾದವರನ್ನು ನಿಗ್ರಹಿಸುವಾಗಲೂ ಜ್ಞಾನಶಕ್ತ್ಯಾದಿಗುಣಗಳೊಡನೆ ಕೂಡಿದವನಾಗಿಯೇ ಆ ಆ ಕೆಲಸಗಳನ್ನು ನೆರವೇರಿಸುವುದರಿಂದ ಜ್ಞಾನಶಕ್ತಿಮೊದಲಾದ ಆರು ಗುಣಗಳಿಗೂ ಅನುಕೂಲಪ್ರತಿಕೂಲತಾರತಮ್ಯವಿಲ್ಲದೆ ಸಕಲಚೇತನರೂ ಗುರಿಯಾಗುವರು.

## ೭೨೪ ಗುಣವಿಶೇಷಾಣಾಂ ವಿಶಿಷ್ಯ ತತ್ತಚ್ಚೇತನವಿಶೇಷವಿಷಯಕತ್ವವ್ಯವಸ್ಥಾಪಿ

ಇದಲ್ಲದೆ ಈ ಕಲ್ಯಾಣಗುಣಗಳೊಳಗೆ ಪ್ರತ್ಯೇಕವಾಗಿ ಒಂದೊಂದು ಗುಣಕ್ಕೆ ವಿಶೇಷಾಕಾರದಿಂದ ಆ ಆ ಚೇತನವಿಶೇಷವು ವಿಷಯವಾಗುವುದೆಂಬ ವಿಷಯನಿಯಮವೂ ಉಂಟು. ಹೇಗೆಂದರೆ—

೧. **ಅದರಲ್ಲಿ ಜ್ಞಾನವೆಂಬುದು**—ಚೇತನರಿಗೆ ಯಾವುದು ಹಿತವೆಂಬುದನ್ನೂ, ಯಾವುದು ಅಹಿತವೆಂಬುದನ್ನೂ ನಿರ್ಧರಿಸುವುದಕ್ಕೆ ಅನುಕೂಲವಾದ ಗುಣವಿಶೇಷವಾದುದರಿಂದ ತಮ್ಮ ಹಿತಾಹಿತಗಳನ್ನು ತಾವಾಗಿಯೇ ನಿರ್ಧರಿಸಿಕೊಳ್ಳಲು ಅಸಮರ್ಥರಾಗಿರುವ ಅಜ್ಞರಾದ ಚೇತನರಿಗೆ ಅನುಕೂಲವಾಗಿ ಉಪಯೋಗಿಸಲ್ಪಡುವುದಾಗಿರುವುದು.

೨. **ಶಕ್ತಿಯೆಂಬುದು**—ಅಘಟಿತಘಟನಾಸಾಮರ್ಥ್ಯರೂಪವಾದುದರಿಂದ ತಮ್ಮ ಅನಿಷ್ಟಗಳನ್ನು ಪರಿಹರಿಸಿಕೊಳ್ಳಲೂ, ಇಷ್ಟಗಳನ್ನು ಬರಮಾಡಿಕೊಳ್ಳಲೂ ಶಕ್ತರಲ್ಲದ ಚೇತನರ ಕಾರ್ಯಸಿದ್ಧಿಗೆ ಅನುಕೂಲವಾಗಿ ಉಪಯೋಗಿಸುವುದಾಗಿರುವುದು.

೩. **ಕ್ಷಮೆಯೆಂಬುದು**—ಅಪರಾಧಸಹಿಷ್ಣುತ್ವವೆಂಬ ಗುಣವಿಶೇಷವಾದುದರಿಂದ ತಮ್ಮನ್ನು ಅಪರಾಧಿಗಳನ್ನಾಗಿ ತಿಳಿದು ಹೆದರುತ್ತಿರುವ ಚೇತನರ ಹೆದರಿಕೆಯನ್ನು ಹೋಗಲಾಡಿಸುವುದಕ್ಕೆ ಉಪಯೋಗಿಸುವುದಾಗಿರುವುದು.

೪. **ದಯೆಯೆಂಬುದು**—ಇತರರ ದುಃಖವನ್ನು ಸಹಿಸಲಾರದಿರುವಿಕೆಯೆಂಬ ಗುಣವಿಶೇಷವಾದುದರಿಂದ ಸಂಸಾರಸಾಗರದಲ್ಲಿ ಮುಳುಗಿ ದುಃಖಪಡುತ್ತಿರುವ ಚೇತನರಿಗೆ ಅತ್ಯಂತಾನುಕೂಲವಾಗಿ ಉಪಯೋಗಿಸುವುದಾಗಿರುವುದು.

೫. **ವಾತ್ಸಲ್ಯವೆಂಬುದು**—ಆಗತಾನೆ ಹುಟ್ಟಿದ ಕರುವಿನ ಶರೀರದಲ್ಲಿರುವ ಕೊಳೆಯನ್ನೆಲ್ಲಾ ಅತ್ಯಂತಭೋಗ್ಯಬುದ್ಧಿಯಿಂದ ತಾನು ನೆಕ್ಕಿ ಕರುವನ್ನು ಶುದ್ಧಪಡಿಸುವ ಗೋವಿನ ಗುಣದಂತೆ ಆಶ್ರಿತರಲ್ಲಿರುವ ದೋಷಗಳನ್ನು ಭೋಗ್ಯಬುದ್ಧಿಯಿಂದ ತಾನು ಸ್ವೀಕರಿಸಿ ಅವರನ್ನು ಶುದ್ಧಪಡಿಸುವ ಗುಣವಿಶೇಷವಾದುದರಿಂದ ಅವಿದ್ಯೆ, ಕರ್ಮ, ವಾಸನೆ, ರುಚಿ, ಪ್ರಕೃತಿಸಂಬಂಧ, ಎಂಬ ದೋಷಗಳಿಂದ ತಮ್ಮನ್ನು ದೂಷಿತರನ್ನಾಗಿ ಎಣಿಸುವ ಚೇತನರಿಗೆ ಅತ್ಯಂತಾನುಕೂಲವಾಗಿ ಉಪಯೋಗಿಸುವುದಾಗಿರುವುದು.

೬. **ಶೀಲವೆಂಬುದು**—ಅತ್ಯಂತೋತ್ಕೃಷ್ಟನಾದ ತಾನು ಅತ್ಯಂತನಿಕೃಷ್ಟರಾದವರೊಡನೆ ಶಂಕಾಲೇಶವೂ ಇಲ್ಲದೆ ಕಲೆತು ವಾಸಮಾಡುವ ಸ್ವಭಾವವಿಶೇಷವಾದುದರಿಂದ ತಮ್ಮನ್ನು ಅತ್ಯಂತನಿಕೃಷ್ಟರನ್ನಾಗಿ ಭಾವಿಸಿಕೊಂಡಿರುವ ಚೇತನರಿಗೆ ಅನುಕೂಲವಾಗಿ ಉಪಯೋಗಿಸುವುದಾಗಿರುವುದು.

೭. **ಆರ್ಜವವೆಂಬುದು**—ಮನೋವಾಕ್ಕಾಯಗಳೆಂಬ ಕರಣತ್ರಯದಲ್ಲಿಯೂ ಏಕರೂಪನಾಗಿರುವಿಕೆಯೆಂಬ ಗುಣವಿಶೇಷವಾದುದರಿಂದ ಕರಣತ್ರಯದಲ್ಲಿಯೂ ತಮ್ಮನ್ನು ಕುಟಿಲರೆಂದು ತಿಳಿದುಕೊಂಡಿರುವವರಿಗೆ ಅನುಕೂಲವಾಗಿ ಉಪಯೋಗಿಸುವುದಾಗಿರುವುದು.

೮. **ಸೌಹಾರ್ದವೆಂಬುದು**—ಯಾವಾಗಲೂ ಪರರಿಗೆ ಶುಭವನ್ನೇ ಚಿಂತಿಸುವ ಸ್ವಭಾವವಿಶೇಷವಾದುದರಿಂದ ಸರ್ವಕಾಲದಲ್ಲಿಯೂ ಪರರಿಗೆ ಅಶುಭವನ್ನೇ ಚಿಂತಿಸತಕ್ಕವರೆಂದು ತಮ್ಮನ್ನು ಭಾವಿಸುವ ಚೇತನರಿಗೆ ಅನುಕೂಲವಾಗಿ ಉಪಯೋಗಿಸುವುದಾಗಿರುವುದು.

೯. **ಮಾರ್ದವವೆಂಬುದು**—ಆಶ್ರಿತರ ವಿಶ್ಲೇಷವನ್ನು ಸಹಿಸಲಾರದಿರುವಿಕೆಯೆಂಬ ಮೃದುತ್ವರೂಪವಾದ ಗುಣವಿಶೇಷವಾದುದರಿಂದ ಭಗವದ್ವಿಶ್ಲೇಷದಿಂದ ಭೀತರಾಗಿರುವವರಿಗೆ ಅನುಕೂಲವಾಗಿ ಉಪಯೋಗಿಸುವುದಾಗಿರುವುದು.

೧೦. **ಸೌಲಭ್ಯವೆಂಬುದು**—ಇಂದ್ರಿಯಕ್ಕೆ ಗೋಚರವಾಗತಕ್ಕದುದಲ್ಲವಾದ ಅಪ್ರಾಕೃತದಿವ್ಯಮಂಗಳವಿಗ್ರಹವನ್ನು ಇಂದ್ರಿಯಕ್ಕೆ ಗೋಚರಪಡಿಸುವಿಕೆಯೆಂಬ ಗುಣವಿಶೇಷವಾದುದರಿಂದ ತನ್ನನ್ನು ನೋಡಬೇಕೆಂದು ಅಪೇಕ್ಷಿಸುವ ಚೇತನರಿಗೆ ಅನುಕೂಲವಾಗಿ ಉಪಯೋಗಿಸುವುದಾಗಿರುವುದು. ಇಲ್ಲಿ ಅನುಕ್ತ

ಗಳಾದ ಕಲ್ಯಾಣಗುಣಗಳಿಗೂ ಇದೇರೀತಿಯಲ್ಲಿ ವಿಷಯನಿಯಮವನ್ನು ಬುದ್ಧಿವಂತರಾದವರು ಊಹಿಸಿಕೊಳ್ಳಬೇಕು.

### ೭೨೫. ಪರಸ್ವರೂಪಸ್ಯಾವಾಂತರವಿಭಾಗಪ್ರದರ್ಶನಂ.

ಪಂಚಪ್ರಕಾರವೆಂದು ಪೂರ್ವದಲ್ಲಿ ತೋರಿಸಿದ ಭಗವದ್ರೂಪಗಳೊಳಗೆ ಪರಸ್ವರೂಪದಲ್ಲಿ—ನಿತ್ಯೋದಿತವೆಂದೂ, ಶಾಂತೋದಿತವೆಂದೂ ಎರಡು ಭೇದಗಳುಂಟು. ಅನಂತ-ಗರುಡ-ವಿಷ್ವಕ್ಸೇನರೇ ಮೊದಲಾದ ನಿತ್ಯಸೂರಿಗಳಿಗೂ, ಮುಕ್ತಾತ್ಮರಿಗೂ ಸರ್ವದಾ ಅನುಭಾವ್ಯವಾಗಿರುವ ಪರವಾಸುದೇವಸ್ವರೂಪವು ನಿತ್ಯೋದಿತವೆನಿಸಿಕೊಳ್ಳುವುದು. ಇದು ಒಂದು ಕಾಲದಲ್ಲಿ ಶಾಂತವಾಗುತ್ತಲೂ ಮತ್ತೊಂದುಕಾಲದಲ್ಲಿ ಉದಿಸುತ್ತಲೂ ಇಲ್ಲದೆ ನಿತ್ಯವಾಗಿಯೇ ಉದಿತವಾಗಿರುವುದರಿಂದ ಇದಕ್ಕೆ ನಿತ್ಯೋದಿತವೆಂಬ ಹೆಸರು ಅನ್ವರ್ಥವಾಗಿರುವುದು.

ಇಂಥ ಪರವಾಸುದೇವನಿಂದ ಆವಿರ್ಭವಿಸಿರುವುದಾಗಿಯೂ, ಸಂಕರ್ಷಣವ್ಯೂಹಕ್ಕೆ ಕಾರಣವಾಗಿಯೂ ಇರುವ ವ್ಯೂಹವಾಸುದೇವಸ್ವರೂಪವು ಶಾಂತೋದಿತವೆನಿಸಿಕೊಳ್ಳುವುದು. ಇದು ವ್ಯೂಹಸೃಷ್ಟಿಕಾಲದಲ್ಲಿ ಉದಿತವಾಗಿಯೂ, ಉಳಿದ ಕಾಲದಲ್ಲಿ ಶಾಂತವಾಗಿಯೂ ಇರುವುದರಿಂದ ಇದಕ್ಕೆ ಶಾಂತೋದಿತವೆಂಬ ಹೆಸರು ಅನ್ವರ್ಥವಾಗಿರುವುದು.

### ೭೨೬. ವ್ಯೂಹಸ್ವರೂಪಸ್ಯಾವಾಂತರವಿಭಾಗಕಥನಪೂರ್ವಕಂ ಸಾಮಾನ್ಯತಃ ಕೃತ್ಯನಿರೂಪಣಂ.

ವ್ಯೂಹವೆಂಬುದು—ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಎಂಬ ಭೇದದಿಂದ ಮೂರುವಿಧವಾಗಿರುವುದು. ಸಂಕರ್ಷಣವ್ಯೂಹಕ್ಕೆ ಕಾರಣವಾದ ವಾಸುದೇವನೆಂಬ ಮತ್ತೊಂದು ವ್ಯೂಹವನ್ನೂ ಸೇರಿಸಿಕೊಂಡು ವ್ಯೂಹವು ನಾಲ್ಕುವಿಧವಾಗಿರುವುದೆಂದೂ ಕೆಲವು ಗ್ರಂಥಗಳಲ್ಲಿ ಹೇಳಿರುವುದು. ಇಂಥ ವ್ಯೂಹಕ್ಕೆ—ಪ್ರಪಂಚದ ಸೃಷ್ಟಿಸ್ಥಿತಿಸಂಹಾರಗಳೂ, ಧರ್ಮ, ಅರ್ಥ, ಕಾಮ ಇವುಗಳನ್ನು ಅಪೇಕ್ಷಿಸುವ ಸಂಸಾರಿಚೇತನರ ಸಂರಕ್ಷಣವೂ, ಮೋಕ್ಷವನ್ನು ಅಪೇಕ್ಷಿಸುವ ಉಪಾಸಕರ ಅನುಗ್ರಹವೂ ಕೆಲಸಗಳಾಗಿರುವುವು.

### ೭೨೭ ಪರವಾಸುದೇವೇ ಪೂರ್ಣಷಾಡ್ಗುಣ್ಯಂ, ವ್ಯೂಹೇಷು ದ್ವಯೋರ್ದ್ವಯೋರ್ಗುಣಯೋಃ ಪ್ರಾಕಟ್ಯಂ ಚ

ಉಕ್ತಗಳಾದ ಜ್ಞಾನಾದಿಗುಣಗಳು ಆರೂ ಪರವಾಸುದೇವನಲ್ಲಿಯೂ, ವ್ಯೂಹವಾಸುದೇವನಲ್ಲಿಯೂ, ಪರಿಪೂರ್ಣಗಳಾಗಿರುವುವು. ಎಂದರೆ ಉದ್ಭವಾಭಿ

ಭವಗಳಿಲ್ಲದೆ ಸರ್ವದಾ ಏಕರೂಪವಾಗಿ ಪ್ರಕಾಶಿಸುತ್ತಿರುವುವು. ಪರವಾಸುದೇವ ನಿಗೂ ವ್ಯೂಹವಾಸುದೇವಸಂಕರ್ಷಣಪ್ರದ್ಯುಮ್ನಾನಿರುದ್ಧರಿಗೂ ವಿಗ್ರಹಮಾತ್ರವೇ ಭಿನ್ನಭಿನ್ನವಾಗಿರುವುದಲ್ಲದೆ ಆತ್ಮಭೇದವಿಲ್ಲ. ಆದುದರಿಂದಲೇ ಪರವಾಸುದೇವಾತ್ಮ ನಲ್ಲಿ ಪೂರ್ಣಗಳಾಗಿರುವ ಜ್ಞಾನಾದಿಗಳಾದ ಆರು ಗುಣಗಳೂ ಸಂಕರ್ಷಣ, ಪ್ರದ್ಯುಮ್ನಾನಿರುದ್ಧರಲ್ಲಿಯೂ ಪೂರ್ಣಗಳಾಗಿಯೇ ಇರುವುವಲ್ಲದೆ ಯಾವಭಾಗ ದಲ್ಲಿಯೂ ನ್ಯೂನವಾಗಿಲ್ಲ; ಈ ಮೂವರಲ್ಲಿ ಅವರವರು ನಿರ್ವಹಿಸುವ ಕೆಲಸಗಳಿಗೆ ಅನುಕೂಲವಾಗಿ ಒಬ್ಬೊಬ್ಬರಲ್ಲಿ ಎರಡೆರಡು ಗುಣಗಳು ಪ್ರಾಕಟ್ಯಾವಸ್ಥೆಯನ್ನು ಹೊಂದಿ ಪ್ರಕಾಶಿಸುವುದರಿಂದ ಉಳಿದ ನಾಲ್ಕು ಗುಣಗಳು ಪ್ರಕಾಶಕ್ಕೆ ಬಾರದೆ ಅಸ್ಪಷ್ಟಗಳಾಗಿರುವುವು.

## ೭೨೮ ತತ್ರ ಜ್ಞಾನಬಲವಿಶಿಷ್ಟಸ್ಯ ಸಂಕರ್ಷಣಸ್ಯ ಕೃತ್ಯವಿಶೇಷ ಪ್ರಪಂಚನಂ

ಅವರಲ್ಲಿ ಸಂಕರ್ಷಣವಿಗ್ರಹಧಾರಿಯಾದ ಪರಮಾತ್ಮನು—ಎಲ್ಲಾ ಗುಣಗಳೂ ತನ್ನಲ್ಲಿ ಇದ್ದರೂ ತಾನು ನಿರ್ವಹಿಸುವ ಶಾಸ್ತ್ರಪ್ರದಾನಸಂಹಾರಗಳೆಂಬ ಕೆಲಸಗಳಿಗೆ ಅನುಕೂಲವಾಗಿ ಜ್ಞಾನ, ಬಲ, ಎಂಬ ಎರಡು ಗುಣಗಳ ಉನ್ಮೇಷವನ್ನು ಪಡೆದವನಾಗಿ ಪ್ರಕೃತಿತತ್ತ್ವದಲ್ಲಿ ಅಡಗಿರುವ ಜೀವತತ್ತ್ವವನ್ನು ಆಕ್ರಮಿಸಿದವ ನಾಗಿ ನಾಮರೂಪವಿಭಾಗಕ್ಕೆ ಅನರ್ಹವಾಗಿರುವ ಅಂಥ ಜೀವತತ್ತ್ವವನ್ನು ನಾಮರೂಪವಿಭಾಗಕ್ಕೆ ಅರ್ಹವಾಗುವಂತೆ ಪ್ರಕೃತಿತತ್ತ್ವದಿಂದ ಹೊರಪಡಿಸಿ ಅನಂತರದಲ್ಲಿ ಪ್ರದ್ಯುಮ್ನಾವಸ್ಥೆಯನ್ನು ಹೊಂದಿದವನಾಗಿ ಜ್ಞಾನಗುಣದಿಂದ ಶಾಸ್ತ್ರಪ್ರದಾನವನ್ನೂ, ಬಲಗುಣದಿಂದ ಜಗತ್ಸಂಹಾರವನ್ನೂ ನಡಸುವನು.

## ೭೨೯ ಐಶ್ವರ್ಯ-ವೀರ್ಯಗುಣವಿಶಿಷ್ಟಸ್ಯ ಪ್ರದ್ಯುಮ್ನಸ್ಯ ಕೃತ್ಯವಿಶೇಷ ಪ್ರಪಂಚನಂ

ಪ್ರದ್ಯುಮ್ನವಿಗ್ರಹಧಾರಿಯಾದ ಪರಮಾತ್ಮನು— ಎಲ್ಲಾ ಗುಣ ಗಳೂ ತನ್ನಲ್ಲಿ ಇದ್ದರೂ ತಾನು ನಿರ್ವಹಿಸುವ ಧರ್ಮೋಪದೇಶಶುದ್ಧವರ್ಗಸೃಷ್ಟಿ ಗಳೆಂಬ ಕೆಲಸಗಳಿಗೆ ಅನುಕೂಲವಾಗಿ ಐಶ್ವರ್ಯವೀರ್ಯಗಳೆಂಬ ಎರಡು ಗುಣಗಳ ಉನ್ಮೇಷವನ್ನು ಪಡೆದವನಾಗಿ ಜ್ಞಾನಪ್ರಸರಣಕ್ಕೆ ದ್ವಾರವಾದ ಮನಸ್ತತ್ತ್ವ ವನ್ನು ಆಕ್ರಮಿಸಿದವನಾಗಿ ಸಂಕರ್ಷಣನಿಂದ ಪ್ರದತ್ತನಾದ ಶಾಸ್ತ್ರದ ಅರ್ಥಾನು ಷ್ಠಾನರೂಪವಾದ ಧರ್ಮೋಪದೇಶವನ್ನು ವೀರ್ಯಗುಣದಿಂದಲೂ, ಶುದ್ಧವರ್ಗ ಸೃಷ್ಟಿಯನ್ನು ಐಶ್ವರ್ಯಗುಣದಿಂದಲೂ, ನಡಸುವನು.

## ೭೩೦. ಶುದ್ಧವರ್ಗಸೃಷ್ಟಿಸ್ವರೂಪನಿರೂಪಣಂ.

ಶುದ್ಧವರ್ಗಸೃಷ್ಟಿಯೆಂದರೆ- ಬ್ರಾಹ್ಮಣ-ಕ್ಷತ್ರಿಯ-ವೈಶ್ಯ-ಶೂದ್ರರೆಂಬನಾಲ್ಕು ವರ್ಣಗಳ ಉತ್ಪತ್ತಿಗೆ ಕಾರಣಭೂತರಾಗಿರುವ ಸ್ತ್ರೀಪುಂರೂಪಿಗಳಾದ ನಾಲ್ಕು ಮಿಥುನಗಳನ್ನು ಪ್ರದ್ಯುಮ್ನರೂಪಿಯಾದ ಪರಮಾತ್ಮನು ತನ್ನ ಮುಖ, ಬಾಹು, ಊರು, ಪಾದ ಈ ಸ್ಥಾನಗಳಿಂದ ಸೃಷ್ಟಿಸುವನು. ಈ ನಾಲ್ಕು ಮಿಥುನಗಳಿಗೆ ಮನುವೆಂದು ಹೆಸರು. ಮನುವೆಂಬ ಈ ದಂಪತಿಗಳು ನಾಲ್ವರೂ ಪ್ರತ್ಯೇಕವಾಗಿ ನೂರು ನೂರು ಮಿಥುನಗಳನ್ನು ಸೃಷ್ಟಿಸುವರು. ಈ ನಾನೂರು ದಂಪತಿಗಳಿಗೂ ಮಾನವರೆಂದು ಹೆಸರು. ಮಾನವರೆಂಬ ಈ ನಾನೂರು ದಂಪತಿಗಳೂ ಪ್ರತ್ಯೇಕ ವಾಗಿ ನೂರು ನೂರು ಮಿಥುನಗಳನ್ನು ಸೃಷ್ಟಿಸುವರು. ಇವರಿಗೆ ಮಾನವಮಾನ ವರೆಂದು ಹೆಸರು. ಮಾನವಮಾನವರೆಂಬ ಈ ನಲವತ್ತುಸಾವಿರ ದಂಪತಿಗಳೂ ಪ್ರತ್ಯೇಕವಾಗಿ ನೂರು ನೂರು ಮಿಥುನಗಳನ್ನು ಸೃಷ್ಟಿಸುವರು. ಹೀಗೆ ಸೃಷ್ಟರಾದ ಈ ನಲವತ್ತು ಲಕ್ಷದಂಪತಿಗಳಿಗೆ ಮನುಷ್ಯರೆಂದು ಹೆಸರು. ಹೀಗೆ ಮನುಗಳು, ಮಾನವರು, ಮಾನವಮಾನವರು, ಮನುಷ್ಯರು ಎಂಬ ಈ ನಾಲ್ಕು ಪಂಗಡದವರೂ ಸೇರಿ ನಲವತ್ತುಲಕ್ಷದ ನಲವತ್ತುಸಾವಿರದ ನಾನೂರ ನಾಲ್ಕು ದಂಪತಿಗಳಾಗಿರು ವರು. ಇವರೆಲ್ಲರೂ ಈರ್ಷ್ಯೆ-ಅಸೂಯೆ ಮೊದಲಾದ ಆತ್ಮದೋಷಗಳಿಲ್ಲದವರಾ ಗಿಯೂ, ಶುದ್ಧಸತ್ತ್ವಗುಣನಿಷ್ಠರಾಗಿಯೂ, ಮರಣಾಂತವಾಗಿ ದೇವತಾಂತರ ಭಜನೆಯನ್ನು ಮಾಡದವರಾಗಿಯೂ, ಫಲಾಪೇಕ್ಷೆಯಿಲ್ಲದೆ ಭಗವದಾರಾಧನರೂಪ ವಾಗಿ ಶಾಸ್ತ್ರೀಯಕರ್ಮಗಳನ್ನು ಆಚರಿಸುವವರಾಗಿಯೂ, ವೇದಾಂತಗಳಲ್ಲಿ ಪಾರಂಗತರಾಗಿಯೂ, ದ್ವಾದಶಾಕ್ಷರವಿದ್ಯೆಯನ್ನು ಅವಲಂಬಿಸಿ ಅಧ್ಯಾತ್ಮಚಿಂತೆ ಯನ್ನು ಮಾಡುವವರಾಗಿಯೂ, ವ್ಯೂಹರೂಪಿಯಾದ ಭಗವಂತನ ಪರಿಚರ್ಯೆಯಲ್ಲಿ ಯಾವಾಗಲೂ ನಿರತರಾಗಿಯೂ, ಕೊನೆಯಲ್ಲಿ ಭಗವಚ್ಚರಣಾರವಿಂದಪ್ರಾಪ್ತಿ ಯೆಂಬ ಮೋಕ್ಷಸಾಮ್ರಾಜ್ಯವನ್ನು ಪಡೆಯುವವರಾಗಿಯೂ ಇರುವರು. ಇವರೇ ಶುದ್ಧವರ್ಗವೆನಿಸಿಕೊಳ್ಳುವರಾದುದರಿಂದ ಇವರುಗಳ ಸೃಷ್ಟಿ ಶುದ್ಧವರ್ಗಸೃಷ್ಟಿ ಯೆನಿಸಿಕೊಳ್ಳುವುದು.

## ೭೩೧ ಶಕ್ತಿತೇಜೋವಿಶಿಷ್ಟಸ್ಯಾನಿರುದ್ಧಸ್ಯ ಕೃತ್ಯವಿಶೇಷ ಪ್ರಪಂಚನಂ.

ಅನಿರುದ್ಧವಿಗ್ರಹಧಾರಿಯಾದ ಪರಮಾತ್ಮನು—ಎಲ್ಲಾ ಗುಣಗಳೂ ತನ್ನಲ್ಲಿ ಇದ್ದರೂ ತಾನು ನಿರ್ವಹಿಸುವ ಜಗದ್ಭರಣತತ್ತ್ವಬೋಧನಗಳೆಂಬ ಕೆಲಸ

ಗಳಿಗೆ ಅನುಕೂಲವಾಗಿ ಶಕ್ತಿತೇಜಸ್ಸುಗಳೆಂಬ ಎರಡು ಗುಣಗಳ ಉನ್ಮೇಷವನ್ನು ಪಡೆದವನಾಗಿ ಅಹಂಕಾರತತ್ತ್ವವನ್ನು ಆಕ್ರಮಿಸಿ ಶಕ್ತಿಗುಣದಿಂದ ಜಗದ್ಭರಣ ವನ್ನು ಎಂದರೆ ಜಗತ್ತಿನ ಧಾರಣೆಯನ್ನೂ ರಕ್ಷಣೆಯನ್ನೂ, ತೇಜೋಗುಣದಿಂದ ತತ್ತ್ವಜ್ಞಾನಪ್ರದಾನವನ್ನೂ, ಕಾಲಸೃಷ್ಟಿಯನ್ನೂ, ಮಿಶ್ರವರ್ಗಸೃಷ್ಟಿಯನ್ನೂ ನಡಸುವನು.

## ೭೩೨. ಮಿಶ್ರವರ್ಗಸೃಷ್ಟಿಸ್ವರೂಪನಿರೂಪಣಂ.

ಮಿಶ್ರವರ್ಗಸೃಷ್ಟಿಯೆಂದರೆ—ಅನಿರುದ್ಧನಿಂದ ಸೃಷ್ಟಿಸಲ್ಪಟ್ಟ ಚತುರ್ಮುಖ ಬ್ರಹ್ಮನ ಮುಖ, ಬಾಹು, ಊರು, ಪಾದ ಈ ಸ್ಥಾನಗಳಿಂದ ಬ್ರಾಹ್ಮಣಾದಿ ವರ್ಣಗಳು ಹೊರಡುವುವು. ಇವರು ರಜೋಮಾರ್ಗನಿಷ್ಠರಾಗಿಯೂ, ಆದುದ ರಿಂದಲೇ ನಾನಾಫಲಸಾಧನಗಳಾದ ವೈದಿಕಕರ್ಮಗಳಲ್ಲಿ ನಿರತರಾಗಿಯೂ, ವೇದದ ಪೂರ್ವಭಾಗಗಳಲ್ಲಿರುವ ಅರ್ಥವಾದವಾಕ್ಯಗಳಲ್ಲಿ ಮೋಹಗೊಳ್ಳುವವರಾಗಿಯೂ, ಸರ್ವೇಶ್ವರನನ್ನು ಬಿಟ್ಟು ಅಗ್ನಿ, ಇಂದ್ರ, ಇವರೇ ಮೊದಲಾದ ದೇವತೆಗಳನ್ನೇ ಆರಾಧನೀಯರನ್ನಾಗಿ ತಿಳಿದುಕೊಂಡವರಾಗಿಯೂ, ಸರ್ವೇಶ್ವರನನ್ನು ಅರಿಯದವ ರಾಗಿಯೂ, ಅವರಲ್ಲಿಯೂ ಕೆಲವರು ತಮೋಗುಣದಿಂದ ಅತ್ಯಂತದೂಷಿತರಾಗಿ ಭಗವನ್ನಿಂದೆಯನ್ನು ಮಾಡುವವರಾಗಿಯೂ, ಆರಾಧನೀಯನಾಗಿಯೂ ನಿಯಂತಾ ವಾಗಿಯೂ ಇರುವ ಸರ್ವೇಶ್ವರನನ್ನು ಅರಿಯದೆ ಬಿಚ್ಚಿದ ಕೇಶಪಾಶದಂತೆ ವಿಪ್ರ ಕೀರ್ಣವಾಗಿರುವ ವೇದವಾದಗಳಲ್ಲಿ ಮನಸ್ಸನ್ನು ಇಟ್ಟು ಪರಸ್ಪರವಾಗಿ ಅದೇ ವಿಷ ಯಗಳನ್ನು ಕುರಿತು ಸಂಲಾಪಿಸುತ್ತಿರುವವರಾಗಿಯೂ, ಆದುದರಿಂದಲೇ ಭಗವ ದ್ಜ್ಞಾನಭಕ್ತಿರಹಿತರಾಗಿ ಸ್ವರ್ಗಾದಿಸುಖಗಳಲ್ಲಿಯೇ ರಮಿಸುತ್ತ ತಮ್ಮ ತಮ್ಮ ಕರ್ಮಗಳ ಫಲವು ಮುಗಿದಮೇಲೆ ಅಧೋಗತಿಯನ್ನು ಹೊಂದಿ ಕಾಮೋಪಭೋಗ ದಲ್ಲಿಯೇ ಮನಸಗೊಂಡವರಾಗಿ ಜನ್ಮಜರಾಮರಣಪರಂಪರೆಗಳನ್ನು ಹೊಂದುತ್ತ ಸಂಸಾರಮಾರ್ಗದಲ್ಲಿಯೇ ಅಲೆದಾಡುತ್ತಿರುವವರಾಗಿಯೂ, ಇರುವರು. ಇವರೇ ಮಿಶ್ರವರ್ಗವೆನಿಸಿಕೊಳ್ಳುವರಾದುದರಿಂದ ಇವರುಗಳ ಸೃಷ್ಟಿ ಮಿಶ್ರವರ್ಗಸೃಷ್ಟಿ ಯೆನಿಸಿಕೊಳ್ಳುವುದು.

## ೭೩೩. ಅನಿರುದ್ಧಸ್ಯ ಮಿಶ್ರವರ್ಗಸೃಷ್ಟೌ ಕಾರಣವಿಶೇಷಕಥನಂ.

ಪೂಜ್ಯರೆ? ಅತ್ಯಂತದಯಾಳುವಾದ ಅನಿರುದ್ಧನು ಪ್ರದ್ಯುಮ್ನನಂತೆ ಶುದ್ಧ ಸೃಷ್ಟಿಯನ್ನೇ ಮಾಡದೆ ಪ್ರಜೆಗಳ ನಾನಾದುಃಖಕ್ಕೆ ಆಕರವಾಗಿರುವ ಇಂಥ ಮಿಶ್ರಸೃಷ್ಟಿಯನ್ನು ಮಾಡಲು ಕಾರಣವೇನು?

ಮಿಶ್ರವರ್ಗಸೃಷ್ಟಿಗೆ ಇದು ಕಾರಣವಾಗಿರುವುದು—ಅನಾದಿಯಾದ ಅಜ್ಞಾನದಿಂದ ದೂಷಿತರಾಗಿಯೂ, ನಿಷಿದ್ಧಕರ್ಮಗಳನ್ನು ಮಾಡುತ್ತಲೂ, ವಿಹಿತಕರ್ಮಗಳನ್ನು ಬಿಡುತ್ತಲೂ, ಅಹಂಕಾರದಿಂದ ಮತ್ತರಾಗಿಯೂ ಇರುವ ಅಪರಾಧಿಚೇತನರನ್ನು ನೋಡಿ ಸರ್ವೇಶ್ವರನು ಗ್ರಂಥಿಚಿಕಿತ್ಸೆಯನ್ನು ಮಾಡುವ ವೈದ್ಯನಂತೆ ಇವರ ಹಿತಕ್ಕಾಗಿ ಮಿಶ್ರವರ್ಗಸೃಷ್ಟಿಯನ್ನು ಮಾಡುವನು.

ಮತ್ತು—ಎಲ್ಲರೂ ಶುದ್ಧಸೃಷ್ಟಿಯವರ ಮಾರ್ಗವನ್ನೇ ಅವಲಂಬಿಸಿ ಶುದ್ಧಸತ್ತ್ವನಿಷ್ಠರಾಗಿಯೂ, ಭಗವದ್ಭಕ್ತಿನಿರತರಾಗಿಯೂ, ಭಗವದಾರಾಧನತತ್ಪರರಾಗಿಯೂ, ಭಗವದ್ಧ್ಯಾನ-ಭಗವನ್ನಮಸ್ಕಾರ-ಭಗವತ್ಸಂಕೀರ್ತನಗಳಲ್ಲಿಯೇ ನಿಷ್ಠರಾಗಿಯೂ, ಜಿತೇಂದ್ರಿಯರಾಗಿಯೂ, ಭಕ್ತಿಯ ಅಂತಿಮಾವಸ್ಥೆಯಾದ ಪರಮಭಕ್ತಿಯನ್ನು ಹೊಂದಿದವರಾಗಿಯೂ, ಇದ್ದು ಕೊನೆಗೆ ಅಪುನರಾವೃತ್ತಿಯಾದ ವೈಕುಂಠಸ್ಥಾನವನ್ನೇ ಪಡೆಯುತ್ತಿರಲು ಕ್ರಮಕ್ರಮವಾಗಿ ಈ ಸೃಷ್ಟಿಮಾರ್ಗವೇ ಕ್ಷೀಣದಶೆಯನ್ನು ಹೊಂದುವುದಕ್ಕೆ ಉಪಕ್ರಮಿಸಿ ನರಕಕ್ಕೆ ಹೋಗುವವರೇ ಇಲ್ಲವಾಗಿಹೋದುದರಿಂದ ಯಮಲೋಕವೆಲ್ಲಾ ಹುಲ್ಲುಬೆಳೆದು ಅರಣ್ಯವಾಗುತ್ತಾ ಬರಲು ಇದನ್ನು ಕಂಡ ಸರ್ವೇಶ್ವರನು ತನ್ನ ಲೀಲಾರಸಕ್ಕೆ ಭಂಗಬಾರದಿರುವುದಕ್ಕಾಗಿ ಮಿಶ್ರವರ್ಗಸೃಷ್ಟಿಯನ್ನು ನಡಸುವನು.

## ೭೩೪ ವ್ಯೂಹಾದ್ವ್ಯೂಹಾಂತರೋತ್ಪತ್ತಿಃ, ತತ್ಕಾರ್ಯವಿಶೇಷನಿರೂಪಣಂ ಚ

ವಾಸುದೇವಸಂಕರ್ಷಣಪ್ರದ್ಯುಮ್ನಾನಿರುದ್ಧರೆಂಬ ಈ ನಾಲ್ಕು ವ್ಯೂಹಗಳಲ್ಲಿ ಕ್ರಮವಾಗಿ ಒಬ್ಬೊಬ್ಬರಿಂದ ಮೂವರು ಮೂವರಂತೆ ಕೇಶವಾದಿದ್ವಾದಶಮೂರ್ತಿಗಳು ಅವತರಿಸುವರು. ಇವರಿಗೆ ಮೂರ್ತ್ಯಂತರವೆಂದೂ ವ್ಯೂಹಾಂತರವೆಂದೂ ಹೆಸರು ಉಂಟು. ಈ ದ್ವಾದಶಮೂರ್ತಿಗಳೂ ಉಪಾಸಕರ ಶರೀರದಲ್ಲಿ ಲಲಾಟಮೊದಲಾದ ಸ್ಥಾನಗಳಲ್ಲಿ ಇದ್ದುಕೊಂಡು ಅವರ ಶರೀರವನ್ನು ರಕ್ಷಿಸುತ್ತ ಅವರಿಗೆ ಉಂಟಾಗಬಹುದಾದ ಸಕಲಸಂತಾಪಗಳನ್ನೂ ಶಮನಮಾಡುವವರಾಗಿರುವರು.

## ೭೩೫ ಅಥ ವಿಭವಸ್ವರೂಪಸ್ಯಾವಾಂತರವಿಭಾಗಾದಿಪ್ರಪಂಚನಂ

ಹೀಗೆ—ಸರ್ವೇಶ್ವರನ ಐದುಸ್ವರೂಪಗಳೊಳಗೆ ಪರಸ್ವರೂಪವನ್ನೂ ವ್ಯೂಹಸ್ವರೂಪವನ್ನೂ ಯಥೋಚಿತವಾಗಿ ವಿವರಿಸಿದೆವು. ವ್ಯೂಹಪ್ರಸಂಗದಿಂದ ವ್ಯೂಹಾಂತರವನ್ನೂ ತೋರಿಸಿದೆವು. ಇನ್ನು ವಿಭವವನ್ನು ಪರೀಕ್ಷಿಸುವೆವು.

ವಿಭವವೆಂದರೆ—ದೇವತಿರ್ಯಙ್ಮನುಷ್ಯಸ್ಥಾವರಗಳಿಗೆ ಸಜಾತೀಯನಾಗಿ ಸರ್ವೇಶ್ವರನು ಅವತರಿಸುವಿಕೆ. ಇಂಥ ವಿಭವವು ಇಷ್ಟೇ ಇರುವುದೆಂದು ಲೆಕ್ಕ ಮಾಡಿ ನಿಷ್ಕರ್ಷಿಸುವುದಕ್ಕೆ ಅಶಕ್ಯವಾಗಿದ್ದರೂ ಗೌಣವೆಂಬುದಾಗಿಯೂ ಮುಖ್ಯವೆಂಬುದಾಗಿಯೂ ಎಂದರೆ ಅಶ್ರೇಷ್ಠವೆಂಬುದಾಗಿಯೂ ಶ್ರೇಷ್ಠವೆಂಬುದಾಗಿಯೂ ಎರಡು ಬಗೆಯಾಗಿರುವುದೆಂದು ಹೇಳಬಹುದು.

ಗೌಣವೆಂಬುದು ಆವೇಶಾವತಾರವಾಗಿ ಅಶ್ರೇಷ್ಠವೆನಿಸಿಕೊಳ್ಳುವುದು. ಮುಖ್ಯವೆಂಬುದು ಸಾಕ್ಷಾದವತಾರವಾಗಿ ಶ್ರೇಷ್ಠವೆನಿಸಿಕೊಳ್ಳುವುದು. ಈ ಆವೇಶಾವತಾರವು ಸ್ವರೂಪಾವೇಶವೆಂದೂ ಶಕ್ತ್ಯಾವೇಶವೆಂದೂ ಎರಡು ವಿಧವಾಗಿರುವುದು. ಪರಶುರಾಮನೇ ಮೊದಲಾದ ಚೇತನರ ಶರೀರದಲ್ಲಿ ತನ್ನ ಅಸಾಧಾರಣವಾದ ದಿವ್ಯಮಂಗಳ ವಿಗ್ರಹದೊಡನೆ ಆವೇಶಮಾಡಿ ನಿಲ್ಲುವಿಕೆ ಸ್ವರೂಪಾವೇಶವೆನಿಸಿಕೊಳ್ಳುವುದು. ಸೃಷ್ಟಿಸಂಹಾರಮೊದಲಾದ ಕಾರ್ಯಗಳು ಪ್ರಸ್ತುತಗಳಾದ ಸಮಯದಲ್ಲಿ ಬ್ರಹ್ಮರುದ್ರಮೊದಲಾದ ಚೇತನರಲ್ಲಿ ತನ್ನ ಶಕ್ತಿಮಾತ್ರವನ್ನು ಸ್ಥಾಪಿಸಿ ಪ್ರಕಾಶಿಸುವಿಕೆ ಶಕ್ತ್ಯಾವೇಶವೆನಿಸಿಕೊಳ್ಳುವುದು.

## ೭೩೬. ಮುಖ್ಯಾವತಾರಾಣಾಂ ಸರ್ವೇಷಾಮಜಹತ್ಸ್ವಸ್ವಭಾವತಯಾ ಮುಮುಕ್ಷೂಪಾಸ್ಯತ್ವಂ.

ಇವುಗಳಲ್ಲಿ ಮುಖ್ಯಗಳೆನಿಸಿಕೊಂಡ ಸಾಕ್ಷಾದವತಾರಗಳೆಲ್ಲವೂ ಅಪ್ರಾಕೃತವಾದ ದಿವ್ಯಮಂಗಳವಿಗ್ರಹದೊಡನೆ ಕೂಡಿದುವುಗಳಾಗಿಯೂ, ನೈಜವಾದ ಸ್ವಭಾವವನ್ನು ಬಿಡದಿರತಕ್ಕುವುಗಳಾಗಿಯೂ ಇದ್ದುಕೊಂಡು, ದೀಪದಿಂದ ಹುಟ್ಟಿದ ಮತ್ತೊಂದು ದೀಪದಂತೆ ಆವಿರ್ಭವಿಸಿದ ಅವತಾರಗಳಾದುದರಿಂದ ಕಾರಣವಾದ ಪರಸ್ವರೂಪಕ್ಕಿಂತಲೂ ಈಷನ್ಮಾತ್ರವೂ ವ್ಯತ್ಯಾಸವನ್ನು ಪಡೆದವಲ್ಲವಾದಪ್ರಯುಕ್ತ ಮುಮುಕ್ಷುಗಳೆಲ್ಲರಿಗೂ ಉಪಾಸನೀಯಗಳಾಗಿರುವುವು.

## ೭೩೭ ಗೌಣಾವತಾರಾಣಾಮಹಂಕಾರಮಿಶ್ರಜೀವಗರ್ಭಿತತ್ವಾದನುಪಾಸ್ಯತ್ವಂ

ಸೃಷ್ಟಿಕಾರ್ಯದಲ್ಲಿ ಅಧಿಕೃತನಾದ ಬ್ರಹ್ಮನೂ, ಸಂಹಾರದಲ್ಲಿ ಅಧಿಕೃತರಾದ ಅಗ್ನಿರುದ್ರರೂ, ಜಗತ್ತನ್ನು ಮೋಹಗೊಳಿಸುವಿಕೆಯೆಂಬ ಕಾರ್ಯದಲ್ಲಿ ಅಧಿಕೃತನಾದ ಬುದ್ಧನೂ, ಅಖಂಡವಾದ ವೇದದ ವಿಭಾಗಕಾರ್ಯದಲ್ಲಿ ಅಧಿಕೃತನಾದ ವ್ಯಾಸಮಹರ್ಷಿಯೂ, ಧನುರ್ಧಾರಿಗಳೊಳಗೆ ಶ್ರೇಷ್ಠನಾದ ಅರ್ಜುನನೂ, ಕಾರ್ತವೀರ್ಯಾರ್ಜುನನೂ, ದುಷ್ಟರಾದ ಕ್ಷತ್ರಿಯರ ನಿಗ್ರಹಕಾರ್ಯದಲ್ಲಿ ಅಧಿಕೃತನಾದ ಪರಶು

ಕಾಮನೂ, ಔದಾರ್ಯಗುಣದಲ್ಲಿ ಪ್ರಖ್ಯಾತನಾಗಿ ಧನದನೆಂಬ ಹೆಸರನ್ನು ಪಡೆದ ಕುಬೇರನೂ, ಮತ್ತು-ಕಕುತ್ಸ್ಥ-ಮುಚುಕುಂದ-ಪೃಥು-ಆದಿಭರತ ಇವರೇ ಮೊದಲಾದ ಗೌಣಪ್ರಾದುರ್ಭಾವಗಳೆಲ್ಲಾ ಅಹಂಕಾರಮಿಶ್ರರಾದ ಜೀವರುಗಳನ್ನು ಆವೇಶಿಸಿ ಕೊಂಡು ಪ್ರಾದುರ್ಭವಿಸಿದ ಅವತಾರಗಳಾದುದರಿಂದ ಮುಮುಕ್ಷುಗಳ ಉಪಾಸನೆಗೆ ಅರ್ಹಗಳಾಗಲಾರವು.

## ೭೩೮. ಅನಂತೇಷ್ವಪಿ ವಿಭವೇಷು ಏಕೋನಚತ್ವಾರಿಂಶ ದವತಾರಾಣಾಂ ಪ್ರಾಧಾನ್ಯಂ.

ವಿಭವವೆನಿಸಿಕೊಂಡ ಅವತಾರಗಳು ಅಸಂಖ್ಯಾತಗಳಾಗಿದ್ದರೂ ಅವುಗಳೊಳಗೆ ಮೂವತ್ತೊಂಬತ್ತು ಅವತಾರಗಳು ಪ್ರಧಾನಗಳಾಗಿರುವುವೆಂದು ಅಹಿರ್ಬುಧ್ನ್ಯ ಸಂಹಿತೆಯಲ್ಲಿ ತೋರಿಸಲ್ಪಟ್ಟಿರುವುವು. ಬುಭುತ್ಸುಗಳಿಗೆ ಅವುಗಳನ್ನು ತಿಳಿಯಪಡಿಸುವುದರ ಮೂಲಕ ಅವರ ಜಿಹ್ವೆಯಿಂದ ಈ ಭಗವನ್ನಾಮಗಳ ಸಂಕೀರ್ತನೆಯನ್ನು ಮಾಡಿಸುವುದಕ್ಕಾಗಿ ಆ ಮೂವತ್ತೊಂಬತ್ತನ್ನೂ ಇಲ್ಲಿ ತೋರಿಸಿ ನಮ್ಮ ಜಿಹ್ವೆಯನ್ನೂ ಪವಿತ್ರಪಡಿಸುವೆವು.

"ಪದ್ಮನಾಭ ೧ ಧ್ರುವ ೨ ಅನಂತ ೩ ಶಕ್ತ್ಯಾತ್ಮಾ ೪ ಮಧುಸೂಧನ ೫ ವಿದ್ಯಾಧಿದೇವ ೬ ಕಪಿಲ ೭ ವಿಶ್ವರೂಪ ೮ ವಿಹಂಗಮ ೯ ಕ್ರೋಡಾತ್ಮಾ ೧೦ ಬಡಬಾವಕ್ತ್ರ ೧೧ ಧರ್ಮ ೧೨ ವಾಗೀಶ್ವರ ೧೩ ಏಕಾಂಭೋನಿಧಿಶಾಯಿ ೧೪ ಕೂರ್ಮ ೧೫ ವರಾಹ ೧೬ ನಾರಸಿಹ್ಮ ೧೭ ಪೀಯೂಷಾಹರಣ ೧೮ ಶ್ರೀಪತಿ ೧೯ ಅಮೃತಾಧಾರಕ ೨೦ ರಾಹುಜಿತ್ ೨೧ ಕಾಲನೇಮಿಘ್ನ ೨೨ ಪಾರಿಜಾತಹರಣ ೨೩ ಲೋಕನಾಥ ೨೪ ಶಾಂತಾತ್ಮಾ ೨೫ ದತ್ತಾತ್ರೇಯ ೨೬ ನ್ಯಗ್ರೋಧಶಾಯಿ ೨೭ ಏಕಶೃಂಗತನು (ಮತ್ಸ್ಯ) ೨೮ ವಾಮನ ೨೯ ತ್ರಿವಿಕ್ರಮ ೩೦ ನರ ೩೧ ನಾರಾಯಣ ೩೨ ಹರಿ ೩೩ ಕೃಷ್ಣ ೩೪ ಪರಶುರಾಮ ೩೫ ಶ್ರೀರಾಮ ೩೬ ವೇದವಿತ್ ೩೭ ಕಲ್ಕಿ ೩೮ ಪಾತಾಳಶಾಯಿ ೩೯"

ಆದರೆ ವಿಷ್ವಕ್ಸೇನಸಂಹಿತೆಯಲ್ಲಿ ಮೂವತ್ತಾರು ಅವತಾರಗಳೇ ಪ್ರಧಾನಗಳೆಂದು ಹೇಳಿರುವುದರಿಂದ ಅದಕ್ಕೂ ಇದಕ್ಕೂ ವಿರೋಧವುಂಟಾದೀತೆಂದು ಚಿಂತಿಸಬಾರದು. ಇಲ್ಲಿ ತೋರಿಸಿದ ಮೂವತ್ತೊಂಬತ್ತು ಅವತಾರಗಳೊಳಗೆ— ಏಳು ಇಪ್ಪತ್ತಾರು ಮೂವತ್ತೈದನೆಯ ಅವತಾರಗಳಾದ ಕಪಿಲದತ್ತಾತ್ರೇಯ ಪರಶುರಾಮಾವತಾರಗಳು ಆವೇಶಾವತಾರಗಳಾದುದರಿಂದ ಅವುಗಳನ್ನು ಬಿಟ್ಟು ಉಳಿದುವುಗಳನ್ನು ಮೂವತ್ತಾರೆಂದು ಹೇಳುವುದರಲ್ಲಿ ವಿರೋಧವೇನೂ ಇಲ್ಲವಷ್ಟೆ?

## ೭೪೯. ಅವತಾರಜನ್ಯಾನಾಮವತಾರಾಂತರಾಣಾಮಾಂತರಾಳಿಕ ಭೇದಪ್ರಪಂಚನಂ.

ವ್ಯೂಹರೂಪಿಯಾದ ಅನಿರುದ್ಧನೇ ಸಕಲಾವತಾರಗಳಿಗೂ ಮೂಲಕಾರಣವಾಗಿದ್ದರೂ—ಅವತಾರಗಳಿಂದಲೂ ಮತ್ತೆ ಕೆಲವು ಅವತಾರಗಳುಂಟಾಗುವವು. ಇವುಗಳು ವಿಭವಾಂತರಗಳೆಂದೂ ಅವತಾರಾಂತರಗಳೆಂದೂ ವ್ಯವಹರಿಸಲ್ಪಡುವುವು. ಅವುಗಳೊಳಗೆ ಕೆಲವನ್ನು ಇಲ್ಲಿ ತೋರಿಸುವೆವು.—

ಅನಿರುದ್ಧನಿಂದ ಪ್ರಾದುರ್ಭೂತವಾದ ಉಪೇಂದ್ರಾವತಾರವು ದೇವೇಂದ್ರನಿಗೆ ಸಹಾಯಭೂತವಾಗಿದ್ದುಕೊಂಡು ಜಗದ್ರಕ್ಷಣೆಯನ್ನು ಮಾಡುವುದಕ್ಕೋಸ್ಕರ ಅವತರಿಸಿದ ಅವತಾರಾಂತರವಾಗಿ ಇರುವುದು.

ಇಂಥ ಉಪೇಂದ್ರಾವತಾರದಿಂದ ಪ್ರಾದುರ್ಭವಿಸಿದ ತ್ರಿವಿಕ್ರಮಾವತಾರವು ತನ್ನ ಚರಣಾರವಿಂದಗಳಿಂದ ಸಮಸ್ತಲೋಕಗಳನ್ನೂ ಅಳೆದು ಸ್ವಾಧೀನಪಡಿಸಿಕೊಂಡು—ತ್ರೈಲೋಕ್ಯೈಶ್ವರ್ಯವನ್ನು ಕಳೆದುಕೊಂಡ ಇಂದ್ರನಿಗೆ ಪುನಃ ತ್ರೈಲೋಕ್ಯಸಂಪತ್ತನ್ನು ಕೊಡುವುದಕ್ಕಾಗಿ ಅವತರಿಸಿದ ಅವತಾರಾಂತರವಾಗಿ ಇರುವುದು.

ಮತ್ತು ಅದೇ ಉಪೇಂದ್ರಾವತಾರದಿಂದ ಪ್ರಾದುರ್ಭವಿಸಿದ ದಧಿಭಕ್ತಾವತಾರವು—ಇಂದ್ರನಿಗೆ ಅಜರಾಮರತ್ವವನ್ನು ಉಂಟುಮಾಡುವುದಕ್ಕೋಸ್ಕರ ಅಮೃತವನ್ನು ಕೊಡುವುದಕ್ಕಾಗಿ ಅವತರಿಸಿದ ಅವತಾರಾಂತರವಾಗಿ ಇರುವುದು.

ಮತ್ತು ವ್ಯೂಹರೂಪಿಯಾದ ಅನಿರುದ್ಧನಿಂದ ಪ್ರಾದುರ್ಭೂತವಾದ ಕೃಷ್ಣಾವತಾರದಿಂದ ಆವಿರ್ಭವಿಸಿದ ಮತ್ಸ್ಯಾವತಾರವು—ಪ್ರಳಯಕಾಲದಲ್ಲಿ ಜಗತ್ತನ್ನು ತನ್ನ ಉದರದಲ್ಲಿ ಇಟ್ಟುಕೊಂಡು ರಕ್ಷಿಸುವುದಕ್ಕಾಗಿ ಅವತರಿಸಿದ ಅವತಾರಾಂತರವಾಗಿ ಇರುವುದು.

ಇಂಥ ಮತ್ಸ್ಯಾವತಾರದಿಂದ ಪ್ರಾದುರ್ಭೂತವಾದ ಹಯಗ್ರೀವಾವತಾರವು—ಸೃಷ್ಟಿಕರ್ತನಾದ ಚತುರ್ಮುಖಬ್ರಹ್ಮದೇವನಿಗೆ ವೇದೋಪದೇಶವನ್ನು ಮಾಡುವುದಕ್ಕಾಗಿ ಸ್ವೀಕರಿಸಿದ ಅವತಾರಾಂತರವಾಗಿ ಇರುವುದು.

ಧರ್ಮವೆಂಬ ಹನ್ನೆರಡನೆಯ ಅವತಾರದಿಂದ ಪ್ರಾದುರ್ಭೂತಗಳಾದ ನರನಾರಾಯಣಾವತಾರಗಳು—ಸಹಸ್ರಕವಚಿಯೆಂಬ ಲೋಕಕಂಟಕನಾದ ದೈತ್ಯನನ್ನು ಸಂಹರಿಸುವುದಕ್ಕಾಗಿಯೂ—ಶಿಷ್ಯಾಚಾರ್ಯರೂಪಿಗಳಾಗಿದ್ದು ಶ್ರೀಮದಷ್ಟಾಕ್ಷರಬ್ರಹ್ಮವಿದ್ಯೆಯನ್ನು ಲೋಕದಲ್ಲಿ ಪ್ರಕಟಪಡಿಸುವುದಕ್ಕಾಗಿಯೂ ಪ್ರಾದುರ್ಭವಿಸಿದ ಅವತಾರಾಂತರಗಳಾಗಿ ಇರುವುವು.

ಹೀಗೆಯೇ—ಹರಿ-ಕೂರ್ಮ-ಕಲ್ಕಿ-ವರಾಹ-ನಾರಸಿಹ್ಮ ಇವುಗಳೂ ಅವತಾರಾಂತರಗಳೆಂದು ಪಾಂಚರಾತ್ರಸಂಹಿತೆಗಳಲ್ಲಿ ಹೇಳಿರುವುದು.

## ೭೪೦. ಭಗವದವತಾರಾಣಾಂ ಕಾರಣ-ಪ್ರಯೋಜನ-ನಿರೂಪಣಂ.

ಪೂಜ್ಯರೆ? ನಾನಾವಿಧವಾದ ಜನ್ಮವನ್ನು ಪಡೆವುದಕ್ಕೆ ಕರ್ಮವಲ್ಲವೆ ಕಾರಣವಾಗಿರುವುದು? ಅಕರ್ಮವಶ್ಯನಾದ ಈಶ್ವರನಿಗೆ ಜನ್ಮರೂಪಗಳಾದ ಇಷ್ಟೊಂದು ಅವತಾರಗಳಿಗೆ ಕಾರಣವೇನು?

ಈಶ್ವರನಿಗೆ ಕರ್ಮಸಂಬಂಧವಿಲ್ಲವಾದುದರಿಂದ ಅವನ ಅವತಾರಗಳಿಗೆ ಅವನ ಅಮೋಘವಾದ ಇಚ್ಛೆಯೇ ಕಾರಣವಲ್ಲದೆ ಬೇರೊಂದಿಲ್ಲ.

ಇಚ್ಛೆಯುಂಟಾದಮಾತ್ರಕ್ಕೇನೇ ವಿಚಾರಮಾಡದೆ ಅವತಾರವನ್ನು ಮಾಡಿಬಿಡಬಹುದೋ? ಅದಕ್ಕೆ ಪ್ರಯೋಜನವಿರಬೇಡವೋ?

ಹವುದು—ಪ್ರಯೋಜನವಿರಬೇಕು. ಈಶ್ವರನ ಅವತಾರಗಳಿಗೆ ಮೂರು ಪ್ರಯೋಜನಗಳು ಉಂಟು; ಅವು ಯಾವುವೆಂದರೆ—ಸಾತ್ತ್ವಿಕಜನರ ಸಂರಕ್ಷಣೆಯೂ, ದುಷ್ಟರ ನಿಗ್ರಹವೂ, ಆರಾಧ್ಯನಾದ ತನ್ನ ಸ್ವರೂಪವನ್ನು ತೋರಿಸಿ ಆರಾಧನರೂಪವಾದ ಧರ್ಮಮಾರ್ಗವನ್ನು ಸ್ಥಾಪಿಸುವಿಕೆಯೂ.

ಪೂಜ್ಯರೆ! ಸಂಕಲ್ಪಮಾತ್ರದಿಂದಲೇ ಸೃಷ್ಟಿಸ್ಥಿತಿಸಂಹಾರಗಳನ್ನು ನಡಸಲು ಸಮರ್ಥನಾಗಿ ಸರ್ವಶಕ್ತಿಯೆನಿಸಿಕೊಂಡಿರುವ ಈಶ್ವರನು ಈ ಮೂರು ಪ್ರಯೋಜನಗಳನ್ನು ನಡಸುವುದಕ್ಕಾಗಿ ಅವತಾರವನ್ನು ಪರಿಗ್ರಹಿಸಿ ಇಲ್ಲಿ ಬರಬೇಕೆ? ತಾನಿರುವಸ್ಥಳದಲ್ಲಿಯೇ ಇದ್ದುಕೊಂಡು ಸಂಕಲ್ಪಮಾತ್ರದಿಂದಲೇ ಇವುಗಳನ್ನು ಏತಕ್ಕೆ ನಡಸಬಾರದು?

ಸಂಕಲ್ಪಮಾತ್ರದಿಂದಲೇ ನಡಸುವುದಾದರೆ ದುಷ್ಟನಿಗ್ರಹವೆಂಬ ಪ್ರಯೋಜನವು ಒಂದುವೇಳೆ ಸಿದ್ಧಿಸಿದರೂ ಸಾತ್ತ್ವಿಕಜನಸಂರಕ್ಷಣೆಯೂ ಧರ್ಮಸ್ಥಾಪನೆಯೂ ಸಿದ್ಧಿಸಲಾರವು. ಹೇಗೆಂದರೆ—ಸಾತ್ತ್ವಿಕರ ಸಂರಕ್ಷಣೆಯೆಂದರೆ ಸಾತ್ತ್ವಿಕರ ಅನಿಷ್ಟವನ್ನು ಹೋಗಲಾಡಿಸಿ ಇಷ್ಟವನ್ನು ಕೊಡುವಿಕೆ. ಸಾತ್ತ್ವಿಕರೆಂದರೆ ಭಗವದ್ಧರ್ಮಾನುಷ್ಠಾನದಲ್ಲಿ ನಿರತರಾಗಿಯೂ, ಭಗವತ್ಸಮಾಶ್ರಯಣದಲ್ಲಿ ಪ್ರವರ್ತಿಸಿರುವವರಾಗಿಯೂ, ಭಗವಂತನ ಸಕಲನಾಮಗಳೂ ಸಕಲಕ್ರೀಡೆಗಳೂ ದಿವ್ಯಸ್ವರೂಪವೂ ಪರಿಚ್ಛೇದಿಸಿ ತಿಳಿಯಲಶಕ್ಯಗಳಾಗಿರುವುದರಿಂದ ಭಗವಂತನನ್ನು ನೇತ್ರದಿಂದ ಸಾಕ್ಷಾತ್ಕರಿಸಿದರಲ್ಲದೆ ಶರೀರದ ಧಾರಣಪೋಷಣಗಳನ್ನು ಸಹ ಮಾಡಿಕೊಳ್ಳಲಶಕ್ತರಾಗಿಯೂ, ಭಗವಂತನ ವಿಶ್ಲೇಷಕಾಲದಲ್ಲಿ ಒಂದು ಕ್ಷಣ

ಮಾತ್ರಕಾಲವನ್ನೂ ಅನೇಕಯುಗಗಳಂತೆ ಕಳೆಯುತ್ತಿರುವವರಾಗಿಯೂ, ಆದುದ ರಿಂದಲೇ ಸರ್ವಾವಯವಗಳಲ್ಲಿಯೂ ಶೈಥಿಲ್ಯವನ್ನು ಪಡೆದವರಾಗಿಯೂ, ಭಗ ವಂತನ ಸ್ವರೂಪವನ್ನೂ ಭಗವಂತನ ದಿವ್ಯಚೇಷ್ಟಿತಗಳನ್ನೂ ನೋಡಬೇಕೆಂದೂ, ಅವನೊಡನೆ ಸರಸಸಲ್ಲಾಪಗಳನ್ನಾಡಬೇಕೆಂದೂ ಸರ್ವದಾ ಆಶೆಪಡುತ್ತಿರುವವ ರಾಗಿಯೂ ಇರುವ ಪರಮವೈಷ್ಣವಾಗ್ರೇಸರರು.

ಇಂಥ ಸಾತ್ತ್ವಿಕಜನರಿಗೆ ಅಪೇಕ್ಷಿತಗಳಾಗಿರುವ ದರ್ಶನ, ಸ್ಪರ್ಶನ ಸಲ್ಲಾಪಾದಿಗಳನ್ನು ಕೊಡಬೇಕಾದರೆ ಈಶ್ವರನು ಅವತಾರವನ್ನೇ ಸ್ವೀಕರಿಸಬೇ ಕಲ್ಲದೆ ಇದ್ದಸ್ಥಳದಲ್ಲಿಯೇ ಇದ್ದುಕೊಂಡು ಸಂಕಲ್ಪಮಾತ್ರದಿಂದಲೇ ಇದನ್ನು ನಡ ಸಲಾಗುವುದಿಲ್ಲ. ಮತ್ತು ಆರಾಧ್ಯನಾದ ತನ್ನ ವಿಲಕ್ಷಣದಿವ್ಯಸ್ವರೂಪವನ್ನು ಕಣ್ಣಿಗೆ ತೋರಿಸಿ ರುಚಿಯನ್ನು ಉಂಟುಮಾಡಿದ ಹೊರತು ಆರಾಧನರೂಪವಾದ ಧರ್ಮಮಾರ್ಗದಲ್ಲಿ ಶ್ರದ್ಧೆ ಉಂಟಾಗುವುದಿಲ್ಲವಾದುದರಿಂದ ಧರ್ಮಸಂಸ್ಥಾಪನೆ ಗಾಗಿಯೂ ಅವತಾರಗಳನ್ನು ಪರಿಗ್ರಹಿಸಿಯೇ ಆಗಬೇಕು.

## ೭೪೧ ಅಥಾಂತರ್ಯಾಮಿಸ್ವರೂಪಸ್ಯಾವಾಂತರವಿಭಾಗಾದಿ ಪ್ರಪಂಚನಂ

ಹೀಗೆ ಪರಮಾತ್ಮನ ವಿಭವಸ್ವರೂಪವನ್ನು ಯಥೋಚಿತವಾಗಿ ವಿವರಿಸಿ ದೆವು. ಇನ್ನು ಮುಂದೆ ಅಂತರ್ಯಾಮಿಸ್ವರೂಪವನ್ನು ಪರಿಶೀಲಿಸುವೆವು. ಅಂತರ್ಯಾ ಮಿತ್ವವೆಂದರೆ ಸಕಲಚೇತನರ ಹೃದಯದಲ್ಲಿಯೂ ಪ್ರವೇಶಿಸಿ ಅವರಿಗೆ ಸ್ವರೂಪ ಸತ್ತೆಯನ್ನು ಉಂಟುಮಾಡಿ ಅವರ ಸಕಲಪ್ರವೃತ್ತಿನಿವೃತ್ತಿಗಳಿಗೂ ಕಾರಣಭೂತ ನಾಗಿರುವಿಕೆ.

ಇಂಥ ಅಂತರ್ಯಾಮಿತ್ವವು—ಸ್ವರೂಪಮಾತ್ರವ್ಯಾಪ್ತಿಯೆಂದೂ ದಿವ್ಯಮಂ ಗಳವಿಗ್ರಹವಿಶಿಷ್ಟಸ್ವರೂಪವ್ಯಾಪ್ತಿಯೆಂದೂ, ಎರಡುವಿಧವಾಗಿರುವುದು. ಇದರಲ್ಲಿ ಮೊದಲನೆಯದಾದ ಸ್ವರೂಪವ್ಯಾಪ್ತಿ ಆಶ್ರಿತಾನಾಶ್ರಿತತಾರತಮ್ಯವನ್ನಿಡದೆ ಸಮ ಸ್ತಚೇತನರಲ್ಲಿಯೂ, ಅಚೇತನವಸ್ತುಗಳಲ್ಲಿಯೂ ವ್ಯಾಪಿಸಿರುವ ವ್ಯಾಪ್ತಿಯಾಗಿರು ವುದು. ಜೀವನು ಪುಣ್ಯಕರ್ಮಗಳನ್ನು ಆಚರಿಸಿ ಸ್ವರ್ಗಾದಿಲೋಕಗಳನ್ನು ಹೊಂದು ವಾಗಲೂ, ಪಾಪಕರ್ಮಗಳನ್ನು ಆಚರಿಸಿ ನರಕಾದಿಲೋಕಗಳನ್ನು ಸೇರುವಾಗಲೂ, ಪುಣ್ಯಪಾಪಗಳೆರಡರಿಂದಲೂ ಮಿಶ್ರನಾಗಿ ಗರ್ಭವನ್ನು ಪ್ರವೇಸಿಸುವಾಗಲೂ, ಮತ್ತು ಸರ್ವಾವಸ್ಥೆಗಳಲ್ಲಿಯೂ ಈ ಜೀವನನ್ನು ಬಿಡದೆ ಬಂಧುವಾಗಿಯೂ, ಸಹಾ ಯಭೂತನಾಗಿಯೂ, ಇದ್ದುಕೊಂಡು ಆ ಆ ಸಮಯಕ್ಕೆ ಉಚಿತವಾದ ಪ್ರವೃತ್ತಿ

ನಿವೃತ್ತ್ಯಾದಿಗಳನ್ನು ನಡಸುತ್ತಾ ಇರುವನೆಂಬುದು ಮೊದಲನೆಯದಾದ ಈ ಸ್ವರೂಪವ್ಯಾಪ್ತಿಯಿಂದ ಸ್ಪಷ್ಟಪಡುವುದು.

ಎರಡನೆಯದಾದ ವಿಗ್ರಹವಿಶಿಷ್ಟವ್ಯಾಪ್ತಿ--ಪೂರ್ವೋಕ್ತಲಕ್ಷಣಗಳಿಂದ ಅಲಂಕೃತರಾದ ಸಾತ್ತ್ವಿಕಜನರ ಹೃದಯದಲ್ಲಿ ಅಪ್ರಾಕೃತವಾದ ತನ್ನ ದಿವ್ಯಮಂಗಳವಿಗ್ರಹದೊಡನೆ ಲಕ್ಷ್ಮೀವಿಶಿಷ್ಟನಾಗಿಯೂ, ಸರ್ವಾಭರಣಗಳಿಂದಲೂ ಅಲಂಕೃತನಾಗಿಯೂ, ಸರ್ವಾಯುಧಧಾರಿಯಾಗಿಯೂ, ಅಂಗುಷ್ಠಮಾತ್ರವಾದ ಪುರುಷಾಕೃತಿಯನ್ನು ಧರಿಸಿ ಹೊಗೆಯಿಲ್ಲದ ಅಗ್ನಿಯಂತೆ ಪ್ರಜ್ವಲಿಸುತ್ತ, ನೀರುಂಡ ಮೇಘವನ್ನು ಮಿಂಚಿನಕಾಂತಿ ಮರೆಸಿ ತನ್ನೊಳಗೆ ಅಡಗಿಸಿಕೊಳ್ಳುವಂತೆ ನೀಲಮೇಘಶ್ಯಾಮಳವಾಗಿಯೂ, ಸಕಲಸಂತಾಪಹರವಾಗಿಯೂ, ಸ್ಪೃಹಣೀಯವಾಗಿಯೂ ಇರುವ ತನ್ನ ದಿವ್ಯಮಂಗಳವಿಗ್ರಹಕ್ಕೆ ದೃಷ್ಟಿದೋಷವು ತಗಲದಿರುವುದಕ್ಕಾಗಿ ಮರೆಸುತ್ತಿರುವನೋ ಎಂಬಂತೆ ವಿದ್ಯುತ್ಸಮಾನವರ್ಣೆಯಾದ ಲಕ್ಷ್ಮಿಯ ಕಾಂತಿಪಟಲವೆಂಬ ಪೀತಾಂಬರವನ್ನು ಹೊದ್ದುಕೊಂಡು ಶ್ಯಾಮಳವಾದ ಮೇಘವನ್ನು ನುಂಗಿದ ವಿದ್ಯುತ್ಪುಂಜದಂತೆ ಪ್ರಕಾಶಿಸುತ್ತ, ಬಾಹ್ಯವಿಷಯಗಳಲ್ಲಿ ಆಸಕ್ತವಾದ ಮನಸ್ಸಿಗೆ ಬಾಹ್ಯವಿಷಯಾಸಕ್ತಿಯನ್ನು ಆತ್ಯಂತಿಕವಾಗಿ ತಪ್ಪಿಸಿ ತನ್ನಲ್ಲಿ ಪ್ರಾವಣ್ಯವನ್ನು ಉಂಟುಮಾಡುವುದಕ್ಕೆ ಅಮೋಘವಾದ ರಸಾಯನದ ಗುಳಿಕೆಯೋ ಎಂಬಂತೆ ತೋರುತ್ತ, ಸಾತ್ತ್ವಿಕಜನರಿಗೆ ಧ್ಯಾನಾಭಿಲಾಷೆಯುಂಟಾದ ಕಾಲದಲ್ಲಿ ಧ್ಯಾನಸೌಕರ್ಯಕ್ಕಾಗಿ ಅಲ್ಲಿ ಸ್ಥಿರವಾಗಿ ನಿಂತು ಅವರ ಬುದ್ಧಿಗಳಿಗೆ ವಿಕಾಸವನ್ನು ಉಂಟುಮಾಡುವವನಾಗಿದ್ದುಕೊಂಡು, ತಾನು ನಾರಗಳಿಗೆಲ್ಲಾ ಅಯನನಾದ ಪ್ರಯುಕ್ತ ಬಂದಿರುವ ಅವರ್ಜನೀಯವಾದ ಕರುಳುಸಂಬಂಧದಿಂದ ಅವರನ್ನು ಬಿಡಲಾರದೆ ಬಂಧುವಾಗಿದ್ದುಕೊಂಡು, ಕಮಲದ ಮೊಗ್ಗಿಗೆ ಸಮಾನವಾಗಿ ಅಧೋಮುಖವಾಗಿ ತೊಂಗುತ್ತಿರುವ ಹೃದಯಕಮಲವೆಂಬ ದಿವ್ಯಸಿಂಹಾಸನವನ್ನು ಅಲಂಕರಿಸತಕ್ಕ ವ್ಯಾಪ್ತಿಯಾಗಿರುವುದು. ಇಂಥ ದ್ವಿತೀಯವ್ಯಾಪ್ತಿ ಪೂರ್ವೋಕ್ತರಾದ ಸಜ್ಜನರ ಹೃದಯದಲ್ಲಿ ಮಾತ್ರವಲ್ಲದೆ ಅಭಕ್ತರಾದ ದುಷ್ಟರ ಹೃದಯದಲ್ಲಿ ಇಲ್ಲ.

## ೭೪೨. ಅಥ ಅರ್ಚಾವತಾರರಹಸ್ಯಾವಿಷ್ಕರಣಂ.

ಹೀಗೆ ಅಂತರ್ಯಾಮಿಸ್ವರೂಪವನ್ನು ಸಂಕ್ಷೇಪವಾಗಿ ವಿವರಿಸಿ ತೋರಿಸಿದೆವು. ಈಗ ಕ್ರಮಪ್ರಾಪ್ತವಾಗಿರುವ ಅರ್ಚಾಸ್ವರೂಪವನ್ನು ಸ್ವಲ್ಪಮಟ್ಟಿಗೆ ಪರೀಕ್ಷಿಸುವೆವು. ಈ ಅರ್ಚಾಶಬ್ದವು ಪ್ರತಿಮಾವಾಚಕವಾಗಿರುವುದು. ಭಗವಚ್ಚರಣಾರವಿಂದಗಳಲ್ಲಿ ಪ್ರೀತಿರೂಪವಾದ ಅವಿಚ್ಛಿನ್ನಭಕ್ತಿಯನ್ನು ಪಡೆದಿರುವ ಆಶ್ರಿತರು

ಚಿನ್ನ-ಬೆಳ್ಳಿ-ತಾಮ್ರ-ಹಿತ್ತಾಳೆ-ಕಂಚು, ಮತ್ತು ಇತರವಾದ ಲೋಹಗಳು, ಅಥವಾ ಕಲ್ಲು, ಕೊನೆಗೆ-ಮೃತ್ತಿಕೆ ಈ ಪದಾರ್ಥಗಳೊಳಗೆ ಆವುದಾದರೊಂದರಿಂದ ತಮ್ಮ ರುಚಿಗೆ ಅನುಸಾರವಾಗಿ ಭಗವತ್ಪ್ರತಿಮೆಯನ್ನು ಮಾಡಿಸಿ, ಶಾಸ್ತ್ರರೀತಿಯಾಗಿ ಅದಕ್ಕೆ ಪ್ರತಿಷ್ಠಾವಿಧಿಯನ್ನು ನಡಸಿ, ಅದರಲ್ಲಿ ವಿಶೇಷವಾದ ಭಗವತ್ಸಾನ್ನಿಧ್ಯವುಂಟಾಗುವುದಕ್ಕಾಗಿ ಭಕ್ತಿಭರಿತವಾದ ಮನಸ್ಸಿನಿಂದ ಪ್ರಾರ್ಥಿಸಿದರಾದರೆ ದೃಢತರವಾದ ಅಂಥ ಭಕ್ತಿಯೆಂಬ ಹಗ್ಗದಿಂದ ಬಂಧಿಸಲ್ಪಟ್ಟ ಶ್ರಿಯಃಪತಿ ಸರ್ವಶಕ್ತನಾಗಿದ್ದರೂ ಆಶ್ರಿತ ಪಾರತಂತ್ರ್ಯವೆಂಬ ಮಹಾಗುಣದಿಂದ ಆ ಬಂಧನವನ್ನು ಬಿಡಿಸಿಕೊಳ್ಳಲಾರದೆ ಸೆಳೆಯಲ್ಪಟ್ಟವನಾಗಿ ಅಂಥ ಪ್ರತಿಮೆಯನ್ನೇ ತನಗೆ ವಾಸಸ್ಥಾನವಾಗಿ ಸ್ವೀಕರಿಸಿ ಅದರಲ್ಲಿ ತನ್ನ ಅಪ್ರಾಕೃತವಾದ ದಿವ್ಯಮಂಗಳವಿಗ್ರಹದೊಡನೆ ಸಾನ್ನಿಧ್ಯವನ್ನು ಮಾಡುವನು.

## ೭೪೩. ಅರ್ಚಾವತಾರಸ್ಯ ಕಾಲ-ದೇಶಾ-ಧಿಕಾರಿ ನಿಯಮಾಭಾವಃ.

ರಾಮಾವತಾರಸ್ಥಿತಿಕಾಲವು—ಹನ್ನೊಂದುಸಾವಿರವರ್ಷಗಳೆಂದೂ, ಕೃಷ್ಣಾವತಾರಸ್ಥಿತಿಕಾಲವು ನೂರಿಪ್ಪತ್ತು ವರ್ಷಗಳೆಂದೂ ಈ ರೀತಿಯಲ್ಲಿ ಆ ಆ ಅವತಾರಗಳ ಸ್ಥಿತಿಗೆ ಒಂದು ಕಾಲನಿಯಮವುಂಟು. ಅರ್ಚಾವತಾರಕ್ಕಾದರೆ ಅಂಥ ಕಾಲನಿಯಮವಿಲ್ಲದೆ ಇದರಲ್ಲಿ ಸರ್ವದಾ ಸಾನ್ನಿಧ್ಯವನ್ನು ಮಾಡುವನು. ತನ್ನನ್ನು ಆರಾಧಿಸುವವರಿಗೆ ಅಪೇಕ್ಷೆಯುಂಟಾದ ಕಾಲವೆಲ್ಲಾ ಇದಕ್ಕೆ ಕಾಲವಾಗಿರುವುದು.

ಮತ್ತು—ರಾಮಾವತಾರಕ್ಕಾಗಿ ಅಯೋಧ್ಯಾನಗರಿಯೇ ಬೇಕಾಗಿರುವುದು. ಕೃಷ್ಣಾವತಾರಕ್ಕಾಗಿ ಮಧುರಾನಗರಿಯೇ ಅವಶ್ಯಕವಾಗಿರುವುದು. ಹೀಗೆ ಆ ಆ ಅವತಾರಗಳಿಗಾಗಿ ಕ್ಲಪ್ತವಾಗಿರುವ ದೇಶನಿಯಮವೂ ಈ ಅರ್ಚಾವತಾರಕ್ಕೆ ಇಲ್ಲ. ರುಚಿಯುಳ್ಳ ಮನುಷ್ಯಸಾಮಾನ್ಯರ ಮನೆಮನೆಯಲ್ಲಿಯೂ ಅರ್ಚೆಯಲ್ಲಿ ಸಾನ್ನಿಧ್ಯವನ್ನು ಮಾಡುವನು.

ಮತ್ತು—ರಾಮಾವತಾರವು ದಶರಥನನ್ನು ತಂದೆಯಾಗಿ ಮಾಡಿಕೊಂಡು ಸಾಕೇತನಿವಾಸಿಗಳಿಂದ ಸೇವೆಯನ್ನು ಕೈಗೊಳ್ಳುವುದಕ್ಕಾಗಿಯೂ, ಕೃಷ್ಣಾವತಾರವು ವಸುದೇವನನ್ನು ತಂದೆಯಾಗಿಮಾಡಿಕೊಂಡು ಗೋಕುಲಮಧುರಾ ದ್ವಾರಕಾನಿವಾಸಿಗಳಿಂದ ಸೇವೆಯನ್ನು ಸ್ವೀಕರಿಸುವುದಕ್ಕಾಗಿಯೂ ಆವಿರ್ಭವಿಸಿರುವುವು. ಹೀಗೆ ಆ ಆ ಅವತಾರಗಳಿಗಾಗಿ ಏರ್ಪಟ್ಟಿರುವ ಅಧಿಕಾರಿನಿಯಮವೂ

ಈ ಅರ್ಚಾವತಾರಕ್ಕೆ ಇಲ್ಲ. ರುಚಿಯೊಂದಿದ್ದರೆ ಸಾಕು. ಸಕಲಾಧಿಕಾರಿಗಳಿಗೂ ಇದು ಸುಲಭವಾಗಿರುವುದು.

## ೭೪೪. ಅರ್ಚಾವತಾರಸ್ಯ ಸೌಲಭ್ಯಸೀಮಾಭೂಮಿತ್ವಂ.

ಮತ್ತು ಶ್ರಿಯಃಪತಿ ಸಹನಶೀಲನಾದುದರಿಂದ ತನ್ನನ್ನು ಆರಾಧಿಸುವವರಲ್ಲಿ ಉಂಟಾಗುವ ಸರ್ವಾಪರಾಧಗಳನ್ನೂ ಅರ್ಚೆಯಲ್ಲಿ ಸಹಿಸುತ್ತಿರುವವನಾಗಿ--ಶಯನ, ಆಸನ, ಸ್ನಾನ, ಭೋಜನ, ಗಮನ ಮೊದಲಾದ ತನ್ನ ಸಕಲವ್ಯಾಪಾರಗಳನ್ನೂ ಅವರಿಗೇ ಅಧೀನಗಳಾಗಿ ಮಾಡಿ, ಅವರು ಮಲಗಿಸಿದಾಗ ಮಲಗುತ್ತ, ಕುಳ್ಳಿರಿಸಿದಾಗ ಕೂರುತ್ತ, ಸ್ನಾನಮಾಡಿಸಿದಾಗ ಸ್ನಾನಮಾಡುತ್ತ, ನೈವೇದ್ಯವನ್ನು ಅರ್ಪಿಸಿದಾಗ ಅದನ್ನು ಸ್ವೀಕರಿಸುತ್ತ, ಕೊನೆಗೆ ಅತ್ತಿತ್ತಲಾಗಿ ಮಗ್ಗುಲಾಗುವುದನ್ನೂ ಸಹ ಅವರಿಗೆ ಇಷ್ಟಬಂದಾಗಲೇ ನಡಿಸಿಕೊಳ್ಳುತ್ತ, ಸರ್ವಸ್ವತಂತ್ರನಾದ ತಾನು ತನ್ನ ಸ್ವಾತಂತ್ರ್ಯವನ್ನೆಲ್ಲಾ ಮರೆತು ಅತ್ಯಂತಪರತಂತ್ರನಾಗಿ ಇದ್ದುಕೊಂಡೇ ಅವರ ಮನೋರಥಗಳನ್ನೆಲ್ಲಾ ಈಡೇರಿಸುವನು. ಆದಕಾರಣ ಅರ್ಚಾವತಾರವು ಸೌಲಭ್ಯಗುಣಕ್ಕೆ ಸೀಮಾಭೂಮಿಯಾಗಿ ಇರುವುದು.

## ೭೪೫. ಸ್ವವಿಷಯರುಚಿಜನಕತ್ವಮರ್ಚಾವತಾರಸ್ಯೈವಾಸಾಧಾರಣಧರ್ಮಃ.

ಶಾಸ್ತ್ರೋಕ್ತಗಳಾದ ವಿಧಿನಿಷೇಧಗಳಿಗೆ ಬದ್ಧರಾಗದಂತೆ ಸ್ವಚ್ಛಂದಚಾರಿಗಳಾಗಿ, ಹೇಯಗಳಾದ ಪ್ರಾಕೃತವಿಷಯಗಳಲ್ಲಿಯೇ ಮುಳುಗಾಡುತ್ತ ಭಗವದ್ವಿಷಯದಲ್ಲಿ ವಿಮುಖರಾಗಿಯೇ ಇರುವ ಚೇತನರಿಗೆ ತನ್ನ ರೂಪಲಾವಣ್ಯಾದಿಗಳನ್ನು ತೋರಿಸಿ ಹೇಯವಿಷಯಗಳಲ್ಲಿ ಜುಗುಪ್ಸೆಯನ್ನೂ, ತನ್ನ ವಿಷಯದಲ್ಲಿ ರುಚಿಯನ್ನೂ ಅವರಿಗೆ ಉಂಟುಮಾಡಿ ತನ್ನ ಕಡೆಗೆ ಸೆಳೆದುಕೊಳ್ಳುವ ಸ್ವಭಾವವು ಈ ಅರ್ಚಾವತಾರವೊಂದರಲ್ಲಿಯೇ ಪರಿಪೂರ್ಣವಾಗಿ ಪ್ರಕಾಶಿಸುತ್ತಿರುವುದು.

## ೭೪೬. ಧ್ಯಾತೄಣಾಂ ಧ್ಯಾನಸೌಕರ್ಯಾಪಾದಕತ್ವಮಪ್ಯರ್ಚಾವತಾರಸ್ಯೈವ.

ತನ್ನ ಸ್ವರೂಪವನ್ನು ಧ್ಯಾನಮಾಡಬೇಕೆಂದು ಆಶೆಪಡುವವರ ನೇತ್ರಗಳಿಗೂ ಮನಸ್ಸಿಗೂ ಪೂರ್ಣವಾದ ಆನಂದವುಂಟಾಗುವಂತೆ ತನ್ನ ಸ್ವರೂಪವನ್ನು ಪ್ರಕಾಶಪಡಿಸುವಿಕೆ ಈ ಅರ್ಚಾವತಾರವೊಂದಕ್ಕಲ್ಲದೆ ಉಳಿದ ನಾಲ್ಕುರೂಪಗಳಿಗೂ ಇಲ್ಲ.

## ೭೪೭. ಅರ್ಚಾವತಾರಸ್ಯೈವ ಸರ್ವಲೋಕಶರಣ್ಯತ್ವಂ.

ಅಷ್ಟೇ ಅಲ್ಲ—ಆಶ್ರಿತರಾದವರು ತಮ್ಮ ತಮ್ಮ ಇಷ್ಟಾರ್ಥಗಳನ್ನು ಪಡೆವು ದಕ್ಕಾಗಿ ಇತರ ಸಾಧನಗಳನ್ನು ಬಿಟ್ಟು ಅರ್ಚಾರೂಪಿಯಾದ ಶ್ರಿಯಃಪತಿಯನ್ನೇ ಸಾಧನವಾಗಿ ವರಿಸುವವರಾದರೆ ಅವರ ಗುಣದೋಷಗಳನ್ನು ಕುರಿತು ವಿಚಾರಮಾ ಡದೆ ಸರ್ವಲೋಕದಲ್ಲಿಯೂ ಇರುವ ಸಮಸ್ತಚೇತನರಿಗೂ ಮರೆಹೊಗಲು ಅರ್ಹ ನಾಗಿ ನಿಲ್ಲುವಿಕೆಯೆಂಬ ಸರ್ವಲೋಕಶರಣ್ಯತ್ವಮಹಾಗುಣವು ಈ ಅರ್ಚಾವತಾರ ದಲ್ಲಿಯೇ ವ್ಯಕ್ತವಾಗಿ ಕಾಣುವುದು.

## ೭೪೮. ಅರ್ಚಾವತಾರಸ್ಯೈವ ನಿರತಿಶಯಭೋಗ್ಯತ್ವಂ.

ಅಂತರ್ಯಾಮಿಸ್ವರೂಪವನ್ನು ಉಪಾಸನೆಮಾಡಿದವರಿಗೆ ಪರಿಪೂರ್ಣಭಗವ ದನುಭವವೆಂಬ ಪರಮಫಲಪ್ರಾಪ್ತಿ—ಸಂಸಾರದಿಂದ ಬಿಡುಗಡೆಯನ್ನು ಹೊಂದಿ ವೈಕುಂಠಕ್ಕೆ ಹೋದಮೇಲೆಯೇ ಸಿದ್ಧಿಸುವುದೆಂಬ ಒಂದು ನಿರ್ಬಂಧವುಂಟು. ಅರ್ಚಾವತಾರಸ್ವರೂಪವನ್ನು ಭಜಿಸಿದವರಿಗಾದರೆ ಅಮೃತಕ್ಕಿಂತಲೂ ಅತ್ಯಂತ ಭೋಗ್ಯತಮಗಳಾದ ಸಮಸ್ತಕಲ್ಯಾಣಗುಣಗಳೂ ಅರ್ಚಾವತಾರದಲ್ಲಿಯೇ ಪರಿ ಪೂರ್ಣಗಳಾಗಿರುವುದರಿಂದ ಸಂಸಾರಸಂಬಂಧವಿರುವಾಗಲೇ ಇಲ್ಲಿಯೇ ಅವುಗ ಳನ್ನು ಪೂರ್ಣವಾಗಿ ಅನುಭವಿಸಬಹುದು. ಇಂಥ ಗುಣಗಳನ್ನು ಇಲ್ಲಿಯೇ ಅನು ಭವಿಸಿ, ಈ ಅರ್ಚೆಯಲ್ಲಿಯೇ ಪರಮಸಾಯುಜ್ಯವನ್ನು ಪಡೆದ **ತಿರುಪ್ಪಾಣಾ ಳ್ವಾರ್-ಆಂಡಾಳ್** ಮೊದಲಾದ ಮಹಾಭಾಗವತೋತ್ತಮರೂ ಕೆಲವರು ಉಂಟು. ತಿರುಪ್ಪಾಣಾಳ್ವಾರು ಲೋಕೋಜ್ಜೀವನಕ್ಕಾಗಿ ಅನುಗ್ರಹಿಸಿದ ಪ್ರಬಂ ಧರತ್ನದ ಹತ್ತನೆಯ ಪದ್ಯದ ಅರ್ಥವಿಶೇಷಗಳನ್ನು ಸದಾಚಾರ್ಯಮುಖದಿಂದ ಶ್ರವ ಣಮಾಡಿದ ಭಾಗ್ಯವಂತರಿಗೆ ಅರ್ಚಾವತಾರದ ವೈಭವವು ಇನ್ನೂ ವಿಶದವಾಗಿ ತಿಳಿವುದು.

## ೭೪೯. ಅರ್ಚಾವತಾರಸ್ಯೈವೋಪಾಸ್ಯತ್ವೇ ಪ್ರಾಪ್ಯತ್ವೇ ಚ ಪ್ರಮಾಣಪ್ರದರ್ಶನಂ.

ಅರ್ಚಾವತಾರವೇ ಸಮಸ್ತಚೇತನರಿಗೂ ಉಪಾಸ್ಯವಾಗಿಯೂ ಪ್ರಾಪ್ಯವಾ ಗಿಯೂ ಇರುವುದೆಂಬ ಅಂಶವನ್ನು—

"ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ಪೂರ್ಣಮುದಚ್ಯತೇ ।
ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ ॥"

ಇವೇ ಮೊದಲಾದ ಸಾಸಿರಾರು ಶ್ರುತಿಗಳು ಉದ್ಘೋಷಿಸುತ್ತಿರುವುವು. ಈ ಶ್ರುತಿವಾಕ್ಯದ ರಹಸ್ಯಾರ್ಥವನ್ನು ಸದಾಚಾರ್ಯಮುಖದಿಂದ ಉಪದೇಶರೂಪವಾಗಿ ಕೇಳಿ ತಿಳಿದುಕೊಳ್ಳಬೇಕಾಗಿರುವುದರಿಂದ ಅದನ್ನು ಇಲ್ಲಿ ವಿವರಿಸಲು ಅವಕಾಶವಿಲ್ಲ. ಅರ್ಚಾವತಾರದ ವೈಭವವಿಶೇಷಗಳನ್ನು ತೋರಿಸುವ ಎಲ್ಲಾ ಶ್ರುತಿಗಳ ತಾತ್ಪರ್ಯದ ಸಾರವನ್ನೂ ಸಂಗ್ರಹಿಸಿ ಶ್ರೀ ಶೌನಕಮಹರ್ಷಿ ಲೋಕಹಿತಕ್ಕಾಗಿ

"ಸುರೂಪಾಂ ಪ್ರತಿಮಾಂ ವಿಷ್ಣೋಃ ಪ್ರಸನ್ನವದನೇಕ್ಷಣಾಂ ।
ಕೃತ್ವಾಽಽತ್ಮನಃ ಪ್ರೀತಿಕರೀಂ ಸುವರ್ಣರಜತಾದಿಭಿಃ ॥
ತಾಮರ್ಚಯೇತ್ತಾಂ ಪ್ರಣಮೇತ್ತಾಂ ಭಜೇತ್ತಾಂ ವಿಚಿಂತಯೇತ್ ।
ವಿಶತ್ಯಪಾಸ್ತದೋಷಸ್ತು ತಾಮೇವ ಬ್ರಹ್ಮರೂಪಿಣೀಂ ॥"

ಈ ರೀತಿಯಲ್ಲಿ ಉಪದೇಶಿಸಿರುವರು—

"ಸುಂದರವಾದ ರೂಪವುಳ್ಳುದಾಗಿಯೂ, ಪ್ರಸನ್ನವಾದ ಮುಖವೂ ಕಣ್ಣುಗಳೂ ಉಳ್ಳುದಾಗಿಯೂ, ಮನಸ್ಸಿಗೆ ಆಕರ್ಷಕವಾಗುವಂತೆ ಪ್ರೀತಿಕರವಾಗಿಯೂ, ಇರುವ ವಿಷ್ಣುಪ್ರತಿಮೆಯನ್ನು—ಚಿನ್ನ, ಬೆಳ್ಳಿ, ತಾಮ್ರ, ಹಿತ್ತಾಳೆ, ಕಂಚು ಮುಂತಾದ ಆವುದಾದರೊಂದು ಲೋಹದಿಂದಲಾಗಲಿ ಶಿಲೆಯಿಂದಲಾಗಲಿ, ದಾರುವಿನಿಂದಲಾಗಲಿ, ಮೃತ್ತಿಕೆಯಿಂದಲಾಗಲಿ, ಕೊನೆಗೆ ಚಿತ್ರರೂಪದಿಂದಲಾಗಲಿ ನಿರ್ಮಾಣಮಾಡಿಕೊಂಡು, ಶಾಸ್ತ್ರೀಯವಾದ ಪ್ರತಿಷ್ಠಾವಿಧಿಯಿಂದ ಅದರಲ್ಲಿ ಭಗವತ್ಸಾನ್ನಿಧ್ಯವನ್ನು ಪ್ರಾರ್ಥಿಸಿ ಅಂಥ ಪ್ರತಿಮೆಯನ್ನೇ ಪೂಜಿಸಬೇಕು, ಅದನ್ನೇ ನಮಸ್ಕರಿಸಬೇಕು, ಅದನ್ನೇ ಭಜಿಸಬೇಕು, ಅದನ್ನೇ ನಿರಂತರವಾಗಿ ಧ್ಯಾನಿಸಬೇಕು; ಹೀಗೆ ಆವನಾದರೊಬ್ಬನು ಅತ್ಯಂತಭಕ್ತಿಯುಕ್ತನಾಗಿ ಅರ್ಚಾಮೂರ್ತಿಯನ್ನೇ ಭಜಿಸುತ್ತಿದ್ದನಾದರೆ ಶರೀರಾವಸಾನದಲ್ಲಿ ಸಕಲಕರ್ಮಬಂಧಗಳಿಂದಲೂ ಬಿಡಲ್ಪಟ್ಟವನಾಗಿ ಸಾಕ್ಷಾತ್ಪರಮಾತ್ಮಸ್ವರೂಪಿಣಿಯಾದ ಅಂಥ ಮೂರ್ತಿವಿಶೇಷವನ್ನೇ ಹೊಂದಿದವನಾಗಿ ಪರಿಪೂರ್ಣಬ್ರಹ್ಮಾನಂದಾನುಭವವನ್ನು ಪಡೆವನು" ಎಂಬುದು ಉದಾಹೃತ ಶ್ಲೋಕಗಳ ಅಭಿಪ್ರಾಯವಾಗಿರುವುದು.

## ೭೫೦ ಸ್ವಸ್ವಾಮಿಭಾವವಿಪರ್ಯಾಸೇನಾಪಿ ಅರ್ಚಾಯಾ ಆಶ್ರಿತಮನೋರಥಪೂರಕತ್ವಂ

ಇದೂ ಅಲ್ಲದೆ—ಅರ್ಚಾವತಾರಕ್ಕೆ ಇನ್ನೂ ಕೆಲವು ವಿಶೇಷಗಳು ಉಂಟು. ಪರತ್ವಾವಸ್ಥೆಯಲ್ಲಿ ತನ್ನನ್ನು ಸ್ವಾಮಿಯಾಗಿಯೂ, ಜೀವನನ್ನು ಸೊತ್ತಾಗಿಯೂ ವ್ಯವಸ್ಥೆಪಡಿಸಿಕೊಂಡಿರುವ ಸರ್ವೇಶ್ವರನು ಅರ್ಚಾವತಾರದಲ್ಲಿ ವ್ಯುತ್ಕ್ರಮವಾಗಿ

ತನ್ನನ್ನು ಸೊತ್ತಾಗಿಯೂ, ಜೀವನನ್ನೇ ತನಗೆ ಸ್ವಾಮಿಯಾಗಿಯೂ ಭಾವಿಸಿ ಜೀವನನ್ನು ಬಿಡದೆ ಇರುವನು.

ಮತ್ತು ಸರ್ವಜ್ಞನಾಗಿಯೂ, ಸರ್ವಶಕ್ತನಾಗಿಯೂ, ಸ್ವತಂತ್ರನಾಗಿಯೂ ಇರುವ ತಾನು ಅರ್ಚಾವತಾರದಲ್ಲಿ ಅಜ್ಞನಂತೆಯೂ, ಅಶಕ್ತನಂತೆಯೂ, ಪರತಂತ್ರ ನಂತೆಯೂ ಇದ್ದುಕೊಂಡೇ ಅತ್ಯಂತವಿಮುಖರಾಗಿರುವ ಚೇತನರನ್ನೂ ಬಿಡಲಾ ರದ ಅಪಾರವಾದ ಕಾರುಣ್ಯಗುಣಕ್ಕೆ ಅಧೀನನಾಗಿ ಐಹಿಕವಾದ ಪುತ್ರಮಿತ್ರ ಸಂಪತ್ತಿಮೊದಲುಗೊಂಡು ಮೋಕ್ಷಸಾಮ್ರಾಜ್ಯಪರ್ಯಂತಗಳಾದ ಸಕಲಮನೋ ರಥಗಳನ್ನೂ ಆ ಆ ಅಧಿಕಾರಿಗಳಿಗೆ ತಕ್ಕಂತೆ ಪೂರ್ತಿಮಾಡುತ್ತಿರುವನು.

## ೭೫೧ ಅರ್ಚಾವತಾರಸ್ಯೈವ ಸರ್ವಸಮಾಶ್ರಯಣೀಯತ್ವೋಪ ಸಂಹಾರಃ

ಹೀಗೆ ಪಂಚಪ್ರಕಾರವಾಗಿರುವ ಪರಮಾತ್ಮಸ್ವರೂಪಗಳೊಳಗೆ ಪೂರ್ವ ಪೂರ್ವಸ್ವರೂಪಕ್ಕಿಂತಲೂ ಉತ್ತರೋತ್ತರಸ್ವರೂಪದಲ್ಲಿ ಸೌಲಭ್ಯಗುಣವು ಹೆಚ್ಚುತ್ತ ಕೊನೆಗೆ ಅರ್ಚಾವತಾರವೇ ಸೌಲಭ್ಯಕ್ಕೆ ಸೀಮಾಭೂಮಿಯಾದುದರಿಂದ—ಸಂಸಾರ ದಲ್ಲಿ ಬಿದ್ದು ನರಳುತ್ತಿರುವ ಸಮಸ್ತಚೇತನರಿಗೂ ಈ ಅರ್ಚಾವತಾರವೇ ಆಶ್ರಯ ಣೀಯವಾಗಿರುವುದೆಂಬುದರಲ್ಲಿ ಯಾವ ಆಕ್ಷೇಪವೂ ಇಲ್ಲ.

## ೭೫೨. ಈಶ್ವರಪ್ರಕರಣೋಕ್ತಾರ್ಥಸಂಗ್ರಹಃ

ಹೀಗೆ ವಿವರಿಸಿ ತೋರಿಸಿದ ಈ ಈಶ್ವರಪರಿಚ್ಛೇದದಲ್ಲಿ—ಈಶ್ವರನ ಲಕ್ಷಣ ಗಳನ್ನು ತೋರಿಸುವುದರ ಮೂಲಕ ಅವನ ಸ್ವರೂಪವೈಲಕ್ಷಣ್ಯವನ್ನೂ, ಅಂಥ ಸ್ವರೂಪಕ್ಕೆ ಔಜ್ಜ್ವಲ್ಯವನ್ನು ಉಂಟುಮಾಡುವ ಕಲ್ಯಾಣಗುಣಗಳ ವೈಲಕ್ಷಣ್ಯ ವನ್ನೂ, ಅಂಥ ಗುಣಯೋಗದಿಂದ ಅವನು ನಿರ್ವಹಿಸುವ ಸೃಷ್ಟಿಸ್ಥಿತಿಸಂಹಾರ ಮೋಕ್ಷಪ್ರದಾನಮುಂತಾದ ವ್ಯಾಪಾರಗಳನ್ನೂ, ಕಾರಣಭೂತನಾದ ಇಂಥ ಸರ್ವೇಶ್ವರನೇ ಸರ್ವರಿಗೂ ಆಶ್ರಯಣೀಯನಾಗಿರುವನೆಂಬುದನ್ನೂ, ಹೀಗೆ ಸಮಾ ಶ್ರಯಣೀಯನಾದ ಇವನೇ ಸಕಲಫಲಗಳನ್ನೂ ಕೊಡುವವನಾಗಿರುವನೆಂಬು ದನ್ನೂ, ಕಾರಣತ್ವಕ್ಕೆ ಉಪಯೋಗಿಯಾಗಿರುವ ಅತ್ಯಂತವಿಲಕ್ಷಣವಾದ ದಿವ್ಯಮಂ ಗಳವಿಗ್ರಹದ ಸಂಬಂಧವು ಇವನಿಗೆ ಉಂಟೆಂಬುದನ್ನೂ, ಇಂಥ ದಿವ್ಯಮಂಗಳವಿಗ್ರ ಹವು ಕಾನನಚಂದ್ರಿಕೆಯಂತೆ ವ್ಯರ್ಥವಾಗದಿರುವುದಕ್ಕಾಗಿ ಅದನ್ನು ಅನುಭವಿಸುವವ ರಾದ ಲಕ್ಷ್ಮಿ, ಭೂಮಿ, ನೀಳೆ ಮೊದಲಾದ ಅನಂತಮಹಿಷೀವರ್ಗಕ್ಕೆ ಇವನು ನಾಯಕನಾಗಿರುವನೆಂಬುದನ್ನೂ, ಅಂಥ ವಿಗ್ರಹಸಂಬಂಧದಿಂದ ಇವನಿಗೆ ಉಂಟಾ

ಗುವ ಪಂಚಪ್ರಕಾರವಾದ ಭೇದವನ್ನೂ ಸಂಕ್ಷೇಪವಾಗಿ ತೋರಿಸಿದೆವು. ಇನ್ನು ಮುಂದೆ ಕ್ರಮಪ್ರಾಪ್ತವಾದ ನಿತ್ಯವಿಭೂತಿದ್ರವ್ಯವನ್ನು ನಿರೂಪಿಸುವೆವು.

ಸಂಪ್ರತಿ ತತ್ತ್ವಂ ಮಲಿನಂ
ಮಿಥ್ಯಾವಾದೋ ಯದಾಽಽಗತೋ ಮಲಿನಃ ॥
ಸಂಪ್ರತಿ ತತ್ತ್ವಂ ವಿಮಲಂ
ತತ್ತ್ವವಿಶುದ್ಧಿರ್ಯದಾಽಽಗತಾ ವಿಮಲಾ ॥

ಇಂತು ತತ್ತ್ವಶುದ್ಧಿಯೆಂಬ ವಿಶಿಷ್ಟಾದ್ವೈತಪ್ರಕರಣಗ್ರಂಥದೊಳ್
ಈಶ್ವರಪರಿಚ್ಛೇದದಲ್ಲಿ ಪರತ್ವಾದಿಸ್ವರೂಪಪಂಚಕ
ನಿರೂಪಣಪ್ರಕರಣಂ ಸಪ್ತಮಂ. ೭

## ಇತಿ ಈಶ್ವರಪರಿಚ್ಛೇದಃ ತೃತೀಯಃ ಸಮಾಪ್ತಃ

॥ ಓಂ ॥

ಶ್ರೀಮತೇ ರಾಮಾನುಜಾಯ ನಮಃ.



॥ ಶ್ರೀಃ ॥

ಶ್ರೀಮತೇ ರಾಮಾನುಜಾಯ ನಮಃ

# ತತ್ತ್ವಶುದ್ಧಿ.

## ೪ ನಿತ್ಯವಿಭೂತಿಪರಿಚ್ಛೇದಂ.

### ೭೫೩. ತತ್ರಾದೌ ನಿತ್ಯವಿಭೂತಿನಿರೂಪಣಪ್ರತಿಜ್ಞಾ.

ಅತಿಕ್ರಾಂತವಾದ ಮೂರು ಪರಿಚ್ಛೇದಗಳಿಂದಲೂ ಪ್ರಕೃತಿ-ಕಾಲ-ಜೀವ-ಈಶ್ವರ ಈ ನಾಲ್ಕು ದ್ರವ್ಯಗಳನ್ನು ನಿರೂಪಿಸಿ ತೋರಿಸಿದೆವು. ಈಗ ಕ್ರಮಪ್ರಾಪ್ತವಾದ ನಿತ್ಯವಿಭೂತಿದ್ರವ್ಯವನ್ನು ನಿರೂಪಿಸುವೆವು. ಈ ನಿತ್ಯವಿಭೂತಿದ್ರವ್ಯಕ್ಕೆ ಅನೇಕಲಕ್ಷಣಗಳನ್ನು ಶಾಸ್ತ್ರಕಾರರು ತೋರಿಸಿರುವರು. ಅವುಗಳೊಳಗೆ ಕೆಲವು ಲಕ್ಷಣಗಳನ್ನು ಇಲ್ಲಿ ಬರೆವೆವು.

### ೭೫೪. ನಿತ್ಯವಿಭೂತೇಃ ಪ್ರಥಮಂ ಲಕ್ಷಣಂ.

ತ್ರಿಗುಣದ್ರವ್ಯಕ್ಕಿಂತಲೂ ಭಿನ್ನವಾದುದಾಗಿಯೂ, ಸತ್ತ್ವಗುಣವುಳ್ಳುದಾಗಿಯೂ ಇರುವ ದ್ರವ್ಯವು ನಿತ್ಯವಿಭೂತಿದ್ರವ್ಯವೆನಿಸಿಕೊಳ್ಳುವುದು. ಇಲ್ಲಿ ಪ್ರಥಮದಳವನ್ನು ಲಕ್ಷಣದಲ್ಲಿ ಸೇರಿಸದಿದ್ದರೆ ಸತ್ತ್ವಗುಣವುಳ್ಳ ತ್ರಿಗುಣದ್ರವ್ಯದಲ್ಲಿ ಈ ಲಕ್ಷಣವು ಅತಿಪ್ರಸಕ್ತವಾಗುವುದು; ಅದನ್ನು ತಪ್ಪಿಸುವುದಕ್ಕಾಗಿ ಪ್ರಥಮದಳವು ಸೇರಿಸಲ್ಪಟ್ಟಿರುವುದು. ತ್ರಿಗುಣದ್ರವ್ಯವು ತ್ರಿಗುಣದ್ರವ್ಯಕ್ಕಿಂತಲೂ ಭಿನ್ನವಲ್ಲವಾದುದರಿಂದ ಅತಿಪ್ರಸಂಗವಿಲ್ಲ. ದ್ವಿತೀಯದಳವನ್ನು ಲಕ್ಷಣದಲ್ಲಿ ಸೇರಿಸದಿದ್ದರೆ ತ್ರಿಗುಣದ್ರವ್ಯಕ್ಕಿಂತಲೂ ಭಿನ್ನಗಳಾದ ಕಾಲ-ಜೀವ-ಈಶ್ವರ-ಧರ್ಮಭೂತಜ್ಞಾನ-ಈ ನಾಲ್ಕು ದ್ರವ್ಯಗಳಲ್ಲಿ ಲಕ್ಷಣವು ಅತಿಪ್ರಸಕ್ತವಾಗುವುದು. ಅದನ್ನು ತಪ್ಪಿಸುವುದಕ್ಕಾಗಿ ದ್ವಿತೀಯದಳವು ಸೇರಿಸಲ್ಪಟ್ಟಿರುವುದು. ಉಕ್ತವಾದ ನಾಲ್ಕು ದ್ರವ್ಯಗಳೂ ಸತ್ತ್ವಗುಣವುಳ್ಳುವುಗಳಲ್ಲವಾದುದರಿಂದ ಅತಿಪ್ರಸಂಗವಿಲ್ಲ.

## ೭೫೫. ಅಥ ದ್ವಿತೀಯಂ ಲಕ್ಷಣಂ.

ರಜೋಗುಣರಹಿತವಾಗಿಯೂ ಸತ್ತ್ವಗುಣವುಳ್ಳದಾಗಿಯೂ ಇರುವ ದ್ರವ್ಯವು ನಿತ್ಯವಿಭೂತಿದ್ರವ್ಯವೆನಿಸಿಕೊಳ್ಳುವುದು. ಮೊದಲನೆಯ ಲಕ್ಷಣದಲ್ಲಿ ತೋರಿಸಿದಂತೆಯೇ ಇಲ್ಲಿಯೂ ದಳಪ್ರಯೋಜನಗಳನ್ನು ತಿಳಿಯಬೇಕು.

## ೭೫೬. ತೃತೀಯಂ ಲಕ್ಷಣಂ.

ತಮೋಗುಣರಹಿತವಾಗಿಯೂ ಸತ್ತ್ವಗುಣವುಳ್ಳದಾಗಿಯೂ ಇರುವ ದ್ರವ್ಯವು ನಿತ್ಯವಿಭೂತಿದ್ರವ್ಯವೆನಿಸಿಕೊಳ್ಳುವುದು. ದಳಪ್ರಯೋಜನವು ಪೂರ್ವದಂತೆಯೇ.

## ೭೫೭. ಚತುರ್ಥಂ ಲಕ್ಷಣಂ.

ಸ್ವಯಂಪ್ರಕಾಶವಾಗಿಯೂ ಸತ್ತ್ವಗುಣವುಳ್ಳದಾಗಿಯೂ ಇರುವ ದ್ರವ್ಯವು ನಿತ್ಯವಿಭೂತಿದ್ರವ್ಯವೆನಿಸಿಕೊಳ್ಳುವುದು. ಪ್ರಥಮದಳದ ಪ್ರಯೋಜನವು ಮೊದಲಿನಂತೆಯೇ. ಕಾಲವು ಸ್ವಯಂಪ್ರಕಾಶವೂ ಅಲ್ಲ; ಸತ್ತ್ವಗುಣವುಳ್ಳದೂ ಅಲ್ಲ. ಆದುದರಿಂದ ಕಾಲದಲ್ಲಿ ಅತಿಪ್ರಸಂಗಕ್ಕೆ ಅವಕಾಶವೇ ಇಲ್ಲವಾದಕಾರಣ ಸ್ವಯಂಪ್ರಕಾಶಗಳಾದ ಉಳಿದ ಮೂರುದ್ರವ್ಯಗಳಲ್ಲಿ—ಎಂದರೆ ಜೀವ, ಈಶ್ವರ, ಧರ್ಮಭೂತಜ್ಞಾನ ಇವುಗಳಲ್ಲಿ ಅತಿಪ್ರಸಂಗವನ್ನು ತಪ್ಪಿಸುವುದಕ್ಕಾಗಿ ದ್ವಿತೀಯದಳವು ಸೇರಿಸಲ್ಪಟ್ಟಿರುವುದು.

## ೭೫೮. ಪಂಚಮಂ ಲಕ್ಷಣಂ.

ಪುಣ್ಯಪಾಪರೂಪವಾದ ಕರ್ಮವೆಂಬ ಅವಿದ್ಯೆಗೆ ನಿಶ್ಶೇಷವಾಗಿ ನಿವೃತ್ತಿಯುಂಟಾಗಬೇಕಾದರೆ ಯಾವ ಪ್ರದೇಶವನ್ನು ಹೊಂದಬೇಕೋ ಅಂಥ ಪ್ರದೇಶಕ್ಕಿಂತಲೂ ವಿಜಾತೀಯವಾದ ಯಾವ ದ್ರವ್ಯವುಂಟೋ ಅಂಥ ದ್ರವ್ಯಕ್ಕಿಂತಲೂ ಭಿನ್ನವಾದ ದ್ರವ್ಯವು ನಿತ್ಯವಿಭೂತಿಯೆನಿಸಿಕೊಳ್ಳುವುದು.

ಜೀವನು ಪ್ರಕೃತಿಮಂಡಲಕ್ಕೆ ಒಳಪಟ್ಟಿರುವವರೆಗೂ ಇವನಿಗೆ ಕರ್ಮಸಂಬಂಧವು ತಪ್ಪುವುದಿಲ್ಲ; ತ್ರಿಪಾದ್ವಿಭೂತಿಯೆಂಬ ಪರಮಪದಪ್ರದೇಶವನ್ನು ಸೇರಿದರೇನೇ ಕರ್ಮಸಂಬಂಧವು ನಿಶ್ಶೇಷವಾಗಿ ನಿವೃತ್ತವಾಗುವುದು. ಆದಕಾರಣ "ಜೀವನ ನಿಶ್ಶೇಷಾವಿದ್ಯಾನಿವೃತ್ತಿಗೆ ಹೇತುವಾದ ಪ್ರದೇಶವೇ ನಿತ್ಯವಿಭೂತಿದ್ರವ್ಯವೆನಿಸಿಕೊಳ್ಳುವುದು" ಎಂದು ಇಷ್ಟುಮಾತ್ರವನ್ನೇ ಲಕ್ಷಣವಾಗಿ ಹೇಳುವುದಾದರೆ ನಿತ್ಯವಿಭೂತಿದ್ರವ್ಯದ ಏಕದೇಶದಲ್ಲಿ ಈ ಲಕ್ಷಣಕ್ಕೆ ಸಮನ್ವಯವುಂಟಾದರೂ ಮುಕ್ತರಿಗೂ ನಿತ್ಯಸೂರಿಗಳಿಗೂ ಈಶ್ವರನಿಗೂ ಶರೀರವಾಗಿ ಪರಿಣಮಿಸಿರುವ

ನಿತ್ಯವಿಭೂತಿದ್ರವ್ಯದಲ್ಲಿ ಈ ಲಕ್ಷಣವು ವ್ಯಾಪಿಸಲಾರದಾಗಿ ಅವ್ಯಾಪ್ತಿದೋಷವು ಪ್ರಸಕ್ತವಾಗುವುದು.

ಓಹೋ—ಅದೇತಕ್ಕೆ? "ನಿಶ್ಶೇಷವಾದ ಅವಿದ್ಯಾನಿವೃತ್ತಿಗೆ ಕಾರಣವಾದ ದೇಶಕ್ಕೆ ಸಜಾತೀಯವಾದ ದ್ರವ್ಯವು ನಿತ್ಯವಿಭೂತಿದ್ರವ್ಯವೆನಿಸಿಕೊಳ್ಳುವುದು" ಎಂದು ಲಕ್ಷಣವನ್ನು ಹೇಳುವೆವಾದರೆ—ಅಂಥ ದೇಶಕ್ಕೆ ಸಜಾತೀಯವೇ ಆಗಿರುವ ನಿತ್ಯಮುಕ್ತೇಶ್ವರರ ಶರೀರಗಳಲ್ಲಿಯೂ ಲಕ್ಷಣವು ವ್ಯಾಪಿಸುವುದಾದುದರಿಂದ ಅವ್ಯಾಪ್ತಿದೋಷಕ್ಕೆ ಅವಕಾಶವಿಲ್ಲವಷ್ಟೆ?

ಹಾಗೆ ಲಕ್ಷಣವನ್ನು ಹೇಳುವುದಾದರೆ ಅವ್ಯಾಪ್ತಿದೋಷಕ್ಕೆ ಪರಿಹಾರವಾದರೂ ಮತ್ತೊಂದುಕಡೆಯಲ್ಲಿ ಅತಿವ್ಯಾಪ್ತಿದೋಷವು ಪ್ರಸಕ್ತವಾಗುವುದು; ಹೇಗೆಂದರೆ—ಸ್ವಯಂಪ್ರಕಾಶತ್ವವೂ ದ್ರವ್ಯತ್ವವೂ ನಿತ್ಯವಿಭೂತಿಗೆ ಇರುವಂತೆ ಜೀವೇಶ್ವರ ಧರ್ಮಭೂತಜ್ಞಾನಗಳೆಂಬ ಮೂರಕ್ಕೂ ಸ್ವಯಂಪ್ರಕಾಶತ್ವದ್ರವ್ಯತ್ವಗಳಿರುವುದರಿಂದ ಸ್ವಯಂಪ್ರಕಾಶತ್ವಾಕಾರದಿಂದಲೂ, ದ್ರವ್ಯತ್ವಾಕಾರದಿಂದಲೂ ನಿತ್ಯವಿಭೂತಿಗೆ ಸಜಾತೀಯಗಳಾಗಿರುವ ಈ ಮೂರರಲ್ಲಿಯೂ ಲಕ್ಷಣವು ಅತಿಪ್ರಸಕ್ತವಾಗುವುದು.

ಹೀಗೆ ಪ್ರಸಕ್ತಗಳಾಗುವ ಅವ್ಯಾಪ್ತ್ಯತಿವ್ಯಾಪ್ತಿದೋಷಗಳನ್ನು ಪರಿಹರಿಸುವುದಕ್ಕಾಗಿ **"ನಿಶ್ಶೇಷಾವಿದ್ಯಾನಿವೃತ್ತಿಗೆ ಹೇತುವಾದ ದೇಶಕ್ಕೆ ವಿಜಾತೀಯವಾದ ದ್ರವ್ಯಕ್ಕಿಂತಲೂ ಭಿನ್ನವಾದ ದ್ರವ್ಯವು ನಿತ್ಯವಿಭೂತಿದ್ರವ್ಯವೆನಿಸಿಕೊಳ್ಳುವುದು"** ಎಂದು ಲಕ್ಷಣವು ಪರಿಷ್ಕರಿಸಲ್ಪಟ್ಟಿರುವುದು. ಪ್ರಕೃತಿ, ಕಾಲ, ಜೀವ, ಈಶ್ವರ, ಧರ್ಮಭೂತಜ್ಞಾನ ಈ ಐದುದ್ರವ್ಯಗಳೂ ದ್ರವ್ಯತ್ವದ ಅವಾಂತರಜಾತಿಗಳಾದ ಭಿನ್ನಭಿನ್ನಜಾತಿಗಳೊಡನೆ ಕೂಡಿರುವುವಾದ ಪ್ರಯುಕ್ತ ನಿಶ್ಶೇಷಾವಿದ್ಯಾನಿವೃತ್ತಿಹೇತುವಾದ ದೇಶಕ್ಕಿಂತಲೂ ವಿಜಾತೀಯವಾದ ಈ ದ್ರವ್ಯಗಳಿಗಿಂತಲೂ ನಿತ್ಯವಿಭೂತಿದ್ರವ್ಯವೂ, ಅದರ ಪರಿಣಾಮಗಳಾದ ನಿತ್ಯಮುಕ್ತೇಶ್ವರಶರೀರಗಳೂ ಭಿನ್ನಗಳಾಗಿಯೇ ಇರುವಕಾರಣ ಎಲ್ಲಾ ನಿತ್ಯವಿಭೂತಿದ್ರವ್ಯಗಳಲ್ಲಿಯೂ ಲಕ್ಷಣಕ್ಕೆ ಸಮನ್ವಯವುಂಟಾಗುವುದರಿಂದ ನಿತ್ಯಮುಕ್ತೇಶ್ವರರ ಶರೀರಗಳಲ್ಲಿ ಅವ್ಯಾಪ್ತಿದೋಷವಾಗಲಿ, ಜೀವೇಶ್ವರಧರ್ಮಭೂತಜ್ಞಾನಗಳಲ್ಲಿ ಅತಿವ್ಯಾಪ್ತಿದೋಷವಾಗಲಿ ಪ್ರಸಕ್ತವಾಗದು. ಈಶ್ವರನಲ್ಲಿರುವ ಈಶ್ವರತ್ವಧರ್ಮವು ಜಾತಿಯಲ್ಲವಾದುದರಿಂದ ಅಲ್ಲಿ ಜಾತಿಶಬ್ದವನ್ನು ಧರ್ಮಪರವೆಂದು ತಿಳಿಯಬೇಕು.

## ೭೫೯ ಷಷ್ಠಂ ಲಕ್ಷಣಂ

ಜ್ಞಾನ, ಮತ್ತು ಜ್ಞಾನಾಶ್ರಯ ಇವುಗಳಿಗಿಂತಲೂ ಭಿನ್ನವಾಗಿಯೂ ಸ್ವಯಂಪ್ರಕಾಶವಾಗಿಯೂ ಇರುವ ದ್ರವ್ಯವು ನಿತ್ಯವಿಭೂತಿಯೆನಿಸಿಕೊಳ್ಳುವುದು. ಇಲ್ಲಿ ಪ್ರಥಮದಳವನ್ನು ಲಕ್ಷಣದಲ್ಲಿ ಸೇರಿಸದಿದ್ದರೆ ಸ್ವಯಂಪ್ರಕಾಶವಾದ ಧರ್ಮಭೂತಜ್ಞಾನ, ಜೀವ, ಈಶ್ವರ ಇವರಲ್ಲಿ ಲಕ್ಷಣವು ಅತಿಪ್ರಸಕ್ತವಾಗುವುದು. ಅದನ್ನು ತಪ್ಪಿಸುವುದಕ್ಕಾಗಿ ಪ್ರಥಮದಳವು ಸೇರಿಸಲ್ಪಟ್ಟಿರುವುದು. ಅಷ್ಟುಮಾತ್ರವನ್ನೇ ಲಕ್ಷಣವಾಗಿ ಹೇಳಿ ದ್ವಿತೀಯದಳವನ್ನು ಬಿಡುವುದಾದರೆ ಪ್ರಕೃತಿ ಕಾಲ ಇವುಗಳಲ್ಲಿ ಲಕ್ಷಣವು ಅತಿಪ್ರಸಕ್ತವಾಗುವುದು. ಅದನ್ನು ತಪ್ಪಿಸುವುದಕ್ಕಾಗಿ ದ್ವಿತೀಯದಳವು ಸೇರಿಸಲ್ಪಟ್ಟಿರುವುದು. ಪ್ರಕೃತಿಕಾಲಗಳು ಸ್ವಯಂಪ್ರಕಾಶಗಳಲ್ಲವಾದುದರಿಂದ ಅತಿಪ್ರಸಂಗವಿಲ್ಲ.

## ೭೬೦. ನಿತ್ಯವಿಭೂತಿಸದ್ಭಾವೇ ಬಹುಪ್ರಮಾಣಪ್ರದರ್ಶನಂ.

"ಪೂಜ್ಯರೆ? ನಿತ್ಯವಿಭೂತಿಗೆ ಲಕ್ಷಣವನ್ನೇನೋ ತೋರಿಸಿದಿರಿ; ಆದರೆ ಲಕ್ಷಣಮಾತ್ರದಿಂದಲೇ ಪದಾರ್ಥವು ಸಿದ್ಧಿಸುವದಿಲ್ಲ. ಪದಾರ್ಥವು ಸಿದ್ಧಿಸುವುದಕ್ಕಾಗಿ ಲಕ್ಷಣಪ್ರಮಾಣಗಳೆರಡೂ ಇರಬೇಕು. "ಲಕ್ಷಣಪ್ರಮಾಣಾಭ್ಯಾಂ ಹಿ ವಸ್ತುಸಿದ್ಧಿಃ" ಎಂದಲ್ಲವೆ ಶಾಸ್ತ್ರಮರ್ಯಾದೆ ಇರುವುದು. ನಿತ್ಯವಿಭೂತಿಯೆಂಬ ಒಂದು ದ್ರವ್ಯವುಂಟೆಂದು ತೋರಿಸಿಕೊಡುವ ಪ್ರಮಾಣವೇ ಇಲ್ಲದಿರುವಲ್ಲಿ ಲಕ್ಷಣಮಾತ್ರದಿಂದ ನಿತ್ಯವಿಭೂತಿಯನ್ನು ಹೇಗೆ ಅಂಗೀಕರಿಸಲಾದೀತು?"

ಎಂದು ಆಶಂಕಿಸಬೇಕಾದುದಿಲ್ಲ. ನಿತ್ಯವಿಭೂತಿಯ ವಿಷಯದಲ್ಲಿ ಸಾವಿರಾರು ಪ್ರಮಾಣವಚನಗಳುಂಟು. ಅವುಗಳಲ್ಲಿ ಕೆಲವನ್ನು ಇಲ್ಲಿ ಬರೆವೆವು—

೧. **"ಆದಿತ್ಯವರ್ಣಂ ತಮಸಃ ಪರಸ್ತಾತ್"** ಎಂಬ ಶ್ರುತಿ-ತಮಶ್ಶಬ್ದವಾಚ್ಯವಾದ ಪ್ರಕೃತಿತತ್ತ್ವಕ್ಕಿಂತಲೂ ವಿಲಕ್ಷಣವಾದುದಾಗಿಯೂ, ಆದಿತ್ಯನಂತೆ ದೇದೀಪ್ಯಮಾನವಾಗಿಯೂ ಇರುವ ಅಪ್ರಾಕೃತಶುದ್ಧಸತ್ತ್ವರೂಪವಾದ ದಿವ್ಯಮಂಗಳವಿಗ್ರಹವನ್ನು ತೋರಿಸುವುದರಿಂದ ಅಂಥ ದ್ರವ್ಯವೂ ಒಂದು ಉಂಟೆಂದು ಸಿದ್ಧವಾಗುವುದು.

೨. ಮತ್ತು **"ತೇ ಹ ನಾಕಂ ಮಹಿಮಾನಃ ಸಚಂತೇ"** ಎಂಬ ಶ್ರುತಿ ಭಗವನ್ನಿಷ್ಠರಾದವರು. ಅಪಾರವಾದ ಮಹಿಮೆಯೊಡನೆ ಕೂಡಿದವರಾಗಿ ನಾಕಶಬ್ದವಾಚ್ಯವಾದ ಪರಮಪದವೆಂಬ ಅಪ್ರಾಕೃತಸ್ಥಾನವನ್ನು ಹೊಂದುವರೆಂದು ಹೇಳುತ್ತಿರುವುದರಿಂದ ಅಂಥ ದ್ರವ್ಯವೊಂದು ಉಂಟೆಂದು ಒಪ್ಪಬೇಕು. ಇಲ್ಲಿ ಈ ನಾಕ

ಶಬ್ದವು ಅರ್ವಾಚೀನವಾದ ಸ್ವರ್ಗಲೋಕವನ್ನು ಬೋಧಿಸುವುದೆಂದು ಭ್ರಮಿಸ ಬಾರದು; ಈ ಶ್ರುತಿಯ ಮುಂದಿನವಾಕ್ಯವಾದ "**ಯತ್ರ ಪೂರ್ವೇ ಸಾಧ್ಯಾಸ್ಸಂತಿ ದೇವಾಃ**" ಎಂಬ ವಾಕ್ಯವು ಅಂಥ ನಾಕಲೋಕದಲ್ಲಿ ಸಂಸಾರಗಂಧವನ್ನೇ ಅರಿ ಯದ ನಿತ್ಯಸೂರಿಗಳಿರುವರೆಂದು ತೋರಿಸುವುದರಿಂದ ಅಸ್ಪೃಷ್ಟಸಂಸಾರಗಂಧ ರಾದ ನಿತ್ಯಸೂರಿಗಳಿಗೆ ವಾಸಸ್ಥಾನವಾದ ನಾಕವು ಪರಮಪದವೇ ಆಗಬೇಕಲ್ಲದೆ ಅರ್ವಾಚೀನಸ್ವರ್ಗಲೋಕವಾಗಲಾರದು.

೩. ಮತ್ತು "**ಕ್ಷಯಂತಮಸ್ಯ ರಜಸಃ ಪರಾಕೇ**" ಎಂಬ ಶ್ರುತಿ-ರಜ ಶ್ಶಬ್ದವಾಚ್ಯವಾದ ಪ್ರಕೃತಿಮಂಡಲಕ್ಕಿಂತಲೂ ವಿಲಕ್ಷಣವಾದ ಪರಮಪದವೆಂಬ ಸ್ಥಾನದಲ್ಲಿ ಸರ್ವೇಶ್ವರನು ವಾಸಮಾಡುತ್ತಿರುವನೆಂದು ತೋರಿಸುವುದು. "ಸರ್ವ ವ್ಯಾಪಕನಾದ ಸರ್ವೇಶ್ವರನು ಸರ್ವತ್ರ ವಾಸಮಾಡುತ್ತಿರುವಲ್ಲಿ ಪರಮಪದವೆಂಬ ಒಂದು ಸ್ಥಳದಲ್ಲಿ ವಾಸಮಾಡುತ್ತಿರುವನೆಂದು ಹೇಗೆ ಹೇಳಲಾದೀತು" ಎಂದು ಆಶಂಕಿಸಬಾರದು. ಜ್ಞಾನಾನಂದಾತ್ಮಕವಾದ ಪರಮಾತ್ಮಸ್ವರೂಪವು ಸರ್ವತ್ರ ಪರಿಪೂರ್ಣವಾಗಿ ಇರುತ್ತಿದ್ದರೂ ವಿಗ್ರಹವಿಶಿಷ್ಟನಾಗಿ ಪರಮಾತ್ಮನು ಪರಮಪದ ದಲ್ಲಿ ವಾಸಮಾಡುತ್ತಿರುವನೆಂದು ಹೇಳಲು ತಡೆಯಿಲ್ಲವಷ್ಟೆ? ಮುಕ್ತರಿಗೂ ನಿತ್ಯರಿಗೂ ವಾಸಸ್ಥಾನವಾದ ಪರಮಪದದಲ್ಲಿ ಅವರಿಗೆ ಬ್ರಹ್ಮಾನಂದಾನುಭವವನ್ನು ಉಂಟು ಮಾಡುವುದಕ್ಕಾಗಿಯೂ, ಅವರಿಂದ ಸೇವೆಯನ್ನು ಕೈಗೊಳ್ಳುವುದಕ್ಕಾಗಿಯೂ, ವಿಗ್ರಹವಿಶಿಷ್ಟನಾಗಿ ತಾನು ಅಲ್ಲಿ ವಾಸಮಾಡಬೇಕಷ್ಟೆ?

೪. ಮತ್ತು **ಯೋ ಅಸ್ಯಾಧ್ಯಕ್ಷಃ ಪರಮೇ ವ್ಯೋಮನ್**" ಎಂಬ ಶ್ರುತಿ ಈ ಸಮಸ್ತಪ್ರಪಂಚಕ್ಕೂ ಅಧ್ಯಕ್ಷನಾದ ಸರ್ವೇಶ್ವರನು ಪರಮವ್ಯೋಮಶಬ್ದ ವಾಚ್ಯವಾದ ಅಪ್ರಾಕೃತಸ್ಥಾನದಲ್ಲಿ ಇರುವನೆಂದು ತೋರಿಸುತ್ತಿರುವುದು. **ತದ ಕ್ಷರೇ ಪರಮೇ ವ್ಯೋಮನ್**" ಎಂಬ ಶ್ರುತಿ ಇದರೊಡನೆ ಮೈತ್ರಿಯನ್ನು ಬೆಳಸು ತ್ತಿರುವುದು.

೫. ಮತ್ತು "**ಸಹಸ್ರಸ್ಥೂಣೇ ವಿಮಿತೇ ದೃಢ ಉಗ್ರೇ ಯತ್ರ ದೇವಾ ನಾಮಧಿದೇವ ಆಸ್ತೇ**" ಎಂಬ ಶ್ರುತಿ—ಅತ್ಯಂತವಿಶಾಲವಾಗಿಯೂ, ಸೃಷ್ಟಿಪ್ರ ಳಯಗಳಿಗೆ ಗೋಚರವಾಗದಾದುದರಿಂದ ದೃಢವೆನಿಸಿಕೊಂಡುದಾಗಿಯೂ, ಭಗ ವದ್ವಿಮುಖರಾದವರಿಗೆ ಹೊಂದಲಶಕ್ಯವಾದುದರಿಂದ ಉಗ್ರವೆನಿಸಿಕೊಂಡುದಾಗಿ ಯೂ, ಒಂದುಸಾವಿರ ಕಂಬಗಳುಳ್ಳದಾಗಿಯೂ, ಇರುವ ಮಹಾಮಣಿಮಂಟಪ ವೆಂಬ ದಿವ್ಯಾಸ್ಥಾನದಲ್ಲಿ ನಿತ್ಯಸೂರಿಗಳಿಗೆಲ್ಲಾ ಒಡೆಯನಾದ ಸರ್ವೇಶ್ವರನು ವಿರಾಜಮಾನನಾಗಿರುವನೆಂದು ತೋರಿಸುತ್ತಿರುವುದು.

೭. ಮತ್ತು "ಹಿರಣ್ಮಯೇ ಪರೇ ಕೋಶೇ ವಿರಜಂ ಬ್ರಹ್ಮ ನಿಷ್ಕಳಂ ತಚ್ಛುಭ್ರಂ ಜ್ಯೋತಿಷಾಂ ಜ್ಯೋತಿಃ" ಎಂಬ ಶ್ರುತಿ—ಅಪ್ರಾಕೃತವಾದ ತೇಜೋಮಯವಾದುದರಿಂದ ಹಿರಣ್ಮಯವೆಂದು ಹೇಳಲ್ಪಡಬಹುದಾದ ಉತ್ಕೃಷ್ಟ ವಾದ ಲೋಕವಿಶೇಷದಲ್ಲಿ ಹೇಯಗುಣರಹಿತನಾಗಿಯೂ, ಕರ್ಮಕೃತವಾದ ಶರೀರ ವಿಲ್ಲದವನಾಗಿಯೂ, ಸ್ವತಶ್ಶುದ್ಧನಾಗಿಯೂ, ನಿರ್ವಿಕಾರನಾಗಿಯೂ ಇರುವ ಬ್ರಹ್ಮ ಶಬ್ದವಾಚ್ಯನಾದ ಪರಮಾತ್ಮನನ್ನು ಭಗವದುಪಾಸಕರು ಸಾಕ್ಷಾತ್ಕರಿಸುತ್ತಿರುವ ರೆಂದು ತೋರಿಸುತ್ತಿರುವುದು.

೭. ಮತ್ತು—"ಪಾದೋಽಸ್ಯ ವಿಶ್ವಾಭೂತಾನಿ ತ್ರಿಪಾದಸ್ಯಾಮೃತಂ ದಿವಿ" ಎಂಬ ಶ್ರುತಿ—ಸಮಸ್ತಬ್ರಹ್ಮಾಂಡಗಳೂ ಸೇರಿ ಪರಮಾತ್ಮನ ಐಶ್ವರ್ಯ ದೊಳಗೆ ಒಂದು ಕಲಾಮಾತ್ರವೆನಿಸಿಕೊಳ್ಳುವುವೆಂದೂ, ಇದಕ್ಕೆ ಇನ್ನೂ ಮೂರು ಪಾಲಷ್ಟು ಹೆಚ್ಚಿದ ಐಶ್ವರ್ಯವು ದ್ಯುಶಬ್ದವಾಚ್ಯವಾದ ಪರಮಪದಸ್ಥಾನದಲ್ಲಿ ಪರ ಮಾತ್ಮನಿಗೆ ಇರುವುದೆಂದೂ ತೋರಿಸುತ್ತಿರುವುದು.

೮. ಮತ್ತು "ಯಥಾ ಪಾದೋದರಸ್ತ್ವಚಾ ವಿನಿರ್ಮುಚ್ಯತೇ ಏವಂ ಹೈವ ಸ ಪಾಪ್ಮನಾ ವಿನಿರ್ಮುಕ್ತಸ್ಸಸಾಮಭಿರುನ್ನೀಯತೇ ಬ್ರಹ್ಮಲೋಕಂ" ಎಂಬ ಶ್ರುತಿ—ಸರ್ಪವು ಬಿಳುಪಾಗಿಯೂ ಸೂಕ್ಷ್ಮವಾಗಿಯೂ ಇರುವ ಚರ್ಮ ವೆಂಬ ಕವಚದಿಂದ ಬಿಡಲ್ಪಡುವಂತೆ ಭಗವದುಪಾಸಕನು ಸರ್ವಕರ್ಮಪಾಶ ಗಳಿಂದಲೂ ಬಿಡಲ್ಪಟ್ಟು ಶುದ್ಧನಾಗಿ ಸಾಮಗಾನಮಾಡುತ್ತಿರುವ ದಿವ್ಯಪುರುಷರು ಗಳಿಂದ ಬ್ರಹ್ಮಲೋಕವೆಂಬ ಅಪ್ರಾಕೃತಸ್ಥಾನಕ್ಕೆ ಒಯ್ಯಲ್ಪಡುವನೆಂದು ತೋರಿ ಸುವುದು. ಇಲ್ಲಿ ಬ್ರಹ್ಮಲೋಕಶಬ್ದದಿಂದ ಚತುರ್ಮುಖಬ್ರಹ್ಮನ ಲೋಕವೇ ಹೇಳಲ್ಪಡುವುದೆಂದು ಭ್ರಾಂತಿಪಡಬಾರದು. ಚತುರ್ಮುಖಬ್ರಹ್ಮಲೋಕವನ್ನು ಹೊಂದುವವನಿಗೆ ಕರ್ಮಸಂಬಂಧವು ಇನ್ನೂ ಅನುವರ್ತಿಸುತ್ತಿರುವುದರಿಂದ ಸರ್ವ ಕರ್ಮಪಾಶನಿವೃತ್ತಿಯಿಲ್ಲವಷ್ಟೆ.

[೧] ಪೂಜ್ಯರೆ! "ಉದಾಹೃತವಾದ ಈ ಪ್ರಶ್ನೋಪನಿಷದ್ವಾಕ್ಯದಲ್ಲಿರುವ ಬ್ರಹ್ಮಲೋಕಶಬ್ದದಿಂದ ಚತುರ್ಮುಖಬ್ರಹ್ಮಲೋಕವು ವಿವಕ್ಷಿತವಲ್ಲವೆಂದು ನೀವು

---

೧ ನಿಷಾದಸ್ಥಪತ್ಯಧಿಕರಣನ್ಯಾಯದ ಸ್ವರೂಪವನ್ನು ಮೀಮಾಂಸಕರು ಪೂರ್ವಮೀಮಾಂ ಸೆಯ ಆರನೆಯ ಅಧ್ಯಾಯದ ಒಂದನೆಯ ಪಾದದ ಕೊನೆಯ ಅಧಿಕರಣದಲ್ಲಿ ತೋರಿಸಿರುವರು. ಹೇಗೆಂದರೆ—

"ವಾಸ್ತುಮಯಂ ರೌದ್ರಂ ಚರುಂ ನಿರ್ವಪೇತ್ ಯತ್ರ ರುದ್ರಃ ಪ್ರಜಾಃ ಶಮಯತಿ" ಎಂಬುದೊಂದು ಶ್ರುತಿವಾಕ್ಯವಿರುವುದು. ಇದರ ಅರ್ಥವೇನೆಂದರೆ

ಹೇಗೆ ಹೇಳುತ್ತೀರೋ, ಹಾಗೆ ಬ್ರಹ್ಮಶಬ್ದವಾಚ್ಯನಾದ ಪರಮಾತ್ಮನ ಲೋಕವೂ ವಿವಕ್ಷಿತವಲ್ಲವೆಂದು ನಾವೂ ಹೇಳುವೆವು ; ಏತಕ್ಕೆಂದರೆ—ಸಮಾಸವನ್ನು ಪಡೆದಿರುವ ಈ ಬ್ರಹ್ಮಲೋಕಶಬ್ದದಲ್ಲಿ ಯಾವ ಸಮಾಸವು ವಿವಕ್ಷಿತವಾಗುವುದು ? ಷಷ್ಠೀತತ್ಪುರುಷವೋ ? ಅಥವಾ ಕರ್ಮಧಾರಯವೋ ? ಎಂಬ ಸಂಶಯವುಂಟಾದರೆ ನಿಷಾದಸ್ಥಪತ್ಯಧಿಕರಣನ್ಯಾಯದಿಂದ ಷಷ್ಠೀತತ್ಪುರುಷಸಮಾಸವನ್ನು

---

ಪ್ರಜೆಗಳ ಅತ್ಯಾಚರಣದಿಂದ ರುದ್ರನು ಕುಪಿತನಾಗಿ ಅಕಾಲದಲ್ಲಿ ಪ್ರಜೆಗಳನ್ನು ಸಂಹರಿಸಲು ಉಪಕ್ರಮಿಸಿದನಾದರೆ ಅಂಥ ಸಂದರ್ಭದಲ್ಲಿ ರುದ್ರದೇವತೆಯ ಕೋಪಶಾಂತಿಗಾಗಿ ರುದ್ರದೇವತಾಕವಾಗಿಯೂ, ಚರುದ್ರವ್ಯಕವಾಗಿಯೂ ಇರುವ ಇಷ್ಟಿವಿಶೇಷರೂಪವಾದ ಯಾಗವನ್ನು ಮಾಡಬೇಕು ; ಎಂಬುದು ಇದರ ಅಭಿಪ್ರಾಯವಾಗಿರುವುದು. ಇಲ್ಲಿ ವಾಸ್ತುಶಬ್ದವು ಚರುದ್ರವ್ಯಕ್ಕೆ ಪ್ರಕೃತಿಭೂತವಾದ ಒಂದಾನೊಂದು ದ್ರವ್ಯವಿಶೇಷವನ್ನು ತೋರಿಸುವುದು.

ಹೀಗೆ ರುದ್ರದೇವತೆಯ ಕೋಪಶಾಂತಿಗಾಗಿ ರೌದ್ರೇಷ್ಟಿಯನ್ನು ವಿಧಿಸಿರುವ ಈ ವಿಧಿವಾಕ್ಯದ ಅನಂತರದಲ್ಲಿ **"ಏತಯಾ ನಿಷಾದಸ್ಥಪತಿಂ ಯಾಜಯೇತ್"** ಎಂಬ ಮತ್ತೊಂದು ವಾಕ್ಯವು ಉಕ್ತವಾಗಿರುವುದು. ರೌದ್ರೇಷ್ಟಿಯಲ್ಲಿ ಯಾವನಿಗೆ ಅಧಿಕಾರವಿರುವುದೆಂಬ ಸಂದೇಹವನ್ನು ಹೋಗಲಾಡಿಸಿ ಈ ವಾಕ್ಯವು ನಿಷಾದಸ್ಥಪತಿಗೇ ಅಧಿಕಾರವಿರುವುದೆಂದು ನಿಷ್ಕರ್ಷಿಸಿಕೊಡುವುದು.

ಈಗ ಈ ನಿಷಾದಸ್ಥಪತಿಶಬ್ದದ ಅರ್ಥವೇನೆಂದು ವಿಚಾರವುಂಟಾಗುವುದು. ಸ್ಥಪತಿಶಬ್ದವು ಶ್ರೇಷ್ಠನೆಂಬ ಅರ್ಥವನ್ನು ತೋರಿಸುವುದರ ಮೂಲಕ ಅಧಿಪತಿಯೆಂಬ ಅರ್ಥದಲ್ಲಿ ವಿಶ್ರಾಂತವಾಗುವುದು. ಶ್ರೇಷ್ಠನಾದವನಲ್ಲವೆ ಅಧಿಪತಿಯಾಗುವನು. ನಿಷಾದಶಬ್ದವು ವ್ಯಾಧಜಾತೀಯವ್ಯಕ್ತಿಸಾಮಾನ್ಯದಲ್ಲಿ ರೂಢವಾಗಿರುವುದು. ಸಮಸ್ತವಾಗಿರುವ ಈ ನಿಷಾದಸ್ಥಪತಿಶಬ್ದದಲ್ಲಿ **"ನಿಷಾದಾನಾಂ ಸ್ಥಪತಿಃ"** ಎಂಬ ಷಷ್ಠೀಸಮಾಸವು ವಿವಕ್ಷಿತವೋ ? ಅಥವಾ **"ನಿಷಾದಶ್ಚಾಸೌ ಸ್ಥಪತಿಶ್ಚ ನಿಷಾದಸ್ಥಪತಿಃ"** ಎಂದು ಕರ್ಮಧಾರಯಸಮಾಸವು ವಿವಕ್ಷಿತವೋ ? ಎಂಬುದಾಗಿ ಸಂಶಯವುಂಟಾಗುವುದು; ಷಷ್ಠೀಸಮಾಸವೇ ವಿವಕ್ಷಿತವಾಗುವುದಾದರೆ ನಿಷಾದರೆಂಬ ಜಾತ್ಯಂತರದವರಿಗೆ ಅಧಿಪತಿಯಾಗಿರುವ ಒಬ್ಬಾನೊಬ್ಬ ತ್ರೈವರ್ಣಿಕನು ಈ ರೌದ್ರೇಷ್ಟಿಯಲ್ಲಿ ಅಧಿಕಾರಿಯಾಗಿರುವನೆಂದು ಅರ್ಥವಾಗುವುದು ; ಕರ್ಮಧಾರಯಸಮಾಸವೇ ವಿವಕ್ಷಿತವಾಗುವುದಾದರೆ ತ್ರೈವರ್ಣಿಕರಿಗಿಂತಲೂ ಭಿನ್ನನಾದ ವ್ಯಾಧಜಾತೀಯನೊಬ್ಬನು ಸ್ವಜಾತೀಯರಲ್ಲಿ ಶ್ರೇಷ್ಠನಾಗಿದ್ದರೆ ಅಂಥವನು ಈ ರೌದ್ರೇಷ್ಟಿಯಲ್ಲಿ ಅಧಿಕಾರಿಯಾಗಿರುವನೆಂದು ಅರ್ಥವಾಗುವುದು.

ಇಂಥ ಸಂಶಯದಲ್ಲಿ ಯಾವ ಸಮಾಸವು ಉಚಿತವಾಗಿರುವುದೆಂದು ವಿಚಾರಮಾಡಿದಾಗ ಪೂರ್ವಪಕ್ಷಿಗಳು ಹೇಳುವುದೇನೆಂದರೆ—"ಯಾಗಾನುಷ್ಠಾನಕ್ಕೆ ಉಪಯೋಗಿಗಳಾದ ದಕ್ಷಿಣಾಗ್ನಿ ಗಾರ್ಹಪತ್ಯ ಆಹವನೀಯವೆಂಬ ಮೂರು ಅಲೌಕಿಕಾಗ್ನಿಗಳು ಯಾವನಿಗಿರುವುವೋ ; ಮತ್ತು ಯಾಗಾನುಷ್ಠಾನೋಪಯೋಗಿಯಾದ ಜ್ಞಾನವು ಯಾವನಿಗಿರುವುದೋ ; ಅಂಥವನೇ ಯಾಗಾಧಿಕಾರವನ್ನು ಪಡೆಯಲು ಸಮರ್ಥನಾಗಿರುವನು ; ವ್ಯಾಧನೆಂಬ ಜಾತ್ಯಂತರದವನಿಗೆ ವೇದಾಧಿಕಾರವಿಲ್ಲವಾದುದರಿಂದ ವೈದಿಕವಾದ ಯಜ್ಞದ ಪರಿಜ್ಞಾನವಾಗಲಿ, ಯಾಗೋಪಯೋಗಿ

ನಿರಾಕರಿಸಿ ಕರ್ಮಧಾರಯಸಮಾಸವನ್ನೇ ಅಂಗೀಕರಿಸುವುದು ನ್ಯಾಯಪಕ್ಷಪಾತಿ ಗಳಿಗೆ ಯುಕ್ತವಾಗಿರುವುದು. ಆಗ **ಲೋಕ್ಯತ ಇತಿ ಲೋಕಃ** ಎಂಬ ವ್ಯುತ್ಪತ್ತಿ ಯಿಂದ ಲೋಕಶಬ್ದಕ್ಕೆ ಫಲವಾಚಕತ್ವವನ್ನು ಅಂಗೀಕರಿಸಿ **ಬ್ರಹ್ಮೈವ ಲೋಕೋ ಬ್ರಹ್ಮಲೋಕಃ ತಂ ಬ್ರಹ್ಮಲೋಕಂ** ಎಂಬ ಕರ್ಮಧಾರಯಸಮಾಸದಿಂದ ಬ್ರಹ್ಮಶಬ್ದವಾಚ್ಯವಾದ ಪರಮಾತ್ಮಸ್ವರೂಪವೆಂಬ ಫಲವನ್ನು ಉಪಾಸಕರು

---

ಗಳಾದ ಅಗ್ನಿಗಳಾಗಲಿ ಅವನಿಗೆ ಇಲ್ಲವಾದಕಾರಣ ಅಂಥ ಜಾತ್ಯಂತರದವನು ಯಾಗಾಧಿಕಾರ ವನ್ನು ಪಡೆಯಲು ಸಮರ್ಥನಾಗಲಾರನು; ಹೀಗಿರುವಾಗ ನಿಷಾದಸ್ಥಪತಿಶಬ್ದದಲ್ಲಿ ಕರ್ಮಧಾರ ಯಸಮಾಸವನ್ನು ಅಂಗೀಕರಿಸುವುದಾದರೆ ವೇದಾಧಿಕಾರವಿಲ್ಲದ ಜಾತ್ಯಂತರದವನಿಗೆ ಯಾಗಾಧಿ ಕಾರವು ಪ್ರಸಕ್ತವಾಗುವುದು ; ಅದನ್ನು ತಪ್ಪಿಸುವುದಕ್ಕಾಗಿ ಕರ್ಮಧಾರಯಸಮಾಸವನ್ನು ಬಿಟ್ಟು ಷಷ್ಠೀತತ್ಪುರುಷ ಸಮಾಸವನ್ನೇ ಅಂಗೀಕರಿಸಬೇಕು ; ಆಗ ನಿಷಾದಶಬ್ದವು ಜಾತ್ಯಂತರದವನನ್ನೇ ಬೋಧಿಸುತ್ತಿದ್ದರೂ ಅಂಥ ಜಾತ್ಯಂತರದವರಿಗೆ ಅಧಿಪತಿಯಾಗಿರುವ ಒಬ್ಬಾನೊಬ್ಬ ತ್ರೈವರ್ಣಿಕ ನನ್ನೇ ಈ ಸ್ಥಪತಿಶಬ್ದವು ತೋರಿಸಬಲ್ಲುದಾದಪ್ರಯುಕ್ತ ನಿಷಾದರಿಗೆಲ್ಲಾ ಅಧಿಪತಿಯಾಗಿರುವ ಒಬ್ಬಾನೊಬ್ಬ ತ್ರೈವರ್ಣಿಕನೇ ಈ ರೌದ್ರೇಷ್ಟಿಯಲ್ಲಿ ಅಧಿಕಾರವನ್ನು ಪಡೆವನು ; ಆದುದರಿಂದ ಕರ್ಮಧಾರಯಸಮಾಸವನ್ನು ವಿವಕ್ಷಿಸಕೂಡದು ; ಷಷ್ಠೀಸಮಾಸವನ್ನೇ ಅಂಗೀಕರಿಸಬೇಕು" ಎಂದು ಪೂರ್ವಪಕ್ಷಿಗಳು ಹೇಳುವರು.

ಇಂಥ ಪೂರ್ವಪಕ್ಷವನ್ನು ನಿರಾಕರಿಸುವುದಕ್ಕಾಗಿ ಸೂತ್ರಕಾರರು **"ಸ್ಥಪತಿರ್ನಿ ಷಾದಃ ಸ್ಯಾಚ್ಛಬ್ದಸಾಮರ್ಥ್ಯಾತ್-ಲಿಂಗದರ್ಶನಾಚ್ಚ"** ಎಂಬ ಎರಡು ಸೂತ್ರ ಗಳಿಂದ ಸಿದ್ಧಾಂತಪಕ್ಷವನ್ನು ತೋರಿಸಿರುವರು. ಈ ಸೂತ್ರಗಳ ಅಭಿಪ್ರಾಯವೇನೆಂದರೆ-"ಎಲ್ಲಾ ಶಬ್ದಗಳೂ ಮೊತ್ತಮೊದಲು ಮುಖ್ಯಾರ್ಥವನ್ನೇ ಬೋಧಿಸುವುವೆಂದೂ, ಅಂಥ ಮುಖ್ಯಾರ್ಥಕ್ಕೆ ಬಾಧೆಯೇನಾದರೂ ಇದ್ದರೆ ಆಗಮಾತ್ರವೇ ಮುಖ್ಯಾರ್ಥವನ್ನು ಬಿಟ್ಟು ಲಕ್ಷ್ಯಾರ್ಥವನ್ನು ಬೋಧಿ ಸುವುವೆಂದೂ ವ್ಯುತ್ಪತ್ತಿಸಿದ್ಧವಾಗಿಯೂ ಅನುಭವಸಿದ್ಧವಾಗಿಯೂ ಇರುವುದು. ನಿಷಾದಶಬ್ದದ ಜತೆಯಲ್ಲಿ ಸಮಾಸಮಾಡಿ ಸಹಪಠಿತವಾಗಿರುವ ಈ ಸ್ಥಪತಿಶಬ್ದಕ್ಕೆ "ನಿಷಾದನೆಂಬ ಸ್ಥಪತಿ" ಎಂಬುದೇ ಮುಖ್ಯಾರ್ಥವಾಗಿರುವುದು. "ನಿಷಾದರಿಗೆ ಅಧಿಪತಿಯಾದ ತ್ರೈವರ್ಣಿಕನು" ಎಂಬ ಅರ್ಥವು ಈ ಶಬ್ದಕ್ಕೆ ಲಕ್ಷ್ಯಾರ್ಥವಾಗಬಹುದಲ್ಲದೆ ಮುಖ್ಯಾರ್ಥವಲ್ಲ. ಅನುಪಪತ್ತಿಯಿಲ್ಲದ ಕಾಲದಲ್ಲಿ ಮುಖ್ಯಾರ್ಥವನ್ನೇ ಬೋಧಿಸಲು ಶಬ್ದಕ್ಕೆ ಸಾಮರ್ಥ್ಯವಿರುವುದಲ್ಲದೆ ಲಕ್ಷ್ಯಾರ್ಥ ವನ್ನು ಬೋಧಿಸಲು ಸಾಮರ್ಥ್ಯವಿಲ್ಲ. ಆದಕಾರಣ ಇಲ್ಲಿ ನಿಷಾದನೆಂಬ ಜಾತ್ಯಂತರದವನೇ ಸ್ಥಪತಿಶಬ್ದಕ್ಕೆ ವಾಚ್ಯನಾಗಿರುವನಲ್ಲದೆ ತ್ರೈವರ್ಣಿಕನು ವಾಚ್ಯನಲ್ಲ ;

ಅದೇತಕ್ಕೆ ? ಅನುಪಪತ್ತಿಜ್ಞಾನವಿಲ್ಲದಿದ್ದರಲ್ಲವೆ ಈ ಶಬ್ದವು ಮುಖ್ಯಾರ್ಥವನ್ನು ಬೋಧಿ ಸೀತು ; ಇಲ್ಲಿ ಅನುಪಪತ್ತಿಜ್ಞಾನವೇ ಇರುವುದು ; ಹೇಗೆಂದರೆ—ಈ ಶಬ್ದವು ನಿಷಾದನೆಂಬ ಮುಖ್ಯಾರ್ಥವನ್ನೇ ಬೋಧಿಸುವುದಾದರೆ ಆಗ ತ್ರೈವರ್ಣಿಕಬಹಿರ್ಭೂತನಾದ ವೇದಾಧಿಕಾರವಿಲ್ಲದ ಜಾತ್ಯಂತರದವನಿಗೆ ಯಜ್ಞಾಧಿಕಾರಪ್ರಸಂಗವುಂಟಾದೀತೆಂಬ ಅನುಪಪತ್ತಿಜ್ಞಾನವಿರುವುದು ; ಇದ ಕ್ಕಾಗಿ ಮುಖ್ಯಾರ್ಥವನ್ನು ಬಿಟ್ಟು ತ್ರೈವರ್ಣಿಕನೆಂಬ ಲಕ್ಷ್ಯಾರ್ಥವನ್ನು ಸ್ವೀಕರಿಸುವುದಾದರೆ ಉಕ್ತವಾದ ಅನುಪಪತ್ತಿಗೆ ಪರಿಹಾರವಾಗುವುದಲ್ಲವೆ ?

ಹೊಂದಿಸಲ್ಪಡುವಸು ಎಂಬ ಅರ್ಥವು ಲಭಿಸುವುದೇ ಹೊರತು ಪರಮಾತ್ಮ ಲೋಕವನ್ನು ಹೊಂದಿಸಲ್ಪಡುವಸು ಎಂಬ ಅರ್ಥವು ಲಭಿಸಲಾರದಲ್ಲವೆ ? "

ಇಂಥ ಆಶಂಕೆ ಸಂಗತವಲ್ಲ—ಏತಕ್ಕೆಂದರೆ ಷಷ್ಠೀತತ್ಪುರುಷಸಮಾಸಕ್ಕಿಂತಲೂ ಕರ್ಮಧಾರಯಸಮಾಸಾಂಗೀಕಾರವೇ ಉಚಿತವಾಗಿರುವುದೆಂಬುದು ನಿಷಾದಸ್ಥಪತ್ಯಧಿಕರಣನ್ಯಾಯದಿಂದ ಸ್ಥಾಪಿತವಾಗುವುದಾಗಿದ್ದರೂ ಈ ಶ್ರುತಿವಾಕ್ಯದಲ್ಲಿ ಆ ನ್ಯಾಯಕ್ಕೆ ಪ್ರವೃತ್ತಿಯುಂಟಾಗಲಾರದು ; ಏಕೆಂದರೆ—ಕರ್ಮಧಾರಯ ಸಮಾಸವನ್ನು ಅಂಗೀಕರಿಸಿ "ಬ್ರಹ್ಮಸ್ವರೂಪವೆಂಬ ಫಲವನ್ನು"ಎಂದು ಅರ್ಥವನ್ನು

---

ಇಂಥ ಆಶಂಕೆ ಸಂಗತವಲ್ಲ ; ಏತಕ್ಕೆಂದರೆ—ವಾಕ್ಯಾರ್ಥನಿರ್ಣಯದ ಉತ್ತರಕಾಲದಲ್ಲಿ ಉಂಟಾಗುವ ಈ ಅನುಪಪತ್ತಿಜ್ಞಾನವು ಅದಕ್ಕಿಂತಲೂ ಪೂರ್ವಕಾಲದಲ್ಲಿ ಉಂಟಾಗುವ ಪದಾರ್ಥನಿರ್ಣಯವನ್ನು ಬಾಧಿಸಲಾರದು. ಪದಾರ್ಥನಿರ್ಣಯಕಾಲದಲ್ಲಿಯೇ ಶಬ್ದವು ತನ್ನ ಸಾಮರ್ಥ್ಯದಿಂದ ಮುಖ್ಯಾರ್ಥವನ್ನು ಬೋಧಿಸಿ ಪದಾರ್ಥನಿಷ್ಕರ್ಷೆಯನ್ನು ಮಾಡಿಕೊಟ್ಟದಾದರೆ ಅನಂತರದಲ್ಲಿ ಉಂಟಾಗುವ ಈ ಅನುಪಪತ್ತಿಜ್ಞಾನವು ಏನುಮಾಡಬಲ್ಲುದು ? ಹಾಗಾದರೆ ವೇದಾಧಿಕಾರವಿಲ್ಲದವನಿಗೆ ವೈದಿಕಯಜ್ಞವಿಶೇಷದಲ್ಲಿ ಅಧಿಕಾರವುಂಟೆಂದು ಕಲ್ಪಿಸಬೇಕಾಗುವುದರಿಂದ ಕಲ್ಪನಾಗೌರವವಿಲ್ಲವೋ ? ಇಲ್ಲವೆಂಬುದಿಲ್ಲ ; ಉಂಟು-ಕಲ್ಪನಾಗೌರವವೂ ಇರಲಿ ; ಅಂಥ ಗೌರವವು ಇಲ್ಲಿ ಸಹ್ಯವಾಗಿರುವುದು ; ಫಲಮುಖವಾದ ಗೌರವವು ದೋಷಾವಹವಲ್ಲವೆಂದು ಶಾಸ್ತ್ರಮರ್ಯಾದೆಯುಂಟಷ್ಟೆ.

ಅದೇತಕ್ಕೆ ? **ರಾಜಪುರುಷಃ** ಎಂಬ ಪದವನ್ನು ಶ್ರವಣಮಾಡಿದರೆ ರಾಜಸಂಬಂಧಿಯಾದ ಪುರುಷನೆಂಬ ಅರ್ಥಕ್ಕೆ ಹೇಗೆ ಸ್ಫೂರ್ತಿಯುಂಟಾಗುವುದೋ ಆದರಂತೆ ಇಲ್ಲಿಯೂ **ನಿಷಾದಸ್ಥಪತಿಂ** ಎಂಬ ಪದವನ್ನು ಕೇಳಿದ ಉತ್ತರಕ್ಷಣದಲ್ಲಿಯೇ "ನಿಷಾದಸಂಬಂಧಿಯಾದ ಸ್ಥಪತಿ" ಎಂಬ ಅರ್ಥಕ್ಕೂ ಸ್ಫೂರ್ತಿಯಿದ್ದೇ ಇರುವುದಲ್ಲವೆ? ಇಲ್ಲ. ಅದಕ್ಕೆ ಸ್ಫೂರ್ತಿಯಿಲ್ಲ ; ಸಂಬಂಧಬೋಧಕವಾದ ಶಬ್ದವೇ ಇಲ್ಲಿ ಇಲ್ಲದಿರುವಾಗ ಅಂಥ ಅರ್ಥಕ್ಕೆ ಸ್ಫೂರ್ತಿ ಹೇಗೆ ಉಂಟಾದೀತು? ನಿಷಾದಶಬ್ದದಿಂದ ನಿಷಾದನೆಂಬ ಅರ್ಥವು ತೋರುವುದೇ ಹೊರತು ನಿಷಾದಸಂಬಂಧಿಯೆಂಬ ಅರ್ಥವು ತೋರುವುದಿಲ್ಲವಷ್ಟೆ ?

ಹಾಗಾದರೆ ರಾಜಪುರುಷಪದದಲ್ಲಿಯೂ ಸಂಬಂಧಬೋಧಕವಾದ ಶಬ್ದವಿಲ್ಲದಿರುವಾಗ ಅಲ್ಲಿಮಾತ್ರ ರಾಜಸಂಬಂಧಿಪುರುಷನೆಂಬ ಅರ್ಥವು ಹೇಗೆ ಸ್ಫುರಿಸುವುದು? ಹೌದು ಅಲ್ಲಿ ಸ್ಫುರಿಸುವುದು ; ಹೇಗೆಂದರೆ—**ರಾಜಪುರುಷಃ** ಎಂಬ ಸಮಾಸವಾಕ್ಯದಲ್ಲಿ ಸಂಬಂಧಬೋಧಕ ಶಬ್ದವು ಶ್ರೂಯಮಾಣವಾಗಿಲ್ಲದಿದ್ದರೂ **ರಾಜ್ಞಃ ಪುರುಷಃ** ಎಂಬ ವಿಗ್ರಹವಾಕ್ಯದಲ್ಲಿರುವ ರಾಜಪದದಮೇಲಿನ ಷಷ್ಠೀವಿಭಕ್ತಿ ಸಮಾಸವಾಕ್ಯದಲ್ಲಿ ಲುಪ್ತವಾಗಿ ಗರ್ಭೀಕೃತವಾಗಿರುವುದರಿಂದ ಅವಶಿಷ್ಟವಾಗಿರುವ ರಾಜಪದವೇ ಲಕ್ಷಣಾವೃತ್ತಿಯನ್ನು ಅವಲಂಬಿಸಿ ರಾಜಸಂಬಂಧಿಯೆಂಬ ಅರ್ಥದ ಸ್ಫೂರ್ತಿಗೆ ಹೇತುವಾಗಿರುವುದು.

ಹಾಗಾದರೆ **ನಿಷಾದಸ್ಥಪತಿ** ಶಬ್ದದಲ್ಲಿಯೂ ಸಮಾಸವಾಕ್ಯದಲ್ಲಿ ಅವಶಿಷ್ಟವಾಗಿರುವ ನಿಷಾದಪದವೇ ನಿಷಾದಸಂಬಂಧಿಯೆಂಬ ಅರ್ಥದ ಸ್ಫೂರ್ತಿಗೆ ಏಕೆ ಹೇತುವಾಗಬಾರದು ? ಇಲ್ಲ ;

ಹೇಳುವುದಾದರೆ ಅಂಥ ಫಲವನ್ನು ಹೊಂದುವುದಕ್ಕೆ ಉಪಾಸಕನು ಮತ್ತೊಂದು ಕಡೆಗೆ ಹೋಗಬೇಕಾದ ಆವಶ್ಯಕತೆಯಿರುವುದಿಲ್ಲ; ಸರ್ವವ್ಯಾಪಕವಾದ ಬ್ರಹ್ಮ ಸ್ವರೂಪವನ್ನು ತಾನಿದ್ದ ಕಡೆಯಲ್ಲಿಯೇ ಹೊಂದಿಯೇ ಇರುವನು. ಆಗ "ಮೇಲಕ್ಕೆ ಒಯ್ಯಲ್ಪಡುತ್ತಾನೆ" ಎಂಬ ಅರ್ಥವನ್ನು ಕೊಡುವ "ಉನ್ನೀಯತೇ" ಎಂಬ ಪದವು ಈ ವಾಕ್ಯದಲ್ಲಿ ಅಸಂಗತವಾಗುವುದು.

ಇಂಥ ಬಾಧಕವಿರುವುದರಿಂದ ಈ ವಾಕ್ಯದಲ್ಲಿ ನಿಷಾದಸ್ಥಪತ್ಯಧಿಕರಣ ನ್ಯಾಯವನ್ನು ಬಿಟ್ಟು ಬ್ರಹ್ಮಲೋಕಶಬ್ದದಲ್ಲಿ ಷಷ್ಠೀಸಮಾಸವನ್ನೇ ಅಂಗೀಕರಿಸು ವೆವಾದರೆ ಆಗ ಬ್ರಹ್ಮಶಬ್ದವಾಚ್ಯನಾದ ಪರಮಾತ್ಮನ ಲೋಕವೆಂಬ ಅಪ್ರಾಕೃತ ಸ್ಥಾನವು ಬ್ರಹ್ಮಸ್ವರೂಪದಂತೆ ಸರ್ವವ್ಯಾಪಕವಲ್ಲವಾದುದರಿಂದ ಪ್ರಕೃತಿಮಂಡ ಲಕ್ಕೆ ಹೊರಗಡೆಯಲ್ಲಿ (ಊರ್ಧ್ವಭಾಗದಲ್ಲಿ) ಇರುವ ಅಂಥ ಲೋಕವನ್ನು ಹೊಂದುವುದಕ್ಕಾಗಿ ಅಲ್ಲಿಗೆ ಹೋಗಬೇಕಾದುದು ಆವಶ್ಯಕವಾದುದರಿಂದ ಆಗ **ಉನ್ನೀಯತೇ** ಎಂಬ ಪದವು ಈ ವಾಕ್ಯದಲ್ಲಿ ಅತ್ಯಂತವಾಗಿ ಸಂಗತವಾಗುವುದು. ಆದಕಾರಣ ಈ ವಾಕ್ಯದಲ್ಲಿರುವ ಬ್ರಹ್ಮಲೋಕಶಬ್ದವೂ ನಿತ್ಯವಿಭೂತಿಯೆಂಬ ಸ್ಥಾನವಿಶೇಷವನ್ನು ತೋರಿಸುವುದರಲ್ಲಿ ಪ್ರಮಾಣವಾಗಲು ಅಡ್ಡಿಯಿಲ್ಲ.

---

ಅದು ಹೇತುವಾಗುವುದಿಲ್ಲ; ಏತಕ್ಕೆಂದರೆ ಆಗ ನಿಷಾದಪದಕ್ಕೆ ಲಕ್ಷಣಾವೃತ್ತಿಯನ್ನು ಅವಲಂಬಿಸ ಬೇಕಾಗಿ ಬರುವುದರಿಂದ ಲಕ್ಷಣಾಂಗೀಕಾರವೇ ದೋಷವಾಗುವುದು. ಆದಕಾರಣ ನಿಷಾದಪದವು ಕರ್ಮಧಾರಯಸಮಾಸದಿಂದ ಕೂಡಿ ತನ್ನ ಮುಖ್ಯಾರ್ಥವನ್ನೇ ಬೋಧಿಸುವುದಲ್ಲದೆ ನಿಷಾಧಸಂಬಂಧಿ ಯೆಂಬ ಲಕ್ಷ್ಯಾರ್ಥವನ್ನು ಬೋಧಿಸುವುದಿಲ್ಲ.

ಹಾಗಾದರೆ ರಾಜಪುರುಷಪದದಲ್ಲಿ ಮಾತ್ರ ಲಕ್ಷಣಾಂಗೀಕಾರವು ದೋಷವಲ್ಲವೋ? ಅಲ್ಲಿಯೂ ಕರ್ಮಧಾರಯಸಮಾಸವನ್ನೇ ಅಂಗೀಕರಿಸಿ ಮುಖ್ಯಾರ್ಥವನ್ನೇ ಏಕೆ ಸ್ವೀಕರಿಸ ಬಾರದು; ಇಲ್ಲ; ಅಲ್ಲಿ ಹಾಗೆ ಸ್ವೀಕರಿಸಲಾಗುವುದಿಲ್ಲ; ಏತಕ್ಕೆಂದರೆ—ರಾಜಪದಾರ್ಥವೂ ಪುರುಷಪದಾರ್ಥವೂ ಭಿನ್ನಭಿನ್ನವಾದುದೆಂದು ಪ್ರತ್ಯಕ್ಷಪ್ರಮಾಣದಿಂದ ಅವಗತವಾಗಿರುವಕಾರಣ ಅದಕ್ಕೆ ವಿರುದ್ಧವಾಗಿ ಅಲ್ಲಿ ಕರ್ಮಧಾರಯಸಮಾಸದಿಂದ ಅವೆರಡಕ್ಕೂ ಅಭೇದವನ್ನು ಬೋಧಿಸ ಲಾಗುವುದಿಲ್ಲ; ನಿಷಾದಸ್ಥಪತಿಪದದಲ್ಲಿಯಾದರೆ—ನಿಷಾದಪದಾರ್ಥಕ್ಕೂ ಸ್ಥಪತಿಪದಾರ್ಥಕ್ಕೂ ಪರ ಸ್ಪರಭೇದವು ಪ್ರತ್ಯಕ್ಷಪ್ರಮಾಣದಿಂದ ಅವಗತವಾಗಿಲ್ಲ. ಈ ಶಬ್ದದಿಂದಲೇ ಅವೆರಡಕ್ಕೂ ಭೇದ ವನ್ನು ತೋರಿಸುವುದಾದರೆ ಆಗ ಕರ್ಮಧಾರಯಸಮಾಸವನ್ನು ಬಿಡಬೇಕಾಗಿಯೂ, ಷಷ್ಠೀಸಮಾಸ ವನ್ನು ಅಂಗೀಕರಿಸಬೇಕಾಗಿಯೂ ಬಂದು ಲಕ್ಷಣಾದೋಷವು ಪ್ರಸಕ್ತವಾಗುವುದು; ತಕ್ಕ ಕಾರಣವಿಲ್ಲದಿರುವಾಗ ಮುಖ್ಯಾರ್ಥದ ತ್ಯಾಗವೂ, ಲಕ್ಷ್ಯಾರ್ಥದ ಸ್ವೀಕಾರವೂ ಉಚಿತವಲ್ಲ. ಆದಕಾರಣ ಸ್ಥಪತಿಪದಬೋಧ್ಯನಾದ ಅಧಿಪತಿಯೆಂಬುವನು ಶಬ್ದಸಾಮರ್ಥ್ಯದಿಂದ ನಿಷಾದನೇ ಆಗಿರುವನಲ್ಲದೆ ತ್ರೈವರ್ಣಿಕನಾಗಲಾರನು" ಎಂಬುದು ಪ್ರಥಮಸೂತ್ರದ ಅಭಿಪ್ರಾಯವಾ ಗಿರುವುದು.

೯. ಮತ್ತು—

**"ವಿಜ್ಞಾನಸಾರಥಿರ್ಯಸ್ತು ಮನಃಪ್ರಗ್ರಹವಾನ್ ನರಃ ।**
**ಸೋಽಧ್ವನಃ ಪಾರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಂ ॥"**

ಎಂಬ ಶ್ರುತಿ—ಯಾವನೊಬ್ಬ ಧೀರನು ತನ್ನ ಶರೀರವನ್ನು ರಥವಾಗಿಯೂ, ಬುದ್ಧಿಯನ್ನು ಸಾರಥಿಯಾಗಿಯೂ, ಮನಸ್ಸನ್ನು ಕಡಿವಾಳವಾಗಿಯೂ, ಇಂದ್ರಿಯಗಳನ್ನು ಕುದುರೆಗಳಾಗಿಯೂ, ಪರಮಾತ್ಮನನ್ನು ಗಂತವ್ಯಭೂಮಿಯಾಗಿಯೂ ಎಂದರೆ ಗುರಿಯಾಗಿಯೂ ಮಾಡಿಕೊಂಡು ಪರಮಾತ್ಮಸ್ವರೂಪವನ್ನು ಉಪಾಸಿಸುವನೋ ಅಂಥ ಜೀವನು ಸರ್ವೇಶ್ವರನಿಗೆ ಅಸಾಧಾರಣವಾದ ವಾಸಸ್ಥಾನವಾಗಿಯೂ, ಸಂಸಾರಮಾರ್ಗಕ್ಕೆ ಎಲ್ಲೆಯಾಗಿಯೂ ಇರುವ ಪರಮಪದವೆಂಬ ಸ್ಥಾನವನ್ನು ಹೊಂದುವನೆಂದು ಅತಿಸ್ಫುಟವಾಗಿ ಬೋಧಿಸುತ್ತಿರುವುದು.

೧೦. ಮತ್ತು—**"ಸ ಖಲ್ವೇವಂ ವರ್ತಯನ್ ಯಾವದಾಯುಷಂ ಬ್ರಹ್ಮಲೋಕಮಭಿಸಂಪದ್ಯತೇ ನ ಚ ಪುನರಾವರ್ತತೇ ನ ಚ ಪುನರಾವರ್ತತೇ"**ಎಂಬ ಶ್ರುತಿ—ಪರಮಾತ್ಮನನ್ನು ಭಜಿಸತಕ್ಕವನು ತನ್ನ ಶರೀರಾವಸಾನದವರೆಗೂ ವರ್ಣಾಶ್ರಮಧರ್ಮಗಳನ್ನು ಬಿಡದೆ ಆಚರಿಸುತ್ತ ಬ್ರಹ್ಮೋಪಾಸನವನ್ನು ಮಾಡುವವನಾದರೆ ಶರೀರಾವಸಾನದಲ್ಲಿ ಪರಮಪದವೆಂಬ ಬ್ರಹ್ಮಲೋಕವನ್ನು ಹೊಂದಿ ಪುನಃ ಸಂಸಾರದುಃಖಕ್ಕೆ ಸಿಕ್ಕಿಕೊಳ್ಳದಂತೆ ಅಲ್ಲಿಯೇ ಸ್ಥಿರವಾಗಿ

---

ಇಂಥ ಸಿದ್ಧಾಂತದ ಸ್ಥಾಪನೆಗೆ ಮತ್ತೊಂದು ಗಮಕವನ್ನೂ ದ್ವಿತೀಯಸೂತ್ರದಿಂದ ಸೂತ್ರಕಾರರು ತೋರಿಸಿರುವರು—**"ಕೂಟಂ ದಕ್ಷಿಣಾ-ಸ್ವಂ ಹಿ ತನ್ನಿಷಾದಾನಾಂ"**ಎಂಬುದಾಗಿ ಯಾಗೀಯದಕ್ಷಿಣಾದ್ರವ್ಯವಿಶೇಷವನ್ನು ವಿಧಿಸುವ ಒಂದಾನೊಂದು ವಾಕ್ಯವು ಈ ರೌದ್ರೇಷ್ಟಿಪ್ರಕರಣದಲ್ಲಿ ಪಠಿತವಾಗಿರುವುದು. ಕೂಟವೆಂಬ ಪದಾರ್ಥವಿಶೇಷವು ನಿಷಾದರಲ್ಲಿಯೇ ಬಳಕೆಯಾಗಿರುವುದರಿಂದ ಅದು ಅವರ ಸ್ವತ್ತಾಗಿರುವುದೆಂಬುದು ಲೋಕಪ್ರಸಿದ್ಧವಾಗಿರುವುದು ; ಅಂಥ ಕೂಟದ್ರವ್ಯವೇ ಈ ಯಾಗದಲ್ಲಿ ಯಜಮಾನನಿಂದ ಋತ್ವಿಕ್ಕುಗಳಿಗೆ ದಕ್ಷಿಣೆಯಾಗಿ ಕೊಡಲ್ಪಡಬೇಕೆಂದು ಈ ವಾಕ್ಯವು ವಿಧಿಸುತ್ತಿರುವುದು ; ಇದರಿಂದ ಸೂಚಿತವಾಗುವುದೇನೆಂದರೆ—ಯಾಗದಲ್ಲಿ ಶಾಸ್ತ್ರವಿಹಿತವಾದ ದಕ್ಷಿಣಾದ್ರವ್ಯವು ದಕ್ಷಿಣೆಯನ್ನು ಕೊಡತಕ್ಕ ಯಜಮಾನನಿಗೆ ಸ್ವತ್ತಾಗಿರಬೇಕು ; ಈ ರೌದ್ರಯಾಗದಲ್ಲಿ ಕೂಟವೆಂಬ ದ್ರವ್ಯವೇ ದಕ್ಷಿಣೆಯಾಗಿ ವಿಹಿತವಾಗಿರುವುದರಿಂದ ಅಂಥ ಕೂಟದ್ರವ್ಯವು ಯಾವನಿಗೆ ಸ್ವತ್ತಾಗಿರುವುದೋ ಅಂಥವನೇ ಈ ಯಾಗದಲ್ಲಿ ಯಜಮಾನನಾಗುವನು ; ಅಂಥ ದ್ರವ್ಯವು ನಿಷಾದರೆಂಬ ಜಾತ್ಯಂತರದವರಿಗೇ ಸ್ವತ್ತಾಗಿರುವುದೆಂಬುದು ಲೋಕದಲ್ಲಿ ಪ್ರಸಿದ್ಧವಾಗಿರುವುದರಿಂದ ಆ ಜಾತಿಯವನೇ ಈ ಯಾಗದಲ್ಲಿ ಅಧಿಕಾರಿಯಾಗುವನಾದರೆ ಈ ಲಿಂಗದರ್ಶನವು ಉಪಪನ್ನವಾಗುವುದು ; ತ್ರೈವರ್ಣಿಕರಲ್ಲಿ ಒಬ್ಬನು ಈ ಯಾಗಕ್ಕೆ ಅಧಿಕಾರಿಯಾಗುವನಾದರೆ ತ್ರೈವರ್ಣಿಕರಲ್ಲಿ ಕೂಟವೆಂಬ ದ್ರವ್ಯವು ವಾಡಿಕೆಯಾಗಿಲ್ಲವಾದುದರಿಂದ ಈ ಲಿಂಗದರ್ಶನವು ಅನುಪಪನ್ನವಾಗುವುದು ಎಂಬುದು ಎರಡನೆಯ ಸೂತ್ರದ ಅಭಿಪ್ರಾಯವಾಗಿರುವುದು.

ನಿಲ್ಲುವನೆಂದು ಬೋಧಿಸುತ್ತಿರುವುದು. ಈ ಶ್ರುತಿಯಲ್ಲಿರುವ ಬ್ರಹ್ಮಲೋಕಶಬ್ದವು ಚತುರ್ಮುಖಬ್ರಹ್ಮಲೋಕವನ್ನು ತೋರಿಸುವುದೆಂದು ಭ್ರಮಿಸಬಾರದು.

" ಆಬ್ರಹ್ಮಭುವನಾಲ್ಲೋಕಾಃ ಪುನರಾವರ್ತಿನೋಽರ್ಜುನ ।
ಮಾಮುಪೇತ್ಯ ತು ಕೌಂತೇಯ ಪುನರ್ಜನ್ಮ ನ ವಿದ್ಯತೇ ॥ "

ಎಂಬ ಗೀತಾವಚನದಿಂದ ಚತುರ್ಮುಖಲೋಕವನ್ನು ಹೊಂದಿದವನಿಗೆ ಪುನರಾವೃತ್ತಿ ಉಂಟೆಂದು ನಿಶ್ಚಯಿಸಲ್ಪಟ್ಟಿರುವಕಾರಣ ಪುನರಾವೃತ್ತಿರಹಿತವಾದ ಲೋಕವು ಚತುರ್ಮುಖಲೋಕವಾಗಲಾರದಷ್ಟೆ? ಕರ್ಮಧಾರಯಸಮಾಸವೂ ಕೂಡದೆಂದು ಹಿಂದೆಯೇ ಹೇಳಿರುವೆವು.

೧೧. ಮತ್ತು " ಯವೇಕಮವ್ಯಕ್ತಮನಂತರೂಪಂ ವಿಶ್ವಂ ಪುರಾಣಂ ತಮಸಃ ಪರಸ್ತಾತ್ " ಎಂಬ ಶ್ರುತಿ-ತನಗೆ ಸಮಾನವಾದ ದ್ವಿತೀಯವಸ್ತುರಹಿತವಾಗಿಯೂ, ಅಸ್ಮದಾದಿಗಳ ಇಂದ್ರಿಯಗಳಿಗೆ ವ್ಯಕ್ತವಾಗದೆಯೂ, ವಿಮಾನಗೋಪುರಮಂಟಪಪ್ರಾಸಾದವಾಪೀಕೂಪತಟಾಕಾರಾಮೋದ್ಯಾನದಿವ್ಯಮಂಗಳವಿಗ್ರಹಾದಿನಾನಾರೂಪಗಳಿಂದ ಪರಿಣಮಿಸುವುದಾಗಿಯೂ, ಅನಾದಿಯಾಗಿಯೂ ಇರುವ ನಿತ್ಯವಿಭೂತಿಲೋಕವು ತಮಶ್ಶಬ್ದವಾಚ್ಯವಾದ ಪ್ರಕೃತಿಮಂಡಲಕ್ಕಿಂತಲೂ ಪರಭಾಗದಲ್ಲಿ ಇರುವುದೆಂದು ತೋರಿಸುತ್ತಿರುವುದು.

ಹೀಗೆ ಸಾವಿರಾರು ಶ್ರುತಿಗಳಿಂದ ಸಿದ್ಧವಾಗಿರುವ ನಿತ್ಯವಿಭೂತಿಸ್ಥಾನವನ್ನು ಶ್ರುತ್ಯನುಸಾರಿಗಳಾದ ಸಾವಿರಾರು ಸ್ಮೃತಿವಚನಗಳೂ ಸ್ಪಷ್ಟವಾಗಿ ಉಪದೇಶಿಸುತ್ತಿರುವುವು. ಹೇಗೆಂದರೆ—

೧೨. " ರಮ್ಯಾನಿ ಕಾಮಚಾರಾಣಿ ವಿಮಾನಾನಿ ಸಭಾಸ್ತಥಾ ।
ಆಕ್ರೀಡಾ ವಿವಿಧಾ ರಾಜನ್ ಪದ್ಮಿನ್ಯಶ್ಚಾಮಲೋದಕಾಃ ॥ "

ಎಂಬ ಸ್ಮೃತಿ—ಅಪ್ರಾಕೃತಸ್ಥಾನವಾದ ನಿತ್ಯವಿಭೂತಿಯಲ್ಲಿ ಅತಿಮನೋಹರಗಳಾಗಿಯೂ, ಸ್ವೈರಸಂಚಾರಗಳಾಗಿಯೂ ಇರುವ ದಿವ್ಯವಿಮಾನಗಳೂ, ದಿವ್ಯತರಗಳಾದ ಸಭಾಸ್ಥಾನಗಳೂ, ನಾನಾವಿಧವಾದ ಕ್ರೀಡಾಸ್ಥಾನಗಳೂ, ಸತ್ಪುರುಷರ ಮನಸ್ಸಿನಂತೆ ನಿರ್ಮಲವಾಗಿರುವ ನೀರಿನಲ್ಲಿ ಕಂಗೊಳಿಸುತ್ತಿರುವ ತಾವರೆಹೂವುಗಳಿಂದ ಪರಿಷ್ಕೃತಗಳಾದ ಸರೋವರಗಳೂ, ಇರುವುವೆಂದು ತೋರಿಸುತ್ತಿರುವುದು.

೧೩. " ಏತೇ ವೈ ನಿರಯಾಸ್ತಾತ ಸ್ಥಾನಸ್ಯ ಪರಮಾತ್ಮನಃ "

ಎಂಬ ಸ್ಮೃತಿ—ಈ ಬ್ರಹ್ಮಾಂಡಮಂಡಲಗಲ್ಲಿ ಅತ್ಯಂತೋತ್ಕೃಷ್ಟಸ್ಥಾನಗಳೆಂದು ಹೆಸರುಗೊಂಡಿರುವ ಸ್ವರ್ಗಲೋಕ, ಸತ್ಯಲೋಕ ಮುಂತಾದ ಸ್ಥಾನಗಳೆಲ್ಲಾ ಪರ

ಮಾತ್ಮನ ಅಪ್ರಾಕೃತಸ್ಥಾನದ ಮುಂದೆ ನರಕಕ್ಕೆ ಸದೃಶಗಳೆಂದು ಹೇಳಿಸಿಕೊಳ್ಳು ವುವುಗಳಾಗಿರುವುವೆಂದು ತೋರಿಸುತ್ತಿರುವುದು.

೧೪. "ದಿವ್ಯಂ ಸ್ಥಾನಮಜರಂ ಚಾಪ್ರಮೇಯಂ
ದುರ್ವಿಜ್ಞೇಯಂ ಚಾಗಮೈರ್ಗಮ್ಯಮಾನಂ ।
ಗಚ್ಛಪ್ರಭೋ ರಕ್ಷ ಚಾಸ್ಮಾನ್ ಪ್ರಪನ್ನಾನ್
ಕಲ್ಪೇಕಲ್ಪೇ ಜಾಯಮಾನಃ ಸ್ವಮೂರ್ತ್ಯಾ ॥"

ಎಂಬ ಸ್ಮೃತಿ—ಎಲೈ ಶ್ರಿಯಃಪತಿಯೆ! ನಮಗೋಸ್ಕರ ನೀನು ಇಲ್ಲಿ ಅವತರಿಸಿ ದುಷ್ಟನಿಗ್ರಹಶಿಷ್ಟಪರಿಪಾಲನೆಗಳನ್ನು ಮಾಡುವುದರ ಮೂಲಕ ಧರ್ಮವನ್ನು ಸ್ಥಾಪಿಸಿ ಅವತಾರಪ್ರಯೋಜನವನ್ನು ನೆರವೇರಿಸಿರುವಿ; ಇನ್ನು ಮೇಲೆ ಜರೆ, ಮರಣ ಮುಂತಾದ ವಿಕಾರಗಳಿಗೆ ಅವಕಾಶವನ್ನು ಕೊಡದಿರುವುದಾಗಿಯೂ, ಅಲ್ಪಜ್ಞ ರಾದ ನಮ್ಮ ಬುದ್ಧಿಯಿಂದಲೂ ಸರ್ವಜ್ಞತುಲ್ಯರಾದ ಬ್ರಹ್ಮಾದಿಗಳ ಬುದ್ಧಿಯಿಂ ದಲೂ ಊಹಿಸಲಶಕ್ಯವಾಗಿಯೂ, ಕೇವಲಶಾಸ್ತ್ರವಚನಗಳಿಂದಲೇ ತಿಳಿಯಲ್ಪಡತಕ್ಕ ದಾಗಿಯೂ, ಇರುವ ತ್ರಿಪಾದ್ವಿಭೂತಿಯೆಂಬ ನಿನ್ನ ದಿವ್ಯಸ್ಥಾನವನ್ನು ಹೊಂದು. ಹೀಗೆಯೇ ಪ್ರತಿ ಒಂದು ಕಲ್ಪದಲ್ಲಿಯೂ ದಿವ್ಯಮಂಗಳವಿಗ್ರಹದೊಡನೆ ಅವತರಿ ಸುತ್ತ, ಶರಣಾಗತರಾಗಿರುವ ನಮ್ಮನ್ನು ಕಾಪಾಡುತ್ತಿರು ಎಂದು ತೋರಿಸು ತ್ತಿರುವುದು.

೧೫. "ದೇವಾಶ್ಚ ಯನ್ನ ಪಶ್ಯಂತಿ ದಿವ್ಯಂ ತೇಜೋಮಯಂ ಪರಂ ।
ಅತ್ಯರ್ಕಾನಲದೀಪ್ತಂ ತತ್ ಸ್ಥಾನಂ ವಿಷ್ಣೋರ್ಮಹಾತ್ಮನಃ ॥
ಸ್ವಯೈವ ಪ್ರಭಯಾ ರಾಜನ್ ದುಷ್ಪ್ರೇಕ್ಷಂ ದೇವದಾನವೈಃ"

ಎಂಬ ಸ್ಮೃತಿ—ತೇಜೋಮಯವಾದ ಅಪ್ರಾಕೃತವೆಂಬ ಯಾವ ದಿವ್ಯಸ್ಥಾನವನ್ನು ದೇವತೆಗಳಾಗಲಿ ದಾನವರಾಗಲಿ ನೋಡಲಾರರೋ, ತನ್ನ ತೇಜಸ್ಸಿನಿಂದ ಕೋಟಿ ಸೂರ್ಯಮಂಡಲವನ್ನೂ ಮಂಕುಮಾಡುವ ಅಂಥ ದಿವ್ಯಸ್ಥಾನವೇ ಶ್ರೀಮಹಾ ವಿಷ್ಣುವಿನ ದಿವ್ಯಸ್ಥಾನವಾಗಿರುವುದೆಂದು ತೋರಿಸುತ್ತಿರುವುದು. ಇದರಂತೆಯೇ ಇನ್ನೂ ಸಾವಿರಾರು ವಚನಗಳನ್ನು ಆರ್ಷಗ್ರಂಥಗಳಲ್ಲಿ ತಿಳಿಯಬಹುದು.

## ೭೩೧. ಅಧೋಭಾಗವ್ಯತಿರಿಕ್ತಾಸು ಸರ್ವಾಸು ದಿಕ್ಷು ನಿತ್ಯ ವಿಭೂತೇರಪರಿಚ್ಛಿನ್ನತ್ವಂ.

ಇಂಥ ನಿತ್ಯವಿಭೂತಿಯ ವಿಷಯದಲ್ಲಿ "ಅನಂತರೂಪಂ" ಎಂಬುದಾ ಗಿಯೂ "ತಮಸಃ ಪರಸ್ತಾತ್" ಎಂಬುದಾಗಿಯೂ ಎರಡು ವಿಶೇಷಣಗಳು ಉಕ್ತಗಳಾಗಿರುವುದರಿಂದ ಇದು ಅಪರಿಚ್ಛಿನ್ನವಾಗಿಯೂ ಪರಿಚ್ಛಿನ್ನವಾಗಿಯೂ

ಇರುವುದೆಂದು ತೋರುವುದು; ಈ ವಿರೋಧವನ್ನು ಪರಿಹರಿಸುವುದಕ್ಕಾಗಿ ಅಧೋಭಾಗದಲ್ಲಿ ಪರಿಚ್ಛಿನ್ನವಾಗಿದೆಯೆಂದೂ ಉಳಿದ ಎಲ್ಲಾ ಭಾಗಗಳಲ್ಲಿಯೂ ಅಪರಿಚ್ಛಿನ್ನವಾಗಿದೆಯೆಂದೂ ಒಪ್ಪಿಕೊಳ್ಳಬೇಕು.

ನಿತ್ಯವಿಭೂತಿಯಂತೆ ಪ್ರಕೃತಿಮಂಡಲಕ್ಕೂ ಅಪರಿಚ್ಛಿನ್ನತ್ವವೆಂಬ ಆನಂತ್ಯವು ತುಲ್ಯವಾಗಿದ್ದರೂ ಪ್ರಕೃತಿಮಂಡಲಕ್ಕಿಂತಲೂ ಇದು ಅತ್ಯಂತವಿಶಾಲವಾಗಿರುವುದೆಂಬುದನ್ನು "ತ್ರಿಪಾದಸ್ಯಾಮೃತಂ ದಿವಿ" ಎಂಬ ಶ್ರುತಿಯೇ ಘಂಟಾಘೋಷವಾಗಿ ಬೋಧಿಸುತ್ತಿರುವುದು. ಅನೇಕಪದಾರ್ಥಗಳಿಗೆ ಆನಂತ್ಯವು ತುಲ್ಯವಾಗಿದ್ದರೂ ಪರಸ್ಪರತಾರತಮ್ಯವೂ ಅವುಗಳಿಗೆ ಇರಬಹುದೆಂಬುದನ್ನು ಜೀವಪರಿಚ್ಛೇದದಲ್ಲಿಯೇ ತೋರಿಸಿರುವೆವು.

ಪೂಜ್ಯರೆ? "ತ್ರಿಪಾದಸ್ಯಾಮೃತಂ ದಿವಿ" ಎಂಬ ವಾಕ್ಯದಿಂದ ಲೀಲಾವಿಭೂತಿಯಲ್ಲಿರುವ ಪದಾರ್ಥಗಳಿಗಿಂತಲೂ ತ್ರಿಪಾದ್ವಿಭೂತಿಯಲ್ಲಿರುವ ಪದಾರ್ಥಗಳು ಅಧಿಕಗಳಾಗಿರುವುವೆಂದು ತಿಳಿದುಬರುವುದಲ್ಲದೆ ತ್ರಿಪಾದ್ವಿಭೂತಿಯೇ ಅಧಿಕವಾಗಿರುವುದೆಂದು ತಿಳಿದುಬರುವುದಿಲ್ಲವಷ್ಟೆ?

ಎಂದು ಆಶಂಕಿಸಬಾರದು. ತ್ರಿಪಾದ್ವಿಭೂತಿಯಲ್ಲಿರುವ ಪದಾರ್ಥಗಳು ಅಧಿಕಗಳಾಗಿರುವುವೆಂದು ತಿಳಿದುಬರುವಾಗಲೇ ಅಷ್ಟೊಂದು ಪದಾರ್ಥಗಳು ಇರುವುದಕ್ಕೆ ತ್ರಿಪಾದ್ವಿಭೂತಿಯೂ ಅಷ್ಟು ದೊಡ್ಡದಾಗಿರಬೇಕೆಂಬುದು ಅರ್ಥಾತ್ಸಿದ್ಧವಾಗುವುದು.

"ಪಾದೋಽಸ್ಯ ವಿಶ್ವಾ ಭೂತಾನಿ-ತ್ರಿಪಾದಸ್ಯಾಮೃತಂ ದಿವಿ" ಎಂಬ ಶ್ರುತಿಯಲ್ಲಿ ವಿವಕ್ಷಿತವಾಗಿರುವ ಅಭಿಪ್ರಾಯವೇನೆಂದರೆ—"ಪರಮಾತ್ಮೋಪಾಸನೆಯನ್ನು ಮಾಡುವವರು ಸಂಪೂರ್ಣಲೀಲಾವಿಭೂತಿಯನ್ನೂ ಪರಮಾತ್ಮನ ಐಶ್ವರ್ಯದೊಳಗೆ ಒಂದೇ ಒಂದು ಭಾಗವನ್ನಾಗಿಯೂ, ನಿತ್ಯವಿಭೂತಿಯನ್ನು ಉಳಿದ ಎಲ್ಲಾ ಭಾಗಗಳನ್ನಾಗಿಯೂ ಉಪಾಸನೆಮಾಡಬೇಕೆಂಬುದಷ್ಟೇ ಅಲ್ಲದೆ— ಪರಮಾತ್ಮನ ಐಶ್ವರ್ಯವನ್ನು ಸಮವಾಗಿ ನಾಲ್ಕುಭಾಗಮಾಡಿ ಲೀಲಾವಿಭೂತಿಯನ್ನು ಒಂದು ಭಾಗವನ್ನಾಗಿಯೂ ನಿತ್ಯವಿಭೂತಿಯನ್ನು ಉಳಿದ ಮೂರುಭಾಗಗಳನ್ನಾಗಿಯೂ ತಿಳಿಯಬೇಕೆಂದು ಅಭಿಪ್ರಾಯವಲ್ಲ. ಲೀಲಾವಿಭೂತಿಯ ಅಲ್ಪತ್ವದಲ್ಲಿಯೂ ನಿತ್ಯವಿಭೂತಿಯ ಆಧಿಕ್ಯದಲ್ಲಿಯೂ ತಾತ್ಪರ್ಯವಾಗಿರುವುದು.

## ೭೩೨. ನಿತ್ಯವಿಭೂತೇಃ ಸ್ವಯಂಪ್ರಕಾಶತ್ವೋಪಪಾದನಂ.

ಇಂಥ ನಿತ್ಯವಿಭೂತಿ ಜೀವತತ್ತ್ವಕ್ಕಿಂತಲೂ ಈಶ್ವರತತ್ತ್ವಕ್ಕಿಂತಲೂ ವಿಲಕ್ಷಣವಾಗಿರುವುದರಿಂದ ಚೈತನ್ಯಕ್ಕೆ ಆಶ್ರಯವಾಗಲಾರದಾದಕಾರಣ ಚೇತನವೆನಿಸಿ

ಕೊಳ್ಳಲಾರದಾದರೂ ಸ್ವಯಂಪ್ರಕಾಶವಾಗಿರುವುದು; ಎಂದರೆ ಜ್ಞಾನಾಪೇಕ್ಷೆ ಇಲ್ಲದೆಯೇ ತಾನಾಗಿಯೇ ಪ್ರಕಾಶಿಸುವುದು. ಹೇಗೆಂದರೆ—

"ತತ್ರಾನಂದಮಯಾ ಭೋಗಾ ಲೋಕಾಶ್ಚಾನಂದಲಕ್ಷಣಾ:"

ಎಂಬ ಸ್ಮೃತಿ—ನಿತ್ಯವಿಭೂತಿಲೋಕಕ್ಕೆ ಆನಂದಲಕ್ಷಣಪದದಿಂದ ಸ್ವಯಂಪ್ರಕಾಶತ್ವವನ್ನು ಬೋಧಿಸುತ್ತಿರುವುದು. ಇದರಂತೆಯೇ—

"ಆನಂದಂ ನಾಮ ತಂ ಲೋಕಂ ಪರಮಾನಂದಲಕ್ಷಣಂ ।
ತಯೋರ್ನಾ ಪರಮವ್ಯೋಮ ನಿರ್ದ್ವಂದ್ವಂ ಸುಖಮುತ್ತಮಂ ॥

ಇವೇ ಮೊದಲಾದ ಸ್ಮೃತಿಗಳನ್ನೂ ತಿಳಿಯಬಹುದು.

ಮತ್ತು ಈ ನಿತ್ಯವಿಭೂತಿಯೆಂಬ ದ್ರವ್ಯವು ತ್ರಿಗುಣದ್ರವ್ಯದಂತೆ ಜ್ಞಾನಕ್ಕೆ ಸಂಕೋಚವನ್ನು ಉಂಟುಮಾಡದೆ ಜ್ಞಾನ ಶಕ್ತಿ ಬಲ ಐಶ್ವರ್ಯ ವೀರ್ಯ ತೇಜಸ್ಸುಗಳೆಂಬ ಷಡ್ಗುಣಗಳ ಪ್ರಸರಣಕ್ಕೆ ಹೇತುವಾಗಿರುವುದು. ಮತ್ತು ಭಗವಂತನ ಅಮೋಘವಾದ ನಿತ್ಯಸಂಕಲ್ಪದಿಂದ ದೇಶರೂಪವಾಗಿಯೂ ಪರಿಣಮಿಸಿರುವುದು.

### ೭೬೩. ಸ್ವಯಂಪ್ರಕಾಶತ್ವಾದೇವ ನಿತ್ಯವಿಭೂತೇಃ ಜ್ಞಾನಾತ್ಮಕತ್ವವ್ಯವಹಾರಃ

ಮತ್ತು "ಕಿಮಾತ್ಮಿಕೈಷಾ ಭಗವತೋ ವ್ಯಕ್ತಿಃ" ಎಂಬ ವಾಕ್ಯದಿಂದ ದಿವ್ಯಮಂಗಳವಿಗ್ರಹವೆನಿಸಿಕೊಂಡ ಭಗವದ್ವ್ಯಕ್ತಿ ಎಂಥದಾಗಿರುವುದೆಂದು ಪ್ರಶ್ನೆ ಮಾಡಿ "ಯದಾತ್ಮಕೋ ಭಗವಾಂಸ್ತದಾತ್ಮಿಕಾ ವ್ಯಕ್ತಿ:" ಎಂಬ ವಾಕ್ಯದಿಂದ ಭಗವಂತನು ಎಂಥವನಾಗಿರುವನೋ ಅವನ ವ್ಯಕ್ತಿಯೂ ಅಂಥದೇ ಆಗಿರುವುದೆಂದು ಸಾಮಾನ್ಯವಾಗಿ ಉತ್ತರವನ್ನು ಹೇಳಿ "ಕಿಮಾತ್ಮಕೋ ಭಗವಾನ್" ಎಂಬ ವಾಕ್ಯದಿಂದ ಪುನಃ ಪ್ರಶ್ನೆಯನ್ನು ಮಾಡಿ "ಜ್ಞಾನಾತ್ಮಕೋ ಭಗವಾನ್" ಎಂದು ಭಗವಂತನು ಜ್ಞಾನಸ್ವರೂಪನಾಗಿರುವನೆಂಬುದಾಗಿ ಉತ್ತರವನ್ನು ಹೇಳಿದುದರಿಂದ ವ್ಯಕ್ತಿಯೆನಿಸಿಕೊಂಡ ಅವನ ದಿವ್ಯಮಂಗಳವಿಗ್ರಹವೂ ಜ್ಞಾನಾತ್ಮಕವೆಂದು ತಿಳಿದುಬರುವಕಾರಣ ತತ್ಸಜಾತೀಯವಾದ ನಿತ್ಯವಿಭೂತಿದ್ರವ್ಯವೂ ಜ್ಞಾನಾತ್ಮಕವೆಂದು ತೋರುವುದರಿಂದ ಸ್ವಯಂಪ್ರಕಾಶತ್ವವನ್ನು ಹೇಳಿಯೇ ಜ್ಞಾನಾತ್ಮಕತ್ವವನ್ನು ನಿರ್ವಹಿಸಬೇಕು.

### ೭೬೪. ಉಕ್ತರೀತ್ಯಾ ಜ್ಞಾನಾತ್ಮಕತ್ವೇ ಸತ್ಯಪಿ ನಿತ್ಯವಿಭೂತೇರ್ನಿರಾಶ್ರಯತ್ವನಿರ್ವಿಷಯತ್ವೋಪಪತ್ತಿಃ

ಪೂಜ್ಯರೆ? ಜ್ಞಾನಾಶ್ರಯನಾದ ಆತ್ಮನಿಗೆ ಜ್ಞೇಯವನ್ನು ಪ್ರಕಾಶಪಡಿಸುವ ದ್ರವ್ಯವಲ್ಲವೆ ಜ್ಞಾನವೆನಿಸಿಕೊಳ್ಳುವುದು? ಇದರಿಂದ ಜ್ಞಾನವೆಂಬುದಕ್ಕೆ

ಒಂದು ಆಶ್ರಯವೂ ಒಂದು ವಿಷಯವೂ ಇರಬೇಕೆಂಬ ನಿಯಮವು ತೋರುವುದು. ನಿತ್ಯವಿಭೂತಿ ಜ್ಞಾನಾತ್ಮಕವಾಗಿರುವ ಪಕ್ಷದಲ್ಲಿ ಇದಕ್ಕೂ ಒಂದು ಆಶ್ರಯವೂ ಒಂದು ವಿಷಯವೂ ಇರಬೇಕಾಗುವುದಲ್ಲವೆ?

ಇಲ್ಲ; ಜ್ಞಾನವೆಂಬುದಕ್ಕೆಲ್ಲಾ ಒಂದು ಆಶ್ರಯವೂ ಒಂದು ವಿಷಯವೂ ಇದ್ದೇ ಇರಬೇಕೆಂಬ ನಿರ್ಬಂಧವಿಲ್ಲ. ಈ ನಿರ್ಬಂಧವು ಧರ್ಮಭೂತಜ್ಞಾನಕ್ಕೇ ಅಲ್ಲದೆ ಮತ್ತೊಂದಕ್ಕೂ ಇಲ್ಲ. ಆತ್ಮಸ್ವರೂಪವು ಜ್ಞಾನಾತ್ಮಕವಾಗಿದ್ದರೂ ಇದಕ್ಕೆ ಆಶ್ರಯವೂ ವಿಷಯವೂ ಇಲ್ಲವಷ್ಟೆ? ಅದರಂತೆ ನಿತ್ಯವಿಭೂತಿದ್ರವ್ಯವೂ ಸ್ವಯಂಪ್ರಕಾಶತ್ವಾಕಾರದಿಂದ ಜ್ಞಾನಾತ್ಮಕವೆನಿಸಿಕೊಂಡರೂ ನಿರಾಶ್ರಯವಾಗಿಯೂ, ನಿರ್ವಿಷಯವಾಗಿಯೂ ಇರಬಹುದು.

**೭೬೫. ಸ್ವಯಂಪ್ರಕಾಶಾಯಾ ಅಪಿ ನಿತ್ಯವಿಭೂತೇರ್ಧರ್ಮಭೂತಜ್ಞಾನವತ್ಪರಾಕ್ತ್ವಮಪ್ಯವಿರುದ್ಧಂ.**

ಧರ್ಮಭೂತಜ್ಞಾನವು ಸ್ವವ್ಯತಿರಿಕ್ತನಾದ ಆತ್ಮನಿಗೇ ಪ್ರಕಾಶಿಸುವುದರಿಂದ ಹೇಗಾದರೆ ಪರಾಗ್ದ್ರವ್ಯವೆನಿಸಿಕೊಂಡಿರುವುದೋ ಅದರಂತೆ ನಿತ್ಯವಿಭೂತಿದ್ರವ್ಯವೂ ತನಗೆ ತಾನು ಪ್ರಕಾಶಿಸದೆ ಸ್ವವ್ಯತಿರಿಕ್ತನಾದ ಆತ್ಮನಿಗೇ ಪ್ರಕಾಶಿಸುವುದರಿಂದ ಪರಾಕ್ತ್ವವೂ ಇದಕ್ಕೆ ಇರಲು ಅಡ್ಡಿಯಿಲ್ಲ.

**೭೬೬. ನಿತ್ಯಮುಕ್ತೇಶ್ವರಾನ್ ಪ್ರತಿ ಸ್ವಯಂಪ್ರಕಾಶಾಯಾ ಅಪಿ ನಿತ್ಯವಿಭೂತೇಃ ಬದ್ಧಾನ್ ಪ್ರತಿ ಅಸ್ವಯಂಪ್ರಕಾಶತ್ವಂ.**

ಪೂರ್ವರೆ? ನಿತ್ಯವಿಭೂತಿ ಜ್ಞಾನಾಂತರಾಪೇಕ್ಷೆಯಿಲ್ಲದೆ ಸ್ವಯಂಪ್ರಕಾಶವಾಗಿರುವ ಪಕ್ಷದಲ್ಲಿ ಬಂಧಾವಸ್ಥೆಯಲ್ಲಿರುವ ಅಸ್ಮದಾದಿಗಳಿಗೂ ಪ್ರಕಾಶಿಸಬೇಕಲ್ಲವೆ?

ಇಲ್ಲ; ಅಂಥ ನಿರ್ಬಂಧವಿಲ್ಲ. ಧರ್ಮಭೂತಜ್ಞಾನವು ಸ್ವಯಂಪ್ರಕಾಶವಾಗಿದ್ದರೂ ವಿಷಯವನ್ನು ಪ್ರಕಾಶಪಡಿಸುವ ವೇಳೆಯಲ್ಲಿಯೇ ಸ್ವಯಂಪ್ರಕಾಶವೆನಿಸಿಕೊಳ್ಳುವುದಲ್ಲದೆ, ಸರ್ವದಾ ಸ್ವಯಂಪ್ರಕಾಶವೆನಿಸಿಕೊಳ್ಳಲಾರದೆಂಬ ವ್ಯವಸ್ಥೆಯನ್ನು ಹೇಗೆ ಒಪ್ಪಿರುವೆವೋ ಅದರಂತೆ ನಿತ್ಯವಿಭೂತಿದ್ರವ್ಯವೂ ಮುಕ್ತಾವಸ್ಥೆಯಲ್ಲಿ ಮುಕ್ತರಿಗೂ ನಿತ್ಯರಿಗೂ ಈಶ್ವರನಿಗೂ ಸ್ವಯಂಪ್ರಕಾಶವಾಗಿರುವುದಲ್ಲದೆ ಬಂಧಾವಸ್ಥೆಯಲ್ಲಿ ಅಸ್ಮದಾದಿಗಳನ್ನು ಕುರಿತು ಸ್ವಯಂಪ್ರಕಾಶವಾಗಲಾರದೆಂಬ ವ್ಯವಸ್ಥೆಯನ್ನೂ ಒಪ್ಪಿಕೊಳ್ಳಬೇಕು.

ಆದರೆ ಬಂಧಾವಸ್ಥೆಯಲ್ಲಿ ಅಸ್ಮದಾದಿಗಳಿಗೆ ನಿತ್ಯವಿಭೂತಿದ್ರವ್ಯವು ಏನಾಗಿರುವುದು? ಶಾಸ್ತ್ರಜನ್ಯವಾದ ಜ್ಞಾನಕ್ಕೆ ಗೋಚರವಾಗಿರುವುದು. ಸುಷುಪ್ತ್ಯವ

ಸ್ಥೆಯನ್ನು ಹೊಂದಿದ ಧರ್ಮಭೂತಜ್ಞಾನವು ಪ್ರಬೋಧಕಾಲದಲ್ಲಿ ನಮ್ಮ ಜ್ಞಾನಾಂತರಕ್ಕೂ, ನಮ್ಮ ಸುಷುಪ್ತಿಕಾಲದಲ್ಲಿ ಪ್ರಬುದ್ಧರಾಗಿರುವ ಇತರರ ಜ್ಞಾನಕ್ಕೂ ಹೇಗೆ ಗೋಚರವಾಗುವುದೋ ಅದರಂತೆ ನಿತ್ಯವಿಭೂತಿದ್ರವ್ಯವೂ ಬಂಧಾವಸ್ಥೆಯಲ್ಲಿ ಶಾಸ್ತ್ರಜನ್ಯವಾದ ನಮ್ಮ ಜ್ಞಾನಕ್ಕೆ ಗೋಚರವಾಗುವುದು. ಇಷ್ಟುಮಾತ್ರಕ್ಕೇ ನಿತ್ಯಮುಕ್ತೇಶ್ವರರಿಗೂ ಅದು ಸ್ವಯಂಪ್ರಕಾಶವಲ್ಲವೆಂದು ಹೇಳಲಾಗುವುದಿಲ್ಲ. ಜ್ಞಾನಾಂತರಾಪೇಕ್ಷೆಯಿಲ್ಲದೆಯೇ ಅವರಿಗೆ ಪ್ರಕಾಶಿಸುವುದು.

## ೭೬೭ ನಿತ್ಯಮುಕ್ತೇಶ್ವರಜ್ಞಾನಗೋಚರತ್ವೇಽಪಿ ನಿತ್ಯವಿಭೂತೇಃ ಸ್ವಯಂಪ್ರಕಾಶತ್ವೋಪಪತ್ತಿಃ

ಪೂಜ್ಯರೆ ? ಬಂಧರಹಿತರಾದ ಮುಕ್ತನಿತ್ಯೇಶ್ವರರ ಧರ್ಮಭೂತಜ್ಞಾನವು ಸಂಕೋಚಕಾರಣವಿಲ್ಲವಾದುದರಿಂದ ಸರ್ವವಿಷಯಗಳನ್ನೂ ಸಾಕ್ಷಾತ್ಕರಿಸುತ್ತದೆ ಯೆಂದು ಅಂಗೀಕರಿಸಿಯೇ ಆಗಬೇಕು, ಹೀಗಾದಮೇಲೆ ಅಂಥ ಧರ್ಮಭೂತ ಜ್ಞಾನಕ್ಕೆ ನಿತ್ಯವಿಭೂತಿಯೂ ಗೋಚರವಾಗಿಯೇ ಆಗುವುದರಿಂದ ಅದರಿಂದಲೇ ನಿತ್ಯವಿಭೂತಿವ್ಯವಹಾರವು ಸಮಂಜಸವಾಗುತ್ತಿರುವಲ್ಲಿ ನಿತ್ಯವಿಭೂತಿಗೆ ಸ್ವಯಂ ಪ್ರಕಾಶತ್ವವನ್ನು ಅಂಗೀಕರಿಸಿದುದು ವ್ಯರ್ಥವಲ್ಲವೆ?

ಅಲ್ಲ—ನಿತ್ಯವಿಭೂತಿಯ ವ್ಯವಹಾರಕ್ಕಾಗಿ ನಿತ್ಯಮುಕ್ತೇಶ್ವರರ ಧರ್ಮ ಭೂತಜ್ಞಾನವು ಬೇಕಾಗಿಲ್ಲ. ಏಂದರೆ—ಬಂಧರಹಿತರಾದವರು ನಿತ್ಯವಿಭೂತಿಯ ವಿಷಯದಲ್ಲಿ ಮಾಡುವ ವ್ಯವಹಾರಕ್ಕೆ ತಾದಾತ್ಮ್ಯಸಂಬಂಧದಿಂದ ನಿತ್ಯವಿಭೂ ತಿಯೇ ಕಾರಣವಾಗಿರುವುದಲ್ಲದೆ ನಿತ್ಯವಿಭೂತಿವಿಷಯಕವಾದ ಅವರ ಜ್ಞಾನವು ಕಾರಣವಲ್ಲ. ಆತ್ಮಸ್ವರೂಪವು ನಿತ್ಯಮುಕ್ತೇಶ್ವರರ ಜ್ಞಾನಕ್ಕೆ ವಿಷಯವಾದರೂ ಆತ್ಮಸ್ವರೂಪವ್ಯವಹಾರದಲ್ಲಿ ಆತ್ಮಸ್ವರೂಪವೇ ಕಾರಣವಾಗಿರುವುದಲ್ಲದೆ ತದ್ವಿಷ ಯಕವಾದ ಜ್ಞಾನವು ಕಾರಣವಲ್ಲವಷ್ಟೆ? ಆದಕಾರಣ ನಿತ್ಯವಿಭೂತಿ ನಿತ್ಯ ಮುಕ್ತೇಶ್ವರರ ಜ್ಞಾನಕ್ಕೆ ಗೋಚರವಾಗುತ್ತಿದ್ದರೂ ಸ್ವಯಂಪ್ರಕಾಶವೆನಿಸಿಕೊ ಳ್ಳಲು ತಡೆಯಿಲ್ಲ. ಜ್ಞಾನಾಂತರಕ್ಕೆ ಗೋಚರವಾಗುತ್ತಿದ್ದರೂ ಸ್ವಯಂಪ್ರಕಾಶ ವಾಗಬಹುದೆಂಬುದನ್ನು ಆತ್ಮಸ್ವರೂಪದಲ್ಲಿ ಒಪ್ಪಿರುವೆವಷ್ಟೆ?

ಜ್ಞಾನಾಂತರಾಗೋಚರತ್ವವೇ ಸ್ವಯಂಪ್ರಕಾಶತ್ವವೆನಿಸಿಕೊಳ್ಳುವುದಾಗಿ ದ್ದರೆ-ಜ್ಞಾನಾಂತರಗೋಚರವಾದ ನಿತ್ಯವಿಭೂತಿಗೆ ಸ್ವಯಂಪ್ರಕಾಶತ್ವವು ಹೇಗೆಸಂ ಭವಿಸೀತೆಂದು ಆಶಂಕಿಸಬಹುದಾಗಿದ್ದಿತು. ಜ್ಞಾನಾಂತರಾಗೋಚರತ್ವವು ಸ್ವಯಂ ಪ್ರಕಾಶತ್ವವಲ್ಲ; ಕಿಂತು ಜ್ಞಾನಾಂತರವನ್ನು ಅಪೇಕ್ಷಿಸದೆ ಪ್ರಕಾಶಿಸುವಿಕೆಯೇ

ಸ್ವಯಂಪ್ರಕಾಶತ್ವವೆನಿಸಿಕೊಳ್ಳುವುದು. ಇಂಥ ಸ್ವಯಂಪ್ರಕಾಶತ್ವವು ಜ್ಞಾನಾಂತರಗೋಚರವಾದ ವಸ್ತುವಿನಲ್ಲಿಯೂ ಸಂಭವಿಸಬಹುದು.

## ೭೩೮ ಉಕ್ತಪಕ್ಷೇ ಅಸ್ವಾರಸ್ಯೋದ್ಭಾವನಪೂರ್ವಕಂ ಪಕ್ಷಾಂತರ ಪ್ರದರ್ಶನಂ

ಈಗ ಹೇಳಿದ ಮತದಲ್ಲಿ ಒಂದು ಅಸ್ವಾರಸ್ಯವಿರುವುದು. ಅದೇನೆಂದರೆ— "ಆತ್ಮಸ್ವರೂಪವು ಜ್ಞಾನಾಂತರಕ್ಕೆ ಗೋಚರವಾದರೂ ಸ್ವಯಂಪ್ರಕಾಶವೆನಿಸಿಕೊಳ್ಳಲು ತಡೆಯಿಲ್ಲ. ಏತಕ್ಕೆಂದರೆ—ಜ್ಞಾನವಿರುವಕಾಲದಲ್ಲಿಯೂ, ಜ್ಞಾನವಿಲ್ಲದ ಸುಷುಪ್ತಿಮೂರ್ಛಾದ್ಯವಸ್ಥೆಗಳಲ್ಲಿಯೂ, ಅಂತು ಸರ್ವಕಾಲದಲ್ಲಿಯೂ ಆತ್ಮಸ್ವರೂಪವು ಪ್ರಕಾಶಿಸುತ್ತಲೇ ಇರುವುದಲ್ಲದೆ ಆತ್ಮಪ್ರಕಾಶರಹಿತವಾದ ಕಾಲವೇ ಇಲ್ಲ. ಆದುದರಿಂದ ಆತ್ಮಸ್ವರೂಪಕ್ಕೆ ಸ್ವಯಂಪ್ರಕಾಶತ್ವವು ಯುಕ್ತವಾಗಿರುವುದು. ನಿತ್ಯವಿಭೂತಿಯಾದರೆ ಜ್ಞಾನಾಂತರವಿಲ್ಲದ ಕಾಲದಲ್ಲಿ ಯಾವಾಗಲೂ ಪ್ರಕಾಶಿಸುವುದೇ ಇಲ್ಲ. ಜ್ಞಾನಾಂತರವಿರುವ ಕಾಲದಲ್ಲಿಯೇ ಪ್ರಕಾಶಿಸುವುದು. ಆದುದರಿಂದ ಜ್ಞಾನಾಂತರನಿರಪೇಕ್ಷವಾಗಿ ಪ್ರಕಾಶಿಸುವಿಕೆಯೆಂಬ ಸ್ವಯಂಪ್ರಕಾಶತ್ವವು ನಿತ್ಯವಿಭೂತಿಗೆ ಯುಕ್ತವಾಗಲಾರದು."

ಇಂಥ ಅಸ್ವಾರಸ್ಯವಿರುವುದರಿಂದ ಈ ಪಕ್ಷವನ್ನು ಬಿಟ್ಟು ಮತ್ತು ಕೆಲವರು ಆಚಾರ್ಯರು ಇನ್ನೊಂದು ಪಕ್ಷವನ್ನು ತೋರಿಸುವರು. ಹೇಗೆಂದರೆ—ಈ ನಿತ್ಯವಿಭೂತಿ ಅತ್ಯದ್ಭುತವಾದ ತೇಜೋರೂಪವಾದುದರಿಂದ ಇದು ಸ್ವಯಂಪ್ರಕಾಶವಾಗಿರುವುದೆಂದು ಶಾಸ್ತ್ರಕಾರರು ವ್ಯವಹರಿಸುವರು. ಇಷ್ಟುಮಾತ್ರವಲ್ಲದೆ ಮುಖ್ಯವಾದ ಸ್ವಯಂಪ್ರಕಾಶತ್ವವು ಇದಕ್ಕೆ ಇಲ್ಲ.—

ಮತ್ತು—ತ್ರಿಗುಣದ್ರವ್ಯವು ಜ್ಞಾನಕ್ಕೆ ಸಂಕೋಚವನ್ನು ಉಂಟುಮಾಡುವಂತೆ ಇದು ಸಂಕೋಚವನ್ನು ಉಂಟುಮಾಡದೆ ಜ್ಞಾನವಿಕಾಸಕ್ಕೇ ಹೇತುವಾಗಿರುವುದರಿಂದ ಇದನ್ನು ಜ್ಞಾನಸ್ವರೂಪವೆಂದು ಶಾಸ್ತ್ರಕಾರರು ವ್ಯವಹರಿಸುವರು. ಇಷ್ಟೇ ಅಲ್ಲದೆ ಮುಖ್ಯವಾದ ಜ್ಞಾನತ್ವವೂ ಇದಕ್ಕೆ ಇಲ್ಲ.—

ಮತ್ತು—ನಿತ್ಯವಿಭೂತಿದ್ರವ್ಯದಲ್ಲಿರುವ ಶಬ್ದಸ್ಪರ್ಶರೂಪರಸಗಂಧಾದಿಗುಣಗಳು ಪ್ರಾಕೃತಪದಾರ್ಥವಿಶೇಷಗಳಲ್ಲಿ ಇರುವ ಶಬ್ದಸ್ಪರ್ಶಾದಿಗಳಂತೆ ಪ್ರತಿಕೂಲಗಳಾಗಿರದೆ ಅತ್ಯಂತಾನುಕೂಲಗಳಾಗಿರುವುದರಿಂದ ಈ ನಿತ್ಯವಿಭೂತಿದ್ರವ್ಯವನ್ನು ಆನಂದರೂಪವೆಂದೂ ಸುಖರೂಪವೆಂದೂ ಶಾಸ್ತ್ರಕಾರರು ವ್ಯವಹರಿಸುವರು. ಇಷ್ಟೇ ಅಲ್ಲದೆ ಮುಖ್ಯವಾದ ಆನಂದತ್ವವೂ ಸುಖತ್ವವೂ ಇದಕ್ಕೆ ಇಲ್ಲ.—

## ೭೩೯ ಅಸ್ಮಿನ್ನಪಿ ಪಕ್ಷೇ ಅಸ್ವಾರಸ್ಯೋದ್ಭಾವನಪೂರ್ವಕಂ ಪ್ರಥಮಪಕ್ಷಸ್ಯೈವ ಸ್ಥಿರೀಕರಣಂ

ಇಂಥ ಪಕ್ಷಾಂತರದಲ್ಲಿಯೂ ಒಂದು ಅಸ್ವಾರಸ್ಯವುಂಟು. ಅದೇನೆಂದರೆ— ನಿತ್ಯವಿಭೂತಿಯ ವಿಷಯದಲ್ಲಿ ಪ್ರವರ್ತಿಸಿರುವ ಶಾಸ್ತ್ರೀಯವಾದ ಸ್ವಯಂಪ್ರಕಾಶತ್ವವ್ಯವಹಾರಕ್ಕೂ, ಜ್ಞಾನತ್ವವ್ಯವಹಾರಕ್ಕೂ, ಆನಂದತ್ವವ್ಯವಹಾರಕ್ಕೂ ಅಮುಖ್ಯತ್ವವನ್ನು ಕಲ್ಪಿಸುವಿಕೆಯೇ. ಆತ್ಮಸ್ವರೂಪವಿಷಯದಲ್ಲಿ ಪ್ರವರ್ತಿಸಿರುವ ಸ್ವಯಂಪ್ರಕಾಶತ್ವಜ್ಞಾನತ್ವವ್ಯವಹಾರಗಳಿಗೆ ಮುಖ್ಯತ್ವವನ್ನೇ ಸ್ವೀಕರಿಸಿರುವೆವಲ್ಲದೆ ಅಮುಖ್ಯತ್ವವನ್ನು ಅಂಗೀಕರಿಸಿಲ್ಲವಷ್ಟೆ? ಆದಕಾರಣ ಶಾಸ್ತ್ರಪ್ರಾಮಾಣ್ಯದಿಂದ ನಿತ್ಯವಿಭೂತಿಗೆ ಸ್ವಯಂಪ್ರಕಾಶತ್ವವನ್ನೂ, ಜ್ಞಾನಸ್ವರೂಪತ್ವವನ್ನೂ ಅಂಗೀಕರಿಸುವುದರಲ್ಲಿ ಯಾವ ಬಾಧಕವೂ ಇಲ್ಲ.

ಆದರೆ ನಿತ್ಯವಿಭೂತಿಯನ್ನು ಜ್ಞಾನಸ್ವರೂಪವೆಂದು ಅಂಗೀಕರಿಸುವುದಾದರೆ ಧರ್ಮಭೂತಜ್ಞಾನದಂತೆ ಈ ನಿತ್ಯವಿಭೂತಿ ಸ್ವವ್ಯತಿರಿಕ್ತಗಳಾದ ಪದಾರ್ಥಗಳನ್ನು ಪ್ರಕಾಶಪಡಿಸಬೇಕಲ್ಲವೆ?

ಇಲ್ಲ ಜ್ಞಾನವೆನಿಸಿಕೊಂಡಮಾತ್ರಕ್ಕೆ ಸ್ವವ್ಯತಿರಿಕ್ತಗಳಾದ ಪದಾರ್ಥಗಳನ್ನು ಪ್ರಕಾಶಪಡಿಸಬೇಕೆಂಬ ನಿರ್ಬಂಧವಿಲ್ಲ. ಆತ್ಮಸ್ವರೂಪವು ಜ್ಞಾನಾತ್ಮಕವಾಗಿದ್ದರೂ ಸ್ವಸ್ವರೂಪವನ್ನು ಮಾತ್ರ ಪ್ರಕಾಶಪಡಿಸುವುದಲ್ಲದೆ ಸ್ವವ್ಯತಿರಿಕ್ತವಸ್ತುಗಳನ್ನು ಪ್ರಕಾಶಪಡಿಸುವುದಿಲ್ಲವಷ್ಟೆ?

## ೭೭೦. ನಿತ್ಯಮುಕ್ತೇಶ್ವರಭೋಗಾರ್ಥಂ ನಿತ್ಯವಿಭೂತೇಶ್ಚತುರ್ಧಾ ಪರಿಣಾಮಃ

ಪಂಚೋಪನಿಷನ್ಮಂತ್ರಪ್ರತಿಪಾದ್ಯಗಳಾಗಿ ಅಪ್ರಾಕೃತಗಳೆನಿಸಿಕೊಂಡಿರುವ ಪಂಚಭೂತಗಳಾಗಿಯೂ, ಏಕಾದಶೇಂದ್ರಿಯಗಳಾಗಿಯೂ ಪರಿಣಮಿಸಿ ಷೋಡಶತತ್ತ್ವಸ್ವರೂಪವಾಗಿರುವ ಈ ನಿತ್ಯವಿಭೂತಿ ನಿತ್ಯರಿಗೂ ಮುಕ್ತರಿಗೂ ಈಶ್ವರನಿಗೂ ಇಚ್ಛಾನುಸಾರವಾಗಿ ಶರೀರವಾಗಿಯೂ, ಇಂದ್ರಿಯವಾಗಿಯೂ, ವಿಷಯವಾಗಿಯೂ ಪರಿಣಮಿಸುವಂಥದಾಗಿರುವುದು.

ಇವುಗಳಲ್ಲಿ ಶರೀರೇಂದ್ರಿಯವಿಷಯಗಳು ಪ್ರಸಿದ್ಧಗಳಾಗಿರುವುವು. ಅವುಗಳೊಳಗೆ—ಅಲ್ಲಿರುವ ವಿಮಾನಗೋಪುರಮಂಟಪಪ್ರಾಸಾದಾದಿಗಳೂ, ಸ್ರಕ್ಚಂದನವಸ್ತ್ರಪುಷ್ಪತಾಂಬೂಲಾದಿಗಳೂ, ಆಯುಧ, ಆಸನ, ಭೂಷಣ, ಸ್ಥಾನ, ಪರಿವಾರ, ಉದ್ಯಾನ, ಸರೋವರ, ಕ್ರೀಡಾಪರ್ವತ, ಇವೇ ಮೊದಲಾಗಿ ನಿತ್ಯಗಳಾಗಿರುವ ಅಪ್ರಾಕೃತವಸ್ತುಗಳೂ ವಿಷಯಗಳೆನಿಸಿಕೊಳ್ಳುವುವು.

ಇದಲ್ಲದೆ ಆಗಾಗ ಕಾರ್ಯೋಪಯೋಗಿಯಾಗುವಂತೆ ಸಂಕಲ್ಪದಿಂದ ಸೃಷ್ಟಿಸಲ್ಪಡುವ ಅನಿತ್ಯಗಳಾದ ಕೆಲವು ವಸ್ತುಗಳೂ ವಿಷಯಗಳೆನಿಸಿಕೊಳ್ಳುವುವು. ಏತಕ್ಕೆಂದರೆ—ನಿತ್ಯವಿಭೂತಿಯಲ್ಲಿಯೂ ಮರಗಳೊಳಗೆ ಚಿಗುರು, ಎಲೆ, ಹೂವು, ಕಾಯಿ, ಹಣ್ಣು, ಮೊದಲಾದ ಅನಿತ್ಯಪರಿಣಾಮಗಳೂ, ನದಿಗಳೊಳಗೆ ನೊರೆಗಳು, ಅಲೆಗಳು, ಗುಳ್ಳೆಗಳು ಮೊದಲಾದ ಅನಿತ್ಯವಿಕಾರಗಳೂ, ವಿಗ್ರಹದಲ್ಲಿ ವ್ಯೂಹ, ವಿಭವಾದ್ಯನಿತ್ಯಪರಿಣಾಮಗಳೂ ಉಂಟಷ್ಟೆ ?

## ೭೭೧. ಅನಿತ್ಯಪರಿಣಾಮವತ್ತ್ವೇಽಪಿ ನಿತ್ಯವಿಭೂತೇಃ ತ್ರಿಗುಣದ್ರವ್ಯಾದ್ವೈಲಕ್ಷಣ್ಯಪ್ರದರ್ಶನಂ.

ಆದರೆ ನಿತ್ಯವಿಭೂತಿಯಲ್ಲಿಯೂ ಅನಿತ್ಯಪರಿಣಾಮಗಳನ್ನು ಒಪ್ಪಿಕೊಳ್ಳುವುದಾದರೆ ತ್ರಿಗುಣದ್ರವ್ಯಕ್ಕೂ ನಿತ್ಯವಿಭೂತಿಗೂ ತಾರತಮ್ಯವಿಲ್ಲದೆ ಹೋಗುವುದೆಂದು ಆಶಂಕಿಸಬಾರದು; ಕರ್ಮಾಧೀನವಾಗಿ ಕಾಲವಶದಿಂದ ಉಂಟಾಗುವ ಪರಿಣಾಮವು ಅಲ್ಲಿ ಇಲ್ಲವೆಂದು ಹೇಳಿ ಎರಡಕ್ಕೂ ತಾರತಮ್ಯವನ್ನು ತೋರಿಸಬೇಕಲ್ಲದೆ ನಿತ್ಯವಿಭೂತಿಯಲ್ಲಿ ಪರಿಣಾಮವೇ ಇಲ್ಲವೆಂದು ಹೇಳಲಾಗುವುದಿಲ್ಲ. ಭಗವತ್ಸಂಕಲ್ಪದಿಂದಲೂ ನಿತ್ಯಮುಕ್ತರ ಸಂಕಲ್ಪದಿಂದಲೂ ಉಂಟಾಗುವ ಪರಿಣಾಮಗಳು ಅಲ್ಲಿಯೂ ಅವರ್ಜನೀಯಗಳಾಗಿರುವುವಷ್ಟೆ ?

ಪಂಚೋಪನಿಷನ್ಮಂತ್ರಗಳನ್ನು ಆಚಾರ್ಯೋಪದೇಶದಿಂದ ತಿಳಿದುಕೊಳ್ಳಬೇಕಾಗಿರುವಕಾರಣ ಅವುಗಳನ್ನು ಇಲ್ಲಿ ಬರೆಯಲು ಸಾಧ್ಯವಿಲ್ಲ.

## ೭೭೨ ತ್ರಿಗುಣದ್ರವ್ಯವತ್ ನಿತ್ಯವಿಭೂತೇರಪಿ ಚತುರ್ವಿಂಶತಿತತ್ತ್ವಾತ್ಮನಾ ಪರಿಣಾಮಃ

ತ್ರಿಗುಣದ್ರವ್ಯದಂತೆ ನಿತ್ಯವಿಭೂತಿದ್ರವ್ಯವೂ ಇಪ್ಪತ್ತುನಾಲ್ಕು ತತ್ತ್ವಗಳಾಗಿ ಪರಿಣಮಿಸುವುದೆಂದು ಕೆಲವರು ಆಚಾರ್ಯರು ಅಭಿಪ್ರಾಯಪಡುವರು. ಆದರೂ ಆ ತತ್ತ್ವಗಳಿಗೆ ಪ್ರಕೃತಿವಿಕಾರಭಾವವಿಲ್ಲ. ಏತಕ್ಕೆಂದರೆ ದಿವ್ಯಮಂಗಳವಿಗ್ರಹವೇ ಮೊದಲಾಗಿ ಅಲ್ಲಿರುವ ಪದಾರ್ಥಗಳೂ ನಿತ್ಯಗಳಾಗಿರುವುವೆಂದೂ ಪ್ರಮಾಣದಿಂದ ತಿಳಿದುಬರುವುದಷ್ಟೆ ?

ಓಹೋ ಅಲ್ಲಿರುವ ಪದಾರ್ಥಗಳೆಲ್ಲಾ ನಿತ್ಯಗಳಾಗಿರುವ ಪಕ್ಷದಲ್ಲಿ ಅವುಗಳ ಉತ್ಪತ್ತಿಗೋಸ್ಕರ ಮಹದಾದಿತತ್ತ್ವಗಳು ಅಪೇಕ್ಷಿತಗಳಲ್ಲವಾದುದರಿಂದ ಚತುರ್ವಿಂಶತಿತತ್ತ್ವರೂಪವಾಗಿ ಪರಿಣಾಮವನ್ನು ಒಪ್ಪಿಕೊಳ್ಳುವುದು ವ್ಯರ್ಥವಲ್ಲವೆ ? ಅಲ್ಲ ಅಪ್ರಾಕೃತವಾದ ಆಕಾಶವು ನಿತ್ಯವಾಗಿರುವಂತೆ ಅಪ್ರಾಕೃತಗಳಾದ

ಮಹದಾದಿತತ್ತ್ವಗಳೂ ನಿತ್ಯಗಳಾಗಿರಬಹುದು. ಅಲ್ಲಿರುವ ವಾಯು, ಅಗ್ನಿ, ಜಲ, ಪೃಥಿವಿ ಎಂಬ ಉತ್ತರೋತ್ತರಭೂತವು ಆಕಾಶ, ವಾಯು, ಅಗ್ನಿ, ಜಲವೆಂಬ ಪೂರ್ವಪೂರ್ವಭೂತದಿಂದ ಉಂಟಾದುದಲ್ಲವಷ್ಟೆ ?

## ೭೭೩ ನಿತ್ಯಮುಕ್ತೇಶ್ವರಾಣಾಮಪಿ ಅಪ್ರಾಕೃತೇಂದ್ರಿಯವತ್ತ್ವಂ

ನಿತ್ಯವಿಭೂತಿಯಲ್ಲಿರುವ—ಶರೀರ, ಇಂದ್ರಿಯ, ಪ್ರಾಣ, ವಿಷಯ ಇವುಗಳ ಸಂಸ್ಥಾನವಿಶೇಷವು ಎಂದರೆ ಆಕಾರವಿಶೇಷವು ಪ್ರಾಯಶಃ ಪ್ರಾಕೃತಶರೀರೇಂದ್ರಿಯಾದಿಗಳಂತೆಯೇ ಇರುವುದು. ನಿತ್ಯಮುಕ್ತೇಶ್ವರರ ದಿವ್ಯಮಂಗಳವಿಗ್ರಹಗಳಲ್ಲಿ ಕೈ-ಕಾಲು-ಕಣ್ಣು-ಕಿವಿ-ಮೂಗು ಮುಂತಾದ ಅವಯವಗಳನ್ನು ವರ್ಣಿಸಿರುವುದರಿಂದ ಅವುಗಳಲ್ಲಿ ಆ ಆ ಇಂದ್ರಿಯಗಳು ಉಂಟೆಂದು ಸಿದ್ಧವಾಗುವುದು. ಅಪ್ರಾಕೃತಗಳಾದ ಇಂದ್ರಿಯಗಳನ್ನು ಅಂಗೀಕರಿಸದಿದ್ದರೆ ಆಗ ಪಾಣಿ-ಪಾದ ಮುಂತಾದ ಶಬ್ದಗಳಿಗೆಲ್ಲಾ ಇಂದ್ರಿಯಾಧಿಷ್ಠಾನದಲ್ಲಿ ಲಕ್ಷಣಾವೃತ್ತಿಯನ್ನು ಹೇಳಬೇಕಾಗುವುದರಿಂದ ಅಮುಖ್ಯತ್ವವನ್ನು ಅಂಗೀಕರಿಸಬೇಕಾಗುವುದು. ಪಾಣಿಪಾದಾದಿಶಬ್ದಗಳಿಗೆಲ್ಲಾ ಇಂದ್ರಿಯಗಳಲ್ಲಿಯೇ ಶಕ್ತಿ ಎಂದರೆ ಮುಖ್ಯವೃತ್ತಿಯಿರುವುದರಿಂದಲೂ, ನಿತ್ಯಮುಕ್ತೇಶ್ವರರಿಗೆ ಪಾಣಿಪಾದಾದಿಗಳನ್ನು ವರ್ಣಿಸಿರುವುದರಿಂದಲೂ, ಆ ಶಬ್ದಗಳಿಗೆ ಇಲ್ಲಿ ಮುಖ್ಯಾರ್ಥವನ್ನು ತ್ಯಜಿಸುವುದಕ್ಕೆ ಗಮಕವಿಲ್ಲವಾದುದರಿಂದಲೂ ಮುಖ್ಯಾರ್ಥವನ್ನು ಸ್ವೀಕರಿಸಿದರೆ ಬಾಧಕವಿಲ್ಲವಾದುದರಿಂದಲೂ ಅವರಿಗೆ ಇಂದ್ರಿಯಗಳು ಉಂಟೆಂದು ಒಪ್ಪಬೇಕು.

## ೭೭೪. ಇಂದ್ರಿಯಾದಿಪ್ರತಿಷೇಧಕವಚನಾನಾಂ ಪ್ರಾಕೃತೇಂದ್ರಿಯಾದಿಪ್ರತಿಷೇಧಪರತ್ವಂ.

ಹೀಗಾಗುವುದಾದರೆ—"ಇಂದ್ರಿಯಚ್ಛಿದ್ರವಿಧುರಾ ದ್ಯೋತಮಾನಾಶ್ಚ ಸರ್ವಶಃ" ಎಂಬುದಾಗಿ—ಆ ಆ ಇಂದ್ರಿಯಗಳಿಗೆ ಅಧಿಷ್ಠಾನಗಳಾಗಿರುವ ರಂಧ್ರಗಳು ನಿತ್ಯಮುಕ್ತೇಶ್ವರರಿಗೆ ಇಲ್ಲವೆಂದು ಹೇಳುವ ಪ್ರಮಾಣದ ಗತಿಯೇನು ?

೧ ಉತ್ಸರ್ಗಾಪವಾದನ್ಯಾಯದಿಂದ—ಪ್ರಾಕೃತಗಳಾದ ಇಂದ್ರಿಯಚ್ಛಿದ್ರಗಳು ಅವರಿಗೆ ಇಲ್ಲವೆಂದು ಈ ವಚನವು ಹೇಳುವುದಲ್ಲದೆ ಅಪ್ರಾಕೃತಗಳಾದ

---

೧ ಉತ್ಸರ್ಗಾಪವಾದನ್ಯಾಯವೆಂದರೆ—ಸಾಮಾನ್ಯಶಾಸ್ತ್ರಕ್ಕೆ ಶಬ್ದೋಪಾತ್ತವಾದ ವಿಶೇಷದೊಡನೆ (ವಿಶೇಷಶಾಸ್ತ್ರದೊಡನೆ) ವಿರೋಧವು ಪ್ರಸಕ್ತವಾಗುವುದಾಗಿದ್ದರೆ ಅಂಥ ವಿರೋಧವನ್ನು ಪರಿಹರಿಸುವುದಕ್ಕಾಗಿ ಸಾಮಾನ್ಯಶಾಸ್ತ್ರಕ್ಕೆ ಶಬ್ದೋಪಾತ್ತವಿಶೇಷವ್ಯತಿರಿಕ್ತವಿಷಯದಲ್ಲಿ ಪ್ರವೃತ್ತಿಯನ್ನು ಸ್ವೀಕರಿಸುವಿಕೆ ಉತ್ಸರ್ಗಾಪವಾದ ನ್ಯಾಯವೆನಿಸಿಕೊಳ್ಳುವುದು ;

ಇಂದ್ರಿಯಚ್ಛಿದ್ರಗಳನ್ನು ಪ್ರತಿಷೇಧಿಸುವುದಿಲ್ಲವೆಂಬುದೇ ಈ ವಚನಕ್ಕೆ ಗತಿಯಾಗಿ ರುವುದು. ನಿತ್ಯಮುಕ್ತೇಶ್ವರರಿಗೆ ಅಪ್ರಾಕೃತವಾದ ದಿವ್ಯಮಂಗಳವಿಗ್ರಹವು ಇರು ರುತ್ತಿದ್ದರೂ "ಅಶರೀರಂ ವಾವ ಸಂತಂ" ಎಂಬ ಶರೀರನಿಷೇಧಶ್ರುತಿ ಹೇಯ ವಾದ ಪ್ರಾಕೃತಶರೀರವನ್ನು ಪ್ರತಿಷೇಧಿಸುವುದಲ್ಲದೆ ಅಪ್ರಾಕೃತಶರೀರವನ್ನು ಪ್ರತಿ ಷೇಧಿಸಲಾರದಷ್ಟೆ? ಅದೇ ನ್ಯಾಯವನ್ನು ಇಲ್ಲಿಯೂ ತಿಳಿಯಬಹುದು.

## ೭೭೫. ಮುಕ್ತಾನಾಂ ಶರೀರೇಂದ್ರಿಯಸದ್ಭಾವೇ ಸೂತ್ರಕಾರ ಭಾಷ್ಯಕಾರಯೋಸ್ಸಮ್ಮತಿಃ

ವೇದಾಂತಸೂತ್ರದ ನಾಲ್ಕನೆಯ ಅಧ್ಯಾಯದ ನಾಲ್ಕನೆಯ ಪಾದದ ಐದ ನೆಯ ಅಧಿಕರಣದಲ್ಲಿ—ಮುಕ್ತರಾದವರಿಗೆ ಶರೀರವೂ ಇಂದ್ರಿಯಗಳೂ ಉಂಟೋ ಇಲ್ಲವೋ ಎಂದು ವಿಚಾರಮಾಡಿ "ಅಭಾವಂ ಬಾದರಿರಾಹ ಹ್ಯೇವಂ" ಎಂಬ ಸೂತ್ರದಿಂದ ಬಾದರಿಮಹರ್ಷಿಯ ಮತರೀತಿಯಾಗಿ ಮುಕ್ತರಿಗೆ ಶರೀರೇಂದ್ರಿಯ

---

ಹಿಂಸಾಸಾಮಾನ್ಯವನ್ನು ಪ್ರತಿಷೇಧಿಸುವ "ಮಾ ಹಿಂಸ್ಯಾತ್ ಸರ್ವಾ ಭೂತಾನಿ" ಎಂಬ ಸಾಮಾನ್ಯಶಾಸ್ತ್ರಕ್ಕೆ ಹಿಂಸಾವಿಶೇಷವನ್ನು ವಿಧಿಸುವ "ಅಗ್ನೀಷೋಮೀಯಂ ಪಶು ಮಾಲಭೇತ" ಎಂಬ ವಿಶೇಷಶಾಸ್ತ್ರದೊಡನೆ ಪ್ರಸಕ್ತವಾಗುವ ವಿರೋಧವನ್ನು ಪರಿಹರಿಸುವುದ ಕ್ಕಾಗಿ ವಿಹಿತಹಿಂಸಾವ್ಯತಿರಿಕ್ತವಿಷಯದಲ್ಲಿ ಸಾಮಾನ್ಯಶಾಸ್ತ್ರಕ್ಕೆ ಪ್ರವೃತ್ತಿಯನ್ನು ನ್ಯಾಯದರ್ಶಿ ಗಳು ಸ್ವೀಕರಿಸಿರುವರಷ್ಟೆ?

ಮತ್ತು—ಹೋಮಸಾಮಾನ್ಯಕ್ಕೆ ಅಧಿಕರಣಪ್ರದೇಶವನ್ನು ವಿಧಿಸುವ "ಯದಾಹವ ನೀಯೇ ಜುಹೋತಿ" ಎಂಬ ಸಾಮಾನ್ಯಶಾಸ್ತ್ರಕ್ಕೆ ಹೋಮವಿಶೇಷದಲ್ಲಿ ಏಕಹಾಯನೀ ಗೋವಿನ ಪದದೇಶವನ್ನು ಅಧಿಕರಣವಾಗಿ ವಿಧಿಸುವ "ಪದೇ ಜುಹೋತಿ" ಎಂಬ ವಿಶೇಷ ಶಾಸ್ತ್ರದೊಡನೆ ಪ್ರಸಕ್ತವಾಗುವ ವಿರೋಧವನ್ನು ಪರಿಹರಿಸುವುದಕ್ಕಾಗಿ ಪದಹೋಮವ್ಯತಿರಿಕ್ತವಿಷ ಯದಲ್ಲಿ ಆಹವನೀಯಶಾಸ್ತ್ರಕ್ಕೆ ಪ್ರವೃತ್ತಿಯನ್ನು ಸ್ವೀಕರಿಸಿರುವರಷ್ಟೆ?

ಪ್ರಯುಕ್ತವಾಗಿರುವ ಸಾಮಾನ್ಯಶಬ್ದದಿಂದಲೇ ವಿಶೇಷಕ್ಕೂ ಬೋಧೆ ಸಂಭವಿಸುವುದಾಗಿ ದ್ದರೂ ವಿಶೇಷಶಬ್ದವನ್ನು ಪ್ರಯೋಗಿಸಿದ್ದರೆ ಅಂಥ ವಿಶೇಷಬೋಧಕಶಬ್ದಕ್ಕೆ ವೈಯರ್ಥ್ಯವು ಬಾರ ದಿರುವುದಕ್ಕಾಗಿ ಉಕ್ತವಿಶೇಷವ್ಯತಿರಿಕ್ತವಿಷಯಕತ್ವವನ್ನು ಸಾಮಾನ್ಯಶಬ್ದಕ್ಕೆ ಸ್ವೀಕರಿಸುವಿಕೆ "ಗೋಬಲೀವರ್ದನ್ಯಾಯ" ಅಥವಾ "ಬ್ರಾಹ್ಮಣಪರಿವ್ರಾಜಕನ್ಯಾಯ" ಎನಿಸಿಕೊಳ್ಳುವುದು.

ಸಾಮಾನ್ಯಶಾಸ್ತ್ರಕ್ಕೆ ವಿಶೇಷಶಾಸ್ತ್ರದೊಡನೆ ಪ್ರಸಕ್ತವಾಗುವ ವಿರೋಧವನ್ನು ಪರಿಹರಿಸುವು ದಕ್ಕಾಗಿ ಶಬ್ದೋಪಾತ್ತವಾದ ವಿಶೇಷಮಾತ್ರದಲ್ಲಿಯೇ ಸಾಮಾನ್ಯಶಾಸ್ತ್ರಕ್ಕೆ ಪರ್ಯವಸಾನವನ್ನು ಸ್ವೀಕರಿಸುವಿಕೆ ಸಾಮಾನ್ಯವಿಶೇಷನ್ಯಾಯವೆನಿಸಿಕೊಳ್ಳುವುದು; "ಪಶುನಾ ಯಜೇತ" ಎಂಬ ಸ್ಥಳದಲ್ಲಿ ಪಶುಸಾಮಾನ್ಯಬೋಧಕವಾದ ಪಶುಶಬ್ದಕ್ಕೆ "ಛಾಗಸ್ಯ ವಪಾಯಾ ಮೇದ ಸೋಽನುಬ್ರೂಹಿ" ಎಂಬ ಮಂತ್ರವರ್ಣಬಲದಿಂದ ಛಾಗರೂಪವಾದ ಪಶುವಿಶೇಷದಲ್ಲಿಯೇ ಪರ್ಯವಸಾನವನ್ನು ಸ್ವೀಕರಿಸಿರುವರಷ್ಟೆ?

ಗಳು ಯಾವಾಗಲೂ ಇಲ್ಲವೆಂಬ ಒಂದು ಪೂರ್ವಪಕ್ಷವನ್ನೂ, "ಭಾವಂ ಜೈಮಿನಿರ್ವಿಕಲ್ಪಾಮನನಾತ್" ಎಂಬ ಸೂತ್ರದಿಂದ ಜೈಮಿನಿಮಹರ್ಷಿಯ ಮತರೀತಿಯಾಗಿ ಮುಕ್ತರಿಗೆ ಶರೀರೇಂದ್ರಿಯಗಳು ಯಾವಾಗಲೂ ಉಂಟೆಂಬ ಮತ್ತೊಂದು ಪೂರ್ವಪಕ್ಷವನ್ನೂ, ತೋರಿಸಿ—"ದ್ವಾದಶಾಹವದುಭಯವಿಧಂ ಬಾದರಾಯಣೋಽತಃ" ಎಂಬ ಸೂತ್ರದಿಂದ ವ್ಯಾಸಮಹರ್ಷಿಯ ಮತರೀತಿಯಾಗಿ ಮುಕ್ತರಿಗೆ ಶರೀರೇಂದ್ರಿಯಗಳು ಸಂಕಲ್ಪವಿದ್ದಾಗ ಇರುವುವೆಂದೂ, ಸಂಕಲ್ಪವಿಲ್ಲದಿರುವಾಗ ಇಲ್ಲದೆಯೂ ಇರಬಹುದೆಂದೂ ಸಿದ್ಧಾಂತವನ್ನು ಭಾಷ್ಯಕಾರರು ತೋರಿಸಿರುವುದರಿಂದ ಮುಕ್ತರಿಗೆ ಶರೀರೇಂದ್ರಿಯಸದ್ಭಾವವು ಸೂತ್ರಕಾರರಿಂದಲೂ ಭಾಷ್ಯಕಾರರಿಂದಲೂ ಹೇಳಲ್ಪಡಲಿಲ್ಲವೆಂಬ ಶಂಕೆಗೆ ಅವಕಾಶವಿಲ್ಲ.

## ೭೭೬. ಮುಕ್ತಾನಾಮೀಶ್ವರಸಂಕಲ್ಪಸೃಷ್ಟಶರೀರಸ್ಯ ಯಾವದಾತ್ಮಭಾವಿತ್ವಂ.

ಸಂಕಲ್ಪವಿಲ್ಲದಿದ್ದಾಗ ಮುಕ್ತರಿಗೆ ಶರೀರವಿಲ್ಲವೆಂಬ ಸಿದ್ಧಾಂತವು ಅಂಥ ಸಂದರ್ಭದಲ್ಲಿ ಅವರಿಗೆ ಆವುದೊಂದು ಶರೀರವೂ ಇಲ್ಲವೆಂಬ ಅಭಿಪ್ರಾಯವುಳ್ಳುದುದಲ್ಲ. ಅವರ ಸಂಕಲ್ಪದಿಂದ ಸೃಷ್ಟಿಸಲ್ಪಡಬಹುದಾದ ಶರೀರವು ಸಂಕಲ್ಪವಿಲ್ಲದಿರುವಾಗ ಅವರಿಗಿಲ್ಲವಾದರೂ ಅಂಥ ಸಂದರ್ಭದಲ್ಲಿಯೂ ಈಶ್ವರಸಂಕಲ್ಪಸೃಷ್ಟವಾದ ಯಾವದಾತ್ಮಭಾವಿಶರೀರವು ಅವರಿಗೆ ಇದ್ದೇ ಇರುವುದು.

## ೭೭೭. ನಿತ್ಯಮುಕ್ತೇಶ್ವರಾಣಾಮಿಂದ್ರಿಯಾದಿಸದ್ಭಾವೇ ಶ್ರುತಿಪ್ರಮಾಣಪ್ರದರ್ಶನಂ.

ಮತ್ತು ಶ್ರೀಮತ್ಪರಾಶರಭಟ್ಟಾರ್ಯರು—ನಿತ್ಯಮುಕ್ತೇಶ್ವರರಿಗೆ ಮನದ್ರಿಯವುಂಟೆಂದು ಸ್ಪಷ್ಟವಾಗಿ ಹೇಳಿ ಆ ವಿಷಯದಲ್ಲಿ ಶ್ರುತಿಗಳನ್ನೂ ತೋರಿಸಿರುವರು.—"ಮನಸೈತಾನ್ ಕಾಮಾನ್ ಪಶ್ಯನ್ ರಮತೇ" "ಮನೋಽಸ್ಯ ದಿವ್ಯಂ ಚಕ್ಷುಃ" "ಸೋಽನ್ಯಂ ಕಾಮಂ ಮನಸಾ ಧ್ಯಾಯೀತ" "ಮನಸೈವ ಜಗತ್ಸೃಷ್ಟಂ" ಇತ್ಯಾದಿ. ಆದುದರಿಂದ ನಿತ್ಯಮುಕ್ತೇಶ್ವರರಿಗೆ ಶರೀರವೂ ಇಂದ್ರಿಯಗಳೂ ಉಂಟೆಂದು ಸಿದ್ಧವಾಯಿತು.

## ೭೭೮ ಉದಾಹೃತಶ್ರುತಿಗತಸ್ಯ ಮನಶ್ಶಬ್ದಸ್ಯ ಜ್ಞಾನಪರತ್ವಮೇವೇತಿ ಪಕ್ಷಾಂತರಂ

ಆದರೆ ಈ ಮನಶ್ಶಬ್ದವು ಜ್ಞಾನವಾಚಿಯಾಗಿರುವುದಲ್ಲದೆ ಮನ-ಇಂದ್ರಿಯವಾಚಿಯಲ್ಲವೆಂದು ಕೆಲವರು ಆಚಾರ್ಯರು ಹೇಳುವರು. ಏತಕ್ಕೆಂದರೆ—"ಬುದ್ಧಿರ್ಮಾ, ಮನಸ್ವೀ" ಎಂಬ ಎರಡು ಶಬ್ದಗಳನ್ನು ಪರ್ಯಾಯಶಬ್ದಗಳಾಗಿ ಉಪ

ಯೋಗಿಸುವ ವಾಡಿಕೆಯುಂಟಷ್ಟೆ? ಮತ್ತು—"ಕ್ಷುಭಿತಂ ಮೇ ಮನಃ, ಪ್ರಶಸ್ತಂ ಮೇ ಮನಃ" ಎಂಬ ಪ್ರತ್ಯಕ್ಷದಲ್ಲಿ ಮನಸ್ಸಿಗೆ ಧರ್ಮಭೂತವಾಗಿರುವ ಕ್ಷೋಭವೂ ಪ್ರಾಶಸ್ತ್ಯವೂ ಸಾಕ್ಷಾತ್ಕರಿಸಲ್ಪಡುತ್ತಿರುವುದು; ಧರ್ಮಿಪ್ರತ್ಯಕ್ಷವಿಲ್ಲದೆ ಧರ್ಮಪ್ರತ್ಯಕ್ಷವು ಆಗಲಾರದು. ಮನಶ್ಶಬ್ದವು ಮನಇಂದ್ರಿಯವನ್ನೇ ತೋರಿಸುವುದಾದರೆ ಅದು ಅತೀಂದ್ರಿಯವಾದುದರಿಂದ ಪ್ರತ್ಯಕ್ಷಗೋಚರವಾಗಲಾರದಾದಕಾರಣ ಅದರ ಧರ್ಮಗಳಾದ ಕ್ಷುಭಿತತ್ವಪ್ರಶಸ್ತತ್ವಗಳು ಪ್ರತ್ಯಕ್ಷಗೋಚರಗಳಾಗಲಿಕ್ಕಿಲ್ಲ. ಅಂಥ ಧರ್ಮಗಳಾದರೆ ಪ್ರತ್ಯಕ್ಷಗೋಚರಗಳಾಗುತ್ತಿರುವುದರಿಂದ ಅವುಗಳ ಆಶ್ರಯಕ್ಕೂ ಪ್ರತ್ಯಕ್ಷಗೋಚರತ್ವವನ್ನು ಒಪ್ಪಬೇಕಾಗಿರುವುದರಿಂದ ಪ್ರತ್ಯಕ್ಷಗ್ರಹಣಯೋಗ್ಯವಾದ ಬುದ್ಧಿಯನ್ನೇ ಮನಶ್ಶಬ್ದವು ಬೋಧಿಸುವುದಲ್ಲದೆ ಮನಇಂದ್ರಿಯವನ್ನಲ್ಲ. ಇದು ಕೆಲವರ ಮತವಾಗಿರುವುದು.

ಇದಕ್ಕಿಂತಲೂ ಮೊದಲನೆಯ ಪಕ್ಷವೇ ಮುಖ್ಯವಾಗಿಯೂ ಪೂರ್ವಾಚಾರ್ಯರಲ್ಲಿ ಅನೇಕರಿಗೆ ಅಭಿಮತವಾಗಿಯೂ ಇರುವುದು. ಆದಕಾರಣ ನಿತ್ಯಮುಕ್ತೇಶ್ವರರಿಗೆ ಶರೀರೇಂದ್ರಿಯಗಳು ಉಂಟೆಂಬುದಕ್ಕೆ ಅಪವಾದವಿಲ್ಲ.

### ೭೭೯ ನಿತ್ಯಮುಕ್ತೇಶ್ವರಶರೀರಾಣಾಮಪಿ ನಿತ್ಯಾನಿತ್ಯಭೇದೇನ ದ್ವೈವಿಧ್ಯಂ

ಶರೀರ, ಇಂದ್ರಿಯ, ಪ್ರಾಣ, ವಿಷಯ ಎಂಬುದಾಗಿ ನಾಲ್ಕು ವಿಧವಾಗಿ ಪರಿಣಮಿಸಿರುವ ನಿತ್ಯವಿಭೂತಿಯ ಪರಿಣಾಮಗಳೊಳಗೆ ವಿಷಯವೆಂಬ ಪರಿಣಾಮವು ನಿತ್ಯವಾಗಿಯೂ ಅನಿತ್ಯವಾಗಿಯೂ ಇರುವುದೆಂದು ಹಿಂದೆ ತೋರಿಸಿದೆವು. ಅದರಂತೆಯೇ ಶರೀರವೆಂಬ ಪರಿಣಾಮದಲ್ಲಿಯೂ ನಿತ್ಯಾನಿತ್ಯಭೇದಗಳು ಉಂಟು. ಈಶ್ವರನೂ ನಿತ್ಯಸೂರಿಗಳೂ ಸಹ ನಿತ್ಯವಾದ ಸಂಕಲ್ಪದಿಂದ ಪರಿಗ್ರಹಿಸಿರುವ ಶರೀರಗಳು ನಿತ್ಯಶರೀರಗಳೆನಿಸಿಕೊಳ್ಳುವುವು. ಅನಿತ್ಯವಾದ ಸಂಕಲ್ಪದಿಂದ ಅವರು ಆಗಾಗ ಪರಿಗ್ರಹಿಸುವ ಶರೀರಗಳು ಅನಿತ್ಯಶರೀರಗಳೆನಿಸಿಕೊಳ್ಳುವುವು.

ಮುಕ್ತರಿಗಾದರೆ—ಮೋಕ್ಷಕಾಲದಲ್ಲಿ ಭಗವತ್ಸಂಕಲ್ಪದಿಂದ ಉಂಟಾಗುವ ಶರೀರಗಳು ಜನ್ಯಗಳಾಗಿಯೂ ವಿನಾಶರಹಿತಗಳಾಗಿಯೂ ಇರುವುವು. ಸ್ವಸಂಕಲ್ಪದಿಂದ ಉಂಟಾಗುವ ಶರೀರಗಳು ಜನ್ಯಗಳಾಗಿಯೂ ವಿನಾಶಿಗಳಾಗಿಯೂ ಇರುವುವು

### ೭೮೦ ಅಪ್ರಾಕೃತೇಂದ್ರಿಯಾಣಾಂ ತು ನಿತ್ಯತ್ವಮೇವ

ಇಂದ್ರಿಯವೆಂಬ ಪರಿಣಾಮದಲ್ಲಿ ಅಪ್ರಾಕೃತಗಳಾದ ಎಲ್ಲಾ ಇಂದ್ರಿಯಗಳೂ ನಿತ್ಯಗಳಾಗಿಯೇ ಇರುವುವು. ಹೇಗೆಂದರೆ—ಅಲ್ಲಿರುವ ವಾಯು ಮೊದ

ಲಾದ ಉತ್ತರೋತ್ತರಭೂತಗಳು ಪೂರ್ವಾಪೂರ್ವಭೂತಾಪೇಕ್ಷೆಯಿಲ್ಲದೆಯೇ ಹೇಗೆ ನಿತ್ಯಗಳಾಗಿರುವುವೋ ಹಾಗೆಯೇ ಇಂದ್ರಿಯಗಳೂ ಅಹಂಕಾರವೆಂಬ ಉಪಾದಾನ-ಕಾರಣವನ್ನು ಅಪೇಕ್ಷಿಸದೆಯೇ ನಿತ್ಯಗಳಾಗಿರುವುವು. ಈಶ್ವರನೂ ನಿತ್ಯಸೂರಿಗಳೂ ಸಹ ಅಂಥ ನಿತ್ಯೇಂದ್ರಿಯಗಳನ್ನು ನಿತ್ಯವಾದ ಸಂಕಲ್ಪದಿಂದ ನಿತ್ಯವಾಗಿ ಪರಿಗ್ರಹಿಸಿರುವರು. ಮುಕ್ತರಾದರೆ ಸ್ವಸಂಕಲ್ಪದಿಂದ ಅನಿತ್ಯಶರೀರಗಳನ್ನು ಕದಾಚಿತ್ ಪರಿಗ್ರಹಿಸುವಂತೆ ಅವುಗಳ ಜತೆಯಲ್ಲಿ ನಿತ್ಯವಾದ ಇಂದ್ರಿಯಗಳನ್ನೇ ಕದಾಚಿತ್ ಪರಿಗ್ರಹಿಸುವರು. ಈಶ್ವರಸಂಕಲ್ಪದಿಂದ ಮೋಕ್ಷಕಾಲದಲ್ಲಿ ಸೃಷ್ಟವಾದ ಶರೀರದಲ್ಲಿ ಇರುವ ಇಂದ್ರಿಯಗಳೊಡನೆ ಸಂಬಂಧವು ಮುಕ್ತರಿಗೆ ಮೋಕ್ಷೋತ್ತರಕಾಲದಲ್ಲಿ ಯಾವದಾತ್ಮಭಾವಿಯಾಗಿಯೇ ಇರುವುದು.

## ೭೮೧ ನಿತ್ಯಮುಕ್ತೇಶ್ವರಾಣಾಂ ಶರೀರಪರಿಗ್ರಹೇ ಪ್ರಯೋಜನವಿಶೇಷಕಾರಣವಿಶೇಷಯೋರ್ನಿರೂಪಣಂ

ನಿತ್ಯಸೂರಿಗಳೂ ಮುಕ್ತರೂ ಶರೀರೇಂದ್ರಿಯಗಳನ್ನು ಪರಿಗ್ರಹಿಸುವುದಕ್ಕೆ ಭಗವದಭಿಮತಕೈಂಕರ್ಯಸಿದ್ಧಿಯೆಂಬ ಭೋಗವೇ ಪ್ರಯೋಜನವಾಗಿರುವುದು.

ಈಶ್ವರನು ಶರೀರೇಂದ್ರಿಯಗಳನ್ನು ಪರಿಗ್ರಹಿಸುವುದಕ್ಕೆ ತನ್ನ ಭೋಗಸಿದ್ಧಿಯೂ, ತನಗೆ ಶೇಷಭೂತರಾದ ನಿತ್ಯಮುಕ್ತರುಗಳಿಗೆ ಆನಂದವನ್ನು ಉಂಟುಮಾಡುವಿಕೆಯೂ, ಮುಮುಕ್ಷುಗಳಾದ ಉಪಾಸಕರಿಗೆ ಉಪಾಸನಸೌಕರ್ಯವನ್ನು ಉಂಟುಮಾಡುವಿಕೆಯೂ, ದುಷ್ಟನಿಗ್ರಹಶಿಷ್ಟಪರಿಪಾಲನಧರ್ಮಸ್ಥಾಪನೆಗಳೂ ಪ್ರಯೋಜನಗಳಾಗಿರುವುವು.

ಈಶ್ವರನು ಶರೀರೇಂದ್ರಿಯಗಳನ್ನು ಪರಿಗ್ರಹಿಸುವುದಕ್ಕೆ ಅವನ ಸಂಕಲ್ಪಮಾತ್ರವೇ ಕಾರಣವಾಗಿರುವುದು. ನಿತ್ಯರೂ ಮುಕ್ತರೂ ಶರೀರೇಂದ್ರಿಯಗಳನ್ನು ಪರಿಗ್ರಹಿಸುವುದಕ್ಕೆ ಕೆಲವುವೇಳೆ ಭಗವತ್ಸಂಕಲ್ಪಮಾತ್ರವೂ, ಕೆಲವುವೇಳೆ ಭಗತ್ಸಂಕಲ್ಪಾನುಸಾರಿಯಾದ ಸ್ವಸಂಕಲ್ಪವೂ, ಕಾರಣವಾಗಿರುವುವು.

## ೭೮೨ ಶುದ್ಧಸತ್ತ್ವಪರಿಣಾಮಹೇತುಭೂತಸ್ಯ ನಿತ್ಯಮುಕ್ತೇಶ್ವರಸಂಕಲ್ಪಸ್ಯ ತಾರತಮ್ಯಾನುಪಪತ್ತ್ಯಾಶಂಕಾ

"ಪೂಜ್ಯರೆ? ಜ್ಞಾನವೆಂಬುದು ನಿತ್ಯವಾಗಿಯೂ ಜೀವೇಶ್ವರರಿಗೆ ಅಪೃಥಕ್ಸಿದ್ಧವಾದ ವಿಶೇಷಣವಾಗಿಯೂ ಇರುವುದು ; ಕರ್ಮವಶ್ಯನಾದ ಜೀವನಿಗೆ ಸಂಸಾರದಶೆಯಲ್ಲಿ ಕರ್ಮವಶದಿಂದ ಸಂಕೋಚವಿಕಾಸಗಳೆಂಬ ಅವಸ್ಥಾಭೇದಗಳು ಈ

ಜ್ಞಾನಕ್ಕೆ ಉಂಟಾಗುವುದರಿಂದ ಸುಖ-ದುಃಖ-ಇಚ್ಛಾ-ದ್ವೇಷಗಳೆಂಬ ಜ್ಞಾನಾವಸ್ಥಾಭೇದಗಳನೇಕಗಳು ಒಂದೇ ಜ್ಞಾನದಲ್ಲಿ ಉಂಟಾಗಬಹುದು. ಮತ್ತು ಪರಿಪಾಕಾವಸ್ಥೆಯನ್ನು ಹೊಂದಿ ಫಲೋನ್ಮುಖವಾಗಿರುವ ಕರ್ಮವೆಂಬ ಸಹಕಾರಿ ಕಾರಣದ ತಾರತಮ್ಯದಿಂದ ತ್ರಿಗುಣದ್ರವ್ಯದ ವಿಚಿತ್ರವಿಚಿತ್ರಗಳಾಗಿರುವ ಅನೇಕ ಪರಿಣಾಮಗಳಿಗೆ ಕಾರಣವಾಗಿರುವ ವಿಚಿತ್ರಗಳಾದ ಸಂಕಲ್ಪಗಳೂ ಈಶ್ವರನಿಗೆ ಉಂಟಾಗಬಹುದು. ಕರ್ಮವೆಂಬ ಕಾರಣವಿರುವುದರಿಂದ ಸಂಸಾರದಶೆಯಲ್ಲಿ ಇವೆಲ್ಲವೂ ಯುಕ್ತಗಳಾಗಿಯೂ ಇರುವುವು.

ಆದರೆ—ಅಪ್ರಾಕೃತವಾದ ನಿತ್ಯವಿಭೂತಿದ್ರವ್ಯದ ನಾನಾವಿಧವಾದ ಪರಿಣಾಮಗಳ ವಿಷಯದಲ್ಲಿ ಕರ್ಮ ಕಾಲ ಮುಂತಾದ ಯಾವ ನಿಮಿತ್ತಗಳೂ ಸಂಭವಿಸದಿರುವಲ್ಲಿ ಅಂಥ ಪರಿಣಾಮಗಳು ಹೇಗೆ ಕೂಡುವುವು ? ಮತ್ತೂ ಅಂಥ ಪರಿಣಾಮಗಳಿಗೆ ಕಾರಣಗಳಾಗಿರುವ ಸಂಕಲ್ಪತಾರತಮ್ಯಗಳೂ ನಿತ್ಯಮುಕ್ತೇಶ್ವರರಿಗೆ ಹೇಗೆತಾನೆ ಉಂಟಾಗುವುವು ? ಏತಕ್ಕೆಂದರೆ—ಕರ್ಮವಶ್ಯರಲ್ಲದ ನಿತ್ಯಮುಕ್ತೇಶ್ವರರ ಜ್ಞಾನಕ್ಕೆ ಸಂಕೋಚವಿಕಾಸಗಳೆಂಬ ಅವಸ್ಥೆಗಳು ಸಂಭವಿಸುವುದಿಲ್ಲವಾದುದರಿಂದ ಅವರ ಜ್ಞಾನವು ಸರ್ವದಾ ಸರ್ವವಿಷಯಗಳನ್ನೂ ಸಾಕ್ಷಾತ್ಕರಿಸುತ್ತಿರುವುದಷ್ಟೆ? ಆದುದರಿಂದಲೇ ಅವರ ಜ್ಞಾನಕ್ಕೆ ಇಚ್ಛೆ ಸಂಕಲ್ಪ ಮುಂತಾದ ಅವಸ್ಥೆಗಳು ಉಂಟಾಗುವುದಕ್ಕೆ ಅವಕಾಶವಿಲ್ಲದಿರುವಲ್ಲಿ ಕಾದಾಚಿತ್ಕವಾದ ಇಚ್ಛೆಯೂ ಸಂಕಲ್ಪವೂ, ಅದರಿಂದ ಉಂಟಾಗುವ ಅಸಂದಾದ್ಯವಸ್ಥಾವಿಶೇಷಗಳೂ ಹೇಗೆ ಸಂಗತಗಳಾಗುವುವು ? ''

## ೭೮೩. ತತ್ಪರಿಹಾರಕಥನಾರ್ಥಮುಕ್ತಾಶಂಕಾಭಿಪ್ರಾಯಸ್ಯ ದ್ವೇಧಾ ವಿಕಲ್ಪಃ

ಈ ರೀತಿಯಲ್ಲಿ ಆಕ್ಷೇಪಿಸುವವರನ್ನು ಕುರಿತು ಎರಡು ಪ್ರಶ್ನೆಗಳನ್ನು ಮಾಡಬೇಕಾಗಿರುವುದು; ಅದೆಂತೆಂದರೆ—ನಿತ್ಯಮುಕ್ತೇಶ್ವರರ ಜ್ಞಾನಗಳಿಗೆ ಅವಸ್ಥೆಯೆಂಬುದೇ ಯಾವಾಗಲೂ ಸಂಭವಿಸುವುದಿಲ್ಲವೆಂದು ನಿಮ್ಮ ಅಭಿಪ್ರಾಯವೋ ? ಅಥವಾ ಅದು ಸಂಭವಿಸಿದರೂ ಅಕರ್ಮವಶ್ಯರಾದ ಅವರ ಇಚ್ಛಾಸಂಕಲ್ಪಾದಿಗಳನ್ನು ಕ್ಲೃಪ್ತವಾದ ಒಂದು ಕಾರಣದಿಂದ ನಿಯತವಾಗಿ ವ್ಯವಸ್ಥೆಪಡಿಸಲಾಗುವುದಿಲ್ಲವಾದುದರಿಂದ ಕಾಲಾಂತರದಲ್ಲಿಯೂ ಇಚ್ಛಾಸಂಕಲ್ಪಾದಿಗಳು ಉಂಟಾಗಬೇಕಾಗಿ ಪ್ರಸಂಗಿಸುವುದೆಂದು ಅಭಿಪ್ರಾಯವೋ ?

## ೭೮೪. ತತ್ರ ವಿಕಲ್ಪದ್ವಯಸ್ಯಾಪ್ಯಸಾಮಂಜಸ್ಯಕಥನಪೂರ್ವಕಂ ಇಚ್ಛಾಪಸಂಕಲ್ಪತಾರತಮ್ಯೋಪಪಾದನಂ.

ಅದರಲ್ಲಿ ಮೊದಲನೆಯ ಅಭಿಪ್ರಾಯವು ಸಮಂಜಸವಾದುದಲ್ಲ. ಏತಕ್ಕೆಂದರೆ ಸರ್ವಜ್ಞರಾದ ನಿತ್ಯಮುಕ್ತೇಶ್ವರರ ಜ್ಞಾನದಲ್ಲಿಯೂ ಆ ಆ ಕಾಲಕ್ಕೆ ಅನುಸಾರವಾಗಿ ಆಕಾರಭೇದಗಳು ಎಂದರೆ ಅವಸ್ಥಾಭೇದಗಳು ಕ್ರಮವಾಗಿ ಉಂಟಾಗುತ್ತಲೇ ಇರುವುವು. ಹೇಗೆಂದರೆ ಒಂದು ಕಾರ್ಯವು ಭವಿಷ್ಯತ್ಕಾಲದಲ್ಲಿ ಉಂಟಾಗುವುದಾಗಿದ್ದರೆ ಅದಕ್ಕೆ ಪೂರ್ವದಲ್ಲಿ ಅವರ ಜ್ಞಾನವು "ಈ ಕಾರ್ಯವು ಭವಿಷ್ಯತ್ತಾಗಿರುವುದು' ಎಂಬ ಆಕಾರವನ್ನೇ ಪಡೆವುದಲ್ಲದೆ "ಈ ಕಾರ್ಯವು ವರ್ತಮಾನವಾಗಿರುವುದು" ಎಂಬ ಆಕಾರವನ್ನಾಗಲಿ "ಈ ಕಾರ್ಯವು ಅತಿಕ್ರಾಂತವಾಗಿರುವುದು" ಎಂಬ ಆಕಾರವನ್ನಾಗಲಿ ಪಡೆವುದಿಲ್ಲ.

ಮತ್ತು ಒಂದು ಕಾರ್ಯವು ವರ್ತಮಾನವಾಗಿದ್ದರೆ ಆಗ ಅದರಲ್ಲಿ ಅವರ ಜ್ಞಾನವು "ಈ ಕಾರ್ಯವು ವರ್ತಮಾನವಾಗಿರುವುದು" ಎಂಬ ಆಕಾರವನ್ನೇ ಪಡೆವುದಲ್ಲದೆ "ಈ ಕಾರ್ಯವು ಅತಿಕ್ರಾಂತವಾಗಿರುವುದು" ಎಂಬ ಆಕಾರವನ್ನಾಗಲಿ "ಈ ಕಾರ್ಯವು ಭವಿಷ್ಯತ್ತಾಗಿರುವುದು" ಎಂಬ ಆಕಾರವನ್ನಾಗಲಿ ಪಡೆವುದಿಲ್ಲ

ಮತ್ತು ಒಂದು ಕಾರ್ಯವು ಅತಿಕ್ರಾಂತವಾಗಿದ್ದರೆ ಆಗ ಅದರ ವಿಷಯದಲ್ಲಿ ಅವರ ಜ್ಞಾನವು "ಈ ಕಾರ್ಯವು ಅತಿಕ್ರಾಂತವಾಗಿರುವುದು" ಎಂಬ ಆಕಾರವನ್ನೇ ಪಡೆವುದಲ್ಲದೆ "ಈ ಕಾರ್ಯವು ಭವಿಷ್ಯತ್ತಾಗಿರುವುದು" ಎಂಬ ಆಕಾರವನ್ನಾಗಲಿ "ಈ ಕಾರ್ಯವು ವರ್ತಮಾನವಾಗಿರುವುದು" ಎಂಬ ಆಕಾರವನ್ನಾಗಲಿ ಪಡೆವುದಿಲ್ಲ.

ಯದ್ಯಪಿ ಅವರ ಜ್ಞಾನವು ಸರ್ವಕಾಲದಲ್ಲಿಯೂ ಸಮಸ್ತವನ್ನೂ ಸಾಕ್ಷಾತ್ಕರಿಸುವುದು; ಎಂದರೆ ಕಾರ್ಯವು ಭವಿಷ್ಯತ್ತಾಗಿರುವುದನ್ನೂ ಈಗಲೇ ಅವರು ಬಲ್ಲರು. ಅದು ಸ್ವಕಾಲದಲ್ಲಿ ವರ್ತಮಾನವಾಗುವುದನ್ನೂ ಈಗಲೇ ಬಲ್ಲರು; ಅದು ಅತಿಕ್ರಾಂತವಾಗುವುದನ್ನೂ ಈಗಲೇ ಬಲ್ಲರು. ಆದರೂ ಅವರ ಜ್ಞಾನವು ಆ ಆ ಆಕಾರಗಳನ್ನು ಕ್ರಮವಾಗಿ ಪಡೆವುದಲ್ಲದೆ ಒಂದೇಕಾಲದಲ್ಲಿ ಎಲ್ಲಾ ಆಕಾರಗಳನ್ನೂ ಪಡೆವುದಿಲ್ಲ. ಹಾಗೆ ಪಡೆವುದಾದರೆ— ಭವಿಷ್ಯತ್ಕಾರ್ಯವಿಷಯದಲ್ಲಿ ವರ್ತಮಾನತ್ವಾಕಾರವನ್ನೂ, ಅತಿಕ್ರಾಂತತ್ವಾಕಾರವನ್ನೂ ಈಗಲೇ ಪಡೆಯಬೇಕಾಗಿ ಬರುವುದರಿಂದ —ಧವಳವಾದ ಶಂಖವನ್ನು ಪೀತವೆಂದು ತಿಳಿದುಕೊಳ್ಳುವ ಪುರುಷನಂತೆ ನಿತ್ಯಮುಕ್ತೇಶ್ವರರು ಭ್ರಾಂತರೆನಿಸಿಕೊಳ್ಳಬೇಕಾಗುವುದಲ್ಲದೆ ಅವರ ಸರ್ವಜ್ಞ

ತ್ವಕ್ಕೂ ಹಾನಿ ಉಂಟಾಗುವುದು. ಆದಕಾರಣ ನಿತ್ಯಮುಕ್ತೇಶ್ವರರ ಜ್ಞಾನಗಳಿಗೂ ಕ್ರಮಿಕವಾದ ಅವಸ್ಥಾಭೇದವು ಉಂಟೆಂದು ಒಪ್ಪಲೇಬೇಕು.

ಅಥವಾ ಕಾದಾಚಿತ್ಕವಾದ ಆ ಆ ಕಾರ್ಯದ್ರವ್ಯದೊಡನೆ ನಿತ್ಯಮುಕ್ತೇಶ್ವರರ ಜ್ಞಾನಕ್ಕೆ ಸಂಯೋಗವೆಂಬ ಅವಸ್ಥೆಯೂ ಕಾದಾಚಿತ್ಕವಾಗಿ ಉಂಟಾಗುವುದರಿಂದ ನಿತ್ಯಮುಕ್ತೇಶ್ವರರ ಜ್ಞಾನಕ್ಕೆ ಅವಸ್ಥೆ ಉಂಟೆಂಬುದನ್ನು ಅತಿಸುಲಭವಾಗಿ ತಿಳಿದುಕೊಳ್ಳಬಹುದು.

ಮತ್ತು **"ಸೋಽಕಾಮಯತ ಬಹು ಸ್ಯಾಂ ಪ್ರಜಾಯೇಯೇತಿ" "ತದೈಕ್ಷತ ಬಹು ಸ್ಯಾಂ ಪ್ರಜಾಯೇಯೇತಿ" "ತದಾತ್ಮಾನಂ ಸ್ವಯಮಕುರುತ"** ಇವೇ ಮೊದಲಾದ ಪ್ರಮಾಣಗಳಿಂದಲೂ ಈಶ್ವರಜ್ಞಾನಕ್ಕೆ ಇಚ್ಛೆ ಸಂಕಲ್ಪ ಮೊದಲಾದ ಅವಸ್ಥೆಗಳು ಉಂಟಾಗುವುವೆಂಬುದನ್ನು ತಿಳಿಯಬಹುದು

ಅಕರ್ಮವಶ್ಯರಾದ ನಿತ್ಯರಿಗೂ ಮುಕ್ತರಿಗೂ ಕರ್ಮ-ಕಾಲ ಮೊದಲಾದ ಉಪಾಧಿಗಳು ಇಲ್ಲದಿದ್ದರೂ ಈಶ್ವರೇಚ್ಛಾವಿಶೇಷವೆಂಬ ಕಾರಣದಿಂದಲೇ ಇಚ್ಛೆ ಸಂಕಲ್ಪ ಮೊದಲಾದ ಜ್ಞಾನಾವಸ್ಥಾಭೇದಗಳೂ, ಅವುಗಳಿಗೆ ಅನುಗುಣವಾದ ಶರೀರಪರಿಗ್ರಹವೂ ಸಂಭವಿಸಬಹುದು.

ಪಂಚೀಕರಣಕ್ಕೆ ಅನಂತರಭಾವಿಯಾದ ವ್ಯಷ್ಟಿಸೃಷ್ಟಿಯಲ್ಲಿ ಈಶ್ವರೇಚ್ಛೆಯ ತಾರತಮ್ಯಕ್ಕೆ ಚೇತನರ ಆ ಆ ಕರ್ಮವಿಶೇಷದ ತಾರತಮ್ಯವೇ ಕಾರಣವಾಗಿ ಇರುವುದು.

ಪಂಚೀಕರಣಕ್ಕೆ ಪೂರ್ವಭಾವಿಯಾದ ಸಮಷ್ಟಿಸೃಷ್ಟಿಯಲ್ಲಿ ಈಶ್ವರೇಚ್ಛೆಯ ತಾರತಮ್ಯಕ್ಕೆ ತ್ರಿಗುಣದ್ರವ್ಯದಲ್ಲಿರುವ ಸತ್ತ್ವರಜಸ್ತಮೋಗುಣಗಳ ವೈಷಮ್ಯವೇ ಕಾರಣವಾಗಿ ಇರುವುದು.

ಪೂಜ್ಯರೆ! ಪ್ರಳಯಕಾಲದಲ್ಲಿ ಸಾಮ್ಯಾವಸ್ಥೆಯನ್ನು ಹೊಂದಿರುವ ಸತ್ತ್ವರಜಸ್ತಮೋಗುಣಗಳಿಗೆ ಸೃಷ್ಟಿಕಾಲದಲ್ಲಿ ವೈಷಮ್ಯಾವಸ್ಥೆಯುಂಟಾಗುವುದಕ್ಕೂ ಈಶ್ವರೇಚ್ಛೆಯೇ ಕಾರಣವಾಗಿರುವುದರಿಂದ—ಇಂಥ ಈಶ್ವರೇಚ್ಛೆಗೆ ಗುಣಗಳ ವೈಷಮ್ಯವು ಹೇಗೆ ಕಾರಣವಾದೀತು? ಹಾಗೆ ಕಾರಣವಾಗುವುದಾದರೆ "ಈಶ್ವರೇಚ್ಛೆಯಿಂದ ಗುಣವೈಷಮ್ಯ ಗುಣವೈಷಮ್ಯದಿಂದ ಈಶ್ವರೇಚ್ಛೆ" ಎಂಬುದಾಗಿ ಅನ್ಯೋನ್ಯಾಶ್ರಯದೋಷವುಂಟಾಗುವುದಿಲ್ಲವೆ?

ಎಂದು ಆಶಂಕಿಸುವುದಾದರೆ ಈಶ್ವರೇಚ್ಛೆಯ ತಾರತಮ್ಯಕ್ಕೆ ಗುಣವೈಷಮ್ಯವು ಕಾರಣವಾಗಬೇಡ, ಗುಣವೈಷಮ್ಯಕ್ಕೂ ಕಾರಣವಾಗಿರುವ ಸ್ವಾಭಾವಿಕವಾದ ಕಲಾಕಾಷ್ಠಾಕ್ಷಣಾದಿಗಳೆಂಬ ಕಾಲಪರಿಣಾಮಗಳೇ ಈಶ್ವರೇಚ್ಛೆಯ ತಾರ

ತಮ್ಯಕ್ಕೂ ಕಾರಣವಾಗಲಿ. ಕಾಲಕ್ಕೆ ಅಂಥಪರಿಣಾಮವಾದರೆ—ಕಲಾಕಾಷ್ಠಾ ಕ್ಷಣಾದಿಗಳು ಪ್ರವಾಹರೂಪದಿಂದ ನಡಿಯುತ್ತಲೇ ಇರುವಕಾರಣ ಸಂಗತವಾಗಿರುವುದು. ಅಂಥ ಕಲಾಕಾಷ್ಠಾಕ್ಷಣಾದಿಗಳೂ—ಸೂರ್ಯಗತಿರೂಪವಾದ ಉಪಾಧಿಗಳು ಪ್ರವಾಹರೂಪವಾಗಿ ನಡಿಯುತ್ತಲೇ ಇರುವುದರಿಂದ ಸಂಗತಗಳಾಗಿರುವುವು.

ಆದರೆ ಪ್ರಳಯಕಾಲದಲ್ಲಿ ಸೂರ್ಯಗತಿಯೆಂಬ ಉಪಾಧಿಗಳಿಲ್ಲದಿರುವುದರಿಂದ ಆಗ ಕಲಾಕಾಷ್ಠಾಕ್ಷಣಾದಿಗಳನ್ನು ಕಂಡುಹಿಡಿಯುವ ಬಗೆ ಹೇಗೆ? ಅಂಥ ಸಂದರ್ಭದಲ್ಲಿ ಆದಿತ್ಯಗತಿರೂಪವಾದ ಉಪಾಧಿಗಳಿಲ್ಲವಾದರೂ ತ್ರಿಗುಣದ್ರವ್ಯಕ್ಕೆ ಸದೃಶಪರಿಣಾಮಸಂತಾನವುಂಟಾಗುತ್ತಿರುವುದರಿಂದ ಅಂಥ ಸಂತಾನವನ್ನೇ ಕಾಲೋಪಾಧಿಯನ್ನಾಗಿ ತಿಳಿಯಬಹುದು.

ಆದರೆ ಈಶ್ವರೇಚ್ಛೆಯ ತಾರತಮ್ಯಕ್ಕೆ ಕಾರಣಗಳಾಗಿರುವ ಕಲಾಕಾಷ್ಠಾ ಕ್ಷಣಗಳೂ ಅವುಗಳ ಉಪಾಧಿಗಳೂ ಈಶ್ವರೇಚ್ಛೆಗೆ ಪೂರ್ವಭಾವಿಗಳಾದುದರಿಂದ ಈಶ್ವರೇಚ್ಛಾಜನ್ಯಗಳಾಗಲಿಲ್ಲವಾಗಿ **"ಸರ್ವಕಾರ್ಯಗಳೂ ಈಶ್ವರೇಚ್ಛಾಜನ್ಯಗಳಾಗಿರುವುವು"** ಎಂಬ ಸಿದ್ಧಾಂತಕ್ಕೆ ಪ್ರಕೋಪವುಂಟಾಗುವುದಲ್ಲವೆ?

ಇಲ್ಲ—ಪ್ರಕೋಪವುಂಟಾಗುವುದಿಲ್ಲ. ಬೀಜಾಂಕುರನ್ಯಾಯದಿಂದ ಸಂಗತವಾಗುವುದು. ಎಂದರೆ ಪೂರ್ವಪೂರ್ವೋಪಾಧಿಗಳಾಗಲಿ ಪೂರ್ವಪೂರ್ವಕ್ಷಣಾದಿಗಳಾಗಲಿ ಉತ್ತರೋತ್ತರೇಚ್ಛೆಗೆ ಕಾರಣಗಳಾಗುವುವು. ಉತ್ತರೋತ್ತರೇಚ್ಛೆ ತದುತ್ತರಭಾವಿಗಳಾದ ಉಪಾಧಿಗಳಿಗಾಗಲಿ ಕ್ಷಣ-ಕಲಾ-ಕಾಷ್ಠಾದಿಗಳಿಗಾಲಿ ಕಾರಣವಾಗುವುದು.

ಆದರೆ ಅಪ್ರಾಕೃತಗಳಾದ ಪದಾರ್ಥಗಳ ಸೃಷ್ಟಿವಿಷಯದಲ್ಲಿ ವಿಷಮವಾದ ಇಚ್ಛೆ ಈಶ್ವರನಿಗೆ ಹೇಗೆ ಉಂಟಾದೀತು? ಇದಕ್ಕೆ ಪೂರ್ವದಲ್ಲಿಯೂ ಅಂಥ ಇಚ್ಛೆ ಉಂಟಾಗಿದ್ದುದರಿಂದ ಅಂಥ ಇಚ್ಛೆಯಿಂದಲೇ ಈ ಇಚ್ಛೆ ಉಂಟಾಗಬಹುದು. ಆದರೆ ಪೂರ್ವದಲ್ಲಿ ಅಂಥ ಇಚ್ಛೆ ಹೇಗೆ ಉಂಟಾಯಿತು? ಅದಕ್ಕೆ ಪೂರ್ವದಲ್ಲಿ ಉಂಟಾಗಿದ್ದ ಅಂಥ ಇಚ್ಛೆಯಿಂದ ಉಂಟಾಯಿತು. ಹೀಗೆ ಇಚ್ಛಾಪರಂಪರೆ ಪ್ರವಾಹರೂಪವಾಗಿ ಉಂಟಾಗುತ್ತಿರುವುದರಿಂದ ಇದಕ್ಕೆ ಜೀವನ ಕರ್ಮವೇ ಮುಂತಾದ ಬೇರೊಂದು ಉಪಾಧಿಯೂ ಬೇಕಾಗಿಲ್ಲ.

ಹೇಗಾದರೆ—ಸಮಷ್ಟಿಸೃಷ್ಟಿಯಲ್ಲಿ ಜೀವನ ಕರ್ಮವೆಂಬ ಉಪಾಧಿಯನ್ನು ಅಪೇಕ್ಷಿಸದೆಯೇ ಆ ಆ ಕಾಲವಿಶೇಷವಿಶಿಷ್ಟವಾದ ಈಶ್ವರೇಚ್ಛಾಮಾತ್ರಕ್ಕೆ ಅಧೀನಗಳಾಗಿಯೂ, ಆ ಆ ಸಮಷ್ಟಿಪದಾರ್ಥಗಳ ಸೃಷ್ಟಿಗೆ ಕಾರಣಗಳಾಗಿಯೂ

ಇರುವ ಸಂಕಲ್ಪವಿಶೇಷಗಳೆಂಬ ಅವಸ್ಥೆಗಳು ಈಶ್ವರನ ಧರ್ಮಭೂತಜ್ಞಾನದಲ್ಲಿ ಉಂಟಾಗುವುವೆಂದು ಒಪ್ಪುವೆವೋ ; ಅದಂತತೆಯೇ ಅಪ್ರಾಕೃತಗಳಾದ ಪದಾರ್ಥಗಳ ವಿಚಿತ್ರಸೃಷ್ಟಿಯಲ್ಲಿ ಈಶ್ವರನಿಗೆ ಉಂಟಾಗುವ ವಿಷಮವಾದ ಇಚ್ಛೆಯೂ ಸಹ ಆ ಆ ಕಾಲದೊಡನೆ ಕೂಡಿರುವ ಈಶ್ವರೇಚ್ಛಾಮಾತ್ರದಿಂದಲೇ ಉಂಟಾಗುವುವೆಂದು ಒಪ್ಪಿಕೊಳ್ಳುವುದರಲ್ಲಿ ಅಡ್ಡಿಯೇನೂ ಇಲ್ಲ. ಆದಕಾರಣ ಅಂಥ ಇಚ್ಛೆ ಆಕಸ್ಮಿಕವಾಗಿ ಉಂಟಾಯಿತೆಂದು ಹೇಳಲಾಗುವುದಿಲ್ಲ. ಮತ್ತು ಕಾಲಾಂತರದಲ್ಲಿಯೂ ಅಂಥ ಇಚ್ಛಾಸಂಕಲ್ಪಾದಿಗಳು ಉಂಟಾಗಬೇಕಾಗಿ ಪ್ರಸಂಗಿಸುವುದೆಂದು ಹೇಳುವುದಕ್ಕೂ ಅವಕಾಶವಿಲ್ಲ.

## ೭೮೫. ಇಚ್ಛಾಸಂಕಲ್ಪಸೃಷ್ಟೀನಾಮೀಶ್ವರಜ್ಞಾನೇ ಚಕ್ರವತ್ಪರಿವರ್ತಮಾನತ್ವಾದ್ವಾ ಜ್ಞಾನಾವಸ್ಥಾಭೇದೋಪಪತ್ತಿಃ

ಪೂಜ್ಯರೆ ! "ಕಾಲಂ ಸ ಪಚತೇ ತತ್ರ ನ ಕಾಲಸ್ತತ್ರ ವೈ ಪ್ರಭುಃ" ಇವೇ ಮೊದಲಾದ ಪ್ರಮಾಣಗಳು ನಿತ್ಯವಿಭೂತಿಯ ಪರಿಣಾಮಗಳಲ್ಲಿ ಕಾಲಕ್ಕೆ ಕಾರಣತ್ವವಿಲ್ಲವೆಂದು ಮೊರೆಯಿಡುತ್ತಿರುವಲ್ಲಿ ಅಂಥ ಕಾರ್ಯಗಳಿಗೆ ಕಾಲವು ಸಹ ಕಾರಿಕಾರಣವಾಗಿಯೂ ಆಗಲಾರದಷ್ಟೆ ?

ಎಂದು ಆಶಂಕಿಸುವುದಾದರೆ ಅತ್ಯಂತರಹಸ್ಯವಾದ ಮತ್ತೊಂದು ರೀತಿಯನ್ನು ತೋರಿಸುವೆವು. ಹೇಗೆಂದರೆ "ಈ ವಸ್ತು ಉಂಟಾಗಲಿ" ಎಂಬ ಸಾಮಾನ್ಯಾಕಾರವಾದ ಇಚ್ಛೆಯೂ "ಈ ವಸ್ತುವನ್ನು ನಾನು ಉಂಟುಮಾಡುವೆನು" ಎಂಬ ಇಚ್ಛಾವಿಶೇಷರೂಪವಾದ ಸಂಕಲ್ಪವೂ, ಆ ಆ ವಸ್ತುವನ್ನು ಉಂಟುಮಾಡುವುದಕ್ಕೆ ಅನುಕೂಲವಾದ ಕೃತಿಯೆಂಬ ಸೃಷ್ಟಿಯೂ ಸಹ ಈಶ್ವರನ ಜ್ಞಾನದಲ್ಲಿ ಚಕ್ರದಂತೆ ತಿರುಗುತ್ತಲೇ ಇರುವುವು. ಎಂದರೆ ಒಂದಾನೊಂದು ಪದಾರ್ಥದ ವಿಷಯದಲ್ಲಿ ಮೊದಲು ಇಚ್ಛೆಯೂ, ಆ ಇಚ್ಛೆಯಿಂದ ಅದೇ ಪದಾರ್ಥದ ವಿಷಯದಲ್ಲಿ ಸಂಕಲ್ಪವೂ, ಆ ಸಂಕಲ್ಪದಿಂದ ಆ ಪದಾರ್ಥದ ಸೃಷ್ಟಿಯೂ ; ಆ ಸೃಷ್ಟಿಯಿಂದ ಮತ್ತೊಂದು ಪದಾರ್ಥದ ಇಚ್ಛೆಯೂ, ಆ ಇಚ್ಛೆಯಿಂದ ಆ ಪದಾರ್ಥದಲ್ಲಿ ಸಂಕಲ್ಪವೂ, ಅದರಿಂದ ಆ ಪದಾರ್ಥದ ಸೃಷ್ಟಿಯೂ ; ಅದರಿಂದ ಮಗದೊಂದು ಪದಾರ್ಥದ ಇಚ್ಛೆಯೂ, ಈ ರೀತಿಯಲ್ಲಿ ಇಚ್ಛಾಸಂಕಲ್ಪಸೃಷ್ಟಿಗಳು ಚಕ್ರದಂತೆ ಪರಿವರ್ತನೆಯನ್ನು ಹೊಂದುತ್ತಲೇ ಇರುವುದರಿಂದ ಬೀಜಾಂಕುರನ್ಯಾಯವನ್ನು ಅನುಸರಿಸಿ ಈಶ್ವರಜ್ಞಾನದಲ್ಲಿ ಅವಸ್ಥಾಭೇದಗಳು ಉಂಟಾಗಲು ಆವುದೊಂದು ವಿರೋಧವೂ ಇಲ್ಲ.

## ೭೮೬ ಸರ್ವಶಕ್ತೇರೀಶ್ವಸ್ಯ ಸಹಕಾರ್ಯಂತರನೈರಪೇಕ್ಷ್ಯೋಪಪಾದನಂ

"ಪೂಜ್ಯರೆ? ಆ ಆ ಕಾರ್ಯಗಳನ್ನು ಉಂಟುಮಾಡುವುದಕ್ಕೆ ಯಾವ ಮತ್ತೊಂದು ಸಹಾಯವನ್ನೂ ಈಶ್ವರನು ಅಪೇಕ್ಷಿಸದಿದ್ದರೂ ಕೊನೆಗೆ ಕಾಲವೆಂಬುದೊಂದನ್ನಾದರೂ ಸಹಕಾರಿಯಾಗಿ ಅಪೇಕ್ಷಿಸಿಯೇ ಆಗಬೇಕು. ಅದನ್ನೂ ಅಪೇಕ್ಷಿಸದಿದ್ದಪಕ್ಷದಲ್ಲಿ ಹೇಗೆತಾನೆ ಕಾರ್ಯೋತ್ಪತ್ತಿ ಸಂಭವಿಸೀತು? ಆತ್ಯಂತಿಕವಾಗಿ ಸಹಕಾರಿಕಾರಣವನ್ನು ಅಪೇಕ್ಷಿಸದ ಕಾರಣದಿಂದ ಕಾರ್ಯೋತ್ಪತ್ತಿ ಲೋಕದಲ್ಲಿ ಕಾಣುವುದಿಲ್ಲವಷ್ಟೆ?"

ಇಂಥ ಆಕ್ಷೇಪವು ನಮ್ಮ ಮತದಲ್ಲಿ ಏರಲಾರದು. ಪುರುಷಬುದ್ಧಿಯಿಂದ ಊಹಿಸಲಶಕ್ಯವಾಗಿಯೂ, ಅತಿವಿಚಿತ್ರವಾಗಿಯೂ ಇರುವ ಅನಂತಶಕ್ತಿಪ್ರಭಾವದೊಡನೆ ಕೂಡಿದ ಈಶ್ವರನನ್ನು ಶಾಸ್ತ್ರಬಲದಿಂದ ಒಪ್ಪಿಕೊಳ್ಳುವ ನಮ್ಮ ಮತದಲ್ಲಿ ಆವುದು ತಾನೆ ಸಿದ್ಧಿಸಲಾರದು.? ಅಲ್ಪಶಕ್ತಿಕರಾದ ಕುಲಾಲಮುಂತಾದವರಿಗೇ ಸಹಕಾರಿಕಾರಣಾಪೇಕ್ಷೆಯಿರುವುದಲ್ಲದೆ ಸರ್ವಶಕ್ತನಿಗೆ ಸಹಕಾರಿಕಾರಣದಿಂದ ಪ್ರಯೋಜನವೇನು? "ಕಾಲಂ ಸ ಪಚತೇ ತತ್ರ ನ ಕಾಲಸ್ತತ್ರವೈಪ್ರಭುಃ" ಇತ್ಯಾದಿಶಾಸ್ತ್ರಬಲದಿಂದಲೂ ಹೀಗೆಯೇ ಒಪ್ಪಿಕೊಳ್ಳಬೇಕು.

## ೭೮೭ ನಿತ್ಯಮುಕ್ತೇಶ್ವರಜ್ಞಾನಾನಾಮವಸ್ಥಾವತ್ತ್ವೋಪಸಂಹಾರಃ

ಅಂತು ಇದುವರೆಗೂ ತೋರಿಸಿದ ರೀತಿಯಲ್ಲಿ—ಈಶ್ವರನ ಧರ್ಮಭೂತಜ್ಞಾನವು ನಿತ್ಯವೆಂಬುದಾಗಿಯೂ, ಅದರಲ್ಲಿ ಉಂಟಾಗುವ ಇಚ್ಛೆ ಸಂಕಲ್ಪ ಮೊದಲಾದ ಅವಸ್ಥೆಗಳು ಅನಿತ್ಯಗಳಾಗಿರುವುವೆಂಬುದಾಗಿಯೂ ತೋರಿಸಿದೆವು. ಇದೇ ನ್ಯಾಯವನ್ನು ನಿತ್ಯಮುಕ್ತರ ಜ್ಞಾನಕ್ಕೂ ತಿಳಿಯಬಹುದು.

## ೭೮೮ ನಿತ್ಯಜ್ಞಾನವತಾಂ ನಿತ್ಯಮುಕ್ತೇಶ್ವರಾಣಾಮಿಂದ್ರಿಯಪರಿಗ್ರಹಸ್ಯಾಲಂಕಾರರೂಪತ್ವಂ

ಹೀಗೆ ನಿತ್ಯಮುಕ್ತೇಶ್ವರರ ಧರ್ಮಭೂತಜ್ಞಾನಕ್ಕೆ ಪ್ರಮಾಣಬಲದಿಂದ ನಿತ್ಯತ್ವವನ್ನು ಒಪ್ಪಿಕೊಂಡಿರುವ ಈ ಪಕ್ಷದಲ್ಲಿ ಇಂದ್ರಿಯಗಳಿಂದಲೇ ಇವರಿಗೆ ಜ್ಞಾನೋತ್ಪತ್ತಿ ಉಂಟಾಗಬೇಕೆಂಬ ನಿರ್ಬಂಧವಿಲ್ಲವಾದಕಾರಣ ಇವರಿಂದ ಪರಿಗ್ರಹಿಸಲ್ಪಟ್ಟ ಇಂದ್ರಿಯಗಳು ಇವರ ಜ್ಞಾನೋತ್ಪತ್ತಿಗೆ ಕಾರಣಗಳಾಗದಿದ್ದರೂ ಶರೀರಕ್ಕೆ ಅಲಂಕಾರರೂಪಗಳಾಗಿ ನಿಲ್ಲುವುವೆಂದು ತಿಳಿಯಬಹುದು.

### ೭೮. ತತ್ರೈವ ಪಕ್ಷಾಂತರಪ್ರದರ್ಶನಂ

ಈ ಸಂದರ್ಭದಲ್ಲಿ ಇನ್ನು ಕೆಲವರು ಆಚಾರ್ಯರು ಹೇಳುವುದೇನೆಂದರೆ—ನಿತ್ಯ ಮುಕ್ತೇಶ್ವರರಿಗೆ ನಿತ್ಯವಾದ ಧರ್ಮಭೂತಜ್ಞಾನವೆಂಬುದೊಂದು ಇರುವಂತೆ ಅನಿತ್ಯವಾದ ಜ್ಞಾನವೂ ಒಂದುಂಟು; ಈ ಪಕ್ಷದಲ್ಲಿ ಇಂಥ ಅನಿತ್ಯವಾದ ಜ್ಞಾನದ ವಿಕಾಸಕ್ಕೆ ಇವರ ಇಂದ್ರಿಯಗಳು ಕಾರಣಗಳಾಗುವುವು. ಈ ಅನಿತ್ಯವಾದ ಜ್ಞಾನವು ನಿತ್ಯಜ್ಞಾನದಿಂದ ಗ್ರಹಿಸಲ್ಪಟ್ಟ ಪದಾರ್ಥಗಳನ್ನೇ ಗ್ರಹಿಸುವುದರಿಂದ ಗೃಹೀತಗ್ರಾಹಿಯೆನಿಸಿಕೊಳ್ಳುವುದು. ಆದುದರಿಂದಲೇ ನಿತ್ಯಮುಕ್ತೇಶ್ವರರಿಗೆ ನಿತ್ಯವಾಗಿಯೂ ಅನಿತ್ಯವಾಗಿಯೂ ಇರುವ ಇಚ್ಛಾಭೇದವು ಸಂಭವಿಸುವುದಾದಕಾರಣ ನಿತ್ಯವಾಗಿಯೂ ಅನಿತ್ಯವಾಗಿಯೂ ಇರುವ ಶರೀರವನ್ನು ಇವರು ಪರಿಗ್ರಹಿಸುವರೆಂದು ಹೇಳುವುದರಲ್ಲಿ ಯಾವ ಅನುಪಪತ್ತಿಯೂ ಇಲ್ಲ.

### ೭೯. ಪ್ರಕರಣಾರ್ಥೋಪಸಂಹಾರಃ.

ಹೀಗೆ ಈಶ್ವರನು ತನ್ನ ಇಚ್ಛೆಯಿಂದ ಆ ಆ ಕಾಲಗಳಲ್ಲಿ ಪರಿಗ್ರಹಿಸುವ ಆ ಆ ಶರೀರಗಳ ಸಂಬಂಧನಿಮಿತ್ತವಶದಿಂದಲೇ ಈಶ್ವರಸ್ವರೂಪವು ಐದುಪ್ರಕಾರವಾಗಿರುವುದೆಂಬುದನ್ನು ಹಿಂದಿನ ಪರಿಚ್ಛೇದದಲ್ಲಿಯೇ ವಿವರಿಸಿರುವೆವು. ಹೀಗೆ ನಿತ್ಯವಿಭೂತಿದ್ರವ್ಯದ ಸ್ವರೂಪವನ್ನೂ ಸ್ವಭಾವವನ್ನೂ ಸಂಕ್ಷೇಪವಾಗಿ ನಿರೂಪಿಸಲಾಯಿತು. ಇನ್ನುಮುಂದೆ ಧರ್ಮಭೂತಜ್ಞಾನದ ವಿಚಾರವು ಜರುಗುವುದು.

ಸಂಪ್ರತಿ ತತ್ತ್ವಂ ಮಲಿನಂ
ಮಿಥ್ಯಾವಾದೋ ಯದೋದಿತೋ ಮಲಿನಃ ।
ಸಂಪ್ರತಿ ತತ್ತ್ವಂ ವಿಮಲಂ
ತತ್ತ್ವವಿಶುದ್ಧಿರ್ಯದೋದಿತಾ ವಿಮಲಾ ॥

ಇಂತು ತತ್ತ್ವಶುದ್ಧಿಯೆಂಬ ವಿಶಿಷ್ಟಾದ್ವೈತಪ್ರಕರಣಗ್ರಂಥದೊಳ್
ನಿತ್ಯವಿಭೂತಿಪರಿಚ್ಛೇದದಲ್ಲಿ ನಿತ್ಯವಿಭೂತಿಸ್ವರೂಪ
ಸ್ವಭಾವನಿರೂಪಣಪ್ರಕರಣಂ ಪ್ರಥಮಂ.

## ಇತಿ ನಿತ್ಯವಿಭೂತಿಪರಿಚ್ಛೇದಃ ಚತುರ್ಥಃ ಸಮಾಪ್ತಃ

॥ ಓಂ ॥

ಶ್ರೀಮತೇ ರಾಮಾನುಜಾಯ ನಮಃ.



॥ ಶ್ರೀಃ ॥

ಶ್ರೀಮತೇ ರಾಮಾನುಜಾಯ ನಮಃ

# ತತ್ತ್ವಶುದ್ಧಿ.

## ೫. ಧರ್ಮಭೂತಜ್ಞಾನಪರಿಚ್ಛೇದಂ.

### ೭೯೧. ತತ್ರಾದೌ ಧರ್ಮಭೂತಜ್ಞಾನನಿರೂಪಣಪ್ರತಿಜ್ಞಾ.

ಅತಿಕ್ರಾಂತಗಳಾದ ನಾಲ್ಕುಪರಿಚ್ಛೇದಗಳಿಂದಲೂ—ಪ್ರಕೃತಿ, ಕಾಲ ಜೀವ, ಈಶ್ವರ, ನಿತ್ಯವಿಭೂತಿ—ಎಂಬ ಐದು ದ್ರವ್ಯಗಳನ್ನು ನಿರೂಪಿಸಿದೆವು; ಈಗ ಕ್ರಮಪ್ರಾಪ್ತವಾದ ಧರ್ಮಭೂತಜ್ಞಾನವನ್ನು ನಿರೂಪಿಸುವೆವು. ಈ ಧರ್ಮಭೂತಜ್ಞಾನಕ್ಕೆ ಅನೇಕಲಕ್ಷಣಗಳನ್ನು ಶಾಸ್ತ್ರಕಾರರು ತೋರಿಸಿರುವರು; ಅವುಗಳೊಳಗೆ ಕೆಲವು ಲಕ್ಷಣಗಳನ್ನು ಇಲ್ಲಿ ಬರೆವೆವು.

### ೭೯೨. ತತ್ರ ಧರ್ಮಭೂತಜ್ಞಾನಸ್ಯ ಪ್ರಥಮಂ ಲಕ್ಷಣಂ.

ಕರ್ಮಕಾರಕದೊಡನೆ ಕೂಡಿರುವ ಪ್ರಕಾಶಸ್ವರೂಪವಾದ ದ್ರವ್ಯವು ಧರ್ಮಭೂತಜ್ಞಾನವೆನಿಸಿಕೊಳ್ಳುವುದು. ಎಂದರೆ—"ಸ್ವವ್ಯತಿರಿಕ್ತವಾದ ಪದಾರ್ಥದಲ್ಲಿರುವ ವಿಷಯತ್ವವೆಂಬ ಧರ್ಮಕ್ಕೆ ನಿರೂಪಕವಾದ ಜ್ಞಾನತ್ವವು' ಧರ್ಮಭೂತಜ್ಞಾನಕ್ಕೆ ಲಕ್ಷಣವಾಗಿರುವುದು. ಜ್ಞಾನವೆಂದರೆ ತಿಳಿವಳಿಕೆ. "ನಾನು ಇದನ್ನು ತಿಳಿಯುತ್ತೇನೆ" ಎಂಬ ವ್ಯವಹಾರದೊಳಗೆ "ತಿಳಿಯುತ್ತೇನೆ" ಎಂಬ ಕ್ರಿಯಾಪದದಲ್ಲಿ ಧಾತುವೆಂಬುದಾಗಿಯೂ ಪ್ರತ್ಯಯವೆಂಬುದಾಗಿಯೂ ಎರಡು ಅಂಶಗಳುಂಟು; ಅವುಗಳೊಳಗೆ ಮೊದಲನೆಯದಾದ ಧಾತು ತಿಳಿವಳಿಕೆಯನ್ನು ತೋರಿಸುವುದು. ಜ್ಞಾನವೆಂದೂ, ಪ್ರಕಾಶವೆಂದೂ ಅವಭಾಸವೆಂದೂ, ಸ್ಫುರಣವೆಂದೂ, ಶಾಸ್ತ್ರದಲ್ಲಿ ವ್ಯವಹರಿಸಲ್ಪಡುವುದೂ ಇದೇ. ಇದಕ್ಕೆ ಒಂದು ಆಶ್ರಯವೂ ಒಂದು ವಿಷಯವೂ ಇರಬೇಕು. "ತಿಳಿಯುತ್ತೇನೆ" ಎಂಬ ಕ್ರಿಯಾಪದದಲ್ಲಿ ಧಾತ್ವಂಶವು

ಹೋಗಲಾಗಿ ಅದರಮೇಲಿರುವ ಪ್ರತ್ಯಯಾಂಶವು ಆಶ್ರಯವನ್ನು ತೋರಿಸುವುದು. ಈ ಆಶ್ರಯವೇ ಕರ್ತೃಕಾರವೆನಿಸಿಕೊಳ್ಳುವುದು. ಅಂತು "ತಿಳಿಯುತ್ತೇನೆ" ಎಂಬ ಪದಕ್ಕೆ "ತಿಳಿವಳಿಕೆಗೆ ಆಶ್ರಯನಾಗಿರುತ್ತೇನೆ" ಎಂಬ ಅರ್ಥವು ಲಭಿಸುವುದು. ಪ್ರಥಮಾವಿಭಕ್ತ್ಯಂತವಾದ "ನಾನು" ಎಂಬ ಪದವು ಅಂಥ ಆಶ್ರಯವಾವುದೆಂಬುದನ್ನು ನಿಷ್ಕರ್ಷಿಸಿ ತೋರಿಸುವುದು.

ಜ್ಞಾನಕ್ಕೆ ಯಾವುದು ಗೋಚರವಾಗುವುದೋ ಅದು ವಿಷಯವೆನಿಸಿಕೊಳ್ಳುವುದೆಂಬುದಾಗಿ ಶಾಸ್ತ್ರದಲ್ಲಿ ವ್ಯವಹರಿಸಲ್ಪಡುವುದು. ದ್ವಿತೀಯಾವಿಭಕ್ತ್ಯಂತವಾದ "ಇದನ್ನು" ಎಂಬ ಪದವು ಅಂಥ ವಿಷಯವಾವುದೆಂಬುದನ್ನು ನಿಷ್ಕರ್ಷಿಸಿ ತೋರಿಸುವುದು. ಇಂಥ ವಿಷಯವೇ ಕರ್ಮಕಾರಕವೆನಿಸಿಕೊಳ್ಳುವುದು. ಇದು ಜ್ಞಾನಕ್ಕಿಂತಲೂ ಭಿನ್ನವಾಗಿರುವುದು. ಇಂಥ ವಿಷಯದಲ್ಲಿ ವಿಷಯತ್ವವೆಂಬ ಧರ್ಮವುಂಟು.

ಮಾತಾ-ಪಿತ್ರಾದಿಶಬ್ದಗಳಂತೆ ವಿಷಯಶಬ್ದವೂ ಸಸಂಬಂಧಿಕಶಬ್ದವಾದುದರಿಂದ—"ಯಾವುದಕ್ಕೆ ವಿಷಯವು ?" ಎಂಬ ಆಕಾಂಕ್ಷೆಯುಂಟಾದರೆ—ಧಾತುವಿನ ಅರ್ಥವಾದ ಜ್ಞಾನಕ್ಕೆ ವಿಷಯವೆಂದು ಪರ್ಯವಸಾನವಾಗುವುದು. ಅಂತು ಈ ಧಾತುವಿನ ಅರ್ಥವಾದ ತಿಳಿವಳಿಕೆಯೆಂಬ ಜ್ಞಾನವು ಸ್ವವ್ಯತಿರಿಕ್ತವಾದ ಪದಾರ್ಥದಲ್ಲಿ ಇರುವ ವಿಷಯತ್ವವೆಂಬ ಧರ್ಮಕ್ಕೆ ನಿರೂಪಕವಾಗಿಯೂ, ಜ್ಞಾನತ್ವವೆಂಬ ಧರ್ಮವುಳ್ಳುದಾಗಿಯೂ ಇರುವುದರಿಂದ ಲಕ್ಷಣಕ್ಕೆ ಸಮನ್ವಯವನ್ನು ತಿಳಿಯಬಹುದು.

ಈ ಲಕ್ಷಣದಲ್ಲಿ "ಜ್ಞಾನತ್ವವು" ಎಂಬ ಇಷ್ಟುಮಾತ್ರವನ್ನೇ ಧರ್ಮಭೂತಜ್ಞಾನಕ್ಕೆ ಲಕ್ಷಣವಾಗಿ ಹೇಳುವುದಾದರೆ—ಈ ಜ್ಞಾನಕ್ಕೆ ಆಶ್ರಯನಾದ ಧರ್ಮಿಯೆನಿಸಿಕೊಂಡ ಆತ್ಮಸ್ವರೂಪದಲ್ಲಿಯೂ ಜ್ಞಾನತ್ವವಿರುವುದರಿಂದ ಅದರಲ್ಲಿ ಲಕ್ಷಣಕ್ಕೆ ಅತಿಪ್ರಸಂಗವುಂಟಾಗುವುದು. ಇದನ್ನು ತಪ್ಪಿಸುವುದಕ್ಕಾಗಿ "ಸ್ವವ್ಯತಿರಿಕ್ತವಾದ ಪದಾರ್ಥದಲ್ಲಿರುವ ವಿಷಯತ್ವವೆಂಬ ಧರ್ಮಕ್ಕೆ ನಿರೂಪಕವಾದ" ಎಂಬ ವಿಶೇಷಣವು ಲಕ್ಷಣದಲ್ಲಿ ಸೇರಿಸಲ್ಪಟ್ಟಿರುವುದು. ಧರ್ಮಿಯಾದ ಆತ್ಮಸ್ವರೂಪವು ಸ್ವಸ್ಮೈ ಸ್ವಯಂಪ್ರಕಾಶಮಾನವಾದುದರಿಂದ ತನ್ನನ್ನು ತಾನು ಗ್ರಹಿಸುವುದಲ್ಲದೆ ಸ್ವವ್ಯತಿರಿಕ್ತವಸ್ತುವನ್ನು ಸ್ವಸ್ವರೂಪದಿಂದ ಗ್ರಹಿಸುವುದಿಲ್ಲವಾದಕಾರಣ ಸ್ವಗತವಾದ ವಿಷಯತ್ವಕ್ಕೆ ತಾನು ನಿರೂಪಕವಾಗಿದ್ದರೂ ಸ್ವವ್ಯತಿರಿಕ್ತವಾದ ಪದಾರ್ಥದಲ್ಲಿರುವ ವಿಷಯತ್ವಕ್ಕೆ ಜ್ಞಾನವೇ ನಿರೂಪಕವಾಗಿರುವುದಲ್ಲದೆ ತಾನು ನಿರೂಪಕವಾಗುವುದಿಲ್ಲವಾಗಿ ಅದರಲ್ಲಿ ಲಕ್ಷಣಕ್ಕೆ ಅತಿಪ್ರಸಂಗವಿಲ್ಲ.

" ಜ್ಞಾನತ್ವವು " ಎಂಬ ವಿಶೇಷ್ಯವನ್ನು ಹೇಳದೆ ಉಕ್ತವಾದ ವಿಶೇಷಣ ವನ್ನು ಮಾತ್ರವೇ ಲಕ್ಷಣವಾಗಿ ಹೇಳುವುದಾದರೆ—ಸಿದ್ಧಾಂತದಲ್ಲಿ ಶಕ್ತಿಯೆಂಬ ಅದ್ರವ್ಯವನ್ನೂ ಜ್ಞಾನದಂತೆ ಸವಿಷಯಕವಾಗಿ ಒಪ್ಪಿರುವುದರಿಂದ ಸ್ವವ್ಯತಿರಿಕ್ತ ವಾದ ಪದಾರ್ಥದಲ್ಲಿರುವ ವಿಷಯತ್ವಕ್ಕೆ ನಿರೂಪಕವಾದ ಅಂಥ ಶಕ್ತಿಯಲ್ಲಿ ಲಕ್ಷಣಕ್ಕೆ ಅತಿಪ್ರಸಂಗವುಂಟಾಗುವುದು. ಇದನ್ನು ತಪ್ಪಿಸುವುದಕ್ಕಾಗಿ ವಿಶೇಷ್ಯ ದಳವು ಸೇರಿಸಲ್ಪಟ್ಟಿರುವುದು. ಶಕ್ತಿಯಲ್ಲಿ ಜ್ಞಾನತ್ವವಿಲ್ಲವಾದುದರಿಂದ ಲಕ್ಷಣಕ್ಕೆ ಅತಿಪ್ರಸಂಗವಿಲ್ಲ.

ಉಕ್ತವಾದ ವಿಶೇಷಣದಳದಲ್ಲಿಯೂ—" ಸ್ವವ್ಯತಿರಿಕ್ತವಾದ ಪದಾರ್ಥ ದಲ್ಲಿರುವ " ಎಂಬ ಅಂಶವನ್ನು ಸೇರಿಸದಿದ್ದರೆ " ವಿಷಯತ್ವಕ್ಕೆ ನಿರೂಪಕವಾದ ಜ್ಞಾನತ್ವವು " ಎಂಬ ಇಷ್ಟುಮಾತ್ರವೇ ಧರ್ಮಭೂತಜ್ಞಾನಕ್ಕೆ ಲಕ್ಷಣವಾಗು ವುದು. ಆಗ ಸ್ವಗತವಾದ ವಿಷಯತ್ವಕ್ಕೆ ನಿರೂಪಕವಾಗಿಯೂ, ಜ್ಞಾನತ್ವವುಳ್ಳು ದಾಗಿಯೂ ಇರುವ ಆತ್ಮಸ್ವರೂಪದಲ್ಲಿ ಪುನಃ ಅತಿಪ್ರಸಂಗವು ಹಾಗೆಯೇ ನಿಲ್ಲು ವುದು. ಇದಕ್ಕಾಗಿ " ಸ್ವವ್ಯತಿರಿಕ್ತವಾದ ಪದಾರ್ಥದಲ್ಲಿರುವ " ಎಂಬ ಅಂಶವು ಸೇರಿಸಲ್ಪಟ್ಟಿರುವುದು. ಆತ್ಮಸ್ವರೂಪವು ಸ್ವನಿಷ್ಠವಾದ ವಿಷಯತ್ವಕ್ಕೆ ನಿರೂಪಕ ವಾಗಿರುವುದಲ್ಲದೆ ಸ್ವಭಿನ್ನನಿಷ್ಠವಾದ ವಿಷಯತ್ವಕ್ಕೆ ನಿರೂಪಕವಲ್ಲವಾದುದರಿಂದ ಅತಿಪ್ರಸಂಗವಿಲ್ಲ.

" ಪೂಜ್ಯರೆ ? ಆತ್ಮನಲ್ಲಿರುವ ಏಕತ್ವ, ಪ್ರತ್ಯಕ್ತ್ವ, ಅನುಕೂಲತ್ವ ಎಂಬ ಧರ್ಮಗಳು ಆತ್ಮಸ್ವರೂಪದಿಂದಲೇ ಗ್ರಹಿಸಲ್ಪಡುವುವೆಂಬುದಾಗಿಯೂ ಒಂದು ಪಕ್ಷವನ್ನು ಜೀವಪರಿಚ್ಛೇದದಲ್ಲಿ ತೋರಿಸಿರುವಿರಿ ; ಈ ಧರ್ಮಗಳಾದರೆ ಆತ್ಮ ಸ್ವರೂಪಕ್ಕಿಂತಲೂ ಭಿನ್ನಗಳಾಗಿರುವುವು. ಅಂತು ಸ್ವವ್ಯತಿರಿಕ್ತಗಳಾದ ಏಕತ್ವಾದಿ ಧರ್ಮಗಳಲ್ಲಿರುವ ವಿಷಯತ್ವಕ್ಕೆ ಆತ್ಮಸ್ವರೂಪವು ನಿರೂಪಕವಾದುದರಿಂದ ಪುನಃ ಆತ್ಮಸ್ವರೂಪದಲ್ಲಿ ಲಕ್ಷಣಕ್ಕೆ ಅತಿಪ್ರಸಂಗವು ಹಾಗೆಯೇ ನಿಲ್ಲುವುದಲ್ಲದೆ ಇದಕ್ಕೆ ಪರಿಹಾರವಾಗಲಿಲ್ಲವಷ್ಟೆ ? "

ಎಂದು ಆಶಂಕಿಸುವುದಾದರೆ—" ಸ್ವವ್ಯತಿರಿಕ್ತವಾಗಿಯೂ, ಸ್ವಾಪೃಥಕ್ಸಿ ದ್ಧಧರ್ಮವ್ಯತಿರಿಕ್ತವಾಗಿಯೂ ಇರುವ ಪದಾರ್ಥದಲ್ಲಿರುವ ವಿಷಯತ್ವಕ್ಕೆ ನಿರೂ ಪಕವಾದ ಜ್ಞಾನತ್ವವು ಈ ಧರ್ಮಭೂತಜ್ಞಾನಕ್ಕೆ ಲಕ್ಷಣವಾಗುವುದು " ಎಂದು ಪರಿಷ್ಕರಿಸಿಕೊಳ್ಳಬೇಕು.

## ೭೯೩. ಅಥ ದ್ವಿತೀಯಲಕ್ಷಣಂ.

ಕರ್ತೃಕಾರಕದೊಡನೆ ಕೂಡಿರುವ ಪ್ರಕಾಶಸ್ವರೂಪವಾಗಿರುವಿಕೆ ಧರ್ಮ ಭೂತಜ್ಞಾನಕ್ಕೆ ಲಕ್ಷಣವಾಗಿರುವುದು; ಎಂದರೆ—"ತನಗೆ ಆಶ್ರಯವಾದ ಧರ್ಮಿಯಲ್ಲಿರುವ ಆಶ್ರಯತ್ವವೆಂಬ ಧರ್ಮಕ್ಕೆ ಎಂದರೆ ಕರ್ತೃತ್ವಕ್ಕೆ ನಿರೂಪಕವಾದ ಜ್ಞಾನತ್ವವು" ಧರ್ಮಭೂತಜ್ಞಾನಕ್ಕೆ ಲಕ್ಷಣವಾಗಿರುವುದು.

ಈ ಲಕ್ಷಣದಲ್ಲಿಯೂ—"ಜ್ಞಾನತ್ವವು" ಎಂಬ ಇಷ್ಟುಮಾತ್ರವನ್ನೇ ಧರ್ಮಭೂತಜ್ಞಾನಕ್ಕೆ ಲಕ್ಷಣವಾಗಿ ಹೇಳುವುದಾದರೆ ಮೊದಲು ತೋರಿಸಿದಂತೆ ಆತ್ಮಸ್ವರೂಪದಲ್ಲಿ ಅತಿಪ್ರಸಂಗವುಂಟಾಗುವುದು. ಇದಕ್ಕಾಗಿ "ತನಗೆ ಆಶ್ರಯವಾದ ಧರ್ಮಿಯಲ್ಲಿರುವ ಆಶ್ರಯತ್ವವೆಂಬ ಧರ್ಮಕ್ಕೆ ಎಂದರೆ ಕರ್ತೃತ್ವಕ್ಕೆ ನಿರೂಪಕವಾದ" ಎಂಬ ವಿಶೇಷಣವು ಲಕ್ಷಣದಲ್ಲಿ ಸೇರಿಸಲ್ಪಟ್ಟಿರುವುದು. ಆತ್ಮಸ್ವರೂಪದಲ್ಲಿರುವ ಜ್ಞಾನಾಶ್ರಯತ್ವವೆಂಬ ಜ್ಞಾನಕರ್ತೃತ್ವಕ್ಕೆ ಜ್ಞಾನವೇ ನಿರೂಪಕವಾಗಿರುವುದಲ್ಲದೆ ಆತ್ಮಸ್ವರೂಪವು ನಿರೂಪಕವಲ್ಲವಾದುದರಿಂದ ಅತಿಪ್ರಸಂಗವಿಲ್ಲ.

ಉಕ್ತವಾದ ವಿಶೇಷಣಮಾತ್ರವನ್ನೇ ಲಕ್ಷಣವಾಗಿ ಹೇಳಿ ಜ್ಞಾನತ್ವವೆಂಬ ವಿಶೇಷ್ಯದಳವನ್ನು ಸೇರಿಸದಿದ್ದರೆ "ದೇವದತ್ತನು ಅಡಿಗೆ ಮಾಡುತ್ತಾನೆ; ದೇವದತ್ತನು ಮಲಗುತ್ತಾನೆ; ದೇವದತ್ತನು ಹೋಗುತ್ತಾನೆ" ಎಂಬ ಸ್ಥಳದಲ್ಲಿ ದೇವದತ್ತನಲ್ಲಿರುವ ಕರ್ತೃತ್ವಕ್ಕೆ ಪಾಕ, ಶಯನ, ಗಮನ ಈ ಕ್ರಿಯೆಗಳು ನಿರೂಪಕಗಳಾಗಿರುವುದರಿಂದ ಅವುಗಳಲ್ಲಿ ಈ ಲಕ್ಷಣಕ್ಕೆ ಅತಿಪ್ರಸಂಗವುಂಟಾಗುವುದು. ಇದಕ್ಕಾಗಿ ವಿಶೇಷ್ಯದಳವು ಸೇರಿಸಲ್ಪಟ್ಟಿರುವುದು. ಪಾಕಾದಿಕ್ರಿಯೆಗಳಲ್ಲಿ ಜ್ಞಾನತ್ವವಿಲ್ಲವಾದುದರಿಂದ ಲಕ್ಷಣಕ್ಕೆ ಅತಿಪ್ರಸಂಗವಿಲ್ಲ.

ಪೂಜ್ಯರೆ? ಈ ಲಕ್ಷಣದೊಳಗೆ—ಆತ್ಮಸ್ವರೂಪದಲ್ಲಿ ಅತಿಪ್ರಸಂಗವನ್ನು ಪರಿಹರಿಸುವುದಕ್ಕಾಗಿಯೇ ಅಲ್ಲವೆ ಉಕ್ತವಾದ ವಿಶೇಷಣವನ್ನು ಸೇರಿಸಿರುವಿರಿ? ಆದರೆ ಈ ದಳವನ್ನು ಸೇರಿಸಿದರೂ ಅತಿಪ್ರಸಂಗಕ್ಕೆ ಪರಿಹಾರವಾಗುವುದಿಲ್ಲ; ಹೇಗೆಂದರೆ—ಈಶ್ವರನು ಸರ್ವಾಧಾರನಾದುದರಿಂದ ಜೀವನಿಗೂ ಆಶ್ರಯನಾಗಿಯೇ ಇರುವನು. ತನಗೆ ಆಶ್ರಯನಾದ ಈಶ್ವರನಲ್ಲಿರುವ ಆಶ್ರಯತ್ವಕ್ಕೆ ಜೀವನು ನಿರೂಪಕನಾಗಿಯೇ ಇರುವನಲ್ಲದೆ ಅನಿರೂಪಕನಲ್ಲ.

ಈಶ್ವರಭಿನ್ನವಸ್ತುವಿನಲ್ಲಿರುವ ಆಶ್ರಯತ್ವಕ್ಕೆ ನಿರೂಪಕವಾಗಿರಬೇಕೆಂದೇ ಲಕ್ಷಣವಾಕ್ಯದಲ್ಲಿ ವಿವಕ್ಷೆಮಾಡುವೆವಾದುದರಿಂದ ಅತಿಪ್ರಸಂಗಪರಿಹಾರವಾಗುವುದೆಂದೂ ಹೇಳುವುದಕ್ಕಿಲ್ಲ, ಹಾಗೆ ಹೇಳುವುದಾದರೆ ಈಶ್ವರನಲ್ಲಿರುವ ಆಶ್ರಯತ್ವಕ್ಕೆ

ನಿರೂಪಕವಾದ ಈಶ್ವರನ ಧರ್ಮಭೂತಜ್ಞಾನದಲ್ಲಿ ಲಕ್ಷಣಕ್ಕೆ ಅವ್ಯಾಪ್ತಿದೋಷವು ಬರುವುದು. ಇಂಥ ಉಭಯಸಂಕಟಕ್ಕೇನುಮಾಡುವಿರಿ ?

ಹವುದು. ಉಭಯಸಂಕಟವೇನೋ ಉಂಟು. ಆದರೆ ಅದನ್ನು ಈ ರೀತಿಯಲ್ಲಿ ಪರಿಹರಿಸುವೆವು.—" ಈಶ್ವರನ ಧರ್ಮಭೂತಜ್ಞಾನದಲ್ಲಿರುವ ಆಧೇಯತ್ವಕ್ಕಿಂತಲೂ ಭಿನ್ನವಾಗಿಯೂ ಈಶ್ವರನಿರೂಪಿತವಾಗಿಯೂ ಇರುವ ಯಾವ ಆಧೇಯತ್ವವುಂಟೋ ಅದಕ್ಕಿಂತಲೂ ಭಿನ್ನವಾದ ಆಧೇಯತ್ವವುಳ್ಳುದಾಗಿಯೂ, ಜ್ಞಾನತ್ವವುಳ್ಳುದಾಗಿಯೂ ಇರುವುದು ಧರ್ಮಭೂತಜ್ಞಾನವೆನಿಸಿಕೊಳ್ಳುವುದು " ಎಂಬುದೇ ದ್ವಿತೀಯಲಕ್ಷಣದ ತಾತ್ಪರ್ಯವಾಗಿರುವುದಾದುದರಿಂದ ಈ ಲಕ್ಷಣದಲ್ಲಿ ಯಾವ ಸಂಕಟವೂ ಇಲ್ಲ. ಅಂಥ ಆಧೇಯತ್ವವೂ ಆ ಆ ಧರ್ಮಭೂತಜ್ಞಾನಗಳಲ್ಲಿ ಈಶ್ವರನಿರೂಪಿತವಾಗಿಯೂ ಜೀವನಿರೂಪಿತವಾಗಿಯೂ ಇರುವ ಆಧೇಯತ್ವವೇ ಆಗುವುದಲ್ಲದೆ ಜೀವನಲ್ಲಿರುವ ಈಶ್ವರನಿರೂಪಿತವಾದ ಆಧೇಯತ್ವವಾಗುವುದಿಲ್ಲ. ಆದುದರಿಂದ ಜೀವನಲ್ಲಿ ಅತಿಪ್ರಸಂಗಕ್ಕೆ ಅವಕಾಶವಿಲ್ಲ.

ಪ್ರಕೃತಿ ಕಾಲ ನಿತ್ಯವಿಭೂತಿ ಇವುಗಳಲ್ಲಿಯೂ ಈಶ್ವರನಿರೂಪಿತವಾದ ಆಧೇಯತ್ವವಿದ್ದರೂ ಜ್ಞಾನತ್ವವಿಲ್ಲವಾದುದರಿಂದ ಅವುಗಳಲ್ಲಿಯೂ ಅತಿಪ್ರಸಂಗಕ್ಕೆ ಅವಕಾಶವಿಲ್ಲ.

ಈ ಲಕ್ಷಣದಲ್ಲಿ ಅಪೃಥಕ್ಸಿದ್ಧಿಸಂಬಂಧದಿಂದ ಉಂಟಾಗಿರುವ ಆಧೇಯತ್ವವನ್ನೇ ವಿವಕ್ಷೆಮಾಡಿರುವುದರಿಂದ ಈಶ್ವರನಂತೆ ಕಾಲವೂ ಸರ್ವಾಧಾರವಾಗಿರುವ ಕಾರಣ ಕಾಲನಿರೂಪಿತವಾದ ಆಧೇಯತ್ವವು ಜೀವನಲ್ಲಿ ಇದ್ದರೂ ಹಾನಿಯಿಲ್ಲ. ಅಂಥ ಆಧೇಯತ್ವವು ಅಪೃಥಕ್ಸಿದ್ಧಿಸಂಬಂಧದಿಂದ ಉಂಟಾದುದಲ್ಲವಷ್ಟೆ ?

## ೭೫೪. ಅಥ ತೃತೀಯಲಕ್ಷಣಂ.

" ಆತ್ಮವಸ್ತು ನಿತ್ಯವಿಭೂತಿ ಈ ಎರಡಕ್ಕಿಂತಲೂ ಅತಿರಿಕ್ತವಾದ ಸ್ವಯಂಪ್ರಕಾಶವಸ್ತು ಧರ್ಮಭೂತಜ್ಞಾನವೆನಿಸಿಕೊಳ್ಳುವುದು " ಈ ಲಕ್ಷಣದಲ್ಲಿ ವಿಶೇಷಣದಳವನ್ನು ಸೇರಿಸದಿದ್ದರೆ ಜೀವೇಶ್ವರರೆಂಬ ಆತ್ಮವಸ್ತುವಿನಲ್ಲಿಯೂ ನಿತ್ಯವಿಭೂತಿಯಲ್ಲಿಯೂ ಸ್ವಯಂಪ್ರಕಾಶತ್ವವಿರುವುದರಿಂದ ಲಕ್ಷಣವು ಅವುಗಳಲ್ಲಿ ಅತಿಪ್ರಸಕ್ತವಾಗುವುದು ; ಇದಕ್ಕಾಗಿ ವಿಶೇಷಣದಳವು ಸೇರಿಸಲ್ಪಟ್ಟಿರುವುದು. ಅಷ್ಟುಮಾತ್ರವನ್ನೇ ಲಕ್ಷಣದಲ್ಲಿ ಸೇರಿಸಿ ವಿಶೇಷ್ಯದಳವನ್ನು ಸೇರಿಸದಿದ್ದರೆ ಪ್ರಕೃತಿಯಲ್ಲಿಯೂ ಕಾಲದಲ್ಲಿಯೂ ಲಕ್ಷಣವು ಅತಿಪ್ರಸಕ್ತವಾಗುವುದು. ಇದಕ್ಕಾಗಿ ಸ್ವಯಂಪ್ರಕಾಶತ್ವವನ್ನು ಸೇರಿಸಿರುವೆವು. ಪ್ರಕೃತಿಯಲ್ಲಿಯೂ ಕಾಲದಲ್ಲಿಯೂ ಸ್ವಯಂಪ್ರಕಾಶತ್ವವಿಲ್ಲವಾದುದರಿಂದ ಲಕ್ಷಣಕ್ಕೆ ಅತಿಪ್ರಸಂಗವಿಲ್ಲ.

## ೭೯೫. ಅಥ ನ್ಯಾಯತತ್ತ್ವೋಕ್ತಲಕ್ಷಣೇಷು ಪ್ರಥಮಲಕ್ಷಣಂ

ಹೀಗೆ ತೋರಿಸಿದ ಲಕ್ಷಣಗಳಲ್ಲದೆ ನ್ಯಾಯತತ್ತ್ವವೆಂಬ ಗ್ರಂಥದಲ್ಲಿ ಧರ್ಮ ಭೂತಜ್ಞಾನಕ್ಕೆ ಕೆಲವರು ಹೇಳಿದ ಲಕ್ಷಣಾಭಾಸಗಳನ್ನು ದೂಷಣೆಮಾಡಿದ ಅನಂ ತರದಲ್ಲಿ ಸ್ವಾಭಿಮತಗಳಾದ ನಾಲ್ಕು ಲಕ್ಷಣಗಳು ಕಾರಿಕೆಯಲ್ಲಿ ತೋರಿಸಲ್ಪ ಟ್ಟಿರುವುವು.—

"ಅತ್ಯಂತವೇಗಿತಾತ್ಯಂತಸೌಕ್ಷ್ಮ್ಯಂ ನಿರ್ಭರತಾ ತಥಾ ।
ಸ್ವಸತ್ತಾಕಾಲಭಾವ್ಯಾಪ್ತಿರ್ಜ್ಞಾನೇ ಲಕ್ಷ್ಮಚತುಷ್ಟಯಂ ॥"

ಅವುಗಳಲ್ಲಿ ಮೊದಲನೆಯ ಲಕ್ಷಣವು—"ಅತ್ಯಂತವೇಗವುಳ್ಳೋಣವು ಎಂದರೆ ಅಪಕರ್ಷರಹಿತವಾದ ವೇಗವುಳ್ಳೋಣವು" ಧರ್ಮಭೂತಜ್ಞಾನಕ್ಕೆ ಲಕ್ಷ ಣವಾಗಿರುವುದು. ವೇಗವುಳ್ಳ ವಸ್ತುಗಳೊಳಗೆ ಧರ್ಮಭೂತಜ್ಞಾನದ ವೇಗಕ್ಕಿಂ ತಲೂ ಹೆಚ್ಚಿದ ವೇಗವುಳ್ಳ ವಸ್ತು ಯಾವುದಾದರೊಂದು ಇದ್ದಿದ್ದರೆ ಆಗ ಅದರ ವೇಗಕ್ಕಿಂತಲೂ ಧರ್ಮಭೂತಜ್ಞಾನದ ವೇಗವು ಅಪಕೃಷ್ಟವಾಗುತ್ತಿದ್ದಿತು. ಆದರೆ ಅಂಥ ವಸ್ತುವೇ ಯಾವುದೂ ಇಲ್ಲ. ಇತರಪದಾರ್ಥಗಳಲ್ಲಿರುವ ಸಕಲವೇಗಗಳೂ ಧರ್ಮಭೂತಜ್ಞಾನದ ವೇಗಕ್ಕಿಂತಲೂ ಅಪಕೃಷ್ಟಗಳಾಗಿಯೇ ಇರುವುವಾದುದ ರಿಂದ ಧರ್ಮಭೂತಜ್ಞಾನದ ವೇಗವೇ ಅಪಕರ್ಷರಹಿತವಾಗಿರುವುದು. ಆದುದರಿಂ ದಲೇ ಮೋಕ್ಷಪ್ರಾಪ್ತಿಕಾಲದಲ್ಲಿ ಮುಕ್ತಾತ್ಮನ ಧರ್ಮಭೂತಜ್ಞಾನಕ್ಕೆ ಪೂರ್ವದಲ್ಲಿ ಸಂಕೋಚವನ್ನು ಉಂಟುಮಾಡುತ್ತಿದ್ದ ಕರ್ಮಸಂಬಂಧವು ಆತ್ಯಂತಿಕವಾಗಿ ನಾಶ ಹೊಂದಿದ ತತ್‌ಕ್ಷಣದಲ್ಲಿಯೇ ಸಕಲಬ್ರಹ್ಮಾಂಡೋದರದಲ್ಲಿರುವ ಸಕಲಪದಾರ್ಥ ಗಳೊಡನೆಯೂ ಸಂಯೋಗವುಂಟಾಗುವುದು. ಆದಕಾರಣ "ಅಪಕರ್ಷರಹಿತ ವಾದ ವೇಗವುಳ್ಳೋಣವು" ಎಂಬ ಲಕ್ಷಣವು ಧರ್ಮಭೂತಜ್ಞಾನದಲ್ಲಿ ಸಮನ್ವಿತ ವಾಗಲು ತಡೆಯಿಲ್ಲ; ಯಾವ ಮತ್ತೊಂದು ಪದಾರ್ಥದಲ್ಲಿಯೂ ಈ ಲಕ್ಷಣಕ್ಕೆ ಅತಿವ್ಯಾಪ್ತಿಯೂ ಸಂಭವಿಸುವುದಿಲ್ಲ.

## ೭೯೬. ಅಥ ದ್ವಿತೀಯಲಕ್ಷಣಂ.

"ಅತ್ಯಂತಸೂಕ್ಷ್ಮವಾಗಿರುವಿಕೆ" ಧರ್ಮಭೂತಜ್ಞಾನಕ್ಕೆ ಲಕ್ಷಣವಾಗಿ ರುವುದು. ಸೂಕ್ಷ್ಮವಾಗಿರುವಿಕೆಯೆಂದರೆ ಪ್ರತಿಘಾತಕ್ಕೆ ಅನರ್ಹವಾಗಿರುವಿಕೆ ಎಂದರೆ ಪ್ರತಿಘಾತಕ್ಕೆ ವಿರೋಧಿಯಾದ ಶಕ್ತಿಯುಳ್ಳೋಣವು. ಅಂತು "ಅಪ ಕರ್ಷರಹಿತವಾದ ಪ್ರತಿಘಾತವಿರೋಧಿಶಕ್ತಿಯುಳ್ಳೋಣವು" ಧರ್ಮಭೂತಜ್ಞಾ ನಕ್ಕೆ ಲಕ್ಷಣವೆಂದು ಈ ದ್ವಿತೀಯಲಕ್ಷಣದ ತಾತ್ಪರ್ಯವಾಯಿತು. ಪ್ರತಿಘಾತ

ಪಿರೋಧಿಶಕ್ತಿಯುಳ್ಳ ವಸ್ತುಗಳೊಳಗೆ ಧರ್ಮಭೂತಜ್ಞಾನದ ಪ್ರತಿಘಾತವಿರೋಧಿ ಶಕ್ತಿಗಿಂತಲೂ ಹೆಚ್ಚಿದ ಪ್ರತಿಘಾತವಿರೋಧಿಶಕ್ತಿಯುಳ್ಳ ವಸ್ತು ಯಾವುದಾದ ರೊಂದು ಇದ್ದಿದ್ದರೆ ಆಗ ಅದರ ಪ್ರತಿಘಾತವಿರೋಧಿಶಕ್ತಿಗಿಂತಲೂ ಧರ್ಮಭೂತ ಜ್ಞಾನದ ಪ್ರತಿಘಾತವಿರೋಧಿಶಕ್ತಿ ಅಪಕೃಷ್ಟವಾಗುತ್ತಿದ್ದಿತು; ಆದರೆ ಅಂಥ ವಸ್ತುವೇ ಯಾವುದೂ ಇಲ್ಲ. ಇತರಗಳಾದ ಸಕಲಪದಾರ್ಥಗಳಲ್ಲಿರುವ ಪ್ರತಿಘಾತ ವಿರೋಧಿಶಕ್ತಿಗಳೂ ಧರ್ಮಭೂತಜ್ಞಾನದ ಪ್ರತಿಘಾತವಿರೋಧಿಶಕ್ತಿಗಿಂತಲೂ ಅಪಕೃಷ್ಟಗಳಾಗಿಯೇ ಇರುವುವಾದುದರಿಂದ ಧರ್ಮಭೂತಜ್ಞಾನದ ಪ್ರತಿಘಾತ ವಿರೋಧಿಶಕ್ತಿಯೇ ಅಪಕರ್ಷರಹಿತವಾಗಿರುವುದು. ಆದುದರಿಂದಲೇ ಮೋಕ್ಷದಶೆ ಯಲ್ಲಿ ಸಕಲಪದಾರ್ಥಗಳನ್ನೂ ಅವಗಾಹಿಸುವ ಧರ್ಮಭೂತಜ್ಞಾನವೆಂಬ ಈ ಬುದ್ಧಿಗೆ ಸಂಸಾರಾವಸ್ಥೆಯಲ್ಲಿ ಮಶಕಶರೀರಮಾತ್ರದಲ್ಲಿ ಅಡಗಿರಬೇಕೆಂಬ ಸಂಕೋ ಚಾವಸ್ಥೆಯಿದ್ದರೂ ಬುದ್ಧ್ಯವಯುವಗಳಿಗೆ ಪರಸ್ಪರಪ್ರತಿಘಾತವಿಲ್ಲ. ಹಾಗೆ ಪ್ರತಿ ಘಾತವಿರುವುದಾದರೆ ಮೋಕ್ಷಾವಸ್ಥೆಯಲ್ಲಿ ಸಕಲಬ್ರಹ್ಮಾಂಡೋದರವರ್ತಿಸಕಲ ಪದಾರ್ಥಗಳಲ್ಲಿಯೂ ಹರಡುವ ಅಷ್ಟೊಂದು ದೊಡ್ಡಬುದ್ಧಿ ಸಂಸಾರಾವಸ್ಥೆಯಲ್ಲಿ ಮಶಕಶರೀರವೆಂಬ ಅತ್ಯಲ್ಪಪ್ರದೇಶದಲ್ಲಿ ಅಡಗಿರಕೂಡದಷ್ಟೆ? ಆದಕಾರಣ— "ಅಪಕರ್ಷರಹಿತವಾದ ಪ್ರತಿಘಾತವಿರೋಧಿಶಕ್ತಿಯುಳ್ಳೋಣವು" ಎಂಬ ಲಕ್ಷ ಣವು ಧರ್ಮಭೂತಜ್ಞಾನದಲ್ಲಿ ಸಮನ್ವಿತವಾಗಲು ತಡೆಯಿಲ್ಲ; ಮತ್ತು ಯಾವ ಮತ್ತೊಂದು ಪದಾರ್ಥದಲ್ಲಿಯೂ ಈ ಲಕ್ಷಣಕ್ಕೆ ಅತಿವ್ಯಾಪ್ತಿಯೂ ಸಂಭ ವಿಸುವುದಿಲ್ಲ.

## ೭೯೭. ಅಥ ತೃತೀಯಲಕ್ಷಣಂ.

ಕಾರಿಕೆಯಲ್ಲಿ—ಮೊದಲಿನ ಎರಡು ಲಕ್ಷಣಗಳಲ್ಲಿಯೂ ಅತ್ಯಂತಪದವನ್ನು ಪ್ರಯೋಗಿಸಿ ಅಂಥ ಅತ್ಯಂತಪದಕ್ಕೆ ಬದಲಾಗಿ ಈ ಲಕ್ಷಣದಲ್ಲಿ ತಥಾಶಬ್ದ ವನ್ನು ಪ್ರಯೋಗಿಸಿರುವುದರಿಂದ ಈ ತಥಾಶಬ್ದಕ್ಕೂ ಅತ್ಯಂತಶಬ್ದದ ಅರ್ಥವೇ ಅರ್ಥವಾಗಿರುವುದು. ಎಂದರೆ—"ತಥಾ ನಿರ್ಭರತಾ" ಎಂಬ ಮೂಲವು "ಅತ್ಯಂತ ನಿರ್ಭರತಾ" ಎಂದು ಪರ್ಯವಸಾನವನ್ನು ಹೊಂದುವುದು. ನಿರ್ಭರತ್ವವೆಂದರೆ ಲಘುತ್ವವು; ಎಂದರೆ ಹಗುರವಾಗಿರುವಿಕೆ. "ಅತ್ಯಂತಹಗುರವಾಗಿರುವಿಕೆ ಎಂ ದರೆ ಅಪಕರ್ಷರಹಿತವಾದ ಲಘುತ್ವವುಳ್ಳೋಣವು" ಧರ್ಮಭೂತಜ್ಞಾನಕ್ಕೆ ಲಕ್ಷ ಣವಾಗಿರುವುದು. ಇಂಥ ಲಘುತ್ವವು ಧರ್ಮಭೂತಜ್ಞಾನದಲ್ಲಿರುವ ಒಂದಾ ನೊಂದು ಶಕ್ತಿವಿಶೇಷವಾಗಿರುವುದು. ಪೂರ್ವೋಕ್ತವಾದ ವೇಗವೂ ಇಂಥ ಶಕ್ತಿ

ಯಿಂದಲೇ ಧರ್ಮಭೂತಜ್ಞಾನಕ್ಕೆ ಉಂಟಾಗುವುದು. ಅತ್ಯಂತಲಾಘವವುಳ್ಳ ವಸ್ತುವಿನಲ್ಲಿ ಅತ್ಯಂತವೇಗವುಳ್ಳೋಣವೂ ಸಹಜವಷ್ಟೆ? ಲಾಘವವುಳ್ಳ ವಸ್ತುಗಳೊಳಗೆ ಧರ್ಮಭೂತಜ್ಞಾನದ ಲಾಘವಕ್ಕಿಂತಲೂ ಹೆಚ್ಚಿದ ಲಾಘವವುಳ್ಳ ವಸ್ತು ಯಾವುದಾದರೊಂದು ಇದ್ದಿದ್ದರೆ ಆಗ ಅದರ ಲಾಘವಕ್ಕಿಂತಲೂ ಧರ್ಮಭೂತಜ್ಞಾನದ ಲಾಘವವು ಅಪಕೃಷ್ಟವಾಗುತ್ತಿದ್ದಿತು; ಆದರೆ ಅಂಥ ವಸ್ತುವೇ ಯಾವುದೂ ಇಲ್ಲ. ಇತರಗಳಾದ ಸಕಲಪದಾರ್ಥಗಳಲ್ಲಿರುವ ಲಾಘವವೂ ಧರ್ಮಭೂತಜ್ಞಾನದ ಲಾಘವಕ್ಕಿಂತಲೂ ಅಪಕೃಷ್ಟವಾಗಿಯೇ ಇರುವುದಾದುದರಿಂದ ಧರ್ಮಭೂತಜ್ಞಾನದ ಲಾಘವವೇ ಅಪಕರ್ಷರಹಿತವಾಗಿರುವುದು. ಧರ್ಮಭೂತಜ್ಞಾನದಲ್ಲಿರುವ ವೇಗವೆಂಬ ಕಾರ್ಯವು ಅಪಕರ್ಷರಹಿತವಾಗಿ ಎಂದರೆ ಸರ್ವೋತ್ಕೃಷ್ಟವಾಗಿ ಇರುವುದಾದರೆ ಅದಕ್ಕೆ ಕಾರಣವಾದ ಲಾಘವವೂ ಸರ್ವೋತ್ಕೃಷ್ಟವಾಗಿರಬೇಕಲ್ಲವೆ? ಆದಕಾರಣ "ಅಪಕರ್ಷರಹಿತವಾದ ಲಘುತ್ವವುಳ್ಳೋಣವು" ಎಂಬ ಲಕ್ಷಣವು ಧರ್ಮಭೂತಜ್ಞಾನದಲ್ಲಿ ಸಮನ್ವಿತವಾಗಲು ತಡೆಯಿಲ್ಲ; ಮತ್ತು ಯಾವ ಮತ್ತೊಂದು ಪದಾರ್ಥದಲ್ಲಿಯೂ ಈ ಲಕ್ಷಣಕ್ಕೆ ಅತಿವ್ಯಾಪ್ತಿಯೂ ಸಂಭವಿಸುವುದಿಲ್ಲ.

## ೭೯೮. ಅಥ ಚತುರ್ಥಲಕ್ಷಣಂ.

"ತಾನಿರುವ ಕಾಲದಲ್ಲಿ ತನ್ನ ಪ್ರಕಾಶವಿಲ್ಲವೆಂಬುದಿಲ್ಲದಿರುವಿಕೆ" ಧರ್ಮಭೂತಜ್ಞಾನಕ್ಕೆ ಲಕ್ಷಣವಾಗಿರುವುದು. ಪ್ರಕಾಶವೆಂದರೆ ಜ್ಞಾನಕ್ಕೆ ವಿಷಯವಾಗಿರುವಿಕೆ. ಜ್ಞಾನವು ವಿಷಯವನ್ನು ಪ್ರಕಾಶಪಡಿಸುವಾಗ ತನ್ನನ್ನೂ ತಾನೇ ಪ್ರಕಾಶಪಡಿಸುವುದು. ಎಂದರೆ ವಿಷಯಪ್ರಕಾಶನವೇಳೆಯಲ್ಲಿ ಜ್ಞಾನವನ್ನು ಸಾಕ್ಷಾತ್ಕರಿಸುವುದಕ್ಕೆ ಜ್ಞಾನಾಂತರವು ಬೇಕಾಗಿಲ್ಲ; ತಾನಾಗಿಯೇ ಪ್ರಕಾಶಿಸುವುದು. ದೀಪವು ಘಟಾದಿಪದಾರ್ಥಗಳನ್ನು ಪ್ರಕಾಶಪಡಿಸುವಕಾಲದಲ್ಲಿ ಅಂಥ ದೀಪವನ್ನು ಸಾಕ್ಷಾತ್ಕರಿಸುವುದಕ್ಕೆ ಮತ್ತೊಂದು ದೀಪವು ಬೇಕಾಗಿಲ್ಲವಷ್ಟೆ? ಹೀಗೆ ಜ್ಞಾನಾಂತರಸಹಾಯವಿಲ್ಲದೆ ತಾನಾಗಿಯೇ ಪ್ರಕಾಶವಾಗುವಿಕೆ ಸ್ವಯಂಪ್ರಕಾಶತ್ವವೆನಿಸಿಕೊಳ್ಳುವುದು. ಆದಕಾರಣ "ತಾನಿರುವ ಕಾಲದಲ್ಲಿ ತನ್ನ ಪ್ರಕಾಶವಿಲ್ಲವೆಂಬುದಿಲ್ಲದಿರುವಿಕೆ" ಎಂಬ ಲಕ್ಷಣವು ಧರ್ಮಭೂತಜ್ಞಾನದಲ್ಲಿ ಸಮನ್ವಿತವಾಗಲು ತಡೆಯಿಲ್ಲ; ಮತ್ತು ಯಾವ ಮತ್ತೊಂದು ಪದಾರ್ಥದಲ್ಲಿಯೂ ಈ ಲಕ್ಷಣಕ್ಕೆ ಅತಿವ್ಯಾಪ್ತಿಯೂ ಸಂಭವಿಸುವುದಿಲ್ಲ.

## ೭೯೯. ನ್ಯಾಯತತ್ತ್ವೋಕ್ತಲಕ್ಷಣೇಷು ಪ್ರಥಮಲಕ್ಷಣೇ ಅವ್ಯಾಪ್ತ್ಯುದ್ಭಾಟನಂ.

"ಪೂಜ್ಯರೆ! ನ್ಯಾಯತತ್ತ್ವದಲ್ಲಿ ಉಕ್ತಗಳಾದ ಈ ಲಕ್ಷಣಗಳು ನಿರ್ದುಷ್ಟಲಕ್ಷಣಗಳಾಗುವುದಿಲ್ಲ. ಹೇಗೆಂದರೆ "ಅಪಕರ್ಷರಹಿತವಾದ ವೇಗವತ್ತ್ವವು" ಎಂಬ ಪ್ರಥಮಲಕ್ಷಣಕ್ಕೆ ಈಶ್ವರನ ಮತ್ತು ನಿತ್ಯಸೂರಿಗಳ ಧರ್ಮಭೂತಜ್ಞಾನಗಳಲ್ಲಿ ಸಮನ್ವಯವಾಗುವುದಿಲ್ಲ ಕಿಂತು ಅವ್ಯಾಪ್ತಿದೋಷವಿರುವುದು. ಹೇಗೆಂದರೆ ವೇಗವೆಂಬುದು ಒಂದಾನೊಂದು ಕ್ರಿಯಾವಿಶೇಷವಾಗಿರುವುದು. ಸರ್ವದಾ ಸರ್ವವ್ಯಾಪಕವಾಗಿ ವಿಭುವೆನಿಸಿಕೊಂಡಿರುವ ಈಶ್ವರಜ್ಞಾನದಲ್ಲಿಯೂ ನಿತ್ಯಸೂರಿಜ್ಞಾನದಲ್ಲಿಯೂ ಕ್ರಿಯಾಸಾಮಾನ್ಯವೇ ಸಂಭವಿಸುವುದಿಲ್ಲ. ಎಲ್ಲಿ ಕ್ರಿಯಾಸಾಮಾನ್ಯಕ್ಕೇ ಅವಕಾಶವಿಲ್ಲವೋ ಅಲ್ಲಿ ಕ್ರಿಯಾವಿಶೇಷರೂಪವಾದ ವೇಗಕ್ಕೆ ಪ್ರಸಕ್ತಿಯೇ ಇಲ್ಲ. ಹೀಗಿರುವಲ್ಲಿ ಅಪಕರ್ಷರಹಿತವಾದ ವೇಗವತ್ತ್ವವು ಅವರ ಜ್ಞಾನಗಳಲ್ಲಿ ಹೇಗೆತಾನೆ ಸಂಭವಿಸೀತು? ಆದುದರಿಂದ ಈ ಪ್ರಥಮಲಕ್ಷಣವು ಈಶ್ವರನಿತ್ಯಸೂರಿಜ್ಞಾನಗಳಲ್ಲಿ ಅವ್ಯಾಪ್ತಿದೋಷಗ್ರಸ್ತವಾಗಿರುವುದು;

## ೮೦೦ ತೃತೀಯಲಕ್ಷಣೇಽಪ್ಯವ್ಯಾಪ್ತಿದೋಷೋದ್ಭಾವನಂ

ಆದುದರಿಂದಲೇ—"ಅಪಕರ್ಷರಹಿತವಾದ ಲಘುತ್ವವುಳ್ಳೋಣವು" ಎಂಬ ತೃತೀಯಲಕ್ಷಣಕ್ಕೂ ಅವರ ಜ್ಞಾನಗಳಲ್ಲಿ ಸಮನ್ವಯವಾಗುವುದಿಲ್ಲ. ಕಿಂತು ಅವ್ಯಾಪ್ತಿದೋಷವೇ ಇರುವುದು. ಹೇಗೆಂದರೆ—ಯಾವಾಗಲೂ ವೇಗಪ್ರಸಕ್ತಿಯೇ ಇಲ್ಲದ ಅವರ ಜ್ಞಾನಗಳಲ್ಲಿ ಅಂಥ ವೇಗಕ್ಕೆ ಕಾರಣೀಭೂತವಾದ ಲಘುತ್ವಶಕ್ತಿ ಇರುವುದೆಂಬುದರಲ್ಲಿ ಪ್ರಮಾಣವಿಲ್ಲ. ಕಾರಣವಿದ್ದರೆ ಕಾರ್ಯವು ಯಾವಾಗಲಾದರೊಂದುಕಾಲದಲ್ಲಿ ಆವಶ್ಯಕವಾಗಿ ಉಂಟಾಗಬೇಕಲ್ಲವೆ? ವೇಗವೆಂಬುವ ಕಾರ್ಯವಾದರೆ ಅವರ ಜ್ಞಾನಗಳಲ್ಲಿ ಯಾವಾಗಲೂ ಉಂಟಾಗುವುದೇ ಇಲ್ಲವಾದುದರಿಂದ ಈ ತೃತೀಯಲಕ್ಷಣವೂ ಅವ್ಯಾಪ್ತಿದೋಷಗ್ರಸ್ತವಾಗಿರುವುದು;

## ೮೦೧ ಚತುರ್ಥಲಕ್ಷಣೇ ಅವ್ಯಾಪ್ತ್ಯತಿವ್ಯಾಪ್ತ್ಯುಭಯ ದೋಷೋದ್ಭಾವನಂ

ಮತ್ತು—"ತಾನಿರುವ ಕಾಲದಲ್ಲಿ ತನ್ನ ಪ್ರಕಾಶವಿಲ್ಲವೆಂಬುದಿಲ್ಲದಿರುವಿಕೆ" ಎಂಬ ನಾಲ್ಕನೆಯ ಲಕ್ಷಣವು ಜೀವೇಶ್ವರನಿತ್ಯವಿಭೂತಿಗಳಲ್ಲಿ ಅತಿವ್ಯಾಪ್ತಿದೋಷಗ್ರಸ್ತವಾಗಿಯೂ, ಬದ್ಧಚೇತನರ ಜ್ಞಾನಗಳಲ್ಲಿ ಅವ್ಯಾಪ್ತಿದೋಷಗ್ರಸ್ತವಾಗಿಯೂ ಇರುವುದು. ಹೇಗೆಂದರೆ—ಈ ನಾಲ್ಕನೆಯ ಲಕ್ಷಣದಿಂದ ಧರ್ಮಭೂತಜ್ಞಾನಕ್ಕೆ

ಫಲಿತವಾಗುವ ಸ್ವಯಂಪ್ರಕಾಶತ್ವವು ಜೀವೇಶ್ವರನಿತ್ಯವಿಭೂತಿಗಳಲ್ಲಿಯೂ ಇರುವುದರಿಂದ ಅತಿವ್ಯಾಪ್ತಿ ತಪ್ಪಲಾರದು. ಆತ್ಮನಿಗೆ ಜ್ಞಾನವು ನಿತ್ಯವಾದುದರಿಂದ ಮೂರ್ಛಾಪ್ರಳಯಸುಷುಪ್ತ್ಯವಸ್ಥೆಗಳಲ್ಲಿಯೂ ಜ್ಞಾನವು ಇದ್ದೇ ಇರುವುದು. ಆದರೆ ಆ ಅವಸ್ಥೆಗಳಲ್ಲಿ ಈ ಜ್ಞಾನಕ್ಕೆ ಪ್ರಕಾಶವಿಲ್ಲವಾದುದರಿಂದ ಅಂಥ ಅವಸ್ಥೆಗಳಲ್ಲಿರುವ ಬದ್ಧಚೇತನರ ಜ್ಞಾನಗಳಲ್ಲಿ ಈ ಲಕ್ಷಣಕ್ಕೆ ಅವ್ಯಾಪ್ತಿದೋಷವೂ ತಪ್ಪಲಾರದು. ಆದಕಾರಣ ನ್ಯಾಯತತ್ತ್ವದಲ್ಲಿ ಉಕ್ತಗಳಾದ ಈ ಲಕ್ಷಣಗಳು ನಿರ್ದುಷ್ಟಲಕ್ಷಣಗಳಾಗುವುದಿಲ್ಲ "

## ೮೦೨ ಪ್ರಥಮಲಕ್ಷಣೇ ಅವ್ಯಾಪ್ತಿದೋಷನಿವಾರಣಂ

ಎಂದು ಆಶಂಕಿಸುವುದಾದರೆ— ಆ ಆ ಲಕ್ಷಣಗಳಲ್ಲಿ ಕೆಲವು ದಳಗಳನ್ನು ಸೇರಿಸಿ ಪರಿಷ್ಕರಿಸುವೆವಾದುದರಿಂದ ಆಶಂಕೆಗೆ ಪರಿಹಾರವಾಗುವುದು. ಹೇಗೆಂದರೆ "ಅಪಕರ್ಷರಹಿತವಾದ ವೇಗವುಳ್ಳೋಣವು" ಎಂಬ ಪ್ರಥಮಲಕ್ಷಣವನ್ನು "ಅಪಕರ್ಷರಹಿತವಾದ ವೇಗವುಳ್ಳ ವಸ್ತುಗಳಲ್ಲಿರುವ ದ್ರವ್ಯವಿಭಾಜಕವಾದ ಉಪಾಧಿಯುಳ್ಳೋಣವು" ಎಂಬುದಾಗಿ ಪರಿಷ್ಕರಿಸುವೆವು. ಪ್ರಕೃತಿತ್ವ, ಕಾಲತ್ವ, ಜೀವತ್ವ, ಈಶ್ವರತ್ವ, ನಿತ್ಯವಿಭೂತಿತ್ವ, ಧರ್ಮಭೂತಜ್ಞಾನತ್ವ, ಎಂಬ ಈ ಆರು ಉಪಾಧಿಗಳೂ ದ್ರವ್ಯಗಳನ್ನು ವಿಭಾಗಿಸುವ ಉಪಾಧಿಗಳಾಗಿರುವುವು. ಈಶ್ವರನ ಮತ್ತು ನಿತ್ಯಸೂರಿಗಳ ಧರ್ಮಭೂತಜ್ಞಾನಗಳಲ್ಲಿ ವೇಗವೆಂಬ ಕ್ರಿಯೆಯಿಲ್ಲದಿದ್ದರೂ ವೇಗವೆಂಬ ಕ್ರಿಯೆಯುಳ್ಳ ಬದ್ಧಜೀವಧರ್ಮಭೂತಜ್ಞಾನಗಳಲ್ಲಿರುವ ಧರ್ಮಭೂತಜ್ಞಾನತ್ವವೆಂಬ ಉಪಾಧಿ ಅವರ ಜ್ಞಾನಗಳಲ್ಲಿಯೂ ತಪ್ಪಿದುದಲ್ಲ. ಆದಕಾರಣ ಪ್ರಥಮಲಕ್ಷಣಕ್ಕೆ ಈಶ್ವರನಿತ್ಯಸೂರಿಗಳ ಜ್ಞಾನಗಳಲ್ಲಿ ಅವ್ಯಾಪ್ತಿದೋಷವಿಲ್ಲ.

## ೮೦೩. ತೃತೀಯಲಕ್ಷಣೇ ಅವ್ಯಾಪ್ತಿದೋಷನಿವಾರಣಂ.

ಇದರಂತೆಯೇ— "ಅಪಕರ್ಷರಹಿತವಾದ ಲಘುತ್ವವುಳ್ಳೋಣವು" ಎಂಬ ತೃತೀಯಲಕ್ಷಣವನ್ನು "ಅಪಕರ್ಷರಹಿತವಾದ ಲಘುತ್ವವುಳ್ಳ ವಸ್ತುಗಳಲ್ಲಿರುವ ದ್ರವ್ಯವಿಭಾಜಕವಾದ ಉಪಾಧಿಯುಳ್ಳೋಣವು" ಎಂಬುದಾಗಿ ಪರಿಷ್ಕರಿಸುವೆವು. ಈಶ್ವರನ ಮತ್ತು ನಿತ್ಯಸೂರಿಗಳ ಧರ್ಮಭೂತಜ್ಞಾನಗಳಲ್ಲಿ ಲಘುತ್ವವೆಂಬ ಶಕ್ತಿವಿಶೇಷವಿಲ್ಲದಿದ್ದರೂ ಅಂಥ ಶಕ್ತಿವಿಶೇಷವುಳ್ಳ ಬದ್ಧಜೀವರ ಧರ್ಮಭೂತಜ್ಞಾನಗಳಲ್ಲಿರುವ ಧರ್ಮಭೂತಜ್ಞಾನತ್ವವೆಂಬ ದ್ರವ್ಯವಿಭಾಜಕವಾದ ಉಪಾಧಿ ಇದ್ದೇ ಇರುವುದು. ಆದಕಾರಣ ತೃತೀಯಲಕ್ಷಣಕ್ಕೆ ಈಶ್ವರನಿತ್ಯಸೂರಿಗಳ ಜ್ಞಾನಗಳಲ್ಲಿ ಅವ್ಯಾಪ್ತಿದೋಷವಿಲ್ಲ.

## ೮೦೪. ಚತುರ್ಥಲಕ್ಷಣೇ ಅವ್ಯಾಪ್ತ್ಯತಿವ್ಯಾಪ್ತಿದೋಷನಿವಾರಣಂ.

ಇದರಂತೆಯೇ—"ತಾನಿರುವ ಕಾಲದಲ್ಲಿ ತನ್ನ ಪ್ರಕಾಶವಿಲ್ಲವೆಂಬುದಿಲ್ಲದಿರುವಿಕೆ" ಎಂಬ ನಾಲ್ಕನೆಯ ಲಕ್ಷಣವನ್ನು—"ಪರಾಗ್ದ್ರವ್ಯವಾಗಿಯೂ, ನಿತ್ಯವಿಭೂತಿಭಿನ್ನವಾಗಿಯೂ, ಕಿಂಚಿತ್ಪದಾರ್ಥನಿಷ್ಠವಾದ ವಿಷಯತೆಗೆ ನಿರೂಪಕವಾಗಿಯೂ, ಇರುವ ಯಾವ ತಾನುಂಟೋ ಇಂಥ ತಾನಿರುವ ಕಾಲದಲ್ಲಿ ತನ್ನ ಪ್ರಕಾಶವಿಲ್ಲವೆಂಬುದಿಲ್ಲದಿರುವಿಕೆ" ಎಂಬುದಾಗಿ ಪರಿಷ್ಕರಿಸುವೆವು. ಇಲ್ಲಿ—"ಪರಾಗ್ದ್ರವ್ಯವಾಗಿಯೂ" ಎಂಬ ಪ್ರಥಮವಿಶೇಷಣವನ್ನು ಹೇಳಿದುದರಿಂದ ಜೀವೇಶ್ವರರಲ್ಲಿ ಈ ಲಕ್ಷಣಕ್ಕೆ ಉಂಟಾಗಿದ್ದ ಅತಿವ್ಯಾಪ್ತಿದೋಷಕ್ಕೆ ಪರಿಹಾರವಾಗುವುದು. ಜೀವೇಶ್ವರರು ಪರಾಗ್ದ್ರವ್ಯವಲ್ಲವಷ್ಟೆ. "ನಿತ್ಯವಿಭೂತಿಭಿನ್ನವಾಗಿಯೂ" ಎಂಬ ದ್ವಿತೀಯವಿಶೇಷಣವನ್ನು ಹೇಳಿದುದರಿಂದ ನಿತ್ಯವಿಭೂತಿಯಲ್ಲಿ ಈ ಲಕ್ಷಣಕ್ಕೆ ಉಂಟಾಗಿದ್ದ ಅತಿವ್ಯಾಪ್ತಿದೋಷಕ್ಕೆ ಪರಿಹಾರವಾಗುವುದು. ನಿತ್ಯವಿಭೂತಿ ನಿತ್ಯವಿಭೂತಿಭಿನ್ನವಲ್ಲವಷ್ಟೆ?

"ಕಿಂಚಿತ್ಪದಾರ್ಥನಿಷ್ಠವಾದ ವಿಷಯತೆಗೆ ನಿರೂಪಕವಾಗಿಯೂ" ಎಂಬ ಮೂರನೆಯ ದಳವನ್ನು ಸೇರಿಸಿದುದರಿಂದ ಬದ್ಧಚೇತನರ ಜ್ಞಾನಗಳಲ್ಲಿ ಈ ಲಕ್ಷಣಕ್ಕೆ ಉಂಟಾಗಿದ್ದ ಅವ್ಯಾಪ್ತಿದೋಷಕ್ಕೆ ಪರಿಹಾರವಾಗುವುದು. ಮೂರ್ಛಾ-ಪ್ರಳಯ-ಸುಷುಪ್ತ್ಯವಸ್ಥೆಗಳಲ್ಲಿ ಬದ್ಧಚೇತನರಿಗೆ ಜ್ಞಾನವೆಂಬುದು ಸ್ವರೂಪದಿಂದ ಇದ್ದರೂ ಇಂದ್ರಿಯದ್ವಾರಾ ಅದಕ್ಕೆ ಪ್ರಸರಣವಿಲ್ಲ. ಇಂದ್ರಿಯದ್ವಾರಾ ಅದಕ್ಕೆ ಪ್ರಸರಣವಿರುವ ಕಾಲದಲ್ಲಿಯೇ ಕಿಂಚಿತ್ಪದಾರ್ಥನಿಷ್ಠವಾದ ವಿಷಯತೆಗೆ ತಾನು ನಿರೂಪಕವಾದೀತು. ಆದಕಾರಣ ಅಂಥ ಅವಸ್ಥೆಗಳಲ್ಲಿ ಜ್ಞಾನವು ಸ್ವರೂಪದಿಂದ ಇದ್ದರೂ ವಿಷಯತಾನಿರೂಪಕವಾದ ಜ್ಞಾನವಿಲ್ಲವಾದುದರಿಂದ ಅಂಥ ಅವಸ್ಥೆಗಳಲ್ಲಿ ಅಂಥ ಜ್ಞಾನಕ್ಕೆ ಪ್ರಕಾಶವಿಲ್ಲದಿದ್ದರೂ ಹಾನಿಯಿಲ್ಲ. ಆದೇ ಬದ್ಧಜೀವರಿಗೆ ಜಾಗ್ರದವಸ್ಥೆಯಲ್ಲಿ ವಿಷಯತಾನಿರೂಪಕವಾದ ಜ್ಞಾನವಿರುವ ಕಾಲದಲ್ಲಿ ಅಂಥ ಜ್ಞಾನಕ್ಕೆ ಪ್ರಕಾಶವೂ ತಪ್ಪದೆ ಇರುವುದರಿಂದ ಈ ಚತುರ್ಥಲಕ್ಷಣಕ್ಕೆ ಬದ್ಧಜೀವರ ಜ್ಞಾನಗಳಲ್ಲಿ ಅವ್ಯಾಪ್ತಿದೋಷವೂ ಇಲ್ಲ. ಆದಕಾರಣ ನ್ಯಾಯತತ್ತ್ವದಲ್ಲಿ ಉಕ್ತಗಳಾದ ಈ ಲಕ್ಷಣಗಳು ನಿರ್ದುಷ್ಟಲಕ್ಷಣಗಳಾಗಿರುವುವೆಂಬುದರಲ್ಲಿ ಸಂಶಯವಿಲ್ಲ.

**ಇಂತು ತತ್ತ್ವಶುದ್ಧಿಯೆಂಬ ವಿಶಿಷ್ಟಾದ್ವೈತಪ್ರಕರಣಗ್ರಂಥದೊಳ್ ಧರ್ಮಭೂತಜ್ಞಾನಪರಿಚ್ಛೇದದಲ್ಲಿ ಧರ್ಮಭೂತಜ್ಞಾನಲಕ್ಷಣನಿರೂಪಣಪ್ರಕರಣಂ ಪ್ರಥಮಂ. ೧**



# ದ್ವಿತೀಯಪ್ರಕರಣಂ.

## ೮೦೫. ಬದ್ಧಜ್ಞಾನಸ್ಯ ಸ್ವಯಂಪ್ರಕಾಶತ್ವೇ ನಿಯಮದ್ವಯಾವಶ್ಯಕತಾ.

ಇಂಥ ಜ್ಞಾನವು ಸ್ವಯಂಪ್ರಕಾಶವೆನಿಸಿಕೊಳ್ಳುವ ಕಾಲದಲ್ಲಿ ಎರಡು ನಿಯಮಗಳೊಡನೆ ಕೂಡಿಯೇ ಸ್ವಯಂಪ್ರಕಾಶವೆನಿಸಿಕೊಳ್ಳುವುದು. ವಿಷಯ ಪ್ರಕಾಶನವೇಳೆಯಲ್ಲಿಯೇ ಸ್ವಯಂಪ್ರಕಾಶವಾಗುವುದೆಂದು ಒಂದು ನಿಯಮವು. ಸ್ವಾಶ್ರಯವಾದ ಆತ್ಮನಿಗೇ ಸ್ವಯಂಪ್ರಕಾಶವಾಗುವುದೆಂದು ಮತ್ತೊಂದು ನಿಯಮವು. "ಜ್ಞಾನವು ಸ್ವಯಂಪ್ರಕಾಶವೆನಿಸಿಕೊಳ್ಳುವುದಾದರೆ ಮೂರ್ಛಾ, ಪ್ರಳಯ ಸುಷುಪ್ತ್ಯವಸ್ಥೆಗಳಲ್ಲಿಯೂ ಜ್ಞಾನವು ಪ್ರಕಾಶಿಸಬೇಕು" ಎಂಬ ಆಶಂಕೆ ಮೊದಲನೆಯ ನಿಯಮದಿಂದ ಪರಿಹರಿಸಲ್ಪಡುವುದು. "ಜ್ಞಾನವು ಸ್ವಯಂಪ್ರಕಾಶವೆನಿಸಿಕೊಳ್ಳುವುದಾದರೆ ಚೈತ್ರನ ಜ್ಞಾನವು ಮೈತ್ರನಿಗೂ ಪ್ರಕಾಶಿಸಬೇಕು." ಎಂಬ ಆಶಂಕೆ ಎರಡನೆಯ ನಿಯಮದಿಂದ ಪರಿಹರಿಸಲ್ಪಡುವುದು.

## ೮೦೬. ಅತೀತಜ್ಞಾನಾನ್ಯದೀಯಜ್ಞಾನಯೋಃ ಸ್ವಯಂಪ್ರಕಾಶತಾಭಾವೇಪಿ ಸ್ಮರಣಾನುಮಾನಗಮ್ಯತ್ವಾದ್ವ್ಯವಹಾರ್ಯತ್ವೋಪಪತ್ತಿಃ.

ಕಾಲಾಂತರದಲ್ಲಿ ತನಗೆ ಉಂಟಾಗಿದ್ದ ಜ್ಞಾನಗಳು ಸ್ಮರಣರೂಪವಾದ ತನ್ನ ಜ್ಞಾನಾಂತರಕ್ಕೆ ಗೋಚರಗಳಾಗುವುದರಿಂದ ಆಗ ಅಂಥ ಜ್ಞಾನಗಳಿಗೆ ಸ್ವಯಂಪ್ರಕಾಶತ್ವವಿಲ್ಲ. ಆದರೂ ಸ್ಮರಣಕ್ಕೆ ಗೋಚರಗಳಾಗುವುದರಿಂದಲೇ ಅತಿಕ್ರಾಂತಗಳಾದ ಜ್ಞಾನಗಳ ವಿಷಯದಲ್ಲಿ ವ್ಯವಹಾರಾದಿಗಳನ್ನು ನಡಸಲು ಯಾವ ಅಭ್ಯಂತರವೂ ಇಲ್ಲ. ಚೈತ್ರನ ಜ್ಞಾನವು ಮೈತ್ರನಿಗೆ ಅನುಮಾನಪ್ರಮಾಣ ಗಮ್ಯವಾದುದರಿಂದ ಅನ್ಯದೀಯಜ್ಞಾನವಿಷಯದಲ್ಲಿ ಅನ್ಯರು ವ್ಯವಹಾರಾದಿಗಳನ್ನು ನಡಸಲೂ ಯಾವ ಅಭ್ಯಂತರವೂ ಇಲ್ಲ.

## ೮೦೭. ಉಕ್ತನಿಯಮದ್ವಯಸ್ಯ ಬದ್ಧಚೇತನಜ್ಞಾನೈಕ ವಿಷಯತ್ವಂ.

ಕೆಳಗೆ ಹೇಳಿದ ಈ ನಿಯಮಗಳೆರಡೂ ಸಂಸಾರಿಗಳೆನಿಸಿಕೊಂಡ ಬದ್ಧ ಚೇತನರ ಜ್ಞಾನವಿಷಯದಲ್ಲಿ ಪ್ರವರ್ತಿಸುವುವಲ್ಲದೆ ಮುಕ್ತನಿತ್ಯೇಶ್ವರರ ಜ್ಞಾನಗಳನ್ನು ಆಕ್ರಮಿಸಲಾರವು. ಏತಕ್ಕೆಂದರೆ—ನಿರತಿಶಯವಾದ ಸರ್ವಜ್ಞತ್ವವನ್ನು ಅವರು ಪಡೆದಿರುವರು. ಆದುದರಿಂದಲೇ ಭೂತಭವಿಷ್ಯದ್ವರ್ತಮಾನಕಾಲಗಳಲ್ಲಿ

ತಮಗೆ ಉಂಟಾಗುವ ಜ್ಞಾನಗಳೂ, ಹಾಗೆಯೇ ಕಾಲತ್ರಯದಲ್ಲಿಯೂ ಅನ್ಯರಿಗೆ ಉಂಟಾಗುವ ಜ್ಞಾನಗಳೂ, ಅಂತು ನಿಖಿಲಜ್ಞಾನಗಳೂ ಅವರ ಪ್ರತ್ಯಕ್ಷಕ್ಕೆ ಗೋಚರಗಳಾಗಿರುವುವು.

## ೮೦೮. ಸ್ವಯಂಪ್ರಕಾಶತ್ವಾನಭ್ಯುಪಗಂತೃನೈಯಾಯಿಕಮತೇ ಜ್ಞಾನಸ್ಯ ಮಾನಸಪ್ರತ್ಯಕ್ಷಗಮ್ಯತ್ವೋಪಪಾದನಂ.

ಹೀಗೆ ವೇದಾಂತಿಗಳ ಮತದಲ್ಲಿ—ಜ್ಞಾನಕ್ಕೆ ವಿಷಯಪ್ರಕಾಶನವೇಳೆಯಲ್ಲಿ ಸಿದ್ಧವಾಗಿರುವ ಸ್ವಯಂಪ್ರಕಾಶತ್ವವನ್ನು ನೈಯಾಯಿಕರೂ ಮೀಮಾಂಸಕರೂ ಒಪ್ಪುವುದಿಲ್ಲ. "ನಾನು ಇದನ್ನು ತಿಳಿಯುತ್ತೇನೆ' ಎಂಬ ಪ್ರತ್ಯಕ್ಷದಲ್ಲಿ ಜ್ಞಾನವು ವಿಷಯವಾಗಿರುವುದೆಂಬುದರಲ್ಲಿ ವಿವಾದವಿಲ್ಲ; ಜ್ಞಾನದಲ್ಲಿರುವ ಅಂಥ ವಿಷಯತ್ವಕ್ಕೆ ನಿರೂಪಕವಾದ ಜ್ಞಾನವು ಯಾವುದೆಂದು ವಿಚಾರವುಂಟಾಗುವುದು.

ಆಗ ನೈಯಾಯಿಕರು ಹೇಳುವುದೇನೆಂದರೆ—

ಆ ಆ ಪದಾರ್ಥಗಳ ಜ್ಞಾನವು ಇಂದ್ರಿಯದಿಂದಾಗಲಿ, ಲಿಂಗದಿಂದಾಗಲಿ, ಉಪಮಾನದಿಂದಾಗಲಿ, ಶಬ್ದದಿಂದಾಗಲಿ ಉಂಟಾಗುವುದು. ಇಂಥ ಜ್ಞಾನದಲ್ಲಿ ಆ ಆ ಪದಾರ್ಥಗಳೇ ವಿಷಯಗಳಾಗಿರುವುವು. ಅಂಥ ಪದಾರ್ಥಗಳಲ್ಲಿರುವ ವಿಷಯತ್ವಕ್ಕೆ ಆ ಜ್ಞಾನವೇ ನಿರೂಪಕವಾಗಿರುವುದು.

ಇಂಥ ಜ್ಞಾನವುಂಟಾದಮೇಲೆ—"ನಾನು ಇದನ್ನು ತಿಳಿಯುತ್ತೇನೆ" ಎಂಬುದಾಗಿ ಒಂದಾನೊಂದು ಮಾನಸಪ್ರತ್ಯಕ್ಷರೂಪವಾದ ಜ್ಞಾನವುಂಟಾಗುವುದು. ಇಂಥ ಮಾನಸಪ್ರತ್ಯಕ್ಷಜ್ಞಾನಕ್ಕೆ ಪೂರ್ವಜ್ಞಾನವು ವಿಷಯವಾಗುವುದು.

ಹೇಗೆಂದರೆ—"ಯಾವ ಗುಣವು ಕ್ಷಣಿಕವಾಗಿಯೂ, ಆತ್ಮನ ವಿಶೇಷಗುಣವಾಗಿಯೂ, ಇರುವುದೋ ಅದು ಮಾನಸಪ್ರತ್ಯಕ್ಷಗ್ರಾಹ್ಯವಾಗಿರುವುದು. ಸುಖದುಃಖಪ್ರಯತ್ನಗಳು ಕ್ಷಣಿಕಗಳಾಗಿಯೂ, ಆತ್ಮನಲ್ಲಿರುವ ವಿಶೇಷಗುಣಗಳಾಗಿಯೂ, ಇರುವುದರಿಂದ ಮಾನಸಪ್ರತ್ಯಕ್ಷಗ್ರಾಹ್ಯಗಳಾಗಿಯೇ ಇರುವುವಷ್ಟೆ?" ಈ ದೃಷ್ಟಾಂತದಿಂದ—ಕ್ಷಣಿಕತ್ವವಿಶಿಷ್ಟವಾದ ಆತ್ಮವಿಶೇಷಗುಣತ್ವಕ್ಕೂ ಮಾನಸಪ್ರತ್ಯಕ್ಷಗ್ರಾಹ್ಯತ್ವಕ್ಕೂ ವ್ಯಾಪ್ಯವ್ಯಾಪಕಭಾವವುಂಟೆಂದು ಫಲಿತವಾಗುವುದು.

ವ್ಯಾಪ್ಯವು ಸಾಧನವೆಂಬುದಾಗಿಯೂ, ವ್ಯಾಪಕವು ಸಾಧ್ಯವೆಂಬುದಾಗಿಯೂ, ವ್ಯಾಪ್ಯವಿದ್ದರೆ ಅಲ್ಲಿ ವ್ಯಾಪಕವೂ ಇದ್ದೇ ಇರಬೇಕೆಂಬುದಾಗಿಯೂ, ಈ ಎರಡೂ ಯಾವುದರಲ್ಲಿ ಸಂಶಯವಿಲ್ಲದೆ ನಿಶ್ಚಿತಗಳಾಗಿರುವುವೋ ಅದು

ದೃಷ್ಟಾಂತವೆಂಬುದಾಗಿಯೂ, ಯಾವುದರಲ್ಲಿ ಸಾಧನವು ನಿಶ್ಚಿತವಾಗಿಯೂ ಸಾಧ್ಯವು ಸಂದಿಗ್ಧವಾಗಿಯೂ ಇರುವುದೋ ಅದು ಪಕ್ಷವೆಂಬುದಾಗಿಯೂ, ಲೋಕಾನುಭವವೂ ಶಾಸ್ತ್ರಮರ್ಯಾದೆಯೂ ಉಂಟು. ಸುಖದುಃಖಪ್ರಯತ್ನಗಳೆಂಬ ದೃಷ್ಟಾಂತಗಳಲ್ಲಿ ಸಾಧನ-ಸಾಧ್ಯಗಳೆರಡೂ ನಿಶ್ಚಿತಗಳಾಗಿರುವುವೆಂಬುದರಲ್ಲಿ ವಿವಾದವಿಲ್ಲ. ಪ್ರಕೃತದಲ್ಲಿ ಜ್ಞಾನವೆಂಬ ಪಕ್ಷದೊಳಗೆ ಕ್ಷಣಿಕತ್ವವಿಶಿಷ್ಟವಾದ ಆತ್ಮವಿಶೇಷಗುಣತ್ವವೆಂಬ ಸಾಧನವು ನಿಶ್ಚಿತವಾಗಿರುವುದರಿಂದ ಮಾನಸಪ್ರತ್ಯಕ್ಷಗೋಚರತ್ವವೆಂಬ ಸಾಧ್ಯವನ್ನು ಇದರಲ್ಲಿ ಸಾಧನಬಲದಿಂದ ಸಾಧಿಸುವೆವು.

ಈ ಹೇತುಶರೀರದಲ್ಲಿ—ಕ್ಷಣಿಕತ್ವವೆಂಬ ಒಂದು ವಿಶೇಷಣವೂ, ಆತ್ಮವಿಶೇಷಗುಣತ್ವವೆಂಬ ಒಂದು ವಿಶೇಷ್ಯವೂ ಇರುವುವು. ಹೀಗಿರುವಲ್ಲಿ ವಿಶೇಷಣದಳವನ್ನು ಈ ಹೇತುಶರೀರದಲ್ಲಿ ಸೇರಿಸದಿದ್ದರೆ—ಆತ್ಮವಿಶೇಷಗುಣವು ಯಾವುದೋ ಅದು ಮಾನಸಪ್ರತ್ಯಕ್ಷಗೋಚರವಾಗಿರಬೇಕೆಂದು ಅರ್ಥವಾಗುವುದು. ಆಗ ಧರ್ಮಾಧರ್ಮಗಳು ಆತ್ಮವಿಶೇಷಗುಣಗಳಾಗಿದ್ದರೂ ಅವು ಶಬ್ದಪ್ರಮಾಣಗಮ್ಯಗಳಾಗಿರುವುವಲ್ಲದೆ ಮಾನಸಪ್ರತ್ಯಕ್ಷಗೋಚರಗಳಾಗಿಲ್ಲವಾದುದರಿಂದ ಸಾಧನವು ಸಾಧ್ಯವನ್ನು ಸಾಧಿಸಲಿಲ್ಲವಾದಪ್ರಯುಕ್ತ ವ್ಯಭಿಚರಿತವಾಗುವುದು. ಇದಕ್ಕಾಗಿ ಕ್ಷಣಿಕತ್ವವಿಶೇಷಣವನ್ನು ಸೇರಿಸಬೇಕು. ಆತ್ಮನಲ್ಲಿರುವ ಧರ್ಮಾಧರ್ಮಗಳು ಆತ್ಮನಿಗೆ ಫಲವುಂಟಾಗುವವರೆಗೂ ಸ್ಥಿರಗಳಾಗಿರುವುವಲ್ಲದೆ ಕ್ಷಣಿಕಗಳಲ್ಲ ಆದುದರಿಂದ ಧರ್ಮಾಧರ್ಮಗಳಲ್ಲಿ ಆತ್ಮವಿಶೇಷಗುಣತ್ವಮಾತ್ರವಿದ್ದರೂ ಕ್ಷಣಿಕತ್ವವಿಶಿಷ್ಟವಾದ ಆತ್ಮವಿಶೇಷಗುಣತ್ವವೆಂಬ ಹೇತುವೇ ಅವುಗಳಲ್ಲಿ ಇಲ್ಲವಾದುದರಿಂದ ಮಾನಸಪ್ರತ್ಯಕ್ಷಗೋಚರತ್ವವೆಂಬ ಸಾಧ್ಯವೂ ಅವುಗಳಲ್ಲಿ ಇಲ್ಲದಿದ್ದರೂ ಹಾನಿಯಿಲ್ಲ.

ಮತ್ತು ಈ ಹೇತುಶರೀರದಲ್ಲಿ ಆತ್ಮಪದವನ್ನು ಸೇರಿಸದಿದ್ದರೆ ಯಾವುದು ಕ್ಷಣಿಕವಿಶೇಷಗುಣವಾಗಿರುವುದೋ ಅದು ಮಾನಸಪ್ರತ್ಯಕ್ಷಗೋಚರವಾಗಿರಬೇಕೆಂದು ಅಭಿಪ್ರಾಯವಾಗುವುದು. ಆಗ ಶಬ್ದವೆಂಬುದು ಕ್ಷಣಿಕವಾಗಿಯೂ ಆಕಾಶದಲ್ಲಿರುವ ವಿಶೇಷಗುಣವಾಗಿಯೂ ಇದ್ದರೂ ಅದು ಮಾನಸಪ್ರತ್ಯಕ್ಷಗೋಚರವಲ್ಲವಾದುದರಿಂದ ಹೇತು ಅದರಲ್ಲಿ ಸಾಧ್ಯವನ್ನು ಸಾಧಿಸಲಿಲ್ಲವಾದಪ್ರಯುಕ್ತ ವ್ಯಭಿಚರಿತವಾಗುವುದು. ಶಬ್ದವು ಬಾಹ್ಯಪದಾರ್ಥವಾದುದರಿಂದ ಬಹಿರಿಂದ್ರಿಯವಾದ ಶ್ರೋತ್ರೇಂದ್ರಿಯಕ್ಕೆ ಗ್ರಾಹ್ಯವಾಗಿರುವುದರಿಂದಲೂ, ಆಂತರವಾದ ಮನಇಂದ್ರಿಯಕ್ಕೆ ಬಾಹ್ಯಪದಾರ್ಥದ ವಿಷಯದಲ್ಲಿ ಬಹಿರಿಂದ್ರಿಯದ ಸಹಾಯವಿಲ್ಲದೆ ಸ್ವಾತಂತ್ರ್ಯದಿಂದ ಪ್ರವರ್ತಿಸಲು ಸಾಮರ್ಥ್ಯವಿಲ್ಲವಾದುದರಿಂದಲೂ, ಶಬ್ದಕ್ಕೆ ಮಾನಸ

ಪ್ರತ್ಯಕ್ಷಗೋಚರತ್ವವಿಲ್ಲವಷ್ಟೆ? ಇದಕ್ಕಾಗಿ ಆತ್ಮಪದವನ್ನು ಸೇರಿಸಬೇಕು. ಶಬ್ದವು ಆಕಾಶದಲ್ಲಿರುವ, ಕ್ಷಣಿಕವಿಶೇಷಗುಣವಾಗಿದ್ದರೂ ಆತ್ಮನಲ್ಲಿರುವ ಕ್ಷಣಿಕ ವಿಶೇಷಗುಣವಲ್ಲವಾದುದರಿಂದ ಕ್ಷಣಿಕತ್ವವಿಶಿಷ್ಟವಾದ ಆತ್ಮವಿಶೇಷಗುಣತ್ವವೆಂಬ ಹೇತುವೇ ಅದರಲ್ಲಿ ಇಲ್ಲವಾದಪ್ರಯುಕ್ತ ಮಾನಸಪ್ರತ್ಯಕ್ಷಗೋಚರತ್ವವೆಂಬ ಸಾಧ್ಯವೂ ಅದರಲ್ಲಿ ಇಲ್ಲದಿದ್ದರೂ ಹಾನಿಯಿಲ್ಲ.

ಮತ್ತು ಈ ಹೇತುಶರೀರದಲ್ಲಿ ವಿಶೇಷವೆಂಬ ಪದವನ್ನು ಸೇರಿಸದಿದ್ದರೆ ಯಾವುದು ಕ್ಷಣಿಕವಾದ ಆತ್ಮಗುಣವಾಗಿರುವುದೋ ಅದು ಮಾನಸಪ್ರತ್ಯಕ್ಷ ಗೋಚರವಾಗಿರಬೇಕೆಂದು ಅಭಿಪ್ರಾಯವಾಗುವುದು. ಆಗ ಆತ್ಮನಿಗೆ ಮನಸ್ಸಿನೊಡನೆ ಉಂಟಾಗುವ ಸಂಯೋಗವು ಕ್ಷಣಿಕವಾದ ಆತ್ಮಗುಣವಾಗಿದ್ದರೂ ಕಾರ್ಯವಶದಿಂದ ಅದು ಅನುಮೇಯವಾಗಿರುವುದಲ್ಲದೆ ಮಾನಸಪ್ರತ್ಯಕ್ಷಗೋಚರವಲ್ಲವಾದುದರಿಂದ ಹೇತು ಅದರಲ್ಲಿ ಸಾಧ್ಯವನ್ನು ಸಾಧಿಸಲಿಲ್ಲವಾದಪ್ರಯುಕ್ತ ವ್ಯಭಿಚರಿತವಾಗುವುದು. ಇದಕ್ಕಾಗಿ 'ವಿಶೇಷ' ವೆಂಬ ಪದವನ್ನು ಸೇರಿಸಬೇಕು. ಆತ್ಮಮನಸ್ಸಂಯೋಗವು ಕ್ಷಣಿಕವಾದ ಆತ್ಮಗುಣವಾಗಿದ್ದರೂ ಆತ್ಮನ ವಿಶೇಷ ಗುಣವಲ್ಲವಾದುದರಿಂದ ಕ್ಷಣಿಕತ್ವವಿಶಿಷ್ಟವಾದ ಆತ್ಮವಿಶೇಷಗುಣತ್ವವೆಂಬ ಹೇತುವೇ ಅದರಲ್ಲಿ ಇಲ್ಲವಾದಪ್ರಯುಕ್ತ ಮಾನಸಪ್ರತ್ಯಕ್ಷಗೋಚರತ್ವವೆಂಬ ಸಾಧ್ಯವೂ ಅದರಲ್ಲಿ ಇಲ್ಲದಿದ್ದರೂ ಹಾನಿಯಿಲ್ಲ.

ಉಕ್ತವಾದ ಇಂಥ ಅನುಮಾನದಿಂದ ಪೂರ್ವೋತ್ಪನ್ನವಾದ ಜ್ಞಾನವು "ನಾನು ಇದನ್ನು ತಿಳಿಯುತ್ತೇನೆ" ಎಂಬ ಅನಂತರೋತ್ಪನ್ನವಾದ ಮಾನಸ ಪ್ರತ್ಯಕ್ಷಜ್ಞಾನಕ್ಕೆ ಗೋಚರವಾಗುವುದೆಂದು ತಿಳಿದುಬರುವುದರಿಂದ ಪೂರ್ವ ಜ್ಞಾನದಲ್ಲಿರುವ ವಿಷಯತ್ವಕ್ಕೆ ಮಾನಸಪ್ರತ್ಯಕ್ಷಜ್ಞಾನವೇ ನಿರೂಪಕವಾದ ಪ್ರಯುಕ್ತ ಜ್ಞಾನವು ಜ್ಞಾನಾಂತರಕ್ಕೆ ಗೋಚರವಾಯಿತಲ್ಲದೆ ಸ್ವಯಂಪ್ರಕಾಶವಾಗಲಿಲ್ಲ" ಇದು ನೈಯಾಯಿಕರ ಮತವಾಗಿರುವುದು.

## ೬೯ ಮೀಮಾಂಸಕಮತೇ ಜ್ಞಾನಸ್ಯ ವಿಷಯಗತಾಪರೋಕ್ಷತ್ವ ಪರೋಕ್ಷತ್ವರೂಪಫಲಾನುಮೇಯತ್ವೋಪಪಾದನಂ

ಮೀಮಾಂಸಕರು ಹೇಳುವುದೇನೆಂದರೆ—"ಜ್ಞಾನಕ್ಕೆ ಗೋಚರವಾದ ಪದಾರ್ಥದಲ್ಲಿ ಜ್ಞಾನದಿಂದ ಒಂದಾನೊಂದು ಫಲವುಂಟಾಗುವುದು. ಜ್ಞಾನಜನ್ಯವಾದ ಫಲಕ್ಕೆ ಭಾಗಿಯಾಗಿರುವಿಕೆಯೇ ಜ್ಞಾನವಿಷಯತ್ವವೆನಿಸಿಕೊಳ್ಳುವುದು. ಏತಕ್ಕೆಂದರೆ "ತಂಡುಲಂ ಪಚತಿ" ಎಂಬ ಸ್ಥಳದಲ್ಲಿ ಸಕರ್ಮಕವಾದ ಪಾಕ

ಕ್ರಿಯೆ ತನಗೆ ಕರ್ಮವಾದ ತಂಡುಲದಲ್ಲಿ ಫಲವಿಶೇಷವನ್ನು ಉಂಟುಮಾಡು ವುದೆಂದು ಹೇಗೆ ತಿಳಿದುಬರುವುದೋ ಅದರಂತೆ "ತಿಳಿಯುತ್ತೇನೆ" ಎಂಬ ಜ್ಞಾನಕ್ರಿಯೆಯೂ ಸಕರ್ಮಕವಾದುದರಿಂದ ತನ್ನ ಕರ್ಮಕಾರಕದಲ್ಲಿ ಒಂದಾ ನೊಂದು ಫಲವಿಶೇಷವನ್ನು ಉಂಟುಮಾಡುವುದು. ಇಂಥ ಫಲವು ಅಪರೋಕ್ಷತ್ವ ವೆಂದೂ ಪರೋಕ್ಷತ್ವವೆಂದೂ ಎರಡುವಿಧವಾಗುವುದು. ಜ್ಞಾನವು ಇಂದ್ರಿಯದಿಂದ ಉಂಟಾದುದಾಗಿದ್ದರೆ ಆಗ ಅದಕ್ಕೆ ವಿಷಯವಾದ ವಸ್ತುವಿನಲ್ಲಿ ಅಪರೋಕ್ಷತ್ವವೆಂಬ ಫಲವು ಉಂಟಾಗುವುದು. ಜ್ಞಾನವು ಇಂದ್ರಿಯಭಿನ್ನವಾದ ಸಾಮಗ್ರಿಯಿಂದ ಉಂಟಾಗಿದ್ದರೆ ಆಗ ಅದಕ್ಕೆ ವಿಷಯವಾದ ವಸ್ತುವಿನಲ್ಲಿ ಪರೋಕ್ಷತ್ವವೆಂಬ ಫಲವು ಉಂಟಾಗುವುದು. ಇಂಥ ಫಲವು ವಿಷಯಗಳಲ್ಲಿ ನಿತ್ಯವಾಗಿರದೆ ಕಾದಾಚಿತ್ಕವಾ ದುದರಿಂದಲೇ ಕಾರಣವಿಶೇಷದಿಂದ ಜನ್ಯವಾಗಿರುವುದೆಂದು ಸಿದ್ಧವಾಗಿರುವುದು. ಅಂಥ ಕಾರಣವಿಶೇಷವೇ ಜ್ಞಾನವೆನಿಸಿಕೊಳ್ಳುವುದು. ಅಂತು ಕಾರ್ಯಭೂತವಾದ ಈ ಫಲವು ಕಾರಣಭೂತವಾದ ಜ್ಞಾನದ ಅನುಮಾನಕ್ಕೆ ಗಮಕವಾಗುವುದಾದುದ ರಿಂದ ಜ್ಞಾನವು ಸ್ವಕಾರ್ಯವಾದ ಫಲದಿಂದ ಅನುಮೇಯವಾಗಿರುವುದಲ್ಲದೆ ಸ್ವಯಂ ಪ್ರಕಾಶವಲ್ಲ.

## ೮೧೦ ಪುನರ್ಮೀಮಾಂಸಕಮತೇ ಜ್ಞಾನಸ್ಯ ಸಂಬಂಧಾನು ಮೇಯತ್ವರೂಪಪಕ್ಷಾಂತರೋಪಪಾದನಂ

ಹೀಗೆ ಜ್ಞಾನಕ್ಕೆ ಜ್ಞಾನಜನ್ಯಫಲಾನುಮೇಯತ್ವಪಕ್ಷವೊಂದನ್ನು ತೋರಿಸಿ ಅದೇ ಮೀಮಾಂಸಕರು ಇನ್ನೊಂದು ಪಕ್ಷವನ್ನೂ ತೋರಿಸುವರು. ಹೇಗೆಂದರೆ "ನಾನು ಇದನ್ನು ತಿಳಿಯುತ್ತೇನೆ" ಎಂಬ ಸ್ಥಳದಲ್ಲಿ ನಾನು ಎನಿಸಿಕೊಳ್ಳುವ ಕರ್ತೃಕಾರಕವಾದ ಆತ್ಮನಿಗೂ ಇದನ್ನು ಎಂಬ ಕರ್ಮಕಾರಕವಾದ ವಿಷಯಕ್ಕೂ ಒಂದಾನೊಂದು ಸಂಬಂಧವು ಈಗ ಉಂಟಾಗಿರುವುದೆಂದು ಮಾನಸಪ್ರತ್ಯಕ್ಷದಿಂದ ಅವಗತವಾಗುವುದು. ಈ ಸಂಬಂಧದ ಸ್ವರೂಪವೆಂಥದೆಂದು ವಿಚಾರಮಾಡಿನೋಡಿ ದರೆ ವ್ಯಾಪ್ತೃವ್ಯಾಪ್ಯತ್ವರೂಪವೆಂದು ಕೊನೆಗೆ ನಿಷ್ಕರ್ಷೆಯಾಗುವುದು. ಏತಕ್ಕೆಂ ದರೆ—"ನಾನು ಇದನ್ನು ತಿಳಿಯುತ್ತೇನೆ" ಎಂಬುದರಿಂದ—"ನಾನು ಇದನ್ನು ವ್ಯಾಪಿಸುತ್ತೇನೆ" ಎಂಬ ಪ್ರತೀತಿ ಸರ್ವರಿಗೂ ಉಂಟಾಗುವುದಷ್ಟೆ? ಲೋಕದಲ್ಲಿ ಎರಡುಪದಾರ್ಥಗಳಿಗೆ ಕಾದಾಚಿತ್ಕವಾದ ಸಂಬಂಧವು ಉಂಟಾಗುವು ದಾಗಿದ್ದರೆ ಆಗ ಯಾವುದಾದರೊಂದು ಕ್ರಿಯೆ ದ್ವಾರಭೂತವಾಗಿ ಇದ್ದೇ ಇರಬೇ ಕಲ್ಲದೆ ಕ್ರಿಯೆಯನ್ನು ದ್ವಾರಪಡಿಸಿಕೊಳ್ಳದೆ ಸಂಬಂಧವು ಉಂಟಾಗಲಾರದು.

ಅದರಂತೆ ಪ್ರಕೃತದಲ್ಲಿಯೂ ಶರೀರದ ಒಳಗಿರುವ ಆತ್ಮನಿಗೆ ಶರೀರದ ಹೊರಗಿರುವ ವಿಷಯುಗಳೊಡನೆ ವ್ಯಾಪ್ತ್ಯವ್ಯಾಪ್ಯತ್ವರೂಪವಾದ ಸಂಬಂಧವು ಉಂಟಾಗಬೇಕಾದರೆ ದ್ವಾರಭೂತವಾದ ಕ್ರಿಯೆಯೊಂದು ಬೇಕಾಗಿರುವುದು. ಅಂಥ ಕ್ರಿಯೆ ಪ್ರಕೃತದಲ್ಲಿ ಜ್ಞಾನವೆಂಬುದೇ ಆಗಿರುವುದು.

ಹೀಗೆ ಜ್ಞಾನಕ್ರಿಯೆಯನ್ನು ದ್ವಾರಪಡಿಸಿಕೊಂಡು ಆತ್ಮನಿಗೆ ವಿಷಯಗಳೊಡನೆ ಉಂಟಾಗಿರುವಂಥದಾಗಿಯೂ, ಮಾನಸಪ್ರತ್ಯಕ್ಷಗಮ್ಯವಾಗಿಯೂ ಇರುವ ವ್ಯಾಪ್ತ್ಯವ್ಯಾಪ್ಯತ್ವರೂಪವಾದ ಸಂಬಂಧವು ಇಷ್ಟುಹೊತ್ತೂ ಇಲ್ಲದೆ ಈಗ ಕಾದಾಚಿತ್ಕವಾಗಿ ಉಂಟಾದುದರಿಂದ ಆಗಂತುಕವಾದ ಯಾವುದೋ ಒಂದು ಕಾರಣವು ಇದಕ್ಕೆ ಇದ್ದೇ ಇರಬೇಕೆಂದು ನಿಶ್ಚಿತವಾಗುವುದು. ಆಗಂತುಕವಾದ ಕಾರಣವಿಲ್ಲದೆ ಈ ಸಂಬಂಧವು ಈಗ ಹುಟ್ಟಲು ಅವಕಾಶವಿಲ್ಲವಷ್ಟೆ? ಅಂಥ ಕಾರಣವನ್ನೇ ಲೋಕದಲ್ಲಿ ಜ್ಞಾನವೆಂದು ವ್ಯವಹರಿಸುವರು. ಆದುದರಿಂದ ಕಾರ್ಯಭೂತವಾದ ಈ ಸಂಬಂಧವು ಕಾರಣಭೂತವಾದ ಜ್ಞಾನದ ಅನುಮಾನಕ್ಕೆ ಗಮಕವಾದುದರಿಂದ ಜ್ಞಾನವು ಸ್ವಕಾರ್ಯವಾದ ಉಕ್ತಸಂಬಂಧದಿಂದ ಅನುಮೇಯವಾಗಿರುವುದಲ್ಲದೆ ಸ್ವಯಂಪ್ರಕಾಶವಲ್ಲ.

ಯಾರಾದರೆ ಜ್ಞಾನಕ್ಕೆ ಸ್ವಯಂಪ್ರಕಾಶತ್ವವನ್ನು ಒಪ್ಪುವವರಾಗಿರುವರೋ ಅವರೂ ಸಹ ಮಾನಸಪ್ರತ್ಯಕ್ಷಗಮ್ಯವಾದ ಈ ಸಂಬಂಧವನ್ನು ಒಪ್ಪಲೇಬೇಕಾಗಿರುವುದು. ಹಾಗೆ ಒಪ್ಪದಿದ್ದರೆ "**ನನ್ನಿಂದ ಈ ಪದಾರ್ಥವು ತಿಳಿಯಲ್ಪಟ್ಟಿತು**" ಎಂದು ಜ್ಞಾನಕ್ಕೆ ಜ್ಞೇಯಪದಾರ್ಥದೊಡನೆ ಸಂಬಂಧವನ್ನಾಗಲಿ, ಜ್ಞಾತಾವಿಗೆ ಜ್ಞೇಯಪದಾರ್ಥದೊಡನೆ ಸಂಬಂಧವನ್ನಾಗಲಿ ವ್ಯವಹರಿಸಲಾಗುವುದಿಲ್ಲ. ಎಷ್ಟುಮಾತ್ರವು ಅವಗತವಾಗಿರುವುದೋ ಅಷ್ಟುಮಾತ್ರವನ್ನಲ್ಲವೆ ವ್ಯವಹರಿಸಬಹುದು? ಸ್ವಯಂಪ್ರಕಾಶತ್ವವಾದಿಗಳ ಮತದಲ್ಲಿ ಜ್ಞಾನವು ಸ್ವಯಂಪ್ರಕಾಶವಾದುದರಿಂದ ಜ್ಞಾನವ್ಯವಹಾರವನ್ನು ಮಾಡಬಹುದು; ಜ್ಞಾನವಶದಿಂದ ವಿಷಯವ್ಯವಹಾರವನ್ನು ಮಾಡಬಹುದು: ಆದರೆ ವಿಷಯಕ್ಕೂ ಜ್ಞಾನಕ್ಕೂ ಇರುವ ಸಂಬಂಧವು ಸ್ವಯಂಪ್ರಕಾಶವಲ್ಲವಾದುದರಿಂದ ಈ ಸಂಬಂಧವನ್ನು ಹೇಗೆ ವ್ಯವಹರಿಸಲಾದೀತು? ಸಂಬಂಧವೂ ಸಹ ಅದೇ ಜ್ಞಾನದಿಂದ ಪ್ರಕಾಶಪಡಿಸಲ್ಪಡುವುದೆಂದು ಹೇಳಲಾಗುವುದಿಲ್ಲ. ಆ ಜ್ಞಾನದ ಉತ್ಪತ್ತಿಕಾಲದಲ್ಲಿ ಸಂಬಂಧವು ಸಿದ್ಧವಾಗಿಲ್ಲವಷ್ಟೆ? ಸಂಬಂಧಿಗಳಾದ ಎರಡು ಪದಾರ್ಥಗಳನ್ನು ತಿಳಿದುಕೊಂಡರಲ್ಲದೆ ಸಂಬಂಧವನ್ನು ತಿಳಿದುಕೊಳ್ಳಲಾಗುವುದಿಲ್ಲ. ಜ್ಞಾನಕ್ಕೆ ವಿಷಯದೊಡನೆ ಉಂಟಾ

ಗುನ ಸಂಬಂಧವು ಪ್ರಕಾಶಕತ್ವವೆಂಬ ಸಂಬಂಧವೇ ಅಲ್ಲದೆ ಮತ್ತೊಂದೂ ಸಂಭವಿಸುವುದಿಲ್ಲ. ಆದಕಾರಣ ಮೊದಲು ಜ್ಞಾನವುಂಟಾಗಿ ಅದರಿಂದ ವಿಷಯವೂ ಪ್ರಕಾಶಪಡಿಸಲ್ಪಟ್ಟರೆ ಈ ಎರಡು ಸಂಬಂಧಿಗಳಿಗೆ ಉಂಟಾಗಿರುವ ಸಂಬಂಧವನ್ನು ಅನಂತರದಲ್ಲಿ ತಿಳಿದುಕೊಳ್ಳಬಹುದಲ್ಲದೆ ಸಂಬಂಧಿಯಾದ ಜ್ಞಾನದ ಉತ್ಪತ್ತಿಕಾಲದಲ್ಲಿಯೇ ಅದೇ ಜ್ಞಾನವು ಸಂಬಂಧವನ್ನೂ ಪ್ರಕಾಶಪಡಿಸುತ್ತದೆಯೆಂದು ಹೇಳಲಾಗುವುದಿಲ್ಲ. ಹಾಗೆ ಹೇಳುವುದಾದರೆ ವಿರಮ್ಯವ್ಯಾಪಾರವೆಂಬ ಒಂದಾನೊಂದು ಪ್ರಬಲವಾದ ದೋಷವುಂಟಾಗುವುದು. ಎಂದರೆ ಹುಟ್ಟುವ ಜ್ಞಾನವು ಮೊದಲು ತನ್ನ ಸ್ವರೂಪವನ್ನೂ ವಿಷಯದ ಸ್ವರೂಪವನ್ನೂ ಪ್ರಕಾಶಪಡಿಸುತ್ತದೆಯೆಂದೂ, ಅನಂತರದಲ್ಲಿ ಪುನಃ ಅದೇ ಜ್ಞಾನವು ಆ ಎರಡಕ್ಕೂ ಇರುವ ಸಂಬಂಧವನ್ನೂ ಪ್ರಕಾಶಪಡಿಸುತ್ತದೆಯೆಂದೂ ಹೇಳಬೇಕಾಗುವುದು. ಜ್ಞಾನವು ಕ್ಷಣಿಕವಾದುದರಿಂದ ಈ ಎರಡು ಕೆಲಸಗಳೂ ಒಂದು ಜ್ಞಾನದಿಂದ ಆಗಲಾರವು. ಜ್ಞಾನದಂತೆ ಸಂಬಂಧವೂ ಸ್ವಯಂಪ್ರಕಾಶವೆಂದು ಹೇಳುವುದಾದರೆ ಇದು ಸಾಹಸೋಕ್ತಿಯಾಗಿರುವುದಲ್ಲದೆ ಇದರಲ್ಲಿ ಪ್ರಮಾಣವೇನೂ ಇಲ್ಲ. ಆದಕಾರಣ ಆತ್ಮನಿಗೆ ವಿಷಯದೊಡನೆ ಈಗ ಉಂಟಾಗಿರುವ ವ್ಯಾಪ್ತೃವ್ಯಾಪ್ಯತ್ವವೆಂಬ ಸಂಬಂಧವು ಮಾನಸಪ್ರತ್ಯಕ್ಷಗಮ್ಯವಾಗಿ ಸ್ವಕಾರಣವಾದ ಜ್ಞಾನದ ಅನುಮಾನಕ್ಕೆ ಗಮಕವಾದುದರಿಂದ ಸ್ವಕಾರ್ಯವಾದ ಸಂಬಂಧದಿಂದ ಅನುಮೇಯವಾಗಿರುವುದಲ್ಲದೆ ಸ್ವಯಂಪ್ರಕಾಶವಲ್ಲ.

## ೮೧೧. ಪುನರ್ಮೀಮಾಂಸಕಮತೇ ಜ್ಞಾನಸ್ಯ ಪ್ರಾಕಟ್ಯಾನುಮೇಯತ್ವರೂಪಪಕ್ಷಾಂತರೋಪಪಾದನಂ.

## ತತ್ರ ಪ್ರಥಮಂ ಜ್ಞಾನಸ್ಯ ಸ್ವನಿಷ್ಠವಿಷಯತಾನಿರೂಪಕತ್ವಾಸಂಭವೋಪಪಾದನಂ.

ಹೀಗೆ ಜ್ಞಾನಕ್ಕೆ ಜ್ಞಾನಜನ್ಯಸಂಬಂಧಾನುಮೇಯತ್ವಪಕ್ಷವೊಂದನ್ನು ತೋರಿಸಿ ಅದೇ ಮೀಮಾಂಸಕರು ಪುನಃ ಮತ್ತೊಂದು ಪಕ್ಷವನ್ನೂ ತೋರಿಸುವರು. ಹೇಗೆಂದರೆ "ಇದು ಮಾವಿನಮರವು ಇದು ಬೇವಿನಮರವು" ಇತ್ಯಾದಿಜ್ಞಾನವು ಹುಟ್ಟಿದರೂ ಆಗ ಅಂಥ ಜ್ಞಾನಕ್ಕೆ ಗೋಚರವಾಗಿರುವ ಮಾವಿನಮರ ಬೇವಿನಮರವೆಂಬ ವಿಷಯವು ಮಾತ್ರವೇ ಪ್ರಕಾಶಿಸುವುದಲ್ಲದೆ ಆ ಜ್ಞಾನವೂ ಆಗಲೇ ಪ್ರಕಾಶಿಸುವುದಿಲ್ಲ. ವಿಷಯವನ್ನು ಪ್ರಕಾಶಪಡಿಸುವುದಕ್ಕೆ ಜ್ಞಾನವೆಂಬ ಸಾಮಗ್ರಿ ಆಗ ಇರುವಂತೆ ಅಂಥ ಜ್ಞಾನವನ್ನು ಪ್ರಕಾಶಪಡಿಸುವ ಮತ್ತೊಂದು ಸಾಮಗ್ರಿ ಆಗ ಇಲ್ಲವಷ್ಟೆ ?

ಜ್ಞಾನವು ವಿಷಯುವಸ್ತು ಹೇಗೆ ಪ್ರಕಾಶಪಡಿಸುವುದೋ ಅದರಂತೆ ತನ್ನನ್ನೂ ತಾನೇ ಪ್ರಕಾಶಪಡಿಸುತ್ತದೆಯೆಂದೂ ಹೇಳಲಾಗುವುದಿಲ್ಲ. ಮತ್ತೊಂದು ಪದಾರ್ಥವನ್ನು ಮುಟ್ಟಬಲ್ಲುದಾದ ಅಂಗುಳ್ಯಗ್ರವು ತನ್ನನ್ನೂ ತಾನೇ ಮುಟ್ಟಲಾರದಷ್ಟೆ ? ಅದರಂತೆ ವಿಷಯಪ್ರಕಾಶಕವಾದ ಜ್ಞಾನಕ್ಕೆ ತನ್ನನ್ನೂ ತಾನೇ ಪ್ರಕಾಶಪಡಿಸಿಕೊಡುವ ಸಾಮರ್ಥ್ಯವಿಲ್ಲ.

ಮತ್ತು ಜ್ಞಾನವೆಂಬ ಕ್ರಿಯೆ ಸಕರ್ಮಕವಾದುದರಿಂದ ತನಗೆ ಯಾವುದು ಕರ್ಮಕಾರಕವಾಗಿರುವುದೋ ಅದನ್ನುಮಾತ್ರ ಪ್ರಕಾಶಪಡಿಸುವುದಲ್ಲದೆ ಇತರವನ್ನು ಪ್ರಕಾಶಪಡಿಸಲಾರದು. ಹಾಗೆ ಪ್ರಕಾಶಪಡಿಸುವುದಾದರೆ—"ಇದು ಮಾವಿನಮರವು" ಎಂಬ ಜ್ಞಾನವು ಯಾವನಿಗೆ ಉಂಟಾಯಿತೋ ಅವನಿಗೆ ಅದೇ ಜ್ಞಾನವು ಬೇವಿನಮರವನ್ನೂ ಪ್ರಕಾಶಪಡಿಸಬೇಕಾಗಿ ಬರುವುದು. ನಮ್ಮ ಮತದಲ್ಲಿಯಾದರೆ ಉಕ್ತಜ್ಞಾನಕ್ಕೆ ಮಾವಿನಮರವೇ ವಿಷಯುವಾಗಿ ಕರ್ಮಕಾರಕವಾಗಿರುವುದರಿಂದ ಅದನ್ನೇ ಪ್ರಕಾಶಪಡಿಸುವುದು; ಬೇವಿನಮರವು ಆ ಜ್ಞಾನಕ್ಕೆ ವಿಷಯುವಲ್ಲವಾದುದರಿಂದ ಕರ್ಮಕಾರಕವಾಗಲಿಲ್ಲವಾಗಿ ಅದನ್ನು ಪ್ರಕಾಶಪಡಿಸುವುದಿಲ್ಲ. ಅದರಂತೆ ಉಕ್ತಜ್ಞಾನಕ್ಕೆ ತಾನೂ ಕರ್ಮಕಾರಕವಲ್ಲವಾದಕಾರಣ ತನ್ನನ್ನು ತಾನು ಪ್ರಕಾಶಪಡಿಸಲಾರದು. ಇದರಿಂದ—ಜ್ಞಾನಕ್ಕೆ ಸ್ವನಿಷ್ಠವಿಷಯತಾನಿರೂಪಕತ್ವವಿಲ್ಲವೆಂಬುದು ಉಕ್ತವಾಯಿತು.

## ೮೧೨. ಪ್ರಕಾಶಕಾನಾಂ ಜ್ಞಾಯಮಾನತಯೈವ ಪ್ರಕಾಶಕತ್ವಾಶಂಕಾ

ಪೂಜ್ಯರೆ! ಶಬ್ದವು ಅರ್ಥಕ್ಕೆ ಪ್ರಕಾಶಕವಾಗಿರುವುದು ; ಲಿಂಗವೆನಿಸಿಕೊಂಡ ಸಾಧನವು ಲಿಂಗಿಯೆನಿಸಿಕೊಂಡ ಸಾಧ್ಯಕ್ಕೆ ಪ್ರಕಾಶಕವಾಗಿರುವುದು ; ಆಲೋಕವೆನಿಸಿಕೊಂಡ ಬೆಳಕು ಆ ಆ ಪದಾರ್ಥಗಳಿಗೆ ಪ್ರಕಾಶಕವಾಗಿರುವುದು ; ಹೀಗೆ ಯಾವುದು ಯಾವುದು ಲೋಕದಲ್ಲಿ ಪ್ರಕಾಶಕವೆನಿಸಿಕೊಂಡಿರುವುದೋ ಅವೆಲ್ಲವೂ ಜ್ಞಾನಕ್ಕೆ ಗೋಚರಗಳಾಗಿದ್ದುಕೊಂಡೇ ಆ ಆ ವಸ್ತುಗಳಿಗೆ ಪ್ರಕಾಶಕಗಳಾಗುವುವಲ್ಲದೆ ತಾವು ಜ್ಞಾನಕ್ಕೆ ಗೋಚರಗಳಾಗದೆ ಮತ್ತೊಂದಕ್ಕೆ ಪ್ರಕಾಶಕಗಳಾಗುವುದಿಲ್ಲ. ಶಬ್ದವೂ ಲಿಂಗಿಯೂ ಆಲೋಕವೂ ಯಾವನ ಜ್ಞಾನಕ್ಕೆ ಬರಲಿಲ್ಲವೋ ಅವನಿಗೆ ಅವುಗಳು ಅರ್ಥವನ್ನೂ ಲಿಂಗಿಯನ್ನೂ ಪದಾರ್ಥವನ್ನೂ ಪ್ರಕಾಶಪಡಿಸಲಾರವು. ಅಂತು ಪ್ರಕಾಶಕವಸ್ತುಗಳು ಜ್ಞಾಯಮಾನಗಳಾಗಿ ಇದ್ದುಕೊಂಡೇ ಇತರವನ್ನು ಪ್ರಕಾಶಪಡಿಸುವುವೆಂಬ ನಿಯಮವು ಇದರಿಂದ

ಸಿದ್ಧವಾಯಿತು. ಜ್ಞಾನವು ವಿಷಯಕ್ಕೆ ಪ್ರಕಾಶಕವಾಗುವುದಾದರೆ ತಾನೂ ಜ್ಞಾಯಮಾನವಾಗಿ ಇದ್ದುಕೊಂಡೇ ಅಲ್ಲವೆ ವಿಷಯವನ್ನು ಪ್ರಕಾಶಪಡಿಸಬೇಕು? ಹೀಗಿರುವಲ್ಲಿ ಜ್ಞಾನವು ಸ್ವೋತ್ಪತ್ತಿಕಾಲದಲ್ಲಿ ಪ್ರಕಾಶಿಸುವುದಿಲ್ಲವೆಂದು ಎಂದರೆ ಜ್ಞಾಯಮಾನವಾಗುವುದಿಲ್ಲವೆಂದು ಹೇಗೆ ಹೇಳಲಾದೀತು?"

## ೮೧೩. ಅಜ್ಞಾಯಮಾನಸ್ಯೈವ ಜ್ಞಾನಸ್ಯ ಇಂದ್ರಿಯಾದಿವತ್ಸತ್ತಯೈವ ವಿಷಯಪ್ರಕಾಶಕತ್ವೋಪಪತ್ತಿಃ

ಇಂಥ ಆಶಂಕೆ ಸಂಗತವಲ್ಲ; ಏತಕ್ಕೆಂದರೆ ಪ್ರಕಾಶಕವಾದುವುಗಳೆಲ್ಲವೂ ಜ್ಞಾಯಮಾನಗಳಾಗಿ ಇದ್ದುಕೊಂಡೇ ಅನ್ಯಪ್ರಕಾಶಕಗಳಾಗುವುವೆಂಬ ನಿಯಮವಿಲ್ಲ. ಸ್ವರೂಪಮಾತ್ರದಿಂದಲೇ ಪ್ರಕಾಶಕಗಳೆಂದೂ, ಜ್ಞಾಯಮಾನಗಳಾಗಿ ಇದ್ದುಕೊಂಡು ಪ್ರಕಾಶಕಗಳೆಂದೂ, ಪ್ರಕಾಶಕಗಳು ಎರಡು ಬಗೆಯಾಗಿರುವುವು. ಶಬ್ದ ಲಿಂಗ ಆಲೋಕ ಮುಂತಾದುವುಗಳು ಜ್ಞಾಯಮಾನಗಳಾಗಿ ಇದ್ದುಕೊಂಡು ಇತರಪ್ರಕಾಶಕಗಳಾಗುವುವು. ಇಂದ್ರಿಯ ಮೊದಲಾದುವುಗಳು ಸ್ವರೂಪಸದ್ಭಾವಮಾತ್ರದಿಂದಲೇ ಘಟಾದಿಪದಾರ್ಥಗಳಿಗೆ ಪ್ರಕಾಶಕಗಳಾಗುವುವು. ಬಾಲನ ಜ್ಞಾನಕ್ಕೆ ಇಂದ್ರಿಯಗಳು ಗೋಚರಗಳಾಗದಿದ್ದರೂ ಅದೇ ಬಾಲನಿಗೆ ಅದೇ ಇಂದ್ರಿಯಗಳು ಘಟಾದಿಪದಾರ್ಥಗಳನ್ನು ಪ್ರಕಾಶಪಡಿಸುತ್ತವೆಯೆಂಬುದು ಲೋಕಾನುಭವಸಿದ್ಧವಾಗಿರುವುದಷ್ಟೆ? ಇದರಂತೆ ಜ್ಞಾನವೂ ಸಹ ಇಂದ್ರಿಯಗಳಿಗೆ ಸಮಾನವಾದ ಯೋಗಕ್ಷೇಮವುಳ್ಳುದಾಗಿ ಅವುಗಳ ಕೋಟಿಯಲ್ಲೇ ಸೇರಿದುದಾದುದರಿಂದ ಸ್ವರೂಪಸದ್ಭಾವಮಾತ್ರದಿಂದಲೇ ವಿಷಯಕ್ಕೆ ಪ್ರಕಾಶಕವಾಗಿರಲು ತಡೆಯಿಲ್ಲ.

## ೮೧೪. ಸ್ವಯಂಪ್ರಕಾಶತ್ವಸಾಧಕಾನುಮಾನದ್ವಯಾನುವಾದಃ

ಆದರೆ—ಜ್ಞಾಯಮಾನಗಳಾಗಿ ಇದ್ದುಕೊಂಡು ಪ್ರಕಾಶಕಗಳಾಗಿರುವ ಶಬ್ದಲಿಂಗಾಲೋಕಗಳ ಕೋಟಿಯಲ್ಲಿಯೇ ಈ ಜ್ಞಾನವನ್ನೂ ಏತಕ್ಕೆ ಸೇರಿಸಬಾರದು? ಇಂಥ ಆಶಂಕೆಗೆ ಸಮಾಧಾನವನ್ನು ವಿಶದವಾಗಿ ಹೇಳಬೇಕಾಗಿರುವುದರಿಂದ ನೀವು ಸಾವಧಾನಚಿತ್ತರಾಗಿ ಕೇಳಬೇಕು.

ಜ್ಞಾನಕ್ಕೆ ಸ್ವಯಂಪ್ರಕಾಶತ್ವವನ್ನು ಹೇಳುವವರು ಅನುಮಾನಪ್ರಮಾಣದಿಂದ ಅದನ್ನು ಸಾಧಿಸುವರು; ಹೇಗೆಂದರೆ—ಜ್ಞಾನದಲ್ಲಿ ಜ್ಞಾನತ್ವವೆಂಬ ಹೇತುವಿನಿಂದ ಸ್ವಯಂಪ್ರಕಾಶತ್ವವು ಸಿದ್ಧಿಸುವುದು. ಜ್ಞಾನಕ್ಕೆ ಸ್ವಯಂಪ್ರಕಾಶತ್ವವನ್ನು ಒಪ್ಪದಿದ್ದರೆ ಜ್ಞಾನತ್ವವು ಇದಕ್ಕೆ ಬರಲಾರದು. ಎಂದರೆ ಇದು ಜ್ಞಾನ

ಭಿನ್ನವಾಗಬೇಕಾಗಿಬರುವುದು. ಘಟಾದಿಪದಾರ್ಥಗಳು ಜ್ಞಾನಪ್ರಕಾಶ್ಯಗಳಾದು ದರಿಂದ ಸ್ವಯಂಪ್ರಕಾಶಗಳಲ್ಲ; ಆದುದರಿಂದಲೇ ಅವುಗಳು ಜ್ಞಾನವೂ ಅಲ್ಲ ಜ್ಞಾನ ಭಿನ್ನಗಳಾಗಿರುವುವು. ಜ್ಞಾನವಾದರೆ ಜ್ಞಾನಭಿನ್ನವಲ್ಲವಾದುದರಿಂದ ಸ್ವಯಂಪ್ರ ಕಾಶತ್ವವನ್ನು ಇದಕ್ಕೆ ಒಪ್ಪಿಯೇ ತೀರಬೇಕು.

ಮತ್ತು—ಯಾವುದು ಸ್ವಸದ್ಭಾವಮಾತ್ರದಿಂದಲೇ ಪ್ರಕಾಶಿಸುತ್ತಿರು ವುದೋ ಅದಕ್ಕೆ ತನ್ನ ಪ್ರಕಾಶಕ್ಕಾಗಿ ಮತ್ತೊಂದರ ಅಪೇಕ್ಷೆಯಿರುವುದಿಲ್ಲ. ಘಟಾದಿಪದಾರ್ಥಗಳು ಸ್ವಸದ್ಭಾವಮಾತ್ರದಿಂದಲೇ ಪ್ರಕಾಶಿಸುವುವಲ್ಲ. ಆದುದ ರಿಂದಲೇ ಅವುಗಳು ತಮ್ಮ ಪ್ರಕಾಶಕ್ಕಾಗಿ ಜ್ಞಾನವನ್ನು ಅಪೇಕ್ಷಿಸುವುವು. ಜ್ಞಾನವಾದರೆ ಸ್ವಸದ್ಭಾವಮಾತ್ರದಿಂದಲೇ ಭಾಸಮಾನವಾದುದರಿಂದ ತನ್ನ ಪ್ರಕಾ ಶಕ್ಕಾಗಿ ಮತ್ತೊಂದು ಜ್ಞಾನವನ್ನು ಅಪೇಕ್ಷಿಸಲಾರದು. ಘಟಾದಿಪದಾರ್ಥಗಳು ಅಜ್ಞಾನಕ್ಕೆ ವಿರೋಧಿಗಳಲ್ಲ. ಎಂದರೆ ಘಟಾದಿಪದಾರ್ಥಗಳು ವಿದ್ಯಮಾನಗಳಾಗಿ ರುವಾಗಲೇ ಅವುಗಳ ಅಜ್ಞಾನವೂ ಸಮಗೆ ಇರಬಹುದು. ಇದಕ್ಕೆ ಕಾರಣವೇ ನೆಂದರೆ ಘಟಾದಿಗಳು ಸರ್ವದಾ ಭಾಸಮಾನಗಳಾಗಿರದೆ ಎಂದರೆ ವಿದ್ಯಮಾನದಶೆ ಯಲ್ಲೆಲ್ಲಾ ಭಾಸಮಾನಗಳಾಗಿರದೆ ವಿದ್ಯಮಾನದಶೆಯಲ್ಲಿ ಕದಾಚಿದ್ಭಾಸಮಾನಗ ಳಾಗಿರುವಿಕೆಯೇ; ಜ್ಞಾನವಾದರೆ ಘಟಾದಿಗಳಂತೆ ವಿದ್ಯಮಾನದಶೆಯಲ್ಲಿ ಯಾವಾ ಗಲೂ ಅಪ್ರಕಾಶಮಾನವಾಗಿರುವುದೇ ಇಲ್ಲ. ಹಾಗಿದ್ದರಲ್ಲವೆ ತನ್ನ ಪ್ರಕಾಶ ಕ್ಕಾಗಿ ಪರಾಪೇಕ್ಷೆ ಇದಕ್ಕೂ ಉಂಟೆಂದು ಹೇಳಬಹುದಾಗಿದ್ದಿತು ? ಇದರಿಂದ ವಿದ್ಯಮಾನದಶೆಯಲ್ಲಿ ಕದಾಚಿತ್ ಭಾಸಮಾನವಾಗಿರುವಿಕೆಯೇ ಪರಾಧೀನಪ್ರಕಾ ಶತ್ವಕ್ಕೆ ಕಾರಣವಾಗುವುದೆಂದು ಸಿದ್ಧವಾಯಿತು. ಜ್ಞಾನಕ್ಕಾದರೆ ವಿದ್ಯಮಾನದಶೆ ಯಲ್ಲಿ ಸರ್ವದಾ ಭಾಸಮಾನತ್ವವೇ ಇರುವುದರಿಂದ ಇದರ ಪ್ರಕಾಶಕ್ಕಾಗಿ ಪರಾ ಪೇಕ್ಷೆ ಸುತರಾಂ ಇದಕ್ಕೆ ಸಂಭವಿಸುವುದಿಲ್ಲ.

" ವಿದ್ಯಮಾನದಶೆಯಲ್ಲಿ ಸರ್ವದಾ ಭಾಸಮಾನತ್ವವೆಂಬ ಹೇತುವಿನಿಂದ ಜ್ಞಾನಕ್ಕೆ ಸ್ವಯಂಪ್ರಕಾಶತ್ವವನ್ನು ಸಾಧಿಸುವುದಾದರೆ ಪರಪ್ರಕಾಶ್ಯವಾದ ಎಂದರೆ ಸ್ವಯಂಪ್ರಕಾಶತ್ವವೆಂಬ ಸಾಧ್ಯದಿಂದ ಶೂನ್ಯವಾದ ಸುಖದುಃಖಗಳಲ್ಲಿ ವಿದ್ಯಮಾನದಶೆಯಲ್ಲಿ ಸರ್ವದಾ ಭಾಸಮಾನತ್ವವೆಂಬ ಹೇತುವಿರುವುದರಿಂದ ಈ ಹೇತು ವ್ಯಭಿಚರಿತವಾಗಿರುವುದು " ಎಂದು ಆಶಂಕಿಸಕೂಡದು. ಏತಕ್ಕೆಂದರೆ ಸುಖದುಃಖಭಿನ್ನತ್ವವೆಂಬ ವಿಶೇಷಣವನ್ನೂ ಈ ಹೇತುಶರೀರದಲ್ಲಿ ಸೇರಿಸುವೆವು. ಆದುದರಿಂದ ಜ್ಞಾನದ ಸ್ವಯಂಪ್ರಕಾಶತ್ವಕ್ಕೆ ಅಪಲಾಪವನ್ನು ಹೇಳಲಾಗುವುದಿಲ್ಲ;

## ೮೧೫. ಉಕ್ತಾನುಮಾನದ್ವಯಸ್ಯಾಪಿ ಪ್ರತ್ಯನುಮಾನೇನ ನಿರಾಕರಣಂ

ಹೀಗೆ ತೋರಿಸಿದ ಎರಡು ಅನುಮಾನಗಳಿಂದ ಸ್ವಯಂಪ್ರಕಾಶತ್ವವಾದಿಗಳು ಜ್ಞಾನಕ್ಕೆ ಸ್ವಯಂಪ್ರಕಾಶತ್ವವನ್ನು ಸಾಧಿಸುವರು. ಇಂಥ ಈ ಎರಡು ಅನುಮಾನಗಳೂ ನಾವು ಹೇಳುವ ಪ್ರತ್ಯನುಮಾನದಿಂದ ಬಾಧಿತಗಳಾಗುವುವಾದುದರಿಂದ ಸ್ವಯಂಪ್ರಕಾಶತ್ವಸಾಧಕಗಳಾಗಲಾರವು. ಹೇಗೆಂದರೆ ಘಟಾದಿವಸ್ತುಗಳಂತೆ ಜ್ಞಾನವೂ ಒಂದು ವಸ್ತುವಾದುದರಿಂದ ವಸ್ತುತ್ವವೆಂಬ ಹೇತು ಇದರಲ್ಲಿ ಇರುವುದು. ಅಥವಾ ಘಟಾದಿಗಳಲ್ಲಿ ಭಾಸಮಾನತ್ವವಿರುವಂತೆ ಜ್ಞಾನದಲ್ಲಿಯೂ ಭಾಸಮಾನತ್ವಹೇತುವಿರುವುದು. ಯಾವುದರಲ್ಲಿ ವಸ್ತುತ್ವವಾಗಲಿ ಭಾಸಮಾನತ್ವವಾಗಲಿ ಇರುವುದೋ ಅದರಲ್ಲಿ ಪರಪ್ರಕಾಶ್ಯತ್ವವೂ ಇರುವುದೆಂಬ ವಿಷಯದಲ್ಲಿ ಘಟಾದಿವಸ್ತುಗಳನ್ನೇ ದೃಷ್ಟಾಂತಗಳಾಗಿ ನೋಡಬಹುದು. ಜ್ಞಾನದಲ್ಲಿಯೂ ವಸ್ತುತ್ವಭಾಸಮಾನತ್ವಗಳಿರುವುದರಿಂದ ಪರಪ್ರಕಾಶ್ಯತ್ವವನ್ನೂ ಇದಕ್ಕೆ ಒಪ್ಪಬೇಕಾಗಿರುವಕಾರಣ ಸ್ವಯಂಪ್ರಕಾಶತ್ವವು ಜ್ಞಾನಕ್ಕೆ ಕೂಡುವುದಿಲ್ಲ.

## ೮೧೬. ಉಕ್ತಸ್ಯ ಪ್ರತ್ಯನುಮಾನಸ್ಯ ಸೋಪಾಧಿಕತ್ವಾಶಂಕಾ.

"ಪೂಜ್ಯರೆ! ಪ್ರತ್ಯನುಮಾನವನ್ನೇನೋ ತೋರಿಸಿದಿರಿ; ಆದರೆ ಈ ಪ್ರತ್ಯನುಮಾನದಲ್ಲಿ ತೋರಿಸಿರುವ ಹೇತು ಸೋಪಾಧಿಕವೆನಿಸಿಕೊಂಡು ಅಸದ್ಧೇತುವಾಗುವುದರಿಂದ ಜ್ಞಾನಕ್ಕೆ ಪರಪ್ರಕಾಶ್ಯತ್ವವನ್ನು ಸಾಧಿಸಲು ಸಮರ್ಥವಾಗಲಾರದು. ಹೇಗೆಂದರೆ ದೃಷ್ಟಾಂತದಲ್ಲಿ ಇರತಕ್ಕುದಾಗಿಯೂ, ಪಕ್ಷದಲ್ಲಿ ಇಲ್ಲದಿರತಕ್ಕುದಾಗಿಯೂ ಇರುವ ಧರ್ಮವು ಉಪಾಧಿಯೆನಿಸಿಕೊಳ್ಳುವುದು, ನೀವು ಹೇಳಿದ ಪ್ರತ್ಯನುಮಾನದಲ್ಲಿ ಜ್ಞಾನವು ಪಕ್ಷವಾಗಿಯೂ, ಪರಪ್ರಕಾಶ್ಯತ್ವವು ಸಾಧ್ಯವಾಗಿಯೂ, ವಸ್ತುತ್ವವಾಗಲಿ ಭಾಸಮಾನತ್ವವಾಗಲಿ ಹೇತುವಾಗಿಯೂ, ಘಟಾದಿವಸ್ತುಗಳು ದೃಷ್ಟಾಂತಗಳಾಗಿಯೂ ಇರುವುವು. ದೃಷ್ಟಾಂತಗಳಾದ ಘಟಾದಿಗಳಲ್ಲಿ ಹೇಗಾದರೆ ಪರಪ್ರಕಾಶ್ಯತ್ವವೆಂಬ ಸಾಧ್ಯವಿರುವುದೋ ಅದರಂತೆ ವಿದ್ಯಮಾನದಶೆಯಲ್ಲಿ ಕದಾಚಿತ್ ಭಾಸಮಾನವಾಗದಿರುವಿಕೆಯೆಂಬ ಧರ್ಮವೂ ಅವುಗಳಲ್ಲಿ ಇರುವುದು. ಜ್ಞಾನವೆಂಬ ಪಕ್ಷದಲ್ಲಿ ಹೇಗಾದರೆ ವಸ್ತುತ್ವಭಾಸಮಾನತ್ವಾನ್ಯತರಹೇತುವಿರುವುದೋ ಅದರಂತೆ ವಿದ್ಯಮಾನದಶೆಯಲ್ಲಿ ಕದಾಚಿತ್ ಭಾಸಮಾನವಾಗದಿರುವಿಕೆಯೆಂಬ ಧರ್ಮವು ಅದರಲ್ಲಿ ಇಲ್ಲ. ಹೀಗೆ "**ವಿದ್ಯಮಾನದಶೆಯಲ್ಲಿ ಕದಾಚಿತ್ ಭಾಸಮಾನವಾಗದಿರುವಿಕೆ**"ಯೆಂಬ ಧರ್ಮವು ದೃಷ್ಟಾಂತದಲ್ಲಿ ಇರತಕ್ಕುದಾಗಿಯೂ ಪಕ್ಷದಲ್ಲಿ ಇಲ್ಲದಿರತಕ್ಕುದಾಗಿಯೂ ಇರುವುದ

ರಿಂದ ಉಪಾಧಿಯೆನಿಸಿಕೊಳ್ಳುವುದು. ವಸ್ತುತ್ವ ಅಥವಾ ಭಾಸಮಾನತ್ವವೆಂಬ ಹೇತು ಇಂಥ ಉಪಾಧಿಯೊಡನೆ ಕೂಡಿರುವಕಾರಣ ಸೋಪಾಧಿಕವೆನಿಸಿಕೊಂಡು ಅಸದ್ಧೇತುವಾದುದರಿಂದ ಜ್ಞಾನಕ್ಕೆ ಪರಪ್ರಕಾಶ್ಯತ್ವವನ್ನು ಸಾಧಿಸಲು ಸಮರ್ಥವಾಗಲಾರದಷ್ಟೆ ?

## ೮೧೭. ಪ್ರತ್ಯನುಮಾನಸ್ಯ ಸೋಪಾಧಿಕತ್ವಾಭಾವಪ್ರದರ್ಶನಂ

ಇಂಥ ಆಶಂಕೆ ಸಂಗತವಲ್ಲ. ಏತಕ್ಕೆಂದರೆ—ಜ್ಞಾನೋತ್ಪತ್ತಿಕಾಲದಲ್ಲಿ ಜ್ಞಾನದ ವಿಷಯುಮಾತ್ರವೇ ಪ್ರಕಾಶಿಸುವುದಲ್ಲದೆ ಜ್ಞಾನವು ಆಗ ಪ್ರಕಾಶಿಸುವುದಿಲ್ಲವೆಂಬುದನ್ನು ಹಿಂದೆಯೇ ತೋರಿಸಿರುವೆವಷ್ಟೆ ? ಇದರಿಂದ ವಿದ್ಯಮಾನದಶೆಯಲ್ಲಿ ಕದಾಚಿತ್ ಭಾಸಮಾನವಾಗದಿರುವಿಕೆಯೆಂಬ ಧರ್ಮವು ದೃಷ್ಟಾಂತದಲ್ಲಿ ಇರುವಂತೆ ಪಕ್ಷವಾದ ಜ್ಞಾನದಲ್ಲಿಯೂ ಉತ್ಪತ್ತಿಕಾಲದಲ್ಲಿ ಇದ್ದೇ ಇರುವುದರಿಂದ ಇದು ಉಪಾಧಿಯಾಗಲಾರದು. ದೃಷ್ಟಾಂತಮಾತ್ರದಲ್ಲಿ ಇದ್ದು ಪಕ್ಷದಲ್ಲಿ ಇಲ್ಲದಿದ್ದರಲ್ಲವೆ ಉಪಾಧಿಯೆನಿಸಿಕೊಳ್ಳುವುದು. ಇದು ಉಭಯತ್ರ ಇರುವುದಾದಕಾರಣ ಉಪಾಧಿಯೆನಿಸಿಕೊಳ್ಳಲಾರದಾಗಿ ನಮ್ಮ ಪ್ರತ್ಯನುಮಾನದಲ್ಲಿ ಉಕ್ತವಾಗಿರುವ ಹೇತು ಸೋಪಾಧಿಕವಲ್ಲದೆ ಸದ್ಧೇತುವಾಗಿಯೇ ಇರುವುದರಿಂದ ಜ್ಞಾನಕ್ಕೆ ಪರಪ್ರಕಾಶ್ಯತ್ವವನ್ನು ತಡೆಯಿಲ್ಲದೆ ಸಾಧಿಸುವುದು. ಆದಕಾರಣ ಜ್ಞಾನಕ್ಕೆ ಸ್ವಯಂಪ್ರಕಾಶತ್ವವನ್ನು ಹೇಳಲು ಯಾವುದೊಂದು ದಾರಿಯೂ ಇಲ್ಲವಾದಪ್ರಯುಕ್ತ ಸ್ವಯಂಪ್ರಕಾಶತ್ವಸಾಧಕವಾದ " ವಿದ್ಯಮಾನದಶೆಯಲ್ಲಿ ಸರ್ವದಾ ಭಾಸಮಾನತ್ವ " ವೆಂಬ ಹೇತು ಅಸಿದ್ಧವಾದುದರಿಂದಲೂ, ನಮ್ಮ ಪ್ರತ್ಯನುಮಾನದಲ್ಲಿ ಉಕ್ತವಾಗಿರುವ ಹೇತು ಸೋಪಾಧಿಕವಲ್ಲದೆ ಸದ್ಧೇತುವಾದುದರಿಂದಲೂ, ಶಬ್ದಲಿಂಗಾಲೋಕಗಳಂತೆ ಇದು ಜ್ಞಾಯಮಾನವಾಗಿ ಇದ್ದುಕೊಂಡು ವಿಷಯುವನ್ನು ಪ್ರಕಾಶಪಡಿಸಲಾರದೆ ಇಂದ್ರಿಯಗಳಿಗೆ ಸಮಾನಯೋಗಕ್ಷೇಮವಾಗಿ ಇದ್ದುಕೊಂಡು ಅಜ್ಞಾಯಮಾನವಾಗಿಯೇ ವಿಷಯವನ್ನು ಪ್ರಕಾಶಪಡಿಸುವುದಾದ ಕಾರಣ ಸ್ವರೂಪಸದ್ಭಾವಮಾತ್ರದಿಂದಲೇ ಪ್ರಕಾಶಕಗಳಾಗಿರುವವುಗಳ ಕೋಟಿಯಲ್ಲಿಯೇ ಇದನ್ನು ಸೇರಿಸಿರುವೆವು.

## ೮೧೮. ಉಕ್ತರೀತ್ಯಾ ಜ್ಞಾನಸ್ಯ ಸ್ವಯಂಪ್ರಕಾಶತ್ವಾಸಂಭವಾತ್ ಪ್ರಾಕಟ್ಯಾನುಮೇಯತ್ವೋಪಪಾದನಂ.

ಪೂಜ್ಯರೆ? ಜ್ಞಾನವು ತಾನಾಗಿಯೇ ಪ್ರಕಾಶಿಸುವುದಿಲ್ಲವೆಂಬುದು ನಿಮ್ಮ ಸಿದ್ಧಾಂತವಾದರೆ ಇಂಥ ಜ್ಞಾನದ ಸದ್ಭಾವದಲ್ಲಿ ಪ್ರಮಾಣವೇನು?

ಜ್ಞಾನಸಸದ್ಭಾವದಲ್ಲಿ ಈ ಮುಂದೆ ತೋರಿಸುವ ಅನುಮಾನವೇ ಪ್ರಮಾಣ ವೆಂದು ತಿಳಿಯಿರಿ. ಹೇಗೆಂದರೆ "ಇದು ಗೋವು, ಇದು ಮಹಿಷವು, ಇದು ಘಟವು, ಇದು ಪಟವು, ಇವೇ ಮೊದಲಾದ ಆ ಆ ಜ್ಞಾನವು ಉಂಟಾದಮೇಲೆ ಅಂಥ ಜ್ಞಾನಕ್ಕೆ ಗೋಚರವಾಗಿರುವ ಗವಾದಿಪದಾರ್ಥದಲ್ಲಿ ಒಂದಾನೊಂದು ಅತಿಶಯವುಂಟಾಗುವುದು. ಇಂಥ ಅತಿಶಯವನ್ನು ಪ್ರಾಕಟ್ಯವೆಂಬ ಹೆಸರಿನಿಂದ ವ್ಯವಹರಿಸಬಹುದು. ಜ್ಞಾನೋತ್ಪತ್ತಿಪರ್ಯಂತವೂ ಪ್ರಕಟವಾಗಿರಲಿಲ್ಲವಾದ ಗವಾದಿಪದಾರ್ಥವು ಜ್ಞಾನೋತ್ಪತ್ತಿಯಾದಮೇಲೆ ಪ್ರಕಟವಾದುದರಿಂದ ಪ್ರಾಕಟ್ಯ ವೆಂಬ ಹೆಸರನ್ನು ಪಡೆದ ಒಂದಾನೊಂದು ಅತಿಶಯವು ಜ್ಞಾನಕ್ಕೆ ವಿಷಯವಾದ ಗವಾದಿಪದಾರ್ಥದಲ್ಲಿ ಉಂಟಾಗುವುದು.

ಜ್ಞಾನ, ಜ್ಞೇಯ, ಜ್ಞಾತಾ, ಈ ಮೂರೂ ಜ್ಞಾನೋತ್ಪತ್ತಿಕಾಲದ ಲ್ಲಿಯೇ ಪ್ರಕಾಶಿಸುತ್ತವೆಯೆಂದು ಹೇಳುವ ಸ್ವಯಂಪ್ರಕಾಶತ್ವವಾದಿಗಳೂಕೂಡ ವಿಷಯಗತವಾದ ಈ ಅತಿಶಯವನ್ನು ಒಪ್ಪಿಯೇ ತೀರಬೇಕು. ಹೇಗೆಂದರೆ "ಮೂರೂ ಪ್ರಕಾಶಿಸುತ್ತವೆ" ಎಂದು ಇವರು ಹೇಳುವರಷ್ಟೆ? ಇದರಲ್ಲಿ "ಪ್ರಕಾಶವೆಂಬ ಧರ್ಮವು ಈ ಮೂರರಲ್ಲಿಯೂ ಅನುಗತವಾಗಿರುವುದು" ಎಂದು ಈ ವಾಕ್ಯಕ್ಕೆ ಅರ್ಥವಾಗುವುದು. ಅಂಥ ಪ್ರಕಾಶವೆಂಬ ಧರ್ಮವು ಯಾವುದೆಂಬುದನ್ನು ವಿಮರ್ಶಿಸಬೇಕು. ಜ್ಞಾನತ್ವವೇ ಪ್ರಕಾಶಪದಾರ್ಥವೆಂದು ಹೇಳುವುದಾದರೆ ಅದು ಜ್ಞಾನಮಾತ್ರದಲ್ಲಿ ಇರುವುದಲ್ಲದೆ ಜ್ಞೇಯದಲ್ಲಿಯೂ ಜ್ಞಾತಾವಿನಲ್ಲಿಯೂ ಇಲ್ಲವಾದುದರಿಂದ ಅನುಗತವಾಗಲಿಲ್ಲ. ಜ್ಞೇಯತ್ವವೇ ಪ್ರಕಾಶಪದಾರ್ಥವೆಂದು ಹೇಳುವುದಾದರೆ ಅದು ಜ್ಞೇಯದಲ್ಲಿಮಾತ್ರ ಇರುವುದಲ್ಲದೆ ಜ್ಞಾನದಲ್ಲಿಯೂ ಜ್ಞಾತಾವಿನಲ್ಲಿಯೂ ಇಲ್ಲವಾದುದರಿಂದ ಅನುಗತವಾಗಲಿಲ್ಲ. ಜ್ಞಾತೃತ್ವವೇ ಪ್ರಕಾಶಪದಾರ್ಥವೆಂದು ಹೇಳುವುದಾದರೆ ಅದು ಜ್ಞಾತಾವಿನಲ್ಲಿ ಮಾತ್ರ ಇರುವುದಲ್ಲದೆ ಜ್ಞಾನದಲ್ಲಿಯೂ ಜ್ಞೇಯದಲ್ಲಿಯೂ ಇಲ್ಲವಾದುದರಿಂದ ಅದೂ ಅನುಗತವಾಗಲಿಲ್ಲ.

ಆದುದರಿಂದ ಜ್ಞಾನತ್ವಜ್ಞೇಯತ್ವಜ್ಞಾತೃತ್ವಗಳಿಗಿಂತಲೂ ಅತಿರಿಕ್ತವಾಗಿಯೂ ಪ್ರಕಾಶನ ಭಾಸನ ಮೊದಲಾದ ಶಬ್ದಗಳಿಗೆ ವಾಚ್ಯವಾಗಿಯೂ ಇರುವ ಒಂದಾನೊಂದು ಧರ್ಮವು ಎಲ್ಲಾ ಗೋವ್ಯಕ್ತಿಗಳಲ್ಲಿಯೂ ಗೋತ್ವವು ಅನುಗತ ವಾಗಿರುವಂತೆ ಜ್ಞಾನಜ್ಞೇಯಜ್ಞಾತೃಗಳೆಂಬ ಮೂರರಲ್ಲಿಯೂ ಅನುಗತವಾಗಿ ರುವುದೆಂದು ಒಪ್ಪಬೇಕು. ಮತ್ತು ಪ್ರಕಾಶವೆಂಬ ಅಂಥ ಧರ್ಮವು ಜ್ಞಾತೃವಿನ

ಲ್ಲಿಯೂ ಜ್ಞೇಯದಲ್ಲಿಯೂ ಜ್ಞಾನಸದ್ಭಾವದಿಂದಲೇ ಉಂಟಾಗುವುದೆಂದೂ, ಜ್ಞಾನ ದಲ್ಲಿಯಾದರೆ ಅಗ್ನಿಯಲ್ಲಿ ಉಷ್ಣತ್ವದಂತೆ ಸ್ವಾಭಾವಿಕವಾಗಿಯೇ ಇರುವುದೆಂದೂ, ಹೇಳಿ, ಜ್ಞಾನಕ್ಕೆ ಸ್ವಯಂಪ್ರಕಾಶತ್ವವನ್ನೂ, ಉಳಿದ ಎರಡಕ್ಕೂ ಪರಪ್ರಕಾಶ್ಯ ತ್ವವನ್ನೂ ಅವರು ನಿರ್ವಹಿಸಬೇಕಾಗಿರುವುದು.

ಅಂತು—ಜ್ಞಾನಕ್ಕೆ ವಿಷಯವಾದ ವಸ್ತುವಿನಲ್ಲಿ—ಜ್ಞಾನದಿಂದ ಒಂದಾ ನೊಂದು ಅತಿಶಯವುಂಟಾಗುವುದೆಂಬುದು ಉಭಯವಾದಿಗಳಿಗೂ ಅಭಿಮತವಾ ದುದರಿಂದ—ಪ್ರಾಕಟ್ಯವೆಂಬ ಹೆಸರನ್ನು ಪಡೆದ ಕಾದಾಚಿತ್ಕವಾದ ಈ ಅತಿ ಶಯವೇ ಕಾರಣಭೂತವಾದ ಜ್ಞಾನದ ಅನುಮಾನಕ್ಕೆ ಗಮಕವಾದುದರಿಂದ ಜ್ಞಾನವು ಸ್ವಕಾರ್ಯವಾದ ವಿಷಯಗತಪ್ರಾಕಟ್ಯದಿಂದ ಅನುಮೇಯವಾಗುವುದಲ್ಲದೆ ಸ್ವಯಂಪ್ರಕಾಶವಾಗಲಾರದು.

## ೬೯೯. ಅತೀತಾನಾಗತಯೋಃ ಪ್ರಾಕಟ್ಯೋತ್ಪತ್ತಿಕಥಂತಾಽಽಶಂಕಾ.

"ಪೂಜ್ಯರೆ! ವರ್ತಮಾನಕಾಲದಲ್ಲಿ ನಮ್ಮ ಕಣ್ಣೆದುರಿಗಿರುವ ಪದಾರ್ಥ ಗಳ ವಿಷಯದಲ್ಲಿ ಹೇಗಾದರೆ ನಮಗೆ ಜ್ಞಾನವು ಉಂಟಾಗುತ್ತಿರುವುದೋ ಅದ ರಂತೆಯೇ ಅತೀತಪದಾರ್ಥಗಳ ವಿಷಯದಲ್ಲಿಯೂ, ಆಗಾಮಿಪದಾರ್ಥಗಳ ವಿಷಯ ದಲ್ಲಿಯೂ ಜ್ಞಾನವು ಉಂಟಾಗುತ್ತಲೇ ಇರುವುದೆಂಬುದು ಪ್ರತ್ಯಕ್ಷಾನುಭವಸಿದ್ಧ ವಾಗಿರುವುದು. ಜ್ಞಾನಕ್ಕೆ ವಿಷಯವಾದ ವಸ್ತುವಿನಲ್ಲಿ ಜ್ಞಾನದಿಂದ ಪ್ರಾಕಟ್ಯ ವೆಂಬ ಧರ್ಮವೊಂದುಂಟಾಗುವುದೆಂದು ಒಪ್ಪುವುದಾದರೆ ವಿದ್ಯಮಾನವಾದ ಪದಾ ರ್ಥವೆಂಬ ಧರ್ಮಿಯಲ್ಲಿ ಅಂಥ ಧರ್ಮವು ಜ್ಞಾನದಿಂದ ಉಂಟಾಗಬಹುದಾದರೂ ಅತೀತಪದಾರ್ಥವಿಷಯಕವಾದ ಜ್ಞಾನಸ್ಥಳದಲ್ಲಿಯೂ, ಆಗಾಮಿಪದಾರ್ಥವಿಷಯ ಕವಾದ ಜ್ಞಾನಸ್ಥಳದಲ್ಲಿಯೂ ಧರ್ಮಿಯೇ ಇಲ್ಲವಾದುದರಿಂದ ಆ ಜ್ಞಾನವು ಅಂಥ ಧರ್ಮವನ್ನು ಯಾವುದರಲ್ಲಿ ಉಂಟುಮಾಡೀತು? ಗೋಡೆಯಿಲ್ಲದೆ ಚಿತ್ರ ವನ್ನು ಬರೆಯಲಾಗುವುದಿಲ್ಲವಷ್ಟೆ."

## ೭೦೦. ಅಸತೋರಪಿ ಭೂತಭವಿಷ್ಯತೋಃ ಸದೃಷ್ಟಾಂತಂ ಪ್ರಾಕಟ್ಯೋತ್ಪತ್ತ್ಯುಪಪತ್ತಿಪ್ರದರ್ಶನಂ.

ಇಂಥ ಆಶಂಕೆ ಸಂಗತವಲ್ಲ. ಏತಕ್ಕೆಂದರೆ—ಅತಿಕ್ರಾಂತಗಳಾದ ದಿವಸ ಗಳನ್ನು ಲೆಕ್ಕಮಾಡಿ ಅವುಗಳ ಸಂಖ್ಯಾವಿಶೇಷವನ್ನು (ಹತ್ತು ಇಪ್ಪತ್ತು ಮೂ ವತ್ತು ಇತ್ಯಾದಿರೀತಿಯಲ್ಲಿ) ಈಗ ನಿಷ್ಕರ್ಷಿಸುತ್ತೇವೆ; ಈ ಸಂಖ್ಯೆಯೆಂಬುದು ಅತಿಕ್ರಾಂತಗಳಾದ ದಿವಸಗಳ ಧರ್ಮವಾಗಿರುವುದು; ಆ ದಿವಸಗಳೆಂಬ ಧರ್ಮಿ ಈಗ

ಇಲ್ಲವಾದರೂ ಅದರ ಧರ್ಮವಾದ ಸಂಖ್ಯೆ ಈಗ ನಮ್ಮ ಜ್ಞಾನಕ್ಕೆ ಗೋಚರವಾಗುತ್ತಲೇ ಇರುತ್ತದೆಯೆಂಬುದು ಸರ್ವಾನುಭವಸಿದ್ಧವಾಗಿರುವುದು. ಅದರಂತೆಯೇ ಅತೀತಾಗಾಮಿಪದಾರ್ಥಗಳು ಈಗ ಇಲ್ಲವಾದರೂ ಈಗಿನ ಜ್ಞಾನದಿಂದ ಅವುಗಳಲ್ಲಿ ಪ್ರಾಕಟ್ಯವೆಂಬ ಧರ್ಮವು ಉಂಟಾಗಲು ತಡೆಯಿಲ್ಲ. ಅಂಥ ಧರ್ಮದಿಂದಲೇ ಜ್ಞಾನವು ಅನುಮೇಯವಾಗಿರುವುದರಿಂದ ಜ್ಞಾನಕ್ಕೆ ಪ್ರತ್ಯಕ್ಷತ್ವವನ್ನು ಎಂದರೆ ಸ್ವಯಂಪ್ರಕಾಶತ್ವವನ್ನು ಅಂಗೀಕರಿಸಲಾಗುವುದಿಲ್ಲ.

## ೮೨೧. ಲಿಂಗಲಿಂಗಿನೋರ್ವೈಯಧಿಕರಣ್ಯಕಥಂತಾಶಂಕಾ.

"ಪೂಜ್ಯರೆ! ಲಿಂಗದಿಂದ ಲಿಂಗಿಯನ್ನು ಅನುಮಿಸುವುದಾದರೆ ಅವುಗಳೆರಡೂ ಒಂದೇ ಆಶ್ರಯದಲ್ಲಿ ಇರಬೇಕು. ಹೊಗೆಯೆಂಬ ಲಿಂಗದಿಂದ ಹೊಗೆಯಿರುವ ಸ್ಥಳದಲ್ಲಿಯೇ ಅಗ್ನಿಯನ್ನು ಅನುಮಿಸಬಹುದಲ್ಲದೆ ಮತ್ತೊಂದು ಸ್ಥಳದಲ್ಲಿ ಅನುಮಿಸಲಾಗುವುದಿಲ್ಲ. ಪ್ರಾಕಟ್ಯವೆಂಬ ಲಿಂಗವಾದರೆ ಬಾಹ್ಯವಾದ ಪದಾರ್ಥದಲ್ಲಿ ಇರುವುದೆಂದು ಹೇಳಿದಿರಿ; ಅದರಿಂದ ಅನುಮಿಸಲ್ಪಡುವ ಜ್ಞಾನವಾದರೆ ಶರೀರಾಂತರ್ವರ್ತಿಯಾದ ಆತ್ಮನಲ್ಲಿ ಇರುವುದಲ್ಲದೆ ಬಾಹ್ಯಪದಾರ್ಥದಲ್ಲಿ ಇಲ್ಲ. ಹೀಗಿರುವಲ್ಲಿ ಅನ್ಯತ್ರ ಇರುವ ಲಿಂಗದಿಂದ ಮತ್ತೊಂದುಕಡೆಯಲ್ಲಿರುವ ಲಿಂಗಿಯನ್ನು ಹೇಗೆ ಅನುಮಿಸಲಾದೀತು?"

## ೮೨೨. ಲಿಂಗಿಸ್ವಭಾವವಿಶೇಷಾತ್ತತ್ಪರಿಹಾರಃ.

ಪ್ರಾಕಟ್ಯವೆಂಬ ಲಿಂಗದಿಂದ ಅನುಮಿಸಲ್ಪಡುವ ಜ್ಞಾನವೆಂಬ ಲಿಂಗಿಯ ಸ್ವಭಾವವನ್ನು ಚೆನ್ನಾಗಿ ವಿಮರ್ಶೆಮಾಡಿದರೆ ಈ ಆಶಂಕೆ ಪಲಾಯನಸೂಕ್ತವನ್ನು ಜಪಿಸುವುದು. ಜ್ಞಾನವೆಂಬುದು ಯಾವಾಗಲೂ ಸ್ವಾಶ್ರಯನಾದ ಆತ್ಮನಿಗೇ ಪ್ರಕಾಶಿಸುವ ವಸ್ತುವಾಗಿರುವುದಲ್ಲದೆ ಬಾಹ್ಯಪದಾರ್ಥಕ್ಕೆ ಸ್ಫುರಿಸುವಂಥದಲ್ಲ. ನಮ್ಮ ಮತದಲ್ಲಿ ಆತ್ಮನು ವಿಭುವಾದುದರಿಂದ ಎಂದರೆ ವ್ಯಾಪಕನಾದುದರಿಂದ ಶರೀರದ ಹೊರಭಾಗದಲ್ಲಿಯೂ ಅವನಿಗೆ ಸ್ಥಿತಿಯಿದ್ದರೂ ಜ್ಞಾನೋದಯವು ಅವನಿಗೆ ಶರೀರದ ಒಳಭಾಗದಲ್ಲಿಯೇ ಉಂಟಾಗಬೇಕಲ್ಲದೆ ಹೊರಭಾಗದಲ್ಲಿ ಉಂಟಾಗಲಾರದು. ಅಶನ, ಪಾನ, ಶಯನ, ಇವೇ ಮೊದಲಾದುವುಗಳಿಂದ ಸುಖವನ್ನು ಬಯಸುವ ಆತ್ಮನಿಗೆ ಅಶನಾದಿಗಳೂ ಅವುಗಳ ಸುಖವೂ ಶರೀರದಲ್ಲಿಯೇ ಉಂಟಾಗುವುವಲ್ಲದೆ ಹೊರಗಡೆಯಲ್ಲಿ ಹೇಗೆ ಉಂಟಾಗಲಾರವೋ; ಅದರಂತೆ ಜ್ಞಾನವೂ ಹೊರಭಾಗದಲ್ಲಿ ಉಂಟಾಗಲಾರದು. ಆದುದರಿಂದ ವಿಷಯಗತವಾದ ಪ್ರಾಕಟ್ಯಲಿಂಗದಿಂದ ಶರೀರಾಭ್ಯಂತರಭಾಗದಲ್ಲಿ ಆತ್ಮನಿಗೆ ಜ್ಞಾನಾನುಮಾನವನ್ನು ಮಾಡಲು ಯಾವ ತಡೆಯೂ ಇಲ್ಲ.

## ೮೨೩. ಕ್ಷಣಿಕಸ್ಯ ಅತೀತಜ್ಞಾನಸ್ಯ ವರ್ತಮಾನಕಾಲಿಕತ್ವೇನ ಅನುಮಾನಕಥಂತಾಶಂಕಾ.

"ಪೂಜ್ಯರೆ! ಜನಕವು ಜನ್ಯಕ್ಕಿಂತಲೂ ಪೂರ್ವಕಾಲಿಕವೆಂದೂ, ಜನ್ಯವು ಜನಕಕ್ಕಿಂತಲೂ ಉತ್ತರಕಾಲಿಕವೆಂದೂ ಲೋಕಾನುಭವದಲ್ಲಿ ಸಿದ್ಧವಾಗಿರುವುದು. ಪ್ರಾಕಟ್ಯವೆಂಬ ಜನ್ಯಕ್ಕೆ ಜ್ಞಾನವು ಜನಕವಾದುದಾದರೆ ಜ್ಞಾನವು ಪೂರ್ವಕಾಲಿಕವೆಂದೂ, ಪ್ರಾಕಟ್ಯವು ಉತ್ತರಕಾಲಿಕವೆಂದೂ ಸಿದ್ಧವಾಯಿತು. ಮತ್ತು ಜ್ಞಾನವು ಕ್ಷಣಕಾಲಕ್ಕಿಂತಲೂ ಹೆಚ್ಚುಕಾಲ ನಿಲ್ಲಲಾರದಾದುದರಿಂದ ಪ್ರಾಕಟ್ಯವನ್ನು ಉಂಟುಮಾಡಿ ಆಗಲೇ ನಷ್ಟವಾಗುವುದು. ಎಂದರೆ ಉತ್ತರಕಾಲಿಕವಾದ ಪ್ರಾಕಟ್ಯದ ಕಾಲಕ್ಕೆ ಜ್ಞಾನವು ಅತೀತವಾಗಿರುವುದಲ್ಲದೆ ವರ್ತಮಾನವಾಗಲಾರದು. ಹೀಗಿರುವಲ್ಲಿ ಉತ್ತರಕಾಲಿಕವಾದ ಪ್ರಾಕಟ್ಯವೆಂಬ ಲಿಂಗದಿಂದ ಜ್ಞಾನವನ್ನು ಅನುಮಿಸುವುದಾದರೆ "ನಾನು ಘಟವನ್ನು ತಿಳಿದೆನು" ಎಂಬುದಾಗಿಯೇ ವ್ಯವಹಾರವು ಉಂಟಾಗಬೇಕಲ್ಲದೆ "ನಾನು ಘಟವನ್ನು ತಿಳಿಯುತ್ತೇನೆ" ಎಂಬ ವ್ಯವಹಾರವು ಎಂದಿಗೂ ಉಂಟಾಗಕೂಡದಾಗಿ ಬರುವುದು. ಆದರೆ ಅಂಥ ವ್ಯವಹಾರವೂ ಪ್ರಾಮಾಣಿಕವಾಗಿ ಲೋಕದಲ್ಲಿ ವಾಡಿಕೆಯಾಗಿರುವುದು. ಇದು ಹೇಗೆ ಸಮಂಜಸವಾದೀತು ?"

## ೮೨೪. ಅತಿಶೈಘ್ರ್ಯಾತ್ತದುಪಪತ್ತಿಃ

ಇಂಥ ಆಶಂಕೆ ಸಂಗತವಲ್ಲ ಏತಕ್ಕೆಂದರೆ—ಇಂದ್ರಿಯಕ್ಕೆ ವಿಷಯದೊಡನೆ ಸಂಯೋಗವು ಉಂಟಾದಮೇಲೆಯೇ "ನಾನು ಇದನ್ನು ತಿಳಿಯುತ್ತೇನೆ' ಎಂಬ ಅನುಭವವುಂಟಾಗುವುದು. ಜ್ಞಾನವು ಉಂಟಾದುದಕ್ಕೂ, ಅದರಿಂದ ವಿಷಯದಲ್ಲಿ ಪ್ರಾಕಟ್ಯವುಂಟಾದುದಕ್ಕೂ, ಅಂಥ ಪ್ರಾಕಟ್ಯದಿಂದ ಆತ್ಮನಲ್ಲಿ ಜ್ಞಾನವನ್ನು ಅನುಮಿಸುವುದಕ್ಕೂ, ಮಧ್ಯದಲ್ಲಿ ವಿಚ್ಛೇದವಿಲ್ಲ. ಅತಿಶೀಘ್ರವಾಗಿಯೇ ಇದು ನಡೆವುದರಿಂದ ವರ್ತಮಾನಕಾಲಕ್ಕೆ ಅತ್ಯಂತಸಮೀಪಕಾಲದಲ್ಲಿ ಇದ್ದ ಜ್ಞಾನವನ್ನು ವರ್ತಮಾನಕಾಲದಲ್ಲಿ ಇರುವಂತೆ ಅನುಮಿಸುವುದರಲ್ಲಿ ಯಾವ ಅಭ್ಯಂತರವೂ ಇಲ್ಲ. ಕಮಲಪುಷ್ಪದ ನೂರಾರು ದಳಗಳನ್ನು ಒಟ್ಟಿಗೆ ಜೋಡಿಸಿ ತೀಕ್ಷ್ಣವಾದ ಸೂಜಿಯನ್ನು ಅವುಗಳಲ್ಲಿ ವೇಗದಿಂದ ನುಗ್ಗಿಸಿದರೆ ಕಣ್ಣುಮುಚ್ಚಿತೆಗೆಯುವುದರೊಳಗಾಗಿ ಅಷ್ಟೊಂದು ದಳಗಳನ್ನೂ ಭೇದಿಸಿಕೊಂಡು ಆ ಸೂಜಿ ಹೊರಗೆ ಹೊರಡುವುದು. ಆದರೆ ಯಾವ ಕ್ರಮದಲ್ಲಿ ದಳಗಳನ್ನು ನಾವು ಜೋಡಿಸಿದ್ದೆವೋ ಅದೇ ಕ್ರಮದಲ್ಲಿ ಆ ಸೂಜಿ ಒಂದೊಂದು ದಳವನ್ನಾಗಿ ಭೇದಿಸುತ್ತ ಎಲ್ಲಾ ದಳಗಳಿಗಿಂತಲೂ

ಕೊನೆಯಲ್ಲಿ ಕೊನೆಯ ದಳವನ್ನು ಭೇದಿಸಿಕೊಂಡು ಹೊರಗೆ ಹೊರಟಿರುವುದಲ್ಲದೆ ಮೊದಲನೆಯ ದಳವನ್ನು ಭೇದಿಸುವುದಕ್ಕೆ ಆರಂಭಿಸಿದಾಗಲೇ ಕೊನೆಯದಳವನ್ನೂ ಭೇದಿಸಿಬಿಡಲಿಲ್ಲ. ಆದರೂ "ಈ ನೂರಾರು ದಳಗಳನ್ನೂ ಒಂದೇ ಕಾಲದಲ್ಲಿ ನಾನು ಭೇದಿಸುತ್ತೇನೆ" ಎಂಬ ವ್ಯವಹಾರವು ಲೋಕದಲ್ಲಿ ಕಾಣುವುದು. ಅತಿ ಶೈಘ್ರ್ಯದಿಂದ ಉಂಟಾದ ವರ್ತಮಾನಕಾಲವ್ಯಾಪ್ತಿಯೇ ಇದಕ್ಕೆ ಕಾರಣವೆಂಬುದನ್ನು ಗೋಪಾಲಾಂಗನೆಯರೂ ಸಹ ಬಲ್ಲರು. ಅಂಥ ಕಾರಣವು ಪ್ರಕೃತದಲ್ಲಿಯೂ ಸಂಭವಿಸಲು ತಡೆಯೇನು?

## ೮೨೫. ಜ್ಞಾನಸ್ಯ ಪ್ರಾಕಟ್ಯಾನುಮೇಯತ್ವೇ ಜಡತ್ವಪ್ರಸಂಗಾಶಂಕಾ.

"ಪೂಜ್ಯರೆ! ಜ್ಞಾನವು ಅಜಡವೆಂದೂ ಘಟಾದಿಪದಾರ್ಥಗಳು ಜಡಗಳೆಂದೂ ವಿಭಾಗವಿರುವುದು; ಈಗ ಜ್ಞಾನವು ಸ್ವಯಂಪ್ರಕಾಶವಾಗದೆ ಪ್ರಾಕಟ್ಯಾನುಮೇಯವಾಗಿ ಪರಪ್ರಕಾಶ್ಯವಾಗುವುದಾದರೆ ಜ್ಞಾನಕ್ಕೂ ಘಟಾದಿಪದಾರ್ಥಗಳಿಗೂ ತಾರತಮ್ಯವಿಲ್ಲದೆ ಹೋಗುವುದರಿಂದ ಜ್ಞಾನವು ತನ್ನ ಸ್ವಾಭಾವಿಕವಾದ ಅಜಡತ್ವವನ್ನು ಕಳೆದುಕೊಂಡು ಘಟಾದಿಪದಾರ್ಥಗಳಂತೆ ಜಡತ್ವವನ್ನು ಹೊಂದಬೇಕಾಗುವುದಲ್ಲವೆ?"

## ೮೨೬. ಅಜಡತ್ವಸ್ಯ ದುರ್ವಚತ್ವಾತ್ ಜಡತ್ವಪ್ರಸಂಗಸ್ಯ ಇಷ್ಟಾಪತ್ತ್ಯಾ ಪರಿಹಾರಃ.

ಇಂಥ ಆಶಂಕೆ ಸಂಗತವಲ್ಲ. ಏತಕ್ಕೆಂದರೆ—ಜ್ಞಾನದಲ್ಲಿ ನೀವು ಆಪಾದನೆಮಾಡುವ ಜಡತ್ವವು ನಮಗೆ ಅನಿಷ್ಟವಲ್ಲ. ಮತ್ತು ಅಜಡತ್ವವೆಂಬುದು ಇಂಥದೆಂದು ಅದರ ಸ್ವರೂಪವನ್ನು ನಿರೂಪಿಸಲಾಗುವುದಿಲ್ಲ; ಸ್ವಯಂಪ್ರಕಾಶತ್ವಸಾಧನಕ್ಕಾಗಿ ನೀವು ಹೇಳಿದ ಅನುಮಾನದೊಳಗೆ—"ವಿದ್ಯಮಾನದಶೆಯಲ್ಲಿ ಸರ್ವದಾ ಭಾಸಮಾನವಾಗಿರುವಿಕೆ" ಎಂಬ ಅಂಶವು ಹೇತುವಾಗಿಯೂ, "ತಾನೇ ತನ್ನನ್ನು ಪ್ರಕಾಶಪಡಿಸುವಿಕೆ" ಎಂಬ ಸ್ವಯಂಪ್ರಕಾಶತ್ವಾಂಶವು ಸಾಧ್ಯವಾಗಿಯೂ, ಇರುವುದು; ಇವುಗಳೊಳಗೆ ಹೇತ್ವಂಶವನ್ನೇ ಅಜಡತ್ವವೆಂದು ಹೇಳುವಿರೋ? ಅಥವಾ ಸಾಧ್ಯಾಂಶವನ್ನು ಅಜಡತ್ವವೆಂದು ಹೇಳುವಿರೋ?

ಪ್ರಥಮಪಕ್ಷದಲ್ಲಿಯೂ—ಜ್ಞಾನವು ಸ್ವೋತ್ಪತ್ತಿಕಾಲದಲ್ಲಿಯೂ ತನ್ನ ಪ್ರಕಾಶವನ್ನು ತಪ್ಪಿಸಿಕೊಳ್ಳುವುದಿಲ್ಲವೆಂದು ಅಭಿಪ್ರಾಯವೋ? ಅಥವಾ ಉತ್ಪತ್ತ್ಯನಂತರಕಾಲದಲ್ಲಿ ತನ್ನ ಪ್ರಕಾಶವನ್ನು ತಪ್ಪಿಸಿಕೊಳ್ಳುವುದಿಲ್ಲವೆಂದು ಅಭಿಪ್ರಾಯವೋ?

ಮೊದಲನೆಯ ಅಭಿಪ್ರಾಯವಿರುವುದಾದರೆ—ಜ್ಞಾನದ ಉತ್ಪತ್ತಿಕಾಲದಲ್ಲಿ ವಿಷಯಮಾತ್ರವೇ ಪ್ರಕಾಶಿಸುವುದಲ್ಲದೆ ಜ್ಞಾನವು ಪ್ರಕಾಶಿಸುವುದಿಲ್ಲವೆಂಬುದನ್ನು ಹಿಂದೆಯೇ ನಾವು ತೋರಿಸಿರುವೆವಾದುದರಿಂದ ಹೇತುವೇ ಅಸಿದ್ಧವಾಗಿರುವ ಕಾರಣ ತದ್ರೂಪವಾದ ಅಜಡತ್ವವೂ ಅಸಿದ್ಧವಾಗಿರುವುದು.

ಎರಡನೆಯ ಅಭಿಪ್ರಾಯವಿರುವುದಾದರೆ ಎಂದರೆ ಉತ್ಪತ್ತ್ಯನಂತರಕಾಲ ದಲ್ಲಿ ತನ್ನ ಪ್ರಕಾಶವನ್ನು ತಪ್ಪಿಸಿಕೊಳ್ಳದಿರುವಿಕೆಯೇ ಅಜಡತ್ವವೆನಿಸಿಕೊಳ್ಳುವು ದಾದರೆ ಸುಖದುಃಖಗಳಲ್ಲಿ ಅಜಡತ್ವವಿಲ್ಲದಿದ್ದರೂ ಈ ಹೇತುವಿರುವುದರಿಂದ ಇದು ವ್ಯಭಿಚರಿತವಾಗುವುದು. ಸುಖವಾಗಲಿ ದುಃಖವಾಗಲಿ ಉತ್ಪನ್ನವಾದರೆ ಅದು ತಪ್ಪದೆ ಪ್ರಕಾಶಿಸಿಯೇ ಪ್ರಕಾಶಿಸುವುದರಿಂದ ಉತ್ಪತ್ತ್ಯನಂತರಕಾಲದಲ್ಲಿ ತನ್ನ ಪ್ರಕಾಶವನ್ನು ತಪ್ಪಿಸಿಕೊಳ್ಳದಿರುವಿಕೆಯೆಂಬ ಹೇತು ಅವುಗಳಲ್ಲಿಯೂ ಇರುವು ದಷ್ಟೆ ? ಆದರೂ ಅವು ಅಜಡವಲ್ಲವಷ್ಟೆ ?

ದ್ವಿತೀಯಪಕ್ಷದಲ್ಲಿ—ಎಂದರೆ "ತಾನೇ ತನ್ನನ್ನು ಪ್ರಕಾಶಪಡಿಸುವಿಕೆ" ಎನಿಸಿಕೊಂಡ ಸ್ವಯಂಪ್ರಕಾಶತ್ವವೆಂಬ ಸಾಧ್ಯಾಂಶವನ್ನೇ ಅಜಡತ್ವವೆಂದು ಹೇಳುವ ಪಕ್ಷದಲ್ಲಿ ಇಂಥ ಸಾಧ್ಯವೇ ಅಪ್ರಸಿದ್ಧವಾಗಿರುವುದು. ಪೂರ್ವೋಕ್ತ ರೀತಿಯಲ್ಲಿ ಹೇತುವಿಗೆ ಅಸಿದ್ಧಿದೋಷವೂ ವ್ಯಭಿಚರಿತತ್ವವೂ ಬಂದುದರಿಂದ ಈ ಹೇತು ಸದ್ಧೇತುವಾಗಲಿಲ್ಲವಾಗಿ ಸ್ವಯಂಪ್ರಕಾಶತ್ವವೆಂಬ ಸಾಧ್ಯವನ್ನು ಸಾಧಿಸ ಲಾರದಾದುದರಿಂದ ಸಾಧ್ಯವೂ ಪ್ರಸಿದ್ಧವಾಗಲಿಲ್ಲ. ಆದುದರಿಂದ ಅಜಡತ್ವವೆಂ ಬುದು ಇಂಥದೆಂದು ನಿಷ್ಕರ್ಷಿಸಲಾಗುವುದಿಲ್ಲವಾದಕಾರಣ ಜ್ಞಾನದಲ್ಲಿ ನೀವು ಆಪಾದನೆಮಾಡುವ ಜಡತ್ವವು ನಮಗೆ ಅನಿಷ್ಟವಲ್ಲ.

### ೮೨೭ ಅಂಗುಳ್ಯಗ್ರೇಣ ಸ್ವಸ್ಪರ್ಶನವತ್ ಅಶಕ್ಯತ್ವಾತ್ ಅನು ಮಾನಾಂತರೇಣಾಪಿ ಜ್ಞಾನಸ್ಯ ಸ್ವಯಂಪ್ರಕಾಶತ್ವಾಸಿದ್ಧಿಃ

ಅನುಮಾನಾಂತರದಿಂದ ಜ್ಞಾನಕ್ಕೆ ಸ್ವಯಂಪ್ರಕಾಶತ್ವವನ್ನು ಸಾಧಿಸು ತ್ತೇವೆಂದು ಬಾಯಿಬಿಟ್ಟು ಗಟ್ಟಿಯಾಗಿ ಹೇಳಬೇಡಿರಿ. ಮತ್ತೊಂದು ಪದಾರ್ಥ ವನ್ನು ಮುಟ್ಟಬಲ್ಲುದಾದ ಅಂಗುಳ್ಯಗ್ರಕ್ಕೆ ತನ್ನನ್ನು ತಾನು ಮುಟ್ಟಿಕೊಳ್ಳುವ ಸಾಮರ್ಥ್ಯವು ಇಲ್ಲವೆಂಬುದನ್ನು ಹಿಂದೆಯೇ ತೋರಿಸಿರುವೆವಾದುದರಿಂದ ವ್ಯಾ ಘಾತದೋಷವು ಅಪರಿಹಾರ್ಯವಾಗುವುದಷ್ಟೆ? ಇದೇ ಅರ್ಥವನ್ನು ಪ್ರಾಜ್ಞರು ಕಾರಿಕಾರೂಪವಾಗಿ ತೋರಿಸಿರುವರು.—

"ಅಂಗುಳ್ಯಗ್ರಂ ಯಥಾಽಽತ್ಮಾನಂ ನಾತ್ಮನಾ ಸ್ಪ್ರಷ್ಟುಮರ್ಹತಿ ।
ಸ್ವಾಂಶೇನ ಜ್ಞಾನಮಪ್ಯೇವಂ ನಾತ್ಮಾನಂ ಜ್ಞಾತುಮರ್ಹತಿ ॥"

### ೬೨೮ ಜ್ಞಾನಸ್ಯ ಪ್ರಾಕಟ್ಯಾನುಮೇಯತ್ವೋಪಸಂಹಾರಃ

ಆದಕಾರಣ ಜ್ಞಾನಕ್ಕೆ ಸ್ವಯಂಪ್ರಕಾಶತ್ವವನ್ನು ಸಾಧಿಸಿಕೊಡುವ ಪ್ರಮಾಣವು ಯಾವುದೊಂದೂ ಸಂಭವಿಸುವುದಿಲ್ಲವಾದುದರಿಂದ ಉಕ್ತರೀತಿಯಲ್ಲಿ ಫಲಾನುಮೇಯತ್ವವನ್ನಾಗಲಿ, ಸಂಬಂಧಾನುಮೇಯತ್ವವನ್ನಾಗಲಿ, ಪ್ರಾಕಟ್ಯಾನುಮೇಯತ್ವವನ್ನಾಗಲಿ ಒಪ್ಪಿಕೊಂಡು ಜ್ಞಾನಕ್ಕೆ ಪರಪ್ರಕಾಶ್ಯತ್ವವನ್ನೇ ಅಂಗೀಕರಿಸಬೇಕು.

**ಇಂತು ತತ್ತ್ವಶುದ್ಧಿಯೆಂಬ ವಿಶಿಷ್ಟಾದ್ವೈತಪ್ರಕರಣಗ್ರಂಥದೊಳ್ ಧರ್ಮಭೂತಜ್ಞಾನಪರಿಚ್ಛೇದದಲ್ಲಿ ಸ್ವಯಂಪ್ರಕಾಶತ್ವಾನಭ್ಯುಪಗಂತೃನೈಯಾಯಿಕ-ಮೀಮಾಂಸಕ-ಮತನಿರೂಪಣ ಪ್ರಕರಣಂ ದ್ವಿತೀಯಂ ॥೨॥**

## ತೃತೀಯಪ್ರಕರಣಂ.

### ೬೨೯. ಉಕ್ತಸ್ಯ ಮತದ್ವಯಸ್ಯಾಪಿ ನಿರಸನೀಯತ್ವಪ್ರತಿಜ್ಞಾ.

ಹೀಗೆ ಜ್ಞಾನವು ಮಾನಸಪ್ರತ್ಯಕ್ಷವೆಂಬ ಜ್ಞಾನಾಂತರಕ್ಕೆ ಗ್ರಾಹ್ಯವಾಗುವುದಲ್ಲದೆ ಸ್ವಗ್ರಾಹ್ಯವಾಗುವುದಿಲ್ಲವಾದುದರಿಂದ ಸ್ವಯಂಪ್ರಕಾಶವಾಗುವುದಿಲ್ಲವೆಂಬ ನೈಯಾಯಿಕರ ಮತವನ್ನೂ, ಫಲಾನುಮೇಯವಾಗಿಯಾಗಲಿ ಸಂಬಂಧಾನುಮೇಯವಾಗಿಯಾಗಲಿ, ಪ್ರಾಕಟ್ಯಾನುಮೇಯವಾಗಿಯಾಗಲಿ ಇರುವುದಲ್ಲದೆ ಸ್ವಯಂಪ್ರಕಾಶವಾಗುವುದಿಲ್ಲವೆಂಬ ಮೀಮಾಂಸಕರ ಮತವನ್ನೂ ವಿಶದವಾಗಿ ನಿರೂಪಿಸಿ ತೋರಿಸಿದೆವು. ಇದೇ ಕ್ರಮದಲ್ಲಿ ಇವರ ಮತಗಳಲ್ಲಿರುವ ದೋಷಗಳ ಉದ್ಘಾಟನೆಯನ್ನು ಮಾಡುವುದರಮೂಲಕ ಇವರ ಮತಗಳನ್ನು ನಿರಾಕರಿಸಿ ಜ್ಞಾನಕ್ಕೆ ಸ್ವಯಂಪ್ರಕಾಶತ್ವವನ್ನು ಸ್ಥಾಪಿಸುವ ನಿರರ್ಗಳವಾದ ದಾರಿಯನ್ನು ಇಲ್ಲಿ ತೋರಿಸುವೆವು.—

### ೬೩೦. ತತ್ರ ಪ್ರಥಮಮನುಮಾನೇನ ಜ್ಞಾನಸ್ಯ ಸ್ವನಿರೂಪಿತವಿಷಯತಾಕತ್ವರೂಪಸ್ವಯಂಪ್ರಕಾಶತ್ವಸಮರ್ಥನಂ.

"ನಾನು ಇದನ್ನು ತಿಳಿಯುತ್ತೇನೆ" ಎಂಬ ಅನುಭವಸ್ವರೂಪದಲ್ಲಿ ಆಕ್ಷೇಪಮಾಡುವವರು ಯಾರೂ ಇಲ್ಲವಾದುದರಿಂದ ಜ್ಞಾನವು ಜ್ಞಾನಕ್ಕೆ ವಿಷಯವಾ

ಗಿರುವುದೆಂಬುದರಲ್ಲಿ ವಿವಾದವಿಲ್ಲ. ಜ್ಞಾನದಲ್ಲಿರುವ ಅಂಥ ವಿಷಯತ್ವಕ್ಕೆ ನಿರೂಪಕವಾದ ಜ್ಞಾನವು ಯಾವುದೆಂಬುದನ್ನು ಈಗ ನಿಷ್ಕರ್ಷಿಸಬೇಕು. ನೈಯಾಯಿಕರು ಹೇಳುವಂತೆ ಮಾನಸಪ್ರತ್ಯಕ್ಷವಾಗಲಿ, ಮೀಮಾಂಸಕರು ಹೇಳುವಂತೆ ಅನುಮಿತಿಯಾಗಲಿ ಈ ಜ್ಞಾನನಿಷ್ಠವಿಷಯತ್ವಕ್ಕೆ ನಿರೂಪಕವಾಗುವುದಿಲ್ಲವೆಂಬುದನ್ನೂ, ಜ್ಞಾನನಿಷ್ಠವಾದ ವಿಷಯತೆಗೆ ಅದೇ ಜ್ಞಾನವು ನಿರೂಪಕವಾಗಿರುವುದೆಂಬುದನ್ನೂ ಒಂದು ಅನುಮಾನಪ್ರಮಾಣದಿಂದ ಸಾಧಿಸಿ ತೋರಿಸುವೆವು.

ಹೇಗೆಂದರೆ "ಯಾವ ಧರ್ಮವು ಯಾವುದಕ್ಕಿಂತಲೂ ಇತರದಿಂದ ನಿರೂಪಿತವಾಗದೆ ಕಿಂಚಿನ್ನಿರೂಪಿತವಾಗಿರುವುದೋ ಅಂಥ ಧರ್ಮವು ಅಂಥ ವಸ್ತುವಿನಿಂದಲೇ ನಿರೂಪಿತವಾಗಿರುವುದು" ಎಂಬುದು ಲೋಕಾನುಭವಸಿದ್ಧವಾಗಿರುವುದು. ಈ ವಿಷಯದಲ್ಲಿ ಮೂರು ದೃಷ್ಟಾಂತಗಳನ್ನು ತೋರಿಸುವೆವು.

ಚೈತ್ರನಿಗೆ ಮೈತ್ರನೆಂಬ ಒಬ್ಬನೇ ಮಗನಿರುವನು; ಇವರಿಬ್ಬರಿಗೂ ಪಿತಾಪುತ್ರಭಾವಸಂಬಂಧವು ಬಂದುದರಿಂದ ಚೈತ್ರನಲ್ಲಿ ಪಿತೃತ್ವವೆಂಬ ಧರ್ಮವೂ, ಮೈತ್ರನಲ್ಲಿ ಪುತ್ರತ್ವವೆಂಬ ಧರ್ಮವೂ ಬಂದಿರುವುವು. ಚೈತ್ರನಲ್ಲಿರುವ ಪಿತೃತ್ವವೆಂಬ ಧರ್ಮವು ಮೈತ್ರನಿಗಿಂತಲೂ ಇತರದಿಂದ ನಿರೂಪಿತವಾಗದೆ ಕಿಂಚಿನ್ನಿರೂಪಿತವಾಗಿರುವುದರಿಂದ ಅದು ಮೈತ್ರನಿಂದಲೇ ನಿರೂಪಿತವಾಗುವುದಲ್ಲದೆ ಮತ್ತೊಂದರಿಂದ ಅಲ್ಲ. ಆದುದರಿಂದ ಮೈತ್ರನೇ ಚೈತ್ರನಲ್ಲಿರುವ ಪಿತೃತ್ವಕ್ಕೆ ನಿರೂಪಕನಾಗಿರುವನು.

ಅಥವಾ ಭೂತಲವೆಂಬ ಆಧಾರದಲ್ಲಿ ಗೋವೆಂಬ ಆಧೇಯವಿರುವುದು. ಈ ಎರಡಕ್ಕೂ ಆಧಾರಾಧೇಯಭಾವಸಂಬಂಧವಿರುವುದರಿಂದ ಭೂತಲದಲ್ಲಿ ಆಧಾರತ್ವವೂ ಗೋವಿನಲ್ಲಿ ಆಧೇಯತ್ವವೂ ಬಂದಿರುವುದು. ಭೂತಲದಲ್ಲಿರುವ ಆಧಾರತ್ವವೆಂಬ ಧರ್ಮವು ಗೋವಿಗಿಂತಲೂ ಇತರದಿಂದ ನಿರೂಪಿತವಾಗದೆ ಕಿಂಚಿನ್ನಿರೂಪಿತವಾಗಿರುವುದರಿಂದ ಅದು ಗೋವಿನಿಂದಲೇ ನಿರೂಪಿತವಾಗುವುದಲ್ಲದೆ ಮತ್ತೊಂದರಿಂದ ಅಲ್ಲ. ಆದುದರಿಂದ ಗೋವೇ ಭೂತಲದಲ್ಲಿರುವ ಆಧಾರತ್ವಕ್ಕೆ ನಿರೂಪಕವಾಗಿರುವುದು.

ಅಥವಾ "ಇದು ಘಟವು" ಎಂಬ ಜ್ಞಾನಕ್ಕೆ ಘಟವು ವಿಷಯವಾಗಿರುವುದು. ಈ ಎರಡಕ್ಕೂ ವಿಷಯವಿಷಯಿಭಾವಸಂಬಂಧವುಂಟಾಗಿರುವುದರಿಂದ ಘಟದಲ್ಲಿ ವಿಷಯತ್ವವೂ, ಜ್ಞಾನದಲ್ಲಿ ವಿಷಯಿತ್ವವೂ ಸಿದ್ಧವಾಗಿರುವುದು. ಆ ಘಟದಲ್ಲಿರುವ ವಿಷಯತ್ವವೆಂಬ ಧರ್ಮವು ಆ ಜ್ಞಾನಕ್ಕಿಂತಲೂ ಇತರದಿಂದ ನಿರೂಪಿತ

ವಾಗದೆ ಕಿಂಚಿನ್ನಿರೂಪಿತವಾಗಿರುವುದರಿಂದ ಆ ವಿಷಯತ್ವವು ಆ ಜ್ಞಾನದಿಂದಲೇ ನಿರೂಪಿತವಾಗುವುದಲ್ಲದೆ ಮತ್ತೊಂದರಿಂದ ಅಲ್ಲ. ಆದುದರಿಂದ ಆ ಜ್ಞಾನಕ್ಕೆ ಗೋಚರವಾದ ಘಟದಲ್ಲಿರುವ ವಿಷಯತ್ವಕ್ಕೆ ಆ ಜ್ಞಾನವೇ ನಿರೂಪಕವಾಗಿರುವುದು.

"ನಾನು ಇದನ್ನು ತಿಳಿಯುತ್ತೇನೆ" ಎಂಬ ಪೂರ್ವೋಕ್ತವಾದ ಅನುಭವದಿಂದ ಸಿದ್ಧವಾಗಿರುವ ಜ್ಞಾನನಿಷ್ಠವಿಷಯತ್ವವನ್ನು ಉದ್ದೇಶಿಸಿ ತದ್ ಜ್ಞಾನನಿರೂಪಿತತ್ವವನ್ನು ಸಾಧಿಸುವೆವು. ತದ್‌ಜ್ಞಾನೇತರನಿರೂಪಿತವಾಗದೆ ಕಿಂಚಿನ್ನಿರೂಪಿತವಾಗಿರುವಿಕೆಯೇ ಇದರಲ್ಲಿ ಹೇತುವಾಗಿರುವುದು. ಉಕ್ತಗಳಾದ ದೃಷ್ಟಾಂತಗಳು ವ್ಯಾಪ್ತಿಪರಿಚಯವನ್ನು ಮಾಡಿಕೊಡುವುದರಮೂಲಕ ಈ ಅನುಮಾನಕ್ಕೆ ಸಹಾಯವನ್ನು ಮಾಡುವುವು.

ಹೇತುಶರೀರದಲ್ಲಿ ಸೇರಿರುವ ಕಿಂಚಿನ್ನಿರೂಪಿತತ್ವವೆಂಬ ಒಂದಂಶವೂ, ವಿಷಯತ್ವವೆಂಬ ಪಕ್ಷವೂ ಸಹ "ನಾನು ಇದನ್ನು ತಿಳಿಯುತ್ತೇನೆ" ಎಂಬ ಉಕ್ತಾನುಭವದಿಂದಲೇ ಸಿದ್ಧವಾಗಿರುವುವು. ಹೇತುಶರೀರದಲ್ಲಿರುವ ಜ್ಞಾನೇತರಾನಿರೂಪಿತತ್ವವೆಂಬ ಮತ್ತೊಂದಂಶವಾದರೆ ನೈಯಾಯಿಕರ ಮಾನಸಪ್ರತ್ಯಕ್ಷವನ್ನೂ, ಮೀಮಾಂಸಕರ ಅನುಮಾನವನ್ನೂ ಖಂಡಿಸಿದೆವಾದರೆ ಸಿದ್ಧವಾಗುವುದು. ಖಂಡನಪ್ರಕಾರವನ್ನು ಈ ಮುಂದೆ ತೋರಿಸಿರುವೆವು.

ಆದಕಾರಣ ಜ್ಞಾನಕ್ಕೆ ಸ್ವನಿರೂಪಿತವಿಷಯತ್ವವೇ ಸಿದ್ಧವಾದುದರಿಂದ ಜ್ಞಾನಾಂತರಾಪೇಕ್ಷೆಯಿಲ್ಲದೆಯೇ ಜ್ಞಾನವು ಪ್ರಕಾಶಿಸುವುದಾದಪ್ರಯುಕ್ತ ಜ್ಞಾನಕ್ಕೆ ಸ್ವಯಂಪ್ರಕಾಶತ್ವವು ನಿಷ್ಕಂಟಕವಾಗಿ ಸಿದ್ಧವಾಗುವುದು.

## ೮೩೧ ಸ್ವಯಂಪ್ರಕಾಶತ್ವಾನಭ್ಯುಪಗಂತೃನೈಯಾಯಿಕಮತ ನಿರಸನಪ್ರಕಾರಃ

ಜ್ಞಾನವನ್ನು ಮಾನಸಪ್ರತ್ಯಕ್ಷಗಮ್ಯವೆಂದು ಹೇಳುವ ನೈಯಾಯಿಕರ ಮತವನ್ನು ವೇದಾಂತಿಗಳು ಈ ರೀತಿಯಲ್ಲಿ ಖಂಡಿಸುವರು.—ಈಶ್ವರನನ್ನೂ, ಅವನಿಗೆ ಸರ್ವಜ್ಞತ್ವವನ್ನೂ ಸಹ ನೀವೂ ಒಪ್ಪುತ್ತೀರಿ. ಸರ್ವಜ್ಞತ್ವವೆಂದರೆ ಸಕಲ ಪದಾರ್ಥಗಳನ್ನೂ ಸರ್ವದಾ ಪ್ರತ್ಯಕ್ಷೀಕರಿಸುವಿಕೆ. ಸರ್ವಜ್ಞನಾದ ಈಶ್ವರನು ಸಕಲಪದಾರ್ಥಗಳನ್ನೂ ಪ್ರತ್ಯಕ್ಷೀಕರಿಸುವಾಗ ತನ್ನ ಜ್ಞಾನವನ್ನೂ ಪ್ರತ್ಯಕ್ಷೀಕರಿಸುವನೋ? ಅಥವಾ ಇಲ್ಲವೋ? ಪ್ರಥಮಪಕ್ಷದಲ್ಲಿ ಜ್ಞಾನಕ್ಕೆ ಸ್ವಯಂಪ್ರಕಾಶತ್ವವನ್ನು ಒಪ್ಪಿದಂತಾಯಿತು. ದ್ವಿತೀಯಪಕ್ಷದಲ್ಲಿಯಾದರೆ ತನ್ನ ಜ್ಞಾನವನ್ನು ಪ್ರತ್ಯಕ್ಷೀಕರಿಸದ ಈಶ್ವರನಿಗೆ ಸರ್ವಜ್ಞತ್ವವೇ ಲುಪ್ತವಾಗುವುದು.

ಅದೇತಕ್ಕೆ ? ಈಶ್ವರನು ಮಾನಸಪ್ರತ್ಯಕ್ಷದಿಂದ ತನ್ನ ಜ್ಞಾನವನ್ನೂ, ಅಂಥ ಜ್ಞಾನದಿಂದ ಜ್ಞಾನವ್ಯತಿರಿಕ್ತಗಳಾದ ಸಕಲಪದಾರ್ಥಗಳನ್ನೂ ಸಾಕ್ಷಾತ್ಕರಿಸು ವನೆಂದು ಹೇಳುವೆವಾದುದರಿಂದ ಅವನ ಸರ್ವಜ್ಞತ್ವಕ್ಕೆ ಲೋಪವಿಲ್ಲವಲ್ಲವೆ ?

ಇಲ್ಲ ಹಾಗೆ ಹೇಳಲಾಗುವುದಿಲ್ಲ. ಈಶ್ವರನಿಗೆ ಅಂಥ ಜ್ಞಾನದ್ವಯವಿರುವು ದೆಂಬುದರಲ್ಲಿ ಪ್ರಮಾಣವಿಲ್ಲವಷ್ಟೆ ?

ಅದೇತಕ್ಕೆ ? ಹಾಗೆ ಹೇಳದಿದ್ದರೆ ಸರ್ವಜ್ಞತ್ವಕ್ಕೆ ಲೋಪಬರುವುದಾದುದ ರಿಂದ ಸರ್ವಜ್ಞತ್ವದ ಅನ್ಯಥಾನುಪಪತ್ತಿಯೇ ಅಂಥ ಜ್ಞಾನದ್ವಯವಿರುವುದೆಂಬು ದಕ್ಕೆ ಪ್ರಮಾಣವಾಗಬಹುದಲ್ಲವೆ ?

ಇಲ್ಲ ಅದೂ ಸರಿಬೀಳುವುದಿಲ್ಲ. ದೀಪದ ಪ್ರಭೆ ಸ್ವವ್ಯತಿರಿಕ್ತಗಳಾದ ಪದಾ ರ್ಥಗಳನ್ನು ಪ್ರಕಾಶಪಡಿಸುವಂತೆ ತನ್ನನ್ನೂ ತಾನೇ ಪ್ರಕಾಶಪಡಿಸುವುದಲ್ಲದೆ ಅದ ಕ್ಕಾಗಿ ಮತ್ತೊಂದು ಪ್ರಭೆಯನ್ನು ಹೇಗೆ ಅಪೇಕ್ಷಿಸುವುದಿಲ್ಲವೋ ; ಅದರಂತೆ ಇತರಪದಾರ್ಥಗಳನ್ನು ಈಶ್ವರನಿಗೆ ಪ್ರಕಾಶಪಡಿಸಿಕೊಡುವ ಈಶ್ವರಜ್ಞಾನವು ತನ್ನನ್ನೂ ತಾನೇ ಪ್ರಕಾಶಪಡಿಸುವುದಲ್ಲದೆ ಅದಕ್ಕಾಗಿ ಮಾನಸಪ್ರತ್ಯಕ್ಷವೆಂಬ ಮತ್ತೊಂದು ಜ್ಞಾನವನ್ನು ಅಪೇಕ್ಷಿಸುವುದಿಲ್ಲ. ಹೀಗೆ ಸ್ವಪರನಿರ್ವಾಹಕವಾದ ಒಂದೇ ಜ್ಞಾನದಿಂದ ಸರ್ವಜ್ಞತ್ವಕ್ಕೆ ಉಪಪತ್ತಿ ಉಂಟಾಗುತ್ತಿರುವಲ್ಲಿ ಯಾವ ಅನುಪಪತ್ತಿಯೂ ಇಲ್ಲವಾದುದರಿಂದ ಜ್ಞಾನದ್ವಯವನ್ನು ಕಲ್ಪಿಸಲು ಅವಕಾಶ ವಿಲ್ಲ.

ಅದೇತಕ್ಕೆ ? ಈಶ್ವರನಿಗೆ ಒಂದು ಕಡಮೆಯಾಗಿ ಸರ್ವಜ್ಞತ್ವವಿರಲಿ ಎಂದರೆ ಈಶ್ವರನು ತನ್ನ ಜ್ಞಾನವನ್ನು ತಿಳಿಯಲೇಬೇಡ ; ಆದರೂ ಉಳಿದ ಸಕಲಪದಾರ್ಥ ಗಳನ್ನೂ ತನ್ನ ಜ್ಞಾನದಿಂದ ತಿಳಿವನಾದುದರಿಂದ ಏಕೋನಸರ್ವಜ್ಞತ್ವವು ಈಶ್ವರ ನಿಗೆ ಇರಬಹುದಲ್ಲವೆ ?

ಇಲ್ಲ ಹಾಗೆಯೂ ಹೇಳಲಾಗುವುದಿಲ್ಲ. ತನ್ನ ಜ್ಞಾನವನ್ನು ತಿಳಿದುಕೊ ಳ್ಳದ ಈಶ್ವರನು ತನ್ನನ್ನು "ನಾನು ಜ್ಞಾನಕ್ಕೆ ಆಶ್ರಯನಾಗಿರುವೆನು" ಎಂಬು ದಾಗಿಯೂ ತಿಳಿದುಕೊಳ್ಳಲಾಗುವುದಿಲ್ಲ. "ನಾನು ಬುದ್ಧಿವಂತನಾಗಿರುತ್ತೇನೆ" ಎಂದು ತಿಳಿದುಕೊಳ್ಳುವ ಮನುಷ್ಯನು ಬುದ್ಧಿಯೆಂಬುದನ್ನು ತಿಳಿದುಕೊಳ್ಳಲೇ ಬೇಕ ಲ್ಲವೆ ? ಈಶ್ವರನು ತನ್ನನ್ನು ಜ್ಞಾನಾಶ್ರಯನಾಗಿ ಯಾವಾಗ ತಿಳಿದುಕೊಳ್ಳಲಿಲ್ಲವೋ ಆಗ ಘಟ-ಪಟ-ಮೊದಲಾದ ಇತರಪದಾರ್ಥಗಳನ್ನು ಜ್ಞಾನಾಶ್ರಯಗಳಲ್ಲವೆಂದೂ, ಜ್ಞಾನಕ್ಕೆ ವಿಷಯಗಳಾಗಿರುವುವೆಂದೂ, ಅಥವಾ ಜ್ಞಾನಕ್ಕೆ ವಿಷಯಗಳಲ್ಲವೆಂದೂ, ಸಹ ತಿಳಿದುಕೊಳ್ಳಲಾಗುವುದಿಲ್ಲ. ಆಗ ಈಶ್ವರನಿಗೆ ಅನಂತಗಳಾದ ಜ್ಞಾನಗಳ

ಜತೆಗೆ ಅಸಂತಗಳಾದ ಅಜ್ಞಾನಗಳೂ ಬಂದೊದಗುವುವು. ಆದಕಾರಣ ಈಶ್ವರನಿಗೆ ಏಕೋನಸರ್ವಜ್ಞತ್ವವನ್ನು ಹೇಳಲಾಗುವುದಿಲ್ಲವಾದುದರಿಂದಲೂ, ಜ್ಞಾನದ್ವಯ ವನ್ನು ಕಲ್ಪಿಸುವುದಕ್ಕೂ ಅವಕಾಶವಿಲ್ಲವಾದುದರಿಂದಲೂ, ಅವನ ಜ್ಞಾನವು ಮಾನ ಸಪ್ರತ್ಯಕ್ಷಕ್ಕೆ ಗೋಚರವಾಗದೆ ತನ್ನನ್ನು ತಾನೇ ಗ್ರಹಿಸುತ್ತದೆಯೆಂದೇ ಹೇಳ ಬೇಕಾದುದರಿಂದ ಜ್ಞಾನಕ್ಕೆ ಸ್ವಯಂಪ್ರಕಾಶತ್ವವನ್ನು ಒಪ್ಪಲೇಬೇಕು.

## ೮೩೨ ಜ್ಞಾನಮಸ್ತೀತಿಜ್ಞಾನಾದಪಿ ಜ್ಞಾನಸ್ಯ ಸ್ವಯಂ ಪ್ರಕಾಶತ್ವಸಿದ್ಧಿಃ

ಮತ್ತು—ಜ್ಞಾನವು ವಿಷಯವನ್ನು ಸಾಧಿಸಿಕೊಡುತ್ತದೆ ಎಂದರೆ ವಿಷ ಯೀಕರಿಸುತ್ತದೆಯೆಂಬುದರಲ್ಲಿ ಉಭಯವಾದಿಗಳಿಗೂ ವಿವಾದವಿಲ್ಲ. "ಘಟೋಽಸ್ತಿ ಪಟೋಽಸ್ತಿ" ಎಂಬ ಜ್ಞಾನವು ಸತ್ತೆಯನ್ನೂ ಸತ್ತಾವಿಶಿಷ್ಟಗಳಾದ ಘಟಪಟ ಗಳನ್ನೂ ಸಾಕ್ಷಾತ್ಕರಿಸುವುದು. "ಘಟೋಽಸ್ತಿ ಪಟೋಽಸ್ತಿ" ಎಂಬ ಜ್ಞಾನವು ಹೇಗಾದರೆ ಸಮಗೆ ಉಂಟಾಗುತ್ತಿರುವುದೋ ಅದರಂತೆಯೇ "ಜ್ಞಾನಮಸ್ತಿ" ಎಂಬ ಜ್ಞಾನವೂ ಸಮಗೆ ಅಬಾಧಿತವಾಗಿ ಉಂಟಾಗುತ್ತಿರುವುದು. "ಘಟೋಽಸ್ತಿ" ಎಂಬ ಜ್ಞಾನವು ತನಗೆ ವಿಷಯವಾದ ಘಟವನ್ನು ಸಾಕ್ಷಾತ್ಕರಿಸುವಂತೆ "ಜ್ಞಾನ ಮಸ್ತಿ" ಎಂಬ ಜ್ಞಾನವೂ ಸಹ ತನಗೆ ವಿಷಯವಾದ ಜ್ಞಾನವನ್ನು ಸಾಕ್ಷಾತ್ಕ ರಿಸುತ್ತದೆಯೆಂದೇ ಹೇಳಬೇಕು. ಆ ಜ್ಞಾನವು ತನ್ನನ್ನು ಸಾಕ್ಷಾತ್ಕರಿಸುವುದಿಲ್ಲ ವೆಂದು ಹೇಳುವುದಾದರೆ ಆಜ್ಞಾನದ ಸತ್ತೆಯೇ ನಿಶ್ಚಿತವಲ್ಲವಾದುದರಿಂದ ಅಸತ್ತ್ವವು ಅದಕ್ಕೆ ಪ್ರಸಕ್ತವಾಗಿ ಅಸದ್ಭೂತವಾದ ಅಂಥ ಜ್ಞಾನಕ್ಕೆ ವಿಷಯವಾಗಿರತಕ್ಕ ಸರ್ವಜ್ಞಾನಸತ್ತೆಯೂ ಅಸತ್ತಾಗಿ ಹೀಗೆ ಜ್ಞಾನವು ಅಸತ್ತಾದರೆ ವಿಷಯವೂ ಅಸತ್ತಾಗಿ ಕೊನೆಗೆ ಸರ್ವಪದಾರ್ಥಗಳಿಗೂ ಅಸತ್ತೆ ಬಂದೊದಗುವುದು. ಆದ ಕಾರಣ ಜ್ಞಾನವು ತನ್ನನ್ನು ತಾನೇ ಗ್ರಹಿಸುವುದಾದುದರಿಂದ ಸ್ವಯಂಪ್ರಕಾಶ ತ್ವವು ನಿಷ್ಕಂಟಕವಾಗಿ ಇದಕ್ಕೆ ಸಿದ್ಧವಾಗಿರುವುದು.

## ೮೩೩ ಜ್ಞಾನಸ್ಯ ಮಾನಸಪ್ರತ್ಯಕ್ಷಗ್ರಾಹ್ಯತ್ವಸಾಧಕತ್ವಾಭಿಮಾನೇನ ಪರೋಕ್ತಸ್ಯಾನುಮಾನಸ್ಯ ಭಂಗಪ್ರಕಾರಃ

ಮತ್ತು—ಜ್ಞಾನಕ್ಕೆ ಮಾನಸಪ್ರತ್ಯಕ್ಷಗ್ರಾಹ್ಯತ್ವವನ್ನು ಸಾಧಿಸುವುದ ಕ್ಕಾಗಿ ನೀವು ತೋರಿಸಿರುವ ಅನುಮಾನದೊಳಗೆ ಕ್ಷಣಿಕತ್ವವಿಶಿಷ್ಟವಾದ ಆತ್ಮ ವಿಶೇಷಗುಣತ್ವವೆಂಬ ಹೇತು ಅಸದ್ಧೇತುವಾದುದರಿಂದ ನಿಮ್ಮ ಅನುಮಾನವು ಅನು ಮಾನಾಭಾಸವಾಗಿರುವಕಾರಣ ಸಾಧ್ಯವನ್ನು ಸಾಧಿಸಿಕೊಡಲಾರದು. ಜ್ಞಾನಕ್ಕೆ

ಉತ್ಪತ್ತಿವಿನಾಶಗಳೆಂಬ ಅವಸ್ಥೆಗಳನ್ನು ಅಂಗೀಕರಿಸಿ ಕ್ಷಣಿಕತ್ವವನ್ನು ಹೇಳುವುದಾದರೆ ಅವಸ್ಥಾಯೋಗಿಯಾದ ಅಂಥ ಜ್ಞಾನಕ್ಕೆ ದ್ರವ್ಯತ್ವವು ಸಿದ್ಧವಾಗುವುದಲ್ಲದೆ ಗುಣತ್ವವು ಬರುವುದಿಲ್ಲ. ರೂಪಾದಿಗಳಂತೆ ಜ್ಞಾನಕ್ಕೆ ಗುಣತ್ವವನ್ನೇ ಹೇಳುವುದಾದರೆ ಯಾವದಾಶ್ರಯಭಾವಿಗಳಾದ ರೂಪಾದಿಗಳಂತೆ ಜ್ಞಾನಕ್ಕೂ ಯಾವದಾಶ್ರಯಭಾವಿತ್ವವುಂಟಾಗಿ ನಿತ್ಯತ್ವವು ಸಿದ್ಧವಾಗುವುದಲ್ಲದೆ ಕ್ಷಣಿಕತ್ವವು ಬರಲಾರದು. ಹೀಗೆ ಕ್ಷಣಿಕತ್ವಗುಣತ್ವಗಳೆಂಬ ಈ ಎರಡರಲ್ಲಿ ಒಂದಿದ್ದರೆ ಮತ್ತೊಂದು ಇರುವುದಿಲ್ಲವಾದಕಾರಣ ಕ್ಷಣಿಕತ್ವವಿಶಿಷ್ಟವಾದ ಆತ್ಮವಿಶೇಷಗುಣತ್ವವೆಂಬ ಹೇತು ಅನ್ಯತರಾಸಿದ್ಧವೆನಿಸಿಕೊಂಡು ಆಭಾಸಹೇತುವಾಗಿರುವುದಷ್ಟೆ? ಆದುದರಿಂದಲೇ ಸುಖಾದಿದೃಷ್ಟಾಂತವೂ ಸಾಧನವಿಕಲವೆನಿಸಿಕೊಳ್ಳುವುದು; ಎಂದರೆ ಉಕ್ತವಾದ ದೃಷ್ಟಾಂತದಲ್ಲಿ ಉಕ್ತವಾದ ಹೇತುವೇ ಇಲ್ಲವೆಂದಾಗಿ ವ್ಯಾಪ್ತಿಪರಿಚಯವೇ ದುರ್ಲಭವಾಗುವುದು.

## ೮೩೪ ಜ್ಞಾನಸ್ಯ ಮಾನಸಪ್ರತ್ಯಕ್ಷಗ್ರಾಹ್ಯತ್ವೇ ಅಜಿಜ್ಞಾಸಿತಗ್ರಾಹ್ಯತ್ವಪ್ರಸಂಗೇನ ಅನವಸ್ಥಾಪತ್ತಿಃ

ಮತ್ತು—ಯಾವುದು ಮಾನಸಪ್ರತ್ಯಕ್ಷಗ್ರಾಹ್ಯವಾಗಿರುವುದೋ ಅದು ಇಚ್ಛೆಯಿಲ್ಲದೆಯೇ ಜ್ಞಾನಕ್ಕೆ ಗೋಚರವಾಗುತ್ತದೆಯೆಂಬುದನ್ನು ಸುಖದುಃಖಗಳಲ್ಲಿ ಕಾಣಬಹುದು. ಸುಖವಾಗಲಿ ದುಃಖವಾಗಲಿ ನಮಗೆ ಉಂಟಾದರೆ ಅದನ್ನು ಜ್ಞಾನಕ್ಕೆ ಗೋಚರಪಡಿಸಿಕೊಳ್ಳಬೇಕೆಂಬ ಇಚ್ಛೆ ನಮಗೆ ಇಲ್ಲದಿದ್ದರೂ ಆ ಸುಖದುಃಖಗಳು ತಾವಾಗಿಯೇ ನಮ್ಮ ಜ್ಞಾನಕ್ಕೆ ಗೋಚರಗಳಾಗಿಯೇ ಆಗುವುವು. ಬೇಡವೆಂದರೂ ಅವು ಇರುವಕಾಲದಲ್ಲಿ ಅವುಗಳ ಜ್ಞಾನವು ತಪ್ಪುವುದಿಲ್ಲ. ಬೇಕೆಂದರೂ ಅವು ಇಲ್ಲದ ಕಾಲದಲ್ಲಿ ಅವುಗಳ ಪ್ರತ್ಯಕ್ಷವು ಉಂಟಾಗುವುದಿಲ್ಲ. ಹೀಗೆ ಮಾನಸಪ್ರತ್ಯಕ್ಷಗ್ರಾಹ್ಯವಾದುದರ ಜ್ಞಾನವು ಜಿಜ್ಞಾಸೆಯಿಲ್ಲದೆಯೇ ಉಂಟಾಗುವುದಾದಪ್ರಯುಕ್ತ ಅದು ನಿಯತವಾಗಿಯೇ ಉಂಟಾಗುವುದೆಂದು ಸಿದ್ಧವಾಯಿತು. ಆದುದರಿಂದ ಘಟಾದಿಜ್ಞಾನವನ್ನು ಗ್ರಹಿಸುವ ಜ್ಞಾನವೂ ಜಿಜ್ಞಾಸೆಯಿಲ್ಲದೆಯೇ ಗ್ರಹಿಸಲ್ಪಡುವುದಾದಕಾರಣ ಅದು ಮಾನಸಪ್ರತ್ಯಕ್ಷವೇದ್ಯವಾಗಬೇಕು. ಅದರ ಮೇಲೆ ಅಂಥ ಜ್ಞಾನವನ್ನು ಗ್ರಹಿಸುವ ಜ್ಞಾನವೂ ಸಹ ಜಿಜ್ಞಾಸೆಯಿಲ್ಲದೆಯೇ ಗ್ರಾಹ್ಯವಾದುದರಿಂದ ಅದೂ ಮಾನಸಪ್ರತ್ಯಕ್ಷಗ್ರಾಹ್ಯವಾಗಬೇಕು. ಹೀಗೆ ಅನಂತಜ್ಞಾನಪರಂಪರೆ ಬಂದೊದಗುವುದರಿಂದ ಇದನ್ನು ತಪ್ಪಿಸಲಾಗುವುದಿಲ್ಲವಾಗಿ ಇತರಜ್ಞಾನಗಳು ಉಂಟಾಗುವುದಕ್ಕೆ ಅವಕಾಶವೇ ಇಲ್ಲವಾಗುವುದು.

### ೮೩೫ ಮಾನಸಪ್ರತ್ಯಕ್ಷಗ್ರಾಹ್ಯತ್ವಹೇತೋಃ ಸ್ವಪ್ನಕಾಲಿಕಪ್ರಯತ್ನೇ ವ್ಯಭಿಚರಿತತ್ವಾಶಂಕಾ

ಅದೇತಕ್ಕೆ? ಮಾನಸಪ್ರತ್ಯಕ್ಷವೇದ್ಯತ್ವಕ್ಕೂ ಅಜಿಜ್ಞಾಸಿತಗ್ರಾಹ್ಯತ್ವಕ್ಕೂ ವ್ಯಾಪ್ಯವ್ಯಾಪಕಭಾವವನ್ನೇ ನಾವು ಒಪ್ಪುವುದಿಲ್ಲವಾದುದರಿಂದ ಮಾನಸಪ್ರತ್ಯಕ್ಷ ಗ್ರಾಹ್ಯವಾದುದೆಲ್ಲಾ ಜಿಜ್ಞಾಸೆಯಿಲ್ಲದೆಯೇ ಗ್ರಾಹ್ಯವಾಗಿರಬೇಕೆಂಬ ನಿಯಮ ವಿಲ್ಲ. ಏತಕ್ಕೆಂದರೆ ಪ್ರಯತ್ನವೆಂಬುದು ಮಾನಸಪ್ರತ್ಯಕ್ಷಗ್ರಾಹ್ಯವೆಂಬುದರಲ್ಲಿ ವಿವಾದವಿಲ್ಲ. ನಿದ್ರಾವಸ್ಥೆಯಲ್ಲಿ ಶ್ವಾಸೋಚ್ಛ್ವಾಸಪ್ರಯತ್ನವು ಆತ್ಮನಲ್ಲಿ ಇದ್ದರೂ ಆಗ ಅದಕ್ಕೆ ಗ್ರಹಣವೇ ಉಂಟಾಗುವುದಿಲ್ಲ. ಇಂಥ ಪ್ರಯತ್ನದಲ್ಲಿ ಮಾನಸ ಪ್ರತ್ಯಕ್ಷಗ್ರಾಹ್ಯತ್ವವಿದ್ದರೂ ಅಜಿಜ್ಞಾಸಿತಗ್ರಾಹ್ಯತ್ವವಿಲ್ಲವಷ್ಟೆ? ಆದಕಾರಣ ಮಾನಸಪ್ರತ್ಯಕ್ಷಗ್ರಾಹ್ಯತ್ವವೆಂಬ ಸಾಧನವು ಅಜಿಜ್ಞಾಸಿತಗ್ರಾಹ್ಯತ್ವವೆಂಬ ಸಾಧ್ಯವಿಲ್ಲದಕಡೆಯಲ್ಲಿಯೂ ಇರುವುದರಿಂದ ಈ ಹೇತು ವ್ಯಭಿಚರಿತವಾಗಿರುವು ದಲ್ಲವೆ?

### ೮೩೬ ಸ್ವಪ್ನೇ ಪ್ರಯತ್ನಸ್ಯೈವಾಭಾವಾದುಕ್ತಹೇತೋಃ ಅವ್ಯಭಿಚರಿತತ್ವಂ

ಅಲ್ಲ—ಈ ಹೇತು ವ್ಯಭಿಚರಿತವಲ್ಲ. ಸ್ವಾಪಾವಸ್ಥೆಯಲ್ಲಿ ಜೀವಾತ್ಮನಿಗೆ ಪ್ರಯತ್ನವಿದ್ದರಲ್ಲವೆ ಮಾನಸಪ್ರತ್ಯಕ್ಷಗ್ರಾಹ್ಯತ್ವಕ್ಕೆ ಅದರಲ್ಲಿ ವ್ಯಭಿಚಾರವನ್ನು ತೋರಿಸಬಹುದು? ಸ್ವಾಪಾವಸ್ಥೆಯಲ್ಲಿ ಜೀವಾತ್ಮನಿಗೆ ಆವುದೊಂದು ಪ್ರಯತ್ನವೂ ಇಲ್ಲವೆಂಬ ಅಂಶವೂ, ಆ ಸಮಯದಲ್ಲಿ ಶರೀರಧಾರಣೆ ಮೊದಲಾದುವುಗಳೆಲ್ಲಾ ಪರ ಮಾತ್ಮನ ಸಂಕಲ್ಪದಿಂದಲೇ ಉಂಟಾಗುವುವೆಂಬ ಅಂಶವೂ ಸಹ ಬ್ರಹ್ಮಸೂತ್ರದ ಮೂರನೆಯ ಅಧ್ಯಾಯದ ಮೂರನೆಯ ಪಾದದ ಹದಿನೈದನೆಯ ಅಧಿಕರಣದಲ್ಲಿ ಶ್ರೀ ಭಾಷ್ಯಕಾರರಿಂದ ನಿರ್ಣಯಿಸಲ್ಪಟ್ಟಿರುವುದು.

ಓಹೋ—ಸ್ವಾಪಾವಸ್ಥೆಯಲ್ಲಿ ಜೀವಾತ್ಮನಿಗೆ ಪ್ರಯತ್ನವೇ ಇಲ್ಲವೋ? ಹಾಗಾದರೆ ಮಲಗಿರುವವನು ಗಾಢನಿದ್ರೆಯಲ್ಲಿ ಇರುವಾಗಲೂ ಎಡದಿಂದ ಬಲಕ್ಕೂ, ಬಲದಿಂದ ಎಡಕ್ಕೂ ಮಗ್ಗಲಾಗುತ್ತಾನೆ; ಪ್ರಯತ್ನವೇ ಇಲ್ಲದಿದ್ದರೆ ಇದು ಹೇಗೆ ಸಂಭವಿಸೀತು?

ಹೇಗೆ ಸಂಭವಿಸೀತು—ಆ ಆ ಅವಯವಗಳ ಸಂಧಿಬಂಧಗಳಲ್ಲಿ ವೇದನೆ ಉಂಟಾದುದರಿಂದಲೋ, ಸೊಳ್ಳೆ-ತಿಗಣೆ-ಮುಂತಾದುವುಗಳ ಕಡಿತದಿಂದಲೋ ಅತ್ಯ

ಲ್ಪವಾದ ಪ್ರಬೋಧವು ಆಗ ಉಂಟಾಗಿ ಆದರಿಂದ ಅಂಗಪರಿವರ್ತನೆ ಉಂಟಾಗುವುದು. ಅಂತು ಆಗ ಇರುವ ಅಂಗಪರಿವರ್ತನಪ್ರಯತ್ನವು ಅಲ್ಪಪ್ರಬೋಧಸಮಕಾಲಿಕವಾದಪ್ರಯುಕ್ತ ಮಾನಸಪ್ರತ್ಯಕ್ಷಗ್ರಾಹ್ಯವಾಗಲು ತಡೆಯಿಲ್ಲ. ಆದಕಾರಣ ಮಾನಸಪ್ರತ್ಯಕ್ಷಗ್ರಾಹ್ಯವಾದುದೆಲ್ಲವೂ ಅಜಿಜ್ಞಾಸಿತಗ್ರಾಹ್ಯವಾಗಿಯೇ ಇರುವುದರಿಂದ ಪೂರ್ವೋಕ್ತರೀತಿಯಲ್ಲಿ ಅನವಸ್ಥೆ ಬಂದೇಬರುವುದು.

ಮತ್ತು—ಮಾನಸಪ್ರತ್ಯಕ್ಷಗ್ರಾಹ್ಯವಾದುದು ಅಜಿಜ್ಞಾಸಿತಗ್ರಾಹ್ಯವಲ್ಲದೆ ಜಿಜ್ಞಾಸಿತಗ್ರಾಹ್ಯವಾಗಿಯೇ ಇರುವುದಾದರೆ "ಜ್ಞಾನವಿದ್ದರೆ ಇಚ್ಛೆ ಇಚ್ಛೆಯಿದ್ದರೆ ಜ್ಞಾನವು" ಎಂಬುದಾಗಿ ಅನ್ಯೋನ್ಯಾಶ್ರಯದೋಷವು ದುಷ್ಪರಿಹರವಾಗುವುದು.

ಮತ್ತು—ಮಾನಸಪ್ರತ್ಯಕ್ಷಗ್ರಾಹ್ಯವಾದುದಕ್ಕೆ ಅಜಿಜ್ಞಾಸಿತಗ್ರಾಹ್ಯತ್ವವನ್ನು ಬಿಟ್ಟು ಜಿಜ್ಞಾಸಿತಗ್ರಾಹ್ಯತ್ವವನ್ನೇ ಸ್ವೀಕರಿಸಿದರೂ ಇದರ ಜ್ಞಾನವು ನಿಯತವಾಗಿಯೇ ಉಂಟಾಗಬೇಕಾಗಿ ಬರುವುದಲ್ಲದೆ "ಇಚ್ಛೆಯಿಲ್ಲದಿದ್ದಾಗ ಇದರ ಜ್ಞಾನವು ಉಂಟಾಗದೆಯೂ ಇರಬಹುದು" ಎಂದು ಹೇಳಲಾಗುವುದಿಲ್ಲ. ಮಾನಸಪ್ರತ್ಯಕ್ಷಗ್ರಾಹ್ಯಗಳಾದ ಸುಖದುಃಖಗಳ ಜ್ಞಾನವು ನಿಯತವಾದುದರಿಂದ ಜ್ಞಾನೇಚ್ಛೆಯೂ ನಿಯತವೆಂದು ಕಲ್ಪಿಸಿಯೇ ಆಗಬೇಕಾದಕಾರಣ ಇಚ್ಛೆ ನಿಯತವಾದಮೇಲೆ ಮಾನಸಪ್ರತ್ಯಕ್ಷಗ್ರಾಹ್ಯವಾದುದರ ಜ್ಞಾನವೂ ನಿಯತವಾಗಿ ಉಂಟಾಗಬೇಕಷ್ಟೆ? ಆದಕಾರಣ "ಜ್ಞಾನವೂ ಇಚ್ಛೆಯೂ ಜ್ಞಾನವೂ ಇಚ್ಛೆಯೂ ' ಈ ರೀತಿಯಲ್ಲಿ ಜ್ಞಾನೇಚ್ಛೆಗಳ ಪರಂಪರೆಗೆ ವಿಶ್ರಾಂತಿಯೇ ಇಲ್ಲವಾದುದರಿಂದ ಜ್ಞಾನಾಂತರಕ್ಕೆ ಅವಕಾಶವೇ ಇಲ್ಲದಂತಾಗುವುದು.

ಅದೇತಕ್ಕೆ? "ಸುಖದುಃಖಗಳು ಜಿಜ್ಞಾಸಿತಗ್ರಾಹ್ಯಗಳಲ್ಲ ಜಿಜ್ಞಾಸೆಯಿಲ್ಲದೆಯೇ ಗ್ರಾಹ್ಯಗಳಾಗುವುವು. ಜ್ಞಾನವಾದರೆ ಹಾಗಲ್ಲ. ಜಿಜ್ಞಾಸೆಯಿದ್ದರೇನೇ ಗ್ರಾಹ್ಯವಾಗುವುದು" ಎಂದು ಹೇಳುವೆವಾದಪ್ರಯುಕ್ತ ಜ್ಞಾನೇಚ್ಛೆಗಳ ಪರಂಪರೆಗೆ ವಿಶ್ರಾಂತಿ ಉಂಟಾಗಿ ಜ್ಞಾನಾಂತರಕ್ಕೂ ಅವಕಾಶವು ಉಂಟಾಗುವುದಷ್ಟೆ?

ಇಲ್ಲಿ ಹಾಗೆ ಹೇಳಲಾಗುವುದಿಲ್ಲ. ಮಾನಸಪ್ರತ್ಯಕ್ಷಗ್ರಾಹ್ಯತ್ವವು ಸುಖದುಃಖಗಳಲ್ಲಿ ಹೇಗೋ ಹಾಗೆ ಜ್ಞಾನದಲ್ಲಿಯೂ ತುಲ್ಯವಾಗಿರುವಲ್ಲಿ ಸುಖದುಃಖಗಳು ಮಾತ್ರ ಅಜಿಜ್ಞಾಸಿತಗ್ರಾಹ್ಯಗಳೆಂದೂ ಜ್ಞಾನವು ಜಿಜ್ಞಾಸಿತಗ್ರಾಹ್ಯವೆಂದೂ ವೈಷಮ್ಯವನ್ನು ಆಶ್ರಯಿಸಲು ಕಾರಣವೇನೂ ಇಲ್ಲ.

ಅದೇತಕ್ಕೆ ? ಸುಖಾದಿಗಳಲ್ಲಿಯೂ, ಘಟಾದಿಪದಾರ್ಥಗಳ ಪ್ರಾಥಮಿಕಜ್ಞಾನದಲ್ಲಿಯೂ ಜಿಜ್ಞಾಸೆ ಉಂಟೆಂದು ಹೇಳುವೆವು; ಘಟಾದಿಪದಾರ್ಥಗಳ ದ್ವಿತೀಯಾದಿಜ್ಞಾನದಲ್ಲಿಯಾದರೆ ಜಿಜ್ಞಾಸೆ ಇಲ್ಲವೆಂದು ಹೇಳುವೆವು.

ಇಲ್ಲ; ಹಾಗೆಯೂ ಹೇಳಲಾಗುವುದಿಲ್ಲ. ಮಾನಸಪ್ರತ್ಯಕ್ಷಗ್ರಾಹ್ಯತ್ವವು ಎಲ್ಲದರಲ್ಲಿಯೂ ತುಲ್ಯವಾಗಿರುವಲ್ಲಿ ಎಲ್ಲದರಲ್ಲಿಯೂ ಅವಶ್ಯಕವಾಗಿ ಬಂದೊದಗುವ ಜಿಜ್ಞಾಸೆಯನ್ನು ಯಾರು ತಡೆಯಬಲ್ಲರು ?

ಅದೇತಕ್ಕೆ ? ಮಾನಸಪ್ರತ್ಯಕ್ಷಗ್ರಾಹ್ಯತ್ವವಿದ್ದರಲ್ಲವೆ ಜಿಜ್ಞಾಸೆ ಬಂದೀತು ? ಸುಖದುಃಖಗಳು, ಘಟಾದಿಪದಾರ್ಥಗಳ ಪ್ರಾಥಮಿಕಜ್ಞಾನವು ಇಷ್ಟುಮಾತ್ರವೇ ಮಾನಸಪ್ರತ್ಯಕ್ಷಗ್ರಾಹ್ಯವಾಗಿರುವುದು; ಘಟಾದಿಪದಾರ್ಥಗಳ ದ್ವಿತೀಯಾದಿಜ್ಞಾನವಾದರೆ ಮಾನಸಪ್ರತ್ಯಕ್ಷಗ್ರಾಹ್ಯವೇ ಅಲ್ಲವಾದುದರಿಂದ ಜಿಜ್ಞಾಸೆಯೂ ಇದರಲ್ಲಿ ಇಲ್ಲವಷ್ಟೆ ?

ಇಲ್ಲ—ಹಾಗೆಯೂ ಹೇಳಲಾಗುವುದಿಲ್ಲ. ಇಂಥ ವೈಷಮ್ಯವನ್ನು ಕಲ್ಪಿಸುವುದರಲ್ಲಿಯೂ ಯಾವುದೊಂದು ನಿಯಾಮಕವೂ ಇಲ್ಲವಷ್ಟೆ ? ಮತ್ತು ಕ್ಷಣಿಕತ್ವವಿಶಿಷ್ಟವಾದ ಆತ್ಮವಿಶೇಷಗುಣತ್ವವೆಂಬ ಹೇತು ಘಟಾದಿಪದಾರ್ಥಗಳ ಪ್ರಾಥಮಿಕಜ್ಞಾನದಲ್ಲಿ ಹೇಗೆ ಇರುವುದೋ ಹಾಗೆಯೇ ದ್ವಿತೀಯಾದಿಜ್ಞಾನಗಳಲ್ಲಿಯೂ ಇದ್ದೇ ಇರುವುದಾದುದರಿಂದ ಮಾನಸಪ್ರತ್ಯಕ್ಷಗ್ರಾಹ್ಯತ್ವವೆಂಬ ಸಾಧ್ಯವನ್ನೂ ಅವುಗಳಲ್ಲಿ ಸ್ವೀಕರಿಸಿಯೇ ಆಗಬೇಕು. ಹಾಗೆ ಸ್ವೀಕರಿಸದಿದ್ದರೆ ಹೇತು ವ್ಯಭಿಚರಿತವಾಗುವುದು.

ಅದೇತಕ್ಕೆ ? ಜ್ಞಾನವು ಯಾವಾಗ ಪ್ರತ್ಯಕ್ಷಗ್ರಾಹ್ಯವೆನಿಸಿಕೊಳ್ಳುವುದೋ ಆಗಲೇ ಮಾನಸಪ್ರತ್ಯಕ್ಷಗ್ರಾಹ್ಯವಾಗುವುದೆಂದು ಹೇಳುವೆವು; ಪ್ರಾಥಮಿಕಜ್ಞಾನವು ಮಾತ್ರವೇ ಹಾಗಿರುವುದರಿಂದ ಮಾನಸಪ್ರತ್ಯಕ್ಷಗ್ರಾಹ್ಯವಾಗುವುದು. ದ್ವಿತೀಯಾದಿಜ್ಞಾನಕ್ಕೆ ಪ್ರತ್ಯಕ್ಷಗ್ರಾಹ್ಯತ್ವವೇ ಇಲ್ಲವಾದುದರಿಂದ ಮಾನಸಪ್ರತ್ಯಕ್ಷಗ್ರಾಹ್ಯತ್ವವೂ ಇಲ್ಲವಷ್ಟೆ ?

ಹಾಗೆ ಹೇಳುವುದಾದರೆ—ನೀವು ಹೇಳಿರುವ ಅನುಮಾನವನ್ನು "ಪ್ರತ್ಯಕ್ಷಗ್ರಾಹ್ಯವಾದ ಜ್ಞಾನವು ಮಾನಸಪ್ರತ್ಯಕ್ಷಗ್ರಾಹ್ಯವಾಗಿರುವುದು ಪ್ರತ್ಯಕ್ಷಗ್ರಾಹ್ಯವಾಗಿಯೂ ಕ್ಷಣಿಕವಾಗಿಯೂ ಆತ್ಮವಿಶೇಷಗುಣವಾಗಿಯೂ ಇರುವುದರಿಂದ" ಎಂದು ಪರಿವರ್ತಿಸಿ, ಪಕ್ಷದಲ್ಲಿಯೂ ಹೇತುವಿನಲ್ಲಿಯೂ ಪ್ರತ್ಯಕ್ಷಗ್ರಾಹ್ಯತ್ವವೆಂಬ ಒಂದು ವಿಶೇಷಣವನ್ನು ಸೇರಿಸಿಕೊಳ್ಳಬೇಕಾಗಿಬರುವುದು.

ಮತ್ತು ದ್ವಿತೀಯಾದಿಜ್ಞಾನವು ಮಾನಸಪ್ರತ್ಯಕ್ಷಗ್ರಾಹ್ಯವಲ್ಲವಾದರೆ ಜ್ಞಾನಕ್ಕೆ ಸ್ವಯಂಪ್ರಕಾಶತ್ವವನ್ನು ಒಪ್ಪದಿರುವ ನಿಮ್ಮ ಮತದಲ್ಲಿ ದ್ವಿತೀಯಾದಿ ಜ್ಞಾನದ ಸದ್ಭಾವದಲ್ಲಿಯೇ ಪ್ರಮಾಣವಿಲ್ಲವಾದುದರಿಂದ ಅದು ಶೂನ್ಯವೆನಿಸಿ ಕೊಂಡು, ಅದರಿಂದ ಪ್ರಾಥಮಿಕಜ್ಞಾನಕ್ಕೂ ಅದಕ್ಕೆ ವಿಷಯಗಳಾದ ಘಟಾದಿ ಪದಾರ್ಥಗಳಿಗೂ ಶೂನ್ಯತ್ವವು ಪ್ರಸಂಗಿಸುವುದು.

ಅದೇತಕ್ಕೆ ? ದ್ವಿತೀಯಾದಿಜ್ಞಾನವು ಮಾನಸಪ್ರತ್ಯಕ್ಷಗ್ರಾಹ್ಯವಾಗದಿದ್ದರೂ ಸ್ವತಏವ ಸಿದ್ಧವಾಗಿರುವುದೆಂದು ಹೇಳುವೆವಾದುದರಿಂದ ಶೂನ್ಯತ್ವಪ್ರಸಂಗ ವಿಲ್ಲವಷ್ಟೆ ?

ಓಹೋ—ದ್ವಿತೀಯಾದಿಜ್ಞಾನಕ್ಕೆ ಸ್ವತಸ್ಸಿದ್ಧತ್ವವನ್ನು ಹೇಳುವಿರೋ ? ಆದರೆ ಜ್ಞಾನಕ್ಕೆ ಸ್ವಯಂಪ್ರಕಾಶತ್ವವನ್ನು ಖಂಡಿಸಬೇಕೆಂಬ ನಿಮ್ಮ ಮನೋರಥ ವನ್ನು ನೀವೇ ಮರೆತಂತೆ ತೋರುವುದು. ಸ್ವತಸ್ಸಿದ್ಧತ್ವವೇ ಸ್ವಯಂಪ್ರಕಾಶತ್ವವೆನಿ ಸಿಕೊಳ್ಳುವುದಷ್ಟೆ. ದ್ವಿತೀಯಾದಿಜ್ಞಾನಕ್ಕೆ ಸ್ವತಸ್ಸಿದ್ಧತ್ವವೆಂಬ ಸ್ವಯಂಪ್ರಕಾಶತ್ವ ವನ್ನು ಒಪ್ಪಿಕೊಳ್ಳುವ ನಿಮಗೆ ಪ್ರಥಮಜ್ಞಾನದಿಂದ ಏನು ಅಪರಾಧವು ಮಾಡ ಲ್ಪಟ್ಟಿತು ? ಅದಕ್ಕೂ ಸ್ವಯಂಪ್ರಕಾಶತ್ವವನ್ನು ಹೇಳುವುದರಲ್ಲಿ ಹಾನಿಯೇನು ?

ಆದುದರಿಂದ ಜ್ಞಾನಸಾಮಾನ್ಯಕ್ಕೂ ವಿಷಯಪ್ರಕಾಶನವೇಳೆಯಲ್ಲಿ ಸ್ವಯಂ ಪ್ರಕಾಶತ್ವವೇ ಇರುವುದಲ್ಲದೆ ಮಾನಸಪ್ರತ್ಯಕ್ಷಗ್ರಾಹ್ಯತ್ವವಿಲ್ಲ.

## ೮೩೭ ತತ್ತ್ವರತ್ನಾಕರೋಕ್ತಾನಾಂ ಮಾನಸಪ್ರತ್ಯಕ್ಷಗ್ರಾಹ್ಯತ್ವ ಭಂಜಕಹೇತೂನಾಂ ಸಂಗ್ರಹಃ

ತತ್ತ್ವರತ್ನಾಕರವೆಂಬ ಗ್ರಂಥದಲ್ಲಿ ಶ್ರೀಮತ್ಪರಾಶರಭಟ್ಟಾರ್ಯರು ಜ್ಞಾನಕ್ಕೆ ಮಾನಸಪ್ರತ್ಯಕ್ಷಗ್ರಾಹ್ಯತ್ವವನ್ನು ಭಂಜಿಸತಕ್ಕ ಹೇತುಗಳನ್ನು ಕ್ರೋ ಡೀಕರಿಸಿತೋರಿಸಿರುವರು ಹೇಗೆಂದರೆ—

“ ಯೋಗ್ಯಾನವಗ್ರಹಾತ್ಸ್ವೇನ ಸಂಭವಾದನವಸ್ಥಿತೇಃ ।
ಇತಿ ಬಾಧಕಹೇತುಭ್ಯಃ ಸಾಧನದ್ವಿತಯಸ್ಯ ಚ ।
ಅಸಿದ್ಧಿವ್ಯಭಿಚಾರಾಭ್ಯಾಂ ವೈಕಲ್ಯಾತ್ಸಾಧ್ಯಸಾಧನೇ ।
ಇತ್ಯಸಾಧನಬಾಧಾಭ್ಯಾಂ ನ ಧೀರ್ಮಾನಸಗೋಚರಃ ।
ಇತಿ ಸ್ವತಸ್ಸಿದ್ಧಿರೇವ ಸಂವಿತ್ಸಿದ್ಧೌ ಚ ಪದ್ಧತಿಃ ॥ ”

ಇಲ್ಲಿ—“ ನ ಧೀರ್ಮಾನಸಗೋಚರಃ ” ಎಂಬ ಅಂಶದಿಂದ ಜ್ಞಾನಕ್ಕೆ ಮಾನಸಪ್ರತ್ಯಕ್ಷಗ್ರಾಹ್ಯತ್ವವಿಲ್ಲವೆಂಬುದಾಗಿ ಪ್ರತಿಜ್ಞೆಮಾಡಿ “ ಅಸಾಧನಬಾ

ಧಾಭ್ಯಾಂ" ಎಂಬ ಅಂಶದಿಂದ ಅದಕ್ಕೆ ಹೇತುವನ್ನು ನಿರ್ದೇಶಿಸಿರುವರು.— ಜ್ಞಾನಕ್ಕೆ ಮಾನಸಪ್ರತ್ಯಕ್ಷಗ್ರಾಹ್ಯತ್ವವನ್ನು ಸಾಧಿಸಿಕೊಡಬಲ್ಲುದಾದ ಹೇತು ಯಾವುದೂ ಇಲ್ಲವಾದುದರಿಂದಲೂ, ಬಾಧಕಹೇತುಗಳಾದರೆ ಅನೇಕಗಳಿರುವುದರಿಂ ದಲೂ ಜ್ಞಾನವು ಮಾನಸಪ್ರತ್ಯಕ್ಷಗೋಚರವಾಗಲಾರದೆಂಬುದು ದ್ವಿತೀಯಶ್ಲೋ ಕದ ಉತ್ತರಾರ್ಧದ ಅರ್ಥವಾಗಿರುವುದು. ಮೊದಲಿನ ಮೂರು ಅರ್ಧಶ್ಲೋಕಗ ಳಿಂದಲೂ ಬಾಧಕಹೇತುಗಳ ಸದ್ಭಾವವನ್ನೂ, ಸಾಧಕಹೇತುಗಳ ಅಸದ್ಭಾವ ವನ್ನೂ ವಿಶದಪಡಿಸುವರು. ಹೇಗೆಂದರೆ—

"**ಯೋಗ್ಯಾನವಗ್ರಹಾತ್**" ಜ್ಞಾನವು ವಸ್ತುತಃ ಮಾನಸಪ್ರತ್ಯಕ್ಷ ಗ್ರಾಹ್ಯವಾಗುವುದಾಗಿದ್ದರೆ ಜ್ಞಾನವನ್ನು ಸಾಕ್ಷಾತ್ಕರಿಸುವ ಅಂಥ ಮಾನಸಪ್ರ ತ್ಯಕ್ಷವೆಂಬುದು ನಮಗೆ ಉಪಲಭ್ಯಮಾನವಾಗಬೇಕು, ಉಪಲಬ್ಧಿಗೆ ಯೋಗ್ಯವಾ ದುದು ಉಪಲಭ್ಯಮಾನವಾಗದಿದ್ದರೆ ಅದರ ಸ್ವರೂಪವೇ ಇಲ್ಲವೆಂದು ನಿಶ್ಚಯಿಸಲ್ಪ ಡುವುದು. "ಇದು ಘಟವು ಇದು ಪಟವು" ಎಂಬುದಾಗಿ ಆ ಆ ವಸ್ತುಗಳನ್ನು ಸಾಕ್ಷಾತ್ಕರಿಸುವ ಜ್ಞಾನಮಾತ್ರವೇ ನಮಗೆ ಉಪಲಭ್ಯಮಾನವಾಗಿರುವುದಲ್ಲದೆ ಅಂಥ ಜ್ಞಾನಕ್ಕಿಂತಲೂ ಬೇರೊಂದಾಗಿಯೂ, ಅಂಥ ಜ್ಞಾನವನ್ನು ಸಾಕ್ಷಾತ್ಕ ರಿಸಬಲ್ಲುದಾಗಿಯೂ ಇರುವ ಮಾನಸಪ್ರತ್ಯಕ್ಷವೆಂಬ ಮತ್ತೊಂದು ಜ್ಞಾನವೂ ನಮಗೆ ಉಪಲಭ್ಯಮಾನವಾಗಿಲ್ಲವಾದುದರಿಂದ ಯೋಗ್ಯಾನುಪಲಂಭವೆಂಬ ದೋಷ ದಿಂದ ಗ್ರಸ್ತವಾದ ಈ ಮಾನಸಪ್ರತ್ಯಕ್ಷವೆಂಬುದು ಸ್ವರೂಪಸಿದ್ಧಿಯನ್ನೇ ಪಡೆಯು ಲ್ಲಿಲ್ಲವಾದಪ್ರಯುಕ್ತ ಜ್ಞಾನಕ್ಕೆ ಮಾನಸಪ್ರತ್ಯಕ್ಷಗ್ರಾಹ್ಯತ್ವವು ಸಂಭವಿಸು ವುದಿಲ್ಲ.

ಮತ್ತು—"**ಸ್ವೇನ ಸಂಭವಾತ್**" ಜ್ಞಾನವು ಇತರಾಪೇಕ್ಷೆಯಿಲ್ಲದೆ ತಾನಾಗಿಯೇ ಪ್ರಕಾಶಿಸಲಾರದೆ ಹೋದರಲ್ಲವೆ ತನ್ನನ್ನು ಪ್ರಕಾಶಪಡಿಸುವ ಮತ್ತೊಂದು ಜ್ಞಾನವನ್ನು ಅಪೇಕ್ಷಿಸೀತು ? ಜ್ಞಾನಕ್ಕೆ ತನ್ನಿಂದಲೇ ತನ್ನ ಪ್ರಕಾ ಶವು ಸಂಭವಿಸುವುದರಿಂದ ಇತರಾಪೇಕ್ಷೆಯಿಲ್ಲವಾಗಿ ಮಾನಸಪ್ರತ್ಯಕ್ಷಗ್ರಾಹ್ಯ ತ್ವವೂ ಇದಕ್ಕೆ ಸಂಭವಿಸುವುದಿಲ್ಲ.

ಮತ್ತು—"**ಅನವಸ್ಥಿತೇಃ**" ಜ್ಞಾನವು ಸ್ವತಃ ಗ್ರಾಹ್ಯವಲ್ಲದೆ ಜ್ಞಾನಾಂ ತರಗ್ರಾಹ್ಯವಾಗುವುದಾದರೆ ಅಂಥ ಜ್ಞಾನಾಂತರವನ್ನು ಗ್ರಹಿಸುವ ಮತ್ತೊಂದು ಜ್ಞಾನವೂ, ಪುನಃ ಅದನ್ನು ಗ್ರಹಿಸುವ ಇನ್ನೊಂದು ಜ್ಞಾನವೂ, ಹೀಗೆ ಜ್ಞಾನ ಪರಂಪರೆಯುಂಟಾಗಿ ಅನವಸ್ಥಾದೋಷದಿಂದ ಎಂದೆಂದಿಗೂ ಬಿಡುಗಡೆಯನ್ನು

ಹೊಂದಲಾರಿರಿ ? ಆದುದರಿಂದಲೂ ಜ್ಞಾನಕ್ಕೆ ಮಾನಸಪ್ರತ್ಯಕ್ಷಗ್ರಾಹ್ಯತ್ವವು ಸಂಭವಿಸುವುದಿಲ್ಲ.

"ಇತಿ ಬಾಧಕಹೇತುಭ್ಯಃ" ಹೀಗೆ ತೋರಿಸಿದ ಬಾಧಕಹೇತುಗಳನೇಕಗಳು ಜಾಗರೂಕಗಳಾಗಿರುವಲ್ಲಿ ಜ್ಞಾನಕ್ಕೆ ಮಾನಸಪ್ರತ್ಯಕ್ಷಗ್ರಾಹ್ಯತ್ವವನ್ನು ಹೇಗೆತಾನೆ ಸ್ವೀಕರಿಸಲಾದೀತು?

ಮತ್ತು—"ಸಾಧನದ್ವಿತಯಸ್ಯ ಚ ಅಸಿದ್ಧಿವ್ಯಭಿಚಾರಾಭ್ಯಾಂ ನೈಕಲ್ಯಾತ್ಸಾಧ್ಯಸಾಧನೇ"—ಜ್ಞಾನದಲ್ಲಿ ಮಾನಸಪ್ರತ್ಯಕ್ಷಗ್ರಾಹ್ಯತ್ವವೆಂಬ ಸಾಧ್ಯವನ್ನು ಸಿದ್ಧಪಡಿಸುವುದಕ್ಕಾಗಿ ನೀವು ತೋರಿಸುವ ಎರಡು ಸಾಧನಗಳೂ ಅಸದ್ಧೇತುಗಳಾಗಿರುವುದರಿಂದ ಸಾಧ್ಯವನ್ನು ಸಾಧಿಸಲಾರವು. ಹೇಗೆಂದರೆ "ಜ್ಞಾನವು ಮಾನಸಪ್ರತ್ಯಕ್ಷಗ್ರಾಹ್ಯವು" ಎಂದು ಪ್ರತಿಜ್ಞೆಯನ್ನು ಮಾಡಿ, ಇದನ್ನು ಸಾಧಿಸುವುದಕ್ಕಾಗಿ "ಕ್ಷಣಿಕತ್ವವಿಶಿಷ್ಟವಾದ ಆತ್ಮವಿಶೇಷಗುಣವಾದುದರಿಂದ" ಅಥವಾ "ಯೋಗ್ಯತ್ವವಿಶಿಷ್ಟವಾದ ಆತ್ಮವಿಶೇಷಗುಣವಾದುದರಿಂದ" ಎಂಬುದಾಗಿ ಎರಡು ಹೇತುಗಳನ್ನಲ್ಲವೆ ನೀವು ಹೇಳಿ ಸುಖದುಃಖಪ್ರಯತ್ನಗಳನ್ನು ಇದಕ್ಕೆ ದೃಷ್ಟಾಂತಗಳಾಗಿ ತೋರಿಸುತ್ತೀರಿ ?

ಇಲ್ಲಿ—ಧರ್ಮಾಧರ್ಮಗಳಲ್ಲಿ ಆತ್ಮವಿಶೇಷಗುಣತ್ವವಿದ್ದರೂ ಶಬ್ದಪ್ರಮಾಣಗ್ರಾಹ್ಯಗಳಾದ ಇವುಗಳಲ್ಲಿ ಮಾನಸಪ್ರತ್ಯಕ್ಷಗ್ರಾಹ್ಯತ್ವವೆಂಬ ಸಾಧ್ಯವಿಲ್ಲದುದರಿಂದ ಹೇತು ವ್ಯಭಿಚರಿತವಾದೀತೆಂಬುದಕ್ಕಾಗಿ ಕ್ಷಣಿಕತ್ವ ಅಥವಾ ಯೋಗ್ಯತ್ವವೆಂಬ ವಿಶೇಷಣವು ಕೊಡಲ್ಪಟ್ಟಿರುವುದು. ಧರ್ಮಾಧರ್ಮಗಳಲ್ಲಿ ಕ್ಷಣಿಕತ್ವವಾಗಲಿ ಯೋಗ್ಯತ್ವವಾಗಲಿ ಇಲ್ಲವಾದುದರಿಂದ ಉಕ್ತವಾದ ವಿಶಿಷ್ಟಹೇತುವಿಲ್ಲದಪ್ರಯುಕ್ತ ಉಕ್ತಸಾಧ್ಯವಿಲ್ಲದಿದ್ದರೂ ಹಾನಿಯಿಲ್ಲ.

ಶಬ್ದದಲ್ಲಿ ಕ್ಷಣಿಕತ್ವವೂ ಯೋಗ್ಯತ್ವವೂ ವಿಶೇಷಗುಣತ್ವವೂ ಇದ್ದರೂ ಆಕಾಶವಿಶೇಷಗುಣವೆನಿಸಿಕೊಂಡ ಈ ಶಬ್ದದಲ್ಲಿ ಮಾನಸಪ್ರತ್ಯಕ್ಷಗ್ರಾಹ್ಯತ್ವವೆಂಬ ಸಾಧ್ಯವಿಲ್ಲದುದರಿಂದ ಹೇತು ವ್ಯಭಿಚರಿತವಾದೀತೆಂಬುದಕ್ಕಾಗಿ ಆತ್ಮಪದವು ಸೇರಿಸಲ್ಪಟ್ಟಿರುವುದು. ಆಕಾಶಕ್ಕೆ ವಿಶೇಷಗುಣವೆನಿಸಿಕೊಂಡ ಈ ಶಬ್ದದಲ್ಲಿ ಆತ್ಮವಿಶೇಷಗುಣತ್ವವಿಲ್ಲವಾದುದರಿಂದ ಉಕ್ತವಾದ ವಿಶಿಷ್ಟಹೇತುವಿಲ್ಲವಾದಪ್ರಯುಕ್ತ ಉಕ್ತಸಾಧ್ಯವಿಲ್ಲದಿದ್ದರೂ ಹಾನಿಯಿಲ್ಲ.

ಆತ್ಮನಿಗೂ ಮನಸ್ಸಿಗೂ ಉಂಟಾಗುವ ಸಂಯೋಗದಲ್ಲಿ ಕ್ಷಣಿಕತ್ವವೂ ಆತ್ಮಗುಣತ್ವವೂ ಇದ್ದರೂ ಕಾರ್ಯಾನುಮೇಯವಾದ ಈ ಸಂಯೋಗದಲ್ಲಿ ಮಾನಸ

ಪ್ರತ್ಯಕ್ಷಗ್ರಾಹ್ಯತ್ವವೆಂಬ ಸಾಧ್ಯವಿಲ್ಲದುದರಿಂದ ಹೇತು ವ್ಯಭಿಚರಿತವಾದೀತೆಂಬು ದಕ್ಕಾಗಿ ವಿಶೇಷಪದವು ಸೇರಿಸಲ್ಪಟ್ಟಿರುವುದು. ಈ ಸಂಯೋಗವು ಆತ್ಮಗುಣವಾದರೂ ಆತ್ಮವಿಶೇಷಗುಣವಲ್ಲವಾದುದರಿಂದ ಉಕ್ತವಾದ ವಿಶಿಷ್ಟಹೇತುವಿಲ್ಲದಪ್ರಯುಕ್ತ ಉಕ್ತಸಾಧ್ಯವಿಲ್ಲದಿದ್ದರೂ ಹಾನಿಯಿಲ್ಲ.

ಹೀಗೆ ನೀವು ತೋರಿಸಿರುವ ಈ ಎರಡು ಹೇತುಗಳೂ ಜ್ಞಾನಕ್ಕೆ ಮಾನಸ ಪ್ರತ್ಯಕ್ಷಗ್ರಾಹ್ಯತ್ವವನ್ನು ಸಾಧಿಸಲಾರವು. ಏತಕ್ಕೆಂದರೆ ಈ ಹೇತುಗಳಿಗೆ ಅಸಿದ್ಧಿ ದೋಷವೂ ವ್ಯಭಿಚರಿತತ್ವದೋಷವೂ ಇರುವುದರಿಂದ ಇವುಗಳು ಅಸದ್ಧೇತುಗಳಾಗಿರುವುವು. ಜ್ಞಾನಕ್ಕೆ ಕ್ಷಣಿಕತ್ವವನ್ನಾಗಲಿ ಗುಣತ್ವವನ್ನಾಗಲಿ ನಾವು ಒಪ್ಪಿಲ್ಲವಾದುದರಿಂದ ಹೇತುವೇ ಅಸಿದ್ಧವಾಗಿರುವುದು.

ಪ್ರಾಯಶ್ಚಿತ್ತಾನುಷ್ಠಾನದಿಂದ ಆತ್ಮನಲ್ಲಿ ಹುಟ್ಟುವ ಅದೃಷ್ಟವಿಶೇಷವು ತಾನು ಹುಟ್ಟಿದ ತತ್‌ಕ್ಷಣದಲ್ಲಿಯೇ ಪಾಪವನ್ನು ನಾಶಗೊಳಿಸಿ ತಾನೂ ನಾಶ ಹೊಂದುವುದಾದುದರಿಂದ ಕ್ಷಣಿಕತ್ವವಿಶಿಷ್ಟವಾದ ಆತ್ಮವಿಶೇಷಗುಣತ್ವವೆಂಬ ಹೇತು ಇದರಲ್ಲಿ ಇದ್ದರೂ ಶಬ್ದಪ್ರಮಾಣಗ್ರಾಹ್ಯವಾದ ಇದರಲ್ಲಿ ಮಾನಸಪ್ರತ್ಯಕ್ಷಗ್ರಾಹ್ಯತ್ವವೆಂಬ ಸಾಧ್ಯಾಂಶವಿಲ್ಲದಪ್ರಯುಕ್ತ ಹೇತು ವ್ಯಭಿಚರಿತವಾಗಿರುವುದು.

ಹೀಗೆ ಅಸಿದ್ಧಿವ್ಯಭಿಚಾರಗಳಿಂದ ಹೇತು ದೂಷಿತವಾದಕಾರಣ ಸಾಧ್ಯವನ್ನು ಸಾಧಿಸಲಾರದಾದುದರಿಂದಲೂ, ಪೂರ್ವೋಕ್ತಗಳಾದ ಬಾಧಕಗಳನೇಕಗಳಿರುವುದರಿಂದಲೂ, ಜ್ಞಾನವು ಮಾನಸಪ್ರತ್ಯಕ್ಷಗೋಚರವಾಗಲಾರದಾದುದರಿಂದ ಜ್ಞಾನವೆಂಬ ಪದಾರ್ಥವೊಂದು ಸಿದ್ಧಿಸಬೇಕಾದರೆ ಸ್ವಯಂಪ್ರಕಾಶತ್ವವನ್ನು ಅಂಗೀಕರಿಸುವಿಕೆಯೇ ದಾರಿಯಾಗಿರುವುದಲ್ಲದೆ ಬೇರೆ ಮಾರ್ಗವಿಲ್ಲ.

**ಇಂತು ತತ್ತ್ವಶುದ್ಧಿಯೆಂಬ ವಿಶಿಷ್ಟಾದ್ವೈತಪ್ರಕರಣಗ್ರಂಥದೊಳ್ ಧರ್ಮಭೂತಜ್ಞಾನಪರಿಚ್ಛೇದದಲ್ಲಿ ಸ್ವಯಂಪ್ರಕಾಶತ್ವಾನಭ್ಯುಪಗಂತೃನೈಯಾಯಿಕೋಕ್ತಮಾನಸಪ್ರತ್ಯಕ್ಷಗಮ್ಯತ್ವಖಂಡನ ಪ್ರಕರಣಂ ತೃತೀಯಂ ॥೩॥**



# ಚತುರ್ಥಪ್ರಕರಣಂ.

---

## ೮೩೮ ಅಥ ಮೀಮಾಂಸಕೋಕ್ತಪ್ರಾಕಟ್ಯಾನುಮೇಯತ್ವ ಖಂಡನಪ್ರತಿಜ್ಞಾ

ಜ್ಞಾನಕ್ಕೆ ಸ್ವಯಂಪ್ರಕಾಶತ್ವವನ್ನು ಒಪ್ಪದಿರುವ ನೈಯಾಯಿಕರ ಕೊಬ್ಬನ್ನು ಅಡಗಿಸಿದೆವು. ಇನ್ನು ಮೀಮಾಂಸಕರ ಕೋಲಾಹಲವನ್ನು ಕಟಾಕ್ಷಿಸೋಣ.

ಯದ್ಯಪಿ ಮೀಮಾಂಸಕರು ಜ್ಞಾನಕ್ಕೆ—ಜ್ಞಾನಜನ್ಯಫಲಾನುಮೇಯತ್ವ, ಜ್ಞಾನಜನ್ಯಸಂಬಂಧಾನುಮೇಯತ್ವ, ಜ್ಞಾನಜನ್ಯಪ್ರಾಕಟ್ಯಾನುಮೇಯತ್ವ-ಎಂಬ ಮೂರು ಪಕ್ಷಗಳನ್ನು ತೋರಿಸಿರುವರು. ಈ ಮೂರರಲ್ಲಿಯೂ ಪ್ರಾಕಟ್ಯಾನುಮೇಯತ್ವಪಕ್ಷವೇ ಪ್ರಧಾನವಾದುದರಿಂದ ಅದನ್ನು ಖಂಡಿಸಿದೆವಾದರೆ ಅದೇ ನ್ಯಾಯದಿಂದ ಮತ್ತೆರಡಕ್ಕೂ ಖಂಡನವು ಅನಾಯಾಸವಾಗಿ ಸಿದ್ಧವಾಗುವುದರಿಂದ ಪ್ರಾಕಟ್ಯಾನುಮೇಯತ್ವಪಕ್ಷವನ್ನೇ ಇಲ್ಲಿ ಖಂಡಿಸುವೆವು.

## ೮೩೯. ಪ್ರಾಕಟ್ಯಾನುಮೇಯತ್ವಪಕ್ಷಸ್ಯ ಜ್ಞಾನಪ್ರಭಾವಾನಭಿಜ್ಞತಾನಿಬಂಧನತ್ವಂ.

ಜ್ಞಾನಕ್ಕೆ ಪ್ರಾಕಟ್ಯಾನುಮೇಯತ್ವವನ್ನು ಹೇಳುವವರ ಮತವು— ಜ್ಞಾನದ ಮಹಿಮೆಯನ್ನು ತಿಳಿಯದವರ ಕುಕಲ್ಪನಾರೂಪವಾದ ಪ್ರಲಾಪವಾಗಿ ಇರುವುದಲ್ಲದೆ ಪ್ರಮಾಣಯುಕ್ತವಾಗಿಯೂ ಯುಕ್ತಿಯುಕ್ತವಾಗಿಯೂ ಇಲ್ಲ. ಸ್ವವ್ಯತಿರಿಕ್ತಗಳಾದ ಸಮಸ್ತಪದಾರ್ಥಗಳನ್ನೂ ಪ್ರಕಾಶಪಡಿಸಿಕೊಡುವ ಜ್ಞಾನವು ತನ್ನ ಪ್ರಕಾಶಕ್ಕಾಗಿ ಮತ್ತೊಂದು ಜ್ಞಾನವನ್ನು ಅಪೇಕ್ಷಿಸುವುದಿಲ್ಲವೆಂಬ ಒಂದು ಮಹಿಮೆ ಈ ಜ್ಞಾನಕ್ಕೆ ಸಾಹಜಿಕವಾಗಿ ಇರುವುದು. ಮತ್ತು ಪ್ರಾಕಟ್ಯವೆಂಬ ಹೇತುವಿನಿಂದಲೇ ಉಂಟಾಗುತ್ತದೆಯೆಂದು ನೀವು ಅಭಿಮಾನಿಸಿರುವ "ಇದು ಪ್ರಕಾಶಿಸುತ್ತದೆ" ಎಂಬ ವ್ಯವಹಾರವು ಯಾವುದುಂಟೋ ಅದನ್ನೂ ಈ ಜ್ಞಾನವೇ ಉಂಟುಮಾಡಬಲ್ಲುದೆಂಬ ಮತ್ತೊಂದು ಮಹಿಮೆಯೂ ಈ ಜ್ಞಾನಕ್ಕೆ ಸ್ವಭಾವಸಿದ್ಧವಾಗಿ ಇರುವುದು. ಇಂಥ ಮಹಿಮೆಗಳನ್ನು ಪರಿಶೀಲಿಸಿದ್ದ ಪಕ್ಷದಲ್ಲಿ ಜ್ಞಾನಕ್ಕೆ ಪ್ರಾಕಟ್ಯಾನುಮೇಯತ್ವವನ್ನು ಸ್ವಪ್ನದಲ್ಲಿಯೂ ನೀವು ನೆನಪಿಗೆ ತಂದುಕೊಳ್ಳುತ್ತಿರಲಿಲ್ಲ.

## ೮೪೦. ಜ್ಞಾನಾನುಮಾಪಕತ್ವೇನಾಭಿಮತಸ್ಯ ಪ್ರಾಕಟ್ಯಲಿಂಗಸ್ಯ ಯೋಗ್ಯಾನುಪಲಬ್ಧಿನಿರಸ್ತತ್ವಂ.

ಇರಲಿ—ಮೊದಲು ಈ ಪ್ರಾಕಟ್ಯವನ್ನೇ ವಿಚಾರಿಸೋಣ. ಜ್ಞಾನವ್ಯತಿರಿಕ್ತವಾಗಿಯೂ ಜ್ಞಾನಜನ್ಯವಾಗಿಯೂ ವಿಷಯನಿಷ್ಠವಾಗಿಯೂ ಇರುವ ಪ್ರಾಕಟ್ಯವೆಂಬ ಧರ್ಮವು ನಮ್ಮ ಪ್ರತ್ಯಕ್ಷಕ್ಕೆ ಯೋಗ್ಯವಾದುದೋ? ಅಥವಾ ಅಲ್ಲವೋ? ಅಲ್ಲವೆಂದು ಹೇಳುವುದಾದರೆ—ಲಿಂಗಪ್ರತ್ಯಕ್ಷವೇ ಉಂಟಾಗಲಿಲ್ಲವಾಗಿ ಅದರಿಂದ ಜ್ಞಾನವೆಂಬ ಲಿಂಗಿಯನ್ನು ಅನುಮಿಸಲಾಗುವುದಿಲ್ಲ. ಧೂಮಪ್ರತ್ಯಕ್ಷವಿಲ್ಲದಿದ್ದರೆ ಅಗ್ನಿಯನ್ನು ಅನುಮಿಸಲಾಗುವುದಿಲ್ಲವಷ್ಟೆ? ಪ್ರತ್ಯಕ್ಷಕ್ಕೆ ಯೋಗ್ಯವೆಂದು ಹೇಳುವುದಾದರೆ ಜ್ಞಾನಕ್ಕೆ ವಿಷಯಭೂತಗಳಾದ ಘಟಾದಿಗಳಲ್ಲಿರುವ ರೂಪಸ್ಪರ್ಶಗಂಧಾದಿಗಳು ಹೇಗಾದರೆ ಸರ್ವರ ಪ್ರತ್ಯಕ್ಷಕ್ಕೂ ಗೋಚರಗಳಾಗಿರುವುವೋ ಅದರಂತೆ ಈ ಪ್ರಾಕಟ್ಯವೆಂಬ ಧರ್ಮವೂ ನಮಗೆ ಮಾತ್ರವಲ್ಲದೆ ಎಲ್ಲರಿಗೂ ಗೋಚರಗಳಾಗಬೇಕು. ಎಂದರೆ ಯಾವನಿಗೆ ಘಟಜ್ಞಾನವುಂಟಾಯಿತೋ ಅವನಿಗೇ ಆ ಘಟದಲ್ಲಿರುವ ಪ್ರಾಕಟ್ಯಧರ್ಮವು ತಿಳಿಯುತ್ತದೆಯೆಂದು ನೀವು ಹೇಳಕೂಡದು. ; ಎಲ್ಲರಿಗೂ ಅದು ತಿಳಿಯಬೇಕು. ಹಾಗೆ ತಿಳಿಯುವುದಿಲ್ಲವಾದುದರಿಂದ ಈ ಪ್ರಾಕಟ್ಯವೆಂಬುದು ಯೋಗ್ಯಾನುಪಲಂಭನಿರಸ್ತವಾಗಿರುವುದು.

## ೮೪೧. ದ್ವಿತ್ವಾದಿವತ್ಪ್ರಾಕಟ್ಯಸ್ಯಾಪ್ಯೇಕಮಾತ್ರಪುರುಷವೇದ್ಯತ್ವಸಂಭವಾಶಂಕಾ.

ಅದೇತಕ್ಕೆ? ಎದುರಿಗಿರುವ ಅನೇಕಪದಾರ್ಥಗಳನ್ನು ತನ್ನ ಬುದ್ಧಿಯಲ್ಲಿ ಒಟ್ಟಾಗಿ ಸೇರಿಸಿ ಒಬ್ಬನು ಲೆಕ್ಕಮಾಡುವವನಾದರೆ ಆಗ ಆ ಪದಾರ್ಥಗಳಲ್ಲಿ ಇರುವ ದ್ವಿತ್ವತ್ರಿತ್ವಾದಿಸಂಖ್ಯೆಗಳು ಅವನಿಗೆ ಮಾತ್ರವೇ ಹೇಗೆ ತೋರುವುವೋ ಅದರಂತೆ ಘಟದಲ್ಲಿರುವ ಪ್ರಾಕಟ್ಯವೂ ಘಟಜ್ಞಾನವುಳ್ಳವನಿಗೆ ಮಾತ್ರವೇ ತೋರುತ್ತದೆಯೆಂದು ಹೇಳಬಹುದಲ್ಲವೆ?

## ೮೪೨. ದ್ವಿತ್ವಾದೌ ತತ್ಸಂಭವೇಽಪಿ ಪ್ರಾಕಟ್ಯೇ ತದಸಂಭವೋಪಪಾದನಂ.

ಇಲ್ಲ ಹಾಗೆ ಹೇಳಲಾಗುವುದಿಲ್ಲ. ದ್ವಿತ್ವಾದಿಪರಾರ್ಧಪರ್ಯಂತವಾದ ಸಂಖ್ಯೆ ನೈಯಾಯಿಕರ ಮತದಲ್ಲಿ ಅಪೇಕ್ಷಾಬುದ್ಧಿಯಿಂದ ಜನ್ಯವೆಂದು ಅಂಗೀಕರಿಸಲ್ಪಟ್ಟಿದ್ದರೂ ವೇದಾಂತಿಗಳು ಹಾಗೆ ಒಪ್ಪುವುದಿಲ್ಲ. ದ್ವಿತ್ವಾದಿಸಂಖ್ಯೆ ಜನ್ಯವಲ್ಲ; ಮೊದಲಿಂದಲೇ ಇರುವುದು. ಅಪೇಕ್ಷಾಬುದ್ಧಿಯಿಂದ ಅದು ಅಭಿವ್ಯಕ್ತವಾಗುವುದು.

ಹೇಗೆಂದರೆ—ಒಂದೇ ಪ್ರದೇಶದಲ್ಲಿ ಪೂರ್ವತ್ವ, ಪಶ್ಚಿಮತ್ವ, ದಕ್ಷಿಣತ್ವ, ಉತ್ತರತ್ವ, ಎಂಬ ಎಲ್ಲಾ ದಿಗ್ಧರ್ಮಗಳೂ ಇರುವುವು. ಆದರೂ ಆ ಆ ಉಪಾಧಿಗಳನ್ನು ಪರಾಮರ್ಶಿಸಿದ ಹೊರತು ಪೂರ್ವತ್ವಾದಿಗಳು ಅಭಿವ್ಯಕ್ತಗಳಾಗುವುದಿಲ್ಲ. ಘಟಪಟಾದಿಪದಾರ್ಥಗಳು ಲೋಕದಲ್ಲಿ ವ್ಯವಸ್ಥಿತಗಳಾಗಿರುವಂತೆ ಪೂರ್ವಾದಿಪದಾರ್ಥಗಳು ವ್ಯವಸ್ಥಿತಗಳಲ್ಲ; ಎಂದರೆ ಘಟವೆಂಬುದು ಯಾವಾಗಲೂ ಘಟವೇ ಆಗಿರುವುದು; ಎಂದಿಗೂ ಪಟವಾಗುವುದಿಲ್ಲ; ಪೂರ್ವಾದಿದಿಕ್ಕುಗಳಾದರೆ ಯಾವಾಗಲೂ ಪೂರ್ವಾದಿಗಳೇ ಅಲ್ಲ; ಯಾವ ಪ್ರದೇಶವು ಪೂರ್ವವೆನಿಸಿಕೊಂಡಿರುವುದೋ ಅದೇ ಪ್ರದೇಶವು ಅದಕ್ಕಿಂತಲೂ ಪೂರ್ವದಲ್ಲಿರುವ ಪ್ರದೇಶವನ್ನು ಕುರಿತು ಪಶ್ಚಿಮವೆನಿಸಿಕೊಳ್ಳುವುದು ; ದಕ್ಷಿಣದಲ್ಲಿರುವ ಪ್ರದೇಶವನ್ನು ಕುರಿತು ಉತ್ತರವೆನಿಸಿಕೊಳ್ಳುವುದು ; ಉತ್ತರದಲ್ಲಿರುವ ಪ್ರದೇಶವನ್ನು ಕುರಿತು ದಕ್ಷಿಣವೆನಿಸಿಕೊಳ್ಳುವುದು ; ಪಶ್ಚಿಮದಲ್ಲಿರುವ ಪ್ರದೇಶವನ್ನು ಕುರಿತು ಪೂರ್ವವೆನಿಸಿಕೊಳ್ಳುವುದು. ಅಂತು ಒಂದೇ ಪ್ರದೇಶದಲ್ಲಿ ಪೂರ್ವತ್ವ, ಪಶ್ಚಿಮತ್ವ, ದಕ್ಷಿಣತ್ವ, ಉತ್ತರತ್ವ ಎಂಬ ಎಲ್ಲಾ ಧರ್ಮಗಳೂ ಮೊದಲಿನಿಂದಲೇ ಸಿದ್ಧಗಳಾಗಿರುವುವು. ಆದರೂ ಅವುಗಳಿಗೆ ಅಭಿವ್ಯಕ್ತಿ ಉಂಟಾಗಬೇಕಾದರೆ ಅವುಗಳಿಗೆ ಪ್ರತಿಕೂಲಗಳಾದ ಧರ್ಮಗಳೆಂಬ ಉಪಾಧಿಗಳ ಜ್ಞಾನದಿಂದ ಅವುಗಳು ಅಭಿವ್ಯಕ್ತಗಳಾಗುವುವು ; ಎಂದರೆ ಪೂರ್ವಪ್ರದೇಶದಲ್ಲಿರುವ ಪೂರ್ವತ್ವಕ್ಕೆ ಪಶ್ಚಿಮಪ್ರದೇಶದಲ್ಲಿರುವ ಪಶ್ಚಿಮತ್ವದ ಜ್ಞಾನವೂ, ಅಂಥ ಪಶ್ಚಿಮತ್ವಕ್ಕೆ ಅಂಥ ಪೂರ್ವತ್ವದ ಜ್ಞಾನವೂ, ಉತ್ತರಪ್ರದೇಶದಲ್ಲಿರುವ ಉತ್ತರತ್ವಕ್ಕೆ ದಕ್ಷಿಣಪ್ರದೇಶದಲ್ಲಿರುವ ದಕ್ಷಿಣತ್ವದ ಜ್ಞಾನವೂ, ಅಂಥ ದಕ್ಷಿಣತ್ವಕ್ಕೆ ಅಂಥ ಉತ್ತರತ್ವದ ಜ್ಞಾನವೂ, ಅಭಿವ್ಯಂಜಕಗಳಾಗಿರುವುವು.

"ಓಹೋ ! ಹೀಗೆ ಪೂರ್ವತ್ವದ ನಿರ್ಣಯಕ್ಕೆ ಪಶ್ಚಿಮತ್ವದ ನಿರ್ಣಯಾಪೇಕ್ಷೆಯೂ, ಪಶ್ಚಿಮತ್ವದ ನಿರ್ಣಯಕ್ಕೆ ಪೂರ್ವತ್ವದ ನಿರ್ಣಯಾಪೇಕ್ಷೆಯೂ, ಇರುವುವಾದರೆ ಅನ್ಯೋನ್ಯಾಶ್ರಯವುಂಟಾಗುವುದರಿಂದ ಕೊನೆಗೆ ಒಂದರ ನಿರ್ಣಯವೂ ಆಗುವುದಿಲ್ಲವಷ್ಟೆ ?"

ಎಂದು ಆಶಂಕಿಸಬೇಕಾದುದಿಲ್ಲ. ಸೂರ್ಯನ ಉದಯಾಸ್ತಮಯಪ್ರದೇಶಗಳನ್ನು ನೋಡಿಕೊಂಡು ಪೂರ್ವತ್ವಪಶ್ಚಿಮತ್ವಗಳ ನಿರ್ಣಯವನ್ನು ಮಾಡಬಹುದಾದುದರಿಂದ ಅನ್ಯೋನ್ಯಾಶ್ರಯವಿಲ್ಲ. ಓಹೋ ! ಹಾಗಾದರೆ ಪೂರ್ವತ್ವಪಶ್ಚಿಮತ್ವಗಳಿಗೆ ಪರಸ್ಪರವಾಗಿ ಅಭಿವ್ಯಂಗ್ಯಾಭಿವ್ಯಂಜಕಭಾವವು ತಪ್ಪಿಹೋಗುವುದಲ್ಲವೆ ?

ಇಲ್ಲ—ತಪ್ಪಿಹೋಗುವುದಿಲ್ಲ. ಉದಯಪ್ರದೇಶ, ಅಸ್ತಪ್ರದೇಶ ಈ ಎರಡು ಪ್ರದೇಶಗಳ ಮಧ್ಯದಲ್ಲಿರುವ ಪ್ರತಿಯೊಂದು ಪ್ರದೇಶದಲ್ಲಿಯೂ ಪೂರ್ವತ್ವ ಪಶ್ಚಿಮತ್ವ ಮೊದಲಾದ ಎಲ್ಲಾ ಧರ್ಮಗಳನ್ನೂ ನಿರ್ಣಯಿಸುವುದಕ್ಕಾಗಿ ಪೂರ್ವತ್ವ ಪಶ್ಚಿಮತ್ವಾದಿಗಳಿಗೆ ಪರಸ್ಪರವಾಗಿ ಅಭಿವ್ಯಂಗ್ಯಾಭಿವ್ಯಂಜಕಭಾವವನ್ನು ಸ್ವೀಕರಿಸಿಯೇ ತೀರಬೇಕು.

ಹೀಗೆ ಪ್ರತಿಯೊಂದು ಪ್ರದೇಶದಲ್ಲಿಯೂ ಎಲ್ಲಾ ದಿಕ್ಕುಗಳೂ ಹೇಗಾದರೆ ಜನ್ಯಗಳಲ್ಲದೆ ಮೊದಲಿನಿಂದಲೇ ಇರುವುವೋ ; ಮತ್ತು ಆ ಆ ಅಭಿವ್ಯಂಜಕಗಳಿಂದ ಹೇಗಾದರೆ ಅಭಿವ್ಯಕ್ತಗಳಾಗುವುವೋ ; ಅದರಂತೆ ಪುರೋವರ್ತಿಪದಾರ್ಥಗಳಲ್ಲಿ ದ್ವಿತ್ವಾದಿಸಂಖ್ಯೆಗಳು ಮೊದಲಿನಿಂದಲೇ ಇರುವುವಲ್ಲದೆ ಜನ್ಯಗಳಲ್ಲ. ಅಂಥ ಸಂಖ್ಯೆಗಳೇ ಆ ಆ ಕಾಲದೇಶರೂಪವಾದ ಉಪಾಧಿಗಳ ಜ್ಞಾನವೆಂಬ ಅಪೇಕ್ಷಾಬುದ್ಧಿಯಿಂದ ಅಭಿವ್ಯಕ್ತಗಳಾಗುವುವು.

ಆದುದರಿಂದಲೇ ಅಪೇಕ್ಷಾಬುದ್ಧಿಯೆಂಬ ಅಭಿವ್ಯಂಜಕಜ್ಞಾನವು ಯಾವನಿಗೆ ಇರುವುದೋ ಅವನಿಗೇ ದ್ವಿತ್ವಾದಿಗಳು ಅಭಿವ್ಯಕ್ತಗಳಾಗುವುವೆಂಬುದೂ, ಇತರನಿಗೆ ಅಭಿವ್ಯಕ್ತಗಳಾಗುವುದಿಲ್ಲವೆಂಬುದೂ ಸಹ ಯುಕ್ತವಾಗಿರುವುದು.

ಪ್ರಾಕಟ್ಯವೆಂಬ ಧರ್ಮವನ್ನಾದರೆ ಜ್ಞಾನಜನ್ಯವಾಗಿ ಹೇಳುವಿರಾದುದರಿಂದ ಅಭಿವ್ಯಂಗ್ಯವಲ್ಲವಾದಪ್ರಯುಕ್ತ ರೂಪಾದಿಗಳಂತೆ ಎಲ್ಲರಿಗೂ ಕಾಣಬೇಕು

ಸಿದ್ಧಾಂಜನವು ನಿಧಿಗೆ ಅಭಿವ್ಯಂಜಕವಾಗಿಯೂ, ನಿಧಿ ಸಿದ್ಧಾಂಜನಕ್ಕೆ ಅಭಿವ್ಯಂಗ್ಯವಾಗಿಯೂ ಇರುವುದೆಂದು ಆಯುರ್ವೇದದಲ್ಲಿಯೂ ಪ್ರತ್ಯಕ್ಷಾನುಭವದಲ್ಲಿಯೂ ಪ್ರಸಿದ್ಧವಾಗಿರುವುದು ; ಆದುದರಿಂದಲೇ ಯಾವನೊಬ್ಬನು ತನ್ನ ನೇತ್ರಗಳಲ್ಲಿ ಸಿದ್ಧಾಂಜನವನ್ನು ಹಚ್ಚಿಕೊಂಡಿರುವನೋ ಅವನಿಗೆ ನಿಧಿ ಅಭಿವ್ಯಕ್ತವಾಗಿ ಕಾಣುವುದೂ, ಇತರರಿಗೆ ಕಾಣದಿರುವುದೂ ಯುಕ್ತವಾಗಿರುವುವು. ಇದರಂತೆ ಪ್ರಾಕಟ್ಯವೆಂಬ ಧರ್ಮಕ್ಕೂ ಅಭಿವ್ಯಂಗ್ಯತ್ವವಿದ್ದಿದ್ದರೆ ಅಭಿವ್ಯಂಜಕಜ್ಞಾನವುಳ್ಳ ಒಬ್ಬನಿಗೆ ಮಾತ್ರ ಅದು ಪ್ರಕಾಶಿಸುವುದೂ ಇತರರಿಗೆ ಪ್ರಕಾಶಿಸದೆ ಇರುವುದೂ ಯುಕ್ತವಾಗುತ್ತಿದ್ದುವು.

ಆದರೆ ಪ್ರಾಕಟ್ಯಧರ್ಮಕ್ಕೆ ಜ್ಞಾನಾಭಿವ್ಯಂಗ್ಯತ್ವವನ್ನು ಹೇಳದೆ ಜ್ಞಾನಜನ್ಯತ್ವವನ್ನು ಹೇಳಿರುವಿರಾದುದರಿಂದ ಇದು ಒಬ್ಬನಿಗೇ ಪ್ರಕಾಶಿಸಕೂಡದು ; ಎಲ್ಲರಿಗೂ ಪ್ರಕಾಶಿಸಬೇಕು. ಏತಕ್ಕೆಂದರೆ ಜನ್ಯಪದಾರ್ಥವು ಜನಕನಿಗೆ ಮಾತ್ರ ತೋರುವುದಿಲ್ಲ ; ಸರ್ವರಿಗೂ ತೋರುವುದು. ಕುಲಾಲನಿಂದ ನಿರ್ಮಿತವಾದ ಘಟವು ಕುಲಾಲನಿಗೆ ಮಾತ್ರವೇ ತೋರುವುದಿಲ್ಲ. ಎಲ್ಲರಿಗೂ ತೋರುತ್ತಿರುವುದಷ್ಟೆ ?

ಮತ್ತು—ಧರ್ಮವುಂಟಾಗುವುದಕ್ಕೆ ಧರ್ಮಿಯಿರಬೇಕು. ಧರ್ಮಿಯಿಲ್ಲದೆ ಧರ್ಮವುಂಟಾಗದು. ಜ್ಞಾನವಾದರೆ ಅತೀತಪದಾರ್ಥಗಳಲ್ಲಿಯೂ ಆಗಾಮಿಪದಾರ್ಥಗಳಲ್ಲಿಯೂ ಉಂಟಾಗುವುದು. ಜ್ಞಾನಕ್ಕೆ ವಿಷಯಭೂತಗಳಾದ ಅತೀತಾಗಾಮಿಪದಾರ್ಥಗಳು ಇಲ್ಲದಿರುವಕಾಲದಲ್ಲಿ ಈ ಜ್ಞಾನದಿಂದ ಅವುಗಳಲ್ಲಿ ಪ್ರಾಕಟ್ಯವೆಂಬ ಧರ್ಮವು ಉಂಟಾಗುವ ಬಗೆ ಹೇಗೆ ?

ಪ್ರಾಕಟ್ಯವೆಂಬ ಧರ್ಮವಿಲ್ಲದಿದ್ದರೂ ಜ್ಞಾನವು ಪ್ರಕಾಶಿಸುತ್ತಲೇ ಇರುವುದರಿಂದ ಜ್ಞಾನಪ್ರಕಾಶಕ್ಕಾಗಿ ಪ್ರಾಕಟ್ಯವು ಬೇಕಾಗಿಲ್ಲ. ಪ್ರಾಕಟ್ಯವೆಂಬ ಧರ್ಮವಾದರೂ ಲೋಕದಲ್ಲಿ ಉಂಟೋ ಎಂದು ವಿಮರ್ಶೆಮಾಡಿ ನೋಡಿದರೆ ರೂಪಾದಿಗಳಂತೆ ಅದು ಕಾಣುವುದೂ ಇಲ್ಲ. ಅತೀತಾನಾಗತಪದಾರ್ಥಗಳಲ್ಲಿ ಅದರ ಉತ್ಪತ್ತಿಗೆ ಪ್ರಸಕ್ತಿಯೂ ಇಲ್ಲ. ಆದುದರಿಂದ ಪ್ರಾಕಟ್ಯವೆಂಬ ಲಿಂಗವೇ ಅಸಿದ್ಧವಾದ ಕಾರಣ ಇದರಿಂದ ಜ್ಞಾನವೆಂಬ ಲಿಂಗಿಯನ್ನು ಅನುಮಿಸಲು ಸರ್ವಥಾ ಶಕ್ಯವಲ್ಲ. ಪರಮಾಚಾರ್ಯರಾದ **ಶ್ರೀಯಾಮುನಮುನಿಗಳು** ಈ ಅರ್ಥವನ್ನು ಸಂವಿತ್ಸಿದ್ಧಿಯಲ್ಲಿ ತೋರಿಸಿರುವರು.—

**" ಅತೀತೇಽನಾಗತೇ ಚಾರ್ಥೇ ಕಥಂ ಪ್ರಾಕಟ್ಯಸಂಭವಃ |**
**ನಹಿ ಧರ್ಮಿಣ್ಯಸತ್ಯೇವ ಧರ್ಮಸ್ಸಂಭವಮೃಚ್ಛತಿ || "**

## ೮೪೩ ಅತೀತಾನಾಗತಯೋಃ ಪ್ರಾಕಟ್ಯಾನುತ್ಪತ್ತ್ಯುಪಪಾದನಂ

ಅತೀತಾನಾಗತದಿವಸಗಳೆಂಬ ಧರ್ಮಿ ವರ್ತಮಾನಕಾಲದಲ್ಲಿ ಇಲ್ಲದಿದ್ದರೂ ಅವುಗಳ ಸಂಖ್ಯೆಯೆಂಬ ಧರ್ಮವು ಈಗ ಹುಟ್ಟುವಂತೆ ಅತೀತಾನಾಗತಪದಾರ್ಥಗಳು ಇಲ್ಲದಿದ್ದರೂ ಪ್ರಾಕಟ್ಯವೆಂಬ ಧರ್ಮವು ಹುಟ್ಟಬಹುದಲ್ಲವೆ ?

ಇಲ್ಲ—ಹುಟ್ಟಲಾಗುವುದಿಲ್ಲ. ಅತೀತಾನಾಗತದಿವಸಗಳೆಂಬ ದೃಷ್ಟಾಂತದಲ್ಲಿಯೂ ಆಶ್ರಯವಿಲ್ಲದೆ ಸಂಖ್ಯೆ ಹುಟ್ಟುವುದಿಲ್ಲ. ವರ್ತಮಾನಕಾಲದಲ್ಲಿ ಅತೀತಾನಾಗತದಿವಸಗಳು ಇಲ್ಲವಾದರೂ ಬುದ್ಧಿಯಲ್ಲಿ ಉಪಸ್ಥಿತಗಳಾಗಿರುವುದರಿಂದ ಹೇಗಾದರೆ ಅವುಗಳ ವ್ಯವಹಾರಮಾತ್ರವೇ ಈಗ ಉಂಟಾಗುವುದೋ ಅದರಂತೆ ಅವುಗಳ ಸಂಖ್ಯೆಯೂ ಈಗ ಸ್ವರೂಪತಃ ಇಲ್ಲವಾದರೂ ಬುದ್ಧಿಯಲ್ಲಿ ಉಪಸ್ಥಿತವಾಗಿರುವುದರಿಂದ ಅದರ ವ್ಯವಹಾರಮಾತ್ರವೇ ಈಗ ಉಂಟಾಗಲು ತಡೆಯಿಲ್ಲ. ಆದಕಾರಣ ಅತೀತಾನಾಗತಪದಾರ್ಥಗಳಲ್ಲಿ ಪ್ರಾಕಟ್ಯವೆಂಬ ಧರ್ಮವು ಹುಟ್ಟಲಾರದು.

## ೮೪೪ ಜ್ಞಾನಸಂಬಂಧರೂಪಸ್ಯ ಪ್ರಾಕಟ್ಯಸ್ಯಾಶ್ರಯಂ ವಿನಾಪ್ಯುತ್ಪತ್ತಿಸಂಭವಾಶಂಕಾ

"ಅದೇತಕ್ಕೆ? ಸಂಖ್ಯೆಯಾದರೆ ಆಶ್ರಯವಿಲ್ಲದೆ ಹುಟ್ಟಬೇಡ; ಪ್ರಾಕಟ್ಯವೆಂಬುದು ಆಶ್ರಯವಿಲ್ಲದೆಯೂ ಹುಟ್ಟಬಹುದು. ಹೇಗೆಂದರೆ ಜ್ಞಾನಕ್ಕೂ ಘಟಾದಿಪದಾರ್ಥಗಳಿಗೂ ಉಂಟಾಗುವ ಸಂಬಂಧವು ಎಂಥದೆಂದು ವಿಮರ್ಶೆಮಾಡಿ ನೋಡಿದರೆ ವಿಷಯವಿಷಯಿಭಾವವೆಂಬ ಸಂಬಂಧರೂಪವಾಗಿರುವುದೆಂದು ನಿಷ್ಕರ್ಷಿಸಲ್ಪಡುವುದು; ಇಂಥ ವಿಷಯವಿಷಯಿಭಾವಸಂಬಂಧವುಂಟಾಗುವುದಕ್ಕೆ ಪದಾರ್ಥಗಳು ವಿದ್ಯಮಾನಗಳಾಗಿಯೇ ಇರಬೇಕೆಂಬ ನಿರ್ಬಂಧವಿಲ್ಲ. ಅತೀತಾನಾಗತಪದಾರ್ಥಗಳೊಡನೆಯೂ ಜ್ಞಾನಕ್ಕೆ ಈ ಸಂಬಂಧವು ಉಂಟಾಗಬಹುದು. ಇಂಥ ಸಂಬಂಧವನ್ನೇ ಪ್ರಾಕಟ್ಯವೆಂದು ಹೇಳುವೆವಾದುದರಿಂದ ಇಂಥ ಪ್ರಾಕಟ್ಯವು ಹುಟ್ಟಲು ತಡೆಯೇನು?"

## ೮೪೫ ಪ್ರಾಕಟ್ಯಸ್ಯ ಸಂಬಂಧರೂಪತ್ವೇ ತೇನ ಜ್ಞಾನಾನುಮಾನಾಸಿದ್ಧಿಃ

ಅಲ್ಲ; ಅದೂ ಸಮಂಜಸವಲ್ಲ. ಹಾಗೆ ಹೇಳುವುದಾದರೆ ನಿಮಗೆ ಮೂಲಹಾನಿಯಾಗುವುದು. ಪ್ರಾಕಟ್ಯವೆಂಬುದು ಉಕ್ತಸಂಬಂಧರೂಪವಾಗುವುದಾದರೆ ಆಗ ಅದರಿಂದ ಜ್ಞಾನವು ಅನುಮೇಯವೇ ಆಗಲಾರದು, ಎರಡು ಸಂಬಂಧಿಗಳನ್ನು ತಿಳಿದುಕೊಂಡರಲ್ಲದೆ ಸಂಬಂಧವೆಂಬುದನ್ನು ತಿಳಿಯಲಾಗುವುದಿಲ್ಲ; ಇದಕ್ಕೋಸ್ಕರ ಸಂಬಂಧರೂಪವಾದ ಪ್ರಾಕಟ್ಯವನ್ನು ತಿಳಿದುಕೊಳ್ಳುವುದಕ್ಕಿಂತಲೂ ಮೊದಲೇ ಜ್ಞಾನ ಮತ್ತು ವಿಷಯವೆಂಬ ಎರಡು ಸಂಬಂಧಿಗಳನ್ನು ತಿಳಿದುಕೊಳ್ಳಬೇಕು; ಹೀಗೆ ಜ್ಞಾನವು ಮೊದಲೇ ತಿಳಿದುಹೋದಪ್ರಯುಕ್ತ ಪ್ರಾಕಟ್ಯಹೇತುವಿನಿಂದ ಅದನ್ನು ಅನುಮಿಸಕೆಲಸವಿಲ್ಲವಷ್ಟೆ? ಆದುದರಿಂದ ಪ್ರಾಕಟ್ಯವೆಂಬುದು ಲಿಂಗವಾಗುವುದಿಲ್ಲ.

## ೮೪೬ ವ್ಯವಹಾರಾನ್ಯಥಾನುಪಪತ್ತ್ಯಾ ಪ್ರಾಕಟ್ಯಕಲ್ಪನಾಶಂಕಾ

"ಪೂಜ್ಯರೆ! ಪ್ರಾಕಟ್ಯವೆಂಬುದು ರೂಪಾದಿಗಳಂತೆ ಯದ್ಯಪಿ ಕಾಣಬರುವುದಿಲ್ಲ; ಆದರೂ ಅಂಥ ಧರ್ಮವೊಂದನ್ನು ಜ್ಞಾನಗೋಚರವಸ್ತುಗಳಲ್ಲಿ ಕಲ್ಪಿಸಿಯೇ ಆಗಬೇಕು. ಹಾಗಿಲ್ಲದಿದ್ದರೆ "ಇದು ಪ್ರಕಟವಾಯಿತು; ಇದು ಪ್ರಕಟವಾಗಿಲ್ಲ" ಎಂಬ ವಿಭಾಗವೇ ಲುಪ್ತವಾಗಿಹೋಗುವುದರಿಂದ ಸಕಲಪದಾರ್ಥಗಳಲ್ಲಿಯೂ ಹಾನೋಪಾದಾನಾದಿವ್ಯವಹಾರವು ಉಂಟಾಗಬೇಕಾಗಿ ಬರುವುದು; ಆಗ

ಜ್ಞಾನಕ್ಕೆ ವಿಷಯಗಳಾದ ಪ್ರಕಟಪದಾರ್ಥಗಳಲ್ಲಿ ಮಾತ್ರವೇ ಅಂಥ ವ್ಯವಹಾರವು ಉಂಟಾಗುತ್ತಿರುವುದೂ, ಜ್ಞಾನಕ್ಕೆ ವಿಷಯಗಳಲ್ಲದ ಅಪ್ರಕಟಪದಾರ್ಥಗಳಲ್ಲಿ ಅಂಥ ವ್ಯವಹಾರವು ಇಲ್ಲದಿರುವುದೂ ಸಂಗತವಾಗಲಾರವಷ್ಟೆ? ಆದಕಾರಣ ಇಂಥ ವ್ಯವಹಾರೋಪಪತ್ತಿಗಾಗಿ ಪ್ರಾಕಟ್ಯವನ್ನು ಕಲ್ಪಿಸಿಯೇ ಆಗಬೇಕಲ್ಲವೆ?"

**೬೪೭. ಉಭಯಾಭ್ಯುಪೇತಜ್ಞಾನೇನೈವ ವ್ಯವಹಾರೋಪಪತ್ತ್ಯಾ ಪ್ರಾಕಟ್ಯಕಲ್ಪನಾನಾವಶ್ಯಕತಾ.**

ಇಲ್ಲ—ಪ್ರಾಕಟ್ಯವನ್ನು ಕಲ್ಪಿಸಬೇಕಾದ ಆವಶ್ಯಕತೆಯಿಲ್ಲ. ವ್ಯವಹಾರಕ್ಕೆ ಉಪಪತ್ತಿ ಉಂಟಾಗದಿದ್ದರಲ್ಲವೆ ಪ್ರಾಕಟ್ಯವನ್ನು ಕಲ್ಪಿಸಬೇಕು; ವಾದಿಪ್ರತಿವಾದಿಗಳಾದ ನಾವಿಬ್ಬರೂ ಜ್ಞಾನವೆಂಬ ಒಂದು ಪದಾರ್ಥವನ್ನು ಒಪ್ಪಿರುವೆವು. ಉಭಯಸಂಮತವಾದ ಈ ಜ್ಞಾನದಿಂದಲೇ ಸಮಸ್ತವ್ಯವಹಾರವೂ ಸಂಗತವಾಗುತ್ತಿರುವಲ್ಲಿ ಅನ್ಯಥಾನುಪಪತ್ತಿಯಿಲ್ಲವಾದಪ್ರಯುಕ್ತ ಪ್ರಾಕಟ್ಯಕಲ್ಪನೆಗೆ ಅವಕಾಶವಿಲ್ಲ.

ಪೂರ್ವ್ಯರೆ? ಜ್ಞಾನಮಾತ್ರದಿಂದ **ಹಾನೋಪಾದಾನಾದಿವ್ಯವಹಾರವು** ಸಂಗತವಾದರೂ, ಪ್ರಾಕಟ್ಯವೆಂಬ ಧರ್ಮವಿಲ್ಲದಿದ್ದರೆ "**ಜ್ಞಾತೋ ಘಟಃ—ಪ್ರಕಟೋ ಘಟಃ**" ಎಂಬ ವ್ಯವಹಾರವು ಸಂಗತವಾಗುವುದಿಲ್ಲವಷ್ಟೆ? ಇಂಥ ವ್ಯವಹಾರಕ್ಕೆ ಜ್ಞಾತತೆಯೆಂಬ ನಾಮಾಂತರವನ್ನು ಪಡೆದಿರುವ ಪ್ರಾಕಟ್ಯವೆಂಬ ಧರ್ಮವೇ ಬೀಜವಾಗಿರುವುದರಿಂದ ಅದರಕಲ್ಪನೆ ಆವಶ್ಯಕವಾಗಿರುವುದಲ್ಲವೆ?"

ಇಲ್ಲ—ಆವಶ್ಯಕವಿಲ್ಲ. ಹೇಗೆಂದರೆ ಘಟವು ಇಚ್ಛೆಗೆ ವಿಷಯವಾಗಿರುವುದೆಂದಾಗಲಿ ದ್ವೇಷಕ್ಕೆ ವಿಷಯವಾಗಿರುವುದೆಂದಾಗಲಿ ಅಭಿಪ್ರಾಯವಿದ್ದರೆ "**ಇಷ್ಟೋ ಘಟಃ ದ್ವಿಷ್ಟೋ ಘಟಃ**" ಎಂಬ ವ್ಯವಹಾರವು ಪ್ರವರ್ತಿಸುವುದು. ಅದರಲ್ಲಿ ಇಚ್ಛಾಜನ್ಯವಾಗಿಯೂ ದ್ವೇಷಜನ್ಯವಾಗಿಯೂ ಇರುವ ವಿಷಯಗತವಾದ ಇಷ್ಟತ್ವ, ದ್ವಿಷ್ಟತ್ವ, ಎಂಬ ಧರ್ಮದಿಂದ ಇಚ್ಛೆಯಾಗಲಿ ದ್ವೇಷವಾಗಲಿ ಅನುಮಿಸಲ್ಪಡುವುದಿಲ್ಲ. ಜ್ಞಾನಮಾತ್ರದಿಂದಲೇ ಅಂಥ ವ್ಯವಹಾರವೂ ಸಂಗತವಾಗುವುದು. ಅದರಂತೆಯೇ ಪ್ರಾಕಟ್ಯವನ್ನು ಕಲ್ಪಿಸದಿದ್ದರೂ ಉಕ್ತವ್ಯವಹಾರಕ್ಕೆ ಯಾವ ಅಭ್ಯಂತರವೂ ಇಲ್ಲ.

**೬೪೮ ಜ್ಞಾನಸ್ಯ ಸ್ವಯಂಪ್ರಕಾಶತ್ವಾನಭ್ಯುಪಗಮೇ ತದ್ಧೇತೋರೇವೇತಿನ್ಯಾಯೇನ ಜ್ಞಾನಕಲ್ಪನಸ್ಯೈವಾಸಿದ್ಧಿಪ್ರಸಂಗಃ**

ಮತ್ತು—ಜ್ಞಾನಕ್ಕೆ ಸ್ವಯಂಪ್ರಕಾಶತ್ವವೆಂಬ ಪ್ರತ್ಯಕ್ಷತ್ವವನ್ನು ಒಪ್ಪದೆ ಪ್ರಾಕಟ್ಯಾನುಮೇಯತ್ವವನ್ನೇ ಹೇಳುವುದಾದರೆ ಆಗ ಲಾಘವನ್ಯಾಯವನ್ನು

ಅನುಸರಿಸಬೇಕಾಗಿಬರುವುದರಿಂದ ಜ್ಞಾನವನ್ನೇ ಕಲ್ಪಿಸಲಾಗುವುದಿಲ್ಲ. ಹೇಗೆಂದರೆ ಜ್ಞಾನೋತ್ಪತ್ತಿಗಾಗಿ ಕೆಲವು ಸಾಮಗ್ರಿಗಳು ಆವಶ್ಯಕಗಳೆಂಬುದರಲ್ಲಿ ಇಬ್ಬರಿಗೂ ವಿವಾದವಿಲ್ಲ. ಇಂದ್ರಿಯ, ವಿಷಯ, ಅವುಗಳ ಸನ್ನಿಕರ್ಷ, ಆಲೋಕಾದಿಗಳು, ಕಾಲ, ದೇಶ, ಅದೃಷ್ಟ, ಇವೇ ಮೊದಲಾದ ಸಾಮಗ್ರಿಗಳಿಂದ ಜ್ಞಾನವು ಉತ್ಪನ್ನ ವಾಗುವುದೆಂದು ನೀವೂ ಒಪ್ಪಿರುತ್ತೀರಿ. ಅಂಥ ಸಾಮಗ್ರಿಗಳಿಂದ ಉತ್ಪನ್ನವಾದ ಜ್ಞಾನವು ತನಗೆ ಗೋಚರವಾಗಿರುವ ಪದಾರ್ಥದಲ್ಲಿ ಪ್ರಾಕಟ್ಯವೆಂಬ ಧರ್ಮವನ್ನು ಉಂಟುಮಾಡುತ್ತದೆಯೆಂದೂ, ಅಂಥ ಧರ್ಮವು ಜ್ಞಾನದ ಅನುಮಾನಕ್ಕೆ ಗಮಕ ವಾಗುವುದೆಂದೂ ಸಹ ನೀವು ಹೆಚ್ಚಾಗಿ ಹೇಳುತ್ತೀರಿ. ಅಂತು ಸಾಮಗ್ರಿ ಜ್ಞಾನಕ್ಕೆ ಹೇತುವಾಗಿಯೂ, ಜ್ಞಾನವು ಪ್ರಾಕಟ್ಯಕ್ಕೆ ಹೇತುವಾಗಿಯೂ ಇರುವು ವೆಂದು ನಿಮ್ಮ ಅಭಿಪ್ರಾಯವಾಯಿತು. ಜ್ಞಾನವು ಪ್ರತ್ಯಕ್ಷವೆನಿಸಿಕೊಳ್ಳದೆ ಪ್ರಾಕ ಟ್ಯದಿಂದ ಕಲ್ಪನೀಯವೇ ಆಗಿರುವುದಾದರೆ ಪ್ರಾಕಟ್ಯವು ತನಗೆ ಹೇತುವಾದ ಜ್ಞಾನವನ್ನು ಕಲ್ಪಿಸುವುದಕ್ಕಿಂತಲೂ, ಅಂಥ ಜ್ಞಾನಕ್ಕೂ ಹೇತುವಾಗಿರುವ ಸಾಮಗ್ರಿಯನ್ನೇ ಕಲ್ಪನೆಮಾಡುವುದಾದರೆ ಲಾಘವವಿರುವುದರಿಂದ ಹಾಗೆಯೇ ಏತಕ್ಕೆ ಕಲ್ಪನೆಮಾಡಬಾರದು ?

ಮಧ್ಯದಲ್ಲಿ ಜ್ಞಾನವೆಂಬ ಒಂದು ಶಲ್ಯವನ್ನು ಕಲ್ಪನೆಮಾಡಿ ಗೌರವದೋ ಷಕ್ಕೆ ಏಕೆ ಗುರಿಯಾಗುತ್ತೀರಿ? **"ತದ್ಧೇತೋರೇವಾಸ್ತು ತದ್ಧೇತುತ್ವಂ ಮಧ್ಯೇ ಕಿಂ ತೇನ"** ಎಂದಲ್ಲವೆ ನ್ಯಾಯದರ್ಶಿಗಳು ಹೇಳುವರು ?

ನಮ್ಮ ಮತದಲ್ಲಿಯಾದರೋ ಜ್ಞಾನವು ಸ್ವಯಂಪ್ರಕಾಶವೆನಿಸಿಕೊಂಡು ಪ್ರತ್ಯಕ್ಷವಾದುದರಿಂದಲೇ ಲಾಘವಯುಕ್ತಿಯಿಂದ ಜ್ಞಾನವನ್ನು ಅಪಲಪಿಸಲಾಗು ವುದಿಲ್ಲವಾದಪ್ರಯುಕ್ತ ಜ್ಞಾನಸಾಮಗ್ರಿಗಿಂತಲೂ ಜ್ಞಾನವು ಭಿನ್ನವಾದುದೆಂದು ಹೇಳಿದರೂ ಯಾವದೋಷವೂ ಬರುವುದಿಲ್ಲ; ಮತ್ತು ಇವೆರಡಕ್ಕೂ ಭೇದವನ್ನು ಹೇಳಿಯೇ ಆಗಬೇಕು. ಏತಕ್ಕೆಂದರೆ ಜ್ಞಾನವೆಂಬುದು ಪ್ರತ್ಯಕ್ಷವಾಗಿರುವುದು. ಜ್ಞಾನಸಾಮಗ್ರಿಯಾದರೋ ಅದರ ಏಕದೇಶವು ಪ್ರತ್ಯಕ್ಷವಾಗಿದ್ದರೂ ಸಂಪೂ ರ್ಣವಾಗಿ ಪ್ರತ್ಯಕ್ಷವಲ್ಲ. ಅದೃಷ್ಟವೆಂಬುದೂ ಜ್ಞಾನಸಾಮಗ್ರಿಯಲ್ಲಿ ಸೇರಿರುವು ದಷ್ಟೆ? ಅದು ಪ್ರತ್ಯಕ್ಷವಾಗಲಾರದಷ್ಟೆ? ಪ್ರತ್ಯಕ್ಷಭೂತವಾದ ಜ್ಞಾನವನ್ನು ಲಾಘವಯುಕ್ತಿಯಿಂದ ಅಪಲಪಿಸುವುದಾದರೆ ಅದೇ ಲಾಘವಯುಕ್ತಿಯಿಂದ ಇಷ್ಟೊಂದು ಪ್ರಪಂಚವನ್ನೂ ಅಪಲಪಿಸಬೇಕಾಗಿ ಬರುವುದಲ್ಲವೆ ?

## ೮೪೯ ವಿಷಯತ್ವರೂಪಧರ್ಮಾಂತರೇಣಾಪಿ ಜ್ಞಾನಾನುಮಾನಾಸಂಭವಃ

ಪೂಜ್ಯರೆ? ಜ್ಞಾನಕ್ಕೆ ಗೋಚರವಾದ ಪದಾರ್ಥದಲ್ಲಿ ಪ್ರಾಕಟ್ಯವೆಂಬ ಧರ್ಮವು ಜ್ಞಾನದಿಂದ ಹುಟ್ಟಬೇಡ; ಆದರೂ ಪ್ರಕಾಶವೆಂಬ ನಾಮಾಂತರವನ್ನು ಪಡೆದಿರುವ ವಿಷಯತ್ವವೆಂಬ ಧರ್ಮವು ಉಂಟಾಗುವುದೆಂದು ನೀವೂ ಒಪ್ಪಿರುತ್ತೀರಿ. ಅಂಥ ವಿಷಯತ್ವವು ಜ್ಞಾನಾಧೀನವಾದಪ್ರಯುಕ್ತ ಅದರಿಂದ ಜ್ಞಾನಾನುಮಾನವು ಸಂಭವಿಸಬಹುದಲ್ಲವೆ ?"

ಇಲ್ಲ—ಅದರಿಂದಲೂ ಸಂಭವಿಸುವುದಿಲ್ಲ. ಏತಕ್ಕೆಂದರೆ ಜ್ಞಾನಸಂಬಂಧಕ್ಕಿಂತಲೂ ಅತಿರಿಕ್ತವಾಗಿ ಪ್ರಕಾಶಾಪರಪರ್ಯಾಯವಾದ ವಿಷಯತ್ವವೆಂಬ ಧರ್ಮವನ್ನು ನಾವು ಒಪ್ಪುವುದಿಲ್ಲವಾದಪ್ರಯುಕ್ತ ಜ್ಞಾನವು ಮೊದಲೇ ಸಿದ್ಧಿಸದಿದ್ದರೆ ಜ್ಞಾನಸಂಬಂಧರೂಪವಾದ ವಿಷಯತ್ವವನ್ನೂ ತಿಳಿಯಲಾಗುವುದಿಲ್ಲವಾದುದರಿಂದ ಇಂಥ ವಿಷಯತ್ವವು ಜ್ಞಾನಾನುಮಾನಕ್ಕೆ ಎಂದಿಗೂ ಲಿಂಗವಾಗಲಾರದು.

## ೮೫೦ ಪ್ರಕಾಶವಿಷಯತ್ವಯೋರ್ಭೇದಾಶಂಕಾ

"ಪೂಜ್ಯರೆ? ಜ್ಞಾನಸಂಬಂಧರೂಪವಾದ ವಿಷಯತ್ವವೇ ಪ್ರಕಾಶವೆನಿಸಿಕೊಳ್ಳುವುದಾದರೆ—ಲೋಕದಲ್ಲಿ ವಾಡಿಕೆಯಾಗಿರುವ "ಘಟವು ಪ್ರಕಾಶಿಸುತ್ತದೆ" "ಘಟವು ತಿಳಿಯಲ್ಪಡುತ್ತದೆ" ಎಂಬ ಉಭಯವಿಧವಾದ ವ್ಯವಹಾರವು ಸಂಗತವಾಗುವುದಿಲ್ಲ; ಹೇಗೆಂದರೆ—'ಪ್ರಕಾಶಿಸುತ್ತದೆ' 'ತಿಳಿಯಲ್ಪಡುತ್ತದೆ' ಎಂಬ ಎರಡು ಧಾತುಗಳೂ ಜ್ಞಾನವೆಂಬ ಒಂದೇ ಅರ್ಥವನ್ನು ಬೋಧಿಸುವುವು. ಜ್ಞಾನಕ್ಕೆ ವಿಷಯವಾಗಿರುವುದೇ ಘಟವು. ಹೀಗಾದರೆ ಒಂದೇ ಅರ್ಥವನ್ನು ಬೋಧಿಸುವ ಎರಡು ಕ್ರಿಯಾಪದಗಳೊಳಗೆ ಒಂದರಲ್ಲಿ ಘಟವೆಂಬ ಒಂದೇ ಪದಾರ್ಥವು ಕರ್ತೃಕಾರಕವಾಗಿಯೂ, ಮತ್ತೊಂದರಲ್ಲಿ ಕರ್ಮಕಾರಕವಾಗಿಯೂ ಹೇಗೆತಾನೆ ಪ್ರಯೋಗಿಸಲ್ಪಡಲಾದೀತು? ಒಂದೇ ಕ್ರಿಯೆಯಲ್ಲಿ ಒಂದೇ ಪದಾರ್ಥಕ್ಕೆ ಕರ್ತೃತ್ವವೂ ಕರ್ಮತ್ವವೂ ಬರಲಾರದಷ್ಟೆ? ನಮ್ಮ ಮತದಲ್ಲಿಯಾದರೋ "ಘಟವು ತಿಳಿಯಲ್ಪಡುತ್ತದೆ" ಎಂಬ ಸ್ಥಳದಲ್ಲಿ ಜ್ಞಾನಜನ್ಯವಾದ ಪ್ರಾಕಟ್ಯವನ್ನು ವಿಷಯದಲ್ಲಿ ಒಪ್ಪುವೆವು. ಇಂಥ ಪ್ರಾಕಟ್ಯವೇ ವಿಷಯತ್ವವೆನಿಸಿಕೊಳ್ಳುವುದು. "ಘಟವು ಪ್ರಕಾಶಿಸುತ್ತದೆ" ಎಂಬ ಸ್ಥಳದಲ್ಲಿಯಾದರೋ ಪ್ರಾಕಟ್ಯವು ತೋರುವುದಿಲ್ಲ. ಏತಕ್ಕೆಂದರೆ ವಿಷಯತ್ವವೂ ಪ್ರಕಾಶತ್ವವೂ ಭಿನ್ನಭಿನ್ನವಾಗಿರುವುದು. ಆದುದರಿಂದ ಒಂದು ಕ್ರಿಯೆಯಲ್ಲಿ ಘಟವು ಕರ್ತೃಕಾರಕವಾಗಿಯೂ ಮತ್ತೊಂದ

ರಲ್ಲಿ ಕರ್ಮಕಾರಕವಾಗಿಯೂ ಇರಬಹುದು. ಆದಕಾರಣ ಇಂಥ ಉಭಯವಿಧ ವಾದ ವ್ಯವಹಾರವು ಸಂಗತವಾಗುವುದಕ್ಕೋಸ್ಕರ ಪ್ರಾಕಟ್ಯವನ್ನು ಕಲ್ಪಿಸಿಯೇ ಆಗಬೇಕಲ್ಲವೆ ? ''

## ೮೫೧. ಕರ್ಮತ್ವಕರ್ತೃತ್ವಯೋಃ ಧಾತುಭೇದನಿಬಂಧನತ್ವೇನ ಅರ್ಥಭೇದನಿಬಂಧನತ್ವಾಭಾವಾತ್ ಪ್ರಕಾಶವಿಷಯತ್ವಯೋಃ ಅಭಿನ್ನತ್ವಸಮರ್ಥನಂ

ಇಲ್ಲ—ಇದಕ್ಕಾಗಿಯೂ ಪ್ರಾಕಟ್ಯವನ್ನು ಕಲ್ಪಿಸಬೇಕಾದುದಿಲ್ಲ. ಹೇಗೆಂದರೆ—'' ಘಟವು ಪ್ರಕಾಶಿಸುತ್ತದೆ '' ಎಂಬ ಸ್ಥಳದಲ್ಲಿ ಧಾತು ಜ್ಞಾನವಿಷಯತ್ವವನ್ನೇ ಬೋಧಿಸುತ್ತದೆಯಲ್ಲದೆ ಜ್ಞಾನಮಾತ್ರವನ್ನು ಬೋಧಿಸುವುದಿಲ್ಲ. ಅಂಥ ವಿಷಯತ್ವಕ್ಕೆ ಆಶ್ರಯವು ಯಾವುದೆಂದು ಜಿಜ್ಞಾಸೆಯುಂಟಾದರೆ ಘಟವೇ ಅದಕ್ಕೆ ಆಶ್ರಯವೆಂದು ತೋರಿಸುವುದಕ್ಕಾಗಿ ಧಾತುವಿನ ಮೇಲೆ ಇರುವ ಕರ್ತೃಪ್ರತ್ಯಯವು ಘಟದಲ್ಲಿ ಆಶ್ರಯತ್ವವೆಂಬ ಕರ್ತೃತ್ವವನ್ನು ಬೋಧಿಸುವುದು. '' ತಿಳಿಯುತ್ತಾನೆ '' ಇತ್ಯಾದಿಸ್ಥಳದಲ್ಲಿ ಆಶ್ರಯತ್ವವಷ್ಟೆ ಕರ್ತೃತ್ವರೂಪವಾಗಿರುವುದು.

'' ಘಟವು ತಿಳಿಯಲ್ಪಡುತ್ತದೆ '' ಎಂಬ ಸ್ಥಳದಲ್ಲಿಯಾದರೋ ಧಾತು ಜ್ಞಾನಮಾತ್ರವನ್ನೇ ಬೋಧಿಸುತ್ತದೆಯಲ್ಲದೆ ಜ್ಞಾನವಿಷಯತ್ವವನ್ನು ಬೋಧಿಸುವುದಿಲ್ಲ. ಆದುದರಿಂದಲೇ ಅಂಥ ವಿಷಯತ್ವವನ್ನು ಬೋಧಿಸುವುದಕ್ಕಾಗಿ ಧಾತುವಿನಮೇಲೆ ಕರ್ಮಣಿಪ್ರತ್ಯಯವು ಪ್ರವರ್ತಿಸಿರುವುದು. ಇಂಥ ವಿಷಯತ್ವವೇ ಕರ್ಮತ್ವವೆನಿಸಿಕೊಳ್ಳುವುದು. ಸವಿಷಯಕವಾದ ಅರ್ಥವನ್ನು ಬೋಧಿಸುವ ಧಾತುಗಳ ಪ್ರಯೋಗಸ್ಥಳದಲ್ಲಿ ವಿಷಯತ್ವವಷ್ಟೆ ಕರ್ಮತ್ವರೂಪವಾಗಿರುವುದು. '' ಘಟವನ್ನು ತಿಳಿಯುತ್ತಾನೆ '' ಇತ್ಯಾದಿಸ್ಥಳದಲ್ಲಿ ಇದು ಪ್ರಸಿದ್ಧವಷ್ಟೆ ? '' ಘಟವು ಪ್ರಕಾಶಿಸುತ್ತದೆ '' ಎಂಬ ಸ್ಥಳದಲ್ಲಿ ಧಾತು ಜ್ಞಾನವನ್ನು ಹೇಗೆ ಬೋಧಿಸುವುದೋ ಹಾಗೆಯೇ ಜ್ಞಾನವಿಷಯತ್ವವನ್ನೂ ಬೋಧಿಸುವುದಾದುದರಿಂದ ಅಲ್ಲಿ ಕರ್ಮಕಾರಕದ ಅಪೇಕ್ಷೆಯೇ ಉಂಟಾಗುವುದಿಲ್ಲವಾದಪ್ರಯುಕ್ತ ಆ ಕ್ರಿಯೆ ಅಕರ್ಮಕವೆನಿಸಿಕೊಂಡಿರುವುದು.

ಅಂತು—ಒಂದೇಕ್ರಿಯೆಯಲ್ಲಿ ಒಂದೇ ಪದಾರ್ಥವು ಕರ್ತೃಕಾರಕವಾಗಿಯೂ ಕರ್ಮಕಾರಕವಾಗಿಯೂ ಆಗುವುದಕ್ಕೆ ಧಾತುವ್ಯತ್ಯಾಸವೇ ಕಾರಣವಾಗಿರುವುದಲ್ಲದೆ ಅರ್ಥಭೇದವು ಕಾರಣವಲ್ಲ. ಜ್ಞಾನವನ್ನು ಬೋಧಿಸುವ ಧಾತು ಕರ್ತೃಪ್ರತ್ಯಯಸಹಿತವಾಗಿದ್ದರೆ ಆಗ ಅಂಥ ಜ್ಞಾನಕ್ಕೆ ವಿಷಯವಾಗುವ ಪದಾ

ರ್ಥವು ಕರ್ತೃಕಾರಕವೆನಿಸಿಕೊಳ್ಳುವುದು; ಅದೇ ಜ್ಞಾನವು ಕರ್ಮಪ್ರತ್ಯಯ ಸಹಿತವಾದ ಧಾತುವಿನಿಂದ ಬೋಧಿಸಲ್ಪಡುವುದಾದರೆ ಆಗ ಅಂಥ ಜ್ಞಾನಕ್ಕೆ ವಿಷಯವಾಗುವ ಪದಾರ್ಥವು ಕರ್ಮಕಾರಕವೆನಿಸಿಕೊಳ್ಳುವುದು.

ಅರ್ಥಭೇದವಿಲ್ಲದಿದ್ದರೂ ಧಾತುಭೇದವಿದ್ದರೆ ಕರ್ಮಕರ್ತೃಬೋಧಕಪ್ರತ್ಯಯ ಭೇದವು ಬರುತ್ತದೆಯೆಂಬುದು ಲೋಕದಲ್ಲಿ ಸುಪ್ರಸಿದ್ಧವಾಗಿರುವುದಲ್ಲದೆ ಅಪೂರ್ವ ವಾದುದಲ್ಲ. ಹೇಗೆಂದರೆ "ಕೊಡಲಿಯನ್ನು ಮೇಲಕ್ಕೆ ಎತ್ತಿ ವೇಗವಾಗಿ ಮರದಲ್ಲಿ ಬೀಳಿಸುತ್ತಾನೆ" "ಕೊಡಲಿಯಿಂದ ಮರವನ್ನು ಕಡಿಯುತ್ತಾನೆ" ಈ ಎರಡು ವಾಕ್ಯಗಳಲ್ಲಿಯೂ ವಿಶೇಷವಾದ ಅರ್ಥವ್ಯತ್ಯಾಸವಿಲ್ಲದಿದ್ದರೂ ಕೊಡಲಿ ಒಂದು ವಾಕ್ಯದಲ್ಲಿ ಕರ್ಮಕಾರಕವಾಗಿಯೂ ಮತ್ತೊಂದು ವಾಕ್ಯದಲ್ಲಿ ಕರಣಕಾರಕವಾಗಿಯೂ ನಿರ್ದೇಶಿಸಲ್ಪಟ್ಟಿರುವುದು. ಮತ್ತು ಮರವು ಒಂದುವಾಕ್ಯದಲ್ಲಿ ಅಧಿಕರಣ ಕಾರಕವಾಗಿಯೂ ಮತ್ತೊಂದರಲ್ಲಿ ಕರ್ಮಕಾರಕವಾಗಿಯೂ ನಿರ್ದೇಶಿಸಲ್ಪಟ್ಟಿರುವುದು. ಹೀಗೆ ಅರ್ಥಭೇದವಿಲ್ಲದಿದ್ದರೂ ಕಾರಕಪ್ರತ್ಯಯಭೇದವು ಬರುವುದಕ್ಕೆ "ಬೀಳಿಸುತ್ತಾನೆ ಕಡಿಯುತ್ತಾನೆ" ಎಂಬ ಧಾತುಭೇದವೇ ಕಾರಣವಾಗಿರುವುದಲ್ಲದೆ ಬೇರೆ ಇಲ್ಲ.

ಇದರಂತೆಯೇ—"ಘಟವು ಪ್ರಕಾಶಿಸುತ್ತದೆ" "ಘಟವು ತಿಳಿಯಲ್ಪಡುತ್ತದೆ" ಎಂಬ ಸ್ಥಳದಲ್ಲಿಯೂ ಪ್ರತ್ಯಯಭೇದವು ಬರುವುದಕ್ಕೆ ಧಾತುಭೇದವೇ ಕಾರಣವಾಗಿರುವುದರಿಂದ ಪ್ರಾಕಟ್ಯವನ್ನು ಕಲ್ಪನೆಮಾಡದಿದ್ದರೂ ಇಂಥ ಉಭಯ ವಿಧವಾದ ವ್ಯವಹಾರಕ್ಕೆ ಯಾವ ಅನುಪಪತ್ತಿಯೂ ಇಲ್ಲವಾದುದರಿಂದ ಪ್ರಾಕಟ್ಯ ಕಲ್ಪನೆಗೆ ಅವಕಾಶವಿಲ್ಲ.

## ೮೫೨ ವ್ಯವಹಾರ-ವಿಷಯವ್ಯವಸ್ಥಾ-ಕರ್ಮತ್ವಾ-ನ್ಯಥಾನುಪಪತ್ತ್ಯಾ ಪ್ರಾಕಟ್ಯಕಲ್ಪನಾವಶ್ಯಕತ್ವಾಶಂಕಾ

ಪೂಜ್ಯರೆ! ಜ್ಞಾನಕ್ಕೆ ವಿಷಯಭೂತಗಳಾದ ಘಟಾದಿಪದಾರ್ಥಗಳಲ್ಲಿ ಜ್ಞಾನದಿಂದ ಪ್ರಾಕಟ್ಯವೆಂಬ ಧರ್ಮವು ಉತ್ಪನ್ನವಾಗುತ್ತದೆಯೆಂಬುದನ್ನು ಒಪ್ಪದಿದ್ದರೆ ಘಟಾದಿಪದಾರ್ಥಗಳ ವ್ಯವಹಾರಗಳನ್ನು ನಡಸಲಾಗುವುದಿಲ್ಲ. ಏತಕ್ಕೆಂದರೆ ಘಟಾದಿಪದಾರ್ಥಗಳಲ್ಲಿ ಉಂಟಾಗುವ ವ್ಯವಹಾರವನ್ನು ಕುರಿತು ಘಟಾದಿಪದಾರ್ಥಗಳಲ್ಲಿ ಇರುವ ಪ್ರಾಕಟ್ಯವು ಕಾರಣವಾಗಿರುವುದು. ಘಟವು ಪ್ರಕಟವಾದರಲ್ಲವೆ ಘಟವ್ಯವಹಾರವನ್ನು ನಡಸಬಹುದು. ಇಂಥ ಕಾರ್ಯಕಾರಣಭಾವವನ್ನು ಒಪ್ಪದಿದ್ದರೆ ಘಟಾದಿವ್ಯವಹಾರವು ಆಕಸ್ಮಿಕವಾಗಿ ಉಂಟಾಯಿತೆಂದು ಹೇಳಬೇಕಾಗುವುದು.

ಮತ್ತು—ಪ್ರಾಕಟ್ಯವನ್ನು ಅಂಗೀಕರಿಸದಿರುವ ನಿಮ್ಮ ಮತದಲ್ಲಿ ಘಟಜ್ಞಾನಕ್ಕೆ ಘಟವೇ ವಿಷಯವೆಂದೂ, ಪಟವು ವಿಷಯವಲ್ಲವೆಂದೂ ವಿಷಯವ್ಯವಸ್ಥೆಯನ್ನು ಹೇಳಲಾಗುವುದಿಲ್ಲ. ಜ್ಞಾನದಿಂದ ಘಟದಲ್ಲಿ ಪ್ರಾಕಟ್ಯವೆಂಬ ಅತಿಶಯವುಂಟಾಗಲಿಲ್ಲವಾದರೆ ಘಟಕ್ಕೂ ಘಟೇತರಪದಾರ್ಥಗಳಿಗೂ ತಾರತಮ್ಯವಿಲ್ಲವಷ್ಟೆ ?

ಮತ್ತು—ಪ್ರಾಕಟ್ಯವನ್ನು ಒಪ್ಪಿಕೊಳ್ಳದ ನಿಮ್ಮ ಮತದಲ್ಲಿ "**ಘಟವನ್ನು ತಿಳಿಯುತ್ತಾನೆ**" ಎಂಬ ಸ್ಥಳದಲ್ಲಿ ಘಟವು ಕರ್ಮಕಾರಕವಾಗಲಿಕ್ಕಿಲ್ಲ. ಕ್ರಿಯೆಯಿಂದ ಉಂಟಾಗುವ ಫಲಕ್ಕೆ ಆಶ್ರಯವಾದ ವಸ್ತುವಲ್ಲವೆ ಕರ್ಮಕಾರಕವಾಗಬಲ್ಲುದು. ಜ್ಞಾನದಿಂದ ಘಟದಲ್ಲಿ ಪ್ರಾಕಟ್ಯವೆಂಬ ಫಲವು ಉಂಟಾಗದಿದ್ದರೆ ಘಟಕ್ಕೆ ಕರ್ಮಕಾರಕತ್ವವು ಸಂಭವಿಸುವುದಿಲ್ಲವಷ್ಟೆ ?

ಆದುದರಿಂದ ವ್ಯವಹಾರಾನುಪಪತ್ತಿಯನ್ನೂ, ವಿಷಯವ್ಯವಸ್ಥಾನುಪಪತ್ತಿಯನ್ನೂ, ಕರ್ಮತ್ವಾನುಪಪತ್ತಿಯನ್ನೂ ಪರಿಹರಿಸುವುದಕ್ಕಾಗಿ ಪ್ರಾಕಟ್ಯವೆಂಬ ಧರ್ಮವನ್ನು ಒಪ್ಪಿಕೊಳ್ಳಬೇಕಲ್ಲವೆ ?

## ೮೫೩. ಉಭಯಾಭ್ಯುಪೇತಜ್ಞಾನೇನೈವ ಸರ್ವಾನುಪಪತ್ತಿಪರಿಹಾರಸಂಭವಾತ್ ನ ಪ್ರಾಕಟ್ಯಕಲ್ಪನಾವಶ್ಯಕತಾ.

ಇಲ್ಲ ಇದಕ್ಕಾಗಿಯೂ ಪ್ರಾಕಟ್ಯವನ್ನು ಒಪ್ಪಿಕೊಳ್ಳಬೇಕಾದುದಿಲ್ಲ. ಹೇಗೆಂದರೆ ನೀವು ತೋರಿಸಿದ ಎಲ್ಲಾ ಅನುಪಪತ್ತಿಗಳನ್ನೂ ಉಭಯವಾದಿಸಂಮತವಾದ ಜ್ಞಾನವೆಂಬುದೊಂದರಿಂದಲೇ ಪರಿಹರಿಸಬಹುದು. ಘಟಾದಿಪದಾರ್ಥಗಳಲ್ಲಿ ಉಂಟಾಗುವ ವ್ಯವಹಾರವನ್ನು ಕುರಿತು ವಿಷಯತಾಸಂಬಂಧದಿಂದ ಘಟಾದಿಪದಾರ್ಥಗಳಲ್ಲಿ ಉಂಟಾಗುವ ಜ್ಞಾನವೇ ಕಾರಣವಾಗಿರುವುದರಿಂದ ಯಾವುದರಲ್ಲಿ ಜ್ಞಾನವು ಉಂಟಾಗಿರುವುದೋ ವ್ಯವಹಾರವೂ ಅದರಲ್ಲಿಯೇ ಉಂಟಾಗುವುದೆಂದು ಈ ಜ್ಞಾನವೇ ವ್ಯವಹಾರಕ್ಕೆ ವ್ಯವಸ್ಥಾಪಕವಾಗಿರುವುದರಿಂದ ಇದಕ್ಕೋಸ್ಕರ ಪ್ರಾಕಟ್ಯವು ಬೇಕಾಗಿಲ್ಲ.

ಮತ್ತು—ಪ್ರಾಕಟ್ಯವೇ ವ್ಯವಹಾರಕ್ಕೆ ವ್ಯವಸ್ಥಾಪಕವೆಂದು ಹೇಳುವ ನಿಮ್ಮ ಮತದಲ್ಲಿ ಘಟಜ್ಞಾನದಿಂದ ಉಂಟಾಗುವ ಪ್ರಾಕಟ್ಯವು ಘಟದಲ್ಲಿಯೇ ಉಂಟಾಗುತ್ತದೆಯೆಂಬುದಕ್ಕೆ ನಿಯಾಮಕವೇನು ? ಪಟದಲ್ಲಿಯೂ ಏತಕ್ಕೆ ಉಂಟಾಗಲಿಲ್ಲ ?

"ಜ್ಞಾನಜನಕವಾದ ಇಂದ್ರಿಯಕ್ಕೆ ಘಟದೊಡನೆಯೇ ಸಂಯೋಗವಿರುವುದಲ್ಲದೆ ಪಟದೊಡನೆ ಸಂಯೋಗವಿಲ್ಲವಾದುದರಿಂದ ಘಟದಲ್ಲಿಯೇ ಪ್ರಾಕಟ್ಯವು ಉಂಟಾಗುವುದಲ್ಲದೆ ಪಟದಲ್ಲಿ ಉಂಟಾಗುವುದಿಲ್ಲ" ಎಂದು ಹೇಳುವಿರೋ ?

ಹಾಗಾದರೆ ಜ್ಞಾನಜನಕವಾದ ಇಂದ್ರಿಯಸಂಯೋಗವು ಘಟದಲ್ಲಿಯೇ ಉಂಟಾಗಿರುವುದರಿಂದಲೂ, ಪಟದಲ್ಲಿ ಇಲ್ಲವಾದುದರಿಂದಲೂ, ಘಟದಲ್ಲಿಯೇ ಜ್ಞಾನವು ಉಂಟಾಗುವುದಲ್ಲದೆ ಪಟದಲ್ಲಿ ಉಂಟಾಗುವುದಿಲ್ಲವೆಂದು ಜ್ಞಾನವನ್ನೇ ಏತಕ್ಕೆ ವ್ಯವಸ್ಥೆಪಡಿಸಬಾರದು? ಅಪ್ರಸಿದ್ಧವಾದ ಧರ್ಮಾಂತರವನ್ನು ಏತಕ್ಕೆ ಒಪ್ಪಿಕೊಳ್ಳಬೇಕು? ಆದುದರಿಂದ ಜ್ಞಾನವೇ ವ್ಯವಹಾರಕ್ಕೆ ವ್ಯವಸ್ಥಾಪಕವಾಗ ಬಲ್ಲುದಾದಪ್ರಯುಕ್ತ ಇದಕ್ಕೋಸ್ಕರ ಪ್ರಾಕಟ್ಯವು ಬೇಕಾಗಿಲ್ಲ.

ಮತ್ತು—ಯಾವ ಜ್ಞಾನವು ಯಾವುದರ ಸಂಬಂಧಿಯಾಗಿರುವುದೋ ಅಂಥ ಜ್ಞಾನಕ್ಕೆ ಅದೇ ವಿಷಯವಾಗುವುದಲ್ಲದೆ ಮತ್ತಾವುದೂ ವಿಷಯವಾಗಲಿಕ್ಕಿಲ್ಲವಾದಪ್ರಯುಕ್ತ ಜ್ಞಾನದಿಂದಲೇ ವಿಷಯನಿಯಮವೂ ಉಪಪನ್ನವಾದುದರಿಂದ ಇದಕ್ಕಾಗಿಯೂ ಪ್ರಾಕಟ್ಯವು ಬೇಕಾಗಿಲ್ಲ.

ಮತ್ತು—ಕ್ರಿಯಾಜನ್ಯವಾದ ಫಲಕ್ಕೆ ಆಶ್ರಯವಾದುದೇ ಸರ್ವತ್ರ ಕರ್ಮಕಾರಕವಾಗುವುದೆಂಬ ನಿಯಮವಿಲ್ಲ. "ಕೃಷ್ಣನನ್ನು ಪ್ರಹ್ಲಾದನು ಇಚ್ಛಿಸುತ್ತಾನೆ" "ರಾಮನನ್ನು ರಾವಣನು ದ್ವೇಷಿಸುತ್ತಾನೆ" ಇತ್ಯಾದಿಸ್ಥಳದಲ್ಲಿ ಇಚ್ಛಾವಿಷಯವಾದುದೂ ದ್ವೇಷವಿಷಯವಾದುದೂ ಕರ್ಮಕಾರಕವಾಗಿರುವುದರಿಂದ ಅಲ್ಲಿ ವಿಷಯತ್ವವೇ ಕರ್ಮತ್ವರೂಪವಾಗಿರುವುದಲ್ಲದೆ ಕ್ರಿಯಾಜನ್ಯಫಲಾಶ್ರಯತ್ವರೂಪವಾದ ಕರ್ಮತ್ವವು ಅದರಲ್ಲಿಲ್ಲ. ನೀವು ಹೇಳುವ ಕರ್ಮತ್ವವೇ ಅಲ್ಲಿಯೂ ಇರುವುದಾದರೆ ಅಂಥ ಕರ್ಮತ್ವದ ಉಪಪತ್ತಿಗೋಸ್ಕರ ಇಚ್ಛಾಜನ್ಯವಾದ ಇಷ್ಟತ್ವವೆಂಬ ಧರ್ಮವನ್ನೂ, ದ್ವೇಷಜನ್ಯವಾದ ದ್ವಿಷ್ಟತ್ವವೆಂಬ ಧರ್ಮವನ್ನೂ ಅಲ್ಲಿ ಸ್ವೀಕರಿಸಬೇಕಾಗಿ ಬರುವುದು. ಆದುದರಿಂದ ಇಂಥ ಸ್ಥಳದಲ್ಲಿ ವಿಷಯತ್ವವೇ ಕರ್ಮತ್ವನೆನಿಸಿಕೊಳ್ಳುವುದಾದಕಾರಣ ಜ್ಞಾನವಿಷಯತ್ವವೇ ಜ್ಞಾನಕರ್ಮತ್ವವೆಂದು ಉಪಪನ್ನವಾಗುವುದಾದಪ್ರಯುಕ್ತ ಇದಕ್ಕಾಗಿಯೂ ಪ್ರಾಕಟ್ಯವು ಬೇಕಾಗಿಲ್ಲ.

## ೮೫೪. ಉತ್ಪತ್ತಿಕಾಲಾವಚ್ಛೇದೇನ ಜ್ಞಾನಪ್ರಕಾಶಾಭಾವಾತ್ ವ್ಯವಹಾರಾಭಾವಾಚ್ಚ ಸ್ವಯಂಪ್ರಕಾಶತ್ವಾನುಪಪತ್ತ್ಯಾಶಂಕಾ.

"ಪೂಜ್ಯರೆ! "ಪುರೋವರ್ತಿಯಾದ ಪದಾರ್ಥವು ಘಟವಾಗಿರುವುದು" ಎಂಬ ಜ್ಞಾನವುಂಟಾಗುವ ಕಾಲದಲ್ಲಿ ಅಂಥ ಜ್ಞಾನಕ್ಕೆ ವಿಷಯಭೂತವಾದ ಘಟಮಾತ್ರವೇ ಆಗ ಪ್ರಕಾಶಿಸುವುದಲ್ಲದೆ ಆ ಜ್ಞಾನವೂ ಆಗಲೇ ಪ್ರಕಾಶಿಸುವುದಿಲ್ಲವೆಂದು ಹಿಂದೆಯೇ ಹೇಳಿರುವೆವಾದುದರಿಂದ ಜ್ಞಾನಕ್ಕೆ ಸ್ವಯಂಪ್ರಕಾಶತ್ವವನ್ನು ಹೇಗೆ ಹೇಳುವುದು?

ಜ್ಞಾನೋತ್ಪತ್ತಿಕಾಲದಲ್ಲಿ "ಘಟೋಽನುಭೂಯತೇ" ಎಂದರೆ 'ಘಟವು ಜ್ಞಾನದಿಂದ ವಿಷಯೀಕರಿಸಲ್ಪಡುತ್ತದೆ' ಎಂಬುದಾಗಿ ಜ್ಞಾನವಿಷಯಕವಾದ ಶಬ್ದಪ್ರಯೋಗವಿಲ್ಲವಾದುದರಿಂದಲೂ ಆಗ ಜ್ಞಾನವು ಪ್ರಕಾಶಿಸುವುದಿಲ್ಲವೆಂಬುದು ಸ್ಪಷ್ಟವಾಗಿರುವುದು. ಉತ್ಪತ್ತಿಕಾಲದಲ್ಲಿಯೇ ಜ್ಞಾನವು ಪ್ರಕಾಶಿಸುವುದಾಗಿದ್ದರೆ ಉಕ್ತವಾದ ಪ್ರಯೋಗವೂ ಆಗಲೇ ಇರಬೇಕಲ್ಲವೆ?"

## ೮೫೫. ತತ್ಪರಿಹಾರಃ.

ಇಂಥ ಆಶಂಕೆ ಸಂಗತವಲ್ಲ. "ಅನುಭೂಯತೇ" ಎಂಬುದಾಗಿ ಆಗ ಪ್ರಯೋಗಿಸದಿದ್ದಮಾತ್ರಕ್ಕೆ ಜ್ಞಾನದ ಪ್ರಕಾಶವೇ ಇಲ್ಲವೆಂದು ಅದರಿಂದ ಹೇಳಲಾಗುವುದಿಲ್ಲ. ಅಂಥ ಶಬ್ದವನ್ನು ಪ್ರಯೋಗಿಸದಿದ್ದುದಕ್ಕೆ ಜ್ಞಾನದ ಅಪ್ರಕಾಶವು ಕಾರಣವಲ್ಲ; ಶಬ್ದಪ್ರಯೋಗವನ್ನು ಮಾಡಬೇಕೆಂಬ ಇಚ್ಛೆಯಿಲ್ಲದಿರುವಿಕೆಯೇ ಕಾರಣವಾಗಿರುವುದು. ಜ್ಞಾನವು ಪ್ರಕಾಶಿಸುತ್ತಿದ್ದರೂ ಇಚ್ಛೆಯಿಲ್ಲದಿರುವಾಗ ಅಂಥ ಶಬ್ದವನ್ನು ಪ್ರಯೋಗಿಸದೆಯೂ ಇರಬಹುದು. ಅನುಭೂತವಾದ ಅರ್ಥವನ್ನೆಲ್ಲಾ ಶಬ್ದಪ್ರಯೋಗದಿಂದ ವ್ಯವಹರಿಸಿಯೇ ಆಗಬೇಕೆಂಬ ನಿರ್ಬಂಧವೇನೂ ಇಲ್ಲ. ಅನುಭೂತವಾದ ಸಂಪೂರ್ಣಾರ್ಥವನ್ನು ವ್ಯವಹರಿಸಬೇಕೆಂಬ ಇಚ್ಛೆಯಿದ್ದರೆ ಸಂಪೂರ್ಣವನ್ನೂ ವ್ಯವಹರಿಸುತ್ತಾರೆ; ಅವುಗಳೊಳಗೆ ಕೆಲವನ್ನು ಮಾತ್ರ ವ್ಯವಹರಿಸಬೇಕೆಂಬ ಇಚ್ಛೆಯಿದ್ದರೆ ಅಷ್ಟನ್ನೇ ವ್ಯವಹರಿಸುತ್ತಾರೆ; ಸ್ವಲ್ಪವೂ ಇಚ್ಛೆಯಿಲ್ಲದಿದ್ದರೆ ಸ್ವಲ್ಪವನ್ನೂ ವ್ಯವಹರಿಸುವುದಿಲ್ಲ; ವ್ಯವಹರಿಸದಿದ್ದಮಾತ್ರಕ್ಕೆ ಜ್ಞಾನದ ಪ್ರಕಾಶವಿಲ್ಲವೆಂಬುದು ಸಿದ್ಧವಾಗುವುದಿಲ್ಲ.

## ೮೫೬. ಭೂತಭಾವಿರೂಪೋಪಾದಾನಕಾರಣಾಭಾವಾತ್ತತ್ರ ಪ್ರಾಕಟ್ಯೋತ್ಪತ್ತ್ಯನುಪಪತ್ತಿಪ್ರದರ್ಶನಂ.

ಮತ್ತು ಜ್ಞಾನದಿಂದ ಜ್ಞಾನವಿಷಯದಲ್ಲಿ ಪ್ರಾಕಟ್ಯವುಂಟಾಗುವಕಾಲದಲ್ಲಿ ಜ್ಞಾನವು ನಿಮಿತ್ತಕಾರಣವಾಗಿಯೂ, ವಿಷಯವು ಸಮವಾಯಿಕಾರಣವಾಗಿಯೂ ಎಂದರೆ ಉಪಾದಾನಕಾರಣವಾಗಿಯೂ ಇರುವುದೆಂಬುದು ನಿಮ್ಮ ಪ್ರಕ್ರಿಯೆಯಾದರೆ—ಆಗ ಭೂತಭವಿಷ್ಯತ್ಪದಾರ್ಥಗಳು ಜ್ಞಾನಕಾಲದಲ್ಲಿ ಇಲ್ಲವಾದುದರಿಂದ ಸಮವಾಯಿಕಾರಣವೇ ಇಲ್ಲವಾಗಿ ಅವುಗಳಲ್ಲಿ ಪ್ರಾಕಟ್ಯವುಂಟಾಗಲು ಅವಕಾಶವಿಲ್ಲವೆಂದು ನಾವು ಹೇಳುವೆವಾದರೆ ಅದಕ್ಕೆ ಪ್ರತ್ಯುತ್ತರವಾಗಿ ಏನು ಹೇಳಬಲ್ಲಿರಿ?

## ೮೫೭ ಅಭಾವಸ್ಯೋಪಾದಾನತ್ವಾಸಂಭವಾತ್ ಜ್ಞಾನವಿಷಯೇಽಪಿ ತಸ್ಮಿನ್ ಪ್ರಾಕಟ್ಯೋತ್ಪತ್ತ್ಯನುಪಪತ್ತಿಪ್ರದರ್ಶನಂ.

ಘಟಾಭಾವವು ನಮ್ಮ ಜ್ಞಾನಕ್ಕೆ ಗೋಚರವಾಗುವ ಸಮಯದಲ್ಲಿ ಅಂಥ ಅಭಾವದಲ್ಲಿಯೂ ಜ್ಞಾನದಿಂದ ಪ್ರಾಕಟ್ಯವುಂಟಾಗಲು ಅವಕಾಶವಿಲ್ಲ. ಸರ್ವತ್ರ ಭಾವಪದಾರ್ಥವೇ ಉಪಾದಾನಕಾರಣವಾಗುವುದಲ್ಲದೆ ಅಭಾವಕ್ಕೆ ಉಪಾದಾನ ಕಾರಣತ್ವಯೋಗ್ಯತೆಯಿಲ್ಲವಷ್ಟೆ ? "ಕಥಮಸತಸ್ಸಜ್ಜಾಯೇತ" ಎಂಬ ಛಾಂದೋಗ್ಯಶ್ರುತಿ ಅಭಾವಕ್ಕೆ ಉಪಾದಾನಕಾರಣತ್ವವಿಲ್ಲವೆಂಬುದನ್ನು ಸ್ಪಷ್ಟ ವಾಗಿ ತೋರಿಸಿರುವುದಲ್ಲವೆ ?

## ೮೫೮ ಪ್ರಾಕಟ್ಯಸ್ಯ ಜ್ಞಾನವಿಷಯತ್ವಾನಭ್ಯುಪಗಮೇ ತೇನ ಜ್ಞಾನಾನುಮಾನಾನುಪಪತ್ತಿಃ.

ಮತ್ತು—ಜ್ಞಾನದಿಂದ ಜ್ಞಾನವಿಷಯದಲ್ಲಿ ಪ್ರಾಕಟ್ಯವುಂಟಾದಮೇಲೆ ಅಂಥ ಪ್ರಾಕಟ್ಯವು ಜ್ಞಾನಕ್ಕೆ ವಿಷಯವಾಗುತ್ತದೆಯೋ ಅಥವಾ ಆಗುವುದಿಲ್ಲವೋ? ಆಗುವುದಿಲ್ಲವೆಂದು ಹೇಳುವುದಾದರೆ ಪ್ರಾಕಟ್ಯವೆಂಬ ಲಿಂಗದ ಜ್ಞಾನವೇ ಇಲ್ಲ ವಾದುದರಿಂದ ಜ್ಞಾನವೆಂಬ ಲಿಂಗಿಯನ್ನು ಅದರಿಂದ ಅನುಮಿಸಲಾಗುವುದಿಲ್ಲ. ಜ್ಞಾಯಮಾನವಾದ ಲಿಂಗವಲ್ಲವೆ ಲಿಂಗಿಯನ್ನು ಅನುಮಿಸಲು ಸಾಧನವಾದೀತು ?

## ೮೫೯ ಜ್ಞಾನವಿಷಯತ್ವಾಭ್ಯುಪಗಮೇ ಪ್ರಾಕಟ್ಯೇಽಪಿ ಪ್ರಾಕಟ್ಯಾಂತರೋತ್ಪತ್ತ್ಯಾಪತ್ತ್ಯಾ ಅನವಸ್ಥಾ.

ಪ್ರಾಕಟ್ಯವು ಜ್ಞಾನಕ್ಕೆ ವಿಷಯವಾಗುತ್ತದೆಯೆಂದು ಹೇಳುವುದಾದರೆ— ಅಂಥ ಜ್ಞಾನವು ಸ್ವವಿಷಯವಾದ ಪ್ರಾಕಟ್ಯದಲ್ಲಿ ಪ್ರಾಕಟ್ಯವೆಂಬ ಧರ್ಮವನ್ನು ಉಂಟುಮಾಡುತ್ತದೆಯೋ ? ಅಥವಾ ಉಂಟುಮಾಡುವುದಿಲ್ಲವೋ ? ಉಂಟುಮಾ ಡುವುದಿಲ್ಲವೆಂದು ಹೇಳುವುದಾದರೆ—ಜ್ಞಾನವು ಸ್ವವಿಷಯವಾದ ಘಟಾದಿ ಪದಾರ್ಥದಲ್ಲಿಯೂ ಪ್ರಾಕಟ್ಯವನ್ನು ಉಂಟುಮಾಡದೆ ಹೋಗಬೇಕಾಗಿ ಬರು ವುದು. ಸ್ವವಿಷಯವಾದ ಪ್ರಾಕಟ್ಯದಲ್ಲಿಯೂ ಪ್ರಾಕಟ್ಯವನ್ನು ಉಂಟುಮಾಡು ತ್ತದೆಯೆಂದು ಹೇಳುವುದಾದರೆ ಅನವಸ್ಥಾದೋಷದಿಂದ ಎಂದಿಗೂ ನೀವು ಬಿಡುಗಡೆಯನ್ನು ಹೊಂದಲಾರಿರಿ.

## ೮೬೦. ಅತೋ ಗತ್ಯಂತರಾಭಾವಾದಪಿ ಚ ಜ್ಞಾನಸ್ಯ ಸ್ವಯಂ ಪ್ರಕಾಶತ್ವಾವಶ್ಯಕತಾ.

ಆದಕಾರಣ ಪ್ರಾಕಟ್ಯದಲ್ಲಿ ಜ್ಞಾನವಿಷಯತ್ವವು ಹೇಗಾದರೆ ನಿಮ್ಮ ಮತ ದಲ್ಲಿ ಸಂಭವಿಸುವುದಿಲ್ಲವೋ ಅದರಂತೆಯೇ ಭೂತಪದಾರ್ಥ, ಭವಿಷ್ಯತ್ಪದಾರ್ಥ,

ಅಭಾವಪದಾರ್ಥ, ಇವುಗಳಲ್ಲಿಯೂ ಜ್ಞಾನವಿಷಯತ್ವವು ನಿಮ್ಮ ಮತದಲ್ಲಿ ಸಂಭವಿಸುವುದಿಲ್ಲ. ನಮ್ಮ ಮತದಲ್ಲಿಯಾದರೋ ಮುಂದೆ ಹೇಳುವ ರೀತಿಯಲ್ಲಿ ಜ್ಞಾನಸಂಬಂಧವು ಅವುಗಳಲ್ಲಿಯೂ ಸಂಭವಿಸುವುದರಿಂದ ಜ್ಞಾನವಿಷಯತ್ವವೂ ಅವುಗಳಲ್ಲಿಯೂ ಉಂಟೆಂದು ಹೇಳಲು ತಡೆಯಿಲ್ಲ. ಆದುದರಿಂದ ಪ್ರಾಕಟ್ಯವನ್ನು ಕಲ್ಪಿಸಿಕೊಡುವ ಅನನ್ಯಥಾಸಿದ್ಧವಾದ ಪ್ರಮಾಣವು ಯಾವುದೊಂದೂ ಇಲ್ಲವಾದ ಪ್ರಯುಕ್ತ ಪ್ರಾಕಟ್ಯದಿಂದ ಜ್ಞಾನವನ್ನು ಅನುಮಿಸಲು ಅವಕಾಶವಿಲ್ಲವಾದಕಾರಣ ಜ್ಞಾನಕ್ಕೆ ಸ್ವಯಂಪ್ರಕಾಶತ್ವವನ್ನೇ ಒಪ್ಪಬೇಕು.

ಸ್ವವ್ಯತಿರಿಕ್ತಗಳಾದ ಸಮಸ್ತಪದಾರ್ಥಗಳನ್ನೂ ಸಾಧಿಸಿಕೊಡುವ ಜ್ಞಾನವು ತನ್ನನ್ನೇ ತಾನು ಸಾಧಿಸಿಕೊಡದಿದ್ದರೆ ಜ್ಞಾನವೆಂಬ ವಸ್ತುವೇ ಇಲ್ಲವೆನಿಸಿಕೊಂಡು ಜ್ಞಾನಾಧೀನಸಿದ್ಧಿಕವಾದ ಸಮಸ್ತಪದಾರ್ಥವೂ ಇಲ್ಲವಾಗಿ ಕೊನೆಗೆ ಮಾಧ್ಯಮಿಕರ ಶೂನ್ಯವಾದವೇ ವೇದಾಂತರಹಸ್ಯವಾಗಬೇಕಾಗಿ ಬರುವುದರಿಂದ ಜ್ಞಾನಕ್ಕೆ ಸ್ವಯಂಪ್ರಕಾಶತ್ವವು ಅವರ್ಜನೀಯವಾಗಿರುವುದು. ಈ ಅರ್ಥವನ್ನು **ಶ್ರೀಮದ್ಯಾಮುನಮುನಿಗಳು**—

"ತದೇವಾಪಶ್ಯತಾಂ ಸರ್ವಶೂನ್ಯತ್ವಾದ್ಬಿಭ್ಯತಾಂ ಸತಾಂ ।
ಗತಿಸ್ಸ್ವಯಂಪ್ರಕಾಶತ್ವಾದೃತೇ ನಾನ್ಯೋಪಲಭ್ಯತೇ ॥"

ಎಂಬ ಶ್ಲೋಕದಲ್ಲಿ ಅಪ್ಪಣೆಕೊಡಿಸಿರುವರು.

## ೮೬೧. ಅಂಗುಳ್ಯಗ್ರದೃಷ್ಟಾಂತವೈಷಮ್ಯಪ್ರದರ್ಶನೇನ ಜ್ಞಾನಸ್ಯ ಸ್ವಯಂಪ್ರಕಾಶತ್ವೋಪಪಾದನಂ.

ಪೂಜ್ಯರೆ? ಜ್ಞಾನಕ್ಕೆ ಸ್ವಯಂಪ್ರಕಾಶತ್ವವನ್ನು ಹೇಳುವ ನಿಮ್ಮ ಮತದಲ್ಲಿ ಜ್ಞಾನವು ತನ್ನನ್ನು ತಾನೇ ಪ್ರಕಾಶಪಡಿಸುತ್ತದೆಯೆಂದು ಹೇಳಿದಂತೆ ಆಗುವುದು; ಈ ವಿಷಯದಲ್ಲಿ ಅಂಗುಳ್ಯಗ್ರದೃಷ್ಟಾಂತದಿಂದ ವ್ಯಾಘಾತದೋಷವನ್ನು ಹಿಂದೆಯೇ ತೋರಿಸಿರುವೆವಷ್ಟೆ? ಅದಕ್ಕೆ ಪರಿಹಾರವೇನಾಯಿತು?

ಅಂಗುಳ್ಯಗ್ರದೃಷ್ಟಾಂತವನ್ನು ಉಪೇಕ್ಷಿಸಿ ದೀಪಾದಿದೃಷ್ಟಾಂತಗಳನ್ನು ಪರಿಶೀಲಿಸುವಿಕೆಯೇ ಇದಕ್ಕೆ ಪರಿಹಾರವಾಗಿರುವುದು. ಮತ್ತೊಂದು ಪದಾರ್ಥವನ್ನು ಮುಟ್ಟಬಲ್ಲುದಾದ ಅಂಗುಳ್ಯಗ್ರವು ತನ್ನನ್ನು ತಾನೇ ಮುಟ್ಟಲಾರದೆಂಬ ವಿಷಯವು ಪ್ರತ್ಯಕ್ಷದಿಂದ ಅವಗತವಾಗಿರುವಕಾರಣ ಅಂಗುಳ್ಯಗ್ರಕ್ಕೆ ಅಂಥ ಸಾಮರ್ಥ್ಯವಿರಬೇಡ; ಅದಮಾತ್ರಕ್ಕೆ ಜ್ಞಾನವೂ ಅಂಗುಳ್ಯಗ್ರಕ್ಕೆ ಸದೃಶವಾಗಿಯೇ ಇರಬೇಕೆಂಬ ರಾಜಶಾಸನವೇನೂ ಇಲ್ಲ. ದೇವದತ್ತನು ಶ್ಯಾಮಳವರ್ಣನಾಗಿ ಇದ್ದಮಾತ್ರಕ್ಕೆ ಯಜ್ಞದತ್ತನೂ ಹಾಗೆಯೇ ಇರಬೇಕೆಂಬ ನಿರ್ಬಂಧವೇನು?

ಸ್ವವ್ಯತಿರಿಕ್ತಗಳಾದ ಘಟಾದಿಪದಾರ್ಥಗಳನ್ನು ಪ್ರಕಾಶಪಡಿಸುವ ದೀಪವು ತನ್ನನ್ನೂ ತಾನೇ ಪ್ರಕಾಶಪಡಿಸುತ್ತದೆಯೆಂಬುದು ಪ್ರತ್ಯಕ್ಷಸಿದ್ಧವಾಗಿರುವುದಷ್ಟೆ? ಇಂಥ ದೀಪದ ಸಾಮ್ಯವನ್ನೇ ಜ್ಞಾನವು ಏತಕ್ಕೆ ಹೊಂದಿರಬಾರದು.? ಸೂಕ್ಷ್ಮ ವಾಗಿ ವಿಚಾರಮಾಡಿನೋಡಿದರೆ ಕರ್ತೃಕರ್ಮತ್ವವಿರೋಧವೂ ಈ ದೀಪದೃಷ್ಟಾಂತದಿಂದಲೇ ಪರಿಹರಿಸಲ್ಪಡುವುದು. ಇತರಪದಾರ್ಥಗಳನ್ನು ಪ್ರಕಾಶಪಡಿಸುವಾಗ ಕರ್ತೃವೆನಿಸಿಕೊಂಡ ದೀಪವು ತನ್ನನ್ನೂ ತಾನು ಪ್ರಕಾಶಪಡಿಸುವುದಾದುದರಿಂದ ಕರ್ಮವೆನಿಸಿಕೊಂಡೂ ಇರುವುದಲ್ಲವೆ?

ಮತ್ತು—ದೀಪವು ಜ್ಞಾನೋತ್ಪತ್ತಿಗೆ ಪ್ರತಿಬಂಧಕವಾದ ಅಂಧಕಾರವನ್ನು ಹೋಗಲಾಡಿಸಿ ಪದಾರ್ಥಜ್ಞಾನವನ್ನು ಉಂಟುಮಾಡುವುದು. ಹೀಗೆ ಉಂಟು ಮಾಡಲ್ಪಟ್ಟ ಜ್ಞಾನವು ಪದಾರ್ಥವ್ಯವಹಾರವನ್ನು ಉಂಟುಮಾಡುವುದು. ಹೀಗೆ ಕರ್ಮಕರ್ತೃತ್ವಗಳೆರಡೂ ಜ್ಞಾನಕ್ಕೆ ಇದ್ದಲ್ಲಿ ವಿರೋಧವೇನೂ ಇಲ್ಲವಷ್ಟೆ?

ಮತ್ತು—ಯದ್ಯಪಿ ಕರ್ಮತ್ವವೂ ಕರ್ತೃತ್ವವೂ ಪರಸ್ಪರವಿರುದ್ಧವಾದುದರಿಂದ ಒಂದರಲ್ಲಿ ಸಂಭವಿಸುವುದಿಲ್ಲವಾದಪ್ರಯುಕ್ತ ಕರ್ಮಕಾರಕವೂ ಕರ್ತೃಕಾರಕವೂ ಪರಸ್ಪರಭಿನ್ನವಾಗಿಯೇ ಇರಬೇಕೆಂದು ಪ್ರತ್ಯಕ್ಷದಲ್ಲಿ ಕಾಣುತ್ತಿರುವುದು. ಆದರೂ ಈ ನಿಯಮವು ಉತ್ಪಾದಕಗಳಲ್ಲಿಯೇ ಇರುವುದಲ್ಲದೆ ಜ್ಞಾಪಕಗಳಲ್ಲಿ ಇಲ್ಲವೆಂಬುದು ಸಹ ಪ್ರತ್ಯಕ್ಷದಲ್ಲಿ ಕಾಣುತ್ತಿರುವುದು. ಜ್ಞಾತಾವೆನಿಸಿಕೊಂಡ ಆತ್ಮನಲ್ಲಿಯೂ, ಮನಸ್ಸಿನಲ್ಲಿಯೂ, ಶಬ್ದವೆಂಬ ಶಬ್ದದಲ್ಲಿಯೂ, ಪದವೆಂಬ ಪದದಲ್ಲಿಯೂ, ವಾಗಿಂದ್ರಿಯದಲ್ಲಿಯೂ, ಕರ್ಮಕರ್ತೃಭಾವಕ್ಕೆ ವಿರೋಧವಿಲ್ಲವೆಂಬುದು ಪ್ರತ್ಯಕ್ಷಸಿದ್ಧವಾಗಿರುವುದಷ್ಟೆ? (ಈ ವಿಷಯವು ಸ್ವಲ್ಪದೂರದಲ್ಲಿಯೇ ಸ್ಪಷ್ಟಪಡುವುದು.)

## ಲ೬೨ ಜ್ಞಾನಸ್ಯ ಜ್ಞಾನಾಂತರಾವಿಷಯತ್ವೇ ವ್ಯವಹರ್ತವ್ಯತ್ವಾನುಪಪತ್ತ್ಯಾ ಪುನಃ ಕರ್ಮಕರ್ತೃತ್ವವಿರೋಧಾಶಂಕಾ

ಪೂಜ್ಯರೆ? ಘಟಾದಿಪದಾರ್ಥಗಳಲ್ಲಿ ವ್ಯವಹಾರಯೋಗ್ಯತೆ ಸ್ವವ್ಯತಿರಿಕ್ತ ಜ್ಞಾನಜನ್ಯವಾಗಿ ಇರುವುದೆಂಬುದು ಪ್ರತ್ಯಕ್ಷಸಿದ್ಧವಾಗಿರುವುದು. ಜ್ಞಾನವಿಲ್ಲದಿದ್ದರೆ ವ್ಯವಹಾರವು ಉಂಟಾಗುವುದಿಲ್ಲವಷ್ಟೆ? ಇದರಿಂದ ತಿಳಿದುಬರುವುದೇನೆಂದರೆ ಎಲ್ಲೆಲ್ಲಿ ವ್ಯವಹಾರವು ಉಂಟಾಗುವುದೋ ಅಲ್ಲಲ್ಲಿ ಜ್ಞಾನವು ಇದ್ದೇ ಇರಬೇಕೆಂಬ ವ್ಯಾಪ್ತಿ ತಿಳಿದುಬರುವುದು. ಘಟಾದಿಪದಾರ್ಥಗಳಲ್ಲಿ ವ್ಯವಹಾರವುಂಟಾಗುವಾಗ ಆ ಪದಾರ್ಥಗಳು ಸ್ವವ್ಯತಿರಿಕ್ತವಾದ ಜ್ಞಾನಕ್ಕೆ ಗೋಚರವಾಗಿಯೇ ಇರುವಂತೆ ಜ್ಞಾನದಲ್ಲಿ ವ್ಯವಹಾರವುಂಟಾಗುವಾಗ ಜ್ಞಾನವೂ ಸ್ವವ್ಯತಿರಿಕ್ತವಾದ ಜ್ಞಾನಕ್ಕೆ

ಗೋಚರವಾಗಿಯೇ ಇರಬೇಕು. ಜ್ಞಾನಕ್ಕೆ ಸ್ವಯಂಪ್ರಕಾಶತ್ವವನ್ನು ಹೇಳುವ ನಿಮ್ಮ ಮತದಲ್ಲಿ ಜ್ಞಾನವು ಜ್ಞಾನಾಂತರಕ್ಕೆ ಗೋಚರವಾಗುವುದಿಲ್ಲವಾದುದರಿಂದ ಉಕ್ತವ್ಯಾಪ್ತಿಗೆ ಇಲ್ಲಿ ಭಂಗವುಂಟಾಗುವುದಲ್ಲವೆ ? ಆದುದರಿಂದ ಕರ್ಮಕರ್ತೃ ಭಾವಕ್ಕೆ ವಿರೋಧವಿಲ್ಲವೆಂದು ಹೇಗೆ ಹೇಳಲಾದೀತು ?

## ೮೩೩. ನಾನೋದಾಹರಣೈಸ್ತತ್ಪರಿಹಾರಃ

ಹೀಗೆ ಹೇಳಲಾದೀತು—"ಜ್ಞೇಯವಾದ ಘಟಾದಿಪದಾರ್ಥವು ಸ್ವವ್ಯತಿರಿಕ್ತನಾದ ಜ್ಞಾತಾವಿನಿಂದಲೇ ತಿಳಿಯಲ್ಪಡುತ್ತದೆ" ಎಂದು ವ್ಯಾಪ್ತಿಯಿದ್ದರೂ ಜ್ಞಾತಾವಾದ ಆತ್ಮನು ತನ್ನನ್ನು ತಾನು ತಿಳಿದುಕೊಳ್ಳುವಾಗ ಜ್ಞಾತೃತ್ವ ಜ್ಞೇಯತ್ವಗಳೆರಡೂ ಒಂದೇ ಧರ್ಮಿಯಲ್ಲಿ ಉಂಟಾಗಿರುವುದೆಂಬುದರಲ್ಲಿ ವಿವಾದ ವಿಲ್ಲವಾದುದರಿಂದ ಜ್ಞಾತಾವಾದ ಆತ್ಮನಲ್ಲಿ ಉಕ್ತವ್ಯಾಪ್ತಿಗೆ ಭಂಗವನ್ನು ನೀವೂ ಒಪ್ಪಬೇಕು.

ಮತ್ತು—"ಜ್ಞೇಯವಾದ ಘಟಾದಿಪದಾರ್ಥವು ಸ್ವವ್ಯತಿರಿಕ್ತವಾದ ಇಂದ್ರಿಯದಿಂದ ಉಂಟಾಗುವ ಜ್ಞಾನದಿಂದಲೇ ತಿಳಿಯಲ್ಪಡುತ್ತದೆ" ಎಂಬ ವ್ಯಾಪ್ತಿಯಿದ್ದರೂ ಮನಇಂದ್ರಿಯವನ್ನು ಅನುಮಿಸುವಕಾಲದಲ್ಲಿ ಮನಇಂದ್ರಿ ಯವೇ ಕರಣವಾಗಿರುವುದರಿಂದ ಜ್ಞೇಯವಾದ ಮನಸ್ಸು ಸ್ವಜನ್ಯವಾದ ಜ್ಞಾನ ದಿಂದಲೇ ತಿಳಿಯಲ್ಪಡುವುದಾದಕಾರಣ ಸ್ವವ್ಯತಿರಿಕ್ತೇಂದ್ರಿಯಜನ್ಯವಾದ ಜ್ಞಾನ ದಿಂದ ತಿಳಿಯಲ್ಪಡಲಿಲ್ಲವಾಗಿ ಅಂಥ ಮನಸ್ಸಿನಲ್ಲಿ ಉಕ್ತವ್ಯಾಪ್ತಿಗೆ ಭಂಗವನ್ನು ನೀವೂ ಒಪ್ಪಬೇಕು.

ಮತ್ತು—"ವಾಚ್ಯವೆನಿಸಿಕೊಂಡಿರುವ ಘಟಾದಿಸಮಸ್ತಪದಾರ್ಥವೂ ಸ್ವವ್ಯತಿರಿಕ್ತವಾದ ಶಬ್ದದಿಂದಲೇ ವಾಚ್ಯವೆನಿಸಿಕೊಳ್ಳುವುದು" ಎಂಬ ವ್ಯಾಪ್ತಿ ಯಿದ್ದರೂ ಶಬ್ದವೆಂಬ ಶಬ್ದವೂ ಪದವೆಂಬ ಪದವೂ ಇತರಶಬ್ದಗಳನ್ನೂ ಇತರ ಪದಗಳನ್ನೂ ಹೇಗೆ ವಚಿಸುವುದೋ ಹಾಗೆ ತನ್ನ ತನ್ನ ಸ್ವರೂಪವನ್ನೂ ತಾನೇ ವಚಿಸುವುದಾದುದರಿಂದ ವಾಚ್ಯತ್ವವೂ ವಾಚಕತ್ವವೂ ಒಂದೇ ಧರ್ಮಿಯಲ್ಲಿ ಬಂದುದರಿಂದ ಶಬ್ದಶಬ್ದದಲ್ಲಿಯೂ ಪದಪದದಲ್ಲಿಯೂ ಉಕ್ತವ್ಯಾಪ್ತಿಗೆ ಭಂಗವನ್ನು ನೀವೂ ಒಪ್ಪಬೇಕು.

ಮತ್ತು—ವ್ಯವಹರಿಸಲ್ಪಡತಕ್ಕವುಗಳಾದ ಘಟಾದಿಪದಾರ್ಥಗಳು ಸ್ವವ್ಯತಿ ತಿರಿಕ್ತವಾದ ವಾಗಿಂದ್ರಿಯದಿಂದಲೇ ವ್ಯವಹರಿಸಲ್ಪಡುವುವು" ಎಂಬ ವ್ಯಾಪ್ತಿ ಯಿದ್ದರೂ ವಾಗಿಂದ್ರಿಯದ ವ್ಯವಹಾರವನ್ನು ನಡಸುವಕಾಲದಲ್ಲಿ ವಾಗಿಂದ್ರಿಯ

ದಿಂದಲೇ ವಾಗಿಂದ್ರಿಯವನ್ನು ವ್ಯವಹರಿಸಬೇಕಾಗಿರುವುದರಿಂದ ವ್ಯವಹಾರ ಕರ್ಮತ್ವವೂ ವ್ಯವಹಾರಕರ್ತೃತ್ವವೂ ಒಂದೇ ಧರ್ಮಿಯಲ್ಲಿ ಬಂದುದರಿಂದ ವಾಗಿಂದ್ರಿಯದಲ್ಲಿ ಉಕ್ತವ್ಯಾಪ್ತಿಗೆ ಭಂಗವನ್ನು ನೀವೂ ಒಪ್ಪಬೇಕು.

ಅಂತು—ಆತ್ಮನು ತನ್ನನ್ನು ತಾನೇ ತಿಳಿದುಕೊಳ್ಳುವುದರಿಂದಲೂ, ಮನಸ್ಸು ತನ್ನನ್ನು ತಾನೇ ತಿಳಿದುಕೊಳ್ಳುವುದರಿಂದಲೂ, ಶಬ್ದಶಬ್ದವೂ ಪದಪದವೂ ತನ್ನನ್ನು ತಾನೇ ವಚಿಸುವುದರಿಂದಲೂ, ವಾಗಿಂದ್ರಿಯವು ತನ್ನನ್ನು ತಾನೇ ವ್ಯವಹರಿಸುವುದರಿಂದಲೂ, ಕರ್ಮತ್ವಕರ್ತೃತ್ವಗಳೆರಡೂ ಇಂಥ ಸ್ಥಳದಲ್ಲಿ ಒಂದೇ ಧರ್ಮಿಯಲ್ಲಿ ಬರಬಹುದೆಂಬುದು ಪ್ರತ್ಯಕ್ಷಸಿದ್ಧವಾಗಿರುವುದರಿಂದ ಕರ್ಮಕರ್ತೃತ್ವ ವಿರೋಧವ್ಯಾಪ್ತಿಗೆ ಭಂಗವನ್ನು ನೀವೂ ಒಪ್ಪಬೇಕೆಂಬುದು ಈ ದೃಷ್ಟಾಂತಗಳಿಂದ ಫಲಿತವಾಗಿರುವುದು.

ದೀಪದೃಷ್ಟಾಂತದಿಂದ ಪ್ರಕಾಶ್ಯತ್ವಪ್ರಕಾಶಕತ್ವಗಳೆರಡೂ ಒಂದರಲ್ಲಿ ಬರಬಹುದೆಂಬುದನ್ನು ತಿಳಿಯಬಹುದು; ಆತ್ಮದೃಷ್ಟಾಂತದಿಂದ ದ್ರಷ್ಟೃತ್ವದೃಶ್ಯತ್ವಗಳೆರಡೂ ಒಂದರಲ್ಲಿರಬಹುದೆಂಬುದನ್ನು ತಿಳಿಯಬಹುದು. ಮನೋದೃಷ್ಟಾಂತದಿಂದ ಜ್ಞೇಯತ್ವಜ್ಞಾನಸಾಧನತ್ವಗಳೆರಡೂ ಒಂದರಲ್ಲಿರಬಹುದೆಂಬುದನ್ನು ತಿಳಿಯಬಹುದು. ಶಬ್ದದೃಷ್ಟಾಂತದಿಂದಲೂ ಪದದೃಷ್ಟಾಂತದಿಂದಲೂ ವಾಚ್ಯತ್ವವಾಚಕತ್ವಗಳೆರಡೂ ಒಂದರಲ್ಲಿ ಬರಬಹುದೆಂಬುದನ್ನು ತಿಳಿಯಬಹುದು. ವಾಗಿಂದ್ರಿಯದೃಷ್ಟಾಂತದಿಂದ ವ್ಯವಹಾರ್ಯತ್ವವ್ಯವಹಾರಸಾಧನತ್ವಗಳೆರಡೂ ಒಂದರಲ್ಲಿ ಬರಬಹುದೆಂಬುದನ್ನು ತಿಳಿಯಬಹುದು.

ಇದರಂತೆಯೇ ಜ್ಞಾನಕ್ಕೂ ಜ್ಞಾನಾಂತರಗ್ರಾಹ್ಯತ್ವವನ್ನು ಅಂಗೀಕರಿಸದೆ ಸ್ವಗ್ರಾಹ್ಯತ್ವವನ್ನೇ ಅಂಗೀಕರಿಸಿದರೆ ಯಾವ ವಿರೋಧವೂ ಇಲ್ಲವಾದುದರಿಂದ ಜ್ಞಾನಕ್ಕೆ ಸ್ವಯಂಪ್ರಕಾಶತ್ವವನ್ನು ಹೇಳುವ ವೇದಾಂತಿಗಳ ಘಂಟಾಪಥವು ನಿಷ್ಕಂಟಕವಾಗಿರುವುದು.

## ೬೩೪. ಶ್ರೀಮನ್ನಾಥಮುನಿಸೂಕ್ತ್ಯನುಸಾರೇಣ ಪ್ರಕಾಶಪದಾರ್ಥನಿರ್ಣಯಃ

ಜ್ಞಾನಕ್ಕೆ ಸ್ವಯಂಪ್ರಕಾಶತ್ವವನ್ನು ಹೇಳುವವರ ಮತದಲ್ಲಿ ಪ್ರಕಾಶಪದದ ಅರ್ಥವೇನು? ಇಂಥ ಪ್ರಶ್ನಕ್ಕೆ ಶ್ರೀಮನ್ನಾಥಮುನಿಗಳು ಪ್ರತ್ಯುತ್ತರವನ್ನು ಅಪ್ಪಣೆ ಕೊಡಿಸಿರುವರು.— **"ಅನುಭವಾದೂರತ್ವಂ ಸ್ಮೃತಿನಿಮಿತ್ತಂ ಪ್ರಕಾಶಃ"** ಎಂದರೆ ಅನುಭವಶಬ್ದವಾಚ್ಯವಾದ ಜ್ಞಾನಕ್ಕೆ ಅದೂರವಾಗಿರುವಿಕೆ ಪ್ರಕಾಶ

ವೆನಿಸಿಕೊಳ್ಳುವುದು. ದೂರತ್ವವೆಂದರೆ ಸಂಬಂಧವಿಲ್ಲದಿರುವಿಕೆ; ತದಭಾವವೇ ಅದೂರತ್ವವು. ಎಂದರೆ ಸಂಬಂಧವೇ ಅದೂರತ್ವವು. ಅನುಭವಾದೂರತ್ವವು ಅನುಭವ ಸಂಬಂಧರೂಪವೆಂದು ಪರ್ಯವಸಾನವಾಯಿತು.

ಮಾರ್ಗದಲ್ಲಿ ಹೋಗುವಾಗ ಕಾಷ್ಠ-ಲೋಷ್ಟ-ತೃಣಾದಿಗಳಲ್ಲಿಯೂ ನಮಗೆ ಜ್ಞಾನವುಂಟಾಗುವುದರಿಂದ ಅನುಭವಾದೂರತ್ವವೆಂಬ ಜ್ಞಾನಸಂಬಂಧವು ಅವುಗಳಲ್ಲಿಯೂ ಇರುವುದಾದಪ್ರಯುಕ್ತ ಪ್ರಕಾಶತ್ವವ್ಯವಹಾರವು ಅವುಗಳಲ್ಲಿಯೂ ಬರಬೇಕಾಗುವುದು; ಅದನ್ನು ತಪ್ಪಿಸುವುದಕ್ಕಾಗಿ **"ಸ್ಮೃತಿನಿಮಿತ್ತಂ"** ಎಂಬ ವಿಶೇಷಣವು ಸೇರಿಸಲ್ಪಟ್ಟಿರುವುದು. ಯಾವುದರಲ್ಲಿ ಉಂಟಾದ ಅನುಭವಾದೂರತ್ವವು ಪುನಃ ಕಾಲಾಂತರದಲ್ಲಿ ಅದರ ಸ್ಮರಣಕ್ಕೆ ಹೇತುವಾಗುವುದೋ ಅಂಥ ಪದಾರ್ಥದಲ್ಲಿ ಉಂಟಾದ ಅನುಭವಾದೂರತ್ವವೇ ಪ್ರಕಾಶವೆನಿಸಿಕೊಳ್ಳುವುದು ದಾರಿಯಲ್ಲಿ ಹೋಗುವಾಗ ಕಾಷ್ಠ, ಲೋಷ್ಟ, ತೃಣ, ಮುಂತಾದ ಉದಾಸೀನ ವಸ್ತುಗಳಲ್ಲಿ ಉಂಟಾದ ಜ್ಞಾನಸಂಬಂಧವು ಪುನಃ ಕಾಲಾಂತರದಲ್ಲಿ ಅವುಗಳ ಸ್ಮರಣಕ್ಕೆ ಹೇತುವಲ್ಲವಾದುದರಿಂದ ಅದು ಪ್ರಕಾಶಪದಾರ್ಥವಾಗುವುದಿಲ್ಲ. ಸ್ಮರಣಕ್ಕೆ ಹೇತುವಾಗುವಂತೆ ಅನುಭವಕ್ಕೆ ಸಂನಿಕೃಷ್ಟವಾಗಿರುವಿಕೆಯೇ ಪ್ರಕಾಶವೆನಿಸಿಕೊಳ್ಳುವುದು.

ಶರೀರದ ಹೊರಭಾಗದಲ್ಲಿರುವ ಪದಾರ್ಥಗಳಿಗೆ ಶರೀರದ ಒಳಭಾಗದಲ್ಲಿರುವ ಜ್ಞಾನದೊಡನೆ ಸಂನಿಕೃಷ್ಟತ್ವವು ಹೇಗೆ ಸಂಭವಿಸೀತೆಂದು ಆಶಂಕಿಸಬಾರದು.

ಇಂದ್ರಿಯಜನ್ಯವಾದ ಪ್ರತ್ಯಕ್ಷಜ್ಞಾನಸ್ಥಳದಲ್ಲಿ ಜ್ಞಾನವು ಇಂದ್ರಿಯಗಳ ಮೂಲಕ ಹೊರಗೆ ಪ್ರಸರಿಸುವುದರಿಂದ ಬಾಹ್ಯಪದಾರ್ಥಗಳೊಡನೆ ಸಂಯೋಗವುಂಟಾಗಲು ತಡೆಯಿಲ್ಲ. ಅಂತು ಈಗ ಹೇಳಿದ ಪ್ರಕಾಶಲಕ್ಷಣವು ಪ್ರತ್ಯಕ್ಷಜ್ಞಾನಕ್ಕೆ ವಿಷಯಗಳಾದ ಪದಾರ್ಥಗಳಲ್ಲಿ ಇರುವ ಪ್ರಕಾಶಕ್ಕೆ ಲಕ್ಷಣವಾಗಿರುವುದಲ್ಲದೆ ಅನುಮೇಯಪದಾರ್ಥಗಳಲ್ಲಿ ಇರುವ ಪ್ರಕಾಶಕ್ಕೆ ಲಕ್ಷಣವಲ್ಲ.

ಇಂಥ ಜ್ಞಾನಸಂಬಂಧವು ಜ್ಞಾನಕ್ಕೂ, ಜ್ಞಾನೇತರಪದಾರ್ಥಗಳಿಗೂ ಅಬಾಧಿತವಾಗಿ ಉಂಟಾಗುವುದು. ಸ್ವಯಂಪ್ರಕಾಶವಾದ ಜ್ಞಾನದಲ್ಲಿ ಜ್ಞಾನಸಂಬಂಧವೆಂಬುದು ತಾದಾತ್ಮ್ಯರೂಪವಾಗಿರುವುದು. ಜ್ಞಾನೇತರಗಳಾದ ದ್ರವ್ಯಗಳಲ್ಲಿ ಸಂಯೋಗರೂಪವಾಗಿರುವುದು. ದ್ರವ್ಯಗತವಾದ ಅದ್ರವ್ಯಗಳಲ್ಲಿ ಸಂಯುಕ್ತಾಶ್ರಿತತ್ವರೂಪವಾಗಿರುವುದು. ಸಂಯೋಗವೆಂಬ ಸಂಬಂಧವು ಎರಡು ದ್ರವ್ಯಗಳಿಗೆ ಉಂಟಾಗುವುದಲ್ಲದೆ ಅದ್ರವ್ಯಗಳಿಗೂ, ದ್ರವ್ಯಾದ್ರವ್ಯಗಳಿಗೂ ಉಂಟಾಗುವುದಿಲ್ಲ

ಘಟಜ್ಞಾನವುಂಟಾಗುವ ಕಾಲದಲ್ಲಿ ಘಟವೂ ಜ್ಞಾನವೂ ಈ ಎರಡೂ ದ್ರವ್ಯಗಳಾದುದರಿಂದ ಈ ಎರಡಕ್ಕೂ ಸಂಯೋಗಸಂಬಂಧವುಂಟಾಗುವುದು. ಘಟದಲ್ಲಿರುವ ರೂಪಾದಿಗಳ ಜ್ಞಾನವುಂಟಾಗುವಾಗ ರೂಪಾದಿಗಳೆಂಬ ಅದ್ರವ್ಯಗಳೊಡನೆ ಜ್ಞಾನಕ್ಕೆ ಸಂಯೋಗವುಂಟಾಗುವುದಿಲ್ಲ; ಕಿಂತು ಸಂಯುಕ್ತಾಶ್ರಿತತ್ವವೆಂಬ ಸಂಬಂಧವುಂಟಾಗುವುದು. ಘಟವು ಜ್ಞಾನಸಂಯುಕ್ತವಾಗಿಯೂ ರೂಪವು ತದಾಶ್ರಿತವಾಗಿಯೂ ಇರುವುದಷ್ಟೆ?

## ೮೬೫. ಮತಭೇದೇನ ಪ್ರಕಾಶಸ್ಯ ಲಕ್ಷಣಾಂತರಕಥನಂ.

ಇನ್ನು ಕೆಲವರು ಹೇಳುವುದೇನೆಂದರೆ—"**ಪ್ರಕಾಶಶ್ಚ ಚಿದಚಿದಶೇಷಪದಾರ್ಥಸಾಧಾರಣಂ ವ್ಯವಹಾರಾನುಗುಣ್ಯಂ**" ಎಂಬ ಭಾಷ್ಯಗ್ರಂಥದ ಸ್ವಾರಸ್ಯವನ್ನು ಅನುಸರಿಸಿ ಜ್ಞಾನದಲ್ಲಿಯೂ ಜ್ಞಾನೇತರವಸ್ತುಗಳಲ್ಲಿಯೂ ಸಹ ವ್ಯವಹಾರಾನುಗುಣ್ಯವೇ ಅನುಭವಾದೂರತ್ವವೆಂಬ ಪ್ರಕಾಶವೆನಿಸಿಕೊಳ್ಳುವುದೆಂದು ಹೇಳುವರು. ವ್ಯವಹಾರಾನುಗುಣ್ಯವೆಂದರೆ ವ್ಯವಹಾರಪ್ರಯೋಜಕವಾದ ಜ್ಞಾನಸಂಬಂಧವು. ಅಂಥ ಸಂಬಂಧವು ಜ್ಞಾನದಲ್ಲಿ ತಾದಾತ್ಮ್ಯರೂಪವಾಗಿಯೂ, ಜ್ಞಾನೇತರದ್ರವ್ಯಗಳಲ್ಲಿ ಸಂಯೋಗರೂಪವಾಗಿಯೂ, ದ್ರವ್ಯಗತವಾದ ಅದ್ರವ್ಯದಲ್ಲಿ ಸಂಯುಕ್ತಾಶ್ರಿತತ್ವರೂಪವಾಗಿಯೂ ಇರುವುದೆಂಬುದನ್ನು ಮೊದಲೇ ತಿಳಿಸಿರುವೆವು.

ಆದುದರಿಂದ ಜ್ಞಾನವು ವಿಷಯಗತವಾದ ಪ್ರಕಾಶದಿಂದ ಅನುಮೇಯವಲ್ಲ. ಸ್ವಯಂಪ್ರಕಾಶವಾಗಿಯೇ ಇರುವುದು.

**ಇಂತು ತತ್ತ್ವಶುದ್ಧಿಯೆಂಬ ವಿಶಿಷ್ಟಾದ್ವೈತಪ್ರಕರಣಗ್ರಂಥದೊಳ್ ಧರ್ಮಭೂತಜ್ಞಾನಪರಿಚ್ಛೇದದಲ್ಲಿ ಸ್ವಯಂಪ್ರಕಾಶತ್ವಾನಭ್ಯುಪಗಂತೃಮೀಮಾಂಸಕೋಕ್ತಪ್ರಾಕಟ್ಯಾನುಮೇಯತ್ವಖಂಡನಪ್ರಕರಣಂ ಚತುರ್ಥಂ ೪.**

# ಪಂಚಮಪ್ರಕರಣಂ.

---

## ೮೬೬ ತತ್ತ್ವರತ್ನಾಕರೋಕ್ತಸ್ವಯಂಪ್ರಕಾಶತ್ವಸಾಧಕಹೇತು ಸಂಗ್ರಹಃ.

ತತ್ತ್ವರತ್ನಾಕರವೆಂಬ ಗ್ರಂಥದಲ್ಲಿ ಶ್ರೀಮತ್ಪರಾಶರಭಟ್ಟಾರ್ಯರು ಜ್ಞಾನಕ್ಕೆ ಸ್ವಯಂಪ್ರಕಾಶತ್ವಸಾಧಕಗಳಾದ ಹೇತುಗಳನ್ನೆಲ್ಲಾ—

"ಧಿಯಃ ಪ್ರತ್ಯಕ್ಷಭಾವತ್ವಾತ್ ಪರತಸ್ತದಸಂಭವಾತ್ ।
ಪಾರಿಶೇಷ್ಯಾತ್ ಸ್ವತೋ ಭಾನಂ ಪ್ರಮಾಣಾಚ್ಚ ತತಸ್ತತಃ ॥
ಪ್ರತೀತೇರ್ವ್ಯಾಹರಣತಃ ಸಂದೇಹಪರಿವರ್ಜನಾತ್ ।
ಸತ್ತಾಯಾಂ ಸಿದ್ಧವತ್ಕಾರಾತ್ ಜ್ಞಾನಂ ಭಾತೀತಿ ಭಾವಿತಂ ॥
ಪರಸ್ಯಾದರ್ಶನಾದ್ವ್ಯಾಪ್ತ್ಯಾದನ್ವಯವ್ಯತಿರೇಕಿತಃ ।
ಅರ್ಥಾಪತ್ತೇಶ್ಚ ಯುಕ್ತೇಶ್ಚ ವಚನಾಚ್ಚ ಸ್ವದೃಙ್ಮತಿಃ ॥"

ಎಂದು ಕ್ರೋಡೀಕರಿಸಿ ತೋರಿಸಿರುವರು.

ಜ್ಞಾನದ ಸ್ವಯಂಪ್ರಕಾಶತ್ವವಿಷಯದಲ್ಲಿ ಯಥಾವಸ್ಥಿತವಾದ ಜ್ಞಾನ ವುಂಟಾಗುವುದಕ್ಕಾಗಿಯೂ ಅಂಥ ಜ್ಞಾನದ ವೈಶದ್ಯಕ್ಕಾಗಿಯೂ ಈ ಕಾರಿಕೆಗಳ ಅರ್ಥವನ್ನು ಇಲ್ಲಿ ವಿವರಿಸುವೆವು—

ಮೊದಲನೆಯ ಕಾರಿಕೆಯಲ್ಲಿ—"ಧಿಯಃ ಸ್ವತೋ ಭಾನಂ" ಎಂಬ ಪದ ಗಳಿಂದ ಜ್ಞಾನಕ್ಕೆ ಸ್ವಯಂಪ್ರಕಾಶತ್ವವನ್ನು ಪ್ರತಿಜ್ಞೆಮಾಡಿ ಇದನ್ನು ಸಾಧಿಸುವು ದಕ್ಕಾಗಿ ನಾಲ್ಕು ಹೇತುಗಳನ್ನು ಮೊದಲನೆಯ ಕಾರಿಕೆಯಲ್ಲಿ ತೋರಿಸಿರುವರು.

ಅವುಗಳಲ್ಲಿ—"ಪ್ರತ್ಯಕ್ಷಭಾವತ್ವಾತ್" ಎಂಬುದು ಮೊದಲನೆಯ ಹೇತು ವಾಗಿರುವುದು. ಭಾವವೆಂದರೆ ವಸ್ತು. ಪ್ರತ್ಯಕ್ಷವಿಷಯವಸ್ತುವಾಗಿರುವುದರಿಂದ ಪ್ರಾಕಟ್ಯಾನುಮೇಯತ್ವವು ಇದಕ್ಕೆ ಸಂಭವಿಸುವುದಿಲ್ಲವಾದಪ್ರಯುಕ್ತ ಸ್ವಯಂ ಪ್ರಕಾಶತ್ವವನ್ನೇ ಇದಕ್ಕೆ ಒಪ್ಪಬೇಕು. ಈ ಪ್ರಥಮಹೇತುವಿನಿಂದ—"ಜ್ಞಾನಕ್ಕೆ ಪ್ರಾಕಟ್ಯಾನುಮೇಯತ್ವವನ್ನು ಹೇಳುವವರ ಪಕ್ಷವು ಪ್ರತ್ಯಕ್ಷವಿರುದ್ಧವಾದುದ ರಿಂದ ಅನಾದರಣೀಯವಾಗಿರುವುದು" ಎಂದು ಫಲಿತವಾಗುವುದು.

"ಪರತಸ್ತದಸಂಭವಾತ್" ಎಂಬುದು ಎರಡನೆಯ ಹೇತುವಾಗಿರು ವುದು. ಜ್ಞಾನವು ಪ್ರತ್ಯಕ್ಷವಾಗಬೇಕಾದರೆ ತನ್ನಿಂದಲೇ ತಾನು ಪ್ರತ್ಯಕ್ಷವಾಗ ಬೇಕಲ್ಲದೆ ಜ್ಞಾನಭಿನ್ನಗಳಾದ ಮನಸ್ಸು ಮೊದಲಾದ ಇಂದ್ರಿಯಗಳಿಂದ ಉಂಟಾ

ಗುವ ಪ್ರತ್ಯಕ್ಷಜ್ಞಾನಕ್ಕೆ ಗೋಚರವಾಗುವಂಥದಲ್ಲ. ಈ ದ್ವಿತೀಯಹೇತುವಿನಿಂದ "ಜ್ಞಾನಕ್ಕೆ ಮಾನಸಪ್ರತ್ಯಕ್ಷಗಮ್ಯತ್ವವನ್ನು ಹೇಳುವವರ ಪಕ್ಷವು ಅಪ್ರಾಮಾಣಿಕವಾದುದರಿಂದ ಅನಾದರಣೀಯವಾಗಿರುವುದು" ಎಂದು ಫಲಿತವಾಗುವುದು.

"**ಪಾರಿಶೇಷ್ಯಾತ್**" ಎಂಬುದು ಮೂರನೆಯ ಹೇತುವಾಗಿರುವುದು. ಜ್ಞಾನಕ್ಕೆ ಪ್ರಾಕಟ್ಯಾನುಮೇಯತ್ವವೂ, ಮಾನಸಪ್ರತ್ಯಕ್ಷಗಮ್ಯತ್ವವೂ ಯಾವಾಗ ನಿರಾಕರಿಸಲ್ಪಟ್ಟುವೋ ಆಗ ಇದರ ತುಚ್ಛತ್ವವ್ಯಾವೃತ್ತಿಗೋಸ್ಕರ ಸ್ವಯಂಪ್ರಕಾಶತ್ವವನ್ನು ಅಂಗೀಕರಿಸುವಿಕೆಯೇ ಗತಿಯಾಗಿರುವುದು. ಎಂದರೆ—"ಘಟವನ್ನು ನಾನು ತಿಳಿಯುತ್ತೇನೆ" ಎಂಬ ಪ್ರತ್ಯಕ್ಷವು ನಮ್ಮೆಲ್ಲರಿಗೂ ಉಂಟಾಗುತ್ತಿದೆಯೆಂಬುದರಲ್ಲಿ ವಿವಾದವಿಲ್ಲ; ಮತ್ತು ಈ ಪ್ರತ್ಯಕ್ಷದಲ್ಲಿ ಘಟಪದಾರ್ಥವೂ, ಅಹಂಪದಾರ್ಥವೂ, ಜ್ಞಾನವೂ ಸಹ ವಿಷಯವಾಗಿರುವುವೆಂಬುದರಲ್ಲಿಯೂ ವಿವಾದವಿಲ್ಲ. ಅಂತು ಈ ಮೂರುಪದಾರ್ಥಗಳಲ್ಲಿಯೂ ವಿಷಯತ್ವವೆಂಬ ಧರ್ಮವಿರುವಾಗ ಜ್ಞಾನನಿಷ್ಠವಾದ ವಿಷಯತ್ವವನ್ನು ಕುರಿತು ಇದು ಯಾವುದರಿಂದ ನಿರೂಪಿತವಾಗಿರುವುದೆಂದು ವಿಚಾರಮಾಡಿದರೆ—ಘಟನಿಷ್ಠವಾದ ವಿಷಯತೆ ಹೇಗಾದರೆ ಜ್ಞಾನೇತರದಿಂದ ನಿರೂಪಿತವಾಗದೆ ಕಿಂಚಿನ್ನಿರೂಪಿತವಾದುದರಿಂದ ಜ್ಞಾನೈಕನಿರೂಪಿತವಾಗಿರುವುದೋ ; ಅದರಂತೆ ಜ್ಞಾನನಿಷ್ಠವಿಷಯತೆಯೂ ಜ್ಞಾನವ್ಯತಿರಿಕ್ತದಿಂದ ನಿರೂಪಿತವಾಗದೆ ಕಿಂಚಿನ್ನಿರೂಪಿತವಾಗಿರುವುದರಿಂದ ಜ್ಞಾನನಿರೂಪಿತವಾಗಿಯೇ ಇರುವುದೆಂದು ತೋರಿಸಿ ಇಂಥ ಅನುಮಾನದಿಂದ ಸ್ವನಿರೂಪಿತತ್ವವನ್ನು ಸಾಧಿಸುವುದೇ ಗತಿಯಾಗಿರುವುದು.

"**ಪ್ರಮಾಣಾಚ್ಚ**" ಎಂಬುದು ನಾಲ್ಕನೆಯ ಹೇತುವಾಗಿರುವುದು. "ಜ್ಞಾನವೆಂಬುದರಲ್ಲಿ ಜ್ಞಾನತ್ವವೆಂಬ ಹೇತುವಿರುವುದರಿಂದ ಸ್ವಯಂಪ್ರಕಾಶತ್ವವೆಂಬ ಸಾಧ್ಯವೂ ಇದ್ದೇ ಇರಬೇಕು. ಇಂಥ ಹೇತು ಎಲ್ಲೆಲ್ಲಿ ಇರುವುದೋ ಅಲ್ಲಲ್ಲಿ ಸ್ವಯಂಪ್ರಕಾಶತ್ವವೂ ಇರುವುದೆಂಬುದನ್ನು ಈಶ್ವರಜ್ಞಾನದಲ್ಲಿ ತಿಳಿದಿರುವೆವು." ಇಂಥ ಅನುಮಾನಪ್ರಮಾಣದಿಂದ ಜ್ಞಾನಕ್ಕೆ ಸ್ವಯಂಪ್ರಕಾಶತ್ವವು ಸಿದ್ಧವಾಗುವುದು.

ಎರಡನೆಯ ಕಾರಿಕೆಯಲ್ಲಿ—"**ಜ್ಞಾನಂ ಭಾತೀತಿ ಭಾವಿತಂ**" ಎಂಬ ಪದಗಳಿಂದ ಜ್ಞಾನಕ್ಕೆ ಸ್ವಯಂಪ್ರಕಾಶತ್ವವನ್ನು ಪ್ರತಿಜ್ಞೆಮಾಡಿ ಇದನ್ನು ಸಾಧಿಸುವುದಕ್ಕಾಗಿ ಮೂರು ಹೇತುಗಳನ್ನು ಈ ಎರಡನೆಯ ಕಾರಿಕೆಯಲ್ಲಿ ತೋರಿಸಿರುವರು. (ಭಾವಿತವೆಂದರೆ ನಿಶ್ಚಿತವೆಂದರ್ಥವು).

ಅವುಗಳಲ್ಲಿ—“ಪ್ರತೀತೇರ್ವ್ಯಾಹರಣತಃ” ಎಂಬುದು ಮೊದಲ ನೆಯ ಹೇತುವಾಗಿರುವುದು. ಜ್ಞಾನವು ಹುಟ್ಟಿದ ಅವ್ಯವಹಿತೋತ್ತರಕ್ಷಣ ದಲ್ಲಿಯೇ ಜ್ಞಾನವ್ಯವಹಾರವು ಪ್ರವರ್ತಿಸುವುದರಿಂದ ಜ್ಞಾನಕ್ಕೆ ಸ್ವಯಂಪ್ರಕಾ ಶತ್ವವನ್ನು ಒಪ್ಪಬೇಕು. ಸ್ವಯಂಪ್ರಕಾಶತ್ವವನ್ನು ಒಪ್ಪದೆ ಮಾನಸಪ್ರತ್ಯಕ್ಷ ಗಮ್ಯತ್ವವನ್ನಾಗಲಿ ಪ್ರಾಕಟ್ಯಾನುಮೇಯತ್ವವನ್ನಾಗಲಿ ಹೇಳುವುದಾದರೆ— ಜ್ಞಾನೋತ್ಪತ್ತಿಯಾದಮೇಲೆ ಅಂಥ ಮಾನಸಪ್ರತ್ಯಕ್ಷವೂ ಅಂಥ ಅನುಮಾನವೂ ಉಂಟಾಗುವುದಕ್ಕೆ ವಿಳಂಬವಾದರೆ ಜ್ಞಾನವ್ಯವಹಾರಕ್ಕೂ ವಿಳಂಬವುಂಟಾಗುವು ದರಿಂದ ಜ್ಞಾನೋತ್ಪತ್ತ್ಯವ್ಯವಹಿತೋತ್ತರಕ್ಷಣದಲ್ಲಿ ಜ್ಞಾನವ್ಯವಹಾರವು ಉಂ ಟಾಗಕೂಡದಾಗಿ ಬರುವುದು.

“ಸಂದೇಹಪರಿವರ್ಜನಾತ್” ಎಂಬುದು ಎರಡನೆಯ ಹೇತುವಾಗಿರು ವುದು. ಜ್ಞಾನೋತ್ಪತ್ತ್ಯನಂತರದಲ್ಲಿ “ನನಗೆ ಜ್ಞಾನವು ಉಂಟಾಗಿರು ವುದೋ ಇಲ್ಲವೋ” ಎಂಬ ಸಂದೇಹವು ಯಾವಾಗಲೂ ಹುಟ್ಟುವುದಿಲ್ಲವಾದು ದರಿಂದ ಜ್ಞಾನಕ್ಕೆ ಸ್ವಯಂಪ್ರಕಾಶತ್ವವನ್ನು ಒಪ್ಪಬೇಕು. ಸ್ವಯಂಪ್ರಕಾಶತ್ವವಿಲ್ಲ ದಿದ್ದರೆ ಜ್ಞಾನವುಂಟಾಗಿದ್ದರೂ ಅದರ ಪ್ರಕಾಶಕ್ಕೆ ಯಾವಾಗಲಾದರೂ ವಿಳಂಬ ವುಂಟಾದರೆ ಆಗ ಅಂಥ ಸಂಶಯವುಂಟಾಗಬೇಕಲ್ಲವೆ?

“ಸತ್ತಾಯಾಂ ಸಿದ್ಧವತ್ಕಾರಾತ್” ಎಂಬುದು ಮೂರನೆಯ ಹೇತು ವಾಗಿರುವುದು. ಯಾವನಾದರೊಬ್ಬನು ಒಂದು ಪದಾರ್ಥವನ್ನು ವಿಚ್ಛೇದವಿಲ್ಲದೆ ನೋಡುತ್ತಾ ಇದ್ದು ಬಹಳ ಹೊತ್ತಿನಮೇಲೆ ವಿಶ್ರಾಂತಿಯನ್ನು ಹೊಂದಿದವ ನಾದರೆ ಆಗ ಅವನಿಗೆ ಅಷ್ಟುಹೊತ್ತಿನವರೆಗೂ ಉಂಟಾಗುತ್ತಿದ್ದ ಜ್ಞಾನವ್ಯಕ್ತಿ ಗಳು ಧಾರಾವಾಹಿಕಜ್ಞಾನಗಳೆನಿಸಿಕೊಳ್ಳುವುವು. ಪೂರ್ವಪೂರ್ವಕ್ಷಣದಲ್ಲಿ ಉಂಟಾದ ಜ್ಞಾನವ್ಯಕ್ತಿಗಳಿಗೆ ಉತ್ತರೋತ್ತರಕ್ಷಣದಲ್ಲಿ ನಾಶವುಂಟಾಗಿ ಪುನಃ ಉತ್ತರೋತ್ತರಕ್ಷಣದಲ್ಲಿ ಪೂರ್ವಪೂರ್ವಜ್ಞಾನವ್ಯಕ್ತಿಗಳಿಗೆ ಅತ್ಯಂತಸದೃಶಗ ಳಾದ ಜ್ಞಾನವ್ಯಕ್ತಿಗಳೇ ಹುಟ್ಟುವುದರಿಂದ ಇವುಗಳಿಗೆ ಧಾರಾವಾಹಿಕಜ್ಞಾನ ವೆಂಬ ಸಂಜ್ಞೆ ಅನ್ವರ್ಥವಾಗಿರುವುದು. ಇಂಥ ಜ್ಞಾನದಿಂದ ಯಾವಾಗ ವಿಶ್ರಾಂ ತಿಯನ್ನು ಹೊಂದುವನೋ ಆಗ ಅವನಿಗೆ “ಇಷ್ಟು ಹೊತ್ತಿನವರೆಗೂ ನಾನು ಇದನ್ನು ನೋಡುತ್ತಲೇ ಇದ್ದೆನು” ಎಂದು ಸ್ಮರಣವುಂಟಾಗುವುದು. ಸ್ಮರಣ ವಾದರೆ ಪೂರ್ವಾನುಭೂತವಾದ ಪದಾರ್ಥದ ವಿಷಯದಲ್ಲಿಯೇ ಉಂಟಾಗುವುದ ಲ್ಲದೆ ಅನನುಭೂತವಾದ ಪದಾರ್ಥದ ವಿಷಯದಲ್ಲಿ ಉಂಟಾಗುವುದಿಲ್ಲವೆಂಬುದನ್ನು

ಜೀವಪರಿಚ್ಛೇದದಲ್ಲಿಯೇ ತೋರಿಸಿರುವೆವು. ಧಾರಾವಾಹಿಕಜ್ಞಾನಸ್ಥಳದಲ್ಲಿ ಪೂರ್ವ ಪೂರ್ವಜ್ಞಾನವ್ಯಕ್ತಿಗಳು ಅನನುಭೂತಗಳಾಗಿಯೇ ಉತ್ತರೋತ್ತರಕ್ಷಣಗಳಲ್ಲಿ ನಾಶವನ್ನೈದಿದ್ದುವಾದರೆ ಅನನುಭೂತಗಳಾದ ಜ್ಞಾನವ್ಯಕ್ತಿಗಳ ಸ್ಮರಣೆ ಉತ್ತರತ್ರ ಉಂಟಾಗಕೂಡದು. ಅಂಥ ಸ್ಮರಣೆಯಾದರೆ ಎಲ್ಲರಿಗೂ ಉಂಟಾಗುತ್ತಿದೆ ಯೆಂಬುದು ಅನುಭವಸಿದ್ಧವಾಗಿರುವುದರಿಂದ "ಪೂರ್ವಪೂರ್ವಜ್ಞಾನವ್ಯಕ್ತಿಗಳು ಆ ಆ ಕ್ಷಣಗಳಲ್ಲಿಯೇ ಆ ಆ ಜ್ಞಾನವ್ಯಕ್ತಿಗಳಿಗೇ ಗೋಚರಗಳಾಗಿ ಅನುಭೂತ ಗಳೆನಿಸಿಕೊಂಡು ಸ್ವಯಂಪ್ರಕಾಶತ್ವವನ್ನು ಪಡೆದಿದ್ದುವು" ಎಂದು ಒಪ್ಪಿಯೇ ತೀರಬೇಕು.

ಮೂರನೆಯ ಕಾರಿಕೆಯಲ್ಲಿ—"ಸ್ವದೃಙ್ಮತಿಃ" ಎಂಬ ಎರಡು ಪದಗಳಿಂದ ಜ್ಞಾನಕ್ಕೆ ಸ್ವಯಂಪ್ರಕಾಶತ್ವವನ್ನು ಪ್ರತಿಜ್ಞೆಮಾಡಿ ಇದನ್ನು ಸಾಧಿಸುವುದಕ್ಕಾಗಿ ಆರು ಹೇತುಗಳನ್ನು ತೋರಿಸಿರುವರು.—

"ಪರಸ್ಮಾದದರ್ಶನಾತ್" ಎಂಬುದು ಮೊದಲನೆಯ ಹೇತುವಾಗಿರುವುದು. "ಪೂಜ್ಯರೆ? ಜ್ಞಾನಕ್ಕೆ ಸ್ವಯಂಪ್ರಕಾಶತ್ವವನ್ನು ಒಪ್ಪಬೇಕಾದುದಿಲ್ಲ; ಆದರೂ ಧಾರಾವಾಹಿಕಸ್ಥಳದಲ್ಲಿ ಉತ್ತರತ್ರ ಸ್ಮರಣೆಯುಂಟಾಗಲು ಯಾವ ಅನುಪಪತ್ತಿಯೂ ಇಲ್ಲ; ಧಾರಾವಾಹಿಕಸ್ಥಳದಲ್ಲಿ ಮಧ್ಯೇ ಮಧ್ಯೇ ಅನುವ್ಯವಸಾಯವೆಂಬ ಜ್ಞಾನಾಂತರವುಂಟಾಗಿ ಅದರಿಂದ ಪೂರ್ವಪೂರ್ವಜ್ಞಾನವ್ಯಕ್ತಿ ಅನುಭೂತವಾಗಿಯೇ ನಷ್ಟವಾಗುವುದಾದುದರಿಂದ ಇಂಥ ಜ್ಞಾನದ ವಿಷಯದಲ್ಲಿ ಉತ್ತರತ್ರ ಸ್ಮರಣೆಯುಂಟಾಗಲು ತಡೆಯಿಲ್ಲದಿರುವಾಗ ಸ್ವಯಂಪ್ರಕಾಶತ್ವವನ್ನು ಏತಕ್ಕೆ ಒಪ್ಪಬೇಕು" ಇಂಥ ಆಶಂಕೆಯನ್ನು ಈ ಮೊದಲನೆಯ ಹೇತುವಿನಿಂದ ಪರಿಹರಿಸುತ್ತಾರೆ. ಧಾರಾವಾಹಿಕಜ್ಞಾನಸ್ಥಳದಲ್ಲಿ ಮಧ್ಯೇ ಮಧ್ಯೇ ಅನುವ್ಯವಸಾಯವೆಂಬ ಜ್ಞಾನಾಂತರವನ್ನು ಅಂಗೀಕರಿಸಲಾಗುವುದಿಲ್ಲ. ಹಾಗೆ ಅಂಗೀಕರಿಸುವುದಾದರೆ ಧಾರಾವಾಹಿಕಜ್ಞಾನಕ್ಕೆ ವಿಚ್ಛೇದವು ಬಂದು ಧಾರಾವಾಹಿಕತ್ವವೆಂಬ ಜ್ಞಾನಪ್ರವಾಹವೇ ತಪ್ಪಿಹೋಗುವುದಲ್ಲವೆ? ಆದುದರಿಂದ ಸ್ವಯಂಪ್ರಕಾಶತ್ವವನ್ನೇ ಜ್ಞಾನಕ್ಕೆ ಒಪ್ಪಬೇಕು.

## ೮೬೭ ಅಥ ಸ್ವಯಂಪ್ರಕಾಶತ್ವಸಾಧಕಾನ್ವಯ್ಯನುಮಾನೇಷು ಪ್ರಥಮಾನುಮಾನಂ

"ವ್ಯಾಪ್ತ್ಯಾದನ್ವಯಿವ್ಯತಿರೇಕಿತಃ" ಎಂಬುದು ಎರಡನೆಯ ಮೂರನೆಯ ಹೇತುಗಳಾಗಿರುವುವು. ನಿಶ್ಚಿತವಾದ ವ್ಯಾಪ್ತಿಯುಳ್ಳ ಅನ್ವಯ್ಯನುಮಾನಗಳಿಂದಲೂ,

ವ್ಯತಿರೇಕ್ಯನುಮಾನಗಳಿಂದಲೂ' ಎಂದು ಇದರ ಅರ್ಥವಾಗಿರುವುದು. ಅವುಗಳೊಳಗೆ ಅನ್ವಯ್ಯನುಮಾನಗಳನ್ನು ಈ ರೀತಿಯಲ್ಲಿ ತಿಳಿಯಬೇಕು—

**ಮೊದಲನೆಯ ಅನ್ವಯ್ಯನುಮಾನವು**—ಘಟಾದಿಪದಾರ್ಥಗಳ ವಿಷಯದಲ್ಲಿ ಹಾನೋಪಾದಾನಾದಿರೂಪವಾದ ವ್ಯವಹಾರವೂ, ಶಬ್ದಪ್ರಯೋಗರೂಪವಾದ ವ್ಯವಹಾರವೂ ಉಂಟಾಗುವುದಕ್ಕೆ ಘಟಾದಿಪದಾರ್ಥಗಳು ಕಾರಣಗಳಾಗಿರುವುವು. ಹೇಗೆಂದರೆ ಉಕ್ತವ್ಯವಹಾರಕ್ಕೆ ಅನುಕೂಲವಾದ ಪ್ರಯತ್ನವು ಆತ್ಮನಲ್ಲಿ ನಡೆದ ಹೊರತು ವ್ಯವಹಾರವುಂಟಾಗುವುದಿಲ್ಲವಾದುದರಿಂದ ವ್ಯವಹಾರಕ್ಕಿಂತಲೂ ಮೊದಲು ಪ್ರಯತ್ನವಿರಬೇಕು. ಅಷ್ಟುಮಾತ್ರವಿದ್ದರೆ ಸಾಲದು; ವ್ಯವಹರಿಸಬೇಕೆಂಬ ಇಚ್ಛೆಯಿದ್ದಹೊರತು ಪ್ರಯತ್ನವುಂಟಾಗುವುದಿಲ್ಲವಾದುದರಿಂದ ಪ್ರಯತ್ನಕ್ಕಿಂತಲೂ ಮೊದಲು ವ್ಯವಹಾರೇಚ್ಛೆ ಇರಬೇಕು. ಅಷ್ಟುಮಾತ್ರವಿದ್ದರೆ ಸಾಲದು; ಪದಾರ್ಥಜ್ಞಾನವಿದ್ದಹೊರತು ಪದಾರ್ಥವ್ಯವಹಾರೇಚ್ಛೆಯುಂಟಾಗುವುದಿಲ್ಲವಾದುದರಿಂದ ಇಚ್ಛೆಗಿಂತಲೂ ಮೊದಲು ಪದಾರ್ಥಜ್ಞಾನವಿರಬೇಕು. ಪದಾರ್ಥಕ್ಕೂ ಇಂದ್ರಿಯಗಳಿಗೂ ಸಂಯೋಗವಿದ್ದರಲ್ಲದೆ ಪದಾರ್ಥಜ್ಞಾನವುಂಟಾಗುವುದಿಲ್ಲವಾದುದರಿಂದ ಜ್ಞಾನಕ್ಕಿಂತಲೂ ಮೊದಲು ಪದಾರ್ಥೇಂದ್ರಿಯಗಳ ಸಂಯೋಗವಿರಬೇಕು, ಪದಾರ್ಥಸ್ವರೂಪವಿದ್ದರಲ್ಲದೆ ಪದಾರ್ಥೇಂದ್ರಿಯಗಳ ಸಂಯೋಗವುಂಟಾಗುವುದಿಲ್ಲವಾದುದರಿಂದ ಇಂದ್ರಿಯಸಂಯೋಗಕ್ಕಿಂತಲೂ ಮೊದಲು ಪದಾರ್ಥಸ್ವರೂಪವಿರಬೇಕು.

ಅಂತು—ವ್ಯವಹಾರವೆಂಬ ಕಾರ್ಯಕ್ಕೆ ಪದಾರ್ಥವು ಕಾರಣವಾಗುವ ಕಾಲದಲ್ಲಿ ಮೊತ್ತಮೊದಲು ಪದಾರ್ಥಸ್ವರೂಪವಿರಬೇಕು; ಅದರಿಂದ ಇಂದ್ರಿಯಸಂಯೋಗವುಂಟಾಗುವುದು; ಇಂದ್ರಿಯಸಂಯೋಗದಿಂದ ಜ್ಞಾನವುಂಟಾಗುವುದು; ಜ್ಞಾನದಿಂದ ವ್ಯವಹಾರೇಚ್ಛೆಯುಂಟಾಗುವುದು; ಇಚ್ಛೆಯಿಂದ ಪ್ರಯತ್ನವುಂಟಾಗುವುದು; ಪ್ರಯತ್ನದಿಂದ ವ್ಯವಹಾರವುಂಟಾಗುವುದು. ಕಾರಣವೆನಿಸಿಕೊಂಡ ಪದಾರ್ಥದಿಂದ ಕಾರ್ಯವೆನಿಸಿಕೊಂಡ ವ್ಯವಹಾರವು ಸಾಕ್ಷಾತ್ತಾಗಿ ಉಂಟಾಗುವುದಿಲ್ಲವೆಂದೂ, ಮಧ್ಯೇ ಕೆಲವು ವ್ಯಾಪಾರಗಳುಂಟಾಗಿ ತನ್ಮೂಲಕವಾಗಿಯೇ ಕಾರ್ಯವುಂಟಾಗುವುದೆಂದೂ ಇದರಿಂದ ಫಲಿತವಾಯಿತು. ಘಟಾದಿಪದಾರ್ಥ, ಇಂದ್ರಿಯಸಂಯೋಗ, ಜ್ಞಾನ, ಇಚ್ಛೆ, ಪ್ರಯತ್ನ, ವ್ಯವಹಾರ, ಈ ಆರರಲ್ಲಿ ಮೊದಲನೆಯದಕ್ಕೂ ಕೊನೆಯದಕ್ಕೂ ಕಾರ್ಯಕಾರಣಭಾವವಿರುವಾಗ ಮಧ್ಯದಲ್ಲಿರುವ ಉಳಿದ ನಾಲ್ಕೂ ವ್ಯಾಪಾರಗಳೆನಿಸಿಕೊಳ್ಳುವುವು. ವ್ಯವಹಾರಕ್ಕೆ

ಕಾರಣವೆನಿಸಿಕೊಂಡ ಘಟಾದಿಪದಾರ್ಥಗಳು ವ್ಯವಹಾರಕ್ಕೆ ಪೂರ್ವಭಾವಿಗಳಾದ ವ್ಯಾಪಾರಗಳನ್ನು ಉಂಟುಮಾಡುವ ಕಾಲದಲ್ಲಿ ತಮಗೆ ಸಜಾತೀಯವಾದ ಮತ್ತೊಂದು ಘಟಾದಿಪದಾರ್ಥದ ಸಂಬಂಧವನ್ನು ಅಪೇಕ್ಷಿಸುವುದಿಲ್ಲ. ಎಂದರೆ ಸ್ವಸಜಾತೀಯಪದಾರ್ಥದ ಸಂಬಂಧಕ್ಕೆ ಅಧೀನವಲ್ಲದ ವ್ಯಾಪಾರಹೇತುತ್ವವು ವ್ಯವಹಾರಹೇತುವಾದ ಘಟಾದಿಪದಾರ್ಥದಲ್ಲಿ ಇರುವುದೆಂದು ಸಿದ್ಧವಾಯಿತು.

ಇದರಿಂದ—**"ಎಲ್ಲಿ ವ್ಯವಹಾರಹೇತುತ್ವವಿರುವುದೋ ಅಲ್ಲಿ ಸ್ವಸಜಾತೀಯಸಂಬಂಧಾನಧೀನವಾದ ವ್ಯವಹಾರಪ್ರಯೋಜಕವ್ಯಾಪಾರಹೇತುತ್ವವೂ ಇರುವುದು"** ಎಂಬ ವ್ಯಾಪ್ತಿ ಘಟಾದಿಪದಾರ್ಥಗಳಲ್ಲಿ ನಮಗೆ ನಿಶ್ಚಿತವಾಗಿರುವುದು.

ಘಟಾದಿಪದಾರ್ಥಗಳು ತಮ್ಮಿಂದ ಉಂಟಾಗುವ ವ್ಯವಹಾರವಿಷಯದಲ್ಲಿಯೇ ಸ್ವಸಜಾತೀಯಪದಾರ್ಥಸಂಬಂಧವನ್ನು ಅಪೇಕ್ಷಿಸುವುದಿಲ್ಲವೋ? ಅಥವಾ ವ್ಯವಹಾರಕ್ಕೆ ಹೇತುಗಳಾಗಿರುವ ವ್ಯಾಪಾರವಿಷಯದಲ್ಲಿ ಸ್ವಸಜಾತೀಯಸಂಬಂಧವನ್ನು ಅಪೇಕ್ಷಿಸುವುದಿಲ್ಲವೋ? ಎಂಬ ಸಂಶಯವನ್ನು ಪರಿಹರಿಸುವುದಕ್ಕಾಗಿ **"ಸ್ವಸಜಾತೀಯಸಂಬಂಧಾನಧೀನವಾದ"** ಎಂಬ ವಿಶೇಷಣವನ್ನು ವ್ಯಾಪಾರಕ್ಕೆ ಕೊಟ್ಟಿರುವುದು. ಇದರಿಂದ ವ್ಯವಹಾರಪ್ರಯೋಜಕಗಳಾದ ವ್ಯಾಪಾರಗಳನ್ನು ಉಂಟುಮಾಡುವ ವಿಷಯದಲ್ಲಿಯೇ ಘಟಾದಿಪದಾರ್ಥಗಳು ಸ್ವಸಜಾತೀಯವಾದ ಘಟಾಂತರವನ್ನು ಅಪೇಕ್ಷಿಸುವುದಿಲ್ಲವೆಂದು ಸಿದ್ಧವಾಯಿತು.

ಹಾಗಿಲ್ಲದೆ ವ್ಯವಹಾರವಿಷಯದಲ್ಲಿಯೇ ಅಂಥ ವಿಶೇಷಣವನ್ನು ಕೊಡುವುದಾದರೆ ಇಂದ್ರಿಯದಲ್ಲಿ ಈ ನಿಯಮವು ತಪ್ಪಿಹೋಗುವುದು, ಹೇಗೆಂದರೆ—ಚಕ್ಷುರಿಂದ್ರಿಯದಿಂದ ಘಟಜ್ಞಾನವುಂಟಾದಮೇಲೆ ಘಟವ್ಯವಹಾರವನ್ನು ನಡಸುವ ಕಾಲದಲ್ಲಿ ಚಕ್ಷುರಿಂದ್ರಿಯವು ಸ್ವಜನ್ಯವಾದ ಘಟವ್ಯವಹಾರವಿಷಯದಲ್ಲಿ ಸ್ವಸಜಾತೀಯವಾದ ಇಂದ್ರಿಯಾಂತರವನ್ನು ಅಪೇಕ್ಷಿಸುವುದಿಲ್ಲವೆಂಬುದಿಲ್ಲ: ವಾಗಿಂದ್ರಿಯವನ್ನೂ ಪಾಣಿಪಾದೇಂದ್ರಿಯಗಳನ್ನೂ ಅಪೇಕ್ಷಿಸಿಯೇ ಅಪೇಕ್ಷಿಸುವುದು. ಶಬ್ದಪ್ರಯೋಗವೆಂಬ ವ್ಯವಹಾರಕ್ಕೆ ವಾಗಿಂದ್ರಿಯವೂ, ಹಾನೋಪಾದಾನಾದಿ ವ್ಯವಹಾರಕ್ಕೆ ಪಾಣಿಪಾದೇಂದ್ರಿಯಗಳೂ ಅಪೇಕ್ಷಿತಗಳಾಗಿರುವುವಷ್ಟೆ.

ವ್ಯಾಪಾರವನ್ನು ಉಂಟುಮಾಡುವುದಕ್ಕಾದರೆ ಚಕ್ಷುರಿಂದ್ರಿಯವೂ ಮತ್ತೊಂದು ಇಂದ್ರಿಯವನ್ನೂ ಅಪೇಕ್ಷಿಸುವುದಿಲ್ಲ. ಆದಕಾರಣ ಇಂದ್ರಿಯವಿಷಯದಲ್ಲಿ ಈ ನಿಯಮಕ್ಕೆ ಲೋಪಬಾರದಿರುವುದಕ್ಕಾಗಿ **"ಸ್ವಸಜಾತೀಯಸಂಬಂಧಾನಧೀನ**

ವಾದ" ಎಂಬ ವಿಶೇಷಣವನ್ನು ವ್ಯವಹಾರಕ್ಕೆ ಕೊಡದೆ ವ್ಯಾಪಾರಕ್ಕೆ ಕೊಟ್ಟಿರುವುದು.

"ಪೂಜ್ಯರೆ! ಉಕ್ತವಿಶೇಷಣವನ್ನು ವ್ಯಾಪಾರಕ್ಕೆ ನೀವು ಕೊಟ್ಟರೂ ಇಂದ್ರಿಯದಲ್ಲಿ ಈ ನಿಯಮಭಂಗಕ್ಕೆ ಪರಿಹಾರವಾಗುವುದಿಲ್ಲ; ನಿಯಮಭಂಗವು ಬಂದೇಬರುವುದು. ಹೇಗೆಂದರೆ—ಚಕ್ಷುರಿಂದ್ರಿಯವು ಘಟವ್ಯವಹಾರವನ್ನು ಉಂಟುಮಾಡುವ ಕಾಲದಲ್ಲಿ ಘಟವ್ಯವಹಾರಹೇತುಗಳಾದ ವ್ಯಾಪಾರಗಳನ್ನು ಉಂಟುಮಾಡಿಯೇ ಘಟವ್ಯವಹಾರವನ್ನು ಉಂಟುಮಾಡಬೇಕು. ಅಂಥ ವ್ಯಾಪಾರಗಳೊಳಗೆ ಘಟಚಕ್ಷುಸ್ಸುಗಳ ಸಂಯೋಗವೂ ಒಂದು ವ್ಯಾಪಾರವಾಗಿರುವುದು. ಇಂಥ ಸಂಯೋಗವೆಂಬ ವ್ಯಾಪಾರವನ್ನು ಉಂಟುಮಾಡುವ ಕಾಲದಲ್ಲಿ ಚಕ್ಷುರಿಂದ್ರಿಯವು ಸ್ವಸಜಾತೀಯವಾದ ಮತ್ತೊಂದನ್ನು ಅಪೇಕ್ಷಿಸುವುದಿಲ್ಲವೆಂಬುದಿಲ್ಲ; ಘಟಕ್ಕೆ ಆಲೋಕಸಂಯೋಗವಿಲ್ಲದಿರುವ ಕಾಲದಲ್ಲಿ ಚಕ್ಷುಸ್ಸಂಯೋಗವು ಉಂಟಾಗುವುದಿಲ್ಲವಾದುದರಿಂದ ಸಂಯೋಗವೆಂಬ ವ್ಯಾಪಾರವನ್ನು ಉಂಟುಮಾಡುವುದಕ್ಕೆ ಹೊರಟಿರುವ ಚಕ್ಷುರಿಂದ್ರಿಯವು ಸ್ವಸಜಾತೀಯವಾದ ಆಲೋಕವನ್ನು ಅಪೇಕ್ಷಿಸಿಯೇ ಘಟದಲ್ಲಿ ಸ್ವಸಂಯೋಗವನ್ನು ಉಂಟುಮಾಡುವುದು. ಆಲೋಕವು ಚಕ್ಷುರಿಂದ್ರಿಯಕ್ಕೆ ಸಜಾತೀಯವಲ್ಲವೆಂದು ಭ್ರಮಿಸಕೆಲಸವಿಲ್ಲ. ಆಕಾಶ, ವಾಯು, ಅಗ್ನಿ, ಜಲ, ಪೃಥಿವಿ, ಎಂಬ ಪಂಚಭೂತಗಳಿಂದ ಕ್ರಮವಾಗಿ ಶ್ರೋತ್ರ, ತ್ವಕ್, ಚಕ್ಷುಸ್ಸು, ಜಿಹ್ವೆ, ಘ್ರಾಣ ಎಂಬ ಪಂಚೇಂದ್ರಿಯಗಳು ಉಂಟಾಗುವುವಾದುದರಿಂದ ಚಕ್ಷುರಿಂದ್ರಿಯವು ತೈಜಸವಾದಕಾರಣ ಇದಕ್ಕೂ ಆಲೋಕಕ್ಕೂ ಸಾಜಾತ್ಯವು ಉಂಟಷ್ಟೆ? ಆದಕಾರಣ ಉಕ್ತವಿಶೇಷಣವನ್ನು ವ್ಯಾಪಾರಕ್ಕೆ ಕೊಟ್ಟರೂ ಚಕ್ಷುರಿಂದ್ರಿಯದಲ್ಲಿ ಈ ನಿಯಮಭಂಗಕ್ಕೆ ಪರಿಹಾರವಾಗಲಿಲ್ಲವಲ್ಲವೆ?"

ಇಂಥ ಆಶಂಕೆ ಸಂಗತವಲ್ಲ. ಏತಕ್ಕೆಂದರೆ—ಪಂಚೇಂದ್ರಿಯಗಳಿಗೆ ಪಂಚಭೂತಗಳು ಆಪ್ಯಾಯಕಗಳೇ ಹೊರತು ಉಪಾದಾನಕಾರಣಗಳಲ್ಲವೆಂದು ತೋರಿಸುವುದರಮೂಲಕ ಇಂದ್ರಿಯಗಳಿಗೆ ಭೌತಿಕತ್ವವನ್ನು ನಿರಾಕರಿಸಿ ಆಹಂಕಾರಿಕತ್ವಸಿದ್ಧಾಂತವನ್ನು ಅಚಿತ್ತತ್ತ್ವಪರಿಚ್ಛೇದದಲ್ಲಿಯೇ ನಾವು ವಿಶದಪಡಿಸಿರುವೆವಾದುದರಿಂದ ಆಲೋಕಕ್ಕೂ ಚಕ್ಷುರಿಂದ್ರಿಯಕ್ಕೂ ಸಾಜಾತ್ಯವು ಸಂಭವಿಸುವುದಿಲ್ಲವಷ್ಟೆ?

ಆದಕಾರಣ—ಘಟವ್ಯವಹಾರಪ್ರಯೋಜಕವಾದ ಘಟಚಕ್ಷುಸ್ಸಂಯೋಗವೆಂಬ ವ್ಯಾಪಾರವನ್ನು ಉಂಟುಮಾಡುವುದಕ್ಕಾಗಿ ಹೊರಟಿರುವ ಚಕ್ಷುರಿಂದ್ರಿಯವು ಆಲೋಕವೆಂಬ ವಿಜಾತೀಯಪದಾರ್ಥವನ್ನು ಅಪೇಕ್ಷಿಸಿದರೂ ಸಜಾತೀ

ಯವಾದ ಯಾವ ಮತ್ತೊಂದು ಇಂದ್ರಿಯವನ್ನೂ ಅಪೇಕ್ಷಿಸಲಿಲ್ಲವಾದುದರಿಂದ ಇಂದ್ರಿಯವಿಷಯದಲ್ಲಿಯೂ ಈ ನಿಯಮಕ್ಕೆ ಭಂಗವಿಲ್ಲ. ಆದುದರಿಂದ ಪೂರ್ವೋಕ್ತವ್ಯಾಪ್ತಿ ಘಟಾದಿಪದಾರ್ಥಗಳಲ್ಲಿ ದೃಢಪಟ್ಟಿರುವಂತೆ ಇಂದ್ರಿಯಗಳಲ್ಲಿಯೂ ದೃಢಪಟ್ಟಿರುವುದು.

ಇದರಂತೆಯೇ ದೀಪದಲ್ಲಿಯೂ ಉಕ್ತವ್ಯಾಪ್ತಿಗೆ ದಾರ್ಢ್ಯವನ್ನು ತಿಳಿಯಬಹುದು. ಘಟವ್ಯವಹಾರಹೇತುತ್ವವು ದೀಪದಲ್ಲಿಯೂ ಇರುವುದೆಂಬುದರಲ್ಲಿ ವಿವಾದವಿಲ್ಲ. ಇಂಥ ದೀಪವು ಘಟವ್ಯವಹಾರಪ್ರಯೋಜಕವಾದ ಘಟಚಕ್ಷುಸ್ಸಂಯೋಗವೆಂಬ ವ್ಯಾಪಾರವನ್ನು ಉಂಟುಮಾಡುವ ಕಾಲದಲ್ಲಿ ಸ್ವಸಜಾತೀಯವಾದ ಮತ್ತೊಂದು ದೀಪವನ್ನು ಅಪೇಕ್ಷಿಸುವುದಿಲ್ಲ. ಅಂತು ವ್ಯವಹಾರಹೇತುತ್ವವೂ, ಸ್ವಸಜಾತೀಯಸಂಬಂಧಾನಧೀನವಾಗಿಯೂ ವ್ಯವಹಾರಪ್ರಯೋಜಕವಾಗಿಯೂ ಇರುವ ವ್ಯಾಪಾರಹೇತುತ್ವವೂ ಸಹ ದೀಪದಲ್ಲಿ ಇರುವುದರಿಂದ ಉಕ್ತವ್ಯಾಪ್ತಿಯ ದಾರ್ಢ್ಯಕ್ಕೆ ನ್ಯೂನತೆಯಿಲ್ಲ.

ಹೀಗೆ ತೋರಿಸಿದ—"ಘಟಾದಿಪದಾರ್ಥಗಳು, ಇಂದ್ರಿಯಗಳು, ದೀಪ" ಈ ಮೂರುದೃಷ್ಟಾಂತಗಳಿಂದಲೂ ವ್ಯವಹಾರಹೇತುತ್ವವೆಂಬ ಸಾಧನಕ್ಕೂ ಸ್ವಸಜಾತೀಯಸಂಬಧಾನಧೀನವಾದ ವ್ಯವಹಾರಪ್ರಯೋಜಕವ್ಯಾಪಾರಹೇತುತ್ವವೆಂಬ ಸಾಧ್ಯಕ್ಕೂ ಸಾಧ್ಯಸಾಧನಭಾವವು ನಮಗೆ ಸುಸ್ಪಷ್ಟವಾಗಿ ಅವಗತವಾಗಿರುವುದಾದರೆ ಈಗ ಜ್ಞಾನವನ್ನು ಗಮನಿಸಿ ನೋಡೋಣ; ಜ್ಞಾನದಲ್ಲಿಯೂ ವ್ಯವಹಾರಹೇತುತ್ವವಿರುವುದೆಂಬುದರಲ್ಲಿ ಉಭಯವಾದಿಗಳಿಗೂ ವಿವಾದವಿಲ್ಲ. ಘಟಜ್ಞಾನವುಂಟಾದಮೇಲೆ ಘಟವಿಷಯದಲ್ಲಿ ಹೇಗಾದರೆ ವ್ಯವಹಾರವನ್ನು ನಡಸುವೆವೋ, ಅದರಂತೆಯೇ ಘಟಜ್ಞಾನವಿಷಯದಲ್ಲಿಯೂ ವ್ಯವಹಾರವನ್ನು ನಡಸುವೆವೆಂಬುದರಲ್ಲಿಯೂ ಸಹ ಉಭಯವಾದಿಗಳಿಗೂ ವಿವಾದವಿಲ್ಲ—

ಇದರಿಂದ—ಘಟವ್ಯವಹಾರಕ್ಕೆ ಘಟಜ್ಞಾನವು ಹೇಗೆ ಕಾರಣವೋ ಹಾಗೆ ಜ್ಞಾನವ್ಯವಹಾರಕ್ಕೂ ಜ್ಞಾನವು ಕಾರಣವಾಗಿರುವುದೆಂಬುದು ಸಿದ್ಧವಾಯಿತಾದ ಪ್ರಯುಕ್ತ ಸ್ವಸಜಾತೀಯಜ್ಞಾನಾಂತರಸಂಬಂಧಾನಧೀನವಾದ ವ್ಯವಹಾರಪ್ರಯೋಜಕವ್ಯಾಪಾರಹೇತುತ್ವವೆಂಬ ಸಾಧ್ಯವನ್ನೂ ಈ ಜ್ಞಾನದಲ್ಲಿ ಒಪ್ಪಬೇಕು. ಜ್ಞಾನವು ಜ್ಞಾನವ್ಯವಹಾರವನ್ನು ಉಂಟುಮಾಡುವ ಕಾಲದಲ್ಲಿ ವ್ಯವಹಾರೇಚ್ಛೆಯೆಂಬ ವ್ಯಾಪಾರವನ್ನು ಉಂಟುಮಾಡಿಯೇ ವ್ಯವಹಾರವನ್ನು ಉಂಟುಮಾಡಬೇಕು. ವ್ಯವಹಾರಪ್ರಯೋಜಕವಾದ ಇಂಥ ವ್ಯಾಪಾರವನ್ನು ಉಂಟುಮಾಡುವ ಕಾಲದಲ್ಲಿ ಜ್ಞಾನವು ಸ್ವಸಜಾತೀಯವಾದ ಜ್ಞಾನಾಂತರವನ್ನು ಅಪೇಕ್ಷಿಸದೆಯೇ

ವ್ಯವಹಾರೇಚ್ಛೆಯನ್ನು ಉಂಟುಮಾಡುವುದೆಂದು ಸಿದ್ಧವಾದರೆ ವ್ಯವಹರ್ತವ್ಯವಾದ ಪದಾರ್ಥದ ಜ್ಞಾನವಿಲ್ಲದೆ ವ್ಯವಹಾರೇಚ್ಛೆ ಉಂಟಾಗುವುದಿಲ್ಲವಾದುದರಿಂದಲೂ, ಪ್ರಕೃತದಲ್ಲಿ ಜ್ಞಾನವೇ ವ್ಯವಹರ್ತವ್ಯಪದಾರ್ಥವಾಗಿರುವುದರಿಂದಲೂ, ಅದು ವ್ಯಾಪಾರೋತ್ಪಾದನದಲ್ಲಿ ಸ್ವಸಜಾತೀಯವನ್ನು ಅಪೇಕ್ಷಿಸುವುದಿಲ್ಲವಾದುದರಿಂದಲೂ, ಅದು ತನ್ನನ್ನು ತಾನೇ ವಿಷಯೀಕರಿಸುತ್ತದೆಯೆಂದು ಒಪ್ಪಿದರಲ್ಲದೆ ವ್ಯವಹರ್ತವ್ಯಜ್ಞಾನದ ಜ್ಞಾನವುಂಟಾಗುವುದಿಲ್ಲವಾದುದರಿಂದಲೂ, ಜ್ಞಾನಕ್ಕೆ ಸ್ವವಿಷಯಕತ್ವವನ್ನು ಒಪ್ಪಬೇಕು. ಇಂಥ ಸ್ವವಿಷಯಕತ್ವವೇ ಸ್ವಯಂಪ್ರಕಾಶತ್ವವೆನಿಸಿಕೊಳ್ಳುವುದರಿಂದ ಜ್ಞಾನಕ್ಕೆ ಸ್ವಯಂಪ್ರಕಾಶತ್ವವು ಸಿದ್ಧವಾಗುವುದು.

## ೮೩೮ ಅಥ ದ್ವಿತೀಯಮನ್ವಯ್ಯನುಮಾನಂ

ಹೀಗೆ ಒಂದು ಅನ್ವಯ್ಯನುಮಾನವನ್ನು ತೋರಿಸಿದೆವು. ಎರಡನೆಯ ಅನ್ವಯ್ಯನುಮಾನವನ್ನು ಈ ರೀತಿಯಲ್ಲಿ ತಿಳಿಯಬೇಕು.—ಅನುಭವ-ಸಂಸ್ಕಾರ-ಸ್ಮರಣೆಗಳಿಗೆ ಅಧಿಕರಣವು ಎಂದರೆ ಆಶ್ರಯವು ಒಂದೇ ಆಗಿರಬೇಕೆಂಬ ನಿಯಮವನ್ನು ಜೀವಪರಿಚ್ಛೇದದಲ್ಲಿ ತೋರಿಸಿರುವೆವಷ್ಟೆ ? ಆದರಿಂದ ಯಾವನಿಗೆ ಅನುಭವವುಂಟಾಗಿರುವುದೋ ಅವನಿಗೇ ಸಂಸ್ಕಾರವೂ ಸ್ಮರಣವೂ ಉಂಟಾಗುವುವಲ್ಲದೆ ಮತ್ತೊಬ್ಬನಿಗೆ ಉಂಟಾಗುವುವಲ್ಲವೆಂದು ಸಿದ್ಧವಾಗಿರುವುದು.

ಅದರಂತೆ—ವಿಷಯವೂ ಸಹ ಇವುಗಳಿಗೆ ಒಂದೇ ಆಗಿರಬೇಕೆಂಬ ಮತ್ತೊಂದು ನಿಯಮವನ್ನೂ ಒಪ್ಪಿಕೊಳ್ಳಬೇಕು. ಆದರಿಂದ ಘಟವಿಷಯದಲ್ಲಿ ಅನುಭವವುಂಟಾದರೆ ಸಂಸ್ಕಾರಸ್ಮರಣೆಗಳೂ ಘಟವಿಷಯದಲ್ಲಿಯೇ ಉಂಟಾಗುವುವಲ್ಲದೆ ಘಟೇತರವಿಷಯದಲ್ಲಿ ಉಂಟಾಗುವುವಲ್ಲವೆಂದೂ ಸಿದ್ಧವಾಗಿರುವುದು.

ಅನುಭವವಿಲ್ಲದಿದ್ದರೆ ಸಂಸ್ಕಾರವಾಗಲಿ, ಸಂಸ್ಕಾರವಿಲ್ಲದಿದ್ದರೆ ಸ್ಮರಣೆಯಾಗಲಿ ಉಂಟಾಗುವುವಿಲ್ಲವಾದುದರಿಂದ ಕಾರ್ಯಭೂತವಾದ ಸ್ಮರಣೆ ತನಗೆ ಕಾರಣವಾದ ಸಂಸ್ಕಾರವನ್ನು ಸ್ವೋತ್ಪತ್ತಿಗಾಗಿ ಅಪೇಕ್ಷಿಸುವುದು ; ಅಂಥ ಸಂಸ್ಕಾರವೂ ತನಗೆ ಕಾರಣವಾದ ಅನುಭವವನ್ನು ಅಪೇಕ್ಷಿಸುವುದು. ಇದರಿಂದ ಘಟಸ್ಮರಣೆ ಘಟಸಂಸ್ಕಾರವನ್ನೂ, ಘಟಸಂಸ್ಕಾರವು ಘಟಾನುಭವವನ್ನೂ ಅಪೇಕ್ಷಿಸುತ್ತವೆಯೆಂದು ಸಿದ್ಧವಾಯಿತು. ಆದುದರಿಂದಲೇ ಘಟಸಂಸ್ಕಾರವು ಘಟಾನುಭವಜನ್ಯವಾದುದರಿಂದ ಘಟಾನುಭವವನ್ನೇ ಅಪೇಕ್ಷಿಸುವುದಲ್ಲದೆ ಜ್ಞಾನಾನುಭವಜನ್ಯವಲ್ಲವಾದುದರಿಂದ ಜ್ಞಾನಾನುಭವವನ್ನು ಅಪೇಕ್ಷಿಸುವುದಿಲ್ಲವೆಂದು ಈಗ ಧಾರಾಳವಾಗಿ ಹೇಳಬಹುದು.

ಇಂಥ ಘಟಸಂಸ್ಕಾರವನ್ನು ದೃಷ್ಟಾಂತವಾಗಿ ತೆಗೆದುಕೊಂಡು ಈಗ ವಿಮರ್ಶೆಮಾಡಿನೋಡೋಣ; ಈ ಸಂಸ್ಕಾರದಲ್ಲಿ ಸಂಸ್ಕಾರತ್ವವೆಂಬ ಹೇತುವಿರುವುದು. ಈ ಸಂಸ್ಕಾರವು ತನಗೆ ಆಶ್ರಯನಾದ ಯಾವ ಆತ್ಮನಲ್ಲಿ ಉಂಟಾಗುವುದೋ ಅಂಥ ಆತ್ಮನಲ್ಲಿ ಜ್ಞಾನಾನುಭವವನ್ನು ಎದುರು ನೋಡದೆಯೇ ತಾನು ಉಂಟಾಗುವುದರಿಂದ ಸ್ವಸಮಾನಾಧಿಕರಣಜ್ಞಾನಾನುಭವನಿರಪೇಕ್ಷತ್ವವೆಂಬ ಸಾಧ್ಯವೂ ಇದರಲ್ಲಿ ಇರುವುದು. ಇದರಿಂದ ಉಕ್ತಹೇತು ಎಲ್ಲೆಲ್ಲಿ ಇರುವುದೋ ಅಲ್ಲಲ್ಲಿ ಉಕ್ತಸಾಧ್ಯವೂ ಇರಬೇಕೆಂಬ ನಿಯಮವು ನಮಗೆ ತಿಳಿದುಬರುವುದು.

ಈಗ ಜ್ಞಾನಸ್ಮರಣಕ್ಕೆ ಕಾರಣವಾಗಿರುವ ಜ್ಞಾನಸಂಸ್ಕಾರವನ್ನು ಗಮನಿಸಿ ನೋಡಿದೆವಾದರೆ ಇದರಲ್ಲಿ ಸಂಸ್ಕಾರತ್ವವೆಂಬ ಹೇತುವಿನ ಸದ್ಭಾವದಲ್ಲಿ ವಿವಾದವಿಲ್ಲವಾದುದರಿಂದ ಸ್ವಸಮಾನಾಧಿಕರಣಜ್ಞಾನಾನುಭವನಿರಪೇಕ್ಷತ್ವವೆಂಬ ಸಾಧ್ಯವನ್ನೂ ಇದರಲ್ಲಿ ಒಪ್ಪಬೇಕು. ಜ್ಞಾನಸಂಸ್ಕಾರದಲ್ಲಿ ಇಂಥ ಸಾಧ್ಯವು ಸಿದ್ಧಿಸುವುದಾದರೆ ಸ್ವವಿಷಯಭೂತಜ್ಞಾನಜನ್ಯತ್ವವನ್ನೇ ಆ ಸಂಸ್ಕಾರಕ್ಕೆ ಹೇಳಬೇಕಾಗಿರುವುದಾದಕಾರಣ ಸಂಸ್ಕಾರವು ಯದ್ವಿಷಯಕವೋ ತದ್ವಿಷಯಕಾನುಭವಜನ್ಯತ್ವನಿಯಮವು ಸಂಸ್ಕಾರಕ್ಕೆ ಇರುವುದರಿಂದ ಜ್ಞಾನಕ್ಕೆ ಸ್ವವಿಷಯಕತ್ವವನ್ನು ಒಪ್ಪಿದರಲ್ಲದೆ ಸಂಸ್ಕಾರಕ್ಕೆ ಜ್ಞಾನಜನ್ಯತ್ವವು ಸಿದ್ಧಿಸುವುದಿಲ್ಲವಾದಪ್ರಯುಕ್ತ ಜ್ಞಾನಕ್ಕೆ ಸ್ವವಿಷಯಕತ್ವವೆಂಬ ಸ್ವಯಂಪ್ರಕಾಶತ್ವವು ಸಿದ್ಧವಾಗುವುದು. ಜ್ಞಾನಾಂತರಕ್ಕೆ ವಿಷಯವಾಗುವುದಾದರಲ್ಲವೆ ಸ್ವಯಂಪ್ರಕಾಶತ್ವಕ್ಕೆ ಚ್ಯುತಿಯುಂಟಾಗುವುದು. ಉಕ್ತರೀತಿಯಲ್ಲಿ ಸ್ವವಿಷಯಕತ್ವವು ಆವಶ್ಯಕವಾದುದರಿಂದ ಸ್ವಯಂಪ್ರಕಾಶತ್ವವನ್ನು ಅಪಲಪಿಸಲಾಗುವುದಿಲ್ಲ.

## ೮೩೯. ಅಥ ತೃತೀಯಮನ್ವಯ್ಯನುಮಾನಂ.

**ಮೂರನೆಯ ಅನ್ವಯ್ಯನುಮಾನವು—"ನಾನು ಇದನ್ನು ತಿಳಿಯುತ್ತೇನೆ"** ಎಂಬ ಜ್ಞಾನವುಂಟಾದ ಉತ್ತರಕ್ಷಣದಲ್ಲಿಯೇ ಎರಡು ಸಂಸ್ಕಾರಗಳು ಉಂಟಾಗುವುವು. ಅವುಗಳಲ್ಲಿ ಒಂದು ಜ್ಞಾನವಿಷಯಕವಾದ ಸಂಸ್ಕಾರವಾಗಿರುವುದು. ಮತ್ತೊಂದು "ಇದನ್ನು" ಎಂಬ ಪದದಿಂದ ತೋರಿಸಲ್ಪಟ್ಟ ಪದಾರ್ಥವಿಷಯಕವಾದ ಸಂಸ್ಕಾರವಾಗಿರುವುದು. ಇದನ್ನೇ ವಿಷಯಸಂಸ್ಕಾರವೆಂದು ಹೇಳುವೆವು.

ಇಂಥ ವಿಷಯಸಂಸ್ಕಾರವನ್ನು ದೃಷ್ಟಾಂತವಾಗಿ ತೆಗೆದುಕೊಂಡು ಈಗ ವಿಮರ್ಶೆಮಾಡಿ ನೋಡೋಣ; ಈ ವಿಷಯಸಂಸ್ಕಾರದಲ್ಲಿ ವಿಷಯಸಂಸ್ಕಾರತ್ವ

ವೆಂಬ ಹೇತುವಿರುವುದು. ಈ ವಿಷಯಸಂಸ್ಕಾರವು ಜ್ಞಾನಸಂಸ್ಕಾರದ ಜತೆಯಲ್ಲಿಯೇ ಹುಟ್ಟುವುದರಿಂದ ಜ್ಞಾನಸಂಸ್ಕಾರದ ಉತ್ಪತ್ತಿಕ್ಷಣದಲ್ಲಿ ಉತ್ಪತ್ತಿಮತ್ತ್ವವೆಂಬ ಸಾಧ್ಯವೂ ಇದರಲ್ಲಿರುವುದು. ಇದರಿಂದ ಉಕ್ತಹೇತು ಎಲ್ಲೆಲ್ಲಿ ಇರುವುದೋ ಅಲ್ಲಲ್ಲಿ ಉಕ್ತಸಾಧ್ಯವೂ ಇರಬೇಕೆಂಬ ನಿಯಮವು ನಮಗೆ ತಿಳಿದು ಬರುವುದು.

ಈಗ ಘಟಾದಿಪದಾರ್ಥವಿಷಯಕವಾದ ಸಕಲಸಂಸ್ಕಾರವನ್ನೂ ಎಂದರೆ ವಿಷಯಸಂಸ್ಕಾರಸಾಮಾನ್ಯವನ್ನೂ ಪಕ್ಷವಾಗಿ ತೆಗೆದುಕೊಂಡು ನಾವು ಗಮನಿಸಿ ನೋಡಿದೆವಾದರೆ ಇದರಲ್ಲಿ ವಿಷಯಸಂಸ್ಕಾರತ್ವವೆಂಬ ಹೇತುವಿನ ಸದ್ಭಾವದಲ್ಲಿ ವಿವಾದವಿಲ್ಲವಾದುದರಿಂದ ಜ್ಞಾನಸಂಸ್ಕಾರದ ಉತ್ಪತ್ತಿಕ್ಷಣದಲ್ಲಿ ಉತ್ಪತ್ತಿಮತ್ತ್ವವೆಂಬ ಸಾಧ್ಯವೂ ಇದರಲ್ಲಿ ಇರುವುದೆಂದು ಒಪ್ಪಬೇಕು. ಇಂಥ ಅನುಮಾನದಿಂದ ವಿಷಯಸಂಸ್ಕಾರಸಾಮಾನ್ಯದಲ್ಲಿ ಉಕ್ತಸಾಧ್ಯವು ಸಿದ್ಧಿಸುವುದಾದರೆ ಘಟಾದಿಪದಾರ್ಥಗಳೆಂಬವಿಷಯಗಳ ಅನುಭವವೇ ಜ್ಞಾನಾನುಭವವೆನಿಸಿಕೊಳ್ಳುವುದೆಂದು ಸಿದ್ಧವಾಗುವುದು. ಅಂತು ಜ್ಞಾನಾನುಭವವೆಂಬುದು ವಿಷಯಾನುಭವಕ್ಕಿಂತಲೂ ಬೇರೊಂದಲ್ಲವಾದುದರಿಂದ ಜ್ಞಾನಕ್ಕೆ ಸ್ವಯಂಪ್ರಕಾಶತ್ವವು ಸಿದ್ಧಿಸುವುದು.

## ೮೭೦ ಅಥ ಚತುರ್ಥಮನ್ವಯ್ಯನುಮಾನಂ

ನಾಲ್ಕನೆಯ ಅನ್ವಯ್ಯನುಮಾನವು—"ಯಾವ ಪದಾರ್ಥವು ತನಗಿಂತಲೂ ವಿಜಾತೀಯವಾದ ಪದಾರ್ಥದಲ್ಲಿ-ತನ್ನಲ್ಲಿ ಅವಶ್ಯಕವಾಗಿ ಉಂಟಾಗಬಹುದಾದ ಧರ್ಮಕ್ಕೆ ಅತ್ಯಂತಸಜಾತೀಯವಾಗಿಯೂ, ಸ್ವಸಂಬಂಧವಿರುವ ಕಾಲದಲ್ಲಿ ಇರುವುದಾಗಿಯೂ, ಇರುವ ಯಾವ ಧರ್ಮವುಂಟಾಗುವುದಕ್ಕೆ ಕಾರಣವಾಗಿರುವುದೋ ಆ ಪದಾರ್ಥವು ಸ್ವಜನ್ಯವಾಗಿಯೂ ಪರಗತವಾಗಿಯೂ ಇರುವ ಅಂಥ ಧರ್ಮಕ್ಕೆ ಅತ್ಯಂತಸಜಾತೀಯವಾದ ಧರ್ಮವನ್ನು ತಾನು ಪಡೆವ ವಿಷಯದಲ್ಲಿ ತನಗೆ ಅತ್ಯಂತಸಜಾತೀಯವಾದ ಮತ್ತೊಂದನ್ನು ಅಪೇಕ್ಷಿಸಿಯೇ ಅಪೇಕ್ಷಿಸುತ್ತದೆ" ಎಂಬ 'ನಿಯಮವಿಲ್ಲದುದಾಗಿರುವುದು" ಹೇಗೆಂದರೆ—ಪೃಥಿವಿಯಲ್ಲಿರುವ ರೂಪವು ತನಗಿಂತಲೂ ವಿಜಾತೀಯವಾದ ಪೃಥಿವಿಯಲ್ಲಿ ತನ್ನ ಸಂಬಂಧದಿಂದ ಚಕ್ಷುರಿಂದ್ರಿಯಗೋಚರತ್ವವೆಂಬ ಧರ್ಮವುಂಟಾಗುವುದಕ್ಕೆ ಕಾರಣವಾಗಿರುವುದು. ಇಂಥ ರೂಪವು ಚಕ್ಷುರಿಂದ್ರಿಯಗೋಚರತ್ವವೆಂಬ ಅಂಥ ಧರ್ಮವನ್ನು ಪಡೆವುದಕ್ಕೆ ತನಗೆ ಅತ್ಯಂತಸಜಾತೀಯವಾದ ಮತ್ತೊಂದು ರೂಪವನ್ನು ತಾನು ಅಪೇಕ್ಷಿಸುವುದಿಲ್ಲ. ಪೃಥಿವಿಯನ್ನು ಕಣ್ಣಿನಿಂದ ನೋಡುವುದಕ್ಕೆ ಪೃಥಿವಿಯಲ್ಲಿ ರೂಪವು

ಬೇಕಾಗಿದ್ದರೂ ರೂಪವನ್ನು ಕಣ್ಣಿನಿಂದ ನೋಡುವುದಕ್ಕೆ ರೂಪದಲ್ಲಿ ಮತ್ತೊಂದು ರೂಪವು ಬೇಕಾಗಿಲ್ಲವಷ್ಟೆ ?

ಇಂಥ ರೂಪವನ್ನು ದೃಷ್ಟಾಂತವಾಗಿ ತೆಗೆದುಕೊಂಡು ಈಗ ವಿಮರ್ಶೆ ಮಾಡಿನೋಡೋಣ; ಈ ರೂಪದಲ್ಲಿ ಸ್ವಸಂಬಂಧದಿಂದ ಸ್ವವಿಜಾತೀಯಪದಾರ್ಥದಲ್ಲಿ ಸ್ವಾವಶ್ಯಂಭಾವಿಯಾದ ಧರ್ಮಕ್ಕೆ ಅತ್ಯಂತಸಜಾತೀಯವಾಗಿಯೂ ಸ್ವಸಂಬಂಧಸಮಕಾಲಿಕವಾಗಿಯೂ ಇರುವ ಧರ್ಮಕಾರಣತ್ವವೆಂಬ ಹೇತುವಿರುವುದು. ಮತ್ತು ತನ್ನಲ್ಲಿ ಅಂಥ ಧರ್ಮವುಂಟಾಗುವುದಕ್ಕೆ ತನಗೆ ಅತ್ಯಂತಸದೃಶವಾದ ಪದಾರ್ಥದ ಅಪೇಕ್ಷಾನಿಯಮರಾಹಿತ್ಯವೆಂಬ ಸಾಧ್ಯವೂ ಈ ರೂಪದಲ್ಲಿ ಇರುವುದು. ಇದರಿಂದ ಉಕ್ತಹೇತು ಎಲ್ಲೆಲ್ಲಿ ಇರುವುದೋ ಅಲ್ಲಲ್ಲಿ ಉಕ್ತಸಾಧ್ಯವೂ ಇರಬೇಕೆಂಬ ನಿಯಮವು ಸಮಗೆ ತಿಳಿದುಬರುವುದು.

ಈಗ ಜ್ಞಾನವನ್ನು ಪಕ್ಷವಾಗಿ ತೆಗೆದುಕೊಂಡು ನಾವು ಗಮನಿಸಿ ನೋಡುವೆವಾದರೆ—ಜ್ಞಾನವು ತನಗಿಂತಲೂ ವಿಜಾತೀಯವಾದ ಘಟಾದಿಪದಾರ್ಥದಲ್ಲಿ ತನ್ನ ಸಂಬಂಧವಿರುವಾಗ ಪ್ರಕಾಶಮಾನತ್ವವೆಂಬ ಧರ್ಮವುಂಟಾಗುವುದಕ್ಕೆ ಕಾರಣವಾಗಿರುವುದರಿಂದ ಉಕ್ತಹೇತು ಜ್ಞಾನದಲ್ಲಿ ಇರುವುದೆಂಬುದರಲ್ಲಿ ವಿವಾದವಿಲ್ಲವಾದಪ್ರಯುಕ್ತ ಪ್ರಕಾಶಮಾನತ್ವವೆಂಬ ಅಂಥ ಧರ್ಮವು ತನ್ನಲ್ಲಿ ಉಂಟಾಗುವುದಕ್ಕೆ ತನಗೆ ಅತ್ಯಂತಸಜಾತೀಯವಾಗಿರುವ ಜ್ಞಾನಾಂತರದ ಅಪೇಕ್ಷಾನಿಯಮರಾಹಿತ್ಯವೆಂಬ ಸಾಧ್ಯವೂ ಇದರಲ್ಲಿ ಇದೆಯೆಂದು ಒಪ್ಪಬೇಕು. ಇಂಥ ಅನುಮಾನದಿಂದ ಜ್ಞಾನದಲ್ಲಿ ಉಕ್ತಸಾಧ್ಯವು ಸಿದ್ಧಿಸುವುದಾದರೆ ಜ್ಞಾನಾಂತರಾಪೇಕ್ಷೆಯಿಲ್ಲದೆಯೇ ಪ್ರಕಾಶಿಸುವಿಕೆಯೆಂಬ ಸ್ವಯಂಪ್ರಕಾಶತ್ವವು ಜ್ಞಾನಕ್ಕೆ ಸಿದ್ಧಿಸುವುದು.

ಈ ಅನುಮಾನದಲ್ಲಿ ಸೇರಿರುವ ವಿಶೇಷಣಗಳ ಪ್ರಯೋಜನಗಳನ್ನು ಬುದ್ಧಿವೈಶದ್ಯಕ್ಕಾಗಿಯೂ ಬುದ್ಧಿದಾರ್ಢ್ಯಕ್ಕಾಗಿಯೂ ಸ್ವಲ್ಪಮಟ್ಟಿಗೆ ಇಲ್ಲಿ ವಿವರಿಸುವೆವು.—ಈ ಅನುಮಾನದ ಹೇತುವಾಕ್ಯದೊಳಗೆ "**ತನಗಿಂತಲೂ ವಿಜಾತೀಯವಾದ ಪದಾರ್ಥದಲ್ಲಿ**" ಎಂಬುದನ್ನು ಸೇರಿಸದಿದ್ದರೆ ಘಟದಲ್ಲಿ ಈ ವ್ಯಾಪ್ತಿಗೆ ಭಂಗಬರುವುದು. ಹೇಗೆಂದರೆ—ಅಗ್ನಿಸಂಬಂಧದಿಂದ ತನ್ನಲ್ಲಿ ಪೂರ್ವರೂಪಕ್ಕೆ ಸದೃಶವಾದ ರೂಪಾಂತರವು ಉಂಟಾಗುವುದಕ್ಕೆ ಘಟದ್ರವ್ಯವು ಕಾರಣವಾಗಿದ್ದರೂ ಅಂಥ ರೂಪವನ್ನು ತಾನು ಪಡೆವುದಕ್ಕೆ ಅಗ್ನಿದ್ರವ್ಯವನ್ನು ನಿಯತವಾಗಿಯೂ ಅಪೇಕ್ಷಿಸುವುದರಿಂದ ಅಪೇಕ್ಷಾನಿಯಮರಾಹಿತ್ಯವೆಂಬ ಸಾಧ್ಯವು ಬರಲಿಲ್ಲವಾಗಿ

ಉಕ್ತನಿಯಮಕ್ಕೆ ಭಂಗವುಂಟಾಗುವುದು. ಇದನ್ನು ಪರಿಹರಿಸುವುದಕ್ಕಾಗಿ "**ತನಗಿಂತಲೂ ವಿಜಾತೀಯವಾದ ಪದಾರ್ಥದಲ್ಲಿ**" ಎಂಬ ಅಂಶವು ಸೇರಿಸಲ್ಪಟ್ಟಿರುವುದು. ಘಟವು ಘಟಕ್ಕಿಂತಲೂ ವಿಜಾತೀಯವಲ್ಲವಾದುದರಿಂದ ದೋಷವಿಲ್ಲ.

ಮತ್ತು ದಂಡವೆಂಬ ದ್ರವ್ಯವು ದಂಡಧಾರಿಯಾದ ಪುರುಷನೆಂಬ ದ್ರವ್ಯದಲ್ಲಿ ಸಂಯುಕ್ತತ್ವವೆಂಬ ಧರ್ಮವನ್ನು ಉಂಟುಮಾಡುವುದಕ್ಕೆ ಕಾರಣವಾಗಿದ್ದರೂ ತನ್ನಲ್ಲಿ ಅಂಥ ಧರ್ಮವನ್ನು ಉಂಟುಮಾಡಿಕೊಳ್ಳುವುದಕ್ಕೆ ಮತ್ತೊಂದು ದ್ರವ್ಯವನ್ನು ಅಪೇಕ್ಷಿಸಿಯೇ ಅಪೇಕ್ಷಿಸುವುದಾದುದರಿಂದ "**ತನಗೆ ಅತ್ಯಂತ ಸಜಾತೀಯವಾದ ಮತ್ತೊಂದನ್ನು ಅಪೇಕ್ಷಿಸುವುದಿಲ್ಲ**" ಎಂಬ ನಿಯಮಕ್ಕೆ ಭಂಗಬರುವುದು. ದ್ರವ್ಯವು ದ್ರವ್ಯಕ್ಕೆ ಅತ್ಯಂತಸಜಾತೀಯವಷ್ಟೆ? ಈ ನಿಯಮ ಭಂಗವೂ ಸಹ "**ವಿಜಾತೀಯವಾದ**" ಎಂಬ ಪದದಿಂದ ಪರಿಹರಿಸಲ್ಪಡುವುದು. ದ್ರವ್ಯವು ದ್ರವ್ಯಕ್ಕೆ ಸಜಾತೀಯವಾಗಿಯೇ ಇರುವುದಲ್ಲದೆ ವಿಜಾತೀಯವಾಗಲಿಲ್ಲವಷ್ಟೆ?

ಆದರೆ ಘಟದ್ರವ್ಯವು ಪಟದ್ರವ್ಯದಲ್ಲಿ ಸ್ವಸಂಬಂಧದಿಂದ ಸಂಯುಕ್ತತ್ವವೆಂಬ ಧರ್ಮವನ್ನು ಉಂಟುಮಾಡುವುದಕ್ಕೆ ಕಾರಣವಾಗಿದ್ದರೂ ತನ್ನಲ್ಲಿ ಅಂಥ ಧರ್ಮವನ್ನು ಪಡೆವುದಕ್ಕೆ ತನಗೆ ಅತ್ಯಂತಸಜಾತೀಯವಾದ ಮತ್ತೊಂದು ಘಟವನ್ನು ಅಪೇಕ್ಷಿಸುವುದರಿಂದ ಹೇತುವಿದ್ದರೂ ಸಾಧ್ಯವಿಲ್ಲವಾದಕಾರಣ ನಿಯಮಕ್ಕೆ ಭಂಗವುಂಟಾಗುವುದಲ್ಲವೆ?

ಇಲ್ಲ—ನಿಯಮಕ್ಕೆ ಭಂಗವಿಲ್ಲ. ಸಜಾತೀಯಾಪೇಕ್ಷಾನಿಯಮರಾಹಿತ್ಯವೆಂಬ ಸಾಧ್ಯವು ಅಲ್ಲಿಯೂ ಇದ್ದೇ ಇರುವುದು. ಘಟವು ತನ್ನಲ್ಲಿ ಸಂಯುಕ್ತತ್ವವೆಂಬ ಧರ್ಮವನ್ನು ಪಡೆವುದಕ್ಕಾಗಿ ಸ್ವಾತ್ಯಂತಸಜಾತೀಯವಾದ ಘಟವನ್ನೇ ಅಪೇಕ್ಷಿಸುತ್ತದೆಯೆಂಬ ನಿಯಮವಿಲ್ಲವಷ್ಟೆ? ವಿಜಾತೀಯದ್ರವ್ಯದಿಂದಲೂ ಸಂಯುಕ್ತತ್ವವು ಸಂಭವಿಸಬಹುದಲ್ಲವೆ?

ಮತ್ತು—"**ಸ್ವಸಂಬಂಧವಿರುವ ಕಾಲದಲ್ಲಿ ಇರುವುದಾಗಿಯೂ ಇರುವ**" ಎಂಬ ಇಷ್ಟು ಅಂಶವನ್ನು ಹೇತುವಾಕ್ಯದಲ್ಲಿ ಸೇರಿಸದಿದ್ದರೆ ತಂದೆಯೆನಿಸಿಕೊಳ್ಳುವವನಲ್ಲಿ ಈ ನಿಯಮಕ್ಕೆ ಭಂಗವುಂಟಾಗುವುದು. ಹೇಗೆಂದರೆ—ಪುತ್ರನಲ್ಲಿ ಪುತ್ರತ್ವವೆಂಬ ಧರ್ಮವುಂಟಾಗುವುದಕ್ಕೆ ತಂದೆ ಕಾರಣಭೂತನಾಗಿದ್ದರೂ ತನ್ನಲ್ಲಿ ಅಂಥ ಧರ್ಮವುಂಟಾಗುವುದಕ್ಕೆ ತನ್ನ ತಂದೆಯನ್ನು ಅಪೇಕ್ಷಿಸುವನಾದುದರಿಂದ ಹೇತುವಿದ್ದರೂ ಸಾಧ್ಯವಿಲ್ಲದಕಾರಣ ನಿಯಮಕ್ಕೆ ಭಂಗವುಂಟಾಗುವುದು.

ಇದನ್ನು ಪರಿಹರಿಸುವುದಕ್ಕಾಗಿ "**ಸ್ವಸಂಬಂಧವಿರುವ ಕಾಲದಲ್ಲಿ ಇರುವುದಾಗಿಯೂ ಇರುವ**" ಎಂಬ ಅಂಶವನ್ನು ಧರ್ಮಕ್ಕೆ ವಿಶೇಷಣವಾಗಿ ಕೊಟ್ಟಿರುವುದು. ಪುತ್ರನಲ್ಲಿರುವ ಪುತ್ರತ್ವವೆಂಬ ಧರ್ಮವು ತಂದೆಯ ಸಂಬಂಧವಿರುವ ಕಾಲದಲ್ಲಿ ಮಾತ್ರವೇ ಇರುವುದಲ್ಲ; ತಂದೆ ದೇಶಾಂತರಕ್ಕೆ ಹೋದಾಗಲೂ, ತಂದೆಯ ಮರಣಾನಂತರದಲ್ಲಿಯೂ ಇರುವ ಧರ್ಮವಾದುದರಿಂದ ಅಲ್ಲಿ ಸಾಧ್ಯವಿಲ್ಲದಿದ್ದರೂ ಹಾನಿಯಿಲ್ಲ.

ಆದುದರಿಂದಲೇ—ಕುಠಾರದಲ್ಲಿಯೂ (ಕೊಡಲಿಯಲ್ಲಿಯೂ) ಈ ನಿಯಮಕ್ಕೆ ಭಂಗವನ್ನು ಹೇಳಲು ಅವಕಾಶವಿಲ್ಲ; ಹೇಗೆಂದರೆ—ಕುಠಾರವು ಸ್ವಸಂಬಂಧದಿಂದ ಕಟ್ಟಿಗೆಯಲ್ಲಿ ದ್ವೈಧೀಭಾವವೆಂಬ (ಭೇದನವೆಂಬ) ಧರ್ಮವನ್ನು ಉಂಟುಮಾಡುವುದಕ್ಕೆ ಕಾರಣವಾಗಿದ್ದರೂ ಆ ಕುಠಾರವು ತನ್ನಲ್ಲಿ ಅಂಥ ಧರ್ಮವನ್ನು ಪಡೆವುದಕ್ಕೆ ಮತ್ತೊಂದು ಸಾಧನವನ್ನು ಅಪೇಕ್ಷಿಸುವುದಿಲ್ಲವೆಂಬುದಿಲ್ಲವಾದುದರಿಂದ ಹೇತುವಿದ್ದರೂ ಸಾಧ್ಯವಿಲ್ಲವಾದಪ್ರಯುಕ್ತ ಉಕ್ತನಿಯಮಕ್ಕೆ ಭಂಗವುಂಟೆಂದು ಆಶಂಕಿಸಬಹುದು. ಇಂಥ ಆಶಂಕೆಯೂ ಪೂರ್ವೋಕ್ತವಾದ ವಿಶೇಷಣದಿಂದಲೇ ನಿರಾಕರಿಸಲ್ಪಡುವುದು. ಕುಠಾರದಿಂದ ಕಟ್ಟಿಗೆಯಲ್ಲಿ ಉಂಟಾಗುವ ದ್ವೈಧೀಭಾವವೆಂಬ ಧರ್ಮವು ಕುಠಾರಸಂಯೋಗಕಾಲದಲ್ಲಿ ಮಾತ್ರವೇ ಇರುವ ಧರ್ಮವಲ್ಲ. ಕುಠಾರವನ್ನು ಕಟ್ಟಿಗೆಯಿಂದ ದೂರಪಡಿಸಿದರೂ ಆಗಲೂ ದ್ವೈಧೀಭಾವವೆಂಬ ಧರ್ಮವು ಭಿನ್ನವಾದ ಕಟ್ಟಿಗೆಯಲ್ಲಿ ಇದ್ದೇ ಇರುವುದು. ಆದಕಾರಣ ಅಲ್ಲಿ ಸಾಧ್ಯವಿಲ್ಲದಿದ್ದರೂ ಹಾನಿಯಿಲ್ಲ.

"ಪೂಜ್ಯರೆ? "**ಸ್ವಸಂಬಂಧವಿರುವ ಕಾಲದಲ್ಲಿ ಇರುವುದಾಗಿಯೂ ಇರುವ**" ಎಂಬ ವಿಶೇಷಣವನ್ನು ಸೇರಿಸಿದರೂ ಚೇತನನಲ್ಲಿ ಈ ನಿಯಮಕ್ಕೆ ಭಂಗವು ಬಂದೇಬರುವುದು. ಹೇಗೆಂದರೆ ಚೇತನನು ಸ್ವಸಂಬಂಧದಿಂದ ಶರೀರದಲ್ಲಿ ಶರೀರತ್ವವೆಂಬ ಧರ್ಮವನ್ನು ಉಂಟುಮಾಡುವುದಕ್ಕೆ ಕಾರಣಭೂತನಾಗಿರುವನು; ಶರೀರತ್ವವೆಂಬ ಈ ಧರ್ಮವು ಚೇತನಸಂಬಂಧಕ್ಕೆ ಸಮಕಾಲದಲ್ಲಿ ಇರುವುದಾಗಿಯೇ ಇರುವುದಲ್ಲದೆ ಪೂರ್ವದಲ್ಲಿಯಾಗಲಿ ಉತ್ತರಕಾಲದಲ್ಲಿಯಾಗಲಿ ಇರುವಂಥದಲ್ಲ. ಚೇತನನು ಶರೀರವನ್ನು ತ್ಯಜಿಸಿ ಹೊರಟುಹೋದಮೇಲೆ ಆದರಲ್ಲಿ ಶರೀರತ್ವವೆಂಬ ಧರ್ಮವಿಲ್ಲವೆಂಬುದು ಅಚಿತ್ತತ್ತ್ವಪರಿಚ್ಛೇದದಲ್ಲಿಯೇ ವ್ಯಕ್ತವಾಗಿರುವುದಷ್ಟೆ? ಶರೀರತ್ವವೆಂಬ ಇಂಥ ಧರ್ಮವನ್ನು ಚೇತನನು ತನ್ನಲ್ಲಿ ಪಡೆವುದಕ್ಕೆ ತನಗೆ ಸಜಾತೀಯವಾದ ಮತ್ತೊಂದನ್ನು ಅಪೇಕ್ಷಿಸುವುದಿಲ್ಲವೆಂಬುದಿಲ್ಲ; ಈಶ್ವರನೆಂಬ

ಚೇತನನನ್ನು ಅಪೇಕ್ಷಿಸಿಯೇ ಅಪೇಕ್ಷಿಸುವನು. ಈಶ್ವರನು ಚೇತನತ್ವಾಕಾರದಿಂದ ಇವನಿಗೆ ಸಜಾತೀಯನಾಗಿಯೇ ಇರುವನು. ಆದಕಾರಣ ಚೇತನನಲ್ಲಿ ಉಕ್ತ ಹೇತುವಿದ್ದರೂ ಉಕ್ತಸಾಧ್ಯವಿಲ್ಲವಾದುದರಿಂದ ಉಕ್ತವಾದ ನಿಯಮಕ್ಕೆ ಭಂಗ ಬರುವುದಲ್ಲವೆ ''

ಇಂಥ ಆಶಂಕೆ ಸಂಗತವಲ್ಲ. ಈ ಹೇತುವಾಕ್ಯದಲ್ಲಿರುವ ಧರ್ಮಶಬ್ದವು ಜ್ಞಾನಕ್ಕೆ ವ್ಯಾಪಕವಾದ ಧರ್ಮವನ್ನೇ ತೋರಿಸುವುದು. ಜ್ಞಾನವು ಎಲ್ಲಿ ಉಂಟಾಗುವುದೋ ಅಲ್ಲಿ ಪ್ರಕಾಶವೆಂಬ ಧರ್ಮವು ನಿಯತವಾಗಿ ಇರುವುದರಿಂದ ಜ್ಞಾನಕ್ಕೆ ಪ್ರಕಾಶವೆಂಬ ಧರ್ಮವು ವ್ಯಾಪಕವಾಗಿರುವುದು. ಶರೀರತ್ವವೆಂಬ ಧರ್ಮವಾದರೆ ಚೇತನತ್ವಕ್ಕೆ ವ್ಯಾಪಕಧರ್ಮವಲ್ಲ. ಹಾಗೆ ವ್ಯಾಪಕವಾಗುವುದಾದರೆ ಚೇತನತ್ವವು ಎಲ್ಲೆಲ್ಲಿ ಇರುವುದೋ ಅಲ್ಲಲ್ಲಿ ಶರೀರತ್ವವು ಇದ್ದೇ ಇರಬೇಕು ; ಈಶ್ವರನಲ್ಲಿ ಚೇತನತ್ವವಿದ್ದರೂ ಶರೀರತ್ವವಿಲ್ಲವಾದುದರಿಂದ ಶರೀರತ್ವವು ಚೇತನತ್ವಕ್ಕೆ ವ್ಯಾಪಕಧರ್ಮವಾಗಲಾರದು. ಆದುದರಿಂದ ಚೇತನನಲ್ಲಿ ಉಕ್ತಸಾಧ್ಯವಿಲ್ಲದಿದ್ದರೂ ಹಾನಿಯಿಲ್ಲ **"ತನ್ನಲ್ಲಿ ಅವಶ್ಯಕವಾಗಿ ಉಂಟಾಗಬಹುದಾದ"** ಎಂಬ ವಿಶೇಷಣವನ್ನು ಈ ಹೇತುವಾಕ್ಯದಲ್ಲಿ ಸೇರಿಸಿರುವುದರಿಂದಲೂ ಈ ಅರ್ಥವು ಸೂಚಿಸಲ್ಪಡುವುದು. ವ್ಯಾಪಕಧರ್ಮವಲ್ಲವೆ ಅವಶ್ಯಕವಾಗಿ ಉಂಟಾಗಬಹುದಾದ ಧರ್ಮವಾಗಿರುವುದು.

ಹೀಗೆ ಧರ್ಮಶಬ್ದವು ಅವಶ್ಯಂಭಾವಿಯಾದ ಧರ್ಮವನ್ನೇ ತೋರಿಸುತ್ತದೆಯೆಂದು ವಿವಕ್ಷಿಮಾಡಿದುದರಿಂದಲೇ ದೃಷ್ಟಾಂತವಾದ ರೂಪದಲ್ಲಿ ಸಾಧ್ಯವೈಕಲ್ಯಶಂಕೆಯೂ ಪರಿಹೃತವಾಗುವುದು. ಹೇಗೆಂದರೆ—ರೂಪವು ಸ್ವಸಂಬಂಧದಿಂದ ಪೃಥಿವಿಯಲ್ಲಿ ರೂಪಿತ್ವವೆಂಬ ಧರ್ಮವನ್ನು ಉಂಟುಮಾಡುವುದಕ್ಕೆ ಕಾರಣವಾಗಿದ್ದರೂ ತನ್ನಲ್ಲಿ ಅಂಥ ರೂಪಿತ್ವಧರ್ಮವನ್ನು ಉಂಟುಮಾಡಿಕೊಳ್ಳುವುದಕ್ಕೆ ಸ್ವಸಜಾತೀಯವಾದ ರೂಪವನ್ನು ಅಪೇಕ್ಷಿಸುವುದಿಲ್ಲವೆಂಬುದಿಲ್ಲದೆ ಅಪೇಕ್ಷಿಸಿಯೇ ಅಪೇಕ್ಷಿಸುವುದಾದುದರಿಂದ ದೃಷ್ಟಾಂತವಾದ ರೂಪದಲ್ಲಿ ಉಕ್ತಹೇತುವಿದ್ದರೂ ಉಕ್ತಸಾಧ್ಯವಿಲ್ಲವಾದುದರಿಂದ ಸಾಧ್ಯವೈಕಲ್ಯಶಂಕೆಯುಂಟಾಗುವುದು. ಆದರೂ ರೂಪಿತ್ವವೆಂಬ ಧರ್ಮವು ರೂಪಕ್ಕೆ ಆಶ್ರಯಗಳಾದ ಪೃಥಿವ್ಯಾದಿಗಳಲ್ಲಿ ಉಂಟಾಗಬಹುದಾದ ಧರ್ಮವಾಗಿರುವುದಲ್ಲದೆ ರೂಪದಲ್ಲಿ ಅವಶ್ಯಂಭಾವಿಯಾದ ಧರ್ಮವಲ್ಲ. ರೂಪವು ರೂಪಾಂತರಕ್ಕೆ ಆಶ್ರಯವಾಗಲಾರದಾದುದರಿಂದ ರೂಪದಲ್ಲಿ ರೂಪಿತ್ವವು ಉಂಟಾಗಲಾರದಷ್ಟೆ ? ಚಕ್ಷುರಿಂದ್ರಿಯಗೋಚರತ್ವವೆಂಬ ಧರ್ಮವಾದರೆ ಪೃಥಿವಿ

ಯಲ್ಲಿ ಹೇಗೋ ಹಾಗೆಯೇ ರೂಪದಲ್ಲಿಯೂ ಅವಶ್ಯಂಭಾವಿಯಾದುದರಿಂದ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯಶಂಕೆಗೆ ಅವಕಾಶವಿಲ್ಲ.

ಮತ್ತು ದಂಡವು ದಂಡಧಾರಿಯಾದ ಪುರುಷನಲ್ಲಿ ಸ್ವಸಂಬಂಧದಿಂದ ದಂಡಿತ್ವವೆಂಬ ಧರ್ಮವನ್ನು ಉಂಟುಮಾಡುವುದಕ್ಕೆ ಕಾರಣವಾಗಿದ್ದರೂ ದಂಡಿತ್ವ ವೆಂಬ ಅಂಥ ಧರ್ಮವನ್ನು ತನ್ನಲ್ಲಿ ಉಂಟುಮಾಡಿಕೊಳ್ಳುವುದಕ್ಕೆ ಸ್ವಸಜಾತೀ ಯವಾದ ದಂಡಾಂತರವನ್ನು ಅಪೇಕ್ಷಿಸುವುದಿಲ್ಲವೆಂಬುದಿಲ್ಲ ಅಪೇಕ್ಷಿಸಿಯೇ ಅಪೇಕ್ಷಿಸುವುದಾದುದರಿಂದ ದಂಡದಲ್ಲಿ ಈ ನಿಯಮಕ್ಕೆ ಭಂಗವುಂಟಾಗುವು ದೆಂಬ ಆಶಂಕೆಯೂ **" ತನ್ನಲ್ಲಿ ಆವಶ್ಯಕವಾಗಿ ಉಂಟಾಗಬಹುದಾದ "** ಎಂಬ ವಿಶೇಷಣದಿಂದಲೇ ಪರಿಹರಿಸಲ್ಪಡುವುದು. ದಂಡೇತರನಾದ ಪುರುಷನಲ್ಲಿ ದಂಡ ಸಂಬಂಧದಿಂದ ದಂಡಿತ್ವವೆಂಬ ಧರ್ಮವು ಉಂಟಾಗಬಹುದಾದರೂ ದಂಡದಲ್ಲಿ ದಂಡಿತ್ವವು ಅವಶ್ಯಂಭಾವಿಯಾಗಲಾರದಷ್ಟೆ?

ಮತ್ತು ಸಾಧ್ಯವಾಕ್ಯದಲ್ಲಿ **" ತನಗೆ ಅತ್ಯಂತಸಜಾತೀಯವಾದ "** ಎಂಬ ವಿಶೇಷಣವನ್ನು ಸೇರಿಸದಿದ್ದರೆ ಅಂಥ ಧರ್ಮವನ್ನು ಪಡೆವುದಕ್ಕಾಗಿ ಯಾವು ದೊಂದು ಹೇತುವನ್ನೂ ಅಪೇಕ್ಷಿಸುವುದಿಲ್ಲವೆಂದು ಅರ್ಥವಾಗುವುದು; ಆಗ ದೃಷ್ಟಾಂತವಾದ ರೂಪದಲ್ಲಿ ಪುನಃ ಸಾಧ್ಯವೈಕಲ್ಯಶಂಕೆಯುಂಟಾಗುವುದು. ಹೇಗೆಂದರೆ—ರೂಪವು ತನ್ನ ಸಂಬಂಧದಿಂದ ಪೃಥಿವಿಯಲ್ಲಿ ಉಂಟುಮಾಡುವ ಚಕ್ಷುರಿಂದ್ರಿಯಗೋಚರತ್ವವೆಂಬ ಧರ್ಮವನ್ನು ತನ್ನಲ್ಲಿ ಉಂಟುಮಾಡಿಕೊಳ್ಳುವು ದಕ್ಕೆ ಯಾವ ಹೇತುವನ್ನೂ ಅಪೇಕ್ಷಿಸುವುದಿಲ್ಲವೆಂದು ಹೇಳಲಾಗುವುದಿಲ್ಲ. ಚಕ್ಷುರಿಂದ್ರಿಯವನ್ನು ಅಪೇಕ್ಷಿಸಿಯೇ ಅಪೇಕ್ಷಿಸುವುದಾದುದರಿಂದ ರೂಪವೆಂಬ ದೃಷ್ಟಾಂತದಲ್ಲಿ ಹೇತುವಿದ್ದರೂ ಸಾಧ್ಯವಿಲ್ಲವಾದಕಾರಣ ಸಾಧ್ಯವೈಕಲ್ಯಶಂಕೆ ಅಂಕುರಿಸುವುದು. ಇದನ್ನು ಪರಿಹರಿಸುವುದಕ್ಕಾಗಿ **" ತನಗೆ ಅತ್ಯಂತಸಜಾತೀ ಯವಾದ "** ಎಂಬ ವಿಶೇಷಣವನ್ನು ಸೇರಿಸಬೇಕು. ರೂಪವು ತನ್ನಲ್ಲಿ ಚಕ್ಷು ರಿಂದ್ರಿಯಗೋಚರತ್ವವೆಂಬ ಧರ್ಮವನ್ನು ಉಂಟುಮಾಡಿಕೊಳ್ಳುವುದಕ್ಕೆ ಚಕ್ಷು ರಿಂದ್ರಿಯವನ್ನು ಅಪೇಕ್ಷಿಸಿದರೂ ಹಾನಿಯಿಲ್ಲ. ಏತಕ್ಕೆಂದರೆ ಚಕ್ಷುರಿಂದ್ರಿಯವು ರೂಪಕ್ಕೆ ಸಜಾತೀಯವಲ್ಲ. ತನಗೆ ಸಜಾತೀಯವಾದ ರೂಪಾಂತರವನ್ನು ಅಪೇ ಕ್ಷಿಸದೆಯೇ ಚಕ್ಷುರಿಂದ್ರಿಯಗೋಚರತ್ವವೆಂಬ ಧರ್ಮವನ್ನು ತನ್ನಲ್ಲಿ ಇದು ಉಂಟುಮಾಡಿಕೊಳ್ಳಬಲ್ಲುದಾದುದರಿಂದ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯವಿಲ್ಲವಷ್ಟೆ?

## ೮೭೧. ಅಥ ವ್ಯತಿರೇಕ್ಯನುಮಾನದ್ವಯೇನ ಜ್ಞಾನಸ್ಯ ಸ್ವಯಂಪ್ರಕಾಶತ್ವಸಾಧನಂ.

ಕಾರಿಕೆಯಲ್ಲಿ ಉಕ್ತವಾದ "ವ್ಯಾಪ್ತ್ಯಾದನ್ವಯಿವ್ಯತಿರೇಕಿತಃ" ಎಂಬ ಪದದಲ್ಲಿ ಅಡಗಿರುವ ಅನ್ವಯ್ಯನುಮಾನಗಳನ್ನು ಈ ರೀತಿಯಲ್ಲಿ ತೋರಿಸಿದೆವು. ಇನ್ನು ವ್ಯತಿರೇಕ್ಯನುಮಾನಗಳನ್ನು ಮುಂದೆ ಹೇಳುವ ರೀತಿಯಲ್ಲಿ ತಿಳಿಯಬಹುದು. ಅಚಿತ್ತತ್ತ್ವಪರಿಚ್ಛೇದದೊಳಗೆ ದ್ರವ್ಯಗಳ ಅವಾಂತರವಿಭಾಗಪ್ರಕರಣದಲ್ಲಿ ಪ್ರಕೃತಿ, ಕಾಲ, ಎಂಬ ಎರಡು ದ್ರವ್ಯಗಳನ್ನು ಜಡದ್ರವ್ಯಗಳಾಗಿಯೂ, ಜೀವ, ಈಶ್ವರ, ನಿತ್ಯವಿಭೂತಿ. ಧರ್ಮಭೂತಜ್ಞಾನ, ಎಂಬ ನಾಲ್ಕು ದ್ರವ್ಯಗಳನ್ನು ಅಜಡದ್ರವ್ಯಗಳಾಗಿಯೂ, ತೋರಿಸಿರುವೆವೆಂಬುದನ್ನು ಪಾಠಕರು ಮರೆತಿರಲಾರರು. ಈಗ ಜ್ಞಾನವನ್ನು ಪಕ್ಷವಾಗಿ ಮಾಡಿಕೊಂಡು ವ್ಯತಿರೇಕ್ಯನುಮಾನವನ್ನು ಹೇಳೋಣ.

ಜ್ಞಾನವು ಅಜಡದ್ರವ್ಯವಾಗಿರುವುದರಿಂದ ಎಂದರೆ ಜಡಭಿನ್ನದ್ರವ್ಯವಾಗಿರುವುದರಿಂದ ಸ್ವಯಂಪ್ರಕಾಶವಾಗಿರಬೇಕು; ಯಾವುದು ಸ್ವಯಂಪ್ರಕಾಶವಲ್ಲವೋ ಅದು ಅಜಡವಾಗಿಯೂ ಎಂದರೆ ಜಡಭಿನ್ನವಾಗಿಯೂ ಇರದು. ಪ್ರಕೃತಿಕಾಲಗಳಿಗೆ ಸ್ವಯಂಪ್ರಕಾಶತ್ವವಿಲ್ಲವಾದುದರಿಂದ ಅಜಡತ್ವವೂ ಇಲ್ಲವಷ್ಟೆ? ಜ್ಞಾನವಾದರೆ ಅಜಡವಾದುದರಿಂದ ಸ್ವಯಂಪ್ರಕಾಶವಾಗಿಯೇ ಇರಬೇಕು.

**ಮತ್ತೊಂದು ವ್ಯತಿರೇಕ್ಯನುಮಾನವು**—ಜ್ಞಾನವು ಜ್ಞಾನತ್ವವೆಂಬ ಧರ್ಮವನ್ನು ಪಡೆದಿರುವುದರಿಂದ ಸ್ವಯಂಪ್ರಕಾಶತ್ವವನ್ನೂ ಪಡೆದಿರಬೇಕು. ಯಾವುದು ಸ್ವಯಂಪ್ರಕಾಶತ್ವವನ್ನು ಪಡೆದಿಲ್ಲವೋ ಅದು ಜ್ಞಾನತ್ವವೆಂಬ ಧರ್ಮವನ್ನೂ ಪಡೆವುದಿಲ್ಲ. ಪ್ರಕೃತಿ, ಕಾಲ, ಇವುಗಳಿಗೆ ಸ್ವಯಂಪ್ರಕಾಶತ್ವವಿಲ್ಲವಾದುದರಿಂದ ಜ್ಞಾನತ್ವವೂ ಇಲ್ಲವಷ್ಟೆ? ಜ್ಞಾನವಾದರೆ ಜ್ಞಾನತ್ವವನ್ನು ಪಡೆದಿರುವುದರಿಂದ ಸ್ವಯಂಪ್ರಕಾಶತ್ವವನ್ನೂ ಪಡೆದೇ ಇರಬೇಕು.

## ೮೭೨. ಅರ್ಥಾಪತ್ತ್ಯಾ ಜ್ಞಾನಸ್ಯ ಸ್ವಯಂಪ್ರಕಾಶತ್ವಸಮರ್ಥನಂ

"ಅರ್ಥಾಪತ್ತೇಶ್ಚ" ಎಂಬುದು ನಾಲ್ಕನೆಯ ಹೇತುವಾಗಿರುವುದು. ನೈಯಾಯಿಕರು ಹೇಳುವ ಮಾನಸಪ್ರತ್ಯಕ್ಷಗೋಚರತ್ವವು ಜ್ಞಾನಕ್ಕೆ ಸಂಭವಿಸುವುದಿಲ್ಲವೆಂದು ಹಿಂದೆಯೇ ತೋರಿಸಿರುವೆವಾದುದರಿಂದ ಪ್ರತ್ಯಕ್ಷಜ್ಞಾನವಿಷಯತ್ವವನ್ನು ಜ್ಞಾನಕ್ಕೆ ಅಂಗೀಕರಿಸಲಾಗುವುದಿಲ್ಲವಾದಪ್ರಯುಕ್ತ ಸ್ವಯಂಪ್ರಕಾಶತ್ವವನ್ನೇ ಅಂಗೀಕರಿಸಿ ಜ್ಞಾನವಿಷಯತ್ವವನ್ನು ಸಮರ್ಥನೆಮಾಡಬೇಕಾದಕಾರಣ ಜ್ಞಾನಕ್ಕೆ ಸ್ವಯಂಪ್ರಕಾಶತ್ವವು ಸಿದ್ಧವಾಗುವುದು.

ಮತ್ತು ಜ್ಞಾನಕ್ಕೆ ಸ್ವಯಂಪ್ರಕಾಶತ್ವವನ್ನು ಅಂಗೀಕರಿಸದಿದ್ದರೆ ಜ್ಞಾನಸ ವ್ಯವಹಾರಕಾರಣತ್ವವೇ ಜ್ಞಾನಕ್ಕೆ ದುರ್ಲಭವಾಗುವುದು. ಹೇಗೆಂದರೆ ವ್ಯವಹ ರ್ತವ್ಯವಾದ ಪದಾರ್ಥದ ಜ್ಞಾನವು ಮೊದಲು ಉಂಟಾದರಲ್ಲದೆ ವ್ಯವಹಾರವು ಸಂಭವಿಸಲಾರದು. ಜ್ಞಾನವೆಂಬ ವ್ಯವಹರ್ತವ್ಯಪದಾರ್ಥದ ಜ್ಞಾನವು ನಮಗೆ ಉಂಟಾದರಲ್ಲದೆ ಜ್ಞಾನವ್ಯವಹಾರವನ್ನು ನಾವು ಮಾಡಲಾರೆವು. ಜ್ಞಾನವು ಸ್ವೋತ್ಪತ್ತಿಕಾಲದಲ್ಲಿ ಜ್ಞಾನಾಂತರಕ್ಕೆ ಗೋಚರವಲ್ಲವೆಂಬುದನ್ನೂ ಹಿಂದೆಯೇ ತೋರಿಸಿರುವೆವು. ಹೀಗೆ ಜ್ಞಾನಕ್ಕೆ ಜ್ಞಾನಾಂತರಗೋಚರತ್ವವೂ ಇಲ್ಲದೆ, ಸ್ವವಿಷ ಯಕತ್ವವೆಂಬಸ್ವಯಂಪ್ರಕಾಶತ್ವವೂ ಇಲ್ಲದೆಹೋದರೆ ಜ್ಞಾನವು ಯಾವಜ್ಞಾನಕ್ಕೂ ಗೋಚರವೇ ಆಗಲಿಲ್ಲವಾದಪ್ರಯುಕ್ತ ವ್ಯವಹರ್ತವ್ಯವಾದ ಜ್ಞಾನದ ಜ್ಞಾನವೇ ಉಂಟಾಗಲಿಲ್ಲವಾಗಿ ಜ್ಞಾನವ್ಯವಹಾರಕಾರಣತ್ವವೇ ಇದಕ್ಕೆ ದುರ್ಲಭವಾಗುವು ದಾದುದರಿಂದ ಸ್ವಯಂಪ್ರಕಾಶತ್ವವನ್ನು ಅಂಗೀಕರಿಸಿಯೇ ಜ್ಞಾನವ್ಯವಹಾರಕಾ ರಣತ್ವವನ್ನು ಜ್ಞಾನಕ್ಕೆ ನಿರ್ವಹಿಸಬೇಕು. ಆದುದರಿಂದ ಇಂಥ ಅರ್ಥಾಪತ್ತಿಯಿಂ ದಲೂ ಸ್ವಯಂಪ್ರಕಾಶತ್ವವು ಸಿದ್ಧವಾಗುವುದು.

## ೮೭೩. ಯುಕ್ತಿತೋಽಪಿ ಜ್ಞಾನಸ್ಯ ಸ್ವಯಂಪ್ರಕಾಶತ್ವಸಮರ್ಥನಂ

"ಯುಕ್ತೇಶ್ಚ" ಎಂಬುದು ಐದನೆಯ ಹೇತುವಾಗಿರುವುದು. ಜ್ಞಾನವು ಸ್ವಯಂಪ್ರಕಾಶವೇ ಆಗಿರುವುದಲ್ಲದೆ ಪರಪ್ರಕಾಶ್ಯವಾಗಿಲ್ಲ. ಹಾಗೆ ಪರಪ್ರಕಾಶ್ಯ ವಾಗಿರುವುದಾದರೆ ಘಟಾದಿಪದಾರ್ಥಗಳಂತೆ ಜ್ಞಾನಕ್ಕೂ ವಿಷಯಪ್ರಕಾಶಕತ್ವವಿಲ್ಲದೆ ಹೋಗಬೇಕಾಗುವುದು. ಘಟಾದಿಗಳು ಸ್ವಪ್ರಕಾಶಗಳಲ್ಲದೆ ಪರಪ್ರಕಾಶ್ಯಗಳಾಗಿ ರುವುದರಿಂದಲೇ ಅಲ್ಲವೆ ತಾವು ಮತ್ತೊಂದು ವಿಷಯವನ್ನು ಪ್ರಕಾಶಪಡಿಸಲಾರವು. ಜ್ಞಾನವೂ ಹಾಗೆ ಪರಪ್ರಕಾಶ್ಯವಾಗುವುದಾದರೆ ವಿಷಯಪ್ರಕಾಶಕತ್ವವೆಂಬ ತನ್ನ ಸ್ವಭಾವವನ್ನೇ ಕಳೆದುಕೊಳ್ಳಬೇಕಾಗಿ ಬರುವುದಾದುದರಿಂದ ಜ್ಞಾನಕ್ಕೆ ಸ್ವಯಂ ಪ್ರಕಾಶತ್ವವನ್ನೇ ಹೇಳಬೇಕು.

## ೮೭೪. ಆಗಮಾದಪಿ ಜ್ಞಾನಸ್ಯ ಸ್ವಯಂಪ್ರಕಾಶತ್ವಸಮರ್ಥನಂ

"ವಚನಾಚ್ಚ" ಎಂಬುದು ಆರನೆಯ ಹೇತುವಾಗಿರುವುದು. "ಅತ್ರಾ ಯಂ ಪುರುಷಃ ಸ್ವಯಂಜ್ಯೋತಿರ್ಭವತಿ, ಆತ್ಮೈವಾಸ್ಯ ಜ್ಯೋತಿಃ, ಸ್ವೇನ ಜ್ಯೋತಿಷಾಽಽಸ್ತೇ, ಆತ್ಮಸಂವೇದ್ಯಂ ತದ್ ಜ್ಞಾನಂ ಬ್ರಹ್ಮಸಂಜ್ಞಿತಂ" ಎಂಬ ಇವೇ ಮೊದಲಾದ ಸಾವಿರಾರು ಶ್ರುತಿಸ್ಮೃತಿವಚನಗಳಿಂದಲೂ ಜ್ಞಾನಕ್ಕೆ ಸ್ವಯಂಪ್ರಕಾಶತ್ವವು ಸಿದ್ಧಿಸುವುದು. ಈ ವಾಕ್ಯಗಳೊಳಗೆ "ಈ ಶರೀರದಲ್ಲಿರುವ

ಜೀವಾತ್ಮನೆಂಬ ಪುರುಷನು ಸ್ವಯಂಪ್ರಕಾಶನಾಗಿರುವನು" ಎಂದು ಮೊದಲ ನೆಯ ವಾಕ್ಯದ ಅರ್ಥವು. "ತಾನೇ ತನಗೆ ಪ್ರಕಾಶಕನಾಗಿರುವನು" ಎಂಬುದು ಎರಡನೆಯ ವಾಕ್ಯದ ಅರ್ಥವಾಗಿರುವುದು. "ತನ್ನ ಪ್ರಕಾಶದಿಂದಲೇ ಎಂದರೆ ಅನನ್ಯಾಧೀನವಾದ ಪ್ರಕಾಶದಿಂದಲೇ ತಾನು ಪ್ರಕಾಶಮಾನನಾಗಿ ಇರುವನು" ಎಂದುಬು ಮೂರನೆಯ ವಾಕ್ಯದ ಅರ್ಥವಾಗಿರುವುದು. "ವ್ಯಾಪಕವಾದ ಜ್ಞಾನ ಸವುಳ್ಳುದಾದುದರಿಂದ ಬ್ರಹ್ಮವೆಂಬ ಸಂಜ್ಞೆಯನ್ನು ಪಡೆದಿರುವ ಜ್ಞಾನಸ್ವರೂಪ ವಾದ ಜೀವತತ್ತ್ವವು ಆತ್ಮಸಂವೇದ್ಯವಾಗಿರುವುದು ಎಂದರೆ ಸ್ವಯಂಪ್ರಕಾಶವಾ ಗಿರುವುದು" ಎಂಬುದು ನಾಲ್ಕನೆಯ ವಾಕ್ಯದ ಅರ್ಥವಾಗಿರುವುದು.

ಯದ್ಯಪಿ— ಈ ವಚನಗಳೆಲ್ಲವೂ ಜ್ಞಾನಶಬ್ದವಾಚ್ಯವಾದ ಜೀವಾತ್ಮಸ್ವರೂ ಪದಲ್ಲಿ ಸ್ವಯಂಪ್ರಕಾಶತ್ವವೆಂಬ ಧರ್ಮವನ್ನು ಬೋಧಿಸುತ್ತಿರುವುವಲ್ಲದೆ ಧರ್ಮಭೂತ ಜ್ಞಾನದಲ್ಲಿ ಸ್ವಯಂಪ್ರಕಾಶತ್ವವನ್ನು ಬೋಧಿಸುವುವುಗಳಾಗಿಲ್ಲ. ಆದರೂ ಜೀವಾ ತ್ಮಸ್ವರೂಪದಲ್ಲಿ ಸ್ವಯಂಪ್ರಕಾಶತ್ವವನ್ನು ಬೋಧಿಸುವ ಈ ವಚನಗಳಿಂದಲೇ ಜ್ಞಾನದಲ್ಲಿಯೂ ಸ್ವಯಂಪ್ರಕಾಶತ್ವವು ತಡೆಯಿಲ್ಲದೆ ಸಂಭವಿಸುವುದು. ಜ್ಞಾನತ್ವ ವೆಂಬ ಧರ್ಮವು ಜೀವಾತ್ಮಸ್ವರೂಪದಲ್ಲಿಯೂ ಜ್ಞಾನದಲ್ಲಿಯೂ ಉಭಯತ್ರ ತುಲ್ಯ ವಾಗಿರುವುದಲ್ಲವೆ? ಮತ್ತು ಜ್ಞಾನಕ್ಕೆ ಜ್ಞಾನಾಂತರವಿಷಯತ್ವವನ್ನು ಹೇಳಿ ಗೌರ ವದೋಷವನ್ನು ಹೊತ್ತುಕೊಳ್ಳುವುದಕ್ಕಿಂತಲೂ ಸ್ವಪ್ರಕಾಶತ್ವವನ್ನು ಅಂಗೀಕರಿ ಸುವುದಾದರೆ ಲಾಘವವೂ ಇರುವುದಲ್ಲವೆ?

## ೮೭೫ ಧರ್ಮಿಸ್ವರೂಪಸಾದೃಶ್ಯಾದಪಿ ಧರ್ಮಭೂತಜ್ಞಾನಸ್ಯ ಸ್ವಯಂಪ್ರಕಾಶತ್ವಸಿದ್ಧಿಃ

ಮತ್ತು— ಜೀವಾತ್ಮಸ್ವರೂಪಕ್ಕೆ ಮಣಿ, ದ್ಯುಮಣಿ, ದೀಪ, ದೃಷ್ಟಾಂತಗ ಳನ್ನೂ, ಆತ್ಮನ ಧರ್ಮಭೂತಜ್ಞಾನಕ್ಕೆ ಮಣಿ-ದ್ಯುಮಣಿ-ದೀಪಗಳ ಪ್ರಭಾದೃಷ್ಟಾಂ ತವನ್ನೂ ತೋರಿಸುವುದು ಶಾಸ್ತ್ರದಲ್ಲಿ ವಾಡಿಕೆಯಾಗಿರುವುದು.—

"ಯಥಾ ಪ್ರಕಾಶಯತ್ಯೇಕಃ ಕೃತ್ಸ್ನಂ ಲೋಕಮಿಮಂ ರವಿಃ ।
ಕ್ಷೇತ್ರಂ ಕ್ಷೇತ್ರೀ ತಥಾ ಕೃತ್ಸ್ನಂ ಪ್ರಕಾಶಯತಿ ಭಾರತ ॥"

ಇತ್ಯಾದಿವಚನಾರ್ಥಗಳನ್ನು ತಿಳಿದವರಿಗೆ ಈ ವಿಷಯವು ಹೊಸದಲ್ಲ. "ಸೂರ್ಯನೆಂಬುವನು ತಾನು ಒಬ್ಬನೇ ಆಗಿದ್ದರೂ ಹೇಗಾದರೆ ತನ್ನನ್ನು ಪ್ರಕಾಶ ಪಡಿಸುವುದುಮಾತ್ರವಲ್ಲದೆ ಇಷ್ಟೊಂದು ದೊಡ್ಡದಾದ ಲೋಕವನ್ನೂ ತನ್ನ ಕಿರಣ ಗಳಿಂದ ಪ್ರಕಾಶಪಡಿಸುತ್ತಿರುವನೋ ಅದರಂತೆ ಕ್ಷೇತ್ರಶಬ್ದವಾಚ್ಯವಾದ ಶರೀರ

ದಲ್ಲಿರುವ ಕ್ಷೇತ್ರಿಯೆನಿಸಿಕೊಂಡ ಆತ್ಮನೂ ಸಹ ಈ ಶರೀರದಲ್ಲಿ ತಾನು ಒಬ್ಬನೇ ಆಗಿದ್ದರೂ ತನ್ನ ಸ್ವರೂಪವನ್ನು ತಾನೇ ಪ್ರಕಾಶಪಡಿಸಿಕೊಳ್ಳುವುದುಮಾತ್ರವೇ ಅಲ್ಲದೆ ಶರೀರದ ಯಾವತ್ಪ್ರದೇಶದ ವಿಷಯಗಳನ್ನೂ ತನ್ನ ಧರ್ಮಭೂತಜ್ಞಾನದಿಂದ ಪ್ರಕಾಶಪಡಿಸುತ್ತಿರುವನು." ಎಂಬುದು ಉಕ್ತಶ್ಲೋಕದ ಅರ್ಥವಾಗಿರುವುದು.

ಇದರಿಂದ ತಿಳಿದುಬರುವುದೇನೆಂದರೆ—ಜ್ಞಾನಪದವಾಚ್ಯನಾದ ಜೀವನಲ್ಲಿ ಸ್ವಯಂಪ್ರಕಾಶತ್ವವನ್ನು ಬೋಧಿಸಿರುವುದರಿಂದ ಎಲ್ಲೆಲ್ಲಿ ಜ್ಞಾನಪದವಾಚ್ಯತ್ವವುಂಟೋ ಅಲ್ಲಲ್ಲಿ ಸ್ವಯಂಪ್ರಕಾಶತ್ವವೂ ಉಂಟೆಂದು ಜ್ಞಾನಪದವಾಚ್ಯತ್ವಕ್ಕೂ ಸ್ವಯಂಪ್ರಕಾಶತ್ವಕ್ಕೂ ವ್ಯಾಪ್ಯವ್ಯಾಪಕಭಾವವು ಅವಗತವಾಗುವಕಾರಣ ಆತ್ಮನನ್ನೇ ದೃಷ್ಟಾಂತಪಡಿಸಿಕೊಂಡು ಜ್ಞಾನಪದವಾಚ್ಯತ್ವವೆಂಬ ಹೇತುವಿನಿಂದ ಜ್ಞಾನದಲ್ಲಿ ಸ್ವಯಂಪ್ರಕಾಶತ್ವವನ್ನು ಸಾಧಿಸುವೆವಾದರೆ ಪೂರ್ವೋಕ್ತಗಳಾದ ಸಂಭವಲಾಘವಗಳೂ ಈ ಅನುಮಾನಕ್ಕೆ ಉಪಷ್ಟಂಭಕಗಳಾಗಿರುವುದರಿಂದ ಜ್ಞಾನಕ್ಕೆ ಸ್ವಯಂಪ್ರಕಾಶತ್ವವು ಸಿದ್ಧಿಸದೆ ಹೋಗಲಾರದು. ಜ್ಞಾನಸ್ವರೂಪನಾದ ಆತ್ಮನಂತೆ ಜ್ಞಾನಕ್ಕೂ ಸ್ವಯಂಪ್ರಕಾಶತ್ವವನ್ನು ಅಂಗೀಕರಿಸಿದರಲ್ಲವೆ ಜ್ಞಾನಕ್ಕೂ ಆತ್ಮನಿಗೂ ಸಜಾತೀಯತ್ವವನ್ನು ತೋರಿಸುವ ವಚನಗಳಿಗೆ ಸಾಂಗತ್ಯವುಂಟಾದೀತು?

ಮತ್ತು ಜ್ಞಾನಕ್ಕೆ ಸ್ವಯಂಪ್ರಕಾಶತ್ವವನ್ನು ಅಂಗೀಕರಿಸುವಲ್ಲಿ ಯಾವುದಾದರೊಂದು ಅನಿಷ್ಟವಾದರೂ ಪ್ರಸಂಗಿಸುವುದಾಗಿದ್ದರೆ ಸ್ವಯಂಪ್ರಕಾಶತ್ವವನ್ನು ಬಿಟ್ಟುಬಿಡಬಹುದಾಗಿದ್ದಿತು. ಅದೂ ಇಲ್ಲ. ಆದಕಾರಣ ಜ್ಞಾನಕ್ಕೆ ಸ್ವಯಂಪ್ರಕಾಶತ್ವವು ಅಬಾಧಿತವಾಗಿರುವುದು.

## ೮೭೬. ಮೀಮಾಂಸಕೋಕ್ತಪ್ರತ್ಯನುಮಾನೈರ್ಜ್ಞಾನಸ್ಯ ಸ್ವಯಂಪ್ರಕಾಶತ್ವಾಭಾವಶಂಕಾ.

"ಪೂಜ್ಯರೆ! ಮೀಮಾಂಸಕರು ಹೇಳುವ ಪ್ರತ್ಯನುಮಾನಗಳಿಂದ ಜ್ಞಾನಕ್ಕೆ ಪರಪ್ರಕಾಶ್ಯತ್ವವೂ ಜಡತ್ವವೂ ಪ್ರಸಂಗಿಸುತ್ತಿರುವಾಗ ಸ್ವಯಂಪ್ರಕಾಶತ್ವವನ್ನೂ ಅಜಡತ್ವವನ್ನೂ ಹೇಗೆ ಒಪ್ಪಲಾದೀತು? ಅವರ ಪ್ರತ್ಯನುಮಾನಗಳು ಈ ರೀತಿಯಲ್ಲಿ ಹೊರಟಿರುವುವಲ್ಲವೆ?

೧. ಶಬ್ದಜನ್ಯಜ್ಞಾನವಿಷಯತ್ವವೆಂಬ ವ್ಯವಹಾರ್ಯತ್ವವು ಎಲ್ಲೆಲ್ಲಿ ಇರುವುದೋ ಅಲ್ಲಲ್ಲಿ ಪರಪ್ರಕಾಶ್ಯತ್ವವೂ ಜಡತ್ವವೂ ಇರುವುವೆಂಬುದನ್ನು ಘಟಾದಿ ಪದಾರ್ಥಗಳಲ್ಲಿ ನಾವು ಕಂಡಿರುವೆವು. ಜ್ಞಾನದಲ್ಲಿಯೂ ಉಕ್ತವ್ಯವಹಾರ್ಯತ್ವ

ಇರುವುದರಿಂದ ಪರಪ್ರಕಾಶ್ಯತ್ವವನ್ನೂ ಜಡತ್ವವನ್ನೂ ಜ್ಞಾನಕ್ಕೆ ಒಪ್ಪಬೇಕಾದ ಪ್ರಯುಕ್ತ ಸ್ವಯಂಪ್ರಕಾಶತ್ವವೂ ಅಜಡತ್ವವೂ ಜ್ಞಾನಕ್ಕೆ ಸಿದ್ಧಿಸಲಾರವು.

೨. ಕಾಲಸಂಬಂಧಿತ್ವವೆಂಬ ವಸ್ತುತ್ವವು ಎಲ್ಲೆಲ್ಲಿ ಇರುವುದೋ ಅಲ್ಲಲ್ಲಿ ಪರಪ್ರಕಾಶ್ಯತ್ವವೂ ಜಡತ್ವವೂ ಇರುವುವೆಂಬುದನ್ನು ಘಟಾದಿಪದಾರ್ಥಗಳಲ್ಲಿ ನಾವು ಕಂಡಿರುವೆವು. ಜ್ಞಾನದಲ್ಲಿಯೂ ಉಕ್ತವಸ್ತುತ್ವವಿರುವುದರಿಂದ ಪರಪ್ರಕಾಶ್ಯತ್ವವನ್ನೂ ಜಡತ್ವವನ್ನೂ ಜ್ಞಾನಕ್ಕೆ ಒಪ್ಪಬೇಕಾದಪ್ರಯುಕ್ತ ಸ್ವಯಂಪ್ರಕಾಶತ್ವವೂ ಅಜಡತ್ವವೂ ಜ್ಞಾನಕ್ಕೆ ಸಿದ್ಧಿಸಲಾರವು.

೩. ಪ್ರಮಾಣಗಮ್ಯತ್ವವೆಂಬ ಪ್ರಮೇಯತ್ವವು ಎಲ್ಲೆಲ್ಲಿ ಇರುವುದೋ ಅಲ್ಲಲ್ಲಿ ಪರಪ್ರಕಾಶ್ಯತ್ವವೂ ಜಡತ್ವವೂ ಇರುವುವೆಂಬುದನ್ನು ಘಟಾದಿಪದಾರ್ಥಗಳಲ್ಲಿ ನಾವು ಕಂಡಿರುವೆವು. ಜ್ಞಾನದಲ್ಲಿಯೂ ಉಕ್ತಪ್ರಮೇಯತ್ವವಿರುವುದರಿಂದ ಪರಪ್ರಕಾಶ್ಯತ್ವವನ್ನೂ ಜಡತ್ವವನ್ನೂ ಜ್ಞಾನಕ್ಕೆ ಒಪ್ಪಬೇಕಾದಪ್ರಯುಕ್ತ ಸ್ವಯಂಪ್ರಕಾಶತ್ವವೂ ಅಜಡತ್ವವೂ ಜ್ಞಾನಕ್ಕೆ ಸಿದ್ಧಿಸಲಾರವು.

೪. ಶಬ್ದಪ್ರತಿಪಾದ್ಯತ್ವವೆಂಬ ವಾಚ್ಯತ್ವವು ಎಲ್ಲೆಲ್ಲಿ ಇರುವುದೋ ಅಲ್ಲಲ್ಲಿ ಪರಪ್ರಕಾಶ್ಯತ್ವವೂ ಜಡತ್ವವೂ ಇರುವುವೆಂಬುದನ್ನು ಘಟಾದಿಪದಾರ್ಥಗಳಲ್ಲಿ ನಾವು ಕಂಡಿರುವೆವು. ಜ್ಞಾನದಲ್ಲಿಯೂ ಉಕ್ತವಾಚ್ಯತ್ವವಿರುವುದರಿಂದ ಪರಪ್ರಕಾಶ್ಯತ್ವವನ್ನೂ ಜಡತ್ವವನ್ನೂ ಜ್ಞಾನಕ್ಕೆ ಒಪ್ಪಬೇಕಾದಪ್ರಯುಕ್ತ ಸ್ವಯಂಪ್ರಕಾಶತ್ವವೂ ಅಜಡತ್ವವೂ ಜ್ಞಾನಕ್ಕೆ ಸಿದ್ಧಿಸಲಾರವು.

೫. ಕ್ರಿಯಾಶಬ್ದವಾಚ್ಯತ್ವವೆಂಬ ಕ್ರಿಯಾತ್ವವು ಎಲ್ಲೆಲ್ಲಿ ಇರುವುದೋ ಅಲ್ಲಲ್ಲಿ ಪರಪ್ರಕಾಶ್ಯತ್ವವೂ ಜಡತ್ವವೂ ಇರುವುವೆಂಬುದನ್ನು ಗಮನಾದಿಕ್ರಿಯೆಗಳಲ್ಲಿ ನಾವು ಕಂಡಿರುವೆವು. ಜ್ಞಾನದಲ್ಲಿಯೂ ಉಕ್ತಕ್ರಿಯಾತ್ವವಿರುವುದರಿಂದ ಪರಪ್ರಕಾಶ್ಯತ್ವವನ್ನೂ ಜಡತ್ವವನ್ನೂ ಜ್ಞಾನಕ್ಕೆ ಒಪ್ಪಬೇಕಾದಪ್ರಯುಕ್ತ ಸ್ವಯಂಪ್ರಕಾಶತ್ವವೂ ಅಜಡತ್ವವೂ ಜ್ಞಾನಕ್ಕೆ ಸಿದ್ಧಿಸಲಾರವು.

ಇಂಥ ಪ್ರತ್ಯನುಮಾನಗಳನ್ನು ಮೀಮಾಂಸಕರು ಉದ್ಘೋಷಿಸುತ್ತಿರುವಾಗ ಜ್ಞಾನಕ್ಕೆ ಸ್ವಯಂಪ್ರಕಾಶತ್ವವನ್ನೂ ಅಜಡತ್ವವನ್ನೂ ಹೇಗೆ ಒಪ್ಪಲಾದೀತು?

## ೮೭೭. ಉಕ್ತಪ್ರತ್ಯನುಮಾನನಿರಾಕರಣಪೂರ್ವಕಂ ಜ್ಞಾನಸ್ಯ ಸ್ವಯಂಪ್ರಕಾಶತ್ವಸ್ಥಿರೀಕರಣಂ.

ಇಂಥ ಆಶಂಕೆ ಸಂಗತವಲ್ಲ. ಏತಕ್ಕೆಂದರೆ—ಈ ಪ್ರತ್ಯನುಮಾನಗಳು ಕೇವಲ ಅನುಮಾನಾಭಾಸಗಳಾಗಿರುವುವಲ್ಲದೆ ಸಮಂಜಸಗಳಾದ ಅನುಮಾನ

ಪ್ರಮಾಣಗಳಲ್ಲವಾದುದರಿಂದ ಜ್ಞಾನಕ್ಕೆ ಪರಪ್ರಕಾಶ್ಯತ್ವವನ್ನೂ ಜಡತ್ವವನ್ನೂ ಸಾಧಿಸಲಾರವು. ಹೇಗೆಂದರೆ—

ಈಗ ಹೇಳಿದ ಅನುಮಾನಗಳಿಂದ ಜ್ಞಾನದಲ್ಲಿ ನೀವು ಸಾಧಿಸಬಹುದಾದ ಪರಪ್ರಕಾಶ್ಯತ್ವದ ಸ್ವರೂಪವೆಂಥದು? ಜ್ಞಾನವಿಷಯತ್ವಮಾತ್ರವೋ ? ಅಥವಾ ಸ್ವವ್ಯತಿರಿಕ್ತಜ್ಞಾನವಿಷಯತ್ವವೋ ? ಅಥವಾ ಸ್ವಾಶ್ರಯದಲ್ಲಿ ಸ್ವಾವ್ಯವಹಿತೋತ್ತರಕ್ಷಣದಲ್ಲಿ ಉಂಟಾಗುವ ಜ್ಞಾನವಿಷಯತ್ವವೋ ?

ಪ್ರಥಮದ್ವಿತೀಯಪಕ್ಷಗಳಲ್ಲಿ ಸಿದ್ಧಸಾಧನವೆಂಬ ದೋಷವು ಪ್ರಸಂಗಿಸುವುದು. ಸರ್ವಜ್ಞರಾದ ನಿತ್ಯಮುಕ್ತೇಶ್ವರರು ನಮ್ಮ ಜ್ಞಾನವನ್ನು ಸಾಕ್ಷಾತ್ಕರಿಸುತ್ತಲೇ ಇರುವರಾದುದರಿಂದ ತದೀಯಜ್ಞಾನವಿಷಯತ್ವವು ನಮ್ಮ ಜ್ಞಾನದಲ್ಲಿ ಸಿದ್ಧವಾಗಿಯೇ ಇರುವಕಾರಣ ಪುನಃ ಅನುಮಾನದಿಂದ ಇದನ್ನು ಸಾಧಿಸಬೇಕಾದುದಿಲ್ಲವಷ್ಟೆ ?

ಮೂರನೆಯ ಪಕ್ಷವನ್ನು ಹೇಳುವುದಾದರೆ **"ಇದು ಘಟವು, ಇದು ಪಟವು"** ಎಂಬುವೇ ಮೊದಲಾದ ಜ್ಞಾನಗಳುಂಟಾದ ಅವ್ಯವಹಿತೋತ್ತರಕ್ಷಣದಲ್ಲಿ ಅಂಥ ಜ್ಞಾನಗಳನ್ನು ಸಾಕ್ಷಾತ್ಕರಿಸುವ ಮತ್ತೊಂದು ಜ್ಞಾನವೂ ಪ್ರತ್ಯಕ್ಷದಲ್ಲಿ ಕಾಣಬರುವುದಿಲ್ಲವಾದುದರಿಂದ ಈ ಮೂರನೆಯ ಪಕ್ಷವನ್ನು ಯೋಗ್ಯಾನುಪಲಂಭವೆಂಬ ದೋಷವು ಕಬಳೀಕರಿಸುವುದು.

### ೮೭೮. ಪಂಚಮಾನುಮಾನೇ ಹೇತೋಃ ಸ್ವರೂಪಾಸಿದ್ಧಿಃ.

ನೀವು ಹೇಳಿದ ಪ್ರತ್ಯನುಮಾನಗಳೊಳಗೆ ಐದನೆಯ ಪ್ರತ್ಯನುಮಾನದಲ್ಲಿ ಗಮನಾದಿಕ್ರಿಯೆಗಳನ್ನು ದೃಷ್ಟಾಂತಗಳಾಗಿ ತೋರಿಸಿ ಕ್ರಿಯಾತ್ವವೆಂಬ ಹೇತುವಿನಿಂದ ಜ್ಞಾನಕ್ಕೆ ಪರಪ್ರಕಾಶ್ಯತ್ವವನ್ನು ಸಾಧಿಸಿದುದು ಸಂಗತವಲ್ಲ. ಏತಕ್ಕೆಂದರೆ ಜ್ಞಾನದಲ್ಲಿ ಕ್ರಿಯಾತ್ವವೆಂಬ ಹೇತುವೇ ಅಸಿದ್ಧವಾಗಿರುವುದು. ಗಮನಾದಿವ್ಯಾಪಾರಗಳು ಸ್ಪಂದರೂಪಗಳಾಗಿ ಎಂದರೆ ಚಲನರೂಪಗಳಾಗಿರುವುದರಿಂದ ಸ್ಪಂದತ್ವರೂಪವಾದ ಕ್ರಿಯಾತ್ವವು ಅವುಗಳಲ್ಲಿ ಸಂಭವಿಸಬಹುದಾದರೂ ಜ್ಞಾನವು ಸ್ಪಂದರೂಪವಲ್ಲವಾದುದರಿಂದ ಸ್ಪಂದತ್ವವೆಂಬ ಕ್ರಿಯಾತ್ವವು ಇದರಲ್ಲಿ ಅಸಿದ್ಧವಷ್ಟೆ ?

### ೮೭೯. ತೃತೀಯಪಕ್ಷೇ ಪ್ರತ್ಯನುಮಾನಾನಾಂ ಪಂಚಾನಾಮಪಿ ಘಟಾದೌ ವ್ಯಭಿಚರಿತತ್ವಂ.

ಮತ್ತು—ಸ್ವಾಶ್ರಯದಲ್ಲಿ ಸ್ವಾವ್ಯವಹಿತೋತ್ತರಕ್ಷಣದಲ್ಲಿ ಉಂಟಾಗುವ ಜ್ಞಾನವಿಷಯತ್ವವೆಂಬ ಪರಪ್ರಕಾಶ್ಯತ್ವವೇ ಸಾಧ್ಯವೆಂದು ಹೇಳುವ ಮೂರನೆಯ

ಪಕ್ಷದಲ್ಲಿ—ವ್ಯವಹಾರ್ಯತ್ವವೇ ಮೊದಲಾದ ಎಲ್ಲಾ ಹೇತುಗಳೂ ಘಟಾದಿಪದಾರ್ಥಗಳಲ್ಲಿ ಸಾಧ್ಯವನ್ನು ಬಿಟ್ಟಿರುವುವಾದುದರಿಂದ ವ್ಯಭಿಚರಿತಗಳೆನಿಸಿಕೊಳ್ಳುವುವು; ಘಟಾದಿಪದಾರ್ಥಗಳಲ್ಲಿ ಉಕ್ತಹೇತುವಿದ್ದರೂ ಉಕ್ತಸಾಧ್ಯವಿಲ್ಲ. **"ಇದು ಘಟವು ಇದು ಪಟವು"** ಎಂಬ ಜ್ಞಾನವಿಷಯತ್ವವು. ಘಟಾದಿಪದಾರ್ಥಗಳಲ್ಲಿ ಇರುವುದಲ್ಲದೆ ಅಂಥ ಜ್ಞಾನದ ಅವ್ಯವಹಿತೋತ್ತರಕ್ಷಣದಲ್ಲಿ ಉಂಟಾಗುವ ಜ್ಞಾನವಿಷಯತ್ವವು ಅವುಗಳಲ್ಲಿ ಇಲ್ಲವಷ್ಟೆ ?

## ೮೮೦. ಜ್ಞಾನಸ್ಯ ಜ್ಞಾನಾಂತರಕರ್ಮತ್ವಾಭಾವೇ ವಸ್ತುತ್ವರೂಪ ಸತ್ತ್ವಾಭಾವಾಶಂಕಾತತ್ಪರಿಹಾರೌ.

"ಪೂಜ್ಯರೆ! ಜ್ಞಾನಕ್ಕೆ ಜ್ಞಾನಕರ್ಮತ್ವವೆಂಬ ಎಂದರೆ ಸ್ವಭಿನ್ನಜ್ಞಾನವಿಷಯತ್ವವೆಂಬ ಪರಪ್ರಕಾಶ್ಯತ್ವವನ್ನು ಒಪ್ಪದಿದ್ದರೆ ಅಂಥ ಜ್ಞಾನಕ್ಕೆ ಸತ್ತೆಯೇ ದುರ್ಲಭವಾಗುವುದಲ್ಲವೆ? ಹೇಗೆಂದರೆ—ಎಲ್ಲಿ ಕಾಲಸಂಬಂಧಿತ್ವವೆಂಬ ವಸ್ತುತ್ವವು ಎಂದರೆ ಸತ್ತೆ ಇರುವುದೋ, ಅಲ್ಲಿ ಸ್ವಭಿನ್ನಜ್ಞಾನಕರ್ಮತ್ವವೆಂಬ ಪರಪ್ರಕಾಶ್ಯತ್ವರೂಪವಾದ ವ್ಯಾಪಕಧರ್ಮವಿರುವುದನ್ನು ಘಟಾದಿಪದಾರ್ಥಗಳಲ್ಲಿ ನಾವು ನೋಡಿರುವೆವಾದಪ್ರಯುಕ್ತ ಜ್ಞಾನದಲ್ಲಿ ಪರಪ್ರಕಾಶ್ಯತ್ವವೆಂಬ ವ್ಯಾಪಕಧರ್ಮವನ್ನೇ ಒಪ್ಪದಿದ್ದರೆ ಕಾಲಸಂಬಂಧಿತ್ವರೂಪವಾದ ಸತ್ತೆಯೆಂಬ ವ್ಯಾಪ್ಯಧರ್ಮವೂ ಬರಲಾರದಾಗಿ ಜ್ಞಾನವೆಂಬ ಪದಾರ್ಥವು ಸಿದ್ಧಿಸುವ ಬಗೆ ಹೇಗೆ?"

ಇಂಥ ಆಶಂಕೆ ಸಂಗತವಲ್ಲ—ಏತಕ್ಕೆಂದರೆ—ಸ್ವಭಿನ್ನಜ್ಞಾನಗೋಚರತ್ವವೆಂಬ ಜ್ಞಾನಕರ್ಮತ್ವವಿಲ್ಲದಿರುವಾಗ ಪದಾರ್ಥಸಿದ್ಧಿಯೇ ಇಲ್ಲವೆಂದು ಹೇಳುವುದಾದರೆ ನಮ್ಮ ಜ್ಞಾನಕ್ಕೆ ಗೋಚರಗಳಾಗದೆಯೇ ಅಲ್ಲಲ್ಲಿ ಇರುವ ಲಕ್ಷೋಪಲಕ್ಷಪದಾರ್ಥಗಳು ಸಿದ್ಧಿಸುವ ಬಗೆ ಹೇಗೆ? ಅವುಗಳಿಗೆ ಕಾದಾಚಿತ್ಕವಾದ ಜ್ಞಾನವಿಷಯತ್ವವಿರುವುದರಿಂದ ಅವುಗಳ ಸಿದ್ಧಿಗೇನೂ ತಡೆಯಿಲ್ಲವೆಂದು ಹೇಳುವುದಾದರೆ ಭೂತಭಾವ್ಯನುಮಾನಗಳಲ್ಲಿಯೂ ಸ್ಮರಣೆಗಳಲ್ಲಿಯೂ ಕಾದಾಚಿತ್ಕಜ್ಞಾನವಿಷಯತ್ವವು ಜ್ಞಾನಕ್ಕೂ ಇರುವುದರಿಂದ ಜ್ಞಾನವೂ ಸಿದ್ಧಿಸಲು ತಡೆಯಿಲ್ಲ.

ಮತ್ತು—ಜ್ಞಾನವಿಷಯತ್ವವಿದ್ದರೇನೇ ಕಾಲಸಂಬಂಧಿತ್ವರೂಪವಾದ ಸತ್ತೆ ಇರುವುದೆಂದೂ, ಜ್ಞಾನವಿಷಯತ್ವವಿಲ್ಲದಿದ್ದರೆ ಸತ್ತೆಯೇ ಇಲ್ಲವೆಂದೂ ನಿಯಮವನ್ನು ಹೇಳಲಾಗುವುದಿಲ್ಲ. ಅಸ್ಮದಾದಿಜ್ಞಾನಗಳಿಗೆ ಗೋಚರಗಳಾಗದ ಅಂಕುರಾದ್ಯನೇಕಪದಾರ್ಥಗಳಲ್ಲಿ ಜ್ಞಾನವಿಷಯತ್ವವಿಲ್ಲದಿದ್ದರೂ ಕಾಲಸಂಬಂಧಿತ್ವವಿರುವುದಷ್ಟೆ?

## ೮೮೧. ಜ್ಞಾನಸ್ಯ ಸ್ವಕರ್ಮತ್ವಾಭ್ಯುಪಗಮೇಽಪಿ ಅಂಗುಳ್ಯಗ್ರ ಚೋದ್ಯಾನವಕಾಶಃ.

ಓಹೋ—ಜ್ಞಾನಕ್ಕೆ ಜ್ಞಾನಾಂತರಕರ್ಮತ್ವವನ್ನು ಒಪ್ಪದಿದ್ದರೆ ಸ್ವಕರ್ಮತ್ವವನ್ನು ಒಪ್ಪುವಿರೋ? ಹಾಗಾದರೆ ಕರ್ಮಕರ್ತೃತ್ವಗಳಿಗೆ ವಿರೋಧವಿರುವ್ರದರಿಂದ ಒಂದು ಪದಾರ್ಥದಲ್ಲಿ ಸಮಾವೇಶವು ಬರುವುದಿಲ್ಲವಾಗಿ ಅಂಗುಳ್ಯಗ್ರ ಚೋದ್ಯವು ಪುನಃ ತಲೆಯೆತ್ತುವುದಲ್ಲವೆ?

ಇಲ್ಲ—ಅಂಥ ಚೋದ್ಯವು ತಲೆಯೆತ್ತುವುದಕ್ಕೆ ಅವಕಾಶವಿಲ್ಲದಂತೆ ಹಿಂದೆಯೇ ಸಮಾಧಾನವನ್ನು ಹೇಳಿರುವೆವು. ಪ್ರಕಾರಾಂತರದಿಂದ ಇಲ್ಲಿಯೂ ಹೇಳುವೆವು. **"ಚೈತ್ರೋ ಗ್ರಾಮಂ ಗಚ್ಛತಿ"** ಎಂದರೆ ಚೈತ್ರನೆಂಬುವನು ಗ್ರಾಮವನ್ನು ಕುರಿತು ಹೋಗುತ್ತಾನೆ; ಎಂಬ ಸ್ಥಳದಲ್ಲಿ ಗಮನಭಿನ್ನವಾಗಿಯೂ ಗಮನಕ್ಕೆ ವಿಷಯವಾಗಿಯೂ ಇರುವ ಗ್ರಾಮವನ್ನು ಗಮನಕರ್ಮವೆಂದೂ, ಗಮನಕ್ಕೆ ಆಶ್ರಯನಾದ ಚೈತ್ರನನ್ನು ಗಮನಕರ್ತೃವೆಂದೂ, ವ್ಯವಹರಿಸುವೆವು. ಇದರಿಂದ ಸ್ವಭಿನ್ನತ್ವವಿಶಿಷ್ಟವಾದ ಸ್ವವಿಷಯತ್ವವು ಸ್ವಕರ್ಮತ್ವವೆಂದೂ, ಸ್ವಾಶ್ರಯತ್ವವು ಸ್ವಕರ್ತೃತ್ವವೆಂದೂ ಫಲಿತವಾಗುವುದು. ಜ್ಞಾನಕ್ಕೆ ಸ್ವಭಿನ್ನತ್ವವಿಶಿಷ್ಟವಾದ ಸ್ವವಿಷಯತ್ವವೆಂಬ ಸ್ವಕರ್ಮತ್ವವನ್ನಾಗಲಿ ಸ್ವಾಶ್ರಯತ್ವವೆಂಬ ಸ್ವಕರ್ತೃತ್ವವನ್ನಾಗಲಿ ನಾವು ಒಪ್ಪುವುದಿಲ್ಲವಾದುದರಿಂದ ಕರ್ತೃಕರ್ಮತ್ವವಿರೋಧದೋಷವು ನಮ್ಮ ಸಮೀಪಕ್ಕೇ ಬರಲಾರದಾದಪ್ರಯುಕ್ತ ಅಂಗುಳ್ಯಗ್ರಚೋದ್ಯವು ನಮ್ಮ ಮುಂದೆ ಹೇಗೆತಾನೆ ತಲೆಯೆತ್ತೀತು?

## ೮೮೨. ಜ್ಞಾನಸ್ಯ ಸ್ವಯಂಪ್ರಕಾಶತ್ವಾಭ್ಯುಪಗಮೇ ಜ್ಞಾನತದ್ವಿಷಯಯೋರಭೇದಾಪತ್ತ್ಯಾ ಬೌದ್ಧಮತೋತ್ಥಾನಪ್ರಸಂಗಃ.

ಪೂಜ್ಯರೆ! ಜ್ಞಾನಕ್ಕೆ ಸ್ವಯಂಪ್ರಕಾಶತ್ವವನ್ನು ಒಪ್ಪುವುದಾದರೆ ಜ್ಞಾನಕ್ಕೂ ಜ್ಞಾನವಿಷಯಕ್ಕೂ ಅಭೇದಾಪತ್ತಿಯೆಂಬ ದೋಷವು ಪ್ರಸಂಗಿಸುವುದು. ಹೇಗೆಂದರೆ—ವಿಷಯವಿಲ್ಲದಿರುವಾಗ ಜ್ಞಾನವಾಗಲಿ ಜ್ಞಾನವಿಲ್ಲದಿರುವಾಗ ವಿಷಯವಾಗಲಿ ಪ್ರಕಾಶಿಸುವುದಿಲ್ಲವಾದುದರಿಂದ ಜ್ಞಾನ ವಿಷಯ ಇವೆರಡಕ್ಕೂ ಸಹೋಪಲಂಭನಿಯಮವಿರುವುದು; ಎಂದರೆ ಜ್ಞಾನದ ಜತೆಯಲ್ಲಿಯೇ ವಿಷಯವೂ, ವಿಷಯದ ಜತೆಯಲ್ಲಿಯೇ ಜ್ಞಾನವೂ ನಿಯಮದಿಂದ ಉಪಲಭ್ಯಮಾನವಾಗಿರುವುವು. ಜ್ಞಾನಕ್ಕೆ ವಿಷಯದೊಡನೆಯೂ ವಿಷಯಕ್ಕೆ ಜ್ಞಾನದೊಡನೆಯೂ ಸಹೋಪಲಂಭನಿಯಮವಿರುವುದರಿಂದ ಜ್ಞಾನಕ್ಕೂ ವಿಷಯಕ್ಕೂ ಪರಸ್ಪರವಾಗಿ ಅಭೇದವನ್ನು ಒಪ್ಪ

ಬೇಕಾಗುವುದು. ಎಲ್ಲಿಯಾದರೆ ಅಭೇದವೆಂಬ ವ್ಯಾಪಕಧರ್ಮವಿಲ್ಲವೋ ; ಅದಕ್ಕೆ ವಿರುದ್ಧವಾದ ಭೇದವೇ ಇರುವುದೋ ; ಅಲ್ಲಿ ಸಹೋಪಲಂಭನಿಯಮವೆಂಬ ವ್ಯಾಪ್ಯಧರ್ಮವೂ ಇಲ್ಲವೆಂಬುದನ್ನು ಘಟಪಟಗಳೆರಡರಲ್ಲಿ ನಾವು ನೋಡಿರುವೆವು. ಘಟಪಟಗಳೆರಡಕ್ಕೂ ಅಭೇದವಿಲ್ಲದೆ ಭೇದವೇ ಇರುವುದರಿಂದ ಘಟದ ಜತೆಯಲ್ಲಿ ಪಟವಾಗಲಿ ಪಟದ ಜತೆಯಲ್ಲಿ ಘಟವಾಗಲಿ ನಿಯಮದಿಂದ ಉಪಲಭ್ಯಮಾನವಾಗಿಲ್ಲ. ಜ್ಞಾನ, ಮತ್ತು ಜ್ಞಾನವಿಷಯ ಇವುಗಳಿಗಾದರೆ ಸಹೋಪಲಂಭನಿಯಮವೆಂಬ ವ್ಯಾಪ್ಯಧರ್ಮವು ಕಾಣಬರುವುದರಿಂದ ಅಭೇದವೆಂಬ ವ್ಯಾಪಕಧರ್ಮವನ್ನೂ ಅವುಗಳಿಗೆ ಒಪ್ಪಬೇಕಾಗುವುದು. ಇಷ್ಟಾಪತ್ತಿಯನ್ನು ಹೇಳುವುದಾದರೆ "**ಸಹೋಪಲಂಭನಿಯಮಾದಭೇದೋ ನೀಲತದ್ಧಿಯೋಃ**" ಎಂಬ ರೀತಿಯಲ್ಲಿ ಜ್ಞಾನಕ್ಕೂ ಜ್ಞಾನವಿಷಯಕ್ಕೂ ಅಭೇದವನ್ನು ತೋರಿಸುವುದರಮೂಲಕ ಜ್ಞಾನವ್ಯತಿರಿಕ್ತಗಳಾದ ಬಾಹ್ಯಪದಾರ್ಥಗಳನ್ನು ಅಪಲಪಿಸುವ ಬೌದ್ಧರ ಮತವೇ ಪುನಃ ತಲೆಯೆತ್ತಿದಂತೆ ಆಗುವುದಲ್ಲವೆ?

## ೮೮೩. ಜ್ಞಾನತದ್ವಿಷಯಯೋ ರಭೇದಾನುಮಾನಸ್ಯ ಭೇದಪ್ರತ್ಯಕ್ಷಬಾಧಿತತ್ವಾತ್ ಬೌದ್ಧಮತೋತ್ಥಾನಾನವಕಾಶಃ.

ಇಲ್ಲ—ಜ್ಞಾನಕ್ಕೆ ಸ್ವಯಂಪ್ರಕಾಶತ್ವವನ್ನು ಒಪ್ಪಿದರೂ ಬೌದ್ಧಮತವು ತಲೆಯೆತ್ತುವುದಕ್ಕೆ ಅವಕಾಶವಿಲ್ಲ. ಸಹೋಪಲಂಭನಿಯಮವೆಂಬ ಹೇತುವಿನಿಂದ ಜ್ಞಾನಕ್ಕೂ ವಿಷಯಕ್ಕೂ ಅಭೇದವನ್ನು ಅನುಮಿಸಲಾಗುವುದಿಲ್ಲ. "**ನಾನು ಇದನ್ನು ತಿಳಿಯುತ್ತೇನೆ**" ಎಂಬ ಪ್ರತ್ಯಕ್ಷವೆಂಬ ಪ್ರಬಲಪ್ರಮಾಣದಿಂದ "**ತಿಳಿಯುತ್ತೇನೆ**" ಎಂಬ ಜ್ಞಾನಕ್ಕೂ "**ಇದನ್ನು**" ಎಂಬ ವಿಷಯಕ್ಕೂ ವಿಷಯವಿಷಯಿಭಾವಸಂಬಂಧರೂಪವಾದ ಭೇದವೇ ತಿಳಿದುಬರುತ್ತಿರುವಲ್ಲಿ ಅನುಮಾನವೆಂಬ ದುರ್ಬಲಪ್ರಮಾಣದಿಂದ ಅವುಗಳಿಗೆ ಅಭೇದವನ್ನು ಸಾಧಿಸಲಾಗುವುದಿಲ್ಲ. ಪ್ರತ್ಯಕ್ಷಪ್ರಮಾಣದಿಂದ ವಹ್ನಿಯಲ್ಲಿ ಉಷ್ಣತ್ವವು ತಿಳಿದುಬರುತ್ತಿರುವಾಗ ಪದಾರ್ಥತ್ವಹೇತುವಿನಿಂದ ವಹ್ನಿಯಲ್ಲಿ ಶೈತ್ಯವನ್ನು ಅನುಮಿಸಲಾಗುವುದಿಲ್ಲವಷ್ಟೆ?

ಇದರಿಂದ—ಸಹೋಪಲಂಭನಿಯಮವೆಂಬ ಹೇತುವಿನಿಂದ ಜ್ಞಾನಕ್ಕೂ ವಿಷಯಕ್ಕೂ ಅಭೇದವನ್ನು ಸಾಧಿಸುವವರ ಮತವು ಪ್ರತ್ಯಕ್ಷಪ್ರಮಾಣವಿರುದ್ಧವಾದುದರಿಂದ ಅಪಹಾಸ್ಯವಾಗಿರುವುದೆಂದು ಫಲಿತವಾಯಿತು.

ಇಷ್ಟುಮಾತ್ರವೇ ಅಲ್ಲ. ಸಹೋಪಲಂಭನಿಯಮವೆಂಬ ಹೇತು ಇವರ ಉದ್ದೇಶ್ಯಕ್ಕೆ ವಿರುದ್ಧವಾಗಿಯೂ ಇರುವುದು ; ಹೇಗೆಂದರೆ—ಭಿನ್ನಭಿನ್ನಗಳಾದ

ಎರಡು ಪದಾರ್ಥಗಳಿಗೆ ಸಹೋಪಲಂಭವು ಸಂಭವಿಸಬಹುದಲ್ಲದೆ ಒಂದೇ ಪದಾರ್ಥಕ್ಕೆ ಅದು ಸಂಭವಿಸುವುದಿಲ್ಲ. ಸಹೋಪಲಂಭವೇ ಭೇದವನ್ನು ಸಾಧಿಸಿಕೊಡುವುದಾದರೆ ಇಂಥ ಸಹೋಪಲಂಭದ ನಿಯಮವು ಭೇದನಿಯಮವನ್ನೇ ಸಾಧಿಸುವುದಲ್ಲದೆ ಅಭೇದವನ್ನು ಸಾಧಿಸಿಕೊಡಲಾರದಷ್ಟೆ?

## ೮೮೪. ನಿರತಿಶಯವೇಗವತ್ತ್ವಾತ್ ಜ್ಞಾನಸ್ಯ ಝಡಿತಿ ಸರ್ವವಸ್ತುಸಂಯೋಗೋಪಪತ್ತಿಃ.

ಇಂಥ ಜ್ಞಾನವೆಂಬುದು ನಿರತಿಶಯವೇಗವುಳ್ಳದಾದುದರಿಂದಲೇ ಅತಿದೂರದಲ್ಲಿರುವ ಪದಾರ್ಥದೊಡನೆಯೂ ಅತಿಶೀಘ್ರದಲ್ಲಿ ಸಂಬಂಧವನ್ನು ಪಡೆವುದು. ಅನೇಕಲಕ್ಷಯೋಜನಗಳ ದೂರದಲ್ಲಿರುವ ಸೂರ್ಯಮಂಡಲದೊಡನೆಯೂ ಅರ್ಧನಿಮೇಷದೊಳಗೆ ನಮ್ಮ ಜ್ಞಾನವು ಸಂಬಂಧವನ್ನು ಪಡೆಯುತ್ತಿರುವುದಷ್ಟೆ?

## ೮೮೫. ನಿರತಿಶಯಸೂಕ್ಷ್ಮತ್ವಾತ್ ಜ್ಞಾನಸ್ಯ ನ ಕುತ್ರಚಿತ್ಪ್ರತಿರೋಧಃ.

ಮತ್ತು ಈ ಜ್ಞಾನವು ನಿರತಿಶಯಸೂಕ್ಷ್ಮವಾದುದರಿಂದಲೇ ಇದು ಹೋಗುವ ದಾರಿಯಲ್ಲಿ ಯಾವುದೊಂದು ಪದಾರ್ಥದಿಂದಲೂ ಇದಕ್ಕೆ ತಡೆಯುಂಟಾಗುವುದಿಲ್ಲ. ಬಂಧಾವಸ್ಥೆಯಲ್ಲಿ ನಮ್ಮ ಜ್ಞಾನವು ಭಿತ್ತಿಯ ಹೊರಗಡೆಗೆ ಹೋಗಲಾರದೆಂಬುದಕ್ಕೆ ಜ್ಞಾನದ ಶಕ್ತ್ಯಭಾವವು ಕಾರಣವಲ್ಲ; ಕರ್ಮವಿಶೇಷವೇ ಕಾರಣವೆಂಬುದನ್ನು ಹಿಂದೆಯೇ ಸೂಚಿಸಿರುವೆವು. ವಾಸ್ತವದಲ್ಲಿ ಶಕ್ತ್ಯಭಾವವೇ ಇದ್ದಪಕ್ಷದಲ್ಲಿ ಮುಕ್ತಾವಸ್ಥೆಯಲ್ಲಿಯೂ ಭಿತ್ತಿಯ ಹೊರಗಡೆಯಲ್ಲಿ ಇದು ವ್ಯಾಪಿಸಕೂಡದಷ್ಟೆ?

## ೮೮೬. ಜ್ಞಾನಸ್ಯ ದ್ರವ್ಯತ್ವಾತ್ಸ್ವವಿಷಯೇಣ ಸಹ ಸಂಯೋಗಸಂಬಂಧಭಾಗಿತ್ವಂ.

ಜ್ಞಾನಕ್ಕೆ ಸ್ವವಿಷಯದೊಡನೆ ಎಂಥ ಸಂಬಂಧವುಂಟಾಗುವುದು? ಸಂಯೋಗವೆಂಬ ಸಂಬಂಧವುಂಟಾಗುವುದು. ಎರಡು ದ್ರವ್ಯಗಳಿಗಲ್ಲವೆ ಸಂಯೋಗಸಂಬಂಧವುಂಟಾದೀತು? ಜ್ಞಾನವು ಗುಣವೆನಿಸಿಕೊಂಡಿರುವುದಲ್ಲದೆ ದ್ರವ್ಯವಲ್ಲವಷ್ಟೆ? ಜ್ಞಾನಕ್ಕೆ ದ್ರವ್ಯತ್ವವನ್ನು ಅಂಗೀಕರಿಸದೆ ಗುಣತ್ವವನ್ನೇ ಅಂಗೀಕರಿಸಿರುವ ನೈಯಾಯಿಕರ ಭ್ರಾಂತಿಯನ್ನು ಹೋಗಲಾಡಿಸುವುದಕ್ಕಾಗಿಯೇ ಈ ಜ್ಞಾನವನ್ನು ದ್ರವ್ಯವಿಭಾಗದ ಮಧ್ಯದಲ್ಲಿ ಸೇರಿಸಿ ದ್ರವ್ಯಲಕ್ಷಣಕ್ಕೆ ಇದರಲ್ಲಿಯೂ ಸಮನ್ವಯವನ್ನು ಅಚಿತ್ತತ್ತ್ವಪರಿಚ್ಛೇದದಲ್ಲಿಯೇ ನಾವು ತೋರಿಸಿರುವೆವು. ಆದುದರಿಂದ

ಜ್ಞಾನಕ್ಕೆ ದ್ರವ್ಯತ್ವವನ್ನು ಹೇಳುವುದರಲ್ಲಿಯಾಗಲಿ, ವಿಷಯದೊಡನೆ ಇದಕ್ಕೆ ಸಂಯೋಗವೆಂಬ ಸಂಬಂಧವೇ ಇರುವುದೆಂದು ಹೇಳುವುದರಲ್ಲಿಯಾಗಲಿ ಯಾವ ತಡೆಯೂ ಇಲ್ಲ. ಬ್ರಹ್ಮಸೂತ್ರದ ದ್ವಿತೀಯಾಧ್ಯಾಯದ ದ್ವಿತೀಯಪಾದದೊಳಗೆ "**ನಾಭಾವ ಉಪಲಬ್ಧೇಃ**" ಎಂಬ ಇಪ್ಪತ್ತೆಂಟನೆಯ ಸೂತ್ರದ ವ್ಯಾಖ್ಯಾನ ಸಂದರ್ಭದಲ್ಲಿ ಭಾಷ್ಯಕಾರರು—"**ಸಂಬಂಧಶ್ಚ ಸಂಯೋಗಲಕ್ಷಣಃ, ಜ್ಞಾನಮಪಿ ಹಿ ದ್ರವ್ಯಮೇವ**" ಎಂದು ಹೇಳಿ ಜ್ಞಾನಕ್ಕೆ ದ್ರವ್ಯತ್ವವನ್ನೂ, ವಿಷಯದೊಡನೆ ಇದಕ್ಕೆ ಉಂಟಾಗುವ ಸಂಬಂಧವು ಸಂಯೋಗರೂಪವೆಂಬುದನ್ನೂ ಕಂಠೋಕ್ತಿಯಿಂದ ಸ್ಪಷ್ಟವಾಗಿ ಅಪ್ಪಣೆಕೊಡಿಸಿರುವರು.

### ೮೮೭. ಜ್ಞಾನಸ್ಯ ದ್ರವ್ಯತ್ವೇ ಸತ್ಯಪಿ ದ್ರವ್ಯಾಂತರನಿಯತ ವಿಶೇಷಣತ್ವಂ ಪ್ರಭಾಯಾ ಇವೋಪಪನ್ನಂ.

"ಪೂಜ್ಯರೆ! ಜ್ಞಾನವೆಂಬುದು ದ್ರವ್ಯವೆನಿಸಿಕೊಳ್ಳುವುದಾದರೆ ಆತ್ಮನೆಂಬ ದ್ರವ್ಯಾಂತರಕ್ಕೆ ಇದು ಸರ್ವದಾ ಅಪೃಥಕ್ಸಿದ್ಧವಾದ ವಿಶೇಷಣವೆನಿಸಿಕೊಳ್ಳುವ ಬಗೆ ಹೇಗೆ? ಘಟಾದಿಗಳು ದ್ರವ್ಯಗಳೆನಿಸಿಕೊಂಡಿದ್ದರೂ ಮತ್ತೊಂದು ದ್ರವ್ಯಕ್ಕೆ ಇವು ಸರ್ವದಾ ವಿಶೇಷಣಗಳಾಗಿಲ್ಲವಷ್ಟೆ? ಘಟಾದಿಪದಾರ್ಥಗಳಲ್ಲಿ ಇರುವ ಶಬ್ದ-ಸ್ಪರ್ಶ-ರೂಪ-ರಸ-ಗಂಧಾದಿಗಳಾದರೆ ದ್ರವ್ಯಗಳೆನಿಸಿಕೊಳ್ಳದೆ ಗುಣಗಳೆನಿಸಿಕೊಂಡಿರುವುದರಿಂದ ಸರ್ವದಾ ಘಟಾದಿಪದಾರ್ಥಗಳಿಗೆ ವಿಶೇಷಣಗಳಾಗಿರುವುವು. ಅದರಂತೆ ಜ್ಞಾನವೂ ಗುಣವೆನಿಸಿಕೊಂಡರಲ್ಲವೆ ಆತ್ಮನಿಗೆ ಇದು ಸರ್ವದಾ ಅಪೃಥಕ್ಸಿದ್ಧವಿಶೇಷಣವಾಗಿರಬಹುದು?"

ಇಂಥ ಆಶಂಕೆ ಸಂಗತವಲ್ಲ. ಜ್ಞಾನವು ಗುಣವೆನಿಸಿಕೊಳ್ಳದೆ ದ್ರವ್ಯವೆನಿಸಿಕೊಂಡಿದ್ದರೂ ಆತ್ಮನಿಗೆ ಸರ್ವದಾ ಇದು ಅಪೃಥಕ್ಸಿದ್ಧವಿಶೇಷಣವಾಗಿರಲು ತಡೆಯಿಲ್ಲ. ಮಣಿ+ದ್ಯುಮಣಿ+ದೀಪಗಳ ಪ್ರಭೆ ಸ್ವಯಂ ತೇಜೋದ್ರವ್ಯವೆನಿಸಿಕೊಂಡಿದ್ದರೂ ಸ್ವಾಶ್ರಯಕ್ಕೆ ತಾನು ಸರ್ವದಾ ಅಪೃಥಕ್ಸಿದ್ಧವಿಶೇಷಣವಾಗಿರುವುದನ್ನು ಲೋಕದಲ್ಲಿ ಕಂಡಿರುವೆವಷ್ಟೆ?

ಆದುದರಿಂದ ದ್ರವ್ಯವೆನಿಸಿಕೊಂಡ ಈ ಜ್ಞಾನಕ್ಕೆ ಸ್ವವಿಷಯದೊಡನೆ ಸಂಯೋಗವೆಂಬ ಸಂಬಂಧವುಂಟಾಗಲು ಅಡ್ಡಿಯಿಲ್ಲ. "ಆದರೆ ಅದ್ರವ್ಯಗಳಾದ ಶಬ್ದಸ್ಪರ್ಶಾದಿಗಳೊಡನೆ ಜ್ಞಾನಕ್ಕೆ ಸಂಯೋಗಸಂಬಂಧವುಂಟಾಗಲಾರದಲ್ಲವೆ? ಆಗ ಅದ್ರವ್ಯಗಳನ್ನು ಜ್ಞಾನದಿಂದ ಗ್ರಹಿಸುವ ಬಗೆ ಹೇಗೆ?" ಹೀಗೆ—ಜ್ಞಾನಕ್ಕೆ ಅದ್ರವ್ಯಗಳೊಡನೆ ಸಂಯೋಗವೆಂಬ ಸಂಬಂಧವಿಲ್ಲದಿದ್ದರೂ ಸಂಯುಕ್ತಾಶ್ರಿತತ್ವ

ವೆಂಬ ಸಂಬಂಧವುಂಟಾಗುವುದು. ಜ್ಞಾನಸಸಂಯುಕ್ತವಾದ ಘಟಾದಿದ್ರವ್ಯವಸ್ನ ಲ್ಲವೆ ಆದ್ರವ್ಯಗಳು ಆಶ್ರಯಿಸಿಕೊಂಡಿರುವುವು ?

**ಇಂತು ತತ್ತ್ವಶುದ್ಧಿಯೆಂಬ ವಿಶಿಷ್ಟಾದ್ವೈತಪ್ರಕರಣಗ್ರಂಥದೊಳ್ ಧರ್ಮಭೂತಜ್ಞಾನಪರಿಚ್ಛೇದದಲ್ಲಿ ವೇದಾಂತಿಸಿದ್ಧಾಂತಾಭಿಮತಸ್ವಯಂಪ್ರಕಾಶತ್ವಸಾಧಕಪ್ರಮಾಣನಿರೂಪಣ ಪ್ರಕರಣಂ ಪಂಚಮಂ॥ ೫.**

# ಷಷ್ಠಪ್ರಕರಣಂ

## ೮೮೮ ಧರ್ಮಭೂತಜ್ಞಾನೇ ನಾನಾವಿಧಾಕ್ಷೇಪೋಪಕ್ಷೇಪಃ

ಪೂಜ್ಯರೆ? ಉಕ್ತವಾದ ಇಂಥ ಜ್ಞಾನದ ವಿಷಯದಲ್ಲಿ ಹಲವುಬಗೆಯಾದ ಆಕ್ಷೇಪಗಳಿರುವುವು. ಅವುಗಳಿಗೆ ಸಮಂಜಸವಾದ ಉತ್ತರವನ್ನು ಸಿದ್ಧಾಂತದಲ್ಲಿ ತೋರಿಸಿದರಲ್ಲದೆ ನಿಮ್ಮ ಸಿದ್ಧಾಂತವು ಸಮಂಜಸವಾಗುವುದಿಲ್ಲ. ಇದಕ್ಕಾಗಿ ಸಪ್ರಮಾಣವಾಗಿಯೂ, ಸಯುಕ್ತಿಕವಾಗಿಯೂ ಇರುವ ಸಮಾಧಾನವನ್ನು ನೀವು ತೋರಿಸಬೇಕು.

## ೮೮೯ ತತ್ರ ಪ್ರಥಮಾಕ್ಷೇಪಃ

**ಅವುಗಳಲ್ಲಿ ಮೊದಲನೆಯ ಆಕ್ಷೇಪವು**— ಈ ಧರ್ಮಭೂತಜ್ಞಾನಕ್ಕೆ ನಿತ್ಯತ್ವವನ್ನು ತೋರಿಸುವ ಯಾವುದೊಂದು ಪ್ರಮಾಣವೂ ಇಲ್ಲದಿರುವಾಗ ನಿತ್ಯತ್ವವನ್ನು ಹೇಗೆ ಒಪ್ಪುವುದು? ಮತ್ತು ಅಂಥ ನಿತ್ಯತ್ವವನ್ನು ತೋರಿಸುವ ಯಾವುದೋ ಒಂದು ಪ್ರಮಾಣವು ಬಹುಪ್ರಯಾಸದಿಂದ ದೊರೆತರೂ ಜ್ಞಾನಕ್ಕೆ ನಿತ್ಯತ್ವವು ಉಪಪನ್ನವಾಗುವುದಿಲ್ಲ; ಅನುಪಪನ್ನವಾದ ಅರ್ಥವನ್ನು ಯಾವ ಪ್ರಮಾಣವೂ ತೋರಿಸಲಾರದಷ್ಟೆ ?

## ೮೯೦. ಅಥ ದ್ವಿತೀಯಾಕ್ಷೇಪಃ

**ಎರಡನೆಯ ಆಕ್ಷೇಪವು**— ಜ್ಞಾನಕ್ಕೆ ನಿತ್ಯತ್ವವಿರುವಪಕ್ಷದಲ್ಲಿ ಸುಷುಪ್ತ್ಯವಸ್ಥೆಯಲ್ಲಿಯೂ ಜ್ಞಾನವಿರಬೇಕಾದುದರಿಂದ ಜಾಗರಾವಸ್ಥೆಗೂ ಸುಷುಪ್ತ್ಯವಸ್ಥೆಗೂ ತಾರತಮ್ಯವೇ ಇಲ್ಲವಾಗುವುದಾದಕಾರಣ ಈ ಅವಸ್ಥಾವಿಭಾಗವೇ

ತಪ್ಪಿಹೋಗಿ ಸರ್ವದಾ ಜಾಗರಾವಸ್ಥೆಯೆಂಬುದೊಂದೇ ಇರಬೇಕಾಗಿ ಬರುವುದು. ನಮ್ಮ ಮತದಲ್ಲಿಯಾದರೋ ಜ್ಞಾನವು ಅನಿತ್ಯವಾದುದರಿಂದ ಜ್ಞಾನಸದ್ಭಾವಾವಸ್ಥೆ ಜಾಗರಾವಸ್ಥೆಯೆಂದೂ, ಜ್ಞಾನದ ಅಸದ್ಭಾವಾವಸ್ಥೆ ಸುಷುಪ್ತ್ಯವಸ್ಥೆಯೆಂದೂ ತಾರತಮ್ಯವು ಸಂಭವಿಸಬಹುದು.

### ೪೯೧. ಅಥ ತೃತೀಯಾಕ್ಷೇಪಃ.

**ಮೂರನೆಯ ಆಕ್ಷೇಪವು**—ಶರೀರದ ಒಳಭಾಗದಲ್ಲಿರುವ ಜ್ಞಾನವು ಶರೀರದ ಹೊರಭಾಗದಲ್ಲಿರುವ ಪದಾರ್ಥಗಳೆಡೆಗೆ ಪ್ರಸರಿಸುತ್ತದೆಯೆಂಬುದರಲ್ಲಿ ಪ್ರಮಾಣವೇನು? ಹಾಗೆ ಹೊರಗೆ ಬಂದುಬಿಡುವುದಾದರೆ ಆ ಸಮಯದಲ್ಲಿ ಒಳಗೆ ಜ್ಞಾನವೆಂಬುದು ಇಲ್ಲದೆ ಹೋಗಬೇಕಾಗುವುದಲ್ಲವೆ? ಮನೆಯ ಎಜಮಾನನು ಮನೆಯನ್ನು ಬಿಟ್ಟು ಹೊರಗೆ ಹೋಗಿರುವಾಗ ಅವನು ಮನೆಯಲ್ಲಿ ಇಲ್ಲವೆಂಬುದನ್ನು ಗೊಲ್ಲರೂ ಸಹ ಬಲ್ಲರಷ್ಟೆ?

### ೪೯೨. ಅಥ ಚತುರ್ಥಾಕ್ಷೇಪಃ.

**ನಾಲ್ಕನೆಯ ಆಕ್ಷೇಪವು**—ಆತ್ಮನೆನಿಸಿಕೊಂಡವನಿಗೆ ಸರ್ವದಾ ಗುಣಭೂತವಾಗಿಯೇ ತೋರುತ್ತಿರುವ ಈ ಜ್ಞಾನಕ್ಕೆ ದ್ರವ್ಯತ್ವವನ್ನು ಹೇಗೆ ಹೇಳಲಾದೀತು? ಸರ್ವದಾ ಮತ್ತೊಂದಕ್ಕೆ ಗುಣಭೂತವಾಗಿಯೇ ತೋರುತ್ತಿರುವ ಪದಾರ್ಥಗಳೂ ಸಹ ದ್ರವ್ಯಗಳೆನಿಸಿಕೊಳ್ಳುವುವಾದರೆ—ಸರ್ವದಾ ಘಟಾದಿಪದಾರ್ಥಗಳಿಗೆ ಗುಣಭೂತಗಳಾಗಿಯೇ ತೋರುತ್ತಿರುವ ಶಬ್ದಸ್ಪರ್ಶರೂಪರಸಗಂಧಗಳೂ ಏತಕ್ಕೆ ದ್ರವ್ಯಗಳೆನಿಸಿಕೊಳ್ಳಬಾರದು?

### ೪೯೩. ಅಥ ಪಂಚಮಾಕ್ಷೇಪಃ.

**ಐದನೆಯ ಆಕ್ಷೇಪವು**—ಜ್ಞಾನಕ್ಕೆ ದ್ರವ್ಯತ್ವವನ್ನು ತೋರಿಸಿಕೊಡುವ ಸ್ಪಷ್ಟವಾದ ಪ್ರಮಾಣವು ಯಾವುದು?

### ೪೯೪. ಅಥ ಷಷ್ಠಾಕ್ಷೇಪಃ.

**ಆರನೆಯ ಆಕ್ಷೇಪವು**—ಸರ್ವದಾ ಆತ್ಮನಿಗೆ ಧರ್ಮಭೂತವಾಗಿಯೇ ತೋರುತ್ತಿರುವ ಈ ಜ್ಞಾನವು ತನಗೆ ಆಶ್ರಯನಾದ ಆತ್ಮನನ್ನು ಬಿಟ್ಟು ಅನ್ಯತ್ರಗಮನವನ್ನು ಹೇಗೆ ಮಾಡಲಾದೀತು? ಶಬ್ದಾದಿಗುಣಗಳು ಸ್ವಾಶ್ರಯವನ್ನು ತ್ಯಜಿಸಿ ಅನ್ಯತ್ರ ಹೋಗಲಾರವಷ್ಟೆ?

### ೪೯೫. ಅಥ ಸಪ್ತಮಾಕ್ಷೇಪಃ.

**ಏಳನೆಯ ಆಕ್ಷೇಪವು**—ಒಂದು ವಸ್ತುವಿನಲ್ಲಿ ಅಡಗಿರುವ ಅನೇಕಾವಯವಗಳು ಒಂದಕ್ಕೊಂದು ಅತ್ಯಂತದಟ್ಟವಾಗಿ ಸೇರಿಕೊಳ್ಳುವಿಕೆಗೆ ಉಪಚಯ

ವೆಂದು ಹೆಸರು. ಹಾಗೆ ದೃಢತರವಾಗಿ ಸೇರಿಕೊಂಡಿರುವ ಅಂಥ ಅವಯವಗಳಿಗೆ ಪರಸ್ಪರಶೈಥಿಲ್ಯವುಂಟಾದರೆ ಎಂದರೆ ಅಗಲಿಕೆಯುಂಟಾದರೆ ಇಂಥ ಶೈಥಿಲ್ಯಕ್ಕೆ ವಿರಳತ್ವವೆಂದು ಹೆಸರು. ಉಪಚಯವು ಸ್ವಾಶ್ರಯವಾದ ಪದಾರ್ಥದಲ್ಲಿ ಅಲ್ಪಪರಿಮಾಣವನ್ನು ಉಂಟುಮಾಡುವುದಕ್ಕೆ ಕಾರಣವಾಗಿದೆಯೆಂಬುದನ್ನೂ, ವಿರಳತ್ವವು ಸ್ವಾಶ್ರಯದಲ್ಲಿ ಅಧಿಕಪರಿಮಾಣವನ್ನು ಉಂಟುಮಾಡುವುದಕ್ಕೆ ಕಾರಣವಾಗಿದೆಯೆಂಬುದನ್ನೂ ಲೋಕದಲ್ಲಿ ನಾವು ನೋಡಿರುವೆವು. ಮೃತ್ಪಿಂಡದಲ್ಲಿ ಅಡಗಿರುವ ಅವಯವಗಳು ಎಡೆಬಿಡದೆ ಸೇರಿಕೊಂಡಿರುವುದರಿಂದ ಮೃತ್ಪಿಂಡದಲ್ಲಿರುವ ಉಪಚಯವು ಮೃತ್ಪಿಂಡವನ್ನು ಚಿಕ್ಕ ಪರಿಮಾಣಕ್ಕೆ ತಂದಿರುವುದಷ್ಟೆ? ಮತ್ತು ಬಿಡಿಸಿದ ಹತ್ತಿಯಲ್ಲಿ ಅಡಗಿರುವ ಅವಯವಗಳು ಪರಸ್ಪರವಾಗಿ ಅಗಲಿ ದೂರದೂರವಾಗಿರುವುದರಿಂದ ಹತ್ತಿಯಲ್ಲಿರುವ ವಿರಳತ್ವವು ಹತ್ತಿಯನ್ನು ಅಧಿಕಪರಿಮಾಣಕ್ಕೆ ತಂದಿರುವುದಷ್ಟೆ? ಇದರಿಂದ— ಪರಿಮಾಣದ ತಾರತಮ್ಯವುಂಟಾಗುವುದಕ್ಕೆ ಉಪಚಯವಿರಳತ್ವಗಳು ಇದ್ದೇ ಇರಬೇಕೆಂದು ಸಿದ್ಧವಾಗುವುದು. ಹೀಗಿರುವಲ್ಲಿ— ಜ್ಞಾನವು ದೂರದಲ್ಲಿರುವ ಪದಾರ್ಥದೊಡನೆ ಸಂಯೋಗವನ್ನು ಪಡೆವುದಕ್ಕಾಗಿ ಹೊರಗೆ ಹೊರಟಾಗ ಅಧಿಕಪರಿಮಾಣವನ್ನು ಪಡೆದಿದೆಯೆಂದೂ, ಹೊರಗೆ ಹೊರಡದೆ ಒಳಗೆ ಇದ್ದಾಗ ಅಲ್ಪಪರಿಮಾಣವನ್ನು ಪಡೆದಿದೆಯೆಂದೂ ಹೇಳಬೇಕು. ಆದರೆ ನಿರವಯವವಾದ ಈ ಜ್ಞಾನದಲ್ಲಿ ದೃಢತರಾವಯವಸಂಯೋಗವೆಂಬ ಉಪಚಯವಾಗಲಿ ಅವಯವಶೈಥಿಲ್ಯವೆಂಬ ವಿರಳತ್ವವಾಗಲಿ ಉಂಟಾಗುವುದಕ್ಕೆ ಅವಕಾಶವಿಲ್ಲದಿರುವಾಗ ಪರಿಮಾಣತಾರತಮ್ಯವು ಹೇಗೆ ಸಂಗತವಾದೀತು?

## ೮೯೬. ಅಥ ಅಷ್ಟಮಾಕ್ಷೇಪಃ

**ಎಂಟನೆಯ ಆಕ್ಷೇಪವು**— ಜ್ಞಾನಕ್ಕೆ ಸ್ವವಿಷಯದೊಡನೆ ಸಂಯೋಗವೆಂಬ ಸಂಬಂಧವೇ ಉಂಟಾಗುವುದಲ್ಲದೆ ಮತ್ತೊಂದು ಸಂಬಂಧವೂ ಇಲ್ಲವೆಂದು ಹೇಳಿದಿರಿ. ಹೇಗಾದರೆ ನಮಗೆ ವರ್ತಮಾನಕಾಲಿಕವಾದ ಪದಾರ್ಥದಲ್ಲಿ ಜ್ಞಾನವು ಉಂಟಾಗುವುದೋ ಅದರಂತೆಯೇ ಅತೀತಪದಾರ್ಥಗಳಲ್ಲಿಯೂ ಆಗಾಮಿಪದಾರ್ಥಗಳಲ್ಲಿಯೂ ಜ್ಞಾನವು ಉಂಟಾಗುತ್ತಲೇ ಇರುವುದು. ಜ್ಞಾನಕ್ಕೆ ಸ್ವವಿಷಯದೊಡನೆ ಸಂಯೋಗವೆಂಬ ಸಂಬಂಧವೇ ಉಂಟಾಗುವುದೆಂದು ಹೇಳುವುದಾದರೆ— ವರ್ತಮಾನಪದಾರ್ಥಗಳೊಡನೆ ಜ್ಞಾನಕ್ಕೆ ಸಂಯೋಗವುಂಟಾಗಬಹುದಾದರೂ ಭೂತ-ಭಾವಿಪದಾರ್ಥಗಳೊಡನೆ ಸಂಯೋಗವುಂಟಾದೀತೆಂದು ಹೇಗೆ ಹೇಳಲಾದೀತು? ಪದಾರ್ಥಗಳೇ ಇಲ್ಲದಿರುವಾಗ ಅವುಗಳೊಡನೆ ಸಂಯೋಗವೂ ಜ್ಞಾನಕ್ಕೆ ಉಂಟಾಗಲಾರದಷ್ಟೆ?

## ೮೯೭ ಅಥ ನವಮಾಕ್ಷೇಪಃ

**ಒಂಬತ್ತನೆಯ ಆಕ್ಷೇಪವು**—ಜ್ಞಾನದಿಂದ ಘಟಾದಿದ್ರವ್ಯಗಳನ್ನು ಹೇಗಾದರೆ ನಾವು ಗ್ರಹಿಸುತ್ತಿರುವೆವೋ ಅದರಂತೆಯೇ ದ್ರವ್ಯದಲ್ಲಿರುವ ಗುಣ, ಕ್ರಿಯೆ, ಜಾತಿ ಮೊದಲಾದ-ವುಗಳನ್ನೂ ನಾವು ಜ್ಞಾನದಿಂದ ಗ್ರಹಿಸುತ್ತಲೇ ಇರುವೆವು. ಆದುದರಿಂದ ದ್ರವ್ಯಗಳಂತೆ ದ್ರವ್ಯಗತಗಳಾದ ಗುಣಾದಿಗಳೂ ಜ್ಞಾನಕ್ಕೆ ವಿಷಯುಗಳಾಗಿರುವುವೆಂಬುದರಲ್ಲಿ ವಿವಾದವಿಲ್ಲ. ಜ್ಞಾನಕ್ಕೆ ಸ್ವವಿಷಯದೊಡನೆ ಸಂಯೋಗವೆಂಬ ಸಂಬಂಧವೇ ಉಂಟಾಗುವುದಾದರೆ ಘಟಾದಿದ್ರವ್ಯಗಳೊಡನೆ ಜ್ಞಾನಕ್ಕೆ ಸಂಯೋಗಸಂಬಂಧವು ಕೂಡಿದರೂ ದ್ರವ್ಯಗಳಲ್ಲಿರುವ ಗುಣಾದಿಗಳೊಡನೆ ಸಂಯೋಗಸಂಬಂಧವು ಹೇಗೆ ಕೂಡೀತು? ಗುಣಾದಿಗಳೊಡನೆ ಜ್ಞಾನಕ್ಕೆ ಸಂಯೋಗಸಂಬಂಧವಿಲ್ಲದಿರುವಾಗ ಗುಣಾದಿಗಳು ಜ್ಞಾನಕ್ಕೆ ವಿಷಯುಗಳಾಗಿರುವುವೆಂದು ಹೇಳಿಸಿಕೊಳ್ಳುವ ಬಗೆಯೂ ಹೇಗೆ?

## ೮೯೮ ಅಥ ದಶಮಾಕ್ಷೇಪಃ

**ಹತ್ತನೆಯ ಆಕ್ಷೇಪವು**—ಶರೀರದ ಒಳಗಿರುವ ನಮ್ಮ ಜ್ಞಾನವು ಚಕ್ಷುರಿಂದ್ರಿಯದ ಮೂಲಕವಾಗಿ ಹೊರಗೆ ಹೊರಟು ಚಂದ್ರಮಂಡಲದವರೆಗೂ ಎಡೆಬಿಡದೆ ದೀರ್ಘಧಾರಾಕಾರವಾಗಿ ವ್ಯಾಪಿಸಿ ಚಂದ್ರಮಂಡಲದೊಡನೆ ಸಂಯೋಗವನ್ನು ಪಡೆದು ಅದನ್ನು ಗ್ರಹಿಸುವ ಕಾಲದಲ್ಲಿ ಹೇಗಾದರೆ ಚಂದ್ರಮಂಡಲವು ನಮಗೆ ಪ್ರಕಾಶಿಸುವುದೋ ಎಂದರೆ ಸ್ಫುರಿಸುವುದೋ ಅದರಂತೆಯೇ ನಮ್ಮ ಕಣ್ಣಿಗೂ ಚಂದ್ರಮಂಡಲಕ್ಕೂ ಮಧ್ಯದಲ್ಲಿ ಸೇರಿರುವ ಸಮಸ್ತಪದಾರ್ಥಗಳೊಡನೆಯೂ ಜ್ಞಾನವು ಸಂಯೋಗವನ್ನು ಪಡೆದೇ ಇರುವುದರಿಂದ ಚಂದ್ರಮಂಡಲದಂತೆ ಅವುಗಳೂ ನಮಗೆ ಪ್ರಕಾಶಿಸಬೇಕಲ್ಲವೆ? ಆದರೂ ಅವುಗಳು ಏತಕ್ಕೆ ಪ್ರಕಾಶಿಸುವುದಿಲ್ಲ? ಜ್ಞಾನಕ್ಕೆ ಅವುಗಳೊಡನೆ ಸಂಯೋಗವೇ ಉಂಟಾಗಲಿಲ್ಲವೆಂಬ ಮಾತನ್ನು ಮಾತ್ರ ಬಾಯಿಬಿಟ್ಟು ಗಟ್ಟಿಯಾಗಿ ಆಡಬೇಡಿರಿ. ಹಾಗೆ ಆಡುವುದಾದರೆ ಮಧ್ಯದಲ್ಲಿರುವ ಪದಾರ್ಥಗಳೊಡನೆಯೇ ಸಂಯೋಗವನ್ನು ಪಡೆಯಲಾರದ ಜ್ಞಾನಕ್ಕೆ ದೂರವರ್ತಿಯಾದ ಚಂದ್ರಮಂಡಲದೊಡನೆ ಹೇಗೆ ಸಂಯೋಗವುಂಟಾದೀತೆಂದು ಕೇಳಿಸಿಕೊಂಡು ಪರಿಹಾಸ್ಯಕ್ಕೆ ಗುರಿಯಾಗುವಿರಿ.

## ೮೯೯ ಅಥೈಕಾದಶಾಕ್ಷೇಪಃ

**ಹನ್ನೊಂದನೆಯ ಆಕ್ಷೇಪವು**—ಮೋಕ್ಷಾವಸ್ಥೆಯಲ್ಲಿ ಜೀವನ ಜ್ಞಾನಕ್ಕೆ ವಿಭುತ್ವವನ್ನು ಎಂದರೆ ವ್ಯಾಪಕತ್ವವನ್ನು ಹೇಳುತ್ತೀರಿ. ವ್ಯಾಪಕತ್ವವೆಂದರೆ

ಸಕಲಪದಾರ್ಥಗಳೊಡನೆಯೂ ಸಂಯೋಗವನ್ನು ಪಡೆದಿರುವಿಕೆ. ಇದರಿಂದ ಮುಕ್ತನಾದ ಜೀವನ ಜ್ಞಾನವು ಸಕಲಬ್ರಹ್ಮಾಂಡೋದರವರ್ತಿಗಳಾದ ಸಕಲ ಪದಾರ್ಥಗಳೊಡನೆಯೂ ಸಂಯೋಗವನ್ನು ಪಡೆದಿರುವುದೆಂದು ಹೇಳಿದಂತಾಯಿತು ಹಾಗಾದರೆ ಸಕಲಪದಾರ್ಥಗಳೊಡನೆಯೂ ಸಂಯೋಗವನ್ನು ಪಡೆದೇ ತೀರಬೇಕೆಂಬ ಲಲಾಟಲಿಪಿಯನ್ನು ತಪ್ಪಿಸಿಕೊಳ್ಳಲಾರದ ಮುಕ್ತಜ್ಞಾನವು ಸಕಲಪದಾರ್ಥಗಳೊಡನೆಯೂ ಸಂಯೋಗವನ್ನು ಪಡೆವ ಕಾಲದಲ್ಲಿ ಏಕಕ್ಷಣದಲ್ಲಿಯೇ ಸಕಲ ಸಂಯೋಗವನ್ನೂ ಪಡೆವುದೆಂದು ಹೇಳುವಿರೋ? ಅಥವಾ ಮೊದಲು ಒಂದರೊಡನೆ ಸಂಯೋಗವನ್ನು ಪಡೆದು, ಅನಂತರದಲ್ಲಿ ಮತ್ತೊಂದರೊಡನೆ, ತದನಂತರದಲ್ಲಿ ಇನ್ನೊಂದರೊಡನೆ ಈ ರೀತಿಯಲ್ಲಿ ಕ್ರಮಕ್ರಮವಾಗಿ ಸಕಲಸಂಯೋಗವನ್ನೂ ಪಡೆವುದೆಂದು ಹೇಳುವಿರೋ?

ಏಕಕ್ಷಣದಲ್ಲಿಯೇ ಸಕಲಸಂಯೋಗವನ್ನೂ ಪಡೆವುದೆಂಬ ಪ್ರಥಮ ಪಕ್ಷವು ಸಂಗತವಾಗುವುದಿಲ್ಲ; ಅತ್ಯಂತಸಮೀಪದಲ್ಲಿರುವ ಪದಾರ್ಥಗಳೊಡನೆಯೂ, ಅತ್ಯಂತದೂರದಲ್ಲಿರುವ ಪದಾರ್ಥಗಳೊಡನೆಯೂ ಏಕಕಾಲದಲ್ಲಿಯೇ ಸಂಯೋಗವುಂಟಾಗುವುದೆಂಬ ಮಾತನ್ನು ಉನ್ಮತ್ತರೂ ಸಹ ಹೇಳಲಾರರಷ್ಟೆ?

ಹಾಗೆಯೇ ಕ್ರಮಕ್ರಮವಾಗಿ ಸಂಯೋಗವನ್ನು ಪಡೆವುದೆಂಬ ದ್ವಿತೀಯ ಪಕ್ಷವೂ ಸಂಗತವಾಗುವುದಿಲ್ಲ; ವಿರಾಟ್ಪುರುಷನ ಒಂದೊಂದು ರೋಮಕೂಪಗಳಲ್ಲಿಯೂ ತೊಂಗುತ್ತಿರುವ ಅಂಡಗಳಿಗೇ ಸಂಖ್ಯೆಯಿಲ್ಲದಿರುವಾಗ ನಿಖಿಲಬ್ರಹ್ಮಾಂಡಗಳಿಗೂ ಸುತರಾಂ ಸಂಖ್ಯೆಯಿಲ್ಲದಿರುವುದರಿಂದಲೂ, ಒಂದೊಂದು ಬ್ರಹ್ಮಾಂಡದಲ್ಲಿರುವ ಪದಾರ್ಥಗಳಿಗೇ ಅಸಂಖ್ಯವಿರುವ ಕಾಲದಲ್ಲಿ ಸಕಲಬ್ರಹ್ಮಾಂಡೋದರವರ್ತಿಗಳಾದ ಪದಾರ್ಥಗಳಿಗೆ ಅಸಂಖ್ಯವು ಕೈಮುತಿಕನ್ಯಾಯಸಿದ್ಧವಾದುದರಿಂದಲೂ, ಅನಂತಗಳಾದ ಬ್ರಹ್ಮಾಂಡಗಳೊಡನೆಯೂ, ಅನಂತಗಳಾದ ಪದಾರ್ಥಗಳೊಡನೆಯೂ ಮುಕ್ತರ ಜ್ಞಾನಕ್ಕೆ ಕ್ರಮಕ್ರಮವಾಗಿ ಸಂಯೋಗವುಂಟಾಗುವುದಾದರೆ ಅನೇಕಕೋಟಿವರ್ಷಗಳಾದರೂ ಈ ಸಂಯೋಗವು ಪೂರ್ಣವಾಗುವುದಿಲ್ಲವಾದುದರಿಂದ ಮುಕ್ತರಿಗೆ ಸರ್ವಜ್ಞತ್ವವಿಲ್ಲದೆ ಹೋಗಬೇಕಾಗುವುದಲ್ಲವೆ?

## ೧೦೦ ಅಥ ದ್ವಾದಶಾಕ್ಷೇಪಃ

**ಹನ್ನೆರಡನೆಯ ಆಕ್ಷೇಪವು**—ಬದ್ಧಜೀವನ ಮತ್ತು ಮುಕ್ತಜೀವನ ಧರ್ಮಭೂತಜ್ಞಾನಗಳಿಗೆ ಇರುವ ವ್ಯತ್ಯಾಸವೇನೆಂದರೆ—ಬದ್ಧಜ್ಞಾನಕ್ಕೆ ಸಂಕೋಚವುಂಟೆಂದೂ, ಮುಕ್ತಜ್ಞಾನಕ್ಕೆ ಅದಿಲ್ಲವೆಂದೂ, ಇಷ್ಟುಮಾತ್ರ ವ್ಯತ್ಯಾಸವಲ್ಲದೆ ಮತ್ತೇನೂ ಇಲ್ಲ. ಸಂಕೋಚವಿಕಾಸಗಳೆಂಬ ಇಷ್ಟುಮಾತ್ರ ವ್ಯತ್ಯಾಸವಿದ್ದರೂ

ಜ್ಞಾನವ್ಯವಸ್ಥೆಯು ಸಾಮ್ಯವನ್ನು ಮಾತ್ರ ಇಬ್ಬರಿಗೂ ಸಿದ್ಧಾಂತದಲ್ಲಿ ನೀವು ಒಪ್ಪಿರುತ್ತೀರಿ. ಎಂದರೆ ಬದ್ಧಜೀವರಿಗೆ ಆ ಆ ಪದಾರ್ಥಗಳ ಜ್ಞಾನವು ತಮ್ಮ ತಮ್ಮ ಧರ್ಮಭೂತಜ್ಞಾನಗಳಿಂದಲೇ ಉಂಟಾಗುವುದಲ್ಲದೆ ಮತ್ತೊಬ್ಬರ ಧರ್ಮ ಭೂತಜ್ಞಾನದಿಂದ ಅಲ್ಲವೆಂದು ಹೇಗಾದರೆ ಒಪ್ಪಿರುತ್ತೀರೋ ಇದರಂತೆಯೇ ಮುಕ್ತಾತ್ಮರಿಗೂ ಜ್ಞಾನವ್ಯವಸ್ಥೆಯನ್ನು ಒಪ್ಪಿರುತ್ತೀರಿ;

ಆದರೆ ಇಂಥ ವ್ಯವಸ್ಥೆಯನ್ನು ಮುಕ್ತಾತ್ಮರಿಗೆ ಹೇಳಲಾಗುವುದಿಲ್ಲ. ಹೇಗೆಂದರೆ—ಮುಕ್ತನಾದ ಒಬ್ಬ ಜೀವನ ಧರ್ಮಭೂತಜ್ಞಾನವು ವಿಭುವೆನಿಸಿ ಕೊಂಡು ಸಕಲಬ್ರಹ್ಮಾಂಡೋದರವರ್ತಿಸಕಲಪದಾರ್ಥಗಳೊಡನೆಯೂ ಸಂಯೋ ಗವನ್ನು ಪಡೆವುದಕ್ಕೆ ಹೇಗಾದರೆ ಸರ್ವತ್ರ ಹರಡಿಕೊಂಡಿರುವುದೋ ಅದರಂತೆ ಅನಂತರಾದ ಮುಕ್ತಾತ್ಮರ ಜ್ಞಾನಗಳೂ ಸರ್ವತ್ರ ಹರಡಿಕೊಂಡಿರುವುವು. ಇದರಿಂದ ಒಂದು ಧರ್ಮಭೂತಜ್ಞಾನವು ವ್ಯಾಪಿಸಿಕೊಂಡಿರುವ ಪ್ರದೇಶದ ಲ್ಲಿಯೇ ಅನಂತಗಳಾದ ಧರ್ಮಭೂತಜ್ಞಾನಗಳೂ ವ್ಯಾಪಿಸಿಕೊಂಡಿರುವುವೆಂದು ಸಿದ್ಧವಾಯಿತು. ಹೀಗೆ ಸಿದ್ಧವಾದುದರ ಫಲಿತಾಂಶವೇನಾಯಿತೆಂದರೆ—ಜಾಡರ ಹುಳ ತನ್ನ ಬಾಯಿಂದ ಹೊರಟ ಜೊಲ್ಲು ನೀರು ಬಾಹ್ಯವಾಯುವಿನ ಸಂಪರ್ಕ ದಿಂದ ತಂತುವಾಗಿ ಪರಿಣಮಿಸಿದಮೇಲೆ ಅಂಥ ತಂತುವಿನಿಂದ ದೊಡ್ಡದಾದ ಪಂಜ ರವನ್ನು ಎಂದರೆ ಬಲೆಯನ್ನು ರಚಿಸಿ ಅದರಲ್ಲಿ ತಾನು ಅಂಟಿಕೊಂಡು ಅದರಲ್ಲಿಯೇ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಸಂಚರಿಸುತ್ತ ಹೇಗೆ ಅದರ ಲ್ಲಿಯೇ ತೇಲಾಡುತ್ತಿರುವುದೋ ಅದರಂತೆ ಅಣುವಾದ ಮುಕ್ತಜೀವನು ಸರ್ವ ತೋದಿಕ್ಕವಾಗಿ ಸರ್ವದ್ರವ್ಯಗಳೊಡನೆಯೂ ಸಂಯೋಗವನ್ನು ಪಡೆದು ಹರಡಿ ಕೊಂಡಿರುವ ತನ್ನ ಧರ್ಮಭೂತಜ್ಞಾನವೆಂಬ ಚಂದ್ರಿಕೆಯ ಸರ್ವತೋಮುಖವಾದ ಪ್ರವಾಹದಲ್ಲಿ ಅಂಟಿಕೊಂಡು ತೇಲಾಡುತ್ತಿರುವನು. ಇಂಥ ಮುಕ್ತನು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಸಂಚರಿಸುವಾಗ ತನ್ನ ಧರ್ಮಭೂತ ಜ್ಞಾನದ ಆ ಆ ಪ್ರದೇಶಗಳೊಡನೆ ಯಾವಾಗ ಸಂಯೋಗವನ್ನು ಪಡೆವನೋ ಅದೇ ಕ್ಷಣದಲ್ಲಿ ಇತರಸಮಸ್ತಧರ್ಮಭೂತಜ್ಞಾನಗಳೊಡನೆಯೂ ಸಂಯೋಗ ವನ್ನು ನಿಯತವಾಗಿ ಪಡೆವನು. ಏತಕ್ಕೆಂದರೆ ಇವನ ಧರ್ಮಭೂತಜ್ಞಾನವು ವ್ಯಾಪಿಸಿರುವ ಪ್ರದೇಶದಲ್ಲೆಲ್ಲಾ ಇತರರ ಧರ್ಮಭೂತಜ್ಞಾನಗಳೂ ವ್ಯಾಪಿಸಿರು ವುವಷ್ಟೆ? ಹೀಗೆ ಪ್ರತಿಯೊಬ್ಬಜೀವಾತ್ಮನಿಗೂ ಪ್ರತಿಯೊಂದುಧರ್ಮಭೂತ ಜ್ಞಾನದೊಡನೆಯೂ ಸಂಯೋಗವು ತುಲ್ಯವಾಗಿರುವಲ್ಲಿ ಯಾವ ಧರ್ಮಭೂತ ಜ್ಞಾನವು ಯಾವ ಜೀವನದೆಂಬುದನ್ನು ಕಂಡುಹಿಡಿವುದಕ್ಕೆ ಯಾವ ದಾರಿಯೂ

ಇಲ್ಲವಾದುದರಿಂದ ಬದ್ಧಜೀವರಂತೆ ಮುಕ್ತಜೀವರಿಗೆ ಧರ್ಮಭೂತಜ್ಞಾನವ್ಯವಸ್ಥೆಯನ್ನು ಹೇಳಲಾಗುವುದಿಲ್ಲ.

ಅದೇತಕ್ಕೆ ? ಯಾವ ಮುಕ್ತಜೀವನು ಸಂಚರಿಸುವಾಗ ಅವನ ಜತೆಯಲ್ಲಿ ಯಾವ ಧರ್ಮಭೂತಜ್ಞಾನವು ಸಂಚರಿಸುವುದೋ ಅದೇ ಅವನದಾಗಿರುವುದೆಂದು ವ್ಯವಸ್ಥೆಯನ್ನು ಹೇಳಬಹುದಲ್ಲವೆ ? ಇಲ್ಲ ಇಂಥ ವ್ಯವಸ್ಥೆಯನ್ನು ಹೇಳಲಾಗುವುದಿಲ್ಲ. ದೀಪವು ಒಂದು ಕಡೆಯಿಂದ ಮತ್ತೊಂದುಕಡೆಗೆ ಹೋಗುವಾಗ ತನ್ನ ಪ್ರಭೆಯನ್ನು ತನ್ನ ಜತೆಯಲ್ಲಿ ಸೆಳೆದುಕೊಂಡು ಹೋಗಬಹುದು. ಏತಕ್ಕೆಂದರೆ ದೀಪಪ್ರಭೆ ದೀಪಕ್ಕಿಂತಲೂ ವಿಪುಲವಾದರೂ ಸರ್ವವ್ಯಾಪಕವಾದ ವಸ್ತುವಲ್ಲ. ದೀಪಪ್ರಭಾರಹಿತವಾದ ಪ್ರದೇಶವೂ ಇರುವುದರಿಂದ ಅಂಥ ಪ್ರದೇಶಕ್ಕೆ ತನ್ನ ಪ್ರಭೆಯನ್ನು ದೀಪವು ಸೆಳೆದುಕೊಂಡು ಹೋಗಬಹುದು. ಧರ್ಮಭೂತಜ್ಞಾನವಾದರೆ ಸರ್ವವ್ಯಾಪಕವಸ್ತುವಾದುದರಿಂದ ಜ್ಞಾನಸಂಯೋಗರಹಿತವಾದ ಪ್ರದೇಶವೇ ಇಲ್ಲವಾದಪ್ರಯುಕ್ತ ಜೀವನೆಂಬ ಜಾಡನು ತಾನು ಮಾತ್ರ ಸಂಚರಿಸಿ ತನ್ನ ಧರ್ಮಭೂತಜ್ಞಾನವೆಂಬ ಬಲೆಯ ಆ ಆ ಪ್ರದೇಶಗಳೊಡನೆ ಸಂಯೋಗವನ್ನು ಪಡೆಯಬಹುದಲ್ಲದೆ ಆ ಬಲೆಯನ್ನು ಮತ್ತೊಂದುಕಡೆಗೆ ಸೆಳೆಯಲಾರನು. ಆಕಾಶದ ಒಂದು ಪ್ರದೇಶವನ್ನು ತನ್ನ ಒಳಭಾಗದಲ್ಲಿ ತುಂಬಿಕೊಂಡಿರುವ ಒಂದಾನೊಂದು ಘಟವು ಒಂದು ಕಡೆಯಿಂದ ಮತ್ತೊಂದೆಡೆಗೆ ಹೋಗುವಾಗ ತನ್ನಲ್ಲಿ ಅಡಗಿರುವ ಆಕಾಶಪ್ರದೇಶವನ್ನು ಅಲ್ಲಲ್ಲಿಯೇ ಬಿಟ್ಟು ಮುಂದುಮುಂದಕ್ಕೆ ಹೋಗುತ್ತ ಅಲ್ಲಲ್ಲಿನ ಆಕಾಶಪ್ರದೇಶಗಳನ್ನು ಕ್ರಮವಾಗಿ ತುಂಬಿಕೊಳ್ಳುತ್ತಲೇ ಹೋಗುವುದಲ್ಲದೆ ಆಕಾಶವನ್ನೂ ಸೆಳೆದುಕೊಂಡೇ ಹೋಗಲಾರದಷ್ಟೆ ?

ಆದುದರಿಂದ ಒಬ್ಬ ಜೀವನಿಗೆ ಮತ್ತೊಂದು ಧರ್ಮಭೂತಜ್ಞಾನದೊಡನೆ ಸಂಬಂಧವಿಲ್ಲದೆ ಒಂದೇ ಧರ್ಮಭೂತಜ್ಞಾನದೊಡನೆ ಸಂಬಂಧವು ಇದ್ದಿದ್ದರೆ **ಅದು ಅವನದೆಂದೂ ಮತ್ತೊಂದು ಮತ್ತೊಬ್ಬನದೆಂದೂ** ವ್ಯವಸ್ಥೆಯನ್ನು ಹೇಳಬಹುದಾಗಿದ್ದಿತು, ಹಾಗಿಲ್ಲದೆ ಸಕಲಧರ್ಮಭೂತಜ್ಞಾನಗಳೊಡನೆಯೂ ಸಕಲ ಮುಕ್ತಜೀವರಿಗೂ ಸಂಬಂಧವು ತುಲ್ಯವಾಗಿರುವಾಗ ವ್ಯವಸ್ಥೆಯನ್ನು ಹೇಳುವ ಬಗೆ ಹೇಗೆ ?

**ಇಂತು ತತ್ತ್ವಶುದ್ಧಿಯೆಂಬ ವಿಶಿಷ್ಟಾದ್ವೈತಪ್ರಕರಣಗ್ರಂಥದೊಳ್ ಧರ್ಮಭೂತಜ್ಞಾನಪರಿಚ್ಛೇದದಲ್ಲಿ ದ್ವಾದಶವಿಧಾಕ್ಷೇಪನಿರೂಪಣಪ್ರಕರಣಂ ಷಷ್ಠಂ ೬**



# ಸಪ್ತಮಪ್ರಕರಣಂ.

---

## ೯೦೧. ಉಕ್ತೇಷು ದ್ವಾದಶಸ್ವಾಕ್ಷೇಪೇಷು ಪ್ರಥಮಾಕ್ಷೇಪ ಪರಿಹಾರಃ.

ಹೀಗೆ ತೋರಿಸಿದ ಹನ್ನೆರಡು ಆಕ್ಷೇಪಗಳಿಗೂ ಸಮಾಧಾನಗಳನ್ನು ಈ ಮುಂದೆ ಹೇಳುವರೀತಿಯಲ್ಲಿ ಕ್ರಮವಾಗಿ ತಿಳಿಯಬಹುದು.—

**ಮೊದಲನೆಯ ಆಕ್ಷೇಪಕ್ಕೆ ಪರಿಹಾರ**—ಅಪೌರುಷೇಯವಾಗಿಯೂ, ಆದುದರಿಂದಲೇ ನಿತ್ಯನಿರ್ದೋಷವಾಗಿಯೂ, ಇರುವ ಆಗಮವನ್ನೇ ಜ್ಞಾನದ ನಿತ್ಯತ್ವಕ್ಕೆ ಪ್ರಮಾಣವಾಗಿ ತಿಳಿಯಬಹುದು.

## ೯೦೨. ತತ್ರ ಶ್ರುತಿಬಲಾತ್ ಜ್ಞಾನಸ್ಯ ನಿತ್ಯತ್ವಸಿದ್ಧಿಃ

**"ನ ವಿಜ್ಞಾತುರ್ವಿಜ್ಞಾತೇರ್ವಿಪರಿಲೋಪೋ ವಿದ್ಯತೇ" "ನ ಹಿ ದ್ರಷ್ಟುರ್ದೃಷ್ಟೇರ್ವಿಪರಿಲೋಪೋ ವಿದ್ಯತೇ ಅವಿನಾಶಿತ್ವಾತ್"** ಇತ್ಯಾದಿ ಪ್ರಮಾಣಗಳನ್ನು ಮೊದಲೇ ಉದಾಹರಿಸಿರುವೆವಷ್ಟೆ? ಪರಮಾಚಾರ್ಯರಾದ **ಯಾಮುನಮುನಿಗಳು** ಆತ್ಮಸಿದ್ಧಿ ಗ್ರಂಥದಲ್ಲಿ ಈ ಶ್ರುತಿಗಳಿಗೆ ವಿವರಣವನ್ನು "ಜ್ಞಾತಾವೆನಿಸಿಕೊಂಡ ಆತ್ಮನಿಗೆ ಅವಿನಾಶಿತ್ವವಿರುವುದೆಂಬ ಕಾರಣದಿಂದಲೇ ಜ್ಞಾನಕ್ಕೆ ಅವಿನಾಶಿತ್ವವನ್ನು ಉಪಪಾದನೆಮಾಡಿ ತೋರಿಸತಕ್ಕ ಈ ಶ್ರುತಿಯೇ ಧರ್ಮಭೂತಜ್ಞಾನವೆಂಬುದು ಜ್ಞಾತಾವಿಗೆ ಸ್ವರೂಪಪ್ರಯುಕ್ತವಾದುದರಿಂದ ಆಗಂತುಕವಲ್ಲವಾದಕಾರಣ ಸ್ವರೂಪವಿರುವವರೆಗೂ ಜ್ಞಾನವೂ ಇರುವುದೆಂದು ತೋರಿಸುವುದರಮೂಲಕ ಜ್ಞಾತೃಸ್ವರೂಪವು ನಿತ್ಯವಾದುದರಿಂದ ಜ್ಞಾನವೂ ನಿತ್ಯವಾಗಿರುವುದೆಂದು ತೋರಿಸುವುದು" ಈ ರೀತಿಯಲ್ಲಿ ತೋರಿಸಿರುವರು.

ಹೀಗೆ ನಿತ್ಯನಿರ್ದೋಷವಾಗಿಯೂ ಅಬಾಧಿತವಾಗಿಯೂ ಇರುವ ಶ್ರುತಿ ಪ್ರಮಾಣದಿಂದ ಜ್ಞಾನಕ್ಕೆ ನಿತ್ಯತ್ವವು ಸಿದ್ಧವಾಗಿರುವಾಗ ಇದನ್ನು ಅನುಪಪನ್ನ ವೆಂದು ಹೇಗೆ ಹೇಳುವುದು? ಪ್ರಮಾಣಕ್ಕೆ ಅನುಸಾರವಾಗಿ ಉಪಪತ್ತಿಯನ್ನು ಕಲ್ಪಿಸಿಕೊಳ್ಳಬೇಕಲ್ಲದೆ ಉಪಪತ್ತಿಗೆ ಅನುಸಾರವಾಗಿ ಪ್ರಮಾಣವನ್ನು ಪರಿವರ್ತಿ ಸಲಾಗುವುದಿಲ್ಲ. ತಲೆಗೆ ಅನುಸಾರವಾಗಿ ಉಷ್ಣೀಷವನ್ನು ಕಲ್ಪಿಸಿಕೊಳ್ಳಬೇಕಲ್ಲದೆ ಉಷ್ಣೀಷಕ್ಕೆ ಅನುಸಾರವಾಗಿ ತಲೆಯನ್ನು ಹೆಚ್ಚು ಕಡಮೆ ಮಾಡಲಾಗುವುದಿಲ್ಲ ವಷ್ಟೆ?

## ೧೦೩. ಸ್ಮೃತಿಬಲಾದಪಿ ಸೋದಾಹರಣಂ ಜ್ಞಾನಸ್ಯ ನಿತ್ಯತ್ವೋಪಪಾದನಂ.

ಉದಾಹೃತಗಳಾದ ಈ ಶ್ರುತಿಗಳ ಅರ್ಥವನ್ನೇ ಅನೇಕೋದಾಹರಣೆಗಳಿಂದ ಸ್ಪಷ್ಟಪಡಿಸುವುದಕ್ಕಾಗಿ ಹೊರಟಿರುವ ಶ್ರೀಶೌನಕಮಹರ್ಷಿ ಈರೀತಿಯಲ್ಲಿ ಅಪ್ಪಣೆ ಕೊಡಿಸಿರುವರು.—

" ಯಥಾ ನ ಕ್ರಿಯತೇ ಜ್ಯೋತ್ಸ್ನಾ ಮಲಪ್ರಕ್ಷಾಳನಾನ್ಮಣೇಃ ।
ದೋಷಪ್ರಹಾಣಾನ್ನ ಜ್ಞಾನಮಾತ್ಮನಃ ಕ್ರಿಯತೇ ತಥಾ ॥
ಯಥೋದಪಾನಕರಣಾತ್ಕ್ರಿಯತೇ ನ ಜಲಾಂಬರಂ ।
ಸದೇವ ನೀಯತೇ ವ್ಯಕ್ತಿಮಸತಃ ಸಂಭವಃ ಕುತಃ ॥
ತಥಾ ಹೇಯಗುಣಧ್ವಂಸಾದವಬೋಧಾದಯೋ ಗುಣಾಃ ।
ಪ್ರಕಾಶ್ಯಂತೇ ನ ಜನ್ಯಂತೇ ನಿತ್ಯಾ ಏವಾತ್ಮನೋ ಹಿ ತೇ " ॥

" ಗಣಿಯಲ್ಲಿ ಹೂತುಹೋಗಿರುವ ರತ್ನವನ್ನು ಹೊರಗೆ ತೆಗೆದು ನೀರಿನಲ್ಲಿ ತೊಳೆವುದರಮೂಲಕ ಅದರ ಸ್ಥೂಲವಾದ ಕೊಳೆಯನ್ನೂ, ಸಾಣೆಯಲ್ಲಿ ಒರೆಯು ವುದರಮೂಲಕ ಅದರ ಸೂಕ್ಷ್ಮವಾದ ಕೊಳೆಯನ್ನೂ ದೂರಪಡಿಸಿದೆವಾದರೆ ರತ್ನಕ್ಕೆ ಸ್ವಾಭಾವಿಕವಾದ ಕಾಂತಿ ಆಗ ಪ್ರಕಾಶಿಸುತ್ತದೆಯಲ್ಲದೆ ಇಲ್ಲದಿದ್ದ ಕಾಂತಿ ಆಗ ಅದಕ್ಕೆ ಹುಟ್ಟುವುದಿಲ್ಲ; ನಮ್ಮ ಪ್ರಯತ್ನಗಳೆಲ್ಲವೂ ರತ್ನದ ಕೊಳೆಯನ್ನು ಹೋಗ ಲಾಡಿಸುವುದರಲ್ಲಿ ಸಮಾಪ್ತಿಯನ್ನು ಹೊಂದಿರುವುವಲ್ಲದೆ ಇಲ್ಲದಿದ್ದ ಅಪೂರ್ವ ವಾದ ಕಾಂತಿಯನ್ನು ರತ್ನಕ್ಕೆ ಉಂಟುಮಾಡಲಾರವು. ಹಾಗೆ ಉಂಟುಮಾಡ ಬಲ್ಲುವಾದರೆ ಬೀದಿಬೀದಿಗಳಲ್ಲಿಯೂ ಧಾರಾಳವಾಗಿ ಸಿಕ್ಕುವ ಕಲ್ಲುಗಳಲ್ಲಿಯೇ ಅಂಥ ಕಾಂತಿಯನ್ನು ಉಂಟುಮಾಡಿಕೊಳ್ಳಬಹುದಾದುದರಿಂದ ಗಣಿಯನ್ನು ಹುಡು ಕಿಕೊಂಡು ಹೋಗಿ ಶ್ರಮಪಡಬೇಕಾದುದಿಲ್ಲವಷ್ಟೆ ?

ಅದರಂತೆಯೇ ಪ್ರಕೃತಿಯೆಂಬ ಗಣಿಯಲ್ಲಿ ಅನಾದಿಕಾಲದಿಂದಲೂ ಹೂತು ಹೋಗಿರುವ ಆತ್ಮನೆಂಬ ಕೌಸ್ತುಭರತ್ನವನ್ನು ಪ್ರಕೃತಿಯಿಂದ ಹೊರಪಡಿಸಿ ಎಂದರೆ ವಿವೇಕಿಸಿ, ಅನಾದಿಕಾಲದಿಂದಲೂ ಇಂಥ ರತ್ನದಲ್ಲಿ ಅಂಟಿಹೋಗಿರುವ ಪುಣ್ಯಪಾಪಗಳೆಂಬ ಕರ್ಮರೂಪವಾದ ಅವಿದ್ಯೆಯೆಂಬ ಕೊಳೆಯನ್ನು ಶಾಸ್ತ್ರಮಾ ರ್ಗಸಹಾಯದಿಂದ ದೂರಪಡಿಸಿದೆವಾದರೆ ಆತ್ಮನಿಗೆ ಸ್ವಾಭಾವಿಕವಾಗಿರುವ ಜ್ಞಾನವು ಸಂಕೋಚಾವಸ್ಥೆಯನ್ನು ಬಿಟ್ಟು ಸರ್ವತೋಮುಖವಾಗಿ ಪಕಾಸವನ್ನು ಪಡೆದು ಆಗ ಪ್ರಕಾಶಕ್ಕೆ ಬರುವುದಲ್ಲದೆ ಅವಿದ್ಯಮಾನವಾದ ಅಪೂರ್ವಜ್ಞಾನವು

ಆತ್ಮನಿಗೆ ಆಗ ಹುಟ್ಟುವುದಿಲ್ಲ." ಎಂಬುದು ಮೊದಲನೆಯ ಶ್ಲೋಕದ ತಾತ್ಪರ್ಯ ವಾಗಿರುವುದು.

"ಭೂಮಿಯ ಗರ್ಭದಲ್ಲಿ ಅಡಗಿರುವ ಜಲವನ್ನು ಪಡೆಯಬೇಕೆಂದು ಅಪೇಕ್ಷಿಸುವ ಮನುಷ್ಯನು ಬಾವಿಯನ್ನು ತೋಡುವುದಕ್ಕೆ ಪ್ರಯತ್ನಪಟ್ಟು, ಪಿಕಾಸಿ ಗುದ್ದಲಿ ಮೊದಲಾದ ಸಾಧನಗಳಿಂದ ಮಣ್ಣು ಕಲ್ಲು ಮುಂತಾದ ಆವರಣವಸ್ತುಗಳನ್ನು ದೂರಪಡಿಸುತ್ತಲೇ ಇದ್ದರೆ, ಕೊನೆಗೆ ಭೂಮಿಯ ಗರ್ಭಗತವಾದ ಜಲವೂ, ಜಲದ ಮೇಲ್ಭಾಗದಲ್ಲಿ ಇರುವ ಆಕಾಶವೂ ಸಮಗೆ ಗೋಚರವಾಗುವುವು. ಆದರೆ ಮೊದಲಿಂದಲೂ ಆ ಆ ಸ್ಥಳದಲ್ಲಿ ಇದ್ದ ಜಲವೂ ಆಕಾಶವೂ ಈಗ ಸಮಗೆ ಗೋಚರವಾದುವೆಂಬುದುಮಾತ್ರವಲ್ಲದೆ ನಾವು ಬಾವಿಯನ್ನು ತೋಡಿದುದರಿಂದ ಜಲವೂ ಆಕಾಶವೂ ಅಲ್ಲಿ ಹುಟ್ಟಲಿಲ್ಲ. ಅವು ಸಮಗೆ ಗೋಚರವಾಗುವುದಕ್ಕೆ ಅಡ್ಡಿಯಾಗಿದ್ದ ಆವರಣವಸ್ತುವನ್ನು ದೂರಪಡಿಸುವುದರಲ್ಲಿಯೇ ನಮ್ಮ ಪ್ರಯತ್ನವು ವಿಶ್ರಾಂತವಾಗಿರುವುದಲ್ಲದೆ ಅವಿದ್ಯಮಾನಗಳಾದ ಅವುಗಳನ್ನು ಉಂಟುಮಾಡಲಾರದು. ಪೂರ್ವದಲ್ಲಿಯೇ ಇದ್ದ ಜಲವನ್ನೂ ಆಕಾಶವನ್ನೂ ಪ್ರಕಾಶಕ್ಕೆ ತಂದೆವಲ್ಲದೆ ಇಲ್ಲದಿದ್ದ ಜಲವನ್ನೂ ಆಕಾಶವನ್ನೂ ಉಂಟುಮಾಡಲಿಲ್ಲ. ಇಲ್ಲದಿರುವ ವಸ್ತು ಯಾವಾಗಲೂ ಉಂಟಾಗಲಾರದಷ್ಟೆ ?

ಇದರಂತೆ ಆತ್ಮನಿಗೆ ಪ್ರಕೃತಿಸಂಬಂಧದಿಂದ ಉಂಟಾಗಿರುವ ಹೇಯಗುಣಗಳೆಂಬ ಆವರಣಗಳು ಅವನ ಸ್ವಾಭಾವಿಕಗಳಾದ ಜ್ಞಾನಾದಿಗುಣಗಳ ಪ್ರಕಾಶಕ್ಕೆ ಅಡ್ಡಿಯನ್ನು ಮಾಡುತ್ತಿರುವಾಗ ಶಾಸ್ತ್ರೀಯವಾದ ಉಪಾಯದಿಂದ ಅಂಥ ಆವರಣಗಳನ್ನು ನಾವು ದೂರಪಡಿಸಿದೆವಾದರೆ ಆಗ ಅವನ ಸ್ವಾಭಾವಿಕಕಲ್ಯಾಣಗುಣಗಳು ಪ್ರಕಾಶಕ್ಕೆ ಬರುವುವಲ್ಲದೆ ಹುಟ್ಟುವುದಿಲ್ಲ. ಆ ಗುಣಗಳು ಅವನಿಗೆ ಆಗಂತುಕಗಳಲ್ಲದೆ ನಿತ್ಯಗಳಾಗಿರುವುದರಿಂದ ಅವುಗಳಿಗೆ ಉತ್ಪತ್ತಿ ಸಂಭವಿಸುವುದಿಲ್ಲವಷ್ಟೆ ? ಎಂಬುದು ಎರಡನೆಯ ಮೂರನೆಯ ಶ್ಲೋಕಗಳ ತಾತ್ಪರ್ಯವಾಗಿರುವುದು.

## ೯೦೪. ಅಥ ದ್ವಿತೀಯಾಕ್ಷೇಪಪರಿಹಾರಃ.

ಎರಡನೆಯ ಆಕ್ಷೇಪಕ್ಕೆ—ಉಕ್ತಗಳಾದ ಪ್ರಮಾಣಗಳಿಂದ ಜ್ಞಾನಕ್ಕೆ ನಿತ್ಯತ್ವವು ಸಿದ್ಧವಾಗಿದ್ದರೂ ಜಾಗರ ಸುಷುಪ್ತಿ ಮುಂತಾದ ಅವಸ್ಥಾವಿಭಾಗಕ್ಕೆ ಏನೂ ಚ್ಯುತಿಯಿಲ್ಲ. ಪ್ರಕೃತಿಯಲ್ಲಿರುವ ಸತ್ತ್ವರಜಸ್ತಮೋಗುಣಗಳು ಪ್ರಕೃತಿವಶ್ಯನಾದ ಆತ್ಮನಲ್ಲಿ ವ್ಯಾಪಿಸಿರುವುದರಿಂದ ಒಂದೊಂದು ಸಮಯದಲ್ಲಿ ಒಂದೊಂದು ಗುಣಕ್ಕೆ ಉದ್ರೇಕವುಂಟಾಗುತ್ತಲೇ ಇರುವುದು. ಸತ್ತ್ವಗುಣವು ತಲೆಯೆತ್ತಿ

ದಾಗ ಜ್ಞಾನವು ಪ್ರಕಾಶಕ್ಕೆ ಬರುವುದಾದರೆ ಆಗ ಅದನ್ನು ಜಾಗರಾವಸ್ಥೆ ಯೆಂದೂ, ತಮೋಗುಣವು ತಲೆಯೆತ್ತಿದಾಗ ಇಂಥ ತಮಸ್ಸಿನಿಂದ ಮೋಹ ಗೊಂಡು ಮೂರ್ಛಿತವಾದ ಮನಸ್ಸು ಮಂಕಾದುದಾಗಿ ತನ್ನ ಕೆಲಸವನ್ನು ಮಾಡ ಲಾರದೆ ಹೋಗುವುದಾದಪ್ರಯುಕ್ತ ಜ್ಞಾನಪ್ರಸರಣಕ್ಕೆ ಪ್ರಧಾನದ್ವಾರವಾ ಗಿದ್ದ ಇಂಥ ಮನಸ್ಸು ಕದವನ್ನು ಹಾಕಿಕೊಂಡಮೇಲೆ ಜ್ಞಾನವು ಹೊರಗೆ ಹೊರ ಡಲು ದಾರಿಯನ್ನು ಕಾಣದೆ ಆತ್ಮನಲ್ಲಿಯೇ ಗುಪ್ತವಾಗಿರುವಾಗ ಇಂಥ ಅವಸ್ಥೆ ಯನ್ನು ಸುಷುಪ್ತ್ಯವಸ್ಥೆಯೆಂದೂ ತಿಳಿಯಬಹುದು.

ಇದರಿಂದ ಆತ್ಮನಿಗೆ ಜ್ಞಾನವು ನಿತ್ಯವಾಗಿದ್ದರೂ, ಅಂಥ ಜ್ಞಾನಕ್ಕೆ ಪ್ರಸ ರಣಶಕ್ತಿಯೂ ಸ್ವಾಭಾವಿಕವಾಗಿದ್ದರೂ, ತಮೋಗುಣದಿಂದ ಈ ಪ್ರಸರಣಶಕ್ತಿ ಸುಷುಪ್ತಿಕಾಲದಲ್ಲಿ ಪ್ರತಿಬದ್ಧವಾಗುವುದೆಂದು (ತಡೆಯಲ್ಪಡುವುದೆಂದು) ಹೇಳಿ ದಂತಾಯಿತು. ಪ್ರತಿಬದ್ಧವಾದಮಾತ್ರಕ್ಕೆ ಜ್ಞಾನವು ನಿತ್ಯವಲ್ಲವೆಂದಾಗಲಿ, ಪ್ರಸರಣ ಶಕ್ತಿ ಇದಕ್ಕೆ ಸ್ವಾಭಾವಿಕವಲ್ಲವೆಂದಾಗಲಿ ಹೇಳಲಾಗುವುದಿಲ್ಲ.

ಅಗ್ನಿಗೆ ದಾಹಕತ್ವಶಕ್ತಿ ಸ್ವಾಭಾವಿಕವಾಗಿದ್ದರೂ ಮಣಿವಿಶೇಷದ ಸಾನ್ನಿ ಧ್ಯದಲ್ಲಿ ಈ ಶಕ್ತಿ ನಿರುದ್ಧವಾಗುವುದು. ಆದಮಾತ್ರಕ್ಕೆ ದಾಹಕತ್ವಶಕ್ತಿ ಅಗ್ನಿಗೆ ಸ್ವಾಭಾವಿಕವಲ್ಲವೆಂದು ಹೇಳಲಾದೀತೆ? ಮಣಿವಿಶೇಷವೆಂಬ ಪ್ರತಿಬಂಧಕವು ದೂರ ವಾದ ಮೇಲೆ ಕಾರಣಾಂತರವನ್ನು ಎದುರುನೋಡದೆಯೇ ದಾಹಕತ್ವಶಕ್ತಿ ತಲೆ ಯೆತ್ತುವುದಷ್ಟೆ ?

ಅದೇತಕ್ಕೆ ? ಸುಷುಪ್ತಿಕಾಲದಲ್ಲಿ ಜ್ಞಾನವು ಯಾವಾಗಲೂ ತೋರುವುದೇ ಇಲ್ಲವಾದುದರಿಂದ ಆಗ ಜ್ಞಾನವೇ ಇಲ್ಲವೆಂದು ಏತಕ್ಕೆ ಹೇಳಬಾರದು ? ಹೀಗಿರು ವಲ್ಲಿ ಜ್ಞಾನವು ಯಾವದಾತ್ಮಭಾವಿಯೆಂದು ಹೇಗೆ ಹೇಳುವುದು ?

ಹೀಗೆ ಹೇಳುವುದು—ಸುಷುಪ್ತಿಕಾಲದಲ್ಲಿ ತೋರದಿದ್ದ ಮಾತ್ರಕ್ಕೆ ಆಗ ಜ್ಞಾನವೇ ಇಲ್ಲವೆಂದು ಹೇಳಲಾಗುವುದಿಲ್ಲ. ತಮೋಗುಣವೆಂಬ ಪ್ರತಿಬಂಧಕದ ವೇಗದಿಂದ ಅನಭಿವ್ಯಕ್ತಸ್ವರೂಪವಾಗಿ ಒಳಗೆ ಅಡಗಿದ್ದ ಜ್ಞಾನವು ಪ್ರತಿಬಂಧಕ ನಿವೃತ್ತಿಯಾದಮೇಲೆ ಜಾಗರಾವಸ್ಥೆಯಲ್ಲಿ ತಾನಾಗಿಯೇ ಅಭಿವ್ಯಕ್ತವಾಗಿ ಹೊರ ಡುವುದು.

ಬಾಲ್ಯಾವಸ್ಥೆಯಲ್ಲಿ ಶರೀರದೊಳಗೆ ಅನಭಿವ್ಯಕ್ತಸ್ವರೂಪವಾಗಿ ಅಡಗಿರುವ ಪುರುಷತ್ವಶಕ್ತಿ ಯೌವನಾವಸ್ಥೆಯಲ್ಲಿ ಅಭಿವ್ಯಕ್ತವಾಗುವುದಷ್ಟೆ ? ಈ ಅರ್ಥವನ್ನು ಸೂತ್ರಕಾರರು **"ಪುಂಸ್ತ್ವಾದಿವತ್ತ್ವಸ್ಯ ಸತೋಽಭಿವ್ಯಕ್ತಿಯೋಗಾತ್"**

ಎಂಬ ಸೂತ್ರದಲ್ಲಿ ಸ್ಪಷ್ಟವಾಗಿ ಹೇಳಿರುವರು. ಆದಕಾರಣ ಸುಷುಪ್ತ್ಯವಸ್ಥೆಯಲ್ಲಿ ಪ್ರಸರಿಸುವುದೇ ಇಲ್ಲವೆಂದೂ, ಜಾಗರಾವಸ್ಥೆಯಲ್ಲಿಯೇ ಪ್ರಸರಿಸಬೇಕೆಂದೂ, ಇರುವ ಇಂಥ ನಿಯಮಕ್ಕೆ ಒಳಪಟ್ಟಿರುವ ಜ್ಞಾನವು ವಿಷಯಪ್ರಕಾಶನವೇಳೆಯಲ್ಲಿಯೇ ಪ್ರಕಾಶಿಸುತ್ತದೆಯೆಂಬುದು ಸಿದ್ಧವಾದುದರಿಂದ ಇದು ಯಾವದಾತ್ಮಭಾವಿಯೆನಿಸಿಕೊಳ್ಳುವುದರಲ್ಲಿ ತಡೆಯಿಲ್ಲ. ಜ್ಞಾನಪ್ರಸರಣಕ್ಕೆ ಅರ್ಹವಾದ ಅವಸ್ಥೆ ಜಾಗರಾವಸ್ಥೆಯೆಂದೂ, ಅದಕ್ಕೆ ಅನರ್ಹವಾದ ಅವಸ್ಥೆ ಸುಷುಪ್ತ್ಯವಸ್ಥೆಯೆಂದೂ, ಅವಸ್ಥೆಗಳಿಗೆ ತಾರತಮ್ಯವು ಸಂಭವಿಸಬಹುದಾದುದರಿಂದ ಜ್ಞಾನವು ನಿತ್ಯವಾದಮಾತ್ರಕ್ಕೆ ಸರ್ವದಾ ಜಾಗರಾವಸ್ಥೆಯೆಂಬುದೊಂದೇ ಇರಬೇಕೆಂಬ ನಿರ್ಬಂಧವೂ ಇಲ್ಲ.

## ೯೦೫ ಅಥ ತೃತೀಯಾಕ್ಷೇಪಪರಿಹಾರಃ

ಮೂರನೆಯ ಆಕ್ಷೇಪಕ್ಕೆ—ಪರಮಾಚಾರ್ಯರಾದ ಶ್ರೀಯಾಮುನಮುನಿಗಳು ಅಪ್ಪಣೆಕೊಡಿಸಿರುವುದೇನೆಂದರೆ—"ಪಾಣಿ ಪಾದ ಮುಂತಾದ ಅವಯವಗಳು ಆ ಆ ಪದಾರ್ಥಗಳೊಡನೆ ಸಂಯೋಗವನ್ನು ಪಡೆವುದಕ್ಕೆ ಹೊರಡುವ ಕಾಲದಲ್ಲಿ ತ್ವಗಿಂದ್ರಿಯವೂ ಅವುಗಳ ಜತೆಯಲ್ಲಿ ಹೊರಟು ಆ ಆ ಪದಾರ್ಥಗಳ ಸಂಯೋಗವನ್ನು ಹೇಗೆ ಪಡೆವುದೋ ; ಅದರಂತೆ ಇಂದ್ರಿಯವು ಹೊರಡುವ ಕಾಲದಲ್ಲಿ ಜ್ಞಾನವೂ ಸಹ ಅದರೊಡನೆ ಹೊರಟು ಆ ಆ ಪದಾರ್ಥಗಳೊಡನೆ ಸಂಯೋಗವನ್ನು ಪಡೆವುದು.

## ೯೦೬ ಅಮೂರ್ತಸ್ಯಾಪಿ ಜ್ಞಾನಸ್ಯ ಸದೃಷ್ಟಾಂತಂ ಪ್ರಸರಣಕ್ರಿಯಾವತ್ತ್ವೋಪಪಾದನಂ

"ಮೂರ್ತಿಮತ್ತಲ್ಲದ ಆಕಾಶದಲ್ಲಿ ಕ್ರಿಯಾಸಾಮಾನ್ಯವೂ ಹೇಗೆ ಸಂಭವಿಸುವುದಿಲ್ಲವೋ ; ಅದರಂತೆ ಜ್ಞಾನವೂ ಮೂರ್ತಿಮತ್ಪದಾರ್ಥವಲ್ಲವಾದುದರಿಂದ ಕ್ರಿಯಾಸಾಮಾನ್ಯವೇ ಇದರಲ್ಲಿ ಸಂಭವಿಸುವುದಕ್ಕೆ ಅವಕಾಶವಿಲ್ಲದಿರುವಾಗ ಪ್ರಸರಣವೆಂಬ ಕ್ರಿಯಾವಿಶೇಷವು ಹೇಗೆ ಇದಕ್ಕೆ ಸಂಭವಿಸೀತು" ಎಂದು ಆಶಂಕಿಸ ಕೆಲಸವಿಲ್ಲ. ಏತಕ್ಕೆಂದರೆ ಕ್ರಿಯೆಯನ್ನು ಪಡೆವುದಕ್ಕೆ ಮೂರ್ತಿಮತ್ತಾಗಿಯೇ ಇರಬೇಕೆಂಬ ನಿರ್ಬಂಧವಿಲ್ಲ. ಆಕಾಶವು ಮೂರ್ತಿಮತ್ತಲ್ಲದಿದ್ದರೂ ವ್ಯಾಪನ ಅವಕಾಶಪ್ರದಾನ ಮೊದಲಾದ ಕ್ರಿಯೆಗಳಿಗೆ ಭಾಗಿಯಾಗಿಯೇ ಇರುವುದಷ್ಟೆ ? ಅದರಂತೆ ಜ್ಞಾನವೂ ಅಮೂರ್ತವಾಗಿದ್ದರೂ ಪ್ರಸರಣಾದಿಕ್ರಿಯೆಗಳಿಗೆ ಭಾಗಿಯಾಗಿಯೇ ಇರಬಹುದು.

## ೯೦೭. ಇಂದ್ರಿಯೇಣ ಸಹ ಜ್ಞಾನಸ್ಯಾಪಿ ಬಹಿಃಪ್ರಸರಣಸದ್ಭಾವೇ ಪ್ರಮಾಣಪ್ರದರ್ಶನಂ.

ಇಂದ್ರಿಯಗಳು ವಿಷಯಗಳಲ್ಲಿ ಸಂಚರಿಸುವಾಗ ಜ್ಞಾನವೂ ಅವುಗಳ ಜತೆಯಲ್ಲಿ ಹೊರಡುತ್ತದೆಯೆಂಬ ಅಂಶವನ್ನು ಗೀತಾಚಾರ್ಯನು ಸ್ಪಷ್ಟವಾಗಿ ದ್ವಿತೀಯಾಧ್ಯಾಯದ ಅರವತ್ತೇಳನೆಯ ಶ್ಲೋಕದಲ್ಲಿ ಅಪ್ಪಣೆಕೊಡಿಸಿರುವನು—

"ಇಂದ್ರಿಯಾಣಾಂ ಹಿ ಚರತಾಂ ಯನ್ಮನೋಽನು ವಿಧೀಯತೇ ।
ತದಸ್ಯ ಹರತಿ ಪ್ರಜ್ಞಾಂ ವಾಯುರ್ನಾವಮಿವಾಂಭಸಿ ॥"

"ಯಾವನಾದರೊಬ್ಬ ಚೇತನನು ಬಾಹ್ಯವಿಷಯಗಳನ್ನು ಹುಡಿಕಿಕೊಂಡು ಅಲೆದಾಡುತ್ತಿರುವ ಇಂದ್ರಿಯಗಳನ್ನು ಹಿಂಬಾಲಿಸುವಂತೆ ತನ್ನ ಮನಸ್ಸನ್ನು ಅಟ್ಟಿದನಾದರೆ ಆಗ ಅವನಿಂದ ಓಡಿಸಲ್ಪಟ್ಟ ಮನಸ್ಸು ಇಂದ್ರಿಯಗಳ ಜತೆಯಲ್ಲಿ ಓಡುವಾಗ ತಾನು ಮಾತ್ರ ಓಡುವುದಿಲ್ಲ; ಜಲದಲ್ಲಿ ಒಂದುಕಡೆಗೆ ಒಯ್ಯಲ್ಪಡುತ್ತಿರುವ ಹಡಗನ್ನು ಪ್ರತಿಕೂಲವಾಯು ಮತ್ತೊಂದುಕಡೆಗೆ ಸೆಳೆದುಕೊಂಡು ಹೋಗುವಂತೆ ಇವನ ಬುದ್ಧಿಯನ್ನೂ ಸೆಳೆದುಕೊಂಡೇ ಹೋಗುವುದು. ಎಂದರೆ ಬುದ್ಧಿಯನ್ನೂ ವಿಷಯಾಸಕ್ತವಾಗಿ ಮಾಡುವುದು" ಎಂಬುದು ಶ್ಲೋಕಾಭಿಪ್ರಾಯವು—

ಇದೇ ಅರ್ಥವನ್ನು ಸ್ವಾಯಂಭುವಮನುಚಕ್ರವರ್ತಿಯೂ ತಮ್ಮ ಸ್ಮೃತಿಯಲ್ಲಿ ದ್ವಿತೀಯಾಧ್ಯಾಯದ ತೊಂಬತ್ತೊಂಬತ್ತನೆಯ ಶ್ಲೋಕದಲ್ಲಿ ಅಪ್ಪಣೆ ಕೊಡಿಸಿರುವರು—

"ಇಂದ್ರಿಯಾಣಾಂ ತು ಸರ್ವೇಷಾಂ ಯದ್ಯೇಕಂ ಕ್ಷರತೀಂದ್ರಿಯಂ ।
ತೇನಾಸ್ಯ ಕ್ಷರತಿ ಪ್ರಜ್ಞಾ ದೃತೇಃ ಪಾತ್ರಾದಿವೋದಕಂ ॥"

"ಚೇತನನಿಗೆ ತತ್ತ್ವಜ್ಞಾನಸಂಪಾದನೆಗೋಸ್ಕರ ಉಪಕರಣಗಳಾಗಿ ಕೊಡಲ್ಪಟ್ಟಿರುವ ಇಂದ್ರಿಯಗಳೊಳಗೆ ಯಾವುದಾದರೊಂದು ಇಂದ್ರಿಯವು ತನ್ನ ನಿಯಮವನ್ನು ತಪ್ಪಿ ವಿಷಯಾಸಕ್ತವಾದರೂ, ಹೀಗೆ ವಿಷಯಲಂಪಟನಾದ ಈ ಚೇತನನಿಗೆ ಆಗ ಉಳಿದ ಇಂದ್ರಿಯಗಳಿಂದಲೂ ತತ್ತ್ವಜ್ಞಾನವು ಸ್ಥಿರಪಡಲಾರದು; ವಿಷಯಾಸಕ್ತವಾದ ಆ ಒಂದು ಇಂದ್ರಿಯದ ಜತೆಯಲ್ಲಿಯೇ ಜ್ಞಾನವೂ ವಿಷಯಾಸಕ್ತವಾಗಿ ಸೋರಿಹೋಗುವುದು. ಚರ್ಮನಿರ್ಮಿತವಾದ ಪಾತ್ರದಲ್ಲಿ ಯಾವುದಾದರೊಂದು ಭಾಗದಲ್ಲಿ ಅಲ್ಪವಾದ ಛಿದ್ರವಿದ್ದರೂ ಆ ಪಾತ್ರದ ಎಲ್ಲಾ ಭಾಗದಲ್ಲಿರುವ ನೀರೂ ಆ ಛಿದ್ರದ ಮೂಲಕವಾಗಿ ಸೋರಿಯೇ ಹೋಗುವುದಲ್ಲದೆ ಪಾತ್ರದಲ್ಲಿ ಸ್ವಲ್ಪವೂ ನಿಲ್ಲಲಾರದಷ್ಟೆ" ಎಂಬುದು ಈ ಶ್ಲೋಕದ ಅಭಿಪ್ರಾಯ

ವಾಗಿರುವುದು. ಹೀಗೆ ಉದಾಹೃತಗಳಾದ ಭಗವದ್ಗೀತಾವಮಾನವವಚನಗಳಿಂದ ಜ್ಞಾನಕ್ಕೆ ಪ್ರಸರಣವೆಂಬುದು ಅಬಾಧಿತವಾಗಿ ಸಿದ್ಧವಾಗುವುದು. ಇದಲ್ಲದೆ **"ತದಕ್ಷರಂ ತತ್ಸವಿತುರ್ವರೇಣ್ಯಂ ಪ್ರಜ್ಞಾ ಚ ತಸ್ಮಾತ್ಪ್ರಸೃತಾ ಪುರಾಣೀ"** ಎಂಬ ಶ್ವೇತಾಶ್ವತರಶ್ರುತಿಯೂ ಅತ್ಯಂತಸ್ಫುಟವಾಗಿ ಜ್ಞಾನಕ್ಕೆ ಪ್ರಸರಣವನ್ನು ಉದ್ಘೋಷಿಸುತ್ತಿರುವುದು—

"ಸಕಲಪ್ರಾಣಿಗಳಿಗೂ ಪ್ರೇರಕನಾಗಿ ಹೃದಯಸ್ಥಾನದಲ್ಲಿ ಕುಳಿತಿರುವ ಪರಮಾತ್ಮನ ವಿಲಕ್ಷಣವಾದ ಯಾವುದೊಂದು ತೇಜಸ್ಸು ಸಕಲಪ್ರಾಣಿಗಳಿಗೂ ವರೇಣ್ಯವಾಗಿಯೂ, ಎಂದರೆ ಸರ್ವದಾ ಪ್ರಾರ್ಥನೀಯವಾಗಿಯೂ, ಚ್ಯುತಿರಹಿತವಾಗಿಯೂ ಇರುವುದೋ ಅಂಥ ತೇಜಸ್ಸಿನ ಪ್ರೇರಣಾಪ್ರಭಾವದಿಂದಲೇ ಚೇತನರ ಅನಾದಿಸಿದ್ಧವಾಗಿಯೂ ಸಂಕುಚಿತವಾಗಿಯೂ ಇರುವ ಜ್ಞಾನವು ಪ್ರಸರಿಸುವುದು. 'ಎಂಬುದೇ ಈ ಶ್ರುತಿಯ ಅಭಿಪ್ರಾಯವಾಗಿರುವುದು.

## ೯೦೮ ಉದಾಹೃತಪ್ರಮಾಣಾನಾಮರ್ಥಾಂತರಪರತ್ವಾಶಂಕಾ ತತ್ಪರಿಹಾರೌ

"ಪೂಜ್ಯರೆ! ಉದಾಹೃತವಾದ ಶ್ವೇತಾಶ್ವತರಶ್ರುತಿ, ಸಂಕುಚಿತವಾದ ಜೀವಜ್ಞಾನದ ಉನ್ಮೇಷಕ್ಕೆ ಪರಮಾತ್ಮನು ಕಾರಣವಾಗಿರುವನೆಂಬ ಅರ್ಥಕ್ಕೆ ಪ್ರಮಾಣವಾಗಬಹುದಲ್ಲದೆ ಇಂದ್ರಿಯಗಳ ಮೂಲಕವಾಗಿ ಜ್ಞಾನವು ಹೊರಗೆ ಹೊರಡುವುದಕ್ಕೆ ಪ್ರಮಾಣವಾಗಲಾರದು; ಮತ್ತು ಉದಾಹೃತವಾದ ಗೀತಾವಚನವೂ, ಮನುವಚನವೂ ಜಿತೇಂದ್ರಿಯರಲ್ಲದವರಿಗೆ ಬುದ್ಧಿ ನಷ್ಟವಾಗಿ ಹೋಗುವುದೆಂಬ ವಿಷಯಕ್ಕೆ ಪ್ರಮಾಣವಾಗಬಹುದಲ್ಲದೆ ಇಂದ್ರಿಯಗಳ ಮೂಲಕವಾಗಿ ಜ್ಞಾನವು ಹೊರಗೆ ಪ್ರಸರಿಸುವುದೆಂಬುದಕ್ಕೆ ಪ್ರಮಾಣವಾಗಲಾರದಲ್ಲವೆ ?"

ಇಂಥ ಆಶಂಕೆ ಸಂಗತವಲ್ಲ. ಏತಕ್ಕೆಂದರೆ—**"ತದಸ್ಯ ಹರತಿ ಪ್ರಜ್ಞಾಂ"** ಎಂಬ ಗೀತಾವಾಕ್ಯದಲ್ಲಿ ವಿಷಯಗತವಾದ ಮನಸ್ಸು ಜ್ಞಾನವನ್ನೂ ತನ್ನ ಕಡೆಗೆ ಆಕರ್ಷಿಸುತ್ತದೆಯೆಂಬ ಅರ್ಥವು ಯಥಾಶ್ರುತದಲ್ಲಿ ಸ್ವಾರಸಿಕವಾಗಿ ತೋರಿಬರುತ್ತಿರುವುದರಿಂದಲೂ, **"ತೇನಾಸ್ಯ ಕ್ಷರತಿ ಪ್ರಜ್ಞಾ"** ಎಂಬ ಮನುವಚನದಲ್ಲಿಯೂ ವಿಷಯಪ್ರವಣಗಳಾದ ಆ ಆ ಇಂದ್ರಿಯಗಳ ಮೂಲಕವಾಗಿ ಜ್ಞಾನವು ಹೊರಟು ತಾನೂ ವಿಷಯಪ್ರವಣವಾಗುವುದೆಂಬ ಅರ್ಥವು ಯಥಾಶ್ರುತದಲ್ಲಿ ಸ್ವಾರಸಿಕವಾಗಿ ತೋರಿಬರುತ್ತಿರುವುದರಿಂದಲೂ, ಈ ಯಥಾಶ್ರುತಾರ್ಥಕ್ಕೆ ಯಾವುದೊಂದು ಬಾಧೆಯೂ ಇಲ್ಲದಿರುವಾಗ ಈ ಪ್ರಮಾಣವಚನಗಳಿಗೆ ಅನ್ಯಾರ್ಥ

ವಸ್ತು ಹೇಗೆ ಕಲ್ಪಿಸಲಾದೀತು? ಮುಖ್ಯಾರ್ಥಕ್ಕೆ ಬಾಧೆಯುಂಟಾದರಲ್ಲವೆ ಅರ್ಥಾಂತರವನ್ನು ಕಲ್ಪಿಸಬೇಕು?

ಆದುದರಿಂದ ಈ ಶ್ರುತಿಸ್ಮೃತಿವಚನಗಳು ಜ್ಞಾನಕ್ಕೆ ಪ್ರಸರಣವುಂಟೆಂಬ ವಿಷಯದಲ್ಲಿ ಪ್ರಮಾಣಗಳಾಗಿರುವುವೆಂಬುದನ್ನು ಯಾರೂ ತಪ್ಪಿಸಲಾರರು.

ಜ್ಞಾನವು ಹೊರಗೆ ಬಂದುಬಿಡುವುದಾದರೆ ಆ ಸಮಯದಲ್ಲಿ ಒಳಗೆ ಜ್ಞಾನವೆಂಬುದು ಇಲ್ಲದೆಹೋಗಬೇಕಾಗುವುದೆಂದು ಶಂಕಿಸಬೇಕಾದುದಿಲ್ಲ. ಮಣಿದ್ಯುಮಣಿದೀಪಗಳ ಪ್ರಭೆಗಳು ಹೇಗಾದರೆ ಮೂಲಪ್ರದೇಶದಲ್ಲಿ ತಮ್ಮ ತಮ್ಮ ಆಶ್ರಯಗಳ ಸಂಬಂಧವನ್ನು ಬಿಡದೆಯೇ ದೂರದಲ್ಲಿಯೂ ವ್ಯಾಪಿಸಿ ಅಲ್ಲಲ್ಲಿ ಇರುವ ವಿಷಯಗಳನ್ನು ಪ್ರಕಾಶಪಡಿಸುವುವೋ, ಅದರಂತೆ ಜ್ಞಾನವೂ ಮೂಲಭಾಗದಲ್ಲಿ ತನಗೆ ಆಶ್ರಯಭೂತನಾದ ಜೀವನ ಸಂಬಂಧವನ್ನು ಬಿಡದೆಯೇ ದೂರದಲ್ಲಿ ವ್ಯಾಪಿಸಿ ಆ ಆ ಪದಾರ್ಥಗಳೊಡನೆ ಸಂಯೋಗವನ್ನು ಪಡೆದು ಅವುಗಳನ್ನು ಆತ್ಮನಿಗೆ ಪ್ರಕಾಶಪಡಿಸುವುದಾದುದರಿಂದ ಉಕ್ತವಾದ ಆಶಂಕೆಗೆ ಅವಕಾಶವಿಲ್ಲವಷ್ಟೆ?

## ೯೦. ಅಥ ಚತುರ್ಥಾಕ್ಷೇಪಪರಿಹಾರಃ.

ನಾಲ್ಕನೆಯ ಆಕ್ಷೇಪಕ್ಕೆ—ಪ್ರಭೆಯೆಂಬುದು ತನಗೆ ಆಶ್ರಯಗಳಾದ ಮಣಿದ್ಯುಮಣಿದೀಪಗಳಿಗೆ ಸರ್ವದಾ ಗುಣಭೂತವಾಗಿದ್ದರೂ ಹೇಗಾದರೆ ದ್ರವ್ಯವೆನಿಸಿಕೊಂಡಿರುವುದೋ, ಅದರಂತೆ ಜ್ಞಾನವೂ ದ್ರವ್ಯವೆನಿಸಿಕೊಳ್ಳಲು ತಡೆಯಿಲ್ಲ. ಇದಮಾತ್ರಕ್ಕೆ ಘಟಾದಿಗಳಲ್ಲಿರುವ ರೂಪಾದಿಗಳನ್ನೂ ದ್ರವ್ಯಗಳಾಗಿ ಹೇಳಬೇಕಾದೀತೆಂಬ ಆಶಂಕೆ ಹುಟ್ಟಲಾರದು. ಅವಸ್ಥಾಶ್ರಯತ್ವವೆಂಬ ದ್ರವ್ಯಲಕ್ಷಣವು ಅವುಗಳಲ್ಲಿ ಬರಲಾರದಷ್ಟೆ? ಪ್ರಭಾದೃಷ್ಟಾಂತವನ್ನೇ ತೋರಿಸಿ ಭಾಷ್ಯಕಾರರು ಜ್ಞಾನಕ್ಕೆ ದ್ರವ್ಯತ್ವವನ್ನು **"ಪ್ರಭಾದ್ರವ್ಯಸ್ಯ ದೀಪಗುಣಭೂತಸ್ಯೇವ ಜ್ಞಾನಸ್ಯಾಪ್ಯಾತ್ಮಗುಣಭೂತಸ್ಯ ದ್ರವ್ಯತ್ವಮವಿರುದ್ಧಂ"** ಎಂದು ಕಂಠೋಕ್ತವಾಗಿ ಸ್ಪಷ್ಟೀಕರಿಸಿರುವರು.

"ಜ್ಞಾನದಲ್ಲಿಯೂ ಪ್ರಭೆಯಲ್ಲಿಯೂ ಇರುವ ಅವಸ್ಥಾಶ್ರಯತ್ವವೆಂಬ ದ್ರವ್ಯಲಕ್ಷಣವು ರೂಪಾದಿಗಳಲ್ಲಿ ಕಾಣುವುದಿಲ್ಲವಾದುದರಿಂದ ರೂಪಾದಿಗಳು ದ್ರವ್ಯವೆನಿಸಿಕೊಳ್ಳಲಾರವಾದರೆ ರೂಪಾದಿಗಳಲ್ಲಿರುವ ಗುಣಲಕ್ಷಣವು ಪ್ರಭೆಯಲ್ಲಿಯೂ ಜ್ಞಾನದಲ್ಲಿಯೂ ಕಾಣುವುದಿಲ್ಲವಾದುದರಿಂದ ಪ್ರಭೆಯೂ ಜ್ಞಾನವೂ ಗುಣಭೂತವೆನಿಸಿಕೊಳ್ಳುವ ಬಗೆ ಹೇಗೆ?

ಹೀಗೆ—ಗುಣಶಬ್ದವನ್ನು "ರೂಪ, ರಸ, ಗಂಧ, ಸ್ಪರ್ಶ, ಸಂಖ್ಯೆ, ಪರಿಮಾಣ, ಪೃಥಕ್ತ್ವ, ಸಂಯೋಗ, ವಿಭಾಗ, ಪರತ್ವ, ಅಪರತ್ವ, ಗುರುತ್ವ, ದ್ರವತ್ವ, ಸ್ನೇಹ, ಶಬ್ದ, ಬುದ್ಧಿ, ಸುಖ, ದುಃಖ, ಇಚ್ಛೆ, ದ್ವೇಷ, ಪ್ರಯತ್ನ, ಧರ್ಮ, ಅಧರ್ಮ, ಸಂಸ್ಕಾರ" ಎಂಬ ಈ ಇಪ್ಪತ್ತುನಾಲ್ಕು ಪದಾರ್ಥಗಳಲ್ಲಿ ನೈಯಾಯಿಕರು ಸಂಕೇತಪಡಿಸುವಂತೆ ನಾವು ಸಂಕೇತಪಡಿಸುವುದಿಲ್ಲ. ಮತ್ತೇನೆಂದರೆ ಅಪೃಥಕ್ಸಿದ್ಧಿಸಂಬಂಧದಿಂದ ಉಂಟಾಗಿರುವ ಆಧೇಯತ್ವವನ್ನೇ ಗುಣಪದಕ್ಕೆ ಪ್ರವೃತ್ತಿನಿಮಿತ್ತವಾಗಿ ಹೇಳುವೆವು. ಎಂದರೆ ಯಾವುದಕ್ಕೆ ಯಾವುದು ಅಪೃಥಕ್ಸಿದ್ಧಿಸಂಬಂಧದಿಂದ ಆಧೇಯವಾಗಿರುವುದೋ ಅದಕ್ಕೆ ಅದು ಗುಣಭೂತವೆನಿಸಿಕೊಳ್ಳುವುದು. ಅದು ನೈಯಾಯಿಕರ ಸಾಂಕೇತಿಕವಾದ ಗುಣವಾಗಿದ್ದರೂ ಸರಿಯೆ, ಅಥವಾ ದ್ರವ್ಯವಾಗಿದ್ದರೂ ಸರಿಯೆ. ಅದರಲ್ಲಿ ಆಗ್ರಹವಿಲ್ಲ. ಘಟಾದಿಪದಾರ್ಥಗಳಿಗೆ ರೂಪರಸಗಂಧಾದಿಗಳು ಅಪೃಥಕ್ಸಿದ್ಧಿಸಂಬಂಧದಿಂದ ಆಧೇಯಗಳಾಗಿರುವಪ್ರಯುಕ್ತ ಗುಣತ್ವವ್ಯವಹಾರವನ್ನು ಹೇಗೆ ಪಡೆವುವೋ, ಅದರಂತೆ ಜ್ಞಾನವೂ ಪ್ರಭೆಯೂ ಸಹ ಅಪೃಥಕ್ಸಿದ್ಧಿಸಂಬಂಧದಿಂದ ಸ್ವಾಶ್ರಯಕ್ಕೆ ಆಧೇಯಗಳಾಗಿರುವಪ್ರಯುಕ್ತ ಗುಣತ್ವವ್ಯವಹಾರವನ್ನು ಪಡೆವುದರಲ್ಲಿ ಅಡ್ಡಿಯೇನೂ ಇಲ್ಲ. ಜ್ಞಾನದಲ್ಲಿಯೂ ಪ್ರಭೆಯಲ್ಲಿಯೂ ಇರುವ ಅವಸ್ಥಾಶ್ರಯತ್ವವೆಂಬ ದ್ರವ್ಯಲಕ್ಷಣವಾದರೆ ರೂಪಾದಿಗಳಲ್ಲಿ ಇಲ್ಲವಾದುದರಿಂದ ರೂಪಾದಿಗಳು ದ್ರವ್ಯತ್ವವ್ಯವಹಾರವನ್ನು ಎಂದಿಗೂ ಪಡೆಯಲಾರವು. ಪ್ರಭೆಯ ವಿಷಯದಲ್ಲಿ ಹೇಳಬೇಕಾದ ಅಂಶಗಳನ್ನೆಲ್ಲಾ ಅಚಿತ್ತತ್ತ್ವಪರಿಚ್ಛೇದದಲ್ಲಿಯೇ ಹೇಳಿರುವೆವು.

"ಪೂಜ್ಯರೆ! ಮನೆಯಲ್ಲಿ ಭಿತ್ತಿಯಮೇಲೆ ಬಿದ್ದಿರುವ ಪ್ರಭೆಗೆ ಭಿತ್ತಿ (ಗೋಡೆ) ಆಶ್ರಯವಾಗಬಹುದಲ್ಲದೆ ದೀಪವು ಹೇಗೆ ಆಶ್ರಯವಾದೀತು? ಮತ್ತು ಜ್ಞಾನದ್ರವ್ಯವನ್ನು ಆಶ್ರಯಿಸಿಕೊಂಡಿರುವ ಘಟಾದಿಜ್ಞಾನಕ್ಕೆ ಜ್ಞಾನದ್ರವ್ಯವು ಆಶ್ರಯವಾಗಬಹುದಲ್ಲದೆ ಆತ್ಮನು ಹೇಗೆ ಆಶ್ರಯವಾದಾನು?"

ಇಂಥ ಆಶಂಕೆ ಸಂಗತವಲ್ಲ. ಏತಕ್ಕೆಂದರೆ—ಅನ್ಯಾಶ್ರಿತವಾದ ದ್ರವ್ಯಕ್ಕೆ ಅನ್ಯಾಶ್ರಿತತ್ವವನ್ನು ಅವಯವಾತಿರಿಕ್ತಾವಯವಿವಾದಿಗಳಾದ ನೈಯಾಯಿಕರೂ ಸಹ ಸಂಮತಿಸಿಯೇ ಇರುವರು. ಸ್ವಾವಯವಗಳಾದ ಕಪಾಲಗಳನ್ನು ಆಶ್ರಯಿಸಿಕೊಂಡಿರುವ ಘಟದ್ರವ್ಯವು ಭೂತಲವನ್ನು ಆಶ್ರಯಿಸಿಕೊಂಡೇ ಇರುವುದಲ್ಲವೆ?

ಮತ್ತು—ರೂಪಾದಿಗಳು ಘಟಾದಿಪದಾರ್ಥಗಳಿಗೆ ವಿಶೇಷಣಗಳಾಗಿರುವುದರಿಂದ ಹೇಗಾದರೆ ಗುಣಭೂತಗಳೆನಿಸಿಕೊಳ್ಳುವುವೋ ಅದರಂತೆ ಪ್ರಭೆಯೂ

ಜ್ಞಾನವೂ ಸಹ ಸ್ವಾಶ್ರಯಕ್ಕೆ ವಿಶೇಷಣಗಳಾಗಿರುವುದರಿಂದ ಗುಣಭೂತಗಳೆನಿಸಿಕೊಳ್ಳಲೂ ತಡೆಯಿಲ್ಲ.

### ೯೧೦. ಗುಣಪದಬೋಧ್ಯಾರ್ಥಸ್ಯ ದ್ವೈವಿಧ್ಯಂ.

ಗುಣಭೂತಗಳೆನಿಸಿಕೊಳ್ಳುವ ಪದಾರ್ಥಗಳು ದ್ರವ್ಯಾತ್ಮಕಗಳಾದ ಗುಣಗಳೆಂದೂ, ಕೇವಲಗುಣಗಳೆಂದೂ ಎರಡುಬಗೆಯಾಗಿರುವುವು. ಅವುಗಳಲ್ಲಿ ಮೊದಲನೆಯವು—ಜ್ಞಾನ, ಪ್ರಭೆ ಮೊದಲಾದುವುಗಳು. ಇವುಗಳು ದ್ರವ್ಯಗಳಾಗಿ ಇದ್ದುಕೊಂಡೇ ಸ್ವಾಶ್ರಯಕ್ಕೆ ಸರ್ವದಾ ಗುಣಭೂತಗಳಾಗಿಯೂ ಇರುವುವಷ್ಟೆ? ಎರಡನೆಯವು—ಸತ್ತ್ವ-ರಜಸ್ಸು-ತಮಸ್ಸು-ಮೊದಲಾದುವುಗಳು. ಇವುಗಳನ್ನು ಅದ್ರವ್ಯಪ್ರಕರಣದಲ್ಲಿ ನಿರೂಪಿಸುವೆವು.

### ೯೧೧. ಕೇಷಾಂ ಚಿದಾಚಾರ್ಯಾಣಾಂ ಗುಣಪದಸ್ಯ ಜ್ಞಾನೇ ಔಪಚಾರಿಕತ್ವಂ.

ಇಲ್ಲಿ ಕೆಲವರು ಆಚಾರ್ಯರು—ದ್ರವ್ಯತ್ವವನ್ನು ಪಡೆಯದೆ ಸರ್ವದಾ ಕೇವಲಗುಣಭೂತಗಳಾಗಿಯೇ ಇರುವ ಸತ್ತ್ವಾದಿಗಳಲ್ಲಿ ಗುಣಶಬ್ದವು ಮುಖ್ಯವೆಂದೂ, ಜ್ಞಾನಾದಿಗಳಲ್ಲಿಯಾದರೆ ಗುಣಶಬ್ದಪ್ರಯೋಗವು ಮುಖ್ಯವಲ್ಲವಾದುದರಿಂದ ಔಪಚಾರಿಕವೆನಿಸಿಕೊಳ್ಳುವುದೆಂದೂ, ಹೇಳುವರು.

ಈ ಪಕ್ಷದಲ್ಲಿ ಜ್ಞಾನಕ್ಕೆ ಗುಣತ್ವವನ್ನು ಒಪ್ಪಲೇ ಇಲ್ಲವಾದುದರಿಂದ ನಾಸ್ತಿಕನೆಯ ಆಕ್ಷೇಪವು ಅಂಕುರಿಸುವುದಕ್ಕೇ ಅವಕಾಶವಿಲ್ಲ. ಅಪೃಥಕ್ಸಿದ್ಧಸಂಬಂಧಪ್ರತಿಯೋಗಿತ್ವವಿಶಿಷ್ಟವಾದ ಅದ್ರವ್ಯತ್ವವಲ್ಲವೆ ಅವರ ಮತದಲ್ಲಿ ಗುಣಪದಕ್ಕೆ ಪ್ರವೃತ್ತಿನಿಮಿತ್ತವಾಗಿರುವುದು. ಅದು ಜ್ಞಾನದಲ್ಲಿ ಬರುವುದೇ ಇಲ್ಲವಷ್ಟೆ?

### ೯೧೨. ಅನ್ಯೇಷಾಮಾಚಾರ್ಯಾಣಾಂ ಜ್ಞಾನೇಽಪಿ ಗುಣಪದಸ್ಯ ಮುಖ್ಯತ್ವಂ.

ಇನ್ನು ಕೆಲವರು ಹೇಳುವುದೇನೆಂದರೆ—ಯಾವುದು ಸರ್ವದಾ ಯಾವುದನ್ನು ಆಶ್ರಯಿಸಿಕೊಂಡೇ ಇರುವುದೋ—ಎಂದರೆ ಅಪೃಥಕ್ಸಿದ್ಧಿಸಂಬಂಧಕ್ಕೆ ಯಾವುದು ಪ್ರತಿಯೋಗಿಯಾಗಿರುವುದೋ, ಅದು ಅದಕ್ಕೆ ಗುಣಭೂತವೆನಿಸಿಕೊಳ್ಳುವುದು. ಅದು ಕೆಲವು ಸ್ಥಳಗಳಲ್ಲಿ ದ್ರವ್ಯವಾಗಿಯೂ ಇರಬಹುದು; ಕೆಲವು ಸ್ಥಳಗಳಲ್ಲಿ ಅದ್ರವ್ಯವಾಗಿಯೂ ಇರಬಹುದು. ಅಪೃಥಕ್ಸಿದ್ಧಿಸಂಬಂಧಪ್ರತಿಯೋಗಿತ್ವವು ಜ್ಞಾನದಲ್ಲಿ ಮುಖ್ಯವಾಗಿಯೇ ಇರುವುದರಿಂದ ಜ್ಞಾನದಲ್ಲಿಯೂ ಮುಖ್ಯವಾದ ಗುಣತ್ವವೇ ಸಂಭವಿಸುತ್ತಿರುವಲ್ಲಿ ಗುಣಶಬ್ದಕ್ಕೆ ಜ್ಞಾನದಲ್ಲಿ ಔಪಚಾರಿಕತ್ವವನ್ನು

ಕಲ್ಪಿಸಬೇಕಾದುದಿಲ್ಲ. ಈ ಪಕ್ಷದಲ್ಲಿ ನಾಲ್ಕನೆಯ ಆಕ್ಷೇಪಕ್ಕೆ ಸಮಾಧಾನವನ್ನು ಪೂರ್ವೋಕ್ತರೀತಿಯಲ್ಲಿ ತಿಳಿಯಬೇಕು.

## ೬೧೩. ಅಪೃಥಕ್ಸಿದ್ಧಿಸಂಬಂಧಪ್ರತಿಯೋಗಿರೂಪಸ್ಯ ಗುಣಸ್ಯ ಚಾತುರ್ವಿಧ್ಯಂ.

ಅಪೃಥಕ್ಸಿದ್ಧಿಸಂಬಂಧಪ್ರತಿಯೋಗಿರೂಪವಾದ ಇಂಥ ಗುಣಪದಾರ್ಥವನ್ನೇ ಕೆಲವರು ದಾರ್ಶನಿಕರು—ಜಾತಿಯೆಂದೂ, ಗುಣವೆಂದೂ, ಕ್ರಿಯೆಯೆಂದೂ ದ್ರವ್ಯವೆಂದೂ ನಾಲ್ಕುವಿಧವಾಗಿ ವಿಂಗಡಿಸಿ ತೋರಿಸುವರು. ಅನೇಕಧರ್ಮಿಗಳಲ್ಲಿ ಇರುವಂಥದಾಗಿಯೂ, ಅಂತರಂಗವಾಗಿಯೂ ಇರುವ ಧರ್ಮವಿಶೇಷವು ಜಾತಿಯೆನಿಸಿಕೊಳ್ಳುವುದು. ಯಾವ ಧರ್ಮದೊಡನೆ ಕೂಡಿದರಲ್ಲದೆ ಧರ್ಮಿಯ ವಿಶೇಷಾಕಾಂಕ್ಷೆ ಶಾಂತವಾಗುವುದಿಲ್ಲವೋ ಅಂಥ ಧರ್ಮವು ಅಂತರಂಗಧರ್ಮವೆನಿಸಿಕೊಳ್ಳುವುದು. ಪುರೋವರ್ತಿಯಾದ ಪದಾರ್ಥದಲ್ಲಿ **"ಇದು ಬಿಳುಪಾಗಿದೆ"** ಎಂದು ಹೇಳಿ ರೂಪವೆಂಬ ಧರ್ಮವನ್ನು ತೋರಿಸಿದರೂ, **"ಇದು ಇರುತ್ತದೆ"** ಎಂದು ಹೇಳಿ ಕ್ರಿಯೆಯೆಂಬ ಧರ್ಮವನ್ನು ತೋರಿಸಿದರೂ, **"ಇದು ಗುಣದೊಡನೆಯೂ ಕ್ರಿಯೆಯೊಡನೆಯೂ ಕೂಡಿದೆ"** ಎಂದು ಹೇಳಿ ದ್ರವ್ಯತ್ವವೆಂಬ ಧರ್ಮವನ್ನು ಅದರಲ್ಲಿ ತೋರಿಸಿದರೂ, **"ಇದು ಯಾವುದು?"** ಎಂಬ ವಿಶೇಷಾಕಾಂಕ್ಷೆ ಶಾಂತವಾಗುವುದಿಲ್ಲ; **"ಇದು ಘಟವು"** ಎಂದು ಹೇಳಿ ಘಟತ್ವವೆಂಬ ಧರ್ಮವನ್ನು ಅದರಲ್ಲಿ ತೋರಿಸಿದರೇನೇ ಅದರ ವಿಶೇಷಾಕಾಂಕ್ಷೆ ಶಾಂತವಾಗುವುದು. ಘಟತ್ವವೆಂಬ ಈ ಧರ್ಮವು ಘಟವೆನಿಸಿಕೊಂಡ ಅನೇಕಧರ್ಮಿಗಳಲ್ಲಿ ಇರುವಂಥದಾಗಿಯೂ, ವಸ್ತುವನ್ನು ನಿರೂಪಿಸಿ ತೋರಿಸುವ ಅಂತರಂಗಧರ್ಮವಾಗಿಯೂ ಇರುವುದರಿಂದ ಇದು ಜಾತಿಯೆನಿಸಿಕೊಳ್ಳುವುದು.

ಇಂಥ ಜಾತಿಯಿಂದ ವಸ್ತು ನಿಷ್ಕರ್ಷಿಸಲ್ಪಟ್ಟಮೇಲೆ ಅದರಲ್ಲಿ ವಿಶೇಷಣವಾಗಿ ಅನ್ವಯಿಸುವ ಸಿದ್ಧಧರ್ಮವು ಗುಣವೆನಿಸಿಕೊಳ್ಳುವುದು; ಎಂದರೆ ಅಪೃಥಕ್ಸಿದ್ಧಿಸಂಬಂಧಪ್ರತಿಯೋಗಿಯಾಗಿಯೂ, ಜಾತ್ಯತಿರಿಕ್ತವಾಗಿಯೂ, ಇರುವ ಸಿದ್ಧಧರ್ಮವು ಗುಣವೆನಿಸಿಕೊಳ್ಳುವುದು.

ಅದರಂತೆಯೇ ವಿಶೇಷಣವಾಗಿ ಅನ್ವಯಿಸುವ ಸಾಧ್ಯಧರ್ಮವು ಕ್ರಿಯೆಯೆನಿಸಿಕೊಳ್ಳುವುದು; ಎಂದರೆ ಅಪೃಥಕ್ಸಿದ್ಧಿಸಂಬಂಧಪ್ರತಿಯೋಗಿಯಾಗಿಯೂ, ಜಾತ್ಯತಿರಿಕ್ತವಾಗಿಯೂ ಇರುವ ಸಾಧ್ಯಧರ್ಮವು ಕ್ರಿಯೆಯೆನಿಸಿಕೊಳ್ಳುವುದು.

ಇಂಥ ಜಾತಿಗುಣಕ್ರಿಯೆಗಳೆಂಬ ವಿಶೇಷಣಗಳಿಂದ ವಿಶಿಷ್ಟವಾದುದೇ ದ್ರವ್ಯವೆನಿಸಿಕೊಳ್ಳುವುದು. ಅಥವಾ ಅವಸ್ಥಾವಿಶಿಷ್ಟವಾದುದೇ ದ್ರವ್ಯವೆನಿಸಿಕೊಳ್ಳುವುದು. ಆದುದರಿಂದ ಜ್ಞಾನವು ದ್ರವ್ಯದ ಲಕ್ಷಣವನ್ನು ಪಡೆದಿರುವ ಕಾರಣ ಇದನ್ನು ದ್ರವ್ಯವೆಂದು ಹೇಳಲು ಯಾವ ಅಭ್ಯಂತರವೂ ಇಲ್ಲ.

## ೯೧೪ ದ್ರವ್ಯತ್ವ-ಗುಣತ್ವ-ಕ್ರಿಯಾತ್ವರೂಪಧರ್ಮತ್ರಯಸ್ಯಾಪಿ ಜ್ಞಾನೇ ಸಂಭವಪ್ರದರ್ಶನಂ

ಮತ್ತು—ಒಂದೇ ವಸ್ತುವನ್ನು ಎರಡುಬಗೆಯಾಗಿಯೂ, ಮೂರುಬಗೆಯಾಗಿಯೂ, ನಾಲ್ಕುಬಗೆಯಾಗಿಯೂ, ವಿಕಲ್ಪಿಸಿ ತೋರಿಸಬಹುದು. ಹೇಗೆಂದರೆ ಜ್ಞಾನವೆಂಬ ಒಂದೇ ಪದಾರ್ಥವು ಸಂಕೋಚ, ವಿಕಾಸ, ಸಂಯೋಗ ಮೊದಲಾದ ಅವಸ್ಥೆಗಳಿಗೆ ಆಶ್ರಯವಾಗಿರುವುದರಿಂದ ದ್ರವ್ಯವೆನಿಸಿಕೊಳ್ಳುವುದು. ಸ್ವಸ್ಮೈ ಸ್ವಯಂಪ್ರಕಾಶಮಾನತ್ವರೂಪವಾದ (ತನಗೋಸ್ಕರ ತನ್ನಿಂದಲೇ ತಾನು ಪ್ರಕಾಶಿಸುವಿಕೆಯೆಂಬ) ಪ್ರತ್ಯಕ್ತ್ವಧರ್ಮದಿಂದ ಆತ್ಮಸ್ವರೂಪವು ನಿರೂಪಿತವಾದ ಮೇಲೆ ಅಂಥ ಆತ್ಮಸ್ವರೂಪಕ್ಕೆ ವಿಶೇಷಣವಾಗುವ ಸಿದ್ಧಧರ್ಮರೂಪವಾದುದರಿಂದ ಇದೇ ಜ್ಞಾನವು ಗುಣವೆಂದೂ ಹೇಳಿಸಿಕೊಳ್ಳುವುದು. "ಜಾನಾತಿ" ಎಂಬ ಕ್ರಿಯಾಪದದಿಂದ ಇದನ್ನು ನಿರ್ದೇಶಿಸಿ ತೋರಿಸುವ ಕಾಲದಲ್ಲಿ ಇದು ಕ್ರಿಯೆಯೆಂದೂ ಹೇಳಿಸಿಕೊಳ್ಳಬಲ್ಲುದು. ಇದರಂತೆಯೇ ಇನ್ನೂ ಊಹಿಸಿಕೊಳ್ಳಬೇಕು.

## ೯೧೫ ಗುಣತ್ವೇನಾಭಿಮತಾನಾಮಪಿ ವೈಯಾಕರಣೋಕ್ತರೀತ್ಯಾ ದ್ರವ್ಯತ್ವಸ್ಯಾಪಿ ಸಂಭವಪ್ರದರ್ಶನಂ

ಮತ್ತು—ಲಿಂಗ-ಸಂಖ್ಯೆ-ಕಾರಕ ಇವುಗಳ ಸಂಬಂಧವನ್ನು ಪಡೆವುದಕ್ಕೆ ಯೋಗ್ಯವಾಗಿ ಇರುವಿಕೆಯೇ ದ್ರವ್ಯಕ್ಕೆ ಲಕ್ಷಣವೆಂದೂ, ಅದಕ್ಕೆ ಅಯೋಗ್ಯವಾಗಿ ಇರುವಿಕೆಯೇ ಅದ್ರವ್ಯಕ್ಕೆ ಲಕ್ಷಣವೆಂದೂ, ಹೇಳುವ ವೈಯಾಕರಣರ ಮತವನ್ನು ಪರಿಶೀಲಿಸಿ ನೋಡಿದರೆ ಗುಣಗಳೆನಿಸಿಕೊಂಡಿರುವುವುಗಳಿಗೆಲ್ಲಾ ದ್ರವ್ಯತ್ವವೂ ಅವರಿಗೆ ವಿವಕ್ಷಿತವಾಗಿರುವುದೆಂದು ಸ್ಪಷ್ಟವಾಗಿ ತಿಳಿವುದು.

## ೯೧೬ ಅಥ ಪಂಚಮಾಕ್ಷೇಪಪರಿಹಾರಃ

**ಐದನೆಯ ಆಕ್ಷೇಪಕ್ಕೆ**—ಅನುಮಾನಪ್ರಮಾಣವೇ ಜ್ಞಾನಕ್ಕೆ ದ್ರವ್ಯತ್ವವನ್ನು ತೋರಿಸಿಕೊಡುವ ಪ್ರಮಾಣವಾಗಿರುವುದೆಂದು ಹೇಳುವೆವು. ಜ್ಞಾನವೆಂಬುದು ದ್ರವ್ಯವಾಗಿರುವುದೆಂದು ಪ್ರತಿಜ್ಞೆಮಾಡಿ ಸಂಕೋಚ, ವಿಕಾಸ, ಪ್ರಸರಣ, ಸಂಯೋಗ, ಮೊದಲಾದ ಅವಸ್ಥಾವತ್ತ್ವವನ್ನು ಹೇತುವಾಗಿ ತೋರಿಸಿ

ಪ್ರಭೆ ಮೊದಲಾದ ದ್ರವ್ಯಗಳನ್ನು ದೃಷ್ಟಾಂತಗಳನ್ನಾಗಿ ತೋರಿಸಿದರೆ ಜ್ಞಾನಕ್ಕೆ ಅಬಾಧಿತವಾಗಿ ದ್ರವ್ಯತ್ವವು ಸಿದ್ಧಿಸುವುದು.

ಮತ್ತು—ಜ್ಞಾನವು ದ್ರವ್ಯವಾಗಿರುವುದೆಂದು ಮೊದಲಿನಂತೆ ಪ್ರತಿಜ್ಞೆ ಮಾಡಿ ಜ್ಞಾನತ್ವವೆಂಬ ಹೇತುವನ್ನು ತೋರಿಸಿ ಆತ್ಮನನ್ನು ದೃಷ್ಟಾಂತವಾಗಿ ತೋರಿಸಿದೆವಾದರೆ ಜ್ಞಾನಕ್ಕೆ ದ್ರವ್ಯತ್ವವು ಅಬಾಧಿತವಾಗಿ ಸಿದ್ಧವಾಗುವುದು.

**ವರದವಿಷ್ಣುಮಿಶ್ರಾಚಾರ್ಯರು** ಮತ್ತೊಂದು ಅನುಮಾನವನ್ನು ತೋರಿಸಿರುವರು; ಹೇಗೆಂದರೆ—"ಯಾವ ವಸ್ತು ಸಂಯೋಗ ಅದೃಷ್ಟ ಎಂಬ ಎರಡಕ್ಕಿಂತಲೂ, ಭಿನ್ನವಾಗಿಯೂ, ಸಂಸ್ಕಾರಕಾರಣವಾಗಿಯೂ ಇರುವುದೋ ಅದು ದ್ರವ್ಯವೆನಿಸಿಕೊಳ್ಳುವುದು" ಎಂಬ ವ್ಯಾಪ್ತಿಯ ಪರಿಚಯವನ್ನು ಆತ್ಮನಲ್ಲಿ ನಾವು ಪಡೆದಿರುವೆವು. ಆತ್ಮನು ಸಂಯೋಗ ಅದೃಷ್ಟ ಎಂಬ ಉಭಯಕ್ಕಿಂತಲೂ ವ್ಯತಿರಿಕ್ತನಾಗಿರುವನೆಂಬ ವಿಷಯದಲ್ಲಿಯೂ, ಸಂಸ್ಕಾರಕಾರಣನಾಗಿರುವನೆಂಬ ವಿಷಯದಲ್ಲಿಯೂ ವಿವಾದವಿಲ್ಲ. ಆತ್ಮನು ದ್ರವ್ಯವೆನಿಸಿಕೊಂಡಿರುವನೆಂಬುದರಲ್ಲಿಯೂ ವಿವಾದವಿಲ್ಲ. ಅದರಂತೆ ಜ್ಞಾನದಲ್ಲಿಯೂ ಸಂಯೋಗಾದೃಷ್ಟಭಿನ್ನತ್ವವೂ ಸಂಸ್ಕಾರಕಾರಣತ್ವವೂ ಇರುವುದರಿಂದ ದ್ರವ್ಯತ್ವವೂ ಇದ್ದೇ ಇರಬೇಕು.

ಇಲ್ಲಿ ಹೇತುಶರೀರದೊಳಗೆ ಸಂಸ್ಕಾರಕಾರಣತ್ವವನ್ನು ಮಾತ್ರ ವಿವಕ್ಷಿಮಾಡಿ ಸಂಯೋಗಾದೃಷ್ಟಭಿನ್ನತ್ವವನ್ನು ಹೇಳದಿದ್ದರೆ ಆತ್ಮಮನಸ್ಸಂಯೋಗವೂ, ಅದೃಷ್ಟವೂ ಸಂಸ್ಕಾರಕ್ಕೆ ಕಾರಣಗಳಾಗಿರುವುದರಿಂದ ಅವುಗಳೂ ದ್ರವ್ಯಗಳೆನಿಸಿಕೊಳ್ಳಬೇಕಾಗಿ ಬರುವುದು; ಆದರೆ ಅವುಗಳಲ್ಲಿ ದ್ರವ್ಯತ್ವವೆಂಬ ಸಾಧ್ಯವಿಲ್ಲವಾದುದರಿಂದ ಹೇತು ವ್ಯಭಿಚರಿತವಾಗುವುದು. ಅದನ್ನು ತಪ್ಪಿಸುವುದಕ್ಕಾಗಿ ಉಭಯಭಿನ್ನತ್ವವು ಸೇರಿಸಲ್ಪಟ್ಟಿರುವುದು.

ಉಭಯಭಿನ್ನತ್ವವನ್ನು ಮಾತ್ರವೇ ಹೇಳುವೆವಾದರೆ ರೂಪಾದಿಗಳಲ್ಲಿ ಉಭಯಭಿನ್ನತ್ವವಿದ್ದರೂ ದ್ರವ್ಯತ್ವವಿಲ್ಲವಾದುದರಿಂದ ಹೇತು ವ್ಯಭಿಚರಿತವಾಗುವುದು. ಅದನ್ನು ತಪ್ಪಿಸುವುದಕ್ಕಾಗಿ ಸಂಸ್ಕಾರಕಾರಣತ್ವವು ಸೇರಿಸಲ್ಪಟ್ಟಿರುವುದು.

## ೯೧೭. ಅಥ ಷಷ್ಠಾಕ್ಷೇಪಪರಿಹಾರಃ

**ಆರನೆಯ ಆಕ್ಷೇಪಕ್ಕೆ**—"ಈ ಜ್ಞಾನವು ತನಗೆ ಆಶ್ರಯಭೂತನಾದ ಆತ್ಮನನ್ನು ಬಿಟ್ಟು ಅನ್ಯತ್ರ ಗಮನವನ್ನು ಹೇಗೆ ಮಾಡಲಾದೀತು?" ಎಂದು ಆಶಂಕಿಸುವ ನಿಮ್ಮ ಅಭಿಪ್ರಾಯವೇನು? ಆಶ್ರಯಾತಿರಿಕ್ತಸ್ಥಳದಲ್ಲಿ ಜ್ಞಾನಕ್ಕೆ

ಸಂಯೋಗವು ಸಂಭವಿಸುವುದಿಲ್ಲವೆಂದು ಅಭಿಪ್ರಾಯವೋ ? ಅಥವಾ ಸ್ವಾಶ್ರಯ ಪರಿತ್ಯಾಗವು ಸಂಭವಿಸುವುದಿಲ್ಲವೆಂದು ಅಭಿಪ್ರಾಯವೋ ?

ಮೊದಲನೆಯ ಅಭಿಪ್ರಾಯವಿರುವುದಾದರೆ ನಾಲ್ಕನೆಯ ಆಕ್ಷೇಪದ ಪರಿಹಾರದಲ್ಲಿಯೇ ಇದಕ್ಕೂ ಪರಿಹಾರವು ಲಭಿಸುವುದು. ಆಶ್ರಯಾತಿರಿಕ್ತಸ್ಥಳದಲ್ಲಿಯೂ ಸಂಯೋಗವನ್ನು ಪಡೆವ ಪ್ರಭಾದೃಷ್ಟಾಂತವನ್ನು ಅಲ್ಲಿ ತೋರಿಸಿರುವೆವಷ್ಟೆ ? ಅದರಂತೆಯೇ ಜ್ಞಾನಕ್ಕೂ ಆಶ್ರಯಾತಿರಿಕ್ತಸ್ಥಳದಲ್ಲಿ ಸಂಯೋಗವು ಸಂಭವಿಸಬಹುದು.

ಎರಡನೆಯ ಅಭಿಪ್ರಾಯವಿರುವುದಾದರೆ ಜ್ಞಾನಕ್ಕೆ ಅನ್ಯತ್ರ ಗಮನವುಂಟಾಗುವ ಕಾಲದಲ್ಲಿ ಸ್ವಾಶ್ರಯತ್ಯಾಗವನ್ನು ನಾವೂ ಹೇಳುವುದೇ ಇಲ್ಲವಾದುದರಿಂದ ಈ ಆಕ್ಷೇಪಕ್ಕೇ ಅವಕಾಶವಿಲ್ಲ. ಇದೇ ಅರ್ಥವನ್ನು ಶ್ರೀಮದ್ಯಾಮುನಮುನಿಗಳು **" ಆತ್ಮಪ್ರಹಾಣಾನಭ್ಯುಪಗಮಾತ್ ಅವಿಹಾಯ್ಯೈವಾತ್ಮಾನಮಿತಸ್ತತಶ್ಚೇತನಾ ಇಂದ್ರಿಯದ್ವಾರಾ ನಿಸ್ಸರತಿ ವಿಚ್ಛಿನ್ನಾಯಾಶ್ಚ ತಸ್ಯಾಸ್ಸಂಧಾನಾಭಾವಃ ಶಾಸ್ತ್ರವಿರೋಕ್ತಃ "** ಎಂಬುದಾಗಿ ಅಪ್ಪಣೆಕೊಡಿಸಿರುವರು.

ಎಂದರೆ ಜ್ಞಾನಕ್ಕೆ ಸ್ವಾಶ್ರಯಪರಿತ್ಯಾಗವನ್ನು ನಾವೂ ಒಪ್ಪುವುದಿಲ್ಲ; ಜ್ಞಾನವು ಆತ್ಮನ ಸಂಬಂಧವನ್ನು ಬಿಡದೆಯೇ ಇಂದ್ರಿಯಗಳ ಮೂಲಕವಾಗಿಯೂ ವ್ಯಾಪ್ತಿಜ್ಞಾನದ ಮೂಲಕವಾಗಿಯೂ ಶಬ್ದಜ್ಞಾನದ ಮೂಲಕವಾಗಿಯೂ ಅಲ್ಲಲ್ಲಿ ಹೊರಡುವುದು ಎಂಬುದೇ ನಮ್ಮ ಸಿದ್ಧಾಂತವು.—

ಅದೇತಕ್ಕೆ ? " ಜ್ಞಾನವು ಆತ್ಮನ ಸಂಬಂಧವನ್ನು ಆತ್ಯಂತಿಕವಾಗಿ ಬಿಟ್ಟು ಆ ಆ ವಿಷಯಗಳಲ್ಲಿ ಸಂಚರಿಸಿ ವಿಚ್ಛಿನ್ನವಾಗಿದ್ದು ತಾನು ಪುನಃ ಬಂದು ಆತ್ಮನೊಡನೆ ಸೇರಿಕೊಳ್ಳುವುದು " ಎಂದೇ ಹೇಳಬಹುದಲ್ಲವೆ ?

ಇಲ್ಲ—ಹಾಗೆ ಹೇಳಲಾಗುವುದಿಲ್ಲ. ಜ್ಞಾನವು ಆತ್ಯಂತಿಕವಾಗಿ ಆತ್ಮಸಂಬಂಧವನ್ನು ಬಿಟ್ಟು ಹೊರಗೆ ಹೊರಡುವುದಾದರೆ ವಿಚ್ಛಿನ್ನವಾದ ಅಂಥ ಜ್ಞಾನಕ್ಕೆ ಪುನಃ ಆತ್ಮನೊಡನೆ ಸಂಧಾನವು ಸಂಭವಿಸುವುದೇ ಇಲ್ಲವೆಂಬ ಅಂಶವನ್ನು **ಶ್ರೀಮನ್ನಾಥಮುನಿಗಳು ನ್ಯಾಯತತ್ತ್ವ**ವೆಂಬ ಶಾಸ್ತ್ರದಲ್ಲಿ ಅಪ್ಪಣೆಕೊಡಿಸಿಯೇ ಇರುವರು. ಆದುದರಿಂದ ಮೂಲಸಂಬಂಧವಿಚ್ಛೇದವಿಲ್ಲದೆಯೇ ಅನ್ಯತ್ರ ಗಮನವು ಜ್ಞಾನಕ್ಕೆ ಉಂಟಾಗುವುದೆಂಬ ನಮ್ಮ ಸಿದ್ಧಾಂತದಲ್ಲಿ ಯಾವ ದೋಷವನ್ನೂ ಹೇಳಲು ಅವಕಾಶವಿಲ್ಲ.

## ೯೧೮. ಅಥ ಸಪ್ತಮಾಕ್ಷೇಪಪರಿಹಾರಃ.

ಏಳನೆಯ ಆಕ್ಷೇಪಕ್ಕೆ—ಲಂಬಾಕಾರವಾಗಿರುವಾಗ (ಉದ್ದವಾಗಿರುವಾಗ) ಅಧಿಕಪರಿಮಾಣಕ್ಕೆ ಭಾಗಿಯಾದ ಸರ್ಪವು ಕುಂಡಲಾಕಾರವನ್ನು ಪಡೆದಾಗ ನ್ಯೂನಪರಿಮಾಣಕ್ಕೂ ಭಾಗಿಯಾಗಿರುವುದೆಂಬ ಲೋಕವೃತ್ತಾಂತವನ್ನು ವಿಮರ್ಶೆಮಾಡಿ ನೋಡಿಕೊಂಡರೆ ಏಳನೆಯ ಆಕ್ಷೇಪಕ್ಕೆ ಸಮಾಧಾನವು ದೊರೆವುದು. ಹೀಗೆ ಪರಿಮಾಣಾಂತರವು ಕೂಡಿದಮಾತ್ರಕ್ಕೇ ಉಪಚಯವಿರಳತ್ವಗಳು ಜ್ಞಾನದಲ್ಲಿಯೂ ಬರಬೇಕಾದೀತೆಂದು ಆಶಂಕಿಸಕೆಲಸವಿಲ್ಲ. ಏತಕ್ಕೆಂದರೆ—

ಅಂಥ ನಿಯಮವು ಅವಯವವಿಶ್ಲೇಷಕ್ಕೆ ಯೋಗ್ಯಗಳಾದ ವಸ್ತುಗಳಲ್ಲಿಯೇ ಇರುವುದಲ್ಲದೆ ಸರ್ವತ್ರ ಇಲ್ಲ. ಎಂದರೆ—ವಿಶ್ಲೇಷಯೋಗ್ಯಗಳಾದ ಅವಯವಗಳು ಇದ್ದು ಪರಿಮಾಣಾಧಿಕ್ಯವೂ ಇದ್ದರೆ ಅಲ್ಲಿಯೇ ಶಿಥಿಲಾವಯವಸಂಯೋಗವುಳ್ಳೋಣವೆಂಬ ವಿರಳತ್ವವಿರುವುದು.

ಮತ್ತು—ವಿಶ್ಲೇಷಯೋಗ್ಯಗಳಾದ ಅವಯವಗಳು ಇದ್ದು ಅಲ್ಪಪರಿಮಾಣತ್ವವೂ ಇದ್ದರೆ—ಅಲ್ಲಿಯೇ ನಿಬಿಡಾವಯವಸಂಯೋಗವುಳ್ಳೋಣವೆಂಬ ಬಹಳತ್ವವೆಂಬ ಉಪಚಯವು ಇರುವುದು. ಬಿಡಿಸಿದ ಹತ್ತಿಯಲ್ಲಿಯೂ ಮೃತ್ಪಿಂಡದಲ್ಲಿಯೂ ಇವುಗಳನ್ನು ಕಾಣಬಹುದು.

ಮಣಿ-ದ್ಯುಮಣಿ-ದೀಪಗಳ ಪ್ರಭೆಯಲ್ಲಿ ಸಂಕೋಚವಿಕಾಸಗಳು ಉಂಟಾಗುವ ಕಾಲದಲ್ಲಿ ಅಲ್ಪಪರಮಾಣತ್ವವೂ ಅಧಿಕಪರಿಮಾಣತ್ವವೂ ಇದ್ದರೂ ಉಪಚಯವಾಗಲಿ ವಿರಳತ್ವವಾಗಲಿ ಅದರಲ್ಲಿ ಇಲ್ಲ. ಏತಕ್ಕೆಂದರೆ—ಆ ಪ್ರಭೆ ವಿಶ್ಲೇಷಯೋಗ್ಯಗಳಾದ ಅವಯವಗಳುಳ್ಳುದಲ್ಲ. ಅದರಂತೆ ಜ್ಞಾನದಲ್ಲಿಯೂ ವಿಶ್ಲೇಷಯೋಗ್ಯಾವಯವವತ್ತ್ವವಿಲ್ಲವಾದುದರಿಂದ ಉಪಚಯವಿರಳತ್ವಗಳು ಇಲ್ಲದಿದ್ದರೂ ಅಹಿಕುಂಡಲದೃಷ್ಟಾಂತದಿಂದ ಪರಿಮಾಣತಾರತಮ್ಯವುಂಟಾಗಲು ತಡೆಯೇ ಇಲ್ಲ.

ಪರಿಮಾಣತಾರತಮ್ಯವನ್ನು ಒಪ್ಪುವುದಾದರೆ ಉಪಚಯವಿರಳತ್ವಗಳೂ ಅವರ್ಜನೀಯಗಳಾಗಿ ಬಂದೇ ಬರುವುವೆಂದು ಹೇಳುವಪಕ್ಷದಲ್ಲಿ ಜ್ಞಾನದಲ್ಲಿಯೂ ಉಪಚಯವಿರಳತ್ವಗಳನ್ನೂ ಒಪ್ಪುವೆವು. "ಹಾಗಾದರೆ ಮೃತ್ಪಿಂಡ-ತೂಲಪಿಂಡಗಳಲ್ಲಿ ಇರುವ ಉಪಚಯವಿರಳತ್ವಗಳಂತೆ—ಜ್ಞಾನದಲ್ಲಿ ಇರುವ ಉಪಚಯವಿರಳತ್ವಗಳೂ ನಮ್ಮ ದೃಷ್ಟಿಗೂ ತ್ವಗಿಂದ್ರಿಯಕ್ಕೂ ಗೋಚರವಾಗಲಿ" ಎಂದು ದುಡುಕಿ ಆಶಂಕಿಸಬಾರದು. ಮೃತ್ಪಿಂಡತೂಲಪಿಂಡಗಳಂತೆ ಜ್ಞಾನವು ನಮ್ಮ ದೃಷ್ಟಿಗೂ ತ್ವಗಿಂದ್ರಿಯಕ್ಕೂ ಗೋಚರವಾಗುವ ಕಾಲಕ್ಕಲ್ಲವೆ ಅದರಲ್ಲಿಯ ಉಪ

ಚಯವಿರಳತ್ವಗಳು ತ್ವಗಿಂದ್ರಿಯಕ್ಕೂ ಜ್ಞಾನಕ್ಕೂ ಗೋಚರವಾಗಲೆಂದು ಆಶಂಕಿಸಲಾದೀತು? ಧರ್ಮಿಯಾದ ಜ್ಞಾನವೇ ಅತೀಂದ್ರಿಯವಾಗಿಯೂ ಸ್ಪರ್ಶಶೂನ್ಯವಾಗಿಯೂ ಇರುವಲ್ಲಿ ಅದರ ಧರ್ಮಗಳಾದ ಉಪಚಯವಿರಳತ್ವಗಳು ಹೇಗೆ ಇಂದ್ರಿಯಕ್ಕೆ ಗೋಚರಗಳಾದಾವು?

ತೂಲಪಿಂಡದಲ್ಲಿ ವಿರಳತ್ವವಿರುವಾಗ ಸರಂಧ್ರತ್ವವು ಅವರ್ಜನೀಯವಾಗಿ ಬರುವಂತೆ ಜ್ಞಾನದಲ್ಲಿಯೂ ವಿರಳತ್ವವನ್ನು ಒಪ್ಪುವುದಾದರೆ ಸರಂಧ್ರತ್ವವು ತಪ್ಪಿದುದಲ್ಲವೆಂದೂ ಆಶಂಕಿಸಕೂಡದು. ಸಕಲಬ್ರಹ್ಮಾಂಡಗಳ ಬಾಹ್ಯಾಭ್ಯಂತರ ಸಕಲಪ್ರದೇಶಗಳಲ್ಲಿಯೂ ನೀರಂಧ್ರವಾದ ಸಂಯೋಗಕ್ಕೆ ಯೋಗ್ಯಗಳಾದ ಅವಯವಗಳನ್ನು ಪಡೆದಿರುವಿಕೆಯೇ ಜ್ಞಾನಕ್ಕೆ ಸ್ವರೂಪವಾದುದರಿಂದ ಇದರಲ್ಲಿ ಸರಂಧ್ರತ್ವಕ್ಕೆ ಅವಕಾಶವಿಲ್ಲ.

"ಮೋಕ್ಷಾವಸ್ಥೆಯಲ್ಲಿ ಸಕಲಬ್ರಹ್ಮಾಂಡೋದರವರ್ತಿಸಕಲಪದಾರ್ಥಗಳೊಡನೆಯೂ, ನಿತ್ಯವಿಭೂತಿಯ ಸಕಲಪ್ರದೇಶಗಳೊಡನೆಯೂ ನೀರಂಧ್ರ ಸಂಯೋಗಕ್ಕೆ ಯೋಗ್ಯವಾಗಿಯೇ ಜ್ಞಾನಸ್ವರೂಪವಿರುವುದಾದರೆ—ಅಪರಿಚ್ಛಿನ್ನವಾದ ಇಷ್ಟೊಂದು ದೊಡ್ಡ ಜ್ಞಾನವು ಬಂಧಾವಸ್ಥೆಯಲ್ಲಿ ಅತ್ಯಲ್ಪಪರಮಾಣವಾದ ಮಶಕಶರೀರದಲ್ಲಿ ಅಡಗುವ ಬಗೆ ಹೇಗೆ" ಎಂದು ಆಶಂಕಿಸಕೆಲಸವಿಲ್ಲ, ಜ್ಞಾನದ ಅವಯವಗಳಿಗೆ ಪರಸ್ಪರಪ್ರತಿಘಾತವಿದ್ದರೇನೇ ಅಂಥ ಆಶಂಕೆ ಅಂಕುರಿಸುವುದು. ಒಂದೇ ಆವರಣದಲ್ಲಿರುವ ಅನೇಕದೀಪಪ್ರಭೆಗಳು ಸ್ಪರ್ಶಶೂನ್ಯಗಳಾದುದರಿಂದ ಪರಸ್ಪರಾವಯವಗಳಿಗೆ ಪ್ರತಿಘಾತವನ್ನು ಮಾಡುವುದಿಲ್ಲವಾದಪ್ರಯುಕ್ತ ಹೇಗಾದರೆ ಒಂದೇ ಆವರಣದಲ್ಲಿ ಲಕ್ಷದೀಪಪ್ರಭೆಗಳಾದರೂ ಅಡಗುವುವೋ; ಅದರಂತೆ ಜ್ಞಾನಾವಯವಗಳೂ ಸ್ಪರ್ಶರಹಿತಗಳಾದುದರಿಂದ ಪರಸ್ಪರಪ್ರತಿಘಾತವನ್ನು ಮಾಡಲಾರವಾದಪ್ರಯುಕ್ತ ಬಂಧಾವಸ್ಥೆಯಲ್ಲಿ ಮಶಕಶರೀರದಲ್ಲಿಯೇ ಅಡಗುವುವು. ಹೆಚ್ಚು ಮಾತಿನಿಂದೇನು? ಇನ್ನೂ ಅದಕ್ಕಿಂತಲೂ ಅತಿಸೂಕ್ಷ್ಮವಾಗಿರುವ ಶರೀರದಲ್ಲಿಯೂ ಸಹ ಅಡಗಲು ಯಾವ ಅಭ್ಯಂತರವೂ ಇಲ್ಲ.

ಆದುದರಿಂದಲೇ ಹಿಂದೆ ಜ್ಞಾನಲಕ್ಷಣವನ್ನು ತೋರಿಸುವ ಪ್ರಕರಣದಲ್ಲಿ ನ್ಯಾಯತತ್ತ್ವೋಕ್ತಗಳಾದ ನಾಲ್ಕು ಲಕ್ಷಣಗಳನ್ನು ತೋರಿಸುವಾಗ ಅತ್ಯಂತಸೂಕ್ಷ್ಮತ್ವವೆಂಬ ಒಂದು ಲಕ್ಷಣವನ್ನೂ ಈ ಜ್ಞಾನಕ್ಕೆ ತೋರಿಸಿರುವೆವು. ಅತ್ಯಂತಸೂಕ್ಷ್ಮತ್ವವೆಂದರೆ ಪ್ರತಿಘಾತಕ್ಕೆ ವಿರೋಧಿಯಾದ ಶಕ್ತಿಯುಳ್ಳೋಣವೆಂಬುದನ್ನೂ ಅಲ್ಲಿಯೇ ವಿಶದಪಡಿಸಿರುವೆವು.

ಹೀಗೆ ಜ್ಞಾನವೆಂಬ ಒಂದು ವಸ್ತುವಿನಲ್ಲಿಯೇ ಭಿನ್ನಭಿನ್ನಕಾಲಗಳಲ್ಲಿ ಭಿನ್ನ ಭಿನ್ನಪರಿಮಾಣಗಳು ಉಂಟಾಗಬಹುದೆಂದು ಉಪಪಾದನೆಮಾಡಿ ತೋರಿಸಿದುದ ರಿಂದ ನೈಯಾಯಿಕರಿಗೆ ವೇದಾಂತಿಗಳ ಮುಂದೆ ಬಾಯಿತೆರೆಯಲು ಅವಕಾಶ ವಿಲ್ಲವೆಂಬುದನ್ನು ಸ್ಪಷ್ಟಪಡಿಸಿದಂತಾಯಿತು. ಹೇಗೆಂದರೆ—

## ೯೧೯ ಏಕಸ್ಮಿನ್ ವಸ್ತುನಿ ವಿರುದ್ಧಪರಿಮಾಣದ್ವಯಾ ನುಪಪತ್ತ್ಯಾಶಂಕಾ.

ಇಲ್ಲಿ ನೈಯಾಯಿಕರು—"ಪರಸ್ಪರವಿರುದ್ಧಗಳಾದ ಎರಡು ಪರಿಮಾಣ ಗಳು ಒಂದು ವಸ್ತುವಿನಲ್ಲಿ ಎಂದಿಗೂ ಕೂಡಲಾರವು ; ಹೇಗೆಂದರೆ ಒಂದು ವಸ್ತು ವಿನಲ್ಲಿ ಒಂದುಬಗೆಯಾದ ಪರಿಮಾಣವಿರುವಾಗ ಅದಕ್ಕೆ ವಿರುದ್ಧವಾದ ಮತ್ತೊಂ ದು ಪರಿಮಾಣವು ಅದರಲ್ಲಿ ಉಂಟಾಗಬೇಕಾದರೆ ಪೂರ್ವಪರಿಮಾಣವು ನಾಶ ಹೊಂದಿಯೇ ತೀರಬೇಕು; ಅದು ನಾಶವನ್ನೈದದೆ ಮತ್ತೊಂದು ಪರಿಮಾಣವು ಅದರಲ್ಲಿ ಉಂಟಾಗಲು ಅವಕಾಶವಿಲ್ಲ. ಇದಕ್ಕಾಗಿ ಪೂರ್ವಪರಿಮಾಣವು ನಾಶ ಹೊಂದಬೇಕಾದರೆ ಅದಕ್ಕೆ ಆಶ್ರಯವಾದ ವಸ್ತು ನಾಶವನ್ನು ಹೊಂದಿಯೇ ತೀರ ಬೇಕು. ಆಶ್ರಯನಾಶವಿಲ್ಲದೆ ಪರಿಮಾಣಕ್ಕೆ ನಾಶವುಂಟಾಗಲು ಅವಕಾಶವಿಲ್ಲ. ಅಂತು ಪೂರ್ವವಸ್ತುವಿನ ನಾಶದ ಮೂಲಕವಾಗಿ ಪೂರ್ವಪರಿಮಾಣವೂ ನಾಶ ವನ್ನು ಹೊಂದಿದಮೇಲೆ ಮತ್ತೊಂದು ವಸ್ತುವುಂಟಾಗಿ ಅದರಲ್ಲಿ ಮತ್ತೊಂದು ಪರಿಮಾಣವು ಉಂಟಾಗಬಹುದಲ್ಲದೆ. ಪೂರ್ವವಸ್ತುವಿನಲ್ಲಿಯೇ ಈ ದ್ವಿತೀಯಪರಿ ಮಾಣವು ಉಂಟಾಗಲಿಲ್ಲವಾದುದರಿಂದ **"ಪರಸ್ಪರವಿರುದ್ಧಗಳಾದ ಎರಡು ಪರಿಮಾಣಗಳು ಒಂದು ವಸ್ತುವಿನಲ್ಲಿ ಎಂದಿಗೂ ಕೂಡಲಾರವು"** ಎಂಬ ನಮ್ಮ ಪ್ರತಿಜ್ಞೆ ನಿರಂಕುಶವಾಗಿರುವುದು." ಎಂದು ಹೇಳುವರು.

## ೯೨೦ ಕಾಲಭೇದಸ್ಯೈವ ವಿರೋಧಶಾಮಕತ್ವಾದೇಕತ್ರ ಪರಿಮಾಣ ದ್ವಯೋಪಪತ್ತಿಃ

ಹೀಗೆ ಹೇಳುವವರನ್ನು ಕುರಿತು ವೇದಾಂತಿಗಳು ಕೇಳುವುದೇನೆಂದರೆ—ಪರಿ ಮಾಣದ್ವಯಕ್ಕೆ ಪರಸ್ಪರವಿರೋಧವಿರುವುದರಿಂದ ಒಂದು ವಸ್ತುವಿನಲ್ಲಿ ಪರಿಮಾಣ ದ್ವಯವು ಉಂಟಾಗುವುದಿಲ್ಲವೆಂದು ಹೇಳುವಿರೋ ? ಅಥವಾ ಪೂರ್ವಪರಿಮಾಣಕ್ಕೆ ನಾಶವಿಲ್ಲದೆ ಪರಿಮಾಣಾಂತರಕ್ಕೆ ಉತ್ಪತ್ತಿ ಸಂಭವಿಸುವುದಿಲ್ಲವಾದುದರಿಂದಲೂ, ಆಶ್ರಯನಾಶವಿಲ್ಲದೆ ಪೂರ್ವಪರಿಮಾಣನಾಶವುಂಟಾಗಲಾರದಾದುದರಿಂದಲೂ ಒಂದು ವಸ್ತುವಿನಲ್ಲಿ ಪರಿಮಾಣದ್ವಯವು ಉಂಟಾಗುವುದಿಲ್ಲವೆಂದು ಹೇಳುವಿರೋ?

ಮೊದಲನೆಯ ಪಕ್ಷವು ಯುಕ್ತವಾದುದಲ್ಲ. ಪರಸ್ಪರವಿರುದ್ಧಗಳಾದ ಎರಡು ಪರಿಮಾಣಗಳು ಒಂದು ವಸ್ತುವಿನಲ್ಲಿ ಏಕಕಾಲದಲ್ಲಿ ಉಂಟಾಗಲಾರವಾದರೂ ಭಿನ್ನಭಿನ್ನಕಾಲಗಳಲ್ಲಿ ಉಂಟಾಗಲು ತಡೆಯಿಲ್ಲ. ಕಾಲಭೇದವೇ ಅವುಗಳ ವಿರೋಧವನ್ನು ಪರಿಹರಿಸುವುದಷ್ಟೆ ?

ಎರಡನೆಯ ಪಕ್ಷವೂ ಸಮಂಜಸವಲ್ಲ. ಏತಕ್ಕೆಂದರೆ—ಅಸಮವಾಯಿಕಾರಣವೆಂದು ನೀವು ಒಪ್ಪಿರುವ ಅವಸ್ಥಾನಾಶವೇ ಪರಿಮಾಣನಾಶಕ್ಕೆ ಕಾರಣವಾಗಿರುವುದಲ್ಲದೆ ದ್ರವ್ಯನಾಶವು ಕಾರಣವಲ್ಲ. ದ್ರವ್ಯಸ್ವರೂಪವು ನಿತ್ಯವಾದುದರಿಂದ ಯಾವಾಗಲೂ ಅದಕ್ಕೆ ನಾಶವೇ ಸಂಭವಿಸುವುದಿಲ್ಲವಷ್ಟೆ ?

ಆದುದರಿಂದ ಒಂದೇವಸ್ತುವಿನಲ್ಲಿ ಕಾಲಭೇದದಿಂದ ಪರಿಮಾಣತಾರತಮ್ಯವುಂಟಾಗಲು ಯಾವ ತಡೆಯೂ ಇಲ್ಲ. ಅವಯವಾತಿರಿಕ್ತವಾದ ಅವಯವಿಯಿಲ್ಲವೆಂಬುದನ್ನೂ ಹಿಂದೆಯೇ ಅನೇಕಾವರ್ತಿ ತಿಳಿಯಪಡಿಸಿರುವೆವಷ್ಟೆ ? ಹೀಗಿರುವಲ್ಲಿ ಪರಿಮಾಣಾಂತರವು ಉಂಟಾಗುವುದಕ್ಕೆ ದ್ರವ್ಯಾಂತರವು ಎಲ್ಲಿಂದ ಬಂದೀತು ?

## ೯೨೧. ಜೀವಸ್ವರೂಪೇಽಪಿ ಕಾಲಭೇದೇನ ತತ್ತದ್ದೇಹ ಪರಿಮಾಣತ್ವೋಪಪತ್ತ್ಯಾಶಂಕಾ.

"ಪೂಜ್ಯರೆ! ಹೀಗೆ ಕಾಲಭೇದದಿಂದ ಒಂದೇವಸ್ತುವಿನಲ್ಲಿ ವಿರುದ್ಧಪರಿಮಾಣಗಳನ್ನು ಸಿದ್ಧಾಂತದಲ್ಲಿ ಒಪ್ಪುವಿರಾದರೆ ಜೈನರು ಮಾಡಿದ ಅಪರಾಧವೇನು ? ಅವರಮೇಲೆ ದೋಷವನ್ನು ಹೇಗೆ ಆರೋಪಿಸುತ್ತೀರಿ ? ಬಂಧಾವಸ್ಥೆಯಲ್ಲಿರುವ ಜೀವನು ಪುಣ್ಯಪಾಪರೂಪವಾದ ಕರ್ಮದ ತಾರತಮ್ಯದಿಂದ ಹಲವು ಬಗೆಯ ಶರೀರಗಳನ್ನು ಕ್ರಮವಾಗಿ ಪರಿಗ್ರಹಿಸುವ ಕಾಲದಲ್ಲಿ ಯಾವಾಗ ಯಾವ ಶರೀರವನ್ನು ಪರಿಗ್ರಹಿಸುವನೋ ಆಗ ಅಂಥ ಶರೀರಕ್ಕೆ ಸಮಾನವಾದ ಪರಿಮಾಣವನ್ನು ತಾನು ಪಡೆವನೆಂದು ಹೇಳುವ ಜೈನರ ಮತದಲ್ಲಿಯೂ ಜೀವನೆಂಬ ಒಂದೇ ವಸ್ತುವಿನಲ್ಲಿ ಕಾಲಭೇದದಿಂದ ಭಿನ್ನಭಿನ್ನ ಪರಿಮಾಣಗಳು ಸಂಭವಿಸಬಹುದಾಗಿರುವಲ್ಲಿ ಅವರನ್ನು ದೂಷಿಸುವುದು ಯುಕ್ತವಲ್ಲವಷ್ಟೆ ?

ವೇದಾಂತಸೂತ್ರದ ಎರಡನೆಯ ಅಧ್ಯಾಯದ ಎರಡನೆಯ ಪಾದದ "**ಅಂತ್ಯಾವಸ್ಥಿತೇಶ್ಚೋಭಯ ನಿತ್ಯತ್ವಾದವಿಶೇಷಃ**" ಎಂಬ ಮೂವತ್ತು ನಾಲ್ಕನೆಯ ಸೂತ್ರದಲ್ಲಿ ಸೂತ್ರಕಾರರು ದೂಷಣವನ್ನಾದರೆ ತೋರಿಸಿರುವರು. ಸೂತ್ರಾರ್ಥವೇನೆಂದರೆ—ಆತ್ಮನಿಗೆ ದೇಹಪರಿಮಾಣತ್ವವು ಸಂಭವಿಸುವುದಿಲ್ಲ; ಏತಕ್ಕೆಂದರೆ ಜೀವನಿಗೆ ಕೊನೆಯ ಪರಿಮಾಣವು ಯಾವುದುಂಟೋ, ಎಂದರೆ ಮೋಕ್ಷಾ

ವಸ್ಥೆಯನ್ನು ಪಡೆದ ಜೀವನಿಗೆ ಅಲ್ಲಿಂದ ಮುಂದಕ್ಕೆ ದೇಹಾಂತರಪರಿಗ್ರಹವಿಲ್ಲವಾ ದುದರಿಂದ ಆಗ ಯಾವ ಪರಿಮಾಣವುಂಟೋ ಅದೇ ಪರಿಮಾಣವು ಅಲ್ಲಿಂದ ಮುಂದಕ್ಕೆ ಎಂದೆಂದಿಗೂ ಸ್ಥಿರವಾಗಿರುವುದರಿಂದ ಮೋಕ್ಷಾವಸ್ಥೆಯನ್ನು ಪಡೆದ ಜೀವಸ್ವರೂಪ, ಮತ್ತು ಅಂಥವನ ಪರಿಮಾಣ ಈ ಉಭಯಕ್ಕೂ ನಿತ್ಯತ್ವವು ಸಿದ್ಧ ವಾದುದರಿಂದ ಬಂಧಾವಸ್ಥೆಯಲ್ಲಿಯೂ ಅದೇ ಪರಿಮಾಣವು ಜೀವನಿಗೆ ಇರಬಹು ದಾಗಿರುವಲ್ಲಿ ದೇಹಪರಿಮಾಣತ್ವವನ್ನು ಇವನಿಗೆ ಹೇಗೆ ಹೇಳಲಾದೀತು? ಬಂಧ ಮೋಕ್ಷಗಳೆಂಬ ಈ ಎರಡು ಅವಸ್ಥೆಗಳಲ್ಲಿಯೂ ಜೀವನಿಗೆ ಪರಿಮಾಣವಿಷಯದಲ್ಲಿ ಯಾವುದೊಂದು ವಿಶೇಷವೂ ಎಂದರೆ ಹೆಚ್ಚುಕಡಮೆಯೂ ಇಲ್ಲವಷ್ಟೆ? ಎಂಬುದು ಸೂತ್ರಾರ್ಥವಾಗಿರುವುದು.

ಧರ್ಮಭೂತಜ್ಞಾನವೆಂಬ ಒಂದೇ ವಸ್ತುವಿನಲ್ಲಿ ಕಾಲಭೇದದಿಂದ ಭಿನ್ನ ಭಿನ್ನ ಪರಿಮಾಣಗಳು ಸಂಭವಿಸಬಹುದೆಂದು ನೀವು ತೋರಿಸಿದಂತೆ ಆತ್ಮವಸ್ತುವಿ ನಲ್ಲಿಯೂ ಕಾಲಭೇದದಿಂದ ಭಿನ್ನಭಿನ್ನ ಪರಿಮಾಣಗಳನ್ನು ಜೈನರು ತೋರಿಸಿದರೆ ಸಿದ್ಧಾಂತದಲ್ಲಿ ಅವರನ್ನು ಹೇಗೆ ದೂಷಿಸಲಾದೀತು?"

## ೧೨೨. ಜ್ಞಾನತದಾಶ್ರಯಯೋಃ ವೈಷಮ್ಯಪ್ರದರ್ಶನಪೂರ್ವಕಂ ತತ್ಪರಿಹಾರಃ

ಹೀಗೆ ದೂಷಿಸಲಾದೀತು—ಪ್ರಮಾಣವಿಲ್ಲದೆ ಕೇವಲ ಯುಕ್ತಿಮೂಲಕವಾಗಿ ಜೀವನಿಗೆ ಶರೀರಸಮಾನಪರಿಮಾಣತ್ವವನ್ನು ಅವರು ಹೇಳುವರಾದುದರಿಂದ ಸೂತ್ರ ಕಾರರು ಅವರನ್ನು ಹೀಗೆ ದೂಷಿಸಿರುವರು.—ಜೀವನಿಗೆ ಶರೀರಸಮಾನಪರಿಮಾಣ ತ್ವವನ್ನು ಹೇಳುವರಾದರೆ ಜೀವನಿಗೆ ವಿಕಾರಿತ್ವದೋಷವು ಪ್ರಸಕ್ತವಾಗುವುದು ಅದರಿಂದ ಅನಿತ್ಯತ್ವವು ಬಂದೊದಗುವುದು. ವಿಕಾರವಿಶಿಷ್ಟಗಳಾಗಿಯೂ ಅನಿತ್ಯ ಗಳಾಗಿಯೂ ಇರುವ ವಸ್ತುಗಳಲ್ಲಿ ಪರಾಕ್ತ್ವವೂ ಚೈತನ್ಯಾನಾಶ್ರಯತ್ವವೂ ಕಂಡುಬರುವುದರಿಂದ ಜೀವನಲ್ಲಿಯೂ ಅವುಗಳು ಪ್ರಸಕ್ತಗಳಾಗುವುವು. ಆಗ ಪ್ರತ್ಯಕ್ತ್ವವೂ ಚೈತನ್ಯಾಶ್ರಯತ್ವವೂ ಜೀವನಿಗೆ ತಪ್ಪಿಹೋಗುವುವು.

ನಾವಾದರೆ ಧರ್ಮಭೂತಜ್ಞಾನಕ್ಕೆ ಪರಿಮಾಣತಾರತಮ್ಯವನ್ನು ಪ್ರಮಾ ಣದ ಮೂಲಕ ತೋರಿಸುವೆವಲ್ಲದೆ ಕೇವಲ ಯುಕ್ತಿಮೂಲಕವಾಗಿ ತೋರಿಸುವು ದಿಲ್ಲ. ಧರ್ಮಭೂತಜ್ಞಾನವು ಸ್ವರೂಪದಿಂದ ನಿತ್ಯವಾಗಿದ್ದರೂ ಸಂಕೋಚವಿಕಾ ಸಗಳೆಂಬ ಅವಸ್ಥೆಗಳು ಇದಕ್ಕೆ ನಿರುಪಾಧಿಕಗಳಾದ ಧರ್ಮಗಳಾದುದರಿಂದ ಇವು ಕೂಡಬಹುದು. ಆದರೂ ಅನಿತ್ಯತ್ವವು ಮಾತ್ರ ಇದಕ್ಕೆ ಪ್ರಸಕ್ತವಾಗುವುದಿಲ್ಲ.

ಪರಾಕ್ತ್ವವೂ ಚೈತನ್ಯಾನಾಶ್ರಯತ್ವವೂ ಇದಕ್ಕೆ ಪ್ರಸಕ್ತವಾಗುವುವೆಂದರೆ ಇದು ನಮಗೆ ಇಷ್ಟವಾಗಿಯೇ ಇರುವುದಲ್ಲದೆ ಅನಿಷ್ಟವಲ್ಲ.

ನೀವಾದರೆ ಆತ್ಮಸ್ವರೂಪದಲ್ಲಿಯೇ ಸಂಕೋಚವಿಕಾಸಾವಸ್ಥೆಗಳನ್ನು ಒಪ್ಪುವಿರಾದುದರಿಂದ ವಿಕಾರಿತ್ವವೂ, ಅನಿತ್ಯತ್ವವೂ, ಪರಾಕ್ತ್ವವೂ, ಚೈತನ್ಯಾನಾಶ್ರಯತ್ವವೂ ನಿಮ್ಮ ಮತದಲ್ಲಿ ಆತ್ಮನಿಗೆ ತಪ್ಪಲಾರವು. ಆದಕಾರಣ ಆತ್ಮನಿಗೆ ಕೊನೆಯಲ್ಲಿ ನಿಲ್ಲುವ ಪರಿಮಾಣವೇ ಮೊದಲೂ ಇರುವುದೆಂದು ಒಪ್ಪುವುದೇ ಯುಕ್ತವಾಗಿರುವುದರಿಂದ ದೇಹಸಮಾನಪರಿಮಾಣತ್ವವು ಆತ್ಮನಿಗೆ ಎಂದಿಗೂ ಸಂಭವಿಸುವುದಿಲ್ಲ.

## ೧೨೩ ಅಥ ಅಷ್ಟಮಾಕ್ಷೇಪಪರಿಹಾರಃ, ತತ್ರ ಪ್ರತಿಬಂದೀ ಪ್ರದರ್ಶನಮುಖೇನ ಅತೀತಾನಾಗತಯೋರಪಿ ಜ್ಞಾನಸಂಬಂಧೋಪಪಾದನಂ.

**ಎಂಟನೆಯ ಆಕ್ಷೇಪಕ್ಕೆ**—ಆತ್ಮಸಿದ್ಧಿಗ್ರಂಥದಲ್ಲಿ **ಶ್ರೀ ಯಾಮುನ ಮುನಿಗಳು** ಈ ರೀತಿಯಲ್ಲಿ ಅಪ್ಪಣೆಕೊಡಿಸಿರುವರು—

ಜ್ಞಾನಕ್ಕೂ ವಿಷಯಕ್ಕೂ ವಿಷಯವಿಷಯಿಭಾವವೆಂಬ ಸಂಬಂಧವನ್ನು ಸ್ವೀಕರಿಸುವ ನೈಯಾಯಿಕರ ಮತದಲ್ಲಿ ಹೇಗಾದರೆ ಅತೀತಪದಾರ್ಥಗಳಲ್ಲಿಯೂ ಆಗಾಮಿಪದಾರ್ಥಗಳಲ್ಲಿಯೂ ಜ್ಞಾನನಿರೂಪಿತವಾದ ವಿಷಯತ್ವವು ಸಂಭವಿಸುವುದೋ;

ಮತ್ತು—ಮೀಮಾಂಸಕರೊಳಗೆ ಭಾಟ್ಟರ ಮತದಲ್ಲಿ ಹೇಗಾದರೆ ಅತೀತಾನಾಗತಪದಾರ್ಥಗಳಲ್ಲಿಯೂ ಜ್ಞಾನಜನ್ಯವಾದ ಪ್ರಾಕಟ್ಯಾಶ್ರಯತ್ವವೆಂಬ ಪ್ರಕಾಶಮಾನತ್ವವು ಸಂಭವಿಸುವುದೋ;

ಮತ್ತು—ಅತಿಕ್ರಾಂತದಿವಸಗಳಲ್ಲಿಯೂ, ಆಗಾಮಿದಿವಸಗಳಲ್ಲಿಯೂ ದ್ವಿತ್ವತ್ರಿತ್ವಾದಿಸಂಖ್ಯಾವ್ಯವಹಾರವಿರುವುದರಿಂದ ಅವುಗಳಿಗೆ ದ್ವಿತ್ವ-ತ್ರಿತ್ವಾದಿಸಂಖ್ಯಾಸಂಬಂಧವು ಅಪೇಕ್ಷಾಬುದ್ಧಿಯಿಂದಲೇ ಹೇಗಾದರೆ ನೈಯಾಯಿಕರ ಮತದಲ್ಲಿ ಸಂಭವಿಸುವುದೋ,

ಮತ್ತು—ಕರ್ಮಪಾಶದಿಂದ ತಪ್ಪಿಸಿಕೊಂಡು ಜ್ಞಾನಸಂಕೋಚದಿಂದ ಬಿಡುಗಡೆಯನ್ನು ಹೊಂದಿದ ಒಬ್ಬಾನೊಬ್ಬ ಜೀವನ ಜ್ಞಾನದೊಡನೆ ಮತ್ತೊಂದು ಬ್ರಹ್ಮಾಂಡದಲ್ಲಿರುವ ಸಕಲಪದಾರ್ಥಗಳಿಗೂ ದೇಶವಿಪ್ರಕರ್ಷವಿದ್ದರೂ ಎಂದರೆ ಅತಿದೂರಪ್ರದೇಶವ್ಯವಧಾನವಿದ್ದರೂ ಅತಿಶೀಘ್ರದಲ್ಲಿಯೇ ಸಂಯೋಗವು ಹೇಗಾದರೆ ಸಿದ್ಧಾಂತದಲ್ಲಿ ಸಂಭವಿಸುವುದೋ;

ಅದರಂತೆಯೇ ಕಾಲವಿಪ್ರಕರ್ಷವಿದ್ದರೂ ಎಂದರೆ ಅತಿದೀರ್ಘಕಾಲವ್ಯವಧಾನವಿದ್ದರೂ ಅತೀತಾನಾಗತಪದಾರ್ಥಗಳಿಗೆ ವರ್ತಮಾನಜ್ಞಾನದೊಡನೆ ಸಂಯೋಗವು ಸಂಭವಿಸಲು ತಡೆಯಿಲ್ಲ.

**೯೨೪. ತತ್ರೈವ ಪ್ರಕಾರಾಂತರೇಣ ಸಮಾಧಾನಂ, ಅತೀತಾನಾಗತಯೋರಪಿ ಆಕಾರಾಂತರೇಣ ವರ್ತಮಾನತ್ವಾಕ್ಷತೇಃ ತತ್ರ ಜ್ಞಾನಸಂಬಂಧೋಪಪತ್ತಿಃ.**

ಹೀಗೆ ಪ್ರತಿಬಂದಿಯನ್ನು ತೋರಿಸುವುದರ ಮೂಲಕ ಎಂಟನೆಯ ಆಕ್ಷೇಪಕ್ಕೆ ಪರಿಹಾರವನ್ನು ಅಪ್ಪಣೆಕೊಡಿಸಿ ಪುನಃ ಮತ್ತೊಂದುರೀತಿಯಾಗಿಯೂ ಇದಕ್ಕೆ ಸಮಾಧಾನವನ್ನು ತೋರಿಸಿರುವರು. ಹೇಗೆಂದರೆ—

**"ವರ್ತಮಾನಕಾಲದಲ್ಲಿ ಇರುವ ಜ್ಞಾನದೊಡನೆ ವರ್ತಮಾನಕಾಲದಲ್ಲಿ ಇಲ್ಲದಿರುವ ಅತೀತಾನಾಗತಪದಾರ್ಥಗಳಿಗೆ ಸಂಯೋಗವು ಹೇಗೆ ಸಂಭವಿಸೀತು?"** ಎಂದಲ್ಲವೆ ನಿಮ್ಮ ಆಕ್ಷೇಪವು? ವಿಮರ್ಶೆಮಾಡಿ ನೋಡಿದರೆ ಈ ಆಕ್ಷೇಪವೇ ಸಮಂಜಸವಾದುದಲ್ಲವೆಂದು ಹೇಳಬೇಕಾಗಿರುವುದು. ಹೇಗೆಂದರೆ— ಅತೀತಾನಾಗತಪದಾರ್ಥಗಳು ಈಗ ವರ್ತಮಾನಕಾಲದಲ್ಲಿ ಇಲ್ಲವೆಂಬುದು ಮೊದಲು ಸಿದ್ಧವಾದರಲ್ಲವೆ ಅವುಗಳಿಗೆ ವರ್ತಮಾನಜ್ಞಾನದೊಡನೆ ಸಂಯೋಗವು ಹೇಗೆ ಕೂಡೀತೆಂಬ ಆಕ್ಷೇಪಕ್ಕೆ ಅವಕಾಶವುಂಟಾದೀತು? ಅದೇ ಸಿದ್ಧವಲ್ಲ. ಅತೀತಾನಾಗತಪದಾರ್ಥಗಳುಕೂಡ ಈಗಲೂ ಇರುತ್ತಿರುವುವಾದುದರಿಂದ ಅವುಗಳಿಗೆ ವರ್ತಮಾನಕಾಲಿಕಜ್ಞಾನದೊಡನೆ ಸಂಯೋಗವುಂಟಾಗಲು ಯಾವ ನ್ಯೂನತೆಯೂ ಇಲ್ಲ.

"ಓಹೋ—ಅತೀತಾನಾಗತಪದಾರ್ಥಗಳೂ ಸಹ ವರ್ತಮಾನಕಾಲದಲ್ಲಿಯೂ ಇರುತ್ತಿರುವುವೆಂದು ಒಪ್ಪುವುದಾದರೆ—"ವಂಧ್ಯೆಯ ಪುತ್ರನು ಹೋಗುತ್ತಾನೆ" ಎಂಬ ಮಾತಿನಂತೆ ವ್ಯಾಘಾತದೋಷವು ತಲೆಯೆತ್ತುವುದಿಲ್ಲವೋ? ಅತೀತತ್ವ ಅನಾಗತತ್ವ ಎಂಬ ಧರ್ಮಗಳು ವರ್ತಮಾನತ್ವಧರ್ಮದೊಡನೆ ವ್ಯಾಹತಗಳಾಗಿರುವುವಲ್ಲವೆ?" ಎಂದು ದುಡುಕಿ ಆಶಂಕಿಸಬೇಡಿರಿ; ಏತಕ್ಕೆಂದರೆ—ಮೀಮಾಂಸಕಮತದಲ್ಲಿ ಸಕಲಪದಾರ್ಥಗಳಿಗೂ ಜಾತ್ಯಾಕಾರವೆಂದೂ, ವ್ಯಕ್ತ್ಯಾಕಾರವೆಂದೂ ಎರಡು ಆಕಾರಗಳುಂಟು; ಸಕಲಪದಾರ್ಥಗಳೂ ವ್ಯಕ್ತ್ಯಾಕಾರದಿಂದ ಅನಿತ್ಯಗಳೆನಿಸಿಕೊಂಡರೂ ಜಾತ್ಯಾಕಾರದಿಂದ ನಿತ್ಯಗಳಾಗಿಯೇ ಇರುವುವು. ನಮ್ಮ ಮನೆಯಲ್ಲಿದ್ದ ಒಂದಾನೊಂದು ಅಶ್ವವ್ಯಕ್ತಿ ನಷ್ಟವಾದಮಾತ್ರಕ್ಕೆ ಪ್ರಪಂಚದಲ್ಲಿ ಅಶ್ವಪದಾ

ರ್ಥವೇ ನಷ್ಟವಾಯಿತೆಂದು ಹೇಳಲಾಗುವುದಿಲ್ಲ. ಅಶ್ವತ್ವಜಾತಿ ಈಗಲೂ ಇದ್ದೇ ಇರುವುದು.

"ಅಶ್ವತ್ವಜಾತಿ ಈಗ ಇದ್ದರೂ, ನಷ್ಟವಾದ ಅಶ್ವವ್ಯಕ್ತಿ ನಷ್ಟವೇ ಆಯಿತಲ್ಲದೆ ಆ ವ್ಯಕ್ತಿ ಈಗ ಇಲ್ಲವೇ ಇಲ್ಲ" ಎಂದು ಆಶಂಕಿಸಬೇಡಿರಿ; ಜಾತಿವ್ಯಕ್ತಿಗಳಿಗೆ ಪರಸ್ಪರಭಿನ್ನಾಭಿನ್ನತ್ವವಿರುವುದರಿಂದ ನಷ್ಟವಾದ ಅಶ್ವವ್ಯಕ್ತಿ ವ್ಯಕ್ತ್ಯಾಕಾರದಿಂದ ನಷ್ಟವಾಗಿ ಈಗ ಇಲ್ಲದಿದ್ದರೂ ಜಾತ್ಯಾಕಾರದಿಂದ ಅದೇವ್ಯಕ್ತಿ ಈಗಲೂ ಇರುವುದು.

ಹೀಗೆ ವ್ಯಕ್ತ್ಯಾಕಾರದಿಂದ ಅತೀತಾನಾಗತಗಳಾಗಿಯೂ, ಜಾತ್ಯಾಕಾರದಿಂದ ವರ್ತಮಾನಕಾಲದಲ್ಲಿಯೂ ಸಹ ಇರುವಂಥವುಗಳಾಗಿಯೂ ಇರುವ ಪದಾರ್ಥಗಳು ವರ್ತಮಾನಜ್ಞಾನಕ್ಕೆ ಗೋಚರಗಳಾದಾಗ ಜ್ಞಾನಜನ್ಯವಾದ ಪ್ರಾಕಟ್ಯವೆಂಬ ಧರ್ಮವು ಅವುಗಳಲ್ಲಿ ಹೇಗೆ ಉಂಟಾಗಬಹುದೋ ;

ಆದರಂತೆಯೇ ಸಿದ್ಧಾಂತದಲ್ಲಿ ಅವಸ್ಥಾವಿಶೇಷವಿಶಿಷ್ಟವಾದ ದ್ರವ್ಯವು ಅನಿತ್ಯವಾಗಿದ್ದರೂ ವಿಶೇಷ್ಯವಾದ ದ್ರವ್ಯಸ್ವರೂಪವು ನಿತ್ಯವಾದುದರಿಂದ ಅತೀತದ್ರವ್ಯಗಳೂ ಆಗಾಮಿದ್ರವ್ಯಗಳೂ ತಮ್ಮ ತಮ್ಮ ಕಾಲದಲ್ಲಿ ವರ್ತಮಾನತ್ವಾವಸ್ಥೆಯಿಂದ ಇದ್ದರೂ, ಈಗ ವರ್ತಮಾನತ್ವಾವಸ್ಥೆಯಿಂದ ಇಲ್ಲದಿದ್ದರೂ, ಅತೀತತ್ವಾಕಾರದಿಂದಲೂ ಆಗಾಮಿತ್ವಾಕಾರದಿಂದಲೂ ಈಗಲೂ ಸಹ ಇದ್ದೇ ಇರುವುವಾದಪ್ರಯುಕ್ತ ವಿದ್ಯಮಾನಗಳಾದ ಅಂಥ ಪದಾರ್ಥಗಳಿಗೆ ವರ್ತಮಾನಕಾಲಿಕಜ್ಞಾನದೊಡನೆ ಸಂಯೋಗವು ಸಂಭವಿಸಲು ಯಾವ ಅನುಪಪತ್ತಿಯೂ ಇಲ್ಲ.

"ಓಹೋ—ಆದರೆ ವಿಶೇಷ್ಯಭೂತಗಳಾದ ಆ ಪದಾರ್ಥಗಳ ಸ್ವರೂಪವು ಈಗ ಇದ್ದರೂ ಅವುಗಳಲ್ಲಿ ವರ್ತಮಾನತ್ವಾವಸ್ಥೆ ತಪ್ಪಿ ಅತೀತತ್ವಾನಾಗತತ್ವಗಳೆಂಬ ಅವಸ್ಥೆಗಳಿರುವುದರಿಂದ ಅತೀತತ್ವಾನಾಗತತ್ವಗಳೆಂಬ ಅವಸ್ಥಾವಿಶಿಷ್ಟಗಳಾದ ಆ ಪದಾರ್ಥಗಳಿಗೆ ಜ್ಞಾನದೊಡನೆ ಸಂಯೋಗವುಂಟಾದರೂ ವರ್ತಮಾನತ್ವಾವಸ್ಥಾವಿಶಿಷ್ಟಗಳಾದ ಆ ಪದಾರ್ಥಗಳಿಗೆ ಜ್ಞಾನದೊಡನೆ ಸಂಯೋಗವು ಉಂಟಾಗಲಿಲ್ಲ" ಎಂದು ಆಶಂಕಿಸಬೇಡಿರಿ; ಏತಕ್ಕೆಂದರೆ—ಅತೀತಾನಾಗತಪದಾರ್ಥಗಳಲ್ಲಿ ಜ್ಞಾನದಿಂದ ಪ್ರಾಕಟ್ಯಧರ್ಮವುಂಟಾಗುವ ಕಾಲದಲ್ಲಿ ಜಾತ್ಯಾಕಾರದಿಂದ ವರ್ತಮಾನಗಳಾದ ಅವುಗಳಲ್ಲಿ ಪ್ರಾಕಟ್ಯವುಂಟಾದರೂ ವ್ಯಕ್ತ್ಯಾಕಾರದಿಂದ ವರ್ತಮಾನಗಳಾದ ಅವುಗಳಲ್ಲಿ ಪ್ರಾಕಟ್ಯವುಂಟಾಗಲಿಲ್ಲವೆಂಬ ಪ್ರತಿಬಂದಿಯಾದ ಆಶಂಕೆ ತಲೆಯೆತ್ತೀತು.

ಆದಕಾರಣ ಅತೀತಾನಾಗತಪದಾರ್ಥಗಳಲ್ಲಿ ವರ್ತಮಾನತ್ವಾವಸ್ಥೆ ಈಗ ಇಲ್ಲದಿದ್ದರೂ ಅತೀತಗಳಲ್ಲಿ ಅಂಥ ವರ್ತಮಾನತ್ವವು ಪೂರ್ವದಲ್ಲಿ ಇದ್ದುದರಿಂದಲೂ,

ಆಗಾಮಿಗಳಲ್ಲಿ ಮುಂದೆ ಇರುವುದಾದುದರಿಂದಲೂ ವರ್ತಮಾನತ್ವಾವಸ್ಥೆಯಿಂದ ಉಪಲಕ್ಷಿತಗಳಾದ ಅವುಗಳಿಗೆ ವರ್ತಮಾನಕಾಲಿಕವಾದ ಜ್ಞಾನದೊಡನೆ ಸಂಯೋಗವುಂಟಾಗಲು ಯಾವುದೊಂದು ಅಭ್ಯಂತರವೂ ಇಲ್ಲ.

## ೧೨೫. ಅಥ ನವಮಾಕ್ಷೇಪಪರಿಹಾರಃ, ತತ್ರ ಜ್ಞಾನಸ್ಯ ಅದ್ರವ್ಯೈಸ್ಸಹ ಸಂಬಂಧಾಂತರೋಪಪಾದನಂ.

**ಒಂಬತ್ತನೆಯ ಆಕ್ಷೇಪಕ್ಕೆ**—ದ್ರವ್ಯದಲ್ಲಿರುವ ಗುಣ, ಕ್ರಿಯೆ, ಜಾತಿ, ಮೊದಲಾದುವುಗಳಿಗೆ ಜ್ಞಾನದೊಡನೆ ಸಂಯೋಗಸಂಬಂಧವನ್ನು ನಾವು ಸಿದ್ಧಾಂತದಲ್ಲಿ ಹೇಳಿದ್ದಪಕ್ಷದಲ್ಲಿ ಈ ಆಕ್ಷೇಪಕ್ಕೆ ಅವಕಾಶವಿದ್ದಿತು; ಅವುಗಳಿಗೆ ಸಂಯೋಗಸಂಬಂಧವನ್ನು ನಾವು ಒಪ್ಪಲೇ ಇಲ್ಲವಾದುದರಿಂದ ಈ ಆಕ್ಷೇಪವು ಹುಟ್ಟುವುದಕ್ಕೇ ಅವಕಾಶವಿಲ್ಲವಾದಕಾರಣ ಇದು ಅಸುಕ್ತೋಪಾಲಂಭವಾಗಿರುವುದು.

ಹಾಗಾದರೆ—ಗುಣಾದಿಗಳಿಗೆ ಜ್ಞಾನದೊಡನೆ ಯಾವ ಸಂಬಂಧವನ್ನು ಒಪ್ಪಿರುವಿರಿ? ಯಾವುದಾದರೊಂದು ಸಂಬಂಧವನ್ನು ಒಪ್ಪಿದಲ್ಲದೆ ಗುಣಾದಿಗಳು ಜ್ಞಾನಕ್ಕೆ ವಿಷಯಗಳಾಗಲಾರವಷ್ಟೆ?

ಹವುದು; ಯಾವುದಾದರೊಂದು ಸಂಬಂಧವು ಆವಶ್ಯಕವಾಗಿಯೇ ಇರುವುದು; ಅಂಥ ಸಂಬಂಧವು ಸಂಯೋಗಸಂಬಂಧಕ್ಕಿಂತಲೂ ಭಿನ್ನವಾಗಿಯೂ, ಸಂಯೋಗಸಂಬಂಧವನ್ನು ಒಳಕೊಂಡುದಾಗಿಯೂ ಇರುವುದು. ಎಂದರೆ ಗುಣ, ಕ್ರಿಯೆ, ಜಾತಿ, ಮೊದಲಾದುವುಗಳಿಗೆ ಜ್ಞಾನದೊಡನೆ ಉಂಟಾಗುವ ಸಂಬಂಧವು ಸಂಯುಕ್ತಾಶ್ರಿತತ್ವರೂಪವಾಗಿರುವುದು. ಜ್ಞಾನದೊಡನೆ ಸಂಯೋಗವನ್ನು ಪಡೆದು ಸಂಯುಕ್ತವೆನಿಸಿಕೊಂಡಿರುವ ದ್ರವ್ಯವನ್ನು ಆಶ್ರಯಿಸಿಕೊಂಡಲ್ಲವೆ ಗುಣ ಕ್ರಿಯಾಜಾತಿಗಳಿರುವುವು.

ನೈಯಾಯಿಕರು ಗುಣಾದಿಗಳಿಗೆ ಜ್ಞಾನದೊಡನೆ ಸಂಯುಕ್ತಸಮವಾಯವೆಂಬ ಸಂಬಂಧವನ್ನು ಹೇಳುವರು; ಆದರೆ ವೇದಾಂತಸಿದ್ಧಾಂತದಲ್ಲಿ ಸಮವಾಯವೆಂಬ ಸಂಬಂಧಾಂತರವನ್ನು ಒಪ್ಪುವುದಿಲ್ಲವಾದುದರಿಂದ ಅದೇ ಸಂಬಂಧವನ್ನು ಸಂಯುಕ್ತಾಶ್ರಿತತ್ವವೆಂಬ ಹೆಸರಿನಿಂದ ವ್ಯವಹರಿಸುವೆವು.

ಹಾಗಾದರೆ—"ಹಿಂದೆ ಜ್ಞಾನಕ್ಕೆ ವಿಷಯಗಳೊಡನೆ ಉಂಟಾಗುವ ಸಂಬಂಧವನ್ನು ನಿರೂಪಿಸುವ ಸಂದರ್ಭದಲ್ಲಿ "**ಸಂಬಂಧಶ್ಚ ಸಂಯೋಗಲಕ್ಷಣಃ**" ಎಂಬ ಭಾಷ್ಯಕಾರರ ಸೂಕ್ತಿಯನ್ನು ತೋರಿಸಿ ಸಂಯೋಗವೇ ಇದಕ್ಕೆ ಸಂಬಂಧವೆಂದು ಹೇಳಿರುವಿರಲ್ಲವೆ? ಈಗ ಸಂಬಂಧಾಂತರವನ್ನು ಹೇಗೆ ಹೇಳುತ್ತೀರಿ?

ಹಾಗೆ ಹೇಳುವುದಾದರೆ ಭಾಷ್ಯಕಾರರ ಸೂಕ್ತಿಯೊಡನೆ ವಿರೋಧವು ಪ್ರಸಕ್ತವಾಗುವುದಲ್ಲವೆ ?''

ಇಲ್ಲ; ವಿರೋಧವು ಪ್ರಸಕ್ತವಾಗುವುದಿಲ್ಲ—ಜ್ಞಾನಕ್ಕೆ ಜ್ಞಾನವಿಷಯಗಳೊಡನೆ ಯಥೋಚಿತವಾಗಿ ಯಾವ ಯಾವ ಸಂಬಂಧವನ್ನು ಹೇಳಿದರೂ ಅದರಲ್ಲೆಲ್ಲಾ ಸಂಯೋಗಸಂಬಂಧವು ಸಾಕ್ಷಾತ್ತಾಗಿಯಾಗಲಿ ಪರಂಪರೆಯಿಂದಲಾಗಲಿ ಗರ್ಭಿತವಾಗಿಯೇ ಇರುವುದರಿಂದ ಸಂಯೋಗಸಂಬಂಧವು ಅವಶ್ಯಂಭಾವಿಯಾಗಿಯೇ ಇರುವಕಾರಣ ದ್ರವ್ಯಗಳಿಗೆ ಜ್ಞಾನದೊಡನೆ ಉಂಟಾಗುವ ಸಂಬಂಧವು ಸಂಯೋಗವೇ ಆಗಿರುವುದರಿಂದ ಪ್ರಧಾನವಾದ ಸಂಯೋಗಸಂಬಂಧವನ್ನು ಭಾಷ್ಯಕಾರರು ಅಪ್ಪಣೆಕೊಡಿಸಿದರಲ್ಲದೆ ದ್ರವ್ಯದಲ್ಲಿರುವ ಗುಣಾದಿಗಳಿಗೂ ಸಂಯೋಗಸಂಬಂಧವೇ ಉಂಟಾಗುವುದೆಂದು ಅಪ್ಪಣೆಕೊಡಿಸಲಿಲ್ಲ; ಗುಣಾದಿಗಳಿಗೆ ಉಂಟಾಗುವ ಸಂಬಂಧಾಂತರವನ್ನು ನಿರಾಕರಿಸಲೂ ಅವರಿಗೆ ತಾತ್ಪರ್ಯವಿಲ್ಲ; ಸಂಬಂಧಾಂತರವೂ ಭಾಷ್ಯಕಾರರಿಗೆ ಅಭಿಮತವಾಗಿಯೇ ಇರುವುದು.

ಈ ಅಭಿಪ್ರಾಯವನ್ನು ಸೋಮಯಾಜಿಗಳ ಕೂಟಸ್ಥರಾದ **ಶ್ರೀ ರಾಮಮಿಶ್ರ**ರೆಂಬುವರು **ಷಡರ್ಥಸಂಗ್ರಹ**ವೆಂಬ ಗ್ರಂಥದಲ್ಲಿ ವಿವರಿಸಿ ತೋರಿಸಿರುವರು. ಹೇಗೆಂದರೆ **"ಸಂಯೋಗಸ್ತದರ್ಹೇಷು ವಿಷಯತ್ವಾಕಾರಃ ಅನರ್ಹೇಷು ತತಸ್ತದನ್ವಯಿಷು"** ಇದು ರಾಮಮಿಶ್ರರ ಸೂಕ್ತಿಯಾಗಿರುವುದು.

ಇದರ ಅಭಿಪ್ರಾಯವೇನೆಂದರೆ—"ಜ್ಞಾನವು ದ್ರವ್ಯವಾದುದರಿಂದಲೂ, ಸಂಯೋಗವೆಂಬ ಸಂಬಂಧವು ದ್ರವ್ಯಗಳಿಗೇ ಉಂಟಾಗುವಂಥದಾಗಿರುವುದರಿಂದಲೂ, ಜ್ಞಾನವಿಷಯಗಳಲ್ಲಿ ಉಂಟಾಗುವ ವಿಷಯತ್ವವೆಂಬ ಆಕಾರವು ಸಂಯೋಗಕ್ಕೆ ಅರ್ಹಗಳಾದ ದ್ರವ್ಯಗಳಲ್ಲಿ ಸಂಯೋಗರೂಪವಾಗಿರುವುದು'' ಎಂಬುದು ಮೊದಲನೆಯ ವಾಕ್ಯದ ಅಭಿಪ್ರಾಯವಾಗಿರುವುದು.

ಎರಡನೆಯ ವಾಕ್ಯದಲ್ಲಿ ಪೂರ್ವವಾಕ್ಯದಿಂದ 'ಸಂಯೋಗಃ' ಎಂಬ ಪದವನ್ನೂ 'ವಿಷಯತ್ವಾಕಾರಃ' ಎಂಬ ಪದವನ್ನೂ ಸೇರಿಸಿಕೊಳ್ಳಬೇಕು. "ಸಂಯೋಗಕ್ಕೆ ಅನರ್ಹಗಳಾದ ಗುಣ, ಕ್ರಿಯೆ, ಜಾತಿ, ಮೊದಲಾದ ಅದ್ರವ್ಯಗಳಲ್ಲಿ ಸಂಯೋಗಾನರ್ಹತ್ವವೆಂಬ ಕಾರಣದಿಂದಲೇ ಸಾಕ್ಷಾತ್ತಾಗಿ ಸಂಯೋಗವು ಸಂಭವಿಸುವುದಿಲ್ಲವಾದಕಾರಣ ಗುಣಕ್ರಿಯಾಜಾತಿಸಂಬಂಧಿಗಳಾದ ದ್ರವ್ಯಗಳಲ್ಲಿ ಉಂಟಾಗುವ; ಸಂಯೋಗಸಂಬಂಧವೇ ಗುಣಾದಿಗಳಲ್ಲಿ ವಿಷಯತ್ವವೆಂಬ ಆಕಾರವಾಗುವುದು ಎಂದರೆ ಜ್ಞಾನಸಂಯುಕ್ತದ್ರವ್ಯಸಂಬಂಧಿತ್ವವೇ ಗುಣಾದಿಗಳಲ್ಲಿ ವಿಷಯತ್ವವೆನಿಸಿಕೊಳ್ಳುವುದು' ಎಂಬುದು ಎರಡನೆಯ ವಾಕ್ಯದ ಅಭಿಪ್ರಾಯವಾಗಿರುವುದು.

## ೧೨೬. ಜ್ಞಾನಸ್ಯ ಸ್ವವಿಷಯೈಸ್ಸಹ ನವವಿಧಸಂಬಂಧನಿರೂಪಣಂ.

ಅಂತು—ಜ್ಞಾನಕ್ಕೆ ಜ್ಞಾನವಿಷಯಗಳೊಡನೆ ಉಂಟಾಗುವ ಎಲ್ಲಾ ಸಂಬಂಧಗಳನ್ನೂ ನಿರೂಪಿಸಿ ನೋಡಿದರೆ ಈರೀತಿಯಲ್ಲಿ ಫಲಿತವಾಗುವುದು —

೧. ವರ್ತಮಾನಕಾಲದಲ್ಲಿರುವ ದ್ರವ್ಯಗಳೊಡನೆ ಜ್ಞಾನಕ್ಕೆ ಸಂಯೋಗ ಸಂಬಂಧವೇ ಉಂಟಾಗುವುದು. ಸಂಬಂಧದ ಉಭಯಸಂಬಂಧಿಗಳೂ ದ್ರವ್ಯವಷ್ಟೆ ?

೨. ವರ್ತಮಾನದ್ರವ್ಯಗಳಲ್ಲಿರುವ ಗುಣ, ಕ್ರಿಯೆ, ಜಾತಿ ಮೊದಲಾದ ಅದ್ರವ್ಯಗಳೊಡನೆ ಜ್ಞಾನಕ್ಕೆ ಸಂಯುಕ್ತಾಶ್ರಿತತ್ವವೆಂಬ ಸಂಬಂಧವೇ ಉಂಟಾಗುವುದು. ಅದ್ರವ್ಯಗಳೆನಿಸಿಕೊಂಡ ಗುಣಾದಿಗಳು ಜ್ಞಾನಸಂಯುಕ್ತದ್ರವ್ಯಾಶ್ರಿತಗಳಷ್ಟೆ ?

೩. ವರ್ತಮಾನದ್ರವ್ಯಗಳಲ್ಲಿರುವ ಗುಣಕ್ರಿಯೆಗಳನ್ನು ಆಶ್ರಯಿಸಿಕೊಂಡಿರುವ ಗುಣತ್ವಕ್ರಿಯಾತ್ವಗಳೆಂಬ ಜಾತಿಗಳೊಡನೆ ಜ್ಞಾನಕ್ಕೆ ಸಂಯುಕ್ತಾಶ್ರಿತಾದ್ರವ್ಯಾಶ್ರಿತತ್ವವೆಂಬ ಸಂಬಂಧವೇ ಉಂಟಾಗುವುದು. ಅದ್ರವ್ಯಗಳೆನಿಸಿಕೊಂಡ ಅಂಥ ಗುಣತ್ವಕ್ರಿಯಾತ್ವಜಾತಿಗಳು ಜ್ಞಾನಸಂಯುಕ್ತವಾದ ದ್ರವ್ಯವನ್ನು ಆಶ್ರಯಿಸಿಕೊಂಡಿರುವ ಗುಣಕ್ರಿಯೆಗಳೆಂಬ ಅದ್ರವ್ಯಗಳನ್ನು ಆಶ್ರಯಿಸಿಕೊಂಡಿರುವುವಷ್ಟೆ ?

೪. ಆಗಾಮಿಯಾದ ದ್ರವ್ಯದೊಡನೆ ಜ್ಞಾನಕ್ಕೆ ಸಂಯುಕ್ತದ್ರವ್ಯಜನ್ಯತ್ವವೆಂಬ ಸಂಬಂಧವೇ ಉಂಟಾಗುವುದು. ಆಗಾಮಿದ್ರವ್ಯವು ವರ್ತಮಾನಜ್ಞಾನಸಂಯುಕ್ತವರ್ತಮಾನದ್ರವ್ಯದಿಂದಲೇ ಜನ್ಯವಾಗುವುದಷ್ಟೆ ?

೫. ಆಗಾಮಿದ್ರವ್ಯದಲ್ಲಿರುವ ಗುಣ, ಕ್ರಿಯೆ, ಜಾತಿ ಮೊದಲಾದ ಅದ್ರವ್ಯಗಳೊಡನೆ ಜ್ಞಾನಕ್ಕೆ ಸಂಯುಕ್ತದ್ರವ್ಯಜನ್ಯದ್ರವ್ಯಾಶ್ರಿತತ್ವವೆಂಬ ಸಂಬಂಧವೇ ಉಂಟಾಗುವುದು. ಅಂಥ ಅದ್ರವ್ಯಗಳು ವರ್ತಮಾನಜ್ಞಾನಸಂಯುಕ್ತವರ್ತಮಾನದ್ರವ್ಯಜನ್ಯಾಗಾಮಿದ್ರವ್ಯಾಶ್ರಿತಗಳಷ್ಟೆ ?

೬. ಆಗಾಮಿದ್ರವ್ಯಗಳಲ್ಲಿರುವ ಗುಣಕ್ರಿಯೆಗಳನ್ನಾಶ್ರಯಿಸಿಕೊಂಡಿರುವ ಗುಣತ್ವಕ್ರಿಯಾತ್ವಗಳೆಂಬ ಜಾತಿಗಳೊಡನೆ ಜ್ಞಾನಕ್ಕೆ ಸಂಯುಕ್ತದ್ರವ್ಯಜನ್ಯದ್ರವ್ಯಾಶ್ರಿತಾದ್ರವ್ಯಾಶ್ರಿತತ್ವವೆಂಬ ಸಂಬಂಧವೇ ಉಂಟಾಗುವುದು. ಅದ್ರವ್ಯಗಳೆನಿಸಿಕೊಂಡ ಅಂಥ ಗುಣತ್ವಕ್ರಿಯಾತ್ವಜಾತಿಗಳು ವರ್ತಮಾನಜ್ಞಾನಸಂಯುಕ್ತವಾದ ವರ್ತಮಾನದ್ರವ್ಯದಿಂದ ಜನ್ಯವಾದ ಆಗಾಮಿದ್ರವ್ಯವನ್ನು ಆಶ್ರಯಿಸಿಕೊಂಡಿರುವ ಗುಣ-ಕ್ರಿಯೆಗಳೆಂಬ ಅದ್ರವ್ಯಗಳನ್ನು ಆಶ್ರಯಿಸಿಕೊಂಡಿರುವುವಷ್ಟೆ ?

೭. ಅತೀತವಾದ ದ್ರವ್ಯದೊಡನೆ ಜ್ಞಾನಕ್ಕೆ ಸಂಯುಕ್ತದ್ರವ್ಯಜನಕತ್ವ ವೆಂಬ ಸಂಬಂಧವೇ ಉಂಟಾಗುವುದು. ಅತೀತದ್ರವ್ಯವು ವರ್ತಮಾನಜ್ಞಾನಸಂ ಯುಕ್ತವರ್ತಮಾನದ್ರವ್ಯಕ್ಕೆ ಜನಕವಾಗಿರುವುದಷ್ಟೆ ?

೮. ಅತೀತದ್ರವ್ಯಗಳಲ್ಲಿರುವ ಗುಣ, ಕ್ರಿಯೆ, ಜಾತಿ, ಮೊದಲಾದ ಅದ್ರವ್ಯ ಗಳೊಡನೆ ಜ್ಞಾನಕ್ಕೆ ಸಂಯುಕ್ತದ್ರವ್ಯಜನಕದ್ರವ್ಯಾಶ್ರಿತತ್ವವೆಂಬ ಸಂಬಂಧವೇ ಉಂಟಾಗುವುದು. ಅಂಥ ಅದ್ರವ್ಯಗಳು ವರ್ತಮಾನಜ್ಞಾನಸಂಯುಕ್ತವರ್ತಮಾನ ದ್ರವ್ಯಜನಕಾತೀತದ್ರವ್ಯಾಶ್ರಿತಗಳಷ್ಟೆ ?

೯. ಅತೀತದ್ರವ್ಯಗಳಲ್ಲಿರುವ ಗುಣಕ್ರಿಯೆಗಳನ್ನು ಆಶ್ರಯಿಸಿಕೊಂಡಿರುವ ಗುಣತ್ವಕ್ರಿಯಾತ್ವಗಳೆಂಬ ಜಾತಿಗಳೊಡನೆ ಜ್ಞಾನಕ್ಕೆ ಸಂಯುಕ್ತದ್ರವ್ಯಜನಕ ದ್ರವ್ಯಾಶ್ರಿತಾದ್ರವ್ಯಾಶ್ರಿತತ್ವವೆಂಬ ಸಂಬಂಧವೇ ಉಂಟಾಗುವುದು. ಅದ್ರವ್ಯಗಳೆ ನಿಸಿಕೊಂಡ ಅಂಥ ಗುಣತ್ವಕ್ರಿಯಾತ್ವಜಾತಿಗಳು ವರ್ತಮಾನಜ್ಞಾನಸಂಯುಕ್ತ ವಾದ ವರ್ತಮಾನದ್ರವ್ಯಕ್ಕೆ ಜನಕವಾದ ಅತೀತದ್ರವ್ಯವನ್ನು ಆಶ್ರಯಿಸಿಕೊಂಡಿ ರುವ ಗುಣ-ಕ್ರಿಯೆಗಳೆಂಬ ಅದ್ರವ್ಯಗಳನ್ನು ಆಶ್ರಯಿಸಿಕೊಂಡಿರುವುವಷ್ಟೆ ?

ಹೀಗೆ ತೋರಿಸಿದ ಒಂಬತ್ತುಬಗೆಯಾದ ಸಂಬಂಧಗಳಲ್ಲಿಯೂ ಸಂಯೋಗ ಸಂಬಂಧವು ಗರ್ಭಿತವಾಗಿಯೇ ಇರುವುದರಿಂದ ಸಂಯೋಗಸಂಬಂಧವು ಆವಶ್ಯಕ ವೆಂಬುದನ್ನು ತೋರಿಸುವುದಕ್ಕೋಸ್ಕರ ಭಾಷ್ಯಕಾರರು ಸಂಯೋಗವನ್ನು ಮಾತ್ರ ಹೇಳಿದರಲ್ಲದೆ ಇತರಸಂಬಂಧಗಳನ್ನು ನಿರಾಕರಿಸುವುದಕ್ಕೋಸ್ಕರ ಅಲ್ಲ.

## ೯೨೭ ವಿಷಯತ್ವಾಖ್ಯಸಂಬಂಧಾಂತರವಾದಿನೈಯಾಯಿಕ ಮತಖಂಡನಂ.

ಹೀಗೆ ಲೋಕದಲ್ಲಿ ಕ್ಲ್ಪ್ತವಾಗಿರುವ ಈ ಸಂಬಂಧಗಳಿಂದಲೇ ಜ್ಞಾನವಿಷ ಯಗಳಲ್ಲಿ ವಿಷಯತ್ವವ್ಯವಹಾರವು ಉಪಪನ್ನವಾಗಲು ಅಡ್ಡಿಯಿಲ್ಲದಿರುವಾಗ ವಿಷಯತ್ವವೆಂಬ ಸಂಬಂಧಾಂತರವನ್ನು ಅಧಿಕವಾಗಿ ಕಲ್ಪನೆಮಾಡಬೇಕಾದುದಿಲ್ಲ. ಆದರೂ ಅದನ್ನು ಕಲ್ಪಿಸುವ ನೈಯಾಯಿಕರ ಮತದಲ್ಲಿ ಲಾಘವಕ್ಕೆ ಬದಲಾಗಿ ಗೌರವದೋಷವೇ ನೆಲೆನಿಲ್ಲುವುದು—

ಹೇಗೆಂದರೆ-ಸಿದ್ಧಾಂತದಲ್ಲಿ ಅಭಾವವೆಂಬುದನ್ನು ಕ್ಲ್ಪ್ತವಾದ ಭಾವಾಂತರ ರೂಪವಾಗಿಯೇ ಅಂಗೀಕರಿಸುವೆವಲ್ಲದೆ ನೈಯಾಯಿಕರಂತೆ ಭಾವಪದಾರ್ಥ ಕ್ಕಿಂತಲೂ ಅತಿರಿಕ್ತವಾದ ಪದಾರ್ಥವಾಗಿ ಅಂಗೀಕರಿಸುವುದಿಲ್ಲ. ಅದರಂತೆ ಇಲ್ಲಿಯೂ ಜ್ಞಾನಗೋಚರಗಳಾದ ಪದಾರ್ಥಗಳಲ್ಲಿ ವಿಷಯತ್ವವೆಂಬುದೂ ಕ್ಲ್ಪ್ತ ವಾದ ಉಕ್ತಸಂಬಂಧರೂಪವಾಗಿಯೇ ಇರುವುದಲ್ಲದೆ ಸಂಬಂಧಾಂತರವಲ್ಲ.

## ೯೨೮ ಅಥ ದಶಮಾಕ್ಷೇಪಪರಿಹಾರಃ

**ಹತ್ತನೆಯ ಆಕ್ಷೇಪಕ್ಕೆ**—ಚಕ್ಷುರಿಂದ್ರಿಯದಿಂದ ಆ ಆ ಪದಾರ್ಥಗಳನ್ನು ನಾವು ನೋಡಿ ಗ್ರಹಿಸುವ ಕಾಲದಲ್ಲಿ ನೇತ್ರಗೋಳದಿಂದ ಹೊರಟು ಆ ಆ ಪದಾರ್ಥಗಳ ಪ್ರದೇಶದವರೆಗೂ ವ್ಯಾಪಿಸುವ ನೇತ್ರತೇಜಸ್ಸನ್ನು ವಿಮರ್ಶೆಮಾಡಿ ನೋಡಿದಿರಾದರೆ ಈ ಆಕ್ಷೇಪಕ್ಕೆ ಸಮಾಧಾನವನ್ನು ನೀವೇ ತಿಳಿದುಕೊಳ್ಳುವಿರಿ.

ಹೇಗಾದರೆ ನಮ್ಮ ನೇತ್ರಗೋಳದಿಂದ ಹೊರಗೆ ಹೊರಟು ಸೂರ್ಯಮಂಡಲದ ವರೆಗೂ ಎಡೆಬಿಡದೆ ಧಾರಾಕಾರವಾಗಿ ನುಗ್ಗಿರುವ ನೇತ್ರರಶ್ಮಿಗೆ ಮಧ್ಯದಲ್ಲಿರುವ ಅನೇಕಪರಮಾಣುದ್ರವ್ಯಗಳೊಡನೆ ಸಂಯೋಗವುಂಟಾಗಿದ್ದರೂ ಅಂಥ ಸಂಯೋಗವು ಅಂಥ ಸೂಕ್ಷ್ಮಪದಾರ್ಥಗಳ ಚಾಕ್ಷುಷಜ್ಞಾನಕ್ಕೆ ಕಾರಣವಾಗುವುದಿಲ್ಲವೋ ಎಂದರೆ ಅವುಗಳ ಪ್ರಕಾಶವು ನಮಗೆ ಉಂಟಾಗುವುದಿಲ್ಲವೋ, ಅದರಂತೆಯೇ ಮಧ್ಯದಲ್ಲಿರುವ ಅನೇಕಪದಾರ್ಥಗಳೊಡನೆ ಜ್ಞಾನವು ಸಂಯೋಗವನ್ನು ಪಡೆದಿದ್ದರೂ ಇಂಥ ಸಂಯೋಗವು ಆ ಪದಾರ್ಥಗಳ ಪ್ರಕಾಶಕ್ಕಾಗಲಿ ವ್ಯವಹಾರಕ್ಕಾಗಲಿ ಕಾರಣವಾಗುವುದಿಲ್ಲವಾದುದರಿಂದ ಆ ಪದಾರ್ಥಗಳು ನಮಗೆ ಪ್ರಕಾಶಿಸುವುದಿಲ್ಲ. (ಸ್ಫುರಿಸುವುದಿಲ್ಲ)

"ಪೂಜ್ಯರೆ? ನೀವು ತೋರಿಸಿದ ನೇತ್ರರಶ್ಮಿದೃಷ್ಟಾಂತವು ಈ ಪ್ರಕೃತವಿಷಯಕ್ಕೆ ಅನುರೂಪವಾದುದಲ್ಲ; ಸೂರ್ಯಮಂಡಲದವರೆಗೂ ಎಡೆಬಿಡದೆ ನುಗ್ಗಿರುವ ನೇತ್ರರಶ್ಮಿಗೆ ಮಧ್ಯದಲ್ಲಿರುವ ಅನೇಕಪರಮಾಣುದ್ರವ್ಯಗಳೊಡನೆ ಸಂಯೋಗವಿದ್ದರೂ ಆ ದ್ರವ್ಯಗಳು ಚಕ್ಷುರಿಂದ್ರಿಯದಿಂದ ಗ್ರಹಿಸುವುದಕ್ಕೆ ಯೋಗ್ಯವಾದ ಉದ್ಭೂತರೂಪವನ್ನು ಪಡೆದಿಲ್ಲವಾದುದರಿಂದ ಪ್ರಕಾಶಕ್ಕೆ ಅಯೋಗ್ಯಗಳಾಗಿರುವುವು. ಚಕ್ಷುರಿಂದ್ರಿಯಕ್ಕೆ ಪದಾರ್ಥದೊಡನೆ ಸನ್ನಿಕರ್ಷವಿದ್ದಮಾತ್ರಕ್ಕೇ ಪದಾರ್ಥಗ್ರಹಣವುಂಟಾಗಲೆಂದು ಹೇಳಲಾಗುವುದಿಲ್ಲ; ಗ್ರಹಣಕ್ಕೆ ಯೋಗ್ಯವಾದ ಪದಾರ್ಥದೊಡನೆ ಸನ್ನಿಕರ್ಷವಿದ್ದರೇನೇ ಗ್ರಹಣವಾಗುವುದು. ಅತಿಸೂಕ್ಷ್ಮಪದಾರ್ಥದಲ್ಲಿ ಉದ್ಭೂತರೂಪವೆಂಬ ಯೋಗ್ಯತೆಯೇ ಇಲ್ಲವಾದುದರಿಂದ ಗ್ರಹಣವುಂಟಾಗದಿದ್ದುದು ತಪ್ಪಲ್ಲ. ಯೋಗ್ಯತೆಯಿದ್ದರೆ ಗ್ರಹಣವು ಉಂಟಾಗುವುದೆಂದೂ, ಯೋಗ್ಯತೆಯಿಲ್ಲದಿದ್ದರೆ ಗ್ರಹಣವೂ ಇಲ್ಲವೆಂದೂ ಅನುಭವವಿರುವುದರಿಂದ ಯೋಗ್ಯತೆಯೂ ಅಯೋಗ್ಯತೆಯೂ ಗ್ರಹಣಾಗ್ರಹಣಗಳಲ್ಲಿ ವ್ಯವಸ್ಥಾಪಕಗಳಾಗಿರುವುವಷ್ಟೆ?"

ಹೀಗೆ ಹೇಳುವಿರಾದರೆ—ದಾರ್ಷ್ಟಾಂತಿಕವಾದ ಜ್ಞಾನವಿಷಯದಲ್ಲಿಯೂ ಇದೇ ನ್ಯಾಯವನ್ನು ಏತಕ್ಕೆ ಅಂಗೀಕರಿಸಬಾರದು. ಜ್ಞಾನಕ್ಕೆ ಯಾವ ಪದಾರ್ಥ

ದೊಡನೆ ಸಂಯೋಗವುಂಟಾದರೆ ಪ್ರಕಾಶವೂ ವ್ಯವಹಾರವೂ ಉಂಟಾಗುವುದೆಂದು ಪ್ರಮಾಣಸಿದ್ಧವಾಗಿರುವುದೋ ಅಂಥ ಪದಾರ್ಥವೇ ಪ್ರಕಾಶಕ್ಕೂ ವ್ಯವಹಾರಕ್ಕೂ ಯೋಗ್ಯವೆಂದು ಅನುಭವವಿರುವುದರಿಂದ ಇಲ್ಲಿಯೂ ಯೋಗ್ಯತೆಯೇ ವ್ಯವಸ್ಥಾಪಕವಾಗಬಹುದಲ್ಲವೆ ?

" ಪೂಜ್ಯರೆ ? ಪದಾರ್ಥಗಳ ಪ್ರಕಾಶಕ್ಕೆ ಜ್ಞಾನಸಂಯೋಗವಿರಬೇಕು ; ಜ್ಞಾನಸಂಯೋಗವಿದ್ದರೆ ಪದಾರ್ಥಗಳು ಪ್ರಕಾಶಿಸಿಯೇ ಪ್ರಕಾಶಿಸುವುವು ; ಆದುದರಿಂದ ಜ್ಞಾನಸಂಯೋಗವೇ ಪದಾರ್ಥಗಳ ಯೋಗ್ಯತೆಯೆನಿಸಿಕೊಳ್ಳುವುದಲ್ಲದೆ ಜ್ಞಾನಸಂಯೋಗಕ್ಕಿಂತಲೂ ಅತಿರಿಕ್ತವಾದ ಯೋಗ್ಯತೆಯೆಂಬುದು ಅವುದೂ ಇಲ್ಲ. ಜ್ಞಾನಸಂಯೋಗವೆಂಬ ಯೋಗ್ಯತೆಯಾದರೆ ಮಧ್ಯವರ್ತಿಯಾದ ಸಕಲ ಪದಾರ್ಥಗಳಿಗೂ ಇರುವುದರಿಂದ ಅವುಗಳೆಲ್ಲವೂ ಪ್ರಕಾಶಿಸಬೇಕಲ್ಲವೆ ? "

ಹೀಗೆ ಹೇಳುವಿರಾದರೆ—ದೃಷ್ಟಾಂತದಲ್ಲಿಯೂ ಇದೇ ಪ್ರತಿಬಂದಿಯನ್ನು ನೀವೂ ತಿಳಿಯಬಹುದು. ಉದ್ಭೂತರೂಪವನ್ನು ಪಡೆದಿರುವ ವಸ್ತುವಿನಲ್ಲಿ ಉಂಟಾಗಿರುವ ಚಕ್ಷುಸ್ಸಂಯೋಗವೇ ಚಾಕ್ಷುಷಜ್ಞಾನಕ್ಕೆ ಕಾರಣವಾಗುವುದಾದುದರಿಂದಲ್ಲವೆ ಉದ್ಭೂತರೂಪವೇ ಯೋಗ್ಯತೆಯೆನಿಸಿಕೊಳ್ಳುವುದೆಂದು ತೋರಿಸುತ್ತೀರಿ ? ಅದರಂತೆ ತತ್ತತ್ಪದಾರ್ಥದಲ್ಲಿ ಉಂಟಾಗಿರುವ ಜ್ಞಾನಸಂಯೋಗವೇ ತತ್ತತ್ಪದಾರ್ಥದ ಪ್ರಕಾಶಕ್ಕೂ ವ್ಯವಹಾರಕ್ಕೂ ಕಾರಣವಾಗಿರುವುದರಿಂದ ತತ್ತತ್ಪದಾರ್ಥತ್ವವೇ ಯೋಗ್ಯತೆಯೆನಿಸಿಕೊಳ್ಳುವುದೆಂದು ನಾವೂ ತೋರಿಸಬಲ್ಲೆವಾದುದರಿಂದ ನಿಮ್ಮ ಆಶಂಕೆಗೆ ಅವಕಾಶವಿಲ್ಲ.

ತತ್ತದ್ವಸ್ತುತ್ವವನ್ನು ಯೋಗ್ಯತಾರೂಪವನ್ನಾಗಿ ಅಂಗೀಕರಿಸಲಾಗುವುದಿಲ್ಲವೆಂದು ಒಂದುವೇಳೆ ಧಾರ್ಷ್ಟ್ಯದಿಂದ ನೀವು ಹೇಳುವಿರಾದರೆ—ಉದ್ಭೂತರೂಪವನ್ನೂ ಯೋಗ್ಯತಾರೂಪವನ್ನಾಗಿ ಅಂಗೀಕರಿಸಲಾಗುವುದಿಲ್ಲವೆಂದು ನಾವೂ ಹೇಳಬಲ್ಲೆವು.

" ಪೂಜ್ಯರೆ ! ಜ್ಞಾನಕ್ಕೆ ಅಯೋಗ್ಯವಾದ ವಸ್ತುವೂ ಒಂದು ಇರುವ ಪಕ್ಷದಲ್ಲಿ ಅಂಥ ವಸ್ತುವಿಗೆ ಯಾವುದೊಂದು ಜ್ಞಾನದಿಂದಲೂ ಗ್ರಹಣವೇ ಸಂಭವಿಸುವುದಿಲ್ಲವಾದಪ್ರಯುಕ್ತ ಅಂಥ ವಸ್ತುವಿಗೆ ಅಪ್ರಕಾಶ್ಯತ್ವವೇ ಪ್ರಸಕ್ತವಾಗುವುದಲ್ಲವೆ ? "

ಹೀಗೆ ಹೇಳುವಿರಾದರೆ—ದೃಷ್ಟಾಂತದಲ್ಲಿಯೂ ಇದೇ ಪ್ರತಿಬಂದಿಯನ್ನು ನೀವೂ ತಿಳಿಯಬಹುದು. ಎಂದರೆ—ಯಾವುದೋ ಒಂದು ಜ್ಞಾನಕ್ಕೆ ಒಂದು

ಪದಾರ್ಥವು ಅಯೋಗ್ಯವೆನಿಸಿಕೊಂಡಮಾತ್ರಕ್ಕೆ ಸರ್ವಜ್ಞಾನಗಳಿಗೂ ಅದು ಅಯೋಗ್ಯವೆನಿಸಿಕೊಳ್ಳುವುದೆಂದು ಪ್ರಸಂಗಿಸುವುದಾದರೆ—ಉದ್ಭೂತರೂಪವನ್ನು ಪಡೆದಿಲ್ಲದ ಒಂದಾನೊಂದು ವಸ್ತು ಚಕ್ಷುಸ್ಸೆಂಬ ಒಂದು ಇಂದ್ರಿಯಕ್ಕೆ ಅಯೋಗ್ಯವೆನಿಸಿಕೊಂಡಮಾತ್ರದಿಂದಲೇ ಇತರೇಂದ್ರಿಯಗಳಿಗೂ ಅನುಮಾನಪ್ರಮಾಣಕ್ಕೂ ಶಬ್ದಪ್ರಮಾಣಕ್ಕೂ ಸಹ ಅದು ಅಯೋಗ್ಯವೆನಿಸಿಕೊಳ್ಳುವುದೆಂಬ ಪ್ರಸಂಗವನ್ನು ನಾವೂ ಮಾಡಬಲ್ಲೆವು.

"ಅದೇತಕ್ಕೆ? ಆ ಆ ಇಂದ್ರಿಯಗಳ ಸ್ವಭಾವತಾರತಮ್ಯದಿಂದಲೇ ವ್ಯವಸ್ಥೆಯನ್ನು ನಾವು ಮಾಡಬಲ್ಲೆವು; ಚಕ್ಷುಸ್ಸಿಗೆ ರೂಪವನ್ನು ಗ್ರಹಿಸುವುದರಲ್ಲಿಯೇ, ಶ್ರೋತ್ರಕ್ಕೆ ಶಬ್ದವನ್ನು ಗ್ರಹಿಸುವುದರಲ್ಲಿಯೇ, ರಸನೆಗೆ ರಸವನ್ನು ಗ್ರಹಿಸುವುದರಲ್ಲಿಯೇ, ಘ್ರಾಣಕ್ಕೆ ಗಂಧವನ್ನು ಗ್ರಹಿಸುವುದರಲ್ಲಿಯೇ, ತ್ವಗಿಂದ್ರಿಯಕ್ಕೆ ಸ್ಪರ್ಶವನ್ನು ಗ್ರಹಿಸುವುದರಲ್ಲಿಯೇ, ಸಾಮರ್ಥ್ಯವಿರುವುದೆಂಬ ಸ್ವಭಾವತಾರತಮ್ಯವು ಲೋಕಾನುಭವಸಿದ್ಧವಾಗಿರುವುದರಿಂದ ಒಂದಾನೊಂದು ಇಂದ್ರಿಯವು ಒಂದಾನೊಂದು ವಿಷಯವನ್ನು ಗ್ರಹಿಸುವುದರಲ್ಲಿಯೇ ಶಕ್ತವಾಗಿರುವುದೆಂದು ಒಪ್ಪಬೇಕಾಗಿರುವುದರಿಂದ ಅತಿಪ್ರಸಂಗವನ್ನು ಮಾಡಲಿಕ್ಕೆ ಅವಕಾಶವಿಲ್ಲವಷ್ಟೆ?"

ಹೀಗೆ ಹೇಳುವಿರಾದರೆ—ದಾರ್ಷ್ಟಾಂತಿಕವಾದ ಜ್ಞಾನದಲ್ಲಿಯೂ ಇದೇ ಸಮಾಧಾನವನ್ನು ನೀವೂ ತಿಳಿಯಬಹುದು. ಎಂದರೆ—ಜ್ಞಾನಸಂಯೋಗ, ಜ್ಞಾನಸಂಯುಕ್ತಾಶ್ರಿತತ್ವ, ಇವೇ ಮೊದಲಾದ ಸಂಬಂಧಗಳು ಎಲ್ಲೆಲ್ಲಿ ಉಂಟಾದರೂ ಅಲ್ಲಲ್ಲಿ ಪ್ರಕಾಶವೂ ವ್ಯವಹಾರವೂ ಉಂಟಾಗಬೇಕೆಂದೂ, ಅಂಥ ಎಲ್ಲಾ ಸಂಬಂಧಗಳೂ ವಿಷಯತಾರೂಪಗಳಾಗಿರುವುವೆಂದೂ, ನಿಯಮವಿದ್ದ ಪಕ್ಷದಲ್ಲಿ ನೀವು ಹೇಳಿದ ಅತಿಪ್ರಸಂಗಕ್ಕೆ ಅವಕಾಶವಾಗುತ್ತಿದ್ದಿತು; ಆದರೆ ಅಂಥ ನಿಯಮವೇ ಇಲ್ಲ.

ಮತ್ತೇನೆಂದರೆ—ಯಾವ ವಸ್ತುವಿನಲ್ಲಿ ಯಾವ ಸಮಯದಲ್ಲಿ ಎಂಥ ಜ್ಞಾನಸಂಬಂಧವು ಪದಾರ್ಥದ ಪ್ರಕಾಶಕ್ಕೂ ವ್ಯವಹಾರಕ್ಕೂ ಕಾರಣವಾಗಿರುವುದೆಂದೂ, ವಿಷಯತಾರೂಪವಾಗಿರುವುದೆಂದೂ, ಪ್ರಮಾಣದಿಂದ ಸಿದ್ಧವಾಗಿರುವುದೋ, ಅಂಥ ವಸ್ತುವಿನಲ್ಲಿ ಅಂಥ ಸಮಯದಲ್ಲಿ ಅಂಥ ಜ್ಞಾನಸಂಬಂಧವೇ ಪದಾರ್ಥದ ಪ್ರಕಾಶಕ್ಕೂ ವ್ಯವಹಾರಕ್ಕೂ ಕಾರಣವೆಂದೂ ವಿಷಯತಾರೂಪವೆಂದೂ ಎನಿಸಿಕೊಳ್ಳುವುದು. ಹೇಗಾದರೆ ಸಿದ್ಧಾಂತದಲ್ಲಿ ಭಾವಪದಾರ್ಥಕ್ಕಿಂತಲೂ ಅತಿರಿಕ್ತವಾದ ಅಭಾವವೆಂಬ ಒಂದು ಪದಾರ್ಥವನ್ನು ಅಂಗೀಕರಿಸದೆ ಭಾವಾಂತರವನ್ನೇ ಅಭಾವ

ಪದಾರ್ಥವಾಗಿ ಒಪ್ಪಿದರೂ ಸಮಸ್ತವಾದ ಭಾವಾಂತರವೂ ಘಟಾಭಾವರೂಪ ವಾಗುವುದಿಲ್ಲವೋ; ಕಿಂತು ಯಾವ ವಸ್ತುವಿನಲ್ಲಿ ಯಾವ ಸಮಯದಲ್ಲಿ ಘಟಾ ಭಾವವ್ಯವಹಾರವು ಪ್ರಮಾಣಸಿದ್ಧವಾಗಿರುವುದೋ ಅಂಥ ವಸ್ತುವಿನಲ್ಲಿ ಆ ಕಾಲ ದಲ್ಲಿರುವ ಭಾವರೂಪವಾದ ಧರ್ಮಾಂತರವೇ ಘಟಾಭಾವರೂಪವಾಗಿರುವುದೋ; ಎಂದರೆ—ಘಟವು ಹುಟ್ಟುವುದಕ್ಕೆ ಮೊದಲು ಪಿಂಡದಲ್ಲಿ ಘಟಾಭಾವವ್ಯವಹಾರ ಮಾಡಿದರೆ ತತ್ಕಾಲದಲ್ಲಿರುವ ಭಾವರೂಪವಾದ ಪಿಂಡತ್ವವೆಂಬ ಧರ್ಮವೇ ಘಟಾ ಭಾವರೂಪವಾಗಿರುವುದೋ;—ಘಟವು ಹುಟ್ಟಿ ನಷ್ಟವಾದಮೇಲೆ ಕಪಾಲದಲ್ಲಿ ಘಟಾಭಾವವ್ಯವಹಾರವನ್ನು ಮಾಡಿದರೆ ತತ್ಕಾಲದಲ್ಲಿರುವ ಭಾವರೂಪವಾದ ಕಪಾಲತ್ವವೆಂಬ ಧರ್ಮವೇ ಘಟಾಭಾವರೂಪವಾಗಿರುವುದೋ; ಅದರಂತೆಯೇ ಎಲ್ಲಾ ಜ್ಞಾನಸಂಬಂಧಗಳೂ ವಿಷಯತಾರೂಪಗಳಲ್ಲವೆಂದೂ, ವಸ್ತುವಿಶೇಷದಲ್ಲಿ ಕಾಲವಿಶೇಷದಲ್ಲಿ ಉಂಟಾಗಿರುವ ಜ್ಞಾನಸಂಬಂಧವಿಶೇಷಗಳೇ ವಿಷಯತಾರೂಪ ಗಳೆಂದೂ ತಿಳಿಯಬಹುದು.

ಇದಕ್ಕೆ ಉದಾಹರಣೆ—ಜ್ಞಾನವು ಚಕ್ಷುರಿಂದ್ರಿಯದ ಮೂಲಕವಾಗಿ ಹೊರಗೆ ಹೊರಟು ಪುರೋವರ್ತಿಗಳಾದ ಪದಾರ್ಥಗಳನ್ನು ಗ್ರಹಿಸುವ ಕಾಲದಲ್ಲಿ ಪುರೋವರ್ತಿಯಾದ ದ್ರವ್ಯಕ್ಕೂ ಜ್ಞಾನಕ್ಕೂ ಸಂಯೋಗಸಂಬಂಧವಿರುವುದರಿಂದ ಆಗ **ಆ ಸಂಬಂಧವು ಆ ದ್ರವ್ಯದ** ಪ್ರಕಾಶಕ್ಕೂ ವ್ಯವಹಾರಕ್ಕೂ ಕಾರಣವಾಗಿ ವಿಷಯತಾರೂಪವೆನಿಸಿಕೊಳ್ಳುವುದು—

ಅದೇ ದ್ರವ್ಯದಲ್ಲಿರುವ ರೂಪಕ್ಕೂ ಜ್ಞಾನಕ್ಕೂ ಸಂಯುಕ್ತಾಶ್ರಿತತ್ವಸಂ ಬಂಧವಿರುವುದರಿಂದ ಆಗ **ಆ ಸಂಬಂಧವು ಆ ರೂಪದ** ಪ್ರಕಾಶಕ್ಕೂ ವ್ಯವಹಾರ ಕ್ಕೂ ಕಾರಣವಾಗಿ ವಿಷಯತಾರೂಪವೆನಿಸಿಕೊಳ್ಳುವುದು—

ಅದೇ ದ್ರವ್ಯದಲ್ಲಿ ರೂಪದಂತೆ ರಸ-ಗಂಧ-ಸ್ಪರ್ಶ-ಶಬ್ದ ಮೊದಲಾದುವು ಗಳು ಆಶ್ರಿತಗಳಾಗಿದ್ದರೂ, ಅವುಗಳಿಗೂ ಜ್ಞಾನಕ್ಕೂ ಸಂಯುಕ್ತಾಶ್ರಿತತ್ವವೆಂಬ ಸಂಬಂಧವೂ ಇದ್ದರೂ, ಆಗ **ಆ ಸಂಬಂಧವು ಅವುಗಳ** ಪ್ರಕಾಶಕ್ಕೂ ವ್ಯವಹಾ ರಕ್ಕೂ ಕಾರಣವೆಂದಾಗಲಿ ವಿಷಯತಾರೂಪವೆಂದಾಗಲಿ ಎನಿಸಿಕೊಳ್ಳುವುದಿಲ್ಲ—

ಅದೇ ಜ್ಞಾನವು ರಸನೆ, ಘ್ರಾಣ, ತ್ವಕ್, ಶ್ರೋತ್ರ ಈ ಇಂದ್ರಿಯಗಳ ಮೂಲಕವಾಗಿ ಹೊರಟು ಆ ಪದಾರ್ಥದಲ್ಲಿರುವ ರಸ-ಗಂಧ-ಸ್ಪರ್ಶ-ಶಬ್ದಗಳೊಡನೆ ಸಂಯುಕ್ತಾಶ್ರಿತತ್ವಸಂಬಂಧವನ್ನು ಪಡೆವುದಾದರೆ ಆಗ **ಆ ಸಂಬಂಧವು ಅವುಗಳ** ಪ್ರಕಾಶಕ್ಕೂ ವ್ಯವಹಾರಕ್ಕೂ ಕಾರಣವೆಂದೂ ವಿಷಯತೆಯೆಂದೂ ಎನಿಸಿಕೊಳ್ಳು ವುದು. ಹೀಗೆಯೇ ಉಳಿದ ಸಂಬಂಧಗಳಲ್ಲಿಯೂ ತಿಳಿಯಬಹುದು.

"ಪೂಜ್ಯರೆ? ಯಾವ ಪದಾರ್ಥದೊಡನೆ ಸನ್ನಿಕರ್ಷವನ್ನು ಪಡೆದ ಇಂದ್ರಿಯದಿಂದ ಯಾವ ಜ್ಞಾನವುಂಟಾಗುವುದೋ ಅಂಥ ಪದಾರ್ಥದ ಪ್ರಕಾಶಕ್ಕೂ ವ್ಯವಹಾರಕ್ಕೂ ಅಂಥ ಜ್ಞಾನವೇ ಕಾರಣವಾಗುವುದೆಂದು ಒಪ್ಪಿದೆವಾದರೆ ಸಾಕಾಗಿರುವಲ್ಲಿ ಜ್ಞಾನಕ್ಕೆ ಬಹಿರ್ನಿರ್ಗಮನವನ್ನಾಗಲಿ, ಜ್ಞಾನಕ್ಕೂ ವಿಷಯಕ್ಕೂ ವಿಷಯವಿಷಯಿಭಾವವೆಂಬ ಅಥವಾ ಸಂಯೋಗವೆಂಬ ಸಂಬಂಧವನ್ನಾಗಲಿ ಏತಕ್ಕೆ ಸ್ವೀಕರಿಸಬೇಕು?

ಮತ್ತು ಜ್ಞಾನವಿಶೇಷದ ಉತ್ಪತ್ತಿಗೆ ಆ ಆ ಇಂದ್ರಿಯವಿಶೇಷವೇ ಸಾಮಗ್ರಿಯಾಗಿರುವುದರಿಂದ ಅಂಥ ಸಾಮಗ್ರಿಯ ಸ್ವಭಾವತಾರತಮ್ಯದಿಂದಲೇ ಜ್ಞಾನವಿಶೇಷಕ್ಕೆ ವಿಷಯವಿಶೇಷದಲ್ಲಿ ವ್ಯವಸ್ಥೆಯನ್ನು ಸುಲಭವಾಗಿ ತಿಳಿದುಕೊಳ್ಳಲು ಸಾಧ್ಯವಾಗಿರುವಲ್ಲಿ ಇದಕ್ಕಿಂತಲೂ ಅತಿರಿಕ್ತಗಳಾದ ಪೂರ್ವೋಕ್ತಸಂಬಂಧಗಳನ್ನೂ, ಜ್ಞಾನಕ್ಕೆ ಬಹಿರ್ನಿರ್ಗಮನವನ್ನೂ ಏತಕ್ಕೆ ಒಪ್ಪುತ್ತೀರಿ?"

ಇಂಥ ಆಶಂಕೆ ಸಂಗತವಲ್ಲ; ಏತಕ್ಕೆಂದರೆ—ಈಶ್ವರನ ಜ್ಞಾನಕ್ಕೆ ನಿತ್ಯತ್ವವನ್ನು ಈಶ್ವರಪರಿಚ್ಛೇದದಲ್ಲಿಯೇ ನಾವು ತೋರಿಸಿರುವೆವಾದುದರಿಂದ ಸಾಮಗ್ರಿಯಿಲ್ಲದೆಯೇ ಅವನ ಜ್ಞಾನವು ಉಂಟಾಗುತ್ತಿರುವುದಾದಕಾರಣ ಇಂದ್ರಿಯವೆಂಬ ಸಾಮಗ್ರಿಯೂ ಅವನ ಜ್ಞಾನಕ್ಕೆ ಇಲ್ಲ. ಆಗ ಸಂಯೋಗಾದಿಸಂಬಂಧವನ್ನೂ ನೀವು ನಿರಾಕರಿಸಿಬಿಟ್ಟರೆ ಆಗ ಈಶ್ವರನ ಜ್ಞಾನವು ಅಜ್ಞಾನವೆಂಬ ಹೆಸರನ್ನು ಪಡೆಯಬೇಕಾಗುವುದಲ್ಲದೆ ಜ್ಞಾನವೆನಿಸಿಕೊಳ್ಳಲಾರದು. ಏತಕ್ಕೆಂದರೆ—ಧೂಮಕ್ಕೆ ಅಗ್ನಿ ವ್ಯಾಪಕವಾದುದರಿಂದ ವ್ಯಾಪ್ಯವಾದ ಧೂಮವಿದ್ದರೆ ವ್ಯಾಪಕವಾದ ಅಗ್ನಿ ಹೇಗೆ ಇದ್ದೇ ಇರಬೇಕೋ ಅದರಂತೆ ಜ್ಞಾನದಲ್ಲಿರುವ ಜ್ಞಾನತ್ವವೆಂಬ ಧರ್ಮಕ್ಕೆ ವಿಷಯತಾನಿರೂಪಕತ್ವವೆಂಬ ಧರ್ಮವು ವ್ಯಾಪಕವಾದುದರಿಂದ ವ್ಯಾಪ್ಯವಾದ ಜ್ಞಾನತ್ವವಿದ್ದರೆ ವ್ಯಾಪಕವಾದ ವಿಷಯತಾನಿರೂಪಕತ್ವವೂ ಇದ್ದೇ ಇರಬೇಕಾಗಿರುವುದು. ಈಶ್ವರನ ಜ್ಞಾನಕ್ಕೆ ಸಾಮಗ್ರಿಯ ಅಪೇಕ್ಷೆಯಿಲ್ಲವೆಂದು ಸಿದ್ಧವಾಗಿರುವಾಗ ಸಂಬಂಧವನ್ನೂ ನೀವು ತಳ್ಳಿಬಿಟ್ಟರೆ ಆಗ ಈಶ್ವರನ ಜ್ಞಾನಕ್ಕೆ ಯಾವುದೊಂದು ಪದಾರ್ಥವೂ ವಿಷಯವೇ ಆಗಲಿಲ್ಲವಾಗಿ ಅವನ ಜ್ಞಾನದಲ್ಲಿ ವಿಷಯತಾನಿರೂಪಕತ್ವವೆಂಬ ಧರ್ಮವೇ ಇಲ್ಲದಂತಾಗುವುದು.

ಆ ಧರ್ಮವು ಇಲ್ಲದಿದ್ದರೆ ಹಾನಿಯೇನೆಂದು ಕೇಳಬೇಡಿರಿ; ವ್ಯಾಪಕವಾದ ಅಗ್ನಿಯಿಲ್ಲದಿದ್ದರೆ ವ್ಯಾಪ್ಯವಾದ ಧೂಮವೂ ಹೇಗೆ ಇಲ್ಲವಾಗುವುದೋ, ಅದರಂತೆ ವಿಷಯತಾನಿರೂಪಕತ್ವವೆಂಬ ವ್ಯಾಪಕಧರ್ಮವಿಲ್ಲದಿದ್ದರೆ ಜ್ಞಾನತ್ವವೆಂಬ ವ್ಯಾಪ್ಯ

ಧರ್ಮವೂ ಇಲ್ಲವಾಗಿ—ಇದುವರೆಗೂ ಜ್ಞಾನವೆನಿಸಿಕೊಳ್ಳುತ್ತಿದ್ದ ಈಶ್ವರಜ್ಞಾನವು ಈಗ ಜ್ಞಾನತ್ವವೆಂಬ ಧರ್ಮವನ್ನು ಕಳೆದುಕೊಂಡು ಅಜ್ಞಾನವೆಂಬ ಹೆಸರನ್ನು ಪಡೆಯಬೇಕಾಗುವುದು.

ಅದನ್ನೂ ಪಡೆಯಲಿ, ಹಾನಿಯೇನು ? ಎಂದು ಕೇಳಬೇಡಿರಿ. **" ಯಸ್ಸರ್ವಜ್ಞಃ ಸರ್ವವಿತ್ "** ಎಂಬ ಶ್ರುತಿವಾಕ್ಯವು ಸರ್ವಜ್ಞತ್ವವೇ ಈಶ್ವರನಿಗೆ ಲಕ್ಷಣವೆಂದು ತೋರಿಸುತ್ತಿರುವುದು; ಈಶ್ವರನ ಜ್ಞಾನವು ಅಜ್ಞಾನವೆನಿಸಿಕೊಂಡ ಮೇಲೆ ಈಶ್ವರನಿಗೆ ಜ್ಞಾನವೆಂಬುದೇ ಇಲ್ಲವಾಗಿ ಸರ್ವಜ್ಞತ್ವವೆಂಬ ಲಕ್ಷಣವೂ ಲುಪ್ತವಾಗಿ ಲಕ್ಷಣರಹಿತವಾದ ಪದಾರ್ಥಕ್ಕೆ ಸತ್ತೆಯೇ ಇಲ್ಲವಾದುದರಿಂದ ಈಶ್ವರನೇ ಇಲ್ಲದಂತಾಗುವುದು. ಆದುದರಿಂದ ವಿಷಯಗಳೊಡನೆ ಜ್ಞಾನಕ್ಕೆ ಆ ಆ ಸಂಬಂಧಗಳನ್ನು ಒಪ್ಪಿಯೇ ತೀರಬೇಕು.

" ಪೂಜ್ಯರೆ! " ಜ್ಞಾನವಿಶೇಷಕ್ಕೆ ವಿಷಯವಿಶೇಷದಲ್ಲಿ ವ್ಯವಸ್ಥೆ ಸಾಮಗ್ರಿಯ ಸ್ವಭಾವತಾರತಮ್ಯದಿಂದಲೇ ಸಿದ್ಧಿಸುವುದಾದಕಾರಣ ಸಂಯೋಗಾದಿಸಂಬಂಧವು ಬೇಕಾಗಿಲ್ಲ." ಎಂಬ ಈ ನಿಯಮವನ್ನು ನಿತ್ಯವಾದ ಈಶ್ವರಜ್ಞಾನಕ್ಕಾಗಿ ನಾವು ಹೇಳಲಿಲ್ಲ. ಅನಿತ್ಯವಾದ ಅಸ್ಮದಾದಿಜ್ಞಾನಕ್ಕಾಗಿಯೇ ಇದನ್ನು ಹೇಳುವೆವು. ಆದಕಾರಣ ನಿತ್ಯವಾದ ಈಶ್ವರಜ್ಞಾನದಲ್ಲಿ ಸಂಯೋಗಾದಿಸಂಬಂಧಗಳನ್ನು ಸ್ವೀಕರಿಸಿದರೂ, ಅನಿತ್ಯವಾದ ಅಸ್ಮದಾದಿಗಳ ಜ್ಞಾನದಲ್ಲಿ ಅಂಥ ಸಂಬಂಧಗಳು ಬೇಕಾಗಿಲ್ಲವಷ್ಟೆ ? "

ಹೀಗೆ ದುಡುಕಿ ಆಶಂಕಿಸಬೇಡಿರಿ; ಏತಕ್ಕೆಂದರೆ—ನೀವು ಯಾವುದೊಂದು ಅನುಪಪತ್ತಿಯೂ, ಯಾವುದೊಂದು ಪ್ರಮಾಣವೂ ಇಲ್ಲದಿದ್ದರೂ ಕೆಲವು ಸಂದರ್ಭಗಳಲ್ಲಿ ಸ್ವಮತಶ್ರದ್ಧಾಮಾತ್ರದಿಂದಲೇ ಸಂಬಂಧವಿಶೇಷಗಳನ್ನು ಸ್ವೀಕರಿಸುವಿರಾದರೆ—ಶಾಸ್ತ್ರಬಲದಿಂದ ಅಂಥ ಸಂಬಂಧವಿಶೇಷಗಳನ್ನು ಸ್ವೀಕರಿಸುವ ನಮ್ಮ ಈ ಮಹಾಪರಾಧವನ್ನು ದಯಪಟ್ಟು ಮನ್ನಿಸಬೇಕು—

ಹೇಗೆಂದರೆ—ನಮ್ಮ ಚಕ್ಷುರಿಂದ್ರಿಯವು ಪುರೋವರ್ತಿಯಾದ ದ್ರವ್ಯದೊಡನೆ ಸಂಯೋಗವನ್ನು ಪಡೆದಮೇಲೆ ಆ ದ್ರವ್ಯವನ್ನೂ ಅದರಲ್ಲಿರುವ ರೂಪವನ್ನೂ ನಮ್ಮ ಜ್ಞಾನಕ್ಕೆ ಅದು ಗೋಚರಪಡಿಸುವುದು. ಆ ದ್ರವ್ಯದ ಜ್ಞಾನವು ಯಾವ ಸಂಬಂಧದಿಂದ ಉಂಟಾಯಿತೆಂದು ನಿಮ್ಮನ್ನು ಕೇಳಿದರೆ ಸಂಯೋಗಸಂಬಂಧದಿಂದ ಉಂಟಾಯಿತೆಂದು ನೀವು ಹೇಳುತ್ತೀರಿ; ಅದರಲ್ಲಿರುವ ರೂಪದ ಜ್ಞಾನವು ಯಾವ ಸಂಬಂಧದಿಂದ ಉಂಟಾಯಿತೆಂದು ಕೇಳಿದರೆ ಚಕ್ಷುಸ್ಸಂಯುಕ್ತವಾದ ದ್ರವ್ಯದಲ್ಲಿ ರೂಪವು ಸಮವಾಯಸಂಬಂಧದಿಂದ ಇರುವುದಾದಕಾರಣ ರೂಪಜ್ಞಾನವು

ಸಂಯುಕ್ತಸಮವಾಯವೆಂಬ ಸಂಬಂಧದಿಂದ ಉಂಟಾಯಿತೆಂದು ಲೋಕವಿಲಕ್ಷಣವಾದ ಒಂದು ಸಂಬಂಧವನ್ನು ತೋರಿಸುತ್ತೀರಿ ;

ಚಕ್ಷುಸ್ಸಂಯುಕ್ತವಾದ ದ್ರವ್ಯದಲ್ಲಿ—ರೂಪವು ಹೇಗೋ ಹಾಗೆಯೇ ರಸ-ಗಂಧ-ಸ್ಪರ್ಶ-ಶಬ್ದಗಳೂ ಸಮವಾಯಸಂಬಂಧದಿಂದ ಇರುವುವಾದಕಾರಣ ರೂಪದಂತೆ ರಸಾದಿಗಳಿಗೂ ಸಂಯುಕ್ತಸಮವಾಯವೆಂಬ ಸಂಬಂಧವು ತುಲ್ಯವಾಗಿದ್ದರೂ ಚಕ್ಷುರಿಂದ್ರಿಯವು ಅವುಗಳನ್ನು ನಮ್ಮ ಜ್ಞಾನಕ್ಕೆ ಏತಕ್ಕಾಗಿ ಗೋಚರಪಡಿಸಲಿಲ್ಲವೆಂದು ಕೇಳಿದರೆ ಚಕ್ಷುರಿಂದ್ರಿಯದ ಸ್ವಭಾವವಿಶೇಷವೇ ಇದಕ್ಕೆ ಕಾರಣವೆಂದು ಹೇಳುತ್ತೀರಿ—

ಹಾಗಾದರೆ—ಚಕ್ಷುರಿಂದ್ರಿಯದಿಂದ ರೂಪಜ್ಞಾನವೇ ಉಂಟಾಗುವುದಕ್ಕೂ, ರಸಾದಿಜ್ಞಾನವು ಉಂಟಾಗದೆಯೇ ಇರುವುದಕ್ಕೂ ಚಕ್ಷುರಿಂದ್ರಿಯದ ಸ್ವಭಾವವೇ ಕಾರಣವಾಗಿ ರೂಪಜ್ಞಾನವು ಉಪಪನ್ನವಾಗುತ್ತಿರುವಲ್ಲಿ ಯಾವ ಅನುಪಪತ್ತಿಯೂ ಯಾವ ಪ್ರಮಾಣವೂ ಇಲ್ಲದಿದ್ದರೂ, ಸಂಯುಕ್ತಸಮವಾಯಸಂಬಂಧಕ್ಕೆ ರೂಪಜ್ಞಾನಕಾರಣತ್ವವನ್ನು ಏತಕ್ಕೆ ಅಂಗೀಕರಿಸುತ್ತೀರೆಂದು ಕೇಳಿದರೆ ನೀವು ಮೌನವನ್ನಾದರೂ ವಹಿಸಬೇಕಾಗುವುದು ; ಅಥವಾ—"ಹಾ ಅಹುದು ಅಹುದು ಯಾವುದೊಂದು ಅನುಪಪತ್ತಿಯೂ ಇಲ್ಲ ; ಆದರೂ ಸ್ವಮತಶ್ರದ್ಧಾಮಾತ್ರದಿಂದ ಸಂಯುಕ್ತಸಮವಾಯಸಂಬಂಧವನ್ನು ಒಪ್ಪುತ್ತೇವೆ" ಎಂದಾದರೂ ಹೇಳಬೇಕಾಗುವುದು ;

ಹೀಗೆ ನಿಷ್ಫಲವಾದ ಸ್ವಮತಶ್ರದ್ಧೆಯಿಂದ ನೀವು ಉಚ್ಛೃಂಖಲವಾಗಿ ಆ ಆ ಸಂಬಂಧಗಳನ್ನು ಒಪ್ಪುವಿರಾದರೆ ಜ್ಞಾನಕ್ಕೂ ಜ್ಞಾನವಿಷಯಗಳಿಗೂ ಶಾಸ್ತ್ರಬಲದಿಂದ ಕೆಲವು ಸಂಬಂಧಗಳನ್ನು ಒಪ್ಪುವ ನಮ್ಮ ಅಪರಾಧವನ್ನು ದಯಾಳುಗಳಾದ ನೀವು ಮನ್ನಿಸದಿರಲಾರಿರಿ.

ಯಾವ ಶಾಸ್ತ್ರಬಲದಿಂದ ಅಂಥ ಸಂಬಂಧಗಳನ್ನು ಒಪ್ಪುತ್ತೀರೆಂದು ಪುನಃ ಕೇಳಬೇಡಿ. ಮೂರನೆಯ ಆಕ್ಷೇಪಕ್ಕೆ ಸಮಾಧಾನವನ್ನು ತೋರಿಸುವ ಪ್ರಕರಣವನ್ನು ಮತ್ತೊಂದಾವರ್ತಿ ಕಟಾಕ್ಷಿಸುವುದಕ್ಕೆ ಸ್ವಲ್ಪ ಪರಿಶ್ರಮವನ್ನು ವಹಿಸುವಿರಾದರೆ ಇದು ಸ್ಪಷ್ಟವಾಗುವುದು. ಇದೇ ಅರ್ಥವು **ನ್ಯಾಯಕುಲಿಶವೆಂಬ** ಗ್ರಂಥದಲ್ಲಿ—"**ಸಂಯೋಗಸ್ತು ಪ್ರಸರಣವೈಭವಾದಿಪ್ರತಿಪಾದಕಶಾಸ್ತ್ರಬಲಾದಾಶ್ರಿತಃ**" ಎಂದು ಸ್ಪಷ್ಟವಾಗಿ ಹೇಳಲ್ಪಟ್ಟಿರುವುದು. ಜ್ಞಾನಕ್ಕೆ ಬಹಿಃಪ್ರಸರಣವನ್ನೂ ವಿಭುತ್ವವನ್ನೂ ಪ್ರತಿಪಾದಿಸುವ ಶಾಸ್ತ್ರಬಲದಿಂದಲೇ ಇದಕ್ಕೆ

ತನ್ನ ವಿಷಯಗಳೊಡನೆ ಸಂಯೋಗ ಮೊದಲಾದ ಸಂಬಂಧಗಳನ್ನು ಅಂಗೀಕರಿಸು ವೆವೆಂಬುದು ಇದರ ಅರ್ಥವಾಗಿರುವುದು.

"ಪೂಜ್ಯರೆ ? ಚಕ್ಷುರಿಂದ್ರಿಯದಿಂದ ರೂಪಜ್ಞಾನವೇ ಉಂಟಾಗುವು ದಕ್ಕೂ, ರಸಾದಿಜ್ಞಾನವು ಉಂಟಾಗದೆಯೇ ಇರುವುದಕ್ಕೂ ಚಕ್ಷುರಿಂದ್ರಿಯದ ಸ್ವಭಾವವಿಶೇಷವೇ ಕಾರಣವಾಗಿದ್ದರೂ—ಸಂಯುಕ್ತಸಮವಾಯವೆಂಬ ಸಂಬಂ ಧವೂ ಅಲ್ಲಿ ಕಾರಣವಾಗಿರುವುದೆಂದು ಒಪ್ಪಲೇಬೇಕು; ಹಾಗೆ ಒಪ್ಪದಿದ್ದರೆ ಲೋಕದಲ್ಲಿರುವ ರೂಪಸಾಮಾನ್ಯವೂ ಎಂದರೆ ಯಾವದ್ರೂಪವೂ ಚಕ್ಷುರಿಂದ್ರಿ ಯದಿಂದ ಗ್ರಹಿಸುವುದಕ್ಕೆ ಯೋಗ್ಯವಾಗಿಯೇ ಇರುವುದರಿಂಡ ಚಕ್ಷುಸ್ಸಂಯೋಗ ರಹಿತವಾದ ದ್ರವ್ಯದಲ್ಲಿರುವ ರೂಪಕ್ಕೂ ಗ್ರಹಣವುಂಟಾಗಲೆಂಬ ಅತಿಪ್ರಸಂಗವು ಬರುವುದು; ಅದನ್ನು ಪರಿಹರಿಸುವುದಕ್ಕಾಗಿ ಸಂಯುಕ್ತಸಮವಾಯವೆಂಬ ಸಂಬಂ ಧಕ್ಕೂ ಕಾರಣತ್ವವನ್ನು ಹೇಳುವೆವು. ಚಕ್ಷುಸ್ಸಂಯೋಗರಹಿತವಾದ ದ್ರವ್ಯದಲ್ಲಿ ರುವ ರೂಪಕ್ಕಾದರೆ ಅಸಂಯುಕ್ತಸಮವಾಯವಿರುವುದಲ್ಲದೆ ಸಂಯುಕ್ತಸಮ ವಾಯವಿಲ್ಲವಾದುದರಿಂದ ಅತಿಪ್ರಸಂಗಕ್ಕೆ ಅವಕಾಶವಿಲ್ಲವಷ್ಟೆ ?"

ಹೀಗೆ ಹೇಳುವಿರಾದರೆ—ಜ್ಞಾನವಿಷಯದಲ್ಲಿಯೂ ಇದೇ ಸಮಾಧಾನ ವನ್ನು ತಿಳಿಯಬಹುದು. ಎಂದರೆ ಪ್ರಾಮಾಣಿಕಗಳಾದ ಸಕಲಪದಾರ್ಥಗಳಿಗೂ ಜ್ಞಾನದಿಂದ ಗ್ರಹಿಸಲ್ಪಡುವುದಕ್ಕೆ ಯೋಗ್ಯತೆಯಿರುವುದರಿಂದಲೂ, ಜ್ಞಾನ ದ್ರವ್ಯವೂ ನಿತ್ಯವಾದುದರಿಂದಲೂ, ಸರ್ವದಾ ಅವುಗಳ ಗ್ರಹಣವುಂಟಾಗಿ ಪ್ರಕಾ ಶವೂ ವ್ಯವಹಾರವೂ ಉಂಟಾಗಲೆಂದು ಅತಿಪ್ರಸಂಗವುಂಟಾದರೆ ಅದನ್ನು ಪರಿಹರಿ ಸುವುದಕ್ಕಾಗಿ ಸಂಯೋಗ ಮೊದಲಾದ ಸಂಬಂಧಗಳನ್ನೂ, ಅವುಗಳಿಗೆ ಕಾರಣತ್ವ ವನ್ನೂ ನಾವೂ ಹೇಳುವೆವೆಂದು ತಿಳಿಯಬಹುದು.

"ಅದೇತಕ್ಕೆ ? ಯಾವ ಪದಾರ್ಥದ ಜ್ಞಾನವುಂಟಾಗುವುದಕ್ಕೆ ಯಾವ ಸಾಮಗ್ರಿಯನ್ನು ನೀವು ಒಪ್ಪಿರುತ್ತೀರೋ ಆ ಸಾಮಗ್ರಿಯೇ ಆ ಪದಾರ್ಥದ ವ್ಯವಹಾರಕ್ಕೂ ಕಾರಣವೆಂದು ಒಪ್ಪಿಬಿಟ್ಟರೆ ಆ ಸಾಮಗ್ರಿಯಿರುವಾಗಲೇ ಆ ಪದಾರ್ಥದ ಪ್ರಕಾಶವೂ ವ್ಯವಹಾರವೂ ಉಂಟಾಗುವುದಲ್ಲದೆ ಸರ್ವದಾ ಉಂಟಾಗ ಲಾರದಾದುದರಿಂದ ಸಾಮಗ್ರೀಬಲದಿಂದಲೇ ಅತಿಪ್ರಸಂಗಕ್ಕೆ ಪರಿಹಾರವುಂಟಾಗು ತ್ತಿರುವಲ್ಲಿ ಸಂಯೋಗ ಮೊದಲಾದ ಸಂಬಂಧಗಳನ್ನೂ, ಅವುಗಳಿಗೆ ಕಾರಣತ್ವ ವನ್ನೂ ಏತಕ್ಕೆ ಅಂಗೀಕರಿಸುತ್ತೀರಿ ?"

ಹೀಗೆ ಹೇಳುವಿರಾದರೆ—ಇದೇ ಪ್ರತಿಬಂದಿಯನ್ನು ನಿಮ್ಮ ಮತದಲ್ಲಿಯೂ ಭಾವಿಸಿ ನೋಡಬಹುದು. ಎಂದರೆ—ಚಕ್ಷುಸ್ಸಂಯೋಗರಹಿತವಾದ ದ್ರವ್ಯದಲ್ಲಿರುವ ರೂಪಕ್ಕೂ ಗ್ರಹಣವುಂಟಾಗಲೆಂದು ಅತಿಪ್ರಸಂಗವುಂಟಾದರೆ ಇದನ್ನು ಪರಿಹರಿಸುವುದಕ್ಕಾಗಿ ಸಂಯುಕ್ತಸಮವಾಯಸಂಬಂಧವನ್ನೂ, ಅದಕ್ಕೆ ಕಾರಣತ್ವವನ್ನೂ ಅಂಗೀಕರಿಸಬೇಕಾದುದಿಲ್ಲ; ಚಕ್ಷುಸ್ಸಂಯೋಗ ಮೊದಲಾದ ಸಾಮಗ್ರಿಯಿಲ್ಲದುದರಿಂದಲೇ ಅಂಥ ರೂಪಕ್ಕೆ ಗ್ರಹಣವುಂಟಾಗಲು ಅವಕಾಶವಿಲ್ಲವೆಂದು ಅತಿಪ್ರಸಂಗಪರಿಹಾರವು ಸಾಮಗ್ರ್ಯಭಾವದಿಂದಲೇ ಸುಲಭವಾಗಿ ದೊರಕುತ್ತಿರುವಲ್ಲಿ ಸಂಯುಕ್ತಸಮವಾಯ ಮೊದಲಾದ ಸಂಬಂಧಗಳನ್ನೂ, ಅವುಗಳಿಗೆ ಕಾರಣತ್ವವನ್ನೂ ಏತಕ್ಕೆ ಅಂಗೀಕರಿಸುತ್ತೀರಿ?

"ಅದು ಹೇಗಾದೀತು? ರೂಪಪ್ರತ್ಯಕ್ಷದಲ್ಲಿ ಸಂಯುಕ್ತಸಮವಾಯವೆಂಬ ಸಂಬಂಧವೂ ಸಾಮಗ್ರಿಯ ಕೋಟಿಯಲ್ಲಿಯೇ ಸೇರಿರುವುದರಿಂದ ಅಂಥ ಸಂಬಂಧವು ಆವಶ್ಯಕವಾಗಿರುವುದಲ್ಲವೆ?

ಹೀಗೆ ಹೇಳುವಿರಾದರೆ—ಆ ಆ ಪದಾರ್ಥಗಳ ವ್ಯವಹಾರದಲ್ಲಿಯೂ ಜ್ಞಾನಸಂಯೋಗ, ಜ್ಞಾನಸಂಯುಕ್ತಾಶ್ರಿತತ್ವ ಮೊದಲಾದ ಸಂಬಂಧಗಳೂ ಸಾಮಗ್ರಿಯ ಕೋಟಿಯಲ್ಲಿಯೇ ಸೇರಿರುವುದರಿಂದ ಅಂಥ ಸಂಬಂಧಗಳೂ ಆವಶ್ಯಕಗಳಾಗಿರುವುವೆಂಬುದನ್ನು ತಿಳಿದುಕೊಂಡು ನೀವು ಏತಕ್ಕೆ ಸ್ವಸ್ಥಚಿತ್ತರಾಗಬಾರದು?

ಮತ್ತು ಪೂರ್ವೋಕ್ತವಾದ ಅತಿಪ್ರಸಂಗಪರಿಹಾರಕ್ಕೋಸ್ಕರವಲ್ಲವೆ ಸಂಯುಕ್ತಸಮವಾಯವೆಂಬ ಸಂಬಂಧವನ್ನು ಒಪ್ಪುತ್ತೀರಿ? ರೂಪಾಂತರಕ್ಕೂ ಇಂಥ ಸಂಬಂಧವು ಏತಕ್ಕೆ ಇಲ್ಲವೆಂದು ಕೇಳಿದರೆ ಚಕ್ಷುಸ್ಸಂಯೋಗವೆಂಬ ಸಾಮಗ್ರಿಯಿಲ್ಲವಾದುದರಿಂದ ಈ ಸಂಬಂಧವು ವ್ಯವಹಿತವಾದ ರೂಪಕ್ಕೆ ಇಲ್ಲವೆಂದು ಹೇಳುತ್ತೀರಿ; ಹೀಗೆ ಸಾಮಗ್ರಿ ಅತ್ಯಂತ ಆವಶ್ಯಕವಾದುದಾದರೆ ಅದರಿಂದಲೇ ಸನ್ನಿಹಿತರೂಪಗ್ರಹಣವು ಉಪಪನ್ನವಾಗಿ ವ್ಯವಹಿತರೂಪಗ್ರಹಣದ ಅತಿಪ್ರಸಂಗವನ್ನೂ ಸಹ ಪರಿಹರಿಸಲು ಶಕ್ಯವಾಗಿರುವಲ್ಲಿ ಸಂಯುಕ್ತಸಮವಾಯಸಂಬಂಧವನ್ನು ಅಂಗೀಕರಿಸಿದುದು ವ್ಯರ್ಥವಲ್ಲವೆ?

ಆದಕಾರಣ ಜ್ಞಾನಕ್ಕೆ ತನ್ನ ವಿಷಯಗಳೊಡನೆ ಉಂಟಾಗುವ ಸಂಯೋಗ ಮೊದಲಾದ ಪೂರ್ವೋಕ್ತಗಳಾದ ಒಂಬತ್ತು ಬಗೆಯ ಸಂಬಂಧಗಳೂ ಅತ್ಯಂತ ಆವಶ್ಯಕಗಳಾದುದರಿಂದ ಇವುಗಳನ್ನು ನಾವು ಸ್ವೀಕರಿಸಿದುದರಲ್ಲಿ ಯಾವುದೊಂದು ಆಕ್ಷೇಪವೂ ಏರುವುದಿಲ್ಲ.

## ೯೨೯. ಅಥೈಕಾದಶಾಕ್ಷೇಪಪರಿಹಾರಃ.

ಹನ್ನೊಂದನೆಯ ಆಕ್ಷೇಪಕ್ಕೆ—ಈ ಆಕ್ಷೇಪಕ್ಕೆ ಪರಿಹಾರವೇನೆಂದು ನಮ್ಮನ್ನು ಕೇಳಬೇಡಿರಿ; ಜ್ಞಾನದಲ್ಲಿರುವ ವೇಗಾತಿಶಯವನ್ನಾಗಲಿ, ಶಕ್ತಿವಿಶೇಷವನ್ನಾಗಲಿ, ಈಶ್ವರಸಂಕಲ್ಪವಿಶೇಷವನ್ನಾಗಲಿ ಕೇಳಿದರೆ ಅವುಗಳೇ ಇದಕ್ಕೆ ಸಮಾಧಾನವನ್ನು ನಿಮಗೆ ತಿಳಿಯಪಡಿಸುವುವು.

ಅತ್ಯಂತವೇಗವನ್ನು ಪಡೆದಿರುವ ನೇತ್ರರಶ್ಮಿ, ಸೂರ್ಯರಶ್ಮಿ, ವಿದ್ಯುದ್ರಶ್ಮಿ, ಮೊದಲಾದುವುಗಳು ಕಣ್ಣುಮುಚ್ಚಿ ತೆಗೆಯುವಷ್ಟು ಕಾಲದೊಳಗಾಗಿಯೇ ಬ್ರಹ್ಮಾಂಡೋದರವನ್ನೆಲ್ಲಾ ಮೂರಾವರ್ತಿಯಾದರೂ ಪ್ರದಕ್ಷಿಣಮಾಡಿ ಬರುವಷ್ಟು ಸಾಮರ್ಥ್ಯವನ್ನು ಪಡೆದಿರುವುವೆಂಬುದು ಕುರುಬರಿಗೂ ಸಹ ತಿಳಿಯದ ವಿಷಯವಲ್ಲ. ಹೀಗೆ ಜಡಗಳಾಗಿರುವ ಕೆಲವು ತೇಜಸ್ಸುಗಳ ವೇಗವೇ ಇಷ್ಟು ಉಚ್ಛೃಂಖಲವಾಗಿರುವುದಾದರೆ ಅಜಡವಾದ ಜ್ಞಾನವೆಂಬ ತೇಜಸ್ಸಿನ ವೇಗವೂ ಶಕ್ತಿಯೂ ಇನ್ನೆಷ್ಟಿರಬಹುದೆಂದು ಊಹಿಸಿ ನೋಡಬಹುದು.

ಕೊನೆಯ ಎಲ್ಲೆಯನ್ನು ಮುಟ್ಟಿರುವ ವೇಗಾತಿಶಯವನ್ನು ಪಡೆದಿರುವ ಅಂಥ ಜ್ಞಾನವು ಮೋಕ್ಷಾವಸ್ಥೆಯಲ್ಲಿ ಏಕಕ್ಷಣದಲ್ಲಿಯೇ ಸಕಲಬ್ರಹ್ಮಾಂಡೋದರವರ್ತಿಗಳಾದ ಸಕಲಪದಾರ್ಥಗಳೊಡನೆಯೂ ಸಂಯೋಗವನ್ನು ಪಡೆವುದೆಂಬುದೇನೂ ಆಶ್ಚರ್ಯವಲ್ಲ; ಈಶ್ವರನಿಗೆ ಈಗ ಇರುವ ಉಭಯವಿಭೂತಿಗಳಂತೆ ಇನ್ನೊಲಕ್ಷ ಉಭಯವಿಭೂತಿಗಳಿದ್ದಿದ್ದರೂ ಅಷ್ಟರೊಡನೆಯೂ ಏಕಕ್ಷಣದಲ್ಲಿಯೇ ಸಂಯೋಗವನ್ನು ಪಡೆವಷ್ಟು ಸಾಮರ್ಥ್ಯವೂ ಇದಕ್ಕೆ ಇದ್ದೇ ಇರುವುದರಿಂದ ಈ ವಿಷಯದಲ್ಲಿ ಯಾವ ಆಕ್ಷೇಪವೂ ಏರುವುದಿಲ್ಲವೆಂದು ತಿಳಿದು ಮನಸ್ಸಿನ ಕಳವಳವನ್ನು ಬಿಟ್ಟು ನೀವು ಸಂತುಷ್ಟರಾಗಬೇಕು.

## ೯೩೦. ಅಥ ದ್ವಾದಶಾಕ್ಷೇಪಪರಿಹಾರಃ.

ಹನ್ನೆರಡನೆಯ ಆಕ್ಷೇಪಕ್ಕೆ—ಪ್ರತಿಯೊಬ್ಬ ಜೀವಾತ್ಮನಿಗೂ ತನ್ನ ತನ್ನ ಧರ್ಮಭೂತಜ್ಞಾನದೊಡನೆ ಅಪೃಥಕ್ಸಿದ್ಧಿಸಂಬಂಧವು ಸ್ವಾಭಾವಿಕವಾಗಿರುವುದರಿಂದಲೂ, ಇಂಥ ಅಪೃಥಕ್ಸಿದ್ಧಿಸಂಬಂಧಪ್ರಯುಕ್ತವಾದ ಆಧೇಯತ್ವವು ಆ ಆ ಧರ್ಮಭೂತಜ್ಞಾನಕ್ಕೆ ಆ ಆ ಜೀವನೊಡನೆಯೇ ಇರುವುದಲ್ಲದೆ ಮತ್ತೊಬ್ಬ ಜೀವನೊಡನೆ ಇಲ್ಲವಾದುದರಿಂದಲೂ, ಮುಕ್ತಾತ್ಮರಿಗೆ ಜ್ಞಾನವ್ಯವಸ್ಥೆಯನ್ನು ಹೇಳಲು ಅನುಪಪತ್ತಿಯಾಗಲಿ ಪರಿಶ್ರಮವಾಗಲಿ ಸ್ವಲ್ಪಮಾತ್ರವೂ ಇಲ್ಲ.

ಎಂದರೆ ಪ್ರತಿಯೊಬ್ಬ ಜೀವನಿಗೂ ಪ್ರತಿಯೊಂದು ಧರ್ಮಭೂತಜ್ಞಾನದೊಡನೆಯೂ ಸಂಯೋಗಸಂಬಂಧವು ತುಲ್ಯವಾಗಿದ್ದರೂ. ಅಪೃಥಕ್ಸಿದ್ಧಿಸಂಬಂಧವು ಪ್ರತಿಯೊಬ್ಬನಿಗೂ ಪ್ರತಿಯೊಂದು ಧರ್ಮಭೂತಜ್ಞಾನದೊಡನೆಯೂ ಇಲ್ಲ; ಮತ್ತು ಪ್ರತಿಯೊಂದು ಧರ್ಮಭೂತಜ್ಞಾನವೂ ಪ್ರತಿಯೊಬ್ಬ ಜೀವನಿಗೂ ಆಧೇಯವಾಗಿಯೂ ಇಲ್ಲ. ಯಾವ ಜೀವನಿಗೆ ಯಾವ ಧರ್ಮಭೂತಜ್ಞಾನದೊಡನೆ ಅಪೃಥಕ್ಸಿದ್ಧಿಸಂಬಂಧವಿರುವುದೋ ; ಮತ್ತು ಯಾವ ಧರ್ಮಭೂತಜ್ಞಾನವು ಯಾವ ಜೀವನನ್ನು ಕುರಿತು ಅಪೃಥಕ್ಸಿದ್ಧಿಸಂಬಂಧಪ್ರಯುಕ್ತವಾದ ಆಧೇಯತ್ವವನ್ನು ಪಡೆದಿರುವುದೋ ಆ ಜೀವನಿಗೆ ಆ ಧರ್ಮಭೂತಜ್ಞಾನವೇ ತನ್ನದಾಗಿರುವುದೆಂದೂ, ಮತ್ತೊಂದು ಮತ್ತೊಬ್ಬನದಾಗಿರುವುದೆಂದೂ ಜ್ಞಾನವ್ಯವಸ್ಥೆಯನ್ನು ತೋರಿಸಲು ಯಾವ ಪರಿಶ್ರಮವೂ ಇಲ್ಲ. ವ್ಯಾಪಕವಾದ ಜ್ಞಾನಕ್ಕೆ ಸಂಚಾರವಿಲ್ಲದಿದ್ದರೂ, ಜೀವನು ಮಾತ್ರವೇ ಸಂಚರಿಸಿದರೂ ಉಕ್ತವಾದ ಸಂಬಂಧಕ್ಕೆ ಚ್ಯುತಿಯಿಲ್ಲ.

### ೯೩೧. ಪರಸ್ಪರಸಂಬಂಧಿನೋರ್ದ್ವಯೋಃ ಏಕಸ್ಯೈವ ಅಚಲತ್ವೇ ಅನ್ಯಸ್ಯ ಚಲತ್ವೇಽಪಿ ನ ಸಂಬಂಧಹಾನಿರಿತ್ಯಸ್ಯಾರ್ಥಸ್ಯ ನಾನಾದೃಷ್ಟಾಂತೈರುಪಪಾದನಂ.

ಪರಸ್ಪರಸಂಬಂಧಿಗಳಾದ ಎರಡು ಪದಾರ್ಥಗಳೊಳಗೆ ಒಂದುಮಾತ್ರ ಚಲವಾಗಿಯೂ, ಮತ್ತೊಂದು ಅಚಲವಾಗಿಯೂ ಇದ್ದರೂ ಅವುಗಳ ಸಂಬಂಧಕ್ಕೆ ಚ್ಯುತಿಯಿಲ್ಲವೆಂಬ ವಿಷಯದಲ್ಲಿ ಕೆಲವು ದೃಷ್ಟಾಂತಗಳನ್ನು ಇಲ್ಲಿ ತೋರಿಸುವೆವು.

**ಒಂದನೆಯ ದೃಷ್ಟಾಂತವು**—ಸಾಂಖ್ಯರೂ, ವೈಶೇಷಿಕರೂ, ನೈಯಾಯಿಕರೂ, ಮೀಮಾಂಸಕರೂ—ಆತ್ಮಸ್ವರೂಪವನ್ನು ವಿಭುವಾಗಿಯೂ (ವ್ಯಾಪಕವಾಗಿಯೂ), ಪ್ರತಿಶರೀರದಲ್ಲಿಯೂ ಭಿನ್ನಭಿನ್ನವಾಗಿಯೂ ಒಪ್ಪುವರು. ವ್ಯಾಪಕವಾದ ಜೀವಸ್ವರೂಪಕ್ಕೆ ಚಲನವು ಸಂಭವಿಸುವುದಿಲ್ಲವಾದುದರಿಂದ ಇದು ಅಚಲವಾಗಿಯೇ ಇದ್ದರೂ—ಶರೀರವೂ ಇಂದ್ರಿಯಗಳೂ ಸಂಚರಿಸುವುವು. ಒಂದು ಆತ್ಮಸ್ವರೂಪವು ವ್ಯಾಪಿಸಿಕೊಂಡಿರುವ ಪ್ರದೇಶದಲ್ಲಿಯೇ ಅನಂತವಾದ ಆತ್ಮಸ್ವರೂಪವೂ ವ್ಯಾಪಿಸಿಕೊಂಡಿರುವುದರಿಂದ ಶರೀರವೂ ಇಂದ್ರಿಯಗಳೂ ಸಂಚರಿಸುವ ಕಾಲದಲ್ಲಿ ತನ್ನ ಆತ್ಮನ ಆ ಆ ಪ್ರದೇಶಗಳೊಡನೆ ಹೇಗೆ ಸಂಯೋಗವನ್ನು ಪಡೆವುವೋ ಅದರಂತೆ ಇತರಸಮಸ್ತಾತ್ಮಸ್ವರೂಪಗಳೊಡನೆಯೂ ಸಂಯೋಗವನ್ನು ನಿಯತವಾಗಿ ಪಡೆವುವು ; ಆದರೂ ಯಾವ ಶರೀರೇಂದ್ರಿಯಗಳು

ಯಾವ ಜೀವನಿಗಾಗಿ ಇರುವುವೆಂಬುದನ್ನು ಕಂಡುಹಿಡಿವುದಕ್ಕೆ ದಾರಿಯಿಲ್ಲವೆಂಬುದಿಲ್ಲ; ಅಪೃಥಕ್ಸಿದ್ಧಿಸಂಬಂಧದಿಂದ ಆ ಆ ಶರೀರೇಂದ್ರಿಯಗಳು ಆ ಆ ಜೀವನಿಗಾಗಿ ಇರುವುವೆಂಬ ವ್ಯವಸ್ಥೆ ಇದ್ದೇ ಇರುವುದು. ಆದುದರಿಂದ ಪರಸ್ಪರಸಂಬಂಧಿಗಳಾದ ಆತ್ಮ, ಶರೀರ; ಇವುಗಳೊಳಗೆ ಒಂದು ಅಚಲವಾಗಿಯೂ ಮತ್ತೊಂದು ಚಲವಾಗಿಯೂ ಇದ್ದರೂ ಇವುಗಳ ಸಂಬಂಧಕ್ಕೆ ಹೇಗೆ ಚ್ಯುತಿಯಿಲ್ಲವೋ ಹಾಗೆಯೇ ನಮ್ಮ ಮತದಲ್ಲಿಯೂ ಸಂಭವಿಸಬಹುದು.

**ಎರಡನೆಯ ದೃಷ್ಟಾಂತವು**—ವ್ಯಾಪಕನಾಗಿಯೂ ಸರ್ವನಿಯಾಮಕನಾಗಿಯೂ ಇರುವ ಈಶ್ವರನನ್ನು ಒಪ್ಪಿಕೊಳ್ಳುವವರ ಮತದಲ್ಲಿ ಈಶ್ವರಸ್ವರೂಪವು ಅಚಲವಾಗಿದ್ದರೂ ಅವನ ನಿಯಾಮ್ಯವಸ್ತುಗಳು ಚಲಿಸುವುವು. ಆದರೂ ಈಶ್ವರನಿಗೂ ಅವುಗಳಿಗೂ ಇರುವ ನಿಯಂತೃನಿಯಾಮ್ಯಭಾವರೂಪವಾದ ಸಂಬಂಧಕ್ಕೆ ಚ್ಯುತಿಯಿಲ್ಲ. ಅದರಂತೆ ನಮ್ಮ ಮತದಲ್ಲಿಯೂ ಸಂಭವಿಸಬಹುದು.

**ಮೂರನೆಯ ದೃಷ್ಟಾಂತವು**—ಪತಿಪತ್ನಿಗಳು, ಪೋಷಕಪೋಷ್ಯರು, ಸ್ವಾಮಿದಾಸರು, ಪಿತಾಪುತ್ರರು, ಇವೇ ಮೊದಲಾದ ಜೋಡಿಗಳಲ್ಲಿ ಮೊದಲನೆಯವರು ಅಚಲರಾಗಿ ಎರಡನೆಯವರು ಚಲರಾಗಿ ಇದ್ದರೂ, ಅಥವಾ ಎರಡನೆಯವರು ಅಚಲರಾಗಿ ಮೊದಲನೆಯವರು ಚಲರಾಗಿ ಇದ್ದರೂ ಪತಿಪತ್ನೀಭಾವ, ಪೋಷಕಪೋಷ್ಯಭಾವ, ಸ್ವಾಮಿದಾಸಭಾವ, ಪಿತಾಪುತ್ರಭಾವ, ಇವೇ ಮೊದಲಾದ ಸಂಬಂಧಗಳಿಗೆ ಹೇಗೆ ಚ್ಯುತಿಯಿಲ್ಲವೋ ಅದರಂತೆ ನಮ್ಮ ಮತದಲ್ಲಿಯೂ ಸಂಭವಿಸಬಹುದು.

**ನಾಲ್ಕನೆಯ ದೃಷ್ಟಾಂತವು**—ಮಣಿ, ದ್ಯುಮಣಿ, ದೀಪ, ಇವೇ ಮೊದಲಾದ ಪ್ರಭಾವದ್ವಸ್ತುಗಳು ಒಂದೇಕಡೆಯಲ್ಲಿ ಸ್ಥಿರಗಳಾಗಿ ಇದ್ದರೂ ಅವುಗಳ ಪ್ರಭೆಗಳು ಸಂಚರಿಸಿ ಸರ್ವತ್ರ ಹರಡಿಕೊಳ್ಳುವುವು. ಆದರೂ ಅವುಗಳಿಗೆ ಪ್ರಭಾವದ್ವಸ್ತುವಿನೊಡನೆ ಇರುವ ಸಂಬಂಧಕ್ಕೆ ಚ್ಯುತಿಯಿಲ್ಲ. ಮತ್ತು ಒಂದೇ ಆವರಣದಲ್ಲಿರುವ ಅನೇಕದೀಪಪ್ರಭೆಗಳಿಗೆ ಎಲ್ಲಾ ದೀಪಗಳೊಡನೆಯೂ ಸಂಯೋಗಸಂಬಂಧವಿದ್ದರೂ ತಮ್ಮ ತಮ್ಮ ದೀಪಗಳೊಡನೆ ತಮತಮಗಿರುವ ಅಪೃಥಕ್ಸಿದ್ಧಿಸಂಬಂಧಕ್ಕೆ ಚ್ಯುತಿಯಿಲ್ಲ. ಅದರಂತೆ ನಮ್ಮ ಮತದಲ್ಲಿಯೂ ಸಂಭವಿಸಬಹುದು.

**ಐದನೆಯ ದೃಷ್ಟಾಂತವು**—ವೈಶೇಷಿಕರ ಮತ್ತು ನೈಯಾಯಿಕರ ಮತದಲ್ಲಿ ಅವಯವಗಳಿಗಿಂತಲೂ ಭಿನ್ನವಾದ ಅವಯವಿಯೆಂಬುದೊಂದು ಉಂಟು; ವೃಕ್ಷವೆಂಬ ಅವಯವಿ ಅಚಲವಾಗಿ ಇದ್ದರೂ ಅದರ ಅವಯವವಾದ ಶಾಖೆ

ಯೆಂಬುದು ಚಲಿಸುವುದು. ಆದರೂ ಶಾಖೆಗೂ ವೃಕ್ಷಕ್ಕೂ ಇರುವ ಅವಯವಾವಯವಿಭಾವವೆಂಬ ಸಂಬಂಧಕ್ಕೆ ಚ್ಯುತಿಯಿಲ್ಲ.

ಅದೇತಕ್ಕೆ ? ಶಾಖೆ ಚಲಿಸುವಾಗ "**ವೃಕ್ಷವೇ ಚಲಿಸುತ್ತದೆ**" ಎಂದು ಏತಕ್ಕೆ ಅಂಗೀಕರಿಸಬಾರದು ? ಇಲ್ಲ ಹಾಗೆ ಅಂಗೀಕರಿಸಲಾಗುವುದಿಲ್ಲ. ಶಾಖೆ ಚಲಿಸುತ್ತಿರುವಾಗ "**ಶಾಖಾ ಚಲತಿ**" ಎಂಬ ಪ್ರತೀತಿಯಿರುವುದಲ್ಲದೆ "**ವೃಕ್ಷಶ್ಚಲತಿ**" ಎಂಬ ಪ್ರತೀತಿಯಿಲ್ಲವಷ್ಟೆ ? ಅಂಥ ಪ್ರತೀತಿಯೂ ಸಹ ಏತಕ್ಕೆ ಉಂಟಾಗಲಿಲ್ಲವೆಂದು ಕೇಳಬೇಡಿರಿ. ಒಂದು ಅವಯವಿಯ ಎಲ್ಲಾ ಅವಯವಗಳೂ ಚಲಿಸುವ ಕಾಲದಲ್ಲಿಯೇ "**ಅವಯವಿ ಚಲಿಸುತ್ತದೆ**" ಎಂಬ ಪ್ರತೀತಿ ಇರುವುದಲ್ಲದೆ ಒಂದು ಅವಯವದ ಚಲನಮಾತ್ರದಿಂದ ಅಂಥ ಪ್ರತೀತಿ ಉಂಟಾಗುವುದಿಲ್ಲ. ಮನುಷ್ಯನು ಒಂದು ಸ್ಥಳದಲ್ಲಿ ನಿಂತು ತನ್ನ ಕೈಯನ್ನಾಗಲಿ ಕಾಲನ್ನಾಗಲಿ ಅಲ್ಲಾಡಿಸಿದ ಮಾತ್ರಕ್ಕೆ "**ಮನುಷ್ಯನು ಹೋಗುತ್ತಾನೆ**" ಎಂಬ ಪ್ರತೀತಿ ಉಂಟಾಗುವುದಿಲ್ಲವಷ್ಟೆ ? ವೃಕ್ಷದ ಒಂದು ಅವಯವವಾದ ಶಾಖೆ ಚಲಿಸಿದರೂ ಮೂಲವೆಂಬ ಮತ್ತೊಂದು ಅವಯವವು ಚಲಿಸಲಿಲ್ಲವಾದುದರಿಂದ ಎಲ್ಲಾ ಅವಯವಗಳಿಗೂ ಚಲನವುಂಟಾಗಲಿಲ್ಲವಷ್ಟೆ ? ಆದುದರಿಂದ ವೃಕ್ಷದಲ್ಲಿ ಅಚಲತ್ವವೂ ಶಾಖೆಯಲ್ಲಿ ಚಲತ್ವವೂ ಇದ್ದರೂ ಅವುಗಳ ಸಂಬಂಧಕ್ಕೆ ಚ್ಯುತಿಯಿಲ್ಲ. ಅದರಂತೆ ನಮ್ಮ ಮತದಲ್ಲಿಯೂ ಸಂಭವಿಸಬಹುದು.

**ಆರನೆಯ ದೃಷ್ಟಾಂತವು**--ವೇದಾಂತಸಿದ್ಧಾಂತದಲ್ಲಿ—ಶರೀರವು ಅಚಲವಾಗಿ ಒಂದು ಕಡೆಯಲ್ಲಿ ಇರುವಾಗಲೂ ಅಣುವಾದ ಜೀವಾತ್ಮನು ಜಾಗ್ರತ್ಸ್ವಪ್ನಸುಷುಪ್ತಿ ಮೊದಲಾದ ಅವಸ್ಥೆಗಳಿಗೆ ಅನುಸಾರವಾಗಿ ಶರೀರದ ಒಳಗಿರುವ ಆ ಆ ನಾಡಿಗಳಲ್ಲಿ ಸಂಚರಿಸುವನು. ಆದರೂ ಜೀವನಿಗೂ ಶರೀರಕ್ಕೂ ಇರುವ ಶರೀರಶರೀರಿಭಾವಸಂಬಂಧಕ್ಕೆ ಎಂದರೆ ಅಪೃಥಕ್ಸಿದ್ಧಿಸಂಬಂಧಕ್ಕೆ ಚ್ಯುತಿಯಿಲ್ಲ. ಅದರಂತೆ ಮುಕ್ತಾತ್ಮರ ಜ್ಞಾನಕ್ಕೂ ಸಂಬಂಧವು ಸಂಭವಿಸಲು ತಡೆಯಿಲ್ಲ.

ಹೀಗೆ ಹನ್ನೆರಡು ಆಕ್ಷೇಪಗಳಿಗೂ ಸಪ್ರಮಾಣವಾಗಿಯೂ ಸಯುಕ್ತಿಕವಾಗಿಯೂ ಇರುವ ಸಮಂಜಸಗಳಾದ ಉತ್ತರಗಳನ್ನು ತೋರಿಸಿರುವೆವಾದುದರಿಂದ ನಮ್ಮ ವೇದಾಂತಸಿದ್ಧಾಂತದಲ್ಲಿ ಸಿದ್ಧವಾದ ಈ ಜ್ಞಾನವೆಂಬ ಭಾಸ್ಕರನು ಹಲವು ಬಗೆಯಾದ ಕುತರ್ಕಗಳೆಂಬ ಮೇಘಾವರಣಗಳನ್ನು ತಪ್ಪಿಸಿಕೊಂಡು ದ್ವಾದಶಾದಿತ್ಯರಿಗಿಂತಲೂ ವಿಲಕ್ಷಣನಾಗಿ ಪ್ರಕಾಶಿಸುತ್ತಿರುವನಾದಕಾರಣ

ಇತರರ ಕ್ಷುದ್ರಗಳಾದ ಆಕ್ಷೇಪಗಳೆಂಬ ಮುಂಜುಗಡ್ಡೆಗಳು ಇವನಮುಂದೆ ತಲೆಯೆತ್ತಲಾರವು.

**ಇಂತು ತತ್ತ್ವಶುದ್ಧಿಯೆಂಬ ವಿಶಿಷ್ಟಾದ್ವೈತಪ್ರಕರಣಗ್ರಂಥದೊಳ್ ಧರ್ಮಭೂತಜ್ಞಾನಪರಿಚ್ಛೇದದಲ್ಲಿ ದ್ವಾದಶವಿಧಾಕ್ಷೇಪ ಸಮಾಧಾನನಿರೂಪಣಪ್ರಕರಣಂ ಸಪ್ತಮಂ ॥೭॥**

# ಅಷ್ಟಮಪ್ರಕರಣಂ.

## ೯೩೨. ಅಥ ಧರ್ಮಭೂತಜ್ಞಾನೀಯಾವಸ್ಥಾವಿಶೇಷ ನಿರೂಪಣಪ್ರತಿಜ್ಞಾ

ಹೀಗೆ—ಪ್ರಸ್ತುತವಾಗಿರುವ ಧರ್ಮಭೂತಜ್ಞಾನದ ನಿರೂಪಣಕ್ಕಾಗಿ ಹೊರಟಿರುವ ಈ ಪರಿಚ್ಛೇದದಲ್ಲಿ ಆರಂಭದಿಂದಲೂ ಇದುವರೆಗೂ ನಡೆದ ಕಥೆಯನ್ನು ವಿಮರ್ಶೆಮಾಡಿದರೆ—ಧರ್ಮಭೂತಜ್ಞಾನದ ನಾನಾಲಕ್ಷಣಗಳೂ, ನೈಯಾಯಿಕರಿಂದಲೂ ಮೀಮಾಂಸಕರಿಂದಲೂ ಉಕ್ತಗಳಾದ ಮಾನಸಪ್ರತ್ಯಕ್ಷಗಮ್ಯತ್ವ ಪ್ರಾಕಟ್ಯಾನುಮೇಯತ್ವಪಕ್ಷಗಳೂ, ನೈಯಾಯಿಕಮತಖಂಡನಪ್ರಕಾರವೂ, ಪ್ರಾಕಟ್ಯಾನುಮೇಯತ್ವಖಂಡನಪ್ರಕಾರವೂ, ವೇದಾಂತಸಿದ್ಧಾಂತದಲ್ಲಿ ಅಭಿಮತವಾದ ಸ್ವಯಂಪ್ರಕಾಶತ್ವಸಾಧನಪ್ರಕಾರವೂ, ಧರ್ಮಭೂತಜ್ಞಾನದವಿಷಯವಾಗಿ ಅಂಕುರಿಸುವ ಹನ್ನೆರಡು ಆಕ್ಷೇಪಗಳ ಆಡಂಬರವೂ, ಅವುಗಳ ಪರಿಹಾರಸರಣಿಯೂ ಎಲ್ಲರಿಗೂ ವಿಶದವಾಗಿ ತಿಳಿಯುವಂತೆ ನಿರೂಪಿತವಾಗಿರುವುವೆಂದು ಹೇಳಲು ತಡೆಯಿಲ್ಲವಾದುದರಿಂದ ಜಿಜ್ಞಾಸುಗಳು ಧರ್ಮಭೂತಜ್ಞಾನದ ಸ್ವರೂಪವನ್ನು ಪರಿಕರಸಹಿತವಾಗಿ ಬಲ್ಲವರಾಗಿರುವರು. ಹೀಗಾದಮೇಲೆ ಈ ಧರ್ಮಭೂತಜ್ಞಾನದ ಸ್ವಭಾವಗಳನ್ನೂ ಎಂದರೆ ಅವಸ್ಥಾವಿಶೇಷಗಳನ್ನೂ ಈಗ ಅವರ ಪರಿಚಯಕ್ಕೆ ತರುವೆವು.

## ೯೩೩. ತತ್ರ ಸುಖದುಃಖೇಚ್ಛಾದ್ವೇಷಪ್ರಯತ್ನಾದೀನಾಂ ಜ್ಞಾನಾವಸ್ಥಾವಿಶೇಷತ್ವನಿರೂಪಣಂ.

ಇಂಥ ಜ್ಞಾನವೇ ಆ ಆ ಉಪಾಧಿಭೇದಗಳಿಂದ ಸುಖತ್ವ ದುಃಖತ್ವ ಇಚ್ಛಾತ್ವ ದ್ವೇಷತ್ವ ಪ್ರಯತ್ನತ್ವ ಮೊದಲಾದ ಅವಸ್ಥಾಭೇದಗಳನ್ನು ಪಡೆವು

ದಲ್ಲದೆ ಸುಖದುಃಖೇಚ್ಛಾದ್ವೇಷಪ್ರಯತ್ನಗಳು ಜ್ಞಾನಕ್ಕಿಂತಲೂ ಭಿನ್ನವಾದ ಪದಾರ್ಥಗಳಲ್ಲ.

ನೈಯಾಯಿಕರೇ ಮೊದಲಾದ ಮತಾಂತರದವರು ಯಾವ ಜ್ಞಾನವನ್ನು ಸುಖದುಃಖಾದಿಗಳಿಗೆ ಕಾರಣವಾಗಿ ಒಪ್ಪುವರೋ ಅಂಥ ಜ್ಞಾನವೇ ನಮ್ಮ ಮತದಲ್ಲಿ ಸುಖದುಃಖಾದಿರೂಪವಾಗಿರುವುದಲ್ಲದೆ ಸುಖದುಃಖಾದಿಗಳು ಜ್ಞಾನಕ್ಕಿಂತಲೂ ವ್ಯತಿರಿಕ್ತಗಳಾಗಿರುವುವೆಂಬುದರಲ್ಲಿ ಯಾವುದೊಂದು ಪ್ರಮಾಣವೂ ಇಲ್ಲ.

## ೯೩೪ ತತ್ರ ಶ್ರೀವರದವಿಷ್ಣುಮಿಶ್ರಾಚಾರ್ಯಮತ-ತದಭಿಪ್ರಾಯಯೋರ್ನಿರೂಪಣಂ

ಶ್ರೀ ವರದವಿಷ್ಣುಮಿಶ್ರಾಚಾರ್ಯರು—" ಸುಖದುಃಖಗಳೆರಡೂ ಜ್ಞಾನದ ಅವಸ್ಥಾವಿಶೇಷರೂಪಗಳಾದುದರಿಂದ ಮಾನಸಪ್ರತ್ಯಕ್ಷಗ್ರಾಹ್ಯಗಳಾಗದಿದ್ದರೂ ಇಚ್ಛಾದ್ವೇಷ ಪ್ರಯತ್ನಗಳು ಮಾನಸಪ್ರತ್ಯಕ್ಷಕ್ಕೆ ಗೋಚರಗಳಾಗತಕ್ಕುವುಗಳು " ಎಂದು ಹೇಳುವರು.

ಇವರ ಸೂಕ್ತಿಗೆ ಅಭಿಪ್ರಾಯವೇನೆಂದರೆ—ಜ್ಞಾನಕ್ಕಿಂತಲೂ ಭಿನ್ನಗಳಾದ ಇಚ್ಛಾದ್ವೇಷಪ್ರಯತ್ನಗಳೆಂಬ ಕೆಲವು ಗುಣಗಳನ್ನು ಆತ್ಮನಿಗೆ ಅಂಗೀಕರಿಸಬೇಕೆಂದೂ, ಅಂಥ ಗುಣಗಳು ಮಾನಸಪ್ರತ್ಯಕ್ಷಗ್ರಾಹ್ಯಗಳಾಗುವುವೆಂದೂ ಇವರ ಸೂಕ್ತಿಗೆ ಅಭಿಪ್ರಾಯವಿರುವುದಲ್ಲದೆ ಜ್ಞಾನದ ಅವಸ್ಥಾಭೇದಗಳಾದ ಇಚ್ಛಾದ್ವೇಷಪ್ರಯತ್ನಗಳೂ ಸಹ ಮಾನಸಪ್ರತ್ಯಕ್ಷಗ್ರಾಹ್ಯಗಳಾಗುವುವೆಂದು ಅಭಿಪ್ರಾಯವಿಲ್ಲ.

ಅಂಥ ಗುಣಾಂತರಗಳು ಉಂಟೆಂಬುದರಲ್ಲಿ ಪ್ರಮಾಣವೇನೂ ಇಲ್ಲವೆಂದು ಆಶಂಕಿಸುವುದಾದರೆ " ಪರಮತವನ್ನೇ ಹೀಗೆ ಅನುವಾದಮಾಡಿರುತ್ತಾರೆ " ಎಂಬುದಾಗಿಯಾದರೂ ಅಭಿಪ್ರಾಯವನ್ನು ಹೇಳಬೇಕು. ಏತಕ್ಕೆಂದರೆ—ಸುಖದುಃಖಗಳನ್ನು ಜ್ಞಾನಾವಸ್ಥಾಭೇದಗಳಾಗಿ ಒಪ್ಪುವುದಾದರೆ ಇಚ್ಛಾದ್ವೇಷಪ್ರಯತ್ನಗಳನ್ನು ಮಾತ್ರ ಜ್ಞಾನಾವಸ್ಥಾಭೇದಗಳನ್ನಾಗಿ ಒಪ್ಪದಿರಲು ನಿಯಾಮಕವೇನೂ ಇಲ್ಲವಷ್ಟೆ ? ಇವುಗಳನ್ನು ಗುಣಾಂತರಗಳಾಗಿ ಒಪ್ಪುವುದಾದರೆ ಸುಖದುಃಖಗಳ ಅಪರಾಧವೇನು ? ಅವುಗಳನ್ನೂ ಗುಣಾಂತರಗಳಾಗಿ ಒಪ್ಪಬಹುದಲ್ಲವೆ.

## ೯೩೫. ಸುಖದುಃಖಯೋಃ ಪರಸ್ಪರಾಭಾವರೂಪತ್ವಾಶಂಕಾ.

"ಪೂಜ್ಯರೆ! ಸುಖದುಃಖಗಳನ್ನು ಜ್ಞಾನಾವಸ್ಥಾವಿಶೇಷಗಳಾಗಿ ಹೇಗೆ ಹೇಳಲಾದೀತು? ದುಃಖವಿಲ್ಲದಿರುವಿಕೆಯೇ ಸುಖವೆನಿಸಿಕೊಳ್ಳುವುದು; ಸುಖವಿಲ್ಲದಿರುವಿಕೆಯೇ ದುಃಖವೆನಿಸಿಕೊಳ್ಳುವುದು. ಹೀಗೆ ಸುಖದುಃಖಗಳೆರಡೂ ದುಃಖಸುಖಗಳ ಅಭಾವರೂಪಗಳಾಗಿರುವುದರಿಂದಲೂ, ಜ್ಞಾನವೆಂಬುದು ಭಾವರೂಪವಾದ ದ್ರವ್ಯವಾಗಿರುವುದರಿಂದಲೂ, ಅಭಾವಪದಾರ್ಥಗಳಿಗೆ ಭಾವಪದಾರ್ಥದೊಡನೆ ಐಕ್ಯವು ಸಂಭವಿಸುವುದಿಲ್ಲವಾದುದರಿಂದಲೂ ಸುಖದುಃಖಗಳನ್ನು ಜ್ಞಾನದ ಅವಸ್ಥಾವಿಶೇಷಗಳಾಗಿ ಹೇಳಲಾಗುವುದಿಲ್ಲವಷ್ಟೆ?"

## ೯೩೬. ತನ್ನಿರಾಕರಣಪೂರ್ವಕಂ ತಯೋರ್ಜ್ಞಾನಾವಸ್ಥಾವಿಶೇಷತ್ವಸ್ಥಿರೀಕರಣಂ.

ಇದು ಸಂಗತವಲ್ಲ. ಜ್ಞಾನದಂತೆ ಸುಖದುಃಖಗಳನ್ನೂ ಭಾವಪದಾರ್ಥಗಳಾಗಿ ಒಪ್ಪಬೇಕಲ್ಲದೆ ಪರಸ್ಪರಾಭಾವರೂಪಗಳಾಗಿ ಹೇಳಲಾಗುವುದಿಲ್ಲ. ಹಾಗೆ ಹೇಳುವುದಾದರೆ—ಪ್ರತಿಯೋಗಿಪದಾರ್ಥವನ್ನು ತಿಳಿದುಕೊಳ್ಳದೆ ಅಭಾವಪದಾರ್ಥವನ್ನು ತಿಳಿದುಕೊಳ್ಳಲಾಗುವುದಿಲ್ಲವಾದಕಾರಣ ದುಃಖಾಭಾವರೂಪವಾದ ಸುಖವನ್ನು ತಿಳಿದುಕೊಳ್ಳುವುದಕ್ಕಾಗಿ ದುಃಖಪದಾರ್ಥವನ್ನು ಮೊದಲು ತಿಳಿದುಕೊಳ್ಳಬೇಕಾಗಿ ಬರುವುದು. ಇಂಥ ದುಃಖವೆಂಬುದೂ ಸುಖಾಭಾವರೂಪವಾದುದರಿಂದ ದುಃಖವನ್ನು ತಿಳಿದುಕೊಳ್ಳುವುದಕ್ಕಾಗಿ ಸುಖಪದಾರ್ಥವನ್ನು ಮೊದಲು ತಿಳಿದುಕೊಳ್ಳಬೇಕಾಗಿ ಬರುವುದು. ಹೀಗೆ ಅನ್ಯೋನ್ಯಾಶ್ರಯವುಂಟಾಗಿ ದುಃಖಜ್ಞಾನವಿಲ್ಲದೆ ಸುಖಜ್ಞಾನವೂ; ಸುಖಜ್ಞಾನವಿಲ್ಲದೆ ದುಃಖಜ್ಞಾನವೂ ಉಂಟಾಗುವುದಕ್ಕೆ ಅವಕಾಶವೇ ಇಲ್ಲದೆ ಹೋಗಬೇಕಾಗಿ ಬರುವುದರಿಂದ ಸುಖದುಃಖಗಳನ್ನು ಭಾವರೂಪವಾದ ಜ್ಞಾನದ ಅವಸ್ಥಾವಿಶೇಷಗಳಾಗಿಯೇ ಒಪ್ಪಬೇಕಲ್ಲದೆ ಪರಸ್ಪರಾಭಾವರೂಪಗಳಾಗಿ ಹೇಳಲಾಗುವುದಿಲ್ಲ.

## ೯೩೭. ಪ್ರತ್ಯಕ್ಷವಿಶೇಷಾದಪಿ ಸುಖದುಃಖಯೋರ್ಭಾವರೂಪತ್ವಸಿದ್ಧಿಃ.

ಮತ್ತು—"ಬುದ್ಧಿವಂತರಿಗೆ ದುಃಖವಿಲ್ಲವೆಂಬುದು ಮಾತ್ರವೇ ಅಲ್ಲ ಸುಖವೂ ಉಂಟು. ಬುದ್ಧಿಹೀನರಾದ ಮೂರ್ಖರಿಗೆ ಸುಖವಿಲ್ಲವೆಂಬುದು ಮಾತ್ರವೇ ಅಲ್ಲ ದುಃಖವೂ ಉಂಟು" ಎಂಬ ಇಂಥ ಲೋಕಾನುಭವದಲ್ಲಿ ಪರಸ್ಪರಾಭಾವಕ್ಕಿಂತಲೂ ಅತಿರಿಕ್ತಗಳಾಗಿಯೂ ಭಾವರೂಪಗಳಾಗಿಯೂ ಇರುವ ಸುಖದುಃಖ

ಪದಾರ್ಥಗಳು ಸರ್ವರ ಅನುಭವಕ್ಕೂ ಗೋಚರಗಳಾಗಿರುವುವೆಂಬುದು ಪ್ರತ್ಯಕ್ಷ ಸಿದ್ಧವಾಗಿರುವುದು. ಇಂಥ ಪ್ರತ್ಯಕ್ಷಪ್ರಮಾಣದಿಂದಲೇ ಸುಖದುಃಖಗಳಿಗೆ ಪರಸ್ಪರಾಭಾವರೂಪತ್ವವು ಬಾಧಿಸಲ್ಪಟ್ಟು ಭಾವರೂಪತ್ವವೇ ಸ್ಥಿರಪಡಿಸಲ್ಪಡುವುದು.

## ೯೩೮ ಮಧ್ಯಮಾವಸ್ಥೋಪಲಂಭಾದಪಿ ಸುಖದುಃಖಯೋರ್ನ ಪರಸ್ಪರಾಭಾವರೂಪತ್ವಂ

ಮತ್ತು ನಾವು ಜಾಗ್ರದವಸ್ಥೆಯಲ್ಲಿ ಇರುವಾಗ ಕೆಲವು ಸಮಯಗಳಲ್ಲಿ ನಮಗೆ ಸುಖದುಃಖಗಳೆರಡರ ಸಂಬಂಧವೂ ಇಲ್ಲದೆ ಮಧ್ಯಮಾವಸ್ಥೆಯೊಂದು ಉಂಟಾಗುತ್ತಿರುವುದನ್ನು ನಾವೆಲ್ಲರೂ ಬಲ್ಲೆವು. ಸುಖದುಃಖಗಳು ಪರಸ್ಪರಾಭಾವ ರೂಪಗಳಾಗಿ ಇರುವ ಪಕ್ಷದಲ್ಲಿ ಒಂದಿಲ್ಲದಿದ್ದಾಗ ಮತ್ತೊಂದು ಆವಶ್ಯಕವಾಗಿಯೂ ಇರಬೇಕಾದುದರಿಂದ ಇವೆರಡರ ಸಂಬಂಧವೂ ಇಲ್ಲದ ಮಧ್ಯಮಾವಸ್ಥೆಯೆಂಬುದೊಂದು ಅವಸ್ಥೆ ನಮಗೆ ಉಂಟಾಗಲಿಕ್ಕೆ ಅವಕಾಶವೇ ಇಲ್ಲದಂತಾಗುವುದು.

ಯದ್ಯಪಿ ಇಂಥ ಮಧ್ಯಮಾವಸ್ಥೆ ನಮಗೆ ಸುಷುಪ್ತ್ಯವಸ್ಥೆಯಲ್ಲಿಯೇ ಸಂಭವಿಸೀತು. ಏತಕ್ಕೆಂದರೆ ಆಗ ಸಕಲೇಂದ್ರಿಯಗಳೂ ವಿಶ್ರಾಂತಿಯನ್ನು ಹೊಂದಿರುವುದರಿಂದ ಸುಖದುಃಖಜ್ಞಾನವುಂಟಾಗುವುದಕ್ಕೆ ಅವಕಾಶವಿಲ್ಲವಾಗಿ ಉಭಯ ಸಂಬಂಧರಹಿತವಾದ ಮಧ್ಯಮಾವಸ್ಥೆ ನಮಗೆ ಆಗಲೇ ಸಂಭವಿಸುವುದಾಗಿರುವುದು. ಆದರೂ ಸುಷುಪ್ತ್ಯವಸ್ಥೆಯಲ್ಲಿ ಜ್ಞಾನಕ್ಕೆ ಪ್ರಸರಣವೇ ಇಲ್ಲವಾದುದರಿಂದ ಆಗ ಇರುವ ಮಧ್ಯಮಾವಸ್ಥೆ ಪ್ರತ್ಯಕ್ಷಜ್ಞಾನಕ್ಕೆ ಗೋಚರವಾಗಿರುವುದೆಂದು ಹೇಳಲಿಕ್ಕೆ ಅವಕಾಶವಿಲ್ಲ. ಆದಕಾರಣ ಜಾಗ್ರದವಸ್ಥೆಯಲ್ಲಿರುವ ಅಂಥ ಮಧ್ಯಮಾವಸ್ಥೆಯನ್ನೇ ಉದಾಹರಣವಾಗಿ ತೋರಿಸಿರುವೆವು.

ಹೀಗೆ ಉಕ್ತವಾದ ಅನ್ಯೋನ್ಯಾಶ್ರಯ, ಪ್ರತ್ಯಕ್ಷಬಾಧೆ, ಮಧ್ಯಮಾವಸ್ಥಾ ಪ್ರತ್ಯಕ್ಷ, ಎಂಬ ಈ ಮೂರು ಯುಕ್ತಿಗಳಿಂದಲೂ ಸುಖದುಃಖಗಳಿಗೆ ಪರಸ್ಪರಾಭಾವರೂಪತ್ವವು ನಿರಾಕರಿಸಲ್ಪಡುವುದಾದುದರಿಂದ ಭಾವರೂಪತ್ವವನ್ನೇ ಒಪ್ಪಿಕೊಂಡು ಜ್ಞಾನಾವಸ್ಥಾವಿಶೇಷರೂಪತ್ವವನ್ನೇ ಇವುಗಳಿಗೆ ಹೇಳಬೇಕು. ಈ ಮೂರು ಯುಕ್ತಿಗಳನ್ನೂ ಹಿರಿಯರು—

"ಮಿಥಸ್ಸಂಶ್ರಯಧೀಬಾಧಮಧ್ಯಾವಸ್ಥೋಪಲಂಭನೈಃ ।
ನ ಸ್ಯಾತ್ಪರಸ್ಪರಾಭಾವಮಾತ್ರತಾ ಸುಖದುಃಖಯೋಃ ॥"

ಎಂಬ ಒಂದು ಕಾರಿಕೆಯಲ್ಲಿ ಸಂಗ್ರಹಿಸಿರುವರು.—

## ೯೩೯. ಪ್ರತಿಜೀವಂ ಧರ್ಮಭೂತಜ್ಞಾನಸ್ಯ ಭಿನ್ನಭಿನ್ನತ್ವಂ

ಇಂಥ ಧರ್ಮಭೂತಜ್ಞಾನವು ಸಮಸ್ತಚೇತನರಿಗೂ ಒಂದೇ ಧರ್ಮ ಭೂತಜ್ಞಾನವಾಗಿಲ್ಲ. ಪ್ರತಿಶರೀರದಲ್ಲಿಯೂ ಜೀವನು ಭಿನ್ನಭಿನ್ನನಾಗಿರುವಂತೆ ಪ್ರತಿಜೀವನಲ್ಲಿಯೂ ಧರ್ಮಭೂತಜ್ಞಾನವೂ ಭಿನ್ನಭಿನ್ನವಾಗಿರುವುದು.

## ೯೪೦ ಜೀವಸ್ಯ ಬಂಧಾವಸ್ಥಾಯಾಂ ಜ್ಞಾನಸ್ಯ ಸಂಕೋಚವಿಕಾಸತಾರತಮ್ಯಭಾಗಿತ್ವಂ

ಸಕಲಬ್ರಹ್ಮಾಂಡೋದರದಲ್ಲಿಯೂ, ನಿತ್ಯವಿಭೂತಿಯಲ್ಲಿಯೂ ಇರುವ ಸಕಲಪದಾರ್ಥಗಳನ್ನೂ ಸರ್ವದಾ ಸಾಕ್ಷಾತ್ಕರಿಸುವಿಕೆಯೇ ಈ ಧರ್ಮಭೂತ ಜ್ಞಾನಕ್ಕೆ ಸ್ವಾಭಾವಿಕವಾಗಿ ಇದ್ದರೂ ಸಂಸಾರಾವಸ್ಥೆಯಲ್ಲಿ ಕರ್ಮವೆಂಬ ಅವಿದ್ಯೆಯ ಪ್ರಭಾವದಿಂದ ಇದರ ಶಕ್ತಿ ಕುಂಠಿತವಾಗಿರುವಕಾರಣ ಕರ್ಮದ ತಾರತಮ್ಯಕ್ಕೆ ಅನುಸಾರವಾಗಿ ಇದಕ್ಕೂ ತಾರತಮ್ಯವು ಏರ್ಪಟ್ಟು ಇಂದ್ರಿಯಗಳ ಮೂಲಕವಾಗಿಯೇ ಇದಕ್ಕೆ ಪ್ರಸರಣವುಂಟಾಗಬೇಕೆಂಬ ನಿರ್ಬಂಧವೂ ಬಂದೊದಗಿರುವುದು. ಹೀಗೆ ಜ್ಞಾನಪ್ರಸರಣದ ತಾರತಮ್ಯವಿರುವುದರಿಂದಲೇ ಪ್ರಾಣಿಗಳಲ್ಲಿಯೂ ಪರಸ್ಪರ ತಾರತಮ್ಯವುಂಟೆಂಬುದನ್ನು ಮಾನವಧರ್ಮಶಾಸ್ತ್ರದಲ್ಲಿ ಸ್ವಾಯಂಭುವಮನುಚಕ್ರವರ್ತಿ—

" ಭೂತಾನಾಂ ಪ್ರಾಣಿನಃ ಶ್ರೇಷ್ಠಾಃ ಪ್ರಾಣಿನಾಂ ಬುದ್ಧಿಜೀವಿನಃ ।
ಬುದ್ಧಿಮತ್ಸು ನರಾಃ ಶ್ರೇಷ್ಠಾ ನರೇಷು ಬ್ರಾಹ್ಮಣಾಃ ಸ್ಮೃತಾಃ ॥
ಬ್ರಾಹ್ಮಣೇಷು ಚ ವಿದ್ವಾಂಸೋ ವಿದ್ವತ್ಸು ಕೃತಬುದ್ಧಯಃ ।
ಕೃತಬುದ್ಧಿಷು ಕರ್ತಾರಃ ಕರ್ತೃಷು ಬ್ರಹ್ಮವೇದಿನಃ ॥ "

ಎಂದು ಅಪ್ಪಣೆಕೊಡಿಸಿರುವರು.

## ೯೪೧ ಜ್ಞಾನಸ್ಯ ನಿತ್ಯತ್ವೇಽಪಿ ಇಂದ್ರಿಯದ್ವಾರಕಪ್ರಸರಣತದಭಾವಾಭ್ಯಾಮೇವ ಅಸ್ಯೋತ್ಪತ್ತಿವಿನಾಶವ್ಯವಹಾರೋಪಪತ್ತಿಃ.

ಜ್ಞಾನವೆಂಬ ವಸ್ತು ಆತ್ಮನಿಗೆ ಅಪೃಥಕ್ಸಿದ್ಧವಾಗಿ ನಿತ್ಯವಾಗಿದ್ದರೂ ಇಂದ್ರಿಯಗಳ ಮೂಲಕವಾಗಿ ಇದಕ್ಕೆ ಪ್ರಸರಣವಿರುವಾಗ " ಜ್ಞಾನವು ಉತ್ಪನ್ನವಾಯಿತು " ಎಂಬ ವ್ಯವಹಾರವೂ, ಪ್ರಸರಣವಿಲ್ಲದಿರುವಾಗ "ಜ್ಞಾನವಿಲ್ಲ" ಎಂಬ ವ್ಯವಹಾರವೂ ಉಂಟಾಗಲು ತಡೆಯಿಲ್ಲ. ಜ್ಞಾನವೆಂಬುದು ನಿತ್ಯವಾಗಿರುವುದಾದರೆ ಇದಕ್ಕೆ ಉತ್ಪತ್ತಿವಿನಾಶವ್ಯವಹಾರಗಳು ಹೇಗೆ ಕೂಡುವುವೆಂಬ ಆಶಂಕೆಗೆ ಸಮಾಧಾನವೂ ಇದರಿಂದಲೇ ಸಿದ್ಧವಾಗುವುದು. ಸಂಸಾರಾವಸ್ಥೆಯಲ್ಲಿ ಜ್ಞಾನಕ್ಕೆ

ಸಂಕೋಚವಿರುವುದೆಂಬುದನ್ನೂ, ಇಂದ್ರಿಯಗಳ ಮೂಲಕವಾಗಿಯೇ ಇದಕ್ಕೆ ಈಗ ಪ್ರಸರಣವುಂಟಾಗಬೇಕೆಂಬ ನಿರ್ಬಂಧವಿರುವುದನ್ನೂ ತೋರಿಸಿದುದರಿಂದ ಉತ್ಪತ್ತಿವಿನಾಶವ್ಯವಹಾರಗಳು ಇದಕ್ಕೆ ಕೂಡಬಹುದಷ್ಟೆ?

## ೯೪೨. ಜ್ಞಾನಸ್ಯ ಧಾರಾವಾಹಿಕತ್ವಾಖ್ಯಾವಸ್ಥಾವಿಶೇಷ ನಿರೂಪಣಂ.

ಯಾವುದಾದರೊಂದು ಪದಾರ್ಥದ ವಿಷಯದಲ್ಲಿ "ಇದು ಇಂಥದು" ಎಂಬುದಾಗಿ ನಮಗೆ ಉಂಟಾದ ಜ್ಞಾನವು ಜ್ಞಾನಾಂತರದಿಂದ ವಿಚ್ಛೇದವನ್ನು ಹೊಂದದೆ ಚಿರಕಾಲದವರೆಗೂ ಎಂದರೆ ಬಹಳಹೊತ್ತಿನವರೆಗೂ ಅನುವರ್ತಿಸುವುದಾದರೆ ಅಂಥ ಜ್ಞಾನವು ಧಾರಾವಾಹಿಕಜ್ಞಾನವೆಂಬುದಾಗಿ ಶಾಸ್ತ್ರದಲ್ಲಿ ವ್ಯವಹರಿಸಲ್ಪಡುವುದು.

## ೯೪೩ ಅಸ್ಯ ಚ ಧಾರಾವಾಹಿಕಜ್ಞಾನಸ್ಯ ಏಕರೂಪತ್ವ ಸಂತತಿರೂಪತ್ವವಿಪ್ರತಿಪತ್ತಿಃ.

ಇಂಥ ಧಾರಾವಾಹಿಕಜ್ಞಾನದ ವಿಷಯದಲ್ಲಿ ಈಗ ವಿಮರ್ಶಿಸಬೇಕಾದ ಅಂಶವೇನೆಂದರೆ—ಈ ಧಾರಾವಾಹಿಕವಿಜ್ಞಾನವು ಒಂದೇ ಜ್ಞಾನವೋ? ಅಥವಾ ಸಮಾನಾಕಾರಗಳಾದ ಅನೇಕಜ್ಞಾನವ್ಯಕ್ತಿಗಳ ಪ್ರವಾಹವೋ? ಎಂದರೆ— ಸೂರ್ಯಮಂಡಲದಿಂದ ಹೊರಟಿರುವ ದೀರ್ಘಕಿರಣದಂತೆಯೂ, ರತ್ನಗಳಿಂದ ಹೊರಟಿರುವ ದೀರ್ಘಕಾಂತಿಗಳಂತೆಯೂ, ದೀಪದಿಂದ ಹೊರಟಿರುವ ದೀರ್ಘಪ್ರಭೆಯಂತೆಯೂ ಆತ್ಮನಿಂದ ಹೊರಟು ವಿಷಯಪ್ರದೇಶಪರ್ಯಂತವೂ ಎಡೆಬಿಡದೆ ನಿಂತಿರುವ ಈ ಜ್ಞಾನವು ಏಕಜ್ಞಾನವಾಗಿರುವುದೋ? ಅಥವಾ ಎಣ್ಣೆ ಬತ್ತಿ ಮೊದಲಾದ ಹೊಸಹೊಸಸಾಮಗ್ರಿಗಳಿಂದ ಪ್ರತಿಕ್ಷಣದಲ್ಲಿಯೂ ಹೊಸಹೊಸದಾಗಿ ಉಂಟು ಮಾಡಲ್ಪಡುತ್ತಿರುವ ಸಜಾತೀಯದೀಪಜ್ವಾಲೆಗಳಂತೆ ಸಂತತಿರೂಪವಾಗಿರುವುದೋ? ಎಂಬ ಅಂಶವನ್ನು ವಿಮರ್ಶಿಸಬೇಕು.

## ೯೪೪ ತತ್ರ ವರದನಾರಾಯಣಭಟ್ಟಾರಕಮತೇನ ಏಕಜ್ಞಾನತ್ವ ಪಕ್ಷೋಪಪಾದನಂ

ಪ್ರಜ್ಞಾಪರಿತ್ರಾಣವೆಂಬ ಗ್ರಂಥದಲ್ಲಿ—ವರದನಾರಾಯಣಭಟ್ಟಾರ್ಯರು ಸಂತತಿಪಕ್ಷವನ್ನು ಪರಪಕ್ಷವನ್ನಾಗಿ ಮೊದಲು ತೋರಿಸಿ—ದೀರ್ಘಕಿರಣದಂತೆ ಏಕಜ್ಞಾನವಾಗಿಯೇ ಇರುವುದೆಂಬ ಪಕ್ಷವನ್ನು ಸ್ವಪಕ್ಷವಾಗಿ—

"ಧಾರಾವಾಹಿಕಪಜ್ಞಿತ್ರೌ ಸ್ವಕಾಲೀನಾರ್ಥಭಾಸಿಕಾ ।
ನೇಧಾತಿರೇಕಸದ್ಭಾವಾನ್ನೈರಪೇಕ್ಷ್ಯಾದಪಿ ಪ್ರಮಾ ॥
ಸ್ತಂಭಃ ಸ್ತಂಭಃ ಸ್ತಂಭ ಇತಿ ಧೀರ್ಧಾರಾವಾಹಿಕಾ ಮತಾ ।
ಧಾರಾವಾಹಿಕವಿಜ್ಞಾನಮನೇಕಂ ಜ್ಞಾನಂ ಮತಂ ಹಿ ನಃ ॥
ಪ್ರತಿಬಂಧಾಂಶನೋಕ್ಷ್ಯಾದ್ಯೈ ರ್ನಿತ್ಯಂ ಜ್ಞಾನಂ ಹಿ ಜಾಯತೇ ।
ಚಿರಮಪ್ರತಿಬಂಧೇನ ಚಿರಂ ತಿಷ್ಠತಿ ಭಾಸಕಂ ॥
ಚಿರಸ್ಥಿತಾರ್ಥಧೀರೇವ ನ ಧಾರವಾಹಿಕಾ ತು ಸಾ ।
ನ ಹೀಶ್ವರಾದಿವಿಜ್ಞಾನಮಾಗಮಾದಿಜಮಿಷ್ಯತೇ ॥
ನಿತ್ಯಂ ಹಿ ತದತೋ ನಿತ್ಯಂ ಸರ್ವೇಷಾಂ ಜ್ಞಾನಮಾಗಮಾತ್"

ಎಂಬ ಈ ಕಾರಿಕೆಗಳಲ್ಲಿ ತೋರಿಸಿರುವರು. ಈ ಒಂಬತ್ತು ಅರ್ಧಶ್ಲೋಕಗಳೊಳಗೆ ಮೊದಲನೆಯ ಮೂರು ಅರ್ಧಶ್ಲೋಕಗಳಿಂದ ಸಂತತಿಪಕ್ಷವು ಪರಪಕ್ಷವಾಗಿರುವುದೆಂಬುದನ್ನೂ, ಉಳಿದ ಆರು ಅರ್ಧಶ್ಲೋಕಗಳಿಂದ ದೀರ್ಘಕಿರಣದಂತೆ ಏಕಜ್ಞಾನವಾಗಿರುವುದೆಂಬ ಪಕ್ಷವು ಸ್ವಪಕ್ಷವಾಗಿರುವುದೆಂಬುದನ್ನೂ ತೋರಿಸಿರುವರು.

ಪರಪಕ್ಷವನ್ನು ತೋರಿಸುವ ಮೂರು ಅರ್ಧಶ್ಲೋಕಗಳ ಅಭಿಪ್ರಾಯವೇನೆಂದರೆ—"**ಇದು ಸ್ತಂಭವಾಗಿರುವುದು-ಇದು ಸ್ತಂಭವಾಗಿರುವುದು-ಇದು ಸ್ತಂಭವಾಗಿರುವುದು**" ಎಂಬುದಾಗಿ ಸ್ತಂಭವೆಂಬ ಒಂದೇ ವಿಷಯದಲ್ಲಿ ವಿಚ್ಛೇದವಿಲ್ಲದೆ ಬಹಳಹೊತ್ತಿನವರೆಗೂ ಉಂಟಾಗುತ್ತಿರುವ ಸಮಾನಾಕಾರಗಳಾದ ಅನೇಕಜ್ಞಾನವ್ಯಕ್ತಿಗಳು ಸಂತತಿರೂಪಗಳಾಗಿರುವುದರಿಂದ ಇಂಥ ಜ್ಞಾನಸಂತತಿ ಧಾರಾವಾಹಿಕಜ್ಞಾನವೆನಿಸಿಕೊಳ್ಳುವುದು.

ಈ ಜ್ಞಾನಸಂತತಿಯಲ್ಲಿ—ಉತ್ತರೋತ್ತರಕ್ಷಣಗಳಲ್ಲಿ ಉಂಟಾಗುವ ಜ್ಞಾನವ್ಯಕ್ತಿಗಳು ಪೂರ್ವಪೂರ್ವಕ್ಷಣಗಳಲ್ಲಿ ಉಂಟಾಗಿದ್ದ ಜ್ಞಾನವ್ಯಕ್ತಿಗಳಿಂದ ಗ್ರಹಿಸಲ್ಪಟ್ಟಿದ್ದ ಸ್ತಂಭಮಾತ್ರವನ್ನೇ ಗ್ರಹಿಸುವಂಥವುಗಳಾಗಿದ್ದಪಕ್ಷದಲ್ಲಿ ಚರ್ವಿತಚರ್ವಣದಂತೆಯೂ ಪಿಷ್ಟಪೇಷಣದಂತೆಯೂ ಉತ್ತರೋತ್ತರಜ್ಞಾನವ್ಯಕ್ತಿಗಳು ನಿಷ್ಪ್ರಯೋಜನಗಳಾಗಿ ಅಪ್ರಮಾಣಗಳೆನಿಸಿಕೊಳ್ಳುತ್ತಿದ್ದುವು. ಆದರೆ ಹಾಗಿಲ್ಲದೆ ಪ್ರತಿಕ್ಷಣದಲ್ಲಿರುವ ಜ್ಞಾನವ್ಯಕ್ತಿಯೂ ತನ್ನ ತನ್ನ ಕ್ಷಣದೊಡನೆ ಕೂಡಿರುವ ಸ್ತಂಭವನ್ನೇ ಗ್ರಹಿಸುವುದಲ್ಲದೆ ಕೇವಲಸ್ತಂಭವನ್ನು ಗ್ರಹಿಸುವುದಿಲ್ಲವಾದುದರಿಂದ ಪೂರ್ವಪೂರ್ವಜ್ಞಾನದಿಂದ ಅಗೃಹೀತವಾದ ಉತ್ತರೋತ್ತರಕ್ಷಣದೊಡನೆ ವಿಶಿಷ್ಟವಾದ ಸ್ತಂಭವನ್ನು ಗ್ರಹಿಸುವ ಉತ್ತರೋತ್ತರಜ್ಞಾನವ್ಯಕ್ತಿಗಳಿಗೆ ಸಪ್ರಯೋಜನತ್ವವಿರುವುದರಿಂದ ಪಿಷ್ಟಪೇಷಣನ್ಯಾಯಕ್ಕೆ ಅವಕಾಶವಿಲ್ಲವಾಗಿ ಅಪ್ರಾಮಾ

ಣ್ಯಾಕ್ಕೂ ಅವಕಾಶವಿಲ್ಲ. ಇದೇ ಅರ್ಥವನ್ನು "**ಮೇಧಾತಿರೇಕಸದ್ಭಾವಾತ್**" ಎಂಬ ಪದದಿಂದ ತೋರಿಸಿರುವರು.

ಮತ್ತು—ಸ್ಮರಣವೆಂಬ ಜ್ಞಾನವಿಶೇಷವು—ತಾನು ಪ್ರಮಾಣವೆನಿಸಿಕೊಳ್ಳ ಬೇಕಾದರೆ ತನಗೆ ಮೂಲಭೂತವಾದ ಅನುಭವವೆಂಬ ಜ್ಞಾನಾಂತರವನ್ನೇ ಹೇಗೆ ಎದುರುನೋಡುತ್ತಿರುವುದೋ ; ಮತ್ತು ಮೂಲವು ದೊರೆಯದಿದ್ದರೆ ಹೇಗೆ ಅಪ್ರ ಮಾಣವೆನಿಸಿಕೊಳ್ಳುವುದೋ, ಅದರಂತೆ ಅಲ್ಲ ಈ ಧಾರಾವಾಹಿಕಜ್ಞಾನವು ; ಜ್ಞಾನಾಂತರವನ್ನು ಪ್ರತೀಕ್ಷಿಸದೆಯೇ ಸ್ವತಂತ್ರವಾಗಿ ಪ್ರಮಾಣವೆನಿಸಿಕೊಳ್ಳು ವುದು. ಇದೇ ಅರ್ಥವನ್ನು "**ನೈರಪೇಕ್ಷ್ಯಾದಪಿ**" ಎಂಬ ಪದದಿಂದ ತೋರಿ ಸಿರುವರು. ಇಂಥ ಸಂತತಿರೂಪವಾದ ಧಾರಾವಾಹಿಕವಿಜ್ಞಾನವು ಕೆಲವರಿಗೆ ಅಭಿ ಮತವಾಗಿರುವುದೆಂಬ ಅರ್ಥವನ್ನು "**ಮತಾ**" ಎಂಬ ಪದದಿಂದ ತೋರಿಸಿರುವರು.

ಹೀಗೆ ಮೂರು ಅರ್ಧಶ್ಲೋಕಗಳಿಂದ ಪರಮತವನ್ನು ತೋರಿಸಿ ಧಾರಾ ವಾಹಿಕಜ್ಞಾನವು ದೀರ್ಘಕಿರಣದಂತೆ ಏಕಜ್ಞಾನವಾಗಿರುವುದಲ್ಲದೆ ಸಂತತಿರೂಪ ವಲ್ಲವೆಂಬ ಸ್ವಪಕ್ಷವನ್ನು ಮೇಲೆ ಆರು ಅರ್ಧಶ್ಲೋಕಗಳಿಂದ ತೋರಿಸುವರು. ಅವುಗಳಲ್ಲಿ ಸ್ವಪಕ್ಷವನ್ನು ಪ್ರತಿಜ್ಞಾರೂಪವಾಗಿ ತೋರಿಸುವಿಕೆಯೇ ಮೊದಲನೆಯ ಅರ್ಧಕ್ಕೆ ಅರ್ಥವಾಗಿರುವುದು.

## ೯೪೫ ಪ್ರತಿಕ್ಷಣಮಿಂದ್ರಿಯಸಂಯೋಗಭೇದಾತ್ ಧಾರಾವಾಹಿಕ ಸ್ಯಾಪಿ ಭೇದಾಪತ್ತ್ಯಾ ಏಕರೂಪತ್ವಾನುಪಪತ್ತ್ಯಾಶಂಕಾ

ಪೂಜ್ಯರೆ ? ಧಾರಾವಾಹಿಕಜ್ಞಾನವು ಸಂತತಿರೂಪವಲ್ಲವೆಂದೂ, ಏಕಜ್ಞಾ ನವಾಗಿರುವುದೆಂದೂ ಹೇಳಲಾಗುವುದಿಲ್ಲ. ಹೇಗೆಂದರೆ—ಆ ಆ ಪದಾರ್ಥಗಳ ಜ್ಞಾನವುಂಟಾಗಬೇಕಾದರೆ ಆ ಆ ಪದಾರ್ಥಗಳನ್ನು ಗ್ರಹಿಸುವ ಇಂದ್ರಿಯಗಳಿಗೆ ಆ ಆ ಪದಾರ್ಥಗಳೊಡನೆ ಸಂಯೋಗವುಂಟಾಗಬೇಕು. ಇದರಿಂದ ಜ್ಞಾನೋ ತ್ಪತ್ತಿಗೆ ಅಥವಾ ಜ್ಞಾನದ ಪ್ರಸರಣಕ್ಕೆ ವಿಷಯೇಂದ್ರಿಯಗಳ ಸಂಯೋಗವು ಕಾರಣವಾಗುವುದೆಂದು ಸಿದ್ಧವಾಯಿತು. ಕಾರಣವು ಪುನಃ ಪುನಃ ಉಂಟಾಗುವು ದೆಂಬುದರಲ್ಲಿ ವಿವಾದವಿಲ್ಲ. ಹೀಗಿರುವುದಾದರೆ ಧಾರಾವಾಹಿಕಜ್ಞಾನಸ್ಥಳದಲ್ಲಿ ವಿಷ ಯದೊಡನೆ ಇಂದ್ರಿಯಕ್ಕೆ ಪ್ರತಿಕ್ಷಣದಲ್ಲಿಯೂ ಸಂಯೋಗವು ಉಂಟಾಗುತ್ತಲೇ ಇರುವುದರಿಂದ ಜ್ಞಾನವೂ ಪ್ರತಿಕ್ಷಣದಲ್ಲಿಯೂ ಉಂಟಾಗುತ್ತಲೇ ಇರುವು ದೆಂದು ಹೇಳಬೇಕಾದುದು ಆವಶ್ಯಕವಾದಕಾರಣ ಪ್ರತಿಕ್ಷಣದಲ್ಲಿಯೂ ಭಿನ್ನಭಿನ್ನ ಜ್ಞಾನವ್ಯಕ್ತಿಗಳು ಉಂಟಾಗುವುವು. ಇಂಥ ಜ್ಞಾನವ್ಯಕ್ತಿಗಳ ಸಂತತಿಯೇ

ಧಾರಾವಾಹಿಕಜ್ಞಾನವೆನಿಸಿಕೊಳ್ಳುತ್ತಿರುವಲ್ಲಿ ಇದಕ್ಕೆ ಏಕರೂಪತ್ವವನ್ನು ಹೇಗೆ ಹೇಳಲಾದೀತು?"

## ೯೪೩ ಇಂದ್ರಿಯಸಂಯೋಗಸ್ಯ ಪ್ರತಿಬಂಧನಿರಾಸಮಾತ್ರೋಪಯೋಗಿತ್ವಾತ್ ಧಾರಾವಾಹಿಕಸ್ಯ ಏಕರೂಪತ್ವೋಪಪತ್ತಿ:

ಇಂಥ ಆಶಂಕೆಯನ್ನು ಪರಿಹರಿಸುವುದಕ್ಕೋಸ್ಕರ "**ಪ್ರತಿಬಂಧಾಂಶಮೋಕ್ಷಾದ್ಯೈರ್ನಿತ್ಯಂ ಜ್ಞಾನಂ ಹಿ ಜಾಯತೇ**" ಎಂಬ ಎರಡನೆಯ ಅರ್ಧವು ಹೊರಟಿರುವುದು. ಇದರ ಅಭಿಪ್ರಾಯವೇನೆಂದರೆ—ಆತ್ಮನೆನಿಸಿಕೊಂಡ ಜೀವನಿಗೆ ಧರ್ಮಭೂತಜ್ಞಾನವೆಂಬುದು ನಿತ್ಯವಾಗಿರುವುದಾದುದರಿಂದ ವಿಷಯೇಂದ್ರಿಯಸಂಯೋಗವು ಜ್ಞಾನಸ್ವರೂಪೋತ್ಪತ್ತಿಗೆ ಕಾರಣವಲ್ಲ. ಮಣಿ-ದ್ಯುಮಣಿ-ದೀಪಗಳ ಪ್ರಭೆಗಳಿಗೆ ಪ್ರಸರಣಶಕ್ತಿ ಹೇಗೆ ಸ್ವಾಭಾವಿಕವಾಗಿರುವುದೋ ಅದರಂತೆ ಧರ್ಮಭೂತಜ್ಞಾನಕ್ಕೂ ಪ್ರಸರಣಶಕ್ತಿಯೂ ಸ್ವಾಭಾವಿಕವಾಗಿಯೇ ಇರುವುದರಿಂದ ವಿಷಯೇಂದ್ರಿಯಸಂಯೋಗವು ಜ್ಞಾನಪ್ರಸರಣಕ್ಕೂ ಕಾರಣವಾಗುವುದಿಲ್ಲ. ಆದರೂ "ಈ ವಿಷಯೇಂದ್ರಿಯಸಂಯೋಗಕ್ಕೆ ಉಪಯೋಗವೇ ಇಲ್ಲವಾದರೆ ವಿಷಯೇಂದ್ರಿಯಸಂಯೋಗವಿಲ್ಲದೆಯೇ ಘಟಾದಿಜ್ಞಾನವುಂಟಾಗಲಿ" ಎಂದು ಆಕ್ಷೇಪಿಸಬೇಡಿರಿ; ವಿಷಯೇಂದ್ರಿಯಸಂಯೋಗಕ್ಕೆ ಜ್ಞಾನಸ್ವರೂಪೋತ್ಪತ್ತಿಯಲ್ಲಿಯಾಗಲಿ ಜ್ಞಾನಪ್ರಸರಣದಲ್ಲಿಯಾಗಲಿ ಉಪಯೋಗವಿಲ್ಲದಿದ್ದರೂ, ಜ್ಞಾನಕ್ಕೆ ಪ್ರಸರಣವುಂಟಾಗದಂತೆ ಅಡ್ಡಿಮಾಡುತ್ತಿರುವ ಕೆಲವು ಪ್ರತಿಬಂಧಕಸಾಮಗ್ರಿಗಳನ್ನು ಹೋಗಲಾಡಿಸುವಿಕೆಯಲ್ಲಿ ಇದಕ್ಕೆ ಉಪಯೋಗವುಂಟು.

ಹೇಗೆಂದರೆ—ಜೀವನ ಧರ್ಮಭೂತಜ್ಞಾನಕ್ಕೆ ಪ್ರಸರಣಶಕ್ತಿ ಸ್ವಾಭಾವಿಕವಾಗಿದ್ದರೂ ಇವನ ಪುಣ್ಯಾಪಾಪರೂಪವಾದ ಕರ್ಮವಿಶೇಷದಿಂದ ಉಂಟಾಗಿರುವ ಈಶ್ವರಸಂಕಲ್ಪವಿಶೇಷವೆಂಬ ಅದೃಷ್ಟವಿಶೇಷವು ಈ ಪ್ರಸರಣಶಕ್ತಿಗೆ ಪ್ರತಿಬಂಧಕವಾಗಿರುವುದರಿಂದ ಇಂಥ ಪ್ರತಿಬಂಧಕವಿರುವ ಕಾಲದಲ್ಲಿ ಜ್ಞಾನಕ್ಕೆ ಪ್ರಸರಣವುಂಟಾಗುವುದಿಲ್ಲ. ಅಗ್ನಿಗೆ ದಾಹಕತ್ವಶಕ್ತಿ ಸ್ವಾಭಾವಿಕವಾಗಿದ್ದರೂ ಮಣಿವಿಶೇಷದ ಸಂಬಂಧವಿರುವ ಕಾಲದಲ್ಲಿ ಅದು ಕುಂಠಿತವಾಗಿರುವುದರಿಂದ ಅಂಥ ಸಂದರ್ಭದಲ್ಲಿ ಅಗ್ನಿಯ ದಾಹಕತ್ವಶಕ್ತಿ ಪ್ರಕಟವಾಗಲಿಲ್ಲವೆಂಬುದು ನ್ಯಾಯ್ಯವಷ್ಟೆ?

ಈಶ್ವರಸಂಕಲ್ಪವಿಶೇಷರೂಪವಾದ ಅದೃಷ್ಟವಿಶೇಷವೆಂಬ ಪ್ರತಿಬಂಧಕವಿರುವ ಕಾಲದಲ್ಲಿಯೂ ವಿಷಯೇಂದ್ರಿಯಸಂಯೋಗವೆಂಬ ಉತ್ತೇಜಕವು ಕೂಡಿದರೆ ಇದು ಅಂಥ ಪ್ರತಿಬಂಧಕವನ್ನು ಹೋಗಲಾಡಿಸಿ ಜ್ಞಾನದ ಪ್ರಸರಣಶಕ್ತಿಯನ್ನು

ಉತ್ತೇಜನಪಡಿಸುವುದರಿಂದ ಜ್ಞಾನವು ಪ್ರತಿಬಂಧಕವನ್ನೂ ಲಕ್ಷ್ಯಮಾಡದೆ ಪ್ರಸರಿಸಿಯೇ ಪ್ರಸರಿಸುವುದು.

ಇದರಿಂದ ವಿಷಯೇಂದ್ರಿಯಸಂಯೋಗರಹಿತವಾದ ಅದೃಷ್ಟವಿಶೇಷವೇ ಜ್ಞಾನಪ್ರಸರಣಕ್ಕೆ ಪ್ರತಿಬಂಧಕವೆಂದು ಪರ್ಯವಸಾನವಾಯಿತು. ಮಂತ್ರ ಮೊದಲಾದ ಉತ್ತೇಜಕಸಾಮಗ್ರಿಯಿಂದ ವಿಯುಕ್ತವಾದ ಮಣಿವಿಶೇಷವು ಅಗ್ನಿಯ ದಾಹಕತ್ವಶಕ್ತಿಗೆ ಪ್ರತಿಬಂಧಕವಾಗಿರುವುದೆಂಬುದು ಯುಕ್ತವಷ್ಟೆ? ಇಂಥ ಸಂದರ್ಭದಲ್ಲಿ ವಿಷಯೇಂದ್ರಿಯಸಂಯೋಗವಿದ್ದುದಾದರೆ ವಿಷಯೇಂದ್ರಿಯಸಂಯೋಗಸಾಹಿತ್ಯವೇ ಉಂಟಾಯಿತಲ್ಲದೆ ತದ್ರಾಹಿತ್ಯವುಂಟಾಗಲಿಲ್ಲವಾಗಿ ವಿಷಯೇಂದ್ರಿಯಸಂಯೋಗರಹಿತವಾದ ಅದೃಷ್ಟವಿಶೇಷವೆಂಬ ಪ್ರತಿಬಂಧಕವೇ ಇಲ್ಲವಾದುದರಿಂದ ಜ್ಞಾನಕ್ಕೆ ಪ್ರಸರಣವು ನಿರರ್ಗಳವಾಗಿ ಉಂಟಾಗಬಹುದು.

ಮಣಿವಿಶೇಷವೆಂಬ ಪ್ರತಿಬಂಧಕವಿದ್ದರೂ ಮಂತ್ರವಿಶೇಷವೆಂಬ ಉತ್ತೇಜಕಸಾಮಗ್ರಿಯಿದ್ದರೆ ಅದರಿಂದ ಅಗ್ನಿಯ ದಾಹಕತ್ವಶಕ್ತಿ ಪುನಃ ಉತ್ತೇಜಿತವಾಗುವುದರಿಂದ ಆಗ ಆ ಶಕ್ತಿ ನಿರರ್ಗಳವಾಗಿ ಹೊರಡುವುದಷ್ಟೆ? ಅಂತು ವಿಷಯೇಂದ್ರಿಯಸಂಯೋಗವೆಂಬುದು ಜ್ಞಾನಪ್ರಸರಣದ ಪ್ರತಿಬಂಧಕವನ್ನು ದೂರಪಡಿಸುವುದರಲ್ಲಿ ಉಪಯೋಗಿಸುವುದಲ್ಲದೆ ಜ್ಞಾನಸ್ವರೂಪೋತ್ಪತ್ತಿಗಾಗಲಿ ಜ್ಞಾನಪ್ರಸರಣಕ್ಕಾಗಲಿ ಇದು ಕಾರಣವಾಗಲಾರದು.

ಆದುದರಿಂದ ಧಾರಾವಾಹಿಕಜ್ಞಾನಸ್ಥಳದಲ್ಲಿ—ಪ್ರಥಮಕ್ಷಣದಲ್ಲಿ ಉಂಟಾದ ವಿಷಯೇಂದ್ರಿಯಸಂಯೋಗವು ಪ್ರಥಮಕ್ಷಣದಲ್ಲಿ ಉಂಟಾದ ಜ್ಞಾನಪ್ರಸರಣದ ಪ್ರತಿಬಂಧಕವನ್ನು ಹೋಗಲಾಡಿಸುತ್ತ ದೀರ್ಘಕಾಲದವರೆಗೂ ಅನುವರ್ತಿಸುವುದರಿಂದ ಪ್ರತಿಕ್ಷಣದಲ್ಲಿಯೂ ಭಿನ್ನಭಿನ್ನಜ್ಞಾನವ್ಯಕ್ತಿಗಳು ಉಂಟಾದುವೆಂಬುದರಲ್ಲಿ ಪ್ರಮಾಣವಿಲ್ಲವಾದಕಾರಣ ಪ್ರಥಮಕ್ಷಣದಲ್ಲಿ ಉಂಟಾದ ಜ್ಞಾನಪ್ರಸರಣವೇ ದೀರ್ಘಕಾಲದವರೆಗೂ ಅನುವರ್ತಿಸುವುದಾದುದರಿಂದ ಧಾರಾವಾಹಿಕಜ್ಞಾನವು ಸಂತತಿರೂಪವಲ್ಲವೆಂದೂ, ಏಕಜ್ಞಾನವಾಗಿಯೇ ಇರುವುದೆಂದೂ ಹೇಳಲು ಯಾವ ಅಭ್ಯಂತರವೂ ಇಲ್ಲವೆಂಬುದು ವರದನಾರಾಯಣಭಟ್ಟಾರ್ಯರ ಅಭಿಪ್ರಾಯವಾಗಿರುವುದು.

“ಇಂದ್ರಿಯಗಳ ಮೂಲಕವಾಗಿ ವಿಷಯಪ್ರದೇಶಕ್ಕೆ ಪ್ರಸರಿಸಿರುವ ಜ್ಞಾನದ ಪ್ರಸರಣನಾಶಕ್ಕೆ ವಿಷಯೇಂದ್ರಿಯಸಂಯೋಗದ ನಾಶವು ಕಾರಣವಾದುದರಿಂದ ವಿಷಯೇಂದ್ರಿಯಸಂಯೋಗವು ನಾಶವನ್ನು ಹೊಂದದೆ ಚಿರಕಾಲದ

ವರೆಗೂ ಅನುವರ್ತಿಸುವುದಾದರೆ ಜ್ಞಾನಪ್ರಸರಣವೂ ಅನುವರ್ತಿಸುವುದಾದುದರಿಂದ ಧಾರಾವಾಹಿಕಜ್ಞಾನವು ಚಿರಸ್ಥಾಯಿಯಾಗಿರುವುದು" ಎಂಬ ಅರ್ಥವನ್ನು **"ಚಿರಮಪ್ರತಿಬಂಧೇನ ಚಿರಂ ತಿಷ್ಠತಿ ಭಾಸಕಂ"** ಎಂಬ ಮೂರನೆಯ ಅರ್ಧವು ತೋರಿಸುವುದು.

"ಚಿರಕಾಲಸ್ಥಾಯಿಯಾದ ಇಂಥ ಜ್ಞಾನವೇ ಪ್ರಮಾಣವೆನಿಸಿಕೊಳ್ಳುವುದಲ್ಲದೆ ಕ್ಷಣಿಕವಾಗಿಯೂ ಸಂತತಿರೂಪವಾಗಿಯೂ ನೀವು ಹೇಳುವ ಧಾರಾವಾಹಿಕಜ್ಞಾನವು ಪ್ರಮಾಣವೆನಿಸಿಕೊಳ್ಳಲಾರದು" ಎಂಬ ಅರ್ಥವನ್ನು **"ಚಿರಸ್ಥಿತಾರ್ಥಧೀರೇವ ನ ಧಾರಾವಾಹಿಕಾ ತು ಸಾ"** ಎಂಬ ನಾಲ್ಕನೆಯ ಅರ್ಧವು ತೋರಿಸುವುದು.

ಐದನೆಯ ಆರನೆಯ ಅರ್ಧಶ್ಲೋಕಗಳಿಂದ—ಜೀವನ ಧರ್ಮಭೂತಜ್ಞಾನಕ್ಕೆ ನಿತ್ಯತ್ವವನ್ನು ಸಾಧಿಸಿಕೊಡುವ ಒಂದು ಅನುಮಾನಪ್ರಮಾಣವನ್ನು ತೋರಿಸುತ್ತಾರೆ—ಬದ್ಧಜೀವರುಗಳ ಧರ್ಮಭೂತಜ್ಞಾನವನ್ನು ನಿರ್ದೇಶಿಸಿ ಇದಕ್ಕೆ ನಿತ್ಯತ್ವಪ್ರತಿಜ್ಞೆಯನ್ನು ಮಾಡಿ, ಜ್ಞಾನತ್ವವೆಂಬ ಹೇತುವನ್ನು ತೋರಿಸಿ, ಎಲ್ಲೆಲ್ಲಿ ಜ್ಞಾನತ್ವವಿರುವುದೋ ಅಲ್ಲಲ್ಲಿ ನಿತ್ಯತ್ವವಿರುವುದೆಂಬ ವ್ಯಾಪ್ತಿಯ ಪರಿಚಯಕ್ಕಾಗಿ ನಿತ್ಯಮುಕ್ತೇಶ್ವರಜ್ಞಾನವನ್ನು ದೃಷ್ಟಾಂತವಾಗಿ ತೋರಿಸಿ, ಅಂಥ ದೃಷ್ಟಾಂತದಲ್ಲಿ ಅನಿತ್ಯತ್ವಶಂಕೆಯನ್ನು ಪರಿಹರಿಸುವುದಕ್ಕೋಸ್ಕರ ನಿತ್ಯಮುಕ್ತೇಶ್ವರರ ಜ್ಞಾನಕ್ಕೆ ಪ್ರತ್ಯಕ್ಷಾನುಮಾನಾಗಮಜನ್ಯತ್ವವನ್ನು ಐದನೆಯ ಅರ್ಧದಿಂದ ನಿಷೇಧಿಸಿ, ಇಂಥ ನಿತ್ಯತ್ವವನ್ನು ಬದ್ಧಜೀವರ ಧರ್ಮಭೂತಜ್ಞಾನದಲ್ಲಿಯೂ ಆರನೆಯ ಅರ್ಧದಿಂದ ಉಪಸಂಹಾರಮಾಡಿ ತೋರಿಸಿ, ಆಗಮದಿಂದಲೂ ಧರ್ಮಭೂತಜ್ಞಾನಕ್ಕೆ ನಿತ್ಯತ್ವವು ಸಿದ್ಧವಾಗಿರುವುದೆಂದು ತೋರಿಸಿರುವರು.

**"ನ ವಿಜ್ಞಾತುರ್ವಿಜ್ಞಾತೇರ್ವಿಪರಿಲೋಪೋ ವಿದ್ಯತೇ, ನ ಹಿ ದ್ರಷ್ಟುರ್ದೃಷ್ಟೇರ್ವಿಪರಿಲೋಪೋ ವಿದ್ಯತೇ"** ಇವೇ ಮೊದಲಾದ ಆಗಮಗಳಿಂದಲೂ ಜ್ಞಾನಕ್ಕೆ ನಿತ್ಯತ್ವವು ಸಿದ್ಧವಾಗುವುದು. ಜ್ಞಾನಾಶ್ರಯನಾದ ಆತ್ಮನ ಜ್ಞಾನಕ್ಕೆ ಯಾವಾಗಲೂ ಲೋಪವಿಲ್ಲವೆಂದಲ್ಲವೆ ಈ ಆಗಮವಾಕ್ಯದಿಂದ ಬೋಧಿಸಲ್ಪಡುವುದು.

## ೯೪೭. ಅಥ ಅನ್ಯೇಷಾಮಾಚಾರ್ಯಾಣಾಂ ಮತೇನ ಧಾರಾವಾಹಿಕಜ್ಞಾನೇ ಸಂತತಿರೂಪತ್ವಸ್ಯೈವ ಸ್ಥಿರೀಕರಣಂ.

ಹೀಗೆ ವರದನಾರಾಯಣಭಟ್ಟಾರ್ಯರ ಅಭಿಪ್ರಾಯಪ್ರಕಾರವಾಗಿ ಧಾರಾವಾಹಿಕಜ್ಞಾನಕ್ಕೆ ದೀರ್ಘಪ್ರಭೆಯಂತೆ ಏಕರೂಪತ್ವವನ್ನು ಎಂದರೆ ಏಕಜ್ಞಾನತ್ವವನ್ನು ತೋರಿಸಿದೆವು.

ಶಬ್ದಶ್ರವಣದಿಂದ ತಾನು ಉತ್ಪನ್ನವಾಗುವ ಕಾಲದಲ್ಲಿ ಉತ್ಪತ್ತಿಸಹಕೃತವಾದ ಶಬ್ದಜ್ಞಾನವೇ ಸಾಮಗ್ರಿಯಾಗಿರುವುದರಿಂದ ಆಗ ಈ ಜ್ಞಾನವು ಶಾಬ್ದತ್ವವೆಂಬ ಆಕಾರವನ್ನು ಪಡೆದು ಶಾಬ್ದಪ್ರಮಾಣವೆನಿಸಿಕೊಳ್ಳುವುದು. ಶಾಬ್ದತ್ವವೆಂದರೇನು ? ಶಕ್ತಿಗ್ರಹವೆಂದು ಹೇಳಲ್ಪಡುವ ಪದಪದಾರ್ಥಜ್ಞಾನದೊಡನೆ ಕೂಡಿರುವ ಶಬ್ದಜ್ಞಾನದಿಂದ ತಾನು ಜನ್ಯವಾಗಿರುವಿಕೆಯೇ ಶಾಬ್ದತ್ವವೆನಿಸಿಕೊಳ್ಳುವುದು.

## ೯೪೯ ವೇದಾಂತಸಿದ್ಧಾಂತೇ ಪ್ರತ್ಯಕ್ಷಾದಿತ್ರಿತಯಮೇವ ಪ್ರಮಾಣಂ ಪ್ರಮಾಣಾಂತರಾಣಾಂ ತತ್ರೈವಾಂತರ್ಭಾವಶ್ಚ.

ಇತರ ದಾರ್ಶನಿಕರು ಈ ಮೂರು ಪ್ರಮಾಣಗಳಲ್ಲದೆ ಉಪಮಾನ ಅರ್ಥಾಪತ್ತಿ ಅನುಪಲಬ್ಧಿ ಸಂಭವ ಐತಿಹ್ಯ ಎಂಬ ಇನ್ನೂ ಕೆಲವು ಪ್ರಮಾಣಗಳನ್ನು ಅಂಗೀಕರಿಸಿದ್ದರೂ, ಉಕ್ತಗಳಾದ ಈ ಮೂರು ಪ್ರಮಾಣಗಳಲ್ಲಿಯೇ ಅವುಗಳಿಗೆ ಅಂತರ್ಭಾವವುಂಟಾಗುವುದರಿಂದ ವೇದಾಂತಿಗಳ ದರ್ಶನದಲ್ಲಿ ಪ್ರತ್ಯಕ್ಷಾನುಮಾನಾಗಮಗಳೆಂಬ ಮೂರೇ ಪ್ರಮಾಣಗಳು ಅಂಗೀಕರಿಸಲ್ಪಟ್ಟಿರುವುವು.

ಈ ಮೂರು ಪ್ರಮಾಣಗಳ ಲಕ್ಷಣ, ಸ್ವರೂಪ, ಉದಾಹರಣ, ಅಂತರಾಳಿಕವಿಭಾಗ ಇವೇ ಮೊದಲಾದ ವಿಷಯಗಳನ್ನು ಇಲ್ಲಿ ನಿರೂಪಿಸುವುದಕ್ಕೆ ಆರಂಭಿಸಿದರೆ ಗ್ರಂಥವು ಅತಿವಿಪುಲವಾಗುವುದಾದುದರಿಂದ ಅವುಗಳನ್ನು ಇಲ್ಲಿ ಬರೆಯದೆ ಬಿಟ್ಟಿರುವೆವು.

ಅಂತು—ಬಂಧಾವಸ್ಥೆಯಲ್ಲಿ ಆ ಆ ಸಾಮಗ್ರೀಭೇದದಿಂದ ಪ್ರತ್ಯಕ್ಷತ್ವ ಅನುಮಿತಿತ್ವ ಶಾಬ್ದತ್ವವೆಂಬ ಅವಸ್ಥಾಭೇದಗಳು ಜ್ಞಾನಕ್ಕೆ ಔಪಾಧಿಕಗಳಾಗಿ ಉಂಟಾದರೂ ಪ್ರತ್ಯಕ್ಷತ್ವವೇ ಇದಕ್ಕೆ ಸ್ವಾಭಾವಿಕಾಕಾರವೆಂದು ಸಿದ್ಧವಾಯಿತು. ಆ ಆ ಸಾಮಗ್ರೀಭೇದದಿಂದ ಉಂಟಾಗುವ ನಾನಾವಿಧವಾದ ಪ್ರಸರಣಗಳಲ್ಲಿಯೂ ಈ ಜ್ಞಾನವು ಸ್ವವ್ಯತಿರಿಕ್ತಪದಾರ್ಥವಿಷಯದಲ್ಲಿ ಉಕ್ತವಾದ ಆಕಾರತ್ರಯವನ್ನು ಹೊಂದಿದರೂ ಸ್ವವಿಷಯದಲ್ಲಿಯಾದರೆ ಪ್ರತ್ಯಕ್ಷತ್ವಾಕಾರವನ್ನೇ ಹೊಂದುವುದು.

ಎಂದರೆ ಲಿಂಗಜ್ಞಾನದಿಂದ ಲಿಂಗಿಯನ್ನು ತಿಳಿವ ಕಾಲದಲ್ಲಿ ಲಿಂಗಿ ಅನುಮೇಯವಾದುದರಿಂದ ಪ್ರತ್ಯಕ್ಷವಲ್ಲದಿದ್ದರೂ ಲಿಂಗಜ್ಞಾನವು ಸ್ವಯಂಪ್ರಕಾಶವಾದುದರಿಂದ ಪ್ರತ್ಯಕ್ಷತ್ವಾಕಾರವನ್ನೇ ಪಡೆದಿರುವುದು.

ಮತ್ತು—ಶಬ್ದಜ್ಞಾನದಿಂದ ಶಬ್ದಾರ್ಥವನ್ನು ತಿಳಿವ ಕಾಲದಲ್ಲಿ ಶಬ್ದಾರ್ಥವು ಶಬ್ದಗಮ್ಯವಾದುದರಿಂದ ಪ್ರತ್ಯಕ್ಷವಲ್ಲದಿದ್ದರೂ ಶಬ್ದಾರ್ಥಜ್ಞಾನವು ಸ್ವಯಂಪ್ರಕಾಶವಾದುದರಿಂದ ಪ್ರತ್ಯಕ್ಷತ್ವಾಕಾರವನ್ನೇ ಪಡೆದಿರುವುದು.

## ೧೫೦ ಭಿನ್ನಧಾತುವ್ಯವಹಾರ್ಯತ್ವಾತ್ಸುಖಾದೀನಾಂ ಜ್ಞಾನಭಿನ್ನತ್ವಾಶಂಕಾ.

"ಪೂಜ್ಯರೆ! ಇದುವರೆಗೂ ಧರ್ಮಭೂತಜ್ಞಾನಕ್ಕೆ ಉಂಟಾಗುವ ಸುಖತ್ವ ದುಃಖತ್ವ ಮೊದಲಾದ ಅನೇಕಾವಸ್ಥೆಗಳನ್ನು ತೋರಿಸಿದಿರಿ. ಆದರೆ ಸುಖದುಃಖಾದಿ ಗಳ ವಿಷಯವಾಗಿ ಇನ್ನೂ ಕೆಲವು ಆಶಂಕೆಗಳು ಅಂಕುರಿಸುವುವು. ಅವುಗಳಿಗೆ ಸದುತ್ತರವನ್ನು ಹೇಳುವವರೆಗೂ ಸುಖದುಃಖಾದಿಗಳಿಗೆ ಜ್ಞಾನಾಕಾರತ್ವವನ್ನು ಒಪ್ಪಲಾಗುವುದಿಲ್ಲ. ಹೇಗೆಂದರೆ, ಜ್ಞಾನವನ್ನು ವ್ಯವಹರಿಸಬೇಕಾದರೆ—"ತಿಳಿ" ಎಂಬ ಧಾತುವನ್ನು ಸ್ವೀಕರಿಸಿ "ನಾನು ತಿಳಿಯುತ್ತೇನೆ" ಎಂದು ವ್ಯವಹರಿ ಸುತ್ತೇವೆ. ಸುಖಾದಿಗಳನ್ನು ವ್ಯವಹರಿಸಬೇಕಾದರೆ "ತಿಳಿ" ಎಂಬ ಧಾತುವನ್ನು ಮುಟ್ಟದೆಯೇ "ನಾನು ಸುಖಿಸುತ್ತೇನೆ-ನಾನು ದುಃಖಿಸುತ್ತೇನೆ-ನಾನು ಇಚ್ಛಿಸುತ್ತೇನೆ-ನಾನು ದ್ವೇಷಿಸುತ್ತೇನೆ-ನಾನು ಯತ್ನಿಸುತ್ತೇನೆ" ಎಂದು ಭಿನ್ನಭಿನ್ನಧಾತುಗಳನ್ನು ಉಪಯೋಗಿಸಿ ವ್ಯವಹರಿಸುತ್ತೇವೆ. ಸುಖದುಃಖಾದಿಗಳು ಜ್ಞಾನಕ್ಕಿಂತಲೂ ವ್ಯತಿರಿಕ್ತಗಳಲ್ಲದೆ ಜ್ಞಾನಸ್ವರೂಪಗಳೇ ಆಗಿರುವ ಪಕ್ಷದಲ್ಲಿ "ನಾನು ಸುಖಿಸುತ್ತೇನೆ-ನಾನು ದುಃಖಿಸುತ್ತೇನೆ" ಇತ್ಯಾದಿವ್ಯವಹಾರ ಗಳನ್ನು ನಡಸುವ ಕಡೆಯಲ್ಲೆಲ್ಲಾ "ನಾನು ತಿಳಿಯುತ್ತೇನೆ" ಎಂಬುದಾಗಿಯೇ ವ್ಯವಹರಿಸಬೇಕಾಗಿ ಬರುವುದು. ಆದರೆ ಲೋಕದಲ್ಲಿ ಅಂಥ ವ್ಯವಹಾರವಿಲ್ಲವಾದು ದರಿಂದಲೂ, ಭಿನ್ನವಾಗಿಯೇ ವ್ಯವಹಾರವಿರುವುದರಿಂದಲೂ ಸುಖದುಃಖಾದಿ ಗಳನ್ನು ಜ್ಞಾನಕ್ಕಿಂತಲೂ ಭಿನ್ನಗಳೆಂದೇ ಒಪ್ಪಬೇಕಲ್ಲವೆ?"

## ೧೫೧. ವ್ಯವಹಾರಭೇದಸ್ಯ ಅವಸ್ಥಾಭೇದನಿಬಂಧನತ್ವಾತ್ ಸುಖಾದೀನಾಂ ಜ್ಞಾನಸ್ವರೂಪತ್ವೋಪಪತ್ತಿಃ.

ಇಂಥ ಆಶಂಕೆ ಸಂಗತವಲ್ಲ. ಏತಕ್ಕೆಂದರೆ ಸ್ಮರಣವೆಂಬುದೂ ಜ್ಞಾನಭಿನ್ನ ವಲ್ಲದೆ ಜ್ಞಾನವೇ ಆಗಿದ್ದರೂ "ನಾನು ತಿಳಿಯುತ್ತೇನೆ" ಎಂಬ ವ್ಯವಹಾರ ಕ್ಕಿಂತಲೂ ಭಿನ್ನವಾಗಿ "ನಾನು ಸ್ಮರಿಸುತ್ತೇನೆ" ಎಂದು ವ್ಯವಹರಿಸುತ್ತೇವೆ? ಆದಮಾತ್ರಕ್ಕೆ ಸ್ಮರಣವೆಂಬುದು ಜ್ಞಾನವಲ್ಲದೆ ಹೋದೀತೆ?

ಆದರೆ ಭಿನ್ನವಾಗಿ ವ್ಯವಹರಿಸಲು ಕಾರಣವೇನು? ಸುಖತ್ವಾದಿಗಳು ಜ್ಞಾನದ ಅವಸ್ಥಾಭೇದಗಳಾದುದರಿಂದ ಅಂಥ ಅವಸ್ಥಾಭೇದಗಳನ್ನು ತೋರಿಸು ವುದಕ್ಕೋಸ್ಕರವೇ ಭಿನ್ನಭಿನ್ನವ್ಯವಹಾರಗಳು ಉಂಟಾಗಿರುವುವು. ಮಣ್ಣಿನಲ್ಲಿ ಪಿಂಡತ್ವ ಘಟತ್ವ ಮೊದಲಾದ ಅವಸ್ಥಾಭೇದಗಳನ್ನು ತೋರಿಸುವುದಕ್ಕಾಗಿ

ಇನ್ನು ಕೆಲವರು ಆಚಾರ್ಯರು ಹೇಳುವುದೇನೆಂದರೆ—“ ಭಾಷ್ಯಸ್ವಾರಸ್ಯ ದಿಂದಲೂ, ಸ್ಮೃತಿವಚನಸ್ವಾರಸ್ಯದಿಂದಲೂ, ಯುಕ್ತಿಸ್ವಾರಸ್ಯದಿಂದಲೂ ಧಾರಾ ವಾಹಿಕಜ್ಞಾನಕ್ಕೆ ದೀಪಜ್ವಾಲಾಪ್ರವಾಹದಂತೆ ಸಂತತಿರೂಪತ್ವವನ್ನು ಹೇಳು ವುದೇ ಉಚಿತವಾಗಿರುವುದು. ಹೇಗೆಂದರೆ—ವಿಷಯಪ್ರಕಾಶಕವಾದ ಜ್ಞಾನಕ್ಕೇ ಆತ್ಮತ್ವವನ್ನು ಹೇಳುವ ಮಿಥ್ಯಾವಾದಿಗಳ ಪಕ್ಷವನ್ನು ಖಂಡಿಸುವ ಸಂದರ್ಭದಲ್ಲಿ “ಕ್ಷಣಭಂಗಿನ್ಯಾಸ್ಸಂವಿದ ಆತ್ಮತ್ವಾಭ್ಯುಪಗಮೇ” ಎಂಬುದಾಗಿ ಭಾಷ್ಯ ಕಾರರ ಸೂಕ್ತಿಯಿರುವುದು; ಈ ಸೂಕ್ತಿಯ ಅಕ್ಷರಸ್ವಾರಸ್ಯವನ್ನು ಪರಿ ಶೀಲನೆಮಾಡಿನೋಡಿದರೆ—ದ್ವಿತೀಯಕ್ಷಣದಲ್ಲಿಯಾಗಲಿ, ತೃತೀಯಕ್ಷಣದಲ್ಲಿಯಾ ಗಲಿ ಜ್ಞಾನಕ್ಕೆ ನಾಶವುಂಟಾಗುವುದೆಂದು ತೋರುವುದರಿಂದ ಧಾರಾವಾಹಿಕ ಜ್ಞಾನವೂ ಸಂತತಿರೂಪತ್ವವನ್ನು ಪಡೆವುದಲ್ಲದೆ ದೀರ್ಘಪ್ರಭೆಯಂತೆ ಏಕಜ್ಞಾನ ವಾಗಲಾರದು.

ಮತ್ತು—ಜ್ಞಾನವಿಶೇಷರೂಪವಾದ ಧ್ಯಾನವೆಂಬುದು ಸ್ಮೃತಿಸಂತತಿರೂಪ ವಾಗಿಯೇ ಇರುವುದೆಂಬ ಅಂಶವನ್ನು ಸ್ಮೃತಿವಚನವೂ ಸ್ಪಷ್ಟವಾಗಿ ಬೋಧಿಸುತ್ತಿ ರುವುದು. ಹೇಗೆಂದರೆ—

“ತದ್ರೂಪಪ್ರತ್ಯಯೇ ಚೈಕಾ ಸಂತತಿಶ್ಚಾನ್ಯನಿಸ್ಪೃಹಾ ।
ತದ್ಧ್ಯಾನಂ ಪ್ರಥಮೈಃ ಷಡ್ಭಿರಂಗೈರ್ನಿಷ್ಪಾದ್ಯತೇ ತಥಾ ॥”

ಎಂಬ ಸ್ಮೃತಿವಚನದ ಶಬ್ದಸ್ವಾರಸ್ಯವನ್ನು ಪರಾಮರ್ಶಿಸಿದರೆ “ಧ್ಯಾನಕ್ಕೆ ಆಲಂಬನಭೂತವಾದ ಭಗವದ್ದಿವ್ಯಮಂಗಳವಿಗ್ರಹದಲ್ಲಿ ನಮ್ಮ ಜ್ಞಾನವು ಪ್ರಸರಿಸಿ ದರೆ ಆಗ ಅಂಥ ಧ್ಯೇಯವಸ್ತುವಿನ ನಿರತಿಶಯಭೋಗ್ಯತ್ವವನ್ನು ಕಂಡುಕೊಂಡು ವಿಷಯಾಂತರದಲ್ಲಿ ವೈರಾಗ್ಯವನ್ನು ತಾಳಿದುದಾಗಿ ಧ್ಯೇಯವಿಷಯದಲ್ಲಿಯೇ ನೆಲೆ ಯಾಗಿ ನಿಂತು ಧಾರಾಕಾರವಾಗಿ ತೋರುವಂತೆ ಸಂತತಿರೂಪವಾಗಿ ಪ್ರವಹಿಸು ವುದು; ಇಂಥ ಜ್ಞಾನವಿಶೇಷವೇ ಧ್ಯಾನವೆಂಬ ಸಂಜ್ಞೆಯನ್ನೂ ಪಡೆವುದು; ಇಂಥ ಧ್ಯಾನವು ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣೆ ಎಂಬ ಪೂರ್ವತನಗಳಾದ ಆರು ಅಂಗಗಳಿಂದ ಸಿದ್ಧಿಸುವುದು.”—ಎಂಬ ಅರ್ಥವು ತೋರಿಬರುವುದರಿಂದ ಜ್ಞಾನವಿಶೇಷರೂಪವಾದ ಧ್ಯಾನವೆಂಬುದು ಸಂತ ತಿರೂಪವಾಗಿಯೇ ಇರುವುದೆಂದು ಸ್ಪಷ್ಟವಾಗಿ ಅವಗತವಾಗುವುದು.

ಮತ್ತು—“ಜ್ಞಾನಕಾರಣಕ್ಕೆ ನಾಶವುಂಟಾದರೆ ಕಾರ್ಯವಾದ ಜ್ಞಾನಕ್ಕೂ ನಾಶವೆಂಬುದು ಆವಶ್ಯಕವಾದುದರಿಂದಲೂ, ಸ್ಮರಣಜನಕವಾದ ಸಂಸ್ಕಾರಕ್ಕೆ

ನಾಶವುಂಟಾದರೆ ಸ್ಮರಣಕ್ಕೆ ನಾಶವುಂಟಾಗುತ್ತದೆಯೆಂಬುದು ಸರ್ವರಿಗೂ ಅನು ಭವಸಿದ್ಧವಾಗಿರುವುದರಿಂದಲೂ, ಸ್ಮರಣವೆಂಬ ಫಲದಿಂದ ಸಂಸ್ಕಾರಕ್ಕೆ ನಾಶ ವುಂಟಾಗುತ್ತಿರುವುದರಿಂದಲೂ ಸ್ಮರಣಗಳಿಗೆ ತೃತೀಯಕ್ಷಣದಲ್ಲಿ ನಾಶವನ್ನು ಎಲ್ಲಡೂ ಅವಶ್ಯಕವಾಗಿ ಒಪ್ಪಿಕೊಳ್ಳಬೇಕಾಗಿರುವುದು" ಎಂಬ ಇವೇ ಮೊದಲಾದ ಯುಕ್ತಿಗಳಿಂದಲೂ ಧಾರಾವಾಹಿಕಜ್ಞಾನವನ್ನು ಸಂತತಿರೂಪವಾಗಿ ಹೇಳಬೇಕಲ್ಲದೆ ದೀರ್ಘಪ್ರಭೆಯಂತೆ ಏಕರೂಪತ್ವವನ್ನು ಇದಕ್ಕೆ ಹೇಳಲಾಗುವುದಿಲ್ಲ."

**ಹೀಗೆಂದು ಇನ್ನು ಕೆಲವರು ಆಚಾರ್ಯರು ಹೇಳುವರು.**

## ೯೪೮ ಅಥ ಜ್ಞಾನಸ್ಯ ಪ್ರತ್ಯಕ್ಷತ್ವಾದ್ಯವಸ್ಥಾವಿಶೇಷನಿರೂಪಣಂ

ಸಂಸಾರಾವಸ್ಥೆಯಲ್ಲಿ ಜ್ಞಾನದ ಶಕ್ತಿಯನ್ನು ಸಂಕೋಚಪಡಿಸುವ ಕರ್ಮ ವೆಂಬ ಉಪಾಧಿ ಮೋಕ್ಷಾವಸ್ಥೆಯಲ್ಲಿ ಆತ್ಯಂತಿಕವಾಗಿ ನಾಶವನ್ನು ಹೊಂದಿದರೆ ಆಗ ಜ್ಞಾನಸಂಕೋಚಕವಾದ ಮತ್ತೊಂದು ಉಪಾಧಿ ಇಲ್ಲವಾದಕಾರಣ ಪ್ರತ್ಯ ಕ್ಷತ್ವಾಕಾರದಿಂದ ಭಾಸಮಾನವಾಗಿರುವಿಕೆಯೇ ಮೋಕ್ಷದಶೆಯಲ್ಲಿ ನೆಲೆನಿಲ್ಲುವುದ ರಿಂದ ಜ್ಞಾನಕ್ಕೆ ಪ್ರತ್ಯಕ್ಷತ್ವಾಕಾರವೇ ಸ್ವಾಭಾವಿಕವಾಗಿದ್ದರೂ ಬಂಧಾವಸ್ಥೆ ಯಲ್ಲಿ ಇಂಥ ಶಕ್ತಿ ಕರ್ಮವಿಶೇಷದಿಂದ ಪ್ರತಿಬದ್ಧವಾಗುವುದಾದಪ್ರಯುಕ್ತ ಆ ಆ ಸಾಮಗ್ರೀಭೇದದಿಂದ ಪ್ರತ್ಯಕ್ಷತ್ವ, ಅನುಮಿತಿತ್ವ, ಶಾಬ್ದತ್ವವೆಂಬ ಆಕಾರಗಳು (ಅವಸ್ಥೆಗಳು) ಜ್ಞಾನಕ್ಕೆ ಬಂಧಾವಸ್ಥೆಯಲ್ಲಿ ಉಂಟಾಗುವುವು.

ಇಂದ್ರಿಯಗಳ ಮೂಲಕವಾಗಿ ಪ್ರಸರಿಸುವ ಕಾಲದಲ್ಲಿ ಇಂದ್ರಿಯಗಳೇ ಸಾಮಗ್ರಿಯಾದುದರಿಂದ ಆಗ ಈ ಜ್ಞಾನವು ಪ್ರತ್ಯಕ್ಷತ್ವವೆಂಬ ಆಕಾರವನ್ನು ಪಡೆದು ಪ್ರತ್ಯಕ್ಷಪ್ರಮಾಣವೆನಿಸಿಕೊಳ್ಳುವುದು. ಪ್ರತ್ಯಕ್ಷತ್ವವೆಂದರೇನು ? ತನ್ನ ಲ್ಲಿಯೂ, ಸ್ವವ್ಯತಿರಿಕ್ತವಾದ ಪದಾರ್ಥದಲ್ಲಿಯೂ ಉಂಟಾಗುವ ವೈಶದ್ಯಾತಿಶಯ ವೆಂಬ ವಿಷಯತ್ವಕ್ಕೆ ತಾನು ನಿರೂಪಕವಾಗಿರುವಿಕೆಯೇ ಪ್ರತ್ಯಕ್ಷತ್ವವೆನಿಸಿಕೊಳ್ಳು ವುದು.

ಲಿಂಗದಿಂದ ಲಿಂಗಿಯನ್ನು ಅನುಮಿಸುವ ಕಾಲದಲ್ಲಿ ವ್ಯಾಪ್ತಿಜ್ಞಾನಸಹಿತ ವಾದ ಲಿಂಗವೇ ಸಾಮಗ್ರಿಯಾದುದರಿಂದ ಆಗ ಈ ಜ್ಞಾನವು ಅನುಮಿತಿತ್ವ ವೆಂಬ ಆಕಾರವನ್ನು ಪಡೆದು ಅನುಮಾನಪ್ರಮಾಣವೆನಿಸಿಕೊಳ್ಳುವುದು. ಅನುಮಿತಿ ತ್ವವೆಂದರೇನು ? ವ್ಯಾಪ್ತಿಸಹಿತವಾದ 'ಲಿಂಗಜ್ಞಾನದಿಂದ ಜನ್ಯವಾಗಿರುವಿಕೆಯೇ ಅನುಮಿತಿತ್ವವೆನಿಸಿಕೊಳ್ಳುವುದು.

ಶಬ್ದಶ್ರವಣದಿಂದ ತಾನು ಉತ್ಪನ್ನವಾಗುವ ಕಾಲದಲ್ಲಿ ಉತ್ಪತ್ತಿಸಹಕೃತವಾದ ಶಬ್ದಜ್ಞಾನವೇ ಸಾಮಗ್ರಿಯಾಗಿರುವುದರಿಂದ ಆಗ ಈ ಜ್ಞಾನವು ಶಾಬ್ದತ್ವವೆಂಬ ಆಕಾರವನ್ನು ಪಡೆದು ಶಾಬ್ದಪ್ರಮಾಣವೆನಿಸಿಕೊಳ್ಳುವುದು. ಶಾಬ್ದತ್ವವೆಂದರೇನು ? ಶಕ್ತಿಗ್ರಹವೆಂದು ಹೇಳಲ್ಪಡುವ ಪದಪದಾರ್ಥಜ್ಞಾನದೊಡನೆ ಕೂಡಿರುವ ಶಬ್ದಜ್ಞಾನದಿಂದ ತಾನು ಜನ್ಯವಾಗಿರುವಿಕೆಯೇ ಶಾಬ್ದತ್ವವೆನಿಸಿಕೊಳ್ಳುವುದು.

**೯೪೯ ವೇದಾಂತಸಿದ್ಧಾಂತೇ ಪ್ರತ್ಯಕ್ಷಾದಿತ್ರಿತಯಮೇವ ಪ್ರಮಾಣಂ ಪ್ರಮಾಣಾಂತರಾಣಾಂ ತತ್ರೈವಾಂತರ್ಭಾವಶ್ಚ.**

ಇತರ ದಾರ್ಶನಿಕರು ಈ ಮೂರು ಪ್ರಮಾಣಗಳಲ್ಲದೆ ಉಪಮಾನ ಅರ್ಥಾಪತ್ತಿ ಅನುಪಲಬ್ಧಿ ಸಂಭವ ಐತಿಹ್ಯ ಎಂಬ ಇನ್ನೂ ಕೆಲವು ಪ್ರಮಾಣಗಳನ್ನು ಅಂಗೀಕರಿಸಿದ್ದರೂ, ಉಕ್ತಗಳಾದ ಈ ಮೂರು ಪ್ರಮಾಣಗಳಲ್ಲಿಯೇ ಅವುಗಳಿಗೆ ಅಂತರ್ಭಾವವುಂಟಾಗುವುದರಿಂದ ವೇದಾಂತಿಗಳ ದರ್ಶನದಲ್ಲಿ ಪ್ರತ್ಯಕ್ಷಾನುಮಾನಾಗಮಗಳೆಂಬ ಮೂರೇ ಪ್ರಮಾಣಗಳು ಅಂಗೀಕರಿಸಲ್ಪಟ್ಟಿರುವುವು.

ಈ ಮೂರು ಪ್ರಮಾಣಗಳ ಲಕ್ಷಣ, ಸ್ವರೂಪ, ಉದಾಹರಣ, ಆಂತರಾಳಿಕ ವಿಭಾಗ ಇವೇ ಮೊದಲಾದ ವಿಷಯಗಳನ್ನು ಇಲ್ಲಿ ನಿರೂಪಿಸುವುದಕ್ಕೆ ಆರಂಭಿಸಿದರೆ ಗ್ರಂಥವು ಅತಿವಿಪುಲವಾಗುವುದಾದುದರಿಂದ ಅವುಗಳನ್ನು ಇಲ್ಲಿ ಬರೆಯದೆ ಬಿಟ್ಟಿರುವೆವು.

ಅಂತು—ಬಂಧಾವಸ್ಥೆಯಲ್ಲಿ ಆ ಆ ಸಾಮಗ್ರೀಭೇದದಿಂದ ಪ್ರತ್ಯಕ್ಷತ್ವ ಅನುಮಿತಿತ್ವ ಶಾಬ್ದತ್ವವೆಂಬ ಅವಸ್ಥಾಭೇದಗಳು ಜ್ಞಾನಕ್ಕೆ ಔಪಾಧಿಕಗಳಾಗಿ ಉಂಟಾದರೂ ಪ್ರತ್ಯಕ್ಷತ್ವವೇ ಇದಕ್ಕೆ ಸ್ವಾಭಾವಿಕಾಕಾರವೆಂದು ಸಿದ್ಧವಾಯಿತು. ಆ ಆ ಸಾಮಗ್ರೀಭೇದದಿಂದ ಉಂಟಾಗುವ ನಾನಾವಿಧವಾದ ಪ್ರಸರಣಗಳಲ್ಲಿಯೂ ಈ ಜ್ಞಾನವು ಸ್ವವ್ಯತಿರಿಕ್ತಪದಾರ್ಥವಿಷಯದಲ್ಲಿ ಉಕ್ತವಾದ ಆಕಾರತ್ರಯವನ್ನು ಹೊಂದಿದರೂ ಸ್ವವಿಷಯದಲ್ಲಿಯಾದರೆ ಪ್ರತ್ಯಕ್ಷತ್ವಾಕಾರವನ್ನೇ ಹೊಂದುವುದು.

ಎಂದರೆ ಲಿಂಗಜ್ಞಾನದಿಂದ ಲಿಂಗಿಯನ್ನು ತಿಳಿವ ಕಾಲದಲ್ಲಿ ಲಿಂಗಿ ಅನುಮೇಯವಾದುದರಿಂದ ಪ್ರತ್ಯಕ್ಷವಲ್ಲದಿದ್ದರೂ ಲಿಂಗಿಜ್ಞಾನವು ಸ್ವಯಂಪ್ರಕಾಶವಾದುದರಿಂದ ಪ್ರತ್ಯಕ್ಷತ್ವಾಕಾರವನ್ನೇ ಪಡೆದಿರುವುದು.

ಮತ್ತು—ಶಬ್ದಜ್ಞಾನದಿಂದ ಶಬ್ದಾರ್ಥವನ್ನು ತಿಳಿವ ಕಾಲದಲ್ಲಿ ಶಬ್ದಾರ್ಥವು ಶಬ್ದಗಮ್ಯವಾದುದರಿಂದ ಪ್ರತ್ಯಕ್ಷವಲ್ಲದಿದ್ದರೂ ಶಬ್ದಾರ್ಥಜ್ಞಾನವು ಸ್ವಯಂಪ್ರಕಾಶವಾದುದರಿಂದ ಪ್ರತ್ಯಕ್ಷತ್ವಾಕಾರವನ್ನೇ ಪಡೆದಿರುವುದು.

## ೯೫೦ ಭಿನ್ನಧಾತುವ್ಯವಹಾರ್ಯತ್ವಾತ್ಸುಖಾದೀನಾಂ ಜ್ಞಾನಭಿನ್ನತ್ವಾಶಂಕಾ.

"ಪೂಜ್ಯರೆ! ಇದುವರೆಗೂ ಧರ್ಮಭೂತಜ್ಞಾನಕ್ಕೆ ಉಂಟಾಗುವ ಸುಖತ್ವ ದುಃಖತ್ವ ಮೊದಲಾದ ಅನೇಕಾವಸ್ಥೆಗಳನ್ನು ತೋರಿಸಿದಿರಿ. ಆದರೆ ಸುಖದುಃಖಾದಿ ಗಳ ವಿಷಯವಾಗಿ ಇನ್ನೂ ಕೆಲವು ಆಶಂಕೆಗಳು ಅಂಕುರಿಸುವುವು. ಅವುಗಳಿಗೆ ಸದುತ್ತರವನ್ನು ಹೇಳುವವರೆಗೂ ಸುಖದುಃಖಾದಿಗಳಿಗೆ ಜ್ಞಾನಾಕಾರತ್ವವನ್ನು ಒಪ್ಪಲಾಗುವುದಿಲ್ಲ. ಹೇಗೆಂದರೆ, ಜ್ಞಾನವನ್ನು ವ್ಯವಹರಿಸಬೇಕಾದರೆ—"ತಿಳಿ" ಎಂಬ ಧಾತುವನ್ನು ಸ್ವೀಕರಿಸಿ "ನಾನು ತಿಳಿಯುತ್ತೇನೆ" ಎಂದು ವ್ಯವಹರಿ ಸುತ್ತೇವೆ. ಸುಖಾದಿಗಳನ್ನು ವ್ಯವಹರಿಸಬೇಕಾದರೆ "ತಿಳಿ" ಎಂಬ ಧಾತುವನ್ನು ಮುಟ್ಟದೆಯೇ "ನಾನು ಸುಖಿಸುತ್ತೇನೆ-ನಾನು ದುಃಖಿಸುತ್ತೇನೆ-ನಾನು ಇಚ್ಛಿಸುತ್ತೇನೆ-ನಾನು ದ್ವೇಷಿಸುತ್ತೇನೆ-ನಾನು ಯತ್ನಿಸುತ್ತೇನೆ" ಎಂದು ಭಿನ್ನಭಿನ್ನಧಾತುಗಳನ್ನು ಉಪಯೋಗಿಸಿ ವ್ಯವಹರಿಸುತ್ತೇವೆ. ಸುಖದುಃಖಾದಿಗಳು ಜ್ಞಾನಕ್ಕಿಂತಲೂ ವ್ಯತಿರಿಕ್ತಗಳಲ್ಲದೆ ಜ್ಞಾನಸ್ವರೂಪಗಳೇ ಆಗಿರುವ ಪಕ್ಷದಲ್ಲಿ "ನಾನು ಸುಖಿಸುತ್ತೇನೆ-ನಾನು ದುಃಖಿಸುತ್ತೇನೆ" ಇತ್ಯಾದಿವ್ಯವಹಾರ ಗಳನ್ನು ನಡಸುವ ಕಡೆಯಲ್ಲೆಲ್ಲಾ "ನಾನು ತಿಳಿಯುತ್ತೇನೆ" ಎಂಬುದಾಗಿಯೇ ವ್ಯವಹರಿಸಬೇಕಾಗಿ ಬರುವುದು. ಆದರೆ ಲೋಕದಲ್ಲಿ ಅಂಥ ವ್ಯವಹಾರವಿಲ್ಲವಾದು ದರಿಂದಲೂ, ಭಿನ್ನವಾಗಿಯೇ ವ್ಯವಹಾರವಿರುವುದರಿಂದಲೂ ಸುಖದುಃಖಾದಿ ಗಳನ್ನು ಜ್ಞಾನಕ್ಕಿಂತಲೂ ಭಿನ್ನಗಳೆಂದೇ ಒಪ್ಪಬೇಕಲ್ಲವೆ?"

## ೯೫೧. ವ್ಯವಹಾರಭೇದಸ್ಯ ಅವಸ್ಥಾಭೇದನಿಬಂಧನತ್ವಾತ್ ಸುಖಾದೀನಾಂ ಜ್ಞಾನಸ್ವರೂಪತ್ವೋಪಪತ್ತಿಃ.

ಇಂಥ ಆಶಂಕೆ ಸಂಗತವಲ್ಲ. ಏತಕ್ಕೆಂದರೆ ಸ್ಮರಣವೆಂಬುದೂ ಜ್ಞಾನಭಿನ್ನ ವಲ್ಲದೆ ಜ್ಞಾನವೇ ಆಗಿದ್ದರೂ "ನಾನು ತಿಳಿಯುತ್ತೇನೆ" ಎಂಬ ವ್ಯವಹಾರ ಕ್ಕಿಂತಲೂ ಭಿನ್ನವಾಗಿ "ನಾನು ಸ್ಮರಿಸುತ್ತೇನೆ" ಎಂದು ವ್ಯವಹರಿಸುತ್ತೇವೆ? ಆದಮಾತ್ರಕ್ಕೆ ಸ್ಮರಣವೆಂಬುದು ಜ್ಞಾನವಲ್ಲದೆ ಹೋದೀತೆ?

ಆದರೆ ಭಿನ್ನವಾಗಿ ವ್ಯವಹರಿಸಲು ಕಾರಣವೇನು? ಸುಖತ್ವಾದಿಗಳು ಜ್ಞಾನದ ಅವಸ್ಥಾಭೇದಗಳಾದುದರಿಂದ ಅಂಥ ಅವಸ್ಥಾಭೇದಗಳನ್ನು ತೋರಿಸು ವುದಕ್ಕೋಸ್ಕರವೇ ಭಿನ್ನಭಿನ್ನವ್ಯವಹಾರಗಳು ಉಂಟಾಗಿರುವುವು. ಮಣ್ಣಿನಲ್ಲಿ ಪಿಂಡತ್ವ ಘಟತ್ವ ಮೊದಲಾದ ಅವಸ್ಥಾಭೇದಗಳನ್ನು ತೋರಿಸುವುದಕ್ಕಾಗಿ

“ಇದು ಮೃತ್ಪಿಂಡವು ಇದು ಘಟವು” ಎಂದು ಭಿನ್ನಭಿನ್ನವಾಗಿ ವ್ಯವಹರಿಸುತ್ತೇವೆ. ಆದಮಾತ್ರಕ್ಕೆ ಘಟವು ಮೃದ್ದ್ರವ್ಯಕ್ಕಿಂತಲೂ ಭಿನ್ನವಾದೀತೆ?

### ೯೫೨ ಸುಖತ್ವದುಃಖತ್ವಾದಿವಿರುದ್ಧಧರ್ಮಾಣಾಂ ಏಕಸ್ಮಿನ್ನೇವ ಜ್ಞಾನೇ ಕಾಲಭೇದೇನ ಅವಿರೋಧಿತ್ವಂ.

“ಒಂದೇ ಜ್ಞಾನವು ಸುಖವೆಂದೂ ದುಃಖವೆಂದೂ ಹೇಗೆ ಎನಿಸಿಕೊಳ್ಳಲಾದೀತು? ಸುಖತ್ವದುಃಖತ್ವಗಳು ಪರಸ್ಪರವಿರುದ್ಧಗಳಲ್ಲವೆ? ವಿರುದ್ಧಗಳಾದ ಆಕಾರಗಳು ಒಂದರಲ್ಲಿ ಕೂಡಲಾರವಷ್ಟೆ” ಎಂದು ಆಶಂಕಿಸಬಾರದು. ಒಂದೇ ಮನುಷ್ಯನಲ್ಲಿ ಕಾಲಭೇದದಿಂದ ಬಾಲತ್ವ ಯುವತ್ವ ವೃದ್ಧತ್ವ ಮೊದಲಾದ ಪರಸ್ಪರವಿರುದ್ಧಾಕಾರಗಳು ಸಂಭವಿಸಿದರೂ ಹೇಗೆ ವಿರೋಧವಿಲ್ಲವೋ ಅದರಂತೆ ಇಲ್ಲಿಯೂ ಕಾಲಭೇದದಿಂದ ವಿರೋಧವಿಲ್ಲವೆಂದು ತಿಳಿಯಬಹುದು.

### ೯೫೩ ಸುಖತ್ವಾಕಾರಸ್ಯೈವ ಜ್ಞಾನೇ ಸ್ವಾಭಾವಿಕತ್ವೋಪಪಾದನಂ

ಆದರೆ ಜ್ಞಾನಕ್ಕೆ ಸ್ವಾಭಾವಿಕವಾದ ಆಕಾರವು ಯಾವುದು? ಸುಖರೂಪತ್ವವೇ ಇದಕ್ಕೆ ಸ್ವಾಭಾವಿಕವಾದ ಆಕಾರವಾಗಿರುವುದು. ಇದನ್ನು ಕಂಡುಹಿಡಿವ ಬಗೆ ಹೇಗೆ? ಹೀಗೆ—ಅನುಕೂಲ, ಪ್ರತಿಕೂಲ, ಉದಾಸೀನ, ಎಂಬ ಮೂರು ರಾಶಿಗಳಲ್ಲಿ ಎಲ್ಲಾ ಪದಾರ್ಥಗಳೂ ಅಡಗುವುವು. ಇವುಗಳಲ್ಲಿ ಅನುಕೂಲವೆಂಬುದು ಸುಖರೂಪವಾಗಿಯೂ, ಪ್ರತಿಕೂಲವೆಂಬುದು ದುಃಖರೂಪವಾಗಿಯೂ, ಉದಾಸೀನವೆಂಬುದು ಉಭಯರೂಪವಲ್ಲದುದಾಗಿಯೂ ಆಗುವುದು.

ಚಂದನ, ಪುಷ್ಪ, ತಾಂಬೂಲ, ವನಿತೆ, ಧನ, ಕನಕ, ಗೃಹ ಮುಂತಾದುವು ಅನುಕೂಲಗಳಾದುದರಿಂದ ಸುಖರೂಪಗಳೆನಿಸಿಕೊಳ್ಳುವುವು. ಕಂಟಕ, ವಿಷ, ಶಸ್ತ್ರ ಮೊದಲಾದುವು ಪ್ರತಿಕೂಲಗಳಾದುದರಿಂದ ದುಃಖರೂಪಗಳೆನಿಸಿಕೊಳ್ಳುವುವು. ಕಾಷ್ಠ, ಲೋಷ್ಟ ಮುಂತಾದುವು ಉದಾಸೀನಗಳಾದುದರಿಂದ ಉಭಯರೂಪಗಳಲ್ಲವಾಗಿರುವುವು.

ಪ್ರತಿಯೊಂದು ಪ್ರಾಣಿಯೂ ತನ್ನ ಆತ್ಮಸ್ವರೂಪವನ್ನು ವಿಮರ್ಶಿಸುವ ಕಾಲದಲ್ಲಿ ತನ್ನನ್ನು ತನಗೆ ಪ್ರತಿಕೂಲನಾಗಿಯಾಗಲಿ ಉದಾಸೀನನಾಗಿಯಾಗಲಿ ತಿಳಿದುಕೊಳ್ಳುವುದಿಲ್ಲ. “ತಾನು” ಎಂದು ಹೇಳಿಕೊಳ್ಳುವ ಕಾಲದಲ್ಲೆಲ್ಲಾ ಮನಸ್ಸಿಗೆ ಆಪ್ಯಾಯನವಾಗುವುದರಿಂದ ತನ್ನನ್ನು ಅನುಕೂಲವಸ್ತುವಾಗಿಯೇ ತಿಳಿದುಕೊಳ್ಳುವುದು. ಆದುದರಿಂದ ಜ್ಞಾನಾತ್ಮಕವಾದ ಆತ್ಮಸ್ವರೂಪಕ್ಕೆ ಸರ್ವದಾ ಅನುಕೂಲತ್ವವೇ ಇರುವುದಾದಪ್ರಯುಕ್ತ ಸರ್ವದಾ ಇದು ಸುಖರೂಪವಾಗಿಯೇ ಇರುವುದು.

ಜ್ಞಾನಾತ್ಮಕವಾದ ಆತ್ಮಸ್ವರೂಪವು ಸುಖರೂಪವಾಗಿಯೇ ಇರುವುದೆಂಬುದರಲ್ಲಿ ವಿವಾದವಿಲ್ಲವಾದರೆ ಅಂಥ ಆತ್ಮನಲ್ಲಿರುವ ಧರ್ಮಭೂತಜ್ಞಾನವೂ ಜ್ಞಾನಸ ಭಿನ್ನವಲ್ಲದೆ ಜ್ಞಾನಾತ್ಮಕವಾಗಿಯೇ ಇರುವುದರಿಂದ ಸುಖರೂಪತ್ವವೇ ಇದಕ್ಕೆ ಸ್ವಾಭಾವಿಕಾಕಾರವೆಂಬುದರಲ್ಲಿಯೂ ವಿವಾದವಿಲ್ಲ.

**೯೫೪ ಜ್ಞಾನೇ ವೈಷಯಿಕಸುಖದುಃಖತ್ವಾದ್ಯಾಕಾರಾಣಾಂ ಕರ್ಮನಿಬಂಧನವಿಷಯಸಂಬಂಧಾಧೀನತ್ವಾತ್ ವಿಷಯೇಷ್ವಪಿ ಸುಖದುಃಖಾದಿಪದಪ್ರಯೋಗಃ.**

ಇಂಥ ಜ್ಞಾನಕ್ಕೆ ಅನಾದಿಕಾಲದಿಂದ ಬಂದಿರುವ ಪುಣ್ಯಪಾಪಗಳೆಂಬ ಕರ್ಮವಶದಿಂದ ವೈಷಯಿಕಸುಖತ್ವ, ದುಃಖತ್ವ ಮೊದಲಾದ ಆಕಾರಗಳು ಔಪಾಧಿಕಗಳಾಗಿ ಬಂದೊದಗುವುವು. ಇಂಥ ಆಕಾರಗಳು ಜ್ಞಾನಕ್ಕೆ ಆ ಆ ವಿಷಯಸಂಬಂಧದಿಂದಲೇ ಬರುವುದಾದಕಾರಣ ಆ ಆ ವಿಷಯಗಳಲ್ಲಿಯೂ ಎಂದರೆ ಅನುಕೂಲ ಪ್ರತಿಕೂಲಪದಾರ್ಥಗಳಲ್ಲಿಯೂ ಸುಖದುಃಖಶಬ್ದಗಳು ಪ್ರಯೋಗಿಸಲ್ಪಡುವುವು. ಅನುಕೂಲತ್ವಪ್ರತಿಕೂಲತ್ವಧರ್ಮಗಳೇ ಸುಖದುಃಖಶಬ್ದಗಳ ಪ್ರಯೋಗಕ್ಕೆ ಮೂಲವಾಗಿರುವುವು. ಈಗ ಹೇಳಿದ ಈ ಅರ್ಥಗಳನ್ನೆಲ್ಲಾ ಶ್ರೀಭಾಷ್ಯಕಾರರು ವೇದಾರ್ಥಸಂಗ್ರಹದಲ್ಲಿಯೂ, ಶ್ರೀಭಾಷ್ಯದ ಭೂಮಾಧಿಕರಣದಲ್ಲಿಯೂ ವಿಶದವಾಗಿ ಅಪ್ಪಣೆಕೊಡಿಸಿರುವರು.

**೯೫೫ ಸುಷುಪ್ತೌ ಪ್ರಯತ್ನಾಭಾವೇಽಪಿ ಜೀವೀಯಾದೃಷ್ಟವಿಶೇಷಸಹಿತೇಶ್ವರಸಂಕಲ್ಪಾದೇವ ಶ್ವಾಸಾದಿಪ್ರವೃತ್ತಿಃ.**

ಪೂಜ್ಯರೆ! ಪ್ರಯತ್ನವೆಂಬುದನ್ನೂ ಜ್ಞಾನರೂಪವಾಗಿಯೇ ಹೇಳುವಿರಾದರೆ ಸುಷುಪ್ತ್ಯವಸ್ಥೆಯಲ್ಲಿ ಸರ್ವಜ್ಞಾನವೂ ಲೋಪವನ್ನು ಹೊಂದಿದರೆ ಪ್ರಯತ್ನವೆಂಬುದೂ ಆಗ ಲುಪ್ತವಾಗಬೇಕಾಗುವುದಲ್ಲವೆ ? ಹವುದು ಆಗ ಪ್ರಯತ್ನವು ಲುಪ್ತವಾಗಬೇಕಾಗುವುದು. ಅದನ್ನೇ ಅನುಸರಿಸಿ ಆಗ ಪ್ರಯತ್ನವಿಲ್ಲವೆಂದೇ ನಾವೂ ಹೇಳುವೆವಲ್ಲದೆ ಸುಷುಪ್ತಿಕಾಲದಲ್ಲಿ ಪ್ರಯತ್ನವನ್ನು ನಮ್ಮ ಸಿದ್ಧಾಂತದಲ್ಲಿ ಒಪ್ಪಲೇ ಇಲ್ಲ.

ಆದರೆ ಶ್ವಾಸೋಚ್ಛ್ವಾಸಾದಿಗಳು ಸುಷುಪ್ತಿಕಾಲದಲ್ಲಿ ಹೇಗೆ ಸಂಭವಿಸುವುವೆಂದು ಆಕ್ಷೇಪಿಸಬೇಡಿರಿ. ಆ ಆ ಅದೃಷ್ಟವಿಶೇಷವೆಂಬ ಸಹಕಾರಿಯೊಡನೆ ಕೂಡಿದ ಈಶ್ವರಸಂಕಲ್ಪವಿಶೇಷದಿಂದಲೇ ಶ್ವಾಸೋಚ್ಛ್ವಾಸಗಳು ಸಂಭವಿಸುವುವಲ್ಲದೆ ಜೀವನ ಪ್ರಯತ್ನದಿಂದಲ್ಲ.

" ಆದರೆ ಪ್ರಯತ್ನವೆಂಬ ಕ್ಲ್ಪಪ್ತಕಾರಣವನ್ನು ಬಿಟ್ಟು ಅದೃಷ್ಟವೆಂಬ ಕಾರಣಾಂತರವನ್ನು ಕಲ್ಪಿಸಿದರೆ ಗೌರವದೋಷವಿಲ್ಲವೋ ? "ಎಂದು ಆಶಂಕಿಸಕೆಲಸವಿಲ್ಲ. ಸುಷುಪ್ತಿಕಾಲದಲ್ಲಿಯೂ ಪ್ರಯತ್ನವನ್ನು ಒಪ್ಪಿಕೊಳ್ಳುವ ನಿಮ್ಮ ಮತದಲ್ಲಿ— " ಜ್ಞಾನವಿಲ್ಲದಿರುವಾಗ ಪ್ರಯತ್ನವು ಹೇಗೆ ಉಂಟಾಯಿತು ? " ಎಂದು ನಾವು ಆಕ್ಷೇಪಿಸಿದಾಗ ಅಂಥ ಪ್ರಯತ್ನಕ್ಕೆ ಅದೃಷ್ಟವನ್ನೇ ಕಾರಣವನ್ನಾಗಿ ನೀವೂ ಒಪ್ಪುತ್ತೀರಿ. ಹೀಗಿರುವುದಾದರೆ ಅದೃಷ್ಟವೆಂಬುದನ್ನು ಒಪ್ಪಿಕೊಂಡು— ಅದರಿಂದ ಪ್ರಯತ್ನವೂ, ಅಂಥ ಪ್ರಯತ್ನದಿಂದ ಶ್ವಾಸೋಚ್ಛ್ವಾಸಗಳೂ ಉಂಟಾಗುವುವೆಂದು ಹೇಳುವುದಕ್ಕಿಂತಲೂ— ಅದೃಷ್ಟದಿಂದ ಸಾಕ್ಷಾತ್ತಾಗಿ ಶ್ವಾಸೋಚ್ಛ್ವಾಸಗಳೇ ಉಂಟಾಗುವುವೆಂದು ಒಪ್ಪಿದರೆ ಲಾಘವವಿರುವುದರಿಂದ ಮಧ್ಯದಲ್ಲಿ ಅನಾವಶ್ಯಕವಾದ ಪ್ರಯತ್ನವೆಂಬುದೊಂದನ್ನು ಒಪ್ಪುವ ನಿಮ್ಮ ಮತದಲ್ಲಿಯೇ ಗೌರವದೋಷವಿರುವುದಲ್ಲದೆ ನಮ್ಮ ಮತದಲ್ಲಿ ಇಲ್ಲ.

ಆದಕಾರಣ— ಸುಖ, ದುಃಖ, ಇಚ್ಛೆ, ದ್ವೇಷ, ಪ್ರಯತ್ನ, ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ, ಸಂಕಲ್ಪ, ವಿಕಲ್ಪ, ಸಂಶಯ, ಶ್ರದ್ಧೆ, ಅಶ್ರದ್ಧೆ, ಧೈರ್ಯ, ಅಧೈರ್ಯ, ಲಜ್ಜೆ, ಭಯ ಇವೇ ಮೊದಲಾದುವುಗಳೆಲ್ಲವೂ ಜ್ಞಾನದ ಅವಸ್ಥಾಭೇದಗಳೇ ಆಗಿರುವುವಲ್ಲದೆ ಪದಾರ್ಥಾಂತರಗಳಲ್ಲ.

## ೯೫೬. ಇಚ್ಛಾದೀನಾಂ ಜ್ಞಾನವಿಕಾರರೂಪತ್ವೇ ನಿರ್ವಿಕಾರೇ ಈಶ್ವರಜ್ಞಾನೇ ತತ್ಸಂಭವಕಥಂತಾಽಽಶಂಕಾ.

" ಪೂಜ್ಯರೆ ! ಇಚ್ಛಾದ್ವೇಷಾದಿಗಳು ಜ್ಞಾನಾವಸ್ಥಾವಿಶೇಷಗಳಾದುದರಿಂದ ಜ್ಞಾನದ ವಿಕಾರಗಳೆನಿಸಿಕೊಳ್ಳುವುವಾದರೆ—ನಿರ್ವಿಕಾರವಾಗಿಯೂ, ನಿತ್ಯವಾಗಿಯೂ, ಸರ್ವವಿಷಯಾವಗಾಹಿಯಾಗಿಯೂ ಇರುವ ಈಶ್ವರಜ್ಞಾನದಲ್ಲಿ ಇಂಥ ವಿಕಾರಗಳು ಹೇಗೆ ಉಂಟಾಗುವುವು ? ಎಂದರೆ ಈಶ್ವರನ ಜ್ಞಾನವು ಇಚ್ಛಾದ್ಯಾಕಾರದಿಂದ ಪರಿಣಮಿಸುವ ಬಗೆ ಹೇಗೆ ? ಆದರೆ ಅವನ ಜ್ಞಾನಕ್ಕೆ ಇಚ್ಛಾದಿವಿಕಾರಗಳು ಯಾವಾಗಲೂ ಉಂಟಾಗುವುದೇ ಇಲ್ಲವೆಂದು ಹೇಳಲೂ ಸಾಧ್ಯವಿಲ್ಲ. ಈಶ್ವರನೂ ಸಹ ಇಚ್ಛೆಯಿಂದಲೇ ಅಲ್ಲವೆ ಸೃಷ್ಟಿಸ್ಥಿತಿಪ್ರಳಯಗಳನ್ನು ನಡಸುವನು ? " ಸೋಽಕಾಮಯತ ಬಹುಸ್ಯಾಂ ಪ್ರಜಾಯೇಯೇತಿ" ಎಂಬ ಇವೇ ಮೊದಲಾದ ಸಾವಿರಾರು ಶ್ರುತಿಗಳು—ಈಶ್ವರನಿಗೆ ಇಚ್ಛೆಯುಂಟೆಂದು ಉದ್ಘೋಷಿಸುತ್ತಿರುವುವಲ್ಲವೆ? ಹೀಗಿರುವಲ್ಲಿ ಅವನ ಜ್ಞಾನಕ್ಕೆ ನಿರ್ವಿಕಾರತ್ವವನ್ನು ಬೋಧಿಸುವ ಶ್ರುತಿಯನ್ನು ರಕ್ಷಿಸುವ ಬಗೆ ಹೇಗೆ? "

## ೯೫೭. ಈಶ್ವರಜ್ಞಾನಸ್ಯ ಸ್ವಾಭಾವಿಕನಿರ್ವಿಕಾರತ್ವೇ ಸತ್ಯಪ್ಯೌಪಾಧಿಕಸವಿಕಾರತ್ವೋಪಪತ್ತ್ಯಾ ಉಕ್ತಾಶಂಕಾನಿವೃತ್ತಿಃ

ಇಂಥ ಆಶಂಕೆಗೆ—ಈಶ್ವರಜ್ಞಾನದಲ್ಲಿ ಸ್ವಾಭಾವಿಕವಾದ ನಿರ್ವಿಕಾರತ್ವವನ್ನೂ, ಆ ಆ ಕಾರ್ಯಸಾಮಗ್ರೀಸಂಯೋಗವೆಂಬ ಉಪಾಧಿಪ್ರಭಾವದಿಂದ ಇಚ್ಛೆ ಮೊದಲಾದ ವಿಕಾರಗಳನ್ನೂ ಒಪ್ಪುವುದರಿಂದಲೇ ಪರಿಹಾರವನ್ನು ತಿಳಿಯಬಹುದು.

ಅಥವಾ ನಿತ್ಯವಾಗಿಯೂ, ನಿರ್ವಿಕಾರವಾಗಿಯೂ, ಸರ್ವವಿಷಯಾವಗಾಹಿಯಾಗಿಯೂ ಇರುವ ಜ್ಞಾನವನ್ನು ಪಡೆದಿರುವ ಈಶ್ವರನಿಗೆ ಅನಿತ್ಯವಾದ ಜ್ಞಾನಾಂತರವೂ ಒಂದು ಉಂಟೆಂಬ ಮತ್ತೊಂದು ಪಕ್ಷವನ್ನೂ ಈಶ್ವರಪರಿಚ್ಛೇದದಲ್ಲಿ ನಾವು ತೋರಿಸಿರುವೆವಾದುದರಿಂದ ಅಂಥ ಅನಿತ್ಯವಾದ ಜ್ಞಾನದಲ್ಲಿ ಇಚ್ಛಾದಿವಿಕಾರಗಳಿರುವುವೆಂದು ಹೇಳಿದರೂ ಹಾನಿಯಿಲ್ಲ.

## ೯೫೮. ಪ್ರೀತ್ಯಪ್ರೀತಿರೂಪಾದೃಷ್ಟಸ್ಯಾಪಿ ಈಶ್ವರಧರ್ಮಭೂತಜ್ಞಾನಾವಸ್ಥಾವಿಶೇಷರೂಪತ್ವಂ

ಇದರಂತೆ ಪುಣ್ಯಪಾಪರೂಪವಾದ ಕರ್ಮದಿಂದ ಉಂಟಾಗುವ ಅದೃಷ್ಟವೆಂಬುದೂ ಈಶ್ವರನ ಪ್ರೀತ್ಯಪ್ರೀತಿರೂಪವಾದುದರಿಂದ ಅವನ ಜ್ಞಾನಾವಸ್ಥಾವಿಶೇಷವೇ ಆಗಿರುವುದಲ್ಲದೆ ಪದಾರ್ಥಾಂತರವಲ್ಲ.

## ೯೫೯. ಅದೃಷ್ಟಾನಾಶ್ರಯಾಣಾಂ ಜೀವಾನಾಂ ಫಲವ್ಯವಸ್ಥಾನುಪಪತ್ತ್ಯಾಶಂಕಾತತ್ಪರಿಹಾರೌ

" ಓಹೋ ! ಅದೃಷ್ಟವೆಂಬುದು ಈಶ್ವರಜ್ಞಾನದ ಅವಸ್ಥಾವಿಶೇಷರೂಪವಾಗುವುದಾದರೆ ಅದು ಈಶ್ವರಜ್ಞಾನದಲ್ಲಿ ಇರುವುದಲ್ಲದೆ ಜೀವನಲ್ಲಿ ಇಲ್ಲ. ಹೀಗೆ ಸಕಲಜೀವವಸ್ತುವೂ ಕರ್ಮಜನ್ಯವಾದ ಅದೃಷ್ಟಕ್ಕೆ ಆಶ್ರಯವಲ್ಲದಿದ್ದರೆ ಎಲ್ಲಾ ಜೀವವಸ್ತುವೂ ಸಮಾನವಾದುದರಿಂದ " ಯಾವ ಜೀವನಿಗೆ ಪುಣ್ಯಫಲವುಂಟಾಗಬೇಕು ? ಮತ್ತು ಯಾವ ಜೀವನಿಗೆ ಪಾಪಫಲವುಂಟಾಗಬೇಕು ? " ಎಂಬುದನ್ನು ನಿಷ್ಕರ್ಷಿಸುವುದಕ್ಕೆ ಯಾವ ಉಪಾಯವೂ ಇಲ್ಲವಾದಕಾರಣ ಅವ್ಯವಸ್ಥೆಯುಂಟಾಗುವುದಲ್ಲವೆ ? "

ಇಲ್ಲ ಅವ್ಯವಸ್ಥೆಯುಂಟಾಗುವುದಿಲ್ಲ. ಉಕ್ತರೂಪವಾದ ಅದೃಷ್ಟವು ಈಶ್ವರಜ್ಞಾನದಲ್ಲಿ ಆಶ್ರಯತಾಸಂಬಂಧದಿಂದ ಇದ್ದರೂ ವಿಷಯತಾಸಂಬಂಧದಿಂದ ಆ ಆ ಚೇತನನಲ್ಲಿಯೂ ಇರುವುದಾದುದರಿಂದ ಆ ಆ ಜೀವನಿಗೇ ಆ ಆ ಫಲಗಳು ಉಂಟಾಗುವುವಾದಕಾರಣ ಅವ್ಯವಸ್ಥೆಗೆ ಅವಕಾಶವಿಲ್ಲ. ಈಶ್ವರಪ್ರೀತ್ಯಪ್ರೀತಿ

ರೂಪವಾದ ಅದೃಷ್ಟಕ್ಕೆ ಕಾರಣಗಳಾದ ಪುಣ್ಯಾಪಾಪಗಳನ್ನು ಯಾವ ಜೀವನು ನಡಸಿರುವನೋ ಅಂಥ ಜೀವನ ವಿಷಯವಾಗಿಯೇ ಅಲ್ಲವೆ ಈಶ್ವರನಿಗೆ ಪ್ರೀತ್ಯ ಪ್ರೀತಿಗಳು ಉಂಟಾಗುವುವು.

ಅದೃಷ್ಟವೆಂಬುದು ಶಾಸ್ತ್ರೈಕಗಮ್ಯವಾದ ವಸ್ತುವಾದುದರಿಂದಲೂ, ಶಾಸ್ತ್ರವೂ ಸಹ ಅದೃಷ್ಟವನ್ನು ಈಶ್ವರನ ಪ್ರೀತ್ಯಪ್ರೀತಿರೂಪವಾಗಿಯೇ ತಿಳಿಯಪಡಿಸುವುದರಿಂದಲೂ ಹಾಗೆಯೇ ಅದನ್ನು ಒಪ್ಪಿಕೊಳ್ಳಬೇಕು.

## ೯೬೦. ಧರ್ಮಾಧರ್ಮರೂಪಾದೃಷ್ಟಸ್ಯ ಆತ್ಮನಿಷ್ಠತ್ವವಾದಿ ನೈಯಾಯಿಕಮತನಿರಾಕರಣಂ.

ಹೀಗೆ ನಾವು ತೋರಿಸಿದ ರೀತಿಯಲ್ಲಿ ಈಶ್ವರನ ಪ್ರೀತ್ಯಪ್ರೀತಿರೂಪವಾದ ಅದೃಷ್ಟದಿಂದಲೇ ಆ ಆ ಜೀವನಿಗೆ ಫಲವ್ಯವಸ್ಥೆ ಸಂಗತವಾಗಲು ಯಾವ ಅನುಪಪತ್ತಿಯೂ ಇಲ್ಲವಾದುದರಿಂದ—ಸುಖದುಃಖಾನುಭವಕ್ಕಾಗಿ ಜೀವನಲ್ಲಿಯೇ ಒಂದಾನೊಂದು ಅದೃಷ್ಟವಿಶೇಷವನ್ನು ಕಲ್ಪಿಸುವ ನೈಯಾಯಿಕರ ಮತವು ಶ್ರುತಿ ವಿರುದ್ಧವಾದಕಾರಣ ಮುಮುಕ್ಷುಗಳಿಗೆ ಅನಾದರಣೀಯವಾಗಿರುವುದು.

## ೯೬೧ ಕರ್ಮಜನ್ಯದೇವತಾಂತರಪ್ರೀತೇರಪಿ ಈಶ್ವರಪ್ರೀತಿ ದ್ವಾರೈವ ತತ್ತತ್ಕರ್ಮಫಲಹೇತುತ್ವಂ

"ಪೂಜ್ಯರೆ? ಈಶ್ವರನ ಪ್ರೀತ್ಯಪ್ರೀತಿಗಳೇ ಅದೃಷ್ಟವೆನಿಸಿಕೊಳ್ಳುವುವಾದರೆ ಇಂದ್ರಾದಿದೇವತೆಗಳ ಪ್ರೀತ್ಯಪ್ರೀತಿಗಳು ಅದೃಷ್ಟವೆನಿಸಿಕೊಳ್ಳುವುದಿಲ್ಲವೆಂದು ನಿಮ್ಮ ಅಭಿಪ್ರಾಯವೋ? ಕರ್ಮಜನ್ಯವಾದ ಒಂದಾನೊಂದು ಅತಿಶಯವಲ್ಲವೆ ಅದೃಷ್ಟವೆನಿಸಿಕೊಳ್ಳುವುದು? ಅದು ಆ ಆ ಚೇತನರ ವಿಷಯವಾಗಿ ಈಶ್ವರಜ್ಞಾನದಲ್ಲಿ ಹೇಗೆ ಉಂಟಾಗುವುದೋ ಹಾಗೆಯೇ ಅಗ್ನಿ, ಇಂದ್ರ ಮೊದಲಾದ ದೇವತೆಗಳ ಜ್ಞಾನದಲ್ಲಿಯೂ ಉಂಟಾಗಬಹುದಲ್ಲವೆ? **"ತೃಪ್ತ ಏವೈನಮಿಂದ್ರಃ ಪ್ರಜಯಾ ಪಶುಭಿಸ್ತರ್ಪಯತಿ"** ಎಂಬ ಇದೇ ಮೊದಲಾದ ಶ್ರುತಿಯೂ ಸಹ ಈ ಅರ್ಥವನ್ನು ದೃಢಪಡಿಸುತ್ತಿರುವುದಲ್ಲವೆ?"

ಹೀಗೆ ಆಶಂಕಿಸುವ ಪಕ್ಷದಲ್ಲಿ—ಅಗ್ನೀಂದ್ರಾದಿದೇವತೆಗಳ ಪ್ರೀತ್ಯಪ್ರೀತಿಗಳನ್ನೂ ಅದೃಷ್ಟರೂಪಗಳನ್ನಾಗಿ ಒಪ್ಪಿಕೊಂಡರೂ ನಮ್ಮ ಸಿದ್ಧಾಂತಕ್ಕೆ ಹಾನಿಯಿಲ್ಲ.

ಓಹೋ! ಹಾಗಾದರೆ—ಅಗ್ನೀಂದ್ರಾದಿದೇವತೆಗಳ ಪ್ರೀತಿಗಾಗಿ ಒಬ್ಬ ಚೇತನನು ಸತ್ಕರ್ಮವನ್ನು ಮಾಡಿದರೆ ಅವನಿಗೆ ಆ ಕರ್ಮದ ಫಲವನ್ನು ಕೊಡು

ವಷ್ಟರೊಳಗಾಗಿಯೇ ಅಗ್ನೀಂದ್ರಾದಿದೇವತೆಗಳು ತಮ್ಮ ತಮ್ಮ ಅಧಿಕಾರದಿಂದ ಚ್ಯುತರಾಗುವ ಪಕ್ಷದಲ್ಲಿ ಆಗ ಅವರ ಪ್ರೀತಿಗೆ ಫಲಪ್ರದಾನಶಕ್ತಿಯೇ ಇಲ್ಲವಾದುದರಿಂದ ಅದನ್ನು ಅದೃಷ್ಟರೂಪವಾಗಿ ಹೇಗೆ ಹೇಳಲಾದೀತು?

ಹೀಗೆ ಹೇಳಲಾದೀತು—ಅಗ್ನೀಂದ್ರಾದಿಗಳ ಪ್ರೀತಿ ಸಾಕ್ಷಾತ್ತಾಗಿ ಕರ್ಮಫಲವನ್ನು ಕೊಡುವುದಿಲ್ಲ. ಅವರ ಪ್ರೀತಿಯಿಂದ—ಅವರಿಗೂ ಅಂತರ್ಯಾಮಿಯಾಗಿರುವ ಈಶ್ವರನಿಗೆ ಪ್ರೀತಿಯುಂಟಾಗಿ ಅದರಮೂಲಕ ಫಲಪ್ರಾಪ್ತಿಯಾಗುವುದಾದ ಕಾರಣ ಅವರು ತಮ್ಮ ಅಧಿಕಾರದಿಂದ ಚ್ಯುತರಾದರೂ ಹಾನಿಯಿಲ್ಲ.

## ೧೬೨ ದೇವತಾಂತರೋದ್ದೇಶೇನಾನುಷ್ಠಿತಾನಾಮಪಿ ಕರ್ಮಣಾಂ ಭಗವತ್ಪ್ರೀತಿಜನಕತ್ವಮೇವ

"ಆದರೆ ಯಾವನಾದರೊಬ್ಬಚೇತನನು ಕೇವಲ ಇಂದ್ರಾದಿದೇವತೆಗಳ ಆರಾಧನರೂಪವಾದ ಕರ್ಮವನ್ನು ಮಾಡಿದನಾದರೆ ಅದರಿಂದ ಕೇವಲ ಇಂದ್ರಾದಿದೇವತೆಗಳ ಪ್ರೀತಿ ಹುಟ್ಟಬಹುದಲ್ಲದೆ ಭಗವತ್ಪ್ರೀತಿ ಹೇಗೆ ಹುಟ್ಟೀತು? ಅಂಥ ಕರ್ಮವು ಭಗವದಾರಾಧನರೂಪವಲ್ಲವಷ್ಟೆ?"

ಇಂಥ ಆಶಂಕೆ ಸಂಗತವಲ್ಲ. ಏತಕ್ಕೆಂದರೆ—ಕೇವಲ ಪರಮಾತ್ಮಾರಾಧನರೂಪವಾದ ಕರ್ಮವಾದರೂ ಸರಿ, ಅಗ್ನೀಂದ್ರಾದಿಗಳಿಗೆ ಶರೀರಿಯಾಗಿರುವ ಪರಮಾತ್ಮನ ಆರಾಧನರೂಪವಾದ ಕರ್ಮವಾದರೂ ಸರಿ, ಕೇವಲ ಅಗ್ನೀಂದ್ರಾದಿದೇವತೆಗಳ ಆರಾಧನರೂಪವಾದ ಕರ್ಮವಾದರೂ ಸರಿ, ಈ ಎಲ್ಲಾ ಕರ್ಮಗಳೂ ಭಗವತ್ಪ್ರೀತಿಗೇ ಹೇತುವಾಗಿ ಪರಿಣಮಿಸುವುವಲ್ಲದೆ ಕೇವಲ ಅಗ್ನೀಂದ್ರಾದಿಗಳ ಪ್ರೀತಿಗಲ್ಲ. ಹೇಗೆಂದರೆ, ರಾಜನೂ ಅವನ ಭೃತ್ಯನೂ ಇಬ್ಬರೂ ಸಹ ಚಾರ್ವಾಕಮತಾವಲಂಬಿಗಳಾಗಿದ್ದರೆ. ಅವರ ಮತದಲ್ಲಿ ದೇಹಾತಿರಿಕ್ತನಾದ ಆತ್ಮನೆಂಬುವನಿಲ್ಲವಾದುದರಿಂದ ಶರೀರಕ್ಕೆ ಪ್ರೀತಿಯುಂಟಾಗಲೆಂದು ಉದ್ದೇಶಿಸಿ ಭೃತ್ಯನು ರಾಜನ ಶರೀರಕ್ಕೆ ಚಂದನಪುಷ್ಪತಾಂಬೂಲಗಳನ್ನು ಅರ್ಪಿಸುತ್ತಾನೆ; ಆದರೂ ಅವುಗಳಿಂದ ರಾಜಶರೀರದಲ್ಲಿರುವ ಆತ್ಮನಿಗೇ ಪ್ರೀತಿಯುಂಟಾಗುತ್ತಿರುವುದು ಲೋಕಾನುಭವಸಿದ್ಧವಾಗಿರುವುದು. ಅದರಂತೆ ಪರಮಾತ್ಮಸ್ವರೂಪಜ್ಞಾನವಿಲ್ಲದ ಕೆಲವರು ಮೂರ್ಖರು ಕೇವಲ ಅಗ್ನೀಂದ್ರಾದಿದೇವತೆಗಳ ಪ್ರೀತಿಯನ್ನೇ ಉದ್ದೇಶಿಸಿ ಶಾಸ್ತ್ರೀಯಕರ್ಮಗಳನ್ನು ಆಚರಿಸಿದರೂ ವಾಸ್ತವದಲ್ಲಿ ಪರಮಾತ್ಮನಿಗೆ ಶರೀರಭೂತರಾಗಿರುವ ಅಗ್ನೀಂದ್ರಾದಿದೇವತೆಗಳಲ್ಲಿ ಮಾಡಿದ ಆರಾಧನವು ಅವರಿಗೂ ಅಂತರ್ಯಾಮಿಯಾಗಿ ಶರೀರಿಯೆನಿಸಿಕೊಂಡಿರುವ ಪರಮಾತ್ಮನ ಆರಾಧನರೂಪ

ವಾಗಿಯೇ ಪರಿಣಮಿಸುವುದರಿಂದ ಮೂಢರು ಆಚರಿಸಿದ ಅಂಥ ಕರ್ಮಗಳಿಂದಲೂ ಪರಮಾತ್ಮನಿಗೇ ಪ್ರೀತಿಯುಂಟಾಗುವುದಲ್ಲದೆ ಅಗ್ನೀಂದ್ರಾದಿಗಳಿಗಲ್ಲ.

ಪರಮಾತ್ಮನು ಅಗ್ನೀಂದ್ರಾದಿಗಳಿಗೂ ಅಂತರ್ಯಾಮಿಯಾಗಿ ಅವರ ಹೃದಯದಲ್ಲಿ ವಾಸಮಾಡುತ್ತಿರುವುದರಿಂದಲೇ ಅವರಿಗೂ ಪರಮಾತ್ಮಾರಾಧನರೂಪವಾದ ಕರ್ಮದಲ್ಲಿ ಸ್ವಲ್ಪಮಟ್ಟಿಗೆ ಸಂಬಂಧವಿರುವುದಲ್ಲದೆ ಸಾಕ್ಷಾತ್ತಾಗಿ ಇಲ್ಲ. ಇದೇ ಅರ್ಥವನ್ನು ಶ್ರೀ ಗೀತಾಚಾರ್ಯನು—

**"ಯೇಽಪ್ಯನ್ಯದೇವತಾಭಕ್ತಾ ಯಜಂತೇ ಶ್ರದ್ಧಯಾಽನ್ವಿತಾಃ |**
**ತೇಽಪಿ ಮಾಮೇವ ಕೌಂತೇಯ ಯಜಂತ್ಯವಿಧಿಪೂರ್ವಕಂ ||"**

ಎಂದು ಭಗವದ್ಗೀತೆಯ ಒಂಬತ್ತನೆಯ ಅಧ್ಯಾಯದ ಇಪ್ಪತ್ತುಮೂರನೆಯ ಶ್ಲೋಕದಲ್ಲಿ ಅತಿಸ್ಫುಟವಾಗಿ ಅಪ್ಪಣೆಕೊಡಿಸಿರುವನು—ಆದುದರಿಂದ ಕೇವಲ ಇಂದ್ರಾದಿದೇವತೆಗಳನ್ನು ಉದ್ದೇಶಿಸಿ ಆಚರಿಸಿದ ಕರ್ಮಗಳಲ್ಲಿಯೂ ಭಗವತ್ಪ್ರೀತಿ ಹುಟ್ಟುವುದರಲ್ಲಿ ಯಾವ ಅನುಪಪತ್ತಿಯೂ ಇಲ್ಲ.

## ೯೬೩ ಅನುಗ್ರಹವನ್ನಿಗ್ರಹಸ್ಯಾಪಿ ಭಗವದ್ಗುಣರೂಪತ್ವಮೇವ.

"ಪೂಜ್ಯರೆ? ಚೇತನರು ಆಚರಿಸಿದ ಪುಣ್ಯಪಾಪಗಳಿಂದ ಉಂಟಾಗುವ ಅದೃಷ್ಟವು—ಈಶ್ವರನ ಪ್ರೀತಿರೂಪವಾಗಿಯೂ ಅಪ್ರೀತಿರೂಪವಾಗಿಯೂ ಇರುವುದರಿಂದ ಇದು ಈಶ್ವರಜ್ಞಾನದ ಅವಸ್ಥಾವಿಶೇಷವೆಂದು ಹೇಳಿದಿರಿ. ಆದರೆ ಪ್ರೀತಿಯೆಂಬುದು ಆಶ್ರಿತಾನುಗ್ರಹರೂಪವಾದುದರಿಂದ ಈ ಗುಣವು ಈಶ್ವರನಿಗೆ ಯುಕ್ತವಾಗಿದ್ದರೂ, ನಿಗ್ರಹರೂಪವಾದ ಅಪ್ರೀತಿ ಕ್ರೋಧರೂಪವಾದುದರಿಂದ ದೋಷವಾಗಿರುವುದಲ್ಲದೆ ಗುಣವಾಗಲಾರದಾದಕಾರಣ ಕಲ್ಯಾಣಗುಣಾಕರನಾಗಿಯೂ ದೋಷರಹಿತನಾಗಿಯೂ ಇರುವ ಈಶ್ವರನಿಗೆ ಕ್ರೋಧವೆಂಬುದು ಹೇಗೆ ಯುಕ್ತವಾದೀತು?"

ಇಂಥ ಆಶಂಕೆ ಸಂಗತವಲ್ಲ. ಏತಕ್ಕೆಂದರೆ—ಕಾರಣರಹಿತವಾಗಿಯೂ ವಿವೇಕರಹಿತವಾಗಿಯೂ ಇರುವ ಕ್ರೋಧವೇ ದೋಷವೆನಿಸಿಕೊಳ್ಳುವುದಲ್ಲದೆ ಕ್ರೋಧಸಾಮಾನ್ಯವೂ ದೋಷವೆನಿಸಿಕೊಳ್ಳಲಾರದು. ಹಾಗೆ ಎನಿಸಿಕೊಳ್ಳುವುದಾದರೆ—ಧಾರ್ಮಿಕನಾದ ರಾಜನು ತನ್ನ ರಾಜ್ಯದಲ್ಲಿ ದುಷ್ಟರನ್ನೂ ತಪ್ಪಿತಸ್ಥರನ್ನೂ ನಿಗ್ರಹಿಸುವುದಕ್ಕಾಗಿ ವಹಿಸುವ ಕ್ರೋಧವೂ ದೋಷವಾಗಬೇಕಾಗಿ ಬರುವುದು. ಆದರೆ ನ್ಯಾಯಾನುಸಾರಿಯಾದ ಅಂಥ ಕೋಪವು ರಾಜನಿಗೆ ಗುಣವೆನಿಸಿಕೊಂಡು ಭೂಷಣವಾಗಿಯೇ ಪರಿಣಮಿಸುವುದಲ್ಲದೆ ದೋಷವಾಗಲಾರದು.

ಆದರಂತೆ ಈಶ್ವರನಿಗೂ ತನ್ನ ಆಜ್ಞಾರೂಪವಾದ ಶಾಸ್ತ್ರವನ್ನು ಉಲ್ಲಂಘಿಸಿ ನಡೆಯುವವರ ವಿಷಯದಲ್ಲಿ ಉಂಟಾಗುವ ನಿಗ್ರಹರೂಪವಾದ ಕ್ರೋಧವು ಗುಣವಾಗಿರುವುದಲ್ಲದೆ ದೋಷವಲ್ಲ. ಅಂಥ ಕ್ರೋಧವಿಲ್ಲದಿರುವಿಕೆಯೇ ದೋಷವಾಗುವುದು. ಆದುದರಿಂದ ಇಂಥ ಕ್ರೋಧವೂ ಈಶ್ವರಜ್ಞಾನದ ಅವಸ್ಥಾವಿಶೇಷವಾಗಿದ್ದರೂ ಈಶ್ವರನಿಗೆ ದೋಷಪ್ರಸಕ್ತಿಯಿಲ್ಲ. ಹೀಗೆಯೇ—ವಾತ್ಸಲ್ಯ, ಸೌಶೀಲ್ಯ, ಸೌಹಾರ್ದ, ಕಾರುಣ್ಯ, ಕ್ಷಮೆ, ಧೈರ್ಯ ಮೊದಲಾದ ಕಲ್ಯಾಣಗುಣಗಳೂ ಈಶ್ವರಜ್ಞಾನದ ಅವಸ್ಥಾವಿಶೇಷಗಳಾಗಿರುವುವು.

**೯೬೪. ಶೃಂಗಾರಾದಿನವರಸಸ್ಥಾಯಿಭಾವಭೂತಾನಾಂ ರತ್ಯಾದೀನಾಮಪಿ ಜ್ಞಾನಾವಸ್ಥಾವಿಶೇಷತ್ವಂ.**

ಹೀಗೆಯೇ—ಅಲಂಕಾರಶಾಸ್ತ್ರದಲ್ಲಿ ಪ್ರಸಿದ್ಧಗಳಾಗಿರುವ "**ಶೃಂಗಾರ, ಹಾಸ್ಯ, ಕರುಣ, ರೌದ್ರ, ವೀರ, ಭಯಾನಕ, ಬೀಭತ್ಸ, ಅದ್ಭುತ, ಶಾಂತ,** ಎಂಬ ಒಂಬತ್ತುರಸಗಳಿಗೂ ಕ್ರಮವಾಗಿ "**ರತಿ, ಹಾಸ, ಶೋಕ, ಕ್ರೋಧ, ಉತ್ಸಾಹ, ಭಯ, ಜುಗುಪ್ಸೆ, ವಿಸ್ಮಯ, ಶಮ**" ಎಂಬ ಈ ಒಂಬತ್ತೂ ಸ್ಥಾಯಿಭಾವಗಳೆನಿಸಿಕೊಳ್ಳುವುವೆಂದು ಆಲಂಕಾರಿಕರು ನಿಷ್ಕರ್ಷಿಸಿರುವರು. ಇಂಥ ಸ್ಥಾಯಿಭಾವಗಳೊಂಬತ್ತೂ ಸಹ ಜ್ಞಾನದ ಅವಸ್ಥಾವಿಶೇಷಗಳಾಗಿಯೇ ಇರುವುವಲ್ಲದೆ ಪದಾರ್ಥಾಂತರಗಳಲ್ಲ.

**೯೬೫. ನಿರ್ವೇದಾದೀನಾಂ ಸಂಚಾರಿಭಾವಾನಾಮಪಿ ಯಥಾಸಂಭವಂ ಜ್ಞಾನಾವಸ್ಥಾವಿಶೇಷತ್ವೋಪಪಾದನಂ.**

ಹೀಗೆಯೇ—"**ನಿರ್ವೇದ, ಗ್ಲಾನಿ, ಶಂಕೆ, ಅಸೂಯೆ, ಮದ, ಶ್ರಮ, ಆಲಸ್ಯ, ದೈನ್ಯ, ಚಿಂತೆ, ಮೋಹ, ಸ್ಮೃತಿ, ಧೃತಿ, ಲಜ್ಜೆ, ಚಪಲತೆ, ಹರ್ಷ, ಆವೇಗ, ಜಡತ್ವ, ಗರ್ವ, ವಿಷಾದ, ಔತ್ಸುಕ್ಯ, ನಿದ್ರೆ, ಅಪಸ್ಮಾರ, ಸುಪ್ತಿ, ವಿಬೋಧ, ಅಮರ್ಷ, ಅವಹಿತ್ಥ, (ಆಕಾರವನ್ನು ಮರೆಸುವಿಕೆ) ಉಗ್ರತ್ವ, ಮತಿ, ವ್ಯಾಧಿ, ಉನ್ಮಾದ, ಮರಣ, ತ್ರಾಸ, ವಿತರ್ಕ**" ಎಂಬ ಈ ಮೂವತ್ತುಮೂರೂ ರಸಕ್ಕೆ ಸಹಕಾರಿಗಳಾದ ಸಂಚಾರಿಭಾವಗಳೆನಿಸಿಕೊಳ್ಳುವುವೆಂದು ಆಲಂಕಾರಿಕರು ನಿಷ್ಕರ್ಷಿಸಿರುವರು. ಈ ಮೂವತ್ತುಮೂರೂ ಜ್ಞಾನದ ಅವಸ್ಥಾವಿಶೇಷಗಳೆಂದೇ ಕೆಲವರು ಅಭಿಪ್ರಾಯಪಡುವರು. ಕೆಲವುಮಾತ್ರವೇ ಜ್ಞಾನಾವಸ್ಥೆಗಳಾಗುವುವೆಂದೂ, ಕೆಲವು ಶರೀರಧರ್ಮಗಳಾಗುವುವೆಂದೂ, ಮತ್ತೆ ಕೆಲವು ಮನೋಧರ್ಮಗಳಾಗುವುವೆಂದೂ ಕೆಲವರು ಅಭಿಪ್ರಾಯಪಡುವರು.

ಇವುಗಳೊಳಗೆ "ಗ್ಲಾನಿ, ಶ್ರಮ, ಆಲಸ್ಯ, ದೈನ್ಯ, ಧೃತಿ, ನಿದ್ರೆ, ಅಪಸ್ಮಾರ, ವ್ಯಾಧಿ, ಮರಣ," ಎಂಬ ಈ ಒಂಬತ್ತು ಪದಾರ್ಥಗಳನ್ನು ಬಿಟ್ಟು ಉಳಿದ ಇಪ್ಪತ್ತುನಾಲ್ಕು ಪದಾರ್ಥಗಳೂ ಜ್ಞಾನದ ಅವಸ್ಥಾವಿಶೇಷಗಳೆಂಬುದರಲ್ಲಿ ವಿವಾದವಿಲ್ಲ.

ಈ ಒಂಬತ್ತರಲ್ಲಿಯೂ "ದೈನ್ಯ ಧೃತಿ, ನಿದ್ರೆ" ಈ ಮೂರೂ ಮನೋಧರ್ಮಗಳೆಂದೂ, ಉಳಿದ ಆರೂ ಶರೀರಧರ್ಮಗಳೆಂದೂ ತಿಳಿಯಬಹುದು. ವಿಷಾದವೆಂಬುದೂ ಮನೋಧರ್ಮವಾಗಿರುವುದೆಂದೂ ಕೆಲವರು ಹೇಳುವರು.

## ೯೬೬. ಸುಪ್ತೇಃ ಜ್ಞಾನಧರ್ಮತ್ವಾತ್ಮಧರ್ಮತ್ವಯೋಃ ಅನ್ಯತರತ್ವವ್ಯವಸ್ಥಾ

ಇಪ್ಪತ್ತಮೂರನೆಯದಾದ ಸುಪ್ತಿಯೆಂಬುದರಲ್ಲಿ ಸುಪ್ತಿಪದಕ್ಕೆ ಸ್ವಪ್ನವೆಂದು ಅರ್ಥವನ್ನು ಹೇಳುವುದಾದರೆ "ಕನಸು" ಎಂದು ಪರ್ಯವಸಾನವಾಗುವುದು. ಆಗ ಅದನ್ನು ಜ್ಞಾನದ ಅವಸ್ಥಾವಿಶೇಷವಾಗಿ ಹೇಳಲು ಯಾವ ಅಡ್ಡಿಯೂ ಇಲ್ಲ. ಸುಷುಪ್ತಿಯೆಂದು ಅರ್ಥವನ್ನು ಹೇಳುವುದಾದರೆ ಆಗ ಅದು ಮೂರ್ಛೆಯನ್ನು ಹೊಂದದೆಯೂ, ಮರಣವನ್ನು ಹೊಂದದೆಯೂ ಇರುವ ಆತ್ಮನಿಗೆ ಜ್ಞಾನಪ್ರಸರಣವು ಆತ್ಯಂತಿಕವಾಗಿ ಲುಪ್ತವಾಗಿರುವ ಅವಸ್ಥಾವಿಶೇಷವಾಗಿರುವುದೆಂದು ತಿಳಿಯಬಹುದು.

## ೯೬೭. ನಿದ್ರಾಯಾ ಮನೋಧರ್ಮತ್ವಂ ಜ್ಞಾನಾವಸ್ಥಾವಿಶೇಷರೂಪತ್ವಂ ವಾ.

ನಿದ್ರೆಯೆಂಬುದು—'ಚಿಂತೆ ಆಲಸ್ಯ ಕಶ್ಮಲ' ಮುಂತಾದ ದೋಷಗಳಿಂದ ತಿರಸ್ಕರಿಸಲ್ಪಟ್ಟ ಮನಸ್ಸು ಮುಕುಳಿತವಾಗುವುದಾದರೆ (ಸಕಲವ್ಯಾಪಾರಶೂನ್ಯವಾಗುವುದಾದರೆ) ಅಂಥ ಮನಸ್ಸಿನ ಅವಸ್ಥೆಯಾಗಿರುವುದು.

ಅಥವಾ ಜ್ಞಾನದ ಆತ್ಯಂತಿಕಸಂಕೋಚಾವಸ್ಥೆಯೇ ನಿದ್ರೆಯೆನಿಸಿಕೊಳ್ಳುವುದೆಂದಾದರೂ ತಿಳಿಯಬಹುದು. ಇಂಥ ನಿದ್ರೆಯೇ ಸುಷುಪ್ತಿಯೆಂಬ ಅವಸ್ಥೆಗೆ ಕಾರಣವಾಗುವುದು. ಆದುದರಿಂದಲೇ "ಸುಪ್ತಿರ್ನಿದ್ರಾಸಮುದ್ರೇಕಃ" ಎಂದು ಆಲಂಕಾರಿಕರೂ ಸುಷುಪ್ತಿಗೆ ಲಕ್ಷಣವನ್ನು ತೋರಿಸಿರುವರು.

ಪೂರ್ವ್ಯರೆ? ಮನಸ್ಸಿನ ಸಕಲವ್ಯಾಪಾರಶೂನ್ಯತ್ವಾವಸ್ಥೆಯೇ ನಿದ್ರೆಯೆಂದು ಹೇಳಿದಿರಿ; ಇದರಿಂದ—ಜಾಗ್ರದವಸ್ಥೆಯಲ್ಲಿಯೂ ಸ್ವಪ್ನಾವಸ್ಥೆಯಲ್ಲಿಯೂ ಉಂಟಾಗುತ್ತಿದ್ದ ಮನೋವೃತ್ತಿಗಳೆಲ್ಲಾ ನಿಂತುಹೋಗಿ ಕಾಲವಿಶೇಷದಲ್ಲಿ ಮನ

ಸ್ಸಿಗೆ ಉಂಟಾಗುವ ವೃತ್ತಿಶೂನ್ಯತ್ವಾವಸ್ಥೆಯೇ ನಿದ್ರೆಯೆನಿಸಿಕೊಳ್ಳುವುದೆಂದು ಫಲಿಸಿತು; ಹೀಗಾಗುವುದಾದರೆ **ಪತಂಜಲಿಮಹರ್ಷಿಯ** ಮುಖದಿಂದ ಹೊರಟಿರುವ **"ಅಭಾವಪ್ರತ್ಯಯಾಲಂಬನಾ ವೃತ್ತಿರ್ನಿದ್ರಾ"** ಎಂಬ ಯೋಗಸೂತ್ರವು ಹೇಗೆತಾನೆ ನಿಮಗೆ ವಿರೋಧಿಯಾಗಲಾರದು ? ಅಭಾವಬುದ್ಧಿಯನ್ನು ಅವಲಂಬಿಸಿಕೊಂಡು ಉಂಟಾಗುವ ಮನೋವೃತ್ತಿಯೇ ನಿದ್ರೆಯೆನಿಸಿಕೊಳ್ಳುವುದೆಂದಲ್ಲವೆ ಸೂತ್ರದ ಅಭಿಪ್ರಾಯವು ತೋರುವುದು ?

ಇಲ್ಲ—ಈ ಸೂತ್ರವು ನಮಗೆ ವಿರುದ್ಧವಲ್ಲ. ಈ ಸೂತ್ರದಲ್ಲಿರುವ ವೃತ್ತಿಶಬ್ದವು ಸಮಾಧಿಯೆಂಬ ಯೋಗಕ್ಕೆ ವಿರೋಧಿಯಾದ ಅವಸ್ಥೆಯನ್ನು ತೋರಿಸುವುದು. ಯೋಗಾಭ್ಯಾಸದ ಕೊನೆಯ ಅವಸ್ಥೆಯಾದ ಸಮಾಧಿಯೆಂಬುದನ್ನು ಪಡೆಯಲಪೇಕ್ಷಿಸುವವನಿಗೆ ಮನೋವೃತ್ತಿಗಳು ವಿರೋಧಿಗಳಾದುದರಿಂದ ಹೇಗಾದರೆ ನಿಗ್ರಹಿಸಲ್ಪಡತಕ್ಕುವುಗಳಾಗಿರುವುವೋ ಹಾಗೆಯೇ ನಿದ್ರೆಯೆಂಬುದೂ ಸಮಾಧ್ಯವಸ್ಥೆಗೆ ವಿರೋಧಿಯಾದುದರಿಂದ ಅದನ್ನೂ ಜಯಿಸಬೇಕೆಂಬುದು ಈ ಸೂತ್ರದ ಅಭಿಪ್ರಾಯವಾಗಿರುವುದು.

ಏತಕ್ಕೆಂದರೆ—ಯೋಗಕ್ಕೆ ವಿರೋಧಿಗಳು ಯಾವುಯಾವುವುಂಟೋ ಅವುಗಳನ್ನೆಲ್ಲಾ ನಿರೋಧಿಸಬೇಕೆಂದು ಹೇಳುವ ಪ್ರಕರಣದಲ್ಲಿ ಈ ಸೂತ್ರವೂ ಉಕ್ತವಾಗಿರುವುದೆಂಬ ಈಅರ್ಥವನ್ನು **ಶ್ರೀಯಾಮುನಮುನಿಗಳು** ಆತ್ಮಸಿದ್ಧಿಗ್ರಂಥದಲ್ಲಿ ಅಪ್ಪಣೆಕೊಡಿಸಿರುವರು. ಆದುದರಿಂದ ಮನಸ್ಸಿನ ನಿರ್ವ್ಯಾಪಾರತ್ವಾವಸ್ಥೆಯೇ ನಿದ್ರೆಯೆಂದು ನಾವು ಹೇಳಿದುದು ಅಸಂಗತವಲ್ಲ.

ಹಿಂದೆ ಹೇಳಿದ ಒಂಬತ್ತು ರಸಗಳಿಗೂ, ಅವುಗಳ ಒಂಬತ್ತು ಸ್ಥಾಯಿಭಾವಗಳಿಗೂ, ಅವುಗಳ ಮೂವತ್ತುಮೂರು ಸಂಚಾರಿಭಾವಗಳಿಗೂ, ಮತ್ತು ವಾತ್ಸಲ್ಯಾದಿಗುಣಗಳಿಗೂ ಲಕ್ಷಣಗಳನ್ನೂ ಉದಾಹರಣೆಗಳನ್ನೂ ಗ್ರಂಥಾಂತರಗಳಿಂದಲೇ ತಿಳಿಯಬೇಕು.

## ೯೩೮ ಅಥ-ಪರಭಕ್ತಿ-ಪರಜ್ಞಾನ-ಪರಮಭಕ್ತಿತ್ವ-ರೂಪಾವಸ್ಥಾತ್ರಯನಿರೂಪಣಂ.

ಇದೇ ಧರ್ಮಭೂತಜ್ಞಾನಕ್ಕೆ ಇದುವರೆಗೂ ತೋರಿಸಿದ ಅವಸ್ಥೆಗಳಲ್ಲದೆ ಅತ್ಯಂತಪ್ರಧಾನಗಳಾದ ಇನ್ನೂ ಮೂರು ಅವಸ್ಥೆಗಳು ಉಂಟು. 'ಪರಭಕ್ತಿ-ಪರಜ್ಞಾನ-ಪರಮಭಕ್ತಿ' ಎಂಬ ಶಬ್ದಗಳಿಂದ ಆ ಅವಸ್ಥೆಗಳು ಶಾಸ್ತ್ರದಲ್ಲಿ ವ್ಯವಹರಿಸಲ್ಪಟ್ಟಿರುವುವು. ಅವುಗಳ ಸ್ವರೂಪವೆಂಥದೆಂದರೆ—

" ದರ್ಶನಂ ಪರಭಕ್ತಿಸ್ಸ್ಯಾತ್ಪರಜ್ಞಾನಂ ತು ಸಂಗಮಃ ।
ಪುನರ್ವಿಶ್ಲೇಷಭೀರುತ್ವಂ ಪರಮಾ ಭಕ್ತಿರುಚ್ಯತೇ ॥ "

ಎಂದರೆ—ತನಗೆ ಅತ್ಯಂತಾಭಿಮತವಾಗಿ ಪ್ರಾಣಕ್ಕಿಂತಲೂ ಪ್ರಿಯತಮವಾಗಿರುವ ವಸ್ತು ಪರೋಕ್ಷದಲ್ಲಿರುವುದಾದರೆ ಅದನ್ನು ಮನದಣಿಯುವಂತೆ ಕಣ್ಣಿನಿಂದ ನೋಡುವವರೆಗೂ ಆಶೆ ಅಡಗುವುದಿಲ್ಲ. ಆದುದರಿಂದ ಅದನ್ನು ಹೇಗಾದರೂ ನೋಡಿಯೇ ತೀರಬೇಕೆಂಬ ಜ್ಞಾನಾವಸ್ಥೆ ಪರಭಕ್ತಿಯೆನಿಸಿಕೊಳ್ಳುವುದು.

ದೈವಾನುಕೂಲ್ಯದಿಂದ ಅದರ ದರ್ಶನವು ದೊರೆತರೆ ಅದರ ಗುಣಾತಿಶಯಗಳೆಲ್ಲಾ ದರ್ಶನದ ಮೂಲಕವಾಗಿ ಹೃದಯದಲ್ಲಿ ವ್ಯಾಪಿಸಿದಮೇಲೆ—" ಅಯ್ಯೋ ಸರ್ವೋತ್ತಮವಾದ ಇಂಥ ವಸ್ತುವನ್ನೋ ನಾವು ನೋಡದಿದ್ದುದು ? ನಾವು ಎಂಥ ಮಂದಭಾಗ್ಯರು ? ಇದರ ದರ್ಶನವನ್ನು ಪಡೆಯದೆಯೇ ಇಷ್ಟುದಿವಸವೂ ನಮ್ಮ ಜನ್ಮವು ವ್ಯರ್ಥವಾಗಿ ಕಳೆದುಹೋಯಿತು; ಗತಿಸಿಹೋದುದನ್ನು ಕುರಿತು ಚಿಂತಿಸಿ ಪ್ರಯೋಜನವಿಲ್ಲ; ದೈವಯೋಗದಿಂದ ಈಗ ಇದರ ದರ್ಶನವನ್ನು ಪಡೆದಿರುವ ನಮಗೆ ಇದರ ಸಂಶ್ಲೇಷವನ್ನು ಪಡೆದರಲ್ಲದೆ ಜನ್ಮಸಾಫಲ್ಯವಿಲ್ಲ; ಆದುದರಿಂದ ಹೇಗಾದರೂ ಇದರ ಸಂಗಮವನ್ನು ಪಡೆದೇ ತೀರಬೇಕು" ಎಂಬ ಜ್ಞಾನಾವಸ್ಥಾವಿಶೇಷವು ಪರಜ್ಞಾನವೆನಿಸಿಕೊಳ್ಳುವುದು.

ಭಾಗ್ಯಾತಿಶಯದಿಂದ ಅದರ ಸಂಗಮವೂ ದೊರೆತರೆ—ಅದರ ಭೋಗ್ಯತಾತಿಶಯವು ಸಂಗಮದಮೂಲಕವಾಗಿ ಹೃದಯದಲ್ಲಿ ವ್ಯಾಪಿಸಿ ತನ್ನನ್ನು ಆನಂದಮಯವಾದ ಸಾಗರದಲ್ಲಿ ಮಗ್ನನನ್ನಾಗಿ ತೋರಿಸಲು "ಅಯ್ಯೋ ಇಂಥ ಆನಂದೈಕಮಯವಾದ ವಸ್ತುವಿನೊಡನೆ ಪುನಃ ನಮಗೆ ವಿಶ್ಲೇಷವು ಎಂದರೆ ವಿಯೋಗವು ಉಂಟಾಗುವುದಾದರೆ ನಮ್ಮ ಗತಿ ಏನಾಗುವುದು ? ಆದುದರಿಂದ ಇದರ ವಿಶ್ಲೇಷದ ಸುದ್ದಿಯೇ ನಮಗೆ ಎಂದೆಂದಿಗೂ ಉಂಟಾಗದಿರಬೇಕು." ಎಂಬುದಾಗಿ ವಿಯೋಗದ ಸುದ್ದಿಯಿಂದಲೂ ಹೆದರುವ ಜ್ಞಾನಾವಸ್ಥಾವಿಶೇಷವು ಪರಮಭಕ್ತಿಯೆನಿಸಿಕೊಳ್ಳುವುದು.

ಜ್ಞಾನಾವಸ್ಥೆಗಳೊಳಗೆ ಈ ಮೂರನೆಯ ಅವಸ್ಥೆಗಿಂತಲೂ ಉತ್ತಮವಾದ ಮತ್ತೊಂದವಸ್ಥೆಯಿಲ್ಲ. ಈ ಅವಸ್ಥೆಯನ್ನೇ ಉಪಾಸಕರಿಗೆ ಮೋಕ್ಷಸಾಧನವಾಗಿ ವೇದಾಂತಶಾಸ್ತ್ರವು ನಿಷ್ಕರ್ಷಿಸಿರುವುದು. ಪ್ರಪತ್ತಿನಿಷ್ಠರಿಗಾದರೆ ಶ್ರಿಯಃಪತಿಯಾದ ಸರ್ವೇಶ್ವರನೇ ಮೋಕ್ಷಸಾಧನವಾದುದರಿಂದ ಈ ಪರಮಭಕ್ತಿ ಸಾಧನತ್ವಾಕಾರದಿಂದ ಸಿದ್ಧಿಸದಿದ್ದರೂ ಪರಮಪುರುಷನ ನಿರ್ಹೇತುಕವಾದ ದಯೆಯಿಂದ

ಮೋಕ್ಷಸಿದ್ಧಿಗೆ ಅವ್ಯವಹಿತಪೂರ್ವಕ್ಷಣದಲ್ಲಿ ಫಲರೂಪವಾಗಿ ಎಂದರೆ ಸ್ವಯಂ ಭೋಗ್ಯರೂಪವಾಗಿ ಸಿದ್ಧಿಸುವುದು.

ಅಂತು—ಅಭಿಮತವಸ್ತುವಿನ ದರ್ಶನವಿಲ್ಲದಿರುವಾಗ ದರ್ಶನವನ್ನು ಬಯಸುವ ಜ್ಞಾನಾವಸ್ಥಾವಿಶೇಷವು ಪರಭಕ್ತಿಯೆಂಬ ಮೊದಲನೆಯ ಅವಸ್ಥೆಯಾಗಿರುವುದೆಂದೂ, ದರ್ಶನವು ದೊರೆತಮೇಲೆ ಸಂಗಮವನ್ನು ಬಯಸುವ ಜ್ಞಾನಾವಸ್ಥಾವಿಶೇಷವು ಪರಜ್ಞಾನವೆಂಬ ಎರಡನೆಯ ಅವಸ್ಥೆಯಾಗಿರುವುದೆಂದೂ, ಸಂಗಮವು ದೊರೆತಮೇಲೆ ಪುನರ್ವಿಶ್ಲೇಷದ ಸುದ್ದಿಯನ್ನು ಪರಿಹರಿಸಿಕೊಳ್ಳಬೇಕೆಂಬ ಜ್ಞಾನಾವಸ್ಥಾವಿಶೇಷವು ಪರಮಭಕ್ತಿಯೆಂಬ ಮೂರನೆಯ ಅವಸ್ಥೆಯಾಗಿರುವುದೆಂದೂ ಶ್ಲೋಕದ ಅರ್ಥವಾಯಿತು.

## ೯೬. ಪರಭಕ್ತ್ಯಾದೀನಾಂ ಭಗವದ್ವಿಷಯಕತ್ವ ಏವ ಆತ್ಮನಃ ಕಲ್ಯಾಣಪ್ರಾಪ್ತಿಃ.

ಈ ಮೂರು ಅವಸ್ಥೆಗಳೂ ಪ್ರಾಪಂಚಿಕಗಳಾದ ಪದಾರ್ಥಗಳ ವಿಷಯದಲ್ಲಿ ಜೀವನಿಗೆ ಉಂಟಾಗುವುವಾದರೆ ಅಂಥ ಜೀವನು ಸಂಸಾರದುಃಖದಿಂದ ಯಾವಾಗಲೂ ಬಿಡುಗಡೆಯನ್ನು ಹೊಂದಲಾರನು. ಅದೇ ಅವಸ್ಥೆಗಳು ಹೇಯಪ್ರತ್ಯನೀಕನಾಗಿಯೂ, ಕಲ್ಯಾಣಗುಣಾಕರನಾಗಿಯೂ ಉಭಯವಿಭೂತಿನಾಥನಾಗಿಯೂ ಇರುವ ಶ್ರಿಯಃಪತಿಯ ವಿಷಯವಾಗಿ ಉಂಟಾಗುವುವಾದರೆ—ಉಪಾಸಕನು ಪ್ರಾರಬ್ಧಕರ್ಮಾವಸಾನದಲ್ಲಿಯೂ, ಪ್ರಪನ್ನನು ಶರೀರಾವಸಾನದಲ್ಲಿಯೂ ಸಮಸ್ತದುಃಖಗಳಿಂದಲೂ ಬಿಡುಗಡೆಯನ್ನು ಹೊಂದಿ, ಶಾಶ್ವತವಾಗಿಯೂ ಅಪರಿಮಿತವಾಗಿಯೂ ಇರುವ ಆನಂದಸಾಮ್ರಾಜ್ಯವನ್ನು ಪಡೆವನು. ಪರಮರ್ಷಿಗಳು ಅತ್ಯಂತಗೋಪನೀಯವಾದ ಈ ರಹಸ್ಯಾರ್ಥವನ್ನು ಒಂದೇ ಒಂದು ಶ್ಲೋಕದಲ್ಲಿ ಸಂಗ್ರಹಿಸಿ ತೋರಿಸಿರುವರು. ಹೇಗೆಂದರೆ—

"ಕಾಮಕ್ರೋಧೌ ನೃಣಾಂ ಲೋಕೇ ನಿರಯದ್ವಾರಕಾರಣಂ।
ತಾವೇವ ತು ಹರಿಂ ಪ್ರಾಪ್ಯ ಮುಕ್ತ್ಯೈ ಗೋಪೀಸುರದ್ವಿಷಾಂ ॥"

ನರಕದ್ವಾರದಲ್ಲಿ ನಿರಂತರವಾಗಿ ಗಮನಾಗಮನಗಳನ್ನು ಮಾಡಬೇಕೆಂದು ಅಪೇಕ್ಷಿಸುವ ಮನುಷ್ಯರು ಪ್ರಾಪಂಚಿಕಪದಾರ್ಥಗಳ ವಿಷಯವಾಗಿ ಕಾಮಕ್ರೋಧಗಳನ್ನು ದಿನೇ ದಿನೇ ಹೆಚ್ಚಿಸಿಕೊಳ್ಳಬಹುದು; ಮೋಕ್ಷದ್ವಾರದಲ್ಲಿ ಪ್ರವೇಶಿಸಿ ನಿರಂತರವಾಗಿ ಅಲ್ಲಿಯೇ ಇರಬೇಕೆಂದು ಅಪೇಕ್ಷಿಸುವ ಮನುಷ್ಯರು ಅದೇ ಕಾಮಕ್ರೋಧಗಳನ್ನು ಶ್ರಿಯಃಪತಿಯ ವಿಷಯವಾಗಿ ದಿನೇ ದಿನೇ ಹೆಚ್ಚಿಸಿಕೊಳ್ಳಬಹುದು. ಶ್ರೀಕೃಷ್ಣನ ವಿಷಯವಾಗಿ ಗೋಪಸ್ತ್ರೀಯರು ಕಾಮವನ್ನೂ, ಅಸು

ರರೂ ರಾಕ್ಷಸರೂ ಸಹ ಕ್ರೋಧವನ್ನೂ ದಿನೇ ದಿನೇ ಹೆಚ್ಚಿಸಿಕೊಂಡು ಮೋಕ್ಷವನ್ನೇ ಪಡೆದರು.

ಶ್ರಿಯಃಪತಿಯ ವಿಷಯದಲ್ಲಿ ಕ್ರೋಧವನ್ನು ಮಾಡಿದವರಿಗೂ ಮೋಕ್ಷವು ದೊರೆವುದಾದರೆ ಅಸುರರಾಕ್ಷಸರಂತೆ ನಾವೂ ಕ್ರೋಧವನ್ನು ವಹಿಸಿ ಭಗವದ್ದ್ವೇಷಿಗಳಾಗಿದ್ದರೂ ಹಾನಿಯಿಲ್ಲವೆಂದು ಆಶಂಕಿಸಬಾರದು. ಅಂಥವರಿಗೆ ಉತ್ತರಾವಸ್ಥೆಯಲ್ಲಿ ಶಾಶ್ವತಸುಖವು ದೊರೆತರೂ ಪೂರ್ವಾವಸ್ಥೆಯಲ್ಲಿ ದುಃಖವೇ ಇರುವುದಲ್ಲದೆ ಸುಖವೆಂಬುದು ದೊರೆವುದಿಲ್ಲ; ಭಗವತ್ಕಾಮವಾದರೆ ಪೂರ್ವಾವಸ್ಥೆಯಲ್ಲಿಯೂ ಉತ್ತರಾವಸ್ಥೆಯಲ್ಲಿಯೂ ಸಹ ನಿರತಿಶಯಭೋಗ್ಯವಾಗಿ ಸುಖರೂಪವಾಗಿಯೇ ಇರುವುದರಿಂದ ಭಗವತ್ಕಾಮವನ್ನು ವಹಿಸುವವರಿಗೆ ಯಾವಾಗಲೂ ದುಃಖಸಂಬಂಧದ ಪ್ರಸಕ್ತಿಯೇ ಇಲ್ಲದೆ ಆನಂದಸಾಗರವಾಗಿಯೇ ಇರುವುದಾದ ಕಾರಣ ವಿವೇಕಿಗಳಾದವರು ವೇದಾಂತವಿಹಿತವಾದ ಭಕ್ತಿಯೆಂಬ ಭಗವತ್ಕಾಮದ ದಾರಿಯನ್ನೇ ಹಿಡಿದು ಮೋಕ್ಷಸಾಮ್ರಾಜ್ಯವನ್ನು ಪಡೆಯಬೇಕೆಂಬುದೇ ಉಚಿತವಾಗಿಯೂ ತಮ್ಮ ಸ್ವರೂಪಕ್ಕೆ ಅನುರೂಪವಾಗಿಯೂ ಇರುವುದು.

## ೯೭೦ ಭಗವದ್ಭಕ್ತೇಃ ಕಾಮಶಬ್ದೇನ ವ್ಯವಹಾರೇ ಕಾರಣನಿರೂಪಣಂ.

"ಇಂಥ ಭಕ್ತಿ ಜೀವಸ್ವರೂಪಕ್ಕೆ ಅನುರೂಪವಾದುದಾದರೆ—ಇದನ್ನು ಕಾಮಶಬ್ದದಿಂದ ಏತಕ್ಕೆ ವ್ಯವಹರಿಸಬೇಕು" ಎಂದು ಆಶಂಕಿಸಬೇಡಿರಿ; ಕಾಮವೆಂಬ ತೃತೀಯಪುರುಷಾರ್ಥದಲ್ಲಿಯೇ ನಿರತರಾಗಿ ಇರುವಂಥವರಿಗೆ "**ಕಾಮವು ಕೆಟ್ಟದು**" ಎಂದು ಉಪದೇಶಿಸಿದರೆ ಆ ಉಪದೇಶವೇ ವ್ಯರ್ಥವಾಗುವುದಲ್ಲದೆ ಅವರು ಅದನ್ನು ಬಿಟ್ಟು ಬರುವುದಿಲ್ಲ; ಅಂಥವರಿಗೆ "ನೀವು ಅವಲಂಬಿಸಿರುವ ಕಾಮಕ್ಕಿಂತಲೂ ಅತ್ಯುತ್ತಮವಾದ ಮತ್ತೊಂದು ಕಾಮವಿರುವುದು; ಇದನ್ನು ಸ್ವೀಕರಿಸಿರಿ" ಎಂದು ಉಪದೇಶಿಸಿದರೆ ಅನಾಯಾಸದಿಂದ ಈ ದಾರಿಗೆ ಬರುವರು.

ಆದಕಾರಣ ಕಾಮೈಕತತ್ಪರರಾಗಿ ಅನರ್ಥಕ್ಕೆ ಭಾಗಿಗಳಾಗುತ್ತಿರುವಂಥವರಿಗೂ ಹಿತವನ್ನು ಬಯಸುವ ಶಾಸ್ತ್ರವು ಅವರನ್ನು ಸನ್ಮಾರ್ಗಕ್ಕೆ ಆಕರ್ಷಿಸುವುದಕ್ಕಾಗಿ ವೇದಾಂತದಲ್ಲಿ ವಿಹಿತವಾದ ಭಕ್ತಿಯನ್ನೇ ಕಾಮಶಬ್ದದಿಂದ ವ್ಯವಹರಿಸುತ್ತಿರುವುದು. ಆದುದರಿಂದಲೇ ಆಲಂಕಾರಿಕರ ವಚನಶೈಲಿಯೂ ಇದೇ ರೀತಿಯಲ್ಲಿ ಇರುವುದು. ಹೇಗೆಂದರೆ—

**"ಅದರ್ಶನೇ ದರ್ಶನಮಾತ್ರಕಾಮಾಃ**
**ದೃಷ್ಟೇ ಪರಿಷ್ವಂಗರಸೈಕಲೋಲಾಃ।**

**ಆಲಿಂಗಿತಾಯಾಂ ಪುನರಾಯತಾಕ್ಷ್ಯಾಂ**
**ಮಾಶಾಸ್ಮಹೇ ವಿಗ್ರಹಯೋರಭೇದಂ ॥ "**

ಈ ಪದ್ಯದಲ್ಲಿ ಪರಭಕ್ತಿ, ಪರಜ್ಞಾನ, ಪರಮಭಕ್ತಿ ಎಂಬ ಅವಸ್ಥಾವಿಶೇಷ ಗಳೇ (ಜ್ಞಾನದ ಪರಿಪಾಕವಿಶೇಷಗಳೇ) ನಾಯಿಕಾವಿಷಯುವಾಗಿ ತೋರಿಸಲ್ಪಟ್ಟಿ ರುವುವು.

## ೯೭೧. ಧರ್ಮಭೂತಜ್ಞಾನಪರಿಚ್ಛೇದಸಾರಾರ್ಥೋಪದರ್ಶನ ಪೂರ್ವಕಂ ಅವಶ್ಯಕರ್ತವ್ಯಕಾರ್ಯವಿಶೇಷೋಪದೇಶಃ

ಧರ್ಮಭೂತಜ್ಞಾನವನ್ನು ನಿರೂಪಿಸುವುದಕ್ಕೆ ಹೊರಟಿರುವ ಈ ಐದನೆಯ ಪರಿಚ್ಛೇದದ ಆರಂಭದಿಂದ ಇದುವರೆಗೂ ವಿಪುಲವಾಗಿ ನಿರೂಪಿಸಿದ ಅಭಿಪ್ರಾ ಯದ ಸಾರಾಂಶವೇನಾಗಿರುವುದು ?

ಉಕ್ತವಾದ ಜ್ಞಾನವು ಪರಮಾತ್ಮನನ್ನು ಉಪೇಕ್ಷಿಸಿ ಇತರವಿಷಯಗ ಳಲ್ಲಿ ಪ್ರವರ್ತಿಸುವುದಾದರೆ ಅದು ಅಜ್ಞಾನವೆಂಬ ಹೆಸರನ್ನು ಪಡೆದು ಜೀವನ ಅನರ್ಥಕ್ಕೆ ಕಾರಣವಾಗುವುದೆಂಬುದೂ, ಅದೇ ಜ್ಞಾನವು ಇತರವಿಷಯಗಳನ್ನು ಉಪೇಕ್ಷಿಸಿ ಗುಣವಿಗ್ರಹವಿಭೂತಿವಿಶಿಷ್ಟನಾದ ಶ್ರಿಯಃಪತಿಯ ವಿಷಯದಲ್ಲಿ ಪ್ರವ ರ್ತಿಸುವುದಾದರೆ ಅದು ಜ್ಞಾನವೆಂಬ ಹೆಸರನ್ನೇ ಸ್ಥಿರಪಡಿಸಿಕೊಂಡು ಜೀವನ ಸಕಲದುಃಖಗಳನ್ನೂ ಹೋಗಲಾಡಿಸಿ ಶಾಶ್ವತವಾದ ಅಪರಿಮಿತಾನಂದಕ್ಕೆ ಕಾರಣ ವಾಗುವುದೆಂಬುದೂ ಇದರ ಸಾರಾಂಶವಾಗಿರುವುದು. ಶ್ರೀಮತ್ಪರಾಶರಮಹ ರ್ಷಿಯ ಒಂದೇ ಒಂದು ಸೂಕ್ತಿಯಿಂದ ಈ ಅರ್ಥವನ್ನು ನಿಷ್ಕರ್ಷಿಸಬಹುದು—

**ತತ್ಕರ್ಮ ಯನ್ನ ಬಂಧಾಯ ಸಾ ವಿದ್ಯಾ ಯಾ ವಿಮುಕ್ತಯೇ ।**
**ಆಯಾಸಾಯಾಪರಂ ಕರ್ಮ ವಿದ್ಯಾಽನ್ಯಾ ಶಿಲ್ಪನೈಪುಣಂ ॥**

ಎಂದರೆ—ಎಂಥ ಕರ್ಮವು ಜೀವನ ಬಂಧನವನ್ನು ಬಿಡಿಸುವುದಕ್ಕಾಗಿಯೇ ಪರ್ಯವಸಿತವಾಗುವುದೋ, ಅಂಥ ಕರ್ಮವೇ ಕರ್ಮವೆಂಬ ತನ್ನ ಹೆಸರನ್ನು ನಿಲ್ಲಿಸಿ ಕೊಳ್ಳಬಲ್ಲುದು ; ಉಳಿದ ಕರ್ಮಗಳೆಲ್ಲಾ ಶರೀರಪರಿಶ್ರಮಕ್ಕಾಗಿಯೇ ಪರಿಣತವಾಗು ವುವಲ್ಲದೆ ಬಂಧನದ ಬಿಡುಗಡೆಗಲ್ಲ.—

ಮತ್ತು—ಎಂಥ ಜ್ಞಾನವು ಮೋಕ್ಷಸುಖಪ್ರಾಪ್ತಿಗಾಗಿಯೇ ಪರ್ಯವಸಿತ ವಾಗುವುದೋ, ಅಂಥ ಜ್ಞಾನವೇ ಜ್ಞಾನವೆಂಬ ತನ್ನ ಹೆಸರನ್ನು ನಿಲ್ಲಿಸಿಕೊಳ್ಳ ಬಲ್ಲುದು. ಉಳಿದ ಜ್ಞಾನಗಳೆಲ್ಲಾ ಶಿಲ್ಪಸಾಮರ್ಥ್ಯಗಳೆನಿಸಿಕೊಳ್ಳುವುವಲ್ಲದೆ ಮೋಕ್ಷಸುಖಪ್ರಾಪ್ತಿಗಾಗಿ ಪರಿಣಮಿಸಲಾರವು; ಎಂಬುದು ಶ್ಲೋಕಾರ್ಥವಾಗಿ ರುವುದು.

ಆದಕಾರಣ ಶ್ರಿಯಃಪತಿಯ ಚರಣಾರವಿಂದಗಳಲ್ಲಿ ನಾವು ನಿರಂತರ ವಾಗಿಯೂ ಪ್ರಾರ್ಥಿಸಬೇಕಾದುದೇನೆಂದರೆ "ಎಂಥ ಜ್ಞಾನಲಕ್ಷ್ಮಿ ಮಹಾ ಭಾಗ್ಯಾತಿಶಯದಿಂದ ಯತಿಸಾರ್ವಭೌಮರ ಸಕಲದಿವ್ಯಸೂಕ್ತಿಗಳನ್ನೂ ಸ್ವಾಧೀನ ಪಡಿಸಿಕೊಳ್ಳಬಲ್ಲಳಾಗಿಯೂ, ಬ್ರಹ್ಮಾನಂದವನ್ನು ಪ್ರತಿಕ್ಷಣದಲ್ಲಿಯೂ ಹೆಚ್ಚಿಸುವ ವೇದಾಂತಭಾಗವೆಂಬ ಪ್ರಾಸಾದಮಧ್ಯವನ್ನು ಏರಿದವಳಾಗಿಯೂ, ಶಾಶ್ವತಾ ನಂದಸ್ವರೂಪವಾದ ನಿತ್ಯವಿಭೂತಿಯ ಸಾನ್ನಿಧ್ಯದಿಂದ ಸರ್ವಕಾಲದಲ್ಲಿಯೂ ಆಮೋದವಿಶಿಷ್ಟನಾದ ದಾಮೋದರನ ದಿವ್ಯಮಂಗಳವಿಗ್ರಹವನ್ನು ಯಥೇಷ್ಟ ವಾಗಿ ತಡೆಯಿಲ್ಲದೆ ಆಲಿಂಗಿಸಿ ಸಕಲತಾಪಗಳನ್ನೂ ಪರಿಹರಿಸಿಕೊಳ್ಳುವುದಕ್ಕೆ ಸರ್ವದಾ ಔತ್ಸುಕ್ಯವನ್ನು ವಹಿಸುವವಳಾಗಿಯೂ ಇರುವಳೋ; ಎಲ್ಲೆಯನ್ನು ಮುಟ್ಟಿದ ಭಕ್ತಿರೂಪಿಣಿಯಾದ ಅಂಥ ಜ್ಞಾನಲಕ್ಷ್ಮಿ ನಮಗೆ ಸ್ಥಿರವಾಗಿ ಸಿದ್ಧಿಸಲಿ" ಎಂದು ನಿರಂತರವಾಗಿ ನಾವು ಪ್ರಾರ್ಥಿಸಬೇಕೆಂಬ ಅಂಶವನ್ನು ನಮಗೆ ಉಪದೇಶಿಸುವುದಕ್ಕಾಗಿ ಶ್ರೀಭಾಷ್ಯಕಾರರು ಶ್ರೀಭಾಷ್ಯದ ಪ್ರಥಮ ಪದ್ಯದಲ್ಲಿ "**ಬ್ರಹ್ಮಣಿ ಶ್ರೀನಿವಾಸೇ ಭವತು ಮಮ ಪರಸ್ಮಿನ್ ಶೇಮುಷೀ ಭಕ್ತಿರೂಪಾ**" ಎಂದು ತಾವು ಪ್ರಾರ್ಥಿಸಿ ತೋರಿಸಿರುವರು.

ಧರ್ಮಭೂತಜ್ಞಾನವೆಂಬ ಆರನೆಯ ದ್ರವ್ಯವು ಈ ರೀತಿಯಾಗಿ ನಿರೂಪಿಸ ಲ್ಪಟ್ಟಿತು. ಇಲ್ಲಿಗೆ ದ್ರವ್ಯನಿರೂಪಣವು ಸಮಾಪ್ತವಾದುದರಿಂದ ಇನ್ನು ಮುಂದೆ ಅದ್ರವ್ಯಗಳನ್ನು ನಿರೂಪಿಸುವೆವು.

**ಸಂಪ್ರತಿ ತತ್ತ್ವಂ ಮಲಿನಂ ।**
**ಮಿಥ್ಯಾವಾದೋ ಯದೋದ್ಯತೋ ಮಲಿನಃ ॥**
**ಸಂಪ್ರತಿ ತತ್ತ್ವಂ ವಿಮಲಂ ।**
**ತತ್ತ್ವವಿಶುದ್ಧಿರ್ಯದೋದ್ಯತಾ ವಿಮಲಾ ॥**

**ಇಂತು ತತ್ತ್ವಶುದ್ಧಿಯೆಂಬ ವಿಶಿಷ್ಟಾದ್ವೈತಪ್ರಕರಣಗ್ರಂಥದೊಳ್ ಧರ್ಮಭೂತಜ್ಞಾನಪರಿಚ್ಛೇದದಲ್ಲಿ ಜ್ಞಾನಾವಸ್ಥಾವಿಶೇಷ ನಿರೂಪಣಪ್ರಕರಣಂ ಅಷ್ಟಮಂ ॥೮॥**

## ಇತಿ ಧರ್ಮಭೂತಜ್ಞಾನಪರಿಚ್ಛೇದಃ ಪಂಚಮಸ್ಸಮಾಪ್ತಃ

**॥ ಓಂ ॥**

**ಶ್ರೀಮತೇ ರಾಮಾನುಜಾಯ ನಮಃ**



॥ ಶ್ರೀಃ ॥

ಶ್ರೀಮತೇ ರಾಮಾನುಜಾಯ ನಮಃ

# ತತ್ತ್ವಶುದ್ಧಿ.

## ೭. ಅದ್ರವ್ಯಪರಿಚ್ಛೇದಂ.

### ೯೭೨. ತತ್ರಾದೌ ಅದ್ರವ್ಯನಿರೂಪಣಪ್ರತಿಜ್ಞಾ.

ಅತಿಕ್ರಾಂತಗಳಾದ ಐದು ಪ್ರಕರಣಗಳಿಂದ ಪ್ರಕೃತಿ, ಕಾಲ, ಜೀವ, ಈಶ್ವರ, ನಿತ್ಯವಿಭೂತಿ, ಧರ್ಮಭೂತಜ್ಞಾನ ಎಂಬ ಆರು ದ್ರವ್ಯಗಳನ್ನು ವಿಶದವಾಗಿ ನಿರೂಪಿಸಿದುದಾಯಿತು. ಇದರಿಂದ ತತ್ತ್ವಸ್ವರೂಪದಲ್ಲಿ ಅಡಗಿರುವ ದ್ರವ್ಯಾದ್ರವ್ಯಗಳೊಳಗೆ ದ್ರವ್ಯಗಳ ನಿರೂಪಣವು ಇಲ್ಲಿಗೆ ಸಂಪೂರ್ಣವಾಯಿತು. ಇನ್ನು ಕ್ರಮಪ್ರಾಪ್ತವಾಗಿರುವ ಅದ್ರವ್ಯಗಳನ್ನು ಈಗ ನಿರೂಪಿಸುವೆವು. ಈ ಅದ್ರವ್ಯಗಳಿಗೆ ಶಾಸ್ತ್ರಕಾರರು ಮುಖ್ಯವಾಗಿ ತೋರಿಸಿರುವ ಎರಡು ಸಾಮಾನ್ಯಲಕ್ಷಣಗಳನ್ನು ಇಲ್ಲಿ ಹೇಳುವೆವು.—

### ೯೭೩. ತತ್ರ ಅದ್ರವ್ಯಸಾಮಾನ್ಯಸ್ಯ ಪ್ರಥಮಂ ಲಕ್ಷಣಂ

ದ್ರವ್ಯಭಿನ್ನವಾದುದು (ಉಪಾದಾನವಲ್ಲದುದು) ಅದ್ರವ್ಯವೆನಿಸಿಕೊಳ್ಳುವುದು. ಎಂದರೆ—ಆಗಂತುಕವಾಗಿಯೂ ಅಪೃಥಕ್ಸಿದ್ಧವಾಗಿಯೂ ಇರುವ ಧರ್ಮದಿಂದ ವಿರಹಿತವಾದ ಪದಾರ್ಥವು ಅದ್ರವ್ಯವೆನಿಸಿಕೊಳ್ಳುವುದು. ಶಬ್ದ ಸ್ಪರ್ಶ ಮೊದಲಾದ ಅದ್ರವ್ಯಗಳಲ್ಲಿ ಶಕ್ತಿಯೆಂಬ ಅಪೃಥಕ್ಸಿದ್ಧವಾದ ಧರ್ಮವೊಂದನ್ನು ಸಿದ್ಧಾಂತದಲ್ಲಿ ಒಪ್ಪಿಕೊಂಡರೂ ಅದ್ರವ್ಯಲಕ್ಷಣಕ್ಕೆ ಅಂಥ ಶಬ್ದಸ್ಪರ್ಶಮೊದಲಾದ ಅದ್ರವ್ಯಗಳಲ್ಲಿ ವ್ಯಾಪ್ತಿಯಿಲ್ಲವೆಂದು ಆಶಂಕಿಸಬಾರದು; ಏತಕ್ಕೆಂದರೆ—ಶಬ್ದಾದಿಗಳಲ್ಲಿ ಅಂಗೀಕೃತವಾಗಿರುವ ಶಕ್ತಿಯೆಂಬ ಧರ್ಮವು ಅವುಗಳಿಗೆ ಸ್ವೈಜವಾಗಿರುವುಗಲ್ಲದೆ ಆಗಂತುಕವಲ್ಲ. ಆದಕಾರಣ—ಆಗಂತುಕವಾಗಿಯೂ ಅಪೃಥಕ್ಸಿದ್ಧವಾಗಿಯೂ ಇರುವ ಧರ್ಮವು ಶಬ್ದಾದಿಗಳಲ್ಲಿ ಇಲ್ಲವೆಂದು ಹೇಳಲು ತಡೆಯಿಲ್ಲವಾಗಿ ಉಕ್ತಲಕ್ಷಣಕ್ಕೆ ಶಬ್ದಾದಿಗಳಲ್ಲಿ ಸಮನ್ವಯವಿದ್ದೇ ಇರುವುದೆಂದು ಹೇಳಲು ಯಾವ ಅಭ್ಯಂತರವೂ

ಇಲ್ಲ. ಈ ಲಕ್ಷಣವನ್ನು ಅಚಿತ್ತತ್ತ್ವಪರಿಚ್ಛೇದದ ಪ್ರಾರಂಭದಲ್ಲಿಯೇ ನಾವು ತೋರಿಸಿದ್ದರೂ ಅತಿದೂರವ್ಯವಧಾನವಾದುದರಿಂದ ಇಲ್ಲಿ ಪುನಃ ಅದನ್ನು ಜ್ಞಾಪಕಪಡಿಸಿರುವೆವು.

### ೯೭೪. ಅಥ ದ್ವಿತೀಯಂ ಲಕ್ಷಣಂ.

ಸಂಯೋಗರಹಿತವಾದ ಪದಾರ್ಥವು ಅದ್ರವ್ಯವೆನಿಸಿಕೊಳ್ಳುವುದು. ಸಂಯೋಗವೆಂಬ ಸಂಬಂಧವು ದ್ರವ್ಯಗಳಿಗೇ ಪರಸ್ಪರವಾಗಿ ಉಂಟಾಗುವುದಲ್ಲದೆ ಅದ್ರವ್ಯಗಳಿಗಾಗಲಿ ದ್ರವ್ಯಾದ್ರವ್ಯಗಳಿಗಾಗಲಿ ಉಂಟಾಗುವುದಲ್ಲ. ಪೂರ್ವೋಕ್ತಗಳಾದ ಆರು ದ್ರವ್ಯಗಳೂ ಸಂಯೋಗಭಾಗಿಗಳಾಗಿರುವುವೆಂಬುದು ಹಿಂದೆಯೇ ಅನೇಕಸ್ಥಳಗಳಲ್ಲಿ ವ್ಯಕ್ತವಾಗಿರುವುದು. ಶಬ್ದಸ್ಪರ್ಶಾದಿಗಳಾದರೆ ಸಂಯೋಗಕ್ಕೆ ಅನರ್ಹಗಳಾಗಿರುವುದರಿಂದ ಅವುಗಳಲ್ಲಿ ಲಕ್ಷಣಕ್ಕೆ ಸಮನ್ವಯವನ್ನು ತಿಳಿಯಬಹುದು.

### ೯೭೫ ಅಥ ಅದ್ರವ್ಯವಿಭಾಗಃ

ಇಂಥ ಅದ್ರವ್ಯಗಳು—"ಸತ್ತ್ವ, ರಜಸ್ಸು, ತಮಸ್ಸು, ಶಬ್ದ, ಸ್ಪರ್ಶ, ರೂಪ, ರಸ, ಗಂಧ, ಸಂಯೋಗ, ಶಕ್ತಿ" ಎಂಬುದಾಗಿ ಹತ್ತುಬಗೆಯಾಗಿರುವುವು.

### ೯೭೬ ಅವಸ್ಥಾಯಾ ಅಪ್ಯದ್ರವ್ಯತ್ವಾವಿಶೇಷೇಽಪಿ ಅದ್ರವ್ಯೇಷು ತದಪರಿಗಣನೇ ಕಾರಣನಿರೂಪಣಂ

ಪೂಜ್ಯರೆ? ಅದ್ರವ್ಯಗಳು ಹತ್ತೇಬಗೆಯಾಗಿರುವುವೆಂದು ಹೇಗೆ ಪ್ರತಿಜ್ಞೆ ಮಾಡಲಾದೀತು? ದ್ರವ್ಯಗಳಲ್ಲಿ ಕ್ರಮಕ್ರಮವಾಗಿ ಉಂಟಾಗುವ ಅವಸ್ಥೆಗಳು ಅನಂತಗಳಾಗಿರುವುವಷ್ಟೆ? ಇಂಥ ಅವಸ್ಥೆಗಳೂ ಅದ್ರವ್ಯಗಳಷ್ಟೆ? ತ್ರಿಗುಣದ್ರವ್ಯದಲ್ಲಿ ವಿಮರ್ಶೆಮಾಡಿನೋಡಿದರೆ—ಸೃಷ್ಟಿಕಾಲದಲ್ಲಿ ಮಹತ್ತ್ವ, ಅಹಂಕಾರತ್ವ, ತನ್ಮಾತ್ರತ್ವ, ಇಂದ್ರಿಯತ್ವ, ಭೂತತ್ವಗಳೆಂಬ ವಿಷಮಾವಸ್ಥೆಗಳನೇಕಗಳೂ, ಪ್ರಳಯಕಾಲದಲ್ಲಿ ಸದೃಶಪರಿಣಾಮಗಳನೇಕಗಳೂ ಉಂಟಾಗುತ್ತಲೇ ಇರುವುವೆಂದು ಹಿಂದೆಯೇ ತೋರಿಸಿರುವಿರಿ. ಕಾಲದ್ರವ್ಯದಲ್ಲಿ ವಿಮರ್ಶೆಮಾಡಿನೋಡಿದರೆ ಕ್ಷಣತ್ವ, ಮುಹೂರ್ತತ್ವ, ಯಾಮತ್ವ, ದಿನತ್ವ, ವಾರತ್ವ, ಪಕ್ಷತ್ವ, ಮಾಸತ್ವ, ಋತುತ್ವ, ಅಯನತ್ವ, ಸಂವತ್ಸರತ್ವ, ಯುಗತ್ವ, ಕಲ್ಪತ್ವ, ಪರಾರ್ಧತ್ವ ಮೊದಲಾದ ಅನೇಕಾವಸ್ಥೆಗಳುಂಟಾಗುವುವು; ಧರ್ಮಭೂತಜ್ಞಾನದ್ರವ್ಯದಲ್ಲಿ ವಿಮರ್ಶೆಮಾಡಿನೋಡಿದರೆ ಪ್ರತ್ಯಕ್ಷತ್ವ, ಅನುಮಾನತ್ವ, ಶಾಬ್ದತ್ವ ಮತ್ತು ಇವುಗಳ ಆಂತರಾಳಿಕಭೇದಗಳು ಇವೇ ಮೊದಲಾದ ಅನೇಕ ಅವಸ್ಥೆಗಳುಂಟಾಗುವುವು. ನಿತ್ಯವಿಭೂತಿ

ಯೆಂಬ ಶುದ್ಧಸತ್ತ್ವದ್ರವ್ಯದಲ್ಲಿ ವಿಚಾರಮಾಡಿನೋಡಿದರೆ ಅಚಿದ್ದ್ರವ್ಯವು ಸತತ ಪರಿಣಾಮಿಯಾದುದರಿಂದಲೂ, ಶುದ್ಧಸತ್ತ್ವವೂ ಅಚಿದ್ದ್ರವ್ಯವಾದುದರಿಂದಲೂ, ತ್ರಿಗುಣದ್ರವ್ಯದ ಪರಿಣಾಮಗಳಿಗೆ ಸಮಾನಗಳಾದ ಪರಿಣಾಮಗಳೂ ಅನೇಕವಾಗಿ ಶುದ್ಧಸತ್ತ್ವದಲ್ಲಿಯೂ ಉಂಟಾಗುತ್ತಿರುವುವು. ಹೀಗೆ ಆ ಆ ದ್ರವ್ಯಗಳಲ್ಲಿ ಉಂಟಾಗುತ್ತಿರುವ ಅವಸ್ಥಾಸಂತಾನಗಳು ಅನಂತಗಳಾಗಿರುವುದರಿಂದಲೇ **ವರದವಿಷ್ಣುಮಿಶ್ರಾಚಾರ್ಯರೂ—"ಗುಣಾಶ್ಚಾನಂತಾಃ"** ಎಂಬುದಾಗಿ ಅಪ್ಪಣೆಕೊಡಿಸಿರುವರು. ಇಂಥ ಅನಂತಾವಸ್ಥೆಗಳೂ ಅದ್ರವ್ಯಗಳಾಗಿರುವಲ್ಲಿ ಅದ್ರವ್ಯಗಳು ಹತ್ತೇ ಬಗೆಯಾಗಿರುವುವೆಂದು ಹೇಗೆ ಪ್ರತಿಜ್ಞೆ ಮಾಡಲಾದೀತು. ?

ಇಂಥ ಆಶಂಕೆ ಸಂಗತವಲ್ಲ. ಏತಕ್ಕೆಂದರೆ—ಅನಂತಗಳಾದ ಅಂಥ ಅವಸ್ಥೆಗಳನ್ನೆಲ್ಲಾ ಪ್ರತ್ಯೇಕಪ್ರತ್ಯೇಕವಾಗಿ ವಿಂಗಡಿಸಿ ಹೇಳಿ ಮುಗಿಸುವುದೆಂಬುದು ಎರಡು ಸಾವಿರನಾಲಗೆಗಳನ್ನು ಪಡೆದಿರುವ ಆದಿಶೇಷನಿಗೂ ಶಕ್ಯವಲ್ಲ; ಅವುಗಳಲ್ಲಿ ಎಷ್ಟು ಅಂಶಗಳನ್ನು ನಿರೂಪಿಸಬಹುದೋ ಅಷ್ಟು ಅಂಶಗಳನ್ನು ದ್ರವ್ಯನಿರೂಪಣ ಪ್ರಕರಣಗಳಲ್ಲಿಯೇ ನಾವು ತೋರಿಸಿಯೇ ಇರುವೆವು. ಅದಕ್ಕಿಂತಲೂ ಅಧಿಕವಾದ ಅಂಶವನ್ನು ನಿರೂಪಿಸುವುದಾದರೆ ಅದಕ್ಕೆ ದೃಷ್ಟದಲ್ಲಿಯಾಗಲಿ ಅದೃಷ್ಟದಲ್ಲಿಯಾಗಲಿ ಆವುದೊಂದು ಪ್ರಯೋಜನವೂ ದೊರೆವುದಿಲ್ಲ. ಆದುದರಿಂದ ಅವುಗಳನ್ನೆಲ್ಲಾ ಉಪೇಕ್ಷಿಸಿ ಸ್ಪಷ್ಟವಾಗಿ ವಿಂಗಡಿಸಿ ಪರಿಗಣನೆಮಾಡಲು ಅರ್ಹವಾಗಿರುವ ಅದ್ರವ್ಯಗಳನ್ನು ಹತ್ತುಬಗೆಯಾಗಿ ವಿಭಾಗಮಾಡಿದುದು ಅತ್ಯಂತಸಂಗತವಾಗಿಯೇ ಇರುವುದಲ್ಲದೆ ಅಸಾಂಗತ್ಯಕ್ಕೆ ಪ್ರಸಕ್ತಿಯೇ ಇಲ್ಲ.

## ೯೭೭. ದರ್ಶನಾಂತರೇ ಅಭ್ಯುಪಗತಾನಾಮದ್ರವ್ಯಾಣಾಮುಕ್ತೇಷ್ವೇವಾಂತರ್ಭಾವಃ.

ಪೂಜ್ಯರೆ ? ಅವಸ್ಥೆಗಳು ಹಾಗಿರಲಿ, ಆದರೂ—ಅದ್ರವ್ಯಗಳು ಹತ್ತೇ ಬಗೆಯಾಗಿರುವುವೆಂದು ಪ್ರತಿಜ್ಞೆ ಮಾಡಲಾಗುವುದಿಲ್ಲ—ನೈಯಾಯಿಕರೇ ಮೊದಲಾದ ದರ್ಶನಾಂತರಕಾರರು—"ಸಂಖ್ಯೆ, ಪರಿಮಾಣ, ಪೃಥಕ್ತ್ವ, ವಿಭಾಗ ಪರತ್ವ, ಅಪರತ್ವ, ಗುರುತ್ವ, ದ್ರವತ್ವ, ಸ್ನೇಹ, ಸಂಸ್ಕಾರ" ಗಳೆಂಬ ಅದ್ರವ್ಯಗಳನ್ನೂ ಮತ್ತು—"ಕರ್ಮ, ಸಾಮಾನ್ಯ, ವಿಶೇಷ, ಸಮವಾಯ, ಅಭಾವ, ಸಾದೃಶ್ಯ" ಗಳೆಂಬ ಅದ್ರವ್ಯಗಳನ್ನೂ ತೋರಿಸಿರುವರಷ್ಟೆ ?

ಮತ್ತು ಮೀಮಾಂಸಕರು—**"ಘಟಾಭಾವವತ್ ಭೂತಲಂ"** ಎಂದರೆ ಭೂಪ್ರದೇಶವು ಘಟದ ಅಭಾವದೊಡನೆ ಕೂಡಿರುವುದು ಎಂಬ ಸ್ಥಳದಲ್ಲಿ ಭೂತಲ

ವೆಂಬ ಭಾವಪದಾರ್ಥಕ್ಕೆ ಅಭಾವಪದಾರ್ಥದೊಡನೆ ಸಂಬಂಧವಿರುವುದಾಗಿ ತೋರುವದು; ಇಲ್ಲಿ ಅಂಥ ಸಂಬಂಧವು ಆವುದಾಗಿರುವುದೆಂದು ವಿಚಾರಮಾಡಿ ನೋಡಿದರೆ ಸಂಯೋಗಸಂಬಂಧವು ಸಂಭವಿಸುವುದಿಲ್ಲ; ದ್ರವ್ಯಗಳಿಗೇ ಅಲ್ಲವೆ ಸಂಯೋಗವುಂಟಾಗುವುದು? ಇಲ್ಲಿ ಭೂತಲವು ದ್ರವ್ಯವಾಗಿದ್ದರೂ ಅಭಾವವು ದ್ರವ್ಯವಲ್ಲವಷ್ಟೆ? ಸಮವಾಯಸಂಬಂಧವುಂಟಾಗಬಹುದೆಂದು ನೋಡಿದರೆ ಅದಕ್ಕೂ ಅವಕಾಶವಿಲ್ಲ. ಅಯುತಸಿದ್ಧಪದಾರ್ಥಗಳಿಗಲ್ಲವೆ ಸಮವಾಯಸಂಬಂಧವುಂಟಾಗುವುದು? ಇಲ್ಲಿ ಅಭಾವವು ಭೂತಲಕ್ಕೆ ಅಯುತಸಿದ್ಧವಲ್ಲವಷ್ಟೆ? ಆದುದರಿಂದ ಭಾವಪದಾರ್ಥದೊಡನೆ ಅಭಾವಪದಾರ್ಥಕ್ಕೆ ವೈಶಿಷ್ಟ್ಯವೆಂಬ ಸಂಬಂಧಾಂತರವನ್ನೇ ಒಪ್ಪಬೇಕೆಂದು ಹೇಳಿ ವೈಶಿಷ್ಟ್ಯವೆಂಬುದಾಗಿಯೂ ಒಂದು ಅದ್ರವ್ಯವನ್ನು ತೋರಿಸಿರುವರಷ್ಟೆ?

ಹೀಗೆ ಅದ್ರವ್ಯಗಳು ಅನೇಕಗಳಾಗಿರುತ್ತಿರುವಲ್ಲಿ—ಹತ್ತೇ ಬಗೆಯಾಗಿರುವುವೆಂದು ಹೇಗೆ ಪ್ರತಿಜ್ಞೆಮಾಡಲಾದೀತು?

ಹೀಗೆ ಮಾಡಲಾದೀತು—ದರ್ಶನಾಂತರಕಾರರು ತೋರಿಸಿರುವ ಅದ್ರವ್ಯಗಳಿಗೆಲ್ಲಾ ನಮ್ಮ ದರ್ಶನದಲ್ಲಿ ಉಕ್ತಗಳಾದ ಅದ್ರವ್ಯಗಳಲ್ಲಿಯೇ ಅಂತರ್ಭಾವವು ಯಥಾಯೋಗ್ಯವಾಗಿ ಸಂಭವಿಸುವುದಾದುದರಿಂದ ಹತ್ತಿಗಿಂತಲೂ ಅಧಿಕಗಳಾದ ಅದ್ರವ್ಯಗಳನ್ನು ಅಂಗೀಕರಿಸಬೇಕಾದ ಆವಶ್ಯಕತೆಯಿಲ್ಲ. ಯಾವ ಅದ್ರವ್ಯಗಳಿಗೆ ಇವುಗಳಲ್ಲಿ ಅಂತರ್ಭಾವವು ಸಂಭವಿಸುವುದಿಲ್ಲವೆಂದು ಕೆಲವರು ಅಭಿಪ್ರಾಯಪಡುವರೋ ಅವುಗಳ ವಿಚಾರವನ್ನು ಮುಂದೆ ಅಲ್ಲಲ್ಲಿ ಸೂಚಿಸುವೆವು. ಆದಕಾರಣ ಸತ್ತ್ವಾದಿಶಕ್ತಿಪರ್ಯಂತಗಳಾದ ಅದ್ರವ್ಯಗಳು ಹತ್ತೇ ಎಂಬುದಾಗಿ ಪ್ರತಿಜ್ಞೆ ಮಾಡಲು ತಡೆಯಿಲ್ಲ.

## ೯೭೮ ತತ್ರ ಸತ್ತ್ವಗುಣಲಕ್ಷಣಂ

ಅವುಗಳಲ್ಲಿ—**"ಪ್ರಕಾಶಕ್ಕೆ, ಅಥವಾ ಸುಖಕ್ಕೆ, ಅಥವಾ ಲಾಘವಕ್ಕೆ ಕಾರಣವಾಗಿಯೂ, ಅತೀಂದ್ರಿಯವಾಗಿಯೂ, ಶಕ್ತಿಭಿನ್ನವಾಗಿಯೂ ಇರುವ ಅದ್ರವ್ಯವು ಸತ್ತ್ವವೆನಿಸಿಕೊಳ್ಳುವುದು."** ಈ ಲಕ್ಷಣದಲ್ಲಿ ಮೂರು ವಿಶೇಷಣಗಳೂ, ಒಂದು ವಿಶೇಷ್ಯವೂ ಇರುವುವು. ಇವುಗಳಲ್ಲಿ "ಪ್ರಕಾಶ, ಸುಖ, ಲಾಘವಗಳಿಗೆ ಕಾರಣವಾಗಿರುವ" ಎಂಬ ಮೊದಲನೆಯ ವಿಶೇಷಣವನ್ನು ಲಕ್ಷಣದಲ್ಲಿ ಸೇರಿಸದಿದ್ದರೆ ಅತೀಂದ್ರಿಯವಾಗಿಯೂ, ಶಕ್ತಿಭಿನ್ನವಾಗಿಯೂ ಇರುವ ರಜೋಗುಣತಮೋಗುಣಗಳಲ್ಲಿ ಲಕ್ಷಣವು ಅತಿಪ್ರಸಕ್ತವಾಗುವುದು. ಅದಕ್ಕಾಗಿ

ಪ್ರಥಮವಿಶೇಷಣವು ಸೇರಿಸಲ್ಪಟ್ಟಿರುವುದು. ರಜೋಗುಣತಮೋಗುಣಗಳು ಪ್ರಕಾಶಕ್ಕಾಗಲಿ ಸುಖಕ್ಕಾಗಲಿ ಲಾಘವಕ್ಕಾಗಲಿ ಕಾರಣಗಳಲ್ಲವಾದುದರಿಂದ ಲಕ್ಷಣಕ್ಕೆ ಅತಿಪ್ರಸಂಗವಿಲ್ಲ.

"ಅತೀಂದ್ರಿಯವಾಗಿರುವ" ಎಂಬ ಎರಡನೆಯ ವಿಶೇಷಣವನ್ನು ಲಕ್ಷಣದಲ್ಲಿ ಸೇರಿಸದಿದ್ದರೆ—ಶಬ್ದ-ಸ್ಪರ್ಶ-ರೂಪ-ರಸ. ಗಂಧಗಳಲ್ಲಿ ಲಕ್ಷಣವು ಅತಿಪ್ರಸಕ್ತವಾಗುವುದು. ಅದಕ್ಕಾಗಿ ಅತೀಂದ್ರಿಯತ್ವವಿಶೇಷಣವು ಸೇರಿಸಲ್ಪಟ್ಟಿರುವುದು. ಶಬ್ದಾದಿಗಳು ಇಂದ್ರಿಯಗಳಿಗೆ ಗೋಚರಗಳಾಗಿಯೇ ಇರುವುವಲ್ಲದೆ ಅತೀಂದ್ರಿಯಗಳಲ್ಲವಾದುದರಿಂದ ಲಕ್ಷಣಕ್ಕೆ ಅತಿಪ್ರಸಂಗವಿಲ್ಲ.

"ಶಕ್ತಿಭಿನ್ನವಾಗಿರುವ" ಎಂಬ ಮೂರನೆಯ ವಿಶೇಷಣವನ್ನು ಲಕ್ಷಣದಲ್ಲಿ ಸೇರಿಸದಿದ್ದರೆ—ಶಕ್ತಿಯಲ್ಲಿ ಲಕ್ಷಣವು ಅತಿಪ್ರಸಕ್ತವಾಗುವುದು. ಅದಕ್ಕಾಗಿ ಶಕ್ತಿಭಿನ್ನತ್ವವಿಶೇಷಣವು ಸೇರಿಸಲ್ಪಟ್ಟಿರುವುದು. ಶಕ್ತಿಯಲ್ಲಿ ಶಕ್ತಿಭಿನ್ನತ್ವವಿಲ್ಲವಾದುದರಿಂದ ಲಕ್ಷಣಕ್ಕೆ ಅತಿಪ್ರಸಂಗವಿಲ್ಲ.

ವಿಶೇಷ್ಯದಳವನ್ನು ಲಕ್ಷಣದಲ್ಲಿ ಸೇರಿಸದಿದ್ದರೆ—ಪ್ರಕಾಶ-ಸುಖ-ಲಾಘವಗಳಿಗೆ ಕಾರಣಗಳಾಗಿಯೂ ಅತೀಂದ್ರಿಯಗಳಾಗಿಯೂ ಶಕ್ತಿಭಿನ್ನಗಳಾಗಿಯೂ ಇರುವ ಜೀವ, ಈಶ್ವರ, ನಿತ್ಯವಿಭೂತಿ, ಧರ್ಮಭೂತಜ್ಞಾನವೆಂಬ ದ್ರವ್ಯಗಳಲ್ಲಿ ಲಕ್ಷಣಕ್ಕೆ ಅತಿಪ್ರಸಂಗವುಂಟಾಗುವುದು. ಅದಕ್ಕಾಗಿ ಅದ್ರವ್ಯವೆಂಬ ವಿಶೇಷ್ಯವು ಸೇರಿಸಲ್ಪಟ್ಟಿರುವುದು. ದ್ರವ್ಯಗಳಲ್ಲಿ ಅದ್ರವ್ಯತ್ವವಿಲ್ಲವಾದುದರಿಂದ ಲಕ್ಷಣಕ್ಕೆ ಅತಿಪ್ರಸಂಗವಿಲ್ಲ.

ಪೂಜ್ಯರೆ? ಈ ಮೂರು ವಿಶೇಷಣಗಳನ್ನೂ ವಿಶೇಷ್ಯದಳವನ್ನೂ ಸತ್ತ್ವಲಕ್ಷಣದಲ್ಲಿ ಸೇರಿಸಿದರೂ ಇಂದ್ರಿಯಸಂಯೋಗದಲ್ಲಿ ಈ ಲಕ್ಷಣಕ್ಕೆ ಅತಿಪ್ರಸಂಗವು ಬಂದೇ ಬರುವುದು. ಇಂದ್ರಿಯಸಂಯೋಗವು ಪ್ರಕಾಶಸುಖಲಾಘವಗಳಿಗೆ ಕಾರಣವಾಗಿಯೂ ಅತೀಂದ್ರಿಯವಾಗಿಯೂ ಅದ್ರವ್ಯವಾಗಿಯೂ ಇರುವುದಷ್ಟೆ?

ಹೀಗೆ ಆಶಂಕಿಸಬೇಕಾದುದಿಲ್ಲ. ಏತಕ್ಕೆಂದರೆ—ಅತೀಂದ್ರಿಯಪದದಿಂದಲೂ ಅದ್ರವ್ಯಪದದಿಂದಲೂ "ಅಸ್ಮದಾದಿಗಳ ಪ್ರತ್ಯಕ್ಷಕ್ಕೆ ವಿಷಯವಾಗುವ ಪದಾರ್ಥದಲ್ಲಿ ಇಲ್ಲದಿರುವ ಅದ್ರವ್ಯವಿಭಾಜಕಧರ್ಮವುಳ್ಳುದು" ಎಂಬ ಅರ್ಥವನ್ನು ವಿವಕ್ಷೆ ಮಾಡಿರುವೆವು. ಅಂಥ ಧರ್ಮವು ಸತ್ತ್ವತ್ವ, ರಜಸ್ತ್ವ. ತಮಸ್ತ್ವವೆಂಬ ಧರ್ಮವೇ ಆಗುವುದು. ಅಂಥ ಉಪಾಧಿ ಇಂದ್ರಿಯಸಂಯೋಗದಲ್ಲಿ ಇಲ್ಲವಾದುದರಿಂದ ಲಕ್ಷಣಕ್ಕೆ ಅತಿಪ್ರಸಂಗವಿಲ್ಲ.

## ೯೭೯. ಸತ್ತ್ವಸ್ಯ ದ್ವೈವಿಧ್ಯಂ.

ಇಂಥ ಸತ್ತ್ವಗುಣವು ಎರಡು ಬಗೆಯಾಗಿರುವುದು. ಅವುಗಳಲ್ಲಿ ಒಂದನ್ನು ಶುದ್ಧಸತ್ತ್ವವೆಂದೂ ಮತ್ತೊಂದನ್ನು ಅಶುದ್ಧಸತ್ತ್ವವೆಂದೂ ಶಾಸ್ತ್ರಕಾರರು ವ್ಯವಹರಿಸುವರು. ರಜೋಗುಣತಮೋಗುಣಗಳ ಸಂಪರ್ಕವಿಲ್ಲದ ದ್ರವ್ಯದಲ್ಲಿ ರುವ ಸತ್ತ್ವಗುಣವು ಶುದ್ಧಸತ್ತ್ವವೆಸಿಸಿಕೊಳ್ಳುವುದು. ಇದು ನಿತ್ಯವಿಭೂತಿ ಯೊಂದರಲ್ಲಿಯೇ ಇರತಕ್ಕುದಾಗಿರುವುದು. ರಜೋಗುಣತಮೋಗುಣಗಳ ಸಂ ಪರ್ಕವಿರುವ ಸತ್ತ್ವವು ಅಶುದ್ಧಸತ್ತ್ವ ಅಥವಾ ಮಿಶ್ರಸತ್ತ್ವವೆನಿಸಿಕೊಳ್ಳು ವುದು. ಇದು ಮೂಲಪ್ರಕೃತಿದ್ರವ್ಯದಲ್ಲಿಯೂ ಅದರ ವಿಕಾರದ್ರವ್ಯಗಳಲ್ಲಿಯೂ ಇರತಕ್ಕುದಾಗಿರುವುದು.

## ೯೮೦. ಅಥ ರಜೋಗುಣಲಕ್ಷಣಂ

**" ಲೋಭಕ್ಕಾಗಲಿ ಪ್ರವೃತ್ತಿಗಾಗಲಿ ಕಾರಣವಾಗಿಯೂ, ಅತೀಂದ್ರಿ ಯವಾಗಿಯೂ, ಶಕ್ತಿಭಿನ್ನವಾಗಿಯೂ, ಇರುವ ಅದ್ರವ್ಯವು ರಜೋಗುಣ ವೆನಿಸಿಕೊಳ್ಳುವುದು "** ಇವುಗಳಲ್ಲಿ ಪ್ರಥಮವಿಶೇಷಣವನ್ನು ಲಕ್ಷಣದಲ್ಲಿ ಸೇರಿಸ ದಿದ್ದರೆ ಅತೀಂದ್ರಿಯವಾಗಿಯೂ ಶಕ್ತಿಭಿನ್ನವಾಗಿಯೂ ಅದ್ರವ್ಯವಾಗಿಯೂ ಇರುವ ಸತ್ತ್ವಗುಣತಮೋಗುಣಗಳಲ್ಲಿ ಲಕ್ಷಣವು ಅತಿಪ್ರಸಕ್ತವಾಗುವುದು. ಅದಕ್ಕಾಗಿ ಪ್ರಥಮವಿಶೇಷಣವು ಸೇರಿಸಲ್ಪಟ್ಟಿರುವುದು. ಸತ್ತ್ವಗುಣತಮೋಗುಣ ಗಳು ಲೋಭಕ್ಕಾಗಲಿ ಪ್ರವೃತ್ತಿಗಾಗಲಿ ಕಾರಣಗಳಲ್ಲವಾದುದರಿಂದ ಲಕ್ಷಣಕ್ಕೆ ಅತಿಪ್ರಸಂಗವಿಲ್ಲ. ಉಳಿದ ಪದಗಳ ಪ್ರಯೋಜನವನ್ನು ಪೂರ್ವದಂತೆಯೇ ತಿಳಿಯ ಬೇಕು.

## ೯೮೧. ಅಥ ತಮೋಗುಣಲಕ್ಷಣಂ.

**" ಪ್ರಮಾದಕ್ಕಾಗಲಿ ಮೋಹಕ್ಕಾಗಲಿ ಕಾರಣವಾಗಿಯೂ, ಅತೀಂ ದ್ರಿಯವಾಗಿಯೂ, ಶಕ್ತಿಭಿನ್ನವಾಗಿಯೂ, ಇರುವ ಅದ್ರವ್ಯವು ತಮೋ ಗುಣವೆನಿಸಿಕೊಳ್ಳುವುದು "** ಇವುಗಳಲ್ಲಿ ಪ್ರಥಮವಿಶೇಷಣವನ್ನು ಲಕ್ಷಣದಲ್ಲಿ ಸೇರಿಸದಿದ್ದರೆ ಅತೀಂದ್ರಿಯವಾಗಿಯೂ ಶಕ್ತಿಭಿನ್ನವಾಗಿಯೂ ಅದ್ರವ್ಯವಾಗಿಯೂ ಇರುವ ಸತ್ತ್ವಗುಣರಜೋಗುಣಗಳಲ್ಲಿ ಲಕ್ಷಣವು ಅತಿಪ್ರಸಕ್ತವಾಗುವುದು. ಅದಕ್ಕಾಗಿ ಪ್ರಥಮವಿಶೇಷಣವು ಸೇರಿಸಲ್ಪಟ್ಟಿರುವುದು. ಸತ್ತ್ವಗುಣರಜೋ ಗುಣಗಳು ಪ್ರಮಾದಕ್ಕಾಗಲಿ ಮೋಹಕ್ಕಾಗಲಿ ಕಾರಣಗಳಲ್ಲವಾದುದರಿಂದ ಲಕ್ಷ ಣಕ್ಕೆ ಅತಿಪ್ರಸಂಗವಿಲ್ಲ. ಉಳಿದ ಪದಗಳ ಪ್ರಯೋಜನವನ್ನು ಪೂರ್ವದಂತೆಯೇ ತಿಳಿಯಬೇಕು.

## ೯೮೨. ಸತ್ತ್ವಾದೀನಾಂ ನಿತ್ಯತ್ವಾನಿತ್ಯತ್ವಸಾಮ್ಯವೈಷಮ್ಯಾದಿ ನಿರೂಪಣಾರಂಭಃ.

ಸತ್ತ್ವರಜಸ್ತಮಸ್ಸುಗಳೆಂಬ ಈ ಮೂರು ಗುಣಗಳೂ ತ್ರಿಗುಣದ್ರವ್ಯದ ಪರಿಣಾಮಗಳಾದ ಸಕಲದ್ರವ್ಯಗಳಲ್ಲಿಯೂ ವ್ಯಾಪ್ತಗಳಾಗಿ ಅನಿತ್ಯಗಳೆನಿಸಿಕೊಂಡಿರುವುವಾದರೂ ತ್ರಿಗುಣದ್ರವ್ಯದಲ್ಲಿ ನಿತ್ಯಗಳಾಗಿಯೇ ಇರುವುವು.

ಮತ್ತು—ಪ್ರಳಯಾವಸ್ಥೆಯಲ್ಲಿ ಈ ಮೂರು ಗುಣಗಳೂ ಪರಸ್ಪರವಾಗಿ ಅತ್ಯಂತಸಾಮ್ಯವನ್ನು ಎಂದರೆ ನ್ಯೂನಾಧಿಕಭಾವವಿಲ್ಲದಿರುವಿಕೆಯನ್ನೂ, ಸೃಷ್ಟಿ, ಸ್ಥಿತ್ಯವಸ್ಥೆಗಳಲ್ಲಿ ಪರಸ್ಪರವಾಗಿ ಅತ್ಯಂತವೈಷಮ್ಯವನ್ನೂ ಎಂದರೆ—ಹೆಚ್ಚುಕಡಮೆಯಾಗಿರುವಿಕೆಯನ್ನೂ ಪಡೆವುವು.

ಮತ್ತು—ರಜೋಗುಣವು ಸೃಷ್ಟಿಗೆ ಕಾರಣವಾಗಿಯೂ ತಮೋಗುಣವು ಸಂಹಾರಕ್ಕೆ ಕಾರಣವಾಗಿಯೂ ಸತ್ತ್ವಗುಣವು ಸ್ಥಿತಿಗೆ ಕಾರಣವಾಗಿಯೂ ಉಪಯೋಗಿಸತಕ್ಕುವಾಗಿರುವುವು.

ಮತ್ತು—ಈಶ್ವರನ ಸಂಕಲ್ಪವಿಶೇಷವೆಂಬ ಸಹಕಾರಿಕಾರಣದ ಪ್ರಭಾವದಿಂದ ಈ ಗುಣಗಳೊಳಗೆ ಒಂದು ಮತ್ತೊಂದನ್ನು ತಗ್ಗಿಸುತ್ತಲೂ ಅಥವಾ ಹೆಚ್ಚಿಸುತ್ತಲೂ ಅಥವಾ ಒಂದು ಮತ್ತೊಂದಕ್ಕೆ ಸಹಾಯಮಾಡುತ್ತಲೂ ಪ್ರಾಪಂಚಿಕವ್ಯಾಪಾರಗಳಿಗೆ ಕಾರಣಗಳಾಗುತ್ತಲೇ ಇರುವುವು.

ಹೇಗೆಂದರೆ—ಅಬಲೆಯೆಂಬ ಹೆಸರನ್ನು ಪಡೆದಿರುವ ಒಂದಾನೊಂದು ಶರೀರಪಿಂಡವು—ತನ್ನ ಪತಿಯನ್ನು ಕುರಿತು ಸುಖಹೇತುವಾಗಿಯೂ, ಸವತಿಯರನ್ನು ಕುರಿತು ದುಃಖಹೇತುವಾಗಿಯೂ, ವಿಟರನ್ನು ಕುರಿತು ಮೋಹಹೇತುವಾಗಿಯೂ, ಲೋಕದಲ್ಲಿ ಕಾಣಬರುವುದು. ಆದರೆ ಸುಖಹೇತುತ್ವವೂ ದುಃಖಹೇತುತ್ವವೂ ಮೋಹಹೇತುತ್ವವೂ ಸಹ ಆ ಪಿಂಡಕ್ಕೆ ಸ್ವಾಭಾವಿಕವೆಂದು (ಸ್ವರೂಪಪ್ರಯುಕ್ತವೆಂದು) ಹೇಳಲಾಗುವುದಿಲ್ಲ. ಸ್ವರೂಪಪ್ರಯುಕ್ತವಾಗಿರುವುದಾದರೆ ಎಲ್ಲರನ್ನೂ ಕುರಿತು ಏಕರೂಪವಾಗಿಯೇ ಇರಬೇಕಲ್ಲದೆ ಒಬ್ಬೊಬ್ಬರಿಗೆ ಒಂದೊಂದು ರೂಪವಾಗಿರಕೂಡದು. ಆದಕಾರಣ—ಸುಖಾನುಭವಕ್ಕೆ ಕಾರಣವಾದ ಅದೃಷ್ಟವಿಶೇಷದೊಡನೆ ಕೂಡಿರುವ ಪತಿಯ ಸತ್ತ್ವಗುಣವು ತಲೆಯೆತ್ತಿದುದರಿಂದಲೇ ಆ ಅಬಲೆ ಪತಿಯನ್ನು ಕುರಿತು ಸುಖಹೇತುವಾಗಿ ಕಾಣುವಳು; ದುಃಖಾನುಭವಕ್ಕೆ ಕಾರಣವಾದ ಅದೃಷ್ಟವಿಶೇಷದೊಡನೆ ಕೂಡಿರುವ ಸವತಿಯರ ರಜೋಗುಣವು ತಲೆಯೆತ್ತಿದುದರಿಂದಲೇ ಸವತಿಯರನ್ನು ಕುರಿತು ದುಃಖಹೇತುವಾಗಿ ಕಾಣುವಳು; ಮೋ

ಹಾಸುಭವಕ್ಕೆ ಕಾರಣವಾದ ಅದೃಷ್ಟವಿಶೇಷದೊಡನೆ ಕೂಡಿರುವ ವಿಟರ ತಮೋ ಗುಣವು ತಲೆಯೆತ್ತಿದುದರಿಂದಲೇ ವಿಟರನ್ನು ಕುರಿತು ಮೋಹಹೇತುವಾಗಿ ಕಾಣು ವಳು.

ಸತ್ತ್ವಾದಿಗುಣಗಳು ಪ್ರಕೃತಿದ್ರವ್ಯದಲ್ಲಿರುವುವಲ್ಲದೆ ಪತಿ, ಸವತಿ, ವಿಟ ರೆಂಬ ಆತ್ಮವಸ್ತುಗಳಲ್ಲಿ ಹೇಗೆ ಬರುವುವೆಂದು ಶಂಕಿಸ ಕೆಲಸವಿಲ್ಲ. ಸತ್ತ್ವಾದಿ ಗುಣತ್ರಯಪ್ರಚುರವಾದ ಪ್ರಕೃತಿಯ ಸಂಬಂಧವು ಆತ್ಮವಸ್ತುವಿಗೆ ಇರುವುದ ರಿಂದ ಆ ಗುಣಗಳು ಆತ್ಮವಸ್ತುವನ್ನೂ ಕಲುಷಪಡಿಸಬಲ್ಲುವು. ಸ್ವಚ್ಛವಾದ ಸ್ಫಟಿ ಕದಲ್ಲಿ ಸ್ವಾಭಾವಿಕವಾದ ಲೌಹಿತ್ಯವಿಲ್ಲದಿದ್ದರೂ ಪಗಡೆಯಹೂವಿನ ಸಾನ್ನಿಧ್ಯ ದಿಂದ ಅದರಲ್ಲಿರುವ ಲೌಹಿತ್ಯವು ಸ್ಫಟಿಕದಲ್ಲಿಯೂ ವ್ಯಾಪಿಸುವುದಷ್ಟೆ?

ಸತ್ತ್ವಾದಿಗಳೇ ಅದ್ರವ್ಯಗಳಾಗಿ ಗುಣಗಳೆನಿಸಿಕೊಂಡಿರುವಲ್ಲಿ ಅವುಗಳಲ್ಲಿ ಉದ್ಭವವೆಂಬ (ತಲೆಯೆತ್ತುವಿಕೆಯೆಂಬ) ಮತ್ತೊಂದು ಗುಣವನ್ನು ಹೇಗೆ ಹೇಳು ವುದೆಂದು ಆಶಂಕಿಸಕೆಲಸವಿಲ್ಲ. ಅದ್ರವ್ಯಗಳಲ್ಲಿಯೂ ಶಕ್ತಿವಿಶೇಷವೆಂಬ ಒಂದು ಗುಣವನ್ನು ಒಪ್ಪುತ್ತೇವೆಂದು ಹಿಂದೆಯೇ ಅನೇಕಾವರ್ತಿ ಸೂಚಿಸಿರುವೆವಷ್ಟೆ?

ಅದ್ರವ್ಯಗಳಲ್ಲಿ ಶಕ್ತಿವಿಶೇಷವೆಂಬ ಗುಣವನ್ನು ಒಪ್ಪಲು ಇಷ್ಟವಿಲ್ಲದ ಪಕ್ಷ ದಲ್ಲಿ—ಸತ್ತ್ವಾದಿಗುಣಗಳು ಯಾವ ದ್ರವ್ಯದಲ್ಲಿ ಇರುವುವೋ ಆ ದ್ರವ್ಯದಲ್ಲಿಯೇ ಶಕ್ತಿವಿಶೇಷವನ್ನು ಒಪ್ಪಿ ಅಂಥ ಶಕ್ತಿಯೊಡನೆ ಸತ್ತ್ವಾದಿಗುಣಗಳಿಗೆ ಇರುವ ಸಾಮಾನಾಧಿಕರಣ್ಯವೇ ಸತ್ತ್ವಾದಿಗುಣಗಳ ಉದ್ಭವವೆನಿಸಿಕೊಳ್ಳುವುದೆಂದು ತಿಳಿಯಬಹುದು. ಅಥವಾ "**ಸುಖ-ದುಃಖ-ಮೋಹಾ-ದ್ಯುತ್ಪತ್ತಿಗೆ ಇವುಗಳು ಸಿದ್ಧವಾಗಲಿ**" ಎಂಬ ಈಶ್ವರಸಂಕಲ್ಪವಿಶೇಷಕ್ಕೆ ವಿಷಯವಾಗಿರುವಿಕೆಯೇ ಇವು ಗಳ ಉದ್ಭವವೆನಿಸಿಕೊಳ್ಳುವುದೆಂದಾದರೂ ತಿಳಿಯಬಹುದು.

ಉದ್ಭವಾವಸ್ಥೆಯನ್ನು ಹೊಂದಿರುವ ಮತ್ತೊಂದು ಗುಣದೊಡನೆ ಇನ್ನೊಂದು ಗುಣಕ್ಕೆ ಇರುವ ಸಾಮಾನಾಧಿಕರಣ್ಯವೇ ಅಭಿಭವ ಅಥವಾ ಅನು ದ್ಭವ (ತಲೆಯೆತ್ತದಿರುವಿಕೆ) ಎನಿಸಿಕೊಳ್ಳುವುದೆಂದು ತಿಳಿಯಬಹುದು.

ತಾನೂ ಉದ್ಭವಾವಸ್ಥೆಯನ್ನು ಪಡೆಯದೆ, ಉದ್ಭವಾವಸ್ಥೆಯನ್ನು ಪಡೆ ದಿರುವ ಮತ್ತೊಂದು ಗುಣದೊಡನೆ ಸಾಮಾನಾಧಿಕರಣ್ಯವನ್ನೂ ಪಡೆಯದಿರುವಿಕೆ ಸತ್ತ್ವಾದಿಗಳ ಸಾಮ್ಯವೆನಿಸಿಕೊಳ್ಳುವುದೆಂದು ತಿಳಿಯಬಹುದು.

ಅಂತು—ಅಬಲೆಯ ಶರೀರಪಿಂಡದಲ್ಲಿರುವ ಸುಖಹೇತುತ್ವ-ದುಃಖಹೇತುತ್ವ-ಮೋಹಹೇತುತ್ವಗಳು—ಪತಿ--ಸವತಿ--ವಿಟರಲ್ಲಿರುವ ಸತ್ತ್ವ ರಜಸ್ತಮಸ್ಸುಗಳ

ಉದ್ಭವಾವಸ್ಥೆಯಿಂದಲೇ ಬಂದಿರುವುವಲ್ಲದೆ ಸ್ವರೂಪಪ್ರಯುಕ್ತಗಳಲ್ಲವೆಂದು ಸಿದ್ಧವಾಯಿತು.

ಒಂದೇ ವಸ್ತು ಕಾಲಭೇದದಿಂದಲೂ, ದೇಶಭೇದದಿಂದಲೂ, ವ್ಯಕ್ತಿಭೇದದಿಂದಲೂ ಸಹ ದುಃಖಕ್ಕೂ, ಸುಖಕ್ಕೂ, ಅಸೂಯೆ ಹೆಚ್ಚುವುದಕ್ಕೂ, ಕೋಪಕ್ಕೂ ಕಾರಣವಾಗುವುದಾದುದರಿಂದ ಯಾವ ವಸ್ತುವಿಗೂ ಏಕರೂಪತ್ವವು ಸ್ಥಿರವಾದುದೆಂದು (ಸ್ವಾಭಾವಿಕವಾದುದೆಂದು) ಹೇಳಲು ಶಕ್ಯವಿಲ್ಲವೆಂಬ ಈ ವಿಷಯವನ್ನು **ಶ್ರೀಮದ್ವಿಷ್ಣುಪುರಾಣದಲ್ಲಿ ಶ್ರೀಪರಾಶರಮಹರ್ಷಿಗಳು—**

**"ವಸ್ತ್ವೇಕಮೇವ ದುಃಖಾಯ ಸುಖಾಯೇರ್ಷ್ಯಾಗಮಾಯ ಚ ।**
**ಕೋಪಾಯ ಚ ಯತಸ್ತಸ್ಮಾದ್ವಸ್ತು ವಸ್ತ್ವಾತ್ಮಕಂ ಕುತಃ ॥**
**ತದೇವ ಪ್ರೀತಯೇ ಭೂತ್ವಾ ಪುನರ್ದುಃಖಾಯ ಜಾಯತೇ ।**
**ತದೇವ ಕೋಪಾಯ ಯತಃ ಪ್ರಸಾದಾಯ ಚ ಜಾಯತೇ ।**
**ತಸ್ಮಾದ್ದುಃಖಾತ್ಮಕಂ ನಾಸ್ತಿ ನ ಚ ಕಿಂಚಿತ್ಸುಖಾತ್ಮಕಂ ॥"**

ಎಂದು ಸ್ಪಷ್ಟವಾಗಿ ಅಪ್ಪಣೆಕೊಡಿಸಿರುವರು—

ಒಂದೇ ವಸ್ತು ಒಂದೇಕಾಲದಲ್ಲಿ ಭಿನ್ನಭಿನ್ನಪುರುಷರನ್ನು ಕುರಿತು ಸುಖದುಃಖಮೋಹಾದಿಹೇತುವಾಗಿ ಪರಿಣಮಿಸುವುದೆಂದೂ, ಒಂದೇ ವಸ್ತು ಒಂದೇ ಪುರುಷನನ್ನು ಕುರಿತು ಭಿನ್ನಭಿನ್ನಕಾಲದಲ್ಲಿ ಸುಖದುಃಖಮೋಹಾದಿಹೇತುವಾಗಿ ಪರಿಣಮಿಸುವುದೆಂದೂ ಲೋಕದಲ್ಲಿ ಕಾಣುವುದರಿಂದ ಯಾವ ವಸ್ತುವಿಗೂ ಏಕರೂಪತ್ವವು ಸ್ವಾಭಾವಿಕವಲ್ಲವೆಂಬುದು ಈ ಶ್ಲೋಕಗಳ ತಾತ್ಪರ್ಯವಾಗಿರುವುದು.

## ೯೮೩ ತತ್ರ ಸತ್ತ್ವಾದೀನಾಂ ಪ್ರಕೃತಿಸ್ವರೂಪಾನುಬಂಧಿತ್ವಂ, ಪ್ರಕೃತ್ಯಸಾಧಾರಣತ್ವಂ ಚ.

ಸತ್ತ್ವಾದಿಗುಣತ್ರಯದ ಸ್ವರೂಪಸ್ವಭಾವವಿಶೇಷಗಳನ್ನೂ, ಅವುಗಳ ಕೆಲಸಗಳನ್ನೂ, ಮತ್ತು ಅವುಗಳ ಪರವಾಗಿ ತಿಳಿಯಬೇಕಾದ ಇನ್ನೂ ಅನೇಕವಿಚಾರಗಳನ್ನೂ ಶ್ರೀಗೀತಾಚಾರ್ಯನು ಭಗವದ್ಗೀತೆಯ ಹದಿನಾಲ್ಕನೆಯ ಅಧ್ಯಾಯದಲ್ಲಿ ವಿಶದವಾಗಿ ಅಪ್ಪಣೆಕೊಡಿಸಿರುವನು. ಹೇಗೆಂದರೆ—

**"ಸತ್ತ್ವಂರಜಸ್ತಮ ಇತಿ ಗುಣಾಃ ಪ್ರಕೃತಿಸಂಭವಾಃ ।**
**ನಿಬಧ್ನಂತಿ ಮಹಾಬಾಹೋ ದೇಹೇ ದೇಹಿನಮವ್ಯಯಂ ॥"**

"ಸೃಷ್ಟಿಯ ಪ್ರಾರಂಭಸಮಯದಲ್ಲಿ ಚೇತನನಿಗೆ ಪ್ರಾಚೀನಕರ್ಮವು ಅಚಿತ್ಸಂಸರ್ಗವನ್ನು ಉಂಟುಮಾಡಿ ದೇವಮನುಷ್ಯತಿರ್ಯಕ್‌ಸ್ಥಾವರಜಾತಿಗಳಲ್ಲಿ

ಜನ್ಮವನ್ನು ಕೊಟ್ಟು ತನ್ನ ಕೆಲಸವನ್ನು ತೀರಿಸಿಕೊಂಡುದರಿಂದ ಕೃತಕೃತ್ಯವಾಗಿ ಕ್ಷೀಣವಾಗಬೇಕು; ಕರ್ಮವು ಕ್ಷಯಿಸಿದರೆ ಕರ್ಮಾರಬ್ಧವಾದ ಶರೀರವು ತಾನೇ ಕೊನೆಗಾಣುವುದು; ಆತ್ಮಸ್ವರೂಪವಾದರೆ ಸ್ವಭಾವದಿಂದಲೇ ಪರಿಶುದ್ಧವಾದುದು; ಹೀಗಿರುವಲ್ಲಿ ಈ ಚೇತನನಿಗೆ ಪುನಃ ಪುನಃ ದೇವಮನುಷ್ಯಾದಿಜನ್ಮಪ್ರಾಪ್ತಿಯುಂಟಾಗುವುದಕ್ಕೆ ಕಾರಣವೇನು" ಎಂಬ ಆಶಂಕೆಗೆ ಉತ್ತರವನ್ನು ಈ ಶ್ಲೋಕದಿಂದ ತೋರಿಸುವನು.

ಸತ್ತ್ವ, ರಜಸ್ಸು, ತಮಸ್ಸು, ಎಂಬ ಮೂರು ಗುಣಗಳು ಪ್ರಕೃತಿದ್ರವ್ಯದ ಸ್ವರೂಪಪ್ರಯುಕ್ತಗಳಾದ ಸ್ವಭಾವವಿಶೇಷಗಳಾಗಿರುವುವು. ಸುಖದುಃಖಮೋಹಗಳೆಂಬ ಕಾರ್ಯವಿಶೇಷದಿಂದ ಅವುಗಳನ್ನು ಅನುಮಿಸಿ ತಿಳಿದುಕೊಳ್ಳಬೇಕಲ್ಲದೆ ಅವು ಇಂದ್ರಿಯಕ್ಕೆ ಗೋಚರಗಳಾಗತಕ್ಕುವುಗಳಲ್ಲ. ಪ್ರಕೃತಿತ್ವಾವಸ್ಥೆಯಲ್ಲಿ ಅವು ಉದ್ಭವಸ್ಥಿತಿಯನ್ನು ಪಡೆಯದೆಯೂ, ಪ್ರಕೃತಿಯ ಪರಿಣಾಮಗಳಾದ ಮಹದಾದಿತತ್ತ್ವಗಳಲ್ಲಿ ಉದ್ಭೂತಗಳಾಗಿಯೂ ಇದ್ದುಕೊಂಡು ಮಹದಾದಿಪೃಥಿವ್ಯಂತಗಳಾದ ತತ್ತ್ವಗಳಿಂದ ರಚಿಸಲ್ಪಟ್ಟ ದೇವಮನುಷ್ಯತಿರ್ಯಕ್‌ಸ್ಥಾವರಗಳೆಂಬ ಶರೀರಗಳ ಸಂಬಂಧವನ್ನು ಪಡೆದಿರುವ ಈ ಚೇತನನಿಗೆ ಸ್ವತಃ ಸತ್ತ್ವಾದಿಗುಣಸಂಬಂಧಕ್ಕೆ ಅರ್ಹತೆಯಿಲ್ಲದಿದ್ದರೂ ದೇಹಸಂಬಂಧವನ್ನೇ ಕಾರಣವನ್ನಾಗಿಮಾಡಿಕೊಂಡು ಈ ಗುಣಗಳು ಇವನನ್ನು ಕಟ್ಟುತ್ತವೆ; ಪುನಃ ಪುನಃ ಆ ಆ ಶರೀರಗಳಲ್ಲಿ ನುಗ್ಗಿಸುತ್ತವೆ. ಈ ಶ್ಲೋಕದಲ್ಲಿ ಅರ್ಜುನನನ್ನು ಕುರಿತು "ಮಹಾಬಾಹೋ" ಎಂದು ಸಂಬೋಧನವನ್ನು ಮಾಡಿದ ಗೀತಾಚಾರ್ಯನ ಆಶಯವೇನೆಂದರೆ—ಬಾಹುಬಲಶಾಲಿಯಾದ ನೀನು ನಿನ್ನ ಬಾಹುಬಲದಿಂದ ಶತ್ರುಗಳನ್ನು ಅಡಗಿಸಬಹುದಲ್ಲದೆ ಈ ಗುಣಗಳನ್ನು ಅಡಗಿಸಲು ಶಕ್ಯವಲ್ಲವೆಂದು ಅಭಿಪ್ರಾಯವು.

## ೯೮೪ ಸತ್ತ್ವಾದೀನಾಮಾಕಾರೋ ಬಂಧಕತಾಪ್ರಕಾರಶ್ಚ

"ತತ್ರ ಸತ್ತ್ವಂ ನಿರ್ಮಲತ್ವಾತ್ಪ್ರಕಾಶಕಮನಾಮಯಂ ।
ಸುಖಸಂಗೇನ ಬಧ್ನಾತಿ ಜ್ಞಾನಸಂಗೇನ ಚಾನಘ ॥"

ಸತ್ತ್ವ-ರಜಸ್ತಮೋಗುಣಗಳ ಸ್ವರೂಪವನ್ನೂ, ಅವುಗಳು ಚೇತನನನ್ನು ಬಂಧಿಸುವ ಕ್ರಮವನ್ನೂ ವಿಶದಪಡಿಸುವುದಾಗಿ ಉದ್ದೇಶಿಸಿ ಈ ಶ್ಲೋಕದಲ್ಲಿ ಸತ್ತ್ವಗುಣದ ಪರವಾಗಿ ಅವೆರಡನ್ನೂ ವಿಶದಪಡಿಸುವನು.—

ವಸ್ತುವಿನ ಯಥಾರ್ಥಜ್ಞಾನವು ಪ್ರಕಾಶವೆನಿಸಿಕೊಳ್ಳುವುದು; ಇಂಥ ಪ್ರಕಾಶಕ್ಕೂ ಸುಖಕ್ಕೂ ಯಾವ ಆವರಣವುಂಟೋ ಅದು ರಜಸ್ತಮೋಗುಣ

ಗಳಲ್ಲಿ ಇರುವುದಲ್ಲದೆ ಸತ್ತ್ವಗುಣದಲ್ಲಿ ಇಲ್ಲ; ಹೀಗೆ ಆವರಣರಹಿತವಾದುದರಿಂದ ಸತ್ತ್ವಗುಣವು ನಿರ್ಮಲವೆನಿಸಿಕೊಳ್ಳುವುದು. ನಿರ್ಮಲವಾದುದರಿಂದಲೇ ಪ್ರಕಾಶಕ್ಕೆ ಕಾರಣವಾಗುವುದು. ಆಮಯವೆಂದರೆ ರೋಗವು; ರಜೋಗುಣತಮೋಗುಣಗಳು ರೋಗಕ್ಕೆ ಕಾರಣವಾಗುವುವಲ್ಲದೆ ಸತ್ತ್ವಗುಣವು ರೋಗಕ್ಕೆ ಹೇತುವಾಗುವುದಿಲ್ಲ; ಕಿಂತು ಆರೋಗ್ಯಕ್ಕೆ ಹೇತುವಾಗುವುದು. ಆದುದರಿಂದ ಇದು ಅನಾಮಯವೆನಿಸಿಕೊಳ್ಳುವುದು.

ಇಂಥ ಸತ್ತ್ವಗುಣವು ದೇಹಿಯಾದ ಚೇತನನಿಗೆ ಸುಖಸಂಬಂಧವನ್ನೂ ಯಥಾರ್ಥಜ್ಞಾನಸಂಬಂಧವನ್ನೂ ಉಂಟುಮಾಡುವುದು. ಜ್ಞಾನಸಂಬಂಧವೂ ಸುಖಸಂಬಂಧವೂ ಉಂಟಾದರೆ ತತೋಽತ್ಯತಿಶಯಿತವಾದ ಜ್ಞಾನಕ್ಕೂ ಸುಖಕ್ಕೂ ಸಾಧನಗಳಾಗಿರುವ ಲೌಕಿಕವೈದಿಕಕರ್ಮಗಳಲ್ಲಿ ಚೇತನನು ಪ್ರವರ್ತಿಸುವನು. ಹಾಗೆ ಪ್ರವರ್ತಿಸಿ ಆ ಆ ಕರ್ಮಗಳನ್ನು ನಡಸಿದನಾದರೆ ಅವುಗಳ ಫಲಗಳನ್ನು ಅನುಭವಿಸುವುದಕ್ಕಾಗಿ ಆ ಆ ಜಾತಿವಿಶೇಷಗಳಲ್ಲಿ ಜನ್ಮವನ್ನು ಪಡೆಯಲೇ ಬೇಕಾಗುವುದು. ಹೀಗೆ ಸತ್ತ್ವಗುಣವು ಸುಖಸಂಬಂಧಜ್ಞಾನಸಂಬಂಧಗಳ ಮೂಲಕವಾಗಿ ಚೇತನನನ್ನು ಬಂಧಿಸುವುದು.

"ರಜೋ ರಾಗಾತ್ಮಕಂ ವಿದ್ಧಿ ತೃಷ್ಣಾಸಂಗಸಮುದ್ಭವಂ।
ತನ್ನಿಬಧ್ನಾತಿ ಕೌಂತೇಯ ಕರ್ಮಸಂಗೇನ ದೇಹಿನಂ॥"

ನಾಯಕನಾಯಕಿಯರಿಗೆ ಪರಸ್ಪರವಾಗಿ ಇರುವ ಆಶಾಬಂಧವು ರಾಗವೆನಿಸಿಕೊಳ್ಳುವುದು. ಶಬ್ದಸ್ಪರ್ಶಾದಿಪಂಚವಿಷಯಗಳಲ್ಲಿ ಉಂಟಾಗುವ ಅಪೇಕ್ಷಾವಿಶೇಷವು ತೃಷ್ಣೆಯೆನಿಸಿಕೊಳ್ಳುವುದು. ಪುತ್ರ ಮಿತ್ರ ಮೊದಲಾದ ಶರೀರಾನುಬಂಧಿಗಳೊಡನೆ ಸಂಶ್ಲೇಷವನ್ನು ಪಡೆಯಬೇಕೆಂಬ ಇಚ್ಛೆ ಸಂಗವೆನಿಸಿಕೊಳ್ಳುವುದು. ಎಲೈ ಕುಂತೀಪುತ್ರನಾದ ಅರ್ಜುನನೇ! ರಜೋಗುಣವನ್ನು ರಾಗಕ್ಕೆ ಹೇತುವನ್ನಾಗಿಯೂ ತೃಷ್ಣಾಸಂಗಗಳಿಗೆ ಉತ್ಪತ್ತಿಸ್ಥಾನವನ್ನಾಗಿಯೂ ತಿಳಿ. ಇಂಥ ರಜೋಗುಣವು ಪುಣ್ಯಪಾಪರೂಪಗಳಾದ ಕರ್ಮಗಳಲ್ಲಿ ಆಸಕ್ತಿಯನ್ನುಂಟುಮಾಡುವುದರಮೂಲಕವಾಗಿ ಚೇತನನನ್ನು ಬಂಧನಕ್ಕೆ ಸಿಲುಕಿಸುವುದು. ಕರ್ಮಗಳಲ್ಲಿ ಸ್ಪೃಹೆಯುಂಟಾದುದರಿಂದಲ್ಲವೆ ಚೇತನನು ಕರ್ಮಗಳನ್ನು ಆರಂಭಿಸುತ್ತಾನೆ? ಹೀಗೆ ಆರಂಭಿಸಲ್ಪಟ್ಟ ಕರ್ಮಗಳು ತಮ್ಮ ತಮ್ಮ ಫಲಗಳನ್ನು ಕೊಡುವುದಕ್ಕಾಗಿ ಅಂಥ ಫಲಾನುಭವಕ್ಕೆ ಸಾಧನಗಳಾಗಿರುವ ನಾನಾ ಜನ್ಮಗಳಲ್ಲಿ ಚೇತನನನ್ನು ತಳ್ಳುವುವು. ಇದರಿಂದ ರಜೋಗುಣವೆಂಬುದು ರಾಗತೃಷ್ಣಾಸಂಗಗಳಿಗೆ ಹೇತುವಾಗಿರುವುದೆಂದೂ, ಕರ್ಮಸಂಗಕ್ಕೆ ಹೇತುವಾಗಿರುವುದೆಂದೂ ಫಲಿಸಿತು.

"ತಮಸ್ತ್ವಜ್ಞಾನಜಂ ವಿದ್ಧಿ ಮೋಹನಂ ಸರ್ವದೇಹಿನಾಂ ।
ಪ್ರಮಾದಾಲಸ್ಯನಿದ್ರಾಭಿಸ್ತನ್ನಿಬಧ್ನಾತಿ ಭಾರತ ॥"

ವಸ್ತುವನ್ನು ಯಥಾರ್ಥವಾಗಿ ತಿಳಿದುಕೊಳ್ಳುವಿಕೆ ಜ್ಞಾನವೆನಿಸಿಕೊಳ್ಳು ವುದು. ಅದಕ್ಕೆ ವ್ಯತಿರಿಕ್ತವಾದುದು ಅಜ್ಞಾನವು ; ಎಂದರೆ ವಿಪರೀತಜ್ಞಾನವು. ಮೋಹವೆಂದರೂ ವಿಪರೀತಜ್ಞಾನವು—ಎಲೈ ಅರ್ಜುನನೇ ! ತಮೋಗುಣವನ್ನು ವಿಪರೀತಜ್ಞಾನದಿಂದ ಉತ್ಪನ್ನವಾಗುವುದನ್ನಾಗಿಯೂ ಸಕಲಚೇತನರಿಗೂ ಉತ್ತ ರೋತ್ತರವಾಗಿ ಪುನಃ ಪುನಃ ವಿಪರೀತಜ್ಞಾನಕ್ಕೆ ಕಾರಣವನ್ನಾಗಿಯೂ ತಿಳಿ. ಇಂಥ ತಮಸ್ಸು ಪ್ರಮಾದವನ್ನೂ, ಆಲಸ್ಯವನ್ನೂ, ನಿದ್ರೆಯನ್ನೂ ಉಂಟು ಮಾಡುವುದರಮೂಲಕವಾಗಿ ಚೇತನನನ್ನು ಬಂಧನಕ್ಕೆ ಸಿಲುಕಿಸುವುದು. ಅನವ ಧಾನವು (ಸಾವಧಾನತೆಯಿಲ್ಲದಿರುವಿಕೆ) ಪ್ರಮಾದವೆನಿಸಿಕೊಳ್ಳುವುದು. ಇದು ಅವಶ್ಯಕರ್ತವ್ಯವಾದ ಕರ್ಮದಲ್ಲಿ ಪ್ರವೃತ್ತಿಯನ್ನು ತಡೆಯುತ್ತಲೂ, ಅಕರ್ತವ್ಯ ವಾದ ಅಸತ್ಕರ್ಮದಲ್ಲಿ ಪ್ರವೃತ್ತಿಯನ್ನು ಹುಟ್ಟಿಸುತ್ತಲೂ ಬಂಧಕ್ಕೆ ಕಾರಣವಾಗು ವುದು. ಆಲಸ್ಯವೆಂದರೆ ಜಡತ್ವವು ಎಂದರೆ ಸೋಮಾರಿತನವು. ಇದು ಕರ್ತವ್ಯ ಕರ್ಮಗಳ ಪ್ರಾರಂಭಕ್ಕೆ ಅವಕಾಶವನ್ನು ಕೊಡದೆ ಬಂಧಕ್ಕೆ ಕಾರಣವಾಗುವುದು. ಜಾಗ್ರದವಸ್ಥೆಯಲ್ಲಿ ಇಂದ್ರಿಯಗಳು ಬಲವಾಗಿ ಕೆಲಸಮಾಡಿ ಆಯಾಸಗೊಂಡಿರು ವುದರಿಂದ ಇವುಗಳಿಗೆ ಸ್ವಲ್ಪ ವಿಶ್ರಾಂತಿ ಬೇಕಾಗಿರುವುದು ; ಇದಕ್ಕಾಗಿ ಆ ಆ ಸಮಯಗಳಲ್ಲಿ ಉಂಟಾಗುವ ಸರ್ವೇಂದ್ರಿಯಗಳ ಪ್ರವೃತ್ತಿನಿರೋಧವು ನಿದ್ರೆಯೆನಿಸಿ ಕೊಳ್ಳುವುದು. ಇದು ಸ್ವಪ್ನವೆಂದೂ, ಸುಷುಪ್ತಿಯೆಂದೂ ಎರಡುವಿಧವಾಗುವುದು. ಬಾಹ್ಯೇಂದ್ರಿಯಗಳ ಪ್ರವೃತ್ತಿನಿರೋಧವು ಸ್ವಪ್ನವೆಂದೂ, ಅವುಗಳ ಜತೆಯಲ್ಲಿ ಮನಸ್ಸಿಗೂ ಪ್ರವೃತ್ತಿನಿರೋಧವುಂಟಾದರೆ ಅದು ಸುಷುಪ್ತಿಯೆಂದೂ ಎನಿಸಿ ಕೊಳ್ಳುವುದು. ಇಂಥ ನಿದ್ರೆ ಕಾಲದಲ್ಲಿ ಬಾರದೆಯೂ ಅಕಾಲದಲ್ಲಿ ಬರುತ್ತಲೂ ಚೇತನನನ್ನು ಬಂಧನಕ್ಕೊಳಪಡಿಸುವುದು. ಎಂದರೆ ವಿಹಿತಕರ್ಮಾಚರಣಕ್ಕೆ ಅನರ್ಹ ವಾದ ಕಾಲದಲ್ಲಿ ತಾನು ಬಾರದೆ ಅದಕ್ಕೆ ಅರ್ಹವಾದ ಕಾಲದಲ್ಲಿ ಚೇತನನನ್ನು ತಾನು ಆಕ್ರಮಿಸಿಕೊಂಡು ವಿಹಿತಕರ್ಮಾಚರಣಕ್ಕೆ ಅಡ್ಡಿಯನ್ನು ಮಾಡುತ್ತ ಬಂಧಕ್ಕೆ ಕಾರಣವಾಗುವುದು.

## ೯೮೫ ಸತ್ತ್ವಾದೀನಾಂ ಬಂಧದ್ವಾರೇಷು ಪ್ರಧಾನದ್ವಾರ ನಿರೂಪಣಂ.

"ಸತ್ತ್ವಂ ಸುಖೇ ಸಂಜಯತಿ ರಜಃ ಕರ್ಮಣಿ ಭಾರತ ।
ಜ್ಞಾನಮಾವೃತ್ಯ ತು ತಮಃ ಪ್ರಮಾದೇ ಸಂಜಯತ್ಯುತ ॥

ಸತ್ತ್ವಾದಿಗುಣಗಳು ಆ ಆ ಅನೇಕಪದಾರ್ಥವಿಶೇಷಗಳನ್ನು ದ್ವಾರವಾಗಿ ಮಾಡಿಕೊಂಡು ಜೀವನನ್ನು ಬಂಧಕ್ಕೆ ಸಿಲುಕಿಸುತ್ತವೆಯೆಂದು ಹಿಂದಿನಶ್ಲೋಕಗಳಲ್ಲಿ ತೋರಿಸಲಾಯಿತು. ಆದರೆ ಅಂಥ ಅನೇಕದ್ವಾರಗಳೊಳಗೆ ಯಾವ ದ್ವಾರವು ಯಾವ ಗುಣಕ್ಕೆ ಮುಖ್ಯವಾಗಿರುವುದೆಂಬುದನ್ನು ಈ ಶ್ಲೋಕದಿಂದ ನಿಷ್ಕರ್ಷಿಸುವುದಾಗಿರುವುದು.

ಎಲೈ ಭರತಕುಲೋತ್ಪನ್ನನಾದ **ಅರ್ಜುನನೆ!**—ಸತ್ತ್ವಗುಣವು ಸುಖಸಂಗವನ್ನೇ ಪ್ರಧಾನದ್ವಾರವನ್ನಾಗಿ ಮಾಡಿಕೊಂಡೂ, ರಜೋಗುಣವು ಕರ್ಮಸಂಗವನ್ನೇ ಪ್ರಧಾನದ್ವಾರವನ್ನಾಗಿ ಮಾಡಿಕೊಂಡೂ, ತಮೋಗುಣವಾದರೆ ವಸ್ತುವಿನ ಯಥಾರ್ಥಜ್ಞಾನೋತ್ಪತ್ತಿಗೆ ಅವಕಾಶವನ್ನು ಕೊಡದೆ ವಿಪರೀತಜ್ಞಾನವನ್ನೇ ಉಂಟುಮಾಡಿ ಅಕರ್ತವ್ಯವಾದ ಅಸತ್ಕರ್ಮದಲ್ಲಿ ಪ್ರವೃತ್ತಿಸಂಗವನ್ನೇ ಪ್ರಧಾನದ್ವಾರವನ್ನಾಗಿ ಮಾಡಿಕೊಂಡೂ, ಚೇತನನನ್ನು ಬಂಧನಕ್ಕೆ ಗುರಿಪಡಿಸುವುವು.

**೯೮೩. ಪ್ರಕೃತಿಸ್ವರೂಪಾನುಬಂಧಿತಯಾ ಸರ್ವದಾ ವರ್ತಮಾನಾನಾಂ ಸತ್ತ್ವಾದೀನಾಂ ಪರಸ್ಪರವಿರುದ್ಧಕಾರ್ಯಜನಕತ್ವ ಕಥಂತಾಶಂಕಾಪರಿಹಾರಃ.**

**" ರಜಸ್ತಮಶ್ಚಾಭಿಭೂಯ ಸತ್ತ್ವಂ ಭವತಿ ಭಾರತ |**
**ರಜಸ್ಸತ್ತ್ವಂ ತಮಶ್ಚೈವ ತಮಸ್ಸತ್ತ್ವಂ ರಜಸ್ತಥಾ ॥ "**

ಸತ್ತ್ವರಜಸ್ತಮೋಗುಣಗಳು—ಶರೀರಾಕಾರವಾಗಿ ಪರಿಣಮಿಸಿರುವ ಪ್ರಕೃತಿದ್ರವ್ಯಕ್ಕೆ ಸ್ವರೂಪಾನುಬಂಧಿಗಳಾದುದರಿಂದ ಸ್ವಾಭಾವಿಕಗಳಾಗಿ ಸರ್ವಕಾಲದಲ್ಲಿಯೂ ಶರೀರದಲ್ಲಿ ಇದ್ದೇ ಇರುವುವಾದಕಾರಣ—ಯಥಾರ್ಥಜ್ಞಾನ ಅಯಥಾರ್ಥಜ್ಞಾನಗಳೆಂಬ ವಿರುದ್ಧಕಾರ್ಯಗಳನ್ನೂ, ಸುಖಸಂಗದುಃಖಸಂಗಗಳೆಂಬ ವಿರುದ್ಧಕಾರ್ಯಗಳನ್ನೂ ಹೇಗೆ ಉಂಟುಮಾಡಬಲ್ಲುವು? ಎಂಬ ಆಶಂಕೆಗೆ ಸಮಾಧಾನವು ಈ ಶ್ಲೋಕದಲ್ಲಿ ಹೇಳಲ್ಪಡುವುದು—ಎಲೈ ಭರತಕುಲೋತ್ಪನ್ನನಾದ **ಅರ್ಜುನನೆ!** ಸತ್ತ್ವಾದಿಗುಣಗಳು ಮೂರೂ ಯದ್ಯಪಿ ಪ್ರಕೃತಿಸಂಸರ್ಗವನ್ನು ಪಡೆದಿರುವ ಜೀವನನ್ನು ಎಡೆಬಿಡದೆ ಸುತ್ತಿಕೊಂಡಿರುವುವು; ಆದರೂ ಪರಸ್ಪರವಿರುದ್ಧಕಾರ್ಯಗಳು ಈ ಶರೀರದಲ್ಲಿ ಉಂಟಾಗಲು ಅಡ್ಡಿಯಿಲ್ಲ. ಏತಕ್ಕೆಂದರೆ, ಪ್ರಾಚೀನವಾದ ಕರ್ಮದ ಪರಿಪಾಕವಿಶೇಷದಿಂದಲೂ, ಶರೀರಕ್ಕೆ ಆಪ್ಯಾಯಕವಾದ ಆಹಾರದ ವ್ಯತ್ಯಾಸದಿಂದಲೂ—ಸತ್ತ್ವಾದಿಗುಣಗಳು ಪರಸ್ಪರವಾಗಿ ಉದ್ಭವಾವಸ್ಥೆಯನ್ನೂ ತಿರಸ್ಕಾರಾವಸ್ಥೆಯನ್ನೂ ಪಡೆಯುತ್ತಲೇ ಇರುವುವು. ಒಂದಾ

ನೊಂದು ಸಮಯದಲ್ಲಿ ರಜೋಗುಣತಮೋಗುಣಗಳೆರಡನ್ನೂ ತಿರಸ್ಕರಿಸಿ ಸತ್ತ್ವ ಗುಣವೇ ತಲೆಯೆತ್ತುವುದು; ಮತ್ತೊಂದು ಸಮಯದಲ್ಲಿ ಸತ್ತ್ವಗುಣತಮೋಗುಣ ಗಳೆರಡನ್ನೂ ತಿರಸ್ಕರಿಸಿ ರಜೋಗುಣವೇ ತಲೆಯೆತ್ತುವುದು; ಇನ್ನೊಂದು ಸಮಯ ದಲ್ಲಿ ಸತ್ತ್ವಗುಣರಜೋಗುಣಗಳೆರಡನ್ನೂ ತಿರಸ್ಕರಿಸಿ ತಮೋಗುಣವೇ ತಲೆಯೆ ತ್ತುವುದು. ಯಾವಾಗ ಯಾವ ಗುಣವು ಉದ್ರಿಕ್ತವಾಗಿರುವುದೋ ಆಗ ಅದರ ಕೆಲಸವು ನಡೆಯಲು ತಡೆಯಿಲ್ಲ.

**೧೮೭ ತತ್ತದ್ಗುಣೋದ್ಭವಸ್ಯ ತತ್ತತ್ಕಾರ್ಯೋಪಲಬ್ಧ್ಯವಗಮ್ಯತ್ವಂ.**

"ಸರ್ವದ್ವಾರೇಷು ದೇಹೇಽಸ್ಮಿನ್ ಪ್ರಕಾಶ ಉಪಜಾಯತೇ |
ಜ್ಞಾನಂ ಯದಾ ತದಾ ವಿದ್ಯಾದ್ವಿವೃದ್ಧಂ ಸತ್ತ್ವಮಿತ್ಯುತ ||"

ಆದರೆ ಯಾವ ಗುಣವು ಯಾವ ಕಾಲದಲ್ಲಿ ಉದ್ರಿಕ್ತವಾಗಿರುವುದೆಂಬುದನ್ನು ಕಂಡುಹಿಡಿವ ಬಗೆ ಹೇಗೆ? ಎಂಬ ಆಶಂಕೆಗೆ ಆ ಆ ಕಾರ್ಯವಿಶೇಷದಿಂದ ಅದನ್ನು ಕಂಡುಹಿಡಿಯಬಹುದೆಂಬ ಸಮಾಧಾನವನ್ನು ಈ ಶ್ಲೋಕದಿಂದ ಹಿಡಿದು ಮೂರು ಶ್ಲೋಕಗಳಲ್ಲಿ ಅಪ್ಪಣೆಕೊಡಿಸುವರು —

ಈ ಶ್ಲೋಕದ ಪೂರ್ವಾರ್ಧದಲ್ಲಿರುವ ಪ್ರಕಾಶಪದವು ಪ್ರಥಮಾವಿಭಕ್ತಿ ಯೆಂದು ಭ್ರಮಿಸಬಾರದು; ಸಪ್ತಮೀವಿಭಕ್ತಿಯ ಏಕವಚನವಾಗಿರುವುದು. ಯಥಾರ್ಥವ್ಯವಹಾರಾನುಗುಣ್ಯವೆಂಬ ಪ್ರಕಾಶವುಂಟಾಗುವುದಕ್ಕಾಗಿ ಜ್ಞಾನವು ಈ ಶರೀರದಲ್ಲಿ ಜ್ಞಾನಪ್ರಸರಣದ್ವಾರಗಳಾದ ಚಕ್ಷುಶ್ಶ್ರೋತ್ರಜಿಹ್ವಾಘ್ರಾಣ ತ್ವಙ್ಮನಸ್ಸುಗಳೆಂಬ ಆರು ಇಂದ್ರಿಯಗಳಲ್ಲಿಯೂ ಯಾವಾಗ ಉಂಟಾಗುವುದೋ ಆಗ ಸತ್ತ್ವಗುಣವು ಈ ಶರೀರದಲ್ಲಿ ತಲೆಯೆತ್ತಿರುವುದೆಂದು ತಿಳಿಯಬಹುದು.

"ಲೋಭಃ ಪ್ರವೃತ್ತಿರಾರಂಭಃ ಕರ್ಮಣಾಮಶಮಃ ಸ್ಪೃಹಾ |
ರಜಸ್ಯೇತಾನಿ ಜಾಯಂತೇ ವಿವೃದ್ಧೇ ಭರತರ್ಷಭ ||"

ತನ್ನ ವಸ್ತುಗಳಲ್ಲಿ ಮಿಗಿತವನ್ನು ವಹಿಸುವಿಕೆ ಲೋಭವೆನಿಸಿಕೊಳ್ಳುವುದು. ಪ್ರಯೋಜನವನ್ನು ನಿಶ್ಚಯಿಸಿಕೊಳ್ಳದೆಯೇ ವೃಥಾಚೇಷ್ಟೆಗಳಲ್ಲಿ ಎಂದರೆ ತೃಣ ಚ್ಛೇದ-ಶರೀರಕಂಪನ-ಮುಂತಾದ ವ್ಯರ್ಥವ್ಯಾಪಾರಗಳಲ್ಲಿ ಯತ್ನಿಸುವಿಕೆ ಪ್ರವೃತ್ತಿ ಯೆನಿಸಿಕೊಳ್ಳುವುದು. ದೃಷ್ಟಾದೃಷ್ಟಫಲಗಳಿಗೆ ಸಾಧನಗಳಾದ ಕೃಷಿ-ಯಜ್ಞ ಮೊದಲಾದ ಕರ್ಮಗಳನ್ನು ಉಪಕ್ರಮಿಸುವಿಕೆ ಪ್ರಾರಂಭವೆನಿಸಿಕೊಳ್ಳುವುದು. ಇಂದ್ರಿಯಗಳಿಗೆ ವಿಶ್ರಾಂತಿಯಿಲ್ಲದಿರುವಿಕೆ ಅಶಮವೆನಿಸಿಕೊಳ್ಳುವುದು. ಶಬ್ದ ಸ್ಪರ್ಶಾದಿವಿಷಯಗಳ ಅಪೇಕ್ಷೆ ಸ್ಪೃಹೆಯೆನಿಸಿಕೊಳ್ಳುವುದು.

ಎಲೈ ಭರತಕುಲಶ್ರೇಷ್ಠನಾದ ಅರ್ಜುನನೆ! ಈ ಶರೀರದಲ್ಲಿ ಲೋಭವೂ ಪ್ರವೃತ್ತಿಯೂ-ಕರ್ಮಗಳ ಆರಂಭವೂ-ಅಶಮವೂ-ಸ್ಪೃಹೆಯೂ ಯಾವಾಗ ಅಹಮಹ ಮಿಕೆಯಿಂದ (ಒಮ್ಮೆಂದೊಮ್ಮೆ ಮೇಲೆ ಮೇಲೆ) ಉಂಟಾಗುತ್ತಿರುವುವೋ ಆಗ ರಜೋಗುಣವು ಈ ಶರೀರದಲ್ಲಿ ತಲೆಯೆತ್ತಿರುವುದೆಂದು ತಿಳಿಯಬಹುದು.

" ಅಪ್ರಕಾಶೋಽಪ್ರವೃತ್ತಿಶ್ಚ ಪ್ರಮಾದೋ ಮೋಹ ಏವ ಚ |
ತಮಸ್ಯೇತಾನಿ ಜಾಯಂತೇ ವಿವೃದ್ಧೇ ಕುರುನಂದನ || "

ಜ್ಞಾನೋತ್ಪತ್ತಿಗೆ ಅವಕಾಶವೇ ಇಲ್ಲದಿರುವಿಕೆ ಅಪ್ರಕಾಶವೆನಿಸಿಕೊಳ್ಳು ವುದು. ಈ ಅಪ್ರಕಾಶವೇ ಹಿಂದೆ ತೋರಿಸಿದ ನಿದ್ರಾರೂಪವಾಗಿರುವುದು. ಜಡ ತ್ವವು ಎಂದರೆ ಸೋಮಾರಿತನವು ಅಪ್ರವೃತ್ತಿಯೆನಿಸಿಕೊಳ್ಳುವುದು. ಈ ಅಪ್ರ ವೃತ್ತಿಯೇ ಹಿಂದೆ ತೋರಿಸಿದ ಆಲಸ್ಯರೂಪವಾಗಿರುವುದು. ಅಕೃತ್ಯದಲ್ಲಿ ಪ್ರವೃತ್ತಿ ಯನ್ನುಂಟುಮಾಡುವ ಅಸವಧಾನವು ಪ್ರಮಾದವೆನಿಸಿಕೊಳ್ಳುವುದು. ವಿಪರೀತ ಜ್ಞಾನವು ಮೋಹವೆನಿಸಿಕೊಳ್ಳುವುದು.

ಓ ಕುರುಕುಲಕ್ಕೆ ಸಂತೋಷಕರನಾದ ಅರ್ಜುನನೆ! ಈ ಶರೀರದಲ್ಲಿ ಅಪ್ರಕಾಶವೂ-ಅಪ್ರವೃತ್ತಿಯೂ-ಪ್ರಮಾದವೂ-ಮೋಹವೂ ಯಾವಾಗ ದರಿದ್ರರ ಕೂರೆಗಳಂತೆ ಹೆಚ್ಚುತ್ತಿರುವುವೋ ಆಗ ತಮೋಗುಣವು ಈ ಶರೀರದಲ್ಲಿ ತಲೆಯೆತ್ತಿ ರುವುದೆಂದು ತಿಳಿಯಬಹುದು.

## ೯೮೮ ಅಂತ್ಯಕಾಲಪ್ರವೃದ್ಧಾನಾಂ ಗುಣಾನಾಂ ಪೃಥಕ್ಫಲನಿರೂಪಣಂ.

" ಯದಾ ಸತ್ತ್ವೇ ಪ್ರವೃದ್ಧೇ ತು ಪ್ರಳಯಂ ಯಾತಿ ದೇಹಭೃತ್ |
ತದೋತ್ತಮವಿದಾಂ ಲೋಕಾನಮಲಾನ್ ಪ್ರತಿಪದ್ಯತೇ || "

ಶರೀರದಲ್ಲಿ ಸತ್ತ್ವಗುಣವು ತಲೆಯೆತ್ತಿರುವಾಗ ಯಾವನಾದರೊಬ್ಬ ಚೇತ ನನು ಶರೀರವಿಯೋಗವನ್ನು ಹೊಂದುವವನಾದರೆ ಅಂಥ ಜೀವನು ಆತ್ಮಯಾ ಥಾತ್ಮ್ಯಜ್ಞಾನಿಗಳ ಸ್ವಚ್ಛವಾದ ಕುಲದಲ್ಲಿ ಹುಟ್ಟಿ ಆತ್ಮಯಾಥಾತ್ಮ್ಯಜ್ಞಾನಸಂಪಾ ದನೆಗೆ ಸಾಧನಗಳಾಗಿರುವ ನಿಷ್ಕಾಮಪುಣ್ಯಕರ್ಮಗಳಲ್ಲಿ ತಾನೂ ಪ್ರವರ್ತಿಸುವನು.

" ರಜಸಿ ಪ್ರಳಯಂ ಗತ್ವಾ ಕರ್ಮಸಂಗಿಷು ಜಾಯತೇ |
ತಥಾ ಪ್ರಲೀನಸ್ತಮಸಿ ಮೂಢಯೋನಿಷು ಜಾಯತೇ || "

ರಜೋಗುಣವು ತಲೆಯೆತ್ತಿರುವಾಗ ಯಾವನಾದರೊಬ್ಬನು ಮರಣವನ್ನು ಹೊಂದುವವನಾದರೆ ಅಂಥ ಜೀವನು ಕಾಮ್ಯಕರ್ಮಗಳನ್ನು ಮಾಡುವವರ ಕುಲ ದಲ್ಲಿ ಹುಟ್ಟಿ ತಾನೂ ಸಹ ಫಲಸಾಧನಕರ್ಮಗಳಲ್ಲಿ ಪ್ರವರ್ತಿಸುವನು.

ತಮೋಗುಣವು ತಲೆಯೆತ್ತಿರುವಾಗ ಮರಣಹೊಂದುವವನು—ಧರ್ಮಾರ್ಥ ಕಾಮಮೋಕ್ಷಗಳೆಂಬ ಪುರುಷಾರ್ಥಗಳೊಳಗೆ ಯಾವುದಾದರೊಂದು ಪುರುಷಾರ್ಥದ ಸಂಪಾದನೆಗೂ ಅರ್ಹಗಳಲ್ಲದ ಸೂಕರ ಸಾರಮೇಯ ಮುಂತಾದ ಜನ್ಮಗಳನ್ನು ಪಡೆವನು. ಆದಕಾರಣ ವಿವೇಕಿಯಾದ ಪ್ರತಿಯೊಬ್ಬನೂ ತನ್ನ ಮರಣ ಕಾಲಕ್ಕೆ ರಜೋಗುಣವಾಗಲಿ ತಮೋಗುಣವಾಗಲಿ ವೃದ್ಧಿಹೊಂದದಂತೆಯೂ, ಸತ್ತ್ವಗುಣವೇ ವೃದ್ಧಿಹೊಂದುವಂತೆಯೂ ಅನುಕೂಲಪಡಿಸಿಕೊಳ್ಳುವುದಕ್ಕಾಗಿ ಮೊದಲಿಂದಲೂ ಸಾತ್ತ್ವಿಕಾಹಾರಸೇವನೆ ಸಾತ್ತ್ವಿಕಜನಸಹವಾಸ ಮುಂತಾದುವುಗಳಲ್ಲಿಯೇ ಪ್ರವರ್ತಿಸುವುದನ್ನು ಅಭ್ಯಾಸಕ್ಕೆ ತಂದುಕೊಳ್ಳಬೇಕೆಂಬುದು ಈ ಎರಡು ಶ್ಲೋಕಗಳ ತಾತ್ಪರ್ಯವಾಗಿರುವುದು.

“ ಕರ್ಮಣಸ್ಸುಕೃತಸ್ಯಾಹುಃ ಸಾತ್ತ್ವಿಕಂ ನಿರ್ಮಲಂ ಫಲಂ ।
ರಜಸಸ್ತು ಫಲಂ ದುಃಖಮಜ್ಞಾನಂ ತಮಸಃ ಫಲಂ ॥ ”

ಹೀಗೆ ಅಂತ್ಯಕಾಲದಲ್ಲಿ ಸತ್ತ್ವಗುಣವು ತಲೆಯೆತ್ತಿರುವಾಗ ಮರಣವನ್ನು ಹೊಂದಿ ಆತ್ಮಯಾಥಾತ್ಮ್ಯಜ್ಞಾನಿಗಳ ಕುಲದಲ್ಲಿ ಹುಟ್ಟಿರುವವನು ಆಚರಿಸುವ ನಿಷ್ಕಾಮವಾದ ಪುಣ್ಯಕರ್ಮವು ನನ್ನ ಆರಾಧನರೂಪವಾಗಿಯೇ ಪರಿಣಮಿಸುವುದರಿಂದ ಇಂಥ ಕರ್ಮಕ್ಕೆ ಫಲವು—ಪುನಃ ಮತ್ತಷ್ಟು ಹೆಚ್ಚಿದ ಸತ್ತ್ವಗುಣದಿಂದ ಉಂಟುಮಾಡಲ್ಪಡತಕ್ಕದಾಗಿಯೂ ನಿರ್ಮಲವಾಗಿಯೂ (ದುಃಖಸಂಬಂಧರಹಿತವಾಗಿಯೂ) ಸಿದ್ಧಿಸುವುದೆಂದು ಸತ್ತ್ವಗುಣದ ಪರಿಣಾಮವನ್ನು ತಿಳಿದವರು ಹೇಳುವರು.

ಅಂತ್ಯಕಾಲದಲ್ಲಿ ರಜೋಗುಣವು ತಲೆಯೆತ್ತಿರುವಾಗ ಮರಣವನ್ನು ಹೊಂದಿದವನಿಗೆ ಕಾಮ್ಯಕರ್ಮಗಳನ್ನು ಮಾಡುವವರ ಕುಲದಲ್ಲಿ ಜನ್ಮವೂ, ಸ್ವಯಂ ಕಾಮ್ಯಕರ್ಮಗಳನ್ನು ಆರಂಭಿಸುವಿಕೆಯೂ, ಅವುಗಳ ಫಲವನ್ನು ಅನುಭವಿಸುವಿಕೆಯೂ, ಪುನಃ ಜನ್ಮಪರಿಗ್ರಹವೂ ಪುನಃ ರಜೋಗುಣವೃದ್ಧಿಯೂ, ಪುನಃ ಕಾಮ್ಯಕರ್ಮಪ್ರವೃತ್ತಿಯೂ ಹೀಗೆ. ಇದೇ ಪರಂಪರೆಯಾಗಿ ಎಡೆಬಿಡದೆ ಬಂದೊದಗುತ್ತಾ ಸಾಂಸಾರಿಕದುಃಖಪ್ರಚುರವಾದ ಫಲವೇ ಉಂಟಾಗುವುದೆಂದು ರಜೋಗುಣದ ಪರಿಣಾಮವನ್ನು ತಿಳಿದವರು ಹೇಳುವರು.

ಅಂತ್ಯಕಾಲದಲ್ಲಿ ತಮೋಗುಣವು ತಲೆಯೆತ್ತಿರುವಾಗ ಮರಣವನ್ನು ಹೊಂದಿದವನಿಗೆ ಸೂಕರ ಸಾರಮೇಯ ಮುಂತಾದ ತಾಮಸಜನ್ಮಪ್ರಾಪ್ತಿಯೂ, ಪುನಃ ಅಜ್ಞಾನಪರಂಪರೆಯೂ, ಸಕಲಪುರುಷಾರ್ಥಪ್ರವೃತ್ತಿಶೂನ್ಯಗಳಾದ ಅಂಥ ಯೋ

ನಿಗಳಲ್ಲಿ ಪುನಃಪುನಃ ಹುಟ್ಟುವಿಕೆಯೂ ಇಂಥ ಅನರ್ಥಪರಂಪರೆಯೇ ಫಲವಾಗು ವುದೆಂದು ತಮೋಗುಣದ ಪರಿಣಾಮವನ್ನು ತಿಳಿದವರು ಹೇಳುವರು.

**"ಸತ್ತ್ವಾತ್ಸಂಜಾಯತೇ ಜ್ಞಾನಂ ರಜಸೋ ಲೋಭ ಏವ ಚ ।**
**ಪ್ರಮಾದಮೋಹೌ ತಮಸೋ ಭವತೋಽಜ್ಞಾನಮೇವ ಚ ॥"**

ಮತ್ತಷ್ಟು ಹೆಚ್ಚಿರುವ ಸತ್ತ್ವಾದಿಗುಣಗಳಿಂದ ಉಂಟಾಗುವ ಫಲಗಳು ನಿರ್ಮಲಾದಿರೂಪಗಳಾಗಿರುವುವೆಂದು ಹೇಳಿದಿರಿ; ಆದರೆ ಅವುಗಳ ಸ್ವರೂಪವೆಂಥ ದೆಂಬುದನ್ನು ಈ ಶ್ಲೋಕವು ನಿಷ್ಕರ್ಷಿಸಿ ತೋರಿಸುವುದು.—

ಹೀಗೆ ಪರಂಪರೆಯಾಗಿ ವೃದ್ಧಿಹೊಂದುತ್ತಲೇ ಬಂದಿರುವ ಸತ್ತ್ವಗುಣ ಪ್ರಾಚುರ್ಯದಿಂದ ಆತ್ಮಯಾಥಾತ್ಮ್ಯದ ಸಾಕ್ಷಾತ್ಕಾರರೂಪವಾದ ಜ್ಞಾನವು ಫಲಿ ಸುವುದು.

ಹಾಗೆಯೇ ಪರಂಪರೆಯಾಗಿ ವೃದ್ಧಿಹೊಂದುತ್ತಲೇ ಬಂದಿರುವ ರಜೋ ಗುಣಪ್ರಾಚುರ್ಯದಿಂದ ಸ್ವರ್ಗಾದಿಫಲಭೋಗದಲ್ಲಿ ಲೋಭವು ಹೆಚ್ಚುವುದು.

ಹಾಗೆಯೇ ಪರಂಪರೆಯಾಗಿ ವೃದ್ಧಿಹೊಂದುತ್ತಲೇ ಬಂದಿರುವ ತಮೋ ಗುಣಪ್ರಾಚುರ್ಯದಿಂದ ಅನವಧಾನಮೂಲಕವಾಗಿ ಬಂದಿರುವ ಅಸತ್ಕರ್ಮಪ್ರವೃತ್ತಿ ಯೆಂಬ ಪ್ರಮಾದವೂ, ಅದರಿಂದ ವಿಪರೀತಜ್ಞಾನವೆಂಬ ಮೋಹವೂ, ಅದರಿಂದ ಮಿತಿಮೀರಿದ ತಮಸ್ಸೂ, ಅದರಿಂದ ಅಜ್ಞಾನವೂ ಎಂದರೆ ಜ್ಞಾನಾನುತ್ಪತ್ತಿಯೂ ಸಹ ಫಲಿಸುವುವು.

**"ಊರ್ಧ್ವಂ ಗಚ್ಛಂತಿ ಸತ್ತ್ವಸ್ಥಾಃ ಮಧ್ಯೇ ತಿಷ್ಠಂತಿ ರಾಜಸಾಃ।**
**ಜಘನ್ಯಗುಣವೃತ್ತಿಸ್ಥಾ ಅಧೋ ಗಚ್ಛಂತಿ ತಾಮಸಾಃ ॥"**

ಹೀಗೆ ಹಿಂದೆ ವಿವರಿಸಿದ ರೀತಿಯಲ್ಲಿ—ಸತ್ತ್ವಗುಣನಿಷ್ಠರಾದವರು ಉತ್ತ ಮಗತಿಯನ್ನು ಪಡೆವರು ; ಎಂದರೆ ಕ್ರಮಕ್ರಮವಾಗಿ ಸಂಸಾರದುಃಖಬಂಧದಿಂದ ಬಿಡುಗಡೆಯನ್ನು ಹೊಂದಿ ಶಾಶ್ವತಿಕವಾದ ಸುಖಸಾಮ್ರಾಜ್ಯಕ್ಕೆ ಭಾಗಿಗಳಾಗು ವರು.

ರಜೋಗುಣವು ಸ್ವರ್ಗಾದಿಫಲಭೋಗದ ಲೋಭಕ್ಕೆ ಕಾರಣವಾದುದರಿಂದ ರಜೋಗುಣನಿಷ್ಠರಾದವರು ಫಲಸಾಧನವಾದ ಕರ್ಮವನ್ನಾಚರಿಸಿ, ಕರ್ಮಫಲವನ್ನ ನುಭವಿಸಿ, ಪುನಃ ಈ ಲೋಕದಲ್ಲಿ ಹುಟ್ಟಿ ಪುನಃ ಅದೇ ಕರ್ಮವನ್ನಾಚರಿಸುವರಾದ ಕಾರಣ, ಇವರು ಮಧ್ಯದಲ್ಲಿಯೇ ಯಾತಾಯಾತವನ್ನು ಮಾಡುತ್ತಿರುವರು. ಹೀಗೆ ಪುನರಾವೃತ್ತಿರೂಪವಾದುದರಿಂದ ಇದು ದುಃಖಪ್ರಚುರವಾಗಿಯೇ ಇರು ವುದು.

ತಮೋಗುಣನಿಷ್ಠರಾದರೆ—ಮೇಲೆಮೇಲೆ ನಿಕೃಷ್ಟಗಳಾಗಿಯೇ ಉಂಟಾಗುತ್ತಿರುವ ತಮೋಗುಣವ್ಯಕ್ತಿವಿಶೇಷಗಳಲ್ಲಿ ನಿರತರಾಗಿ ಕೆಳಕೆಳಗೆ ಹೋಗುತ್ತಲೇ ಇರುವರು ; ಎಂದರೆ ಮೊದಲು ಚಂಡಾಲಜಾತಿಯನ್ನು ಪ್ರವೇಶಿಸುವರು; ಅನಂತರದಲ್ಲಿ ಅದಕ್ಕಿಂತಲೂ ಹೀನವಾದ ತಿರ್ಯಗ್ಜನ್ಮವನ್ನು ಪಡೆವರು; ಅನಂತರದಲ್ಲಿ ಇನ್ನೂ ನಿಕೃಷ್ಟವಾದ ಕ್ರಿಮಿಕೀಟಜನ್ಮವನ್ನೂ, ಸ್ಥಾವರಜನ್ಮವನ್ನೂ, ಅನಂತರದಲ್ಲಿ ಪೊದರು ಲತೆ ಮುಂತಾದ ಜನ್ಮವನ್ನೂ, ಕೊನೆಗೆ ಶಿಲೆ, ಕಾಷ್ಠ, ಲೋಷ್ಟ, ತೃಣ ಮುಂತಾದ ಜನ್ಮವನ್ನೂ ಪಡೆದು ಅತ್ಯಂತಹೀನಸ್ಥಿತಿಗೆ ಬಂದು ದುಃಖದ ಎಲ್ಲೆಯನ್ನೂ, ಸುಖಪ್ರಾಪ್ತಿಯ ದ್ವಾರವನ್ನೂ ಸಹ ಕಾಣಲಾರರು.

## ೯೮೯. ಪ್ರವರ್ಧಿತಸತ್ತ್ವಾನಾಂ ಊರ್ಧ್ವಗಮನಪ್ರಕಾರ ನಿರೂಪಣಂ.

" ನಾನ್ಯಂ ಗುಣೇಭ್ಯಃ ಕರ್ತಾರಂ ಯದಾ ದ್ರಷ್ಟಾಽನುಪಶ್ಯತಿ ।
ಗುಣೇಭ್ಯಶ್ಚ ಪರಂ ವೇತ್ತಿ ಮದ್ಭಾವಂ ಸೋಽಧಿಗಚ್ಛತಿ "॥

ದಿನೇ ದಿನೇ ಸತ್ತ್ವಗುಣವನ್ನು ವೃದ್ಧಿಪಡಿಸಿಕೊಂಡವರಿಗೆ ಕ್ರಮಕ್ರಮವಾಗಿ ಗುಣತ್ರಯದುಃಖದಿಂದ ಬಿಡುಗಡೆಯುಂಟಾಗಿ ಉತ್ತಮಗತಿಪ್ರಾಪ್ತಿಯುಂಟಾಗುವ ರೀತಿಯನ್ನು ಈ ಶ್ಲೋಕದಲ್ಲಿ ಅಪ್ಪಣೆಕೊಡಿಸುತ್ತಾನೆ. ಹೇಗೆಂದರೆ—

ಸಾತ್ತ್ವಿಕವಾದ ಆಹಾರದ ಸೇವನೆಯಿಂದಲೂ, ಫಲಾಭಿಸಂಧಿಯಿಲ್ಲದೆ ಭಗವದಾರಾಧನರೂಪವಾಗಿ ನಡಸುವ ಸತ್ಕರ್ಮಗಳಿಂದಲೂ ರಜೋಗುಣತಮೋಗುಣಗಳನ್ನು ನಿರ್ಮೂಲಮಾಡಿ ಎಂದರೆ ತಲೆಯೆತ್ತದಂತೆ ಅಡಗಿಸಿ ಸತ್ತ್ವಗುಣವೊಂದರಲ್ಲಿಯೇ ನಿಷ್ಠನಾದ ಚೇತನನು ನಾನಾಬಗೆಯಾದ ಸಾಂಸಾರಿಕಕರ್ಮಗಳಲ್ಲಿ ತನಗೆ ಉಂಟಾಗಿರುವ ಕರ್ತೃತ್ವವು ತನಗೆ ಸ್ವಾಭಾವಿಕವಲ್ಲವೆಂದೂ, ಗುಣತ್ರಯ ಸಂಸರ್ಗವಶದಿಂದಲೇ ಆಗುಂತುಕವಾಗಿ ತನಗೆ ಬಂದಿರುವುದೆಂದೂ ಚೆನ್ನಾಗಿ ತಿಳಿದುಕೊಳ್ಳುವವನಾದರೆ ಅಂಥ ಚೇತನನು ಬಂಧನದಿಂದ ಬಿಡುಗಡೆಯನ್ನು ಹೊಂದಿ ನನ್ನ ಸ್ಥಾನಕ್ಕೆ ಬಂದು ನನ್ನೊಡನೆ ಪರಮಸಾಮ್ಯವನ್ನು ಪಡೆವನು. ಎಂದರೆ "ಸ್ವತಃ ಪರಿಶುದ್ಧಸ್ವಭಾವನಾದ ಜೀವನಿಗೆ ಪ್ರಾಚೀನಕರ್ಮಮೂಲಕವಾಗಿ ಗುಣಸಂಸರ್ಗವುಂಟಾಗಿ ಅದರಿಂದ ನಾನಾಬಗೆಯಾದ ಸಾಂಸಾರಿಕಕರ್ಮಗಳಲ್ಲಿ ಕರ್ತೃತ್ವವುಂಟಾಗುವುದಲ್ಲದೆ ಉಕ್ತಕರ್ಮಗಳಲ್ಲಿ ಇವನಿಗೆ ಸ್ವಾಭಾವಿಕಕರ್ತೃತ್ವವಿಲ್ಲ; ಅಪರಿಚ್ಛಿನ್ನವಾದ ಜ್ಞಾನೈಕಾಕಾರನಾಗಿಯೇ ಇವನು ಇರುವನು" ಎಂದು ಆತ್ಮಸ್ವರೂಪವನ್ನು ಯಾವಾಗ ತಿಳಿದುಕೊಳ್ಳುವನೋ ಆಗ ನನ್ನೊಡನೆ ಪರಮಸಾಮ್ಯವೆಂಬ ಮೋಕ್ಷವನ್ನು ಪಡೆವನು.

" ಗುಣಾನೇತಾನತೀತ್ಯ ತ್ರೀನ್ ದೇಹೀ ದೇಹಸಮುದ್ಭವಾನ್ ।
ಜನ್ಮಮೃತ್ಯುಜರಾದುಃಖೈರ್ವಿಮುಕ್ತೋಽಮೃತಮಶ್ನುತೇ ॥ "

ಅಂಥ ಪರಮಸಾಮ್ಯದ ಸ್ವರೂಪವೆಂಥದೆಂಬುದು ಈ ಶ್ಲೋಕದಲ್ಲಿ ತೋರಿಸಲ್ಪಡುವುದು. ದೇಹಸಂಬಂಧವನ್ನು ಪಡೆದಿರುವುದರಿಂದ ದೇಹಿಯೆನಿಸಿ ಕೊಂಡಿರುವ ಈ ಜೀವನು ದೇಹಾಕಾರವಾಗಿ ಪರಿಣಮಿಸಿರುವ ಪ್ರಕೃತಿಯಿಂದ ಸಮುದ್ಭೂತಗಳಾಗಿರುವ ಸತ್ತ್ವಾದಿಗುಣಗಳು ಮೂರನ್ನೂ ದಾಟಿದವನಾಗಿ ಎಂದರೆ ತನ್ನನ್ನು ಅವುಗಳಿಗಿಂತಲೂ ವಿಲಕ್ಷಣನನ್ನಾಗಿ (ಜ್ಞಾನೈಕಾಕಾರನನ್ನಾಗಿ) ಸಾಕ್ಷಾತ್ಕರಿಸಿದವನಾಗಿ ಅಂಥ ಆತ್ಮಸಾಕ್ಷಾತ್ಕಾರದ ಪ್ರಭಾವದಿಂದ ಜನನ ಮರಣ ಜರೆ ಇವುಗಳಿಂದಲೂ, ತತ್ಪ್ರಯುಕ್ತಗಳಾದ ನಾನಾದುಃಖಗಳಿಂದಲೂ ಬಿಡಲ್ಪಟ್ಟು ಶಾಶ್ವತವಾದ ಆತ್ಮಾನುಭವವನ್ನು ಪಡೆವನು. ಇದೇ ಸಾಮ್ಯವೆನಿಸಿ ಕೊಳ್ಳುವುದು.

## ೯೯೦. ಗುಣಾತ್ಯಯಸೂಚಕಲಿಂಗಪ್ರಶ್ನಃ, ಗುಣಾತ್ಯಯಹೇತು ಪ್ರಶ್ನಶ್ಚ.

ಅರ್ಜುನ ಉವಾಚ—

" ಕೈರ್ಲಿಂಗೈಸ್ತ್ರೀಗುಣಾನೇತಾನತೀತೋ ಭವತಿ ಪ್ರಭೋ ।
ಕಿಮಾಚಾರಃ ಕಥಂ ಚೈತಾಂಸ್ತ್ರೀನ್ ಗುಣಾನತಿವರ್ತತೇ ॥ "

ಅರ್ಜುನನು ತನ್ನ ಸಂದೇಹನಿವೃತ್ತಿಗಾಗಿ ಪ್ರಶ್ನೆಮಾಡುತ್ತಾನೆ—ಓ ನನ್ನ ಪ್ರಭುವೆ! ಗುಣತ್ರಯವನ್ನು ದಾಟಿದವನ ಸ್ವರೂಪವನ್ನು ಕಂಡುಹಿಡಿವುದಕ್ಕೆ ಸಾಧನಗಳಾದ ಚಿಹ್ನಗಳು ಯಾವುವಾದರೂ ಅವನಲ್ಲಿದ್ದರೆ ಅವುಗಳನ್ನು ನನಗೆ ಉಪದೇಶಿಸು; ಮತ್ತು ಅವನ ಆಚರಣಪ್ರಕಾರವು ಎಂಥದಾಗಿರುವುದು? ಈ ಎರಡು ಪ್ರಶ್ನೆಗಳನ್ನು ಮಾಡಿದ ಅರ್ಜುನನಿಗೆ—ಆಭ್ಯಂತರಚಿಹ್ನಬಾಹ್ಯ ಚಿಹ್ನಗಳನ್ನು ಉಪದೇಶಿಸೆಂದು ಅಭಿಪ್ರಾಯವಾಗಿರುವುದು. ಮತ್ತು—ಯಾವ ಉಪಾಯದಿಂದ ಗುಣತ್ರಯವನ್ನು ದಾಟುವನೆಂಬುದನ್ನೂ ಉಪದೇಶಿಸು.

## ೯೯೧. ಭಗವತಾ ತತ್ರ ಸಮಾಧಾನಕಥನಂ.

ಭಗವಾನುವಾಚ—

" ಪ್ರಕಾಶಂ ಚ ಪ್ರವೃತ್ತಿಂ ಚ ಮೋಹಮೇವ ಚ ಪಾಂಡವ ।
ನ ದ್ವೇಷ್ಟಿ ಸಂಪ್ರವೃತ್ತಾನಿ ನ ನಿವೃತ್ತಾನಿ ಕಾಂಕ್ಷತಿ ॥ "

ಸ್ವವ್ಯತಿರಿಕ್ತಗಳಾದ ಅನಿಷ್ಟವಸ್ತುಗಳಲ್ಲಿ ಗುಣತ್ರಯವಶದಿಂದ ತನಗೆ ಉಂಟಾಗಿರುವ ಪ್ರಕಾಶ-ಪ್ರವೃತ್ತಿ-ಮೋಹಗಳನ್ನು ಯಾವನು ದ್ವೇಷಿಸುವುದಿಲ್ಲವೋ

ಮತ್ತು—ಸ್ವವ್ಯತಿರಿಕ್ತಗಳಾದ ಇಷ್ಟವಸ್ತುಗಳಲ್ಲಿ ಗುಣತ್ರಯವಶದಿಂದ ತನಗೆ ಉಂಟಾಗಿರುವ ಪ್ರಕಾಶಪ್ರವೃತ್ತಿಮೋಹಗಳನ್ನು ಯಾವನು ಅಪೇಕ್ಷಿಸುವುದಿಲ್ಲವೋ, ಅವನು ಗುಣಾತೀತನಾಗಿರುವನೆಂದು ತಿಳಿಯಬಹುದು.

ಎಂದರೆ—ಸ್ವವ್ಯತಿರಿಕ್ತಗಳಾದ ಪದಾರ್ಥಗಳು ಇಷ್ಟಗಳೆಂದೂ ಅನಿಷ್ಟಗಳೆಂದೂ ಎರಡುಬಗೆಯಾಗುವುವು; ಅವುಗಳೊಳಗೆ ಅನಿಷ್ಟಗಳೂ ತತ್ಸಾಧನಗಳೂ ತನಗೆ ಬಂದೊದಗಿದಾಗ ಅವುಗಳಲ್ಲಿ ದ್ವೇಷವುಂಟಾಗುವುದೂ, ಇಷ್ಟಗಳೂ ತತ್ಸಾಸಗಳೂ ತನಗೆ ನಿವೃತ್ತಗಳಾದಾಗ ಅವುಗಳನ್ನು ಅಪೇಕ್ಷಿಸುವುದೂ, ಲೋಕವಾಡಿಕೆಯಾಗಿರುವುದು; ಆದರೆ ಗುಣತ್ರಯಪ್ರಯುಕ್ತಗಳಾದ ಪ್ರಕಾಶಪ್ರವೃತ್ತಿಮೋಹಗಳು ತನಗೆ ಅನಿಷ್ಟವನ್ನು ಕೊಡುವುದಕ್ಕಾಗಿ ಬಂದೊದಗಿದಾಗ ಯಾವ ಜೀವನು ಅವುಗಳನ್ನು ದ್ವೇಷಿಸುವುದಿಲ್ಲವೋ—ಮತ್ತು ಅದೇ ಪ್ರಕಾಶಪ್ರವೃತ್ತಿಮೋಹಗಳು ತನಗೆ ಇಷ್ಟಗಳನ್ನು ಕೊಡುವುದಕ್ಕೆ ಬಂದಿದ್ದು ಅಷ್ಟರಲ್ಲೇ ನಿವೃತ್ತಗಳಾದರೆ ಯಾವ ಚೇತನನು ಅವುಗಳನ್ನು ಕುರಿತು ಆಶೆಪಡುವುದಿಲ್ಲವೋ ಅಂಥ ಚೇತನನು ಗುಣಾತೀತನೆನಿಸಿಕೊಳ್ಳುವನೆಂದು ತಿಳಿಯಬಹುದು.

"ಉದಾಸೀನವದಾಸೀನೋ ಗುಣೈರ್ಯೋ ನ ವಿಚಾಲ್ಯತೇ ।
ಗುಣಾ ವರ್ತಂತ ಇತ್ಯೇವ ಯೋಽವತಿಷ್ಠತಿ ನೇಂಗತೇ ॥"

ಸತ್ತ್ವಾದಿಗುಣತ್ರಯಕ್ಕಿಂತಲೂ ಅತ್ಯಂತವಿಲಕ್ಷಣವಾದ ಆತ್ಮಸ್ವರೂಪವನ್ನು ಸಾಕ್ಷಾತ್ಕರಿಸಿದುದರಿಂದ ಅತ್ಯಂತತೃಪ್ತನಾಗಿರುವ ಯಾವ ಚೇತನನು ಆತ್ಮವ್ಯತಿರಿಕ್ತವಿಷಯದಲ್ಲಿ ಉದಾಸೀನನಾಗಿರುವನೋ; ಮತ್ತು ದ್ವೇಷವನ್ನೂ ಆಕಾಂಕ್ಷೆಯನ್ನೂ ಉಂಟುಮಾಡುವುದರಮೂಲಕ ಗುಣಗಳು ಯಾವನನ್ನು ಕ್ಷೋಭಪಡಿಸಲಾರವೋ; ಮತ್ತು ಸತ್ತ್ವಾದಿಗುಣಗಳು ಪ್ರಕಾಶ-ಪ್ರವೃತ್ತಿ-ಮೋಹಗಳೆಂಬ ತಮ್ಮತಮ್ಮ ಕೆಲಸಗಳನ್ನು ನಡಸುತ್ತಿರುವುವೆಂದು ತಿಳಿದು ಯಾವನು ಸ್ಥಿರನಾಗಿ ಸುಮ್ಮನಿರುವನೋ ಎಂದರೆ ಗುಣಗಳಿಗೆ ಅನುಸಾರವಾಗಿ ಕೆಲಸವನ್ನು ನಡಸುವುದಿಲ್ಲವೋ ಅಂಥ ಚೇತನನು ಗುಣಾತೀತನೆನಿಸಿಕೊಳ್ಳುವನೆಂದು ತಿಳಿಯಬಹುದು.

"ಸಮದುಃಖಸುಖಃ ಸ್ವಸ್ಥಃ ಸಮಲೋಷ್ಟಾಶ್ಮಕಾಂಚನಃ ।
ತುಲ್ಯಪ್ರಿಯಾಪ್ರಿಯೋ ಧೀರಸ್ತುಲ್ಯನಿಂದಾತ್ಮಸಂಸ್ತುತಿಃ ॥
ಮಾನಾವಮಾನಯೋಸ್ತುಲ್ಯಸ್ತುಲ್ಯೋ ಮಿತ್ರಾರಿಪಕ್ಷಯೋಃ ।
ಸರ್ವಾರಂಭಪರಿತ್ಯಾಗೀ ಗುಣಾತೀತಸ್ಸ ಉಚ್ಯತೇ ॥"

ಯಾವ ಚೇತನನಿಗೆ ಸುಖದುಃಖಗಳೆರಡರಲ್ಲಿಯೂ ಚಿತ್ತವು ವಿಕಾರವನ್ನು ಹೊಂದದೆ ಸಮಾನವಾಗಿಯೇ (ಏಕರೂಪವಾಗಿಯೇ) ಇರುವುದೋ ಅಂಥ ಚೇತನನು ಗುಣಾತೀತನೆನಿಸಿಕೊಳ್ಳುವನೆಂದು ತಿಳಿಯಬಹುದು. ಇಂಥ ಸಮಚಿತ್ತ ತ್ವವನ್ನೇ ಶ್ಲೋಕದ ಮುಂದಿನ ಪದಗಳಿಂದಲೂ ನಾನಾಬಗೆಯಾಗಿ ವಿವರಿಸಿ ತೋರಿಸುವನು. ಹೇಗೆಂದರೆ—

ಯಾವನು ಸ್ವಸ್ಥನಾಗಿರುವನೋ ಎಂದರೆ—ಆತ್ಮಸ್ವರೂಪದಲ್ಲಿಯೇ ನಿರತ ನಾಗಿ ಅದನ್ನೇ ಪ್ರೀತಿಸುತ್ತಿರುವನಾದುದರಿಂದ ಆತ್ಮಸ್ವರೂಪವ್ಯತಿರಿಕ್ತಗಳಾದ ಪುತ್ರಾದಿಗಳ ಉತ್ಪತ್ತಿ-ವಿನಾಶಗಳಿಂದುಂಟಾಗುವ ಸುಖದುಃಖಗಳೆರಡರಲ್ಲಿಯೂ ಸಮಚಿತ್ತನಾಗಿರುವನೋ—

ಹಾಗೆ ಆತ್ಮಾವಲೋಕನದಲ್ಲಿ ತೃಪ್ತನಾದುದರಿಂದಲೇ ಮಣ್ಣು-ಕಲ್ಲುಗಳ ಲ್ಲಿಯೂ ಸ್ವರ್ಣರಾಶಿಯಲ್ಲಿಯೂ ಸಮಾನವಾದ ಭಾವವುಳ್ಳವನಾಗಿರುವನೋ—

ಆದುದರಿಂದಲೇ ಪ್ರಿಯವಾದ ವಿಷಯವನ್ನೂ ಅಪ್ರಿಯವಾದ ವಿಷಯ ವನ್ನೂ ತುಲ್ಯವಾಗಿ ಭಾವಿಸುವವನಾಗಿರುವನೋ—

ಆದುದರಿಂದಲೇ ಸತತಪರಿಣಾಮಿನಿಯಾದ ಪ್ರಕೃತಿಯ ಸ್ವರೂಪವನ್ನೂ, ಸರ್ವದಾ ಏಕರೂಪವಾದ ಆತ್ಮಸ್ವರೂಪವನ್ನೂ ವಿವೇಚನೆ ಮಾಡುವುದರಲ್ಲಿ ಕುಶಲ ನಾಗಿರುವನೋ—

ಆದುದರಿಂದಲೇ ತನ್ನ ವಿಷಯದಲ್ಲಿ ಇತರರು ಮಾಡುವ ನಿಂದಾಸ್ತುತಿ ಗಳೆರಡರಲ್ಲಿಯೂ ಸಮಾನವಾದ ಭಾವವುಳ್ಳವನಾಗಿರುವನೋ—ಎಂದರೆ ಇತರರು ತನ್ನ ವಿಷಯದಲ್ಲಿ ನಿಂದಾಸ್ತುತಿಗಳನ್ನು ನಡಸುವಾಗ ತನ್ನ ಜಾತಿ-ಕುಲ-ಗೋತ್ರ-ನಾಮಧೇಯ ಮುಂತಾದುವುಗಳನ್ನು ನಿರ್ದೇಶಿಸಿಯೇ ಅಲ್ಲವೆ ನಿಂದಾಸ್ತುತಿ ಗಳನ್ನು ನಡಸಬೇಕು; ಜಾತಿ-ಕುಲ-ಗೋತ್ರ-ಮುಂತಾದುವುಗಳೆಲ್ಲಾ ಶರೀರಕ್ಕೇ ಇರುವುವಲ್ಲದೆ ಆತ್ಮನಿಗೆ ಇಲ್ಲವಾದುದರಿಂದಲೂ, ತಾನು ಪ್ರಕೃತ್ಯಾತ್ಮವಿವೇಚನೆ ಯನ್ನು ಮಾಡಿ ದೇವಮನುಷ್ಯತ್ವಾದಿಜಾತಿ-ಕುಲ-ಗೋತ್ರ-ಮುಂತಾದುವುಗಳಲ್ಲಿ ಅಭಿಮಾನವನ್ನು ಬಿಟ್ಟವನಾದುದರಿಂದಲೂ ಅವರು ಮಾಡುವ ನಿಂದಾಸ್ತುತಿಗಳು ತನಗೆ ಅಂಟುವುದಿಲ್ಲವೆಂದು ತಿಳಿದಿರುವನಾದಕಾರಣ ನಿಂದಾಸ್ತುತಿಗಳೆರಡರಲ್ಲಿಯೂ ಸಮಾನವಾದ ಭಾವವುಳ್ಳವನಾಗಿರುವನೋ.—

ಆದುದರಿಂದಲೇ—ನಿಂದಾಸ್ತುತಿಗಳಿಂದ ಬಂದೊದಗುವ ಮಾನಾವಮಾನ ಗಳಲ್ಲಿಯೂ, ಮಿತ್ರಪಕ್ಷಶತ್ರುಪಕ್ಷಗಳಲ್ಲಿಯೂ ತನಗೆ ಸಂಬಂಧವಿಲ್ಲವಾದುದರಿಂದ ಅವುಗಳಲ್ಲಿಯೂ ಸಮಚಿತ್ತನಾಗಿರುವನೋ—

ಮತ್ತು—ಆತ್ಮಸಾಕ್ಷಾತ್ಕಾರಕ್ಕೆ ಉಪಯೋಗಿಸುವ ಕರ್ಮಗಳನ್ನು ನಡಸುವುದರಲ್ಲಿಯೇ ಇವನ ಸಮಯವೆಲ್ಲಾ ಕಳೆಯುವುದರಿಂದ ಸಾಂಸಾರಿಕಗಳಾದ ಸಕಲ ಕರ್ಮಗಳಲ್ಲಿಯೂ ಪ್ರವೃತ್ತಿಯನ್ನು ತೊರೆದವನಾಗಿರುವನೋ—ಅಂಥ ಚೇತನನು ಗುಣಾತೀತನೆನಿಸಿಕೊಳ್ಳುವನೆಂದು ತಿಳಿಯಬಹುದು.

## ೯೧೨ ಗುಣತ್ರಯನಿವೃತ್ತೌ ಪ್ರಧಾನಸಾಧನಪ್ರತಿಪಾದನಂ

"ಮಾಂ ಚ ಯೋಽವ್ಯಭಿಚಾರೇಣ ಭಕ್ತಿಯೋಗೇನ ಸೇವತೇ ।
ಸ ಗುಣಾನ್ ಸಮತೀತ್ಯೈತಾನ್ ಬ್ರಹ್ಮಭೂಯಾಯಕಲ್ಪತೇ ॥"

ದುಃಖಜನಕವಾದ ಗುಣತ್ರಯದ ಸಂಬಂಧವನ್ನು ತಪ್ಪಿಸಿಕೊಳ್ಳುವುದಕ್ಕೆ ಇದುವರೆಗೂ ಹಿಂದೆ ಅನೇಕಕಾರಣಗಳು ತೋರಿಸಲ್ಪಟ್ಟುವು. ಆದರೆ ಆ ಕಾರಣಗಳೆಲ್ಲವೂ ಅಪ್ರಧಾನಗಳಾದ ಕಾರಣಗಳಾಗಿರುವುವು. ಈ ಶ್ಲೋಕದಲ್ಲಿ ತೋರಿಸುವ ಪ್ರಧಾನಕಾರಣದೊಡನೆ ಅವುಗಳು ಕೂಡಿದರಲ್ಲದೆ ಗುಣತ್ರಯನಿವೃತ್ತಿಯನ್ನು ಮಾಡಿಕೊಡಲಾರವು. ಆದಕಾರಣ ಗುಣತ್ರಯವನ್ನು ದಾಟುವ ವಿಷಯದಲ್ಲಿ ಪ್ರಧಾನವಾಗಿರುವ ಕಾರಣವನ್ನು ಈ ಶ್ಲೋಕದಲ್ಲಿ ಅಪ್ಪಣೆಕೊಡಿಸುವನು.—

ಜೀವನಿಗೆ ಸಂಸಾರಬಂಧವೆಂಬುದು ಅನಾದಿಕರ್ಮವಾಸನಾಸಹಿತವಾದ ಪರಮಪುರುಷಸಂಕಲ್ಪವಿಶೇಷದಿಂದಲೇ ಒಂದಿರುವುದಾದರೆ ಅಂಥ ಸಂಸಾರಬಂಧದ ನಿವೃತ್ತಿಯುಂಟಾಗುವುದಕ್ಕೂ ಪರಮಪುರುಷನ ಸಂಕಲ್ಪವೇ ಬೇಕಾಗಿರುವುದು. ಅಚಲವಾದ ಭಕ್ತಿಯೋಗವನ್ನಾಗಲಿ ಪ್ರಪತ್ತಿನಿಷ್ಠೆಯನ್ನಾಗಲಿ ಸ್ವೀಕರಿಸಿದರಲ್ಲದೆ ಪರಮಪುರುಷನ ಶುಭಸಂಕಲ್ಪವು ಇವನಿಗೆ ಸಿದ್ಧಿಸಲಾರದು. ಆದಕಾರಣ—

**ಓ ಅರ್ಜುನನೆ!** ಸತ್ಯಸಂಕಲ್ಪನಾಗಿಯೂ, ಪರಮಕಾರುಣಿಕನಾಗಿಯೂ, ಆಶ್ರಿತವಾತ್ಸಲ್ಯಜಲನಿಧಿಯಾಗಿಯೂ ಇರುವ ನನ್ನನ್ನು ಯಾವ ಚೇತನನು—ದೇವತಾಂತರಸ್ಪರ್ಶಿಯಾಗದೆಯೂ, ಅಚಲವಾಗಿಯೂ ಇರುವ ಭಕ್ತಿಯೋಗವನ್ನವಲಂಬಿಸಿ ವಿಧಿಪೂರ್ವಕವಾಗಿ ಭಜಿಸುವನೋ ಅಂಥ ಚೇತನನು ಸ್ವಪ್ರಯತ್ನದಿಂದ ದಾಟಲಶಕ್ಯವಾದ ಈ ಗುಣತ್ರಯವನ್ನೂ ನನ್ನ ಅನುಗ್ರಹದಿಂದ ದಾಟಿದವನಾಗಿ ಪೂರ್ವೋಕ್ತವಾದ ಪರಮಸಾಮ್ಯವೆಂಬ ಮೋಕ್ಷಕ್ಕೆ ಅರ್ಹನಾಗುವನು. ಸಕಲಾಂಗಸಹಿತವಾದ ಭಕ್ತಿಯೋಗಮಾರ್ಗದಿಂದ ಆರಾಧಿಸಲ್ಪಟ್ಟ ನಾನೇ ಮೋಕ್ಷಾರ್ಥಿಯಾದವನಿಗೆ ಗುಣತ್ರಯವನ್ನೂ ಬಿಡಿಸಿ ಮೋಕ್ಷವನ್ನೂ ಕೊಡುವೆನೆಂಬುದು ಇದರಿಂದ ಉಕ್ತವಾಗಿರುವುದು.

ಗುಣಾತೀತನ ಪರವಾಗಿ ಅರ್ಜುನನು ಮಾಡಿದ ಮೂರು ಪ್ರಶ್ನೆಗಳೊಳಗೆ--ಗುಣಾತೀತನ ಸ್ವರೂಪವನ್ನು ತೋರಿಸಿಕೊಡುವ ಆಭ್ಯಂತರಚಿಹ್ನೆಗಳು ಯಾವುವೆಂಬುದು ಮೊದಲನೆಯ ಪ್ರಶ್ನೆಯಾಗಿರುವುದು; ಅಂಥ ಬಾಹ್ಯಚಿಹ್ನೆಗಳು ಯಾವುವೆಂಬುದು ಎರಡನೆಯ ಪ್ರಶ್ನೆಯಾಗಿರುವುದು; ಸತ್ತ್ವಾದಿಗುಣತ್ರಯದ ನಿವೃತ್ತಿಗೆ ಸಾಧನಗಳು ಯಾವುವೆಂಬುದು ಮೂರನೆಯ ಪ್ರಶ್ನೆಯಾಗಿರುವುದು. ಯಾವನಾದರೊಬ್ಬನು—"ತಾನು ಗುಣಾತೀತನಾಗಿರುವೆನೋ ಇಲ್ಲವೋ" ಎಂಬುದನ್ನು ತಿಳಿಯಲಪೇಕ್ಷಿಸಿದಾಗ ಅದ್ವೇಷ ಮೊದಲಾದ ಆಭ್ಯಂತರಚಿಹ್ನೆಗಳು ತನ್ನಲ್ಲಿ ಇದ್ದರೆ ಅವುಗಳಿಂದ ತನ್ನನ್ನು ಗುಣಾತೀತನೆಂದು ತಿಳಿಯಬಹುದು; "ಮತ್ತೊಬ್ಬನು ಗುಣಾತೀತನಾಗಿರುವನೋ ಇಲ್ಲವೋ" ಎಂಬುದನ್ನು ತಿಳಿಯಲಪೇಕ್ಷಿಸಿದಾಗ—ತುಲ್ಯನಿಂದಾಸ್ತುತಿತ್ವವೇ ಮೊದಲಾದ ಬಾಹ್ಯಚಿಹ್ನೆಗಳು ಅವನಲ್ಲಿ ಕಂಡುಬಂದರೆ ಅವುಗಳಿಂದ ಅವನನ್ನು ಗುಣಾತೀತನೆಂದು ತಿಳಿದುಕೊಳ್ಳಬಹುದು. ಇಂಥ ವ್ಯತ್ಯಾಸವನ್ನು ತೋರಿಸುವುದಕ್ಕಾಗಿಯೇ ಚಿಹ್ನವಿಷಯಕವಾದ ಪ್ರಶ್ನೆಯನ್ನು ಪ್ರತ್ಯೇಕವಾಗಿ ಎರಡಾವರ್ತಿ ಮಾಡಿದುದು.

ಅರ್ಜುನನ ಇಂಥ ಮೂರು ಪ್ರಶ್ನೆಗಳಿಗೆ ಪ್ರತ್ಯುತ್ತರವನ್ನು ಶ್ರೀಕೃಷ್ಣನು **"ಪ್ರಕಾಶಂ ಚ ಪ್ರವೃತ್ತಿಂ ಚ"** ಎಂದು ಪ್ರಾರಂಭಿಸಿ **"ಬ್ರಹ್ಮಭೂಯಾಯ ಕಲ್ಪತೇ"** ಎಂಬುವವರೆಗೂ ಆಗುವ ಐದು ಶ್ಲೋಕಗಳಿಂದ ಹೇಳಿರುವನು; ಅವುಗಳಲ್ಲಿ **"ಧೀರಃ"** ಎಂಬ ಪದದವರೆಗೆ ಆಭ್ಯಂತರಚಿಹ್ನಪ್ರಶ್ನೆಗೆ ಪ್ರತ್ಯುತ್ತರವೂ, ಮೇಲಿನ ಅವಶಿಷ್ಟಭಾಗದಿಂದ ಬಾಹ್ಯಚಿಹ್ನಪ್ರಶ್ನೆಗೆ ಪ್ರತ್ಯುತ್ತರವೂ ಹೇಳಲ್ಪಟ್ಟಿರುವುವು; ಹೀಗೆ ಆಭ್ಯಂತರವಾದ ಅದ್ವೇಷಾದಿಚಿಹ್ನಗಳಿಂದಲೂ, ಬಾಹ್ಯವಾದ ಸರ್ವಾರಂಭಪರಿತ್ಯಾಗಾದಿಚಿಹ್ನೆಗಳಿಂದಲೂ ಗುಣಾತೀತನ ಸ್ವರೂಪವನ್ನು ನಿಷ್ಕರ್ಷಿಸಬಹುದು. ಭಕ್ತಿಯೋಗವೆಂಬ ಪ್ರಧಾನಸಾಧನದೊಡನೆ ಕೂಡಿದ ಇಂಥ ಎರಡುಬಗೆಯಾದ ಚಿಹ್ನಗಳೇ ಗುಣತ್ರಯದ ನಿವೃತ್ತಿಗೆ ಸಾಧನಗಳಾಗಿರುವುದರಿಂದ ಚಿಹ್ನಪ್ರಶ್ನೆಗಳ ಪ್ರತ್ಯುತ್ತರವೇ ಸಾಧನಪ್ರಶ್ನೆಗೂ ಪ್ರತ್ಯುತ್ತರವಾಗಿರುವ ಕಾರಣ ಉಕ್ತವಾದ ಐದು ಶ್ಲೋಕಗಳಲ್ಲಿ ಮೂರು ಪ್ರಶ್ನೆಗಳಿಗೂ ಪ್ರತ್ಯುತ್ತರವಿರುವುದೆಂದು ಹೇಳುವುದರಲ್ಲಿ ತಡೆಯಿಲ್ಲ.

ಮತ್ತು ಹದಿನೇಳನೆಯ ಅಧ್ಯಾಯದಲ್ಲಿ—ಹಿಂದಿನ ಭಗವದುಪದೇಶವನ್ನು ಕೇಳಿದ ಅರ್ಜುನನು—ಶಾಸ್ತ್ರವಿಹಿತವಲ್ಲದ ಕರ್ಮವು ಯಾವ ಫಲವನ್ನೂ ಕೊಡದೆ ನಿಷ್ಪ್ರಯೋಜನವಾಗುವುದೆಂಬ ಅಂಶವನ್ನು ತಿಳಿಯದವನಾಗಿ, ಶಾಸ್ತ್ರವಿಹಿತವಲ್ಲದ

ಕರ್ಮವನ್ನು ಶ್ರದ್ಧಾಪೂರ್ವಕವಾಗಿ ಯಾವನಾದರೊಬ್ಬನು ಮಾಡಿದನಾದರೆ ಅವನಿಗೆ ಸತ್ತ್ವಾದಿಗುಣಭೇದದಿಂದ ಎಂಥ ಫಲಭೇದವುಂಟಾಗುವುದೆಂಬುದನ್ನು ತಿಳಿಯಲ ಪೇಕ್ಷಿಸಿ ಪ್ರಶ್ನೆಮಾಡುತ್ತಾನೆ—

" ಯೇ ಶಾಸ್ತ್ರವಿಧಿಮುತ್ಸೃಜ್ಯ ಯಜಂತೇ ಶ್ರದ್ಧಯಾಽನ್ವಿತಾಃ ।
ತೇಷಾಂ ನಿಷ್ಠಾ ತು ಕಾ ಕೃಷ್ಣ ಸತ್ತ್ವಮಾಹೋ ರಜಸ್ತಮಃ ॥ "

ಶಾಸ್ತ್ರೋಕ್ತವಾದ ವಿಧಿಕ್ರಮವನ್ನು ಬಿಟ್ಟು ಶ್ರದ್ಧಾಮಾತ್ರಯುಕ್ತರಾಗಿ ಯಾಗಾದಿಕರ್ಮಗಳನ್ನು ಯಾರಾದರೂ ನಡಸಿದರಾದರೆ ಓ ಕೃಷ್ಣ! ಅಂಥವರ ಸ್ಥಿತಿಗೆ ಆಧಾರವು ಯಾವುದು? ಸತ್ತ್ವವೋ ರಜಸ್ಸೋ ಅಥವಾ ತಮಸ್ಸೋ?

ಹೀಗೆ ಪ್ರಶ್ನೆಮಾಡಿದ ಅರ್ಜುನನನ್ನು ಕುರಿತು ಶ್ರೀಕೃಷ್ಣನು ಶಾಸ್ತ್ರವಿಧಿ ಯಿಂದ ವಿರಹಿತವಾದ ಶ್ರದ್ಧೆಯೂ, ಅಂಥ ಶ್ರದ್ಧೆಯೊಡನೆ ಮಾಡುವ ಯಾಗಾದಿ ಗಳೂ ಸಹ ನಿಷ್ಫಲಗಳೇ ಆಗುವುವಲ್ಲದೆ ಈಷನ್ಮಾತ್ರವೂ ಪ್ರಯೋಜನಕಾರಿಗ ಳಾಗುವುದಿಲ್ಲವೆಂಬ ಈ ಅರ್ಥವನ್ನು ಉಪದೇಶಿಸುವುದಕ್ಕಾಗಿ ಶಾಸ್ತ್ರವಿಧಿಪೂರ್ವಕ ವಾದ ಯಾಗದಾನಹೋಮಾದಿಕರ್ಮಗಳಿಗೆ ಸಾತ್ತ್ವಿಕತ್ವ, ರಾಜಸತ್ವ, ತಾಮ ಸತ್ವಗಳೆಂಬ ಮೂರು ಭೇದಗಳನ್ನು ತೋರಿಸುವುದಕ್ಕೋಸ್ಕರ ಮೊದಲು ಶಾಸ್ತ್ರೀ ಯವಾದ ಶ್ರದ್ಧೆಯ ಮೂರು ಭೇದಗಳನ್ನು ತೋರಿಸುತ್ತಾನೆ—

## ೯೯೩. ಶಾಸ್ತ್ರೀಯಕರ್ಮಣಾಂ ಸಾತ್ತ್ವಿಕತ್ವಾದಿತ್ರೈವಿಧ್ಯಪ್ರಯೋಜಕ ಶ್ರದ್ಧಾತ್ರೈವಿಧ್ಯನಿರೂಪಣಂ

" ತ್ರಿವಿಧಾ ಭವತಿ ಶ್ರದ್ಧಾ ದೇಹಿನಾಂ ಸಾ ಸ್ವಭಾವಜಾ ।
ಸಾತ್ತ್ವಿಕೀ ರಾಜಸೀ ಚೈವ ತಾಮಸೀ ಚೇತಿ ತಾಂ ಶೃಣು ॥ "

ಎಲೈ ಅರ್ಜುನನೆ! ದೇಹಿಯೆನಿಸಿಕೊಂಡ ಸಕಲಚೇತನರಿಗೂ ಶ್ರದ್ಧೆ ಯೆಂಬುದು ಸಾತ್ತ್ವಿಕವೆಂದೂ, ರಾಜಸವೆಂದೂ, ತಾಮಸವೆಂದೂ ಮೂರು ಬಗೆ ಯಾಗಿ ಉಂಟಾಗುವುದು. ಈ ಶ್ರದ್ಧೆಯೆಂಬುದು ಅವರವರ ಸ್ವಭಾವದಿಂದ ಅವರ ವರಿಗೆ ಉಂಟಾಗುತ್ತದೆಯೆಂದು ನೀನು ತಿಳಿಯಬಹುದು. ತಮ್ಮ ತಮ್ಮ ಅಸಾಧಾ ರಣಭಾವವು ಸ್ವಭಾವವೆನಿಸಿಕೊಳ್ಳುವುದು. ಭಾವವೆಂದರೆ ತಮ್ಮ ತಮ್ಮ ಪ್ರಾಚೀನ ವಾಸನೆಯಿಂದ ಆ ಆ ವಿಷಯಗಳಲ್ಲಿ ತಮತಮಗೆ ಉಂಟಾಗುವ ರುಚಿವಿಶೇಷವು. ಯಾವುದರಲ್ಲಿ ರುಚಿಯಿರುವುದೋ ಅದರಲ್ಲಿ ಶ್ರದ್ಧೆಯುಂಟಾಗುವುದು. " **ಈ ಸಾಧನವು ನನಗೆ ಅಭಿಮತವಾದ ಫಲವನ್ನು ಸಾಧಿಸಿಯೇ ಕೊಡುವುದು** " ಎಂದು ತಿಳಿದುಕೊಂಡವನಿಗೆ ಸಾಧನದಲ್ಲಿ ವಿಶ್ವಾಸಪೂರ್ವಕವಾದ ಪ್ರವೃತ್ತಿತ್ವರೆ ಶ್ರದ್ಧೆಯೆನಿಸಿಕೊಳ್ಳುವುದು.

ವಾಸನೆ, ರುಚಿ, ಶ್ರದ್ಧೆ ಈ ಮೂರೂ—ಆತ್ಮನಿಗೆ ಗುಣತ್ರಯಸಂಸರ್ಗ ವುಂಟಾದುದರಿಂದ ಆತ್ಮನಲ್ಲಿ ಉಂಟಾಗುವ ಧರ್ಮಗಳಾಗಿರುವುವು. ಆದುದರಿಂದಲೇ ದೇಹ-ಇಂದ್ರಿಯ-ಅಂತಃಕರಣ-ವಿಷಯ ಇವುಗಳಲ್ಲಿರುವ ಸತ್ತ್ವಾದಿಗುಣಗಳೇ ಶ್ರದ್ಧೆ, ವಾಸನೆ, ರುಚಿ, ಇವುಗಳಿಗೆ ಕಾರಣಗಳಾಗಿರುವುವೆಂದು ತಿಳಿಯಬಹುದು. ಸತ್ತ್ವಾದಿಗುಣಗಳು ಅವುಗಳ ಕಾರ್ಯಗಳಿಂದ ಊಹಿಸಲ್ಪಡತಕ್ಕವುಗಳಾಗಿಯೇ ಇರುವುವಲ್ಲದೆ ಇಂದ್ರಿಯಗೋಚರಗಳಲ್ಲವೆಂಬುದನ್ನು ಹಿಂದೆಯೇ ತಿಳಿಸಿರುವೆವು. ಅಂತು ಸತ್ತ್ವಾದಿಗುಣಯುಕ್ತಗಳಾದ ದೇಹೇಂದ್ರಿಯಾಂತಃಕರಣವಿಷಯಗಳ ಸಂಸರ್ಗಬಲದಿಂದ ವಾಸನೆ, ರುಚಿ, ಶ್ರದ್ಧೆ, ಇವುಗಳು ಉಂಟಾಗುವುವೆಂದು ಫಲಿತ ವಾಯಿತು. ಆದುದರಿಂದ ಇಂಥ ಶ್ರದ್ಧೆಯ ಸಾತ್ತ್ವಿಕತ್ವ ಮೊದಲಾದ ಮೂರು ಭೇದಗಳನ್ನೂ ನಿನಗೆ ನಾನು ಉಪದೇಶಿಸುವೆನು; ಅದನ್ನು ಸಾವಧಾನಚಿತ್ತನಾಗಿ ಕೇಳು—

## ೯೯೪ ಶ್ರದ್ಧಾಯಾಃ ಗುಣತ್ರಯೋಪಷ್ಟಬ್ಧಾನ್ತಃಕರಣಾನುರೂಪತ್ವೋಪಪಾದನಂ.

"ಸತ್ತ್ವಾನುರೂಪಾ ಸರ್ವಸ್ಯ ಶ್ರದ್ಧಾ ಭವತಿ ಭಾರತ ।
ಶ್ರದ್ಧಾಮಯೋಽಯಂ ಪುರುಷೋ ಯೋ ಯಚ್ಛ್ರದ್ಧಸ್ಸ ಏವ ಸಃ॥"

ಸತ್ತ್ವವೆಂದರೆ-ಅಂತಃಕರಣವು. ಈ ಸತ್ತ್ವಶಬ್ದವು ಪೂರ್ವೋಕ್ತವಾದ ದೇಹೇಂದ್ರಿಯಾಂತಃಕರಣವಿಷಯಗಳೆಲ್ಲವನ್ನೂ ಸೂಚಿಸುವುದು. ಭರತಕುಲದಲ್ಲಿ ಉತ್ಪನ್ನನಾದ ಅರ್ಜುನನೆ! ಸಕಲಪ್ರಾಣಿಗಳಿಗೂ ಅಂತಃಕರಣವು ಎಂಥದಾಗಿ ರುವುದೋ ಶ್ರದ್ಧೆಯೂ ಅಂಥದಾಗಿಯೇ ಉಂಟಾಗುವುದೆಂದು ತಿಳಿಯಬಹುದು. ಎಂದರೆ ಯಾವ ವಿಷಯದಲ್ಲಿ ರುಚಿಯನ್ನುಂಟುಮಾಡುವ ವಾಸನೆಗೆ ಉಪಷ್ಟಂಭಕ ವಾದ ಯಾವ ಗುಣದಿಂದ ದೇಹೇಂದ್ರಿಯಾಂತಃಕರಣಾದಿಗಳು ಆಕ್ರಮಿಸಲ್ಪಟ್ಟಿರು ವುವೋ ಆ ವಿಷಯದಲ್ಲಿ ಅಂಥ ಗುಣಕ್ಕೆ ಅನುಸಾರವಾದ ಶ್ರದ್ಧೆ ಸಕಲಪ್ರಾಣಿ ಗಳಿಗೂ ಉಂಟಾಗುವುದು.

ಪುರುಷಶಬ್ದವಾಚ್ಯನಾದ ಈ ಚೇತನನು ಶ್ರದ್ಧಾಮಯನಾಗಿರುವನೆಂದು ತಿಳಿ. ಎಂದರೆ ಯಾವ ಪುರುಷನು ಎಂಥ ಶ್ರದ್ಧೆಯೊಡನೆ ಕೂಡಿರುವನೋ ಅವನು ಅಂಥ ಶ್ರದ್ಧೆಯ ಪರಿಣಾಮರೂಪವಾದ ಫಲವನ್ನು ಪಡೆವನು. ಪುಣ್ಯಕರ್ಮ ವಿಷಯದಲ್ಲಿ ಶ್ರದ್ಧೆಯುಳ್ಳವನಾದರೆ ಪುಣ್ಯಕರ್ಮಫಲದೊಡನೆ ಯುಕ್ತನಾಗುವನು. ಅಂತು ಆ ಆ ಫಲವನ್ನು ಪಡೆವಿಕೆ ಆ ಆ ಶ್ರದ್ಧೆಗೆ ಅಧೀನವಾಗಿರುವುದೆಂದು ಇದ ರಿಂದ ಫಲಿಸಿತು. ಇದೇ ಅರ್ಥವು ಮುಂದಿನಶ್ಲೋಕದಲ್ಲಿ ವಿವರಿಸಲ್ಪಡುವುದು—

"ಯಜಂತೇ ಸಾತ್ತ್ವಿಕಾ ದೇವಾನ್ ಯಕ್ಷರಕ್ಷಾಂಸಿ ರಾಜಸಾಃ ।
ಪ್ರೇತಾನ್ ಭೂತಗಣಾಂಶ್ಚಾನ್ಯೇ ಯಜಂತೇ ತಾಮಸಾ ಜನಾಃ ॥"

ರಜೋಗುಣತಮೋಗುಣಗಳನ್ನು ತಿರಸ್ಕರಿಸಿ ಸತ್ತ್ವಗುಣವೇ ಯಾರಿಗೆ ಪ್ರಚುರವಾಗಿರುವುದೋ ಅಂಥ ಸಾತ್ತ್ವಿಕಚೇತನರು ಸಾತ್ತ್ವಿಕಶ್ರದ್ಧೆಯೊಡನೆ ಕೂಡಿದವರಾಗಿ ಯಜ್ಞಾದಿಕರ್ಮಗಳಿಂದ ದೇವತೆಗಳನ್ನೇ ಆರಾಧಿಸುತ್ತಾರೆ. ಇದರಿಂದ-- ದುಃಖಮಿಶ್ರಿತವಲ್ಲದ ಉತ್ಕೃಷ್ಟಸುಖಕ್ಕೆ ಸಾಧನವಾಗಿರುವ ದೇವತಾರಾಧನದಲ್ಲಿ ಉಂಟಾಗಿರುವ ಶ್ರದ್ಧೆ ಸಾತ್ತ್ವಿಕಶ್ರದ್ಧೆಯೆನಿಸಿಕೊಳ್ಳುವುದೆಂದು ಹೇಳಿದಂತಾಯಿತು.

ಸತ್ತ್ವಗುಣತಮೋಗುಣಗಳನ್ನು ತಿರಸ್ಕರಿಸಿ ರಜೋಗುಣವೇ ಯಾರಿಗೆ ಪ್ರಚುರವಾಗಿರುವುದೋ ಅಂಥ ರಾಜಸಚೇತನರು ರಾಜಸಶ್ರದ್ಧೆಯೊಡನೆ ಕೂಡಿದವರಾಗಿ ಯಜ್ಞಾದಿಕರ್ಮಗಳಿಂದ ಯಕ್ಷ-ರಾಕ್ಷಸರನ್ನೇ ಆರಾಧಿಸುತ್ತಾರೆ. ಇದರಿಂದ—ದುಃಖಮಿಶ್ರಿತವಾದ ಅಲ್ಪಸುಖಕ್ಕೆ ಸಾಧನವಾಗಿರುವ ಯಕ್ಷರಾಕ್ಷಸಾರಾಧನದಲ್ಲಿ ಉಂಟಾಗಿರುವ ಶ್ರದ್ಧೆ ರಾಜಸಶ್ರದ್ಧೆಯೆನಿಸಿಕೊಳ್ಳುವುದೆಂದು ಹೇಳಿದಂತಾಯಿತು.

ಸತ್ತ್ವಗುಣರಜೋಗುಣಗಳನ್ನು ತಿರಸ್ಕರಿಸಿ ತಮೋಗುಣವೇ ಯಾರಿಗೆ ಪ್ರಚುರವಾಗಿರುವುದೋ ಅಂಥ ತಾಮಸಚೇತನರು ತಾಮಸಶ್ರದ್ಧೆಯೊಡನೆ ಕೂಡಿದವರಾಗಿ ಯಜ್ಞಾದಿಕರ್ಮಗಳಿಂದ ಭೂತಪ್ರೇತಗಣಗಳನ್ನು ಆರಾಧಿಸುತ್ತಾರೆ. ಇದರಿಂದ—ದುಃಖಮಯವಾದ ಅತ್ಯಲ್ಪಸುಖಕ್ಕೆ ಸಾಧನವಾಗಿರುವ ಭೂತಪ್ರೇತಾರಾಧನಗಳಲ್ಲಿ ಉಂಟಾಗಿರುವ ಶ್ರದ್ಧೆ ತಾಮಸಶ್ರದ್ಧೆಯೆನಿಸಿಕೊಳ್ಳುವುದೆಂದು ಹೇಳಿದಂತಾಯಿತು.

## ೯೯೫ ಅಶಾಸ್ತ್ರವಿಹಿತಕರ್ಮಣಾಂ ಶ್ರದ್ಧಾಪೂರ್ವಕಮನುಷ್ಠಿತಾನಾಮಪಿ ನಿಷ್ಫಲತ್ವಮನರ್ಥಾವಹತ್ವಂ ಚ

ಹೀಗೆ ಶ್ರದ್ಧೆಯಿಂದ ಮಾಡಲ್ಪಟ್ಟ ಶಾಸ್ತ್ರವಿಹಿತಗಳಾಗಿರುವ ಕರ್ಮಗಳಲ್ಲಿಯೇ ಸತ್ತ್ವಾದಿಗುಣತಾರತಮ್ಯದಿಂದ ಫಲತಾರತಮ್ಯವಿರುವುದೆಂದು ಸಿದ್ಧವಾಗುವುದಾದರೆ ಶಾಸ್ತ್ರವಿಹಿತಗಳಲ್ಲದ ದಾಸಯಜ್ಞಾದಿಕರ್ಮಗಳು ನನ್ನ ಆಜ್ಞೆಗೆ ವಿರುದ್ಧಗಳಾಗಿರುವುದರಿಂದ ಅವುಗಳಲ್ಲಿ ಅತ್ಯಲ್ಪಸುಖವೂ ದೊರೆಯಲಾರದೆಂಬುದು ಮಾತ್ರವೇ ಅಲ್ಲ; ಕಿಂತು ಅನರ್ಥವೇ ಫಲಿಸುವುದೆಂದು ತನ್ನ ಹೃದಯದಲ್ಲಿದ್ದ ಈ ಅರ್ಥವನ್ನು ಮುಂದಿನ ಎರಡು ಶ್ಲೋಕಗಳಿಂದ ಸ್ಪಷ್ಟಪಡಿಸುವನು.—

" ಅಶಾಸ್ತ್ರವಿಹಿತಂ ಘೋರಂ ತಪ್ಯಂತೇ ಯೇ ತಪೋ ಜನಾಃ ।
ದಂಭಾಹಂಕಾರಸಂಯುಕ್ತಾಃ ಕಾಮರಾಗಬಲಾನ್ವಿತಾಃ ॥
ಕರ್ಶಯಂತಃ ಶರೀರಸ್ಥಂ ಭೂತಗ್ರಾಮಮಚೇತಸಃ ।
ಮಾಂ ಚೈವಾಂತಃಶರೀರಸ್ಥಂ ತಾನ್ ವಿದ್ಧ್ಯಾಸುರನಿಶ್ಚಯಾನ್ ॥ "

ಶಾಸ್ತ್ರವಿಹಿತಗಳಲ್ಲದ ತಪೋಯಜ್ಞಾದಿಗಳನ್ನು ಆಚರಿಸುವವರು ಅತ್ಯಂತ ಶರೀರಪ್ರಯಾಸದಿಂದ ಅತಿಘೋರವಾಗಿ ಅವುಗಳನ್ನು ನಡಸಿದರೂ ಅವುಗಳಿಂದ ಅವರಿಗೆ ಯಾವ ಫಲವೂ ದೊರೆಯಲಾರದು. ಅಂಥವರನ್ನು ಅಸುರರ ನಿಶ್ಚಯಕ್ಕೆ ಸಮಾನವಾದ ನಿಶ್ಚಯವುಳ್ಳವರನ್ನಾಗಿ ತಿಳಿ. ಅಸುರರು ನನ್ನ ಆಜ್ಞೆಗೆ ವಿಪರೀತವಾಗಿಯೇ ಅಲ್ಲವೆ ನಡಸುವವರಾಗಿರುವರು. ಅವರಂತೆ ಇತರರೂ ನನ್ನ ಆಜ್ಞೆಗೆ ವಿಪರೀತವಾಗಿ ನಡಸುವರಾದರೆ ಅವರಿಗೆ ಬಿಂದುಮಾತ್ರಸುಖವೂ ದೊರೆಯಲಾರದು. ಕಿಂತು ಅನರ್ಥಪರಂಪರೆಯಲ್ಲಿಯೇ ಅವರು ಬೀಳುವರು. ಅಷ್ಟುಮಾತ್ರವೇ ಅಲ್ಲ ; ಇಹದಲ್ಲಿಯೂ ಅವರಿಗೆ ಕಾಯಕ್ಲೇಶದ ಮೂಲಕ ಅನೇಕಕಷ್ಟಗಳುಂಟಾಗುವುವು. ಏತಕ್ಕೆಂದರೆ ಅವರು ಡಂಭ-ಅಹಂಕಾರ-ಕಾಮ-ರಾಗ-ಅಸುರಬಲ ಇವುಗಳಿಂದ ಕೂಡಿದವರಾಗಿ ಶರೀರಪರಿಶ್ರಮದ ಮೂಲಕವಾಗಿ ಶರೀರದಲ್ಲಿ ಅಡಗಿರುವ ಪಂಚಭೂತಗಳಿಗೂ ಅತ್ಯಂತಕಾರ್ಶ್ಯವನ್ನುಂಟುಮಾಡುವುದು ಮಾತ್ರವಲ್ಲದೆ ನನಗೆ ಶರೀರಭೂತನಾಗಿಯೂ ಈ ಸ್ಥೂಲಶರೀರಕ್ಕೆ ನಿರ್ವಾಹಕನಾಗಿಯೂ ಇರುವ ಜೀವಾತ್ಮನನ್ನೂ ಅತ್ಯಧಿಕವಾಗಿ ಕ್ಲೇಶಪಡಿಸುವವರಾಗುವರು. ನನಗೆ ಶರೀರಭೂತನಾದ ಜೀವನನ್ನು ಕ್ಲೇಶಪಡಿಸುವಿಕೆ ನನ್ನನ್ನು ಕ್ಲೇಶಪಡಿಸಿದುದಕ್ಕೆ ಸಮಾನವಾಗುವುದೆಂದು ಸೂಚಿಸುವುದಕ್ಕಾಗಿಯೇ ಇಲ್ಲಿ ಜೀವನನ್ನು ' ಮಾಂ ' ಎಂಬ ಶಬ್ದದಿಂದ ನಿರ್ದೇಶಮಾಡಿರುವುದು. ಶಾಸ್ತ್ರೋಲ್ಲಂಘನವನ್ನು ಮಾಡುವವರಿಗೆ ನನ್ನನ್ನು ಪೀಡಿಸುವಿಕೆಯೆಂಬುದೂ ಒಂದು ಪಾಪವು ಬಂದೊದಗುವುದು.

## ೯೯೬. ಸತ್ತ್ವಾದಿಗುಣವೃದ್ಧಿಹೇತುಭೂತಾಹಾರಯಜ್ಞತಪೋದಾನಾನಾಂ ತ್ರೈವಿಧ್ಯಕಥನಪ್ರತಿಜ್ಞಾ.

ಹೀಗೆ ಅರ್ಜುನನ ಪ್ರಶ್ನೆಗೆ ತಿರಸ್ಕಾರರೂಪವಾದ ಉತ್ತರವನ್ನು ಹೇಳಿ— ಈಗ ಶಾಸ್ತ್ರವಿಹಿತಗಳಾದ ಕರ್ಮಗಳಲ್ಲಿಯೇ ಸತ್ತ್ವಾದಿಗುಣಗಳಿಂದ ಉಂಟಾಗುವ ವಿಶೇಷಗಳನ್ನು ತೋರಿಸುವುದಕ್ಕೋಸ್ಕರ ಆರಂಭಿಸಿ ಮೊದಲು ಸತ್ತ್ವಾದಿಗುಣಗಳ ಅಭಿವೃದ್ಧಿ ಆಹಾರವಿಶೇಷದಿಂದಲೇ ಉಂಟಾಗುವುದಾದಕಾರಣ ಸಕಲಪ್ರಾಣಿಗಳಿಗೂ ಆಹಾರವು ಮೂರುವಿಧವಾಗಿರುವುದೆಂದು ತೋರಿಸುವನು —

" ಆಹಾರಸ್ತ್ವಪಿ ಸರ್ವಸ್ಯ ತ್ರಿವಿಧೋ ಭವತಿ ಪ್ರಿಯಃ ।
ಯಜ್ಞಸ್ತಪಸ್ತಥಾ ದಾನಂ ತೇಷಾಂ ಭೇದಮಿಮಂ ಶೃಣು ॥ "

ಎಲ್ಲಾ ಪ್ರಾಣಿಗಳಿಗೂ ಸತ್ತ್ವರಜಸ್ತಮಸ್ಸುಗಳೆಂಬ ಮೂರು ಗುಣಗಳ ಸಂಬಂಧವಿರುವುದರಿಂದ ಅವರಿಗೆ ಪ್ರಿಯವಾದ ಆಹಾರವೂ ಮೂರು ಬಗೆಯಾಗುವುದು. ಅದರಂತೆಯೇ ಅವರು ನಡಸುವ ಯಜ್ಞ, ತಪಸ್ಸು, ದಾನ ಇವುಗಳ ಒಂದೊಂದೂ ಮೂರು ಮೂರು ವಿಧವಾಗುವುದು. ಅವುಗಳ ತಾರತಮ್ಯವನ್ನು ಇಲ್ಲಿ ನಿನಗೆ ಉಪದೇಶಿಸುವೆನು; ಸಾವಧಾನಚಿತ್ತನಾಗಿ ಕೇಳು.

### ೯೯೭. ಜ್ಞಾನವೃದ್ಧಿಫಲಕಸತ್ತ್ವವೃದ್ಧಿಹೇತುಭೂತ ಸಾತ್ತ್ವಿಕಾಹಾರಸ್ವರೂಪಂ.

" ಆಯುಸ್ಸತ್ತ್ವಬಲಾರೋಗ್ಯಸುಖಪ್ರೀತಿವಿವರ್ಧನಾಃ ।
ರಸ್ಯಾಃ ಸ್ನಿಗ್ಧಾಃ ಸ್ಥಿರಾ ಹೃದ್ಯಾ ಆಹಾರಾಃ ಸಾತ್ತ್ವಿಕಪ್ರಿಯಾಃ ॥ "

ಸತ್ತ್ವಗುಣಯುಕ್ತನಾದ ಚೇತನನಿಗೆ ಸತ್ತ್ವಪ್ರಚುರಗಳಾದ ಆಹಾರಗಳೇ ಪ್ರಿಯಗಳಾಗುವುವು. ಅಂಥ ಸಾತ್ತ್ವಿಕಾಹಾರಗಳು—ಆಯುಸ್ಸು, ಸತ್ತ್ವ, ಬಲ, ಆರೋಗ್ಯ, ಸುಖ, ಪ್ರೀತಿ ಇವುಗಳನ್ನು ವೃದ್ಧಿಪಡಿಸುವಂಥವುಗಳಾಗುವುವು. ಪುನಃ ಸತ್ತ್ವಗುಣವೃದ್ಧಿಗೂ ಕಾರಣಗಳಾಗುವುವು. ಆಯುರ್ವೃದ್ಧಿಕರಗಳಾದ ಆಹಾರಗಳು ಯಾವುವೆಂಬುದನ್ನು ಆಯುರ್ವೇದದಿಂದಲೂ ಪ್ರತ್ಯಕ್ಷಾನುಭವದಿಂದಲೂ ತಿಳಿದುಕೊಳ್ಳಬೇಕು. ಶ್ಲೋಕದ ಪೂರ್ವಾರ್ಧದಲ್ಲಿರುವ ಸತ್ತ್ವಪದವು ಅಂತಃಕರಣವನ್ನು ಬೋಧಿಸುವುದರಮೂಲಕ ಅಂತಃಕರಣಕಾರ್ಯವಾದ ಜ್ಞಾನವನ್ನು ತೋರಿಸುವುದು. ಸತ್ತ್ವವು ಜ್ಞಾನವನ್ನು ವೃದ್ಧಿಪಡಿಸುವುದಾದುದರಿಂದ ಸಾತ್ತ್ವಿಕವಾದ ಆಹಾರವೂ ಜ್ಞಾನವರ್ಧಕವಾಗುವುದೆಂಬುದು ಯುಕ್ತವಾಗಿರುವುದು. ಅದರಂತೆಯೇ ಬಲಾರೋಗ್ಯಗಳಿಗೂ ಸುಖಪ್ರೀತಿಗಳಿಗೂ ವರ್ಧಕಗಳಾಗುವುವು. ಹೇಗೆಂದರೆ—ಪರಿಣಾಮಕಾಲದಲ್ಲಿ ತಾವಾಗಿಯೇ ಸುಖಕ್ಕೆ ವರ್ಧಕಗಳಾಗಿಯೂ—ಪ್ರೀತಿಜನಕವಾದ ಕರ್ಮಾರಂಭಕ್ಕೆ ಉತ್ಸಾಹವನ್ನು ಉಂಟುಮಾಡುವುದರಮೂಲಕ ಪ್ರೀತಿಗೆ ವರ್ಧಕಗಳಾಗಿಯೂ ಆಗುವುವು.

ಮತ್ತು—ಮಧುರರಸಯುಕ್ತಗಳಾಗಿಯೂ, ಘೃತ ಮೊದಲಾದ ಸ್ನೇಹದ್ರವ್ಯಗಳೊಡನೆ ಕೂಡಿದುವುಗಳಾಗಿಯೂ, ಸ್ಥಿರವಾದ ಪರಿಣಾಮವುಳ್ಳುವುಗಳಾಗಿಯೂ, ದರ್ಶನಮಾತ್ರದಿಂದಲೂ ಪ್ರೀತಿವರ್ಧಕಗಳಾಗಿಯೂ ಇರುವ ಆಹಾರಗಳು ಸತ್ತ್ವಪ್ರಕೃತಿಯಾದವನಿಗೆ ಇಷ್ಟಗಳಾಗಿರುವುವು.

ಮಧುರ, ಅಮ್ಲ, ಲವಣ, ತಿಕ್ತ, ತುವರ, ಕಷಾಯ ಎಂಬ ಷಡ್ರಸಗಳಲ್ಲಿ ಉತ್ತರೋತ್ತರಕ್ಕಿಂತಲೂ ಪೂರ್ವಪೂರ್ವವು ಶರೀರಕ್ಕೆ ಹೆಚ್ಚು ಬಲವನ್ನು ಕೊಡುವುದಾಗಿರುವುದೆಂದು ಆಯುರ್ವೇದದಲ್ಲಿ ಪ್ರಸಿದ್ಧವಾಗಿರುವುದರಿಂದ ಸಾತ್ತ್ವಿಕಪುರುಷರ ಆಹಾರಗಳು ರಸ್ಯಗಳಾಗಿ ಎಂದರೆ ಮಧುರರಸಯುಕ್ತಗಳಾಗಿ ಇರುವುವು. ಆದುದರಿಂದಲೇ ರಸಾಯನಾದಿಗಳಲ್ಲಿಯೂ ಮಧುರರಸವನ್ನೇ ಪ್ರಧಾನವನ್ನಾಗಿ ಆಯುರ್ವೇದಾಭಿಜ್ಞರೂ ಉಪಯೋಗಿಸುವರು.

ಆಹಾರವು ಸ್ನೇಹಯುಕ್ತವಾಗಿರದೆ—ರೂಕ್ಷವಾಗಿರುವುದಾದರೆ ಶರೀರದಲ್ಲಿ ರೂಕ್ಷವಾದ ವಾಯುವನ್ನು ವೃದ್ಧಿಪಡಿಸಿ ಅದರ ಮೂಲಕ ಶರೀರವನ್ನು ರೂಕ್ಷವನ್ನಾಗಿ ಮಾಡುವುದು; ಎಂದರೆ ಒರಟಾಗಿ ಮಾಡುವುದು. ಆದಕಾರಣ ಸಾತ್ತ್ವಿಕರ ಆಹಾರಗಳು ಸ್ನಿಗ್ಧಗಳಾಗಿ ಎಂದರೆ ಸ್ನೇಹಯುಕ್ತಗಳಾಗಿ ಇರುವುವು.

ಸೇವನೆಮಾಡಿದ ಆಹಾರದ ಸ್ವರೂಪವು ಶರೀರದಲ್ಲಿ ಸ್ಥಿರವಾಗಿ ನಿಲ್ಲುವುದಿಲ್ಲ. ಹಾಗೆ ನಿಲ್ಲುವುದಾದರೆ ಅದು ಶರೀರಕ್ಕೆ ಹಾನಿಕರವಾಗುವುದಲ್ಲದೆ ಗುಣಕಾರಿಯಾಗುವುದಿಲ್ಲ. ಆದಕಾರಣ ಆಹಾರದ ಸ್ವರೂಪವೇ ಸ್ಥಿರವಾಗಿರಬೇಕೆಂದು ಇಲ್ಲಿ ತಾತ್ಪರ್ಯವಲ್ಲ; ಕಿಂತು ಸೇವಿಸಲ್ಪಟ್ಟ ಆಹಾರದ ಪರಿಣಾಮಗಳು ಸ್ಥಿರಗಳಾಗಿರಬೇಕೆಂದು ತಾತ್ಪರ್ಯವು. ಪ್ರಾಣಿಯಿಂದ ಸೇವಿಸಲ್ಪಟ್ಟ ಆಹಾರವು ರಸ, ರಕ್ತ, ಮಾಂಸ, ಮೇದಸ್ಸು, ಅಸ್ಥಿ, ಮಜ್ಜಾ ಶುಕ್ಲ ಎಂಬ ಏಳು ಧಾತುಗಳಾಗಿ ಶರೀರದಲ್ಲಿ ಪರಿಣಮಿಸುವುದು. ಇಂಥ ಪರಿಣಾಮಗಳು ಶರೀರದಲ್ಲಿ ಸ್ಥಿರಗಳಾದರೆ ಶರೀರವೂ ಸ್ಥಿರವಾಗುವುದು. ಆದುದರಿಂದ ಯಾವ ಆಹಾರವನ್ನು ಸೇವಿಸಿದರೆ ಈ ಸ್ಥಿರಪರಿಣಾಮಗಳುಂಟಾಗುವುವೋ ಅಂಥ ಆಹಾರವೇ ಸ್ಥಿರಪದದಿಂದ ನಿರ್ದೇಶಿಸಲ್ಪಡುವುದು. ಆದಕಾರಣ ಸಾತ್ತ್ವಿಕರ ಆಹಾರಗಳು ಸ್ಥಿರಗಳಾಗಿ ಎಂದರೆ ಸ್ಥಿರಪರಿಣಾಮವುಳ್ಳುವುಗಳಾಗಿ ಇರುವುವು.

ಆಹಾರವನ್ನು ಉಪಯೋಗಿಸಿದಮೇಲೆ ಅದರಿಂದ ಪ್ರೀತಿಯುಂಟಾಗುವುದೊಂದು ವಿಶೇಷವಲ್ಲ; ಉಪಯೋಗಿಸುವುದಕ್ಕಿಂತಲೂ ಮೊದಲೇ ಅದರ ದರ್ಶನದಿಂದಲೂ ಒಂದು ಬಗೆಯಾದ ಪ್ರೀತಿಯುಂಟಾಗಬೇಕು. ಆಹಾರವು ಜುಗುಪ್ಸಿತವಾದ ಆಕಾರದಲ್ಲಿ ಇದ್ದರೆ ಅದರ ದರ್ಶನದಿಂದ ಅಂಥ ಪ್ರೀತಿ ದೊರೆಯಲಾರದು. ಆದಕಾರಣ ಆಹಾರದ ಆಕಾರವು ದರ್ಶನೀಯವಾಗಿರಬೇಕು. ಆದುದರಿಂದಲೇ ಸಾತ್ತ್ವಿಕರ ಆಹಾರಗಳು ಹೃದ್ಯಗಳಾಗಿ ಎಂದರೆ ದರ್ಶನೀಯಗಳಾಗಿ ಇರುವುವು.

### ೯೯೮. ದುಃಖಫಲಕರಜೋವಿವೃದ್ಧಿಹೇತುಭೂತರಾಜಸಾಹಾರಸ್ವರೂಪಂ.

" ಕಟ್ವಮ್ಲಲವಣಾತ್ಯುಷ್ಣತೀಕ್ಷ್ಣರೂಕ್ಷವಿದಾಹಿನಃ ।
ಆಹಾರಾ ರಾಜಸಸ್ಯೇಷ್ಟಾ ದುಃಖಶೋಕಾಮಯಪ್ರದಾಃ ॥ "

ಕಟುರಸವುಳ್ಳುವುಗಳಾಗಿಯೂ, ಅಮ್ಲರಸವುಳ್ಳುವುಗಳಾಗಿಯೂ, ಹೆಚ್ಚಿದ ಲವಣರಸವುಳ್ಳುವುಗಳಾಗಿಯೂ, ಅತ್ಯುಷ್ಣಗಳಾಗಿಯೂ, ಅತಿತೀಕ್ಷ್ಣಗಳಾಗಿಯೂ, ಕಠಿನಗಳಾಗಿಯೂ, ದೆಗೆಯನ್ನುಂಟುಮಾಡತಕ್ಕುವುಗಳಾಗಿಯೂ, ಇರುವ ಆಹಾರಗಳು ರಜೋಗುಣಪ್ರಕೃತಿಯಾದವನಿಗೆ ಇಷ್ಟಗಳಾಗುವುವು. ಈ ಆಹಾರಗಳು ದುಃಖಕ್ಕೂ ಶೋಕಕ್ಕೂ ರೋಗಕ್ಕೂ ಪುನಃ ರಜೋಗುಣವೃದ್ಧಿಗೂ ಕಾರಣಗಳಾಗಿ ಪರಿಣಮಿಸುವುವು.

### ೯೯೯ ನಿರಂತರದುಃಖಾದಿಫಲಕತಮೋವೃದ್ಧಿಹೇತುಭೂತ ತಾಮಸಾಹಾರಸ್ವರೂಪಂ

" ಯಾತಯಾಮಂ ಗತರಸಂ ಪೂತಿ ಪರ್ಯುಷಿತಂ ಚ ಯತ್ ।
ಉಚ್ಛಿಷ್ಟಮಪಿ ಚಾಮೇಧ್ಯಂ ಭೋಜನಂ ತಾಮಸಪ್ರಿಯಂ ॥ "

ಪಕ್ವವಾದಮೇಲೆ ಬಹಳ ಹೊತ್ತು ಕಳೆದುಹೋದುದಾಗಿಯೂ, ಸ್ವಾಭಾವಿಕವಾದ ರಸದಿಂದ ಬಿಡಲ್ಪಟ್ಟುದಾಗಿಯೂ, ದುರ್ಗಂಧಯುಕ್ತವಾಗಿಯೂ, ಕಾಲಾತಿಕ್ರಮದಿಂದ ರಸಾಂತರವನ್ನು ಪಡೆದುದಾಗಿಯೂ, ಉಚ್ಛಿಷ್ಟವಾಗಿಯೂ, ದೇವತಾರಾಧನೆಗೆ ಅಯೋಗ್ಯವಾಗಿಯೂ ಇರುವ ಆಹಾರವು ತಮೋಗುಣಪ್ರಕೃತಿಯಾದವನಿಗೆ ಇಷ್ಟವಾಗಿರುವುದು. ಇಂಥ ಆಹಾರವು-ಆದಿ-ಮಧ್ಯಾ-ವಸಾನಗಳೆಂಬ ಮೂರುಕಾಲಗಳಲ್ಲಿಯೂ ದುಃಖ-ಶೋಕ-ರೋಗಗಳಿಗೇ ಕಾರಣವಾದುದರಿಂದ ಇದರಲ್ಲಿ ಸುಖಲೇಶವೂ ದೊರೆವುದಿಲ್ಲ. ಮತ್ತು ಉತ್ತರೋತ್ತರವಾಗಿ ತಮೋಗುಣವೃದ್ಧಿಗೇ ಕಾರಣವಾಗುವುದು.

### ೧೦೦೦ ಸಾತ್ತ್ವಿಕಯಜ್ಞಲಕ್ಷಣಂ

" ಅಫಲಾಕಾಙ್ಕ್ಷಿಭಿರ್ಯಜ್ಞೋ ವಿಧಿದೃಷ್ಟೋ ಯ ಇಜ್ಯತೇ ।
ಯಷ್ಟವ್ಯಮೇವೇತಿ ಮನಸ್ಸಮಾಧಾಯ ಸ ಸಾತ್ತ್ವಿಕಃ ॥ "

ಭಗವದಾರಾಧನರೂಪವಾದುದರಿಂದ ಸ್ವಯಂಪ್ರಯೋಜನರೂಪವಾಗಿಯೇ ಈ ಯಜ್ಞವನ್ನು ನಾವು ಆಚರಿಸಬೇಕೆಂದು ತಮ್ಮ ಮನಸ್ಸನ್ನು ಸ್ಥಿರಪಡಿಸಿಕೊಂಡು, ಫಲಾಕಾಂಕ್ಷೆಯಿಲ್ಲದವರಾದ ಸಾತ್ತ್ವಿಕಪ್ರಕೃತಿಯುಳ್ಳವರು ಶಾಸ್ತ್ರೋಕ್ತವಾದ

ವಿಧಿಯನ್ನು ಉಲ್ಲಂಘಿಸದೆ ದ್ರವ್ಯಮಂತ್ರಕ್ರಿಯಾಯುಕ್ತವಾಗಿ ಯಾವ ಯಜ್ಞವನ್ನು ನಡಸುವರೋ ಅದು ಸಾತ್ತ್ವಿಕಯಜ್ಞವೆನಿಸಿಕೊಳ್ಳುವುದು.

## ೧೦೦೧ ರಾಜಸಯಜ್ಞಲಕ್ಷಣಂ

"ಅಭಿಸಂಧಾಯ ತು ಫಲಂ ದಂಭಾರ್ಥಮಪಿ ಚೈವ ಯಃ ।
ಇಜ್ಯತೇ ಭರತಶ್ರೇಷ್ಠ ತಂ ಯಜ್ಞಂ ವಿದ್ಧಿ ರಾಜಸಂ ॥"

ಎಲೈ ಅರ್ಜುನನೆ!—ಫಲಾಭಿಸಂಧಿಯುಕ್ತರಾಗಿ ಡಂಭಕ್ಕಾಗಿಯೂ ಕೀರ್ತಿಗಾಗಿಯೂ ಯಾವ ಯಜ್ಞವನ್ನು ನಡಸುವರೋ ಅದು ರಾಜಸಯಜ್ಞವೆನಿಸಿಕೊಳ್ಳುವುದು.

## ೧೦೦೨ ತಾಮಸಯಜ್ಞಲಕ್ಷಣಂ

"ವಿಧಿಹೀನಮಸೃಷ್ಟಾನ್ನಂ ಮಂತ್ರಹೀನಮದಕ್ಷಿಣಂ ।
ಶ್ರದ್ಧಾವಿರಹಿತಂ ಯಜ್ಞಂ ತಾಮಸಂ ಪರಿಚಕ್ಷತೇ ॥"

ಸದಾಚಾರಸಂಪನ್ನರಾಗಿಯೂ, ಜ್ಞಾನವೃದ್ಧರಾಗಿಯೂ ಇರುವ ಬ್ರಾಹ್ಮಣೋತ್ತಮರ ಅನುಮತಿಯನ್ನು ಪಡೆಯದೆ ನಡಸಲ್ಪಡುವುದರಿಂದ ವಿಧಿಹೀನವೆನಿಸಿಕೊಂಡುದಾಗಿಯೂ, ನೀಚಜಾತಿಯಿಂದ ಲಬ್ಧವಾದ ದ್ರವ್ಯದಿಂದ ನಡಸಲ್ಪಡುವುದಾಗಿಯೂ, ಮಂತ್ರವಿರಹಿತವಾಗಿಯೂ. ದಕ್ಷಿಣಾರಹಿತವಾಗಿಯೂ, ಶ್ರದ್ಧಾರಹಿತವಾಗಿಯೂ ಇರುವ ಯಜ್ಞವು ತಾಮಸಯಜ್ಞವೆನಿಸಿಕೊಳ್ಳುವುದೆಂದು ಹಿರಿಯರು ಹೇಳುವರು.

ಹೀಗೆ—ಸತ್ತ್ವ-ರಜಸ್ತಮೋಗುಣಗಳ ಭೇದದಿಂದ ಆಹಾರವೂ-ಯಜ್ಞವೂ ತ್ರಿವಿಧವಾಗಿರುವುದೆಂಬುದನ್ನು ವಿವರಿಸಲಾಯಿತು. ಇದರಂತೆ ತಪಸ್ಸಿನಲ್ಲಿಯೂ ಗುಣಪ್ರಯುಕ್ತಗಳಾದ ಮೂರು ಭೇದಗಳನ್ನು ತೋರಿಸುವುದಕ್ಕೆ ಆರಂಭಿಸಿ—ಮೊದಲು ಈ ತಪಸ್ಸೆಂಬುದು ಶರೀರ-ವಾಕ್ಕು-ಮನಸ್ಸು-ಇವುಗಳಿಂದ ನಡಸಲ್ಪಡುವ ವ್ಯಾಪಾರವಿಶೇಷವಾದುದರಿಂದ ಅದರ ಸ್ವರೂಪಭೇದವನ್ನು ಉಪದೇಶಿಸುತ್ತಾನೆ—

## ೧೦೦೩ ಶಾರೀರತಪಸ್ಸ್ವರೂಪಂ.

"ದೇವದ್ವಿಜಗುರುಪ್ರಾಜ್ಞಪೂಜನಂ ಶೌಚಮಾರ್ಜವಂ ।
ಬ್ರಹ್ಮಚರ್ಯಮಹಿಂಸಾ ಚ ಶಾರೀರಂ ತಪ ಉಚ್ಯತೇ ॥"

ಪರದೇವತೆ, ಬ್ರಾಹ್ಮಣರು, ಆಚಾರ್ಯನು, ಪ್ರಾಜ್ಞರು ಇವರನ್ನು ಯಥಾಶಕ್ತಿಯಾಗಿ ಪೂಜಿಸುವಿಕೆ, ತೀರ್ಥಸ್ನಾನಾದಿಗಳಿಂದ ಶುದ್ಧಿಯನ್ನು ಸಂಪಾದಿಸಿಕೊಳ್ಳುವಿಕೆ, ಮನಸ್ಸನ್ನು ವಂಚಿಸದೆ ಶರೀರವನ್ನು ನಡಸುವಿಕೆ, ವನಿತೆಯರಲ್ಲಿ

ಭೋಗ್ಯತಾಬುದ್ಧಿಯಿಂದ ದರ್ಶನಸ್ಪರ್ಶನಾದಿಗಳನ್ನು ಮಾಡದಿರುವಿಕೆ, ಯಾವ ಪ್ರಾಣಿಗೂ ಹಿಂಸೆಯನ್ನು ಕೊಡದಿರುವಿಕೆ ಇವುಗಳು ಶಾರೀರಗಳಾದ ತಪಸ್ಸು ಗಳೆನಿಸಿಕೊಳ್ಳುವುವು.

## ೧೧೦೪ ವಾಚಿಕತಪಸ್ಸ್ವರೂಪಂ

" ಅನುದ್ವೇಗಕರಂ ವಾಕ್ಯಂ ಸತ್ಯಂ ಪ್ರಿಯಹಿತಂ ಚ ಯತ್ ।
ಸ್ವಾಧ್ಯಾಯಾಭ್ಯಸನಂ ಚೈವ ವಾಙ್ಮಯಂ ತಪ ಉಚ್ಯತೇ ॥ "

ತಾನು ಆಡುವ ಎಂಥ ಮಾತಿನಿಂದ ಇತರರಿಗೆ ದುಃಖವಾಗಲಿ ಭಯವಾಗಲಿ ಉಂಟಾಗುವುದಿಲ್ಲವೋ ಅಂಥ ಮಾತನ್ನೇ ಆಡುವಿಕೆ ವಾಗಿಂದ್ರಿಯಸಾಧ್ಯವಾದ ತಪಸ್ಸೆನಿಸಿಕೊಳ್ಳುವುದು; ಎಂದರೆ ಇತರರ ಮರ್ಮವನ್ನು ಉದ್ಘಾಟನೆಮಾಡು ವಂಥ ಮಾತನ್ನಾಗಲಿ ಪರದೂಷಣೆಯ ಮಾತನ್ನಾಗಲಿ ತಾನು ಆಡದಿರುವಿಕೆ ವಾಙ್ಮಯವಾದ ತಪಸ್ಸೆನಿಸಿಕೊಳ್ಳುವುದು. ಮತ್ತು ಅಂಥ ಮಾತು ಸತ್ಯ ವಾಗಿಯೇ ಇರಬೇಕು. ಮತ್ತು ಅದು ಸ್ವಾಗತವೊದಲಾದ ಅಭಿನಂದನಗಳಿಂದ ಪ್ರಿಯರೂಪವಾಗಿಯೂ ಪ್ರಾಣಿಗಳ ಶ್ರೇಯಸ್ಸಿಗಾಗಿಯೇ ಪರ್ಯವಸಿತವಾಗುವು ದಾಗಿಯೂ ಇರಬೇಕು. ಇಂಥ ವಾಕ್ಯವು ವಾಙ್ಮಯತಪಸ್ಸೆನಿಸಿಕೊಳ್ಳುವುದು. ಮತ್ತು ಐಹಿಕಾಮುಷ್ಮಿಕರೂಪವಾದ ಸಕಲಶ್ರೇಯಸ್ಸಿಗೂ ಸಾಧಕವಾಗಿರುವ ವೇದಾಭ್ಯಾಸವೂ ತ್ರೈವರ್ಣಿಕರಿಗೆ ವಾಙ್ಮಯತಪಸ್ಸಾಗಿರುವುದು.

## ೧೧೦೫ ಮಾನಸತಪಸ್ಸ್ವರೂಪಂ.

" ಮನಃಪ್ರಸಾದಸ್ಸೌಮ್ಯತ್ವಂ ಮೌನಮಾತ್ಮವಿನಿಗ್ರಹಃ ।
ಭಾವಸಂಶುದ್ಧಿರಿತ್ಯೇತತ್ತಪೋ ಮಾನಸಮುಚ್ಯತೇ ॥ "

ಮನಸ್ಸಿನಲ್ಲಿ ಇತರರಿಗೆ ಅಹಿತವನ್ನು ಚಿಂತಿಸದಿರುವಿಕೆ, ಹಿತವನ್ನು ಚಿಂತಿಸು ವಿಕೆ, ವಾಗಿಂದ್ರಿಯದ ಅತಿಪ್ರವೃತ್ತಿಯನ್ನು ಮನಸ್ಸಿನಿಂದ ತಡೆವಿಕೆ, ಧ್ಯೇಯ ವಸ್ತುವಿನಲ್ಲಿಯೇ ಮನೋವೃತ್ತಿಯನ್ನು ನೆಲೆಗೊಳಿಸುವಿಕೆ, ಮತ್ತು ಆತ್ಮಸ್ವರೂಪ ವ್ಯತಿರಿಕ್ತವಿಷಯದಲ್ಲಿ ಚಿಂತೆಯನ್ನು ಬಿಟ್ಟಿರುವಿಕೆ ಇವುಗಳು ಮಾನಸವಾದ ತಪಸ್ಸುಗಳೆನಿಸಿಕೊಳ್ಳುವುವು. ಹೀಗೆ ಉಕ್ತವಾದ ಮೂರುಬಗೆಯ ತಪಸ್ಸಿ ನಲ್ಲಿಯೂ ಕ್ರಮವಾಗಿ ಶರೀರ, ವಾಕ್ಕು, ಮನಸ್ಸು ಇವುಗಳೇ ಒಂದೊಂದರಲ್ಲಿ ಒಂದೊಂದು ಪ್ರಧಾನವಾಗಿರುವುದೆಂದು ತೋರಿಸುವುದಕ್ಕಾಗಿಯೇ ಶಾರೀರ, ವಾಚಿಕ, ಮಾನಸ ಎಂದು ತಪಸ್ಸನ್ನು ಮೂರುಬಗೆಯಾಗಿ ವಿಭಾಗಿಸಿರುವುದು.

## ೧೦೦೩. ತ್ರಿವಿಧಸ್ಯಾಪಿ ತಪಸಃ ಪುನಃ ಸಾತ್ತ್ವಿಕಾದಿಭೇದೇನ ತ್ರೈವಿಧ್ಯಪ್ರಪಂಚನಂ.

"ಶ್ರದ್ಧಯಾ ಪರಯಾ ತಪ್ತಂ ತಪಸ್ತತ್ತ್ರಿವಿಧಂ ನರೈಃ ।
ಅಫಲಾಕಾಂಕ್ಷಿಭಿರ್ಯುಕ್ತೈಸ್ಸಾತ್ತ್ವಿಕಂ ಪರಿಚಕ್ಷತೇ ॥"

ಚೇತನರು—ಫಲಾಪೇಕ್ಷೆಯಿಲ್ಲದವರಾಗಿ ಪೂರ್ವೋಕ್ತವಾದ ತ್ರಿವಿಧತಪಸ್ಸನ್ನೂ ಪರಮಪುರುಷನ ಆರಾಧನರೂಪವೆಂದು ತಿಳಿದು ಅತ್ಯಂತಶ್ರದ್ಧಾಪೂರ್ವಕವಾಗಿ ವಾಙ್ಮನಶ್ಶರೀರಗಳಿಂದ ಆಚರಿಸುವರಾದರೆ—ಅಂಥ ತಪಸ್ಸು ಸಾತ್ತ್ವಿಕತಪಸ್ಸೆನಿಸಿಕೊಳ್ಳುವುದೆಂದು ಜ್ಞಾನಿಗಳು ಹೇಳುತ್ತಾರೆ.

"ಸತ್ಕಾರಮಾನಪೂಜಾರ್ಥಂ ತಪೋ ದಂಭೇನ ಚೈವ ಯತ್ ।
ಕ್ರಿಯತೇ ತದಿಹ ಪ್ರೋಕ್ತಂ ರಾಜಸಂ ಚಲಮಧ್ರುವಂ ॥"

ತನ್ನ ವಿಷಯದಲ್ಲಿ ಮತ್ತೊಬ್ಬರು ಮನಸ್ಸಿನಿಂದ ಮಾಡುವ ಆದರವು ಸತ್ಕಾರವೆನಿಸಿಕೊಳ್ಳುವುದು. ವಾಕ್ಕಿನಿಂದ ಪ್ರಶಂಸೆಮಾಡುವಿಕೆ ಮಾನವೆನಿಸಿಕೊಳ್ಳುವುದು. ಶರೀರದಿಂದ ಮಾಡುವ ಪ್ರದಕ್ಷಿಣಪ್ರಣಾಮಾದಿಗಳು ಪೂಜೆಯೆನಿಸಿಕೊಳ್ಳುವುವು.

ಚೇತನರು—ಫಲಾಪೇಕ್ಷೆಯೊಡನೆ ಕೂಡಿದವರಾಗಿ ಪೂರ್ವೋಕ್ತವಾದ ತ್ರಿವಿಧತಪಸ್ಸನ್ನೂ ಸತ್ಕಾರಮಾನಪೂಜೆಗಳಿಗೋಸ್ಕರ ಡಂಭದಿಂದ ನಡಸುವವರಾದರೆ ಅಂಥ ತಪಸ್ಸು ರಾಜಸವಾದ ತಪಸ್ಸಾಗುವುದು. ಇದು ಅನಿತ್ಯವಾದ ಸ್ವರ್ಗಾದಿಫಲವನ್ನು ಕೊಡುವುದಾಗಿಯೂ, ಪತನಭೀತಿಯಿಂದ ಚಾಂಚಲ್ಯಕ್ಕೆ ಹೇತುವಾಗಿಯೂ ಇರುವುದು.

"ಮೂಢಗ್ರಾಹೇಣಾತ್ಮನೋ ಯತ್ಪೀಡಯಾ ಕ್ರಿಯತೇ ತಪಃ ।
ಪರಸ್ಯೋತ್ಸಾದನಾರ್ಥಂ ವಾ ತತ್ತಾಮಸಮುದಾಹೃತಂ ॥"

ಅವಿವೇಕಿಗಳಾದವರು—ಹಠವನ್ನು ಹಿಡಿದು ಆಗ್ರಹಪೂರ್ವಕವಾಗಿ ತಮ್ಮ ಶಕ್ತಿ ಅಶಕ್ತಿಗಳನ್ನೂ ವಿಚಾರಿಸದೆ ತಮ್ಮ ಶರೀರಕ್ಕೂ ಪೀಡೆಯನ್ನುಂಟುಮಾಡಿಕೊಂಡು ಯಾವ ತಪಸ್ಸನ್ನು ಆಚರಿಸುವರೋ ಅದು ತಾಮಸವಾದ ತಪಸ್ಸಾಗುವುದು. ಮತ್ತು ಇತರರನ್ನು ನಾಶಪಡಿಸುವುದಕ್ಕಾಗಿಯೇ ಆಚರಿಸಲ್ಪಡುವ ತಪಸ್ಸೂ ತಾಮಸವಾಗುವುದು.

## ೧೦೦೪ ದಾನಸ್ಯಾಪಿ ಸಾತ್ತ್ವಿಕಾದಿಭೇದೇನ ತ್ರೈವಿಧ್ಯಪ್ರಪಂಚನಂ

"ದಾತವ್ಯಮಿತಿ ಯದ್ದಾನಂ ದೀಯತೇಽನುಪಕಾರಿಣೇ ।
ದೇಶೇ ಕಾಲೇ ಚ ಪಾತ್ರೇ ಚ ತದ್ದಾನಂ ಸಾತ್ತ್ವಿಕಂ ಸ್ಮೃತಂ ॥"

ದೃಷ್ಟಾದೃಷ್ಟರೂಪವಾದ ಯಾವ ಫಲವನ್ನೂ ಅಪೇಕ್ಷಿಸದೆ,—ಪುಣ್ಯದೇಶಗಳಲ್ಲಿ, ಪುಣ್ಯಕಾಲಗಳಲ್ಲಿ, ಯಾವುದೊಂದು ಪ್ರತ್ಯುಪಕಾರವನ್ನೂ ಮಾಡಲಾರದ ಸತ್ಪಾತ್ರಕ್ಕೆ, ಸ್ವಯಂಪ್ರಯೋಜನವಾಗಿ ಯಾವ ದಾನವು ನಡಸಲ್ಪಡುವುದೋ ಅದು ಸಾತ್ತ್ವಿಕದಾನವಾಗುವುದು.

" ಯತ್ತು ಪ್ರತ್ಯುಪಕಾರಾರ್ಥಂ ಫಲಮುದ್ದಿಶ್ಯ ವಾ ಪುನಃ ।
ದೀಯತೇ ಚ ಪರಿಕ್ಲಿಷ್ಟಂ ತದ್ರಾಜಸಮುದಾಹೃತಂ ॥ "

ಪ್ರತ್ಯುಪಕಾರವನ್ನು ಬಯಸುತ್ತ, ಮತ್ತು ಫಲವನ್ನಪೇಕ್ಷಿಸುತ್ತ ಬಹು ಕ್ಲೇಶದೊಡನೆ ನಿಸ್ಸಾರವಸ್ತುಗಳನ್ನು ದಾನಮಾಡುವಿಕೆ ರಾಜಸದಾನವೆನಿಸಿಕೊಳ್ಳುವುದು. ಪದಾರ್ಥಗಳ ವಿಷಯದಲ್ಲಿ ತಮಗೆ ಇರುವ ಮಮತೆಯಿಂದ ಒಳ್ಳೆಯ ಪದಾರ್ಥಗಳನ್ನು ತಮ್ಮ ಭಾಗಕ್ಕೆ ಇಟ್ಟುಕೊಂಡು ಕಳಿವೆಯಾದ ಪದಾರ್ಥಗಳನ್ನು ಇತರರಿಗೆ ತ್ಯಾಗಮಾಡುವುದು ಲೋಕದಲ್ಲಿ ಕೆಲವರಿಗೆ ವಾಡಿಕೆಯಾಗಿರುವುದಷ್ಟೆ ?

" ಅದೇಶಕಾಲೇ ಯದ್ದಾನಮಪಾತ್ರೇಭ್ಯಶ್ಚ ದೀಯತೇ ।
ಅಸತ್ಕೃತಮವಜ್ಞಾತಂ ತತ್ತಾಮಸಮುದಾಹೃತಂ ॥ "

ಕಳಿಂಗ—ಕೀಕಟ ಮೊದಲಾದ ಅಪುಣ್ಯಪ್ರದೇಶದಲ್ಲಿ ರಾತ್ರಿ ಮೊದಲಾದ ಅಕಾಲದಲ್ಲಿ ಪಙ್ಕ್ತಿದೂಷಕರು-ಮೂರ್ಖರು-ಚೋರರು-ದ್ಯೂತಗಾರರು-ವಂದಿಗಳು ಗಾಯಕರು ಮೊದಲಾದ ಅಪಾತ್ರಗಳಲ್ಲಿ ಗೌರವರಹಿತವಾಗಿಯೂ ತಿರಸ್ಕಾರಪೂರ್ವಕವಾಗಿಯೂ ನಡಸಲ್ಪಡುವ ದಾನವು ತಾಮಸದಾನವೆನಿಸಿಕೊಳ್ಳುವುದು

## ೧೦೨೮. ಉಕ್ತಾನಾಂ ಸತ್ತ್ವಾದಿಗುಣಾನಾಂ ಸಾಂಖ್ಯೋಕ್ತದ್ರವ್ಯತ್ವನಿರಾಕರಣಪೂರ್ವಕಮದ್ರವ್ಯತ್ವಸಮರ್ಥನಂ.

ಹೀಗೆ ಇದುವರೆಗೂ ಹೇಳಿದುದರಲ್ಲಿ—ಸತ್ತ್ವಾದಿಗುಣಗಳ ಸ್ವರೂಪವೂ, ಅವುಗಳ ಕಾರ್ಯವಿಶೇಷ, ಗತಿವಿಶೇಷ, ಕರ್ಮವಿಶೇಷ, ಆಹಾರವಿಶೇಷ, ಯಜ್ಞವಿಶೇಷ, ತಪೋವಿಶೇಷ, ದಾನವಿಶೇಷ ಇವುಗಳ ಸ್ವರೂಪವೂ ಶಿಷ್ಯರ ತಿಳಿವಳಿಕೆಗೆ ಬಂದಿರುವುವು. ಈಗ ಈ ಗುಣಗಳಿಗೆ ಅದ್ರವ್ಯತ್ವವು ಹೇಗೆ ಕೂಡುವುದೆಂಬುದನ್ನು ಕುರಿತು ಸ್ವಲ್ಪಮಟ್ಟಿಗೆ ವಿವೇಚನೆ ಮಾಡುವೆವು.

ಇಲ್ಲಿ ಸಾಂಖ್ಯದರ್ಶನಕಾರರು ಹೇಳುವುದೇನೆಂದರೆ—ಪ್ರತ್ಯಕ್ಷದಲ್ಲಿ ಕಾಣಬರುತ್ತಿರುವ ಸಮಸ್ತಪ್ರಪಂಚವೂ ಸುಖ-ದುಃಖ-ಮೋಹರೂಪವಾಗಿರುವುದರಿಂದ ಇದಕ್ಕೆ ಕಾರಣವೂ ಇಂಥದೇ ಆಗಿರಬೇಕು; ಅತೀಂದ್ರಿಯಗಳಾಗಿಯೂ, ಕಾರ್ಯಸ್ವಭಾವದಿಂದಲೇ ನಿರೂಪಿಸಲ್ಪಡತಕ್ಕವುಗಳಾಗಿಯೂ, ಹೆಚ್ಚುಕಡಮೆಯಿಲ್ಲದೆ

ಸಾಮ್ಯಾವಸ್ಥೆಯನ್ನು ಹೊಂದಿರುವ್ರವುಗಳಾಗಿಯೂ, ಸುಖದುಃಖಮೋಹರೂಪಗಳಾಗಿಯೂ, ಇರುವ ಸತ್ತ್ವರಜಸ್ತಮಸ್ಸುಗಳೆಂಬ ದ್ರವ್ಯಗಳು ಮೂಲಪ್ರಕೃತಿಯೆಂಬ ಹೆಸರನ್ನು ಪಡೆದು; ಸುಖದುಃಖಮೋಹರೂಪವಾದ ಪ್ರಪಂಚಕ್ಕೆ ಕಾರಣವಾಗುವುವು.

ಕಾರ್ಯಭೂತವಾದ ಘಟಾದಿಪದಾರ್ಥದಲ್ಲಿ ಅನ್ವಿತ್ಯವಾಗಿರುವ ಮೃದ್ದ್ರವ್ಯವೇ ಅಂಥ ಘಟಾದಿಪದಾರ್ಥಕ್ಕೆ ಕಾರಣವಾಗಿರುವುದೆಂಬುದು ಲೋಕಪ್ರಸಿದ್ಧವಾಗಿರುವುದು; ಅದರಂತೆ ಕಾರ್ಯಭೂತವಾದ ಪ್ರಪಂಚದಲ್ಲಿ ಸತ್ತ್ವರಜಸ್ತಮೋಮಯಗಳಾದ ಸುಖದುಃಖಮೋಹಗಳು ಅನ್ವಿತಗಳಾಗಿರುವುದರಿಂದ ಸತ್ತ್ವರಜಸ್ತಮಸ್ಸುಗಳೇ ಉಪಾದಾನಕಾರಣಗಳಾಗಬೇಕು. ಅದ್ರವ್ಯಗಳಿಗೆ ಉಪಾದಾನಕಾರಣತ್ವವು ಕೂಡುವುದಿಲ್ಲವಾದುದರಿಂದ ಸತ್ತ್ವರಜಸ್ತಮಸ್ಸುಗಳಿಗೆ ದ್ರವ್ಯತ್ವವೂ ಸಿದ್ಧವಾಗುವುದು—ಎಂದು ಸಾಂಖ್ಯರು ಹೇಳುವರು.

ಇಂಥ ಸಾಂಖ್ಯಮತವನ್ನು ವೇದಾಂತಸೂತ್ರಕಾರರು ದ್ವಿತೀಯಾಧ್ಯಾಯದ ದ್ವಿತೀಯಪಾದದ "ರಚನಾನುಪಪತ್ತೇಶ್ಚ ನಾನುಮಾನಂ ಪ್ರವೃತ್ತೇಶ್ಚ", ಎಂಬ ಪ್ರಥಮಸೂತ್ರದಲ್ಲಿ ನಿರಾಕರಿಸಿರುವರು. ಸೂತ್ರದ ಅಭಿಪ್ರಾಯವೇನೆಂದರೆ— ಅನುಮಾನಶಬ್ದವಾಚ್ಯವಾದ ಸತ್ತ್ವರಜಸ್ತಮಸ್ಸಾಮ್ಯಾವಸ್ಥೆಯೆಂಬ ಪ್ರಕೃತಿದ್ರವ್ಯವು ಜಗತ್ಕಾರಣವಾಗಲಾರದು; ಏತಕ್ಕೆಂದರೆ--ಅದು ಅಚೇತನವಾಗಿಯೂ ಚೇತನನಿಂದ ಪ್ರೇರಿಸಲ್ಪಡದುದಾಗಿಯೂ ಇರುವುದು. ಅಚೇತನವಾದ ಕಟ್ಟಿಗೆ ಚೇತನನಿಂದ ಪ್ರೇರಿಸಲ್ಪಡದಿರುವಾಗ ರಥಾದ್ಯಾಕಾರವಾಗಿ ತಾನೇ ಪರಿಣಮಿಸಲಾರದಲ್ಲವೆ? ಆದಕಾರಣ ಚೇತನನಿಂದ ಆಕ್ರಮಿಸಲ್ಪಡದ ಪ್ರಕೃತಿಗೆ ವಿಚಿತ್ರವಾದ ಜಗತ್ತಿನ ರಚನೆಯನ್ನು ಮಾಡಲು ಸಾಮರ್ಥ್ಯವಿಲ್ಲವಾದುದರಿಂದಲೂ, ಚಲನರೂಪವಾದ ಪ್ರವೃತ್ತಿಯೂ ಸಹ ಕೂಡುವುದಿಲ್ಲವಾದುದರಿಂದಲೂ ಇದು ಜಗತ್ಕಾರಣವಾಗಲಾರದು.

ಕಾರ್ಯಭೂತವಾದ ಪ್ರಪಂಚದಲ್ಲಿ ಸತ್ತ್ವಾದಿಗಳು ಅನ್ವಿತಗಳಾಗಿರುವುದರಿಂದ ಅವುಗಳೇ ಕಾರಣಗಳಾಗುವುವೆಂದು ಹೇಳಿದುದೂ ಸಂಗತವಲ್ಲ. ತಂತುವಿನಲ್ಲಿರುವ ಶೌಕ್ಲ್ಯವು ಪಟದಲ್ಲಿ ಅನ್ವಿತವಾಗಿದ್ದರೂ ಪಟಕ್ಕೆ ಅದು ಕಾರಣವಲ್ಲವಷ್ಟೆ?

ಅದೇತಕ್ಕೆ? ಶೌಕ್ಲ್ಯವು ದ್ರವ್ಯವಲ್ಲವಾದುದರಿಂದ ಕಾರಣವಾಗದೆ ಹೋಗಬಹುದು; ಸತ್ತ್ವಾದಿಗಳಾದರೆ ಹಾಗಲ್ಲದೆ ದ್ರವ್ಯಗಳಾಗಿರುವುದರಿಂದ ಇವುಗಳಿಗೆ ಕಾರಣತ್ವವು ಸಂಭವಿಸಬಹುದಲ್ಲವೆ?

ಇಲ್ಲ—ಸತ್ತ್ವಾದಿಗಳು ದ್ರವ್ಯಗತವಾದ ಧರ್ಮವೆನಿಸಿಕೊಳ್ಳುವುವಲ್ಲದೆ ದ್ರವ್ಯ ಸ್ವರೂಪಗಳಲ್ಲ. ಪೃಥಿವ್ಯಾದಿಪದಾರ್ಥಗಳಲ್ಲಿ ಲಾಘವ-ಪ್ರಕಾಶ ಮುಂತಾದ ವಿಶೇಷಗಳುಂಟಾಗುವುದಕ್ಕೆ ಹೇತುಗಳಾಗಿರುವ ಸತ್ತ್ವಾದಿಗಳು ಪೃಥಿವ್ಯಾದಿಸ್ವಭಾವ ವಿಶೇಷಗಳೇ ಆಗಿರುವುವಲ್ಲದೆ ಪೃಥಿವ್ಯಾದಿಗಳೇ ಅಲ್ಲ.

ಮತ್ತು—"ಗುಣಾಸ್ಸತ್ತ್ವಂ ರಜಸ್ತಮಃ" ಎಂದು ಸತ್ತ್ವರಜಸ್ತಮಸ್ಸುಗಳಿಗೆ ಗುಣಶಬ್ದದಿಂದಲೇ ಪ್ರಸಿದ್ಧವ್ಯವಹಾರವಿರುವುದಲ್ಲದೆ ದ್ರವ್ಯಶಬ್ದದಿಂದ ವ್ಯವಹಾರವಿಲ್ಲ. ಆದಕಾರಣ ಸತ್ತ್ವರಜಸ್ತಮಸ್ಸುಗಳು ಅದ್ರವ್ಯಗಳೇ ಆಗಿರುವುವಲ್ಲದೆ ದ್ರವ್ಯಗಳಲ್ಲ.

**ಇಂತು ತತ್ತ್ವಶುದ್ಧಿಯೆಂಬ ವಿಶಿಷ್ಟಾದ್ವೈತಪ್ರಕರಣಗ್ರಂಥದೊಳ್ ಅದ್ರವ್ಯಪರಿಚ್ಛೇದದಲ್ಲಿ ಸತ್ತ್ವರಜಸ್ತಮೋಗುಣ ನಿರೂಪಣಪ್ರಕರಣಂ ಪ್ರಥಮಂ ॥೧॥**



# ದ್ವಿತೀಯಪ್ರಕರಣಂ.

## ೧೧೦೯. ಅಥ ಶಬ್ದಲಕ್ಷಣಂ.

ಅಸ್ಮದಾದಿಗಳ ಶ್ರೋತ್ರೇಂದ್ರಿಯದಿಂದ ಗ್ರಹಿಸಲ್ಪಡುವ ಅದ್ರವ್ಯವು ಶಬ್ದವೆನಿಸಿಕೊಳ್ಳುವುದು. ನಿತ್ಯಮುಕ್ತೇಶ್ವರರಿಗೆ ಇಂದ್ರಿಯಾಪೇಕ್ಷೆಯೇ ಇಲ್ಲದೆ ಧರ್ಮಭೂತಜ್ಞಾನದಿಂದ ಸಕಲವಿಷಯಗಳ ಗ್ರಹಣವೂ ಉಂಟಾಗುವುದು; ಒಂದು ವೇಳೆ ಇಂದ್ರಿಯಾಪೇಕ್ಷೆಯಿದ್ದರೂ, ಎಲ್ಲಾ ಇಂದ್ರಿಯಗಳಿಂದಲೂ ಎಲ್ಲಾ ವಿಷಯಗಳನ್ನೂ ಅವರು ಗ್ರಹಿಸಬಹುದು; ಶಬ್ದಗ್ರಹಣಕ್ಕೆ ಶ್ರೋತ್ರೇಂದ್ರಿಯವೇ ಬೇಕೆಂಬ ನಿಯಮವು ಅವರಿಗಿಲ್ಲ. ಆದಕಾರಣ ಅವರಿಂದ ಗ್ರಹಿಸಲ್ಪಡುತ್ತಿರುವ ಶಬ್ದದಲ್ಲಿ ಅವ್ಯಾಪ್ತಿದೋಷವನ್ನು ಪರಿಹರಿಸುವುದಕ್ಕಾಗಿ ಲಕ್ಷಣವಾಕ್ಯದಲ್ಲಿ "ಅಸ್ಮದಾದಿಗಳ" ಎಂಬ ಪದವು ಸೇರಿಸಲ್ಪಟ್ಟಿರುವುದು. ಅವರಂತೆ ನಮಗೆ ಜ್ಞಾನವಿಕಾಸವಿಲ್ಲವಾದಕಾರಣ ಶಬ್ದಗ್ರಹಣಕಾಲದಲ್ಲಿ ನಮಗೆ ಶ್ರೋತ್ರೇಂದ್ರಿಯವೇ ಬೇಕಾಗಿರುವುದರಿಂದ ಅವ್ಯಾಪ್ತಿದೋಷವಿಲ್ಲ.

ಶಬ್ದವನ್ನು ಗ್ರಹಿಸುವುದಕ್ಕೆ ಹೊರಟಿರುವ ನಮ್ಮ ಶ್ರೋತ್ರೇಂದ್ರಿಯವು ಆಗ ಶಬ್ದವನ್ನು ಮಾತ್ರವೇ ಗ್ರಹಿಸುವುದಿಲ್ಲ; ಶಬ್ದಾಧಿಕರಣವಾದ ಕಾಲವಿಶೇಷ

ಪನ್ನೂ, ಶಬ್ದವುಂಟಾದ ಪ್ರದೇಶವಿಶೇಷವನ್ನೂ, ಶಬ್ದಾಶ್ರಯವಾದ ಆ ಆ ಪದಾರ್ಥವಿಶೇಷವನ್ನೂ ಗ್ರಹಿಸುವುದು ; ಅಂಥ ಕಾಲವಿಶೇಷವೂ, ಪ್ರದೇಶವಿಶೇಷವೂ, ಪದಾರ್ಥವಿಶೇಷವೂ ದ್ರವ್ಯವಾದುದರಿಂದ ಅಸ್ಮದಾದಿಗಳ ಶ್ರೋತ್ರಗ್ರಾಹ್ಯವಾದ ಅಂಥ ದ್ರವ್ಯಗಳಲ್ಲಿ ಶಬ್ದಲಕ್ಷಣಕ್ಕೆ ಅತಿವ್ಯಾಪ್ತಿಯುಂಟಾಗುವುದು ; ಅದನ್ನು ಪರಿಹರಿಸುವುದಕ್ಕಾಗಿ ಅದ್ರವ್ಯಪದವು ಲಕ್ಷಣದಲ್ಲಿ ಸೇರಿಸಲ್ಪಟ್ಟಿರುವುದು.

## ೧೦೧೦. ಶಬ್ದಸ್ಯ ಪಂಚಭೂತವರ್ತಿತ್ವಸಮರ್ಥನಂ.

ಇಂಥ ಶಬ್ದವು ಆಕಾಶಮಾತ್ರದಲ್ಲಿರುವ ಗುಣವಿಶೇಷವೆಂದು ಕೆಲವರು ದಾರ್ಶನಿಕರು ಅಭಿಪ್ರಾಯಪಡುವರು ; ಆದರೆ ವೇದಾಂತಿಗಳು ಅದನ್ನು ಒಪ್ಪುವುದಿಲ್ಲ; ಶಬ್ದವು ಪಂಚಭೂತಗಳಲ್ಲಿಯೂ ಇರುವ ಗುಣವಿಶೇಷವೆಂದೇ ವೇದಾಂತಿಗಳ ಸಿದ್ಧಾಂತವು. ಈ ವಿಷಯದಲ್ಲಿ ಪ್ರತ್ಯಕ್ಷವೂ ಆಗಮವೂ (ಶಾಸ್ತ್ರವೂ) ಪ್ರಮಾಣವಾಗಿರುವುವು ; ಹೇಗೆಂದರೆ—

ಆಕಾಶವು ಶಬ್ದಕ್ಕೆ ಆಶ್ರಯವಾಗಿರುವುದೆಂಬುದರಲ್ಲಿ ಯಾರೂ ವಿವಾದಪಡುವುದಿಲ್ಲ ; ಮನೆಯೊಳಗೆ ಕುಳಿತಿರುವವನಿಗೆ ಹೊರಗೆ ಗಾಳಿ ಬೀಸುತ್ತಿರುವಾಗ ಅದರ ಶಬ್ದವಿಶೇಷವನ್ನು ಕೇಳಿದಮೇಲೆ "ಹೊರಗೆ ಗಾಳಿ ಬೀಸುತ್ತದೆ" ಎಂಬ ಜ್ಞಾನವುಂಟಾಗಿ "ಇದು ಗಾಳಿಯ ಶಬ್ದವು" ಎಂದು ಪ್ರತ್ಯಕ್ಷನಿಶ್ಚಯವುಂಟಾಗುವುದು, ಅಬಾಧಿತವಾದ ಇಂಥ ಪ್ರತ್ಯಕ್ಷದಿಂದ ವಾಯು ಶಬ್ದಕ್ಕೆ ಆಶ್ರಯವಾಗಿರುವುದೆಂಬುದು ಸಿದ್ಧವಾಗುವುದು; ಪ್ರಬಲವಾಗಿ ಅಗ್ನಿ ಉರಿಯುತ್ತಿರುವಾಗ "ಛಟ ಛಟ" ಎಂಬ ಶಬ್ದವನ್ನು ಕೇಳಿದವರಿಗೆ "ಇದು ಬೆಂಕಿ ಉರಿಯುವ ಶಬ್ದವಾಗಿರುವುದು" ಎಂಬ ಪ್ರತ್ಯಕ್ಷವುಂಟಾಗುವುದು ; ಇದರಿಂದ ಅಗ್ನಿ ಶಬ್ದಕ್ಕೆ ಆಶ್ರಯವಾಗಿರುವುದೆಂದು ಸಿದ್ಧವಾಗುವುದು ; "ಇದು ಸಮುದ್ರಘೋಷವು, ಇದು ಹೊಳೆ ಹರಿಯುವ ಶಬ್ದವು, ಇದು ನೀರು ಬೀಳುವ ಶಬ್ದವು" ಎಂಬುವೇ ಮೊದಲಾದ ಪ್ರತ್ಯಕ್ಷಜ್ಞಾನಗಳಿಂದ ಜಲವು ಶಬ್ದಕ್ಕೆ ಆಶ್ರಯವಾಗಿರುವುದೆಂದು ಸಿದ್ಧವಾಗುವುದು; "ಶಂಖವು ಕೂಗುತ್ತದೆ, ಭೇರಿ ಭೋರ್ಗರೆಯುತ್ತದೆ, ವೀಣೆ ಧ್ವನಿಗೈಯುತ್ತದೆ, ಕತ್ತೆ ಕಿರಚುತ್ತದೆ, ನಾಯಿ ಬೊಗುಳುತ್ತದೆ, ಮನುಷ್ಯನು ಕೂಗುತ್ತಾನೆ" ಎಂಬುವೇ ಮೊದಲಾದ ಪ್ರತ್ಯಕ್ಷಗಳಿಂದ ಪೃಥಿವಿ ಶಬ್ದಕ್ಕೆ ಆಶ್ರಯವಾಗಿರುವುದೆಂದು ಸಿದ್ಧವಾಗುವುದು—

ಮತ್ತು—ಸೃಷ್ಟಿಕ್ರಮನಿರೂಪಣಪ್ರಕರಣದಲ್ಲಿ ಆಕಾಶ, ವಾಯು, ಅಗ್ನಿ, ಜಲ, ಪೃಥಿವಿ, ಎಂಬ ಕ್ರಮದಿಂದ ಪಂಚಭೂತಗಳ ಉತ್ಪತ್ತಿಯನ್ನು ಉಪದೇಶಿಸಿ—

"ಆದ್ಯಾದ್ಯಸ್ಯ ಗುಣಂ ತ್ವೇಷಾಮವಾಪ್ನೋತಿ ಪರಃ ಪರಃ ।
ಯೋ ಯೋ ಯಾವತಿಥಶ್ಚೈಷಾಂ ಸ ಸ ತಾವದ್ಗುಣಃ ಸ್ಮೃತಃ ॥"

ಎಂಬ ಮನುವಚನವೇ ಮೊದಲಾದ ಆಗಮಗಳಿಂದ ಪಂಚಭೂತಗಳೂ ಶಬ್ದಕ್ಕೆ ಆಶ್ರಯಗಳಾಗಿರುವುವೆಂದು ಸ್ಪಷ್ಟವಾಗಿ ಉಪದೇಶಿಸಲ್ಪಟ್ಟಿರುವುದು. "ಈ ಪಂಚ ಭೂತಗಳೊಳಗೆ ಯಾವ ಭೂತವು ಎಷ್ಟನೆಯ ಭೂತವಾಗಿ ಇಲ್ಲಿ ಪರಿಗಣಿಸಲ್ಪಟ್ಟಿರುವುದೋ; ಆ ಭೂತವು ಅಷ್ಟುಗುಣವುಳ್ಳುದಾಗಿರುವುದು" ಎಂದಲ್ಲವೆ ಉದಾಹೃತ ವಚನದ ಅರ್ಥವಿರುವುದು; ಇದರಿಂದ ಆಕಾಶದಲ್ಲಿ ಶಬ್ದವೆಂಬ ಒಂದೇ ಗುಣವೂ, ವಾಯುವಿನಲ್ಲಿ ಶಬ್ದಸ್ಪರ್ಶಗಳೆಂಬ ಎರಡು ಗುಣಗಳೂ, ತೇಜಸ್ಸಿನಲ್ಲಿ ಶಬ್ದಸ್ಪರ್ಶ ರೂಪಗಳೆಂಬ ಮೂರು ಗುಣಗಳೂ, ಜಲದಲ್ಲಿ ಶಬ್ದಸ್ಪರ್ಶರೂಪರಸಗಳೆಂಬ ನಾಲ್ಕು ಗುಣಗಳೂ, ಪೃಥಿವಿಯಲ್ಲಿ ಶಬ್ದಸ್ಪರ್ಶರೂಪರಸಗಂಧಗಳೆಂಬ ಐದು ಗುಣಗಳೂ ಇರುವುವೆಂದು ಸಿದ್ಧವಾಗುವುದು.

ಓಹೋ! ಪಂಚಭೂತಗಳಲ್ಲಿಯೂ ಶಬ್ದವೆಂಬ ಗುಣವು ಇರುವುದಾದರೆ "ಶಬ್ದಗುಣಃ" ಎಂಬ ಪದವು ಪಂಚಭೂತಗಳಿಗೂ ಸಲ್ಲಬಹುದಾಗಿರುವಲ್ಲಿ "ತಾರಾಪಥಃ ಶಬ್ದಗುಣಃ" ಎಂದು ಆಕಾಶಪರ್ಯಾಯಶಬ್ದಗಳ ಮಧ್ಯದಲ್ಲಿಯೇ ಈ ಪದವನ್ನು ಕೋಶಕಾರರು ಪಠಿಸಿರುವುದು ಹೇಗೆ ಸಂಗತವಾದೀತು? ಹೀಗೆ ಸಂಗತವಾದೀತು—ಶಬ್ದವೆಂಬ ಗುಣವು ಇತರಭೂತಗಳಲ್ಲಿ ಇಲ್ಲವೆಂದೂ, ಆಕಾಶವೊಂದರಲ್ಲಿಯೇ ಇರುವುದೆಂದೂ ಕೋಶಕಾರರ ಅಭಿಪ್ರಾಯವಲ್ಲ; ಎಂದರೆ "ಶಬ್ದಗುಣಃ" ಎಂಬ ಈ ಪದವು ಇತರಭೂತಗಳಲ್ಲಿ ಶಬ್ದವೆಂಬ ಗುಣವನ್ನು ಪ್ರತಿಷೇಧಿಸುವುದಿಲ್ಲ; ಕಿಂತು ಆಕಾಶದಲ್ಲಿ ಶಬ್ದೇತರಗುಣಗಳನ್ನು ಪ್ರತಿಷೇಧಿಸುವುದು. ಆಕಾಶದಲ್ಲಿ ಶಬ್ದವೆಂಬ ಒಂದೇ ಗುಣವಿರುವುದಲ್ಲದೆ ಇತರಗುಣಗಳಿಲ್ಲವೆಂದು ಕೋಶಕಾರರ ಅಭಿಪ್ರಾಯವು. ಹೇಗೆಂದರೆ ಲೋಕದಲ್ಲಿ ನೀರನ್ನೂ ವಾಯುವನ್ನೂ ಸೇವಿಸದ ಪ್ರಾಣಿಯೇ ಇಲ್ಲ; ಎಲ್ಲರೂ ಜಲಭಕ್ಷರಾಗಿಯೇ ವಾಯುಭಕ್ಷರಾಗಿಯೇ ಇರುವರು; ಆದರೂ "ಅಬ್ಭಕ್ಷಃ ವಾಯುಭಕ್ಷಃ" ಎಂಬ ಪದಗಳನ್ನು ತಪಸ್ವಿಗಳಿಗೆ ಉಪಯೋಗಿಸುವ ವಾಡಿಕೆಯಿರುವುದು. ತಪಸ್ವಿಗಳು ಜಲಮಾತ್ರವನ್ನೇ ವಾಯುಮಾತ್ರವನ್ನೇ ಆಹಾರವಾಗಿ ಉಪಯೋಗಿಸಿಕೊಳ್ಳುತ್ತಿರುವರೆಂದು ಈ ಪದಗಳು ಬೋಧಿಸುತ್ತಿರುವುವೇ ಹೊರತು ಇತರ ಪ್ರಾಣಿಗಳು ಜಲವನ್ನೂ ವಾಯುವನ್ನೂ ಸೇವಿಸುವುದಿಲ್ಲವೆಂದು ಬೋಧಿಸುವುದಿಲ್ಲ. ಇದರಂತೆ "ಶಬ್ದಗುಣಃ" ಎಂಬ ಪದವನ್ನೂ ಆಕಾಶಪರ್ಯಾಯವಾಗಿ ಪ್ರಯೋಗಿಸಿದುದು ಅಸಂಗತವಲ್ಲ. ಹೀಗೆ ಪ್ರತ್ಯಕ್ಷದಿಂದಲೂ, ಆಗಮದಿಂದಲೂ ಶಬ್ದಕ್ಕೆ

ಪಂಚಭೂತವರ್ತಿತ್ವವು ಸಿದ್ಧವಾಗಿರುವಾಗ ಇದನ್ನು ಅಪಲಪಿಸಲು ಯಾರಿಗೂ ಶಕ್ಯವಲ್ಲ.

## ೧೧೧೧. ಶಬ್ದಸ್ಯಾವಾಂತರವಿಭಾಗಕಥನಪೂರ್ವಕಂ ವರ್ಣಾತ್ಮಕಶಬ್ದಲಕ್ಷಣಂ.

ಇಂಥ ಶಬ್ದವು ವರ್ಣಾತ್ಮಕವೆಂದೂ ಧ್ವನ್ಯಾತ್ಮಕವೆಂದೂ ಎರಡು ಬಗೆಯಾಗಿರುವುದು. ಲೋಕಪ್ರಸಿದ್ಧವಾಗಿರುವ ವರ್ಣಮಾಲೆಯಲ್ಲಿ ಅಕಾರಮೊದಲು ಕ್ಷಕಾರದವರೆಗೂ ಇರುವ ಐವತ್ತೊಂದು ಅಕ್ಷರಗಳೂ ವರ್ಣಾತ್ಮಕಶಬ್ದಗಳೆನಿಸಿಕೊಳ್ಳುವುವು. ಈ ವರ್ಣಾತ್ಮಕಶಬ್ದಕ್ಕೆ ಒಂದು ಸಾಮಾನ್ಯಲಕ್ಷಣವನ್ನು ಪರಿಷ್ಕರಿಸಿ ಹೇಳಬೇಕು ; ಅದೆಂತೆಂದರೆ—ಅತ್ವ, ಆತ್ವ, ಇತ್ವ, ಈತ್ವ ಈ ರೀತಿಯಾಗಿರುವ ಐವತ್ತೊಂದು ಧರ್ಮಗಳು ಐವತ್ತೊಂದು ವರ್ಣಗಳಲ್ಲಿ ಒಂದೊಂದರಲ್ಲಿ ಒಂದೊಂದರಂತೆ ಇರುವುವು ; ಈ ಧರ್ಮಗಳೇ ಆ ಆ ವರ್ಣಗಳೆಂಬ ವಿಶೇಷ್ಯಗಳಿಗೆ ಪ್ರಕಾರಗಳೆನಿಸಿಕೊಳ್ಳುವುವು. (ವಿಶೇಷಣಗಳೆನಿಸಿಕೊಳ್ಳುವುವು.) ಪ್ರತಿಯೊಂದು ವರ್ಣದಲ್ಲಿಯೂ ತನ್ನ ತನ್ನ ವಿಶೇಷಣವಿರುವಂತೆ ಸ್ವೇತರವಾದ ಐವತ್ತು ವರ್ಣಗಳಲ್ಲಿರುವ ಐವತ್ತು ಧರ್ಮಗಳ ಅಭಾವಗಳೂ ಇರುವುವು. ಇಲ್ಲಿ ಅತ್ವ, ಆತ್ವ ಮೊದಲಾದ ಧರ್ಮಗಳು ಐವತ್ತೊಂದಾದುದರಿಂದ ಇವುಗಳ ಅಭಾವಗಳೂ ಐವತ್ತೊಂದಾಗುವುವು. ಈ ಐವತ್ತೊಂದು ಅಭಾವಗಳೂ ಯಾವುದರಲ್ಲಿ ಸಂಪೂರ್ಣವಾಗಿ (ಒಂದೂ ಕಡಮೆಯಾಗದೆ) ಇರುವುವೋ ; ಅದು ವರ್ಣಾತ್ಮಕಶಬ್ದವಲ್ಲವೆನಿಸಿಕೊಳ್ಳಬಹುದು ; ಆದರೆ ವರ್ಣಮಾಲೆಯಲ್ಲಿರುವ ವರ್ಣಗಳೊಳಗೆ ಪ್ರತಿಯೊಂದರಲ್ಲಿಯೂ ಒಂದೊಂದು ಧರ್ಮವಿದ್ದೇ ಇರುವುದರಿಂದ ಐವತ್ತು ಧರ್ಮಗಳ ಐವತ್ತು ಅಭಾವಗಳೇ ಬರುವುವಲ್ಲದೆ ಐವತ್ತೊಂದು ಅಭಾವಗಳೂ ಸೇರಿ ಯಾವುದೊಂದರಲ್ಲಿಯೂ ಬರಲಿಲ್ಲವಾದಪ್ರಯುಕ್ತ ಇವುಗಳು ವರ್ಣಾತ್ಮಕಶಬ್ದಗಳಲ್ಲವೆನಿಸಿಕೊಳ್ಳುವುದಕ್ಕಿಲ್ಲದೆ ವರ್ಣಾತ್ಮಕಶಬ್ದಗಳೆಂದೇ ಹೇಳಿಸಿಕೊಳ್ಳುವುವು. ಇದರಿಂದ "ಅತ್ವ, ಆತ್ವ ಮೊದಲಾದ ಐವತ್ತೊಂದು ಧರ್ಮಗಳ ಐವತ್ತೊಂದು ಅಭಾವಗಳ ಸಮುದಾಯದಿಂದ ಯಾವುದು ಶೂನ್ಯವಾಗಿರುವುದೋ ಅದು ವರ್ಣಾತ್ಮಕಶಬ್ದವೆನಿಸಿಕೊಳ್ಳುವುದು" ಎಂದು ನಿಷ್ಕೃಷ್ಟವಾದ ಲಕ್ಷಣವು ಫಲಿತವಾಯಿತು.

## ೧೧೧೨ ವರ್ಣಾತ್ಮಕಶಬ್ದಸ್ಯ ದೇವಮನುಷ್ಯತಾಲ್ವಾದ್ಯಭಿವ್ಯಂಗ್ಯತ್ವಂ

ಇಂಥ ವರ್ಣದ ಉಚ್ಚಾರಣೆಗೆ ಸಾಧನವಾದ ವಾಗಿಂದ್ರಿಯವು ಸಕಲ ಪ್ರಾಣಿಗಳಿಗೂ ಇದ್ದರೂ—ಗಿಣಿ, ಮೈನಾ ಮುಂತಾದ ಕೆಲವು ಪ್ರಾಣಿಗಳನ್ನು

ಬಿಟ್ಟು ಉಳಿದ ಪಶು, ಪಕ್ಷಿ, ಮೃಗ, ಜಲಚರಮುಂತಾದ ಸಮಸ್ತತಿರ್ಯಗ್ಜಾತಿಗಳಿಗೂ ಉಚ್ಚಾರಣೆಗೆ ಅಸುಕೂಲವಾದ ಅವಯವಗಳ ಸಹಾಯವೂ, ಅದೃಷ್ಟ ಸಹಾಯವೂ ಇಲ್ಲವಾದುದರಿಂದ ವರ್ಣೋಚ್ಚಾರಣಶಕ್ತಿಯಿಲ್ಲ; ಗಿಣಿ, ಮೈನಾ, ಮುಂತಾದುವುಗಳಿಗೂ ಸ್ವಲ್ಪಮಟ್ಟಿಗೆ ಅದೃಷ್ಟವ್ಯತ್ಯಾಸವೂ, ತಾಲುಮೊದಲಾದ ಅವಯವಗಳ ವ್ಯತ್ಯಾಸವೂ ಇರುವುದರಿಂದ ಅವುಗಳಿಗೂ ಸ್ಫುಟೋಚ್ಚಾರಣಕ್ಕೆ ಅಸುಕೂಲ್ಯವಿಲ್ಲದೆ ಉಚ್ಚಾರಣೆಯಲ್ಲಿ ತಾರತಮ್ಯವಿಡುವುದು; ಆದುದರಿಂದ ಉಕ್ತಲಕ್ಷಣೋಪೇತವಾದ ಈ ವರ್ಣಾತ್ಮಕಶಬ್ದವು ಪಶುಮೊದಲಾದ ತಿರ್ಯಗ್ಜಾತೀಯ ಪ್ರಾಣಿಗಳ ತಾಲ್ವಾದ್ಯವಯವಗಳಿಂದ ಅಭಿವ್ಯಕ್ತವಾಗುವುದಿಲ್ಲ; ಸ್ಥಾವರಜಾತಿಯಲ್ಲಿರುವ ಜೀವರಾಶಿಗಂತೂ ಉಚ್ಚಾರಣಪ್ರಸಕ್ತಿಯೇ ಇಲ್ಲ; ಆದಕಾರಣ ಈ ಬ್ರಹ್ಮಾಂಡಕ್ಕೆ ಒಳಪಟ್ಟಿರುವ ಹದಿನಾಲ್ಕು ಲೋಕಗಳಲ್ಲಿ ಅಡಗಿರುವ ದೇವ, ಮನುಷ್ಯ, ತಿರ್ಯಕ್, ಸ್ಥಾವರ ಎಂಬ ನಾಲ್ಕು ಜಾತಿಗಳೊಳಗೆ ಎರಡು ಜಾತಿಗೆ ವರ್ಣೋಚ್ಚಾರಣಸಾಮರ್ಥ್ಯವಿಲ್ಲವೆಂದು ಸಿದ್ಧವಾದಪ್ರಯುಕ್ತ ಉಳಿದ ದೇವ, ಮನುಷ್ಯ ಎಬ ಎರಡು ಜಾತಿಯ ಪ್ರಾಣಿಗಳ ತಾಲ್ವಾದಿಪ್ರದೇಶಗಳಿಂದಲೇ ಈ ವರ್ಣಾತ್ಮಕಶಬ್ದವು ಅಭಿವ್ಯಕ್ತವಾಗುವುದೆಂದು ಸಿದ್ಧವಾಯಿತು. ಈ ಮನುಷ್ಯರಲ್ಲಿಯೂ ಕೆಲವರಿಗೆ ಸ್ಫುಟೋಚ್ಚಾರಣೆಯಾಗುವುದಿಲ್ಲವೆಂಬುದಕ್ಕೆ ತಾಲ್ವಾದ್ಯವಯವಗಳಿಲ್ಲವೆಂಬುದು ಕಾರಣವಲ್ಲ; ಅವರವರ ಅದೃಷ್ಟವ್ಯತ್ಯಾಸವೇ ಕಾರಣವಾಗಿರುವುದು. ಆದುದರಿಂದಲೇ ಶಾಸ್ತ್ರದೃಷ್ಟಿಯಿಂದಲೂ ಪ್ರತ್ಯಕ್ಷದೃಷ್ಟಿಯಿಂದಲೂ ಪಶ್ವಾದಿತುಲ್ಯರೆಂದು ಹೇಳಿಸಿಕೊಳ್ಳಲು ಅರ್ಹರಾಗಿರುವ ಕೆಲವು ಮನುಷ್ಯರು ಪ್ರಕೃತಿಪ್ರತ್ಯಯಗಳ ವಿಭಾಗವೇ ಮೊದಲಾದ ಸಂಸ್ಕಾರಗಳಿಂದ ಕೂಡಿದ ಸಾಧು ಶಬ್ದಗಳ ಉಚ್ಚಾರಣಸೌಭಾಗ್ಯವನ್ನು ಪಡೆಯಲಾರದೆ ಇಹಲೋಕವ್ಯಾಪಾರಮಾತ್ರದ ನಿರ್ವಾಹಕ್ಕಾಗಿ ಕೆಲವು ಅಪಭ್ರಷ್ಟಶಬ್ದಗಳನ್ನು (ಅಸಾಧುಶಬ್ದಗಳನ್ನು) ಏರ್ಪಡಿಸಿಕೊಂಡು ಅಂಥ ಶಬ್ದಗಳನ್ನೇ ಉಚ್ಚರಿಸಬೇಕೆಂಬ ದೌರ್ಭಾಗ್ಯವನ್ನು ಪಡೆದು ಉದರಭರಣೋಪಯೋಗಿಗಳಾದ ಕೆಲಸಗಳನ್ನು ಮಾತ್ರ ನಡಸುವುದರಲ್ಲಿ ಧುರಂಧರರಾಗಿರುವರು. ಲೋಕದಲ್ಲಿ ಭಾಷಾಭೇದವು ಹುಟ್ಟುವುದಕ್ಕೂ ಇದೇ ಕಾರಣವಾಗಿರುವುದು; ಸಾಧುಶಬ್ದೋಚ್ಚಾರಣಸೌಭಾಗ್ಯವನ್ನು ಕಳಕೊಂಡು ಅಸಾಧುಶಬ್ದೋಚ್ಚಾರಣದೌರ್ಭಾಗ್ಯದಿಂದ ಆವರಿಸಲ್ಪಟ್ಟಿರುವ ಎರಡುಕಾಲಿನ ಪಶುಗಳಿಗೆ ಭಾಷಾಭೇದವನ್ನು ಏರ್ಪಡಿಸಿಕೊಂಡಹಲ್ಲದೆ ನಿರ್ವಾಹವಾಗುವುದಿಲ್ಲವಷ್ಟೆ?

## ೧೦೧೩. ವರ್ಣಾತ್ಮಕಶಬ್ದಸ್ಯೈವ ನಿತ್ಯತ್ವಾನಿತ್ಯತ್ವಾದಿವಿಚಾರ ವಿಷಯತ್ವಂ

"ಶಬ್ದವು ಪ್ರಮಾಣವೋ? ಅಪ್ರಮಾಣವೋ? ನಿತ್ಯವಾದುದೋ? ಅನಿತ್ಯವಾದುದೋ? ವಾಚಕವೋ? ಸ್ಫೋಟವ್ಯಂಗ್ಯವೋ? ಎಂಬುವೇಮೊದಲಾಗಿ ಪ್ರಾಚೀನಗ್ರಂಥಗಳಲ್ಲಿ ಗ್ರಂಥಕಾರರು ಮಾಡಿರುವ ವಿಚಾರಗಳೆಲ್ಲವೂ ಉಕ್ತಲಕ್ಷಣೋಪೇತವಾದ ಈ ವರ್ಣಾತ್ಮಕಶಬ್ದಕ್ಕೇ ಅನ್ವಯಿಸುವುವು; ಮತ್ತು ಶರೀರ ವಾಚಕಶಬ್ದಗಳೆಲ್ಲವೂ ಶರೀರಪರ್ಯಂತವಾದ ಸ್ವಾರ್ಥವನ್ನು ಬೋಧಿಸುವುದೆಂದು ನಾವು ಅಚಿತ್ತತ್ತ್ವಪರಿಚ್ಛೇದದಲ್ಲಿ ಹೇಳಿದ ವಿಚಾರವೂ ಈ ವರ್ಣಾತ್ಮಕಶಬ್ದಕ್ಕೇ ಅನ್ವಯಿಸುವುದು.

## ೧೦೧೪. ವರ್ಣಾತ್ಮಕಶಬ್ದಸ್ಯ ಏಕಪಂಚಾಶತ್ಪ್ರಕಾರತ್ವಂ, ಪಂಚಾಶತ್ಪ್ರಕಾರತ್ವಂ ವಾ.

ಇಂಥ ವರ್ಣಾತ್ಮಕಶಬ್ದವು ಹದಿನಾರು ಸ್ವರಾಕ್ಷರಗಳೆಂದೂ, ಮೂವತ್ತೈದು ವ್ಯಂಜನಾಕ್ಷರಗಳೆಂದೂ ವಿಭಾಗಿಸಲ್ಪಟ್ಟು ಐವತ್ತೊಂದು ವಿಧವಾಗಿ ಪರಿಗಣಿಸಲ್ಪಡುವುದು. ವ್ಯಂಜನಾಕ್ಷರಗಳೊಳಗೆ ಕಕಾರಮೊದಲು ಮಕಾರದ ವರೆಗೆ ಆಗುವ ಇಪ್ಪತ್ತೈದು ವರ್ಣಗಳು ವರ್ಗೀಯವ್ಯಂಜನಗಳಾಗಿಯೂ, ಯಕಾರಮೊದಲು ಕ್ಷಕಾರದವರೆಗೆ ಆಗುವ ಹತ್ತು ವರ್ಣಗಳು ಅವರ್ಗೀಯವ್ಯಂಜನಗಳಾಗಿಯೂ ವ್ಯವಹರಿಸಲ್ಪಡುವುವು. ಬಾಲಕರಿಗೆ ಪ್ರಥಮಶಿಕ್ಷೆಯಲ್ಲಿ ಮರಳಿನಮೇಲೆ ಅಭ್ಯಾಸಮಾಡಿಸುವ ವರ್ಣಮಾಲೆಯನ್ನು ಶಾಸ್ತ್ರಕಾರರು ಮಾತೃಕಾಪಾಠವೆಂದು ವ್ಯವಹರಿಸುವರು. ಇಂಥ ಮಾತೃಕಾಪಾಠದಲ್ಲಿ—ಲ-ಳ ಈ ಎರಡಕ್ಕೂ ಅಭೇದವನ್ನು ಅಂಗೀಕರಿಸಿ ಐವತ್ತೇ ವರ್ಣಗಳಿರುವುವೆಂದೂ ಲೆಕ್ಕಮಾಡುವ ವಾಡಿಕೆ ಕೆಲವು ಭಾಷೆಗಳಲ್ಲಿ ಉಂಟು.

## ೧೦೧೫. ವರ್ಣಸಂಖ್ಯಾನಿಯಮಾನುಪಪತ್ತ್ಯಾಶಂಕಾ ತತ್ಪರಿಹಾರಶ್ಚ

ಪೂಜ್ಯರೆ! ವರ್ಣಗಳು ಐವತ್ತೇ ಅಥವಾ ಐವತ್ತೊಂದೇ ಇರುವುವೆಂದು ಕ್ಲೃಪ್ತಪಡಿಸಲು ಹೇಗೆ ಸಾಧ್ಯವಾದೀತು? ಹದಿನಾರು ಸ್ವರಾಕ್ಷರಗಳನ್ನೂ ಮೂವತ್ತೈದು ವ್ಯಂಜನಗಳಲ್ಲಿಯೂ ಪ್ರತ್ಯೇಕವಾಗಿ ಸೇರಿಸಿದರೆ ಐನೂರ ಅರವತ್ತು ವರ್ಣಗಳಾಗುವುವು; ಮತ್ತು ವ್ಯಂಜನಗಳೊಳಗೆ ಪರಸ್ಪರಸಂಮೇಳನ

ದಿಂದ—"ಕ್ಯ-ಕ್ರ-ಕ್ಲ-ಕ್ಮ-ಪ್ನ" ಎಂಬುವೇ ಮೊದಲಾದ ಸಂಯುಕ್ತಾಕ್ಷರಗಳು ಅನಂತವಾಗಿ ಏರ್ಪಡುವುವು ; ಹೀಗಿರುವಲ್ಲಿ ವರ್ಣಸಂಖ್ಯಾನಿಯಮವನ್ನು ಹೇಗೆ ಹೇಳಲಾದೀತು ?

ಹೀಗೆ ಹೇಳಲಾದೀತು—ಪರಸ್ಪರಸಂಯೋಗದಿಂದ ಅನಂತವರ್ಣಭೇದಗಳು ಏರ್ಪಟ್ಟರೂ, ಪ್ರತ್ಯಭಿಜ್ಞಾಬಲದಿಂದ ವರ್ಣಮಾಲೆಯಲ್ಲಿ ಪಠಿತವಾದ ವರ್ಣಗಳಿಗಿಂತಲೂ ಇವು ಅತಿರಿಕ್ತಗಳಾಗಲಾರವಾದಪ್ರಯುಕ್ತ ವರ್ಣಸಂಖ್ಯಾನಿಯಮವನ್ನು ಹೇಳಲು ಅಡ್ಡಿಯಿಲ್ಲ.

ಉಕ್ತವಾದ ಹದಿನಾರು ಸ್ವರಗಳೊಳಗೆ ಅಕಾರ ಮೊದಲು, ಌಕಾರದವರೆಗೆ ಆಗುವ ಹತ್ತುಸ್ವರಗಳು ಶುದ್ಧಸ್ವರಗಳೆಂದೂ, "ಏ-ಐ-ಓ-ಔ" ಎಂಬ ನಾಲ್ಕು ಸ್ವರಗಳು ಸಂಧಿಸ್ವರಗಳೆಂದೂ, ಅಂ-ಅಃ ಎಂಬ ಸ್ವರಗಳೆರಡೂ ಯೋಗವಾಹಗಳೆಂದೂ, ವಿಭಾಗಿಸಲ್ಪಡುವುವು. ಈ ಸಂಧ್ಯಕ್ಷರಗಳೊಳಗೆ ಏ-ಓ ಎಂಬ ಎರಡು ಸ್ವರಗಳಿಗೂ ಇತರಸ್ವರಗಳಂತೆ ಹ್ರಸ್ವಾಕ್ಷರಗಳೂ ಉಂಟೆಂಬುದೇ ಪ್ರಾಜ್ಞರಿಗೆ ಅಭಿಮತವಾಗಿರುವುದು. ಆದುದರಿಂದಲೇ ಪ್ರಾಕೃತಭಾಷೆಯಲ್ಲಿ ಅವುಗಳ ಹ್ರಸ್ವಾಕ್ಷರಗಳನ್ನು ಪ್ರಯೋಗಿಸುವುದೂ ವಾಡಿಕೆಯಾಗಿರುವುದು ; ಹೇಗೆಂದರೆ— "**ಆಯಾಂತಿ ಕ್ಷೇತ್ರಾನಿಲಾಃ**" (ಗದ್ದೆಯ ಮೇಲಿನ ಗಾಳಿಗಳು ಬೀಸುತ್ತವೆ) ಎಂಬ ಅಭಿಪ್ರಾಯವನ್ನು ತೋರಿಸುವ ಸಂದರ್ಭದಲ್ಲಿ "**ಆಅಂತಿ ಖೆತ್ತಾಣಿಳಾ**" ಎಂದು ಏಕಾರಕ್ಕೆ ಎಕಾರವನ್ನು ಪ್ರಯೋಗಿಸುವರು; ಮತ್ತು—"**ತಥಾ ಸ್ನುಷಯಾ ಪ್ರಲೋಕಿತಃ**" (ಹಾಗೆ ಸೊಸೆಯಿಂದ ಅವಲೋಕಿಸಲ್ಪಟ್ಟನು) ಎಂಬ ಅಭಿಪ್ರಾಯವನ್ನು ತೋರಿಸುವ ಸಂದರ್ಭದಲ್ಲಿ—"**ತಹ ಸೊಣ್ಹಾ ಏ ಪಳೊಇ ಓ**' ಎಂದು ಓಕಾರಕ್ಕೆ ಒಕಾರವನ್ನು ಪ್ರಯೋಗಿಸಿರುವರು. ಮತ್ತು ತಮಿಳು, ತೆಲುಗು, ಕರ್ಣಾಟಕ ಮುಂತಾದ ಭಾಷೆಗಳಲ್ಲಿ—ಎ ಒ ಎಂಬ ಹ್ರಸ್ವಾಕ್ಷರಗಳನ್ನು ವರ್ಣಮಾಲೆಯಲ್ಲಿಯೇ ಸೇರಿಸಿರುವರು ; ಸಂಸ್ಕೃತಭಾಷೆಯಲ್ಲಾದರೆ ಈ ಎರಡು ಹ್ರಸ್ವಸ್ವರಗಳಿಗೆ ಅರ್ಥವಾಚಕತ್ವವಿಲ್ಲವಾದಪ್ರಯುಕ್ತ ವರ್ಣಮಾಲೆಯಿಂದ ಇದನ್ನು ಬಹಿಷ್ಕರಿಸಿರುವರು. ಆದಕಾರಣ ವರ್ಣಗಳು ಐವತ್ತು ಅಥವಾ ಐವತ್ತೊಂದು ಎಂಬುದಾಗಿ ವ್ಯವಸ್ಥೆಪಡಿಸಲು ಯಾವ ಅಭ್ಯಂತರವೂ ಇಲ್ಲ. ಇದೇ ವರ್ಣಗಳೊಳಗೆ ಕೆಲವಕ್ಕೆ ಅಲ್ಪಸ್ವಲ್ಪ ಭೇದವನ್ನು ಅಂಗೀಕರಿಸಿ ಅರವತ್ತುಮೂರು ವರ್ಣಗಳಿರುವುವೆಂದೂ ವೈಯಾಕರಣರಲ್ಲಿ ಕೆಲವರು ಅಭಿಪ್ರಾಯಪಡುವರು.

## ೧೦೧೬ ನಿತ್ಯವಿಭೂತೌ ವರ್ಣಮಾತೃಕಾಯಾಃ ಸಹಸ್ರಾಕ್ಷರಾತ್ಮಕತ್ವಪಕ್ಷಪ್ರದರ್ಶನಂ.

"ಸಹಸ್ರಾಕ್ಷರಾ ಪರಮೇ ವ್ಯೋಮನ್ನಿತಿ" ಎಂಬ ಶ್ರುತಿಯನ್ನು ವಿಮರ್ಶಿಸಿ ನೋಡಿದರೆ ಪರಮವ್ಯೋಮಶಬ್ದವಾಚ್ಯೆಯಾದ ನಿತ್ಯವಿಭೂತಿಯಲ್ಲಿ ಈ ವರ್ಣಮಾಲೆ ಸಾವಿರ ಅಕ್ಷರಗಳುಳ್ಳುದಾಗಿರುವುದೆಂದು ಅವಗತವಾಗುವುದು. ಆದರೆ ಆ ಸಾವಿರ ಅಕ್ಷರಗಳು ಯಾವುವೆಂಬುದನ್ನು ನಿರ್ಣಯಿಸಿ ತೋರಿಸುವುದಕ್ಕೆ ಶ್ರುತಿ, ಸ್ಮೃತಿ ಮೊದಲಾದ ಪ್ರಮಾಣಗಳಾವುವೂ ದೊರೆತಿಲ್ಲ. ಸರ್ವಜ್ಞರಾದ ಮಹರ್ಷಿಗಳೂ ಇದರ ನಿರ್ಣಯವನ್ನು ಹೇಳದಿರುವಾಗ ಅಸ್ಮದಾದಿಗಳಿಗೆ ಇದು ಹೇಗೆ ನಿರ್ಣಯಿಸಲಾದೀತು? ಮತ್ತು ಸಾಕ್ಷಾತ್ಸರ್ವಜ್ಞನಾದ ವೇದಪುರುಷನೂ "ಸಹಸ್ರಾಕ್ಷರಾ" ಎಂದು ಇಷ್ಟುಮಾತ್ರವನ್ನೇ ಹೇಳಿರುವನಲ್ಲದೆ ಅದರ ವಿವರವನ್ನು ಎಲ್ಲಿಯೂ ಹೇಳಲಿಲ್ಲ; ಹೀಗಿರುವಾಗ ಬದ್ಧಚೇತನಕೋಟಿಗೆ ಸೇರಿದ ನಮಗೆ ಈಗ ಅದರ ನಿರ್ಣಯವು ಶಕ್ಯವಲ್ಲ; ಆದರೆ ಇಷ್ಟುಮಾತ್ರವನ್ನು ಹೇಳಬಲ್ಲೆವು ಉಕ್ತವಾದ ಐವತ್ತೊಂದು ವರ್ಣಗಳಿಗಿಂತಲೂ ಅತಿರಿಕ್ತಗಳಾದ ಅಪ್ರಾಕೃತವರ್ಣಗಳು ಇರುವುವೆಂದು ಅಂಗೀಕರಿಸುವುದರಿಂದಲಾಗಲಿ, ಅಥವಾ ಅದೇ ಐವತ್ತೊಂದು ವರ್ಣಗಳಿಗೆ ಸಂದರ್ಭಾನುಸಾರವಾಗಿ ಸಂಯೋಜನವನ್ನು ಮಾಡಿರುವುದೆಂದು ಅಂಗೀಕರಿಸುವುದರಿಂದಲಾಗಲಿ ಸಹಸ್ರಾಕ್ಷರತ್ವ, ಅಯುತಾಕ್ಷರತ್ವ ಮೊದಲಾದ ಪ್ರಭೇದಗಳು ನಿತ್ಯವಿಭೂತಿಯಲ್ಲಿ ಉಪಪನ್ನಗಳಾಗಿರಬಹುದು.

## ೧೦೧೭ ಸಹಸ್ರಾಕ್ಷರತ್ವಶ್ರುತೇಃ ಮತಭೇದೇನ ಅರ್ಥಾಂತರಪರತ್ವಪ್ರದರ್ಶನಂ.

ಇನ್ನು ಕೆಲವರು ಈ ಶ್ರುತಿಯಲ್ಲಿರುವ ಪರಮವ್ಯೋಮಶಬ್ದಕ್ಕೆ ನಿತ್ಯವಿಭೂತಿಯೆಂಬ ಅರ್ಥವನ್ನು ಅಂಗೀಕರಿಸದೆ ಅರ್ಥಾಂತರವನ್ನು ಹೇಳುವರು. ಹೇಗೆಂದರೆ—

"ಆಧಾರಂ ತು ಚತುರ್ದಳಾರುಣಲಸದ್ವಾಸಾಂತವರ್ಣಾತ್ಮಕಂ
ಸ್ವಾಧಿಷ್ಠಾನಮನೇಕವೈದ್ಯುತನಿಭಂ ಬಾಲಾಂತಷಟ್ಪತ್ರಕಂ ।
ರತ್ನಾಭಂ ಮಣಿಪೂರಕಂ ದಶದಳಂ ಡಾದ್ಯಂ ಫಕಾರಾಂತಕಂ
ಪತ್ರೈರ್ದ್ವಾದಶಭಿಸ್ತ್ವನಾಹತಮಿದಂ ಹೈಮಂ ಕಠಾಂತಾವೃತಂ ॥
ಮಾತ್ರಾಭಿರ್ದಶಷೋಡಶಸ್ವರಯುತಂ ಜ್ಯೋತಿರ್ವಿಶುದ್ಧಾಂಬುಜಂ
ಹಕ್ಷೇತ್ಯಕ್ಷರಬೀಜಯುಗ್ಮದಳಯುಗ್ರಕ್ತಾಭಮಾಜ್ಞಾಂಬುಜಂ ।
ತಸ್ಮಾದೂರ್ಧ್ವಗತಂ ಪ್ರಭಾಸಿತಮಿದಂ ಪದ್ಮಂ ಸಹಸ್ರಚ್ಛದಂ
ನಿತ್ಯಾನಂದಪದಂ ಸದಾ ಹರಿಪದಂ ನಿತ್ಯಂ ನಮಸ್ಯೇ ತರಾಂ ॥"

ಎಂಬುದಾಗಿ ವರ್ಣಮಾಲಾಧ್ಯಾನಶ್ಲೋಕವು ಮಂತ್ರಶಾಸ್ತ್ರದಲ್ಲಿ ಪ್ರಸಿದ್ಧ ವಾಗಿರುವುದು. ಇದರ ಅಭಿಪ್ರಾಯವೇನೆಂದರೆ—ಮನುಷ್ಯನು ತನ್ನ ಶರೀರದಲ್ಲಿರುವ ಅವಯವಗಳೊಳಗೆ ಏಳು ಅವಯವವಿಶೇಷಗಳನ್ನು ಕಮಲಾಕಾರಗಳಾಗಿ ಭಾವಿಸಿ ಅವುಗಳಲ್ಲಿ ಮುಂದೆ ಹೇಳುವ ರೀತಿಯಾಗಿ ವರ್ಣಮಾಲೆಯ ಅಕ್ಷರಗಳನ್ನು ಧ್ಯಾನ ಮಾಡಬೇಕೆಂದು ಮಂತ್ರಶಾಸ್ತ್ರದ ನಿಯಮವುಂಟು; ಹೇಗೆಂದರೆ—

೧ ಗುದಸ್ಥಾನ, ೨ ಲಿಂಗಸ್ಥಾನ, ೩ ನಾಭಿಸ್ಥಾನ, ೪ ಹೃದಯಸ್ಥಾನ, ೫ ತಾಲುಸ್ಥಾನ, ೬ ಭ್ರೂಮಧ್ಯಸ್ಥಾನ, (ಹುಬ್ಬುಗಳ ಮಧ್ಯ) ೭ ಮಸ್ತಕಸ್ಥಾನ (ತಲೆ) ಈ ಏಳುಸ್ಥಾನಗಳೂ ಕ್ರಮವಾಗಿ—೧ ಆಧಾರಪದ್ಮ, ೨ ಸ್ವಾಧಿಷ್ಠಾನಪದ್ಮ, ೩ ಮಣಿಪೂರಕಪದ್ಮ, ೪ ಅನಾಹತಪದ್ಮ, ೫ ವಿಶುದ್ಧಪದ್ಮ, ೬ ಆಜ್ಞಾಪದ್ಮ, ೭ ದ್ವಾದಶಾಂತಪದ್ಮ ಎಂಬ ಏಳು ಹೆಸರುಗಳಿಂದ ವ್ಯವಹರಿಸಲ್ಪಡುವುವು. ಅವುಗಳೊಳಗೆ—

**೧ (ಆಧಾರಂ ತು ಚತುರ್ದಳಾರುಣಲಸದ್ವಾಸಾಂತವರ್ಣಾತ್ಮಕಂ)**

ಗುದಸ್ಥಾನವೆಂಬ ಆಧಾರಪದ್ಮವು ಕೆಂಪುಬಣ್ಣವುಳ್ಳುದಾಗಿ ವ-ಶ-ಷ-ಸ ಎಂಬ ನಾಲ್ಕು ವರ್ಣಗಳಿಂದ ಕೂಡಿದ ನಾಲ್ಕು ದಳಗಳುಳ್ಳುದಾದುದರಿಂದ ಚತುರ್ದಳಪದ್ಮವೆನಿಸಿಕೊಂಡು ಪ್ರಕಾಶಿಸುತ್ತಿರುವುದು.

**೨ (ಸ್ವಾಧಿಷ್ಠಾನಮನೇಕವೈದ್ಯುತನಿಭಂ ಬಾಲಾಂತಷಟ್ಪತ್ರಕಂ)**

ಲಿಂಗಸ್ಥಾನವೆಂಬ ಸ್ವಾಧಿಷ್ಠಾನಪದ್ಮವು ಸಾವಿರಾರು ಮಿಂಚುಗಳು ಒಟ್ಟಿಗೆ ಕೂಡಿದಂತೆ ಪ್ರಕಾಶಿಸುತ್ತ ಬ-ಭ-ಮ-ಯ-ರ-ಲ ಎಂಬ ಆರು ವರ್ಣಗಳಿಂದ ಕೂಡಿದ ಆರು ದಳಗಳುಳ್ಳುದಾದುದರಿಂದ ಷಡ್ದಳಪದ್ಮವೆನಿಸಿಕೊಂಡು ಪ್ರಕಾಶಿಸುತ್ತಿರುವುದು

**೩ (ರತ್ನಾಭಂ ಮಣಿಪೂರಕಂ ದಶದಳಂ ಡಾದ್ಯಂ ಫಕಾರಾಂತಕಂ)**

ನಾಭಿಸ್ಥಾನವೆಂಬ ಮಣಿಪೂರಕಪದ್ಮವು ರತ್ನದ ಕಾಂತಿಯಂತೆ ಕಾಂತಿಯುಳ್ಳುದಾಗಿ ಡ-ಢ-ಣ-ತ-ಥ-ದ-ಧ-ನ-ಪ-ಫ-ಎಂಬ ಹತ್ತು ವರ್ಣಗಳಿಂದ ಕೂಡಿದ ಹತ್ತು ದಳಗಳುಳ್ಳುದಾದುದರಿಂದ ದಶದಳಪದ್ಮವೆನಿಸಿಕೊಂಡು ಪ್ರಕಾಶಿಸುತ್ತಿರುವುದು.

**(೪ ಪತ್ರೈರ್ದ್ವಾದಶಭಿಸ್ತ್ವನಾಹತಮಿದಂ ಹೈಮಂ ಕಠಾಂತಾವೃತಂ)**

ಹೃದಯಸ್ಥಾನವೆಂಬ ಅನಾಹತಪದ್ಮವು ಸ್ವರ್ಣದ ಕಾಂತಿಯಂತೆ ಕಾಂತಿಯುಳ್ಳುದಾಗಿ ಕ-ಖ-ಗ-ಘ-ಙ-ಚ-ಛ-ಜ-ಝ-ಞ-ಟ-ಠ-ಎಂಬ ಹನ್ನೆರಡು ವರ್ಣಗಳಿಂದ

ಕೂಡಿದ ಹನ್ನೆರಡು ದಳಗಳುಳ್ಳುದಾದುದರಿಂದ ದ್ವಾದಶದಳಪದ್ಮವೆನಿಸಿಕೊಂಡು ಪ್ರಕಾಶಿಸುತ್ತಿರುವುದು.

೫ (ಮಾತ್ರಾಭಿರ್ದಶಷೋಡಶಸ್ವರಯುತಂ ಜ್ಯೋತಿರ್ವಿಶುದ್ಧಾಂಬುಜಂ)

ತಾಲುಸ್ಥಾನವೆಂಬ ವಿಶುದ್ಧಪದ್ಮವು ಜ್ಯೋತೀರೂಪವಾಗಿ ಅ-ಆ-ಇ-ಈ ಉ-ಊ-ಋ-ೠ-ಌ-ೡ-ಏ-ಐ-ಓ-ಔ-ಅಂ-ಅಃ ಎಂಬ ಹದಿನಾರು ವರ್ಣಗಳಿಂದ ಕೂಡಿದ ಹದಿನಾರು ದಳಗಳುಳ್ಳುದಾದುದರಿಂದ ಷೋಡಶದಳಪದ್ಮವೆನಿಸಿಕೊಂಡು ಪ್ರಕಾಶಿಸುತ್ತಿರುವುದು.

೬ (ಹಕ್ಷೇತ್ಯಕ್ಷರಬೀಜಯುಗ್ಮದಳಯುಗ್ರಕ್ತಾಭಮಾಜ್ಞಾಂಬುಜಂ)

ಭ್ರೂಮಧ್ಯಸ್ಥಾನವೆಂಬ ಆಜ್ಞಾಪದ್ಮವು ರಕ್ತವರ್ಣವಾಗಿ ಹ-ಕ್ಷ ಎಂಬ ಎರಡು ಬೀಜಾಕ್ಷರಗಳಿಂದ ಕೂಡಿದ ಎರಡು ದಳಗಳುಳ್ಳುದಾದುದರಿಂದ ದ್ವಿದಳ ಪದ್ಮವೆನಿಸಿಕೊಂಡು ಪ್ರಕಾಶಿಸುತ್ತಿರುವುದು. ಹೀಗೆ ಉಕ್ತವಾದ ಆರುಸ್ಥಾನಗಳಲ್ಲಿ ವರ್ಣಮಾಲಾಂತರ್ಗತವಾದ ಐವತ್ತುವರ್ಣಗಳು ಮುಗಿದುವು.

೭ (ತಸ್ಮಾದೂರ್ಧ್ವಗತಂ ಪ್ರಭಾಸಿತಮಿದಂ ಪದ್ಮಂ ಸಹಸ್ರಚ್ಛದಂ ನಿತ್ಯಾನಂದಪದಂ ಸದಾ ಹರಿಪದಂ ನಿತ್ಯಂ ನಮಸ್ಯೇತರಾಂ)

ಮಸ್ತಕಸ್ಥಾನವೆಂಬ ದ್ವಾದಶಾಂತಪದ್ಮವು ಪೂರ್ವೋಕ್ತವಾದ ಆಜ್ಞಾ ಪದ್ಮಕ್ಕಿಂತಲೂ ಮೇಲುಭಾಗದಲ್ಲಿ ಮಿಗಿಲಾದ ಕಾಂತಿಯೊಡನೆ ಕೂಡಿದುದಾಗಿ ಸಹಸ್ರಾಕ್ಷರಮಂತ್ರವಿಶೇಷದಿಂದ ಕೂಡಿದ ಸಾವಿರದಳಗಳುಳ್ಳುದಾದುದರಿಂದ ಸಹಸ್ರದಳಪದ್ಮವೆನಿಸಿಕೊಂಡು ಪ್ರಕಾಶಿಸುತ್ತಿರುವುದು. ಹೀಗೆ ಉಕ್ತರೀತಿಯಲ್ಲಿ ಅವಯವವಿಶೇಷಗಳನ್ನು ಪದ್ಮಾಕಾರವಾಗಿ ಧ್ಯಾನಮಾಡುವವರಿಗೆ ಧ್ಯಾನಾಲಂಬನ ವಾದ ಈ ಪದ್ಮಗಳು ಶಾಶ್ವತವಾದ ಆನಂದಪ್ರಾಪ್ತಿಗೆ ಸ್ಥಾನಗಳಾಗಿರುವುವು; ಅದಕ್ಕೆ ಕಾರಣವೇನೆಂದರೆ ಇವು ಆನಂದಸ್ವರೂಪನಾದ ಹರಿಗೆ ಸರ್ವದಾ ನಿವಾಸ ಸ್ಥಾನಗಳಾಗಿರುವುವು. ಇಂಥ ಪದ್ಮಗಳನ್ನು ಪುನಃ ಪುನಃ ನಾನು ನಮಸ್ಕರಿಸು ತ್ತೇನೆ; ಭಜಿಸುತ್ತೇನೆ; ಧ್ಯಾನಿಸುತ್ತೇನೆ; ಎಂಬುದು ಶ್ಲೋಕಗಳ ಅಭಿಪ್ರಾಯ ವಾಗಿರುವುದು.

"ಇಲ್ಲಿ ಆಧಾರಪದ್ಮವೊದಲುಗೊಂಡು ಆಜ್ಞಾಪದ್ಮದವರೆಗೂ ಆಗುವ ಆರು ಪದ್ಮಗಳೊಡನೆ ಸಹಪಠಿತವಾಗಿರುವ ದ್ವಾದಶಾಂತಪದ್ಮವು ಸಹಸ್ರಾಕ್ಷರ ಮಂತ್ರಯುಕ್ತವಾಗಿರುವುದೆಂದು ಹೇಳಿರುವಕಾರಣ "**ಸಹಸ್ರಾಕ್ಷರಾ ಪರಮೇ ವ್ಯೋಮನ್ನಿತಿ**" ಎಂಬ ಶ್ರುತಿಯಲ್ಲಿರುವ ಪರಮವ್ಯೋಮಶಬ್ದವು ದ್ವಾದಶಾಂತ

ಪದ್ಮವನ್ನೇ ಬೋಧಿಸಿ ಅದರಲ್ಲಿ ಸಹಸ್ರಾಕ್ಷರತ್ವವನ್ನು ತೋರಿಸುತ್ತದೆಯೇ ಹೊರತು ನಿತ್ಯವಿಭೂತಿಯಲ್ಲಿ ಸಹಸ್ರಾಕ್ಷರಸದ್ಭಾವವನ್ನು ಬೋಧಿಸುವುದಿಲ್ಲ'' ಎಂದು ಕೆಲವರು ಹೇಳುವರು. ಆದಕಾರಣ ವರ್ಣಮಾಲೆಯಲ್ಲಿ ಐವತ್ತು ಅಥವಾ ಐವತ್ತೊಂದು ವರ್ಣಗಳೇ ಇರುವುವೆಂದು ನಾವು ವ್ಯವಸ್ಥೆಪಡಿಸಿದುದರಲ್ಲಿ ಯಾವ ಅನುಪಪತ್ತಿಯೂ ಇಲ್ಲ.

## ೧೦೧೮. ಅಥ ಧ್ವನ್ಯಾತ್ಮಕಶಬ್ದಲಕ್ಷಣಂ.

ಹೀಗೆ ವರ್ಣಾತ್ಮಕಶಬ್ದದ ಲಕ್ಷಣ, ಸ್ವರೂಪ ಮುಂತಾದುವುಗಳನ್ನು ವಿಚಾರಿಸಲಾಯಿತು; ಇನ್ನು ಧ್ವನ್ಯಾತ್ಮಕ ಶಬ್ದದ ಕಡೆಗೆ ದೃಷ್ಟಿಯನ್ನು ನೀಡೋಣ; ಅತ್ವ, ಆತ್ವ ಮೊದಲಾದ ಐವತ್ತೊಂದು ಧರ್ಮಗಳ ಅಭಾವಸಮುದಾಯವು ಸಮಗ್ರವಾಗಿ ಯಾವ ಶಬ್ದದಲ್ಲಿ ಇರುವುದೋ ಅಂಥ ಶಬ್ದವು ಧ್ವನ್ಯಾತ್ಮಕಶಬ್ದವೆನಿಸಿಕೊಳ್ಳುವುದು. ತಿರ್ಯಗ್ಜಾತೀಯಪ್ರಾಣಿಗಳ ಕಂಠದಿಂದಲೂ, ವಾದ್ಯಗಳಿಂದಲೂ, ಮೇಘದಿಂದಲೂ, ವಾಯುವೇಗದಿಂದಲೂ, ಕಟ್ಟಿಗೆ ಮುಂತಾದುವನ್ನು ಸೀಳುವ ಕಾಲದಲ್ಲಿ ಉಂಟಾಗುವ ಅವಯವವಿಭಾಗದಿಂದಲೂ, ಅಭಿವ್ಯಕ್ತವಾಗುವ ಈ ಧ್ವನ್ಯಾತ್ಮಕಶಬ್ದದಲ್ಲಿ ಅತ್ವ-ಆತ್ವ-ಮೊದಲಾದ ಐವತ್ತೊಂದು ಧರ್ಮಗಳೊಳಗೆ ಯಾವುದೊಂದು ಧರ್ಮವೂ ಇಲ್ಲವಾದುದರಿಂದ ಲಕ್ಷಣಕ್ಕೆ ಸಮನ್ವಯವನ್ನು ತಿಳಿಯಬಹುದು. ಉಕ್ತವಾದ ಅಭಿವ್ಯಂಜಕಗಳಿಂದ ಅಭಿವ್ಯಕ್ತವಾಗುವ ಈ ಧ್ವನ್ಯಾತ್ಮಕಶಬ್ದವು ಯಾವುದೊಂದು ವರ್ಣರೂಪವಾಗಿಯೂ ಆಗಲಾರದಷ್ಟೆ?

## ೧೦೧೯ ಮೀಮಾಂಸಕಮತರೀತ್ಯಾ ಶಬ್ದಸ್ಯ ಶ್ರೋತ್ರೇಣ ಸಹ ನಿತ್ಯಸಂಬದ್ಧತ್ವೋಪಪಾದನಂ.

ಇಂಥ ಎರಡುಬಗೆಯಾದ ಶಬ್ದದ ವಿಷಯದಲ್ಲಿಯೂ ದಾರ್ಶನಿಕರಿಗೆ ಕೆಲವು ವಿವಾದಗಳಿರುವುವು; ಅದರಲ್ಲಿ—

**ಮೀಮಾಂಸಕರು ಹೇಳುವುದೇನೆಂದರೆ**—ಧ್ವನ್ಯಾತ್ಮಕಶಬ್ದಕ್ಕೆ ಅನಿತ್ಯತ್ವವನ್ನು ಒಪ್ಪಿಕೊಂಡು, ವರ್ಣಾತ್ಮಕಶಬ್ದಕ್ಕೆ ದ್ರವ್ಯತ್ವವನ್ನೂ, ನಿತ್ಯತ್ವವನ್ನೂ, ಏಕತ್ವವನ್ನೂ, ವಿಭುತ್ವವನ್ನೂ (ವ್ಯಾಪಕತ್ವವನ್ನೂ) ಇವರು ಒಪ್ಪುವರು; ಆದುದರಿಂದಲೇ ವ್ಯಾಪಕವಾದ ಶಬ್ದಸ್ವರೂಪವು ಕಿವಿಯ ಒಳಭಾಗದಲ್ಲಿರುವ ಶ್ರೋತ್ರೇಂದ್ರಿಯಪ್ರದೇಶದಲ್ಲಿಯೂ ಸರ್ವದಾ ಇದ್ದೇ ಇರುವುದಾದಪ್ರಯುಕ್ತ ತಾಲ್ವಾದಿವ್ಯಾಪಾರಗಳು ಕಿವಿಯ ಒಳಗಿರುವ ಶಬ್ದವನ್ನೇ ಅಭಿವ್ಯಕ್ತಪಡಿಸುವುವೆಂದೂ, ಶ್ರೋತ್ರೇಂದ್ರಿಯವೂ ಅಂಥ ಶಬ್ದವನ್ನೇ ಗ್ರಹಿಸುವುದೆಂದೂ ಅವರಿಗೆ

ಅಭಿಮತವಾಗಿರುವುದು. ಇವರ ಪಕ್ಷದಲ್ಲಿ ಶಬ್ದಕ್ಕೆ ದೂರಸ್ಥತ್ವವೆಂಬುದೇ ಇಲ್ಲ ವಾದುದರಿಂದ ದೂರಸ್ಥಶಬ್ದಗ್ರಹಣಕ್ಕಾಗಿ ಶ್ರೋತ್ರೇಂದ್ರಿಯವು ಹೊರಗೆ ಹೊರ ಡಬೇಕೆಂಬ ನಿರ್ಬಂಧವೇ ಇಲ್ಲ; ಅಭಿವ್ಯಂಜಕಗಳಾದ ತಾಲ್ವಾದಿವ್ಯಾಪಾರ ಗಳುಂಟಾದ ಕಾಲದಲ್ಲಿ ಸನ್ನಿಹಿತವಾದ ಶಬ್ದವನ್ನೇ ಈ ಶ್ರೋತ್ರೇಂದ್ರಿಯವು ಗ್ರಹಿ ಸಬಹುದು. ಧ್ವನ್ಯಾತ್ಮಕಶಬ್ದವು ಅನಿತ್ಯವಾಗಿಯೂ, ಅವ್ಯಾಪಕವಾಗಿಯೂ ಇದ್ದರೂ ಇದು ಭೇರಿ ಮೊದಲಾದುವುಗಳಿಂದ ಉತ್ಪನ್ನವಾದ ಕಾಲದಲ್ಲಿ ವಾಯು ವೇಗದಿಂದ ಸೆಳೆಯಲ್ಪಟ್ಟು ಶ್ರೋತ್ರಪ್ರದೇಶಕ್ಕೆ ಬರುವುದಾದುದರಿಂದ ಅಂಥ ಧ್ವನಿ ಯನ್ನು ಶ್ರೋತ್ರೇಂದ್ರಿಯವು ಗ್ರಹಿಸಲು ಅಡ್ಡಿಯೇನೂ ಇಲ್ಲವಾದಪ್ರಯುಕ್ತ ಇದಕ್ಕಾಗಿಯೂ ಶ್ರೋತ್ರೇಂದ್ರಿಯವು ಹೊರಗೆ ಹೊರಡಬೇಕಾದುದಿಲ್ಲ.

ಹಾಗಾದರೆ—"ಧ್ವನ್ಯಾತ್ಮಕಶಬ್ದದ ನ್ಯಾಯವನ್ನೇ ವರ್ಣಾತ್ಮಕಶಬ್ದಕ್ಕೂ ಏತಕ್ಕೆ ಒಪ್ಪಬಾರದು? ಅದೂ ಸಹ ಅನಿತ್ಯವಾಗಿಯೂ ಅವ್ಯಾಪಕವಾಗಿಯೂ ಇರಲಿ; ತಾಲ್ವಾದಿವ್ಯಾಪಾರಗಳುಂಟಾದ ಕಾಲದಲ್ಲಿ ವಾಯುವೇಗದಿಂದ ಸೆಳೆಯ ಲ್ಪಟ್ಟು ಶ್ರೋತ್ರಪ್ರದೇಶಕ್ಕೆ ಬರಲಿ; ಅಂಥ ಶಬ್ದವನ್ನೇ ಶ್ರೋತ್ರೇಂದ್ರಿಯವು ಗ್ರಹಿಸಲಿ; ಹೀಗೆ ಉಪಪನ್ನವಾಗುತ್ತಿರುವಾಗ ವರ್ಣಾತ್ಮಕಶಬ್ದಕ್ಕೆಮಾತ್ರ ನಿತ್ಯ ತ್ವವನ್ನೂ ವ್ಯಾಪಕತ್ವವನ್ನೂ ಏತಕ್ಕೆ ಒಪ್ಪಬೇಕು"? ಎಂಬ ಇಂಥ ಆಶಂಕೆ ಉಂಟಾದರೆ—ಆಗ ವರ್ಣಾತ್ಮಕಶಬ್ದರೂಪವಾದ ವೇದಕ್ಕೆ ಅನಿತ್ಯತ್ವವು ಪ್ರಸಕ್ತ ವಾದೀತೆಂಬ ಹೆದರಿಕೆಯಿಂದ ಮೀಮಾಂಸಕರು ಇದಕ್ಕೆ ನಿತ್ಯತ್ವವನ್ನು ಅಂಗೀಕರಿ ಸಿರುವರು. ಹಾಗಾದರೆ ನಿತ್ಯತ್ವಮಾತ್ರವಿರಲಿ; ವ್ಯಾಪಕತ್ವವನ್ನು ಏತಕ್ಕೆ ಅಂಗೀ ಕರಿಸಬೇಕು? ಹವುದು; ವ್ಯಾಪಕತ್ವವನ್ನೂ ಅಂಗೀಕರಿಸಬೇಕು; ಹಾಗೆ ಅಂಗೀ ಕರಿಸದಿದ್ದರೆ ಅವ್ಯಾಪಕವಾದ (ಪರಿಚ್ಛಿನ್ನವಾದ) ಅಂಥ ನಿತ್ಯಶಬ್ದವು ಯಾವುದಾ ದರೊಂದು ಪ್ರದೇಶದಲ್ಲಿ ಇರಬಹುದಾದುದರಿಂದ ಆಗ ಏಕಕಾಲದಲ್ಲಿ ಅನೇಕ ಪ್ರದೇಶದಲ್ಲಿ ವೇದೋಚ್ಚಾರಣೆಯನ್ನು ಮಾಡಕೂಡದಾಗಿ ಬರುವುದು; ಪರಿಚ್ಛಿನ್ನ ವಾದ ವಸ್ತುವಿಗೆ ಏಕಕಾಲದಲ್ಲಿ ಅನೇಕಪ್ರದೇಶಸಂಬಂಧವು ಕೂಡುವುದಿಲ್ಲವಷ್ಟೆ? ಏಕಕಾಲದಲ್ಲಿಯೇ ಅನೇಕಪ್ರದೇಶಗಳಲ್ಲಿ ವೇದೋಚ್ಚಾರಣೆ ಲೋಕದಲ್ಲಿ ಕಂಡು ಬರುವುದರಿಂದ ಇದಕ್ಕೆ ವಿಭುತ್ವವನ್ನು ಒಪ್ಪಬೇಕು. ಹಾಗಾದರೆ ನಿತ್ಯತ್ವವೂ ವಿಭುತ್ವವೂ ಇರಲಿ; ಏಕತ್ವವನ್ನು ಏತಕ್ಕೆ ಒಪ್ಪಬೇಕು? ಹವುದು; ಏಕತ್ವವನ್ನೂ ಒಪ್ಪಬೇಕು; ಹಾಗೆ ಒಪ್ಪದಿದ್ದರೆ ಆಗ ಏಕಕಾಲದಲ್ಲಿ ಅನೇಕಪ್ರದೇಶಗಳೊ ಳಗೆ ಅನೇಕಶಬ್ದಗಳು ಉತ್ಪನ್ನಗಳಾಗುವುವೆಂದು ಹೇಳಬೇಕಾಗಿ ಬರುವುದರಿಂದ ಅನಿತ್ಯತ್ವವು ಪ್ರಸಕ್ತವಾಗಿ ನಿತ್ಯತ್ವವು ಕೆಟ್ಟುಹೋಗುವುದು. ಆದಕಾರಣ ವೇದ

ಪ್ರಾಮಾಣ್ಯದಲ್ಲಿ ಆಶೆಯುಳ್ಳುವರು ವರ್ಣಾತ್ಮಕಶಬ್ದಕ್ಕೆ ನಿತ್ಯತ್ವವನ್ನೂ, ವಿಭುತ್ವ ವನ್ನೂ, ಏಕತ್ವವನ್ನೂ ಆವಶ್ಯಕವಾಗಿ ಒಪ್ಪಬೇಕು. ಇದು ಮೀಮಾಂಸಕರ ಮತವಾಗಿರುವುದು.

## ೧೦೨೦. ಸಾಂಖ್ಯದರ್ಶನಾನುಯಾಯಿನಾಂ ಮತೇನ ಶ್ರೋತ್ರ ವೃತ್ತಿನಿರೂಪಣಂ.

ಸಾಂಖ್ಯದರ್ಶನಕಾರರು ಹೇಳುವುದೇನೆಂದರೆ—ಕಿವಿಯ ಒಳಭಾಗದಲ್ಲಿ ರುವ ಶಬ್ದವನ್ನೇ ಶ್ರೋತ್ರೇಂದ್ರಿಯವು ಗ್ರಹಿಸುವುದಾದರೆ—ಗ್ರಹಿಸುವ ಕಾಲ ದಲ್ಲೆಲ್ಲಾ ಸನ್ನಿಹಿತಶಬ್ದವನ್ನೇ ಗ್ರಹಿಸುತ್ತದೆಯೆಂದು ಹೇಳಿದ್ದಂತೆ ಪರ್ಯವಸಿತವಾ ಗುವುದು; ಆಗ—"ದೂರದಲ್ಲಿ ಶಬ್ದವಾಗುವುದು; ಸಮೀಪದಲ್ಲಿ ಶಬ್ದವಾಗುವು ದು; ಪೂರ್ವಭಾಗದಲ್ಲಿ ಶಬ್ದವಾಗುವುದು; ಪಶ್ಚಿಮಭಾಗದಲ್ಲಿ ಶಬ್ದವಾಗುವುದು" ಎಂಬುದಾಗಿ ಶ್ರೋತ್ರೇಂದ್ರಿಯದಿಂದ ಶಬ್ದಸ್ವರೂಪದ ಗ್ರಹಣವಾಗುವಂತೆ ಶ ಬ್ದೋತ್ಪತ್ತಿದೇಶದ ಗ್ರಹಣವೂ ಲೋಕದಲ್ಲಿ ಕಂಡುಬರುತ್ತಿರುವುದು ಅಸಂಗತ ವಾಗಬೇಕಾಗಿ ಬರುವುದು. ಶಬ್ದವು ದೂರಸ್ಥವಾಗಿದ್ದರೂ ಶ್ರೋತ್ರೇಂದ್ರಿಯದ ಸಮೀಪಕ್ಕೆ ವಾಯುಸಹಾಯದಿಂದ ಬರುವುದೆಂದು ಹೇಳುವುದೂ ಯುಕ್ತವಲ್ಲ; ಏತಕ್ಕೆಂದರೆ—ಬಾಹ್ಯವಾದ ಏಕೇಂದ್ರಿಯದಿಂದ ಗ್ರಹಿಸಲ್ಪಡುವ ಅದ್ರವ್ಯಕ್ಕೆ ಕ್ರಿಯಾಶ್ರಯತ್ವವಿಲ್ಲವೆಂಬುದನ್ನು ರೂಪಾದಿಗಳಲ್ಲಿ ಕಂಡಿರುವೆವು; ರೂಪವು— ಬಾಹ್ಯವಾದ ಚಕ್ಷುಸ್ಸೆಂಬ ಏಕೇಂದ್ರಿಯದಿಂದ ಗ್ರಹಿಸಲ್ಪಡುತ್ತದೆಯೆಂಬುದೂ, ಮತ್ತು ಆ ರೂಪವು ತನ್ನ ಆಶ್ರಯವನ್ನು ಬಿಟ್ಟು ಮತ್ತೊಂದು ಕಡೆಗೆ ಹೋಗುವು ದಿಲ್ಲವೆಂಬುದೂ ಎಲ್ಲರಿಗೂ ವಿದಿತವಾಗಿರುವುದಷ್ಟೆ? ಅದರಂತೆ ಶಬ್ದವೂ—ಬಾಹ್ಯ ವಾದ ಶ್ರೋತ್ರವೆಂಬ ಏಕೇಂದ್ರಿಯದಿಂದ ಗ್ರಹಿಸಲ್ಪಡುವ ಅದ್ರವ್ಯವಾದಕಾರಣ ಇದೂ ತನ್ನ ಆಶ್ರಯವನ್ನು ಬಿಟ್ಟು ಅನ್ಯತ್ರ ಹೋಗಲಾರದೆಂದು ಒಪ್ಪಬೇಕಾಗಿರು ವುದರಿಂದ ಗಮನಕ್ರಿಯಾಶ್ರಯತ್ವವು ಶಬ್ದಕ್ಕೆ ಸಂಭವಿಸುವುದಿಲ್ಲ. ಹೀಗಿದ್ದರೂ ಇದಕ್ಕೆ ಕ್ರಿಯಾಶ್ರಯತ್ವವನ್ನು ಒಪ್ಪುವುದಾದರೆ ಘಟಾದಿಪದಾರ್ಥಗಳಲ್ಲಿರುವ ರೂಪವೂ ತನ್ನ ಆಶ್ರಯವನ್ನು ಬಿಟ್ಟು ನೇತ್ರದ ಸಮೀಪಕ್ಕೆ ಬರುವುದೆಂದು ಒಪ್ಪ ಬೇಕಾಗಿ ಬರುವುದು. ಅದನ್ನೂ ಒಪ್ಪುವುವೆಂದು ಹೇಳುವುದಾದರೆ ಸರ್ವಲೋಕ ಪ್ರತ್ಯಕ್ಷವಿರೋಧವುಂಟಾಗಿ ಅಸಂಭಾಷ್ಯತ್ವವು ಪ್ರಸಕ್ತವಾದೀತು. ಪ್ರತ್ಯಕ್ಷ ವಿರುದ್ಧಭಾಷಿಗಳೊಡನೆ ಸಂಭಾಷಣೆ ಮಾಡಬಾರದಷ್ಟೆ? ಆದಕಾರಣ ಶಬ್ದವು ಶ್ರೋತ್ರದ ಸಮೀಪಕ್ಕೆ ಬರಲಾರದು.

## ೧೧೨೧ ದೂರಸ್ಥಶಬ್ದೇ ವೀಚೀತರಂಗನ್ಯಾಯಾ ಸಂಭವಪ್ರದರ್ಶನಂ

ಅದೇತಕ್ಕೆ ? ಶಬ್ದಕ್ಕೆ ಸ್ವತಃ ಗಮನಕ್ರಿಯಾಶ್ರಯತ್ವವು ಸಂಭವಿಸದಿದ್ದರೂ ವೀಚೀತರಂಗನ್ಯಾಯದಿಂದ ಶಬ್ದಕ್ಕಾಗಲಿ ಶಬ್ದಾಭಿವ್ಯಂಜಕಕ್ಕಾಗಲಿ ಇತರಪ್ರೇರಣಾಧೀನವಾಗಿ ಶ್ರೋತ್ರಪ್ರದೇಶಗಮನವು ಸಂಭವಿಸಬಹುದಲ್ಲವೆ ?

ಇಲ್ಲ ಸಂಭವಿಸುವುದಿಲ್ಲ. ಇಲ್ಲಿ * ವೀಚೀತರಂಗನ್ಯಾಯವನ್ನು ಕಲ್ಪಿಸುವುದಾದರೆ ಅತ್ಯಂತಗೌರವದೋಷವುಂಟಾಗುವುದು ; ಏತಕ್ಕೆಂದರೆ ಶಬ್ದೋತ್ಪತ್ತಿಪ್ರದೇಶವನ್ನು ಆರಂಭಿಸಿ ಶ್ರೋತ್ರಪ್ರದೇಶದವರೆಗೂ ಮಧ್ಯದಲ್ಲಿ ಅನೇಕಶಬ್ದಗಳ ಉತ್ಪತ್ತಿಗಳನ್ನೂ, ಉತ್ಪಾದಕಸಾಮಗ್ರಿಗಳನ್ನೂ, ಉತ್ಪನ್ನವಾದ ಅಂಥ ಶಬ್ದಗಳ ವಿನಾಶಗಳನ್ನೂ, ವಿನಾಶಕಸಾಮಗ್ರಿಗಳನ್ನೂ, ಮತ್ತು ಅಂಥ ಶಬ್ದಗಳಿಗೆ ಕ್ರಮಿಕವಾದ ಆಗಮನವನ್ನೂ ಕಲ್ಪಿಸಬೇಕಾಗಿ ಬರುವುದು. ಮುಂದೆ ನಾವು ಹೇಳುವ

---

* ವೀಚೀತರಂಗನ್ಯಾಯವೆಂದರೆ—ಕೆರೆ, ಕಟ್ಟೆ, ಕೊಳ, ಬಾವಿ ಮುಂತಾದ ಜಲವಸತಿಗಳಲ್ಲಿ ವೇಗವಿಶಿಷ್ಟವಾದ ಯಾವುದಾದರೊಂದು ಪದಾರ್ಥದಿಂದ ಜಲಕ್ಕೆ ಅಭಿಘಾತವುಂಟಾದರೆ ವೇಗವತ್ಪದಾರ್ಥದಿಂದ ಅಭಿಹತವಾದ ಆ ಜಲವು ತನ್ನ ಮುಂದಿನ ಜಲವನ್ನು ಮುಂದಕ್ಕೆ ತಳ್ಳುವುದು ; ಹೀಗೆ ತಳ್ಳಲ್ಪಟ್ಟ ಆ ನೀರು ತನ್ನ ಮುಂದಿನ ನೀರನ್ನು ಅದರ ಮುಂದಕ್ಕೆ ಸಾಗಿಸುವುದು ; ಹೀಗೆ ಪೂರ್ವಪೂರ್ವಜಲವ್ಯಕ್ತಿಗಳು ಉತ್ತರೋತ್ತರಪ್ರದೇಶದಲ್ಲಿರುವ ಜಲವ್ಯಕ್ತಿಗಳನ್ನು ತಳ್ಳುತ್ತಲೇ ಹೋಗುವುದರಿಂದ ಅವುಗಳು ಅಲೆಗಳಾಗಿ ನಮಗೆ ಕಾಣುವುವು ; ವೇಗವು ಶಾಂತವಾಗುವವರೆಗೂ ಈ ಅಲೆಗಳು ಉಂಟಾಗುತ್ತಲೇ ಮುಂದು ಮುಂದಕ್ಕೆ ಸಾಗುತ್ತಿರುವುವು ; ವೇಗವು ಶಾಂತವಾದರೆ ನಿಂತು ಹೋಗುವುವು ; ಅಥವಾ ಅಲೆಗಳ ಗತಿಗೆ ಅಡ್ಡಿಮಾಡುವ ತೀರಾದಿಗಳು ದೊರೆತರೆ ಆಗ ನಿಂತುಹೋಗುವುವು.

ಇದರಂತೆಯೇ ಶಬ್ದದ ವಿಷಯದಲ್ಲಿಯೂ ತಿಳಿಯಬಹುದು ; ಭೇರಿ ಮೊದಲಾದ ವಾದ್ಯಗಳನ್ನು ಬಾರಿಸಿದರೂ, ಅಥವಾ ಶಬ್ದೋಚ್ಚಾರಣೆಗಾಗಿ ತಾಲ್ವಾದಿವ್ಯಾಪಾರಗಳುಂಟಾದರೂ ಆ ಅಭಿಘಾತದ ವೇಗದಿಂದ ಅಲ್ಲಿರುವ ವಾಯು ಮುಂದಕ್ಕೆ ತಳ್ಳಲ್ಪಡುವುದು ; ಆಕಾಶವರ್ತಿಯಾದ ಅಂಥ ವಾಯು ತಾನು ಮುಂದಕ್ಕೆ ಹೋಗುವಾಗ ತತ್ಕಾಲೋತ್ಪನ್ನವಾಗಿ ಆ ಪ್ರದೇಶದಲ್ಲಿರುವ ಶಬ್ದವನ್ನೂ ಸೆಳೆದುಕೊಂಡು ಹೋಗುತ್ತ ತನ್ನ ಮುಂದಿನ ವಾಯುವನ್ನು ಅದರ ಮುಂದಕ್ಕೆ ತಳ್ಳುವುದು ; ಹೀಗೆ ಪೂರ್ವಪೂರ್ವವಾಯುವ್ಯಕ್ತಿಗಳು ಉತ್ತರೋತ್ತರವಾಯುವ್ಯಕ್ತಿಗಳ ಜತೆಯಲ್ಲಿ ಶಬ್ದವನ್ನೂ ತಳ್ಳುತ್ತಿರುವುವಾಗಿ ಶಬ್ದೋತ್ಪತ್ತಿಪ್ರದೇಶವನ್ನು ಮೂಲಸ್ಥಾನವಾಗಿ ಮಾಡಿಕೊಂಡು ಅದರ ಸುತ್ತುಮುತ್ತಲೂ ಮೇಲೂ ಕೆಳಗೂ (ಹತ್ತು ದಿಕ್ಕುಗಳಲ್ಲಿಯೂ) ವೇಗದ ಶಕ್ತಿ ಓಡುವವರೆಗೂ ಶಬ್ದವನ್ನು ಹರಡುತ್ತ ತನ್ಮಧ್ಯವರ್ತಿಗಳಾದ ಎಲ್ಲಾ ಶ್ರೋತ್ರೇಂದ್ರಿಯಗಳನ್ನೂ ಶಬ್ದದಿಂದ ತುಂಬಿಬಿಡುವುವು. ಹೀಗೆ ವಾಯುವಿನಿಂದ ಸಮೀಪಕ್ಕೆ ತರಲ್ಪಟ್ಟ ಶಬ್ದಗಳನ್ನು ಶ್ರೋತ್ರೇಂದ್ರಿಯಗಳು ಗ್ರಹಿಸುವುವು. ಇದೇ ವೀಚೀತರಂಗನ್ಯಾಯವು.

ರೀತಿಯಲ್ಲಿ ಶಬ್ದಗ್ರಹಣವು ಉಪಪನ್ನವಾಗುತ್ತಿರುವಾಗ ಯಾವ ಅನುಪಪತ್ತಿಯೂ ಇಲ್ಲವಾದುದರಿಂದ ಅತ್ಯಂತಾಪರಿದೃಷ್ಟವಾದ ಉತ್ಪತ್ತಿವಿನಾಶಾದಿಗಳನ್ನು ಕಲ್ಪಿಸುವುದಾದರೆ ಅತ್ಯಂತಗೌರವದೋಷವು ತಪ್ಪಲಾರದಷ್ಟೆ? ಇವುಗಳನ್ನು ಕಲ್ಪಿಸದಿದ್ದಾಗ ಶಬ್ದಗ್ರಹಣಕ್ಕೆ ಯಾವುದಾದರೂ ಅನುಪಪತ್ತಿಯಿದ್ದಪಕ್ಷದಲ್ಲಿ ಗೌರವದೋಷವನ್ನೂ ಸಹಿಸಿಕೊಂಡು ಇವುಗಳನ್ನು ಕಲ್ಪಿಸಬಹುದಾಗಿದ್ದಿತು? ಮುಂದೆ ನಾವು ಹೇಳುವ ರೀತಿಯಲ್ಲಿ ಉಪಪತ್ತಿಯಿರುವುದರಿಂದ ಶಬ್ದಗ್ರಹಣಕ್ಕಾಗಿ ಇವುಗಳನ್ನು ಕಲ್ಪಿಸಬೇಕಾದುದಿಲ್ಲ.

## ೧೧೨೨ ಶ್ರೋತ್ರೇಂದ್ರಿಯಸ್ಯ ವಿಭುತ್ವಕಲ್ಪನಾನುಪಪತ್ತಿಃ

ಅದೇತಕ್ಕೆ ? ಶ್ರೋತ್ರೇಂದ್ರಿಯಕ್ಕೆ ಆಕಾಶದಂತೆ ಸರ್ವಪ್ರದೇಶವ್ಯಾಪಕತ್ವವನ್ನು ಕಲ್ಪಿಸಿಬಿಟ್ಟರೆ ಸೌಕರ್ಯವಲ್ಲವೆ? ಆಗ ಶಬ್ದೋತ್ಪತ್ತಿಪ್ರದೇಶದಲ್ಲಿಯೂ ಶ್ರೋತ್ರೇಂದ್ರಿಯವು ಇದ್ದೇ ಇರುವುದರಿಂದ ಆಯಾಸವಿಲ್ಲದೆ ಶಬ್ದಗ್ರಹಣವುಂಟಾಗಬಹುದಲ್ಲವೆ?

ಇಲ್ಲ; ಶ್ರೋತ್ರೇಂದ್ರಿಯಕ್ಕೆ ವಿಭುತ್ವವನ್ನು ಕಲ್ಪಿಸಲಾಗುವುದಿಲ್ಲ. ಹಾಗೆ ಕಲ್ಪಿಸುವುದಾದರೆ ಸರ್ವಪ್ರದೇಶಗಳಲ್ಲಿ ಉಂಟಾಗುವ ಸಕಲಶಬ್ದಗಳನ್ನೂ ಏಕಕಾಲದಲ್ಲಿಯೇ ಶ್ರೋತ್ರೇಂದ್ರಿಯವು ಗ್ರಹಿಸಬೇಕಾದೀತು; ಎಂದರೆ ದೂರಸ್ಥಶಬ್ದವೆಂದೂ ಸನ್ನಿಹಿತಶಬ್ದವೆಂದೂ ತಾರತಮ್ಯವನ್ನು ನೋಡದೆ ಸಾವಿರಾರು ಯೋಜನಗಳ ದೂರದಲ್ಲಿ ಉಂಟಾಗುವ ಶಬ್ದಗಳನ್ನೂ ಏಕಕಾಲದಲ್ಲಿಯೇ ಶ್ರೋತ್ರೇಂದ್ರಿಯವು ಗ್ರಹಿಸಬೇಕಾದೀತೆಂಬ ಅನಿಷ್ಟಪ್ರಸಂಗವುಂಟಾದೀತು.

ಅದೇತಕ್ಕೆ? ಶ್ರೋತ್ರೇಂದ್ರಿಯಕ್ಕೆ ವ್ಯಾಪಕತ್ವವೇ ಇರಲಿ; ಆದರೂ ಅನಿಷ್ಟಪ್ರಸಂಗವಿಲ್ಲವೆಂದು ಹೇಳುವೆವು; ಹೇಗೆಂದರೆ—ಶ್ರೋತ್ರೇಂದ್ರಿಯವು ವ್ಯಾಪಕವಾಗಿದ್ದರೂ ಸಮೀಪಪ್ರದೇಶವರ್ತಿಗಳಾದ ಶಬ್ದಗಳನ್ನು ಮಾತ್ರವೇ ಗ್ರಹಿಸಲು ಸಾಮರ್ಥ್ಯವನ್ನು ಪಡೆದಿರುವುದೆಂದೂ, ದೂರವರ್ತಿಗಳಾದ ಶಬ್ದಗಳನ್ನು ಗ್ರಹಿಸಲಾರದೆಂದೂ, ಪ್ರತ್ಯಕ್ಷಬಲದಿಂದಲೇ ಹೇಳುವೆವು; ಆಗ ಅನಿಷ್ಟಪ್ರಸಂಗವಿಲ್ಲವಷ್ಟೆ?

ಇಲ್ಲ; ಹಾಗೆಯೂ ಕಲ್ಪಿಸಲಾಗುವುದಿಲ್ಲ; ಅನಿಷ್ಟಪ್ರಸಂಗವು ಬಂದೇಬರುವುದು; ಹೇಗೆಂದರೆ— ಪ್ರತ್ಯಕ್ಷಾನುಮಾನಾಗಮಗಳೊಳಗೆ ಯಾವುದೊಂದು ಪ್ರಮಾಣದಿಂದಲೂ ಶ್ರೋತ್ರೇಂದ್ರಿಯಕ್ಕೆ ವಿಭುತ್ವವು ಸಿದ್ಧವಾಗಿಲ್ಲ; ಆದರೂ ವಿಭುತ್ವವನ್ನು ಕಲ್ಪಿಸುವುದಾದರೆ ವಿಭುವಾದ ಅಂಥ ಶ್ರೋತ್ರೇಂದ್ರಿಯಕ್ಕೆ ಸಮೀಪದಲ್ಲಿಯೇ ಶಬ್ದಗ್ರಹಣಸಾಮರ್ಥ್ಯವುಂಟೆಂಬುದರಲ್ಲಿಯೂ, ದೂರಸ್ಥಶಬ್ದಗ್ರಹಣದಲ್ಲಿ

ಸಾಮರ್ಥ್ಯವಿಲ್ಲವೆಂಬುದರಲ್ಲಿಯೂ ನಿಯಾಮಕವೇನೂ ಇಲ್ಲ; ಪ್ರತ್ಯಕ್ಷಬಲದಿಂದಲೇ ಹಾಗೆ ಕಲ್ಪಿಸುವುದಾದರೆ ಸಮೀಪದಲ್ಲಿಯೇ ಶಬ್ದಗ್ರಹಣವುಂಟೆಂಬುದೂ, ದೂರದಲ್ಲಿ ಶಬ್ದಗ್ರಹಣವಾಗುವುದಿಲ್ಲವೆಂಬುದೂ ಲೋಕಾನುಭವದಲ್ಲಿ ಕಂಡುಬರುವುದರಿಂದ ಶ್ರೋತ್ರೇಂದ್ರಿಯಕ್ಕೆ ಪರಿಮಿತಪ್ರದೇಶವರ್ತಿತ್ವವನ್ನೇ ಏಕೆ ಕಲ್ಪಿಸಬಾರದು? ವಿಭುತ್ವವನ್ನು ವ್ಯರ್ಥವಾಗಿ ಏಕೆ ಕಲ್ಪಿಸಬೇಕು? ಎಂದರೆ ಯಾವ ಪ್ರಾಣಿಗಳಿಗೆ ಎಷ್ಟುದೂರದವರೆಗೆ ಶಬ್ದವು ಕೇಳಿಸುವುದೆಂದು ಲೋಕದಲ್ಲಿ ಅವಗತವಾಗಿರುವುದೋ; ಆ ಪ್ರಾಣಿಗಳ ಶ್ರೋತ್ರೇಂದ್ರಿಯವು ಅಷ್ಟೇದೂರದವರೆಗೆ ವ್ಯಾಪಿಸಿರುವುದೆಂದು ಏಕೆ ಕಲ್ಪಿಸಬಾರದು? ಸರ್ವತ್ರವ್ಯಾಪ್ತಿಯನ್ನು ಏಕೆ ವ್ಯರ್ಥವಾಗಿ ಕಲ್ಪಿಸಬೇಕು?

## ೧೦೨೩. ಶ್ರೋತ್ರಸ್ಯ ಅಭೌತಿಕತ್ವಾತ್ ಸ್ವಸಮವೇತ ಶಬ್ದಗ್ರಾಹಕತ್ವಪಕ್ಷಾನುಪಪತ್ತಿಃ

ಅದೇತಕ್ಕೆ? ಆಕಾಶದಿಂದ ಉತ್ಪನ್ನವಾದ ಶ್ರೋತ್ರೇಂದ್ರಿಯವು ಆಕಾಶವಲ್ಲದೆ ಹೋಗಲಿಲ್ಲ; ಆಕಾಶವರ್ತಿಯಾದ ಶಬ್ದವು ಆಕಾಶರೂಪವಾದ ಶ್ರೋತ್ರೇಂದ್ರಿಯದಲ್ಲಿ ಇಲ್ಲವೆಂಬುದೂ ಇಲ್ಲ; ಹೀಗಾದಮೇಲೆ ಗ್ರಾಹಕವಾದ ಶ್ರೋತ್ರೇಂದ್ರಿಯಕ್ಕೆ ಗ್ರಾಹ್ಯವಾದ ಶಬ್ದದೊಡನೆ ಸಮವಾಯಸಂಬಂಧವಿರುವುದರಿಂದ ಶ್ರೋತ್ರವು ಸ್ವಸಮವೇತವಾದ ಶಬ್ದವನ್ನೇ ಗ್ರಹಿಸುತ್ತದೆಯೆಂದು ಏಕೆ ಹೇಳಬಾರದು?

ಹವುದು; ಹಾಗೆ ಹೇಳಲಾಗದು; ಶ್ರೋತ್ರೇಂದ್ರಿಯವು ಆಕಾಶದಿಂದ ಉತ್ಪನ್ನವಾಗಿದ್ದರಲ್ಲವೆ ಹಾಗೆ ಹೇಳಲಾದೀತು? ಇಂದ್ರಿಯಗಳಿಗೆ ಭೌತಿಕತ್ವವನ್ನು ನಿರಾಕರಿಸಿ ಸಾತ್ತ್ವಿಕಾಹಂಕಾರಜನ್ಯತ್ವವನ್ನು ಅಚಿತ್ತತ್ತ್ವಪರಿಚ್ಛೇದದಲ್ಲಿಯೇ ಸ್ಥಾಪಿಸಿರುವೆವು; ಅದನ್ನು ನೀವು ಮರೆತಂತೆ ಕಾಣುವುದು. ಆದಕಾರಣ ಶ್ರೋತ್ರವು ಸ್ವಸಮವೇತವಾದ ಶಬ್ದವನ್ನು ಗ್ರಹಿಸುತ್ತದೆಯೆಂಬ ಪಕ್ಷವೂ ಸಂಗತವಲ್ಲ.

## ೧೦೨೪. ಶ್ರೋತ್ರವೃತ್ತ್ಯೈವ ಶಬ್ದಗ್ರಹಣೋಪಪಾದನಂ

ಹಾಗಾದರೆ ಶಬ್ದಗ್ರಹಣವು ಮತ್ತಾವರೀತಿಯಲ್ಲಿ ಆಗುವುದು? ಈ ರೀತಿಯಲ್ಲಿ ಆಗುವುದು—ಯಾವ ಪ್ರಾಣಿಗಳಿಗೆ ಎಷ್ಟೆಷ್ಟು ದೂರದವರೆಗೆ ಶಬ್ದವು ಕೇಳಿಸುವುದೆಂದು ಲೋಕಾನುಭವದಲ್ಲಿ ಕಂಡುಬಂದಿರುವುದೋ; ಆ ಪ್ರಾಣಿಗಳ ಶ್ರೋತ್ರೇಂದ್ರಿಯವು ಅಷ್ಟಷ್ಟು ದೂರದವರೆಗೆ ವ್ಯಾಪಿಸಿರುವುದೆಂದು ಒಪ್ಪಿಕೊಳ್ಳ

ಬೇಕು. ಅತಿದೂರಸ್ಥವಾದ ಶಬ್ದವು ಕೇಳಿಸುವುದಿಲ್ಲವೆಂಬುದಕ್ಕೆ ಅತಿದೂರದಲ್ಲಿ ಶ್ರೋತ್ರೇಂದ್ರಿಯದ ವ್ಯಾಪ್ತಿಯಿಲ್ಲವೆಂಬುದೇ ಕಾರಣವಾಗಿರುವುದು.

ಹೀಗೆ—ಪರಿಮಿತಪ್ರದೇಶವ್ಯಾಪ್ತಿಯನ್ನು ಶ್ರೋತ್ರೇಂದ್ರಿಯಕ್ಕೆ ಅಂಗೀಕರಿಸುವಾಗ—ಶರೀರದ ಒಳಭಾಗದಲ್ಲಿರುವ ಶ್ರೋತ್ರೇಂದ್ರಿಯಭಾಗವನ್ನು ಶ್ರೋತ್ರೇಂದ್ರಿಯಶಬ್ದದಿಂದಲೇ ವ್ಯವಹರಿಸುವೆವು; ಶರೀರದ ಹೊರಗಡೆಯಲ್ಲಿರುವ ಶ್ರೋತ್ರೇಂದ್ರಿಯಭಾಗವನ್ನು ಶ್ರೋತ್ರೇಂದ್ರಿಯವೃತ್ತಿಶಬ್ದದಿಂದ ವ್ಯವಹರಿಸುವೆವು. ಹೀಗೆ ತನ್ನ ವೃತ್ತಿಯಮೂಲಕವಾಗಿ ಅಷ್ಟಷ್ಟು ದೂರದವರೆಗೆ ವ್ಯಾಪಿಸಿರುವ ಶ್ರೋತ್ರೇಂದ್ರಿಯವು ಅಷ್ಟಷ್ಟು ದೂರದಲ್ಲಿರುವ ಶಬ್ದವನ್ನು ತನ್ನ ವೃತ್ತಿಯಿಂದಲೇ ಗ್ರಹಿಸುತ್ತದೆಯೆಂದು ಹೇಳುವ ಈ ನಮ್ಮ ಪಕ್ಷವೇ ಸಮಂಜಸವಾಗಿರುವುದು.

ಹೀಗೆ ನಾವು ಹೇಳುವ ರೀತಿಯಲ್ಲಿ ಶಬ್ದಗ್ರಹಣಕ್ಕೆ ಉಪಪತ್ತಿಯಿರುವುದರಿಂದ ಮೀಮಾಂಸಕರ ಹೇಳಿಕೆಯಂತೆ ಶಬ್ದಕ್ಕೆ ವಿಭುತ್ವವನ್ನೂ ಹೇಳಬೇಕಾದುದಿಲ್ಲ; ನೈಯಾಯಿಕರ ಹೇಳಿಕೆಯಂತೆ ವೀಚೀತರಂಗನ್ಯಾಯದಿಂದ ಶಬ್ದಕ್ಕೆ ಶ್ರೋತ್ರಸಮೀಪಾಗಮನವನ್ನೂ ಹೇಳಬೇಕಾದುದಿಲ್ಲ;

## ೧೧೨೫ ಶ್ರೋತ್ರವೃತ್ತಿಮನಭ್ಯುಪಗಚ್ಛತೋರ್ಮೀಮಾಂಸಕನೈಯಾಯಿಕಯೋರನಿಷ್ಟಾಪತ್ತಿಃ

ಹೀಗೆ ಶ್ರೋತ್ರೇಂದ್ರಿಯಕ್ಕೆ ನಾವು ಹೇಳುವ ಅಷ್ಟಷ್ಟು ದೂರಪ್ರದೇಶವ್ಯಾಪ್ತಿಯನ್ನು ಒಪ್ಪಿಕೊಳ್ಳದಿರುವ ಮೀಮಾಂಸಕರಿಗೂ ನೈಯಾಯಿಕರಿಗೂ ಪ್ರಾಪ್ತವಾಗುವ ತೊಂದರೆಯೇನೆಂದರೆ—"ದೂರದಲ್ಲಿ ಶಬ್ದವು ಕೇಳಿಸುತ್ತದೆ, ಸಮೀಪದಲ್ಲಿ ಶಬ್ದವು ಕೇಳಿಸುತ್ತದೆ, ಪೂರ್ವಭಾಗದಲ್ಲಿ ಶಬ್ದವು ಕೇಳಿಸುತ್ತದೆ, ಪಶ್ಚಿಮಭಾಗದಲ್ಲಿ ಶಬ್ದವು ಕೇಳಿಸುತ್ತದೆ" ಎಂಬುವೇ ಮೊದಲಾದ ಲೋಕಾನುಭವಗಳು ಅವರಿಗೆ ಕೆಟ್ಟುಹೋಗುವುವು; ಏತಕ್ಕೆಂದರೆ—ಗ್ರಾಹ್ಯವಾದ ಶಬ್ದವು ಅವರಿಬ್ಬರ ಮತದಲ್ಲಿಯೂ ಗ್ರಹಣಕಾಲದಲ್ಲಿ ಕಿವಿಯೊಳಗೇ ಇರುವುದರಿಂದ "ಕಿವಿಯೊಳಗೆ ಶಬ್ದವು ಕೇಳಿಸುತ್ತದೆ" ಎಂಬುದಾಗಿಯೇ ಅನುಭವವುಂಟಾಗಬೇಕೇ ಹೊರತು "ದೂರದಲ್ಲಿ ಶಬ್ದವು ಕೇಳಿಸುತ್ತದೆ" ಎಂಬುವೇ ಮೊದಲಾದ ಲೋಕಾನುಭವಗಳು ಉಂಟಾಗಕೂಡದು. ಸರ್ವಶಬ್ದಗಳೂ ಕಿವಿಯಲ್ಲಿಯೇ ಇರುವುವೆಂದು ಹೇಳುವವರಿಗೆ "ಇದು ದೂರದಲ್ಲಿ ಉಂಟಾದ ಶಬ್ದವು, ಇದು ಸಮೀಪದಲ್ಲಿ ಉಂಟಾದ ಶಬ್ದವು" ಎಂಬ ವಿಭಾಗವು ಸಂಭವಿಸಲಾರದಷ್ಟೆ? ಲೋಕಾನುಭವ

ಗಳನ್ನು ವಿಮರ್ಶಿಸಿ ನೋಡಿದರೆ ಶಬ್ದಗ್ರಹಣಕಾಲದಲ್ಲಿ ಶಬ್ದಮಾತ್ರಕ್ಕೆ ಗ್ರಹಣ ವುಂಟಾಗುವುದಿಲ್ಲ; ಶಬ್ದೋತ್ಪತ್ತಿಪ್ರದೇಶಕ್ಕೂ ಗ್ರಹಣವುಂಟಾಗುತ್ತಿರುವುದು. ಹೀಗೆ ಉಂಟಾಗುತ್ತಿರುವ ತತ್ತದ್ದೇಶವಿಶಿಷ್ಟಶಬ್ದಗ್ರಹಣವನ್ನು ಮೀಮಾಂಸಕರೂ ನೈಯಾಯಿಕರೂ ಹೇಗೆ ಸಮರ್ಥಿಸಬಲ್ಲರು? ನಮಗಾದರೆ—ಆ ಆ ಪ್ರಾಣಿಗಳ ಶ್ರೋತ್ರೇಂದ್ರಿಯವು ಅಷ್ಟಷ್ಟು ದೂರದಲ್ಲಿ ವ್ಯಾಪಿಸಿರುವುದೆಂದು ಅಭಿಮತವಾದುದರಿಂದ ಶಬ್ದೋತ್ಪತ್ತಿಪ್ರದೇಶದಲ್ಲಿ ಶ್ರೋತ್ರೇಂದ್ರಿಯವೃತ್ತಿಯಿರುವುದಾದ ಪ್ರಯುಕ್ತ ತತ್ತತ್ಪ್ರದೇಶವಿಶಿಷ್ಟವಾದ ಶಬ್ದಗ್ರಹಣವೂ, ತತ್ತದ್ದಿಗ್ಭಾಗವಿಶಿಷ್ಟವಾದ ಶಬ್ದಗ್ರಹಣವೂ ಉಪಪನ್ನವಾಗುವುವು.

## ೧೦೨೬ ಅವ್ಯಭಿಚರಿತಲಿಂಗಾಭಾವಾತ್ ದಿಗಾದೀನಾಂ ಅನುಮೇಯತ್ವಾನುಪಪತ್ತಿಃ

ಅದೇತಕ್ಕೆ? ಕಿವಿಯಲ್ಲಿ ಶಬ್ದಗ್ರಹಣವುಂಟಾದಮೇಲೆ "ಈ ಶಬ್ದವು ಯಾವ ಕಡೆಯಿಂದ ಬಂದಿರಬಹುದು?" ಎಂಬುದಾಗಿ ವಿಚಾರಮಾಡಿನೋಡಿದರೆ ಅನುಮಾನಪ್ರಮಾಣದಿಂದ ತತ್ತತ್ಪ್ರದೇಶವನ್ನೂ ತತ್ತದ್ದಿಗ್ಭಾಗವನ್ನೂ ನಿಶ್ಚಯಿಸಿಕೊಳ್ಳಬಹುದಲ್ಲವೆ?

ಇಲ್ಲ; ಅನುಮಾನಪ್ರಮಾಣದಿಂದ ನಿಶ್ಚಯಿಸಲಾಗುವುದಿಲ್ಲ; ಏತಕ್ಕೆಂದರೆ-ಬೆಂಕಿಯನ್ನು ತಪ್ಪಿಸಿಕೊಳ್ಳದಿರುವ ಹೊಗೆಯೆಂಬ ಲಿಂಗದಿಂದ ಬೆಂಕಿಯೆಂಬ ಲಿಂಗಿಯನ್ನು ನಿಶ್ಚಯಿಸಬಹುದು; ಅದರಂತೆ ಶಬ್ದೋತ್ಪತ್ತಿಗೆ ಅಧಿಕರಣವಾದ ತತ್ತತ್ಪ್ರದೇಶವನ್ನೂ ತತ್ತದ್ದಿಗ್ಭಾಗವನ್ನೂ ತಪ್ಪಿಸಿಕೊಳ್ಳದಿರುವ ಯಾವುದಾದರೊಂದು ಲಿಂಗವು ನಮಗೆ ಪ್ರತ್ಯಕ್ಷಗೋಚರವಾದರಲ್ಲವೆ ಅಂಥ ಲಿಂಗದಿಂದ ತತ್ತತ್ಪ್ರದೇಶವನ್ನೂ, ತತ್ತದ್ದಿಗ್ಭಾಗವನ್ನೂ ನಿಶ್ಚಯಿಸಲಾದೀತು? ಅವ್ಯಭಿಚರಿತವಾದ ಅಂಥ ಲಿಂಗವೇ ಪ್ರತ್ಯಕ್ಷವಾಗಿಲ್ಲ.

ಆದಕಾರಣ—ಶ್ರೋತ್ರೇಂದ್ರಿಯದ ವೃತ್ತಿಗೆ ಶಬ್ದಸ್ವರೂಪವನ್ನು ಗ್ರಹಿಸುವುದರಲ್ಲಿ ಹೇಗೆ ಸಾಮರ್ಥ್ಯವಿರುವುದೋ; ಹಾಗೆಯೇ ಶಬ್ದೋತ್ಪತ್ತಿಪ್ರದೇಶವನ್ನು ಗ್ರಹಿಸುವುದರಲ್ಲಿಯೂ ಸಾಮರ್ಥ್ಯವಿರುವುದೆಂದು ಕಾರ್ಯಬಲದಿಂದ ಕಲ್ಪಿಸಬೇಕು.

## ೧೦೨೭ ಶ್ರೋತ್ರವೃತ್ತೇಸ್ತುಲ್ಯತ್ವೇಽಪಿ ಆಸತ್ತ್ಯಾದಿತಾರತಮ್ಯೇನ ಶಬ್ದಗ್ರಹಣತಾರತಮ್ಯೋಪಪತ್ತಿಃ

ಓಹೋ! ಶ್ರೋತ್ರೇಂದ್ರಿಯವೃತ್ತಿ ಅಷ್ಟಷ್ಟು ದೂರದವರೆಗೆ ತುಲ್ಯವಾಗಿ (ಹೆಚ್ಚುಕಡಮೆಯಿಲ್ಲದೆ) ವ್ಯಾಪಿಸಿರುವುದಾದರೆ—ಅಷ್ಟಷ್ಟು ದೂರದ ಒಳಭಾಗ

ದಲ್ಲಿ ಶಬ್ದಗ್ರಹಣವೂ ತುಲ್ಯವಾಗಿ ಆಗಬೇಕಲ್ಲವೆ? ಹಾಗಿಲ್ಲದೆ ಒಂದುವೇಳೆ ಸ್ಫುಟವಾಗಿಯೂ ಮತ್ತೊಂದುವೇಳೆ ಅಸ್ಫುಟವಾಗಿಯೂ ಶಬ್ದವು ಕೇಳಿಸುವುದಕ್ಕೆ ಕಾರಣವೇನು ?

ಹೀಗೆ ಆಶಂಕಿಸುವವರು ಚಕ್ಷುರಿಂದ್ರಿಯದ ವೃತ್ತಿಯ ಸ್ವಭಾವವನ್ನು ಪರಿಶೀಲಿಸುವವರಾದರೆ ಆದರಿಂದಲೇ ಈ ಆಶಂಕೆಗೆ ಸಮಾಧಾನವನ್ನು ತಿಳಿಯಬಹುದು. ಹೇಗೆಂದರೆ—ಕಣ್ಣಿನಿಂದ ಪದಾರ್ಥಗಳನ್ನು ಗ್ರಹಿಸುವ ಕಾಲದಲ್ಲಿ ನೇತ್ರರಶ್ಮಿ ತನ್ನ ಸ್ಥಾನದಿಂದ ಹೊರಟು ಎಡೆಬಿಡದೆ ದೂರದವರೆಗೂ ತುಲ್ಯವಾಗಿ ವ್ಯಾಪಿಸಿರುವುದು ; ಆದರೂ ಅದು ದೂರದಲ್ಲಿರುವ ಪದಾರ್ಥವನ್ನು ಸ್ವಲ್ಪಸ್ಫುಟವಾಗಿಯೂ, ಸ್ವಲ್ಪಸಮೀಪದಲ್ಲಿರುವ ಪದಾರ್ಥವನ್ನು ಮತ್ತಷ್ಟು ಸ್ಫುಟವಾಗಿಯೂ, ಅತ್ಯಂತಸಮೀಪದಲ್ಲಿರುವ ಪದಾರ್ಥವನ್ನು ಅತ್ಯಂತಸ್ಫುಟವಾಗಿಯೂ ಗ್ರಹಿಸುವುದು ;

ಮತ್ತು—ಗ್ರಾಹ್ಯವಾದ ಪದಾರ್ಥವು ಸೂಕ್ಷ್ಮವಾಗಿದ್ದರೆ ಸ್ವಲ್ಪಸ್ಫುಟವಾಗಿಯೂ, ಸ್ಥೂಲವಾಗಿದ್ದರೆ ಮತ್ತಷ್ಟು ಸ್ಫುಟವಾಗಿಯೂ, ಅತಿಸ್ಥೂಲವಾಗಿದ್ದರೆ ಅತ್ಯಂತಸ್ಫುಟವಾಗಿಯೂ ಗ್ರಹಿಸುವುದು ;

ಮತ್ತು—ಗ್ರಾಹ್ಯವಾದ ಪದಾರ್ಥಕ್ಕೆ ಬೆಳಕಿನ ಸಂಬಂಧವು ಕಡಮೆಯಾಗಿದ್ದರೆ ಸ್ವಲ್ಪಸ್ಫುಟವಾಗಿಯೂ, ಸ್ವಲ್ಪ ಹೆಚ್ಚಾಗಿದ್ದರೆ ಮತ್ತಷ್ಟು ಸ್ಫುಟವಾಗಿಯೂ, ಪ್ರಬಲವಾಗಿದ್ದರೆ ಅತ್ಯಂತಸ್ಫುಟವಾಗಿಯೂ ಗ್ರಹಿಸುವುದು ;

ಹೀಗೆ ಗ್ರಾಹಕವಾದ ಚಕ್ಷುರಿಂದ್ರಿಯಕ್ಕೆ ಗ್ರಾಹ್ಯವಾದ ಪದಾರ್ಥಗಳೊಡನೆ ಸಾಮೀಪ್ಯತಾರತಮ್ಯದಿಂದಲೂ, ಗ್ರಾಹ್ಯಪದಾರ್ಥದ ಸ್ವರೂಪತಾರತಮ್ಯದಿಂದಲೂ, ಗ್ರಹಣಕ್ಕೆ ಸಹಾಯಮಾಡುವ ಸಾಮಗ್ರಿಗಳ ತಾರತಮ್ಯದಿಂದಲೂ ಗ್ರಹಣದಲ್ಲಿ ತಾರತಮ್ಯವು ಹೇಗೆ ಸಂಭವಿಸುವುದೋ ; ಅದರಂತೆ ಶ್ರೋತ್ರೇಂದ್ರಿಯ ವಿಷಯದಲ್ಲಿಯೂ ತಿಳಿಯಬಹುದು.

ಗ್ರಾಹಕವಾದ ಶ್ರೋತ್ರೇಂದ್ರಿಯಕ್ಕೆ ಗ್ರಾಹ್ಯವಾದ ಶಬ್ದದೊಡನೆ ಉಂಟಾಗುವ ಸಾಮೀಪ್ಯತಾರತಮ್ಯದಿಂದಲೂ, ಗ್ರಾಹ್ಯವಾದ ಶಬ್ದದ ಮೃದುತ್ವಮಧ್ಯತ್ವಪರುಷತ್ವಗಳೆಂಬ ಸ್ವರೂಪದ ತಾರತಮ್ಯದಿಂದಲೂ, ಶಬ್ದಗ್ರಹಣಕ್ಕೆ ಸಹಾಯಮಾಡುವ ತಾಲ್ವಾದಿವ್ಯಾಪಾರವೇ ಮೊದಲಾದ ಅಭಿವ್ಯಂಜಕಸಾಮಗ್ರಿಗಳ ಮೃದುತ್ವಾದಿತಾರತಮ್ಯದಿಂದಲೂ ಶಬ್ದಗ್ರಹಣದಲ್ಲಿ ತಾರತಮ್ಯವು ಉಪಪನ್ನವಾಗಿರುವಾಗ ಇದರಲ್ಲಿ ಯಾವ ಆಶಂಕೆಯೂ ಬರಲಾರದು. ಇದು ಸಾಂಖ್ಯದರ್ಶನಕಾರರ ಮತವಾಗಿರುವುದು.

## ೧೦೨೮ ಅಥ ನೈಯಾಯಿಕಮತರೀತ್ಯಾ ಶಬ್ದಾಗಮನ ಪಕ್ಷೋಪಪಾದನಂ.

ನೈಯಾಯಿಕರು ಹೇಳುವುದೇನೆಂದರೆ—ಮೀಮಾಂಸಕರ ಅಭಿಪ್ರಾಯದಂತೆ ಶಬ್ದಕ್ಕೆ ನಿತ್ಯವಿಭುತ್ವವನ್ನೂ, ಶ್ರೋತ್ರೇಂದ್ರಿಯದೊಡನೆ ನಿತ್ಯ ಸಂಬಂಧವನ್ನೂ ಒಪ್ಪಲಾಗುವುದಿಲ್ಲ ; ಸಾಂಖ್ಯರ ಅಭಿಪ್ರಾಯದಂತೆ ಶರೀರದ ಹೊರಭಾಗದಲ್ಲಿ ಶ್ರೋತ್ರವೃತ್ತಿಯ ವ್ಯಾಪ್ತಿಯನ್ನೂ ಒಪ್ಪಲಾಗುವುದಿಲ್ಲ ; ಮತ್ತೇನೆಂದರೆ—ವೀಚೀತರಂಗನ್ಯಾಯದಿಂದ ಶ್ರೋತ್ರಸಮೀಪಕ್ಕೆ ಶಬ್ದದ ಆಗಮನವನ್ನೇ ಒಪ್ಪಬೇಕು ; ಏತಕ್ಕೆಂದರೆ ದುಂದುಭಿ, ಭೇರಿ, ಮೊದಲಾದ ಮಹಾವಾದ್ಯಗಳನ್ನು ಪ್ರಬಲವಾಗಿ ಬಾರಿಸುವ ಕಾಲದಲ್ಲಿ ಅಭಿಘಾತದ ವೇಗಾತಿಶಯದಿಂದ ವಾಯು ಹತ್ತುದಿಕ್ಕುಗಳ ಮೂಲೆಮೂಲೆಗಳಲ್ಲಿಯೂ ಸಂದುಗೊಂದುಗಳಲ್ಲಿಯೂ ಶಬ್ದವನ್ನು ತುಂಬಿದಮೇಲೆ ದೂರಸ್ಥನಾದವನಿಗೆ ಅದೇ ಶಬ್ದವು ಒಂದೆರಡು ನಿಮಿಷಗಳ ವಿಳಂಬದಿಂದ ಕೇಳಿಸುವುದು ; ವಾದ್ಯವನ್ನು ಬಾರಿಸುವವರಿಗೂ ಮತ್ತು ಅದರ ಸಮೀಪದಲ್ಲಿರುವವರಿಗೂ ಅತಿ ಶೀಘ್ರದಲ್ಲಿಯೇ ಕೇಳಿಸುವುದು ; ಹೀಗೆ ಒಂದೇ ಶಬ್ದವು ಕೆಲವರಿಗೆ ವಿಳಂಬವಾಗಿಯೂ, ಕೆಲವರಿಗೆ ಶೀಘ್ರವಾಗಿಯೂ ಕೇಳಿಸುತ್ತದೆಯೆಂಬ ಈ ಲೋಕಾನುಭವಪ್ರತ್ಯಕ್ಷವು ಮೀಮಾಂಸಕರಿಗಾಗಲಿ ಸಾಂಖ್ಯದರ್ಶನಕಾರರಿಗಾಗಲಿ ಹೇಗೆ ಸಮಂಜಸವಾದೀತು? ಶಬ್ದಕ್ಕೆ ಶ್ರೋತ್ರೇಂದ್ರಿಯದೊಡನೆ ನಿತ್ಯಸಂಬಂಧವನ್ನು ಹೇಳುವ ಮೀಮಾಂಸಕರಿಗೆ—ದೂರದಲ್ಲಿರುವವರಿಗೂ ಸಮೀಪದಲ್ಲಿರುವವರಿಗೂ ಶಬ್ದವು ಏಕಕ್ಷಣದಲ್ಲಿಯೇ ಕೇಳಿಸಬೇಕಲ್ಲವೆ? ಶಬ್ದೋತ್ಪತ್ತಿ ಪ್ರದೇಶದಲ್ಲಿ ಶ್ರೋತ್ರವೃತ್ತಿಯನ್ನು ಒಪ್ಪುವ ಸಾಂಖ್ಯರಿಗೆ—ದೂರವರ್ತಿಗಳಿಗೂ ಸಮೀಪವರ್ತಿಗಳಿಗೂ ಶಬ್ದವು ಏಕಕ್ಷಣದಲ್ಲಿಯೇ ಕೇಳಿಸಬೇಕಲ್ಲವೆ ?

ನಮ್ಮ ಮತದಲ್ಲಿಯಾದರೆ—ಸಮೀಪದಲ್ಲಿರುವವರ ಶ್ರೋತ್ರಕ್ಕೆ ಶಬ್ದವು ಅತಿಶೀಘ್ರವಾಗಿ ಬರುವುದರಿಂದಲೂ, ದೂರದಲ್ಲಿರುವವರ ಶ್ರೋತ್ರಕ್ಕೆ ವಿಳಂಬವಾಗಿ ಬರುವುದರಿಂದಲೂ, ಶಬ್ದಗ್ರಹಣದಲ್ಲಿ ವಿಳಂಬಾವಿಳಂಬಗಳು ಸಮಂಜಸಗಳಾಗುವುವು.

ಆದುದರಿಂದಲೇ—ಶ್ರೋತ್ರೇಂದ್ರಿಯದ ಕಡೆಗೆ ಅನುಕೂಲವಾಯು ಬೀಸುವ ಕಾಲದಲ್ಲಿ ಅತಿದೂರದಲ್ಲಿರುವವರಿಗೂ ಶಬ್ದವು ಕೇಳಿಸುವುದು ; ಪ್ರತಿಕೂಲ ವಾಯು ಬೀಸುವುದಾದರೆ ಸಮೀಪದಲ್ಲಿರುವವರಿಗೂ ಶಬ್ದವು ಕೇಳಿಸದೆಹೋಗುವುದು. ಇದರಿಂದ ವಾಯು ಶಬ್ದವನ್ನು ಮತ್ತೊಂದು ಕಡೆಗೆ ಸೆಳೆಯುತ್ತದೆ

ಯೆಂಬುದು ಪ್ರತ್ಯಕ್ಷದಲ್ಲಿ ಅವಗತವಾಗುವಕಾರಣ ಗ್ರಾಹಕವಾದ ಶ್ರೋತ್ರೇಂದ್ರಿಯದ ಸಮೀಪಕ್ಕೆ ಗ್ರಾಹ್ಯವಾದ ಶಬ್ದವೇ ಬರುತ್ತದೆಯೆಂಬುದು ಸಿದ್ಧವಾಯಿತು.

ಮತ್ತು ಹೊರಗಿನ ಶಬ್ದವು ಮನೆಯ ಹೊರಗಡೆಯಲ್ಲಿರುವವರಿಗೆ ಸ್ಫುಟವಾಗಿಯೂ, ಮನೆಯ ಒಳಗಡೆಯಲ್ಲಿರುವವರಿಗೆ ಅಸ್ಫುಟವಾಗಿಯೂ ಕೇಳಿಸುತ್ತದೆಯೆಂಬ ಲೋಕಾನುಭವವೂ ನಮ್ಮ ಮತದಲ್ಲಿಯೇ ಸಂಗತವಾಗುವುದು. ಏತಕ್ಕೆಂದರೆ—ಶಬ್ದವನ್ನು ಒಯ್ಯುತ್ತಿರುವ ಗಾಳಿ ನಿರಾವರಣಪ್ರದೇಶದಲ್ಲಿ ಧಾರಾಳವಾಗಿ ಸಂಚರಿಸುವುದರಿಂದ ಅಲ್ಲಿರುವವರಿಗೆ ಶಬ್ದವು ಸ್ಫುಟವಾಗಿ ಕೇಳಿಸಬಹುದು: ಅದೇ ಗಾಳಿ ಮನೆಯ ಆವರಣದಿಂದ ತಡೆಯಲ್ಪಟ್ಟು ಮನೆಯೊಳಕ್ಕೆ ಧಾರಾಳವಾಗಿ ಹೋಗಲಾರದೆ ಸ್ವಲ್ಪಮಟ್ಟಿಗೆ ಪ್ರವೇಶಿಸಿದುದರಿಂದ ಒಳಗಿರುವವರಿಗೆ ಅದೇ ಶಬ್ದವು ಅಸ್ಫುಟವಾಗಿ ಕೇಳಿಸಬಹುದು. ಆದಕಾರಣ ಪಂಚಭೂತಗಳ ಧರ್ಮವಾದ ಶಬ್ದವೇ ಶ್ರೋತ್ರೇಂದ್ರಿಯದ ಸಮೀಪಕ್ಕೆ ಬರುವುದರಿಂದ ಅಂಥ ಶಬ್ದವನ್ನೇ ಶ್ರೋತ್ರೇಂದ್ರಿಯವು ಗ್ರಹಿಸುತ್ತದೆಯೆಂಬ ನಮ್ಮ ಸಿದ್ಧಾಂತವೇ ಸಮಂಜಸವಾದುದರಿಂದ ಇದನ್ನೇ ಪ್ರಾಜ್ಞರಾದವರೆಲ್ಲರೂ ಅಂಗೀಕರಿಸಬೇಕು.

## ೧೧೨೯ ಅದ್ರವ್ಯಸ್ಯಾಪಿ ಶಬ್ದಸ್ಯ ಸಾಶ್ರಯಸ್ಯ ಶ್ರೋತ್ರಸಮೀಪಗಮನೋಪಪತ್ತಿಃ

ಓಹೋ! ಶಬ್ದಕ್ಕೆ ಗಮನಕ್ರಿಯಾಶ್ರಯತ್ವವನ್ನು ಒಪ್ಪುವಿರೋ? ಹಾಗಾದರೆ ಬಾಹ್ಯವಾದ ಏಕೇಂದ್ರಿಯದಿಂದ ಗ್ರಹಿಸಲ್ಪಡುವ ಶಬ್ದ, ಗಂಧ, ರೂಪ, ರಸ ಮೊದಲಾದ ಅದ್ರವ್ಯಗಳಿಗೆ ಸ್ವಾಶ್ರಯವನ್ನು ಬಿಟ್ಟು ಅನ್ಯತ್ರ ಗಮನವು ಸಂಭವಿಸುವುದಿಲ್ಲವೆಂದು ಹಿಂದೆ ನಾವು ತೋರಿಸಿದ್ದುದಕ್ಕೆ ಪರಿಹಾರವೇನು ?

ಇಂಥ ಆಶಂಕೆ ಸಂಗತವಲ್ಲ; ಪಂಚಭೂತಗಳಿಗೂ ಅಪೃಥಕ್ಸಿದ್ಧವಾಗಿರುವ ಶಬ್ದಕ್ಕೆ ತನ್ನ ಆಶ್ರಯವನ್ನು ಬಿಟ್ಟು ಸ್ವತಂತ್ರವಾಗಿ ಅನ್ಯತ್ರಗಮನವು ಸಂಭವಿಸುವುದೇ ಇಲ್ಲ; ಹಾಗೆ ನಾವು ಹೇಳಿಯೂ ಇಲ್ಲ. ಕೇಸರಿ, ಕಸ್ತೂರಿ, ಪುಷ್ಪ ಮುಂತಾದ ಸುಗಂಧವಸ್ತುಗಳ ಪರಿಮಳವನ್ನು ಗಾಳಿ ಮತ್ತೊಂದುಕಡೆಗೆ ಒಯ್ಯುವಾಗ ಹೇಗಾದರೆ ಪರಿಮಳಮಾತ್ರವನ್ನು ಒಯ್ಯದೆ, ಪರಿಮಳಕ್ಕೆ ಆಶ್ರಯವಾದ ಆ ವಸ್ತುಗಳ ಕೆಲವು ಸೂಕ್ಷ್ಮ ಪರಮಾಣುಗಳನ್ನೂ, ಅವುಗಳ ಜತೆಯಲ್ಲಿಯೇ ಪರಿಮಳವನ್ನೂ ಒಯ್ಯುವುದೋ ; ಅದರಂತೆ ಶಬ್ದವನ್ನು ಒಯ್ಯುವಾಗಲೂ ಶಬ್ದಾಶ್ರಯವಾದ ಆ ಆ ವಸ್ತುಗಳ ಸೂಕ್ಷ್ಮ ಪರಮಾಣುಗಳ ಜತೆಯಲ್ಲಿಯೇ ಶಬ್ದವನ್ನು ಒಯ್ಯುತ್ತದೆಯೆಂದೇ ನಾವು ಹೇಳುವೆವಾದುದರಿಂದ ಉಕ್ತಾಶಂಕೆಗೆ ಅವಕಾಶವಿಲ್ಲ.

ಹಾಗಾದರೆ— " ಶಬ್ದ-ಗಂಧ-ಸೂರ್ಯಾಲೋಕ-ರತ್ನಪ್ರಭಾದಯೋ ಧರ್ಮ್ಯತಿವರ್ತಿನೋ ಗತಿಮಂತಶ್ಚ" ಎಂಬುದಾಗಿ ಆತ್ಮಸಿದ್ಧಿಗ್ರಂಥದಲ್ಲಿ ಶ್ರೀಯಾಮುನಾಚಾರ್ಯರ ಸೂಕ್ತಿಯೊಳಗೆ ಶಬ್ದಪದವು ಹೇಗೆ ಸಂಗತವಾದೀತು? ಶಬ್ದವೂ, ಪರಿಮಳವೂ, ಸೂರ್ಯಕಿರಣವೂ, ರತ್ನದಕಾಂತಿಯೂ, ಮತ್ತು ಇವುಗಳಿಗೆ ಸಮಾಸವಾದುವುಗಳೂ ತಮ್ಮ ಆಶ್ರಯವಸ್ತು ಬಿಟ್ಟು ಅನ್ಯತ್ರ ಸಂಚರಿಸುವುವೆಂದು ಆ ಸೂಕ್ತಿಯಲ್ಲಿ ತೋರಿಬರುವುದಷ್ಟೆ?

ಇಲ್ಲ; ಹಾಗೆ ತೋರುವುದಿಲ್ಲ; ಆ ಸೂಕ್ತಿಯಲ್ಲಿರುವ ಶಬ್ದಪದವು ಗಂಧ ಪದದಂತೆ ಶಬ್ದಾಶ್ರಯವಸ್ತುವನ್ನೂ ಉಪಲಕ್ಷಣರೀತಿಯಾಗಿ ತೋರಿಸುವುದೇ ಅಲ್ಲದೆ ಕೇವಲ ಶಬ್ದವಾಚಕವಲ್ಲ. ದ್ರವ್ಯವಾಚಕವಾದ—" ಸೂರ್ಯಾಲೋಕ, ರತ್ನಪ್ರಭಾ " ಎಂಬ ಶಬ್ದಗಳ ಜತೆಯಲ್ಲಿ ಪಾಠಮಾಡಿರುವುದರಿಂದಲೂ ಶಬ್ದಗಂಧ ಪದಗಳಿಗೆ ಆಶ್ರಯಬೋಧಕತ್ವವನ್ನು ಆ ಸೂಕ್ತಿಯಲ್ಲಿ ಒಪ್ಪುವುದು ಯುಕ್ತವೇ ಸರಿ.

ಆದಕಾರಣ ವಾಯುವೇಗವಶದಿಂದ ಆಶ್ರಯಪರಮಾಣುಗಳ ಜತೆಯಲ್ಲಿ ಶಬ್ದವೇ ಸುತ್ತುಮುತ್ತಲೂ ಹರಿಡಿಕೊಳ್ಳುತ್ತದೆಯೆಂದೇ ಒಪ್ಪಬೇಕು. ಹೀಗೆ ಒಪ್ಪಿದರೇನೇ ಇನ್ನೂ ಅನೇಕವಾದ ಲೋಕಾನುಭವಗಳೂ ಸಮಂಜಸಗಳಾಗುವುವು; ಹೇಗೆಂದರೆ—

" ಗುಹಾಸೌಧಾದಿಸಂಕ್ಷೋಭಃ ಪ್ರತಿಶಬ್ದಶ್ಚ ಜೃಂಭತೇ ।
ನಿಸ್ಸಾಣಾದಿಪ್ರಣಾದೇನ ತದೇತತ್ಪಕ್ಷಸಂಗತಂ ॥ "

ದುಂದುಭಿ ಭೇರಿ ಮೊದಲಾದ ಮಹಾವಾದ್ಯಗಳನ್ನು ಬಾರಿಸುವಾಗಲೂ, ಶತಘ್ನಿ (ಫಿರಂಗಿ) ಮೊದಲಾದ ಆಯುಧವಿಶೇಷಗಳನ್ನು ಉಪಯೋಗಿಸುವಾಗಲೂ—ಸಮೀಪದಲ್ಲಿರುವ ಪರ್ವತದ ಗುಹೆಗಳಲ್ಲೆಲ್ಲಾ ಅತಿವೇಗದಿಂದ ಶಬ್ದವು ಎಡೆಬಿಡದೆ ತುಂಬಿಕೊಂಡುದರಿಂದ ಕ್ಷೋಭೆಯುಂಟಾಗುವುದು; ಮತ್ತು ಅದೇ ಗುಹಾದಿಪ್ರದೇಶದಿಂದ ಪ್ರತಿಧ್ವನಿಹೊರಡುವುದು; ಮನೆ ಮಠ ಉಪ್ಪರಿಗೆ ಮುಂತಾದುವುಗಳ ಕಿಟಿಕಿ-ಕದಗಳೆಲ್ಲಾ ನಡುಗುವುವು; ಇಂಥ ಸಂದರ್ಭದೊಳಗೆ ಇನ್ನೂ ಕೆಲವು ವೇಳೆಗಳಲ್ಲಿ ಕ್ಷುದ್ರಪ್ರಾಣಿಗಳ ಎದೆಯೂ ಒಡೆದುಹೋಗುವುದುಂಟು. "ಸ ಘೋಷೋ ಧಾರ್ತರಾಷ್ಟ್ರಾಣಾಂ ಹೃದಯಾನಿ ವ್ಯದಾರಯತ್" ಎಂಬ ಸಂಜಯನ ವಾಕ್ಯದಲ್ಲಿ ಕೃಷ್ಣಾರ್ಜುನರ ಶಂಖಧ್ವನಿ ದುರ್ಯೋಧನಾದಿಗಳ ಎದೆಗಳನ್ನು ಸೀಳಿತೆಂದು ತೋರುವುದು. ಇದೆಲ್ಲವೂ ಸಂಗತವಾಗಬೇಕಾದರೆ ಶಬ್ದಾಶ್ರಯ

ವಾದ ಆ ಆ ವಸ್ತುಗಳ ಪರಮಾಣುಗಳು ಪ್ರಬಲವಾಯುವಿನಿಂದ ವೇಗವಾಗಿ ನೆಳೆಯಲ್ಪಟ್ಟು ಸಮೀಪದಲ್ಲಿರುವ ಗುಹಾದಿಗಳನ್ನು ಅಪ್ಪಳಿಸಿದುದರಿಂದಲೇ ಇದೆ ಲ್ಲವೂ ಉಂಟಾಗಿರುವುದೆಂದು ಹೇಳಬೇಕು.

## ೧೧೩೦. ಶಬ್ದಗತಮಂದ್ರತ್ವಾದಿಲಿಂಗೇನ ಶಬ್ದೋತ್ಪತ್ತಿದೇಶಾದ್ಯನುಮಾನೋಪಪಾದನಂ.

ಓಹೋ! ಹೀಗೆ ಶಬ್ದವೇ ಶ್ರೋತ್ರೇಂದ್ರಿಯದ ಸಮೀಪಕ್ಕೆ ಬರುವುದಾದರೆ—ಆಗ ಶಬ್ದಮಾತ್ರಕ್ಕೆ ಗ್ರಹಣವುಂಟಾಗಬೇಕು; ಅದರ ಜತೆಯಲ್ಲಿ ಶಬ್ದೋತ್ಪತ್ತಿ ಪ್ರದೇಶಗಳಿಗೆ ಗ್ರಹಣವುಂಟಾಗಕೂಡದು; ಆಗ—"ಸಮೀಪದಲ್ಲಿ ಶಬ್ದವು ಕೇಳಿಸುತ್ತದೆ, ದೂರದಲ್ಲಿ ಶಬ್ದವು ಕೇಳಿಸುತ್ತದೆ, ಪೂರ್ವಭಾಗದಲ್ಲಿ ಶಬ್ದವು ಕೇಳಿಸುತ್ತದೆ, ಪಶ್ಚಿಮಭಾಗದಲ್ಲಿ ಶಬ್ದವು ಕೇಳಿಸುತ್ತದೆ" ಎಂದು ತತ್ತತ್ರ ದೇಶವಿಶಿಷ್ಟವಾಗಿಯೇ ಎಲ್ಲರಿಗೂ ಉಂಟಾಗುತ್ತಿರುವ ಶಬ್ದಗ್ರಹಣಪ್ರತ್ಯಕ್ಷವು ಹೇಗೆ ಸಂಗತವಾದೀತು?

ಹೀಗೆ ಸಂಗತವಾದೀತು—ಉಕ್ತರೀತಿಯಲ್ಲಿ ಶಬ್ದಪ್ರತ್ಯಕ್ಷವುಂಟಾದಮೇಲೆ ಅಂಥ ಶಬ್ದದಲ್ಲಿರುವ ಒಂದಾನೊಂದು ಅತಿಶಯವಿಶೇಷವನ್ನು ಕಂಡು ಅದರಿಂದ ಶಬ್ದೋತ್ಪತ್ತಿಪ್ರದೇಶವಿಶೇಷವನ್ನು ಅವರವರೇ ಅನುಮಿಸಿಕೊಳ್ಳುವರು. ಶಬ್ದದಲ್ಲಿರುವ ಅಂಥ ಅತಿಶಯವಿಶೇಷವೆಂಬ ಲಿಂಗವು ಶಬ್ದಶ್ರವಣಮಾಡಿದವರೆಲ್ಲರಿಗೂ ಸ್ವಸಂವೇದ್ಯವೇ ಆಗಿರುವುದರಿಂದ ಅದರ ಸ್ವರೂಪವನ್ನು ನಾವು ಪುನಃ ತೋರಿಸಿಕೊಡಬೇಕಾದುದಿಲ್ಲ; ಮತ್ತು ಅಂಥ ಲಿಂಗವು ಶಬ್ದೋತ್ಪತ್ತಿಪ್ರದೇಶವನ್ನೇ ತಪ್ಪದೆ ತೋರಿಸಿಕೊಡುವುದರಿಂದ—"ಅವ್ಯಭಿಚರಿತವಾದ ಯಾವುದೊಂದು ಲಿಂಗವೂ ಪ್ರತ್ಯಕ್ಷವಾಗಿಲ್ಲ" ಎಂದು ಹೇಳುವ ಸಾಂಖ್ಯರ ಪ್ರಲಾಪಕ್ಕೂ ಅವಕಾಶವಿಲ್ಲ.

೧. ಗಾಯಕಶಿರೋಮಣಿಗಳು ಮನೆಯ ಒಳಭಾಗದಲ್ಲಿ ಕುಳಿತು ವೀಣೆಯನ್ನು ಬಾರಿಸುತ್ತಿದ್ದರೆ—ಬೀದಿಯಲ್ಲಿ ಹೋಗುವವರು ಆ ಧ್ವನಿಯನ್ನು ಕೇಳಿದೊಡನೆಯೇ ಆ ಧ್ವನಿಯಲ್ಲಿರುವ ಒಂದಾನೊಂದು ಅತಿಶಯವಿಶೇಷದಿಂದ "ಇದು ವೀಣಾಧ್ವನಿಯಾಗಿರುವುದು" ಎಂದು ಹೇಗೆ ನಿಶ್ಚಯಿಸುವರೋ;

೨. ಗಗನಮಂಡಲದಲ್ಲಿ ಗರ್ಜಿಸುತ್ತಿರುವ ಮೇಘಗಳ ಧ್ವನಿಯನ್ನು ಮನೆಯೊಳಗಿರುವವರು ಕೇಳಿದೊಡನೆಯೇ—ಗರ್ಜನದಲ್ಲಿರುವ ಒಂದಾನೊಂದು ಅತಿಶಯವಿಶೇಷದಿಂದ "ಇದು ಮೇಘಧ್ವನಿ" ಎಂದು ಹೇಗೆ ನಿಶ್ಚಯಿಸುವರೋ;

೩. ವರ್ಷಾಕಾಲದ ಮೇಘಾಡಂಬರವನ್ನು ನೋಡಿ ಸಂತೋಷಗೊಂಡು ಮೈಮರೆತು ನರ್ತನಮಾಡುತ್ತಾ ಗಾನಮಾಡುವುದಕ್ಕೆ ಉಪಕ್ರಮಿಸಿದ ನವಿಲುಗಳ ಕೇಕಾಧ್ವನಿಯನ್ನು ಮನೆಯೊಳಗಿರುವವರು ಕೇಳಿದೊಡನೆಯೇ "ಇದು ನವಿಲು ಗಳ ಧ್ವನಿಯಾಗಿರುವುದು" ಎಂದು ಹೇಗೆ ನಿಶ್ಚಯಿಸುವರೋ ;

೪. ವಸಂತಕಾಲದ ಮಾವಿನ ಚಿಗುರುಗಳನ್ನು ಆಕಂಠಪೂರ್ತಿಯಾಗಿ ಸವಿದು ಮದೋನ್ಮತ್ತವಾಗಿ ಪಂಚಮಸ್ವರವನ್ನು ಹಾಡುವುದಕ್ಕೆ ಉಪಕ್ರಮಿಸಿ ರುವ ಕೋಗಿಲೆಗಳ ಇಂಪಾದ ಧ್ವನಿಯನ್ನು ಮನೆಯೊಳಗಿರುವವರು ಕೇಳಿದೊಡ ನೆಯೇ—ಕೋಗಿಲೆಯು ಕಣ್ಣಿಗೆ ಕಾಣದಿದ್ದರೂ, "ಇದು ಕೋಗಿಲೆಯ ಧ್ವನಿ ಯಾಗಿರುವುದು" ಎಂದು ಹೇಗೆ ನಿಶ್ಚಯಿಸುವರೋ ;

೫. ವನಮಧ್ಯದಲ್ಲಿರುವ ಪೊದರುಗಳಲ್ಲಿ ಅಥವಾ ಗುಹೆಗಳಲ್ಲಿ ಅಡಗಿರುವ ಸಿಂಹ-ಶಾರ್ದೂಲ ಮೊದಲಾದ ಪ್ರಾಣಿಗಳ ಗರ್ಜನವನ್ನು ಕೇಳಿದೊಡನೆಯೇ "ಇದು ಇಂಥ ಪ್ರಾಣಿಗಳ ಗರ್ಜನವಾಗಿರುವುದು" ಎಂದು ಮನೆಯೊಳಗಿರುವ ವರು ಹೇಗೆ ನಿಶ್ಚಯಿಸುವರೋ ;

೬. ಮತ್ತು—ಗಾಯಕೋತ್ತಮರ ಗಾನವಿಶೇಷವನ್ನು ಶ್ರವಣಮಾಡು ತ್ತಿರುವ ಸಂಗೀತಕಲಾಭಿಜ್ಞರು ಆ ಗಾನದಲ್ಲಿರುವ ಅತಿಶಯವಿಶೇಷಗಳನ್ನು ಕಂಡು "ಇದು ಭೈರವಿ, ಇದು ಆನಂದಭೈರವಿ, ಇದು ಶಂಕರಾಭರಣ, ಇದು ಕಲ್ಯಾಣಿ, ಇದು ಪಂತುವರಾಳಿ" ಎಂದು ಆ ಆ ರಾಗವಿಶೇಷಗಳನ್ನು ಹೇಗೆ ನಿಶ್ಚಯಿಸುವನೋ ;

ಹಾಗೆಯೇ—ಆ ಆ ಶಬ್ದವಿಶೇಷಗಳನ್ನು ಕೇಳಿದೊಡನೆಯೇ ಅವುಗಳಲ್ಲಿರುವ ಒಂದಾನೊಂದು ಅತಿಶಯವಿಶೇಷವೆಂಬ ಲಿಂಗವನ್ನೂ ಪ್ರತ್ಯಕ್ಷೀಕರಿಸಿ ಅದರಿಂದ— "ಇದು ಸಮೀಪದಲ್ಲಿ ಉಂಟಾದ ಶಬ್ದವು ; ಇದು ದೂರದಲ್ಲಿ ಉಂಟಾದ ಶಬ್ದವು ; ಇದು ಇಂಥ ದಿಕ್ಕಿನಲ್ಲಿ ಉಂಟಾದ ಶಬ್ದವು" ಎಂದು ಶಬ್ದಶ್ರವಣಮಾಡಿದವ ರೆಲ್ಲರೂ ನಿಶ್ಚಯಿಸಿಕೊಳ್ಳುವರು.

ಯದ್ಯಪಿ—ಆ ಅತಿಶಯವು "ಇಂಥದು" ಎಂದು ನಿರೂಪಿಸಿ ತೋರಿಸಲು ಶಕ್ಯವಲ್ಲ ; ಆದರೂ ಅದು ಎಲ್ಲರಿಗೂ ಸ್ವಸಂವೇದ್ಯವಾಗಿ ಪ್ರತ್ಯಕ್ಷಸಿದ್ಧವಾಗಿರು ವುದರಿಂದ ಅದರ ವಿಷಯದಲ್ಲಿ ವಿವಾದಪಡುವವರು ಯಾರೂ ಇಲ್ಲವಾದಪ್ರಯುಕ್ತ ಅದು ಶಬ್ದೋತ್ಪತ್ತಿಪ್ರದೇಶವಿಶೇಷವೆಂಬ ಲಿಂಗಿಯನ್ನು ಅನುಮಿಸುವುದಕ್ಕೆ ಲಿಂಗ ವಾಗಿರಲು ತಡೆಯಿಲ್ಲ ; ಈ ಅಭಿಪ್ರಾಯಗಳನ್ನೆಲ್ಲಾ **ಶ್ರೀಮದ್ವೇದಾಂತದೇಶಿ ಕರು**—

" ಯಥಾಮಯೂರವೀಣಾದೇಃ ಶಬ್ದೋಽಯಮಿತಿ ಗೃಹ್ಯತೇ ।
ತಥಾ ಪ್ರಾಚ್ಯಾದಿಜಾತೋಽಯ ಮಿತಿಲಿಂಗಾತ್ತಥಾವಿಧಾತ್ ॥
ತತ್ರ ಯದ್ಯಪಿ ಶಬ್ದಸ್ಯ ವಿಶೇಷಃ ಕೋಽಪಿ ದುರ್ವಚಃ ।
ತಥಾಽಪಿ ವಿದಿತಸ್ತೈಸ್ತೈರ್ಲಿಂಗಂ ಸ್ಯಾತ್ಸಂಮತೇಷ್ವಿವ ॥ "

ಎಂಬ ಕಾರಿಕೆಗಳಲ್ಲಿ ಸಂಗ್ರಹವಾಗಿ ತೋರಿಸಿರುವರು. ಇದು ನೈಯಾಯಿಕರ ಮತವಾಗಿರುವುದು.

## ೧೦೩೧. ಉಕ್ತಯೋಸ್ಸಾಂಖ್ಯನೈಯಾಯಿಕಪಕ್ಷಯೋರನ್ಯತರಸ್ಯಾನತಿಕ್ರಮಣೀಯತ್ವಂ

ಪೂಜ್ಯರೆ! ಉಕ್ತವಾದ ಸಾಂಖ್ಯಮತವೂ ನೈಯಾಯಿಕಮತವೂ ಯಾವುದೋ ಒಂದು ಹಠದಿಂದ ಹೇಳಿದ ಮತಗಳಾಗಿ ತೋರುವುವು ; ಏತಕ್ಕೆಂದರೆ— ಸಾಂಖ್ಯಮತದಲ್ಲಿ ಶ್ರೋತ್ರೇಂದ್ರಿಯಕ್ಕೆ ಶಬ್ದಸ್ವರೂಪಗ್ರಹಣದಲ್ಲಿ ಮಾತ್ರವೇ ಅಲ್ಲದೆ ಶಬ್ದೋತ್ಪತ್ತಿ ಪ್ರದೇಶವಿಶೇಷಗ್ರಹಣದಲ್ಲಿಯೂ ಸಾಮರ್ಥ್ಯವಿರುವುದೆಂದು ಕಲ್ಪಿಸಬೇಕಾಗಿರುವುದರಿಂದ ಕಲ್ಪನಾಗೌರವದೋಷವು ಪ್ರಾಪ್ತವಾಗುವುದು ; ನೈಯಾಯಿಕಮತದಲ್ಲಿ ಶಬ್ದೋತ್ಪತ್ತಿಪ್ರದೇಶವಿಶೇಷವೆಂಬ ಲಿಂಗಿಯನ್ನು ಅನುಮಿಸುವುದಕ್ಕೆ ಸಾಧನವಾದ ಲಿಂಗವು " ಇಂಥದು " ಎಂದು ತೋರಿಸಲು ಶಕ್ಯವಲ್ಲದಿದ್ದರೂ ಅಂಥ ಲಿಂಗದರ್ಶನವು ಎಲ್ಲರಿಗೂ ಉಂಟೆಂದು ಕಲ್ಪಿಸಬೇಕಾದುದರಿಂದ ಕಲ್ಪನಾಗೌರವದೋಷವು ಆಗಲೂ ತಪ್ಪಿದುದಲ್ಲವಷ್ಟೆ ?

ಓಹೋ ! ಹೀಗೆ ಆಕ್ಷೇಪಿಸುವ ನಿಮಗೆ ಅಭಿಪ್ರಾಯವೇನು ? ಶಬ್ದಗ್ರಹಣಕಾಲದಲ್ಲಿ ಶಬ್ದಮಾತ್ರಕ್ಕೆ ಗ್ರಹಣವುಂಟಾಗುವುದಲ್ಲದೆ ಶಬ್ದೋತ್ಪತ್ತಿಪ್ರದೇಶವಿಶೇಷಗ್ರಹಣವೂ, ಆ ಆ ದಿಗ್ಭಾಗಗಳ ಗ್ರಹಣವೂ ಇಲ್ಲವೇ ಇಲ್ಲವೆಂದು ಅಭಿಪ್ರಾಯವೋ ? ಅಥವಾ— ಇದ್ದರೂ ಕಾರಣವಿಲ್ಲದೆಯೇ ಅದು ಉಂಟಾಗುವುದೆಂದು ಅಭಿಪ್ರಾಯವೋ ? ಅಥವಾ ಕಾರಣಾಂತರದಿಂದಲೇ ಅವುಗಳ ಗ್ರಹಣವುಂಟಾಗುವುದಲ್ಲದೆ ಶ್ರೋತ್ರೇಂದ್ರಿಯದಿಂದಲಾಗಲಿ ಲಿಂಗದಿಂದಲಾಗಲಿ ಉಂಟಾಗುವುದಿಲ್ಲವೆಂದು ಅಭಿಪ್ರಾಯವೋ ?

ಇಲ್ಲಿ ಮೊದಲನೆಯ ಅಭಿಪ್ರಾಯವು ಸಂಗತವಲ್ಲ ; ಹಾಗೆ ಹೇಳುವುದಾದರೆ ಪ್ರತ್ಯಕ್ಷವಿರೋಧವು ಪ್ರಾಪ್ತವಾಗುವುದು ; ಶಬ್ದಗ್ರಹಣಕಾಲದಲ್ಲಿ— ಶಬ್ದವು ಹುಟ್ಟಿದ ಆ ಆ ಪ್ರದೇಶವಿಶೇಷಗಳ ಗ್ರಹಣವೂ ಆ ಆ ದಿಗ್ಭಾಗಗಳ ಗ್ರಹಣವೂ ಸರ್ವರಿಗೂ ಉಂಟಾಗುತ್ತದೆಯೆಂಬುದು ಪ್ರತ್ಯಕ್ಷಸಿದ್ಧವಾದುದರಿಂದ ಇಂಥ

ಪ್ರತ್ಯಕ್ಷದೊಡನೆ ವಿರೋಧವನ್ನು ಯಾರು ತಪ್ಪಿಸಬಲ್ಲರು ? ಕೆಲವು ವೇಳೆಗಳಲ್ಲಿ ಸರಿಯಾದ ಸಾಮಗ್ರಿಯಿಲ್ಲದುದರಿಂದ ದಿಗ್ಭಾಗಗಳ ಗ್ರಹಣವಾಗದಿದ್ದರೂ, ಸಾಮಗ್ರಿಯಿರುವ ಕಾಲಗಳಲ್ಲಿ ತತ್ತದ್ದಿಗ್ಭಾಗವಿಶಿಷ್ಟವಾಗಿಯೇ ಶಬ್ದಗ್ರಹಣವು ಅಬಾಧಿತವಾಗಿ ಎಲ್ಲರಿಗೂ ಉಂಟಾಗುತ್ತಲೇ ಇರುವುದು.

ಎರಡನೆಯ ಅಭಿಪ್ರಾಯವೂ ಸಂಗತವಲ್ಲ; ಹಿಂದೆಯೂ ಮುಂದೆಯೂ ಇಲ್ಲದೆ ಶಬ್ದಗ್ರಹಣಸಮಕಾಲದಲ್ಲಿ ಉಂಟಾಗುವ ತತ್ತತ್ಪ್ರದೇಶವಿಶೇಷಜ್ಞಾನವೂ ದಿಗ್ಭಾಗಜ್ಞಾನವೂ ಆಗಂತುಕವಾದುದರಿಂದ—ಆಗಂತುಕವಾದ ಯಾವುದಾದರೊಂದು ಕಾರಣವು ಅದಕ್ಕೆ ಇದ್ದೇ ಇರಬೇಕು ; "ಆಗಂತುಕಪದಾರ್ಥಕ್ಕೆ ಕಾರಣಾಪೇಕ್ಷೆಯೇ ಇಲ್ಲ" ಎಂದು ಹೇಳುವ ಈ ಮಾತೇ ಸಮಂಜಸವಲ್ಲ ; ವ್ಯಾಘಾತದೋಷದಿಂದ ದೂಷಿತವಾಗುವುದು. ಕಾರಣಾಪೇಕ್ಷೆಯೇ ಇಲ್ಲದ ವಸ್ತು ಆಗಂತುಕವೆನಿಸಿಕೊಳ್ಳುವ ಬಗೆ ಹೇಗೆ ? ಅಂಥ ಪದಾರ್ಥವು ಮೊಲದ ಕೊಂಬಿನಂತೆ ಯಾವಾಗಲೂ ಇಲ್ಲದೆಯಾದರೂ ಇರಬೇಕು ; ಅಥವಾ ಆತ್ಮನಂತೆ ಯಾವಾಗಲೂ ಇದ್ದೇ ಆದರೂ ಇರಬೇಕು ; ಅಷ್ಟುಮಾತ್ರವೇ ಅಲ್ಲದೆ ಆಗಂತುಕವಾಗಲಾರದು.

ಮೂರನೆಯ ಅಭಿಪ್ರಾಯವೂ ಸಂಗತವಲ್ಲ ; ಸಾಂಖ್ಯರು ಹೇಳುವ ಶ್ರೋತ್ರವೆಂಬ ಪ್ರತ್ಯಕ್ಷಪ್ರಮಾಣವನ್ನೂ, ನೈಯಾಯಿಕರು ಹೇಳುವ ಲಿಂಗವೆಂಬ ಅನುಮಾನಪ್ರಮಾಣವನ್ನೂ ನಿರಾಕರಿಸಿಬಿಟ್ಟರೆ ಪ್ರಮಾಣಾಂತರವೆಂಬುದು ಮತ್ತಾವುದು ? ಆಗಮವೆನಿಸಿಕೊಳ್ಳುವ ಶಾಸ್ತ್ರಪ್ರಮಾಣವಂತು ಈ ವಿಷಯದಲ್ಲಿ ಮೊದಲೇ ಇಲ್ಲ. **"ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ"** ಎಂಬುವೇ ಮೊದಲಾದ ಶಾಸ್ತ್ರಗಳಂತೆ **"ಶಬ್ದಗ್ರಹಣಕಾಲೇ ಶಬ್ದೋತ್ಪತ್ತಿದೇಶಗ್ರಹಣಮಪಿ ಭವತಿ"** (ಶಬ್ದವನ್ನು ಗ್ರಹಿಸುವ ಕಾಲದಲ್ಲಿ ಶಬ್ದೋತ್ಪತ್ತಿ ಪ್ರದೇಶಕ್ಕೂ ಗ್ರಹಣವಾಗುವುದು) ಎಂದು ಬೋಧಿಸುವ ಯಾವುದೊಂದು ಶಾಸ್ತ್ರವೂ ಇದುವರೆಗೂ ದೊರೆತಿಲ್ಲವಷ್ಟೆ ?

ಅದೇತಕ್ಕೆ ? ಶಬ್ದೋತ್ಪತ್ತಿದೇಶಗ್ರಹಣವೂ ದಿಗ್ಭಾಗಗ್ರಹಣವೂ ಭ್ರಾಂತಿಸಿದ್ಧವೆಂದು ಏತಕ್ಕೆ ಹೇಳಬಾರದು ? ಇಲ್ಲ ; ಹಾಗೆ ಹೇಳಲಾಗುವುದಿಲ್ಲ : ಭ್ರಾಂತಿಯನ್ನು ಕಲ್ಪಿಸುವುದಾದರೂ ಒಬ್ಬಿಬ್ಬರಿಗೆ ಭ್ರಾಂತಿಯನ್ನು ಕಲ್ಪಿಸಬಹುದು ; ಪ್ರಪಂಚದಲ್ಲಿರುವವರೆಲ್ಲರಿಗೂ ಭ್ರಾಂತಿಯನ್ನು ಹೇಗೆ ಕಲ್ಪಿಸಲಾದೀತು ? ಮತ್ತು ಅದು ಭ್ರಾಂತಿಯೆಂದು ನಿಮಗೆ ಹೇಗೆ ಗೊತ್ತಾಯಿತು ? ಉತ್ಪನ್ನವಾದ ಜ್ಞಾನಕ್ಕೆ ಕಾರಣದೋಷದಿಂದಲಾಗಲಿ ಬಾಧಕಜ್ಞಾನದಿಂದಲಾಗಲಿ ಭ್ರಾಂತಿರೂಪತ್ವವನ್ನು

ಹೇಳಬಹುದು; ಇಲ್ಲಿ ಅವೆರಡೂ ಇಲ್ಲದಿರುವಾಗ ಭ್ರಾಂತಿರೂಪತ್ವವನ್ನು ಹೇಗೆ ಹೇಳಲಾದೀತು? ದಿಗ್ಭಾಗಭ್ರಾಂತಿಗೆ ಕಾರಣಭೂತವಾದ ಯಾವುದೋ ಒಂದು ಧರ್ಮವಿಶೇಷವು ಪ್ರತಿಯೊಬ್ಬ ಪುರುಷನಲ್ಲಿಯೂ ಇದ್ದೇ ಇರುವುದೆಂದು ಹೇಗೆ ಹೇಳಲಾದೀತು? ಒಂದು ವೇಳೆ ಆವುದಾದರೊಂದು ಅಂಥ ಧರ್ಮವು ಪ್ರತಿಪುರುಷ ನಲ್ಲಿಯೂ ಇದ್ದೇ ಇರುವುದಾದರೆ ಅಂಥ ಧರ್ಮದ ಗ್ರಹಣವು ಹೇಗೆ ಉಂಟಾಗು ವುದೋ; ಅದರಂತೆಯೇ ಅದೇ ಧರ್ಮದಿಂದ ಶಬ್ದೋತ್ಪತ್ತಿಪ್ರದೇಶವಿಶೇಷಗಳ ಅನುಮಾನವು ಸಂಭವಿಸಬಹುದಾದಪ್ರಯುಕ್ತ ಆವುಗಳ ಗ್ರಹಣವೂ ಸಂಗತವಷ್ಟೆ?

ಆದಕಾರಣ—ಸಾಂಖ್ಯರ ಹೇಳಿಕೆಯಂತೆ ಪ್ರತ್ಯಕ್ಷದಿಂದಲಾಗಲಿ, ನೈಯಾ ಯಿಕರ ಹೇಳಿಕೆಯಂತೆ ಅನುಮಾನದಿಂದಲಾಗಲಿ ಪ್ರದೇಶವಿಶೇಷಜ್ಞಾನವು ಶಬ್ದ ಗ್ರಹಣಕಾಲದಲ್ಲಿ ಉಂಟಾಗುವುದಾದುದರಿಂದ ಈ ಎರಡು ಮತಗಳೊಳಗೆ ಯಾವು ದಾದರೊಂದು ಮತವನ್ನು ಬಿಡಲಾಗುವುದಿಲ್ಲ. ಆದರೆ ಮೀಮಾಂಸಕರ ಹೇಳಿಕೆ ಯಂತೆ ಶಬ್ದಕ್ಕೆ ಶ್ರೋತ್ರೇಂದ್ರಿಯದೊಡನೆ ನಿತ್ಯಸಂಬಂಧವನ್ನು ಮಾತ್ರ ಒಪ್ಪಲಾ ಗುವುದಿಲ್ಲ. ಏತಕ್ಕೆಂದರೆ ಶಬ್ದಕ್ಕೆ ನಿತ್ಯತ್ವವೂ ವಿಭುತ್ವವೂ ಇಲ್ಲವಷ್ಟೆ? ಈ ವಿಷ ಯವು ಸ್ವಲ್ಪದೂರದಲ್ಲಿಯೇ ವ್ಯಕ್ತಪಡುವುದು.

## ೧೦೩೨ ಶಬ್ದಾಗಮನಪಕ್ಷೇ ನಭೋನಿಷ್ಠಸ್ಯೈವ ಶಬ್ದಸ್ಯ ಗ್ರಾಹ್ಯತ್ವಂ.

ಉಕ್ತವಾದ ನೈಯಾಯಿಕಮತದಲ್ಲಿ ಶ್ರೋತ್ರಪ್ರದೇಶಸನ್ನಿಹಿತವಾದ ಶಬ್ದವೇ ತಾಲ್ವಾದಿವ್ಯಾಪಾರಗಳಿಂದಲೂ ವಾಯುವಿನಿಂದಲೂ ಅಭಿವ್ಯಕ್ತವಾಗಿ ಶ್ರೋತ್ರೇಂದ್ರಿಯದಿಂದ ಗ್ರಹಿಸಲ್ಪಡುವುದೆಂದು ಹೇಳುವಾಗ ಆಕಾಶವರ್ತಿಯಾದ ಶಬ್ದವೇ ಗ್ರಹಿಸಲ್ಪಡುತ್ತದೆಯೆಂದು ಅಂಗೀಕರಿಸಬೇಕು; ಏತಕ್ಕೆಂದರೆ—ಶಬ್ದಾ ಶ್ರಯಗಳಾದ ಭೇರ್ಯಾದಿಗಳಾಗಲಿ ಅವುಗಳ ಅವಯವಗಳಾಗಲಿ ಕಿವಿಯೊಳಗೆ ನುಗ್ಗಿಹೋಗಿರುವುವೆಂದು ಕಲ್ಪನೆಮಾಡುವುದು ಕ್ಲಿಷ್ಟವಾಗಿರುವುದಷ್ಟೆ?

## ೧೦೩೩. ಶ್ರೋತ್ರವೃತ್ತಿಪಕ್ಷೇ ಪಂಚಭೂತವರ್ತಿನೋಽಪಿ ಶಬ್ದಸ್ಯ ಗ್ರಾಹ್ಯತ್ವಂ.

ಉಕ್ತವಾದ ಸಾಂಖ್ಯಮತದಲ್ಲಿ—ಹೊರಗಿರುವ ಶ್ರೋತ್ರವೃತ್ತಿಯಿಂದ ಭೇರ್ಯಾದಿಗಳಲ್ಲಿರುವ ಶಬ್ದವೇ ಗ್ರಹಿಸಲ್ಪಡುತ್ತದೆಯೆಂದು ಹೇಳುವಾಗ ಪಂಚ ಭೂತವರ್ತಿಯಾದ ಶಬ್ದಕ್ಕೂ ಗ್ರಾಹ್ಯತ್ವವು ಉಪಪನ್ನವಾಗಿರುವುದು; ಇವರ ಮತದಲ್ಲಿ ಶಬ್ದವಿದ್ದೆಡೆಗೆ ಶ್ರೋತ್ರವೇ ಬಂದಿರುವುದರಿಂದ ಶಬ್ದಾಶ್ರಯವಾದ

ಭೇರ್ಯಾದಿಗಳಾಗಲಿ ಅವುಗಳ ಸೂಕ್ಷ್ಮಾವಯವಗಳಾಗಲಿ ಕಿವಿಯೊಳಗೆ ಹೋಗ ಬೇಕಾದುದಿಲ್ಲವಷ್ಟೆ ?

## ೧೧೫೪ ವೇದಾಂತಿನಾಂ ಮತೇ ಶ್ರೋತ್ರವೃತ್ತಿಪಕ್ಷಾಭ್ಯುಪಗಮಃ, ಶಬ್ದಾಗಮನಪಕ್ಷದೂಷಣಂ ಚ.

ಸಾಂಖ್ಯರ ಮತ್ತು ನೈಯಾಯಿಕರ ಮತಸ್ಥಿತಿ ಹೀಗಿರಲಿ; ಆದರೆ ಈ ವಿಷಯದಲ್ಲಿ ವೇದಾಂತಿಗಳಿಗೆ ಅಭಿಮತವಾಗಿರುವ ಪಕ್ಷವು ಯಾವುದು? ದೂರಸ್ಥವಾದ ಶಬ್ದವನ್ನು ಗ್ರಹಿಸುವುದಕ್ಕೆ ಶ್ರೋತ್ರೇಂದ್ರಿಯವೇ ಆದರ ಸಮೀಪಕ್ಕೆ ಹೋಗುವುದೆಂಬ ಪಕ್ಷವೇ ವೇದಾಂತಿಗಳಿಗೆ ಸಂಮತವಾಗಿರುವುದೆಂಬ ಅಂಶವನ್ನು ವರದನಾರಾಯಣಭಟ್ಟಾರ್ಯರು ಸ್ಫುಟವಾಗಿ ಹೇಳಿರುವರು; ಹೇಗೆಂದರೆ—

" ದೂರೇ ಶಬ್ದಸ್ಸಮೀಪೇ ಚ ಪ್ರಾಚ್ಯಾಂ ಚೇತ್ಯಾದಿದರ್ಶನಾತ್ ।
ಗತ್ವಾ ಶ್ರೋತ್ರೇಂದ್ರಿಯಂ ತತ್ರತತ್ರ ಶಬ್ದಗ್ರಹಕ್ಷಮಂ ॥
ಆಗತಾ ದೂರತಶ್ಶಬ್ದಮಾಲಾ ಶ್ರೋತ್ರೇಣ ಗೃಹ್ಯತೇ ।
ಸಮವಾಯಾದ್ಯದಿ ತದ್ವೈವಂ ನ ಗೃಹ್ಯೇತ ದೂರಜಾ ॥
ಶಬ್ದಮಾಂದ್ಯಾದಿಭಿರ್ದೂರೋತ್ಥತ್ವಾದಿಗ್ರಹಸಂಭವೇ ।
ಅಪಿ ಪ್ರಾಚ್ಯಾಂ ಪ್ರತೀಚ್ಯಾಂ ಚೇತ್ಯೇವಂ ನ ಗ್ರಹಸಂಭವಃ ॥ "

ಈ ಮೂರು ಕಾರಿಕೆಗಳೊಳಗೆ ಮೊದಲನೆಯ ಕಾರಿಕೆಯಲ್ಲಿ ಸ್ವಪಕ್ಷವನ್ನು ತೋರಿಸಿ ಎರಡನೆಯ ಮೂರನೆಯ ಕಾರಿಕೆಗಳೊಳಗೆ ನೈಯಾಯಿಕರ ಮತವನ್ನು ಅನುವಾದಮಾಡಿ ದೂಷಿಸುತ್ತಾರೆ—

"ದೂರದಲ್ಲಿ ಶಬ್ದವು, ಸಮೀಪದಲ್ಲಿ ಶಬ್ದವು, ಪೂರ್ವಭಾಗದಲ್ಲಿ ಶಬ್ದವು, ಪಶ್ಚಿಮ ಭಾಗದಲ್ಲಿ ಶಬ್ದವು" ಎಂಬುವೇ ಮೊದಲಾದ ಪ್ರತ್ಯಕ್ಷಜ್ಞಾನಗಳು ಲೋಕದಲ್ಲಿ ಕಂಡುಬರುವುದರಿಂದ ಇವುಗಳ ಉಪಪತ್ತಿಗಾಗಿ ಶ್ರೋತ್ರೇಂದ್ರಿಯವೇ ಶಬ್ದವಿದ್ದೆಡೆಗೆ ಹೋಗಿ ಅಲ್ಲಲ್ಲಿ ಶಬ್ದವನ್ನು ಗ್ರಹಿಸುವುದಕ್ಕೆ ಸಮರ್ಥವಾಗಿರುವುದು" ಎಂಬುದು ಮೊದಲನೆಯ ಕಾರಿಕೆಯ ತಾತ್ಪರ್ಯವಾಗಿರುವುದು.

"ದೂರದಿಂದ ಬಂದಿರುವ ಶಬ್ದಪರಂಪರೆಯಲ್ಲಿ ಕೊನೆಯ ಶಬ್ದವು ಶ್ರೋತ್ರಪ್ರದೇಶಕ್ಕೆ ಬಂದು ಅಲ್ಲಿ ಸಮವೇತವಾಗಿರುವಪ್ರಯುಕ್ತ ಶ್ರೋತ್ರೇಂದ್ರಿಯವು ಅದನ್ನು ಗ್ರಹಿಸುವುದು" ಎಂದು ಹೇಳುವುದಾದರೆ ಆಗ ಶ್ರೋತ್ರಪ್ರದೇಶಕ್ಕೆ ಬಂದ ಶಬ್ದಮಾತ್ರಕ್ಕೆ ಗ್ರಹಣವುಂಟಾಗಬೇಕಾದುದರಿಂದ ಪೂರ್ವೋಕ್ತರೀತಿಯಲ್ಲಿ ದೇಶವಿಶೇಷವಿಶಿಷ್ಟಶಬ್ದಗ್ರಹಣವು ಉಂಟಾಗಕೂಡದು—ಎಂಬುದು ಎರಡನೆಯ ಕಾರಿಕೆಯ ತಾತ್ಪರ್ಯವಾಗಿರುವುದು.

" ಅದೇತಕ್ಕೆ ? ಮೊತ್ತಮೊದಲು ಶಬ್ದಮಾತ್ರಕ್ಕೆ ಗ್ರಹಣವುಂಟಾದರೂ ಅಂಥ ಶಬ್ದದಲ್ಲಿರುವ ಮಂದತ್ವ-ಮಧ್ಯತ್ವ-ತೀವ್ರತ್ವ ಮುಂತಾದ ಧರ್ಮವಿಶೇಷಗಳಿಂದ ಆ ಆ ದೇಶವಿಶೇಷಗಳನ್ನು ಅನುಮಿಸಬಹುದಲ್ಲವೆ? ಹವುದು ಅನುಮಿಸಬಹುದು ; ಅದಮಾತ್ರಕ್ಕೆ " ಪೂರ್ವದಲ್ಲಿ ಶಬ್ದವು, ಪಶ್ಚಿಮದಲ್ಲಿ ಶಬ್ದವು " ಎಂಬುದಾಗಿ ಅವ ಗತವಾಗುವ ಆ ಆ ದಿಗ್ಭಾಗಗಳನ್ನು ಹೇಗೆ ಅನುಮಿಸಲಾದೀತು ? ಮಂದತ್ವ-ಮಧ್ಯತ್ವ-ತೀವ್ರತ್ವ ಮೊದಲಾದ ಧರ್ಮಗಳು ಸಮೀಪಪ್ರದೇಶದೂರಪ್ರದೇಶಗಳ ಅನುಮಾನಕ್ಕೆ ಸಾಧನಗಳಾದರೂ, ಆ ಆ ದಿಗ್ವಿಶೇಷಗಳ ಅನುಮಾನಕ್ಕೆ ಸಾಧನ ಗಳಾಗಲಾರವಷ್ಟೆ " ಎಂಬುದು ಪೂರನೆಯ ಕಾರಿಕೆಯ ತಾತ್ಪರ್ಯವಾಗಿರುವುದು.

## ೧೦೩೫. ಶಬ್ದಸ್ಯ ಆಕಾಶೋತ್ಪತ್ತಿವಿನಾಶಸಮಸಮಯೋತ್ಪತ್ತಿ ವಿನಾಶವತ್ತ್ವಪಕ್ಷಾನುವಾದಃ.

ಇಂಥ ಶಬ್ದವು ಆಕಾಶದ ಉತ್ಪತ್ತಿಸಮಕಾಲದಲ್ಲಿ ತಾನೂ ಉತ್ಪತ್ತಿ ಯನ್ನು ಪಡೆದು, ಆಕಾಶದ ವಿಲಯಕಾಲದಲ್ಲಿ ತಾನೂ ವಿಲೀನವಾಗುವುದು ; ಏತ ಕ್ಕೆಂದರೆ—ಆಕಾಶದಿಂದ ಉತ್ಪನ್ನವಾಗುವ ವಾಯ್ವಾದಿಭೂತಗಳು ಹುಟ್ಟುವುದ ಕ್ಕಿಂತಲೂ ಮೊದಲೇ ಆಕಾಶದ ಜತೆಯಲ್ಲಿಯೇ ಉತ್ಪನ್ನವಾಗಿರುವ ಈ ಶಬ್ದಕ್ಕೆ ಪುನಃ ವಾಯ್ವಾದಿಭೂತಗಳ ಉತ್ಪತ್ತಿಸಮಕಾಲದಲ್ಲಿ ಉತ್ಪತ್ತಿ ಸಂಭವಿಸುವುದಿಲ್ಲ. ಉತ್ಪನ್ನವಾಗಿರುವ ವಸ್ತುವಿಗೆ ಪುನಃ ಉತ್ಪತ್ತಿಯಿಲ್ಲವಷ್ಟೆ? ಮತ್ತು ವಾಯ್ವಾದಿ ಭೂತಗಳ ವಿಲಯಾನಂತರಕಾಲದಲ್ಲಿ ಆಕಾಶದೊಡನೆ ಲೀನವಾಗುವ ಈ ಶಬ್ದಕ್ಕೆ ವಾಯ್ವಾದಿಭೂತಗಳ ವಿಲಯಸಮಕಾಲದಲ್ಲಿ ವಿಲಯವು ಸಂಭವಿಸುವುದಿಲ್ಲ ; ಮೊದಲೇ ಲೀನವಾಗುವುದಾದರೆ ಅನಂತರದಲ್ಲಿ ಪುನಃ ಲಯವು ಸಂಭವಿಸುವು ದಿಲ್ಲವಷ್ಟೆ ?

ಮತ್ತು—ಆಕಾಶವೆಂಬ ಭೂತದ ಒಂದು ಭಾಗವೇ ಆಕಾಶತ್ವಾವಸ್ಥೆ ಯನ್ನು ಬಿಟ್ಟು ವಾಯುತ್ವ ಮೊದಲಾದ ಅವಸ್ಥೆಗಳನ್ನು ಪಡೆದು ವಾಯು, ಅಗ್ನಿ, ಜಲ, ಪೃಥಿವಿ ಎಂಬ ಹೆಸರುಗಳನ್ನು ಪಡೆದಿರುವುದರಿಂದ ವಾಯ್ವಾದಿಭೂತಗಳು ಆಕಾಶಭೂತಕ್ಕಿಂತಲೂ ಭಿನ್ನವಸ್ತುಗಳಲ್ಲ. ಆಕಾಶದಲ್ಲಿ ವಾಯುತ್ವಾವಸ್ಥಾ ಪ್ರಾಪ್ತಿಯಾಗುವಾಗ ಆಕಾಶತ್ವಾವಸ್ಥೆಗೆ ನಾಶವುಂಟಾದರೂ ಶಬ್ದಕ್ಕೆ ನಾಶವನ್ನು ಒಪ್ಪಬೇಕಾದುದಿಲ್ಲ ; ಏತಕ್ಕೆಂದರೆ—ವಾಯ್ವಾದಿಭೂತಗಳಲ್ಲಿಯೂ ಶಬ್ದದ ಸದ್ಭಾ ವವನ್ನು ಒಪ್ಪಿರುವುದರಿಂದಲೂ, ಪೂರ್ವಶಬ್ದಕ್ಕೆ ವಿನಾಶವನ್ನು ಕಲ್ಪಿಸಿ ಶಬ್ದಾಂತ ರದ ಉತ್ಪತ್ತಿಯನ್ನು ವಾಯುವಿನಲ್ಲಿ ಸ್ವೀಕರಿಸುವುದಾದರೆ ಗೌರವದೋಷವು

ಪ್ರಸಕ್ತವಾಗುವುದರಿಂದಲೂ ಶಬ್ದಕ್ಕೆ ನಾಶವು ಯುಕ್ತವಲ್ಲವಷ್ಟೆ? ಆದಕಾರಣ ಆಕಾಶದ ಒಂದು ಭಾಗದಲ್ಲಿ ಅವಸ್ಥಾಂತರಪ್ರಾಪ್ತಿಗೋಸ್ಕರ ಆಕಾಶತ್ವಾವಸ್ಥೆಗೆ ನಾಶವುಂಟಾದರೂ ಶಬ್ದವು ನಾಶವನ್ನು ಹೊಂದದೆ ಹಾಗೆಯೇ ನಿಲ್ಲುವುದೆಂದು ಒಪ್ಪುವೆವಾದುದರಿಂದ ಶಬ್ದಕ್ಕೆ ಆಕಾಶೋತ್ಪತ್ತಿವಿನಾಶಸಮಕಾಲದಲ್ಲಿಯೇ ಉತ್ಪತ್ತಿವಿನಾಶಗಳುಂಟಾಗುವುವೆಂಬುದು ಉಪಪನ್ನವಾಗಿರುವುದು.

## ೧೦೩೬ ತತ್ರಾಸ್ವಾರಸ್ಯೋದ್ಭಾವನಪೂರ್ವಕಂ ಸ್ವಾಭಿಮತಪಕ್ಷಾಂತರಪ್ರದರ್ಶನಂ.

"ಓಹೋ! ಆಶ್ರಯನಾಶವುಂಟಾದರೆ ಆಶ್ರಯಗತವಾದ ಗುಣಕ್ಕೆ ಸ್ಥಿತಿ ಸಂಭವಿಸುವುದಿಲ್ಲವಾದಪ್ರಯುಕ್ತ ಆಕಾಶತ್ವಾವಸ್ಥಾನಾಶವುಂಟಾದರೂ ಶಬ್ದಕ್ಕೆ ಸ್ಥಿತಿ ಹೇಗೆ ಸಂಭವಿಸೀತು; ಏತಕ್ಕೆಂದರೆ—ಆಕಾಶತ್ವಾವಸ್ಥಾನಾಶವೇ ಆಕಾಶ ನಾಶರೂಪವಾಗಿರುವುದು; ಆಶ್ರಯನಾಶವುಂಟಾಗಿರುವಾಗಲೂ ಆಶ್ರಯಗತವಾದ ಗುಣಕ್ಕೆ ಸ್ಥಿತಿಯನ್ನು ಒಪ್ಪುವುದಾದರೆ ಸತ್ತ್ವರಜಸ್ತಮೋಗುಣಗಳಿಗೆ ನಿತ್ಯತ್ವವು ಪ್ರಸಕ್ತವಾಗುವುದು; ತ್ರಿಗುಣದ್ರವ್ಯದ ಎಲ್ಲಾ ವಿಕಾರಗಳಲ್ಲಿಯೂ ಆ ಗುಣಗಳಿಗೆ ಸ್ಥಿತಿಯಿರುವುದರಿಂದ ಪೂರ್ವದ್ರವ್ಯಗತವಾದ ಗುಣಗಳಿಗೆ ನಾಶವನ್ನೂ, ಗುಣಾಂತರಕ್ಕೆ ಉತ್ಪತ್ತಿಯನ್ನೂ ಒಪ್ಪುವುದಾದರೆ ಗೌರವದೋಷವನ್ನು ನೀವೇ ತೋರಿಸಿರುತ್ತೀರಿ, ಆದಕಾರಣ ಆಕಾಶತ್ವಾವಸ್ಥಾನಾಶವುಂಟಾದರೆ ಶಬ್ದನಾಶವೂ ಆವಶ್ಯಕವಾದುದರಿಂದ ವಾಯು ಮೊದಲಾದ ಭೂತಗಳಲ್ಲಿರುವ ಶಬ್ದಕ್ಕೆ ವಾಯ್ವಾದಿ ಭೂತಗಳ ಜತೆಯಲ್ಲಿಯೇ ಉತ್ಪತ್ತಿವಿನಾಶಗಳನ್ನು ಒಪ್ಪಬೇಕಲ್ಲವೆ?" ಎಂಬುದಾಗಿ ಆಶಂಕಿಸುವುದಾದರೆ ಮತ್ತೊಂದು ಪಕ್ಷವನ್ನು ಅವಲಂಬಿಸುವೆವು; ಶಬ್ದಸಾಮಾನ್ಯಕ್ಕೆ ಆಕಾಶದ ಜತೆಯಲ್ಲಿ ಉತ್ಪತ್ತಿವಿನಾಶಗಳನ್ನು ಅಂಗೀಕರಿಸುವುದಿಲ್ಲ; ಆಕಾಶಗತವಾದ ಶಬ್ದಮಾತ್ರಕ್ಕೆ ಆಕಾಶದ ಜತೆಯಲ್ಲಿ ಉತ್ಪತ್ತಿವಿನಾಶಗಳನ್ನು ಅಂಗೀಕರಿಸಿ, ವಾಯು ಮೊದಲಾದ ಉಳಿದ ಭೂತಗಳಲ್ಲಿರುವ ಶಬ್ದಗಳಿಗೆ ಆ ಆ ಭೂತಗಳ ಜತೆಯಲ್ಲಿಯೇ ಉತ್ಪತ್ತಿವಿನಾಶಗಳನ್ನು ಒಪ್ಪುವೆವು.

## ೧೦೩೭ ವರ್ಣಾನಾಮಾಕಲ್ಪಸ್ಥಾಯಿತ್ವಂ, ಪ್ರತ್ಯೇಕಮೇಕತ್ವಂ ಚ.

ಪೂಜ್ಯರೆ! ಆಕಾಶವರ್ತಿಯಾದ ಶಬ್ದಕ್ಕೆ ಆಕಾಶದ ಜತೆಯಲ್ಲಿ ಉತ್ಪತ್ತಿವಿನಾಶಗಳೆಂದು ಹೇಳಿದಿರಿ; ಇದರಿಂದ ಪ್ರಳಯಕಾಲದವರೆಗೆ ಆಕಾಶವು ಸ್ಥಿರವಾದಪ್ರಯುಕ್ತ ವರ್ಣಾತ್ಮಕಶಬ್ದವೂ ಅದುವರೆಗೆ ಸ್ಥಿರವಾಗಿರುವುದೆಂದು ಹೇಳಿದಂತಾಯಿತು; ಆದರೆ ಇದು ಸಂಗತವಾಗುವುದಿಲ್ಲ; "ಇದಾನೀಮುತ್ಪನ್ನೋ

**ಗಕಾರಃ, ಇದಾನೀಂ ವಿನಷ್ಟೋ ಗಕಾರಃ**" (ಈಗ ಗಕಾರವು ಹುಟ್ಟಿತು-ಈಗ ಗಕಾರವು ನಷ್ಟವಾಯಿತು) ಎಂಬುದಾಗಿ ವರ್ಣಗಳಿಗೆ ಉತ್ಪತ್ತಿವಿನಾಶಪ್ರತೀತಿ ಯಿರುವಾಗ ಆಕಲ್ಪಸ್ಥಾಯಿತ್ವವನ್ನು ಇವುಗಳಿಗೆ ಹೇಗೆ ಹೇಳಲಾದೀತು ?

ಅದೇತಕ್ಕೆ ? "**ಸ ಏವಾಯಂ ಗಕಾರಃ**" (ಇದೂ ಅದೇ ಗಕಾರವಾಗಿ ರುವುದು) ಎಂಬುದಾಗಿ ಅಬಾಧಿತವಾದ ಪ್ರತ್ಯಭಿಜ್ಞೆಯಿರುವುದರಿಂದ ಪೂರ್ವೋತ್ತರಕಾಲವರ್ತಿಯಾದ ಗಕಾರಕ್ಕೆ ಅಭೇದವೂ ಸ್ಥಿರತ್ವವೂ ಸಿದ್ಧವಾಗಿರುವಕಾರಣ ವರ್ಣಸ್ವರೂಪಕ್ಕೆ ಪ್ರತಿಕ್ಷಣದಲ್ಲಿಯೂ ಉತ್ಪತ್ತಿವಿನಾಶಗಳು ಸಂಭವಿಸುವುದಿಲ್ಲ ವಾದಪ್ರಯುಕ್ತ ಉತ್ಪತ್ತಿವಿನಾಶಪ್ರತೀತಿ ವರ್ಣಸ್ವರೂಪವನ್ನು ಅವಲಂಬಿಸುವುದಿಲ್ಲ; ವರ್ಣಾಭಿವ್ಯಂಜಕವಾದ ತಾಲ್ವಾದಿವ್ಯಾಪಾರಗಳನ್ನೇ ಅವಲಂಬಿಸುವುದು ; "**ಉತ್ಪನ್ನೋ ಗಕಾರಃ-ವಿನಷ್ಟೋ ಗಕಾರಃ**" ಎಂಬ ಪ್ರತೀತಿಗೆ "ಗಕಾರ ಸ್ವರೂಪವೇ ಉತ್ಪನ್ನವಾಯಿತು-ಗಕಾರಸ್ವರೂಪವೇ ನಷ್ಟವಾಯಿತು" ಎಂದು ಅಭಿಪ್ರಾಯವಲ್ಲ ; ಗಕಾರಕ್ಕೆ ಅಭಿವ್ಯಂಜಕವಾಗಿರುವ ತಾಲ್ವಾದಿವ್ಯಾಪಾರವು ಉತ್ಪನ್ನವಾಯಿತೆಂದೂ, ತಾಲ್ವಾದಿವ್ಯಾಪಾರವು ನಷ್ಟವಾಯಿತೆಂದೂ ಅಭಿಪ್ರಾಯ ವಾಗಿರುವುದು. ಆದಕಾರಣ ವರ್ಣಗಳಿಗೆ ಪ್ರಳಯಪರ್ಯಂತವಾಗಿ ಸ್ಥಾಯಿತ್ವವು ಸಂಭವಿಸಬಹುದಲ್ಲವೆ ?

ಇಲ್ಲ ; ಹಾಗೆ ಸ್ಥಾಯಿತ್ವವು ಸಂಭವಿಸುವುದಿಲ್ಲ ; ಉಕ್ತವಾದ ಪ್ರತ್ಯಭಿಜ್ಞೆ ಪೂರ್ವೋತ್ತರಕಾಲವರ್ತಿಗಳಾದ ಗಕಾರವ್ಯಕ್ತಿಗಳಿಗೆ ಅಭೇದವನ್ನು ತೋರಿಸುವುದಿಲ್ಲ ; ಕಿಂತು ಅವುಗಳಲ್ಲಿರುವ ಗತ್ವವೆಂಬ ಜಾತಿ ಒಂದೇ ಆಗಿರುವುದೆಂದು ತೋರಿಸುವುದು ; ಏತಕ್ಕೆಂದರೆ—ಪೂರ್ವೋತ್ತರಕಾಲವರ್ತಿಗಳಾದ ಗಕಾರವ್ಯಕ್ತಿಗಳೊಳಗೆ ಒಂದರಲ್ಲಿ ತಾರತ್ವಧರ್ಮವೂ (ಉಚ್ಚಸ್ವರತ್ವವೂ) ಮತ್ತೊಂದರಲ್ಲಿ ಮಂದತ್ವ ಧರ್ಮವೂ (ನೀಚಸ್ವರತ್ವವೂ) ಇರುವುದರಿಂದ ಪರಸ್ಪರವಿರುದ್ಧಗಳಾದ ಧರ್ಮಗಳಿಗೆ ಆಶ್ರಯಗಳಾಗಿರುವ ಪೂರ್ವೋತ್ತರಗಕಾರವ್ಯಕ್ತಿಗಳಿಗೆ ಅಭೇದವನ್ನು ಹೇಗೆ ಹೇಳಲಾದೀತು ?

ಹೀಗೆ ಹೇಳಲಾದೀತು—ಅಬಾಧಿತವಾದ ಪ್ರತ್ಯಭಿಜ್ಞೆ ಜಾತಿಮಾತ್ರಕ್ಕೆ ಅಭೇದವನ್ನು ತೋರಿಸುವುದಿಲ್ಲ ; ಜಾತಿವಿಶಿಷ್ಟಗಕಾರವ್ಯಕ್ತಿಗೇ ಅಭೇದವನ್ನು ತೋರಿಸುತ್ತ ವಿರುದ್ಧಧರ್ಮಗಳನ್ನೆಲ್ಲಾ ದೂರವಾಗಿ ತಳ್ಳುವುದು ; ಎಂದರೆ ತಾರತ್ವ ಮಂದತ್ವ ಮೊದಲಾದ ವಿರುದ್ಧಧರ್ಮಗಳು ವರ್ಣಸ್ವರೂಪಗತವಲ್ಲ ; ಕಿಂತು ವರ್ಣಾಭಿವ್ಯಂಜಕವಾದ ವಾಯುನಿಷ್ಠಧರ್ಮಗಳಾಗಿರುವುವು. ವರ್ಣಸ್ವರೂಪದಲ್ಲಿ ವಿರುದ್ಧ

ಧರ್ಮಗಳಿದ್ದರಲ್ಲವೆ ವರ್ಣಗಳಿಗೆ ಭೇದವನ್ನು ಹೇಳಬಹುದಾಗಿದ್ದಿತು? ವಿರುದ್ಧಧರ್ಮಗಳು ವರ್ಣಾಭಿವ್ಯಂಜಕವಾದ ವಾಯುನಿಷ್ಠಗಳಾದುದರಿಂದಲೂ, ವರ್ಣವಿಷಯದಲ್ಲಿ ಅಬಾಧಿತವಾದ ಅಭೇದಪ್ರತ್ಯಭಿಜ್ಞೆಯಿರುವುದರಿಂದಲೂ ವರ್ಣಗಳಿಗೆ ಪ್ರಳಯಪರ್ಯಂತವಾಗಿ ಸ್ಥಿರತ್ವವನ್ನು ಹೇಳಲು ಯಾವ ಅಡ್ಡಿಯೂ ಇಲ್ಲ.

## ೧೦೩೮. ತಾರತ್ವಾದಿವಿರುದ್ಧಧರ್ಮಾಣಾಂ ವ್ಯಂಜಕವಾಯುಧರ್ಮತ್ವೇ ಪ್ರಮಾಣಪ್ರದರ್ಶನಂ.

ಹಾಗಾದರೆ ತಾರತ್ವ, ಮಂದತ್ವ, ಮೊದಲಾದ ವಿರುದ್ಧಧರ್ಮಗಳು ವರ್ಣಾಭಿವ್ಯಂಜಕವಾದ ವಾಯುವಿನಲ್ಲಿಯೇ ಇರುವುವೆಂಬುದರಲ್ಲಿ ಪ್ರಮಾಣವೇನು? **ಶ್ರೀಮತ್ಪರಾಶರಮಹರ್ಷಿಯ** ಸೂಕ್ತಿಯೇ ಈ ವಿಷಯದಲ್ಲಿ ಪ್ರಮಾಣವಾಗಿರುವುದೆಂದು ತಿಳಿಯಬಹುದು. ಹೇಗೆಂದರೆ—

**“ವೇಣುರಂಧ್ರವಿಭೇದೇನ ಭೇದಷ್ಷಡ್ಜಾದಿಸಂಜ್ಞಿತಃ ।**
**ಅಭೇದವ್ಯಾಪಿನೋ ವಾಯೋಸ್ತಥಾಽಸೌ ಪರಮಾತ್ಮನಃ” ॥**

ಎಂಬ ಈ ಶ್ಲೋಕವು ಜೀವಪ್ರಕರಣದಲ್ಲಿ ಪಠಿತವಾಗಿರುವುದರಿಂದ ಇದರಲ್ಲಿರುವ ಪರಮಾತ್ಮಶಬ್ದವು ಜೀವಾತ್ಮನನ್ನೇ ತೋರಿಸುವುದು; ಪರಮಾತ್ಮಶಬ್ದಕ್ಕೆ ಜೀವಾತ್ಮವಿಷಯವಾಗಿ ಪ್ರಯೋಗವೇ ಇಲ್ಲವೆಂದು ಭ್ರಮಿಸಬಾರದು;

**“ಪರಮಾತ್ಮೇತಿ ಚಾಪ್ಯುಕ್ತೋ ದೇಹೇಽಸ್ಮಿನ್ ಪುರುಷಃ ಪರಃ ।”**
**“ಯ ಏನಂ ವೇತ್ತಿ ಪುರುಷಂ ಪ್ರಕೃತಿಂ ಚ ಗುಣೈಸ್ಸಹ ।”**

**“ತೈರೇವ ವಿಗತಃ ಶುದ್ಧಃ ಪರಮಾತ್ಮಾ ನಿಗದ್ಯತೇ ।”** ಎಂಬುವೇ ಮೊದಲಾಗಿ ಅನೇಕಸ್ಥಳಗಳಲ್ಲಿ ಪ್ರಯೋಗವಿರುವುದು; ಈ ಸ್ಥೂಲದೇಹಕ್ಕೆ ಇಂದ್ರಿಯಮನಃಪ್ರಾಣಗಳಿಗಿಂತಲೂ ಜೀವಾತ್ಮನೇ ಮುಖ್ಯನಿಯಾಮಕನಾದುದರಿಂದಲೂ, ಪರಿಶುದ್ಧಾವಸ್ಥೆಯಲ್ಲಿ ಜ್ಞಾನದ್ವಾರಾ ಸರ್ವತ್ರ ವ್ಯಾಪ್ತಿ ಜೀವನಿಗೆ ಸ್ವಾಭಾವಿಕವಾದುದರಿಂದಲೂ, ಪರಮಾತ್ಮಶಬ್ದವು ಜೀವಾತ್ಮನಲ್ಲಿ ಪ್ರವರ್ತಿಸಬಹುದು. ಉದಾಹೃತವಾದ ವಿಷ್ಣುಪುರಾಣಶ್ಲೋಕದ ಅಭಿಪ್ರಾಯವೇನೆಂದರೆ—ಗಾಯಕರು ವೇಣುಗಾನವನ್ನು ಮಾಡುವ ಕಾಲದಲ್ಲಿ ಅವರ ಮುಖದಿಂದ ಹೊರಡುವ ವಾಯು ತನ್ನ ನೈಜವಾದ ವಾಯುತ್ವಾಕಾರವನ್ನು ಬಿಡದೆ ವೇಣುವಿನಲ್ಲಿ ಪ್ರವೇಶಿಸಿ ಆ ವೇಣುವಿನಲ್ಲಿರುವ ಅನೇಕರಂಧ್ರಗಳೊಡನೆ ಸಂಬಂಧವನ್ನು ಪಡೆವುದು; ಆ ರಂಧ್ರಗಳಿಗೆ ನಿಷಾದ, ಋಷಭ, ಗಾಂಧಾರ, ಷಡ್ಜ, ಮಧ್ಯಮ, ಧೈವತ, ಪಂಚಮ ಎಂಬ ಸಂಜ್ಞೆಗಳಿರುವುದರಿಂದ ವಾಯುವಿನ ಯಾವ ಯಾವ

ಅಂಶಗಳು ಯಾವ ಯಾವ ರಂಧ್ರದೊಡನೆ ಸಂಬಂಧವನ್ನು ಪಡೆವುವೋ ಆ ಆ ಅಂಶಗಳು ಆ ಆ ರಂಧ್ರಗಳ ಸಂಜ್ಞೆಗಳನ್ನು ಪಡೆವುವು. ಹೀಗೆ ಎಲ್ಲಾ ಅಂಶಗಳಿಗೂ ವಾಯುತ್ವವೆಂಬ ಸ್ವಾಭಾವಿಕಾಕಾರವು ತುಲ್ಯವಾಗಿಯೇ ಇದ್ದರೂ ಕೆಲವು ಅಂಶಗಳು ಷಡ್ಜವೆಂಬ ಸಂಜ್ಞೆಯನ್ನೂ, ಇನ್ನು ಕೆಲವು ಅಂಶಗಳು ಇನ್ನೊಂದು ಸಂಜ್ಞೆಯನ್ನೂ, ಮತ್ತು ಕೆಲವು ಅಂಶಗಳು ಮತ್ತೊಂದು ಸಂಜ್ಞೆಯನ್ನೂ ಪಡೆವುದಕ್ಕೆ ಆ ಆ ರಂಧ್ರವಿಶೇಷಗಳ ಸಂಬಂಧವೇ ಕಾರಣವಾಗಿರುವುದರಿಂದ ಷಡ್ಜತ್ವಾದಿಧರ್ಮಗಳು ವಾಯ್ವಂಶಗಳಿಗೆ ಔಪಾಧಿಕಗಳಾಗಿರುವುವೇ ಹೊರತು ಸ್ವಾಭಾವಿಕಗಳಲ್ಲ; ಅದರಂತೆ ದೇವ-ಮನುಷ್ಯ-ತಿರ್ಯಕ್-ಸ್ಥಾವರ ಎಂಬ ನಾಲ್ಕು ಬಗೆಯ ಶರೀರಗಳಲ್ಲಿ ಕರ್ಮಾನುಸಾರವಾಗಿ ಪ್ರವೇಶಿಸಿರುವ ಜೀವವ್ಯಕ್ತಿಗಳಿಗೆ ಎಲ್ಲಾ ಶರೀರಗಳಲ್ಲಿಯೂ ಜ್ಞಾನೈಕಾಕಾರತ್ವವು ತುಲ್ಯವಾಗಿದ್ದರೂ ದೇವ-ಮನುಷ್ಯ ಇತ್ಯಾದಿವ್ಯವಹಾರಕ್ಕೆ ಆ ಆ ಶರೀರಗಳ ಸಂಬಂಧವೇ ಕಾರಣವಾಗಿರುವುದರಿಂದ ದೇವತ್ವ-ಮನುಷ್ಯತ್ವಾದಿಧರ್ಮಗಳು ಆತ್ಮನಿಗೆ ಶರೀರದ್ವಾರಕಗಳಾಗಿ ಔಪಾಧಿಕಧರ್ಮಗಳಾಗುವುವೇ ಹೊರತು ಸ್ವಾಭಾವಿಕಗಳಲ್ಲ; ಎಂಬುದು ಶ್ಲೋಕಾಭಿಪ್ರಾಯವಾಗಿರುವುದು.

ಆದಕಾರಣ ತಾರತ್ವ-ಮಂದತ್ವ ಮೊದಲಾದ ವಿರುದ್ಧಧರ್ಮಗಳು ವರ್ಣಾಭಿವ್ಯಂಜಕವಾಯುಧರ್ಮಗಳೇ ಆದುದರಿಂದ ವರ್ಣವ್ಯಕ್ತಿಭೇದಕ್ಕೆ ಹೇತುವಾದ ವಿರುದ್ಧಧರ್ಮಗಳು ವರ್ಣದಲ್ಲಿ ಇಲ್ಲವಾಗಿ ಅಬಾಧಿತಪ್ರತ್ಯಭಿಜ್ಞಾಬಲದಿಂದ ವರ್ಣಗಳಿಗೆ ಆಕಲ್ಪಸ್ಥಾಯಿತ್ವವನ್ನು ಒಪ್ಪುವುದರಲ್ಲಿ ಯಾವ ಅಡ್ಡಿಯೂ ಇಲ್ಲ. ಆದುದರಿಂದಲೇ ಪ್ರಳಯಪರ್ಯಂತವೂ ಸ್ಥಾಯಿಯಾಗಿ ನಿಂತಿರುವ ಗಕಾರವ್ಯಕ್ತಿಗೆ ಎಷ್ಟು ಕೋಟ್ಯಾವೃತ್ತಿ ಉಚ್ಚಾರಣೆಯಾದರೂ ಉಚ್ಚಾರಣಭೇದವೇ ಇರುವುದಲ್ಲದೆ ಗಕಾರವ್ಯಕ್ತಿಭೇದವಿಲ್ಲ. ಒಂದೇ ಗಕಾರವ್ಯಕ್ತಿ ತಾವತ್ಪರ್ಯಂತವೂ ಪುನಃ ಪುನಃ ಉಚ್ಚಾರಣೆಗೆ ವಿಷಯವಾಗುವುದು; ಇದರಂತೆಯೇ ಇತರವರ್ಣಗಳಿಗೂ ಸ್ಥಾಯಿತ್ವವನ್ನೂ ಏಕತ್ವವನ್ನೂ ತಿಳಿಯಬೇಕು.

## ೧೧೩೪ ತಾರತ್ವಾದಿವಿರುದ್ಧಧರ್ಮಾಣಾಂ ವರ್ಣಧರ್ಮತ್ವಸ್ಫೋರಕ ವಿಷ್ಣುಚಿತ್ತಾರ್ಯಸೂಕ್ತಿವಿರೋಧಪರಿಹಾರಃ.

ಓಹೋ! ತಾರತ್ವ-ಮಂದತ್ವ ಮೊದಲಾದ ವಿರುದ್ಧಧರ್ಮಗಳು ವರ್ಣಧರ್ಮಗಳಲ್ಲವೆಂದು ಹೇಳುವುದಾದರೆ ಶ್ರೀವಿಷ್ಣುಚಿತ್ತಾರ್ಯರ ಸೂಕ್ತಿಯೊಡನೆ ವಿರೋಧವು ಪ್ರಸಕ್ತವಾಗುವುದಿಲ್ಲವೋ? “ಶ್ರೋತ್ರಮಪಿ ಇತರೇಂದ್ರಿಯವತ್

**ಶಬ್ದತ್ವ-ಗತ್ವ-ಮೃದುತ್ವ-ಪರುಷತ್ವ-ಮಂದತ್ವ ಮಧ್ಯಮತ್ವಾದ್ಯನಂತ ವಿಶೇಷಾತ್ಮಕವಸ್ತುಗ್ರಾಹಕಂ"** ಎಂಬ ಅವರ ಸೂಕ್ತಿಯಲ್ಲಿ—"ಚಕ್ಷುಸ್ಸೇ ಮೊದಲಾದ ಇತರೇಂದ್ರಿಯಗಳು ತಮ್ಮ ತಮ್ಮ ವಿಷಯಗಳಾದ ರೂಪಾದಿಗಳನ್ನು ಗ್ರಹಿಸುವಾಗ ಶುಕ್ಲತ್ವ-ನೀಲತ್ವ ಮೊದಲಾದ ಅನೇಕಧರ್ಮವಿಶೇಷಗಳೊಡನೆ ಕೂಡಿಯೇ ಇರುವ ರೂಪಾದಿಗಳನ್ನು ಹೇಗೆ ಗ್ರಹಿಸುವುವೋ ; ಅದರಂತೆ ಶ್ರೋತ್ರೇಂದ್ರಿಯವೂ ತನ್ನ ವಿಷಯವಾದ ಶಬ್ದವನ್ನು ಗ್ರಹಿಸುವ ಕಾಲದಲ್ಲಿ ಶಬ್ದತ್ವ ಗತ್ವ ಮೃದುತ್ವ ಪರುಷತ್ವ ಮಂದತ್ವ ಮಧ್ಯಮತ್ವ ಮೊದಲಾದ ಅನೇಕಧರ್ಮಗಳಿಂದ ಕೂಡಿಯೇ ಇರುವ ಶಬ್ದವನ್ನು ಗ್ರಹಿಸುವುದೇ ಅಲ್ಲದೆ ನಿರ್ವಿಶೇಷವಾದ (ಸಕಲವಿಶೇಷವಿರಹಿತವಾದ) ಶಬ್ದಸ್ವರೂಪವನ್ನು ಗ್ರಹಿಸುವುದಿಲ್ಲ" ಎಂದು ಹೇಳಿರುವಕಾರಣ ಮೃದುತ್ವ-ಪರುಷತ್ವ ಮೊದಲಾದ ವಿರುದ್ಧಧರ್ಮಗಳು ಶಬ್ದಧರ್ಮಗಳೇ ಆಗಿರುವುವೆಂದು ಅವರ ಅಭಿಪ್ರಾಯವು ಅವಗತವಾಗುವುದಲ್ಲವೆ?

ಇಲ್ಲ—ಅವರಿಗೆ ಅಂಥ ಅಭಿಪ್ರಾಯವೇ ಇಲ್ಲ ; ಮತ್ತೇನೆಂದರೆ—ಇಂದ್ರಿಯಜನ್ಯವಾದ ಪ್ರತ್ಯಕ್ಷಜ್ಞಾನವೂ ನಿರ್ವಿಶೇಷವಸ್ತುವನ್ನೇ ಗ್ರಹಿಸುವುದೆಂದೂ, ಸವಿಶೇಷವಸ್ತುವನ್ನು ಗ್ರಹಿಸುವುದಿಲ್ಲವೆಂದೂ ಹೇಳುವ ನಿರ್ವಿಶೇಷವಸ್ತುವಾದಿಗಳ ಮತವನ್ನು ನಿರಾಕರಿಸುವ ಸಂದರ್ಭದಲ್ಲಿ ಇತರೇಂದ್ರಿಯಗಳಂತೆ ಶ್ರೋತ್ರೇಂದ್ರಿಯವೂ ಸವಿಶೇಷವಸ್ತುವನ್ನೇ ಗ್ರಹಿಸುವುದಲ್ಲದೆ ನಿರ್ವಿಶೇಷವಸ್ತುವನ್ನು ಗ್ರಹಿಸುವುದಿಲ್ಲವೆಂದು ತೋರಿಸುವುದಕ್ಕೋಸ್ಕರ ವ್ಯಂಜಕವಾಯುಧರ್ಮಗಳನ್ನು ವ್ಯಂಗ್ಯವಾದ ಶಬ್ದದಲ್ಲಿ ಆರೋಪಿಸಿ ಹಾಗೆ ಹೇಳಿರುವರಾದುದರಿಂದ ಆ ವಿರುದ್ಧಧರ್ಮಗಳು ಶಬ್ದಕ್ಕೆ ಸ್ವಭಾವಸಿದ್ಧಗಳೆಂದು ಹೇಳುವುದರಲ್ಲಿ ಅವರಿಗೆ ಅಭಿಪ್ರಾಯವಿಲ್ಲ ; ಮತ್ತೊಂದರ ಧರ್ಮವನ್ನು ಇನ್ನೊಂದರಲ್ಲಿ ಆರೋಪಿಸಿ ಗ್ರಹಿಸುವಾಗಲೂ ನಿರ್ವಿಶೇಷಗ್ರಹಣವಿಲ್ಲವೆಂದು ನಿರಾಕರಿಸಬಹುದಲ್ಲವೆ ?

ಹಾಗಿಲ್ಲದೆ ಆ ವಿರುದ್ಧಧರ್ಮಗಳು ಶಬ್ದಧರ್ಮಗಳೇ ಆಗಿರುವುವೆಂದು ಅಭಿಪ್ರಾಯವಿರುವ ಪಕ್ಷದಲ್ಲಿ ಉಪನಿಷದ್ಭಾಷ್ಯದೊಳಗೆ ಅವರು ಶಬ್ದಕ್ಕೂ ವಾಯುವಿಗೂ ವ್ಯಂಗ್ಯವ್ಯಂಜಕಭಾವವನ್ನು ಹೇಳುತ್ತಿರಲಿಲ್ಲ ; ಜನ್ಯಜನಕಭಾವವನ್ನೇ ಹೇಳುತ್ತಿದ್ದರು. ಹೇಗೆಂದರೆ—"**ನಮಸ್ತೇ ವಾಯೋ-ತ್ವಮೇವ ಪ್ರತ್ಯಕ್ಷಂ ಬ್ರಹ್ಮಾಸಿ-ತ್ವಾಮೇವ ಪ್ರತ್ಯಕ್ಷಂ ಬ್ರಹ್ಮ ವದಿಷ್ಯಾಮಿ**" ಎಂಬ ತೈತ್ತಿರೀಯೋಪನಿಷದ್ವಾಕ್ಯಗಳಿಗೆ "ಎಲೈ ವಾಯುದೇವನೆ! ನಿನಗೆ ನಮಸ್ಕಾರವು ; ವೇದೋಚ್ಚಾರಣೆಯನ್ನು ಮಾಡುವುದಕ್ಕೆ ಉಪಕ್ರಮಿಸಿರುವ ನಾನು ಮೊತ್ತಮೊದಲು

ನಿನಗೆ ನಮಸ್ಕಾರವನ್ನು ಸಲ್ಲಿಸಬೇಕೆಂಬುದು ಯುಕ್ತವಾಗಿರುವುದು ; ಏತಕ್ಕೆಂದರೆ-ವಾಯುಸಹಾಯವಿಲ್ಲದೆ ಯಾರೂ ಶಬ್ದೋಚ್ಚಾರಣೆಯನ್ನು ಮಾಡಲಾರರು ; ಶಬ್ದದ ಅಭಿವ್ಯಕ್ತಿಯುಂಟಾಗಬೇಕಾದರೆ ನೀನು ಇದ್ದೇ ಇರಬೇಕು. ಶಬ್ದವು ನಿನ್ನಿಂದಲೇ ಅಭಿವ್ಯಂಗ್ಯವಾಗಿರುವುದು ; ಶಬ್ದಕ್ಕೆ ನೀನೇ ಅಭಿವ್ಯಂಜಕನು ; ಬ್ರಹ್ಮಶಬ್ದವಾಚ್ಯವಾದ ವೇದವೂ ಶಬ್ದರೂಪವಾಗಿರುವುದು ; ಇದು ಶ್ರೋತ್ರೇಂದ್ರಿಯದಿಂದ ಗ್ರಹಿಸಲ್ಪಡುವುದಾದುದರಿಂದಲೂ, ಬಲುದೊಡ್ಡದಾದುದರಿಂದಲೂ ಪ್ರತ್ಯಕ್ಷಬ್ರಹ್ಮವೆನಿಸಿಕೊಳ್ಳುವುದು ; ಇಂಥ ವೇದಕ್ಕೂ ನಿನಗೂ ವ್ಯಂಗ್ಯವ್ಯಂಜಕಭಾವವಿರುವುದರಿಂದ ವ್ಯಂಗ್ಯವ್ಯಂಜಕಗಳಿಗೆ ಅಭೇದೋಪಚಾರವು ಸಂಭವಿಸಬಹುದಾದಪ್ರಯುಕ್ತ ನೀನೇ ಪ್ರತ್ಯಕ್ಷಬ್ರಹ್ಮವೆನಿಸಿಕೊಳ್ಳುವುದರಲ್ಲಿ ಸಂಶಯವಿಲ್ಲ ; ಆದಕಾರಣ ನಿನ್ನನ್ನೇ ನಾನು ಪ್ರತ್ಯಕ್ಷಬ್ರಹ್ಮವೆಂದು ಹೇಳುವೆನು" ಈ ರೀತಿಯಲ್ಲಿ ಅವರು ವ್ಯಾಖ್ಯಾನಮಾಡಿರುವರು ; ಇಲ್ಲಿ ವಾಸ್ತವವಾಗಿಯೂ ಆ ವಿರುದ್ಧಧರ್ಮಗಳು ಶಬ್ದಧರ್ಮಗಳೆಂದೇ ಅವರಿಗೆ ಅಭಿಪ್ರಾಯವಿರುವುದಾದರೆ ಅಂಥ ಧರ್ಮವಿಶಿಷ್ಟವಾದ ಶಬ್ದಕ್ಕೂ ವಾಯುವಿಗೂ ಜನ್ಯಜನಕಭಾವವನ್ನೇ ಅಂಗೀಕರಿಸಿ, ಕಾರ್ಯಕಾರಣಗಳೆನಿಸಿಕೊಂಡ ಅವೆರಡಕ್ಕೂ ಮುಖ್ಯವಾದ ಅಭೇದವನ್ನೇ ಅವರು ಹೇಳುತ್ತಿದ್ದರು ; ಜನ್ಯಜನಕಭಾವವನ್ನು ಹೇಳುವುದಾದರೆ ಶಬ್ದಕ್ಕೆ ಅನಿತ್ಯತ್ವವು ಪ್ರಸಕ್ತವಾದೀತೆಂಬ ಭೀತಿಯಿಂದ ಅವರು ಹಾಗೆ ಹೇಳದೆ ವ್ಯಂಗ್ಯವ್ಯಂಜಕಭಾವವನ್ನೇ ಸ್ವೀಕರಿಸಿ ಔಪಚಾರಿಕವಾದ ಅಭೇದವನ್ನೇ ಹೇಳಿ ನಿತ್ಯತ್ವವನ್ನು ಸೂಚಿಸಿರುವರಾದುದರಿಂದ ಅನಿತ್ಯತ್ವಾಪಾದಕಗಳಾದ ಆ ವಿರುದ್ಧಧರ್ಮಗಳು ಶಬ್ದಧರ್ಮಗಳಲ್ಲವೆಂದೇ ಅವರ ಅಭಿಪ್ರಾಯವು.

ಆದಕಾರಣ ವರ್ಣಗಳಲ್ಲಿ ವಿರುದ್ಧಧರ್ಮಗಳಿಲ್ಲವಾದಪ್ರಯುಕ್ತ ಪೂರ್ವೋತ್ತರಕಾಲವರ್ತಿಗಳಾದ ವರ್ಣವ್ಯಕ್ತಿಗಳಿಗೆ ಪ್ರತ್ಯಭಿಜ್ಞಾಬಲದಿಂದ ಅಭೇದವನ್ನು ಒಪ್ಪಿ ಆಕಲ್ಪಸ್ಥಾಯಿತ್ವರೂಪವಾದ ನಿತ್ಯತ್ವವನ್ನು ಅಂಗೀಕರಿಸಬೇಕು.

## ೧೨೪೦ ಕೇಷಾಂಚಿನ್ಮತೇ ವಾಯೋರೇವ ಶಬ್ದಾತ್ಮನಾ ಪರಿಣಾಮಾಭ್ಯುಪಗಮಾಚ್ಛಬ್ದಸ್ಯ ದ್ರವ್ಯತ್ವಂ

ಅದ್ರವ್ಯರೂಪವಾದ ಇಂಥ ಶಬ್ದಕ್ಕೆ ಕೆಲವರು ಅದ್ರವ್ಯತ್ವವನ್ನು ಒಪ್ಪದೆ ದ್ರವ್ಯತ್ವವನ್ನೇ ಹೇಳುವರು ; ಹೇಗೆಂದರೆ—ಪ್ರಾಣಿಗಳ ನಾಭಿಪ್ರದೇಶದಿಂದ ಊರ್ಧ್ವಮುಖವಾಗಿ ಹೊರಟಿರುವ ವಾಯುವಿಗೆ ಕಂಠ, ತಾಲು ಮೊದಲಾದ ಪ್ರದೇಶಗಳಲ್ಲಿ ಸಂಘಟ್ಟನೆಯುಂಟಾದರೆ ಆಗ ಆ ವಾಯು ಆ ಆ ಶಬ್ದಗಳ ಆಕಾರ

ವಾಗಿ ಪರಿಣಮಿಸುವುದು; ಉದಾಹೃತವಾದ ತೈತ್ತಿರೀಯೋಪನಿಷದ್ವಾಕ್ಯಸ್ವಾರ ಸ್ಯದಿಂದಲೂ, ಇದಕ್ಕೆ ಉಪಬೃಹ್ಮಣವಾದ "**ವೇಣುರಂಧ್ರ**" ಇತ್ಯಾದಿಪೂರ್ವೋ ದಾಹೃತವಿಷ್ಣುಪುರಾಣವಚನಸ್ವಾರಸ್ಯದಿಂದಲೂ, ಕಲ್ಪಸಾಲಾಘವದಿಂದಲೂ ವಾಯುವೇ ಶಬ್ದರೂಪವಾಗಿ ಪರಿಣಮಿಸುತ್ತದೆಯೆಂದು ಒಪ್ಪಬೇಕು. "**ತ್ವಮೇವ ಪ್ರತ್ಯಕ್ಷಂ ಬ್ರಹ್ಮಾಸಿ**" ಎಂದು ವಾಯುವಿಗೆ ಶಬ್ದರೂಪತ್ವವು ಕಂಠೋಕ್ತ ವಾಗಿರುವುದಷ್ಟೆ. ಮತ್ತು ಷಡ್ಜತ್ವ-ಋಷಭತ್ವ-ಗಾಂಧಾರತ್ವ-ಪಂಚಮತ್ವ ಮೊದ ಲಾದ ಧರ್ಮಗಳು ಶಬ್ದದ ಧರ್ಮಗಳೆಂಬುದರಲ್ಲಿ ವಿವಾದವಿಲ್ಲ; ಅಂಥ ಧರ್ಮಗಳು ವಾಯುನಿಷ್ಠಗಳಾಗಿರುವುವೆಂದು ವಿಷ್ಣುಪುರಾಣದಲ್ಲಿ ಕಂಠೋಕ್ತವಾಗಿರುವ ಪ್ರಯುಕ್ತ ವಾಯುವಿಗೆ ಶಬ್ದರೂಪತ್ವವನ್ನು ಹೇಳಿಯೇ ವಚನಕ್ಕೆ ಸಾಂಗತ್ಯ ವನ್ನು ತೋರಿಸಬೇಕಷ್ಟೆ? ಮತ್ತು-"**ಧರ್ಮಿಕಲ್ಪನಾತೋ ವರಂ ಧರ್ಮಕಲ್ಪನಾ**" (ಧರ್ಮವಿಶಿಷ್ಟವಾದ ವಸ್ತ್ವಂತರವನ್ನು ಕಲ್ಪಿಸುವುದಕ್ಕಿಂತಲೂ ಕ್ಲ್ಪಪ್ತವಾಗಿರುವ ಧರ್ಮಿಯಲ್ಲಿ ಧರ್ಮಮಾತ್ರವನ್ನು ಕಲ್ಪಿಸುವುದೇ ಒಳ್ಳೆಯದು.) ಎಂದು ನ್ಯಾಯವೇದಿ ಗಳಾದ ಮೀಮಾಂಸಕರು ಹೇಳುವಂತೆ ಶಬ್ದತ್ವವೆಂಬ ಧರ್ಮದೊಡನೆ ಕೂಡಿದ ಶಬ್ದ ವೆಂಬ ಧರ್ಮ್ಯಂತರವನ್ನು ಕಲ್ಪಿಸುವುದಕ್ಕಿಂತಲೂ, ಕ್ಲ್ಪಪ್ತವಾಗಿರುವ ವಾಯುದ್ರವ್ಯ ದಲ್ಲಿಯೇ ಶಬ್ದತ್ವವೆಂಬ ಧರ್ಮಮಾತ್ರವನ್ನು ಕಲ್ಪಿಸುವುದೇ ಉತ್ತಮವಾಗಿರುವು ದಷ್ಟೆ? "**ವಾಯುರಾಪದ್ಯತೇ ಶಬ್ದತಾಂ**" ಎಂದು ಹೇಳುವ ಶಿಕ್ಷಾಕಾರ ರಿಗೂ ಇದು ಅಭಿಮತವಾಗಿರುವುದು.

## ೧೦೪೧ ಕೇಷಾಂ ಚಿನ್ಮತೇ ಶಬ್ದಸ್ಯ ಗುಣತ್ವೇಽಪಿ ವಾಯುಮಾತ್ರ ಗುಣತ್ವಂ

ಇನ್ನು ಕೆಲವರು ಹೇಳುವುದೇನೆಂದರೆ—"ನಾಭಿಪ್ರದೇಶದಿಂದ ಹೊರಟಿ ರುವ ವಾಯುವಿಗೆ ತಾಲು ಮೊದಲಾದ ಪ್ರದೇಶಗಳಲ್ಲಿ ಸಂಘಟ್ಟನವುಂಟಾಗುವಾಗ ಅಂಥ ವಾಯುವಿನಲ್ಲಿ ಶಬ್ದವೆಂಬ ಒಂದಾನೊಂದು ಗುಣವು ಉತ್ಪನ್ನವಾಗುವುದು : ಆದಕಾರಣ ವಾಯುವೇ ಶಬ್ದಕ್ಕೆ ಆಶ್ರಯವಾಗಿರುವುದಲ್ಲದೆ ಇತರಭೂತಗಳು ಶಬ್ದಾಶ್ರಯಗಳಲ್ಲ." ಎಂದು ಹೇಳುವರು. ಇದು ಕೆಲವರ ಮತವಾಗಿರುವುದು.

## ೧೦೪೨ ಉಕ್ತಪಕ್ಷಾಣಾಮನ್ಯತಮಪಕ್ಷಾನಿರ್ಧಾರಣೇಽಪಿ ನ ಸಿದ್ಧಾಂತಹಾನಿಃ

ಪೂಜ್ಯರೆ? ಈ ಅದ್ರವ್ಯಪರಿಚ್ಛೇದದಲ್ಲಿ ಇದುವರೆಗೂ ಹೇಳಿದುದನ್ನು ಪರಿ ಶೀಲಿಸಿ ನೋಡಿದರೆ—ಆಕಾಶವೆಂಬ ಒಂದೇ ಭೂತವು ಶಬ್ದಕ್ಕೆ ಆಶ್ರಯವಾಗಿರುವು

ದೆಂಬ ಒಂದು ಮತವೂ, ಪಂಚಭೂತಗಳೂ ಶಬ್ದಾಶ್ರಯಗಳೆಂಬ ಮತ್ತೊಂದು ಮತವೂ, ಶಬ್ದವು ವಾಯುವಿನ ಪರಿಣಾಮರೂಪವಾದ ಸ್ವತಂತ್ರದ್ರವ್ಯವಾಗಿರುವು ದೆಂಬ ಇನ್ನೊಂದು ಮತವೂ, ವಾಯುವೇ ಶಬ್ದಕ್ಕೆ ಆಶ್ರಯವಾಗಿರುವುದೆಂಬ ಇನ್ನೂ ಒಂದು ಮತವೂ ಹೀಗೆ ನಾಲ್ಕು ಮತಗಳು ತೋರುವುವು; ಹೀಗೆ ಪರಸ್ಪರ ವಿರುದ್ಧಗಳಾದ ಈ ಮತಗಳೊಳಗೆ ಯಾವುದಾದರೊಂದು ಮತವನ್ನು ನಿರ್ಧರಿಸ ಬೇಕು: ಹಾಗೆ ನಿರ್ಧರಿಸದಿದ್ದರೆ ಪರಸ್ಪರವಿರೋಧದಿಂದ ಯಾವುದೊಂದು ಮತವೂ ನೆಲೆಯಾಗಿ ನಿಲ್ಲಲಾರದಾದಪ್ರಯುಕ್ತ ವೇದಾಂತಸಿದ್ಧಾಂತಕ್ಕೆ ಹಾನಿಯುಂಟಾಗು ವುದಲ್ಲವೆ?

ಇಲ್ಲ; ಯಾವುದೊಂದು ಮತವನ್ನೂ ನಿರ್ಧರಿಸದಿದ್ದರೂ ವೇದಾಂತ ಸಿದ್ಧಾಂತಕ್ಕೆ ಹಾನಿಯಿಲ್ಲ; "ಅವ್ಯಕ್ತವೆಂಬ ತ್ರಿಗುಣದ್ರವ್ಯದ ಪರಿಣಾಮವಿಶೇ ಷವನ್ನು ಶರೀರವಾಗಿ ಕೈಗೊಂಡಿರುವ ಪರಮಾತ್ಮನನ್ನೇ ಉಪಾದಾನಕಾರಣ ವಾಗಿ ಮಾಡಿಕೊಂಡು ಸರ್ವಶಬ್ದಗಳೂ ಉತ್ಪನ್ನಗಳಾಗುವುವು" ಎಂಬುದು ವೇದಾಂತಸಿದ್ಧಾಂತದ ಮುಖ್ಯಾರ್ಥವಾಗಿರುವುದು; ತ್ರಿಗುಣದ್ರವ್ಯದ ಅಂಥ ಪರಿಣಾಮವಿಶೇಷವು ವಾಯುವಾಗಿದ್ದರೂ ಸರಿ; ಆಕಾಶವಾಗಿದ್ದರೂ ಸರಿ; ಪಂಚಭೂತಗಳೂ ಆಗಿದ್ದರೂ ಸರಿ; ಶಬ್ದಕ್ಕೆ ಉಪಾದಾನಕಾರಣಭೂತನಾದ ಪರ ಮಾತ್ಮನು ಅವುಗಳೆಲ್ಲದರಲ್ಲಿಯೂ ಶರೀರಿಯಾಗಿ ವ್ಯಾಪಿಸಿರುವನಾದಪ್ರಯುಕ್ತ ನಮ್ಮ ಸಿದ್ಧಾಂತದ ಮುಖ್ಯಾರ್ಥಕ್ಕೆ ಈ ನಾಲ್ಕು ಮತಗಳಲ್ಲಿಯೂ ವಿರೋಧವಿಲ್ಲ. ಶಬ್ದಕ್ಕೆ ವಾಯುಪರಿಣಾಮರೂಪತ್ವವನ್ನು ಅಂಗೀಕರಿಸಿ ದ್ರವ್ಯತ್ವವನ್ನು ಹೇಳುವ ಪಕ್ಷವೂ ನಮಗೆ ಅನಭಿಮತವಲ್ಲ; ವಾಯು ಪರಮಾತ್ಮನಿಗೆ ಶರೀರವಾಗಿ ಅಪೃಥಕ್ಸಿದ್ಧವಿಶೇಷಣವೆನಿಸಿಕೊಂಡಿರುವುದರಿಂದ ಅಂಥ ವಾಯುವಿನ ಪರಿಣಾಮ ರೂಪವಾದ ಶಬ್ದವೆಂಬ ದ್ರವ್ಯವೂ ಪರಮಾತ್ಮನಿಗೆ ವಿಶೇಷಣವೇ ಆಗಿರುವುದಾದ ಪ್ರಯುಕ್ತ ಶಬ್ದಕ್ಕೆ ಪರಮಾತ್ಮಪರತಂತ್ರದ್ರವ್ಯತ್ವವು ಸಿದ್ಧಿಸುವುದಾದರೆ ನಮ್ಮ ಸಿದ್ಧಾಂತಕ್ಕೆ ಹಾನಿಯೇನು? ಆದರೆ ಮೀಮಾಂಸಕರು ಹೇಳುವ ಸ್ವತಂತ್ರ ದ್ರವ್ಯತ್ವವೂ ನಿತ್ಯತ್ವವೂ ನಮ್ಮ ಸಿದ್ಧಾಂತಕ್ಕೆ ವಿರುದ್ಧಗಳಾದುದರಿಂದ ಅಂಥ ದ್ರವ್ಯತ್ವವನ್ನೂ ಅಂಥ ನಿತ್ಯತ್ವವನ್ನೂ ನಾವು ಒಪ್ಪುವುದಿಲ್ಲ. ಆದಕಾರಣ ಉಕ್ತ ವಾದ ನಾಲ್ಕುಮತಗಳೊಳಗೆ ಯಾವುದಾದರೊಂದು ಮತವನ್ನು ನಿರ್ಧರಿಸದಿದ್ದರೂ ವೇದಾಂತಸಿದ್ಧಾಂತದ ಪ್ರಧಾನಾರ್ಥಕ್ಕೆ ಲೇಶಮಾತ್ರವೂ ವಿರೋಧವಿಲ್ಲ.

## ೧೦೪೩. ವರ್ಣಾನಾಂ ಶಾಬ್ದಿಕಾಭಿಮತಸ್ಯ ಸ್ಫೋಟೋಪಾದಾನ ಕರ್ತೃತ್ವಸ್ಯ ನಿರಾಸಃ.

ಪೂಜ್ಯರೆ! ತ್ರಿಗುಣದ್ರವ್ಯದ ಪರಿಣಾಮವಿಶೇಷಗಳನ್ನು ಶರೀರಗಳಾಗಿ ಪಡೆದಿರುವ ಪರಮಾತ್ಮನೇ ವರ್ಣಗಳಿಗೆ ಉಪಾದಾನಕಾರಣವೆಂದು ಹೇಳಿದಿರಿ; ಆದರೆ ಇದು ಸಂಗತವಲ್ಲ; ಏತಕ್ಕೆಂದರೆ—

" ಅನಾದಿನಿಧನಂ ಬ್ರಹ್ಮ ಶಬ್ದತತ್ತ್ವಂ ಯದಕ್ಷರಂ ।
ವಿವರ್ತತೇಽರ್ಥಭಾವೇನ ಪ್ರಕ್ರಿಯಾ ಜಗತೋ ಯತಃ ॥ "

ಎಂದು ಹೇಳುವ ವೈಯಾಕರಣರ ಮತವನ್ನು ವಿಮರ್ಶಿಸಿ ನೋಡಿದರೆ—ಉತ್ಪತ್ತಿ ವಿನಾಶಶೂನ್ಯವಾಗಿಯೂ, ಆದುದರಿಂದಲೇ ನಿತ್ಯವಾಗಿಯೂ, ನಿರವಯವವಾಗಿ ಯೂ, ಸಕಲಜಗತ್ತಿಗೂ ಆದಿಕಾರಣಭೂತವಾಗಿಯೂ, ಪ್ರಪಂಚಾಕಾರವಾದ ವಿವರ್ತಕ್ಕೆ ಅಧಿಷ್ಠಾನವಾಗಿಯೂ ಇರುವ ಸ್ಫೋಟವೆಂಬ ಶಬ್ದಬ್ರಹ್ಮವೇ ಶಬ್ದ ವೆಂದು ಪ್ರಸಿದ್ಧವಾಗಿರುವುದು. ಇಂಥ ಶಬ್ದಬ್ರಹ್ಮವೇ ಸ್ವವ್ಯತಿರಿಕ್ತಸಮಸ್ತ ವಸ್ತುವಿಗೂ ಕಾರಣವೆನಿಸಿಕೊಂಡು ಅರ್ಥಾಕಾರವಾದ ಪ್ರಪಂಚರೂಪವಾಗಿ *ವಿವರ್ತವೆಂಬ ರೂಪಾಂತರವನ್ನು ಪಡೆವುದು; ಇದರಿಂದಲೇ ಪ್ರಪಂಚದ ಎಲ್ಲಾ ಪ್ರಕ್ರಿಯೆಯೂ (ವ್ಯವಹಾರವೂ) ಜರುಗುತ್ತಿರುವುದು; ಹೀಗೆ ಸಮಸ್ತಕ್ಕೂ ತಾನೇ ಕಾರಣವೆನಿಸಿಕೊಂಡಿರುವ ಸ್ಫೋಟವೆಂಬ ಈ ಶಬ್ದಬ್ರಹ್ಮವು ತನಗೆ ಮತ್ತೊಂದು ಕಾರಣವನ್ನು ಪಡೆಯಲಾರದಾದಪ್ರಯುಕ್ತ ಪರಮಾತ್ಮನು ಇದಕ್ಕೆ ಹೇಗೆ ಕಾರಣವಾಗಬಲ್ಲನು?

ಅಥವಾ ವರ್ಣಾತ್ಮಕಶಬ್ದಗಳೊಳಗೆ ಕೆಲವಕ್ಕೆ ತಾಲವ್ಯತ್ವಪ್ರಸಿದ್ಧಿಯೂ, ಕೆಲವಕ್ಕೆ ಕಂಠ್ಯತ್ವಪ್ರಸಿದ್ಧಿಯೂ, ಕೆಲವಕ್ಕೆ ಮೂರ್ಧನ್ಯತ್ವಪ್ರಸಿದ್ಧಿಯೂ, ಕೆಲ ವಕ್ಕೆ ದಂತ್ಯತ್ವಪ್ರಸಿದ್ಧಿಯೂ, ಕೆಲವಕ್ಕೆ ಓಷ್ಠ್ಯತ್ವಪ್ರಸಿದ್ಧಿಯೂ, ಹೀಗೆ ಆ ಆ ವರ್ಣಗಳಿಗೆ ತತ್ತದವಯವಜನ್ಯತ್ವಪ್ರಸಿದ್ಧಿಯಿರುವುದಾದಕಾರಣ ಕಂಠ, ತಾಲು ಮುಂತಾದ ಅವಯವಗಳೇ ವರ್ಣಾತ್ಮಕಶಬ್ದಗಳಿಗೆ ಉಪಾದಾನಕಾರಣವೆಂದು

---

* ವಿವರ್ತವೆಂದರೆ—ಸ್ವಾಭಾವಿಕವಾದ ಅಸಾಧಾರಣರೂಪಕ್ಕೆ ವಿರೋಧವು ಬಾರದಂತೆ—ಮಿಥ್ಯಾಭೂತವಾದ ರೂಪಾಂತರದ ಭ್ರಮಕ್ಕೆ ಅಧಿಷ್ಠಾನವಾಗಿರುವಿಕೆ. ಹೇಗೆಂದರೆ—ರಜ್ಜುವು ಮಿಥ್ಯಾಭೂತವಾದ ಸರ್ಪತ್ವಭ್ರಮಕ್ಕೆ ಅಧಿಷ್ಠಾನವಾಗುವಾಗ ತನ್ನ ಸ್ವಾಭಾವಿಕವಾದ ರಜ್ಜು ತ್ವಕ್ಕೆ ವಿರೋಧವಿಲ್ಲದೆಯೇ ಅಧಿಷ್ಠಾನವಾಗಿರುವುದು. ಪಾರಮಾರ್ಥಿಕವಾದ ರೂಪಾಂತರಕ್ಕೆ ಆಶ್ರಯವಾಗುವುದಾದರಲ್ಲವೆ ಸ್ವಾಭಾವಿಕರೂಪಕ್ಕೆ ವಿರೋಧವುಂಟಾದೀತು?

ಅವಗತವಾಗುತ್ತಿರುವಾಗ ಪರಮಾತ್ಮನು ಇವುಗಳಿಗೆ ಹೇಗೆ ಉಪಾದಾನಕಾರಣ ವಾಗಬಲ್ಲನು ?

ಇಂಥ ಆಶಂಕೆ ಸಂಗತವಲ್ಲ. ಏತಕ್ಕೆಂದರೆ—ವೈಯಾಕರಣರ ಸ್ಫೋಟ ಬ್ರಹ್ಮವಾದವು ಆಗಮವಿರುದ್ಧವಾಗಿಯೂ ಪ್ರತ್ಯಕ್ಷವಿರುದ್ಧವಾಗಿಯೂ ಇರುವುದ ರಿಂದ ಶಿಷ್ಟರಿಗೆ ಗ್ರಾಹ್ಯವಾಗಲಾರದು ; "**ನಮಸ್ತೇವಾಯೋ—ತ್ವಮೇವ ಪ್ರತ್ಯಕ್ಷಂ ಬ್ರಹ್ಮಾಸಿ**" ಎಂಬುವೇ ಮೊದಲಾದ ಆಗಮವಾಕ್ಯಗಳಿಂದ ವಾಯು ಮುಂತಾದುವುಗಳೇ ಶಬ್ದಕ್ಕೆ ಉಪಾದಾನಕಾರಣವೆಂದು ಅವಗತವಾಗಿ ರುವುದಷ್ಟೆ ? ಮತ್ತು ಉಪಲಬ್ಧಿಗೆ (ಸಾಕ್ಷಾತ್ಕರಿಸುವುದಕ್ಕೆ) ಯೋಗ್ಯವಾದುದು ಉಪಲಬ್ಧವಾಗದಿದ್ದರೆ ಆಗ ಯೋಗ್ಯಾನುಪಲಬ್ಧಿಯಿರುವುದೆಂದು ಶಾಸ್ತ್ರಕಾರರು ವ್ಯವಹರಿಸುವರು ; ಸ್ಫೋಟವೆಂಬ ಶಬ್ದಬ್ರಹ್ಮವೆಂಬುದೊಂದು ಪದಾರ್ಥವು ಇರು ವುದಾದರೆ ಅದು ಶ್ರೋತ್ರೇಂದ್ರಿಯದಿಂದ ಗ್ರಹಿಸಲ್ಪಡುವುದಕ್ಕೆ ಯೋಗ್ಯವಾ ಗಿಯೇ ಇರುವುದು. ಅಂಥ ಯೋಗ್ಯವಾದುದು ಶ್ರೋತ್ರೇಂದ್ರಿಯಕ್ಕೆ ಗೋಚರ ವಾಗಿಯೇ ಆಗಬೇಕು ; ಹಾಗೆ ಇದುವರೆಗೂ ಯಾರಿಗೂ ಅದು ಶ್ರೋತ್ರೇಂದ್ರಿ ಯಕ್ಕೆ ಪ್ರತ್ಯಕ್ಷವಾಗಿಲ್ಲ. ಪ್ರತ್ಯಕ್ಷಕ್ಕೆ ಯೋಗ್ಯವಾದುದು ಪ್ರತ್ಯಕ್ಷವಾಗದಿದ್ದರೆ ಅಂಥ ವಸ್ತು ಇಲ್ಲವೇ ಇಲ್ಲವೆಂಬ ಪ್ರತ್ಯಕ್ಷವೇ ಇರುವುದಷ್ಟೆ ? ಮತ್ತು ಕಂಠ- ತಾಲು ಮುಂತಾದ ಅವಯವಗಳು ವರ್ಣೋಚ್ಚಾರಣೆಗೆ ಸಾಧನಗಳಾಗಿ ವರ್ಣ ಗಳ ಅಭಿವ್ಯಕ್ತಿಗೆ ನಿಮಿತ್ತಕಾರಣವಾಗಬಹುದಲ್ಲದೆ ಉಪಾದಾನಕಾರಣಗಳಾಗ ಲಾರವು.

## ೧೦೪೪. ಸ್ಫೋಟಾತ್ಮಕಸ್ಯ ಶಬ್ದಸ್ಯ ಸಾಧಕಪ್ರಮಾಣಾಸಂಭವಃ.

ಮತ್ತು ಸ್ಫೋಟವೆಂಬ ಪದಾರ್ಥದ ವಿಷಯದಲ್ಲಿ ಅಸ್ಮದಾದಿಗಳ ಪ್ರತ್ಯ ಕ್ಷವು ಪ್ರಮಾಣವಾಗಲಾರದು ; "ಗೌಃ ಎಂಬುದು ಒಂದು ಪದವಾಗಿರುವುದು" ಎಂದು ನಮಗೆ ಉಂಟಾಗುವ ಪ್ರತ್ಯಕ್ಷವು ಗಕಾರ-ಔಕಾರ-ವಿಸರ್ಗ- ಈ ವರ್ಣ ಗಳ ಸಮುದಾಯವನ್ನೇ ಗ್ರಹಿಸಿ ಉಪಪನ್ನವಾಗುತ್ತಿರುವುದರಿಂದ ಈ ಸಮುದಾ ಯಕ್ಕಿಂತಲೂ ಅತಿರಿಕ್ತವಾದ ಸ್ಫೋಟವೆಂಬುದನ್ನು ಈ ಪ್ರತ್ಯಕ್ಷವು ತೋರಿಸು ವುದಿಲ್ಲ. ಕ್ರಮಿಕವಾಗಿರುವ ಗಕಾರೌಕಾರವಿಸರ್ಗಗಳೊಳಗೆ ಒಂದರ ಕಾಲದಲ್ಲಿ ಮತ್ತೊಂದು ಇಲ್ಲವಾದುದರಿಂದ ಇವುಗಳಿಗೆ ಸಮುದಾಯತ್ವವು ಸಂಭವಿಸುವುದಿಲ್ಲ ವೆಂದು ಆಶಂಕಿಸಬಾರದು ; ಏಕಾರ್ಥಬೋಧಕತ್ವವೆಂಬ ಏಕೋಪಾಧಿಯಿಂದ ಕ್ರೋಡೀಕೃತವಾದ ಇವುಗಳಿಗೆ ಸಮುದಾಯತ್ವವು ಸಂಭವಿಸಬಹುದಷ್ಟೆ ? ಆದ

ಕಾರಣ ಅಸ್ಮದಾದಿಪ್ರತ್ಯಕ್ಷದಿಂದ ಸ್ಫೋಟಪದಾರ್ಥವು ಸಿದ್ಧವಲ್ಲ. ಯೋಗಿಪ್ರತ್ಯಕ್ಷವು ಸಂದಿಗ್ಧವಾಗಿರುವುದು; ಎಂದರೆ—ಯೋಗಿಗಳು ಸ್ಫೋಟವೆಂಬುದೊಂದು ಉಂಟೆಂದು ಸಾಕ್ಷಾತ್ಕರಿಸುತ್ತಿರುವರೋ? ಅಥವಾ ಇಲ್ಲವೆಂದೇ ಸಾಕ್ಷಾತ್ಕರಿಸುವರೋ? ಎಂದು ಸಂದಿಗ್ಧವಾದುದರಿಂದ ಯೋಗಿಪ್ರತ್ಯಕ್ಷವೂ ಸ್ಫೋಟಸದ್ಭಾವಕ್ಕೆ ಪ್ರಮಾಣವಾಗಲಾರದು. **"ಸ್ಫೋಟಸ್ತ್ವಂ ವರ್ಣಜುಷ್ಟ!"** ಎಂಬ ಭಾರತವಚನರೂಪವಾದ ಆಗಮವೇ ಸ್ಫೋಟಪದಾರ್ಥದ ಸದ್ಭಾವದಲ್ಲಿ ಪ್ರಮಾಣವಾಗಲೆಂದು ಆಶಂಕಿಸಲಾಗದು. **"ಸ್ಫೋಟ್ಯತೇ ಪ್ರಕಾಶ್ಯತೇ ಅರ್ಥಃ ಅನೇನೇತಿ ಸ್ಫೋಟಃ"** ಎಂಬ ವ್ಯುತ್ಪತ್ತಿಯಿಂದ ವರ್ಣಗಳಲ್ಲಿರುವ ಅರ್ಥಪ್ರಕಾಶಕತ್ವಶಕ್ತಿ ಈ ಸ್ಫೋಟಪದದಿಂದ ಉಕ್ತವಾಗುವುದಾದಕಾರಣ ಈ ಭಾರತವಚನವು ನಿಮಗೆ ಅಭಿಪ್ರೇತವಾದ ಸ್ಫೋಟಪದಾರ್ಥದ ಸದ್ಭಾವಕ್ಕೆ ಪ್ರಮಾಣವಾಗಲಾರದು.

## ೧೦೪೫. ವರ್ಣಾನಾಂ ಪ್ರತ್ಯೇಕಂ ಸಮುದಾಯಭಾವೇನ ವಾ ವಾಚಕತ್ವಾನುಪಪತ್ತ್ಯಾ ವರ್ಣಾಭಿವ್ಯಂಗ್ಯ ಸ್ಫೋಟಾಂಗೀಕಾರಾವಶ್ಯಕತ್ವಾಶಂಕಾ.

ಪೂಜ್ಯರೆ! 'ಗೌಃ' ಎಂಬ ಶಬ್ದದಲ್ಲಿ ಗಕಾರ-ಔಕಾರ-ವಿಸರ್ಗಗಳೆಂಬ ಮೂರು ವರ್ಣಗಳಿರುವುವು; ಈ ಮೂರರೊಳಗೆ ಒಂದೊಂದೇ ವರ್ಣವು ಗೋವೆಂಬ ಅರ್ಥಕ್ಕೆ ವಾಚಕವೋ? ಅಥವಾ ಈ ಮೂರರ ಸಮುದಾಯವೇ ವಾಚಕವೋ? ಪ್ರತ್ಯೇಕವರ್ಣವೇ ಅರ್ಥವಾಚಕವೆಂದು ಹೇಳುವುದಾದರೆ ವರ್ಣಾಂತರವು ವ್ಯರ್ಥವಾದುದರಿಂದ ಅರ್ಥದ ಪ್ರತೀತಿಗಾಗಿ ವರ್ಣಾಂತರವನ್ನು ಪ್ರಯೋಗಿಸಕೂಡದೆಂದು ಪ್ರಸಕ್ತವಾಗುವುದು. ವರ್ಣಗಳ ಸಮುದಾಯವೇ ಅರ್ಥಕ್ಕೆ ವಾಚಕವೆಂದೂ ಹೇಳಲಾಗುವುದಿಲ್ಲ; ಏತಕ್ಕೆಂದರೆ, ವರ್ಣಗಳಿಗೆ ಸಮುದಾಯಭಾವವೇ ಕೂಡುವುದಿಲ್ಲ; ಹೇಗೆಂದರೆ—ವರ್ಣಗಳನ್ನು ಕ್ರಮವಾಗಿ ಒಂದರ ಮುಂದೆ ಮತ್ತೊಂದರಂತೆ ಉಚ್ಚರಿಸಬಹುದಲ್ಲದೆ ಒಂದುವರ್ಣವನ್ನು ಉಚ್ಚರಿಸುವ ಕಾಲದಲ್ಲಿಯೇ ಎಲ್ಲಾ ವರ್ಣಗಳನ್ನೂ ಉಚ್ಚರಿಸಲು ಸಾಧ್ಯವೇ ಇಲ್ಲ; 'ಗೌಃ' ಎಂಬ ಪದದ ಗಕಾರವನ್ನು ಉಚ್ಚರಿಸುವಕಾಲದಲ್ಲಿ ಔಕಾರವಿಸರ್ಗಗಳು ಅದರ ಜತೆಗೆ ಇನ್ನೂ ಬಂದು ಸೇರಲೇ ಇಲ್ಲ; ಅನಂತರದಲ್ಲಿ ಔಕಾರವನ್ನು ಉಚ್ಚರಿಸುವ ಕಾಲಕ್ಕೆ ಗಕಾರವು ಮೊದಲೇ ಉಚ್ಚರಿತವಾಗಿ ನಷ್ಟವಾಗಿರುವುದು; ವಿಸರ್ಗವು ಇನ್ನೂ ಹುಟ್ಟಲೇ ಇಲ್ಲ; ಅನಂತರದಲ್ಲಿ ವಿಸರ್ಗವನ್ನು ಉಚ್ಚರಿಸುವ

ಕಾಲಕ್ಕೆ ಗಕಾರೌಕಾರಗಳೆರಡೂ ನಷ್ಟಗಳಾಗಿರುವುವು ; ಈ ಮೂರುವರ್ಣಗಳೂ ಏಕಕ್ಷಣದಲ್ಲಿ ಕೂಡಿದ್ದರಲ್ಲವೆ ಇವುಗಳಿಗೆ ಸಮುದಾಯಭಾವವು ಸಂಭವಿಸೀತು ? ಆದಕಾರಣ ಕ್ರಮಿಕವಾದ ವರ್ಣಗಳಿಗೆ ಸಮುದಾಯರೂಪತ್ವವೇ ಸಂಭವಿಸುವು ದಿಲ್ಲವಾದುದರಿಂದ ವರ್ಣಸಮುದಾಯವೇ ಅರ್ಥಕ್ಕೆ ವಾಚಕವಾಗುವುದೆಂದೂ ಹೇಳಲಾಗುವುದಿಲ್ಲ. ಈ ತೊಂದರೆಯ ಪರಿಹಾರಕ್ಕಾಗಿ ಈಗ ಮಾಡಬೇಕಾದು ದೇನೆಂದರೆ—ವರ್ಣಕ್ಕಿಂತಲೂ ಅತಿರಿಕ್ತವಾಗಿಯೂ ವರ್ಣಾಭಿವ್ಯಂಗ್ಯವಾಗಿಯೂ ಇರುವ ವರ್ಣಸ್ಫೋಟವೆಂಬುದೊಂದು ಪದಾರ್ಥವನ್ನು ಅಂಗೀಕರಿಸಿ ಅದಕ್ಕೇ ಅರ್ಥಪ್ರಕಾಶಕತ್ವವನ್ನು ಒಪ್ಪಬೇಕಲ್ಲವೆ ?

## ೧೦೮೬ ವರ್ಣಾನಾಂ ಪ್ರತ್ಯೇಕಂ ಸಮುದಾಯಭಾವೇನ ವಾ ಸ್ಫೋಟಾಭಿವ್ಯಂಜಕತ್ವಾನುಪಪತ್ತ್ಯಾ ಸ್ಫೋಟಾಂಗೀಕಾರಾನುಪಪತ್ತಿಃ.

ಇಲ್ಲ—ಸ್ಫೋಟವೆಂಬುದನ್ನು ಅಂಗೀಕರಿಸಬೇಕಾದುದಿಲ್ಲ ; ಹೇಗೆಂದರೆ— 'ಗೌಃ' ಎಂಬ ಶಬ್ದದಲ್ಲಿ ಗಕಾರೌಕಾರವಿಸರ್ಗಗಳೊಳಗೆ ಒಂದೊಂದೇ ವರ್ಣಕ್ಕೆ ಸ್ಫೋಟಾಭಿವ್ಯಂಜಕತ್ವವನ್ನು ಹೇಳುವುದಾದರೆ ವರ್ಣಾಂತರವೈಯರ್ಥ್ಯವು ಪ್ರಸಕ್ತವಾಗುವುದು ; ವರ್ಣಗಳಿಗೆ ಸಮುದಾಯಭಾವವು ಸಂಭವಿಸುವುದಿಲ್ಲವೆಂದು ನೀವೇ ತೋರಿಸಿರುವುದರಿಂದ ಸಮುದಾಯಕ್ಕೂ ಸ್ಫೋಟಾಭಿವ್ಯಂಜಕತ್ವವು ಸಂಭವಿಸುವುದಿಲ್ಲ ; ಕೊನೆಯ ವರ್ಣಕ್ಕೆ ಸ್ಫೋಟಾಭಿವ್ಯಂಜಕತ್ವವನ್ನು ಹೇಳುವು ದಾದರೆ ಆಗಲೂ ವರ್ಣಾಂತರವೈಯರ್ಥ್ಯವು ಪ್ರಸಕ್ತವಾಗುವುದು ; ಹೀಗೆ ವರ್ಣ ಗಳಿಗೆ ಅರ್ಥವಾಚಕತ್ವವನ್ನು ಹೇಳುವ ನಮ್ಮ ಮತದಲ್ಲಿ ನೀವು ತೋರಿಸಿರುವ ದೂಷಣಗಳು—ವರ್ಣಗಳಿಗೆ ಸ್ಫೋಟವ್ಯಂಜಕತ್ವವನ್ನು ಹೇಳುವ ನಿಮ್ಮ ಮತ ದಲ್ಲಿಯೂ ತಪ್ಪಿದುವಲ್ಲವಾದುದರಿಂದ ಸ್ಫೋಟವನ್ನು ಅಂಗೀಕರಿಸಲಾಗುವುದಿಲ್ಲ.

ಅದು ಹೇಗೆ ? ವರ್ಣಗಳಿಗೆ ಸ್ಫೋಟಾಭಿವ್ಯಂಜಕತ್ವವನ್ನು ಹೇಳುವ ನಮ್ಮ ಮತದಲ್ಲಿ ಈ ದೂಷಣವು ಬರುವುದಿಲ್ಲ ; ಹೇಗೆಂದರೆ—ಸ್ಫೋಟಾಭಿವ್ಯಂಜಕವಾದ ಮೊದಲನೆಯ ಧ್ವನಿ ಸ್ಫೋಟವನ್ನು ಸ್ವಲ್ಪ ಅಸ್ಫುಟವಾಗಿ ಪ್ರಕಾಶಪಡಿಸುವುದು ; ಮೇಲೆ ಮೇಲೆ ಬರುವ ವ್ಯಂಜಕಧ್ವನಿ ಸ್ಫುಟವಾಗಿಯೂ, ಸ್ಫುಟತರವಾಗಿಯೂ ಸ್ಫುಟತಮವಾಗಿಯೂ ಸ್ಫೋಟವನ್ನು ಸ್ಫುಟಪಡಿಸುವುದು ;—

ಒಂದಾವರ್ತಿ ಉಚ್ಚರಿಸಲ್ಪಟ್ಟ ವೇದವಾಕ್ಯವು ಬ್ರಹ್ಮಚಾರಿಗಳ ಕಂಠದಲ್ಲಿ ದೃಢವಾಗಿ ನಿಲ್ಲಲಾರದಾದುದರಿಂದ ತಿರಗಿತಿರಗಿಯೂ ಅಭ್ಯಸಿಸಲ್ಪಡುವ ಅದೇ ವೇದವಾಕ್ಯವು ಕಂಠಪಾಠಕ್ಕೆ ಹೇಗೆ ಯೋಗ್ಯವಾಗುವುದೋ ;

ಮತ್ತು—ರತ್ನಪರೀಕ್ಷಕರಿಗೆ ರತ್ನದ ನಿಜಸ್ಥಿತಿ ಪ್ರಥಮಪರೀಕ್ಷೆಯಲ್ಲಿ ಸ್ಪಷ್ಟವಾಗಿ ಗೊತ್ತಾಗುವುದಿಲ್ಲವಾದುದರಿಂದ ಪುನಃಪುನಃ ಪರೀಕ್ಷೆಮಾಡು ವಾಗ ರತ್ನತತ್ತ್ವವು ಸ್ಫುಟವಾಗಿ ಹೇಗೆ ಪ್ರಕಾಶಿಸುವುದೋ; ಅದರಂತೆ ಸ್ಫೋಟ ವಿಷಯದಲ್ಲಿಯೂ ಉತ್ತರೋತ್ತರನಾದಗಳಿಂದ ಸ್ಫುಟಾಭಿವ್ಯಕ್ತಿಯನ್ನು ತಿಳಿಯ ಬಹುದು.

**" ನಾದೈರಾಹಿತಬೀಜಾಯಾಮಂತ್ಯೇನ ಧ್ವನಿನಾ ಸಹ |**
**ಆವೃತ್ತಪರಿಪಾಕಾಯಾಂ ಬುದ್ಧೌ ಶಬ್ದೋಽವಧಾರ್ಯತೇ || "**

ಎಂಬ **ಭರ್ತೃಹರಿಕಾರಿಕೆಯಿಂದ** ಈ ಅರ್ಥವು ಅವಗತವಾಗುವುದು—"ಬುದ್ಧಿ ಯೆಂಬ ಕ್ಷೇತ್ರದಲ್ಲಿ ಸ್ಫೋಟರೂಪವಾದ ಶಬ್ದವೆಂಬ ಫಲದ ಸ್ಫುಟೋತ್ಪತ್ತಿಗಾಗಿ ಪ್ರಥಮಧ್ವನಿಯೆಂಬ ರೈತನು ಬೀಜಾವಾಪಮಾಡಲು ಉತ್ತರೋತ್ತರನಾದಗಳಿಂದ ಆ ಬೀಜಕ್ಕೆ ಕ್ರಮಕ್ರಮವಾದ ಪುಷ್ಟಿಯುಂಟಾಗಿ ಕೊನೆಯ ನಾದದಿಂದ ಪರಿ ಪಾಕವುಂಟಾದರೆ ಆಗ ಅಂಥ ಬುದ್ಧಿಕ್ಷೇತ್ರದಲ್ಲಿ ಸ್ಫೋಟವೆಂಬ ಫಲವು ಸ್ಫುಟ ವಾಗುವುದು" ಎಂಬುದು ಕಾರಿಕೆಯ ತಾತ್ಪರ್ಯವಾಗಿರುವುದು; ಆದಕಾರಣ ವರ್ಣಗಳಿಗೆ ಸ್ಫೋಟಾಭಿವ್ಯಂಜಕತ್ವವನ್ನು ಹೇಳುವ ನಮ್ಮ ಮತದಲ್ಲಿ ಪೂರ್ವೋಕ್ತ ದೋಷವಿಲ್ಲವಷ್ಟೆ?

ಹೀಗೆ ಕಲ್ಪಿಸುವುದಾದರೆ—ವರ್ಣಗಳಿಗೆ ಅರ್ಥಪ್ರಕಾಶಕತ್ವವನ್ನು ಹೇಳುವ ನಮ್ಮ ಮತದಲ್ಲಿಯೂ ಈ ಕಲ್ಪನೆಯನ್ನು ಏಕೆ ತೋರಿಸಬಾರದು? ಬುದ್ಧಿಯೆಂಬ ಕ್ಷೇತ್ರದಲ್ಲಿ ಅರ್ಥಸ್ಫೂರ್ತಿಯೆಂಬ ಫಲದ ಸ್ಫುಟೋತ್ಪತ್ತಿಗಾಗಿ ಪ್ರಥಮವರ್ಣ ವೆಂಬ ರೈತನು ಬೀಜಾವಾಪಮಾಡಲು ಉತ್ತರೋತ್ತರವರ್ಣಗಳಿಂದ ಆ ಬೀಜಕ್ಕೆ ಕ್ರಮಕ್ರಮವಾಗಿ ಪುಷ್ಟಿಯುಂಟಾಗಿ ಕೊನೆಯ ವರ್ಣದಿಂದ ಪರಿಪಾಕವುಂಟಾದರೆ ಆಗ ಅಂಥ ಬುದ್ಧಿಕ್ಷೇತ್ರದಲ್ಲಿ ಅರ್ಥಸ್ಫೂರ್ತಿಯೆಂಬ ಫಲವು ಸ್ಫುಟವಾಗುವುದು ಎಂದು ಏತಕ್ಕೆ ಕಲ್ಪನೆಮಾಡಬಾರದು?

ಓಹೋ! ಹೀಗೆ ಉಭಯಪಕ್ಷದಲ್ಲಿಯೂ ದೋಷವುಂಟೆಂಬುದಾಗಲಿ ದೋಷವಿಲ್ಲವೆಂಬುದಾಗಲಿ ತುಲ್ಯವಾಗಿರುವುದಾದರೆ ಸ್ಫೋಟವನ್ನೇ ಅಂಗೀಕರಿಸ ಬಹುದಲ್ಲವೆ? ಎಂದು ಆಶಂಕಿಸಬೇಡಿರಿ—ಉಭಯವಾದಿಗಳೂ ಒಪ್ಪಿಕೊಂಡು ಕ್ಲ್ ಪ್ತವಾಗಿರುವ ವರ್ಣಗಳಿಂದಲೇ ಅರ್ಥಪ್ರತೀತಿಗೆ ಉಪಪತ್ತಿ ಸಂಭವಿಸುವು ದಾಗಿದ್ದರೆ ಇದಕ್ಕಾಗಿ ವರ್ಣಾತಿರಿಕ್ತವಾದ ಸ್ಫೋಟವೆಂಬ ಒಂದು ಪದಾರ್ಥ ವನ್ನು ಕಲ್ಪಿಸಬೇಕಾದುದಿಲ್ಲ; ಕಲ್ಪನಾಗೌರವವೆಂಬುದೊಂದು ದೋಷವು ನಿಮಗೆ ಹೆಚ್ಚಾಗಿರುವುದು. ಆದುದರಿಂದ ವರ್ಣಸ್ಫೋಟವೂ ಪದಸ್ಫೋಟವೂ ಬೇಕಾಗಿಲ್ಲ.

ಇದರಂತೆ—"ಇದಮೇಕಂ ವಾಕ್ಯಂ" (ಇದು ಒಂದು ವಾಕ್ಯವಾಗಿ ಇರುವುದು) ಎಂಬ ಪ್ರತೀತಿ ಪರಸ್ಪರಾನ್ವಿತವಾದ ಏಕಾರ್ಥವನ್ನು ಪ್ರತಿಪಾದಿಸುವ ಅನೇಕಪದಗಳ ಒಂದು ಸಮುದಾಯವನ್ನು ಅವಲಂಬಿಸಿ ಅದರಿಂದಲೇ ಉಪಪನ್ನವಾಗುತ್ತಿರುವಾಗ ಇದಕ್ಕಾಗಿ ಅತಿರಿಕ್ತವಾದ ವಾಕ್ಯಸ್ಫೋಟವೆಂಬುದೊಂದನ್ನು ಕಲ್ಪಿಸಬೇಕಾದುದಿಲ್ಲ.

ಪೂಜ್ಯರೆ! "ಶಬ್ದಾದರ್ಥಂ ಪ್ರತೀಮಃ" (ಶಬ್ದದಿಂದ ಅರ್ಥವನ್ನು ತಿಳಿಯುತ್ತೇವೆ) ಎಂಬ ಲೋಕವ್ಯವಹಾರದಲ್ಲಿ ಶಬ್ದಪದದ ಮೇಲೆ ಏಕವಚನ ಪ್ರತ್ಯಯವಿರುವುದರಿಂದ ಅರ್ಥಪ್ರತೀತಿಯನ್ನು ಉಂಟುಮಾಡುವ ಶಬ್ದವು ಒಂದೇ ಆಗಿರುವುದೆಂದು ತೋರುವುದು ; ಅರ್ಥಪ್ರತೀತಿಯನ್ನು ಉಂಟುಮಾಡುವ ವಾಕ್ಯದಲ್ಲಿ ಅನೇಕಪದಗಳಿರುವುದರಿಂದ ಆಗ "ಶಬ್ದೇಭ್ಯಃ" ಎಂದು ಬಹುವಚನವನ್ನು ಪ್ರಯೋಗಿಸಬೇಕಾಗಿ ಬರುವುದು ; ಲೋಕದಲ್ಲಿ ಏಕವಚನಾಂತಪ್ರಯೋಗವೂ ಪ್ರಾಮಾಣಿಕವಾಗಿರುವುದರಿಂದ ಇದರ ಉಪಪತ್ತಿಗಾಗಿ ಅಖಂಡವಾದ (ನಿರವಯವವಾದ) ಒಂದಾನೊಂದು ವಾಕ್ಯಸ್ಫೋಟವನ್ನು ಅಂಗೀಕರಿಸಬೇಕಲ್ಲವೆ?

ಇಲ್ಲ—ಅಂಗೀಕರಿಸಬೇಕಾದುದಿಲ್ಲ ; ವಾಕ್ಯದಲ್ಲಿ ಸೇರಿರುವ ಅನೇಕಶಬ್ದಗಳೊಳಗೆ ಶಬ್ದತ್ವವೆಂಬ ಜಾತಿ ಒಂದೇ ಆದುದರಿಂದ ಅಂಥ ಜಾತ್ಯೈಕ್ಯವನ್ನು ಅವಲಂಬಿಸಿ ಈ ಏಕವಚನವು ಸಂಗತವಾಗುವುದಾದಪ್ರಯುಕ್ತ ಇಂಥ ಏಕವಚನದಿಂದಲೂ ವರ್ಣಾತ್ಮಕವಾದ ಅನೇಕಶಬ್ದಗಳಿಗೆ ಬೋಧೆಯುಂಟಾಗುವುದಲ್ಲದೆ ಅಖಂಡವಾದ ಸ್ಫೋಟವೆಂಬುದರ ಬೋಧೆ ಉಂಟಾಗುವುದಿಲ್ಲವಷ್ಟೆ ?

ಸ್ಫೋಟಶಬ್ದದಿಂದ ಪರಮಾತ್ಮನೆಂಬ ಪರಬ್ರಹ್ಮವನ್ನೇ ವಿವಕ್ಷಿಸುವೆವೆಂದು ಹೇಳುವಿರಾದರೆ ಇದು ನಮ್ಮ ಸಿದ್ಧಾಂತಕ್ಕೆ ವಿರುದ್ಧವಲ್ಲವಾದುದರಿಂದ ಧಾರಾಳವಾಗಿ ವಿವಕ್ಷೆಮಾಡಬಹುದು.

## ೧೧೪೭. ನಿರ್ವಿಶೇಷಸ್ಯ ನಿರವಯವಸ್ಯ ಚ ಸ್ಫೋಟಸ್ಯ ಅದ್ವೈತಬ್ರಹ್ಮಣ ಇವ ಪ್ರಪಂಚಭ್ರಮಾಧಿಷ್ಠಾನತ್ವಾನುಪಪತ್ತಿಃ

ಅದ್ವೈತಬ್ರಹ್ಮದಂತೆ ಈ ಸ್ಫೋಟವನ್ನೂ ನಿರ್ವಿಶೇಷವಾಗಿಯೂ ನಿರವಯವವಾಗಿಯೂ ನೀವು ಒಪ್ಪಿರುತ್ತೀರಿ; ನಿರ್ವಿಶೇಷವಾಗಿಯೂ ನಿರವಯವವಾಗಿಯೂ ಇರುವ ಅದ್ವೈತಬ್ರಹ್ಮಕ್ಕೆ ಪ್ರಪಂಚಭ್ರಮಾಧಿಷ್ಠಾನತ್ವವು ಸಂಭವಿಸುವುದಿಲ್ಲವೆಂಬುದನ್ನು ಈಶ್ವರಪರಿಚ್ಛೇದದಲ್ಲಿಯೇ ತೋರಿಸಿರುವೆವು ; ಅದರಂತೆಯೇ ಈ

ಸ್ಫೋಟಕ್ಕೂ ಪ್ರಪಂಚಭ್ರಮಾಧಿಷ್ಠಾನತ್ವವು ಸಂಭವಿಸುವುದಿಲ್ಲವೆಂಬುದನ್ನೂ ನೀವು ತಿಳಿಯಬಹುದು ; ಏತಕ್ಕೆಂದರೆ ಭ್ರಮಕ್ಕೆ ಅಧಿಷ್ಠಾನವಾದ ವಸ್ತು ಸಂಪೂರ್ಣವಾಗಿ ಪ್ರಕಾಶಿಸುತ್ತಿದ್ದರೂ ಭ್ರಮವುಂಟಾಗುವುದಿಲ್ಲ ; ಸುತರಾಂ ಪ್ರಕಾಶಿಸದೆಯೇ ಇದ್ದರೂ ಭ್ರಮವುಂಟಾಗುವುದಿಲ್ಲ ; ವಸ್ತುವಿನ ಸಾಧಾರಣಾಕಾರವು ಮಾತ್ರವೇ ಪ್ರಕಾಶಿಸುತ್ತ ಅಸಾಧಾರಣಾಕಾರವು ಪ್ರಕಾಶಿಸದೆ ಇದ್ದರೆ ಆಗ ಭ್ರಮವುಂಟಾಗಬಹುದು ; ಇದಕ್ಕಾಗಿ ಸ್ಫೋಟದಲ್ಲಿ ಜ್ಞಾತವಾದ ಸಾಧಾರಣಾಕಾರವನ್ನೂ, ಅಜ್ಞಾತವಾದ ಅಸಾಧಾರಣಾಕಾರವನ್ನೂ ಒಪ್ಪಿದರೆ ಆಗ ಆ ಸ್ಫೋಟವೆಂಬುದು ಸವಿಶೇಷವಸ್ತುವೇ ಆಗಬೇಕಲ್ಲದೆ ನಿರ್ವಿಶೇಷವಸ್ತುವಾಗಲಾರದು ; ನಿರವಯವತ್ವದಲ್ಲಿಯೂ ನಿರ್ವಿಶೇಷತ್ವದಲ್ಲಿಯೂ ಅಭಿಮಾನವಿದ್ದರೆ ಭ್ರಮಾಧಿಷ್ಠಾನತ್ವವನ್ನು ಬಿಡಬೇಕು ; ಭ್ರಮಾಧಿಷ್ಠಾನತ್ವದಲ್ಲಿ ಅಭಿಮಾನವಿದ್ದರೆ ನಿರ್ವಿಶೇಷತ್ವವನ್ನೂ ನಿರವಯವತ್ವವನ್ನೂ ಬಿಡಬೇಕು ; ನಿರವಯವತ್ವನಿರ್ವಿಶೇಷತ್ವಗಳನ್ನು ಒಪ್ಪಿಕೊಂಡೇ ಭ್ರಮಾಧಿಷ್ಠಾನತ್ವವನ್ನೂ ಹೇಳುವೆವೆಂಬುದುಮಾತ್ರ ಆಗಲಾರದು : ಭ್ರಮಾಧಿಷ್ಠಾನವಾಗಬಹುದಾದ ರಜ್ಜು, ಶುಕ್ತಿ ಮೊದಲಾದುವುಗಳೆಲ್ಲಾ ಸಾವಯವಗಳಾಗಿಯೇ ಸವಿಶೇಷಗಳಾಗಿಯೇ ಇರುವುವಲ್ಲದೆ ನಿರವಯವಗಳಾಗಿಯೂ ನಿರ್ವಿಶೇಷಗಳಾಗಿಯೂ ಇಲ್ಲವಷ್ಟೆ ? ಈ ಅಭಿಪ್ರಾಯಗಳನ್ನೆಲ್ಲಾ ಹಿರಿಯರು—

" ಅಧಿಷ್ಠಾನಸ್ಯ ಕಾರ್ತ್ಸ್ನ್ಯೇನ ಭಾನೇಽಭಾನೇಽಪಿ ನ ಭ್ರಮಃ ।
ಭಾತಾಭಾತಾಕೃತಿಭಿದಾ ಸವಿಶೇಷತ್ವಸಾಧಿಕಾ ॥ "

ಎಂಬ ಕಾರಿಕೆಯಲ್ಲಿ ತೋರಿಸಿರುವರು—ಆದಕಾರಣ ಪ್ರಮಾಣಶೂನ್ಯವಾದ ಇಂಥ ಸ್ಫೋಟವನ್ನು ಅಂಗೀಕರಿಸಲಾಗುವುದಿಲ್ಲ.

## ೧೦೪೮. ಅಪ್ರಾಮಾಣಿಕಸ್ಫೋಟಾನಭ್ಯುಪಗಮೇಽಪಿ ವ್ಯಾಕರಣಸ್ಮೃತ್ಯುಪಪತ್ತಿಃ.

" ಸ್ಫೋಟವನ್ನು ಅಂಗೀಕರಿಸದಿದ್ದರೆ ವ್ಯಾಕರಣಸ್ಮೃತಿವಿರೋಧವು ಪ್ರಸಕ್ತವಾಗುವುದಾದಕಾರಣ ಸ್ಫೋಟಾಂಗೀಕಾರವು ಆವಶ್ಯಕವಾಗಿರುವುದು " ಎಂದು ಹೇಳಲಾಗದು ; ಸ್ಫೋಟಪದಾರ್ಥವನ್ನು ಒಪ್ಪದಿದ್ದರೂ ವ್ಯಾಕರಣಸ್ಮೃತಿವಿರೋಧವಿಲ್ಲ ; ಹೇಗೆಂದರೆ—**" ಸಾಧೂನೇವ ಪ್ರಯುಂಜೀತ ನಾಸಾಧೂನ್, ಗವಾದಯ ಏವ ಸಾಧವೋ ನ ಗಾವ್ಯಾದಯಃ "** (ಸಾಧುಶಬ್ದಗಳನ್ನೇ ಪ್ರಯೋಗಿಸಬೇಕು; ಅಸಾಧುಶಬ್ದಗಳನ್ನು ಪ್ರಯೋಗಿಸಕೂಡದು; ಗವಾದಿಶಬ್ದ

ಗಳೇ ಸಾಧುಶಬ್ದಗಳು; "ಗಾವೀ-ಗೋಣೀ-ಗೋಪೋತಲಿಕಾ" ಎಂಬುವೇ ಮೊದಲಾದ ಶಬ್ದಗಳು ಸಾಧುಶಬ್ದಗಳಲ್ಲ.) ಎಂಬುದಾಗಿ ಸಾಧುಶಬ್ದಸ್ವರೂಪ ನಿಯಮ, ಸಾಧುಶಬ್ದಪ್ರಯೋಗನಿಯಮ ಎಂಬ ಎರಡು ನಿಯಮಗಳನ್ನು ಪರಿಷ್ಕರಿಸುವುದಕ್ಕಾಗಿಯೇ ಅವತರಿಸಿರುವ ವ್ಯಾಕರಣಶಾಸ್ತ್ರದಲ್ಲಿ ಸ್ಫೋಟನಿರೂಪಣಕ್ಕೆ ಈಷನ್ಮಾತ್ರವೂ ಉಪಯೋಗವಿಲ್ಲವಷ್ಟೆ? ಅನುಪಯುಕ್ತವಾದ ಅರ್ಥವನ್ನು ಬಿಟ್ಟುದರಿಂದ ವಿರೋಧಪ್ರಸಕ್ತಿಯೂ ಇಲ್ಲವಷ್ಟೆ?

## ೧೦೮೯. ಅರ್ವಾಚೀನೈಃ ಕಲ್ಪಿತಸ್ಯಾಪಿ ಸ್ಫೋಟಸ್ಯ ಪಾಣಿನ್ಯಾದಿಭಿರನುಕ್ತತ್ವಾದನಾದರಣೀಯತ್ವಂ.

ಆದರೂ—"ಶಬ್ದಶಾಸ್ತ್ರಪ್ರವರ್ತಕರಾದವರು ಅಂಗೀಕರಿಸಿರುವ ಸ್ಫೋಟವನ್ನು ತಿರಸ್ಕಾರಮಾಡುವುದು ಹೇಗೆ?" ಎಂಬುದಾಗಿ ಚಿಂತಿಸಕೆಲಸವಿಲ್ಲ; ಏತಕ್ಕೆಂದರೆ—ಶಬ್ದಶಾಸ್ತ್ರಪ್ರವರ್ತಕರಾದ ಪಾಣಿನಿ-ಕಾತ್ಯಾಯನ-ಪತಂಜಲಿ ಎಂಬ ಮೂವರು ಮಹರ್ಷಿಗಳೊಳಗೆ ಒಬ್ಬರಾದರೂ ಈ ಸ್ಫೋಟವೆಂಬುದರ ಪ್ರಸ್ತಾವವನ್ನೇ ಎತ್ತಲಿಲ್ಲ. ಅರ್ವಾಚೀನರಾದ ಕೆಲವರು (ಭರ್ತೃಹರಿ ಮೊದಲಾದವರು) ತಮ್ಮ ಪ್ರಾಚೀನದುರ್ವಾಸನೆಯಿಂದ ಅನಾವಶ್ಯಕವಾಗಿದ್ದರೂ ಈ ಸ್ಫೋಟವೆಂಬುದನ್ನು ಈ ಶಾಸ್ತ್ರದ ಮಧ್ಯದಲ್ಲಿ ತುರುಕಿರುವರು. ಇಂಥವರಿಗೆ ಕೇವಲ ಶ್ರಮವೇ ಪ್ರಯೋಜನವಾಗಿ ಫಲಿಸುವುದಲ್ಲದೆ ಮತ್ತೇನೂ ಲಾಭವಿಲ್ಲ. ಅಪ್ರಾಮಾಣಿಕವಾದ ಅಂಥ ಪದಾರ್ಥವನ್ನು ವೇದಾವಲಂಬಿಗಳಾಗಿರುವ ಶಿಷ್ಟರು ಪರಿಗ್ರಹಿಸುವುದಿಲ್ಲವಷ್ಟೆ? ಆದಕಾರಣ ವ್ಯಾಕರಣಶಾಸ್ತ್ರಕ್ಕೆ ಉಪಯೋಗಿಯಲ್ಲದ ಅಪ್ರಾಮಾಣಿಕವಾದ ಅರ್ಥವನ್ನು ನಿರೂಪಿಸುವುದರಲ್ಲಿ ವೈಯಾಕರಣರಿಗೆ ಸ್ವಾತಂತ್ರ್ಯವಿಲ್ಲ; ಪೂರ್ವಪೂರ್ವಪ್ರಯೋಗವನ್ನು ಅನುಸರಿಸಿ ಪದಗಳ ಪ್ರಕೃತಿಪ್ರತ್ಯಯವಿಭಾಗವನ್ನು ತೋರಿಸುವುದರಮೂಲಕ ಶಬ್ದಸ್ವರೂಪಗಳನ್ನು ಶೋಧಿಸುವಿಕೆಯೇ ವೈಯಾಕರಣರ ಅಧಿಕಾರಕ್ಕೆ ಒಳಪಟ್ಟಿರುವುದಲ್ಲದೆ ತಮ್ಮ ಮನಸ್ಸಿಗೆ ತೋರಿದುದನ್ನೆಲ್ಲಾ ಕಲ್ಪಿಸಿ ಬರೆಯಲು ಅವರಿಗೆ ಅಧಿಕಾರವಿಲ್ಲ; ಒಂದುವೇಳೆ ಹಾಗೆ ಬರೆದರೂ ಪ್ರಯೋಜನವೇನೂ ಇಲ್ಲ. **ಶ್ರೀಮತ್ಪರಾಶರಭಟ್ಟಾರ್ಯರು**—ಈ ಅಂಶವನ್ನು—

**"ಪ್ರಾಕ್ಪ್ರಯೋಗಾನುಸಾರೇಣ ಪ್ರಕೃತಿಪ್ರತ್ಯಯಸ್ವರಾ ।**
**ಪ್ರಕಲ್ಪ್ಯ ವೈಯಾಕರಣೈರ್ವ್ಯುತ್ಪಾದ್ಯಾ ಪದಪದ್ಧತಿಃ ॥"**

ಎಂಬ ಕಾರಿಕೆಯಲ್ಲಿ ಸೂಚಿಸಿರುವರು. ಆದಕಾರಣ ವರ್ಣಗಳಿಗಿಂತಲೂ ಅತಿರಿಕ್ತ ವಾದ ಶಬ್ದವೆಂಬುದು ಪ್ರತ್ಯಕ್ಷಾದಿಪ್ರಮಾಣಬಾಧಿತವಾದಪ್ರಯುಕ್ತ ಅರ್ಥಪ್ರತಿ ಪಾದಕವಾದ ವರ್ಣಸಮುದಾಯವೇ ಶಬ್ದವೆನಿಸಿಕೊಳ್ಳುವುದು.

ಸತ್ತಾತ್ವಾದಿಗುಣಗಳಂತೆ ಈ ಶಬ್ದವೂ ಆ ಆ ದ್ರವ್ಯಗಳಿಗೆ ಧರ್ಮಭೂತ ಗಳಾಗಿಯೇ ತೋರಿಬರುತ್ತಿರುವುದರಿಂದ ಸತ್ತಾತ್ವಾದಿಗುಣಗಳಿಗೆ ಹೇಗೋ ಹಾಗೆ ಯೇ ಈ ಶಬ್ದಕ್ಕೂ ಅದ್ರವ್ಯತ್ವವು ಸಿದ್ಧವಾಗುವುದು. ವಾಯು ಮೊದಲಾದ ಸಾಮಗ್ರಿಗಳಿಂದ ಈ ಶಬ್ದವು ಅಭಿವ್ಯಂಗ್ಯವಾಗಿರುವುದೆಂಬುದನ್ನು ಮೊದಲೇ ತಿಳಿಸಿರುವೆವು.

## ೧೨೫೦. ಶಬ್ದಸ್ಯ ಅದ್ರವ್ಯತ್ವವ್ಯಂಗ್ಯತ್ವಾನುಪಪತ್ತಿಕಥನ ಪೂರ್ವಕಂ ದ್ರವ್ಯತ್ವಾನಿತ್ಯತ್ವಪೂರ್ವಪಕ್ಷಃ.

ಪೂಜ್ಯರೆ! ಶಬ್ದಕ್ಕೆ ಅದ್ರವ್ಯತ್ವವನ್ನೂ ವ್ಯಂಗ್ಯತ್ವವನ್ನೂ ನಿಶ್ಚಯಿಸಲು ಸಾಧ್ಯವಿಲ್ಲ; ಮುಂದೆ ನಾವು ತೋರಿಸುವ ರೀತಿಯಲ್ಲಿ ದ್ರವ್ಯತ್ವಾನಿತ್ಯತ್ವಗಳೇ ಸಿದ್ಧವಾಗಿರುವುವು. ಹೇಗೆಂದರೆ—

"ಯದ್ವೇದಾದೌ ಸ್ವರಃ ಪ್ರೋಕ್ತೋ ವೇದಾಂತೇ ಚ ಪ್ರತಿಷ್ಠಿತಃ।
ತಸ್ಯ ಪ್ರಕೃತಿಲೀನಸ್ಯ ಯಃ ಪರಃ ಸ ಮಹೇಶ್ವರಃ ॥"

ಎಂಬುವೇ ಮೊದಲಾದ ಅನೇಕಶ್ರುತಿವಾಕ್ಯಗಳಿಂದ ವರ್ಣಗಳಿಗೆ ವರ್ಣಾಂತರ ಗಳು ಉಪಾದಾನಕಾರಣಗಳಾಗಿರುವುವೆಂದು ಅವಗತವಾಗುವುದು; ಶಬ್ದವು ಅದ್ರವ್ಯವೆನಿಸಿಕೊಳ್ಳುವುದಾದರೆ ಇದು ಉಪಾದಾನಕಾರಣವಾಗುವ ಬಗೆ ಹೇಗೆ? ಉಪಾದಾನತ್ವವೇ ದ್ರವ್ಯಕ್ಕೆ ಲಕ್ಷಣವೆಂದು ಅಚಿತ್ತತ್ತ್ವಪರಿಚ್ಛೇದದಲ್ಲಿಯೇ ಹೇಳಿರುತ್ತೀರಿ;

ಅದೇತಕ್ಕೆ? ವರ್ಣಗಳಿಗೆ ವರ್ಣಾಂತರವು ನಿಮಿತ್ತಕಾರಣವಾಗಿರುವು ದೆಂದು ಹೇಳಿ ಈ ಶ್ರುತಿಯನ್ನು ನಿರ್ವಹಿಸಬಹುದಲ್ಲವೆ? ಇಲ್ಲ; ಹಾಗೆ ನಿರ್ವ ಹಿಸುವುದಾದರೆ ಉಪಾದಾನತ್ವವನ್ನು ಬೋಧಿಸುವ ಪ್ರಕೃತಿಶಬ್ದಕ್ಕೂ ಲಯ ಶಬ್ದಕ್ಕೂ ಸ್ವಾರಸ್ಯಭಂಗವಾಗುವುದು. ನಿಮಿತ್ತಕಾರಣವು ಕಾರ್ಯವಸ್ತುವಿನ ಲಯಕ್ಕೆ ಅಧಿಷ್ಠಾನವಾಗಲಾರದಲ್ಲವೆ? ಕುಂಬಾರನಿಂದ ಹುಟ್ಟಿದ ಘಟವು ಲಯಿ ಸುವಾಗ ಮಣ್ಣಿನಲ್ಲಿ ಲೀನವಾಗುವುದೇ ಅಲ್ಲದೆ ಕುಂಬಾರನಲ್ಲಿ ಲೀನವಾಗುವುದಿಲ್ಲ ವಷ್ಟೆ?

ಅದೇತಕ್ಕೆ ? ಈ ಪ್ರಕೃತಿಲೀನಶಬ್ದಕ್ಕೆ ಇಲ್ಲಿ ಮುಖ್ಯಾರ್ಥವು ಸಂಭವಿಸದಿದ್ದರೂ ಈ ಪ್ರಯೋಗವು ಔಪಚಾರಿಕವಾಗಿರುವುದೆಂದು ಹೇಳಬಹುದಲ್ಲವೆ ? ಇಲ್ಲ ; ಹಾಗೆ ಹೇಳಲಾಗುವುದಿಲ್ಲ; ಮುಖ್ಯಾರ್ಥಕ್ಕೆ ಬಾಧೆಯಿದ್ದರಲ್ಲವೆ ಔಪಚಾರಿಕತ್ವವನ್ನು ಸ್ವೀಕರಿಸಲಾದೀತು ? ಶಬ್ದಕ್ಕೆ ದ್ರವ್ಯತ್ವವನ್ನು ಸ್ವೀಕರಿಸಿಬಿಟ್ಟರೆ ಮುಖ್ಯಾರ್ಥಕ್ಕೆ ಬಾಧೆಯಿಲ್ಲವಷ್ಟೆ ? ಮತ್ತು ಭಾಷ್ಯಕಾರರ ಶ್ರೀಸೂಕ್ತಿಗೆ ವಿರೋಧವುಂಟಾಗುವುದರಿಂದಲೂ ಇಲ್ಲಿ ಔಪಚಾರಿಕತ್ವವನ್ನು ಸ್ವೀಕರಿಸಲಾಗುವುದಿಲ್ಲ; ಹೇಗೆಂದರೆ ವೇದಾರ್ಥಸಂಗ್ರಹದಲ್ಲಿ—" **ವೇದಾದ್ಯಂತರೂಪತಯಾ ವೇದಬೀಜಭೂತಪ್ರಣವಸ್ಯ ಪ್ರಕೃತಿಭೂತಾಕಾರವಾಚ್ಯತಯಾ ಮಹೇಶ್ವರತ್ವಂ ಪ್ರತಿಪಾದ್ಯ ದಹರಪುಂಡರೀಕಮಧ್ಯಸ್ಥಾಕಾಶವರ್ತಿತಯಾ ಉಪಾಸ್ಯತ್ವಮುಕ್ತಂ, ಅಯಮರ್ಥಃ-ಸರ್ವಸ್ಯ ವೇದಜಾತಸ್ಯ ಪ್ರಕೃತಿಃ ಪ್ರಣವ ಉಕ್ತಃ, ಪ್ರಣವಸ್ಯ ಚ ಪ್ರಕೃತಿರಕಾರಃ, ಪ್ರಣವವಿಕಾರೋ ವೇದಃ ಸ್ವಪ್ರಕೃತಿಭೂತೇ ಪ್ರಣವೇ ಲೀನಃ, ಪ್ರಣವೋಽಪ್ಯಕಾರವಿಕಾರಭೂತಃ ಸ್ವಪ್ರಕೃತಾವಕಾರೇ ಲೀನಃ, ತಸ್ಯ ಪ್ರಣವಪ್ರಕೃತಿಭೂತಸ್ಯಾಕಾರಸ್ಯ ಯಃ ಪರಃ ವಾಚ್ಯಃ ಸ ಏವ ಮಹೇಶ್ವರ ಇತ್ಯರ್ಥಃ ಇತಿ ಸರ್ವವಾಚಕಜಾತಪ್ರಕೃತಿಭೂತಾಕಾರವಾಚ್ಯಃ ಸರ್ವವಾಚ್ಯಜಾತಪ್ರಕೃತಿಭೂತನಾರಾಯಣೋ ಯಃ ಸ ಮಹೇಶ್ವರ ಇತ್ಯರ್ಥಃ**" ಎಂದು ಶ್ರೀಭಾಷ್ಯಕಾರರ ಶ್ರೀಸೂಕ್ತಿಯಿರುವುದು ; ಇದರ ಅಭಿಪ್ರಾಯವೇನೆಂದರೆ—ಪ್ರಣವವೆಂದು ಹೇಳಿಸಿಕೊಳ್ಳುವ ಓಂಕಾರವು ವೇದಕ್ಕೆ ಉತ್ಪಾದಕವಾದುದರಿಂದ ವೇದಕ್ಕೆ ಅದೇ ಆದಿಭೂತವಾಗಿಯೂ, ವೇದಕ್ಕೆ ಲಯಸ್ಥಾನವಾದುದರಿಂದ ವೇದಕ್ಕೆ ಅದೇ ಅಂತಭೂತವಾಗಿಯೂ ಇರುವುದು ; ಆದುದರಿಂದಲೇ ವೇದಕ್ಕೆ ಬೀಜಭೂತವೆನಿಸಿಕೊಂಡಿರುವ ಈ ಪ್ರಣವವು ತನಗೆ ಪ್ರಕೃತಿಭೂತವಾದ ಅಕಾರದೊಳು ಲಯಿಸಿದ ಕಾಲದಲ್ಲಿ ಎಂದರೆ ಪ್ರಣವವು ಸ್ವಪ್ರಕೃತಿಭೂತಾಕಾರತ್ವಾವಸ್ಥೆಯನ್ನು ಪಡೆದ ಕಾಲದಲ್ಲಿ ಅಂಥ ಪ್ರಣವಕ್ಕೆ ವಾಚ್ಯನಾದವನು ಯಾವನೋ ; ಎಂದರೆ ಪ್ರಣವ ಪ್ರಕೃತಿಭೂತವಾದ ಅಕಾರಕ್ಕೆ ವಾಚ್ಯನಾದವನು ಯಾವನೋ ; ಅಂಥ ನಾರಾಯಣನಿಗೇ ಮಹೇಶ್ವರತ್ವವು ಶ್ರುತಿಯಿಂದ ನಿಷ್ಕರ್ಷಿಸಲ್ಪಟ್ಟಿರುವುದು ;

"**ಯದ್ವೇದಾದೌ**" ಎಂಬ ಶ್ರುತಿವಾಕ್ಯದಲ್ಲಿ ಮಹೇಶ್ವರಪದದಿಂದ ದೇವತಾಂತರಕ್ಕೆ ಪರತ್ವವು ಉಕ್ತವಾಗಿರುವಕಾರಣ ದಹರಪುಂಡರೀಕಮಧ್ಯದಲ್ಲಿಯೂ ಅಂಥ ದೇವತಾಂತರವೇ ಉಪಾಸ್ಯದೇವತೆಯಾಗಿರುವುದೆಂದು ಆಶಂಕೆಯುಂಟಾದರೆ ಅದನ್ನು ಪರಿಹರಿಸುವುದಕ್ಕಾಗಿ "**ಯದ್ವೇದಾದೌ**" ಎಂಬ ಶ್ರುತಿ

ವಾಕ್ಯದಲ್ಲಿಯೂ ನಾರಾಯಣನಿಗೇ ಮಹೇಶ್ವರತ್ವವನ್ನು ಹೇಳಿ ಪರತ್ವವನ್ನು ಸ್ಥಾಪಿಸಿರುವುದರಿಂದ ದಹರಪುಂಡರೀಕದಲ್ಲಿಯೂ ಅವನೇ ಉಪಾಸ್ಯನಾಗಿರುವ ನೆಂಬುದು ಈ ಸಂದರ್ಭದ ಮುಖ್ಯಾರ್ಥವಾಗಿರುವುದು.

ಆಗಲಿ; ಆದರೂ—ಈ ವಾಕ್ಯದಲ್ಲಿ ಪ್ರಣವಕ್ಕೂ ವೇದಕ್ಕೂ, ಮತ್ತು ಅಕಾರಕ್ಕೂ ಪ್ರಣವಕ್ಕೂ ಪ್ರಕೃತಿವಿಕಾರಭಾವವು (ಕಾರ್ಯಕಾರಣಭಾವವು) ಹೇಗೆ ಅವಗತವಾಗುವುದು? ಮತ್ತು ಇಲ್ಲಿ ಅಕಾರದ ಪ್ರಸಂಗವನ್ನು ತೋರಿಸುವ ಪದವು ಯಾವುದು? ಮತ್ತು ಪರಮಾತ್ಮನಿಗೆ ಅಕಾರವಾಚ್ಯತ್ವವನ್ನು ಬೋಧಿಸುವ ಪದವು ಯಾವುದು? ಎಂಬ ಆಶಂಕೆಯ ಪರಿಹಾರಕ್ಕಾಗಿ—"**ಅಯಮರ್ಥಃ**" ಎಂದು ಉಪಕ್ರಮಿಸಿರುವುದು; ವೇದದ ಆದ್ಯಂತಾವಸ್ಥೆಗಳಲ್ಲಿ ಪ್ರಣವವು ಸುಪ್ರತಿಷ್ಠಿತವಾಗಿರುವುದೆಂದು ಹೇಳಿದುದರಿಂದ ಪ್ರಣವಕ್ಕೂ ವೇದಕ್ಕೂ ಪ್ರಕೃತಿವಿಕಾರ ಭಾವವು ಸಿದ್ಧವಾಯಿತು; "**ಪ್ರಕೃತಿಲೀನಸ್ಯ**" ಎಂದು ಹೇಳಿದುದರಿಂದ ಅಕಾರಕ್ಕೂ ಪ್ರಣವಕ್ಕೂ ಪ್ರಕೃತಿವಿಕಾರಭಾವವು ಸಿದ್ಧವಾಯಿತು; ಈ ಪದದಿಂದಲೇ ಅಕಾರವೂ ಪ್ರಸ್ತುತವಾಯಿತು; "**ಯಃ ಪರಃ**" ಎಂಬ ಪರಶಬ್ದದಿಂದ ಅಕಾರ ವಾಚ್ಯತ್ವವೂ ಸಿದ್ಧವಾಯಿತು; "**ಇದಂಪರಃ, ತತ್ಪರಃ**" ಎಂಬುವೇ ಮೊದಲಾದ ಸ್ಥಳಗಳಲ್ಲಿ ಪರಶಬ್ದವು ವಾಚ್ಯವೆಂಬ ಅರ್ಥವನ್ನು ಬೋಧಿಸುತ್ತದೆಯೆಂಬುದು ಸುಪ್ರಸಿದ್ಧವಷ್ಟೆ?

ಹಾಗಾದರೆ "**ಅಕಾರಸ್ಯ ಪರಃ**" ಎಂದು ಹೇಳಬೇಕಾಗಿದ್ದಿತು; "**ಪ್ರಕೃತಿಲೀನಸ್ಯ ಪರಃ**" ಎಂದು ಹೇಳಿದುದಕ್ಕೆ ಅಭಿಪ್ರಾಯವೇನು? ಮತ್ತು ಅಕಾರವಾಚ್ಯನಾದವನಿಗೆ ಮಹೇಶ್ವರತ್ವವು ಸಿದ್ಧವಾಗುವುದಾದರೆ ಇದರಿಂದ ನಾರಾಯಣನಿಗೆ ಪರತ್ವವು ಹೇಗೆ ಸಿದ್ಧಿಸೀತು? ಇವೇ ಮೊದಲಾದ ಆಶಂಕೆಗಳು ಇಲ್ಲಿ ಪರಿಹರಿಸಲ್ಪಡುವುವು; ಹೇಗೆಂದರೆ "ಸಮಸ್ತವೇದರಾಶಿಗೂ ಪ್ರಣವವು ಪ್ರಕೃತಿಯಾಗಿರುವುದು; (ಉಪಾದಾನಕಾರಣವಾಗಿರುವುದು) ಅಂಥ ಪ್ರಣವಕ್ಕೆ ಅಕಾರವು ಪ್ರಕೃತಿಯಾಗಿರುವುದು; ಪ್ರಣವದ ವಿಕೃತಿಯೆನಿಸಿಕೊಂಡ ಸಮಸ್ತವೇದರಾಶಿಯೂ ತನ್ನ ಪ್ರಕೃತಿಯಾದ ಪ್ರಣವದಲ್ಲಿ ಲಯಿಸುವುದು; ಅಂಥ ಪ್ರಣವವೂ ಅಕಾರಕ್ಕೆ ವಿಕೃತಿಯೆನಿಸಿಕೊಂಡಿರುವುದರಿಂದ ತನ್ನ ಪ್ರಕೃತಿಯಾದ ಅಕಾರದಲ್ಲಿ ಲಯಿಸುವುದು; ಪ್ರಣವಕ್ಕೆ ಪ್ರಕೃತಿಭೂತವಾದ ಅಂಥ ಅಕಾರಕ್ಕೆ ಯಾವನು ವಾಚ್ಯನಾಗಿರುವನೋ ಅವನೇ ಮಹೇಶ್ವರನೆನಿಸಿಕೊಳ್ಳುವನು" ಎಂದು ಹೇಳಿದುದರಿಂದ "ವಾಚಕವೆನಿಸಿಕೊಂಡಿರುವ ಸಮಸ್ತಶಬ್ದರಾಶಿಗೂ

ಪ್ರಕೃತಿಭೂತವಾದ ಅಕಾರಕ್ಕೆ ವಾಚ್ಯನಾಗಿಯೂ, ವಾಚ್ಯವೆನಿಸಿಕೊಂಡಿರುವ ಸಮಸ್ತಪದಾರ್ಥರಾಶಿಗೂ ಪ್ರಕೃತಿಭೂತನಾಗಿಯೂ ಇರುವ ನಾರಾಯಣನೆಂಬುವನು ಯಾವನೋ ಅವನೇ ಸರ್ವೇಶ್ವರನಾದುದರಿಂದ ಮಹೇಶ್ವರನೆನಿಸಿಕೊಳ್ಳುವನು " ಎಂಬುದು ಸಿದ್ಧವಾಯಿತು ;

"ಅಕಾರಸ್ಯ ಪರಃ" ಎಂದು ಹೇಳದೆ "ಪ್ರಕೃತಿಲೀನಸ್ಯ ಪರಃ" ಎಂದು ಹೇಳಿದುದಕ್ಕೆ "ವಾಚ್ಯರಾಶಿಗೆ ಪ್ರಕೃತಿಭೂತನಾದವನು ವಾಚಕರಾಶಿಗೆ ಪ್ರಕೃತಿಭೂತವಾದ ಅಕ್ಷರಕ್ಕೆ ವಾಚ್ಯನಾಗಿರುವನು" ಎಂದು ಬೋಧಿಸುವಿಕೆಯೇ ಪ್ರಯೋಜನವಾಗಿರುವುದು. ಸಮಸ್ತವಾಚ್ಯರಾಶಿಗೂ ಪ್ರಕೃತಿಭೂತನಾದವನು ನಾರಾಯಣನೇ ಆಗಿರುವನಲ್ಲದೆ ಬೇರೊಬ್ಬನಲ್ಲವೆಂಬ ಅಂಶವು ಶ್ರುತಿಸ್ಮೃತಿ ಮೊದಲಾದ ಪ್ರಮಾಣವಚನಗಳಿಂದ ಸುಸ್ಪಷ್ಟವಾಗಿರುವುದು ; ಆದುದರಿಂದಲೇ ಶ್ರೀಭಗವದ್ಗೀತೆಯಲ್ಲಿ—

"ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಳಯಸ್ತಥಾ ।
ಮತ್ತಃ ಪರತರಂ ನಾನ್ಯತ್ಕಿಂಚಿದಸ್ತಿ ಧನಂಜಯ ॥"

ಎಂದು ಶ್ರೀಕೃಷ್ಣನು ತನ್ನ ಸರ್ವಕಾರಣತ್ವವನ್ನು ಅರ್ಜುನನಿಗೆ ಸ್ಪಷ್ಟವಾಗಿ ಉಪದೇಶಿಸಿರುವನು. ಇದರಂತೆಯೇ ಅಕಾರವೇ ಸಮಸ್ತವಾಚಕರಾಶಿಗೂ ಪ್ರಕೃತಿಯಾಗಿರುವುದೆಂಬ ಅಂಶವನ್ನೂ, ಅಂಥ ಅಕಾರಕ್ಕೂ ತನಗೂ ವಾಚ್ಯವಾಚಕಭಾವಸಂಬಂಧವಿರುವುದೆಂಬ ಅಂಶವನ್ನೂ ಅದೇ ಗೀತೆಯಲ್ಲಿ "ಅಕ್ಷರಾಣಾಮಕಾರೋಽಸ್ಮಿ" ಎಂದು ಉಪದೇಶಿಸಿರುವನು ;

ಮತ್ತು— "ಅ ಇತಿ ಬ್ರಹ್ಮ" ಎಂಬ ಶ್ರುತಿ ಪರಮಾತ್ಮನಿಗೆ ಅಕಾರವಾಚ್ಯತ್ವವನ್ನೂ, "ಅಕಾರೋ ವೈ ಸರ್ವಾ ವಾಕ್" ಎಂಬ ಶ್ರುತಿ ಅಕಾರಕ್ಕೆ ಸಮಸ್ತವಾಚಕರಾಶಿಪ್ರಕೃತಿತ್ವವನ್ನೂ ಬೋಧಿಸುತ್ತಿರುವುದು. ಪರಮಾತ್ಮನು ಅಕಾರವಾಚ್ಯನೆನಿಸಿಕೊಳ್ಳುವುದಕ್ಕೆ ಸಮಸ್ತವಾಚ್ಯರಾಶಿಗೂ ಕಾರಣಭೂತನಾಗಿರುವಿಕೆಯೇ ಕಾರಣವಾಗಿರುವುದು ; ಅಕಾರವು ಪರಮಾತ್ಮವಾಚಕವೆನಿಸಿಕೊಳ್ಳುವುದಕ್ಕೆ ಸಮಸ್ತವಾಚಕರಾಶಿಗೂ ಕಾರಣಭೂತವಾಗಿರುವಿಕೆಯೇ ಕಾರಣವಾಗಿರುವುದು ; ಇದೇ ಅರ್ಥವನ್ನು—

"ಅಕಾರೇಣಾಖಿಲಾಧಾರಃ ಪರಮಾತ್ಮಾಽಭಿಧೀಯತೇ ।
ಸಮಸ್ತಶಬ್ದಮೂಲತ್ವಾದಕಾರಸ್ಯ ಸ್ವಭಾವತಃ ॥

**ಸಮಸ್ತವಾಚ್ಯಮೂಲತ್ವಾದ್ಬ್ರಹ್ಮಣೋಽಪಿ ಸ್ವಭಾವತಃ |**
**ವಾಚ್ಯವಾಚಕಸಂಬಂಧಸ್ತಯೋರರ್ಥಾತ್ಪ್ರತೀಯತೇ ||"**
ಎಂಬ ಸ್ಮೃತಿಯೂ ಸ್ಪಷ್ಟವಾಗಿ ಉಪದೇಶಿಸುತ್ತಿರುವುದು.

ಹೀಗೆ ಭಾಷ್ಯಕಾರರ ಸೂಕ್ತಿಯಲ್ಲಿ ವರ್ಣಗಳಿಗೆ ಪ್ರಕೃತಿವಿಕಾರಭಾವವು ಕಂಠೋಕ್ತವಾಗಿರುವುದರಿಂದ ಇಂಥ ಉಪಾದಾನತ್ವದ ಉಪಪತ್ತಿಗಾಗಿ ವರ್ಣಾತ್ಮಕಶಬ್ದಕ್ಕೆ ದ್ರವ್ಯತ್ವವನ್ನೇ ಒಪ್ಪಬೇಕು.

ಮತ್ತು—ಶ್ರೀಭಾಷ್ಯದೊಳಗೆ ಮೊದಲನೆಯ ಅಧ್ಯಾಯದ ಮೂರನೆಯ ಪಾದದ ಇಪ್ಪತ್ತೊಂಬತ್ತನೆಯ ಸೂತ್ರದ ಅವತಾರಿಕೆಯಲ್ಲಿ ಶಬ್ದವು ತಾಮಸಾಹಂಕಾರದ್ರವ್ಯದ ಪರಿಣಾಮರೂಪವಾಗಿರುವುದೆಂಬ ಅಂಶವನ್ನೂ, ಅಂಥ ಶಬ್ದಕ್ಕೆ ಪ್ರಾಕೃತಪ್ರಳಯದಲ್ಲಿ ವಿಲಯವನ್ನೂ "**ಪ್ರಾಕೃತಪ್ರಳಯೇ ಸ್ರಷ್ಟುಃ ಪ್ರಜಾಪತೇಃ ಭೂತಾದ್ಯಹಂಕಾರಪರಿಣಾಮಶಬ್ದಸ್ಯ ಚ ವಿನಷ್ಟತ್ವಾತ್**" ಎಂದು ಭಾಷ್ಯಕಾರರೇ ತೋರಿಸಿರುವವರಾದುದರಿಂದ ಶಬ್ದಕ್ಕೆ ದ್ರವ್ಯತ್ವವನ್ನೂ ಅನಿತ್ಯತ್ವವನ್ನೂ ಒಪ್ಪಬೇಕು.

ಮತ್ತು—"**ಯಸ್ಯ ವೇದಾಃ ಶರೀರಂ**" ಎಂಬ ಶ್ರುತಿಯಿಂದಲೂ ಶಬ್ದಕ್ಕೆ ದ್ರವ್ಯತ್ವವು ಸಿದ್ಧವಾಗುವುದು. ಅಚಿತ್ತತ್ತ್ವಪರಿಚ್ಛೇದದಲ್ಲಿ ಶರೀರಲಕ್ಷಣವನ್ನು ಹೇಳುವಾಗ ದ್ರವ್ಯಪದವನ್ನು ಲಕ್ಷಣದಲ್ಲಿ ಸೇರಿಸಿ ಅದ್ರವ್ಯಕ್ಕೆ ಶರೀರತ್ವವಿಲ್ಲವೆಂದು ಹೇಳಿರುವಿರಷ್ಟೆ? ಶಬ್ದರೂಪವಾದ ವೇದವು ಪರಮಾತ್ಮನಿಗೆ ಶರೀರವೆನಿಸಿಕೊಳ್ಳಬೇಕಾದರೆ ದ್ರವ್ಯತ್ವವು ಇದಕ್ಕೆ ಇದ್ದೇ ಇರಬೇಕಷ್ಟೆ?

ಮತ್ತು—ಆತ್ಮಸಿದ್ಧಿಗ್ರಂಥದಲ್ಲಿ ಶ್ರೀಮದ್ಯಾಮುನಮುನಿಗಳು—"**ದೃಶ್ಯಂತೇ ಗುಣಾ ಅಪಿ ಶಬ್ದ-ಗಂಧ-ಸೂರ್ಯಾಲೋಕ-ರತ್ನಪ್ರಭಾದಯೋ ಗತಿಮಂತೋ ಧರ್ಮ್ಯತಿವರ್ತಿನಶ್ಚ, ಅತಿಸೂಕ್ಷ್ಮೋ ದೂರಗಮನಧರ್ಮಾ ಭೌತಿಕೋ ಹಿ ಶಬ್ದಃ, ಸ ಖಲು ಶಂಖಮುಖಾದೇರ್ನಿರ್ಗಮೀಯಮಾನೋಽಪಿ ದೃಶಾಂ ನೋದನವಿಶೇಷೇಣ ಲೋಷ್ಟಾದಿರಿವ ಯಾವದ್ವೇಗಮಭಿಪ್ರತಿಷ್ಠತೇ, ಸ್ಪರ್ಶರಹಿತೋಽಪಿ**" ಎಂದು ಅಪ್ಪಣೆಕೊಡಿಸುವರು:—ಈ ಸೂಕ್ತಿಯ ಅಭಿಪ್ರಾಯವೇನೆಂದರೆ—"ಶಬ್ದ-ಗಂಧ-ಸೂರ್ಯಾಲೋಕ-ರತ್ನಪ್ರಭೆ ಮುಂತಾದುವುಗಳು ಗಮನಕ್ರಿಯಾಶ್ರಯಗಳಾಗಿಯೂ ತಮ್ಮ ಆಶ್ರಯಕ್ಕಿಂತಲೂ ಹೆಚ್ಚು ಪ್ರದೇಶದಲ್ಲಿ ಇರತಕ್ಕವುಗಳಾಗಿಯೂ ಇರುವುವು, ಅವುಗಳೊಳಗೆ ಭೌತಿಕವಾದ ಶಬ್ದವೆಂಬುದು ಅತಿಸೂಕ್ಷ್ಮವಾಗಿಯೂ ಬಲುದೂರದವರೆಗೆ ಸಂಚರಿಸುವ ಸ್ವಭಾವವುಳ್ಳುದಾಗಿಯೂ ಇರುವುದು; ಏತಕ್ಕೆಂದರೆ—ಕಣ್ಣುಗಳಿಗೆ ಗೋಚರವಾಗದೆ

ಅತಿದೂರದಲ್ಲಿರುವ ಶಂಖ-ಮುಖ-ಮೊದಲಾದುವುಗಳಿಂದ ಪ್ರೇರಿಸಲ್ಪಟ್ಟ ಆ ಶಬ್ದ ವೆಂಬುದು ಪ್ರೇರಣಾಬಲದಿಂದ ಕೈಯಿಂದ ಎಸೆಯಲ್ಪಟ್ಟ ಮಣ್ಣು ಹೆಂಟೆ ಮುಂತಾದ ಪದಾರ್ಥದಂತೆ ವೇಗವಿರುವವರೆಗೂ ಓಡುತ್ತಿರುವುದು; ಮತ್ತು ಈ ಶಬ್ದವು ಸ್ಪರ್ಶಗುಣಹೀನವಾಗಿರುವುದು" ಎಂದು ಈ ಸೂಕ್ತಿಯ ಅಭಿಪ್ರಾಯವಿರುವುದು. ಇಲ್ಲಿ ಶಬ್ದಕ್ಕೆ ಭೌತಿಕತ್ವವನ್ನು ಹೇಳಿರುವುದರಿಂದ ದ್ರವ್ಯತ್ವವು ಸಿದ್ಧವಾಗಿರುವುದು. ಶಬ್ದವು ಅದ್ರವ್ಯವೇ ಆಗಿದ್ದ ಪಕ್ಷದಲ್ಲಿ ಸ್ಪರ್ಶಗುಣವನ್ನು ಇದರಲ್ಲಿ ಪ್ರತಿಷೇಧಿಸಬೇಕಾದ ಪ್ರಸಕ್ತಿಯೇ ಇರಲಿಲ್ಲ; ಅದ್ರವ್ಯದಲ್ಲಿ ಅದ್ರವ್ಯವು ಇಲ್ಲವೆಂಬುದು ಸ್ಪಷ್ಟವಷ್ಟೆ? ಇದರಂತೆಯೇ ಶಬ್ದಕ್ಕೆ ಆಕಾಶಗುಣತ್ವವನ್ನು ಪ್ರತಿಷೇಧಿಸಿ, ವಾಯುವೀಯತ್ವವನ್ನೂ, ಉಚ್ಚಾರಣಾನಂತರಕಾಲಜನ್ಯತ್ವವನ್ನೂ, ವ್ಯಂಗ್ಯತ್ವ ಪಕ್ಷದಲ್ಲಿ ದೂಷಣಗಳನ್ನೂ ಅದೇ ಗ್ರಂಥದಲ್ಲಿ ಉಪಪಾದನೆಮಾಡಿ ತೋರಿಸಿರುವರು.

ಹೀಗೆ ಶಬ್ದಕ್ಕೆ ದ್ರವ್ಯತ್ವವೂ ಅನಿತ್ಯತ್ವವೂ ಸಿದ್ಧವಾಗಿರುವಾಗ ಅದ್ರವ್ಯತ್ವವನ್ನೂ ವ್ಯಂಗ್ಯತ್ವವನ್ನೂ ಸಿದ್ಧಾಂತಪಡಿಸಲು ಶಕ್ಯವಿಲ್ಲವೆಂಬ ಈ ಪೂರ್ವಪಕ್ಷಕ್ಕೆ ಪರಿಹಾರವನ್ನು ಹೇಳುವುದಕ್ಕಿಂತಲೂ ಮೊದಲೇ ಮಧ್ಯದಲ್ಲಿ ವಿಚಾರಾಂತರವು ಪ್ರಸ್ತುತವಾಗುವುದು; ಹೇಗೆಂದರೆ—

## ೧೦೫೧. ವರ್ಣಾನಾಂ ಉಪಾದಾನತ್ವ-ಸ್ಥಾನವಿಶೇಷ-ರೂಪ ವಿಶೇಷಬೋಧಕವಾಕ್ಯೇಷು ಚತುರ್ಧಾ ವಿಕಲ್ಪಃ.

ಶಬ್ದವನ್ನು ಲಕ್ಷೀಕರಿಸಿ ಶಾಸ್ತ್ರಗಳಲ್ಲಿ ಉಪಾದಾನಕಾರಣತ್ವವನ್ನೂ, ಆ ಆ ಸ್ಥಾನವಿಶೇಷಗಳನ್ನೂ, ಆ ಆ ವರ್ಣವಿಶೇಷಗಳನ್ನೂ, ಉಪದೇಶಿಸುವ ವಾಕ್ಯಗಳು ಯಥಾರ್ಥಗಳಾಗಿಯೇ ಇರುವುವೋ? ಅಥವಾ ಕಲ್ಪಿತಗಳೋ? (ಬಾಧಿತಗಳೋ?) ಎಂದರೆ—

"ಜರದ್ಗವಃ ಕಂಬಳಪಾದುಕಾಭ್ಯಾಂ
ದ್ವಾರಿ ಸ್ಥಿತೋ ಗಾಯತಿ ಭದ್ರಕಾಣಿ ।
ತಂ ಬ್ರಾಹ್ಮಣೀ ಪೃಚ್ಛತಿ ಪುತ್ರಕಾಮಾ
ರಾಜನ್ ರುಮಾಯಾಂ ಲಶುನಸ್ಯ ಕೋಽರ್ಘಃ ॥"

ಎಂಬುವೇ ಮೊದಲಾದ ಜರದ್ಗವಾದಿವಾಕ್ಯಗಳಂತೆ ಬಾಧಿತಾರ್ಥಗಳಾಗಿ ಅಯಥಾರ್ಥಗಳೆನಿಸಿಕೊಳ್ಳುವುವೋ? ಅಥವಾ "ಮನೋ ಬ್ರಹ್ಮೇತ್ಯುಪಾಸೀತ, ನಾಮ ಬ್ರಹ್ಮೇತ್ಯುಪಾಸೀತ" ಎಂದು ಬ್ರಹ್ಮವಲ್ಲದ ಮನಸ್ಸನ್ನೂ ನಾಮ

ವನ್ನೂ ಬ್ರಹ್ಮವೆಂದು ಉಪಾಸನೆಮಾಡಬೇಕೆಂದು ವಿಧಿಸುವ ದೃಷ್ಟಿವಿಧಿವಾಕ್ಯ ಗಳಂತೆ ಉಪಾದಾನಕಾರಣವಲ್ಲದ ವರ್ಣವನ್ನು ಉಪಾದಾನಕಾರಣವಾಗಿ ಉಪಾ ಸನೆಮಾಡಬೇಕೆಂದೂ, ಸ್ಥಾನವಿಶೇಷದಲ್ಲಿ ನಿಯತವಲ್ಲದ ವರ್ಣವನ್ನು ಸ್ಥಾನ ವಿಶೇಷದಲ್ಲಿ ಉಪಾಸನೆಮಾಡಬೇಕೆಂದೂ, ರೂಪಶೂನ್ಯವಾದ ವರ್ಣವನ್ನು ಶುಕ್ಲ ನೀಲಾದಿರೂಪವಿಶಿಷ್ಟವಾಗಿ ಉಪಾಸನೆಮಾಡಬೇಕೆಂದೂ ವಿಧಿಸುವುವೋ ? ಅಥವಾ " **ಸಿಹ್ಮೋ ಮಾಣವಕಃ** " ಎಂದು ಸಿಹ್ಮಸದೃಶನಾದ ಮಾಣವಕನಲ್ಲಿ ಸಿಹ್ಮಶಬ್ದವನ್ನು ಔಪಚಾರಿಕವಾಗಿ ಪ್ರಯೋಗಿಸಿರುವಂತೆ ಉಪಾದಾನಕಾರಣಕ್ಕೆ ಸದೃಶವಾದ ವರ್ಣದಲ್ಲಿ ಉಪಾದಾನಶಬ್ದವನ್ನೂ, ಸ್ಥಾನವಿಶೇಷದಲ್ಲಿರುವುದಕ್ಕೆ ಸದೃಶವಾದ ವರ್ಣದಲ್ಲಿ ಸ್ಥಾನವಿಶೇಷವರ್ತಿಶಬ್ದವನ್ನೂ, ಶುಕ್ಲನೀಲಾದಿಗಳಿಗೆ ಸದೃಶವಾದ ವರ್ಣದಲ್ಲಿ ಶುಕ್ಲನೀಲಾದಿಶಬ್ದವನ್ನೂ ಪ್ರಯೋಗಿಸಿರುವುದೋ ? ಎಂಬುದಾಗಿ ನಾಲ್ಕು ವಿಚಾರಗಳು ಅಂಕುರಿಸುವುವು.

## ೧೦೫೨ ತತ್ರ ಯಾಥಾರ್ಥ್ಯರೂಪಪ್ರಥಮಪಕ್ಷಾನುಪಪತ್ತಿ ಪ್ರದರ್ಶನಂ.

ಹೀಗೆ ವಿಚಾರಿಸುವಾಗ ಮೊದಲನೆಯ ಪಕ್ಷವನ್ನು ಅಂಗೀಕರಿಸಲಾಗುವು ದಿಲ್ಲ; ಏತಕ್ಕೆಂದರೆ, ವರ್ಣಗಳಿಗೆ ನಿತ್ಯತ್ವವನ್ನೇ ಅಂಗೀಕರಿಸುವ **ಮೀಮಾಂಸಕರ** ದೃಷ್ಟಿಯಿಂದ ನೋಡಿದರೆ ಇವುಗಳಿಗೆ ಕಾರ್ಯಕಾರಣಭಾವವೇ ಇಲ್ಲದಿರುವಾಗ ಉಪಾದಾನಕಾರಣತ್ವವನ್ನು ಹೇಗೆ ಹೇಳಲಾದೀತು ? ಮತ್ತು ವ್ಯಾಪಕತ್ವವನ್ನು ಒಪ್ಪುವ ಇವರ ಮತದಲ್ಲಿ ಸರ್ವಪ್ರದೇಶದಲ್ಲಿಯೂ ಇರುವ ವರ್ಣಗಳಿಗೆ ಅಧಾರ ಪದ್ಮವೇ ಮೊದಲಾದ ಸ್ಥಾನವಿಶೇಷಗಳ ನಿಯಮವು ಹೇಗೆ ಸಂಭವಿಸೀತು ? ಮತ್ತು ನಿರವಯವತ್ವವನ್ನು ಒಪ್ಪುವ ಇವರ ಮತದಲ್ಲಿ ಬಿಳುಪು ಕೆಂಪು ಮೊದ ಲಾದ ರೂಪವಿಶೇಷಗಳು ನಿರವಯವವಾದ ವರ್ಣಗಳಿಗೆ ಹೇಗೆ ಸಂಭವಿಸೀತು ?

ಮತ್ತು—**ನೈಯಾಯಿಕರ** ದೃಷ್ಟಿಯಿಂದ ನೋಡಿದರೆ ಈ ಪಕ್ಷವು ಸಂಭವಿಸುವುದಿಲ್ಲ ; ಇವರು ಶಬ್ದಕ್ಕೆ ಅನಿತ್ಯತ್ವವನ್ನು ಅಂಗೀಕರಿಸುವವರಾದರೂ ಅಸಮವಾಯಿಕಾರಣತ್ವವನ್ನು ಒಪ್ಪಿರುವರಲ್ಲದೆ ಉಪಾದಾನಕಾರಣತ್ವವನ್ನು ಒಪ್ಪ ಲಿಲ್ಲ. ಶಬ್ದೋತ್ಪತ್ತಿಪ್ರದೇಶವು ಅನುಮಾನದಿಂದ ನಿಶ್ಚಿತವಾಗುವಕಾರಣ ಅಧಾರ ಪದ್ಮವೇ ಮೊದಲಾದ ಸ್ಥಾನವಿಶೇಷಗಳ ನಿಯಮವೂ ಸಂಭವಿಸುವುದಿಲ್ಲ. ಶಬ್ದಕ್ಕೆ ಗುಣತ್ವವನ್ನು ಒಪ್ಪಿರುವರಾದಪ್ರಯುಕ್ತ ದ್ರವ್ಯತ್ವವೇ ಇಲ್ಲವಾಗಿ ರೂಪವೂ ಇದಕ್ಕೆ ಸಂಭವಿಸುವುದಿಲ್ಲ. ಗುಣದಲ್ಲಿ ಗುಣವಿಲ್ಲವಷ್ಟೆ? ಹೀಗೆ ಗುಣತ್ವವನ್ನು

ಒಪ್ಪಿರುವುದರಿಂದಲೇ ಗುಣವೆನಿಸಿಕೊಂಡ ಈ ಶಬ್ದದಿಂದ ಭಾವರೂಪವಾದ ಯಾವು ದೊಂದು ಕಾರ್ಯವೂ ಯಾವಾಗಲೂ ಹುಟ್ಟುವುದೇ ಇಲ್ಲವಾದಪ್ರಯುಕ್ತ ಉಪಾ ದಾನಕಾರಣತ್ವಕ್ಕೆ ಪ್ರಸಕ್ತಿಯೇ ಇಲ್ಲ.

ಮತ್ತು—**ಶ್ರೀಮದ್ಯಾಮುನಮುನಿಗಳ** ದೃಷ್ಟಿಯಿಂದ ನೋಡಿದರೆ ವಾ ಯುವೇ ಸಮಸ್ತವರ್ಣಗಳಿಗೂ ಉಪಾದಾನಕಾರಣವಾಗಿರುವುದೆಂದು ಒಪ್ಪಿರುವುದ ರಿಂದ ಇವುಗಳಿಗೆ ಉಪಾದಾನಕಾರಣತ್ವವು ಸಂಭವಿಸುವುದಿಲ್ಲ; ಸರ್ವಪ್ರದೇಶದಲ್ಲಿ ಯೂ ಸಂಚರಿಸುವ ವಾಯುವಿನಿಂದ ಉತ್ಪನ್ನವಾಗುವ ವರ್ಣಗಳಿಗೆ ಸ್ಥಾನ ವಿಶೇಷನಿಯಮವೂ ಸಂಭವಿಸುವುದಿಲ್ಲ; ವಾಯು ರೂಪಶೂನ್ಯವಾದುದರಿಂದಲೂ ತಜ್ಜನ್ಯವಾದ ವರ್ಣವು ಸಾವಯವವಲ್ಲವಾದುದರಿಂದಲೂ ಶುಕ್ಲನೀಲಾದಿರೂಪ ಗಳು ತಾನೆ ಇವುಗಳಿಗೆ ಹೇಗೆ ಸಂಭವಿಸೀತು?

ಮತ್ತು—**ಭಾಷ್ಯಕಾರರ** ದೃಷ್ಟಿಯಿಂದ ನೋಡಿದರೆ ವರ್ಣಗಳು ಅಹಂ ಕಾರತತ್ತ್ವದ ಪರಿಣಾಮವಿಶೇಷಗಳಾಗಿರುವುವೆಂದು ಒಪ್ಪಿರುವುದರಿಂದ ಯಾಮು ನಾರ್ಯರ ಮತದಂತೆಯೇ ಇವರ ಮತದಲ್ಲಿಯೂ ವರ್ಣಗಳಿಗೆ ಉಪಾದಾನಕಾರ ಣತ್ವವಾಗಲಿ ಸ್ಥಾನವಿಶೇಷವಾಗಲಿ ರೂಪವಿಶೇಷವಾಗಲಿ ಸಂಭವಿಸುವುದಿಲ್ಲ.

ಅದೇತಕ್ಕೆ? ಇವರ ಮತದಲ್ಲಿ ಅಹಂಕಾರತತ್ತ್ವವೇ ವರ್ಣಗಳಿಗೆ ಉಪಾ ದಾನಕಾರಣವಾಗಿದ್ದರೂ ವರ್ಣವೂ ಉಪಾದಾನಕಾರಣವಾಗುವುದೆಂದು ಹೇಳ ಬಹುದಲ್ಲವೆ? ಅವ್ಯಕ್ತವೆಂಬ ತ್ರಿಗುಣದ್ರವ್ಯವೇ ಜಗತ್ತಿಗೆ ಉಪಾದಾನಕಾರಣ ವೆಂದು ಹೇಳಿದರೂ ಅಂಥ ತ್ರಿಗುಣದ್ರವ್ಯದಿಂದ ಉತ್ಪನ್ನಗಳಾದ ಮಹದಾದಿತತ್ತ್ವ ಗಳೂ ಹೇಗೆ ಉಪಾದಾನಕಾರಣಗಳಾಗಿರುವುವೋ ಅದರಂತೆ ವರ್ಣಗಳಿಗೆ ಅಹಂ ಕಾರತತ್ತ್ವವೇ ಉಪಾದಾನಕಾರಣವೆಂದು ಇವರು ಹೇಳಿದ್ದರೂ ಅಹಂಕಾರತತ್ತ್ವ ದಿಂದ ಉತ್ಪನ್ನವಾದ ಅಕಾರವು ಇತರವರ್ಣಗಳಿಗೆ ಉಪಾದಾನಕಾರಣವಾಗ ಬಹುದಲ್ಲವೆ? ಎಂದರೆ ಅವ್ಯಕ್ತದಂತೆ ಅಹಂಕಾರತತ್ತ್ವವು ಸಾಕ್ಷಾತ್ತಾಗಿ ಕಾರಣವಾಗದಿದ್ದರೂ ಪರಂಪರೆಯಾಗಿ ಕಾರಣವಾಗಿರುವುದೆಂಬುದೇ ಭಾಷ್ಯಕಾ ರರ ಅಭಿಪ್ರಾಯವಾಗಿರಬಹುದಲ್ಲವೆ?

ಇಲ್ಲ; ಹಾಗೆ ಅಭಿಪ್ರಾಯವನ್ನು ಕಲ್ಪಿಸಲಾಗುವುದಿಲ್ಲ; "ಅಹಂಕಾರ ತತ್ತ್ವವು ಶಬ್ದಕ್ಕೆ ಉಪಾದಾನಕಾರಣವಾಗಿರುವುದು" ಎಂದು ಹೇಳಿದರೆ ಸಾಕ್ಷಾ ತ್ತಾಗಿಯೇ ಉಪಾದಾನಕಾರಣವಾಗುವುದೆಂದು ಮೊತ್ತಮೊದಲು ಸ್ವಾರಸಿಕ ವಾಗಿ ತೋರುವುದು; ಇದಕ್ಕೆ ಬಾಧಕವೇನಾದರೂ ಇದ್ದಪಕ್ಷದಲ್ಲಿ ಸಾಕ್ಷಾ

ತ್ಕಾರಣತ್ವವನ್ನು ಬಿಟ್ಟು ಪರಂಪರೆಯಾಗಿ ಕಾರಣತ್ವವನ್ನು ಒಪ್ಪಬಹುದು; ಆದರೆ ಭಾಷ್ಯಕಾರರ ಸೂಕ್ತಿಯಲ್ಲಿ ಅಂಥ ಗಮಕವಾವುದೂ ಕಾಣಲಿಲ್ಲವಾದುದ ರಿಂದ ಸ್ವಾರಸಿಕವಾದ ಸಾಕ್ಷಾತ್ಕಾರಣತ್ವವನ್ನು ಬಿಡಲಾಗುವುದಿಲ್ಲ; ಅವ್ಯಕ್ತ ವಿಷಯದಲ್ಲಿಯಾದರೆ ಮಹದಾದಿತತ್ತ್ವಗಳಿಗೂ ಕಾರಣತ್ವವನ್ನು ಬೋಧಿಸುವ ವಾಕ್ಯಗಳೇ ಗಮಕಗಳಾಗಿರುವುದರಿಂದ ಸಾಕ್ಷಾತ್ಕಾರಣತ್ವವನ್ನು ಬಿಟ್ಟು ಪರಂ ಪರೆಯಾಗಿ ಕಾರಣತ್ವವನ್ನು ಒಪ್ಪುವೆವು.

ಓಹೋ! ಅದರಂತೆ ಇಲ್ಲಿ ಗಮಕವಿಲ್ಲವೆಂದು ಹೇಗೆ ಹೇಳಲಾದೀತು? "**ಅಕಾರೋ ವೈ ಸರ್ವಾ ವಾಕ್**" ಎಂದು ಅಕಾರಕ್ಕೆ ಉಪಾದಾನಕಾರಣತ್ವ ವನ್ನು ಬೋಧಿಸುವ ವಾಕ್ಯವೇ ಗಮಕವಾಗಿರುವುದಷ್ಟೆ?

ಹವುದು; ಇದೊಂದೇ ವಾಕ್ಯವಿರುವಪಕ್ಷದಲ್ಲಿ ಇದೇ ಗಮಕವೆಂದು ವ್ಯವ ಸ್ಥೆಯಾಗಿ ಹೇಳಬಹುದಾಗಿದ್ದಿತು; ಇದರಂತೆ ಇನ್ನೂ ಅನೇಕವಾಕ್ಯಗಳು ಕ್ಲೃಪ್ತ ವಿಲ್ಲದೆ ಅನಿಯತವಾಗಿ ಭಿನ್ನಭಿನ್ನವರ್ಣಗಳನ್ನು ಉಪಾದಾನಕಾರಣಗಳಾಗಿ ಬೋಧಿ ಸುತ್ತಿರುವುವಾದುದರಿಂದ ಯಾವ ವಾಕ್ಯವು ಗಮಕವೆಂದು ಹೇಳಲಾದೀತು? (ಈ ವಿಷಯವು ಸ್ವಲ್ಪದೂರದಲ್ಲಿಯೇ ವ್ಯಕ್ತವಾಗುವುದು.)

ಒಂದು ವಾಕ್ಯವನ್ನು ನೋಡಿದರೆ—ಅಕಾರವೇ ಸಮಸ್ತವರ್ಣಗಳಿಗೂ ಉಪಾದಾನಕಾರಣವೆಂದು ತೋರುವುದು; ಮತ್ತೊಂದು ವಾಕ್ಯವನ್ನು ನೋಡಿ ದರೆ, ಭೂಃ-ಭುವಃ-ಸುವಃ ಎಂಬ ವ್ಯಾಹೃತಿಗಳೇ ಅಕಾರಕ್ಕೆ ಕಾರಣಗಳಾಗಿರುವು ವೆಂದು ತೋರುವುದು; ಹೀಗೆ ಪರಸ್ಪರವಿರುದ್ಧಾರ್ಥಬೋಧಕಗಳಾದ ವಾಕ್ಯಗಳಿರು ವಾಗ ಹೇಗೆ ತಾನೆ ವ್ಯವಸ್ಥೆಪಡಿಸಲಾದೀತು?

ಒಂದೊಂದು ಸಮಯದಲ್ಲಿ ಒಂದೊಂದು ವರ್ಣವು ಉಪಾದಾನಕಾರಣವಾ ಗಿರಬಹುದೆಂದೂ ಹೇಳಲಾಗುವುದಿಲ್ಲ; ಅನುಷ್ಠಾನದಲ್ಲಿ ವಿಕಲ್ಪವು ಸಂಭವಿಸಬಹು ದಾಗಿದ್ದರೂ, ಸಿದ್ಧಪದಾರ್ಥವಿಷಯದಲ್ಲಿ "ಹೇಗೋ ಹಾಗೋ" ಎಂಬ ವಿಕ ಲ್ಪವು ಸಂಭವಿಸುವುದಿಲ್ಲವಷ್ಟೆ?

ಓಹೋ! ಸಿದ್ಧಪದಾರ್ಥದ ವಿಷಯದಲ್ಲಿ ವಿಕಲ್ಪವು ಸಂಭವಿಸುವುದಿಲ್ಲವೋ? ವೃಶ್ಚಿಕಕ್ಕೆ ಒಂದು ಸಮಯದಲ್ಲಿ ವೃಶ್ಚಿಕವೂ, ಮತ್ತೊಂದು ಸಮಯದಲ್ಲಿ ಸಗ ಣಿಯೂ ಉಪಾದಾನಕಾರಣವಾಗಿಲ್ಲವೋ?

ಹವುದು, ವೃಶ್ಚಿಕದ ಸಮಾಚಾರವು ಪ್ರತ್ಯಕ್ಷದಲ್ಲಿ ದೃಷ್ಟವಾಗಿರುವುದರಿಂದ ಅನಿಯತವಾದ ಉಪಾದಾನಕಾರಣವನ್ನು ಒಪ್ಪಬಹುದು; ವರ್ಣಗಳ ವಿಷಯದಲ್ಲಿ

ಅಂಥ ಗೋಮಯ ವೃಶ್ಚಿಕನ್ಯಾಯವು ಗೌರವದೋಷದಿಂದ ದೂಷಿತವಾಗುವುದು. ಮತ್ತು ವೃಶ್ಚಿಕದಿಂದ ಹುಟ್ಟಿದ ವೃಶ್ಚಿಕಕ್ಕೂ ಗೋಮಯದಿಂದ ಹುಟ್ಟಿದ ವೃಶ್ಚಿಕಕ್ಕೂ ವ್ಯತ್ಯಾಸವು ಲೋಕದಲ್ಲಿ ಕಾಣುವಂತೆ ವರ್ಣಗಳ ವಿಷಯದಲ್ಲಿ "ಇದು ಇಂಥ ವರ್ಣದಿಂದಲೇ ಹುಟ್ಟಿದುದು" ಎಂಬ ವ್ಯತ್ಯಾಸವಾವುದೂ ಕಾಣುವುದಿಲ್ಲವಾದಪ್ರಯುಕ್ತ ಗೋಮಯವೃಶ್ಚಿಕನ್ಯಾಯವು ಈ ವಿಷಯದಲ್ಲಿ ಪ್ರವರ್ತಿಸಲಾರದು.

ಪೂಜ್ಯರೆ ! ವರ್ಣಗಳಿಗೆ ಅನಿಯತವಾದ ಅನೇಕೋಪಾದಾನಕಾರಣಗಳನ್ನು ಒಪ್ಪುವುದಾದರಲ್ಲವೆ ಈ ದೋಷವುಂಟಾಗುವುದು ? ನಾವು ಹಾಗೆ ಹೇಳುವುದೇ ಇಲ್ಲ; ಅವ್ಯಕ್ತವೆಂಬ ತ್ರಿಗುಣದ್ರವ್ಯವೇ ಉಪಾದಾನಕಾರಣವಾಗಿರುವುದು ; ವರ್ಣವು ಅಂಥ ಉಪಾದಾನಕ್ಕೆ ಅವಚ್ಛೇದಕವಾಗಿ (ಉಪಲಕ್ಷಣವಾಗಿ) ಇರುವುದು ; ಎಂದರೆ ಉಪಲಕ್ಷಣರೀತಿಯಾಗಿ ಉಪಾದಾನಕ್ಕೆ ವ್ಯಾವರ್ತಕವಾಗಿರುವುದು; ಎಂದು ಹೇಳುವೆವು ; ಈಗ ವಿರೋಧವಿಲ್ಲವಷ್ಟೆ ?

ಹಾಗಾದರೆ—

"ದಂಡಸ್ಯ ಘಟಹೇತುತ್ವೇ ದಂಡತ್ವಸ್ಯ ನ ಹೇತುತಾ ।
ಪಿಂಡಸ್ಯ ಘಟಹೇತುತ್ವೇ ಪಿಂಡತ್ವಸ್ಯ ನ ಹೇತುತಾ ॥"

ಎಂದು ಹೇಳುವ ರೀತಿಯಲ್ಲಿ ದಂಡವು ಘಟಕ್ಕೆ ನಿಮಿತ್ತಕಾರಣವಾಗಿದ್ದರೂ, ಅದಕ್ಕೆ ಅವಚ್ಛೇದಕವಾಗಿರುವ ದಂಡತ್ವಕ್ಕೆ ಹೇಗೆ ಕಾರಣತ್ವವಿಲ್ಲವೋ ; ಮೃತ್ಪಿಂಡವು ಘಟಕ್ಕೆ ಉಪಾದಾನಕಾರಣವಾಗಿದ್ದರೂ ಅದಕ್ಕೆ ಅವಚ್ಛೇದಕವಾಗಿರುವ ಪಿಂಡತ್ವಕ್ಕೆ ಹೇಗೆ ಘಟಕಾರಣತ್ವವಿಲ್ಲವೋ ; ಅದರಂತೆ ಉಪಾದಾನಕಾರಣವಾದ ಅವ್ಯಕ್ತಕ್ಕೆ ಅವಚ್ಛೇದಕವಾಗಿರುವ ವರ್ಣಕ್ಕೂ ಉಪಾದಾನಕಾರಣತ್ವವು ಸಿದ್ಧಿಸಲಿಲ್ಲವಾಗಿ ತತ್ಪ್ರತಿಪಾದಕವಾಕ್ಯಗಳಿಗೆ ಪುನಃ ಅಸಾಂಗತ್ಯವು ಹಾಗೆಯೇ ಇರುವುದು.

ಹಾಗಾದರೆ—"ಉಪಲಕ್ಷಣರೀತಿಯಾಗಿ ಈ ವರ್ಣವು ಕಾರಣವ್ಯಾವರ್ತಕವಾಗಬೇಡ ; ಕಾರಣಕ್ಕೆ ವಿಶೇಷಣವಾಗಿಯೇ ಇರಲಿ ; ವಿಶೇಷಣವಿಶಿಷ್ಟಕ್ಕೆ ಉಪಾದಾನಕಾರಣತ್ವವನ್ನು ಹೇಳುವಾಗ ವಿಶೇಷಣಕ್ಕೂ ಅರ್ಥಾತ್ ಉಪಾದಾನಕಾರಣತ್ವವು ಸಿದ್ಧವೇ ಆಗುವುದು; ಈ ಪಕ್ಷದಲ್ಲಿ ಅನಿಯತವಾದ ಉಪಾದಾನಕಾರಣವು ಬಂದೀತೆಂಬ ದೋಷವೂ ಇಲ್ಲ ; ವಿಶಿಷ್ಟವಾದ ಅವ್ಯಕ್ತವೆಂಬುದೊಂದೇ ನಿಯತವಾದ ಕಾರಣವಾಗಿರುವುದು ;"

ಹೀಗೆ ಹೇಳಿದರೂ ಫಲವಿಲ್ಲ; ವಿಶಿಷ್ಟವೆಂದರೆ ವಿಶೇಷಣದೊಡನೆ ಕೂಡಿರುವ ವಿಶೇಷ್ಯವು ; ವರ್ಣವೆಂಬ ವಿಶೇಷಣದೊಡನೆ ಕೂಡಿದ ಅವ್ಯಕ್ತವೆಂಬ ವಿಶೇಷ್ಯವೇ ವಿಶಿಷ್ಟವೆನಿಸಿಕೊಂಡಿರುವುದರಿಂದ ಅದಕ್ಕೆ ಉಪಾದಾನಕಾರಣತ್ವವು ಸಿದ್ಧಿಸಿದರೂ, ವಿಶೇಷಣವು ವಿಶಿಷ್ಟವೆನಿಸಿಕೊಳ್ಳಲಿಲ್ಲವಾಗಿ ಇದಕ್ಕೆ ಉಪಾದಾನಕಾರಣತ್ವವು ಸಿದ್ಧಿಸುವುದಿಲ್ಲ. ಹಾಗಿಲ್ಲದಿದ್ದರೆ, ಚಿದಚಿದ್ವಿಶಿಷ್ಟನಿಗೆ ಉಪಾದಾನಕಾರಣತ್ವವನ್ನು ಹೇಳುವಾಗ ವಿಶೇಷಣಗಳಿಗೂ ಉಪಾದಾನಕಾರಣತ್ವವು ಪ್ರಸಕ್ತವಾದೀತು ;

ಮತ್ತು—

“ ಶ್ವೇತಂ ಶ್ಯಾಮಂ ಚ ಪೀತಂ ಚ ಪಿಂಗಳಂ ನೀಲಲೋಹಿತಂ |
ನೀಲಂ ಕನಕವರ್ಣಂ ಚ ವರ್ಣಾನ್ಯೇತಾನ್ಯನುಕ್ರಮಾತ್ ||”

ಎಂದು ಸಪ್ತವ್ಯಾಹೃತಿರೂಪವಾದ ಶಬ್ದಗಳಿಗೆ ರೂಪವಿಶೇಷಗಳನ್ನು ಉಪದೇಶಿಸಿದುದು ಅತ್ಯಂತ ಅಸಂಗತವಾಗಿರುವುದು. ಏತಕ್ಕೆಂದರೆ ಇಪ್ಪತ್ತುನಾಲ್ಕು ಜಡ ತತ್ತ್ವಗಳೊಳಗೆ ವಾಯುಪರ್ಯಂತವಾದ ಇಪ್ಪತ್ತೊಂದು ತತ್ತ್ವಗಳಲ್ಲಿ ರೂಪವೇ ಹುಟ್ಟುವುದಿಲ್ಲ ; ಇಪ್ಪತ್ತೆರಡನೆಯದಾದ ತೇಜೋಭೂತದಲ್ಲಿಯೇ ಮೊತ್ತಮೊದಲು ರೂಪವು ಹುಟ್ಟುವುದಕ್ಕೆ ಪ್ರಾರಂಭಿಸುವುದು ; ಹೀಗಿರುವಲ್ಲಿ ತಾಮಸಾಹಂಕಾರ ತತ್ತ್ವದ ಪರಿಣಾಮವಿಶೇಷವಾದ ಶಬ್ದಕ್ಕೆ ರೂಪಪ್ರಸಕ್ತಿಯೇ ಇಲ್ಲದಿರುವಾಗ ರೂಪವಿಶೇಷೋಪದೇಶವು ಹೇಗೆ ಸಂಗತವಾದೀತು ?

ಮತ್ತು—ಶ್ರೋತ್ರೇಂದ್ರಿಯಕ್ಕೆ ಗ್ರಾಹ್ಯವಾಗಿರುವ ಶಬ್ದದಲ್ಲಿ ವಾಸ್ತವವಾಗಿಯೂ ರೂಪವಿರುವುದಾದರೆ ಘಟಾದಿಗಳಂತೆ ಚಕ್ಷುರಿಂದ್ರಿಯಕ್ಕೆ ಇದು ಗೋಚರವಾಗಬೇಕಾಗಿ ಬರುವುದು. ಮತ್ತು ರೂಪವುಳ್ಳವಸ್ತುಗಳಲ್ಲೆಲ್ಲಾ ಸ್ಪರ್ಶಗುಣವು ಪ್ರಸಕ್ತವಾಗಿ ತ್ವಗಿಂದ್ರಿಯಗ್ರಾಹ್ಯತ್ವವೂ ಇದಕ್ಕೆ ಬರಬೇಕಾಗುವುದು.

ಅದು ಹೇಗೆ ? ದೀಪಪ್ರಭೆ, ರತ್ನಪ್ರಭೆ ಮುಂತಾದುವುಗಳಲ್ಲಿ ರೂಪವಿದ್ದರೂ ಉದ್ಭೂತಸ್ಪರ್ಶಗುಣವಿಲ್ಲವಷ್ಟೆ ? ಅದರಂತೆ ಶಬ್ದದಲ್ಲಿಯೂ ಏಕೆ ಇರಬಾರದು ? ಇಲ್ಲ; ಹಾಗೆ ಇರಲು ಅವಕಾಶವಿಲ್ಲ; ಉಕ್ತವಾದ ದೃಷ್ಟಾಂತಗಳಲ್ಲಿ ರೂಪವೂ ಉದ್ಭೂತಸ್ಪರ್ಶಾಭಾವವೂ ಪ್ರತ್ಯಕ್ಷಸಿದ್ಧವಾಗಿರುವುದರಿಂದ ಹಾಗೆ ಒಪ್ಪಬಹುದು ಅದರಂತೆ ಶಬ್ದದಲ್ಲಿ ರೂಪವು ಪ್ರತ್ಯಕ್ಷಸಿದ್ಧವಲ್ಲ; ಹೀಗಿದ್ದರೂ ಅದರಲ್ಲಿ ಸ್ಪರ್ಶವುಂಟೆಂದು ಕಲ್ಪಿಸುವುದಾದರೆ—ಮತ್ತು ಅಂಥ ಸ್ಪರ್ಶಕ್ಕೆ ಅನುದ್ಭೂತತ್ವವನ್ನು ಕಲ್ಪಿಸುವುದಾದರೆ ಗೌರವವೇ ಫಲಿಸುವುದು.

ಮತ್ತು—ಸರ್ವಪ್ರದೇಶಗಳಲ್ಲಿಯೂ ಶ್ರೋತ್ರೇಂದ್ರಿಯದಿಂದ ಗ್ರಹಿಸಲ್ಪ ಡುತ್ತಿರುವ ಶಬ್ದಗಳಿಗೆ ಆಧಾರಪದ್ಮವೇ ಮೊದಲಾದ ಕೆಲವು ಸ್ಥಾನವಿಶೇಷಗಳನ್ನು ಕ್ಲಾಪ್ತಪಡಿಸುವುದು ಹೇಗೆ ಉಪಪನ್ನವಾದೀತು?

ಆದಕಾರಣ—"ಶಾಸ್ತ್ರಗಳಲ್ಲಿ ಶಬ್ದಕ್ಕೆ ಉಪಾದಾನಕಾರಣತ್ವವನ್ನೂ ಸ್ಥಾನವಿಶೇಷವನ್ನೂ ರೂಪವಿಶೇಷವನ್ನೂ ಬೋಧಿಸುವ ವಾಕ್ಯಗಳು ಯಥಾರ್ಥಗಳಾಗಿಯೇ ಇರುವುವು" **ಎಂಬ ಪ್ರಥಮಪಕ್ಷವು ಸಂಭವಿಸುವುದಿಲ್ಲ.**

## ೧೦೫೩ ಬಾಧಿತಾರ್ಥಕತ್ವರೂಪದ್ವಿತೀಯಪಕ್ಷಾನುಪಪತ್ತಿ ಪ್ರದರ್ಶನಂ.

ಹಾಗಾದರೆ—"ಉಪಾದಾನತ್ವವೂ ಸ್ಥಾನವಿಶೇಷವೂ ರೂಪವಿಶೇಷವೂ ಕಲ್ಪಿತಗಳಾದುದರಿಂದ ಈ ವಾಕ್ಯಗಳು ಜರದ್ಗವಾದಿವಾಕ್ಯಗಳಂತೆ ಬಾಧಿತಗಳಾಗಿ ಅಯಥಾರ್ಥಗಳೆನಿಸಿಕೊಳ್ಳುವುವು" ಎಂಬ ಎರಡನೆಯ ಪಕ್ಷವು ಸಂಭವಿಸಬಹುದಲ್ಲವೆ?

ಇಲ್ಲ; ಎರಡನೆಯ ಪಕ್ಷವೂ ಸಂಭವಿಸುವುದಿಲ್ಲ; ಹೇಗೆಂದರೆ—ಕಲ್ಪಿತಗಳೆಂದು ಹೇಳಿದರೆ ಮಿಥ್ಯೆಯೆಂದು ಹೇಳಿದಂತಾಯಿತು; ಮಿಥ್ಯಾತ್ವವನ್ನು ಹೇಳುವ ನಿಮಗೆ ಸರ್ವಮಿಥ್ಯಾತ್ವವು ಅಭಿಮತವೋ? ಅಥವಾ ಬ್ರಹ್ಮವ್ಯತಿರಿಕ್ತವಾದ ಪ್ರಪಂಚಕ್ಕೆ ಮಿಥ್ಯಾತ್ವವು ಅಭಿಮತವೋ? ಅಥವಾ ವರ್ಣಗಳ ಉಪಾದಾನತ್ವ-ಸ್ಥಾನವಿಶೇಷ-ರೂಪವಿಶೇಷಗಳಿಗೆಮಾತ್ರ ಮಿಥ್ಯಾತ್ವವು ಅಭಿಮತವೋ?

ಮೊದಲನೆಯ ಅಭಿಪ್ರಾಯದಲ್ಲಿ ಮಾಧ್ಯಮಿಕರ ಸರ್ವಶೂನ್ಯವಾದವು ಪ್ರಸಕ್ತವಾಗುವುದು; ಎರಡನೆಯ ಅಭಿಪ್ರಾಯದಲ್ಲಿ ಅದ್ವೈತವಾದವು ಪ್ರಸಕ್ತವಾಗುವುದು; ಈ ಎರಡು ವಾದಗಳೂ **"ಜನನೀ ಮೇ ವಂಧ್ಯಾ"** (ನನ್ನ ತಾಯಿ ಬಂಜೆ) ಎಂಬ ವಾಕ್ಯದಂತೆ ವ್ಯಾಘಾತವೆಂಬ ಸ್ವವಚನವಿರೋಧವೇ ಮೊದಲಾದ ದೋಷಗಳಿಂದ ಹಿಂದೆಯೇ ದೂಷಿತಗಳಾಗಿರುವುವು. ಈ ಎರಡು ವಾದಗಳೂ ತಮ್ಮ ಪ್ರತಿಜ್ಞೆಗೆ ವಿರುದ್ಧವಾದ ಅರ್ಥಗಳನ್ನು ಸಾಧಿಸಿಕೊಡುವಂಥವುಗಳಾಗಿರುವುವು; ಸರ್ವಶೂನ್ಯವಾದದಲ್ಲಿ **"ಸರ್ವಂ ಮಿಥ್ಯಾ"** ಎಂದು ಪ್ರತಿಜ್ಞೆಯನ್ನು ಮಾಡಿದರೆ ಈ ಪ್ರತಿಜ್ಞಾವಾಕ್ಯವೂ ಸರ್ವಪದಾರ್ಥದ ಗುಂಪಿಗೆ ಸೇರಿದುದರಿಂದ ಸರ್ವಕ್ಕೂ ಮಿಥ್ಯಾತ್ವವನ್ನು ತೋರಿಸುವ ಪ್ರತಿಜ್ಞಾವಾಕ್ಯವೇ ಮಿಥ್ಯೆಯಾದರೆ ಸರ್ವದ ಸತ್ಯತ್ವಕ್ಕೆ ಅಪವಾದವಿಲ್ಲವಾಗುವುದು; ಈ ಪ್ರತಿಜ್ಞಾವಾಕ್ಯವೊಂದನ್ನು ಬಿಟ್ಟು ಉಳಿದುದೆಲ್ಲಾ ಮಿಥ್ಯೆಯಾಗಿರುವುದೆಂದು ಅಭಿಪ್ರಾಯವನ್ನು ಹೇಳುವು

ದಾದರೆ ಆಗ ಈ ಪ್ರತಿಜ್ಞಾವಾಕ್ಯವೊಂದು ಸತ್ಯವಾಗಿ ಉಳಿದುದರಿಂದ ಆಗಲೂ **"ಸರ್ವಂ ಮಿಥ್ಯಾ"** ಎಂದು ಪ್ರತಿಜ್ಞೆಮಾಡಕೂಡದು; ಸರ್ವಶೂನ್ಯವಾದಿಗಳಿಗೆ ಈ ಪ್ರತಿಜ್ಞಾವಾಕ್ಯವುಮಾತ್ರ ಸತ್ಯವಾಗಿರುವುದೆಂಬುದು ಅಭಿಮತವೂ ಅಲ್ಲ. ಅದ್ವೈತವಾದದಲ್ಲಿ "ಬ್ರಹ್ಮವ್ಯತಿರಿಕ್ತಂ ಮಿಥ್ಯಾ" ಎಂದು ಪ್ರತಿಜ್ಞೆಯನ್ನು ಮಾಡಿದರೆ ಈ ಪ್ರತಿಜ್ಞಾವಾಕ್ಯವೂ ಬ್ರಹ್ಮವ್ಯತಿರಿಕ್ತವಾದುದರಿಂದ ಮಿಥ್ಯೆಯಾಗಬೇಕಾಗಿ ಬರುವುದು; ಆಗ ಪ್ರಪಂಚದ ಸತ್ಯತ್ವಕ್ಕೆ ಅಪವಾದವನ್ನು ಹೇಳುವ ಪ್ರತಿಜ್ಞಾವಾಕ್ಯವೇ ಮಿಥ್ಯೆಯಾದರೆ ಪ್ರಪಂಚದ ಉತ್ಸರ್ಗಸಿದ್ಧವಾದ ಸತ್ಯತ್ವಕ್ಕೆ ಚ್ಯುತಿಯಿಲ್ಲದಂತೆ ಆಗುವುದು; ಈ ಪ್ರತಿಜ್ಞಾವಾಕ್ಯವೊಂದನ್ನು ಬಿಟ್ಟು ಉಳಿದ ಬ್ರಹ್ಮವ್ಯತಿರಿಕ್ತವೆಲ್ಲಾ ಮಿಥ್ಯೆಯಾಗಿರುವುದೆಂದು ಅಭಿಪ್ರಾಯವನ್ನು ಹೇಳುವುದಾದರೆ ಆಗ "ಏತತ್ಪ್ರತಿಜ್ಞಾವಾಕ್ಯಂ ವಿನಾ ಬ್ರಹ್ಮವ್ಯತಿರಿಕ್ತಂ ಮಿಥ್ಯಾ" ಎಂದು ಪ್ರತಿಜ್ಞೆಮಾಡಬೇಕಾಗಿ ಬರುವುದರಿಂದ "ಬ್ರಹ್ಮವ್ಯತಿರಿಕ್ತಂ ಮಿಥ್ಯಾ", ಎಂದು ಪ್ರತಿಜ್ಞೆಮಾಡಿದುದು ಅಸಂಗತವಾಗುವುದು. ಪ್ರತಿಜ್ಞಾವಾಕ್ಯದ ಸತ್ಯತ್ವವು ಅದ್ವೈತವಾದಿಗಳಿಗೆ ಅಭಿಮತವೂ ಅಲ್ಲ; ಆಗ ಸತ್ಯದ್ವಯವು ಪ್ರಸಕ್ತವಾಗಿ ಅದ್ವೈತವು ಕೆಟ್ಟುಹೋಗುವುದು.

ವರ್ಣಗಳ ಉಪಾದಾನಕಾರಣತ್ವ—ಸ್ಥಾನವಿಶೇಷ—ರೂಪವಿಶೇಷಗಳಿಗೆ ಮಾತ್ರವೇ ಮಿಥ್ಯಾತ್ವವನ್ನು ಹೇಳುವೆವೆಂಬ ಮೂರನೆಯ ಅಭಿಪ್ರಾಯದಲ್ಲಿ ಆಗಮದಿಂದ ಸಿದ್ಧವಾಗಿರುವ ಇವುಗಳಿಗೆ ಮಿಥ್ಯಾತ್ವವನ್ನು ಹೇಳುವುದಾದರೆ ಪ್ರಕೃತಿ-ಮಹಾನ್-ಅಹಂಕಾರ ಮುಂತಾದುವುಗಳಿಗೆ ಆಗಮಸಿದ್ಧವಾಗಿರುವ ಉಪಾದಾನಕಾರಣತ್ವಾದಿಗಳಿಗೂ ಮಿಥ್ಯಾತ್ವವನ್ನು ಏಕೆ ಹೇಳಬಾರದು? ಪ್ರಕೃತ್ಯಾದಿಗಳ ವಿಷಯದಲ್ಲಿ ಉಪಾದಾನತ್ವಾದಿಗಳಿಗೆ ಉಪಪತ್ತಿಯುಂಟೆಂದೂ, ವರ್ಣಗಳ ವಿಷಯದಲ್ಲಿ ಉಪಪತ್ತಿಯಿಲ್ಲದೆ ಅನುಪಪತ್ತಿಯಿರುವುದೆಂದೂ ತಾರತಮ್ಯವನ್ನು ಹೇಳಲಾಗುವುದಿಲ್ಲ; ಇಲ್ಲಿ ಅನುಪಪತ್ತಿಯಿದ್ದರೆ ಅಲ್ಲಿಯೂ ಅನುಪಪತ್ತಿಯನ್ನು ಊಹಿಸಬಹುದು; ಅಲ್ಲಿ ಉಪಪತ್ತಿಯಿದ್ದರೆ ಇಲ್ಲಿಯೂ ಉಪಪತ್ತಿಯನ್ನು ಕಲ್ಪಿಸಬಹುದು.

ಮತ್ತು—ಆಗಮಕ್ಕೆ ಅನುಸಾರವಾಗಿ ಉಪಪತ್ತಿಯೆಂಬ ತರ್ಕವನ್ನು ಕಲ್ಪಿಸಿಕೊಳ್ಳಬೇಕಲ್ಲದೆ ತರ್ಕಕ್ಕೆ ಅನುಸಾರವಾಗಿ ಆಗಮವನ್ನು ವ್ಯತ್ಯಸ್ತಪಡಿಸಲಾಗುವುದಿಲ್ಲ; ಆಗಮವಿರುದ್ಧವಾದ ತರ್ಕವು ಆದರಣೀಯವಾಗಲಾರದಷ್ಟೆ? ಆದುದರಿಂದಲೇ—

"ಆರ್ಷಂ ಧರ್ಮೋಪದೇಶಂ ಚ ವೇದಶಾಸ್ತ್ರಾವಿರೋಧಿನಾ |
ಯಸ್ತರ್ಕೇಣಾನುಸಂಧತ್ತೇ ಸ ಧರ್ಮಂ ವೇದ ನೇತರಃ ||"

ಎಂದು—ಆಗಮಾನುಸಾರಿಯಾದ ತರ್ಕವನ್ನು ಅವಲಂಬಿಸುವವನೇ ಆಗಮದಿಂದ ಧರ್ಮಸ್ವರೂಪವನ್ನು ತಿಳಿಯಬಲ್ಲನೆಂಬುದಾಗಿ **ಮನುವಿನ** ಉಪದೇಶವಿರುವುದು.

ಆಗಮವು ಪ್ರಮಾಣವಲ್ಲವೆಂದು ಹೇಳುವವರನ್ನು—"ಪ್ರತ್ಯಕ್ಷವೂ ಅನುಮಾನವೂ ಹೇಗೆ ಪ್ರಮಾಣಗಳಾದುವು?" ಎಂದು ಕೇಳಬೇಕು; "ಕಾರಣದೋಷವೂ ಬಾಧಕಜ್ಞಾನವೂ ಇಲ್ಲವಾದುದರಿಂದ ಪ್ರತ್ಯಕ್ಷಾನುಮಾನಗಳು ಪ್ರಮಾಣಗಳೆನಿಸಿಕೊಂಡಿರುವುವು" ಎಂದು ಪ್ರತ್ಯುತ್ತರವನ್ನು ಹೇಳುವರಾದರೆ ಆಗಮವಿಷಯದಲ್ಲಿಯೂ ಕಾರಣದೋಷಬಾಧಕಪ್ರತ್ಯಯಗಳಿಲ್ಲವೆಂಬುದು ತುಲ್ಯವಾದುದರಿಂದ ಆಗಮದಲ್ಲಿ ಪ್ರದ್ವೇಷವೇಕೆ? ಇದೂ ಪ್ರಮಾಣವೆಂದು ಏಕೆ ಅಂಗೀಕರಿಸಬಾರದು? ಹೀಗೆ ಆಗಮಕ್ಕೂ ಪ್ರಾಮಾಣ್ಯವಿರುವಾಗ ಅನುಪಪತ್ತಿಯೆಂಬ ಕಾರಣದಿಂದ ಇದನ್ನು ಬಾಧಿಸುವ ಬಗೆ ಹೇಗೆ? ಎಂಬ ಪ್ರತಿಬಂದಿಯನ್ನು ತೋರಿಸಬೇಕು.

ವರ್ಣಗಳಿಗೆ ವಾಸ್ತವವಾಗಿಯೂ ಉಪಾದಾನಕಾರಣತ್ವವಿರುವುದಾದರೆ ಘಟವನ್ನು ಕುರಿತು ಮೃತ್ಪಿಂಡವು ಉಪಾದಾನಕಾರಣವಾಗಿರುವುದೆಂಬ ಅಂಶವು ಪ್ರತ್ಯಕ್ಷಗೋಚರವಾದಂತೆ ಇದೂ ಪ್ರತ್ಯಕ್ಷಗೋಚರವಾಗಬೇಡವೋ? ಹಾಗೆ ಪ್ರತ್ಯಕ್ಷದಲ್ಲಿ ಉಪಲಬ್ಧಿಯಿಲ್ಲವಾದುದರಿಂದ ಇದನ್ನು ಹೇಗೆ ಅಂಗೀಕರಿಸಲಾದೀತು?

ಓಹೋ! ಪ್ರತ್ಯಕ್ಷಕ್ಕೆ ಗೋಚರವಾಗಲಿಲ್ಲವೆಂಬ ಇಷ್ಟುಮಾತ್ರದಿಂದಲೇ ಇದನ್ನು ತಿರಸ್ಕರಿಸುವುದಾದರೆ ಶಬ್ದೈಕಗಮ್ಯವಾದ ಧರ್ಮಾಧರ್ಮಗಳನ್ನೂ, ಪರಲೋಕವನ್ನೂ, ಈಶ್ವರನನ್ನೂ, ನಿತ್ಯವಿಭೂತಿಯನ್ನೂ, ಇಂಥ ಇನ್ನೂ ಸಾವಿರಾರು ಪದಾರ್ಥಗಳನ್ನೂ ಏಕೆ ತಿರಸ್ಕರಿಸಬಾರದು?

ಆದಕಾರಣ "ವರ್ಣಗಳಿಗೆ ಉಪಾದಾನತ್ವಾದಿಗಳನ್ನು ಬೋಧಿಸುವ ವಾಕ್ಯಗಳು ಅಯಥಾರ್ಥಗಳಾಗಿರುವುವು" ಎಂಬ **ಎರಡನೆಯ ಪಕ್ಷವೂ ಸಂಭವಿಸುವುದಿಲ್ಲ.**

## ೧೦೫೪ ದೃಷ್ಟಿವಿಧಿತ್ವರೂಪತೃತೀಯಪಕ್ಷೋಪಪತ್ತ್ಯಾಶಂಕಾಪೂರ್ವಕಂ ತಸ್ಯಾಪ್ಯನುಪಪನ್ನತ್ವಪ್ರದರ್ಶನಂ.

ಹಾಗಾದರೆ, ದೃಷ್ಟಿವಿಧಿಯೆಂಬ ಮೂರನೆಯ ಪಕ್ಷವು ಸಂಭವಿಸಲು ಅಡ್ಡಿಯೇನು? ವರ್ಣಗಳ ವಿಷಯವಾಗಿ ಶಾಸ್ತ್ರದೊಳಗೆ ಪರಸ್ಪರವಿರುದ್ಧಗಳಾದ ಅನೇಕ

ರೀತಿಗಳು ಕಂಠೋಕ್ತಗಳಾಗಿರುವುದರಿಂದ ಇವುಗಳೆಲ್ಲಕ್ಕೂ ಉಪಪತ್ತಿಯನ್ನು ಹೇಳಬೇಕಾದರೆ ದೃಷ್ಟಿವಿಧಿಯೆಂಬ ಈ ಮೂರನೆಯ ಪಕ್ಷವನ್ನು ಬಿಟ್ಟರೆ ಬೇರೆ ಮಾರ್ಗವಿಲ್ಲ. ಎಂದರೆ, ಉಕ್ತವಾಗಿರುವ ಈ ಪರಸ್ಪರವಿರುದ್ಧಾರ್ಥಗಳೊಳಗೆ ಒಂದಾದರೂ ವಾಸ್ತವವಾಗಿ ವರ್ಣಗಳಲ್ಲಿ ಯದ್ಯಪಿ ಇಲ್ಲ; ಆದರೂ ಫಲವಿಶೇಷಕ್ಕಾಗಿ ವರ್ಣಗಳನ್ನು ಆ ಆ ರೀತಿಯಲ್ಲಿ ಉಪಾಸನೆಮಾಡಬೇಕೆಂಬುದು ಶಾಸ್ತ್ರದ ತಾತ್ಪರ್ಯವಾಗಿರುವುದು.

"ಪರಸ್ಪರವಿರುದ್ಧಗಳಾದ ಅರ್ಥಗಳು ಎಲ್ಲಿ ಕಂಠೋಕ್ತಗಳಾಗಿರುವುವು ?" ಎಂದು ಆಶಂಕಿಸಬೇಡಿರಿ, ಕೆಲವು ಗ್ರಂಥಗಳೊಳಗೆ ಪ್ರಣವದ ಅವಯವಗಳಾದ ಅಕಾರ-ಉಕಾರ-ಮಕಾರಗಳಿಂದಲೇ ಸಮಸ್ತವರ್ಣಗಳ ಉತ್ಪತ್ತಿ ಉಕ್ತವಾಗಿರುವುದು; ಇನ್ನು ಕೆಲವು ಗ್ರಂಥಗಳಲ್ಲಿ ಹೃಲ್ಲೇಖಾಮಂತ್ರವೆಂದು ಮಂತ್ರಶಾಸ್ತ್ರದಲ್ಲಿ ವ್ಯವಹರಿಸಲ್ಪಡುವ "**ಹ್ರೀಂ**" ಎಂಬ ಮಂತ್ರದ ಅವಯವವಾದ ಹಕಾರ ಒಂದರಿಂದಲೇ ಸರ್ವವರ್ಣಗಳ ಉತ್ಪತ್ತಿ ಉಕ್ತವಾಗಿರುವುದು.

ಈ ಎರಡಕ್ಕೂ ವಿರುದ್ಧವಾಗುವಂತೆ ಇನ್ನೊಂದು ಶ್ರುತಿ ವ್ಯತ್ಯಸ್ತವಾಗಿ ಬೋಧಿಸುವುದು; ಹೇಗೆಂದರೆ,* "**ಭೂರಿತ್ಯೇವ ಋಗ್ವೇದಾದಜಾಯತ-ಭುವ ಇತಿ ಯಜುರ್ವೇದಾತ್-ಸುವರಿತಿ ಸಾಮವೇದಾತ್-ತಾನಿ ಶುಕ್ರಿಯಾಣ್ಯಭ್ಯತಪತ್-ತೇಭ್ಯೋಽಭಿತಪ್ತೇಭ್ಯಸ್ತ್ರಯೋ ವರ್ಣಾ ಅಜಾಯಂತ-ಅಕಾರ**

---

* ಈ ಶ್ರುತಿಯ ಅಭಿಪ್ರಾಯವೇನೆಂದರೆ.—ಸೃಷ್ಟಿಕಾರ್ಯದಲ್ಲಿ ಅಧಿಕೃತನಾಗಿರುವ ಚತುರ್ಮುಖಬ್ರಹ್ಮನು ಸೃಷ್ಟವಾದ ಲೋಕಕ್ಕೆ ಹಿತವನ್ನು ಬಯಸಿ ಸೃಷ್ಟಿಸಾಧನವಾದ ವೇದಗಳನ್ನು ತನ್ನ ಬುದ್ಧಿಯಲ್ಲಿ ಪುನಃಪುನಃ ಮನನಮಾಡಿ "**ಭೂಃ**" ಎಂಬ ಪ್ರಥಮವ್ಯಾಹೃತಿಮಂತ್ರವನ್ನು ಋಗ್ವೇದದ ಸಾರವಾಗಿ ಕಂಡುಹಿಡಿದನಾದುದರಿಂದ ಇದು ಋಗ್ವೇದದಿಂದ ಹುಟ್ಟಿತೆಂದು ವ್ಯವಹರಿಸಲ್ಪಡುವುದು; ಮತ್ತು "**ಭುವಃ**" ಎಂಬ ದ್ವಿತೀಯವ್ಯಾಹೃತಿಮಂತ್ರವನ್ನು ಯಜುರ್ವೇದದ ಸಾರವಾಗಿಯೂ, "**ಸುವಃ**" ಎಂಬ ತೃತೀಯವ್ಯಾಹೃತಿಮಂತ್ರವನ್ನು ಸಾಮವೇದದ ಸಾರವಾಗಿಯೂ ಕಂಡುಹಿಡಿದನು. ಲಕ್ಷೋಪಲಕ್ಷಮಂತ್ರಗಳಿದ್ದರೂ ಈ ಮೂರು ಮಂತ್ರಗಳೇ ಸಾರಗಳೆನಿಸಿಕೊಳ್ಳುವುದಕ್ಕೆ ಕಾರಣವೇನೆಂದರೆ ಇವುಗಳು "**ಶುಕ್ರಿಯಗಳು**" ಎನಿಸಿಕೊಂಡಿರುವುವು. ಶುಕ್ರನೆಂದರೆ ತೇಜಿಷ್ಠನಾದ (ಅತ್ಯಧಿಕತೇಜೋವಿಶಿಷ್ಟನಾದ) ಪರಮಾತ್ಮನು. ಅವನೇ ಇವುಗಳಿಗೆ ಸಾಕ್ಷಾತ್ಪ್ರತಿಪಾದ್ಯದೇವತೆಯಾದುದರಿಂದ ಇವುಗಳು ಸಾರಗಳೆನಿಸಿಕೊಂಡವು.

ಹೀಗೆ ಸಾರಭೂತಗಳೆಂದು ನಿಷ್ಕರ್ಷಿಸಲ್ಪಟ್ಟ ಈ ಶುಕ್ರಿಯಗಳನ್ನು ಬ್ರಹ್ಮದೇವನು ಪುನಃ ತನ್ನ ಆಲೋಚನಾರೂಪವಾದ ತಪಸ್ಸಿಗೆ ಗುರಿಪಡಿಸಿ ಮಥನಮಾಡಿದನು. ಹೀಗೆ ಮಥಿಸಲ್ಪಟ್ಟ ಈ ಮೂರು ವ್ಯಾಹೃತಿಮಂತ್ರಗಳಿಂದಲೂ ಕ್ರಮವಾಗಿ ಅಕಾರ- ಉಕಾರ- ಮಕಾರಗಳೆಂಬ ಮೂರುವರ್ಣಗಳು ಹುಟ್ಟಿದುವು. ಈ ಮೂರನ್ನೂ ಒಟ್ಟಿಗೆಕೂಡಿಸಿ ಉಚ್ಚರಿಸಿದುದರಿಂದ ಅವು "**ಓಂ**" ಎಂಬ ಪ್ರಣವಾಕಾರವನ್ನು ಪಡೆದುವು.

**ಉಕಾರೋ ಮಕಾರ ಇತಿ-ತಾನೇಕಥಾ ಸಮಭರತ್ತದೇತದೋಮಿತಿ "**
ಎಂದು ಶ್ರುತಿವಾಕ್ಯವಿರುವುದು. ಈ ಶ್ರುತಿಯನ್ನೇ—

**" ಅಕಾರಂ ಚಾಪ್ಯುಕಾರಂ ಚ ಮಕಾರಂ ಚ ಪ್ರಜಾಪತಿಃ ।**
**ವೇದತ್ರಯಾನ್ನಿರದುಹದ್ಭೂರ್ಭುವಸ್ಸ್ವರಿತೀತಿ ಚ ॥ "**

ಎಂಬ ಮನುಸ್ಮೃತಿವಚನವೂ ಅನುಸರಿಸುವುದು.

ಈ ಶ್ರುತಿಸ್ಮೃತಿಗಳು ಸರ್ವವರ್ಣಗಳಿಗೂ ಅಕಾರೋಕಾರಮಕಾರಗಳೇ ಕಾರಣಗಳೆಂದು ಹೇಳುವುದನ್ನು ಬಿಟ್ಟು ಈ ಮೂರುವರ್ಣಗಳೇ ವ್ಯಾಹೃತಿತ್ರಯ ದಿಂದ ಹುಟ್ಟುವುವೆಂದು ತೋರಿಸುವುವು.

ಮತ್ತು—ಮಂತ್ರಶಾಸ್ತ್ರದಲ್ಲಿ ಆ ಆ ಮಂತ್ರಗಳ ಪ್ರಯೋಗಕ್ರಮವನ್ನು ಬೋಧಿಸುವ ಕಲ್ಪಗ್ರಂಥಗಳು ಸರ್ವಮಂತ್ರಗಳಿಗೂ ಸಾಧಾರಣವಾಗಿ ಪ್ರಣವವೇ ಬೀಜಾಕ್ಷರವಾಗಿರುವುದೆಂದು ಹೇಳಿ, ಅದರ ಮೇಲೆ ಪ್ರತಿಮಂತ್ರಕ್ಕೂ ಪ್ರತ್ಯೇಕ ವಾಗಿ ಒಂದೊಂದು ಬೀಜಾಕ್ಷರವಿರುವುದೆಂದು ಉಪದೇಶಿಸುವುವು ; ಬೀಜಾಕ್ಷರ ವಲ್ಲವೆ ಮಂತ್ರಕ್ಕೆ ಉಪಾದಾನಕಾರಣವಾಗುವುದು. ಹೀಗೆ ಅನಿಯತವಾದ ಬೀಜಾಕ್ಷರಗಳನ್ನು ಉಪದೇಶಿಸಿದರೆ ಯಾವ ಮಂತ್ರಕ್ಕೆ ಯಾವುದು ಉಪಾದಾನ ಕಾರಣವೆಂದು ನಿಷ್ಕರ್ಷಿಸಲಾದೀತು ?

ಮತ್ತು—ಸಕಲಮಂತ್ರಗಳಿಗೂ ಗಾಯತ್ರಿ-ಉಷ್ಣಿಕ್-ಅನುಷ್ಟುಪ್-ತ್ರಿಷ್ಟುಪ್-ಜಗತಿ ಮೊದಲಾದ ಛಂದಸ್ಸುಗಳೊಳಗೆ ಯಾವುದಾದರೊಂದು ಛಂದಸ್ಸು ಇದ್ದೇ ಇರುವುದು ; ಇವುಗಳಿಗೆ ಛಂದಸ್ಸೆಂಬ ಹೆಸರು ಬರುವುದಕ್ಕೆ ಕಾರಣವು ಒಂದು ಸಂದರ್ಭದಲ್ಲಿ ತೋರಿಸಲ್ಪಟ್ಟಿರುವುದು ; ಹೇಗೆಂದರೆ—**" ಮಂತ್ರಂ ಸಂ ಛಾದ್ಯ ರಕ್ಷತಿ "** ಎಂದು ಪ್ರಳಯಕಾಲದಲ್ಲಿಯೂ ಇವುಗಳು ಮಂತ್ರಗಳನ್ನು ಆಚ್ಛಾದಿಸಿ ರಕ್ಷಿಸುವುವಾದುದರಿಂದ ಇವುಗಳು ಛಂದಸ್ಸುಗಳೆನಿಸಿಕೊಳ್ಳುವುವು. ಹೀಗೆ ಛಂದಸ್ಸಿನ ವಿಷಯದಲ್ಲಿರುವ ವರ್ಣನೆಯನ್ನು ನೋಡಿದರೆ ಪ್ರಳಯಕಾಲ ದಲ್ಲಿಯೂ ಮಂತ್ರಗಳು ಲಯಿಸುವುದಿಲ್ಲವೆಂದು ತೋರುವುದು. ಹೀಗೆ ವರ್ಣ ರೂಪವಾದ ಮಂತ್ರಗಳಿಗೆ ನಿತ್ಯತ್ವವು ಅವಗತವಾಗುವುದಾದರೆ ಕಾರಣವನ್ನೇ ಎದುರುನೋಡದ ಇವುಗಳಿಗೆ ಉಪಾದಾನಕಾರಣವನ್ನು ಉಪದೇಶಿಸುವ ಪ್ರಸಕ್ತಿ ಯೇನು ? ಆದರೂ ಉಪದೇಶಿಸುವುದಾದರೆ ನಿತ್ಯತ್ವದೊಡನೆ ವಿರೋಧವು ಬಾರದೋ ?

ಮತ್ತು—ಆ ಆ ವರ್ಣಗಳಿಗೆ ಬಿಳುಪು-ಕೆಂಪು-ಹಳದಿ-ಕಪ್ಪು ಇವೇ ಮೊದ ಲಾದ ರೂಪವಿಶೇಷಗಳು ಒಂದಕ್ಕೊಂದು ವಿರುದ್ಧಗಳಾಗುವಂತೆ ಉಪದೇಶಿಸಲ್ಪ

ಡುವುವು. ಮತ್ತು ಒಂದೇ ವರ್ಣಕ್ಕೆ ಕಾರ್ಯಭೇದದಿಂದಲೂ ಮಂತ್ರಭೇದ ದಿಂದಲೂ ರೂಪಭೇದವು ಉಪದೇಶಿಸಲ್ಪಟ್ಟಿರುವುದು. ವಾಸ್ತವವಾಗಿಯೂ ವರ್ಣ ಗಳಿಗೆ ರೂಪವಿರುವುದಾದರೆ ಯಾವುದಾದರೊಂದು ರೂಪವು ವ್ಯವಸ್ಥಿತವಾಗಿರ ಬೇಕು: ಹಾಗಿಲ್ಲದೆ ಒಂದೇ ವರ್ಣವು ಒಂದೊಂದು ವೇಳೆ ಒಂದೊಂದು ರೂಪ ವನ್ನು ಹೇಗೆ ಪಡೆಯಲಾದೀತು? ಹೀಗೆಯೇ ವರ್ಣಗಳಿಗೆ ಅಲ್ಲಲ್ಲಿ ಉಪದೇಶಿಸಲ್ಪ ಡುವ ಅನಿಯತಸ್ಥಾನವಿಷಯದಲ್ಲಿಯೂ ವಿರೋಧವನ್ನು ತಿಳಿಯಬಹುದು.

ಆದಕಾರಣ ಹೀಗೆ ಪರಸ್ಪರವಿರೋಧವಿರುವುದರಿಂದ ಈಗ ಹೇಳಬೇಕಾದು ದೇನೆಂದರೆ—ವರ್ಣಗಳಿಗೆ ವಾಸ್ತವವಾಗಿ ಕಾರ್ಯಕಾರಣಭಾವವಾಗಲಿ ಸ್ಥಾನ ವಿಶೇಷವಾಗಲಿ ರೂಪವಿಶೇಷವಾಗಲಿ ಇಲ್ಲ; ಆದರೂ ಆ ಆ ಅದೃಷ್ಟವಿಶೇಷಗಳ ಮೂಲಕವಾಗಿ ಆ ಆ ಫಲವಿಶೇಷಗಳನ್ನು ಸಂಪಾದಿಸಬೇಕೆಂದು ಅಪೇಕ್ಷಿಸುವವರು ವರ್ಣಗಳನ್ನು ಆ ಆ ರೀತಿಯಲ್ಲಿ ಉಪಾಸನೆಮಾಡಬೇಕೆಂಬುದರಲ್ಲಿಯೇ ಈ ಶಾಸ್ತ್ರ ಗಳಿಗೆ ತಾತ್ಪರ್ಯವೆಂದು ಹೇಳಿ ದೃಷ್ಟಿವಿಧಿಯೆಂಬ ಮೂರನೆಯ ಪಕ್ಷವನ್ನೇ ಅಂಗೀ ಕರಿಸಬೇಕು. ಹಾಗೆ ಅಂಗೀಕರಿಸದಿದ್ದರೆ ಪರಸ್ಪರವಿರುದ್ಧಾರ್ಥಪ್ರತಿಪಾದಕಗಳಾದ ಈ ವಾಕ್ಯಗಳಿಗೆ ಅತ್ಯಂತವ್ಯಾಕುಲತೆಯುಂಟಾಗಿ ಅಪ್ರಾಮಾಣ್ಯವೇ ಪ್ರಸಕ್ತ ವಾದೀತು. ಆದುದರಿಂದ ದೃಷ್ಟಿವಿಧಿಪಕ್ಷವೇ ಯುಕ್ತವಾಗಿರುವುದು.

ಇಲ್ಲ; ಈ ಪಕ್ಷವೂ ಯುಕ್ತವಾದುದಲ್ಲ; ಏತಕ್ಕೆಂದರೆ—"**ಓಮಿತ್ಯೇ ತದಕ್ಷರಮುದ್ಗೀಥಮುಪಾಸೀತ**" ಎಂಬುದಾಗಿ ("ಸಾಮದ ಒಂದು ಭಾಗ ವಾದ ಉದ್ಗೀಥಕ್ಕೆ ಒಂದು ಅವಯವವೆನಿಸಿಕೊಂಡಿರುವ ಪ್ರಣವವನ್ನು ಸಂಪೂ ರ್ಣೋದ್ಗೀಥವೆಂದು ಉಪಾಸನೆಮಾಡಬೇಕು") ಎಂದು ದೃಷ್ಟಿವಿಧಿ ದೊರೆಯು ವಂತೆ "**ಪ್ರಣವಂ ಸರ್ವಾಕ್ಷರೋಪಾದಾನಮುಪಾಸೀತ**" (ಓಂಕಾರವನ್ನು ಸರ್ವವರ್ಣಗಳಿಗೂ ಉಪಾದಾನಕಾರಣವಾಗಿ ಉಪಾಸನೆಮಾಡಬೇಕು) ಎಂಬು ದಾಗಿ ಒಂದಾನೊಂದು ದೃಷ್ಟಿವಿಧಿಶಾಸ್ತ್ರವು ಇದುವರೆಗೂ ದೊರೆತಿಲ್ಲ. ತತ್ತ್ವ ಸ್ಥಿತಿಯನ್ನು ನಿರೂಪಿಸುವ ರೀತಿಯಲ್ಲಿಯೇ ಈ ಶಾಸ್ತ್ರಗಳು ಉಪಾದಾನಕಾರಣತ್ವ ಸ್ಥಾನವಿಶೇಷ-ರೂಪವಿಶೇಷಗಳನ್ನು ವರ್ಣಗಳಿಗೆ ಉಪದೇಶಿಸುತ್ತಿರುವುವು. ಹೀಗಿ ರುವಾಗಲೂ ದೃಷ್ಟಿವಿಧಿತ್ವವನ್ನು ಅಂಗೀಕರಿಸುವುದಾದರೆ ಪರಮಾತ್ಮನಿಗೆ ವಸ್ತು ಸ್ಥಿತಿಯಾಗಿ ಜಗತ್ಕಾರಣತ್ವವನ್ನು ಬೋಧಿಸುವ ಶಾಸ್ತ್ರಗಳಲ್ಲಿಯೂ ಇದೇ ನ್ಯಾಯವನ್ನು ಅವಲಂಬಿಸಬೇಕಾಗಿ ಬಂದೀತು; ಎಂದರೆ, ವಾಸ್ತವವಾಗಿಯೂ ಪರಮಾತ್ಮನಿಗೆ ಜಗದುಪಾದಾನಕಾರಣತ್ವವಿಲ್ಲ; ಆದರೂ ಫಲವಿಶೇಷಸಿದ್ಧಿಗಾಗಿ

ಜಗದುಪಾದಾನಕಾರಣವೆಂದು ಪರಮಾತ್ಮನನ್ನು ಉಪಾಸಿಸಬೇಕು; ಎಂದು ಪ್ರಸಕ್ತವಾದೀತು.

ಮತ್ತು—ತತ್ತ್ವಸ್ಥಿತಿಯು ನಿರ್ಣಯಕ್ಕೆ ಉಪಯೋಗಿಗಳಾದ ಯುಕ್ತಿಗಳನ್ನು ತೋರಿಸುತ್ತಾ ಬಂದ ಸಂದರ್ಭದಲ್ಲಿ **ಶ್ರೀ ಭಾಷ್ಯಕಾರರು** ಅಕಾರದಲ್ಲಿ ಸಮಸ್ತಶಬ್ದಮೂಲತ್ವವೆಂಬ ಹೇತುವನ್ನು ತೋರಿಸಿ ಪರಮಾತ್ಮವಾಚಕತ್ವವನ್ನು ತೋರಿಸಿರುವರು; ದೃಷ್ಟಿವಿಧಿತ್ವವನ್ನು ಅವರೂ ತೋರಿಸಲಿಲ್ಲ. ವಸ್ತುಸ್ಥಿತಿಯಲ್ಲಿ ಅಕಾರಕ್ಕೆ ಸರ್ವಶಬ್ದೋಪಾದಾನಕಾರಣತ್ವವೇ ಇಲ್ಲವಾದರೆ ಪರಮಾತ್ಮವಾಚಕತ್ವವೂ ಇದಕ್ಕೆ ಸಿದ್ಧವಾಗಲಿಲ್ಲವಾಗಿ ಅಕಾರವಾಚ್ಯನಲ್ಲದ ಪರಮಾತ್ಮನಿಗೆ ಮಹೇಶ್ವರತ್ವವೂ ಸಿದ್ಧಿಸಲಾರದೆ ಹೋಗುವುದು.

ಅದೇತಕ್ಕೆ? ಅಕಾರವು ಸಾಕ್ಷಾತ್ತಾಗಿ ಉಪಾದಾನಕಾರಣವಾಗದಿದ್ದರೂ ಅಕಾರವಿಶಿಷ್ಟವಾದ ಆಕಾಶವು ಉಪಾದಾನಕಾರಣವಾಗಿಯೇ ಇರುವಕಾರಣ ಕುಶಕಾಶಾವಲಂಬನನ್ಯಾಯದಿಂದ ಅನುಕಲ್ಪವನ್ನು ಸ್ವೀಕರಿಸಿ ಈ ಶಾಸ್ತ್ರಗಳಿಗೆ ಉಪಪತ್ತಿಯನ್ನು ಹೇಳಬಹುದಲ್ಲವೆ? ಎಂದರೆ ಅಕಾರಕ್ಕೆ ಮುಖ್ಯವಾದ ಉಪಾದಾನಕಾರಣತ್ವವು ಸಿದ್ಧಿಸದಿದ್ದರೂ ಅಕಾರವಿಶಿಷ್ಟವಾದ ಆಕಾಶಕ್ಕೆ ಉಪಾದಾನಕಾರಣತ್ವವಿರುವಾಗ ಅಕಾರಕ್ಕೆ ಅನುಕಲ್ಪವಾದ ಉಪಾದಾನಕಾರಣತ್ವವು ಸಿದ್ಧಿಸಬಹುದಲ್ಲವೆ?

ಓಹೋ! ಹಾಗೆ ಹೇಳುವುದಾದರೆ ವಿಶೇಷ್ಯವಾದ ಆಕಾಶದಲ್ಲಿರುವ ಉಪಾದಾನಕಾರಣತ್ವವನ್ನು ವಿಶೇಷಣವಾದ ಅಕಾರದಲ್ಲಿ ಉಪಚರಿಸಿ ಹೇಳಿದಂತೆ ಪರ್ಯವಸಾನವಾಗುವುದು. ಆಗ ಔಪಚಾರಿಕತ್ವವೆಂಬ ನಾಲ್ಕನೆಯ ಪಕ್ಷವನ್ನು ಸ್ವೀಕರಿಸಿದಂತೆ ಆಗುವುದರಿಂದ **ದೃಷ್ಟಿವಿಧಿಯೆಂಬ ಮೂರನೆಯ ಪಕ್ಷವು ಫಲಾಯಿತವಾಯಿತು.**

## ೧೦೫೫ ಔಪಚಾರಿಕತ್ವರೂಪಚತುರ್ಥಪಕ್ಷಾನುಪಪತ್ತಿಪ್ರದರ್ಶನಂ.

ಹಾಗಾದರೆ, ಔಪಚಾರಿಕತ್ವವೆಂಬ ನಾಲ್ಕನೆಯ ಪಕ್ಷವನ್ನೇ ಇಲ್ಲಿ ಸ್ವೀಕರಿಸಿದರೆ ಹಾನಿಯೇನು? ವಾಚಕಶಬ್ದರಾಶಿಗೆ ಪ್ರಕೃತಿಭೂತವಾದ ಅಕಾರಕ್ಕೆ ವಾಚ್ಯರಾಶಿಪ್ರಕೃತಿಭೂತಪರಮಾತ್ಮವಾಚಕತ್ವವನ್ನು ಹೇಳಿದುದು ಅಸಂಗತವಾಗುವಿಕೆಯೇ ಹಾನಿಯಾಗಿರುವುದು. ಆಗ ಭಾಷ್ಯಕಾರರ ವಚನಸಂದರ್ಭಕ್ಕೆಲ್ಲಾ ಮುಖ್ಯಾರ್ಥವು ಸಂಭವಿಸಲಾರದಾಗಿ ಔಪಚಾರಿಕತ್ವವನ್ನು ಅಂಗೀಕರಿಸಬೇಕಾಗು

ವುದು. ಮತ್ತು ವೇದಾರ್ಥಸಂಗ್ರಹೋಕ್ತವಾದ ಸೂಕ್ತಿಯೆಲ್ಲಾ ಆಕಾರದ ಪ್ರಶಂಸಾಪರವೆಂದು ಹೇಳಬೇಕಾಗಿಬರುವುದು. "ಅಜಾಮೇಕಾಂ ಲೋಹಿತ ಶುಕ್ಲಕೃಷ್ಣಾಂ" ಎಂದು ಪ್ರಕೃತಿದ್ರವ್ಯವು ರೂಪರಹಿತವಾಗಿದ್ದರೂ ಕೆಂಪು-ಬಿಳುಪು-ಕಪ್ಪು ಎಂಬುದಾಗಿ ಔಪಚಾರಿಕಭಾವದಿಂದ ಇದನ್ನು ನಿರ್ದೇಶಿಸುವಂತೆ ಇಲ್ಲಿಯೂ ಔಪಚಾರಿಕತ್ವವನ್ನು ವಹಿಸಬೇಕಾಗುವುದು. ಆದಕಾರಣ ನಾಲ್ಕನೆಯ ಪಕ್ಷವೂ ಸಂಗತವಲ್ಲ.

## ೧೦೫೬. ಚತುರ್ಣಾಮಪಿ ಯಥಾಸಂಭವಮುಪಪನ್ನತ್ವರೂಪ ಪಂಚಮಪಕ್ಷಪ್ರದರ್ಶನೇನ ಪೂರ್ವಪಕ್ಷಪರಿಹಾರಃ.

ಹೀಗೆ ಉಕ್ತರೀತಿಯಲ್ಲಿ ನಾಲ್ಕುಪಕ್ಷಗಳೂ ಅಸಂಗತಗಳಾದರೆ ಈ ಶಾಸ್ತ್ರ ವಚನಗಳ ಗತಿಯೇನು? ಇದಕ್ಕೋಸ್ಕರವೇ ಈಗ ಐದನೆಯ ಪಕ್ಷವನ್ನು ತೋರಿಸುವೆವು. ಪರಸ್ಪರವಿರುದ್ಧಾರ್ಥಪ್ರತಿಪಾದಕಗಳಾದ ಈ ಶಾಸ್ತ್ರಗಳೊಳಗೆ ಕೆಲವಕ್ಕೆ ಯಥಾರ್ಥತ್ವವನ್ನೂ, ಕೆಲವಕ್ಕೆ ಅಯಥಾರ್ಥತ್ವವನ್ನೂ, ಕೆಲವಕ್ಕೆ ದೃಷ್ಟಿವಿಧಿರೂಪತ್ವವನ್ನೂ, ಕೆಲವಕ್ಕೆ ಔಪಚಾರಿಕತ್ವವನ್ನೂ ಸ್ವೀಕರಿಸುವೆವು. ಇದೇ ಐದನೆಯ ಪಕ್ಷವಾಗಿರುವುದು. ಇದರಲ್ಲಿ ಯಾವ ಅಂಶಕ್ಕೆ ಬಾಧೆಯಿಲ್ಲವೋ ಆ ಅಂಶದಲ್ಲಿ ಯಥಾರ್ಥತ್ವವನ್ನು ಸ್ವೀಕರಿಸುವೆವು; ಬಾಧಿತವಾಗಿಯೂ ನಿರ್ಮೂಲವಾಗಿಯೂ ಇರುವ ಅಂಶದಲ್ಲಿ ಅಯಥಾರ್ಥತ್ವವನ್ನು ಸ್ವೀಕರಿಸುವೆವು; ಧ್ಯಾನವಿಧಿಗಳೆಲ್ಲದರಲ್ಲಿಯೂ ಪ್ರಾಯಶಃ ದೃಷ್ಟಿವಿಧಿರೂಪತ್ವವನ್ನು ಸ್ವೀಕರಿಸುವೆವು; ಯಾವ ಅಂಶದಲ್ಲಿ ಯಥಾಶ್ರುತಾರ್ಥಕ್ಕೆ ಬಾಧೆಯೂ ವಕ್ತೃವಿಗೆ ಆಪ್ತತೆಯೂ ಅವಗತವಾಗಿರುವುವೋ; ಅಂಥ ಅಂಶದಲ್ಲಿ ಔಪಚಾರಿಕತ್ವವನ್ನು ಸ್ವೀಕರಿಸುವೆವು.

## ೧೦೫೭. ಶಬ್ದಸ್ಯ ದ್ರವ್ಯತ್ವಾದ್ರವ್ಯತ್ವಾದೀನಾಂ ಮತಭೇದೇನ ವ್ಯವಸ್ಥಾಪನಂ.

ಪೂಜ್ಯರೆ! ಹೀಗೆ ಐದನೆಯ ಪಕ್ಷವನ್ನು ನೀವು ತೋರಿಸಿದರೂ ಯಾವುದೊಂದು ಸಿದ್ಧಾಂತವೂ ವ್ಯವಸ್ಥಿತವಾದಂತೆ ಕಾಣುವುದಿಲ್ಲ. ಶಬ್ದವು ದ್ರವ್ಯವೋ? ಅಥವಾ ಅದ್ರವ್ಯವೋ? ದ್ರವ್ಯತ್ವವನ್ನು ಅಂಗೀಕರಿಸುವ ಪಕ್ಷದಲ್ಲಿ ಯಾವ ವರ್ಣವು ಯಾವ ವರ್ಣಕ್ಕೆ ಉಪಾದಾನಕಾರಣವು? ರೂಪಸಂಬಂಧವೂ, ಸ್ಥಾನಸಂಬಂಧವೂ, ಪರಿಣಾಮವೂ ಇದಕ್ಕೆ ಎಂಥದಾಗಿರುವುದು? ಅದ್ರವ್ಯತ್ವವನ್ನು ಅಂಗೀಕರಿಸುವ ಪಕ್ಷದಲ್ಲಿ ಉಪಾದಾನತ್ವವ್ಯವಹಾರವೂ, ರೂಪಸಂಬಂಧವೂ, ಸ್ಥಾನಸಂಬಂಧವೂ, ಪರಿಣಾಮವೂ ಹೇಗೆ ಕೂಡುವುವು?

ಹೀಗೆ ಸಂದಿಗ್ಧವಾಗಿ ನಿಂತಿರುವ ಈ ವಿಷಯವನ್ನೇ ಈಗ ವ್ಯವಸ್ಥೆಪಡಿಸು ವೆವು , ಹೇಗೆಂದರೆ —ಸಿದ್ಧಾಂತಿಗಳಲ್ಲಿಯೇ ಕೆಲವರ ಮತದಲ್ಲಿ ದ್ರವ್ಯತ್ವವನ್ನೂ, ಇನ್ನು ಕೆಲವರ ಮತದಲ್ಲಿ ಅದ್ರವ್ಯತ್ವವನ್ನೂ ಶಬ್ದಕ್ಕೆ ಒಪ್ಪುವೆವು.

**೧೨೫೮ ದ್ರವ್ಯತ್ವಪಕ್ಷೇ ವಾಯವೀಯತ್ವಂ, ಅವಾಯವೀಯತ್ವಂ ಚೇತಿ ಮತದ್ವಯಂ.**

ದ್ರವ್ಯತ್ವವನ್ನು ಒಪ್ಪುವವರ ಮತದಲ್ಲಿಯೂ ಶಬ್ದವು ವಾಯವೀಯ ದ್ರವ್ಯವೆಂದೂ ಅವಾಯವೀಯದ್ರವ್ಯವೆಂದೂ ಎರಡು ಪಕ್ಷಗಳುಂಟು.

**೧೨೫೯ ವಾಯವೀಯತ್ವೇಽಪಿ ಭೇರ್ಯಾದ್ಯವಿನಾಭೂತತ್ವ ಭೇರ್ಯಾದಿಜನ್ಯತ್ವರೂಪಪಕ್ಷದ್ವಯಂ.**

ವಾಯವೀಯತ್ವಪಕ್ಷದಲ್ಲಿಯೂ ದೀಪಪ್ರಭೆ ದೀಪಕ್ಕೆ ಅವಿನಾಭೂತವಾಗಿ ಯೂ ದೂರದವರೆಗೂ ಪ್ರಸರಿಸುವಂಥದಾಗಿಯೂ ಹೇಗೆ ಇರುವುದೋ ? ಹಾಗೆ ಶಬ್ದವೂ ಭೇರಿ-ದುಂದುಭಿ ಮೊದಲಾದುವುಗಳಿಗೆ ಅವಿನಾಭೂತವಾಗಿಯೂ, ತಾಡನ ವುಂಟಾದ ಕಾಲದಲ್ಲಿ ಭೇರ್ಯಾದಿಗಳ ಸೂಕ್ಷ್ಮಾವಯವಗಳೊಡನೆ ದೂರದವರೆಗೂ ಪ್ರಸರಿಸುವಂಥದಾಗಿಯೂ ಇರುವುದು. ಭೇರ್ಯಾದಿಗಳಲ್ಲಿ ಸರ್ವದಾ ಇದು ಇದ್ದರೂ ಇದಕ್ಕೆ ಪ್ರಸರಣವಿಲ್ಲದ ಕಾಲದಲ್ಲಿ ಪ್ರಕಾಶವಿಲ್ಲ; ಎಂದರೆ ಶ್ರೋತ್ರೇಂದ್ರಿ ಯದಿಂದ ಇದಕ್ಕೆ ಗ್ರಹಣವಾಗುವುದಿಲ್ಲ; ಪ್ರಸರಣಕ್ಕೆ ಪ್ರಹಾರವೇ ಕಾರಣ ವಾದುದರಿಂದ ಪ್ರಹಾರವೇ ಈ ಶಬ್ದವನ್ನು ಪ್ರಕಾಶಪಡಿಸುವುದು ; (ಶ್ರೋತ್ರೇಂದ್ರಿ ಯಕ್ಕೆ ಗೋಚರಪಡಿಸುವುದು ;) ಎಂಬುದೊಂದು ಪಕ್ಷವೂ,

ಬೀಸಣಿಗೆಯನ್ನು ವೇಗದಿಂದ ಅಲ್ಲಾಡಿಸುವಾಗ ತತ್ಕ್ಷಣದಲ್ಲಿ ಉತ್ಪನ್ನ ವಾದ ವಾಯು ಬೀಸಣಿಗೆಯ ಸಂಬಂಧವನ್ನು ಬಿಟ್ಟುಬಿಟ್ಟೇ ಹೇಗಾದರೆ ಪ್ರಸರಿಸು ವುದೋ ಅದರಂತೆ ತಾಡನದಿಂದ ಭೇರ್ಯಾದಿಗಳಲ್ಲಿ ತತ್ಕ್ಷಣದಲ್ಲಿ ಉತ್ಪನ್ನವಾದ ಶಬ್ದವೇ ಭೇರ್ಯಾದಿಗಳ ಸಂಬಂಧವನ್ನು ಬಿಟ್ಟುಬಿಟ್ಟು ದೂರದವರೆಗೆ ಪ್ರಸರಿಸು ವುದು ; ಎಂಬುದೊಂದು ಪಕ್ಷವೂ, ಹೀಗೆ (ವಾಯುವೀಯತ್ವಪಕ್ಷದಲ್ಲಿ) ಎರಡು ಪಕ್ಷಗಳಿರುವುವು ;

ಈ ಎರಡು ಪಕ್ಷಗಳಲ್ಲಿಯೂ ಈ ಶಬ್ದವು ಸ್ಪರ್ಶಗುಣರಹಿತವಾಗಿರುವು ದೆಂದೇ ಅಭಿಮತವಾಗಿರುವುದು ; " **ಸ್ಪರ್ಶರಹಿತೋಽಪಿ** " ಎಂದು ಯಾಮು ನಾರ್ಯರ ಸೂಕ್ತಿಯಿರುವುದಷ್ಟೆ ? ಯಾಮುನಾರ್ಯರು ಹಾಗೆ ಹೇಳುವುದಕ್ಕೂ ಕಾರ ಣವೇನೆಂದರೆ—ವಾಯು ಸ್ಪರ್ಶವಿಶಿಷ್ಟವಾದುದರಿಂದ ವಾಯುವೀಯವಾದ ಶಬ್ದ

ದಲ್ಲಿಯೂ ಯದ್ಯಪಿ ಸ್ಪರ್ಶಗುಣವಿರಬೇಕು; ಆದರೂ ಶಬ್ದದಲ್ಲಿ ಸ್ಪರ್ಶಗುಣಕ್ಕೆ ಯಾವಾಗಲೂ ಉಪಲಬ್ಧಿಯೇ ಇಲ್ಲವಾದುದರಿಂದ ಇದರಲ್ಲಿ ಸ್ಪರ್ಶಗುಣವಿಲ್ಲ ವೆಂದೇ ಒಪ್ಪಬೇಕು; ಎಂಬುದು ಯಾಮುನಾರ್ಯರ ಸೂಕ್ತಿಗೆ ಮೂಲವಾಗಿ ರುವುದು.

## ೧೦೩೦ ಪಕ್ಷದ್ವಯಸ್ಯಾಪಿ ಸಮೂಲತ್ವೋಪಪಾದನಂ.

ಆದರೆ ಈ ಎರಡು ಪಕ್ಷಗಳೊಳಗೆ—"ಶಬ್ದವು ಭೇರ್ಯಾದಿಗಳಿಗೆ ಅವಿನಾ ಭೂತವಾಗಿರುವುದು" ಎಂಬ ಪ್ರಥಮಪಕ್ಷಕ್ಕೆ ಮೂಲವೇನು? **"ಭೇರೀ ಶಬ್ದಃ-ದುಂದುಭಿಶಬ್ದಃ-ವೀಣಾಧ್ವನಿಃ-ಮೃದಂಗಧ್ವನಿಃ"** ಎಂಬ ಲೋಕ ವ್ಯವಹಾರಸ್ವಾರಸ್ಯವೇ ಈ ಪ್ರಥಮಪಕ್ಷಕ್ಕೆ ಮೂಲವಾಗಿರುವುದು; ಅಬಾಧಿತ ವಾದ ಈ ವ್ಯವಹಾರಗಳಿಂದ ಭೇರ್ಯಾದಿಗಳಿಗೂ ಶಬ್ದಕ್ಕೂ ಧರ್ಮಧರ್ಮಿಭಾವವು (ಆಶ್ರಯಾಶ್ರಯಿಭಾವವು) ತೋರುವುದಷ್ಟೆ?

ಹಾಗಾದರೆ "ಭೇರ್ಯಾದಿಗಳಲ್ಲಿ ಪ್ರಹಾರದಿಂದ ಶಬ್ದವು ತತ್‌ಕ್ಷಣದಲ್ಲಿ ಉತ್ಪನ್ನವಾಗುವುದು" ಎಂಬ ಎರಡನೆಯ ಪಕ್ಷಕ್ಕೆ ಮೂಲವೇನು? ಅನ್ವಯ ವ್ಯತಿರೇಕವೇ ಮೂಲವಾಗಿರುವುದು; ಎಂದರೆ ಪ್ರಹಾರವಿದ್ದರೆ ಶಬ್ದದ ಇರುವಿಕೆ ಯೂ, ಪ್ರಹಾರವಿಲ್ಲದಿದ್ದರೆ ಶಬ್ದದ ಇಲ್ಲದಿರುವಿಕೆಯೂ, ಅನ್ವಯವ್ಯತಿರೇಕಗಳೆನಿಸಿ ಕೊಳ್ಳುವುವು; ಇಂಥ ಅನ್ವಯವ್ಯತಿರೇಕಬಲದಿಂದ ಶಬ್ದಕ್ಕೂ ಪ್ರಹಾರಕ್ಕೂ ಕಾರ್ಯಕಾರಣಭಾವವು ಅವಗತವಾಗುವಕಾರಣ ಶಬ್ದವು ಪ್ರಹಾರದಿಂದ ಹುಟ್ಟುತ್ತ ದೆಯೆಂದೇ ಒಪ್ಪಬೇಕಲ್ಲದೆ ಇದು ಭೇರ್ಯಾದಿಗಳಿಗೆ ಅವಿನಾಭೂತವಲ್ಲ. ಹಾಗಾದರೆ ಲೋಕವ್ಯವಹಾರಕ್ಕೆ ಗತಿಯೇನು? ಭೇರಿಯೊಡನೆ ಶಬ್ದಕ್ಕೆ ಅವಿನಾಭಾವಸಂಬಂಧ ವಿಲ್ಲದಿದ್ದರೂ ಜನ್ಯಜನಕಭಾವಸಂಬಂಧದಿಂದಲೇ ಲೋಕವ್ಯವಹಾರವು ಉಪಪನ್ನ ವಾಗಬಹುದು. **"ತರಂಗಮಾರುತಃ"** (ಅಲೆಯ ಗಾಳಿ) ಎಂದೂ ಲೋಕ ವ್ಯವಹಾರವಿರುವುದು; ಅದಮಾತ್ರಕ್ಕೆ ಗಾಳಿ ತರಂಗಕ್ಕೆ ಅವಿನಾಭೂತವೆಂದು ಒಪ್ಪಲಾದೀತೆ? ತರಂಗಜನ್ಯವಾದುದರಿಂದಲೇ ಈ ವ್ಯವಹಾರವು ಹೇಗೆ ಉಪಪನ್ನ ವಾಗುವುದೋ; ಅದರಂತೆಯೇ **"ಭೇರೀಶಬ್ದಃ"** ಎಂಬುವೇ ಮೊದಲಾದ ಲೋಕವ್ಯವಹಾರವೂ ಜನ್ಯಜನಕಭಾವಸಂಬಂಧದಿಂದಲೇ ಉಪಪನ್ನವಾಗಬಹುದು.

ಓಹೋ! "ಶಬ್ದವು ಪ್ರಹಾರಜನ್ಯವು" ಎಂದು ಈಗತಾನೆ ಹೇಳಿದಿರಿ; ಅಷ್ಟರಲ್ಲೇ ಅದಕ್ಕೆ ವಿರುದ್ಧವಾಗಿ "ಶಬ್ದವು ಭೇರೀಜನ್ಯವು" ಎಂದು ಈಗ ಹೇಳುತ್ತೀರಿ; ಯಾವುದು ನಿಶ್ಚಿತವು? ಎರಡೂ ನಿಶ್ಚಿತವೇ; ವೇಗದಿಂದ ಉಂಟಾ

ಗುವ ದ್ರವ್ಯಗಳ ಸಂಯೋಗವು ಪ್ರಹಾರವೆನಿಸಿಕೊಳ್ಳುವುದು; ಪ್ರಹಾರವಿಶಿಷ್ಟ ವಾದ ಭೇರ್ಯಾದಿಗಳಿಂದ ಶಬ್ದವುಂಟಾಗುವುದಾದರೆ ಶಬ್ದೋತ್ಪತ್ತಿಗೆ ಎರಡೂ ಕಾರಣವಾದುದರಿಂದ ಎರಡೂ ನಿಶ್ಚಿತವಷ್ಟೆ ?

ಹಾಗಾದರೆ ಶಬ್ದಕ್ಕೆ ಪ್ರಹಾರಪ್ರಕಾಶ್ಯತ್ವ ಅಥವಾ ಪ್ರಹಾರಜನ್ಯತ್ವ ಎಂಬ ಎರಡು ಪಕ್ಷಗಳನ್ನೊಳಗೊಂಡಿರುವ ವಾಯುವೀಯತ್ವಪಕ್ಷವನ್ನು ಹೇಳು ವವರ ಆಶಯವೇನು ?

"ವಾಯು ಶಬ್ದಕ್ಕೆ ವ್ಯಂಜಕವಾದರೂ ಸರಿಯೇ, ಉತ್ಪಾದಕವಾದರೂ ಸರಿಯೇ, ಹೇಗಿದ್ದರೂ ಶಬ್ದಪ್ರತ್ಯಕ್ಷಕಾಲದಲ್ಲಿ ಅಂಥ ವಾಯುವಿನ ಆಗಮನವು ಆವಶ್ಯಕವಾದುದಾದರೆ ಅಂಥ ವಾಯುವಿನಿಂದ ವ್ಯಂಗ್ಯವಾದ ಅಥವಾ ಜನ್ಯವಾದ ಶಬ್ದವೆಂಬ ಒಂದು ಧರ್ಮಿಯನ್ನು ಅಂಥ ವಾಯುವಿಗಿಂತಲೂ ಅತಿರಿಕ್ತವಾಗಿ ಕಲ್ಪಿ ಸುವ ಪಕ್ಷದಲ್ಲಿ ಗೌರವದೋಷವು ಪ್ರಸಕ್ತವಾಗುವುದರಿಂದ ಶಬ್ದತ್ವವೆಂಬ ಧರ್ಮ ದೊಡನೆ ಕೂಡಿದ ಶಬ್ದವೆಂಬ ಧರ್ಮಿಯನ್ನು ಕಲ್ಪಿಸುವುದಕ್ಕಿಂತಲೂ ಕ್ಲೃಪ್ತವಾದ ವಾಯುವೆಂಬ ಧರ್ಮಿಯಲ್ಲಿಯೇ ಶಬ್ದತ್ವವೆಂಬ ಧರ್ಮಮಾತ್ರವನ್ನು ಕಲ್ಪಿಸುವಪಕ್ಷ ದಲ್ಲಿ ಲಾಘವಗುಣವಿರುವುದರಿಂದ ವಾಯುವೇ ಶಬ್ದವಾಗಿ ಪರಿಣಮಿಸುವುದು' ಎಂಬುದೇ ಅವರ ಆಶಯವಾಗಿರುವುದು.

ಹಾಗಾದರೆ "ಭೇರ್ಯಾದಿಗಳಿಗೆ ಸಂಬಂಧಪಡದೆ ಇರುವ ನೂರಾರು ವಾಯುವ್ಯಕ್ತಿಗಳು ಆಕಾಶದಲ್ಲಿ ಇದ್ದರೂ ಅವುಗಳಲ್ಲಿಯೂ ಶಬ್ದತ್ವವೆಂಬ ಧರ್ಮ ವನ್ನು ಏಕೆ ಕಲ್ಪಿಸುವುದಿಲ್ಲ? ಎಂದರೆ ಭೇರ್ಯಾದಿಗಳಿಗೆ ಸಂಬಂಧಪಡದ ವಾಯು ವ್ಯಕ್ತಿಗಳೂ ಶಬ್ದರೂಪವಾಗಿ ಪರಿಣಮಿಸುವುವೆಂದು ಏಕೆ ಕಲ್ಪಿಸುವುದಿಲ್ಲ ? ಭೇರ್ಯಾದಿಗಳಿಗೆ ಸಂಬಂಧಪಟ್ಟ ವಾಯುವ್ಯಕ್ತಿಯಲ್ಲಿಯೇ ಶಬ್ದತ್ವಧರ್ಮವನ್ನು ಕಲ್ಪಿಸಿ ಅದುಮಾತ್ರವೇ ಶಬ್ದಾಕಾರವಾಗಿ ಪರಿಣಾಮವನ್ನು ಹೊಂದುವುದೆಂದು ಹೇಗೆ ಹೇಳುವುದು ?" ಎಂಬ ಆಶಂಕೆಗೆ —

ಭೇರ್ಯಾದಿಗಳಿಗೆ ಸಂಬಂಧಪಡದೆ ಇರುವ ನೂರಾರು ವಾಯುವ್ಯಕ್ತಿಗಳು ಆಕಾಶದಲ್ಲಿ ಇದ್ದರೂ ಅವುಗಳಲ್ಲಿಯೂ ಶಬ್ದವ್ಯಂಜಕತ್ವ, ಅಥವಾ ಶಬ್ದಜನಕತ್ವ ಎಂಬ ಧರ್ಮಕ್ಕೆ ಅನುಕೂಲವಾದ ಶಕ್ತಿಯನ್ನು ಏಕೆ ಕಲ್ಪಿಸುವುದಿಲ್ಲ? ಎಂದರೆ ಭೇರ್ಯಾದಿಗಳಿಗೆ ಸಂಬಂಧಪಡದ ವಾಯುವ್ಯಕ್ತಿಗಳೂ ಶಬ್ದವ್ಯಂಜಕತ್ವಕ್ಕೆ ಅಥವಾ ಶಬ್ದಜನಕತ್ವಕ್ಕೆ ಅನುಕೂಲವಾದ ಶಕ್ತಿಯನ್ನು ಪಡೆದಿರುವುವೆಂದು ಏಕೆ ಕಲ್ಪಿಸ ಬಾರದು? ಭೇರ್ಯಾದಿಗಳಿಗೆ ಸಂಬಂಧಪಟ್ಟ ವಾಯುವ್ಯಕ್ತಿಯಲ್ಲಿ ಮಾತ್ರವೇ ಅಂಥ

ಶಕ್ತಿಯನ್ನು ಹೇಗೆ ಕಲ್ಪಿಸುವುದು ?" ಎಂಬ ಪ್ರತಿಬಂದಿಯೇ ಉತ್ತರವಾಗಿರುವುದು.

ಆದಕಾರಣ ವಾಯುಸಾಮಾನ್ಯವೂ ತ್ವಗಿಂದ್ರಿಯಗ್ರಾಹ್ಯವಾಗಿದ್ದರೂ, ಭೇರ್ಯಾದಿಸಂಬಂಧಿಯಾದ ವಾಯುವ್ಯಕ್ತಿಗೆಮಾತ್ರ ಶ್ರವಣೇಂದ್ರಿಯಗ್ರಾಹ್ಯತ್ವವನ್ನು ಹೇಗೆ ಒಪ್ಪುವೆವೋ ಅದರಂತೆಯೇ ಶ್ರವಣೇಂದ್ರಿಯಗ್ರಾಹ್ಯತ್ವಮೂಲಕವಾದ ಶಬ್ದತ್ವವನ್ನೂ ಅದೇ ವಾಯುವ್ಯಕ್ತಿಗೆ ಒಪ್ಪುವೆವು, ಎಂಬುದು ವಾಯವೀಯತ್ವವಾದಿಗಳ ಆಶಯವಾಗಿರುವುದು.

ಹೀಗೆ ಶಬ್ದಕ್ಕೆ ವಾಯವೀಯತ್ವವನ್ನು ಹೇಳುವವರ ಪಕ್ಷದಲ್ಲಿ ವಾಯುರೂಪವಾದ ಸಮಸ್ತವರ್ಣಗಳಿಗೂ ಆಕಾಶವೇ ಅಥವಾ ಸ್ಪರ್ಶತನ್ಮಾತ್ರೆಯೇ ಉಪಾದಾನಕಾರಣವಾಗುವುದೆಂದು ಸಿದ್ಧವಾದುದರಿಂದ ಅಕಾರರೂಪವಾದ ವಾಯುವಿಶೇಷವು ವರ್ಣಾಂತರಕ್ಕೆ ಉಪಾದಾನಕಾರಣವಾಗಲಾರದಾದಪ್ರಯುಕ್ತ ಅಕಾರಕ್ಕೆ ವರ್ಣಾಂತರೋಪಾದಾನಕಾರಣತ್ವವನ್ನು ಬೋಧಿಸುವ ಶಾಸ್ತ್ರವು ದೃಷ್ಟಿವಿಧಿಯೆಂದಾಗಲಿ ಔಪಚಾರಿಕವೆಂದಾಗಲಿ ಇವರ ಮತದಲ್ಲಿ ಅಂಗೀಕರಿಸಬೇಕು. ವಾಯುಸಾಮಾನ್ಯದಲ್ಲಿ ರೂಪವು ಸಂಭವಿಸುವುದಿಲ್ಲವಾದಪ್ರಯುಕ್ತ ವಾಯುವಿಶೇಷರೂಪವಾದ ಅಕಾರಾದಿವರ್ಣಗಳಲ್ಲಿಯೂ ರೂಪವು ಸಂಭವಿಸುವುದಿಲ್ಲವಾದುದರಿಂದ ರೂಪಬೋಧಕಶಾಸ್ತ್ರವನ್ನು ದೃಷ್ಟಿವಿಧಿಯೆಂದೇ ಅಥವಾ ಔಪಚಾರಿಕವೆಂದೇ ಅವಶ್ಯಕವಾಗಿಯೂ ಅಂಗೀಕರಿಸಬೇಕು.

ಶಬ್ದಕ್ಕೆ ಅವಾಯವೀಯದ್ರವ್ಯತ್ವವನ್ನು ಹೇಳುವವರ ಮತದಲ್ಲಿ—ಎಂದರೆ ವಾಯುವ್ಯತಿರಿಕ್ತವಾದ ಪೃಥಿವ್ಯಾದಿರೂಪದ್ರವ್ಯತ್ವವನ್ನು ಹೇಳುವವರ ಮತದಲ್ಲಿ ಅನಿಯತವಾದ ಉಪಾದಾನಕಾರಣವನ್ನು ಉಪದೇಶಿಸುವ ಶಾಸ್ತ್ರವೂ, ರೂಪವಿಶೇಷಸ್ಥಾನವಿಶೇಷಬೋಧಕವಾದ ಶಾಸ್ತ್ರವೂ ಕಲ್ಪಭೇದದಿಂದಲಾಗಲಿ ಅಂಡಭೇದದಿಂದಲಾಗಲಿ ಉಪಪನ್ನವಾಗಬಹುದು. ಆದರೂ ಪೃಥಿವ್ಯಾದಿಗಳ ಪರಿಣಾಮವಿಶೇಷವಾದ ಶಬ್ದವೆಂಬ ದ್ರವ್ಯದಲ್ಲಿ ರೂಪವಿಶೇಷವು ನಮಗೆ ಕಾಣದಿರುವುದಕ್ಕೆ ಅಲ್ಲಿ ರೂಪವೇ ಇಲ್ಲವೆಂಬುದು ಕಾರಣವಲ್ಲ; ಅಲ್ಲಿ ರೂಪವಿದ್ದೇ ಇರುವುದು; ಆದರೆ ಅದು ಗ್ರಹಣಕ್ಕೆ ಅಯೋಗ್ಯವಾದ ರೂಪವಾದುದರಿಂದ ಅದರ ಗ್ರಹಣವುಂಟಾಗುವುದಿಲ್ಲ. "ಸರ್ವದಾ ಅನುಪಲಬ್ಧವಾಗಿಯೂ ಅಯೋಗ್ಯವಾಗಿಯೂ ಇರುವ ರೂಪವನ್ನು ಅವುಗಳಲ್ಲಿ ಸ್ವೀಕರಿಸುವುದಾದರೆ ಅಂಥ ರೂಪವವನ್ನು ಆಕಾಶದಲ್ಲಿಯೂ ಏಕೆ ಸ್ವೀಕರಿಸಬಾರದು" ಎಂದು ಆಶಂಕಿಸುವುದಾದರೆ ಅವು

ಗಳಲ್ಲಿ ರೂಪವನ್ನೇ ಅಂಗೀಕರಿಸಬೇಕ; ರೂಪಬೋಧಕಶಾಸ್ತ್ರವು ದೃಷ್ಟಿವಿಧಿಯಾಗಿರುವುದೆಂದೇ ಅಂಗೀಕರಿಸಬಹುದು.

## ೧೦೬೧. ಅಥ ಶಬ್ದಸ್ಯಾದ್ರವ್ಯತ್ವಪಕ್ಷೋಪಪಾದನಂ.

ಇನ್ನು ಮುಂದೆ ಶಬ್ದಕ್ಕೆ ಅದ್ರವ್ಯತ್ವಪಕ್ಷವನ್ನು ತೋರಿಸುವೆವು—ಸತ್ತ್ವರಜಸ್ತಮಸ್ಸುಗಳಿಗೆ ಅದ್ರವ್ಯತ್ವವನ್ನು ಸ್ಥಾಪಿಸುವುದಕ್ಕಾಗಿ "**ರಚನಾನುಪಪತ್ತೇಶ್ಚ ನಾನುಮಾನಂ ಪ್ರವೃತ್ತೇಶ್ಚ**" (೨—೨—೧) ಎಂಬ ವೇದಾಂತಸೂತ್ರದಲ್ಲಿ **ಭಾಷ್ಯಕಾರರು** ತೋರಿಸಿರುವ ಯುಕ್ತಿಗಳು ಶಬ್ದದ ವಿಷಯದಲ್ಲಿಯೂ ಸಮಾನಗಳಾಗಿರುವುವು. ಆ ಯುಕ್ತಿಗಳನ್ನೂ ಹಿಂದೆಯೇ ನಾವು ತೋರಿಸಿರುವೆವು. ಅಂಥ ಯುಕ್ತಿಗಳಿಂದಲೇ ಶಬ್ದಕ್ಕೆ ಅದ್ರವ್ಯತ್ವವು ಸಿದ್ಧಿಸುವುದು.

ಹಾಗಾದರೆ—"ಶಬ್ದವು ಅಹಂಕಾರತತ್ತ್ವದ ಪರಿಣಾಮವೆಂದು ಶಾಸ್ತ್ರದಲ್ಲಿ ನಿರ್ದೇಶಿಸುವ ಬಗೆ ಹೇಗೆ?" ಎಂದು ಆಶಂಕಿಸ ಕೆಲಸವಿಲ್ಲ; ಅಲ್ಲಿ ಪರಿಣಾಮಶಬ್ದವು—ಅಹಂಕಾರತತ್ತ್ವಕ್ಕೆ ಶಬ್ದವೆಂಬ ಆಗಂತುಕಧರ್ಮವುಂಟಾಗುವುದೆಂದು ಬೋಧಿಸುವುದೇ ಹೊರತು ಅಹಂಕಾರತತ್ತ್ವವೇ ಶಬ್ದತ್ವವೆಂಬ ಅವಸ್ಥಾಂತರವನ್ನು ಪಡೆವುದೆಂದು ಬೋಧಿಸುವುದಿಲ್ಲ.

ಶಬ್ದವನ್ನು ಅದ್ರವ್ಯವೆಂದೇ ಒಪ್ಪುವುದಾದರೆ ಪೂರ್ವೋದಾಹೃತವಾದ **ಯಾಮುನಾರ್ಯರ ಆತ್ಮಸಿದ್ಧಿಗ್ರಂಥದ** ವಚನದೊಡನೆ ವಿರೋಧವು ಪ್ರಸಕ್ತವಾಗುವುದಿಲ್ಲವೋ? ಎಂದು ಆಶಂಕಿಸಕೆಲಸವಿಲ್ಲ; ಏತಕ್ಕೆಂದರೆ ಪರಮತವನ್ನು ಅನುವಾದಮಾಡಿರುತ್ತಾರೆಂದಾಗಲಿ ಅಥವಾ ಏಕದೇಶಿಗಳ ಮತವನ್ನೇ ಅಲ್ಲಿ ಹೇಳಿರುವರೆಂದಾಗಲಿ ಆ ವಚನಕ್ಕೆ ಉಪಪತ್ತಿಯನ್ನು ಹೇಳಬಹುದು.

**ಪರಾಶರಭಟ್ಟಾರ್ಯರು** "**ಗಗನಗುಣಶಬ್ದಾದಿಸ್ವರೂಪಸ್ಥಿತೀಃ ಪ್ರವರ್ತಯತಾ ಭಗವತೈವ ಯೋಗ್ಯಾರ್ಥೈಕದಮರ್ಥ್ಯೇನ ವಾಕ್ಯಪ್ರವಾಹಸ್ಯ ಪೂರ್ವಮೇವೋಪಾತ್ತತ್ವಾತ್**" (ಆಕಾಶದ ಗುಣವೆನಿಸಿಕೊಂಡಿರುವ ಶಬ್ದಾದಿಗಳ ಸ್ವರೂಪಗಳನ್ನೂ ಸ್ಥಿತಿಗಳನ್ನೂ ನಡಸುತ್ತಿರುವ ಪರಮಾತ್ಮನಿಂದಲೇ ವಾಕ್ಯಪ್ರವಾಹವು ಪ್ರತ್ಯಕ್ಷಾವಿರುದ್ಧವಾದ ಅರ್ಥವನ್ನು ಬೋಧಿಸಲೆಂಬ ತಾತ್ಪರ್ಯದಿಂದಲೇ ಪೂರ್ವದಲ್ಲಿಯೇ ಉಂಟುಮಾಡಲ್ಪಟ್ಟಿರುವುದಾದುದರಿಂದ) ಎಂಬುದಾಗಿ ವಾಕ್ಯಸ್ವರೂಪನಿರೂಪಣಪ್ರಸ್ತಾವದಲ್ಲಿ ಶಬ್ದವನ್ನು ಆಕಾಶದ ಗುಣವೆಂದು ಅನುವಾದಮಾಡಿ ಅದ್ರವ್ಯತ್ವವನ್ನೇ ಇದಕ್ಕೆ ಅಂಗೀಕರಿಸಿರುವರು.

ಹಾಗಾದರೆ **"ಯಸ್ಯ ವೇದಾಃ ಶರೀರಂ"** ಎಂದು ಶಬ್ದರೂಪವಾದ ವೇದಗಳಿಗೆ ಪರಮಾತ್ಮಶರೀರತ್ವವನ್ನು ಬೋಧಿಸುವ ಶಾಸ್ತ್ರವು ಹೇಗೆ ಸಂಗತವಾದೀತು ? ಶಬ್ದವು ಶರೀರವೆನಿಸಿಕೊಳ್ಳಬೇಕಾದರೆ ದ್ರವ್ಯವಾಗಿಯೇ ಇರಬೇಕಲ್ಲವೆ ? ಎಂದು ಆಶಂಕಿಸಬೇಕಾದುದಿಲ್ಲ ; ಏತಕ್ಕೆಂದರೆ ಅಲ್ಲಿ ವೇದಶಬ್ದವು ವೇದಾಭಿಮಾನಿಯಾದ ದೇವತಾವಿಶೇಷವನ್ನು ಬೋಧಿಸುವುದರಿಂದಲೂ ಅಂಥ ದೇವತಾವಿಶೇಷವು ದ್ರವ್ಯವಾದುದರಿಂದಲೂ ಆ ಶಾಸ್ತ್ರವು ಸಂಗತವಾಗಲು ಯಾವ ಅಡ್ಡಿಯೂ ಇಲ್ಲ.

ಹೀಗೆಯೇ ಆ ಆ ವರ್ಣಗಳಿಗೆ ಅಭಿಮಾನಿಗಳಾಗಿರುವ ದೇವತಾವಿಶೇಷಗಳಲ್ಲಿರುವ ಉಪಾದಾನಕಾರಣತ್ವ-ಸ್ಥಾನವಿಶೇಷ-ರೂಪವಿಶೇಷಗಳೇ ಆ ಆ ವರ್ಣಗಳಿಗೆ ಉಪದೇಶಿಸಲ್ಪಟ್ಟಿರುವುವೆಂದು ಅಂಗೀಕರಿಸಿದರೆ ಯಾವ ಅನುಪಪತ್ತಿಯೂ ಇಲ್ಲ.

**"ತಸ್ಯ ಪ್ರಕೃತಿಲೀನಸ್ಯ"** ಎಂಬ ಶ್ರುತಿವಾಕ್ಯಕ್ಕೆ "ಪ್ರಣವಾಭಿಮಾನಿ ದೇವತೆ ಅಕಾರಾಭಿಮಾನಿದೇವತೆಯಲ್ಲಿ ಲಯಿಸುವುದಾದಪ್ರಯುಕ್ತ ಪ್ರಣವವು ಅಕಾರದಲ್ಲಿ ಲಯಿಸುವುದೆಂಬುದಾಗಿ ವ್ಯವಹರಿಸಲ್ಪಡುವುದು" ಎಂಬ ಅಭಿಪ್ರಾಯವನ್ನು ಸ್ವೀಕರಿಸಿರುವೆವಾದುದರಿಂದ ಈ ಶ್ರುತಿಯೂ ಶಬ್ದಕ್ಕೆ ದ್ರವ್ಯತ್ವವನ್ನು ಸಾಧಿಸಿಕೊಡಲಾರದು ; ಅದ್ರವ್ಯತ್ವಪಕ್ಷದಲ್ಲಿಯೂ ಈ ಶ್ರುತಿ ಉಪಪನ್ನವಾಗಬಹುದು.

ಆ ಆ ದೇವತೆಗಳ ಬೀಜಾಕ್ಷರಗಳು ಆ ಆ ದೇವತೆಗಳನ್ನು ಕುರಿತು ಉಪಾದಾನಕಾರಣಗಳಾಗಿರುವುವೆಂದು ಹೇಳುವ ವಾಕ್ಯಗಳನ್ನೂ ಔಪಚಾರಿಕವಾಕ್ಯಗಳೆಂದಾಗಲಿ ದೃಷ್ಟಿವಿಧಿವಾಕ್ಯಗಳೆಂದಾಗಲಿ ನಿರ್ವಹಿಸಬಹುದು.

ಆದರೆ ವರ್ಣಗಳೊಳಗೆ ಅನಿಯತವಾಗಿ (ಅವ್ಯವಸ್ಥೆಯಾಗಿ) ಉಪಾದಾನಕಾರಣತ್ವವನ್ನು ಬೋಧಿಸುವ ವಾಕ್ಯಗಳನ್ನು ಹೇಗೆ ನಿರ್ವಹಿಸಬೇಕು ? ಹೀಗೆ ನಿರ್ವಹಿಸಬೇಕು—ತತ್ತ್ವೋಪದೇಶಕಶಾಸ್ತ್ರಗಳೊಳಗೆ ಕೆಲವು ಗ್ರಂಥಗಳಲ್ಲಿ (ಸಾಂಖ್ಯಗ್ರಂಥಗಳಲ್ಲಿ) ಪರಮಾತ್ಮನಿಗೆ ವಿಶೇಷಣವಾಗದ ಸ್ವತಂತ್ರಪ್ರಕೃತಿಯೇ ಜಗತ್ತಿಗೆ ಉಪಾದಾನಕಾರಣವೆಂದೂ, ಇನ್ನು ಕೆಲವು ಗ್ರಂಥಗಳಲ್ಲಿ (ನ್ಯಾಯವೈಶೇಷಿಕಗ್ರಂಥಗಳಲ್ಲಿ) ಪರಮಾಣುಗಳೇ ಉಪಾದಾನಕಾರಣವೆಂದೂ, ಇನ್ನೂ ಕೆಲವು ಗ್ರಂಥಗಳಲ್ಲಿ (ಸಿದ್ಧಾಂತಗ್ರಂಥಗಳಲ್ಲಿ) ಚಿದಚಿದ್ವಿಶಿಷ್ಟನಾದ ಪರಮಾತ್ಮನೇ ಜಗದುಪಾದಾನಕಾರಣವೆಂದೂ ಹೀಗೆ ಪರಸ್ಪರವಿರುದ್ಧವಾಗುವಂತೆ ಅನಿ

ಯತವಾಗಿ ಉಪಾದಾನಕಾರಣತ್ವವನ್ನು ಉಪದೇಶಿಸಿದರೆ ಇವುಗಳೊಳಗೆ ಕೆಲವನ್ನು ಪ್ರಮಾಣಗಳೆಂದೂ, ಉಳಿದುವುಗಳನ್ನು ಪ್ರಮಾಣಾಭಾಸಗಳೆಂದೂ ಅಂಗೀಕರಿಸಿ ಹೇಗೆ ನಿರ್ವಹಿಸುವೆವೋ, ಹಾಗೆಯೇ ಇಲ್ಲಿಯೂ ಕೆಲವನ್ನು ಪ್ರಮಾಣಗಳಾಗಿಯೂ, ಮತ್ತು ಕೆಲವನ್ನು ಅಪ್ರಮಾಣಗಳಾಗಿಯೂ ಅಂಗೀಕರಿಸಿ ನಿರ್ವಹಿಸಬೇಕು. ಪರಸ್ಪರವಿರುದ್ಧಗಳಾದ ಎರಡು ಶಾಸ್ತ್ರಗಳೂ ಪ್ರಮಾಣಭೂತಗಳಾಗಿಯೇ ನಿಲ್ಲುವ ಪಕ್ಷದಲ್ಲಿ ನ್ಯಾಯವನ್ನು ಅನುಸರಿಸಿ ಅರ್ಥಸ್ವರೂಪವನ್ನು ನಿಷ್ಕರ್ಷಿಸಬೇಕು.

ಹೀಗೆ ನಾವು ವ್ಯವಸ್ಥೆಯನ್ನು ತೋರಿಸಿದುದರಿಂದಲೇ ಪೂರ್ವೋಕ್ತವಾದ ಅಕಾರಹಕಾರಗಳ ವಿವಾದಕ್ಕೂ ಪರಿಹಾರವುಂಟಾಯಿತೆಂದು ತಿಳಿಯಬಹುದು ; ಕೆಲವು ಗ್ರಂಥಗಳಲ್ಲಿ ಅಕಾರಕ್ಕೂ, ಇನ್ನು ಕೆಲವು ಗ್ರಂಥಗಳಲ್ಲಿ ಹೃಲ್ಲೇಖಾಮಂತ್ರದ ಅಂಶಭೂತವಾದ ಹಕಾರಕ್ಕೂ ಉಪಾದಾನಕಾರಣತ್ವವು ಉಕ್ತವಾದರೂ, ಅವುಗಳೊಳಗೆ ಒಂದು ಕಕ್ಷಿಯ ಗ್ರಂಥಗಳನ್ನು ಪ್ರಮಾಣಗಳಾಗಿಯೂ, ಮತ್ತೊಂದು ಕಕ್ಷಿಯ ಗ್ರಂಥಗಳನ್ನು ಪ್ರಮಾಣಾಭಾಸಗಳಾಗಿಯೂ ಅಂಗೀಕರಿಸಿಯಾಗಲಿ, ಅಥವಾ ಉಭಯಕಕ್ಷಿಯ ಗ್ರಂಥಗಳೂ ಪ್ರಮಾಣಗಳೆನಿಸಿಕೊಳ್ಳುವುವಾದರೆ ನ್ಯಾಯಾನುಸಾರಿಯಾದ ಪ್ರಮಾಣವನ್ನು ಅಂಗೀಕರಿಸಿಯಾಗಲಿ ಅರ್ಥಸ್ವರೂಪವನ್ನು ನಿಷ್ಕರ್ಷಿಸಬಹುದಷ್ಟೆ ?

ಇಲ್ಲಿ ಕೆಲವರು ಹೇಳುವುದೇನೆಂದರೆ—ಅಕಾರವೇ ಸಮಸ್ತವರ್ಣಗಳಿಗೂ ಉಪಾದಾನಕಾರಣವೆಂದು ಬೋಧಿಸುವ ಶಾಸ್ತ್ರಕ್ಕೂ—ಹೃಲ್ಲೇಖಾಮಂತ್ರದ ಹಕಾರವೇ ಉಪಾದಾನಕಾರಣವೆಂದು ಬೋಧಿಸುವ ಶಾಸ್ತ್ರಕ್ಕೂ ಪರಸ್ಪರವಾಗಿ ವಿರೋಧವೇ ಇಲ್ಲ; ಹೇಗೆಂದರೆ—"**ಅಕಾರಃ ಸರ್ವೋಪಾದಾನಂ**" ಎಂದು ಹೇಳುವ ಶಾಸ್ತ್ರದಲ್ಲಿ ಕೇವಲವಾದ ಅಕಾರವು ವಿವಕ್ಷಿತವಲ್ಲ; ಎಂದರೆ ಹದಿನಾರು ಸ್ವರಾಕ್ಷರಗಳೊಳಗೆ ಒಂದನೆಯದಾದ "**ಅ**" ಎಂಬ ಸ್ವರಾಕ್ಷರಮಾತ್ರವೇ ವಿವಕ್ಷಿತವಲ್ಲ; ಮತ್ತೇನೆಂದರೆ—ವಿಸರ್ಗವೆಂಬ ಹೆಸರನ್ನು ಪಡೆದಿರುವ ಹದಿನಾರನೆಯ ಸ್ವರಾಕ್ಷರಕ್ಕೆ ಅವ್ಯವಹಿತಪೂರ್ವವಾಗಿ ಉಚ್ಚರಿಸಲ್ಪಡುವ "**ಅಃ**" ಎಂಬುದಾಗಲಿ—ಅಥವಾ ಅಂಥ ವಿಸರ್ಗಕ್ಕೆ ಅವ್ಯವಹಿತಪರವಾಗಿ ಉಚ್ಚರಿಸಲ್ಪಡುವ "**ಹ**" ಎಂಬುದಾಗಲಿ ವಿವಕ್ಷಿತವಾಗಿರುವುದು ; ಇಂಥ ಅಕಾರವೇ ಸಮಸ್ತವರ್ಣಗಳಿಗೂ ಉಪಾದಾನಕಾರಣವೆಂದು ಈ ಶಾಸ್ತ್ರವಚನದ ಅಭಿಪ್ರಾಯವಾಗಿರುವುದು; ಆದುದರಿಂದಲೇ "**ಅಃ—ಹ**" ಎಂಬ ಎರಡು ವರ್ಣಗಳಿಗೂ ಉಪಾ

ದಾನಕಾರಣತ್ವವು ಸಿದ್ಧಿಸುವುದು; ಆದಕಾರಣ ಈ ಎರಡು ಶಾಸ್ತ್ರಗಳಿಗೂ ವಿರೋಧವೇ ಇಲ್ಲ.

ಆದುದರಿಂದಲೇ ವರ್ಣಮಾಲೆಯೊಳಗೆ ಸ್ವರವ್ಯಂಜನಗಳ ಮಧ್ಯಸ್ಥಾನದಲ್ಲಿ ಸ್ವರ-ವ್ಯಂಜನೋಭಯರೂಪವಾಗಿರುವ "ಅಃ". ಎಂಬುದಕ್ಕೆ ಪಾಠಮಾಡಿರುವುದು. ಅಕಾರವು ಹಕಾರವೆನಿಸಿಕೊಂಡ ಬಗೆ ಹೇಗೆಂದು ಚಿಂತಿಸಬಾರದು; ಇದು ಅನುಭವಸಿದ್ಧವಾಗಿಯೇ ಇರುವುದು—ಹದಿನಾರು ಸ್ವರಾಕ್ಷರಗಳೊಳಗೆ ಒಂದನೆಯದನ್ನೂ ಹದಿನಾರನೆಯದನ್ನೂ ತೆಗೆದುಕೊಂಡು ಪ್ರಥಮದಲ್ಲಿ ಒಂದನೆಯದನ್ನೂ ಅನಂತರದಲ್ಲಿ ಹದಿನಾರನೆಯದನ್ನೂ ಸೇರಿಸಿ ಸಂಧಿಮಾಡಿ ವಿಲಂಬವಿಲ್ಲದೆ ಉಚ್ಚರಿಸಿದೆವಾದರೆ "ಅಃ" ಎಂಬ ಅಕ್ಷರವಾಗುವುದು; ಇದನ್ನು ತಲೆಕೆಳಗಾಗಿ ಮಾಡಿ ಪ್ರಥಮದಲ್ಲಿ ಹದಿನಾರನೆಯದನ್ನೂ ಅನಂತರದಲ್ಲಿ ಒಂದನೆಯದನ್ನೂ ಸೇರಿಸಿ ಸಂಧಿಮಾಡಿ ವಿಲಂಬವಿಲ್ಲದೆ ಉಚ್ಚರಿಸಿದೆವಾದರೆ "ಹ" ಎಂಬ ಅಕ್ಷರವಾಗುವುದು; "ದಧಿ+ಅತ್ರ, ಮಧು+ಅತ್ರ" ಎಂಬುವುಗಳಿಗೆ ಸಂಧಿಮಾಡುವಾಗ ಇಕಾರವು ಯಕಾರವಾಗುವುದನ್ನೂ, ಉಕಾರವು ವಕಾರವಾಗುವುದನ್ನೂ ಪ್ರತ್ಯಕ್ಷದಲ್ಲಿ ನಾವು ಕಂಡಿರುವೆವಾದರೆ ಅದರಂತೆ ಉಕ್ತರೀತಿಯಲ್ಲಿ ಅಕಾರವು ಏಕೆ ಹಕಾರವಾಗಬಾರದು? ಈ ಪರಿಯಲ್ಲಿ ಅಕಾರಕ್ಕೆ ಹಕಾರತ್ವವು ಪ್ರತ್ಯಕ್ಷಾನುಭವಸಿದ್ಧವಾದುದರಿಂದ ಅಕಾರಹಕಾರಗಳೆರಡಕ್ಕೂ ಉಪಾದಾನಕಾರಣತ್ವವನ್ನು ಬೋಧಿಸುವ ಶಾಸ್ತ್ರಗಳಿಗೆ ಪರಸ್ಪರವಾಗಿ ವಿರೋಧಕ್ಕೆ ಪ್ರಸಕ್ತಿಯೇ ಇಲ್ಲ; ಇದು ಲಕ್ಷ್ಮೀತಂತ್ರ ಮೊದಲಾದ ಆಗಮಗ್ರಂಥಗಳಲ್ಲಿ ಸ್ಪಷ್ಟವಾಗಿ ಅವಗತವಾಗಿರುವುದು.

ಹೀಗೆ ಅಕಾರವು ಸರ್ವವರ್ಣೋಪಾದಾನಕಾರಣವೆಂದು ಬೋಧಿಸುವ ಶಾಸ್ತ್ರದಲ್ಲಿ ಕೇವಲವಾದ ಅಕಾರವು ವಿವಕ್ಷಿತವಲ್ಲವೆಂದೂ, ಹದಿನಾರನೆಯ ಸ್ವರವಾದ ವಿಸರ್ಗವನ್ನು ಪೂರ್ವದಲ್ಲಿಯಾಗಲಿ ಪರದಲ್ಲಿಯಾಗಲಿ ಇಟ್ಟುಕೊಂಡಿರುವ ಅಕಾರವೇ ವಿವಕ್ಷಿತವೆಂದೂ ನಾವು ತೋರಿಸಿದುದರಿಂದಲೇ "ಅ ಇತಿ ಬ್ರಹ್ಮ" ಎಂಬ ಶಾಸ್ತ್ರನಿರ್ದೇಶವೂ ಸಂಗತವಾಗುವುದು; ಹಾಗಿಲ್ಲದೆ ಕೇವಲವಾದ ಅಕಾರವೇ ಅಲ್ಲಿ ವಿವಕ್ಷಿತವಾಗಿರುವುದಾದರೆ "ಅ ಇತಿ" ಎಂಬ ಸ್ಥಳದಲ್ಲಿ ಅಕಾರಕ್ಕೂ ಇಕಾರಕ್ಕೂ ಸಂಧಿಮಾಡಿ "ಏತಿ ಬ್ರಹ್ಮ" ಎಂಬುದಾಗಿಯೇ ನಿರ್ದೇಶವನ್ನು ಮಾಡಬೇಕಾಗಿದ್ದಿತು; "ಅಃ" ಎಂದು ಪ್ರಥಮಾವಿಭಕ್ತಿಯ ಏಕವಚನಾಂತವಾದ ಪದವಾಗಿ ನಿರ್ದೇಶಮಾಡಕೂಡದಾಗಿದ್ದಿತು. ಆದಕಾರಣ ನಾವು ಹೇಳಿದ ರೀತಿಯಲ್ಲಿಯೇ ಆ ಎರಡು ಶಾಸ್ತ್ರಗಳಿಗೂ ವಿರೋಧವಿಲ್ಲವೆಂದು ತಿಳಿಯಬೇಕು. ಇದು ಕೆಲವರ ಹೇಳಿಕೆಯಾಗಿರುವುದು.

ಇನ್ನು ಕೆಲವರು ಹೇಳುವುದೇನೆಂದರೆ—ಅಕಾರವೇ ಸರ್ವವರ್ಣಗಳಿಗೂ ಉಪಾದಾನಕಾರಣವೆಂದು ಬೋಧಿಸುವ ಶಾಸ್ತ್ರದಲ್ಲಿ ವಿಸರ್ಗಸಹಿತವಾದ ಅಕಾರವೇ ವಿವಕ್ಷಿತವಾಗಿರುವುದೆಂದು ಹೇಳಲು ಶಕ್ಯವಲ್ಲ; ಏತಕ್ಕೆಂದರೆ ಅ+ಉ+ಮ್ ಎಂಬ ಮೂರು ವರ್ಣಗಳನ್ನೂ ಒಟ್ಟಿಗೆ ಕೂಡಿಸಿ ಉಚ್ಚರಿಸುವುದರಿಂದ ಏರ್ಪಡುವ "ಓಂ" ಎಂಬ ಪ್ರಣವದಲ್ಲಿ ಕೇವಲವಾದ ಅಕಾರವೇ ಸೇರಿರುವುದಲ್ಲದೆ ವಿಸರ್ಗಸಹಿತವಾದುದು ಸೇರಿಲ್ಲ; ಹಾಗೆ ಸೇರಿರುವುದಾದರೆ ಪ್ರಣವದಲ್ಲಿ ಸಂಧಿಯೇ ಆಗಲಾರದು. ಆಗ "ಓಂ" ಎಂಬ ರೂಪವೇ ಸಿದ್ಧಿಸಲಾರದು.

ಮತ್ತು "**ಅಕಾರೋ ವೈ ಸರ್ವಾ ವಾಕ್**" ಎಂದು ಶ್ರುತವಾಗಿರುವುದಲ್ಲದೆ "**ಅಃಕಾರೋ ವೈ ಸರ್ವಾ ವಾಕ್**" ಎಂದು ಶ್ರುತವಾಗಿಲ್ಲ;

ಮತ್ತು ನಾರಾಯಣನೇ ಸಮಸ್ತಕ್ಕೂ ಉಪಾದಾನಕಾರಣಭೂತನೆಂದು ಪ್ರಮಾಣಗಳಿಂದ ನಿಷ್ಕರ್ಷಿಸಲ್ಪಟ್ಟಿರುವುದು; ಇಂಥ ನಾರಾಯಣನಿಗೆ ವಿಸರ್ಗವಿರಹಿತವಾದ ಪ್ರಥಮಾಕ್ಷರವೇ ವಾಚಕವಾಗಿರುವುದಲ್ಲದೆ ಹದಿನಾರನೆಯ ಅಕ್ಷರವು ವಾಚಕವಲ್ಲ.

ಹಾಗಾದರೆ ಅಕಾರವೇ ಸರ್ವವರ್ಣಕಾರಣವೆಂದೂ, ಹಕಾರವೇ ಸರ್ವವರ್ಣಕಾರಣವೆಂದೂ ಬೋಧಿಸುವ ಶಾಸ್ತ್ರಗಳೆರಡಕ್ಕೂ ಪ್ರಸಕ್ತವಾಗುವ ವಿರೋಧವನ್ನು ಹೇಗೆ ಪರಿಹರಿಸಲಾದೀತು? ಹೀಗೆ ಪರಿಹರಿಸಲಾದೀತು—ಸರ್ವಕಾರಣಭೂತನಾದ ಪರಮಾತ್ಮನಿಗೆ ವಾಚಕವಾದುದರಿಂದ ಅಕಾರವೇ ಸರ್ವಕಾರಣವೆಂದು ಹೇಗೆ ಔಪಚಾರಿಕವಾಗಿ ವ್ಯವಹರಿಸುತ್ತೇವೋ; ಅದರಂತೆಯೇ ಅಂಥ ಪರಮಾತ್ಮನಿಗೆ ವಾಚಕವಾದ ಹರಿಶಬ್ದದ ಏಕದೇಶವಾದ ಹಕಾರವೂ ಪರಮಾತ್ಮನಿಗೆ ವಾಚಕವೆಂದು ಅಭಿಮಾನಿಸುವೆವಾದರೆ ಹಕಾರವೂ ಸರ್ವೋಪಾದಾನಕಾರಣವೆಂದು ವ್ಯವಹರಿಸಲು ತಡೆಯಿಲ್ಲ. ಹೀಗಾದಮೇಲೆ ಆ ಎರಡು ಶಾಸ್ತ್ರಗಳಿಗೆ ವಿರೋಧವೆಲ್ಲಿಯದು.

ಓಹೋ! ಅಕಾರವೇ ಸರ್ವವರ್ಣಕಾರಣವಾಗುವುದಾದರೆ—ಪ್ರಣವವೇ ಸರ್ವವರ್ಣಕಾರಣವೆಂದು ಹೇಳುವ ಶಾಸ್ತ್ರದ ಗತಿಯೇನು? "**ಓಂಕಾರಪ್ರಭವಾ ವೇದಾಃ, ಪ್ರಣವಾದ್ಯಾಸ್ತಥಾ ವೇದಾಃ, ಓಂಕಾರೇಣ ಸರ್ವಾ ವಾಕ್ ಸಂತೃಣ್ಣಾ, ಓಂಕಾರ ಏವೇದಂ ಸರ್ವಂ**" ಎಂಬುವೇ ಮೊದಲಾದ ಶಾಸ್ತ್ರಗಳಿಂದ ಪ್ರಣವವೇ ಸರ್ವಕಾರಣವೆಂದು ಅವಗತವಾಗುವುದಲ್ಲವೆ?

ಹವ್ವದು; ಅವಗತವಾಗುವುದು; ಅಕಾರವೇ ಸರ್ವಕಾರಣವಾಗಿದ್ದರೂ ಅಂಥ ಅಕಾರವು ಪ್ರಣವದ ಏಕಭಾಗವಾದುದರಿಂದ ಸ್ವಾಂಶಭೂತವಾದ ಅಕಾರದಮೂಲಕವಾಗಿ ಪ್ರಣವವೂ ಸರ್ವಕಾರಣವೆನಿಸಿಕೊಳ್ಳಲು ತಡೆಯಿಲ್ಲ.

ಓಹೋ! ಅಕಾರವೂ ಪ್ರಣವದ ಅಂಶವಾಗಿರುವಾಗ ಅಂಥ ಅಕಾರದಿಂದ ಪ್ರಣವವು ಉತ್ಪನ್ನವಾಗುವುದೆಂದು ಹೇಳುವ ಬಗೆ ಹೇಗೆ? ಹೀಗೆ—ಅಕಾರವಾಚ್ಯನಾದ ಪರಮಾತ್ಮನಿಂದ ಪ್ರಣವಾಭಿಮಾನಿದೇವತೆ ಉತ್ಪನ್ನವಾಗುವುದಾದ ಪ್ರಯುಕ್ತ "ಅಕಾರದಿಂದ ಪ್ರಣವವು ಉತ್ಪನ್ನವಾಗುವುದು" ಎಂದು ಔಪಚಾರಿಕವಾಗಿ ವ್ಯವಹರಿಸಬಹುದು.

ಪ್ರಣವಾಭಿಮಾನಿದೇವತೆಯೂ ಪರಮಾತ್ಮನೇ ಆದುದರಿಂದ—ಪರಮಾತ್ಮನಿಂದಲೇ ಪರಮಾತ್ಮನ ಉತ್ಪತ್ತಿ ಹೇಗೆ ಘಟಿಸೀತು? ಎಂದು ಆಶಂಕಿಸುವುದಾದರೆ—ಪ್ರಣವಾಂಶವಾದ ಅಕಾರೋಕಾರಮಕಾರಗಳಿಗೆ ಅಭಿಮಾನಿದೇವತೆಗಳೆನಿಸಿಕೊಂಡಿರುವ ಸಂಕರ್ಷಣ-ಪ್ರದ್ಯುಮ್ನಾನಿರುದ್ಧರು ವಿಗ್ರಹವಿಶೇಷವಿಶಿಷ್ಟರಾಗಿ ಪರಮಾತ್ಮನಿಂದ ಉತ್ಪನ್ನರಾಗುವರಾದಪ್ರಯುಕ್ತ ಆಗಲೂ ಅಕಾರದಿಂದ ಪ್ರಣವೋತ್ಪತ್ತಿಯನ್ನು ಔಪಚಾರಿಕವಾಗಿ ಹೇಳಲು ತಡೆಯಿಲ್ಲ.

ಹೀಗೆ ಸರ್ವಶಾಸ್ತ್ರಗಳಿಗೂ ಉಪಪತ್ತಿ ದೊರೆವುದರಿಂದ ಶಬ್ದಕ್ಕೆ ಅದ್ರವ್ಯತ್ವವನ್ನು ಅಂಗೀಕರಿಸುವ ಪಕ್ಷವೇ ಶ್ಲಾಘ್ಯವಾಗಿರುವುದು; ಹೀಗಾದಮೇಲೆ ದೂರಸ್ಥವಾದ ಶಬ್ದವನ್ನು ಗ್ರಹಿಸುವಾಗ—ಶಬ್ದವಿದ್ದೆಡೆಗೆ ಶ್ರೋತ್ರೇಂದ್ರಿಯದ ಗಮನವನ್ನು ಹೇಳುವ ಶ್ರೋತ್ರವೃತ್ತಿಪಕ್ಷವಾಗಲಿ, ಶಬ್ದವ್ಯಂಜಕವಾದ ವಾಯುವಿನ ಆಗಮನಪಕ್ಷವಾಗಲಿ, ಶಬ್ದಾಶ್ರಯವಾದ ಭೇರ್ಯಾದಿಗಳ ಸೂಕ್ಷ್ಮಾವಯವಗಳ ಆಗಮನಪಕ್ಷವಾಗಲಿ, ಶಬ್ದಾಶ್ರಯವಾದ ವಾಯುವಿನ ಆಗಮನಪಕ್ಷವಾಗಲಿ ಗ್ರಾಹ್ಯವಾಗುವುದು.

ಅಂತು—ಶಬ್ದಕ್ಕೆ ಅದ್ರವ್ಯತ್ವವನ್ನು ಹೇಳುವ ಪಕ್ಷದಲ್ಲಿಯೂ ನೈಯಾಯಿಕರ ವೀಚೀತರಂಗನ್ಯಾಯಪ್ರಕ್ರಿಯೆಯನ್ನು ಅವಲಂಬಿಸಬೇಕಾದ ಆವಶ್ಯಕತೆಯಿಲ್ಲ.

**ಇಂತು ತತ್ತ್ವಶುದ್ಧಿಯೆಂಬ ವಿಶಿಷ್ಟಾದ್ವೈತಪ್ರಕರಣಗ್ರಂಥದೊಳ್ ಅದ್ರವ್ಯಪರಿಚ್ಛೇದದಲ್ಲಿ ಶಬ್ದನಿರೂಪಣಪ್ರಕರಣಂ ದ್ವಿತೀಯಂ.**



# ತೃತೀಯಪ್ರಕರಣಂ.

---

## ೧೦೩೨. ಅಥ ಸ್ಪರ್ಶಲಕ್ಷಣಂ.

ಅಸ್ಮದಾದಿಗಳ ತ್ವಗಿಂದ್ರಿಯದಿಂದ ಗ್ರಹಿಸಲ್ಪಡುವ ಪದಾರ್ಥಕ್ಕಿಂತಲೂ ವಿಜಾತೀಯಗಳಾದ ಶಬ್ದ-ರೂಪ-ರಸ-ಗಂಧಗಳೆಂಬುವು ಯಾವುವುಂಟೋ ಅವುಗಳಿಗಿಂತಲೂ ವಿಲಕ್ಷಣವಾದ ಅದ್ರವ್ಯವು ಸ್ಪರ್ಶವೆನಿಸಿಕೊಳ್ಳುವುದು. ಈ ಲಕ್ಷಣವಾಕ್ಯದಲ್ಲಿ "ಅದ್ರವ್ಯವು ಸ್ಪರ್ಶವೆನಿಸಿಕೊಳ್ಳುವುದು" ಎಂದು ಇಷ್ಟುಮಾತ್ರವನ್ನೇ ಹೇಳುವುದಾದರೆ—ಆಗ ಸ್ಪರ್ಶಭಿನ್ನಗಳಾದ ಶಬ್ದರೂಪರಸಗಂಧಾದಿಗಳಲ್ಲಿ ಸ್ಪರ್ಶಲಕ್ಷಣವು ಅತಿಪ್ರಸಕ್ತವಾಗುವುದು; ಇದಕ್ಕಾಗಿ "ಅಸ್ಮದಾದಿಗಳ" ಎಂದು ಉಪಕ್ರಮಿಸಿ "ವಿಲಕ್ಷಣವಾದ" ಎಂಬುವವರೆಗೆ ಒಂದು ವಿಶೇಣದಳವನ್ನು ಲಕ್ಷಣದಲ್ಲಿ ಸೇರಿಸಿರುವೆವು. ಸ್ಪರ್ಶಭಿನ್ನವಾದ ಶಬ್ದಾದಿಗಳು ಶಬ್ದಾದಿಗಳಿಗಿಂತಲೂ ವಿಲಕ್ಷಣಗಳಲ್ಲವಾದುದರಿಂದ ಲಕ್ಷಣಕ್ಕೆ ಅತಿಪ್ರಸಂಗವಿಲ್ಲ.

"ಶಬ್ದಾದಿಗಳಿಗಿಂತಲೂ ವಿಲಕ್ಷಣವಾದ" ಎಂಬುದಕ್ಕೆ—"ಶಬ್ದಾದಿಗಳನ್ನು ಪ್ರತಿಸಂಬಂಧಿಯಾಗಿ ಪಡೆದಿರುವ ಭೇದಸಮುದಾಯವುಳ್ಳುದಾದ" ಎಂದು ಅರ್ಥವಾಗಿರುವುದು; ಎಂದರೆ—"ಶಬ್ದ-ರೂಪ-ರಸ-ಗಂಧ-ಸಂಯೋಗ-ಶಕ್ತಿ-ಸತ್ತ್ವ-ರಜಸ್ಸು-ತಮಸ್ಸು" ಎಂಬ ಈ ಒಂಬತ್ತು ಅದ್ರವ್ಯಗಳನ್ನು ಪ್ರತಿಯೋಗಿಗಳಾಗಿ ಪಡೆದಿರುವ ಯಾವ ಒಂಬತ್ತು ಭೇದವುಂಟೋ ಅಂಥ ಭೇದಗಳ ಸಮುದಾಯವುಳ್ಳುದಾದ ಎಂದು ಅರ್ಥವಾಗುವುದು.

ಲಕ್ಷಣವಾಕ್ಯದಲ್ಲಿ ಈ ವಿಶೇಷಣದಳವನ್ನು ಮಾತ್ರವೇ ನಿಲ್ಲಿಸಿ "ಅದ್ರವ್ಯವು" ಎಂಬ ವಿಶೇಷ್ಯದಳವನ್ನು ಸೇರಿಸದಿದ್ದರೆ ಆಗ ರೂಪಾದಿಗಳಿಗಿಂತಲೂ ವಿಲಕ್ಷಣವಾದ ಪೃಥಿವ್ಯಾದಿದ್ರವ್ಯಗಳಲ್ಲಿ ಈ ಅದ್ರವ್ಯಲಕ್ಷಣಕ್ಕೆ ಅತಿಪ್ರಸಂಗವುಂಟಾಗುವುದು; ಇದಕ್ಕಾಗಿ ಅದ್ರವ್ಯಪದವನ್ನು ಸೇರಿಸಿ ಅತಿಪ್ರಸಂಗವನ್ನು ತಪ್ಪಿಸಬೇಕು.

ಪೂಜ್ಯರೆ! ಹೀಗೆ "ತದ್ಭಿನ್ನಭಿನ್ನವಾದುದು" ಎಂದು ಭೇದದ್ವಯಘಟಿತವಾದ ಲಕ್ಷಣವನ್ನು ಹೇಳಿ ಏಕೆ ಕ್ಲೇಶಪಡಬೇಕು? "ಅಸ್ಮದಾದಿಗಳ ತ್ವಗಿಂದ್ರಿಯದಿಂದ ಗ್ರಾಹ್ಯವಾದ ಅದ್ರವ್ಯವು ಸ್ಪರ್ಶವೆನಿಸಿಕೊಳ್ಳುವುದು" ಎಂದು ಸುಲಭವಾದ ಲಕ್ಷಣವನ್ನು ಏಕೆ ಅಂಗೀಕರಿಸಬಾರದು?

ಹಾಗೆ ಅಂಗೀಕರಿಸುವುದಾದರೆ—ಉತ್ಪನ್ನವಾದ ಯಾವುದಾದರೊಂದು ಸ್ಪರ್ಶವು ಅಸ್ಮದಾದಿಗಳ ತ್ವಗಿಂದ್ರಿಯಕ್ಕೆ ಗೋಚರವಾಗುವುದಕ್ಕಿಂತಲೂ ಪೂರ್ವದಲ್ಲಿಯೇ ನಷ್ಟವಾಗುವುದಾದರೆ ಅಂಥ ಸ್ಪರ್ಶದಲ್ಲಿ ಅಸ್ಮದಾದಿತ್ವಗಿಂದ್ರಿಯಗ್ರಾಹ್ಯತ್ವವೇ ಬರಲಿಲ್ಲವಾದುದರಿಂದ ಲಕ್ಷಣವು ಲಕ್ಷ್ಯೈಕದೇಶದಲ್ಲಿ ವ್ಯಾಪಿಸಲಿಲ್ಲವಾಗಿ ಅವ್ಯಾಪ್ತಿದೋಷವು ಪ್ರಸಕ್ತವಾಗುವುದು. ಇದಕ್ಕಾಗಿ ಭೇದದ್ವಯಘಟಿತವಾಗಿಯೇ ಲಕ್ಷಣವನ್ನು ಹೇಳಬೇಕು. ಆಗ ಯಾವುದಾದರೊಂದು ಸ್ಪರ್ಶವಿಶೇಷವು ಅಸ್ಮದಾದಿಗಳ ತ್ವಗಿಂದ್ರಿಯಕ್ಕೆ ಗೋಚರವಾಗುವುದಕ್ಕಿಂತಲೂ ಪೂರ್ವದಲ್ಲಿಯೇ ನಷ್ಟವಾದಗೂ ಚಿಂತೆಯಿಲ್ಲ; ಎಂದರೆ ಅಂಥ ಸ್ಪರ್ಶವಿಶೇಷದಲ್ಲಿ ಅಸ್ಮದಾದಿಗಳ ತ್ವಗಿಂದ್ರಿಯಗ್ರಾಹ್ಯತ್ವವಿಲ್ಲದಿದ್ದರೂ ಲಕ್ಷಣಸಮನ್ವಯಕ್ಕೆ ಚ್ಯುತಿಯಿಲ್ಲ; ರೂಪಾದಿಭೇದವು ಅದರಲ್ಲಿಯೂ ಇದ್ದೇ ಇರುವುದರಿಂದ ಭೇದಘಟಿತವಾದ ಲಕ್ಷಣವು ಅದರಲ್ಲಿಯೂ ವ್ಯಾಪಿಸುವುದಾದಪ್ರಯುಕ್ತ ಅವ್ಯಾಪ್ತಿದೋಷಕ್ಕೆ ಪ್ರಸಕ್ತಿಯೇ ಇಲ್ಲ. ಈ ಲಕ್ಷಣವಾಕ್ಯದಲ್ಲಿ "ಅಸ್ಮದಾದಿಗಳ" ಎಂಬ ಪದದ ಪ್ರಯೋಜನವನ್ನು ಶಬ್ದಲಕ್ಷಣದಲ್ಲಿ ತೋರಿಸಿದಂತೆಯೇ ತಿಳಿಯಬೇಕು.

## ೧೦೬೩. ಶೀತೋಷ್ಣಾನುಭಯಭೇದೇನ ಸ್ಪರ್ಶಸ್ಯ ತ್ರೈವಿಧ್ಯಂ.

ಇಂಥ ಸ್ಪರ್ಶವು—ಶೀತಸ್ಪರ್ಶವೆಂದೂ, ಉಷ್ಣಸ್ಪರ್ಶವೆಂದೂ, ಅನುಷ್ಣಾಶೀತಸ್ಪರ್ಶವೆಂದೂ ಮೂರುವಿಧವಾಗಿ ವಿಭಾಗಿಸಲ್ಪಡುವುದು. ಪಂಚಭೂತಗಳೊಳಗೆ ಆಕಾಶವೆಂಬುದೊಂದನ್ನು ಬಿಟ್ಟು ಉಳಿದ ನಾಲ್ಕುಭೂತಗಳಲ್ಲಿಯೇ ಸ್ಪರ್ಶಗುಣವಿರುವುದು. ಅದರಲ್ಲಿಯೂ—ಜಲದಲ್ಲಿ ಶೀತಸ್ಪರ್ಶವೂ, ತೇಜಸ್ಸಿನಲ್ಲಿ ಉಷ್ಣಸ್ಪರ್ಶವೂ, ವಾಯುಪೃಥಿವಿಗಳಲ್ಲಿ ಅನುಷ್ಣಾಶೀತಸ್ಪರ್ಶವೂ ಇರುವುವು.

## ೧೦೬೪. ವಾಯ್ವಾದಿಷು ಸ್ಪರ್ಶಾಂತರೋಪಲಂಭಸ್ಯ ಭೂತಾಂತರಸಂಸರ್ಗನಿಬಂಧನತ್ವಂ.

ಓಹೋ! ಪೃಥಿವಿಯಲ್ಲಿ ಉಷ್ಣಸ್ಪರ್ಶವೂ ಶೀತಸ್ಪರ್ಶವೂ ಇಲ್ಲವಾದರೆ **"ಉಷ್ಣಾ ಪೃಥಿವೀ—ಶೀತಾ ಪೃಥಿವೀ"** (ಪೃಥಿವಿ ಉಷ್ಣವಾಗಿರುವುದು; ಶೀತಳವಾಗಿರುವುದು) ಎಂಬ ಪ್ರತೀತಿಯೂ ವ್ಯವಹಾರವೂ ಹೇಗೆ ಸಂಗತವಾಗುವುವು?

ಮತ್ತು—ವಾಯುವಿನಲ್ಲಿ ಉಷ್ಣಸ್ಪರ್ಶವೂ ಶೀತಸ್ಪರ್ಶವೂ ಇಲ್ಲವಾದರೆ **"ಉಷ್ಣೋ ವಾಯುಃ—ಶೀತೋ ವಾಯುಃ"** (ಗಾಳಿ ಬಿಸಿಯಾಗಿರುವುದು; ತಣ್ಣಗಿರುವುದು) ಎಂಬ ಪ್ರತೀತಿಯೂ ವ್ಯವಹಾರವೂ ಹೇಗೆ ಸಂಗತವಾಗುವುವು?

ಮತ್ತು—ಜಲದಲ್ಲಿ ಉಷ್ಣಸ್ಪರ್ಶವಿಲ್ಲದಿದ್ದರೆ "ಉಷ್ಣಂ ಜಲಂ" ಎಂಬ ಪ್ರತೀತಿಯೂ ವ್ಯವಹಾರವೂ ಹೇಗೆ ಸಂಗತವಾಗುವುವು?

ಹೀಗೆ ಸಂಗತವಾಗುವುವು—ನಾವು ತೋರಿಸಿದ ರೀತಿಯಲ್ಲಿ ಆ ಆ ಭೂತಗಳಿಗೆ ಆ ಆ ಸ್ಪರ್ಶಗಳು ವ್ಯವಸ್ಥಿತಗಳಾಗಿದ್ದರೂ ಮತ್ತೊಂದು ಭೂತದ ಸಂಸರ್ಗಬಲದಿಂದ ಸ್ಪರ್ಶಾಂತರದ ಪ್ರತೀತಿಯೂ ವ್ಯವಹಾರವೂ ಉಂಟಾಗಬಹುದು; ಎಂದರೆ ವಾಯುವಿನಲ್ಲಿಯೂ ಪೃಥಿವಿಯಲ್ಲಿಯೂ ಅನುಷ್ಣಾಶೀತಸ್ಪರ್ಶವು ಸ್ವಾಭಾವಿಕವಾಗಿದ್ದರೂ ಜಲಸಂಪರ್ಕದಿಂದ ಇವುಗಳಲ್ಲಿ ಶೀತಸ್ಪರ್ಶದ ಪ್ರತೀತಿವ್ಯವಹಾರಗಳೂ, ತೇಜಸ್ಸಂಪರ್ಕದಿಂದ ಉಷ್ಣಸ್ಪರ್ಶದ ಪ್ರತೀತಿವ್ಯವಹಾರಗಳೂ ಉಂಟಾಗುವುವು; ಇದರಂತೆಯೇ ಜಲತತ್ತ್ವದಲ್ಲಿ ಶೀತಸ್ಪರ್ಶವು ಸ್ವಾಭಾವಿಕವಾಗಿದ್ದರೂ ತೇಜಸ್ಸಂಪರ್ಕದಿಂದ ಉಷ್ಣಸ್ಪರ್ಶದ ಪ್ರತೀತಿವ್ಯವಹಾರಗಳುಂಟಾಗುವುವು.

## ೧೦೬೫. ವಾಯ್ವಾದಿಷು ಪ್ರತೀಯಮಾನಸ್ಯಾಪಿ ಸ್ಪರ್ಶಾಂತರಸ್ಯ ಆರೋಪಿತತ್ವಮೇವ.

ಹೀಗೆ ಸ್ಪರ್ಶಾಂತರದ ಪ್ರತೀತಿಯೂ ವ್ಯವಹಾರವೂ ಉಂಟಾದರೂ ಆ ಸ್ಪರ್ಶಾಂತರವು ಇವುಗಳಿಗೆ ಸ್ವಾಭಾವಿಕವಲ್ಲ; ಔಪಾಧಿಕವೂ ಅಲ್ಲ; ಆರೋಪಿತವಾಗಿರುವುದು-; ವಾಯುಪೃಥಿವಿಗಳಲ್ಲಿ ಶೀತಸ್ಪರ್ಶವು ತೋರುವ ಕಾಲದಲ್ಲಿ ಆ ಶೀತಸ್ಪರ್ಶವು ವಾಯುಪೃಥಿವಿಗಳ ಗುಣವೆಂದು ತಿಳಿಯಬಾರದು; ವಾಯುಪೃಥಿವಿಗಳಲ್ಲಿ ಸಂಸೃಷ್ಟವಾಗಿರುವ ಜಲಪರಮಾಣುಗಳ ಸ್ಪರ್ಶವೇ ವಾಯುಪೃಥಿವಿಗಳಲ್ಲಿ ಆರೋಪಿತವಾಗಿ ತೋರುವುದೆಂದು ತಿಳಿಯಬೇಕು; ಇದರಂತೆ ವಾಯುಪೃಥಿವಿಗಳಲ್ಲಿ ಉಷ್ಣಸ್ಪರ್ಶವು ತೋರುವ ಕಾಲದಲ್ಲಿ ಇವುಗಳೊಳಗೆ ಸಂಸೃಷ್ಟವಾಗಿರುವ ತೇಜಃಪರಮಾಣುಗಳ ಉಷ್ಣಸ್ಪರ್ಶವೇ ಇವುಗಳಲ್ಲಿ ಆರೋಪಿತವಾಗಿರುವುದೆಂದೂ ತಿಳಿಯಬೇಕು; ಹಾಗೆಯೇ ಜಲತತ್ತ್ವದಲ್ಲಿ ಉಷ್ಣಸ್ಪರ್ಶವು ತೋರುವ ಕಾಲದಲ್ಲಿ ಇದರೊಳಗೆ ಸಂಸೃಷ್ಟವಾಗಿರುವ ತೇಜಃಪರಮಾಣುಗಳ ಉಷ್ಣಸ್ಪರ್ಶವೇ ಇದರಲ್ಲಿ ಆರೋಪಿತವಾಗಿರುವುದೆಂದು ತಿಳಿಯಬೇಕು.

## ೧೦೬೬. ಭೂತಾಂತರಸಂಸರ್ಗಸ್ಯ ನೈಜಸ್ಪರ್ಶತಿರಸ್ಕಾರಹೇತುತ್ವಮಪಿ.

ಹೀಗೆ ವಾಯುಪೃಥಿವಿಜಲಗಳಲ್ಲಿ ಭೂತಾಂತರಸಂಪರ್ಕವು ಸ್ಪರ್ಶಾಂತರದ ಆರೋಪಕ್ಕೂ ಪ್ರತೀತಿಗೂ ವ್ಯವಹಾರಕ್ಕೂ ಕಾರಣವಾದಂತೆ ಇವುಗಳ ನೈಜವಾದ ಸ್ಪರ್ಶದ ತಿರಸ್ಕಾರಕ್ಕೂ ಅಪ್ರತೀತಿಗೂ ಅವ್ಯವಹಾರಕ್ಕೂ ಈ ಭೂತಾಂ

ತರಸಂಪರ್ಕವೇ ಕಾರಣವಾಗಿರುವುದು; ಆದುದರಿಂದಲೇ ವಾಯುಪೃಥಿವಿಗಳ ಲ್ಲಿಯೂ ಜಲದಲ್ಲಿಯೂ ಭೂತಾಂತರಸಂಪರ್ಕವಿರುವಾಗ ಇವುಗಳ ಅನುಷ್ಣಾಶೀತ ಸ್ಪರ್ಶವೂ ಶೀತಸ್ಪರ್ಶವೂ ತೋರುವುದಿಲ್ಲ.

## ೧೦೬೭. ದೀಪಪ್ರಭಾರತ್ನಪ್ರಭಯೋಃ ಸ್ಪರ್ಶಾನುಪಲಂಭೇ ಕಾರಣನಿರೂಪಣಂ

ಹೀಗೆ ಸ್ವೈಜವಾದ ಗುಣಕ್ಕೆ (ಸ್ಪರ್ಶಕ್ಕೆ) ಭೂತಾಂತರಸಂಪರ್ಕದಿಂದ ತಿರಸ್ಕಾರವಿರುವುದರಿಂದಲೇ—ದೀಪಪ್ರಭೆ-ರತ್ನಪ್ರಭೆ ಎಂಬ ತೇಜೋದ್ರವ್ಯಗಳಲ್ಲಿರುವ ಉಷ್ಣಸ್ಪರ್ಶವನ್ನು ತ್ವಗಿಂದ್ರಿಯದಿಂದ ಗ್ರಹಿಸಲು ಅವಕಾಶವಿಲ್ಲ; ಎಂದರೆ ದೀಪಪ್ರಭೆಯೂ ರತ್ನಪ್ರಭೆಯೂ ನಮ್ಮ ಶರೀರದಮೇಲೆ ವ್ಯಾಪಿಸಿರುವಾಗ ಅವುಗಳನ್ನು ನಾವು ತ್ವಗಿಂದ್ರಿಯದಿಂದ ಗ್ರಹಿಸದಿರುವುದಕ್ಕೆ ಭೂತಾಂತರದಿಂದ ಅವುಗಳ ಸ್ಪರ್ಶಕ್ಕೆ ತಿರಸ್ಕಾರವುಂಟಾಗಿರುವಿಕೆಯೇ ಕಾರಣವಾಗಿರುವುದು. ತ್ವಗಿಂದ್ರಿಯದಿಂದ ದ್ರವ್ಯಪ್ರತ್ಯಕ್ಷವುಂಟಾಗಬೇಕಾದರೆ ಆ ದ್ರವ್ಯದಲ್ಲಿ ಸ್ಪರ್ಶವಿದ್ದೇ ಇರಬೇಕು; ಸ್ಪರ್ಶಗುಣವಿಲ್ಲದಿದ್ದರೆ ತ್ವಗಿಂದ್ರಿಯದಿಂದ ಆ ದ್ರವ್ಯದ ಪ್ರತ್ಯಕ್ಷವುಂಟಾಗುವುದಿಲ್ಲ. ಏತಕ್ಕೆಂದರೆ ಸ್ಪರ್ಶಗುಣವನ್ನು ಮುಂದಿಟ್ಟುಕೊಂಡೇ ದ್ರವ್ಯವನ್ನು ಪ್ರತ್ಯಕ್ಷೀಕರಿಸುವಿಕೆಯೆಂಬುದು ತ್ವಗಿಂದ್ರಿಯದ ಸ್ವಭಾವವಾಗಿರುವುದು; ದೀಪಪ್ರಭೆ-ರತ್ನಪ್ರಭೆ ಇವುಗಳಲ್ಲಿ ಸ್ಪರ್ಶಗುಣವಿದ್ದರೂ ಅದರ ಗ್ರಹಣಕ್ಕೆ ಭೂತಾಂತರಸಂಸರ್ಗವು ಪ್ರತಿಬಂಧಕವಾದುದರಿಂದ ಆ ಸ್ಪರ್ಶಗುಣವು ತಿರಸ್ಕೃತವಾಗಿರುವಕಾರಣ ತ್ವಗಿಂದ್ರಿಯದಿಂದ ಅದನ್ನು ಗ್ರಹಿಸುವುದಕ್ಕೆ ಅವಕಾಶವಿಲ್ಲವಾಗಿ ಅಂಥ ತಿರಸ್ಕೃತಸ್ಪರ್ಶಗುಣಾಶ್ರಯಗಳಾದ ಆ ದ್ರವ್ಯಗಳನ್ನು (ದೀಪಪ್ರಭೆ-ರತ್ನಪ್ರಭೆಗಳನ್ನು) ತ್ವಗಿಂದ್ರಿಯದಿಂದ ಗ್ರಹಿಸಲಾಗುವುದಿಲ್ಲ.

"ದೀಪಪ್ರಭೆಯಲ್ಲಿಯೂ ರತ್ನಪ್ರಭೆಯಲ್ಲಿಯೂ ಸಂಸೃಷ್ಟವಾಗಿರುವ ಭೂತಾಂರವು ಯಾವುದು" ಎಂಬ ಪ್ರಶ್ನೆಗೆ—"ವಾಯುಭಾಗವಾಗಲಿ ಪೃಥಿವಿಯ ಅತಿ ಸೂಕ್ಷ್ಮಭಾಗವಾಗಲಿ ಅವುಗಳಲ್ಲಿ ಸಂಸೃಷ್ಟವಾಗಿರುವುದು" ಎಂಬ ಪ್ರತ್ಯುತ್ತರವನ್ನು ತಿಳಿಯಬಹುದು.

## ೧೦೬೮. ದೀಪಪ್ರಭಾರತ್ನಪ್ರಭಯೋರನುಪ್ರವಿಷ್ಟಭೂತಾಂತರಸ್ಪರ್ಶಸ್ಯಾಪ್ಯನುಪಲಂಭೇ ಕಾರಣನಿರೂಪಣಂ.

ಓಹೋ! ಇಂಥ ಭೂತಾಂತರಸಂಸರ್ಗದಿಂದ ದೀಪಪ್ರಭೆ-ರತ್ನಪ್ರಭೆಗಳ ಉಷ್ಣಸ್ಪರ್ಶಕ್ಕೆ ತಿರಸ್ಕಾರವಿರುವುದಾದರೆ ತ್ವಗಿಂದ್ರಿಯದಿಂದ ಆ ಉಷ್ಣಸ್ಪರ್ಶಕ್ಕೆ

ಗ್ರಹಣವಾಗಬೇಡ ; ಸಂಸೃಷ್ಟವಾಗಿರುವ ಭೂತಾಂತರದಲ್ಲಿರುವ ಅನುಷ್ಣಾಶೀತಸ್ಪ ರ್ಶಕ್ಕೆ ತ್ವಗಿಂದ್ರಿಯದಿಂದ ಗ್ರಹಣವುಂಟಾಗಲು ಅಡ್ಡಿಯೇನು ? ಅದು ಏಕೆ ಉಂ ಟಾಗುವುದಿಲ್ಲ ? ಜಲದಲ್ಲಿ ಅಗ್ನಿಸಂಪರ್ಕವಿರುವಾಗ ಜಲದ ಶೀತಸ್ಪರ್ಶಕ್ಕೆ ಪ್ರತೀತಿ ಯಿಲ್ಲದಿದ್ದರೂ ಸಂಸೃಷ್ಟವಾಗಿರುವ ಅಗ್ನಿಯ ಉಷ್ಣಸ್ಪರ್ಶಕ್ಕೆ ಪ್ರತೀತಿಯಿಲ್ಲವೆಂಬು ದಿಲ್ಲವಷ್ಟೆ ?

ಹವುದು ; ಜಲದಲ್ಲಿ ಹಾಗೆ ಸಂಭವಿಸಿದರೂ ದೀಪಪ್ರಭೆ-ರತ್ನಪ್ರಭೆಗಳಲ್ಲಿ ಹಾಗೆ ಸಂಭವಿಸುವುದಿಲ್ಲ ; ಏತಕ್ಕೆಂದರೆ—ಜಲದಲ್ಲಿ ಸಂಸೃಷ್ಟವಾಗಿರುವ ಅಗ್ನಿಯ ಉಷ್ಣಸ್ಪರ್ಶವು ಉದ್ಭೂತತ್ವಾವಸ್ಥೆಯನ್ನು ಪಡೆದಿರುವುದರಿಂದ ತ್ವಗಿಂದ್ರಿಯಕ್ಕೆ ಗೋಚರವಾಗಬಹುದು ; ದೀಪಪ್ರಭೆ—ರತ್ನಪ್ರಭೆಗಳಲ್ಲಿ ಸಂಸೃಷ್ಟವಾಗಿರುವ ವಾಯುಭಾಗಗಳ ಅಥವಾ ಪೃಥಿವೀಭಾಗಗಳ ಅನುಷ್ಣಾಶೀತಸ್ಪರ್ಶವು ಉದ್ಭೂತ ತ್ವಾವಸ್ಥೆಯನ್ನು ಪಡೆಯದೆ ಅನುದ್ಭೂತವಾಗಿರುವುದರಿಂದ ತ್ವಗಿಂದ್ರಿಯಕ್ಕೆ ಅದು ಗೋಚರವಾಗಲಾರದು .

## ೧೧೯೯. ದೀಪಪ್ರಭಾರತ್ನಪ್ರಭಯೋಃ ಸ್ಪರ್ಶಸ್ಯ ತಿರಸ್ಕೃತ ತ್ವಪಕ್ಷನಿರಾಕರಣಪೂರ್ವಕಂ ಅನುದ್ಭೂತತ್ವಪಕ್ಷ ಪ್ರದರ್ಶನಂ

ಹೀಗೆ ದೀಪಪ್ರಭೆ-ರತ್ನಪ್ರಭೆಗಳಲ್ಲಿ ಭೂತಾಂತರಸಂಸರ್ಗವು ಇವುಗಳ ಸ್ಪರ್ಶ ಗುಣದ ತಿರಸ್ಕಾರಕ್ಕೆ ಕಾರಣವಾಗಿರುವುದೆಂಬುದು ಕೆಲವರ ಮತವಾಗಿರುವುದು. ಇಲ್ಲಿ ವಸ್ತುಸ್ಥಿತಿಯನ್ನು ವಿಚಾರಮಾಡಿನೋಡಿದರೆ ಇವುಗಳ ಸ್ಪರ್ಶಗುಣಕ್ಕೆ ತಿರ ಸ್ಕಾರವನ್ನು ಒಪ್ಪಬೇಕೆಂಬುದಿಲ್ಲವೆಂದೇ ನಿಷ್ಕರ್ಷಿಸಬಹುದು. ; ಹೇಗೆಂದರೆ— ತ್ವಗಿಂದ್ರಿಯದಿಂದ ದ್ರವ್ಯಪ್ರತ್ಯಕ್ಷವುಂಟಾಗುವುದಕ್ಕೆ ಸ್ಪರ್ಶಸದ್ಭಾವಮಾತ್ರವೇ ಸಾಲದು ; ಆ ಸ್ಪರ್ಶವು ಉದ್ಭೂತತ್ವಾವಸ್ಥೆಯನ್ನು ಪಡೆದೂ ಇರಬೇಕು ; ದೀಪ ಪ್ರಭೆ—ರತ್ನಪ್ರಭೆಗಳಲ್ಲಿರುವ ಉಷ್ಣಸ್ಪರ್ಶವು ಉದ್ಭೂತತ್ವಾವಸ್ಥೆಯನ್ನು ಪಡೆ ಯದೆ ಅನುದ್ಭೂತಗಳಾಗಿರುವುದರಿಂದಲೇ ತ್ವಗಿಂದ್ರಿಯವು ಅದನ್ನು ಗ್ರಹಿಸಲಾರ ದೆಂದು ಸುಲಭವಾಗಿ ಹೇಳಿ ನಿರ್ವಹಿಸಬಹುದಾಗಿರುವಲ್ಲಿ ಆ ಗುಣದ ತಿರಸ್ಕಾರ ವನ್ನು ಏಕೆ ಒಪ್ಪಬೇಕು ?

## ೧೧೨೦. ಅಪಾಕಜಗುಣಸ್ಯ ಪಾಕಾಂತರಾವಿನಾಶ್ಯತ್ವೋಪ ಪಾದನಂ

ಅದೇತಕ್ಕೆ ? ವಾಯು-ಪೃಥಿವಿ-ಜಲಗಳಲ್ಲಿ ಭೂತಾಂತರಸಂಸರ್ಗವುಂಟಾದಾಗ ಇವುಗಳ ನೈಜವಾದ ಸ್ಪರ್ಶವು ನಶಿಸುವುದೆಂದೂ ಸ್ಪರ್ಶಾಂತರವು ಹುಟ್ಟುವು ದೆಂದೂ ಏಕೆ ಹೇಳಬಾರದು ?

ಇಲ್ಲ; ಹಾಗೆ ಹೇಳಲಾಗುವುದಿಲ್ಲ; ಪಾಕದಿಂದ ಉಂಟಾದ ಗುಣವೇ ಪಾಕಾಂತರದಿಂದ ನಶಿಸಬಹುದು; ವಾಯು-ಪೃಥಿವಿ-ಜಲಗಳಲ್ಲಿರುವ ಸ್ಪರ್ಶಗುಣವು ಅವುಗಳಿಗೆ ಸ್ವೈಜವಾದಪ್ರಯುಕ್ತ ಪಾಕದಿಂದ ಹುಟ್ಟಲಿಲ್ಲವಾಗಿ ಪಾಕಾಂತರ ದಿಂದ ಅದು ನಶಿಸಲಾರದು; ಹಾಗೆ ನಶಿಸಿಹೋಗುವುದಾದರೆ ಆಗಂತುಕವಾದ ಭೂತಾಂತರಸಂಸರ್ಗವು ತಪ್ಪಿದಮೇಲೆ ಆ ಸ್ವೈಜಗುಣವು ತೋರದೆ ಹೋಗಬೇಕಾ ಗುವುದು. ಜಲದಲ್ಲಿ ಸಂಸೃಷ್ಟವಾಗಿರುವ ಅಗ್ನಿ ಕ್ರಮಕ್ರಮವಾಗಿ ಹೊರಗೆ ಹೊರ ಟುಹೋದಮೇಲೆ ಜಲದ ಸ್ವಾಭಾವಿಕವಾದ ಶೀತಸ್ಪರ್ಶವು ಪುನಃ ತೋರುವು ದಷ್ಟೆ?

ಆದಕಾರಣ—ವಾಯುಪೃಥಿವಿಗಳು ಎಂದಿಗೂ ಅನುಷ್ಣಾಶೀತಗಳಾಗಿಯೇ ಇರುವುವು; ಎಂದಿಗೂ ಉಷ್ಣಶೀತಗಳಾಗಲಾರವು; ಜಲವು ಎಂದಿಗೂ ಶೀತವಾ ಗಿಯೇ ಇರುವುದು; ಎಂದಿಗೂ ಉಷ್ಣವಾಗಲಾರದು. ವಾಯುಪೃಥಿವಿಗಳ ಉಷ್ಣತ್ವ ಶೀತತ್ವಪ್ರತೀತಿ ಅವುಗಳಲ್ಲಿ ಹೊಕ್ಕಿರುವ ಅಗ್ನಿಜಲಗಳಿಂದ ಬಂದುದು; ಜಲದ ಉಷ್ಣತ್ವಪ್ರತೀತಿ ಅದರಲ್ಲಿ ನುಗ್ಗಿರುವ ಅಗ್ನಿಯಿಂದ ಬಂದುದು.

## ೧೦೭೧ ಭೂತಾಂತರೇಷ್ವನುಪ್ರವಿಷ್ಟಸ್ಯಾಗ್ನೇಃ ರೂಪಾನು ಪಲಂಭೇ ಸ್ಪರ್ಶೋಽಪಲಂಭೇ ಚ ಕಾರಣನಿರೂಪಣಂ.

ಓಹೋ? ವಾಯುಪೃಥಿವಿಜಲಗಳಲ್ಲಿ ಅಗ್ನಿನುಗ್ಗಿರುವುದಾದರೆ ಆಗ ಆ ಅಗ್ನಿಯ ರೂಪವು ಏಕೆ ದೃಷ್ಟಿಗೋಚರವಾಗುವುದಿಲ್ಲ? ಸಮಾನವಾದ ರೂಪಾಂತರ ದಿಂದ ಅದಕ್ಕೆ ತಿರಸ್ಕಾರವಿರುವಕಾರಣ ಅದು ದೃಷ್ಟಿಗೋಚರವಾಗುವುದಿಲ್ಲವೆಂದು ತಿಳಿಯಬಹುದು; ಎಂದರೆ—ವಾಯ್ವಾದಿಗಳಲ್ಲಿ ನುಗ್ಗಿರುವ ಅಗ್ನಿಯ ರೂಪಕ್ಕೆ ವಾಯ್ವಾದಿಗಳಲ್ಲಿ ನುಗ್ಗಿರುವ ಪೃಥಿವೀಜಲಭಾಗಗಳ ರೂಪದಿಂದ ತಿರಸ್ಕಾರವಿರುವ ಕಾರಣ ಅದು ದೃಷ್ಟಿಗೋಚರವಾಗುವುದಿಲ್ಲವೆಂದು ತಿಳಿಯಬಹುದು.

ಇಲ್ಲಿಯೂ ವಸ್ತುಸ್ಥಿತಿಯನ್ನು ನಿರೂಪಿಸಿ ನೋಡುವುದಾದರೆ—ವಾಯ್ವಾ ದಿಗಳಲ್ಲಿ ಒಳಹೊಕ್ಕಿರುವ ಅಗ್ನಿಯ ರೂಪಕ್ಕೆ ವಾಯ್ವಾದಿಗಳಲ್ಲಿ ಒಳಹೊಕ್ಕಿ ರುವ ಭೂತಾಂತರಗಳ ರೂಪದಿಂದ ತಿರಸ್ಕಾರವನ್ನು ಹೇಳುವುದು ಸೂಕ್ತವಾಗಿಲ್ಲ; ಅಂಥ ಅಗ್ನಿಯ ರೂಪವು ಉದ್ಭೂತತ್ವಾವಸ್ಥೆಯನ್ನು ಪಡೆಯದೆ ಅನುದ್ಭೂತತ್ವಾ ವಸ್ಥೆಯನ್ನು ಪಡೆದಿರುವುದರಿಂದಲೇ ದೃಷ್ಟಿಗೆ ಗೋಚರವಾಗುವುದಿಲ್ಲವೆಂದು ಸುಲಭ ವಾಗಿ ಹೇಳಿಬಿಡಬಹುದು; ಹಾಗಿಲ್ಲದೆ ರೂಪಾಂತರದಿಂದ ತಿರಸ್ಕಾರವನ್ನೇ ಹೇಳು ವುದಾದರೆ ಒಂದು ತೊಂದರೆಯಿರುವುದು ಏನೆಂದರೆ—ಅಂಥ ಅಗ್ನಿಯ ರೂಪ

ವನ್ನು ತಿರಸ್ಕರಿಸಬಲ್ಲುದಾದ ಭೂತಾಂತರರೂಪವು ಉದ್ಭೂತವಾಗಿರುವುದೋ? ಅಥವಾ ಅನುದ್ಭೂತವಾಗಿರುವುದೋ? ಉದ್ಭೂತವಾಗಿರುವುದಾದರೆ ಅದು ದೃಷ್ಟಿಗೆ ಏಕೆ ಗೋಚರವಾಗುವುದಿಲ್ಲ? ಅನುದ್ಭೂತವಾಗಿರುವುದಾದರೆ ಅಂಥ ರೂಪವು ಮತ್ತೊಂದರ ರೂಪವನ್ನು ಹೇಗೆ ತಿರಸ್ಕರಿಸಬಲ್ಲುದು? ಎಂಬ ತೊಂದರೆಯುಂಟಾಗುವುದು; ಆದಕಾರಣ ಅಗ್ನಿ ಭೂತಾಂತರದಲ್ಲಿ ಪ್ರವೇಶಿಸುವಾಗ ಅದರ ರೂಪವು ಅನುದ್ಭೂತತ್ವಾವಸ್ಥೆಯನ್ನು ಪಡೆವುದೆಂದೇ ಹೇಳಬೇಕು. ಅದರ ಸ್ಪರ್ಶಗುಣಕ್ಕಾದರೆ ಸ್ಪರ್ಶಾಂತರದಿಂದ ತಿರಸ್ಕಾರವಿಲ್ಲ; ಅಥವಾ ಅನುದ್ಭೂತತ್ವಾವಸ್ಥೆಯಿಲ್ಲ: ಆದುದರಿಂದಲೇ ಅದು ತ್ವಗಿಂದ್ರಿಯಕ್ಕೆ ಗೋಚರವಾಗುವುದು.

## ೧೦೭೨. ಅನುಷ್ಣಾಶೀತಸ್ಯಾಪಿ ಭಾವರೂಪಸ್ಪರ್ಶವಿಶೇಷತ್ವಸಮರ್ಥನಂ.

ಪೂಜ್ಯರೆ! ವಾಯುಪೃಥಿವಿಗಳಲ್ಲಿ ಅನುಷ್ಣಾಶೀತವೆಂಬುದೊಂದು ಸ್ಪರ್ಶವಿರುವುದೆಂದು ಹೇಳಿದಿರಿ; ಇದು ಸಂಗತವಲ್ಲ; ಜಲದಲ್ಲಿ ಶೀತಸ್ಪರ್ಶವೂ ತೇಜಸ್ಸಿನಲ್ಲಿ ಉಷ್ಣಸ್ಪರ್ಶವೂ ಇರುವುದೇನೋ ಸರಿ; ವಾಯುಪೃಥಿವಿಗಳಲ್ಲಿ ಈ ಎರಡು ಬಗೆಯ ಸ್ಪರ್ಶಗಳೂ ಇಲ್ಲವೆಂದು ಹೇಳಬಹುದೇ ಹೊರತು ಈ ಎರಡಕ್ಕಿಂತಲೂ ವಿಲಕ್ಷಣವಾದುದೊಂದು ಸ್ಪರ್ಶವು ಅವುಗಳಲ್ಲಿ ಇರುವುದೆಂದು ಹೇಗೆ ಹೇಳಲಾದೀತು? ಎಂದು ಆಶಂಕಿಸಲಾಗದು; ಏತಕ್ಕೆಂದರೆ—ವಾಯುಪೃಥಿವಿಗಳಲ್ಲಿರುವ ಸ್ಪರ್ಶವು ಉಷ್ಣಸ್ಪರ್ಶ-ಶೀತಸ್ಪರ್ಶಗಳ ಅಭಾವರೂಪವಾದುದಾದರೆ ಆಕಾಶದಲ್ಲಿಯೂ ಶೀತೋಷ್ಣಸ್ಪರ್ಶಗಳ ಅಭಾವವಿರುವುದರಿಂದ ಅದರಲ್ಲಿಯೂ ಸ್ಪರ್ಶವುಂಟೆಂದು ತೋರಬೇಕಾಗಿ ಬರುವುದು; ಅಥವಾ ಆಕಾಶದಂತೆ ವಾಯುಪೃಥಿವಿಗಳಲ್ಲಿಯೂ ಸ್ಪರ್ಶವೇ ಇಲ್ಲವೆಂದು ತೋರಬೇಕಾಗಿ ಬರುವುದು; ಈ ಎರಡು ಪಕ್ಷಗಳಲ್ಲಿಯೂ ಇಷ್ಟಾಪತ್ತಿಯನ್ನು ಹೇಳಲಾಗುವುದಿಲ್ಲ; ಆಕಾಶದಲ್ಲಿ ಶಬ್ದವೆಂಬ ಒಂದೇ ಗುಣವಿರುವುದಲ್ಲದೆ ಸ್ಪರ್ಶಾದಿಗುಣಾಂತರವಿಲ್ಲವೆಂಬುದೂ, ವಾಯ್ವಾದಿಗಳಲ್ಲಿ ಸ್ಪರ್ಶಗುಣವೂ ಉಂಟೆಂಬುದೂ ಶ್ರುತಿ ಸ್ಮೃತಿ ಮೊದಲಾದ ಶಾಸ್ತ್ರಗಳಿಂದ ಸಿದ್ಧವಾಗಿರುವುದಷ್ಟೆ? ಆದಕಾರಣ ಶೀತಸ್ಪರ್ಶಕ್ಕಿಂತಲೂ ಉಷ್ಣಸ್ಪರ್ಶಕ್ಕಿಂತಲೂ ವಿಲಕ್ಷಣವಾಗಿರುವ ಭಾವರೂಪವಾದ ಒಂದಾನೊಂದು ಸ್ಪರ್ಶವನ್ನು ಪೃಥಿವಿಯಲ್ಲಿಯೂ ವಾಯುವಿನಲ್ಲಿಯೂ ಅಂಗೀಕರಿಸಬೇಕು; ಅದಕ್ಕೇ ಅನುಷ್ಣಾಶೀತಸ್ಪರ್ಶವೆಂಬ ಸಂಜ್ಞೆಯಿರುವುದು; ಇದೇ ಮೂರನೆಯ ಸ್ಪರ್ಶವಾಗಿರುವುದು.

ಅದೇತಕ್ಕೆ ? ವಾಯುವಿನಲ್ಲಿಯೂ ಪೃಥಿವಿಯಲ್ಲಿಯೂ ಇರುವ ಸ್ಪರ್ಶವನ್ನು ಸ್ಪರ್ಶಸಾಮಾನ್ಯವೆಂದು ಹೇಳಿಬಿಡಬಹುದಲ್ಲವೆ? ಇಲ್ಲ; ಹಾಗೆ ಹೇಳಲಾಗುವುದಿಲ್ಲ. " **ನಿರ್ವಿಶೇಷಂ ನ ಸಾಮಾನ್ಯಂ** ' ಎಂಬ ನ್ಯಾಯದಿಂದ ಸಾಮಾನ್ಯಕ್ಕೆ ವಿಶೇಷದಲ್ಲಿ ಪರ್ಯವಸಾನವು ಆವಶ್ಯಕವಾದ್ದರಿಂದ ವಿಶೇಷರಹಿತವಾದ ಸಾಮಾನ್ಯವನ್ನು ಅಂಗೀಕರಿಸಲಾಗುವುದಿಲ್ಲವಷ್ಟೆ ?

ಅದೇತಕ್ಕೆ ? ಸ್ಪರ್ಶಸಾಮಾನ್ಯಪ್ರತೀತಿಯೆಂದರೆ ಸ್ಪರ್ಶಮಾತ್ರದ ಪ್ರತೀತಿ; ಸ್ಪರ್ಶವಿಶೇಷಪ್ರತೀತಿಯೆಂದರೆ--ಶೀತಸ್ಪರ್ಶತ್ವ-ಉಷ್ಣಸ್ಪರ್ಶತ್ವಗಳೆಂಬ ವಿಶೇಷಧರ್ಮಗಳ ಪ್ರತೀತಿ ; ವಾಯುವಿನಲ್ಲಿಯೂ ಪೃಥಿವಿಯಲ್ಲಿಯೂ ಅಂಥ ವಿಶೇಷಧರ್ಮಗಳಿದ್ದರೂ ಅವುಗಳಿಗೆ ಪ್ರತೀತಿಯಿಲ್ಲವೆಂದೂ ಸ್ಪರ್ಶತ್ವವೆಂಬ ಸಾಮಾನ್ಯಧರ್ಮಕ್ಕೆ ಮಾತ್ರವೇ ಪ್ರತೀತಿಯಿರುವುದೆಂದೂ ಹೇಳುವೆವು ; ಆಗ ಉಭಯವಿಲಕ್ಷಣವಾದ ಅನುಷ್ಣಾಶೀತವೆಂಬ ಮೂರನೆಯ ಸ್ಪರ್ಶವನ್ನು ಅವುಗಳಲ್ಲಿ ಒಪ್ಪಬೇಕಾದುದಿಲ್ಲವಷ್ಟೆ ?

ಇಲ್ಲ ; ಹಾಗೆ ಹೇಳಲಾಗುವುದಿಲ್ಲ ; ವಾಯುವಿನಲ್ಲಿಯೂ ಪೃಥಿವಿಯಲ್ಲಿಯೂ ಯಾವಾಗಲೂ ಉಪಲಬ್ಧವಾಗದೆಯೇ ಇರುವ ಅಂಥ ವಿಶೇಷಧರ್ಮಗಳನ್ನು (ಉಷ್ಣಸ್ಪರ್ಶತ್ವಶೀತಸ್ಪರ್ಶತ್ವಗಳನ್ನು) ಕಲ್ಪಿಸಿಕೊಡತಕ್ಕ ಗಮಕವು ಅವುದೂ ಇಲ್ಲವಷ್ಟೆ ?

## ೧೦೭೩. ಅನುಮಾನೇನ ವಾಯೌ ಶೀತಸ್ಪರ್ಶವತ್ತ್ವಾಶಂಕಾ.

ಆಯುರ್ವೇದಪ್ರಕ್ರಿಯೆಯನ್ನು ಅನುಸರಿಸಿದ ಕೆಲವರು ಇಲ್ಲಿ ಹೇಳುವುದೇನೆಂದರೆ—" **ವೃದ್ಧಿಸ್ಸಮಾನೈಸ್ಸರ್ವೇಷಾಂ ವಿಪರೀತೈರ್ವಿಪರ್ಯಯಃ** " ಎಂಬುದು ವೈದ್ಯಶಾಸ್ತ್ರದಲ್ಲಿಯೂ ಲೋಕದಲ್ಲಿಯೂ ಪ್ರಸಿದ್ಧವಾಗಿರುವುದು ; ಎಂದರೆ— " ಯಾವ ಪದಾರ್ಥವು ಯಾವ ಪದಾರ್ಥದಿಂದ ವೃದ್ಧಿಪಡಿಸಲ್ಪಡುವುದೋ ಆ ಪದಾರ್ಥವು ಆ ಪದಾರ್ಥಕ್ಕೆ ಸಜಾತೀಯವಾಗಿರುವುದು " ಎಂಬುದಾಗಿ ವೈದ್ಯಶಾಸ್ತ್ರದ ನಿಯಮವುಂಟು ; ಶೀತದ್ರವ್ಯವಾದ ಜಲವು ಶರೀರದಲ್ಲಿ ವಾಯುವನ್ನು ವೃದ್ಧಿಪಡಿಸುವುದರಿಂದ ವಾಯು ಜಲಕ್ಕೆ ಸಜಾತೀಯವೇ ಆಗಬೇಕಾದಕಾರಣ ಜಲದಲ್ಲಿರುವ ಶೀತಸ್ಪರ್ಶಗುಣವೇ ವಾಯುವಿನಲ್ಲಿರುವುದಲ್ಲದೆ ಬೇರೆ ಇಲ್ಲ ; ಆದಕಾರಣ " **ವಾಯುಃ ಶೀತಸ್ಪರ್ಶವಾನ್, ಶೀತದ್ರವ್ಯಸಂವರ್ಧ್ಯಮಾನತ್ವಾತ್ ಶ್ಲೇಷ್ಮವತ್** " ಎಂಬ ಅನುಮಾನಪ್ರಮಾಣದಿಂದ ವಾಯುವಿನಲ್ಲಿ ಶೀತಸ್ಪರ್ಶಗುಣವು ಸಿದ್ಧಿಸುವುದು " ಎಂದು ಹೇಳುವರು.

## ೧೦೭೪. ಪ್ರತಿಬಂದ್ಯಾ ತನ್ನಿರಾಕರಣಂ.

ಇಂಥವರ ಮತವನ್ನು ನಿರಾಕರಿಸುವುದಕ್ಕಾಗಿ ನಾವೂ ಒಂದು ಪ್ರತಿಬಂದಿಯನ್ನು ಅವಲಂಬಿಸಬೇಕು. ಹೇಗೆಂದರೆ—ವಾಯುವಿನಲ್ಲಿ ಉಕ್ತರೀತಿಯಾಗಿ ಜಲಸಜಾತೀಯತ್ವವಿದ್ದರೂ ಜಲದಂತೆ ಇದರಲ್ಲಿಯೂ ಶೀತಸ್ಪರ್ಶವೇ ಇರಬೇಕೆಂಬ ನಿರ್ಬಂಧವೇನು ? ಆ ಆ ವಸ್ತುಗಳ ಪ್ರಭಾವವಿಶೇಷದಿಂದ ಭಿನ್ನಭಿನ್ನ ಗುಣಗಳೇ ಅವುಗಳಲ್ಲಿ ಏಕೆ ಇರಬಾರದು ? ಖರ್ಜೂರದಲ್ಲಿಯೂ ಹಲಸಿನ ತೊಳೆಯಲ್ಲಿಯೂ ಮಧುರರಸವೆಂಬ ಒಂದೇ ರಸವು ತುಲ್ಯವಾಗಿದ್ದರೂ—ಹಲಸಿನ ತೊಳೆಯಿಂದ ಶರೀರದಲ್ಲಿ ವಾತಧಾತು ಎಷ್ಟು ವೃದ್ಧಿಯಾಗುವುದೋ, ಖರ್ಜೂರದಿಂದ ಅಷ್ಟು ವೃದ್ಧಿಯಾಗುವುದಿಲ್ಲವೆಂಬ ಪ್ರಭಾವವೈಲಕ್ಷಣ್ಯವು ಈ ಎರಡಕ್ಕೂ ಹೇಗೆ ಪ್ರತ್ಯಕ್ಷಾನುಭವಸಿದ್ಧವಾಗಿರುವುದೋ ; ಅದರಂತೆ ಜಲಕ್ಕೂ ವಾಯುವಿಗೂ ಸಾಜಾತ್ಯವಿದ್ದರೂ ಇವುಗಳ ಪ್ರಭಾವತಾರತಮ್ಯದಿಂದ ಗುಣತಾರತಮ್ಯವನ್ನೂ ಒಪ್ಪಿಕೊಂಡು ಜಲದಲ್ಲಿ ಶೀತಸ್ಪರ್ಶವೂ ವಾಯುವಿನಲ್ಲಿ ಅನುಷ್ಣಾಶೀತಸ್ಪರ್ಶವೂ ವಸ್ತುಸ್ವಭಾವಪ್ರಯುಕ್ತಗಳಾಗಿ ಏಕೆ ಇರಬಾರದು ?

ಮತ್ತು—ವಾಯುವಿನಲ್ಲಿ ಶೈತ್ಯಗುಣವನ್ನು ಒಪ್ಪದಿದ್ದರೆ ಬಾಧಕವೇನು ? ಶೈತ್ಯವು ಯಾವಾಗಲೂ ವಾಯುವಿನಲ್ಲಿ ತೋರದೆಯೇ ಹೋಗಬೇಕಾದೀತೆಂಬ ಶೈತ್ಯಾನುಪಲಂಭಪ್ರಸಂಗವೇ ಬಾಧಕವಾಗಿರುವುದೆಂದು ಹೇಳುವುದಾದರೆ—ಈ ಪ್ರಸಂಗವು ನಮಗೆ ಇಷ್ಟಪ್ರಸಂಗವಾಗಿಯೇ ಇರುವುದಲ್ಲದೆ ಅನಿಷ್ಟಪ್ರಸಂಗವಲ್ಲ; ಹಿಮಸಂಬಂಧವಿಲ್ಲದ ಕಾಲದಲ್ಲಿಯೂ ಆತಪದ (ಬಿಸಲಿನ) ಸಂಬಂಧವಿರುವ ಕಾಲದಲ್ಲಿಯೂ ವಾಯುವಿನಲ್ಲಿ ಶೈತ್ಯವು ತೋರುವುದೇ ಇಲ್ಲವಾದುದರಿಂದ ಈ ಪ್ರಸಂಗವು ನಮಗೆ ಇಷ್ಟವೇ ಆಗಿರುವುದಲ್ಲವೆ ? ಹಿಮಸಂಬಂಧವಿರುವ ಕಾಲದಲ್ಲಿ ಶೀತಗುಣದ ಉಪಲಬ್ಧಿಯಿದ್ದರೂ ಅದು ವಾಯುವಿನಲ್ಲಿ ಶೀತಗುಣದ ಸದ್ಭಾವಕ್ಕೆ ಗಮಕವಾಗುವುದಿಲ್ಲ ; ಅದು ಹಿಮಸಂಬಂಧಪ್ರಯುಕ್ತವಾದುದರಿಂದ ವಾಯುವಿನಲ್ಲಿ ಆರೋಪಿತವೆನಿಸಿಕೊಂಡು ಅನ್ಯಥಾಸಿದ್ಧವಾಗಿರುವುದಷ್ಟೆ ?

ಹಾಗಿಲ್ಲದೆ ಅಷ್ಟುಮಾತ್ರದಿಂದಲೇ ವಾಯುವಿನಲ್ಲಿ ಶೀತಸ್ಪರ್ಶವನ್ನು ಕಲ್ಪಿಸುವುದಾದರೆ—ಆತಪಸಂಬಂಧವಿರುವ ಕಾಲದಲ್ಲಿ ಉಷ್ಣಸ್ಪರ್ಶವೂ ವಾಯುವಿನಲ್ಲಿ ಉಪಲಬ್ಧವಾಗಿರುವುದರಿಂದ ಉಷ್ಣಸ್ಪರ್ಶವನ್ನೂ ವಾಯುವಿನಲ್ಲಿ ಏಕೆ ಕಲ್ಪಿಸಬಾರದು ? ಎಂದರೆ—ವಾಯುವಿನಲ್ಲಿ ಔಷ್ಣ್ಯಗುಣವನ್ನು ಒಪ್ಪದಿದ್ದರೆ ಔಷ್ಣ್ಯವು ಯಾವಾಗಲೂ ತೋರದೆಯೇ ಹೋಗಬೇಕಾದೀತೆಂಬ ಔಷ್ಣ್ಯಾನುಪಲಂಭ

ಪ್ರಸಂಗವೇ ಬಾಧಕವಾಗಿರುವ್ರದೆಂದು ತೋರಿಸಿ ಔಷ್ಣ್ಯಗುಣವನ್ನೂ ವಾಯು ವಿನಲ್ಲಿ ಏಕೆ ಕಲ್ಪಿಸಬಾರದು ?

ಓಹೋ ! " ಪ್ರಮೇಯದ ಸಿದ್ಧಿಗೆ ಪ್ರಮಾಣವು ಆವಶ್ಯಕವಾಗಿರಬೇಕು ; ತರ್ಕವೆಂಬ ಯುಕ್ತಿ ಅದಕ್ಕೆ ಅನುಗ್ರಾಹಕವಾಗಿರಬೇಕು ; ತರ್ಕಾನುಗೃಹೀತ ವಾದ ಪ್ರಮಾಣದಿಂದಲೇ ಪ್ರಮೇಯವು ಸಿದ್ಧಿಸಬೇಕಲ್ಲದೆ ಕೇವಲ ತರ್ಕದಿಂದ ಯಾವ ಪ್ರಮೇಯವೂ ಸಿದ್ಧಿಸಲಾರದು ? ಶೈತ್ಯಾನುಪಲಂಭಪ್ರಸಂಗವೆಂಬ ತರ್ಕ ಕ್ಕಾದರೆ ಪೂರ್ವೋಕ್ತವಾದ ಅನುಮಾನವೇ ಅನುಗ್ರಾಹ್ಯಪ್ರಮಾಣವಾಗಿರುವ್ರದ ರಿಂದ ಉಕ್ತತರ್ಕಾನುಗೃಹೀತವಾದ ಅಂಥ ಅನುಮಾನಪ್ರಮಾಣದಿಂದ ವಾಯು ವಿನಲ್ಲಿ ಶೈತ್ಯವೆಂಬ ಪ್ರಮೇಯವನ್ನು ನಿಶ್ಚಯಿಸಬಹುದು ; ಅದರಂತೆ ಇಲ್ಲಿ ಔಷ್ಣ್ಯಾನುಪಲಂಭಪ್ರಸಂಗವೆಂಬ ತರ್ಕಕ್ಕೆ ಅನುಗ್ರಾಹ್ಯವಾದ ಪ್ರಮಾಣವು ಯಾವುದೂ ಇಲ್ಲದಿರುವಾಗ ವಾಯುವಿನಲ್ಲಿ ಔಷ್ಣ್ಯವೆಂಬ ಪ್ರಮೇಯವನ್ನು ತರ್ಕ ಮಾತ್ರದಿಂದ ಹೇಗೆ ನಿಶ್ಚಯಿಸಲಾದೀತು ? '

ಎಂದು ಆಶಂಕಿಸಬೇಕಾದುದಿಲ್ಲ ; ಏತಕ್ಕೆಂದರೆ ಉಷ್ಣತ್ವಗುಣಶೂನ್ಯವಾದ ವಸ್ತು ಉಷ್ಣತ್ವಗುಣವಿಶಿಷ್ಟವಾದ ವಸ್ತುವಿಗೆ ಉಪಾದಾನಕಾರಣವಾಗಲಾರದಾ ದುದರಿಂದಲೂ, ಉಷ್ಣತ್ವಗುಣವಿಶಿಷ್ಟವಾದ ವಹ್ನಿಗೆ ವಾಯು ಉಪಾದಾನಕಾರಣ ವಾಗಿರುವುದೆಂಬುದು ಶಾಸ್ತ್ರದಲ್ಲಿ ಸುಪ್ರಸಿದ್ಧವಾದುದರಿಂದಲೂ, **" ವಾಯುಃ ಉಷ್ಣಸ್ಪರ್ಶವಾನ್ ಉಷ್ಣಸ್ಪರ್ಶವದಗ್ನ್ಯಾರಂಭಕತ್ವಾತ್ ಮಹಾಗ್ನ್ಯಾ ರಂಭಕಸ್ವಲ್ಪಾಗ್ನಿವತ್ "** ಎಂಬ ಅನುಮಾನಪ್ರಮಾಣವು ಇಲ್ಲಿಯೂ ಅನು ಗ್ರಾಹ್ಯಪ್ರಮಾಣವಾಗಿ ಸಿದ್ಧಿಸುವುದು ; ಉಕ್ತತರ್ಕಾನುಗೃಹೀತವಾದ ಈ ಅನು ಮಾನಪ್ರಮಾಣದಿಂದಲೇ ವಾಯುವಿನಲ್ಲಿ ಔಷ್ಣ್ಯವೆಂಬ ಪ್ರಮೇಯವನ್ನು ನಾವು ಪ್ರತಿಬಂದಿಯಾಗಿ ಆಪಾದನೆಮಾಡುವೆವಾದರೆ ವಾಯುವಿನಲ್ಲಿ ಶೈತ್ಯಗುಣವಾದಿ ಗಳಾದ ನೀವು ಆಗ ಏನುಮಾಡುವಿರಿ ?

" ಆತಪಸಂಬಂಧವಿರುವಾಗಲೇ ವಾಯುವಿನಲ್ಲಿ ಉಷ್ಣಸ್ಪರ್ಶವು ತೋರು ವುದು ; ಆತಪಸಂಬಂಧವಿಲ್ಲದಿದ್ದರೆ ಉಷ್ಣಸ್ಪರ್ಶವು ತೋರುವುದಿಲ್ಲ ; ಹೀಗೆ ಆತಪ ಸಂಬಂಧದ ಅನ್ವಯವ್ಯತಿರೇಕಗಳಿಂದ ಉಷ್ಣಸ್ಪರ್ಶವು ವಾಯುವಿಗೆ ಔಪಾಧಿಕ ವಾಗಿ ಆರೋಪಿತವಾಗುವಕಾರಣ ಅನ್ಯಥಾಸಿದ್ಧವಾದಪ್ರಯುಕ್ತ ವಾಯುವಿಗೆ ಉಷ್ಣಸ್ಪರ್ಶವು ಸ್ವಾಭಾವಿಕವಲ್ಲ " ಎಂಬ ಪರಿಹಾರವನ್ನು ಹೇಳುವಿರಾದರೆ ಇದೇ ರೀತಿಯಲ್ಲಿ ಶೀತಸ್ಪರ್ಶವೂ ವಾಯುವಿಗೆ ಔಪಾಧಿಕಾರೋಪಿತಧರ್ಮವೇ ಹೊರತು ಸ್ವಾಭಾವಿಕವಲ್ಲವೆಂಬ ಪರಿಹಾರವನ್ನು ನೀವೂ ತಿಳಿದು ಆಗ್ರಹವನ್ನು ಬಿಡಬೇಕು.

ಆದಕಾರಣ ಔಷ್ಣ್ಯಕ್ಕಿಂತಲೂ ಶೈತ್ಯಕ್ಕಿಂತಲೂ ವಿಲಕ್ಷಣವಾಗಿರುವ ಅನುಷ್ಣಾಶೀತವೆಂಬ ಭಾವರೂಪವಾದ ಸ್ಪರ್ಶವಿಶೇಷವು ವಾಯುವಿಗೂ ಪೃಥಿವಿಗೂ ಸ್ವಾಭಾವಿಕವೆನಿಸಿಕೊಂಡು ಮೂರನೆಯ ಸ್ಪರ್ಶವಾಗಿರುವುದೆಂಬುದನ್ನು ಯಾರೂ ತಪ್ಪಿಸಲಾರರು.

## ೧೧೭೫. ಪಾಕಜಾಪಾಕಜಭೇದೇನ ಸ್ಪರ್ಶಸ್ಯ ಪುನರ್ದ್ವೈವಿಧ್ಯಂ.

ಇಂಥ ಸ್ಪರ್ಶವು ಪಾಕಜವೆಂದೂ ಅಪಾಕಜವೆಂದೂ ಪುನಃ ಎರಡುಬಗೆಯಾಗುವುದು. ಪಾಕಜಸ್ಪರ್ಶವಿಶೇಷವು ಪೃಥಿವೀಮಾತ್ರದಲ್ಲಿಯೂ, ಅಪಾಕಜಸ್ಪರ್ಶವು ಪೃಥಿವಿಯಲ್ಲಿಯೂ ಉಳಿದ ಮೂರರಲ್ಲಿಯೂ ಇರುವುವು. ಅಮೃತ, ವಿಷ, ತುರುಚೆಗಿಡ, ಹತ್ತಿ, ಕಲ್ಲು, ಗೋವು, ಬ್ರಾಹ್ಮಣ, ಚಂಡಾಲ ಇವುಗಳ ಸ್ಪರ್ಶವಿಶೇಷಗಳು ಅಪಾಕಜಸ್ಪರ್ಶದ ಒಳಭೇದಗಳಾಗಿರುವುವು.

## ೧೧೭೬. ಗೋಬ್ರಾಹ್ಮಣಚಂಡಾಲಾದಿಷು ಸ್ಪರ್ಶತಾರತಮ್ಯೋಪಪಾದನಂ.

ಇವುಗಳಲ್ಲಿ—ಅಮೃತಸ್ಪರ್ಶವು ಜೀವನಕ್ಕೂ, (ಬದುಕುವಿಕೆಗೂ) ವಿಷಸ್ಪರ್ಶವು ಮರಣಕ್ಕೂ, ತುರುಚೆಯ ಸ್ಪರ್ಶವು ನವೆಗೂ, ಹತ್ತಿಯ ಸ್ಪರ್ಶವು ಮೃದುತ್ವಜ್ಞಾನದಮೂಲಕ ಸುಖಕ್ಕೂ, ಕಲ್ಲಿನ ಸ್ಪರ್ಶವು ಕಾಠಿನ್ಯಜ್ಞಾನದ ಮೂಲಕ ಶ್ರಮಕ್ಕೂ, ಗೋಬ್ರಾಹ್ಮಣರ ಸ್ಪರ್ಶವು ಶುದ್ಧಿಗೂ, ಚಂಡಾಲಸ್ಪರ್ಶವು ಅಶುದ್ಧಿಗೂ ಕಾರಣವಾಗಿರುವುದು.

ಇಲ್ಲಿ ವಿಚಾರಮಾಡಿ ನೋಡಿದರೆ—ಕಾರಣಭೂತವಾದ ಸ್ಪರ್ಶವು ಅಮೃತಾದಿಗಳಲ್ಲಿಯೂ, ಕಾರ್ಯಭೂತವಾದ ಜೀವನಾದಿಗಳು ಶರೀರದಲ್ಲಿಯೂ ಇರುವುದರಿಂದ ಕಾರ್ಯಕಾರಣಗಳು ಭಿನ್ನಾಧಿಕರಣವರ್ತಿಗಳಾದಪ್ರಯುಕ್ತ ಸಾಮಾನಾಧಿಕರಣ್ಯವು ಬರಲಿಲ್ಲವಾಗಿ ಇವುಗಳಿಗೆ ಕಾರ್ಯಕಾರಣಭಾವವೇ ತಪ್ಪಿಹೋಗುವುದು. ಇದಕ್ಕಾಗಿ ಅಮೃತಾದಿಗಳಲ್ಲಿರುವ ಸ್ಪರ್ಶಗುಣವು ಜೀವನಾದಿಗಳಿಗೆ ಕಾರಣವಲ್ಲವೆಂದೂ, ಶರೀರಗತವಾದ ಜೀವನಾದಿಕಾರ್ಯಗಳಿಗೆ ಶರೀರಗತವಾದ ಅಮೃತಾದಿಸಂಯೋಗವೇ ಕಾರಣವೆಂದೂ ಒಪ್ಪಬೇಕು.

ಅದೇತಕ್ಕೆ ? ಅಮೃತಾದಿಗತವಾದ ಸ್ಪರ್ಶವೇ ಸ್ವಾಶ್ರಯಸಂಯೋಗಸಂಬಂಧದಿಂದ ಕಾರಣವಾಗಿರುವುದೆಂದು ಹೇಳಬಹುದಲ್ಲವೆ ? ಇಲ್ಲ; ಲಾಘವಯುಕ್ತಿಯನ್ನನುಸರಿಸಿ ಆಶ್ರಯತಾಸಂಬಂಧದಿಂದ ಅಮೃತಾದಿಸಂಯೋಗವೇ ಕಾರಣವೆಂದು ಹೇಳುವುದೇ ಸೂಕ್ತವಾಗಿರುವುದು. ಆಶ್ರಯತಾಸಂಬಂಧಕ್ಕಿಂ

ತಲೂ ಸ್ವಾಶ್ರಯಸಂಯೋಗಸಂಬಂಧವೆಂಬುದು ಗುರುಭೂತವಷ್ಟೆ ? ಮತ್ತು— ಸ್ವಾಶ್ರಯಸಂಯೋಗಸಂಬಂಧದಿಂದ ಅಮೃತಾದಿಗತವಾದ ಸ್ಪರ್ಶವೇ ಕಾರಣವಾಗುವುದಾದರೆ ಅಮೃತಾದಿಗತವಾದ ರೂಪವೂ ಅದೇ ಸಂಬಂಧದಿಂದ ಜೀವನಾದಿಗಳಿಗೆ ಏಕೆ ಕಾರಣವಾಗಬಾರದೆಂದು ವಿನಿಗಮನಾವಿರಹಪ್ರಸಂಗವು ಬರುವುದರಿಂದಲೂ ಆ ಸಂಬಂಧವನ್ನು ಬಿಟ್ಟು ಆಶ್ರಯತಾಸಂಬಂಧದಿಂದ ಅಮೃತಾದಿಸಂಯೋಗವೇ ಜೀವನಾದಿಹೇತುವೆಂದು ಒಪ್ಪಬೇಕು.

ಹಾಗಾದರೆ " ಗೋಬ್ರಾಹ್ಮಣರ ಸ್ಪರ್ಶವು ಶುದ್ಧಿಗೆ ಕಾರಣವು " ಎಂದು ಬೋಧಿಸುವ ಶಾಸ್ತ್ರವಚನದಲ್ಲಿರುವ ಸ್ಪರ್ಶಶಬ್ದವು ಕೆಟ್ಟುಹೋಗುವುದಿಲ್ಲವೋ ? ಇಲ್ಲ ; ಆ ಸ್ಪರ್ಶಶಬ್ದವೂ ಸಂಯೋಗವೆಂಬ ಅರ್ಥವನ್ನೇ ತೋರಿಸುವುದು. ಸ್ಪೃಶಿ ಧಾತು ಸಕರ್ಮಕವಾದುದರಿಂದ ಸಂಯೋಗಾವಚ್ಛಿನ್ನವಾದ ವ್ಯಾಪಾರವೇ ಈ ಧಾತುವಿಗೆ ಅರ್ಥವೆಂದು ಅಂಗೀಕರಿಸಬೇಕಾದುದು ಆವಶ್ಯಕವಾದಪ್ರಯುಕ್ತ **"ಬ್ರಾಹ್ಮಣೇನ ಸ್ಪೃಷ್ಟಂ ಶುಚಿ"** (ಬ್ರಾಹ್ಮಣನಿಂದ ಸ್ಪರ್ಶಿಸಲ್ಪಟ್ಟುದು ಶುದ್ಧವು) ಎಂಬ ಸ್ಥಳದಲ್ಲಿ " ಬ್ರಾಹ್ಮಣವ್ಯಾಪಾರಾಧೀನವಾದ ಸಂಯೋಗವನ್ನು ಪಡೆದಿರುವ ವಸ್ತು ಪರಿಶುದ್ಧಿಯನ್ನು ಪಡೆವುದು " ಎಂಬುದಾಗಿಯೇ ಅರ್ಥವಾಗುವುದು. ಅಥವಾ ಇಂಥ ಸ್ಥಳದಲ್ಲಿ ಸಂಯೋಗಮಾತ್ರವೇ ಸ್ಪೃಶಿಧಾತುವಿಗೆ ಅರ್ಥವಾಗಿರಬಹುದಲ್ಲದೆ ತ್ವಗಿಂದ್ರಿಯಮಾತ್ರಗ್ರಾಹ್ಯವಾದ ಸ್ಪರ್ಶವೆಂಬ ಗುಣವು ಅರ್ಥವಲ್ಲ.

ಹೀಗೆ ಸಂಯೋಗಭೇದದಿಂದ ಕಾರ್ಯಭೇದವುಂಟಾಗುವುದಾದಪ್ರಯುಕ್ತ ಇದರ ಉಪಪತ್ತಿಗಾಗಿ ಸಂಯೋಗಪ್ರತಿಯೋಗಿಗಳಾದ ಅಮೃತಾದಿಗಳಲ್ಲಿ ಸ್ಪರ್ಶಗುಣಕ್ಕೆ ತಾರತಮ್ಯವನ್ನು ಒಪ್ಪಬೇಕು ; ಅಂಥ ತಾರತಮ್ಯವೂ ಮೃದುತ್ವ-ಕಠಿನತ್ವರೂಪವಾಗಿಯೇ ಇರುವುದು.

## ೧೦೭೭ ಪಾಕವಶಾತ್ ಪೃಥಿವ್ಯಾಂ ಮೃದುತ್ವಕಠಿನತ್ವಾದಿ ಸ್ಪರ್ಶೋತ್ಪತ್ತಿಃ

ಜಲತತ್ತ್ವದಿಂದ ಪೃಥಿವಿ ಹುಟ್ಟುವ ಕಾಲದಲ್ಲಿ ಅನುಷ್ಣಾಶೀತಸ್ಪರ್ಶಮಾತ್ರದೊಡನೆ ಹುಟ್ಟುವುದು ; ಅನಂತರದಲ್ಲಿ ಪಾಕವಿಶೇಷಗಳು ಉಂಟಾದಹಾಗೆಲ್ಲಾ ಸ್ಪರ್ಶವಿಶೇಷಗಳನ್ನು ಪಡೆವುದು. ಪಾಕಭೇದದಿಂದ ರೂಪಭೇದಗಳೂ ರಸಭೇದಗಳೂ ತೋರುವಂತೆ ಪಾಕಭೇದದಿಂದ ಸ್ಪರ್ಶಭೇದವು ತೋರುವುದಿಲ್ಲವೆಂದು ಚಿಂತಿಸ

ಬಾರದು ; ಪಾಕಭೇದದಿಂದ ಮೃದುತ್ವಾದಿಸ್ಪರ್ಶಭೇದವು ತೋರುವುದಷ್ಟೆ? ಪಕ್ವವಾದರೆ ಮಾವಿನಹಣ್ಣು ಮೆತ್ತಗಾಗುವುದನ್ನು ಯಾರೂ ಕಾಣರೋ ?

## ೧೦೭೪ ಮೃದುತ್ವಾದೀನಾಂ ಸಂಯೋಗರೂಪತ್ವನಿರಾಕರಣಪೂರ್ವಕಂ ಸ್ಪರ್ಶವಿಶೇಷತ್ವಸಮರ್ಥನಂ

ಮೃದುತ್ವ-ಕಠಿನತ್ವಾದಿಗಳು ಸ್ಪರ್ಶವಿಶೇಷಗಳೇ ಹೊರತು ಸಂಯೋಗರೂಪವಲ್ಲ. ಸಂಯೋಗರೂಪಗಳಾಗುವುದಾದರೆ ಚಕ್ಷುರಿಂದ್ರಿಯದಿಂದಲೂ ಅವುಗಳನ್ನು ಗ್ರಹಿಸಬೇಕಾಗಿ ಬರುವುದು. ಕಣ್ಣಿನಿಂದ ನೋಡಿದ ಮಾತ್ರಕ್ಕೆ ವಸ್ತುಗತವಾದ ಮೃದುತ್ವಕಠಿನತ್ವಗಳ ಜ್ಞಾನವುಂಟಾಗುವುದಿಲ್ಲ. ತ್ವಗಿಂದ್ರಿಯಮಾತ್ರಗ್ರಾಹ್ಯವಾದ ಮೃದುತ್ವಾದಿಗಳನ್ನು ಸಂಯೋಗವೆಂದು ಯಾರುತಾನೆ ಹೇಳಬಲ್ಲರು ?

ಓಹೋ ! ಮೃದುತ್ವಕಠಿನತ್ವಾದಿಗಳು ತ್ವಗಿಂದ್ರಿಯಮಾತ್ರದಿಂದಲೇ ಗ್ರಹಿಸಲ್ಪಡುವುವೆಂದು ಏಕೆ ಹೇಳಬೇಕು ? ಚಕ್ಷುರಿಂದ್ರಿಯದಿಂದಲೂ ವಸ್ತುವಿನ ಮೃದುತ್ವಾದಿಗಳ ಗ್ರಹಣವುಂಟಾಗುತ್ತಿರುವುದು ಲೋಕದಲ್ಲಿ ಕಾಣುತ್ತಿರುವುದಲ್ಲವೆ ?

ಇಲ್ಲ; ಚಕ್ಷುರಿಂದ್ರಿಯದಿಂದ ಅವುಗಳ ಗ್ರಹಣವುಂಟಾಗುವುದಿಲ್ಲ ; ಹೇಗೆಂದರೆ—ರೂಪವಿರುವ ಸ್ಥಳದಲ್ಲೆಲ್ಲಾ ಸ್ಪರ್ಶವು ಇದ್ದೇ ಇರುವುದರಿಂದ ರೂಪವು ವ್ಯಾಪ್ಯವಾಗಿಯೂ ಸ್ಪರ್ಶವು ವ್ಯಾಪಕವಾಗಿಯೂ ಇರುವುದು. ವ್ಯಾಪ್ಯವಾದ ಈ ರೂಪವನ್ನು ಚಕ್ಷುರಿಂದ್ರಿಯದಿಂದ ಗ್ರಹಿಸಿದ ಮೇಲೆ ಸ್ಪರ್ಶಕ್ಕೆ ಅವಿನಾಭೂತವಾಗಿರುವ ರೂಪವೆಂಬ ವ್ಯಾಪ್ಯದಿಂದ ವ್ಯಾಪಕವಾದ ಸ್ಪರ್ಶದ ಅನುಮಾನವುಂಟಾಗಿ ಮೃದುತ್ವ-ಕಠಿನತ್ವಾದಿಸ್ಪರ್ಶಗಳು ಅಂಥ ಅನುಮಿತಿರೂಪವಾದ ಜ್ಞಾನಕ್ಕೆ ಗೋಚರಗಳಾಗುವುವೇ ಹೊರತು ಚಕ್ಷುರಿಂದ್ರಿಯಜನ್ಯವಾದ ಪ್ರತ್ಯಕ್ಷಜ್ಞಾನಕ್ಕೆ ಗೋಚರಗಳಾಗುವುದಿಲ್ಲ.

ಚಕ್ಷುರಿಂದ್ರಿಯಸಂಬಂಧವುಂಟಾದ ಉತ್ತರಕ್ಷಣದಲ್ಲಿಯೇ ಮೃದುತ್ವಾದಿಗಳ ಜ್ಞಾನವುಂಟಾಗಿರುವುದೆಂಬ ಇಷ್ಟುಮಾತ್ರದಿಂದಲೇ ಮೃದುತ್ವಾದಿಗಳು ಚಾಕ್ಷುಷಜ್ಞಾನಕ್ಕೆ ಗೋಚರಗಳಾಗುವುವೆಂದು ಹೇಳುವುದಾದರೆ ಪುರೋವರ್ತಿಯಾದ ಜಲದಲ್ಲಿಯೂ ತೇಜಸ್ಸಿನಲ್ಲಿಯೂ ಚಕ್ಷುಸ್ಸಂಯೋಗವುಂಟಾದ ಉತ್ತರಕ್ಷಣದಲ್ಲಿಯೇ ಶೀತತ್ವೋಷ್ಣತ್ವಗಳ ಜ್ಞಾನವುಂಟಾಗುವುದರಿಂದ ಶೀತೋಷ್ಣಸ್ಪರ್ಶಗಳೂ ಚಕ್ಷುರಿಂದ್ರಿಯಕ್ಕೆ ಗೋಚರಗಳಾಗುವುವೆಂದು ಹೇಳಬೇಕಾಗಿ ಬರುವುದು. ಚಕ್ಷುರಿಂದ್ರಿಯವು ರೂಪಮಾತ್ರವನ್ನು ಗ್ರಹಿಸಿ ವಿಶ್ರಾಂತವಾಗಿರುವು

ದೆಂದೂ, ಸ್ಪರ್ಶವು ರೂಪದಿಂದ ಅನುಮಿಸಲ್ಪಡುವುದೆಂದೂ ಅಲ್ಲಿ ಹೇಳುವುದಾದರೆ ಅದೇ ನ್ಯಾಯವು ಇಲ್ಲಿಯೂ ತುಲ್ಯವಾಗಿರುವುದೆಂದು ತಿಳಿಯಬಹುದು.

## ೧೦೭೯ ಪಾಕಜಸ್ಪರ್ಶಾನಾಶ್ರಯಯೋರಪಿ ವಾಯುಸಲಿಲಯೋಃ ಮೃದುತ್ವಕಠಿನತ್ವೋಪಲಬ್ಧೌ ಕಾರಣನಿರೂಪಣಂ.

ಪೂಜ್ಯರೆ ! ಮೃದುತ್ವ-ಕಠಿನತ್ವ ಮುಂತಾದ ಸ್ಪರ್ಶಗಳು ಪಾಕಜಸ್ಪರ್ಶಗಳೆನಿಸಿಕೊಳ್ಳುವುವಾದರೆ ಪಾಕಜಸ್ಪರ್ಶಶೂನ್ಯವಾದ ವಾಯುವಿನಲ್ಲಿ ಮೃದುತ್ವಾದಿ ಪ್ರತೀತಿ ಹೇಗೆ ಸಂಗತವಾದೀತು ? ಮತ್ತು ಪಾಕಜಸ್ಪರ್ಶಶೂನ್ಯವಾದ ಕರಕವೆಂಬ (ಮಳೆಯಲ್ಲಿ ಬೀಳುವ ಆನೆಕಲ್ಲೆಂಬ) ಜಲಭಾಗದಲ್ಲಿ ಕಾಠಿನ್ಯಪ್ರತೀತಿ ಹೇಗೆ ಸಂಗತವಾದೀತು ?

ಹೀಗೆ ಸಂಗತವಾದೀತು—ಕರಕದಲ್ಲಿ ಪೃಥಿವಿಯೆಂಬ ಭೂತಾಂತರಸಂಸರ್ಗದಿಂದ ಕಾಠಿನ್ಯಪ್ರತೀತಿ ಸಂಗತವಾಗಬಹುದು; ವಾಯುವಿನಲ್ಲಿ ವೇಗಮಾಂದ್ಯವಿದ್ದರೆ ಮೃದುತ್ವದ ಪ್ರತೀತಿವ್ಯವಹಾರಗಳು ಬರಬಹುದು.

ಮೃದುತ್ವಕಠಿನತ್ವಾದಿಗಳನ್ನು ಕೆಲವರು ಅವಯವಸಂಯೋಗವಿಶೇಷಗಳೆಂದೇ ಹೇಳುವರು. ಆದರೆ ಇವರ ಪಕ್ಷದಲ್ಲಿ "ಮೃದುತ್ವಾದಿಗಳು ಸಂಯೋಗವಿಶೇಷಗಳೇ ಆಗಿರುವುವಾದರೆ ಚಕ್ಷುರಿಂದ್ರಿಯದಿಂದಲೂ ಇವುಗಳಿಗೆ ಏಕೆ ಗ್ರಹಣವಾಗುವುದಿಲ್ಲ" ಎಂಬ ಆಶಂಕೆಗೆ ಸಮಾಧಾನವನ್ನು ಹೇಳುವುದೇ ಕಷ್ಟವಾಗಿರುವುದು.

## ೧೦೮೦ ಕಾರ್ಯವೈಜಾತ್ಯಾತ್ ಗೋಬ್ರಾಹ್ಮಣಚಂಡಾಲಾದಿಗತಸ್ಪರ್ಶಸ್ಯ ವೈಜಾತ್ಯೋಪಪತ್ತಿಃ

ಪೂಜ್ಯರೆ ! ಗೋಬ್ರಾಹ್ಮಣಚಂಡಾಲರಲ್ಲಿರುವ ಸ್ಪರ್ಶಗುಣದಲ್ಲಿ ಪ್ರತ್ಯಕ್ಷದಿಂದ ಯಾವುದೊಂದು ತಾರತಮ್ಯವೂ ತೋರದಿರುವಾಗ ಅವುಗಳ ಒಳಭೇದಗಳನ್ನು ಹೇಗೆ ಹೇಳುತ್ತೀರಿ ? ಎಂದರೆ ಶೀತತ್ವ ಉಷ್ಣತ್ವ ಮೃದುತ್ವ ಕಠಿನತ್ವಗಳೆಂಬ ತ್ವಗಿಂದ್ರಿಯಗ್ರಾಹ್ಯಗಳಾದ ಆಕಾರವಿಶೇಷಗಳಿಗಿಂತಲೂ ಅತಿರಿಕ್ತವಾಗಿ ಅಂಗೀಕರಿಸುವ ಸ್ಪರ್ಶವಿಶೇಷದಲ್ಲಿ ಪ್ರಮಾಣವೇನು ? ಇಂಥ ಆಶಂಕೆಗೆ "ಅಂಥ ಸ್ಪರ್ಶವಿಶೇಷದಿಂದ ಉಂಟಾಗುವ ಶುದ್ಧ್ಯಶುದ್ಧಿಗಳೆಂಬ ಕಾರ್ಯಗಳ ವೈಲಕ್ಷಣ್ಯವೇ ಸ್ಪರ್ಶಗಳ ವೈಲಕ್ಷಣ್ಯದಲ್ಲಿ ಪ್ರಮಾಣವಾಗಿರುವುದು" ಎಂಬ ಸಮಾಧಾನವನ್ನು ತಿಳಿಯಬಹುದು. ಕಾರಣದಲ್ಲಿ ವೈಲಕ್ಷಣ್ಯವಿಲ್ಲದಿದ್ದರೆ ಕಾರ್ಯದಲ್ಲಿ ವೈಲಕ್ಷಣ್ಯವುಂಟಾಗಕೂಡದಷ್ಟೆ.

## ೧೦೮೧. ಗೋತ್ವಾದಿಜಾತೇರೇವ ಶುದ್ಧ್ಯಶುದ್ಧಿಪ್ರಯೋಜಕತ್ವಾಶಂಕಾ

ಅದೇತಕ್ಕೆ ? ಜಾತಿವಿಶೇಷವೇ ಕಾರ್ಯವೈಲಕ್ಷಣ್ಯಕ್ಕೆ ಪ್ರಯೋಜಕವೆಂದು ಹೇಳಿಬಿಡಬಹುದಲ್ಲವೆ ? ಎಂದರೆ ಒಂದೇ ಸ್ಪರ್ಶವು ಗೋತ್ವಬ್ರಾಹ್ಮಣತ್ವಜಾತಿಗಳ ಜತೆಯಲ್ಲಿ ಇದ್ದುದಾದರೆ ಅಂಥ ಸಾಮಾನಾಧಿಕರಣ್ಯಬಲದಿಂದ ಅದು ಶುದ್ಧಿಗೆ ಕಾರಣವಾಗುವುದೆಂದೂ, ಅದೇ ಸ್ಪರ್ಶವು ಚಂಡಾಲತ್ವಜಾತಿಯ ಜತೆಯಲ್ಲಿ ಇದ್ದುದಾದರೆ ಅಂಥ ಸಾಮಾನಾಧಿಕರಣ್ಯಬಲದಿಂದ ಅದು ಅಶುದ್ಧಿಗೆ ಕಾರಣವಾಗುವುದೆಂದೂ ಹೇಳಿಬಿಡಬಹುದಲ್ಲವೆ ? ಅಥವಾ ಗೋತ್ವಾದಿಜಾತಿವಿಶೇಷವೇ ಸ್ವಾಶ್ರಯಸಂಯೋಗಸಂಬಂಧದಿಂದ ಶುದ್ಧ್ಯಶುದ್ಧಿಗಳಿಗೆ ಕಾರಣವಾಗುವುದೆಂದು ಹೇಳಿಬಿಡಬಹುದಲ್ಲವೆ ? ಹೀಗಿರುವಲ್ಲಿ ಆ ಸ್ಪರ್ಶಗುಣದ ಒಳಭೇದಗಳನ್ನು ಏಕೆ ಒಪ್ಪಬೇಕು ?

## ೧೦೮೨. ಜಾತೇರ್ದುರ್ನಿರೂಪತ್ವಾತ್ ಶುದ್ಧ್ಯಾದಿಪ್ರಯೋಜಕತ್ವಾನುಪಪತ್ತಿಃ

ಇಂಥ ಆಶಂಕೆ ಸಂಗತವಲ್ಲ; ಏತಕ್ಕೆಂದರೆ ಮೊದಲು ಜಾತಿಭೇದವೇ ಹೇಗೆ ಸಿದ್ಧಿಸೀತು ? ಜಾತಿಭೇದವನ್ನು ವ್ಯವಸ್ಥೆಪಡಿಸಿಕೊಡುವ ನಿಯಾಮಕ ಧರ್ಮವು ಯಾವುದೂ ಇಲ್ಲದಿರುವಾಗ ಜಾತಿಭೇದವೇ ದುರ್ನಿರೂಪವಾದಪ್ರಯುಕ್ತ ಅಸಿದ್ಧವಾಗಿರುವಲ್ಲಿ ಅದು ಶುದ್ಧ್ಯಶುದ್ಧಿಗಳಿಗೆ ಹೇಗೆ ಕಾರಣವಾದೀತು ?

ಅದೇತಕ್ಕೆ ? ಧರ್ಮಪತ್ನಿಯಾದ ಬ್ರಾಹ್ಮಣಸ್ತ್ರೀಯಲ್ಲಿ ಪತಿಯೆನಿಸಿಕೊಂಡ ಬ್ರಾಹ್ಮಣನಿಂದ ಹುಟ್ಟಿರುವಿಕೆಯೇ ಬ್ರಾಹ್ಮಣತ್ವಜಾತಿಗೆ ನಿಯಾಮಕವೆಂದೂ, ಚಂಡಾಲಸ್ತ್ರೀಯಲ್ಲಿ ಚಂಡಾಲನಿಂದ ಹುಟ್ಟಿರುವಿಕೆಯೇ ಚಂಡಾಲತ್ವಜಾತಿಗೆ ನಿಯಾಮಕವೆಂದೂ ಹೇಳಬಹುದಲ್ಲವೆ ?

ಇಲ್ಲ; ಹಾಗೆ ಹೇಳಲಾಗುವುದಿಲ್ಲ; ತಾಯಿತಂದೆಗಳಿಗೆ ಮೊದಲು ಬ್ರಾಹ್ಮಣತ್ವವಾಗಲಿ ಚಂಡಾಲತ್ವವಾಗಲಿ ಸಿದ್ಧವಾದರಲ್ಲವೆ ಪುತ್ರನ ಬ್ರಾಹ್ಮಣತ್ವವನ್ನಾಗಲಿ ಚಂಡಾಲತ್ವವನ್ನಾಗಲಿ ನಿಷ್ಕರ್ಷಿಸಬಹುದು; ಮೊದಲು ಅವರಿಗೇ ಬ್ರಾಹ್ಮಣತ್ವಾದಿಗಳು ಸಿದ್ಧಿಸುವ ಬಗೆ ಹೇಗೆ ? ಅವರ ಪೂರ್ವಜರಲ್ಲಿರುವ ಬ್ರಾಹ್ಮಣತ್ವದಿಂದ ಇವರ ಬ್ರಾಹ್ಮಣತ್ವವನ್ನು ನಿಶ್ಚಯಿಸುವುದಾದರೆ ಅನವಸ್ಥಾದೋಷದಿಂದ ಬಿಡುಗಡೆಯೇ ಆಗುವುದಿಲ್ಲ.

ಮತ್ತು—ಬ್ರಾಹ್ಮಣಮಾತಾಪಿತೃಜನ್ಯತ್ವವೇ ಬ್ರಾಹ್ಮಣತ್ವಕ್ಕೆ ನಿಯಾಮಕವಾಗಿರುವುದೆಂದು ಹೇಳುವುದಾದರೆ—"ಸ ಮಾನಸಾರ್ ಸಪ್ತ ಪುತ್ರಾನ ಸೃಜತ" (ಚತುರ್ಮುಖಬ್ರಹ್ಮದೇವನು ತನ್ನ ಮನಸ್ಸಿನಿಂದಲೇ ಏಳು ಪುತ್ರರನ್ನು ಸೃಷ್ಟಿಸಿದನು) ಎಂಬ ಶ್ರುತಿಯಿಂದ ಸಿದ್ಧರಾಗಿರುವ ಮಾನಸಪುತ್ರರೆಂಬ ಆದ್ಯ ಬ್ರಾಹ್ಮಣರಲ್ಲಿ ಬ್ರಾಹ್ಮಣಮಾತಾಪಿತೃಜನ್ಯತ್ವವೇ ಇಲ್ಲವಾದಪ್ರಯುಕ್ತ ಬ್ರಾಹ್ಮಣ್ಯವೇ ಇಲ್ಲದೆ ಹೋಗಬೇಕಾದೀತು; ತಪೋಬಲದಿಂದ ಬ್ರಾಹ್ಮಣ್ಯವನ್ನು ಸಂಪಾದಿಸಿರುವ ವಿಶ್ವಾಮಿತ್ರರಲ್ಲಿಯೂ ಬ್ರಾಹ್ಮಣ್ಯವಿಲ್ಲದೆ ಹೋಗಬೇಕಾದೀತು ; ವಸಿಷ್ಠಪುತ್ರರ ಶಾಪದಿಂದ ಚಂಡಾಲತ್ವವನ್ನು ಪಡೆದ ತ್ರಿಶಂಕುವಿನಲ್ಲಿ ಚಂಡಾಲಮಾತಾಪಿತೃಜನ್ಯತ್ವವೆಂಬ ನಿಯಾಮಕಧರ್ಮವಿಲ್ಲವಾದಪ್ರಯುಕ್ತ ಚಂಡಾಲತ್ವಜಾತಿಯಿಲ್ಲದೆ ಹೋಗಬೇಕಾದೀತು.

ಆದಕಾರಣ ಉಕ್ತರೀತಿಯಲ್ಲಿ ಜಾತಿ ದುರ್ನಿರೂಪವಾದುದರಿಂದ ಶುದ್ಧ್ಯಶುದ್ಧಿಗಳಿಗೆ ಇದೇ ಕಾರಣವಾಗಲಾರದಾದಪ್ರಯುಕ್ತ ಸ್ಪರ್ಶಗಳಲ್ಲಿಯೇ ತಾರತಮ್ಯವನ್ನು ಒಪ್ಪಿಕೊಂಡು ಶುದ್ಧ್ಯಶುದ್ಧಿಗಳೆಂಬ ಕಾರ್ಯಗಳ ತಾರತಮ್ಯವನ್ನು ನಿರ್ವಹಿಸಬೇಕು.

## ೧೦೮೩. ಜಾತೇಸ್ಸುನಿರೂಪತ್ವಪಕ್ಷಾವಲಂಬನೇನ ಬ್ರಾಹ್ಮಣತ್ವಾದಿಜಾತಿಸ್ವರೂಪನಿರೂಪಣಂ.

ಪೂಜ್ಯರೆ! ಅನಾದಿಕಾಲದಿಂದಲೂ ಅಬಾಧಿತವಾಗಿ ನಡೆದು ಬರುತ್ತಿರುವ "ಇಯಂ ಗೌಃ, ಅಯಂ ಬ್ರಾಹ್ಮಣಃ, ಅಯಂ ಚಂಡಾಲಃ" (ಇದು ಗೋವು, ಇವನು ಬ್ರಾಹ್ಮಣನು, ಇವನು ಚಂಡಾಲನು) ಎಂಬುವೇ ಮೊದಲಾದ ಲೋಕವ್ಯವಹಾರಶಾಸ್ತ್ರವ್ಯವಹಾರಗಳಿಗೆ ಆಲಂಬನಭೂತವಾಗಿರುವ ಆ ಆ ಧರ್ಮವಿಶೇಷಗಳನ್ನೂ, ಅವುಗಳಿಗೆ ನಿಯಾಮಕಗಳನ್ನೂ ಅಂಗೀಕರಿಸುವುದು ವೈದಿಕರೆನಿಸಿಕೊಂಡಿರುವವರೆಲ್ಲರಿಗೂ ಆವಶ್ಯಕವಾಗಿರುವಲ್ಲಿ ಜಾತಿಯನ್ನು ದುರ್ನಿರೂಪತ್ವಹೇತುವಿನಿಂದ ಖಂಡಿಸಲು ಹೇಗೆ ಸಾಧ್ಯವಾದೀತು; ಮತ್ತು ಸ್ಪರ್ಶದಲ್ಲಿ ತಾರತಮ್ಯವನ್ನು ಹೇಗೆ ಹೇಳಲಾದೀತು ?

ಎಂದು ಆಶಂಕಿಸುವುದಾದರೆ ಇನ್ನೊಂದು ಪಕ್ಷವನ್ನು ಇಲ್ಲಿ ತೋರಿಸುವೆವು—"ತಮಃಶೂದ್ರೇ ರಜಃ ಕ್ಷತ್ರೇ ಬ್ರಾಹ್ಮಣೇ ಸತ್ತ್ವಮುತ್ತಮಂ" ಎಂಬುವೇ ಮೊದಲಾದ ಶಾಸ್ತ್ರವಚನಗಳನ್ನು ವಿಮರ್ಶಿಸಿ ನೋಡಿದರೆ—ಸತ್ತ್ವಗುಣದ ಉದ್ರೇಕಾತಿಶಯವಿಶೇಷವೇ ಬ್ರಾಹ್ಮಣತ್ವಜಾತಿಯೆನಿಸಿಕೊಳ್ಳುವುದು;

ರಜೋಗುಣದ ಉದ್ರೇಕಾತಿಶಯವಿಶೇಷವೇ ಕ್ಷತ್ರಿಯತ್ವಜಾತಿಯಾಗುವುದು ; ತಮೋಗುಣದ ಉದ್ರೇಕಾತಿಶಯವಿಶೇಷವೇ ಶೂದ್ರತ್ವಜಾತಿಯಾಗುವುದು ; ರಜೋಗುಣತಮೋಗುಣಗಳೆರಡರ ಅಲ್ಪೋದ್ರೇಕವು ವೈಶ್ಯತ್ವಜಾತಿಯಾಗುವುದು; ಕರಣತ್ರಯದಲ್ಲಿಯೂ ನಿರಂತರವಾಗಿ ತಮೋಗುಣದ ಅತ್ಯಂತೋದ್ರೇಕವು ಚಂಡಾಲತ್ವಜಾತಿಯೆನಿಸಿಕೊಳ್ಳುವುದು. ಉಕ್ತವಾದ ಇಂಥ ಬ್ರಾಹ್ಮಣತ್ವವು ಬ್ರಹ್ಮನ ಮಾನಸಪುತ್ರರಲ್ಲಿಯೂ ವಿಶ್ವಾಮಿತ್ರರಲ್ಲಿಯೂ ಬರಬಹುದು ; ಉಕ್ತವಾದ ಇಂಥ ಚಂಡಾಲತ್ವವು ತ್ರಿಶಂಕುವಿನಲ್ಲಿಯೂ ಬರಬಹುದು ; ಧರ್ಮಾಧರ್ಮಗಳ ತಾರತಮ್ಯವಿಶೇಷದಿಂದ ಸತ್ತ್ವಾದಿಗುಣಗಳ ತಾರತಮ್ಯವಿಶೇಷಗಳು ಯಾವ ಆತ್ಮವ್ಯಕ್ತಿಯಲ್ಲಿಯಾದರೂ ಉಂಟಾಗಲು ಅಡ್ಡಿಯಿಲ್ಲವಷ್ಟೆ ? ಅಥವಾ ಕಾರ್ಯಾನುಮೇಯವಾದ ಶಕ್ತಿವಿಶೇಷವೇ ಬ್ರಾಹ್ಮಣತ್ವಾದಿಜಾತಿಯೆನಿಸಿಕೊಳ್ಳುವುದೆಂದೂ ಹೇಳಬಹುದು.

## ೧೦೮೪. ಅಸ್ಮಿನ್ ಪಕ್ಷೇ ಗೋಬ್ರಾಹ್ಮಣಾದಿಷು ಸ್ಪರ್ಶತಾರತಮ್ಯಾನಾವಶ್ಯಕತಾ

ಸತ್ತ್ವಗುಣದ ಉದ್ರೇಕವಿಶೇಷರೂಪವಾದ, ಅಥವಾ ಶಕ್ತಿವಿಶೇಷರೂಪವಾದ ಇಂಥ ಬ್ರಾಹ್ಮಣತ್ವಜಾತಿಯೇ ಸ್ವಾಶ್ರಯಸಂಯೋಗಸಂಬಂಧದಿಂದ ಶುದ್ಧಿಗೆ ಕಾರಣವಾಗುವುದು ; ಅಥವಾ ಇಂಥ ಜಾತಿಗೆ ಆಶ್ರಯವಾಗಿರುವ ವ್ಯಕ್ತಿಯ ಸಂಯೋಗವೇ ಆಶ್ರಯತಾಸಂಬಂಧದಿಂದ ಶುದ್ಧಿಗೆ ಕಾರಣವಾಗುವುದು ; ತಮೋಗುಣದ ಉದ್ರೇಕವಿಶೇಷರೂಪವಾದ, ಅಥವಾ ಶಕ್ತಿವಿಶೇಷರೂಪವಾದ ಶೂದ್ರತ್ವಚಂಡಾಲತ್ವಜಾತಿಗಳು ಸ್ವಾಶ್ರಯಸಂಯೋಗಸಂಬಂಧದಿಂದ ಅಶುದ್ಧಿಗೆ ಕಾರಣಗಳಾಗುವುವು ; ಅಥವಾ ಇಂಥ ಜಾತಿಗಳಿಗೆ ಆಶ್ರಯಗಳಾಗಿರುವ ವ್ಯಕ್ತಿಗಳ ಸಂಯೋಗವೇ ಆಶ್ರಯತಾಸಂಬಂಧದಿಂದ ಅಶುದ್ಧಿಗೆ ಕಾರಣಗಳಾಗುವುವು. ಈ ಪಕ್ಷದಲ್ಲಿ ಗೋಬ್ರಾಹ್ಮಣಚಂಡಾಲರೊಳಗೆ ಸ್ಪರ್ಶತಾರತಮ್ಯವನ್ನು ಒಪ್ಪಬೇಕಾದ ಆವಶ್ಯಕತೆಯಿಲ್ಲ.

## ೧೦೮೫. ಅಪಾಕಜಸ್ಪರ್ಶೇಷು ತಾರತಮ್ಯಪ್ರತೀತೌ ಕಾರಣನಿರೂಪಣಂ

ಪೂಜ್ಯರೆ! ಪಾಕಜಸ್ಪರ್ಶದಲ್ಲಿ ಪಾಕತಾರತಮ್ಯಪ್ರಯುಕ್ತವಾದ ಸ್ಪರ್ಶತಾರತಮ್ಯವನ್ನು ಹೇಳುವುದು ಸಂಗತವಾಗಿರುವುದು ; ಆದರೆ ಅಪಾಕಜಸ್ಪರ್ಶಗಳಲ್ಲಿ (ಶೀತತ್ವ-ಉಷ್ಣತ್ವಗಳಲ್ಲಿ) ಪಾಕತಾರತಮ್ಯಕ್ಕೆ ಪ್ರಸಕ್ತಿಯೇ ಇಲ್ಲದಿರು

ವಾಗ ಸ್ಪರ್ಶತಾರತಮ್ಯವನ್ನು ಹೇಗೆ ಹೇಳಲಾದೀತು? ಎಂದರೆ—ಸ್ವಲ್ಪಶೀತವೆಂದೂ, ಹೆಚ್ಚುಶೀತವೆಂದೂ, ಮಿತಿಮೀರಿದ ಶೀತವೆಂದೂ, ಸ್ವಲ್ಪಬಿಸಿಯೆಂದೂ, ಹೆಚ್ಚಿದ ಬಿಸಿಯೆಂದೂ, ಮಿತಿಮೀರಿದ ಬಿಸಿಯೆಂದೂ, ಶೀತೋಷ್ಣಗಳಲ್ಲಿ ತಾರತಮ್ಯವನ್ನು ಹೇಗೆ ಹೇಳಲಾದೀತು?

ಹೀಗೆ ಹೇಳಲಾದೀತು—ಅಲ್ಲಿ ಪಾಕಭೇದವಿಲ್ಲದಿದ್ದರೂ ಶೀತತ್ವೋಷ್ಣತ್ವಗಳಿಗೆ ಅಭಿವ್ಯಂಜಕವಾಗಿರುವ ವಾಯುವಿನ ಸಂಯೋಗತಾರತಮ್ಯದಿಂದ ಅವುಗಳ ತಾರತಮ್ಯಜ್ಞಾನವುಂಟಾಗುವುದೇ ಅಲ್ಲದೆ ಅವುಗಳ ಸ್ವರೂಪದಲ್ಲಿ ತಾರತಮ್ಯವಿಲ್ಲ; ಮತ್ತು ಶೈತ್ಯದ ಪ್ರತೀತಿಗೆ ಅಡ್ಡಿಯಾಗಿರುವ ತೇಜಸ್ಸಂಯೋಗವು ನಷ್ಟವಾದರೂ ಶೈತ್ಯದ ತಾರತಮ್ಯವು ಪ್ರತೀತವಾಗಬಹುದು.

## ೧೦೮೬. ವಾಯುಸಲಿಲಯೋಃ ಪಾಕಜಸ್ಪರ್ಶಾಂತರಾಸಂಭವೋಪಪಾದನಂ.

ಪೂಜ್ಯರೆ! ಪಾಕಜಸ್ಪರ್ಶವು ಪೃಥಿವೀಮಾತ್ರದಲ್ಲಿಯೇ ಇರುವುದೆಂದೂ, ಉಳಿದ ಮೂರರಲ್ಲಿ ಇಲ್ಲವೆಂದೂ ಏಕೆ ಒಪ್ಪಬೇಕು? ವಾಯುವಿನಲ್ಲಿಯೂ ಜಲದಲ್ಲಿಯೂ ಪಾಕಜಸ್ಪರ್ಶವುಂಟೆಂದು ಒಪ್ಪಿದರೆ ಬಾಧಕವೇನು?

ಹೀಗೆ ಆಶಂಕಿಸುವವರನ್ನು ಕುರಿತು ಈ ರೀತಿಯಲ್ಲಿ ಪ್ರಶ್ನೆಮಾಡಬೇಕು. ಪೃಥಿವಿಯಲ್ಲಿ ಪಾಕಜನಿತವಾದ ಔಷ್ಣ್ಯವು ಶಾಂತವಾದಮೇಲೆ ಅನುವರ್ತಿಸಿ ಕಾಣಬರುತ್ತಿರುವ ಮೃದುತ್ವಾದಿಸ್ಪರ್ಶಾಂತರಗಳಂತೆ ಜಲದಲ್ಲಿಯೂ ಪಾಕಜನಿತವಾದ ಔಷ್ಣ್ಯವು ಶಾಂತವಾದಮೇಲೆ ಸ್ಪರ್ಶಾಂತರವು ಅನುವರ್ತಿಸುವುದೆಂದು ನಿಮಗೆ ಅಭಿಪ್ರಾಯವೋ? ಅಥವಾ ಪಾಕಜನಿತವಾದ ಔಷ್ಣ್ಯವೇ ಜಲದಲ್ಲಿ ಪಾಕಜಸ್ಪರ್ಶವೆನಿಸಿಕೊಳ್ಳುವುದೆಂದು ಅಭಿಪ್ರಾಯವೋ?

ಮೊದಲನೆಯ ಅಭಿಪ್ರಾಯವು ಸಂಗತವಲ್ಲ; ಔಷ್ಣ್ಯಶಾಂತಿಯ ಅನಂತರದಲ್ಲಿ ಜಲದಲ್ಲಿ ಅದರ ಪೂರ್ವಸ್ವಭಾವವೇ ತೋರುವುದಲ್ಲದೆ ಸ್ಪರ್ಶಾಂತರವು ಯಾವುದೂ ಅನುವರ್ತಮಾನವಾಗಿ ತೋರುವುದಿಲ್ಲವಷ್ಟೆ.

ಹಾಗಾದರೆ "ಔಷ್ಣ್ಯವೇ ಜಲಕ್ಕೆ ಪಾಕಜಸ್ಪರ್ಶವಾಗಿರಲಿ' ಎಂಬ ಎರಡನೆಯ ಅಭಿಪ್ರಾಯವೂ ಸಂಗತವಲ್ಲ; ವಾಯುವಿನಲ್ಲಿ ಜಲಸಂಬಂಧದಿಂದ ಶೈತ್ಯಪ್ರತೀತಿಯುಂಟಾದರೂ ಜಲಗತವಾದ ಶೈತ್ಯವೇ ವಾಯುವಿನಲ್ಲಿ ಆರೋಪಿತವಾಗಿ ತೋರುತ್ತಿರುವುದಾದಪ್ರಯುಕ್ತ ಅನ್ಯಥಾಸಿದ್ಧವಾದುದರಿಂದ ಆ ಶೈತ್ಯವು ವಾಯುವಿಗೆ ಹೇಗಾದರೆ ಪಾಕಜಗುಣವೆನಿಸಿಕೊಳ್ಳಲಾರದೋ; ಅದರಂತೆ ಜಲದ

ಲ್ಲಿಯೂ ತೇಜಸ್ಸಂಬಂಧದಿಂದ ಔಷ್ಣ್ಯಪ್ರತೀತಿಯುಂಟಾದರೂ ತೇಜಸ್ಸಿನಲ್ಲಿರುವ ಔಷ್ಣ್ಯವೇ ಜಲದಲ್ಲಿ ಆರೋಪಿತವಾಗಿ ತೋರುತ್ತಿರುವುದಾದಪ್ರಯುಕ್ತ ಅನ್ಯಥಾ ಸಿದ್ಧವಾದುದರಿಂದ ಆ ಔಷ್ಣ್ಯವು ಜಲಕ್ಕೆ ಪಾಕಜಗುಣವೆನಿಸಿಕೊಳ್ಳಲಾರ ದಷ್ಟೆ? ಆದಕಾರಣ ಉಪಾಧಿನಿವೃತ್ತಿಯ ಅನಂತರದಲ್ಲಿಯೂ ಅನುವರ್ತಿಸುತ್ತಿ ರುವ ಸ್ಪರ್ಶವಿಶೇಷವೇ ಪಾಕಜಸ್ಪರ್ಶವಾಗುವುದಲ್ಲದೆ ವಸ್ತುವಿಗೆ ಸ್ವಾಭಾವಿಕ ವಾದ ಸ್ಪರ್ಶವು ಪಾಕಜಸ್ಪರ್ಶವಾಗಲಾರದು.

### ೧೦೮೭. ಪೃಥಿವ್ಯಾಮುಷ್ಣತ್ವಶೀತತ್ವಯೋಃ ಔಪಾಧಿಕಾರೋಪಿತತ್ವಮೇವ.

ಓಹೋ! ಉಪಾಧಿನಿವೃತ್ತಿಯ ಅನಂತರದಲ್ಲಿ ಅನುವರ್ತಿಸುವ ಸ್ಪರ್ಶವೇ ಪಾಕಜಸ್ಪರ್ಶವೆನಿಸಿಕೊಳ್ಳುವುದಾದರೆ—ಪೃಥಿವಿಯಲ್ಲಿ ಜಲಸಂಬಂಧ ಅಥವಾ ಅಗ್ನಿ ಸಂಬಂಧವೆಂಬ ಉಪಾಧಿ ನಿವರ್ತಿಸಿದ ಮೇಲೆಯೂ ಸ್ವಲ್ಪಕಾಲ ಅನುವರ್ತಿಸುವ ಶೀತತ್ವ-ಉಷ್ಣತ್ವ-ಸ್ಪರ್ಶಗಳು ಪೃಥಿವಿಗೆ ಪಾಕಜಸ್ಪರ್ಶಗಳೆನಿಸಿಕೊಳ್ಳಬೇಕಾಗುವು ದಲ್ಲವೆ?

ಇಲ್ಲ—ಜಲದಿಂದ ನೆನೆಸಲ್ಪಟ್ಟ, ಅಥವಾ ಬೆಂಕಿಯಿಂದ ಸುಡಲ್ಪಟ್ಟ ಪೃಥಿವಿ ಯಲ್ಲಿ ನೀರನ್ನು ಚೆನ್ನಾಗಿ ಒರೆಸಿದರೂ, ಬೆಂಕಿಯನ್ನು ಚೆನ್ನಾಗಿ ಆರಿಸಿದರೂ ಉಪಾಧಿಸಂಬಂಧವು ನಿಶ್ಶೇಷವಾಗಿ ನಿವೃತ್ತವಾಗಲಿಲ್ಲ; ಸೂಕ್ಷ್ಮವಾದ ಜಲಪರ ಮಾಣು ಅಥವಾ ತೇಜಃಪರಮಾಣು ಪೃಥಿವಿಯಲ್ಲಿ ಸ್ವಲ್ಪಕಾಲದವರೆಗೆ ಅನುವರ್ತಿಸು ವುದರಿಂದಲೇ ಶೈತ್ಯವಾಗಲಿ ಔಷ್ಣ್ಯವಾಗಲಿ ಆರೋಪಿತವಾಗಿ ಪೃಥಿವಿಯಲ್ಲಿ ತೋರುವುದು; ಕೆಲವು ನಿಮಿಷಗಳೊಳಗೆ ಅದೂ ನಿವೃತ್ತವಾಗುವುದು.

ಶೈತ್ಯವಾಗಲಿ ಔಷ್ಣ್ಯವಾಗಲಿ ಉಪಾಧಿಸಂಬಂಧವಿಲ್ಲದೆ ಪೃಥಿವಿಯಲ್ಲಿ ಯಾ ವಾಗಲೂ ತೋರುವುದೇ ಇಲ್ಲವಾದುದರಿಂದ ಇವು ಪೃಥಿವಿಗೆ ಔಪಾಧಿಕಾರೋಪಿ ಗಳಾಗುವುವೇ ಹೊರತು ಸ್ವಾಭಾವಿಕಗಳಲ್ಲ; ರೂಪರಸಗಂಧಗಳಂತೆ ಪಾಕಜನ್ಯ ಗಳೂ ಅಲ್ಲ; ಪಾಕಜನ್ಯಗಳಾಗುವಪಕ್ಷದಲ್ಲಿ ರೂಪಾದಿಗಳಂತೆ ಇವುಗಳು ಪೃಥಿವಿ ಯಲ್ಲಿ ಯಾವದಾಶ್ರಯಭಾವಿಗಳಾಗಿ ಅನುವರ್ತಿಸಬೇಕು; ಹಾಗೆ ಅನುವರ್ತಿಸು ವುದಿಲ್ಲವೆಂಬುದು ಪ್ರತ್ಯಕ್ಷಸಿದ್ಧವಷ್ಟೆ?

### ೧೦೮೮. ಅಥ ರೂಪಲಕ್ಷಣಂ.

ಅಸ್ಮದಾದಿಗಳ ಚಕ್ಷುರಿಂದ್ರಿಯಮಾತ್ರದಿಂದ ಗ್ರಹಿಸಲ್ಪಡುವ ಪದಾರ್ಥ ಕ್ಕಿಂತಲೂ ವಿಜಾತೀಯಗಳಾದ ಶಬ್ದ, ಸ್ಪರ್ಶ, ರಸ, ಗಂಧಗಳೆಂಬುವು ಯಾವು

ವುಂಟೋ ಅವುಗಳಿಗಿಂತಲೂ ವಿಲಕ್ಷಣವಾದ ಅದ್ರವ್ಯವು ರೂಪವೆನಿಸಿಕೊಳ್ಳು ವುದು; ಇಲ್ಲಿಯೂ ಪದಪ್ರಯೋಜನಗಳನ್ನು ಮೊದಲಿನಂತೆಯೇ ತಿಳಿಯಬೇಕು.

## ೧೧೮೯ ಶುಕ್ಲಾದಿಭೇದೇನ ರೂಪಸ್ಯ ಚಾತುರ್ವಿಧ್ಯಕಥನಂ, ತದವಾಂತರಭೇದಪ್ರದರ್ಶನಂ ಚ.

ಇಂಥ ರೂಪವು—ಶುಕ್ಲ, (ಬಿಳುಪು) ರಕ್ತ, (ಕೆಂಪು) ಕೃಷ್ಣ, (ಕಪ್ಪು) ಪೀತ, (ಹಳದಿ) ಎಂದು ನಾಲ್ಕುಬಗೆಯಾಗಿ ವಿಭಾಗಿಸಲ್ಪಡುವುದು.

ಶುಕ್ಲತ್ವವೆಂಬ ಧರ್ಮವನ್ನು ವಿಶೇಷಣವಾಗಿ ಗ್ರಹಿಸುವ ಪ್ರಮಾರೂಪವಾದ ಜ್ಞಾನದಲ್ಲಿ ಯಾವುದು ವಿಶೇಷ್ಯವಾಗಿರುವುದೋ ಅದು ಶುಕ್ಲರೂಪವೆನಿಸಿಕೊಳ್ಳು ವುದು. ಇದರಂತೆಯೇ ರಕ್ತ-ಕೃಷ್ಣ-ಪೀತರೂಪಗಳಿಗೂ ಲಕ್ಷಣಗಳನ್ನು ತಿಳಿಯ ಬೇಕು. ಅಥವಾ ಶುಕ್ಲಾದಿಶಬ್ದವಾಚ್ಯತ್ವವೇ ಶುಕ್ಲಾದಿರೂಪಗಳಿಗೆ ಲಕ್ಷಣವಾಗು ವುದೆಂದು ತಿಳಿಯಬಹುದು.

೧. ಅದರಲ್ಲಿ—ನೀರು-ಬೆಳ್ಳಿ-ಶಂಖ-ಶುಕ್ತಿಕೆ-ಚಂದ್ರ-ನಕ್ಷತ್ರ-ಹಾಲು-ಮೊಸರು ಮೊಲ್ಲೆಯ ಹೂ-ಮಲ್ಲಿಗೆ ಹೂ-ಅರಳು-ಹತ್ತಿ ಇವೇ ಮೊದಲಾದ ವಸ್ತುಗಳಲ್ಲಿರುವ ರೂಪವ್ಯತ್ಯಾಸಗಳು ಶುಕ್ಲರೂಪದ ಒಳಭೇದಗಳಾಗಿರುವುವು.

೨. ಬೆಂಕಿ-ಪಗಡೆಯ ಹೂ-ದಾಳಿಂಬೆಬೀಜ-ಗುಲಗಂಜಿ-ಪುತ್ರಜೀವಿಮಣಿ-ಹವಳ-ಪದ್ಮರಾಗ-ರಕ್ತ-ಇವೇ ಮೊದಲಾದ ವಸ್ತುಗಳಲ್ಲಿರುವ ರೂಪವ್ಯತ್ಯಾಸಗಳು ರಕ್ತ ರೂಪದ ಒಳಭೇದಗಳಾಗಿರುವುವು.

೩. ಮರಕತಮಣಿ--ಇಂದ್ರನೀಲಮಣಿ--ಭ್ರಮರ-ಮೇಘ-ಅಂಧಕಾರ-ತಮಾಲ ವೃಕ್ಷ-ದೂರ್ವಾ (ಗರಿಕೆಹುಲ್ಲು) ಇದ್ದಲು-ಇವೇ ಮೊದಲಾದ ವಸ್ತುಗಳಲ್ಲಿರುವ ರೂಪವ್ಯತ್ಯಾಸಗಳು ಕೃಷ್ಣರೂಪದ ಒಳಭೇದಗಳಾಗಿರುವುವು.

೪. ಕೋವಿದಾರ-ಹರಿತಾಳ (ಹರಿದಳ) ಅರಿಶಿನ-ಸಂಪಿಗೆಹೂ-ಹಳದಿಶಾವಂ ತಿಗೆಹೂ-ಇವೇ ಮೊದಲಾದ ವಸ್ತುಗಳಲ್ಲಿರುವ ರೂಪವ್ಯತ್ಯಾಸಗಳು ಪೀತರೂಪದ ಒಳಭೇದಗಳಾಗಿರುವುವು.

## ೧೧೯೦. ಪೀತರೂಪಸ್ಯ ರಕ್ತರೂಪೇ ಅಂತರ್ಭಾವಪಕ್ಷಪ್ರದರ್ಶನಂ

ಈ ಪೀತರೂಪವು ರಕ್ತರೂಪದ ಒಳಭೇದಗಳಲ್ಲಿ ಒಂದಾಗಿ ಸೇರುವುದೇ ಹೊರತು ಅತಿರಿಕ್ತವಲ್ಲವೆಂದು ಕೆಲವರು ಅಭಿಪ್ರಾಯಪಡುವರು. ಅದಕ್ಕೆ ಯುಕ್ತಿ ಯೇನೆಂದರೆ—ಛಾಂದೋಗ್ಯದಲ್ಲಿ ಪೃಥಿವೀಜಲತೇಜಸ್ಸುಗಳ ಸೃಷ್ಟಿಯನ್ನು ತೋರಿಸಿ ಅನಂತರದಲ್ಲಿ ಅವುಗಳ ತ್ರಿವೃತ್ಕರಣವನ್ನು ಉಪದೇಶಿಸುವ ಸಂದರ್ಭ

ದಲ್ಲಿ—“ಯದಗ್ನೇ ರೋಹಿತಂ ರೂಪಂ ತೇಜಸಸ್ತದ್ರೂಪಂ ಯಚ್ಛುಕ್ಲಂ ತದಪಾಂ ಯತ್ಕೃಷ್ಣಂ ತದನ್ನಸ್ಯ ತ್ರೀಣಿ ರೂಪಾಣೀತ್ಯೇವ ಸತ್ಯಂ” ಎಂದು ಕೆಂಪು-ಬಿಳುಪು-ಕಪ್ಪು-ಎಂಬ ಮೂರೇ ರೂಪಗಳನ್ನು ಶ್ರುತಿ ಉಪದೇಶಿಸಿರುವುದಲ್ಲದೆ ಅತಿರಿಕ್ತವಾದ ರೂಪದ ಪ್ರಸ್ತಾವವನ್ನೇ ಎತ್ತಲಿಲ್ಲ. ಆದುದರಿಂದ ಪೀತರೂಪಕ್ಕೆ ಈ ಮೂರರಲ್ಲಿಯೇ ಅಂತರ್ಭಾವವನ್ನು ಹೇಳಬೇಕಾದುದು ಆವಶ್ಯಕವಾದಮೇಲೆ ರೂಪಸ್ವಭಾವವನ್ನು ನೋಡಿ ರಕ್ತರೂಪದಲ್ಲಿಯೇ ಅಂತರ್ಭಾವವನ್ನು ಹೇಳಬೇಕಾಗಿರುವುದು.

### ೧೮೯೧ ಭಾಸ್ವರಾಭಾಸ್ವರಭೇದೇನ ರೂಪಸ್ಯ ಪುನರ್ದ್ವೈವಿಧ್ಯಂ.

ಪಂಚಭೂತಗಳೊಳಗೆ ಆಕಾಶವಾಯುಗಳೆರಡೂ ರೂಪಶೂನ್ಯಗಳಾದುದರಿಂದ ಉಳಿದ ಮೂರೇ ಭೂತಗಳನ್ನು ಆಶ್ರಯಿಸಿಕೊಂಡಿರುವ ಈ ರೂಪವು ಭಾಸ್ವರರೂಪವೆಂದೂ, ಅಭಾಸ್ವರರೂಪವೆಂದೂ ಪುನಃ ಎರಡು ಬಗೆಯಾಗಿ ವಿಭಾಗಿಸಲ್ಪಡುವುದು. ತೇಜಸ್ಸಿನಲ್ಲಿ ಭಾಸ್ವರರೂಪವೂ, ಜಲಪೃಥಿವಿಗಳಲ್ಲಿ ಅಭಾಸ್ವರರೂಪವೂ ಇರುವುವು. ತೇಜಸ್ಸಿನಲ್ಲಿರುವ ರೂಪವು ರಕ್ತಭಾಸ್ವರರೂಪವಾಗಿರುವುದು; ಜಲದಲ್ಲಿರುವ ರೂಪವು ಶುಕ್ಲಾಭಾಸ್ವರರೂಪವಾಗಿರುವುದು. ಪೃಥಿವಿಯಲ್ಲಿರುವ ರೂಪವು ಹಲವುಬಗೆಯಾದ ಅಭಾಸ್ವರರೂಪವಾಗಿರುವುದು.

### ೧೮೯೨. ಜಲೇ ರೂಪಾಂತರಪ್ರತೀತೇಃ ಪೃಥಿವೀಸಂಸರ್ಗನಿಬಂಧನತ್ವಂ.

ಓಹೋ! ಯಮುನಾಜಲದಲ್ಲಿ ನೀಲರೂಪದ ಪ್ರತೀತಿವ್ಯವಹಾರಗಳೂ, ಸರಸ್ವತೀನದೀಜಲದಲ್ಲಿ ರಕ್ತರೂಪದ ಪ್ರತೀತಿವ್ಯವಹಾರಗಳೂ ಅಬಾಧಿತಗಳಾಗಿ ಲೋಕದಲ್ಲಿ ಕಂಡುಬರುತ್ತಿರುವಾಗ—“ಶುಕ್ಲಾಭಾಸ್ವರರೂಪವೇ ಜಲದಲ್ಲಿರುವುದು” ಎಂದು ಹೇಗೆ ವ್ಯವಸ್ಥೆಪಡಿಸಲಾದೀತು?

ಎಂದು ಆಶಂಕಿಸಲಾಗದು—ಶುಕ್ಲಾಭಾಸ್ವರರೂಪವೇ ಜಲಕ್ಕೆ ಸ್ವಾಭಾವಿಕರೂಪವಾಗಿದ್ದರೂ ಪೃಥಿವಿಯ ಸಂಸರ್ಗವಿಶೇಷದಿಂದ ಅನಿಯತವಾದ ರೂಪಾಂತರವೂ ಜಲದಲ್ಲಿ ಆರೋಪಿತವಾಗಿ ತೋರಬಹುದಷ್ಟೆ?

### ೧೮೯೩ ನೈಯಾಯಿಕವೈಶೇಷಿಕಾದ್ಯನುರೋಧೇನ ಚಿತ್ರಾಖ್ಯರೂಪಾಂತರಸದ್ಭಾವಾಶಂಕಾ.

ನ್ಯಾಯವೈಶೇಷಿಕದರ್ಶನಕಾರರು—ಚಿತ್ರರೂಪವೆಂಬ ಒಂದಾನೊಂದು ರೂಪಾಂತರವನ್ನು ಅಂಗೀಕರಿಸಿ ಇದು ಐದನೆಯ ರೂಪವಾಗಿರುವುದೆಂದು ಹೇಳು

ವರು ; ಇವರ ಅಭಿಪ್ರಾಯವೇನೆಂದರೆ, ನಾನಾಬಣ್ಣವುಳ್ಳ ತಂತುಗಳಿಂದ ನಿರ್ಮ್ಮಾಣ ಮಾಡಿದ ಬಟ್ಟೆಯನ್ನು ಕಣ್ಣಿನಿಂದ ಗ್ರಹಿಸುವ ಕಾಲದಲ್ಲಿ ಅಂಥ ಪಟದ ಚಾಕ್ಷು ಷತ್ವನಿರ್ವಾಹಕ್ಕಾಗಿ ಅದರಲ್ಲಿ ರೂಪವನ್ನು ಒಪ್ಪಿಯೇ ಆಗಬೇಕು ; ರೂಪಶೂನ್ಯ ವಾದ ವಸ್ತುವನ್ನು ಚಕ್ಷುರಿಂದ್ರಿಯದಿಂದ ಗ್ರಹಿಸಲಾಗುವುದಿಲ್ಲವಷ್ಟೆ ? ಇದ ಕ್ಕಾಗಿ ಅಂಥ ಪಟದಲ್ಲಿ ರೂಪವನ್ನು ಒಪ್ಪುವ ಕಾಲದಲ್ಲಿ ಪಟದ ಅವಯವಗಳಾದ ತಂತುಗಳಲ್ಲಿರುವ ನಾನಾರೂಪಸಮುದಾಯವೇ ಅವಯವಿಯಾದ ಪಟದಲ್ಲಿ ಕಾಣುವುವೆಂದು ಹೇಳಲಾಗುವುದಿಲ್ಲ; ಏತಕ್ಕೆಂದರೆ, ಪಟವೆಂಬ ಒಂದು ವಸ್ತುವಿ ನಲ್ಲಿ ಅನೇಕರೂಪಗಳಿರುವುವಾದರೆ ಆ ಒಂದೊಂದು ರೂಪವೂ ಒಂದೊಂದು ಭಾಗದಲ್ಲಿಯೇ ಇರಬೇಕಾಗುವುದಲ್ಲದೆ ಪಟದ ಸಂಪೂರ್ಣಭಾಗವನ್ನು ವ್ಯಾಪಿಸಿ ಕೊಂಡು ಇಲ್ಲವೆಂದು ಹೇಳಬೇಕಾಗಿಬರುವುದು ; ಹಾಗೆ ಹೇಳಲು ಅಡ್ಡಿಯೇನೆಂದು ಆಶಂಕಿಸಲಾಗದು. ಸಂಯೋಗವೆಂಬುದು ಅವ್ಯಾಪ್ಯವೃತ್ತಿಯಾದುದರಿಂದ (ಸ್ವಾಶ್ರಯದ ಏಕಭಾಗದಲ್ಲಿರುವುದಾದುದರಿಂದ) ತನ್ನ ಅಭಾವಕ್ಕೆ ಆಶ್ರಯ ವಾದ ವಸ್ತುವಿನಲ್ಲಿಯೇ ತಾನೂ ಇರಬಹುದು ; ವೃಕ್ಷದ ಒಂದು ಭಾಗದಲ್ಲಿ ಕಪಿಸಂಯೋಗವೂ, ಅದೇ ವೃಕ್ಷದ ಮತ್ತೊಂದು ಭಾಗದಲ್ಲಿ ಕಪಿಸಂಯೋಗಾ ಭಾವವೂ ಇರಬಹುದಷ್ಟೆ? ಹೀಗೆ ಸಂಯೋಗವು ಅವ್ಯಾಪ್ಯವೃತ್ತಿಯಾಗಬಹು ದಾದರೂ ರೂಪವು ಅದರಂತೆ ಅವ್ಯಾಪ್ಯವೃತ್ತಿಯಾಗಲಾರದು ; ಸ್ವಾಶ್ರಯದ ಸಂಪೂರ್ಣಭಾಗವನ್ನೂ ವ್ಯಾಪಿಸಿಕೊಂಡೇ ನಿಲ್ಲುವಂಥದಾಗಿರುವುದು. ಹೀಗಾದ ಮೇಲೆ ಒಂದು ಪಟದಲ್ಲಿ ಯಾವುದಾದರೂ ಒಂದೇ ಒಂದು ರೂಪವು ಸಂಪೂ ರ್ಣಭಾಗವನ್ನೂ ವ್ಯಾಪಿಸಿಕೊಂಡೇ ನಿಲ್ಲುವಂಥದಾಗಿರಬೇಕು ; ಅವಯವಗಳಾದ ತಂತುಗಳಲ್ಲಿರುವ ರೂಪಗಳು ಅನೇಕಗಳಾದುದರಿಂದ ಏಕತ್ವವಿಶಿಷ್ಟವಾದ ಪಟ ದಲ್ಲಿ ಅವುಗಳಿಗೆ ಸ್ಥಿತಿ ಸಂಭವಿಸುವುದಿಲ್ಲ; ಪಟದಲ್ಲಿ ರೂಪವೇ ಬೇಡವೆಂದು ಹೇಳುವುದಾದರೆ ಇದರ ಚಾಕ್ಷುಷತ್ವಕ್ಕೆ ನಿರ್ವಾಹವಾಗುವುದಿಲ್ಲ; ಆದಕಾರಣ ಅವಯವಗತವಾದ ನಾನಾರೂಪಸಮುದಾಯಕ್ಕಿಂತಲೂ ಅತಿರಿಕ್ತವಾದ ಚಿತ್ರ ವೆಂಬ ರೂಪಾಂತರವನ್ನು ಅವಯವಿಯಾದ ಪಟದಲ್ಲಿ ಅಂಗೀಕರಿಸಿಯೇ ಆಗ ಬೇಕು; ಎಂಬುದು ಅವರ ಅಭಿಪ್ರಾಯವಾಗಿರುವುದು.

## ೧೯೪ ಅನ್ಯಥಾನುಪಪತ್ತ್ಯಭಾವಾತ್ ಅಪ್ರಾಮಾಣಿಕತ್ವಾಚ್ಚ ಚಿತ್ರಾಖ್ಯರೂಪಾಂತರಸ್ಯ ಅನಂಗೀಕಾರ್ಯತ್ವಂ.

ಇದು ಸಂಗತವಲ್ಲ ಹೇಗೆಂದರೆ—"ಇದು ಚಿತ್ರರೂಪವಾಗಿರುವುದು" ಎಂಬ ಪ್ರತೀತಿವ್ಯವಹಾರಗಳು ಲೋಕದಲ್ಲಿ ಕಂಡುಬರುವುದರಿಂದ ಇಂಥ

ಪ್ರತೀತಿವ್ಯವಹಾರಗಳ ಉಪಪತ್ತಿಗೋಸ್ಕರವಲ್ಲವೆ ಚಿತ್ರವೆಂಬ ಒಂದು ರೂಪಾಂತರವನ್ನು ಆಲಂಬನವಾಗಿ ಕಲ್ಪಿಸುತ್ತೀರಿ? ಅವಯವಗತವಾದ ನಾನಾರೂಪಸಮುದಾಯವನ್ನೇ ಅವಲಂಬಿಸಿಕೊಂಡು ಈ ಪ್ರತೀತಿವ್ಯವಹಾರಗಳು ಉಪಪನ್ನಗಳಾಗುತ್ತಿರುವಲ್ಲಿ ಪ್ರಮಾಣಶೂನ್ಯವಾದ ಚಿತ್ರವೆಂಬ ರೂಪಾಂತರವನ್ನು ಏಕೆ ಕಲ್ಪಿಸಬೇಕು ?

ಉಭಯವಾದಿಗಳಿಗೂ ಸಂಪ್ರತಿಪನ್ನವಾಗಿರುವ (ಒಪ್ಪಿತವಾಗಿರುವ) ನೀಲಪೀತಾದಿರೂಪಗಳಿಗಿಂತಲೂ ವಿಲಕ್ಷಣವಾದ ಚಿತ್ರರೂಪವೆಂಬುದನ್ನು ಚಿತ್ರವಸ್ತ್ರದಲ್ಲಿ ಒಪ್ಪುವುದಾದರೆ—ನಾನಾಬಣ್ಣವುಳ್ಳ ಚೂರ್ಣಗಳ ಸಮುದಾಯದಿಂದ ರಂಗವಲ್ಲೀರೂಪವಾಗಿ ಅಲಂಕಾರಮಾಡಿದ(ರಂಗೋಲೆ ಹಾಕಿದ)ಸ್ಥಳದಲ್ಲಿಯೂ ಅತಿರಿಕ್ತವಾದ ಚಿತ್ರರೂಪವೆಂಬುದೊಂದನ್ನು ಒಪ್ಪಬೇಕಾಗಿ ಬರುವುದು ; ಅಲ್ಲಿ ನೀವೂ ಒಪ್ಪುವುದಿಲ್ಲವಷ್ಟೆ ? ಅದರಂತೆ ಚಿತ್ರವಸ್ತ್ರದಲ್ಲಿಯೂ ರೂಪಾಂತರವಿಲ್ಲವೆಂದು ಏಕೆ ಹೇಳಬಾರದು ? ಚಿತ್ರಪ್ರತೀತಿಯೂ ಚಿತ್ರವ್ಯವಹಾರವೂ ಎರಡು ಕಡೆಗಳಲ್ಲಿಯೂ ತುಲ್ಯವಾಗಿರುವುವಷ್ಟೆ ?

ಮತ್ತು ಅವಯವಗತವಾದ ಯಾವ ರೂಪಗಳಿಗೆ ಚಿತ್ರಪ್ರತೀತಿವ್ಯವಹಾರವಿಷಯತ್ವವನ್ನು ನೀವು ನಿರಾಕರಿಸುತ್ತೀರೋ, ಅದೇ ರೂಪಗಳಿಗೆ ಅವಯವಿಗತವಾದ ರೂಪಾಂತರವನ್ನು ಕುರಿತು ಕಾರಣತ್ವವನ್ನು ಒಪ್ಪುತ್ತೀರಿ ; ಹೀಗಾದರೆ ಯಾವ ರೂಪಾಂತರವು ಚಿತ್ರಪ್ರತೀತಿವ್ಯವಹಾರಗಳಿಗೆ ನಿಮಿತ್ತವೆಂದು ನಿಮಗೆ ಅಭಿಮತವೋ, ಅಂಥ ರೂಪಾಂತರಕ್ಕೂ ಹೇತುವೆಂದು ನೀವೇ ಒಪ್ಪುವ ನಾನಾರೂಪಸಮುದಾಯವೇ ಸಾಕ್ಷಾತ್ತಾಗಿ ಚಿತ್ರಪ್ರತೀತಿವ್ಯವಹಾರಗಳಿಗೂ ಹೇತುವಾಗಿ ಏಕೆ ಇರಬಾರದು? ಮಧ್ಯದಲ್ಲಿ ಅಪ್ರಾಮಾಣಿಕವಾದ ರೂಪಾಂತರವನ್ನು ಏಕೆ ಒಪ್ಪಬೇಕು ? “ **ತದ್ಧೇತೋರೇವಾಸ್ತು ತದ್ಧೇತುತ್ವಂ ಮಧ್ಯೇ ಕಿಂ ತೇನ** ” ಎಂದಲ್ಲವೆ ನ್ಯಾಯಸ್ವರೂಪವಿರುವುದು ?

## ೧೮೬೫. ಅವಯವ್ಯಭ್ಯುಪಗಮಪಕ್ಷೇಽಪಿ ಚಿತ್ರರೂಪಸ್ಯ ಅನಾವಶ್ಯಕತಾ.

ಪೂಜ್ಯರೆ ! ಅವಯವಗಳಿಗಿಂತಲೂ ಅತಿರಿಕ್ತವಾದ ಅವಯವಿಯನ್ನು ಅಂಗೀಕರಿಸದವರ ಮತದಲ್ಲಿ ಚಿತ್ರವೆಂಬ ರೂಪಾಂತರದ ಅಂಗೀಕಾರವು ಅನಾವಶ್ಯಕವಾಗಿದ್ದರೂ, ಅತಿರಿಕ್ತಾವಯವಿಯನ್ನು ಅಂಗೀಕರಿಸುವವರ ಮತದಲ್ಲಿ ಚಿತ್ರವೆಂಬ ರೂಪಾಂತರದ ಅಂಗೀಕಾರವು ಆವಶ್ಯಕವೆಂದೇ ಹೇಳಬೇಕು ; ಏತಕ್ಕೆಂದರೆ

ರೂಪವೆಂಬುದಕ್ಕೆ ಅವ್ಯಾಪ್ಯವೃತ್ತಿತ್ವವು ಸಂಭವಿಸುವುದಿಲ್ಲವಾದುದರಿಂದ ವ್ಯಾಪ್ಯವೃತ್ತಿತ್ವನಿಯಮವಿರುವಕಾರಣ " ಅವ್ಯಾಪ್ಯವೃತ್ತಿಯಾದ ನಾನಾರೂಪವು ಅವಯವಿಯಲ್ಲಿ ಉತ್ಪನ್ನವಾಗುವುದು " ಎಂದು ಹೇಳಲು ಅವಕಾಶವಿಲ್ಲವಾದುದರಿಂದಲೂ, ಅವಯವಿಯಲ್ಲಿ ರೂಪವೇ ಇಲ್ಲವೆಂದು ಹೇಳಿಬಿಡುವುದಾದರೆ ಚಕ್ಷುರಿಂದ್ರಿಯಗೋಚರತ್ವವೇ ತಪ್ಪಿಹೋಗುವುದಾದುದರಿಂದಲೂ ಚಾಕ್ಷುಷತ್ವನಿರ್ವಾಹಕ್ಕಾಗಿ ಅವಯವಿಯಲ್ಲಿ ಚಿತ್ರವೆಂಬ ರೂಪಾಂತರದ ಅಂಗೀಕಾರವು ಆವಶ್ಯಕವಾಗಿರುವುದಲ್ಲವೆ ?

ಇಲ್ಲ ; ಅವಯವಾತಿರಿಕ್ತಾವಯವಿವಾದಿಗಳ ಮತದಲ್ಲಿಯೂ ರೂಪಾಂತರಾಂಗೀಕಾರವು ಆವಶ್ಯಕವಲ್ಲ ; ರೂಪಕ್ಕೆ ವ್ಯಾಪ್ಯವೃತ್ತಿತ್ವನಿಯಮವಿದ್ದರಲ್ಲವೆ ಹಾಗೆ ಹೇಳಲಾದೀತು ? ಅಂಥ ನಿಯಮವೇ ಇಲ್ಲ ; ಸಂಯೋಗವೆಂಬುದು ಹೇಗೆ ಅವ್ಯಾಪ್ಯವೃತ್ತಿಯಾಗಿರುವುದೋ, ಅದರಂತೆ ರೂಪವೂ ಅವ್ಯಾಪ್ಯವೃತ್ತಿಯಾಗಿರಲು ತಡೆಯಿಲ್ಲ. ನಾನಾರೂಪವುಳ್ಳ ಅವಯವಗಳಿಂದ ನಿರ್ಮಿತವಾದ ಅವಯವಿಯಲ್ಲಿ ಒಂದು ಭಾಗದಲ್ಲಿ ನೀಲರೂಪದ ಸದ್ಭಾವವೂ, ಮತ್ತೊಂದು ಭಾಗದಲ್ಲಿ ಅದೇ ನೀಲರೂಪದ ಅಸದ್ಭಾವವೂ ಪ್ರತ್ಯಕ್ಷವಾಗಿ ಕಂಡುಬರುತ್ತಿರುವಾಗ ಸಂಯೋಗದಂತೆ ರೂಪವೂ ಏಕೆ ಅವ್ಯಾಪ್ಯವೃತ್ತಿಯಾಗಿರಬಾರದು ?

## ೧೯೬. ರೂಪಸ್ಯ ವ್ಯಾಪ್ಯವೃತ್ತಿತ್ವನಿಯಮಾಸಂಭವೋಪಪಾದನಂ.

* ಅದೇತಕ್ಕೆ ? ಅನುಮಾನಪ್ರಮಾಣದಿಂದ ರೂಪಕ್ಕೆ ವ್ಯಾಪ್ಯವೃತ್ತಿತ್ವನಿಯಮವನ್ನು ಸಾಧಿಸುವೆವು ; ಹೇಗೆಂದರೆ—ನಾನಾರೂಪವುಳ್ಳ ಅವಯವಗಳಿಂದ ಜನಿತವಾದ ಅವಯವಿಸ್ಥಳದಲ್ಲಿ—" **ಅವಯವರೂಪಾಣಿ ವ್ಯಾಪ್ಯವೃತ್ತಿ**

---

* ಬರೀ ಬಿಳುಪುಬಣ್ಣವುಳ್ಳ ನೂಲುಗಳಿಂದಲೇ ಬಟ್ಟೆಯನ್ನು ನಿರ್ಮಿಸಿದರೆ ಅಂಥ ಬಟ್ಟೆಯಲ್ಲಿಯೂ ಬರೀ ಬಿಳುಪು ಬಣ್ಣವೇ ಉಂಟಾಗುವುದು. ಮತ್ತು ಅದು ಆ ಬಟ್ಟೆಯ ಎಲ್ಲಾ ಭಾಗವನ್ನೂ ವ್ಯಾಪಿಸಿಕೊಂಡೇ ಇರುವುದು. ಇದರಿಂದ ತಿಳಿದುಬರುವುದೇನೆಂದರೆ ಯಾವ ರೂಪವು ಅವಯವರೂಪವೆನಿಸಿಕೊಂಡಿರುವುದೋ ಅದು ಅವಯವಿಯಲ್ಲಿ ವ್ಯಾಪ್ಯವೃತ್ತಿರೂಪವನ್ನೇ ಉಂಟುಮಾಡುವುದು ; ಎಂದರೆ ಅವಯವರೂಪತ್ವಕ್ಕೂ ವ್ಯಾಪ್ಯವೃತ್ತಿರೂಪಕಾರಣತ್ವಕ್ಕೂ ಸಾಹಚರ್ಯನಿಯಮವುಂಟೆಂದು ಈ ದೃಷ್ಟಾಂತದಿಂದ ತೋರುವುದು ; ಹೀಗಿರುವಾಗ ನಾನಾರೂಪವುಳ್ಳ ತಂತುಗಳಿಂದ ಪಟವನ್ನು ನಿರ್ಮಿಸುವ ಸ್ಥಳದಲ್ಲಿಯೂ ಆ ತಂತುಗಳ ರೂಪದಲ್ಲಿ ಅವಯವರೂಪತ್ವವೆಂಬ ವ್ಯಾಪ್ಯಧರ್ಮವಿರುವಕಾರಣ ವ್ಯಾಪ್ಯವೃತ್ತಿರೂಪಜನಕತ್ವವೆಂಬ ವ್ಯಾಪಕಧರ್ಮವೂ ಅದರಲ್ಲಿ ಸಿದ್ಧಿಸುವುದು.

**ರೂಪಾರಂಭಕಾಣಿ ಅವಯವರೂಪತ್ವಾತ್ ಶ್ವೇತಪಟಾರಂಭಕತಂತುರೂಪವತ್**" ಎಂಬ ಅನುಮಾನದಿಂದ ರೂಪಕ್ಕೆ ವ್ಯಾಪ್ಯವೃತ್ತಿತ್ವವು ಸಿದ್ಧಿಸುವುದಾದಪ್ರಯುಕ್ತ ಅವ್ಯಾಪ್ಯವೃತ್ತಿತ್ವವು ಬಾಧಿತವಾಗಿರುವುದಷ್ಟೆ?

* ಇಲ್ಲ—ಪ್ರತ್ಯಕ್ಷವೆಂಬ ಪ್ರಬಲಪ್ರಮಾಣದಿಂದ ಅವ್ಯಾಪ್ಯವೃತ್ತಿತ್ವವೂ ನಿಶ್ಚಿತವಾಗಿರುವಾಗ ದುರ್ಬಲವಾದ ಪ್ರಮಾಣದಿಂದ ರೂಪಕ್ಕೆ ವ್ಯಾಪ್ಯವೃತ್ತಿತ್ವನಿಯಮವನ್ನು ಸಾಧಿಸಲಾಗುವುದಿಲ್ಲ; ಆದರೂ ಸಾಧಿಸುವುದಾದರೆ ಅದೇ ರೂಪವನ್ನು ದೃಷ್ಟಾಂತಪಡಿಸಿಕೊಂಡು "**ಸಂಯೋಗಃ ವ್ಯಾಪ್ಯವೃತ್ತಿಃ ಗುಣತ್ವಾತ್ ರೂಪವತ್**" ಎಂಬ ಅನುಮಾನದಿಂದ ಸಂಯೋಗಕ್ಕೆ ವ್ಯಾಪ್ಯವೃತ್ತಿತ್ವವನ್ನು ಏಕೆ ಸಾಧಿಸಬಾರದು? ಪ್ರತ್ಯಕ್ಷವಿರೋಧವು ಉಭಯತ್ರ ತುಲ್ಯವಾಗಿರುವುದಷ್ಟೆ?

ಮತ್ತು—ಚಿತ್ರರೂಪದ ಪ್ರತೀತಿಯೂ ವ್ಯವಹಾರವೂ ಲೋಕದಲ್ಲಿ ಕಾಣ್ಬುವಂತೆ ಚಿತ್ರರಸ-ಚಿತ್ರಗಂಧಗಳ ಪ್ರತೀತಿವ್ಯವಹಾರಗಳೂ ಲೋಕದಲ್ಲಿ ಕಂಡುಬರುವುವು; ಅಲ್ಲಿ ನಾನಾರಸಗಳಿಗೂ ನಾನಾಗಂಧಗಳಿಗೂ ಆಶ್ರಯಗಳಾಗಿರುವ ಅವಯವಗಳಿಂದ ಜನಿತವಾದ ಅವಯವಿಯಲ್ಲಿ ಚಿತ್ರವೆಂಬ ರಸಾಂತರವನ್ನೂ ಚಿತ್ರವೆಂಬ ಗಂಧಾಂತರವನ್ನೂ ನೀವೂ ಒಪ್ಪುವುದಿಲ್ಲ; ಅವಯವಗತವಾದ ನಾನಾರಸಗಂಧಗಳೇ ಚಿತ್ರರಸಗಂಧಪ್ರತೀತಿವ್ಯವಹಾರಗಳಿಗೆ ವಿಷಯಗಳಾಗಿರುವುವೆಂದು ನೀವೂ ಒಪ್ಪಿರುತ್ತೀರಿ; ಏತಕ್ಕೆಂದರೆ ನಾನಾಸ್ಪರ್ಶಗಳಿಗೂ ನಾನಾರೂಪಗಳಿಗೂ ಆಶ್ರಯಗಳಾಗಿರುವ ಅವಯವಗಳಿಂದ ಜನಿತವಾದ ಏಕಾವಯವಿಯಲ್ಲಿ ಅವ್ಯಾಪ್ಯವೃತ್ತಿಯಾದ ಅವಯವಗತಸ್ಪರ್ಶಗಳೂ ಅವಯವಗತರೂಪಗಳೂ ತೋರುವುದಕ್ಕೆ ಅವಕಾಶವಿಲ್ಲವಾದುದರಿಂದಲೂ, ಸ್ಪರ್ಶವೂ ರೂಪವೂ ಬೇಡವೇಬೇಡವೆನ್ನುವುದಾದರೆ ಸ್ಪಾರ್ಶನತ್ವ-ಚಾಕ್ಷುಷತ್ವಗಳಿಗೆ ತೊಂದರೆಯುಂಟಾಗುವುದರಿಂದಲೂ ಚಿತ್ರವೆಂಬ ಸ್ಪರ್ಶಾಂತರವನ್ನೂ ಚಿತ್ರವೆಂಬ ರೂಪಾಂತರವನ್ನೂ ಒಪ್ಪಬೇಕಾದುದು ಆವಶ್ಯಕವಾಗಿದ್ದರೂ, ರಸವಿಷಯದಲ್ಲಿಯೂ ಗಂಧವಿಷಯದಲ್ಲಿಯೂ ಅಂಥ ತೊಂದರೆಯೇನೂ ಇಲ್ಲ; ಅವಯವಿ ರಸಹೀನವಾಗಿದ್ದರೂ ಗಂಧಹೀನವಾಗಿದ್ದರೂ ರಸನೇಂದ್ರಿಯಗ್ರಾಹ್ಯತ್ವವೂ ಘ್ರಾಣೇಂದ್ರಿಯಗ್ರಾಹ್ಯತ್ವವೂ ಈ ಅವಯವಿಗೆ ಸಂಭವಿಸಬಹುದು; ಸ್ಪರ್ಶದಂತೆಯೂ ರೂಪದಂತೆಯೂ ರಸಗಂಧಗಳೂ ವ್ಯಾಪ್ಯವೃತ್ತಿ

* ರೂಪವೂ ಗುಣ; ಸಂಯೋಗವೂ ಗುಣ; ಗುಣತ್ವವೆಂಬ ವ್ಯಾಪ್ಯಧರ್ಮವನ್ನು ಪಡೆದಿರುವ ರೂಪವು ವ್ಯಾಪ್ಯವೃತ್ತಿತ್ವವೆಂಬ ವ್ಯಾಪಕಧರ್ಮವನ್ನು ಪಡೆವುದಾದರೆ—ಸಂಯೋಗದಲ್ಲಿಯೂ ಗುಣತ್ವವಿರುವಾಗ ಸಂಯೋಗವೂ ವ್ಯಾಪ್ಯವೃತ್ತಿತ್ವಧರ್ಮವನ್ನು ಏಕೆ ಪಡೆಯಲಾರದು? ಪಡೆದೇ ಪಡೆವುದು.

ಗಳಾಗಿಯೇ ಇರಬೇಕೆಂಬ ನಿಯಮವಿಲ್ಲವಾದುದರಿಂದ ಅವಯವಗತವಾದ ರಸಗಂಧಗಳೇ ಅವಯವಿಯಲ್ಲಿ ತೋರಲು ಅಡ್ಡಿಯಿಲ್ಲ; ಆದಕಾರಣ ಚಿತ್ರವೆಂಬ ರಸಾಂತರವನ್ನೂ ಚಿತ್ರವೆಂಬ ಗಂಧಾಂತರವನ್ನೂ ಅಂಗೀಕರಿಸಬೇಕಾದುದಿಲ್ಲವೆಂದಲ್ಲವೆ ನೀವು ನಿರ್ವಹಿಸುತ್ತೀರಿ; ಹೀಗಾದಮೇಲೆ ಇದೇ ನ್ಯಾಯವನ್ನು ರೂಪವಿಷಯದಲ್ಲಿಯೂ ಸ್ಪರ್ಶವಿಷಯದಲ್ಲಿಯೂ ಏಕೆ ಅಂಗೀಕರಿಸಬಾರದು? ರೂಪಸ್ಪರ್ಶಗಳಿಗೆ ವ್ಯಾಪ್ಯವೃತ್ತಿತ್ವನಿಯಮವನ್ನು ಯಾವಾಗ ಖಂಡಿಸಿಬಿಟ್ಟೆವೋ, ಆಗ ಅವಯವಗತವಾದ ನಾನಾರೂಪಸ್ಪರ್ಶಗಳೇ ಅವಯವಿಯಲ್ಲಿ ತೋರಲು ಅಡ್ಡಿಯೇನು? ಸ್ಪರ್ಶರೂಪರಸಗಂಧಗಳೆಂಬ ನಾಲ್ಕರೊಳಗೆ ಎರಡಕ್ಕೆ ಒಂದು ನ್ಯಾಯವನ್ನೂ ಇನ್ನೆರಡಕ್ಕೆ ಮತ್ತೊಂದು ನ್ಯಾಯವನ್ನೂ ಏಕೆ ಅಂಗೀಕರಿಸಬೇಕು? ಆದಕಾರಣ ಪ್ರತ್ಯಕ್ಷಪ್ರಮಾಣವಿರುದ್ಧವಾದುದರಿಂದಲೂ, ಪ್ರಮಾಣಾಂತರಶೂನ್ಯವಾದುದರಿಂದಲೂ ಚಿತ್ರವೆಂಬ ರೂಪಾಂತರವನ್ನು ಒಪ್ಪಲಾಗುವುದಿಲ್ಲ; ಅವಯವಗತವಾದ ನಾನಾರೂಪಗಳನ್ನೇ ಅವಲಂಬಿಸಿ ಚಿತ್ರರೂಪಪ್ರತೀತಿವ್ಯವಹಾರಗಳಿಗೆ ಉಪಪತ್ತಿ ಸಂಭವಿಸಲು ತಡೆಯಿಲ್ಲ.

ಹೀಗೆ ಈ ಚಿತ್ರರೂಪದ ಖಂಡನಪ್ರಕಾರವನ್ನು ಜೀವಪರಿಚ್ಛೇದದಲ್ಲಿ ಸಂಕ್ಷೇಪವಾಗಿ ತೋರಿಸಿದ್ದೆವು; ಬಾಲಕರ ಬುದ್ಧಿವೈಶದ್ಯಕ್ಕಾಗಿಯೂ ಕುತೂಹಲವೃದ್ಧಿಗಾಗಿಯೂ ಅದನ್ನೇ ಇಲ್ಲಿ ಇನ್ನೂ ಸ್ವಲ್ಪಮಟ್ಟಿಗೆ ವಿಸ್ತರಿಸಿರುವೆವು.

## ೧೯೬೭ ಅಥ ರಸಲಕ್ಷಣಂ ತದ್ವಿಭಾಗಶ್ಚ

ಅಸ್ಮದಾದಿಗಳ ಜಿಹ್ವೇಂದ್ರಿಯಮಾತ್ರದಿಂದ ಗ್ರಹಿಸಲ್ಪಡುವ ಪದಾರ್ಥಕ್ಕಿಂತಲೂ ವಿಜಾತೀಯಗಳಾದ ಶಬ್ದ-ಸ್ಪರ್ಶ-ರೂಪ-ಗಂಧಗಳೆಂಬುವು ಯಾವುವುಂಟೋ, ಅವುಗಳಿಗಿಂತಲೂ ವಿಲಕ್ಷಣವಾದ ಅದ್ರವ್ಯವು ರಸವೆನಿಸಿಕೊಳ್ಳುವುದು; ಇಲ್ಲಿಯೂ ಪದಪ್ರಯೋಜನಗಳನ್ನು ಮೊದಲಿನಂತೆಯೇ ತಿಳಿಯಬೇಕು.

ಇಂಥ ರಸವು—ಮಧುರ(ಶೀ), ಅಮ್ಲ (ಹುಳಿ), ಲವಣ (ಉಪ್ಪು) ತಿಕ್ತ (ಕಹಿ), ಕಟು (ಕಾರ), ಕಷಾಯ (ಒಗಚು) ಎಂದು ಆರು ಬಗೆಯಾಗಿ ವಿಂಗಡಿಸಲ್ಪಡುವುದು. ಇವುಗಳೊಳಗೆ ಕಟುರಸವನ್ನು ಉಷ್ಣರಸವೆಂಬುದಾಗಿಯೂ ಶಾಸ್ತ್ರದಲ್ಲಿ ವ್ಯವಹರಿಸುವ ವಾಡಿಕೆಯುಂಟು.

ಮಧುರತ್ವವೆಂಬ ಧರ್ಮವನ್ನು ವಿಶೇಷಣವಾಗಿ ಗ್ರಹಿಸುವ ಪ್ರಮಾರೂಪಜ್ಞಾನದಲ್ಲಿ ಯಾವುದು ವಿಶೇಷ್ಯವಾಗಿರುವುದೋ ಅದು ಮಧುರರಸವೆನಿಸಿಕೊಳ್ಳುವುದು; ಇದರಂತೆಯೇ ಅಮ್ಲ-ಲವಣ-ತಿಕ್ತ-ಕಟು-ಕಷಾಯರಸಗಳ ಲಕ್ಷಣಗಳನ್ನೂ

ತಿಳಿಯಬೇಕು. ಅಥವಾ ಮಧುರಾದಿಶಬ್ದವಾಚ್ಯತ್ವವೇ ಮಧುರಾದಿರಸಗಳಿಗೆ ಲಕ್ಷಣವಾಗುವುದೆಂದು ತಿಳಿಯಬಹುದು.

೧ ಅದರಲ್ಲಿ—ಕಬ್ಬು-ಹಾಲು-ಬೆಲ್ಲ-ಸಕ್ಕರೆ-ಕಲ್ಲುಸಕ್ಕರೆ--ಜೇನುತಪ್ಪ--ದ್ರಾಕ್ಷಿ ಖರ್ಜೂರ-ಇವೇ ಮೊದಲಾದ ವಸ್ತುಗಳಲ್ಲಿರುವ ರಸವ್ಯತ್ಯಾಸಗಳು ಮಧುರರಸದ ಒಳಭೇದಗಳಾಗಿರುವುವು.

೨ ಮಾವಿನಕಾಯಿ, ನೆಲ್ಲಿಕಾಯಿ, ನಿಂಬೆಹಣ್ಣು, ಹುಣಿಸೇಹಣ್ಣು ಇವೇ ಮೊದಲಾದ ವಸ್ತುಗಳಲ್ಲಿರುವ ರಸವ್ಯತ್ಯಾಸಗಳು ಆಮ್ಲರಸದ ಒಳಭೇದಗಳಾಗಿರುವುವು.

೩ ಲೋಕಪ್ರಸಿದ್ಧವಾದ ಐದುಬಗೆಯ ಉಪ್ಪುಗಳಲ್ಲಿರುವ ರಸವ್ಯತ್ಯಾಸಗಳು ಲವಣರಸದ ಒಳಭೇದಗಳಾಗಿರುವುವು.

೪ ಕಿಂಪಾಕವೆಂಬ ವಿಷವೃಕ್ಷ, ಹಾವುಮೆಕ್ಕೆಕಾಯಿ, ಬೇವು ಮುಂತಾದ ವಸ್ತುಗಳಲ್ಲಿರುವ ರಸವ್ಯತ್ಯಾಸಗಳು ತಿಕ್ತರಸದ ಒಳಭೇದಗಳಾಗಿರುವುವು.

೫ ಶುಂಠಿ, ಹಸೀಶುಂಠಿ, ತಿಪ್ಪಲಿ, ಮೆಣಸು, ಮೆಣಸಿನಕಾಯಿ, ಸಾಸುವೆ ಮುಂತಾದ ವಸ್ತುಗಳಲ್ಲಿರುವ ರಸವ್ಯತ್ಯಾಸಗಳು ಕಟುರಸದ ಅಥವಾ ಉಷ್ಣರಸದ ಒಳಭೇದಗಳಾಗಿರುವುವು.

೬ ಅಳಲೇಕಾಯಿ, ತಾರೆಕಾಯಿ, ಮಾವಿನಚಿಗುರು ಮುಂತಾದ ವಸ್ತುಗಳಲ್ಲಿರುವ ರಸವ್ಯತ್ಯಾಸಗಳು ಕಷಾಯರಸದ ಒಳಭೇದಗಳಾಗಿರುವುವು.

ಉಷ್ಣರಸವೂ, ಕಷಾಯರಸವೂ ತಿಕ್ತರಸದ ಒಳಭೇದಗಳಿಗೆ ಸೇರಿದುವುವೆಂದು ಕೆಲವರು ತಿಳಿದಿರುವರು; ಆದರೆ ಇವರ ತಿಳಿವು ಪ್ರತ್ಯಕ್ಷವಿರುದ್ಧವಾಗಿಯೂ, ಶಾಸ್ತ್ರವಿರುದ್ಧವಾಗಿಯೂ ಇರುವುದರಿಂದ ಭ್ರಾಂತಿಯೇ ಹೊರತು ಪ್ರಮಾರೂಪವಲ್ಲ.

ಇಂಥ ರಸಗಳ ವಿಷಯವಾಗಿ ತಿಳಿಯಬೇಕಾದ ಇನ್ನೂ ಅನೇಕವಿಷಯಗಳನ್ನು ಆಯುರ್ವೇದಗ್ರಂಥಗಳಿಂದ ವಿಶದವಾಗಿ ತಿಳಿಯಬಹುದು.

## ೧೯೪೮ ಅಥ ಗಂಧಲಕ್ಷಣಂ ತದ್ವಿಭಾಗಶ್ಚ.

ಅಸ್ಮದಾದಿಗಳ ಘ್ರಾಣೇಂದ್ರಿಯಮಾತ್ರದಿಂದ ಗ್ರಹಿಸಲ್ಪಡುವ ಪದಾರ್ಥಕ್ಕಿಂತಲೂ ವಿಜಾತೀಯಗಳಾದ ಶಬ್ದ, ಸ್ಪರ್ಶ, ರೂಪ, ರಸಗಳೆಂಬುವು ಯಾವುವುಂಟೋ, ಅವುಗಳಿಗಿಂತಲೂ ವಿಲಕ್ಷಣವಾದ ಅದ್ರವ್ಯವು ಗಂಧವೆನಿಸಿಕೊಳ್ಳುವುದು. ಇಲ್ಲಿಯೂ ಪದಪ್ರಯೋಜನಗಳನ್ನು ಮೊದಲಿನಂತೆಯೇ ತಿಳಿಯಬೇಕು.

ಇಂಥ ಗಂಧವು ಸುರಭಿಯೆಂದೂ, (ಸುಗಂಧವೆಂದೂ) ಅಸುರಭಿಯೆಂದೂ (ದುರ್ಗಂಧವೆಂದೂ) ಎರಡುಬಗೆಯಾಗಿ ವಿಂಗಡಿಸಲ್ಪಡುವುದು.

ಸುರಭಿತ್ವವೆಂಬ ಧರ್ಮವನ್ನು ವಿಶೇಷಣವಾಗಿ ಗ್ರಹಿಸುವ ಪ್ರಮಾರೂಪವಾದ ಜ್ಞಾನದಲ್ಲಿ ಯಾವುದು ವಿಶೇಷ್ಯವಾಗಿರುವುದೋ, ಅದು ಸುರಭಿಗಂಧವೆನಿಸಿಕೊಳ್ಳುವುದು. ಇದರಂತೆಯೇ ಅಸುರಭಿಗಂಧಕ್ಕೂ ಲಕ್ಷಣವನ್ನು ತಿಳಿಯಬೇಕು. ಅಥವಾ ಸುರಭ್ಯಸುರಭಿಶಬ್ದವಾಚ್ಯತ್ವವೇ ಸುರಭಿ-ಅಸುರಭಿಗಂಧಗಳಿಗೆ ಲಕ್ಷಣವಾಗುವುದೆಂದು ತಿಳಿಯಬಹುದು.

ಅದರಲ್ಲಿ ಚಂದನ, ಕಸ್ತೂರಿ, ಪುಣುಗು, ಜವ್ವಾಜಿ, ಕೇಸರಿ, ಪಚ್ಚಕರ್ಪೂರ ಏಲಕ್ಕಿ, ಸಂಪಿಗೆ, ಮಲ್ಲಿಗೆ, ಇರುವಂತಿಗೆ, ಶಾವಂತಿಗೆ, ವೊಲ್ಲೆ, ಜಾಜಿ ಮುಂತಾದ ವಸ್ತುಗಳಲ್ಲಿರುವ ಗಂಧವ್ಯತ್ಯಾಸಗಳು ಸುರಭಿಗಂಧದ ಒಳಭೇದಗಳಾಗಿರುವುವು.

ಮಲ, ಮೂತ್ರ, ರೇತಸ್ಸು, ರಕ್ತ, ಮಾಂಸ, ಕೊಬ್ಬು, ಬೆವರು, ಕೊಳೆತು ಹೋದವಸ್ತು, ಹಳಸಿಹೋದವಸ್ತು ಇವೇ ಮೊದಲಾದ ವಸ್ತುಗಳಲ್ಲಿರುವ ಗಂಧವ್ಯತ್ಯಾಸಗಳು ಅಸುರಭಿಗಂಧದ ಒಳಭೇದಗಳಾಗಿರುವುವು.

## ೧೮೯. ಪವನಸಲಿಲಯೋರ್ಗಂಧಪ್ರತೀತೇಃ ಪೃಥಿವೀ ಸಂಸರ್ಗನಿಬಂಧನತ್ವಂ.

ಈ ಗಂಧವು ಪೃಥಿವೀಮಾತ್ರದಲ್ಲಿರುವ ಗುಣವಾಗಿರುವುದು. ಓಹೋ ಹಾಗಾದರೆ "**ಸುರಭಿರ್ವಾಯುಃ**" (ಸುವಾಸನೆಯುಳ್ಳ ಗಾಳಿ) ಎಂಬುದಾಗಿಯೂ "**ಸುರಭಿ ಜಲಂ**" (ಸುವಾಸನೆಯುಳ್ಳ ನೀರು) ಎಂಬುದಾಗಿಯೂ ವಿವೇಕಿಗಳಾದವರೂ ವ್ಯವಹರಿಸುತ್ತಿರುವರು; ಇದು ಹೇಗೆ ಸಂಗತವಾದೀತು? ವಾಯುಜಲಗಳಲ್ಲಿ ಗಂಧವಿಲ್ಲವಷ್ಟೆ? ಹವುದು ಅವುಗಳಲ್ಲಿ ಗಂಧವಿಲ್ಲ; ಆದರೂ ವಿವೇಕಿಗಳ ವ್ಯವಹಾರವು ಅವುಗಳೆರಡರಲ್ಲಿಯೂ ಪಾರ್ಥಿವಪದಾರ್ಥಗಳ ಸಂಸರ್ಗದಿಂದ ಸಂಗತವಾಗಬಹುದು. ಸುಡುವ ಶಕ್ತಿ ಕಬ್ಬಿಣಕ್ಕೆ ಇಲ್ಲದಿದ್ದರೂ "**ಅಯೋ ದಹತಿ**" (ಕಬ್ಬಿಣವು ಸುಡುತ್ತದೆ) ಎಂಬ ವ್ಯವಹಾರವು ಕಬ್ಬಿಣದಲ್ಲಿ ಅಗ್ನಿ ಸಂಸರ್ಗವುಂಟಾದುದರಿಂದ ಹೇಗೆ ಸಂಗತವಾಗುವುದೋ, ಅದರಂತೆ ಜಲದಲ್ಲಿಯೂ ಗಾಳಿಯಲ್ಲಿಯೂ ಸುಗಂಧವಸ್ತುಗಳ ಸಂಸರ್ಗದಿಂದ ಉಕ್ತವ್ಯವಹಾರವು ಸಂಗತವಾಗಲು ಅಡ್ಡಿಯಿಲ್ಲ. ಅವುಗಳ ಸಂಸರ್ಗವಿರುವಾಗಲೇ ಸುಗಂಧಪ್ರತೀತಿಯಿರುವುದೂ, ಸಂಸರ್ಗವಿಲ್ಲದಿರುವಾಗ ಸುಗಂಧಪ್ರತೀತಿಯಿಲ್ಲದಿರುವುದೂ ಪ್ರತ್ಯಕ್ಷಸಿದ್ಧವಷ್ಟೆ?

ಪೂಜ್ಯರೆ! ಅಚಿತ್ತತ್ತ್ವ ಪರಿಚ್ಛೇದದಲ್ಲಿ ಪಂಚಭೂತಗಳಿಗೂ ಪಂಚೀಕರಣವನ್ನು ಯಾವಾಗ ತೋರಿಸಿದಿರೋ, ಆಗಲೇ ಒಂದೊಂದು ಭೂತದಲ್ಲಿಯೂ ಐದು ಭೂತಗಳ ಸಂಸರ್ಗವಿದ್ದೇ ಇರುವುದರಿಂದ ಎಲ್ಲಾ ಭೂತಗಳಲ್ಲಿಯೂ ಶಬ್ದಸ್ಪರ್ಶರೂಪರಸಗಂಧಗಳ ಸಾಂಕರ್ಯವು ಇದ್ದೇ ಇರುವಾಗ ಗುಣವಿಶೇಷವು ಭೂತವಿಶೇಷದಲ್ಲಿ ಇಲ್ಲವೆಂದು ಹೇಗೆ ಹೇಳಲಾದೀತು ?

ಎಲ್ಲಾ ಭೂತಗಳಲ್ಲಿಯೂ ಎಲ್ಲಾ ಗುಣಗಳ ಸಾಂಕರ್ಯವೂ ಸೃಷ್ಟಿಕಾಲದಲ್ಲಿಯೇ ಸಿದ್ಧವಾಗಿದ್ದರೂ ಆ ಆ ಅಭಿವ್ಯಂಜಕಗಳ ಬಲದಿಂದ ಈಗ ಒಂದೊಂದರಲ್ಲಿ ಒಂದೊಂದು ಗುಣದ ಅಭಿವ್ಯಕ್ತಿ ಸ್ಫುಟವಾಗಿ ಆಗುವುದು; ಮರುಭೂಮಿಯ ಪ್ರದೇಶವಿಶೇಷದಲ್ಲಿ ಸೂರ್ಯಕಿರಣಸಂಬಂಧವುಂಟಾದಾಗ ದೂರದಲ್ಲಿರುವವರಿಗೆ ಜಲಧಾರಾಭ್ರಾಂತಿಯುಂಟಾಗುವುದು; ಸೂರ್ಯಕಿರಣವೆಂಬ ತೇಜಸ್ಸಿನಲ್ಲಿ ಪಂಚೀಕರಣದಿಂದ ಜಲವು ಪೂರ್ವದಲ್ಲಿಯೇ ಮಿಶ್ರಿತವಾಗಿದ್ದರೂ—ಅದೃಷ್ಟವೇ ಮೊದಲಾದ ಅಭಿವ್ಯಂಜಕಸಾಮಗ್ರಿಗಳು ಸೇರಿದ ಕಾಲದಲ್ಲಿ ಅಂಥ ಜಲದ ಅಭಿವ್ಯಕ್ತಿ ಉಂಟಾಗುವುದಷ್ಟೆ ?

ಹವುದು—ಉಂಟಾಗುವುದು; ಆದಮಾತ್ರಕ್ಕೆ ಭೂತಾಂತರದಲ್ಲಿ ಗುಣಾಂತರವನ್ನು ಭೂತಾಂತರಸಂಸರ್ಗವಿಲ್ಲದೆ ಯಾರಾದರೂ ತೋರಿಸಬಲ್ಲರೋ ? ಆ ಆ ಗುಣಗಳಿಗೆ ಆಶ್ರಯಗಳಾಗಿರುವ ಭೂತಗಳು ಭೂತಾಂತರಗಳಲ್ಲಿ ಸೇರಿದುದರಿಂದಲೇ ಗುಣಾಂತರಗಳನ್ನು ಅಲ್ಲಲ್ಲಿ ತೋರಿಸಬಹುದೇ ಹೊರತು ಮತ್ತೆಬೇರೆ ಇಲ್ಲ: ಭೂತಾಂತರದಲ್ಲಿ ವಸ್ತ್ವಂತರಸಂಸರ್ಗವು—ಪಂಚೀಕರಣಕಾಲದಲ್ಲಿ ಸಿದ್ಧವಾದ ಪ್ರಾಚೀನಸಂಸರ್ಗವಾದರೂ ಸರಿಯೆ, ಈಗ ತತ್ಕಾಲದಲ್ಲಿ ಉಂಟಾಗುವ ಸಂಸರ್ಗವಾದರೂ ಸರಿಯೆ, ಸಂದರ್ಭಾನುಸಾರವಾಗಿ ಎರಡನ್ನೂ ಒಪ್ಪಬೇಕು. ಅವುಗಳೊಳಗೆ ಪ್ರಾಚೀನಸಂಸರ್ಗವು ಶಾಸ್ತ್ರಸಿದ್ಧವಾಗಿಯೂ, ಈಗಿನ ಸಂಸರ್ಗವು ಪ್ರತ್ಯಕ್ಷಸಿದ್ಧವಾಗಿಯೂ ಇರುವುವು. ಹೇಗಾದರೂ ವಾಯುವಿನಲ್ಲಿಯೂ ಜಲದಲ್ಲಿಯೂ ಸುಗಂಧವಸ್ತುಗಳ ಸಂಸರ್ಗವಿಲ್ಲದೆ ಸುಗಂಧಕ್ಕೆ ಪ್ರತೀತಿಯಿಲ್ಲವೆಂಬುದನ್ನು ಯಾರೂ ತಪ್ಪಿಸಲಾರರು.

## ೧೧೦೦ ಔಪನಿಷದಾನಾಂ ಪಾಕಜಗುಣಪ್ರಕ್ರಿಯಾಪ್ರಪಂಚನಂ

ಪಾಕಜನ್ಯವಾದ ಗುಣಗಳು ಪೃಥಿವಿಯಲ್ಲಿ ಮಾತ್ರವೇ ಉಂಟಾಗುವುವೆಂದು ಹಿಂದೆ ಸೂಚಿಸಿದ್ದೆವು. ಈಗ ಅವುಗಳ ವಿಶೇಷಸಂಗತಿಗಳನ್ನು ತಿಳಿಯಪಡಿಸುವುದಕ್ಕಾಗಿ ವೇದಾಂತಿಗಳಿಗೆ ಅಭಿಮತವಾಗಿರುವ ಪಾಕಜಗುಣಪ್ರಕ್ರಿಯೆಯನ್ನು ಇಲ್ಲಿ ಸ್ವಲ್ಪಮಟ್ಟಿಗೆ ವಿಸ್ತರಿಸುವೆವು.—

ಮೊತ್ತಮೊದಲು (ಪಂಚೀಕರಣಕ್ಕಿಂತಲೂ ಪೂರ್ವದಲ್ಲಿ) ಪೃಥಿವಿ ಉತ್ಪತ್ತಿಸಮಯದಲ್ಲಿಯೇ ಕೃಷ್ಣರೂಪವಿಶಿಷ್ಟವಾಗಿಯೇ ಉತ್ಪನ್ನವಾಗುವುದು; ಈ ಕೃಷ್ಣರೂಪವು ಇದಕ್ಕೆ ಸ್ವಾಭಾವಿಕವೆಂದು ಒಪ್ಪಿದರೇನೇ "ಯತ್ಕೃಷ್ಣಂ ತದನ್ನಸ್ಯ" ಎಂಬ ಶ್ರುತಿಯ ಸ್ವಾರಸ್ಯವು ಸುರಕ್ಷಿತವಾಗುವುದು. ಮತ್ತು— ಭಾಷ್ಯಕಾರರು ಆಕಾಶದಲ್ಲಿ ನೈಲ್ಯಗುಣವು ಬಂದುದಕ್ಕೆ ಕಾರಣವನ್ನು ತೋರಿಸುವ ಸಂದರ್ಭದಲ್ಲಿ—"ಪಂಚೀಕರಣದಿಂದ ಆಕಾಶದಲ್ಲಿ ಬಂದೊದಗಿದ ಪೃಥಿವಿಯ ಭಾಗದಲ್ಲಿ ನೈಲ್ಯಗುಣವಿದ್ದುದರಿಂದಲೇ ಆಕಾಶದಲ್ಲಿ ನೈಲ್ಯಗುಣವು ಕಾಣುವುದು" ಎಂದು ಹೇಳಿರುವರು. ಇದರಿಂದ ಪಂಚೀಕರಣಕ್ಕೆ ಪೂರ್ವದಲ್ಲಿಯೇ ಪೃಥಿವಿಯಲ್ಲಿ ನೀಲಗುಣವಿದ್ದಿತೆಂದು ತೋರುವುದು.

ಅದೇತಕ್ಕೆ ? ಮೊತ್ತಮೊದಲು ನೀರೂಪವಾಗಿಯೇ (ಯಾವುದೊಂದು ರೂಪವೂ ಇಲ್ಲದೆಯೇ) ಪೃಥಿವಿ ಹುಟ್ಟಲಿ; ಅನಂತರದಲ್ಲಿ ಪಾಕವಿಶೇಷದಿಂದ ನೀಲರೂಪವು ಅದರಲ್ಲಿ ಉಂಟಾದಮೇಲೆ ಪಂಚೀಕರಣವಾಗಿರಲಿ; ಹೀಗೆ ಹೇಳಿದರೂ ಭಾಷ್ಯಕಾರರ ಸೂಕ್ತಿಗೆ ಉಪಪತ್ತಿ ಸಂಭವಿಸುತ್ತಿರುವಾಗ—ಉತ್ಪತ್ತಿಕಾಲದಲ್ಲಿಯೇ ಪೃಥಿವಿ ಕೃಷ್ಣರೂಪವಿಶಿಷ್ಟವಾಗಿಯೇ ಉತ್ಪನ್ನವಾಗುವುದೆಂಬ ಅಂಶದಲ್ಲಿ ಭಾಷ್ಯಕಾರರ ಸೂಕ್ತಿಯನ್ನು ಸಾಕ್ಷಿಯಾಗಿ ಪ್ರಮಾಣೀಕರಿಸಿದುದು ಹೇಗೆ ಸಂಗತವಾದೀತು ?

ಇಂಥ ಆಶಂಕೆ ಸಂಗತವಲ್ಲ. ಏತಕ್ಕೆಂದರೆ—ಪಂಚೀಕರಣಕ್ಕಿಂತಲೂ ಪೂರ್ವದಲ್ಲಿ ಕೃಷ್ಣರೂಪವು ಪೃಥಿವಿಯಲ್ಲಿ ಪಾಕದಿಂದ ಹುಟ್ಟಬೇಕಾದರೆ ತೇಜಸ್ಸು ಪಾಕವಿಶೇಷದಿಂದ ಪೃಥಿವಿಯಲ್ಲಿ ಕೃಷ್ಣರೂಪವನ್ನು ಉಂಟುಮಾಡುತ್ತದೆಯೆಂದು ಹೇಳಬೇಕಾಗುವುದು. ಆದರೆ ಅಪಂಚೀಕೃತವಾದ ತೇಜಸ್ಸಿಗೆ ಪೃಥಿವಿಯಲ್ಲಿ ರೂಪವನ್ನು ಉಂಟುಮಾಡುವ ಸಾಮರ್ಥ್ಯವಿಲ್ಲವಾದಪ್ರಯುಕ್ತ ಹಾಗೆ ಹೇಳಲು ಶಕ್ಯವಲ್ಲ. ಆದಕಾರಣ ಕೃಷ್ಣರೂಪವು ಸ್ವಾಭಾವಿಕವಾಗಿಯೇ ಪೃಥಿವಿಯಲ್ಲಿ ಉತ್ಪತ್ತಿಕಾಲದಲ್ಲಿಯೇ ಉಂಟಾಗುವುದೆಂದು ಒಪ್ಪಬೇಕು.

ಓಹೋ ! ಪೃಥಿವಿಯಲ್ಲಿ ಸಾಕ್ಷಾತ್ತಾಗಿಯಾಗಲಿ ಪರಂಪರೆಯಿಂದಲಾಗಲಿ ಪಾಕಾಪೇಕ್ಷೆಯೇ ಇಲ್ಲದೆ ರೂಪವಿಶೇಷವು ಹೇಗೆ ಉತ್ಪನ್ನವಾದೀತು ? ಎಂದು ವೈಶೇಷಿಕಶಾಸ್ತ್ರವಾಸನೆಯುಳ್ಳವರು ಆಶಂಕಿಸುವರಾದರೆ—ಜಲತತ್ತ್ವದಲ್ಲಿಯೂ ತೇಜಸ್ತತ್ತ್ವದಲ್ಲಿಯೂ ಪಂಚೀಕರಣಕ್ಕಿಂತಲೂ ಪೂರ್ವದಲ್ಲಿ ಸ್ಪರ್ಶವಿಶೇಷವೂ ರೂಪವಿಶೇಷವೂ ಹೇಗೆ ಉಂಟಾದುವೆಂಬುದನ್ನು ಪರಾಮರ್ಶಿಸಿ ಇಲ್ಲಿಯೂ ನೀವು ಸಂತುಷ್ಟರಾಗಬೇಕೆಂದು ಅವರಿಗೆ ಸಮಾಧಾನವನ್ನು ಹೇಳಬೇಕು.

ಹಾಗಾದರೆ ಪೃಥಿವಿಗೆ ಕೃಷ್ಣರೂಪವೇ ಸ್ವಾಭಾವಿಕವಾಗಿರಲಿ; ಅದರಂತೆ ಸ್ಪರ್ಶವೂ ರಸವೂ ಗಂಧವೂ ಪೃಥಿವಿಗೆ ಉತ್ಪತ್ತಿಸಮಯದಲ್ಲಿ ಎಂಥವುಗಳಾಗಿರುವುವು? ಅವುಗಳನ್ನು ಇಲ್ಲಿ ವಿವರಿಸುವೆವು. ವಾಯುವಿನಲ್ಲಿ ಹೇಗೋ ಹಾಗೆಯೇ ಪೃಥಿವಿಯಲ್ಲಿಯೂ ಅನುಷ್ಣಾಶೀತಸ್ಪರ್ಶವೇ ಉತ್ಪತ್ತಿಸಮಯದಲ್ಲಿ ಸ್ವಾಭಾವಿಕವಾಗಿ ಉಂಟಾಗುವುದು; ಎಂದರೆ ಅದರಂತೆಯೇ ಇದೂ ಪಾಕಜವಲ್ಲ; ವಿಷ, ಅಮೃತ, ತುರುಚೆಯ ಗಿಡ ಮುಂತಾದ ಪಾರ್ಥಿವ ಪದಾರ್ಥಗಳಲ್ಲಿರುವ ಅನುಷ್ಣಾಶೀತಸ್ಪರ್ಶವಿಶೇಷಗಳೇ ಪೃಥಿವಿಯ ಪಾಕಜಸ್ಪರ್ಶಗಳಾಗಿರುವುವು. ಪಾರ್ಥಿವ ಪದಾರ್ಥಗಳೆಲ್ಲದರಲ್ಲಿಯೂ ಅನುಷ್ಣಾಶೀತಸ್ಪರ್ಶಸಾಮಾನ್ಯವು ತೋರುತ್ತಲೇ ಇರುವುದರಿಂದ ಅನುಷ್ಣಾಶೀತಸ್ಪರ್ಶವೇ ಪೃಥಿವಿಗೆ ಸ್ವಾಭಾವಿಕವೆಂದು ಒಪ್ಪಬೇಕು.

ಇದರಂತೆ ಮಧುರರಸವೇ ಪೃಥಿವಿಗೆ ಉತ್ಪತ್ತಿಸಮಯದಲ್ಲಿ ಸ್ವಾಭಾವಿಕವಾಗಿ (ಅಪಾಕಜವಾಗಿ) ಉತ್ಪನ್ನವಾಗುವುದೆಂದು ಒಪ್ಪಬೇಕು. ಏತಕ್ಕೆಂದರೆ, ನಿಯಾಮಕಾಂತರವು ಯಾವುದೂ ಇಲ್ಲದಿರುವಾಗ ಪೃಥಿವಿಗೆ ಕಾರಣವಾದ ಜಲತತ್ತ್ವದಲ್ಲಿರುವ ಮಾಧುರ್ಯಗುಣವೇ ಕಾರ್ಯವಾದ ಪೃಥಿವಿಯಲ್ಲಿ ಅನುವರ್ತಿಸುವುದೆಂದು ಹೇಳುವುದೇ ಉಚಿತವಾಗಿರುವುದು. ಮತ್ತು ಸ್ಪರ್ಶದಂತೆಯೇ ಮಾಧುರ್ಯಗುಣವೇ ಅನೇಕಪಾರ್ಥಿವಪದಾರ್ಥಗಳಲ್ಲಿ ಪ್ರಾಯೇಣ ತೋರುವುದು. ಮಹಾಪೃಥಿವಿ ಪ್ರಾಯಶಃ ಸಮಗ್ರವಾಗಿಯೂ ಮಾಧುರ್ಯಗುಣವಿಶಿಷ್ಟವಾಗಿಯೇ ತೋರುತ್ತಿರುವುದಲ್ಲವೆ? ಹುಳಿ, ಉಪ್ಪು, ಬೇವು, ಮೆಣಸಿನಕಾಯಿ ಮುಂತಾದ ಪಾರ್ಥಿವಪದಾರ್ಥಗಳಲ್ಲಿ ತೋರಿಬರುತ್ತಿರುವ ರಸವಿಶೇಷಗಳೆಲ್ಲವೂ ಪೃಥಿವಿಗೆ ಪಾಕಜನಿತಗಳಾಗಿರುವುವೇ ಹೊರತು ಸ್ವಾಭಾವಿಕಗಳಲ್ಲ, ಮಧುರರಸಸಾಮಾನ್ಯವು ಪೃಥಿವಿಗೆ ಸ್ವಾಭಾವಿಕವಾಗಿದ್ದರೂ ಕಬ್ಬು, ಸಕ್ಕರೆ, ಕಲ್ಲುಸಕ್ಕರೆ, ಬೆಲ್ಲ, ದ್ರಾಕ್ಷಿ ಖರ್ಜೂರ ಮುಂತಾದ ಪಾರ್ಥಿವಪದಾರ್ಥಗಳಲ್ಲಿ ತೋರಿಬರುವ ಮಾಧುರ್ಯಗುಣದ ಒಳಭೇದಗಳೆಲ್ಲವೂ ಪಾಕವಿಶೇಷಜನಿತಗಳಾಗಿರುವುವು. ಪಾಕವಿಶೇಷವಿದ್ದರೇನೇ ಅಂಥ ಗುಣವಿಶೇಷಗಳ ಉಪಲಬ್ಧಿಯೂ ಪಾಕವಿಶೇಷವಿಲ್ಲದಿದ್ದರೆ ಅವುಗಳ ಅನುಪಲಬ್ಧಿಯೂ ಇರುವುದಾದಪ್ರಯುಕ್ತ ಅನ್ವಯವ್ಯತಿರೇಕಬಲದಿಂದ ಆ ಗುಣಭೇದಗಳು ಪಾಕಜನಿತಗಳೆಂಬುದರಲ್ಲಿ ಸಂಶಯವಿಲ್ಲವಷ್ಟೆ?

ಇದರಂತೆ ಸುರಭಿಗಂಧವೇ ಪೃಥಿವಿಗೆ ಉತ್ಪತ್ತಿಸಮಯದಲ್ಲಿ ಸ್ವಾಭಾವಿಕವಾಗಿ (ಅಪಾಕಜವಾಗಿ) ಉತ್ಪನ್ನವಾಗುವುದೆಂದು ಒಪ್ಪಬೇಕು. ಏತಕ್ಕೆಂದರೆ, ಮಹಾಪೃಥಿವಿಯಲ್ಲಿ ಪ್ರಾಯಶಃ ಸುರಭಿಗಂಧವೇ ತೋರಿಬರುತ್ತಿರುವುದು. ಮಲ,

ಮೂತ್ರ ಮುಂತಾದ ಕೆಲವು ಪಾರ್ಥಿವಪದಾರ್ಥಗಳಲ್ಲಿ ತೋರಿಬರುವ ದುರ್ಗಂಧ ವಿಶೇಷಗಳು ಪೃಥಿವಿಗೆ ಪಾಕಜನಿತಗಳಾಗಿಯೇ ಇರುವುವು.

ಹೀಗೆ ಉಕ್ತರೀತಿಯಲ್ಲಿ ಪೃಥಿವಿ ಉತ್ಪತ್ತಿಸಮಯದಲ್ಲಿ ಕೃಷ್ಣರೂಪ, ಅನುಷ್ಣಾಶೀತಸ್ಪರ್ಶ, ಮಾಧುರ್ಯರಸ, ಸುರಭಿಗಂಧ ಇವುಗಳನ್ನು ಸ್ವಾಭಾವಿಕಗುಣ ಗಳಾಗಿ (ಅಪಾಕಜಗುಣಗಳಾಗಿ) ಪಡೆದು ಉತ್ಪನ್ನವಾಗುವುದು ;

ಅನಂತರದಲ್ಲಿ ಪಾಕತಾರತಮ್ಯದಿಂದ ಕೃಷ್ಣರೂಪದ ಒಳಭೇದಗಳಾದ ಮರಕತರತ್ನ, ನೀಲಮಣಿ, ತಮಾಲವೃಕ್ಷ, ಕನ್ನೈದಿಲೆ, ಅಂಧಕಾರ ಇವುಗಳಲ್ಲಿ ರುವ ರೂಪವಿಶೇಷಗಳೊಡನೆಯೂ,

೧. ಅನುಷ್ಣಾಶೀತಸ್ಪರ್ಶದ ಒಳಭೇದಗಳಾದ ವಿಷ, ಅಮೃತ, ತುರುಚೆಯಗಿಡ, ಮುಂತಾದ ವಸ್ತುಗಳಲ್ಲಿರುವ ಸ್ಪರ್ಶವಿಶೇಷಗಳೊಡನೆಯೂ,

೨. ಮಧುರರಸದ ಒಳಭೇದಗಳಾದ ಕಬ್ಬು, ಸಕ್ಕರೆ, ಕಲ್ಲುಸಕ್ಕರೆ, ಬೆಲ್ಲ, ದ್ರಾಕ್ಷಿ, ಖರ್ಜೂರ, ಮುಂತಾದ ವಸ್ತುಗಳಲ್ಲಿರುವ ರಸವಿಶೇಷಗಳೊಡನೆಯೂ, ಮಧುರಭಿನ್ನವಾದ ಲವಣಾದಿರಸಾಂತರಗಳೊಡನೆಯೂ,

೩. ಸುರಭಿಗಂಧದ ಒಳಭೇದಗಳಾದ ಸಂಪಿಗೆ, ಮಲ್ಲಿಗೆ, ಇರುವಂತಿಗೆ, ಶಾವಂ ತಿಗೆ, ಕಸ್ತೂರಿ, ಪಚ್ಚಕರ್ಪೂರ, ಕೇಸರಿ, ಏಲಕ್ಕಿ, ಮುಂತಾದ ವಸ್ತುಗಳಲ್ಲಿರುವ ಸುಗಂಧವಿಶೇಷಗಳೊಡನೆಯೂ, ದುರ್ಗಂಧದ ಒಳಭೇದಗಳಾದ ಮಲ, ಮೂತ್ರಾ ದಿವಸ್ತುಗಳಲ್ಲಿರುವ ದುರ್ಗಂಧವಿಶೇಷಗಳೊಡನೆಯೂ ಈ ಪೃಥಿವಿ ಸಂಯುಕ್ತವಾ ಗುವುದು.

೪. ಇಂಥ ಪೃಥಿವಿಯಲ್ಲಿ ಶಬ್ದಸ್ಪರ್ಶರೂಪರಸಗಂಧಗಳೆಂಬ ಐದು ಗುಣಗಳೂ ಕೆಲವೆಡೆಗಳಲ್ಲಿ ಧರ್ಮಿಯ ಜತೆಯಲ್ಲಿಯೇ ಉತ್ಪನ್ನಗಳಾಗಿ ಧರ್ಮಿಯ ಜತೆಯಲ್ಲಿಯೇ ನಾಶವನ್ನು ಹೊಂದುವುವು ; ಇನ್ನು ಕೆಲವೆಡೆಗಳಲ್ಲಿ ಧರ್ಮಿಯಿರುವಾಗಲೇ ಕೆಲವು ಗುಣಗಳ ಅನುವೃತ್ತಿಯೂ ಕೆಲವು ಗುಣಗಳ ನಿವೃತ್ತಿಯೂ ಉಂಟಾಗುವುವು. ಪ್ರತ್ಯಕ್ಷವನ್ನು ಅನುಸರಿಸಿ ಇಂಥ ವ್ಯತ್ಯಾಸಗಳೆಲ್ಲಕ್ಕೂ ಪಾಕವ್ಯತ್ಯಾಸವೇ ಕಾರಣ ವೆಂದು ಒಪ್ಪಬೇಕು.

ಈ ಸಂದರ್ಭದಲ್ಲಿ ಪೂರ್ವತನವಾದ ಶಬ್ದಸ್ಪರ್ಶರೂಪರಸಗಂಧಗಳ ಸಮು ದಾಯದ ನಿವೃತ್ತಿಗೆ ಒಂದು ಬಗೆಯಾದ ಅಗ್ನಿಸಂಯೋಗವು ಕಾರಣವೆಂದೂ, ಅನಂತರಕಾಲಿಕವಾದ ಶಬ್ದಾದಿಗಳ ಉತ್ಪತ್ತಿಗೆ ಮತ್ತೊಂದು ಬಗೆಯಾದ ಅಗ್ನಿ ಸಂಯೋಗವು ಕಾರಣವೆಂದೂ ಕೆಲವರು ಹೇಳುವರು ;

## ೧೧೦೧ ಏಕಯಾಽಪಿ ಸಾಮಗ್ರ್ಯಾ ಅನೇಕಕಾರ್ಯೋತ್ಪತ್ತಿ ಸಮರ್ಥನಂ

ಆದರೆ ವೇದಾಂತಿಗಳಾದ ನಾವು ಹೇಳುವುದೇನೆಂದರೆ—ಒಂದೇಬಗೆಯಾದ ಒಂದೇ ಒಂದು ಅಗ್ನಿಸಂಯೋಗದಿಂದ ಪೂರ್ವಶಬ್ದಾದಿನಿವೃತ್ತಿ ಉತ್ತರಶಬ್ದಾದ್ಯುತ್ಪತ್ತಿ ಎಂಬ ಎರಡು ಕಾರ್ಯಗಳೂ ಉಂಟಾಗುವುವೆಂದು ಹೇಳುವೆವು.

ಓಹೋ! ಒಂದು ಸಾಮಗ್ರಿ ಒಂದೇ ಕಾರ್ಯವನ್ನು ಉಂಟುಮಾಡಬಲ್ಲುದೆಂಬ ನಿಯಮವಿರುತ್ತಿರುವಾಗ ಒಂದೇ ಸಾಮಗ್ರಿಯಿಂದ ಅನೇಕಕಾರ್ಯೋತ್ಪತ್ತಿಯನ್ನು ಹೇಗೆ ಹೇಳುತ್ತೀರಿ? ಎಂದು ಆಶಂಕಿಸಬೇಕಾದುದಿಲ್ಲ; ಏತಕ್ಕೆಂದರೆ ಯಾವುದಾದರೂ ಕೆಲವು ಪಾರ್ಥಿವವಸ್ತುಗಳಲ್ಲಿ ರೂಪರಸಗಂಧಸ್ಪರ್ಶವಿಶೇಷಗಳು ಇಲ್ಲದಿರುವಾಗ ಅವುಗಳನ್ನು ಉಂಟುಮಾಡುವುದಕ್ಕಾಗಿ ಪಾಕವಿಶೇಷವನ್ನು ಮಾಡಿದೆವಾದರೆ—ಪದಾರ್ಥದ ಉತ್ಪತ್ತಿಗೆ ಪದಾರ್ಥದ ಪ್ರಾಗಭಾವವೂ ಸಾಮಗ್ರೀಕೋಟಿಯಲ್ಲಿ ಸೇರಿರುವುದರಿಂದ ರೂಪಪ್ರಾಗಭಾವವಿಶಿಷ್ಟವಾದ ಪಾಕವಿಶೇಷವೆಂಬ ಸಾಮಗ್ರಿ ಆ ಪದಾರ್ಥದಲ್ಲಿ ರೂಪವನ್ನೂ, ರಸಪ್ರಾಗಭಾವವಿಶಿಷ್ಟವಾದ ಅದೇ ಸಾಮಗ್ರಿ ರಸವನ್ನೂ, ಗಂಧಪ್ರಾಗಭಾವವಿಶಿಷ್ಟವಾದ ಅದೇ ಸಾಮಗ್ರಿ ಗಂಧವನ್ನೂ, ಸ್ಪರ್ಶಪ್ರಾಗಭಾವವಿಶಿಷ್ಟವಾದ ಅದೇ ಸಾಮಗ್ರಿ ಸ್ಪರ್ಶವನ್ನೂ ಉಂಟುಮಾಡುವುದಾದಪ್ರಯುಕ್ತ ಏಕಸಾಮಗ್ರಿಯಿಂದ ಅನೇಕಕಾರ್ಯೋತ್ಪತ್ತಿ ಅಲ್ಲಿ ಸಂಗತವೆಂದು ಹೇಗೆ ಒಪ್ಪಿರುತ್ತೀರೋ,

ಮತ್ತು—ಯಾವುದಾದರೂ ಕೆಲವು ಪಾರ್ಥಿವವಸ್ತುಗಳಲ್ಲಿ ವಿದ್ಯಮಾನಗಳಾಗಿರುವ ರೂಪರಸಗಂಧಸ್ಪರ್ಶವಿಶೇಷಗಳನ್ನು ಇಲ್ಲಗೊಳಿಸುವುದಕ್ಕಾಗಿ ಪಾಕವಿಶೇಷವನ್ನು ಮಾಡಿದೆವಾದರೆ—ಪದಾರ್ಥದ ಧ್ವಂಸಕ್ಕೆ ಪ್ರತಿಯೋಗಿಸ್ವರೂಪವೂ ಸಾಮಗ್ರೀಕೋಟಿಯಲ್ಲಿ ಸೇರಿರುವುದರಿಂದ ರೂಪಸ್ವರೂಪವಿಶಿಷ್ಟವಾದ ಪಾಕವಿಶೇಷವೆಂಬ ಧ್ವಂಸಸಾಮಗ್ರಿ ಆ ಪದಾರ್ಥದಲ್ಲಿ ರೂಪಧ್ವಂಸವನ್ನೂ, ರಸಸ್ವರೂಪವಿಶಿಷ್ಟವಾದ ಅದೇ ಸಾಮಗ್ರಿ ರಸಧ್ವಂಸವನ್ನೂ, ಗಂಧಸ್ವರೂಪವಿಶಿಷ್ಟವಾದ ಅದೇ ಸಾಮಗ್ರಿ ಗಂಧಧ್ವಂಸವನ್ನೂ, ಸ್ಪರ್ಶಸ್ವರೂಪವಿಶಿಷ್ಟವಾದ ಅದೇ ಸಾಮಗ್ರಿ ಸ್ಪರ್ಶಧ್ವಂಸವನ್ನೂ, ಉಂಟುಮಾಡುವುದಾದಪ್ರಯುಕ್ತ ಏಕಸಾಮಗ್ರಿಯಿಂದ ಅನೇಕಧ್ವಂಸಕಾರ್ಯೋತ್ಪತ್ತಿ ಅಲ್ಲಿ ಸಂಗತವೆಂದು ಹೇಗೆ ಒಪ್ಪಿರುತ್ತೀರೋ,

ಅದರಂತೆಯೇ—ಮೊದಲಿರುವ ರೂಪಾದಿಗಳ ಸಮುದಾಯದ ಧ್ವಂಸೋತ್ಪತ್ತಿಗೆ ಧ್ವಂಸಪ್ರಾಗಭಾವವೂ, ಮುಂದಿನ ರೂಪಾದಿಗಳ ಸಮುದಾಯದ ಉತ್ಪತ್ತಿಗೆ ರೂಪಾದಿಪ್ರಾಗಭಾವವೂ ಸಾಮಗ್ರೀಕೋಟಿಯಲ್ಲಿ ಅಪೇಕ್ಷಿತವಾಗಿರುವುದರಿಂದ ಇಂಥ ಎರಡು ಬಗೆಯಾದ ಅಭಾವಗಳೊಡನೆ ಕೂಡಿದ ಒಂದೇ ಸಾಮಗ್ರಿ ಪೂರ್ವರೂಪಾದಿಸಮುದಾಯದ ನಿವೃತ್ತಿಯನ್ನೂ ಉತ್ತರರೂಪಾದಿಸಮುದಾಯದ ಉತ್ಪತ್ತಿಯನ್ನೂ ನೆರವೇರಿಸಲು ಯಾವ ಅಡ್ಡಿಯೂ ಇಲ್ಲ. ವಸ್ತುಸ್ಥಿತಿಯನ್ನು ವಿಚಾರಮಾಡಿನೋಡಿದರೆ ವಿಶಿಷ್ಟಾದ್ವೈತಸಿದ್ಧಾಂತದಲ್ಲಿ ಅಭಾವವೆಂಬುದು ಭಾವಾಂತರರೂಪವಾಗಿಯೇ ಇರುವಕಾರಣ ಪೂರ್ವರೂಪರಸಾದಿನಿವೃತ್ತಿ ಉತ್ತರರೂಪರಸಾದಿಸ್ವರೂಪವಾಗಿಯೇ ಇರುವುದರಿಂದ ಕಾರ್ಯಸ್ವರೂಪವೂ ಒಂದೇ ಆದಪ್ರಯುಕ್ತ ಅಂಥ ಒಂದೇ ಕಾರ್ಯವು ಒಂದು ಸಾಮಗ್ರಿಯಿಂದ ಉಂಟಾಗಲು ತಡೆಯೇನು?

ಉಕ್ತವಾದ ಎರಡುಬಗೆಯ ಅಭಾವಗಳಿಗೆ ಪ್ರತಿಸಂಬಂಧಿವಿಶೇಷಗಳು ಮಾತ್ರ ಭಿನ್ನಭಿನ್ನಗಳಾದುದರಿಂದ ವ್ಯವಹಾರಮಾತ್ರವೇ ವ್ಯತ್ಯಸ್ತವಾಗುವುದು; ಎಂದರೆ ಪಾಕಜನಿತವಾದ ರಕ್ತರೂಪವು ಹಿಂದಿನ ರೂಪವನ್ನು ಕುರಿತು ಧ್ವಂಸವೆಂದು ವ್ಯವಹರಿಸಲ್ಪಡುವುದು; ಈ ಧರ್ಮಿಯಲ್ಲಿರುವ ಈ ರಕ್ತರೂಪವು ರೂಪಾಂತರವಿಶಿಷ್ಟವಾದ ಧರ್ಮ್ಯಂತರವನ್ನು ಕುರಿತು ಭೇದವೆಂದೂ ವ್ಯವಹರಿಸಲ್ಪಡುವುದು; ಪ್ರತಿಸಂಬಂಧಿಗಳನ್ನು ವಿವಕ್ಷಿಸದಿದ್ದರೆ ರಕ್ತತ್ವವೆಂಬ ನಿಜಸ್ವರೂಪದಿಂದಲೇ ವ್ಯವಹರಿಸಲ್ಪಡುವುದು.

## ೧೧೦೨. ತತ್ರ ಪರಾಶರಭಟ್ಟಾರ್ಯಸೂಕ್ತಿವಿರೋಧಪ್ರಸಕ್ತ್ಯಾಶಂಕಾತತ್ಪರಿಹಾರೌ.

ಓಹೋ! ಹೀಗೆ ಉಕ್ತರೀತಿಯಲ್ಲಿ ಪೂರ್ವರೂಪರಸಾದಿನಿವೃತ್ತಿಗೂ ಉತ್ತರರೂಪರಸಾದ್ಯುತ್ಪತ್ತಿಗೂ ಸಾಮಗ್ರಿ ಒಂದೇ ಆಗುವುದಾದರೆ ಶ್ರೀಮತ್ಪರಾಶರಭಟ್ಟಾರ್ಯರ ಸೂಕ್ತಿಯೊಡನೆ ವಿರೋಧವು ಪ್ರಸಕ್ತವಾಗದೋ? ಕುಮಾರಿಲಭಟ್ಟಮತದಲ್ಲಿ ಅಂಗೀಕೃತವಾಗಿರುವ ಪ್ರಾಕಟ್ಯವನ್ನು ನಿರಾಕರಿಸುವ ಸಂದರ್ಭದಲ್ಲಿ ಪರಾಶರಭಟ್ಟಾರ್ಯರು "ನಖಲು ಪೂರ್ವರೂಪವಿನಾಶಿಕೈವ ವ್ಯಕ್ತಿರುತ್ತರೋತ್ಪಾದಿಕಾ, ಪಾಕಲಕ್ಷಣಾಗ್ನಿಸಂಯೋಗಾನಾಂ ಭಿನ್ನತ್ವಾತ್" (ಪೂರ್ವರೂಪವನ್ನು ನಾಶಗೊಳಿಸುವ ಸಾಮಗ್ರೀವ್ಯಕ್ತಿಯೇ ಉತ್ತರರೂಪವನ್ನೂ ಉಂಟುಮಾಡಲಾರದು; ಏತಕ್ಕೆಂದರೆ ಪಾಕವೆಂಬ ಅಗ್ನಿಸಂಯೋಗವ್ಯಕ್ತಿಗಳು ಭಿನ್ನಭಿನ್ನಗಳಷ್ಟೆ?) ಎಂಬುದಾಗಿ ಅಪ್ಪಣೆಕೊಡಿಸಿರುವರಲ್ಲವೆ?

ಇಲ್ಲ; ಅವರ ಸೂಕ್ತಿಯೊಡನೆ ವಿರೋಧವು ಪ್ರಸಕ್ತವಾಗದು; ಏತಕ್ಕೆಂದರೆ ಪರಮತಾಭಿಪ್ರಾಯದಿಂದ ಅವರು ಅಲ್ಲಿ ಹಾಗೆ ಹೇಳಿರುವರೇ ಹೊರತು ಸ್ವಮತಾಭಿಪ್ರಾಯದಿಂದ ಅಲ್ಲ; ಸ್ವಮತದಲ್ಲಿ ಏಕಸಾಮಗ್ರಿಯಿಂದ ಅನೇಕಕಾರ್ಯೋತ್ಪತ್ತಿಯನ್ನೇ ಅವರೂ ಉಪಪಾದಿಸಿರುವರು.

ಹೀಗೆ ಒಂದೇ ಸಾಮಗ್ರಿಯಿಂದ ಅನೇಕಕಾರ್ಯೋತ್ಪತ್ತಿಯಾದರೂ ಪಾಕ ವಿಶೇಷವೆಂಬ ಆ ಸಾಮಗ್ರಿಯ ಅಲ್ಪಸ್ವಲ್ಪವಾದ ಒಳಭೇದಗಳಿಂದ ರೂಪರಸಗಂಧ ಸ್ಪರ್ಶಗಳ ಅಲ್ಪಸ್ವಲ್ಪವಾದ ಒಳಭೇದಗಳೂ ಉಂಟಾಗಬಹುದು.

ಪೂರ್ವರೂಪರಸಾದಿಗಳ ಪರಿವರ್ತನೆಗೆ ಸಾಧನವಾಗಿರುವ ಇಂಥ ಪಾಕ ವಿಶೇಷದ ವಿಷಯವಾಗಿ ನೈಯಾಯಿಕರೇ ಮೊದಲಾದ ದಾರ್ಶನಿಕರು ವಿವಾದ ಪಡುವರು; ಕೆಲವರು ಪೀಲುಪಾಕಕ್ರಮವನ್ನೇ ಅಂಗೀಕರಿಸಬೇಕೆಂದು ಹೇಳುವರು; ಇನ್ನು ಕೆಲವರು ಪಿಠರಪಾಕಕ್ರಮವನ್ನು ಅಂಗೀಕರಿಸುವುದೇ ಸಾಧುವಾಗಿರುವುದೆಂದು ಹೇಳುವರು.

## ೧೧೦೩. ಪೀಲುಪಾಕಪ್ರಕ್ರಿಯಾನಿರೂಪಣಂ.

**ಪೀಲುಪಾಕಕ್ರಮವು ಹೇಗೆಂದರೆ**—ಕುಂಬಾರನು ಮೃತ್ಪಿಂಡದಿಂದ ಘಟವನ್ನು ನಿರ್ಮಿಸಿದಮೇಲೆ ಅದು ಆರ್ದ್ರವಾಗಿರುವಾಗ (ಹಸಿದಾಗಿರುವಾಗ) ಅದರಲ್ಲಿರುವ ರೂಪರಸಗಂಧಸ್ಪರ್ಶಗಳಿಗೆ ಪರಿವರ್ತನೆಯುಂಟಾಗದಿರುವವರೆಗೂ ಅದು ಜಲಾಹರಣಾದಿಕಾರ್ಯಗಳಿಗೆ ಉಪಯೋಗಿಯಾಗಲಾರದಾದಪ್ರಯುಕ್ತ ಕೆಲಸಗಳಿಗೆ ಉಪಯೋಗಿಸಲು ಅರ್ಹವಾಗುವಂತೆ ಅದರ ರೂಪಾದಿಗಳಿಗೆ ಪರಿವರ್ತನೆಯನ್ನುಂಟುಮಾಡಬೇಕೆಂದು ಉದ್ದೇಶಿಸಿ ಆ ಘಟವನ್ನು ಆವಿಗೆಯಲ್ಲಿಟ್ಟು ಪಕ್ವಪಡಿಸುವನು; ಆಗ ಸ್ಥೂಲಪರಿಮಾಣವುಳ್ಳ ಆ ಘಟದಲ್ಲಿ ತೇಜಸ್ಸಂಯೋಗವುಂಟಾದೊಡನೆಯೇ ವೇಗವಿಶಿಷ್ಟವಾದ ಅಂಥ ತೇಜಸ್ಸಿನ ಪ್ರೇರಣೆಯಿಂದಲಾಗಲಿ ಅಭಿಘಾತದಿಂದಲಾಗಲಿ ಘಟಕ್ಕೆ ಉಪಾದಾನಕಾರಣವಾಗಿದ್ದ ಕಪಾಲದ್ವಯವೆಂಬ ಪೂರ್ವಾವಯವಿಯಲ್ಲಿ ಚಲನರೂಪವಾದ ಕ್ರಿಯೆಯುಂಟಾಗಿ ಕಪಾಲದ್ವಯ ಸಂಯೋಗವು ನಷ್ಟವಾಗುವುದು; ಅದರಿಂದ ಘಟವೆಂಬ ಪೂರ್ವಾವಯವಿ ನಷ್ಟವಾಗುವುದು; ಪುನಃ ತೇಜಸ್ಸಂಯೋಗಬಲದಿಂದ ಕಪಾಲದ್ವಯಕ್ಕೆ ಉಪಾದಾನ ಕಾರಣವಾಗಿದ್ದ ಅವಯವಗಳಲ್ಲಿ ಕ್ರಿಯೆಯುಂಟಾಗಿ ಅವುಗಳ ಸಂಯೋಗವು ನಷ್ಟವಾಗುವುದು; ಅದರಿಂದ ಕಪಾಲದ್ವಯವೆಂಬ ಪೂರ್ವಾಯವಿ ನಷ್ಟವಾಗುವುದು. ಹೀಗೆ ಪುನಃಪುನಃ ತೇಜಸ್ಸಂಯೋಗವುಂಟಾಗುತ್ತಲೇ ಇರುವುದರಿಂದ

ಪೂರ್ವಪೂರ್ವೋಪಾದಾನಕಾರಣಗಳಲ್ಲಿ ಕ್ರಿಯೆಯೂ, ಆದರಿಂದ ಅವುಗಳ ಅವಯವಸಂಯೋಗನಾಶವೂ, ಆದರಿಂದ ಪೂರ್ವಪೂರ್ವೋಪಾದಾನಕಾರಣನಾಶವೂ ಉಂಟಾಗುತ್ತಲೇ ಹೋಗುತ್ತ ದ್ವ್ಯಣುಕಪರ್ಯಂತವಾದ ಎಲ್ಲಾ ಅವಯವಿಗಳೂ ನಷ್ಟವಾಗಿ ಕೊನೆಗೆ ಘಟಪರಮಾಣುಗಳೇ ನಿಂತು ಅವುಗಳೇ ಚೆನ್ನಾಗಿ ಪಕ್ವವಾಗಿ ಪೂರ್ವರೂಪರಸಗಂಧಸ್ಪರ್ಶಗಳನ್ನು ಬಿಟ್ಟು ಹೊಸದಾದ ರೂಪರಸಗಂಧಸ್ಪರ್ಶಗಳನ್ನು ಪಡೆದು ಘಟಕ್ಕೆ ಭೋಕ್ತೃವಾದ (ಘಟವನ್ನು ಅನುಭವಿಸುವ) ಜೀವನ ಅದೃಷ್ಟವಿಶೇಷದಿಂದ ಪ್ರೇರಿಸಲ್ಪಟ್ಟವುಗಳಾಗಿ ಪುನಃ ದ್ವ್ಯಣುಕವೆಂಬ ಅವಯವಿಯನ್ನು ಉಂಟುಮಾಡುವುವು; ಅಂಥ ದ್ವ್ಯಣುಕವು ತ್ರ್ಯಣುಕವೆಂಬ ಅವಯವಿಯನ್ನು ಉಂಟುಮಾಡುವುದು; ತ್ರ್ಯಣುಕವು ಅದಕ್ಕಿಂತಲೂ ಸ್ಥೂಲವಾದ ಅವಯವಿಯನ್ನು ಉಂಟುಮಾಡುವುದು; ಹೀಗೆ ಪೂರ್ವಪೂರ್ವಾವಯವಿಯಿಂದ ಉತ್ತರೋತ್ತರಾವಯವಿ ಉಂಟಾಗುತ್ತಾ ಬಂದು ಕೊನೆಗೆ ಸ್ಥೂಲವಾದ ಅಂತ್ಯಾವಯವಿಯೆಂಬ ಘಟವು ಹುಟ್ಟುವುದು; ಹಾಗೆಯೇ ಪರಮಾಣುಗಳನ್ನು ಆರಂಭಿಸಿ ಕಪಾಲದ್ವಯದವರೆಗೂ ಇರುವ ಪೂರ್ವಪೂರ್ವಾವಯವಿ ತನ್ನಲ್ಲಿರುವ ಶಬ್ದಸ್ಪರ್ಶರೂಪರಸಗಂಧಗಳಿಗೆ ಉತ್ತರೋತ್ತರಾವಯವಿಗಳಲ್ಲಿ ಅನುವೃತ್ತಿಯನ್ನು ಉಂಟುಮಾಡುತ್ತಲೇ ಬರುವುದು; ಹೀಗೆ ಇಂಥ ಕ್ರಮದಿಂದ ಉತ್ಪನ್ನವಾಗಿ ಅಂತ್ಯಾವಯವಿಯೆನಿಸಿಕೊಂಡಿರುವ ಹೊಸಘಟವೇ ವಿಲಕ್ಷಣವಾದ ಶಬ್ದಸ್ಪರ್ಶರೂಪರಸಗಂಧಗಳಿಂದ ಯುಕ್ತವಾಗಿ ಜಲಾಹರಣಾದಿಕೆಲಸಗಳಿಗೆ ಅರ್ಹವಾಗುವುದು; ಆವಿಗೆಯಲ್ಲಿಟ್ಟದ್ದು ಮೊದಲುಗೊಂಡು ಎಷ್ಟೋ ವ್ಯಾಪಾರಗಳು ಉಕ್ತಕ್ರಮದಲ್ಲಿ ನಡೆದಿದ್ದರೂ ಅವುಗಳ ಕಾಲವು ಅತಿಸೂಕ್ಷ್ಮವಾಗಿ (ಅತಿವೇಗವಾಗಿ) ಇರುವುದರಿಂದ ಈ ವಿಳಂಬವು ನಮಗೆ ಗೊತ್ತಾಗುವುದಿಲ್ಲ; ಇಂಥ ಪಾಕಪ್ರಕ್ರಿಯೆಯೇ "**ಪೀಲುಪಾಕಪ್ರಕ್ರಿಯೆ**" ಎಂದು ವ್ಯವಹರಿಸಲ್ಪಡುವುದು; ಪೀಲುವೆಂದರೆ ಪರಮಾಣು; ಪರಮಾಣುವಿನಲ್ಲಿಯೇ ಪಾಕವುಂಟಾಗುವುದೆಂದು ಇದರ ಅಭಿಪ್ರಾಯವು.

## ೧೧೦೪. ಪಿಠರಪಾಕಪ್ರಕ್ರಿಯಾನಿರೂಪಣಂ.

**ಪಿಠರಪಾಕಕ್ರಮವು ಹೇಗೆಂದರೆ**—ಆವಿಗೆಯೊಳಗೆ ಇರಿಸಲ್ಪಟ್ಟ ಘಟದಲ್ಲಿ ತೇಜಸ್ಸಂಯೋಗವುಂಟಾದಮೇಲೆ ಘಟವೆಂಬ ಆ ಅವಯವಿಗೂ ನಾಶವುಂಟಾಗುವುದೆಂಬ ಕಲ್ಪನೆ ಆವಶ್ಯಕವಲ್ಲ; ಅದರಲ್ಲಿಯೇ ಪಾಕವಿಶೇಷವುಂಟಾಗಿ ಆದರಿಂದ ಆ ಘಟದ ಶಬ್ದಸ್ಪರ್ಶರೂಪರಸಗಂಧಗಳಿಗೆಮಾತ್ರವೇ ನಾಶವನ್ನು ಒಪ್ಪಿದರೂ ದೋಷವಿಲ್ಲ;—

ಅದು ಹೇಗಾದೀತು ? ಘಟದ ಹೊರಭಾಗದಲ್ಲಿಯೇ ಸಂಯುಕ್ತವಾಗಿರುವ ತೇಜಸ್ಸು ಅದರ ಒಳಭಾಗದಲ್ಲಿ ವ್ಯಾಪಿಸಲಿಲ್ಲವಾಗಿ ಪೂರ್ವರೂಪಾದಿಗಳ ನಿವೃತ್ತಿಗೂ ಹೊಸರೂಪಾದಿಗಳ ಉತ್ಪತ್ತಿಗೂ ಅವಕಾಶವಿಲ್ಲವಾದಪ್ರಯುಕ್ತ ಒಳಭಾಗದಲ್ಲಿ ಹೊಸರೂಪಾದಿಗಳು ಗೋಚರಿಸದೆ ಹೋಗಬೇಕಾದೀತೆಂಬ ಅನಿಷ್ಟಪ್ರಸಂಗವುಂಟಾಗುವುದರಿಂದ ಈ ಪಿಠರಪಾಕಪ್ರಕ್ರಿಯೆಯನ್ನು ಬಿಟ್ಟು ಪೀಲುಪಾಕಪ್ರಕ್ರಿಯೆಯನ್ನೇ ಅವಲಂಬಿಸಬೇಕಲ್ಲವೆ ?

ಇಲ್ಲ ; ಹಾಗೆ ಅವಲಂಬಿಸಬೇಕಾದುದಿಲ್ಲ : ಘಟದಲ್ಲಿ ನೀರು-ಎಣ್ಣೆ-ತುಪ್ಪ ಮುಂತಾದ ದ್ರವವಸ್ತುಗಳನ್ನು ತುಂಬಿದೆವಾದರೆ ಒಳಗಡೆಯಲ್ಲಿರುವ ಆ ವಸ್ತುಗಳು ಹೊರಗೆ ಜಿನುಗುತ್ತಿರುವುದನ್ನು ಲೋಕದಲ್ಲಿ ಪ್ರತ್ಯಕ್ಷವಾಗಿ ನಾವು ನೋಡುತ್ತಲೇ ಇರುವೆವಾದಪ್ರಯುಕ್ತ ಅವಯವಿದ್ರವ್ಯದಲ್ಲಿ ಅತಿಸೂಕ್ಷ್ಮವಾದ ಛಿದ್ರಗಳಿರುವುವೆಂದೇ ಒಪ್ಪಬೇಕಾದುದರಿಂದ ಅಂಥ ಛಿದ್ರಗಳ ಮೂಲಕವಾಗಿ ಹೊರಗಿನ ತೇಜಸ್ಸು ಒಳಗೂ ವ್ಯಾಪಿಸಿ ಅಲ್ಲಿಯೂ ಪೂರ್ವರೂಪಾದಿಪರಿವರ್ತನೆಯನ್ನೂ, ಹೊಸರೂಪಾದಿಗಳ ಉತ್ಪತ್ತಿಯನ್ನೂ ಮಾಡಬಲ್ಲುದು ; ಆದುದರಿಂದಲೇ ಅತಿಪ್ರಬಲವಾಗಿ ಕಾಯಿಸಲ್ಪಟ್ಟ ಪಾತ್ರೆಗಳ ಒಳಭಾಗದಲ್ಲಿರುವ ತಂತುವಾಗಲಿ ಎಳ್ಳು ಮೊದಲಾದ ಧಾನ್ಯಗಳಾಗಲಿ ಭಸ್ಮವಾಗಿಹೋಗುವುದು ಪ್ರತ್ಯಕ್ಷಸಿದ್ಧವಾದುದರಿಂದ ಹೊರಗಿನ ತೇಜಸ್ಸು ಒಳಗೂ ವ್ಯಾಪಿಸಿಯೇ ಇರುವುದೆಂಬುದನ್ನು ಯಾರು ಅಪಲಪಿಸಬಲ್ಲರು ? ಆದಕಾರಣ ಪಿಠರಪಾಕವನ್ನೇ ಒಪ್ಪುವುದು ಲಾಘವನ್ಯಾಯಾರ್ಥಿಗಳಿಗೆ ಯುಕ್ತವಾದುದರಿಂದ ಅತ್ಯಂತಗೌರವದೋಷಗ್ರಸ್ತವಾದ ಪೀಲುಪಾಕವನ್ನು ಒಪ್ಪಲಾಗುವುದಿಲ್ಲ. ಹೀಗೆ ಅವಯವಿಗೆ ನಾಶವನ್ನು ಹೇಳದೆ ಪಿಠರಪಾಕವನ್ನು ಒಪ್ಪಿದರೇನೇ ಪಾಕಾನಂತರದಲ್ಲಿ "ಸ ಏವಾಯಂ ಘಟಃ" (ಇದು ಅದೇ ಘಟವಾಗಿರುವುದು) ಎಂದು ಘಟವಿಷಯವಾಗಿ ಉಂಟಾಗುತ್ತಿರುವ ಪ್ರತ್ಯಭಿಜ್ಞೆಯೂ ಸಂಗತವಾಗುವುದು. ಮೊದಲು ಇದ್ದ ರೇಖೆ ಉಪರೇಖೆ ಮುಂತಾದ ಗುರುತುಗಳೇ ಪಾಕಾನಂತರದಲ್ಲಿಯೂ ಘಟದಲ್ಲಿ ಕಾಣುವುವಷ್ಟೆ ? ಪೀಲುಪಾಕಪ್ರಕ್ರಿಯೆಯಲ್ಲಿ ಪೂರ್ವಘಟವು ಸುತರಾಂ ನಷ್ಟವೇ ಆಗಿ ಹೊಸಘಟವೇ ಉಂಟಾಗಿರುವುದರಿಂದ ಉಕ್ತಪ್ರತ್ಯಭಿಜ್ಞೆ ಆಗ ಉಂಟಾಗಕೂಡದಷ್ಟೆ ? ಪಿಠರವೆಂದರೆ ಸ್ಥಾಲಿ-ಅವಯವಿಯೆಂದು ತಾತ್ಪರ್ಯವು. ಇಂಥ ಅವಯವಿಯಲ್ಲಿಯೇ ಪಾಕವು ಸಿದ್ಧವಾಗುವುದು. ಎಂಬುದು ಕೆಲವರ ಅಭಿಪ್ರಾಯವು. ಇದೇ ಪಿಠರಪಾಕಪ್ರಕ್ರಿಯೆಯೆಂದು ವ್ಯವಹರಿಸಲ್ಪಡುವುದು.

## ೧೧೧೦೫. ಉಕ್ತಯೋರ್ದ್ವಯೋರಪಿ ಪಾಕಪ್ರಕ್ರಿಯಯೋಃ ವೇದಾಂತಿನಾಮನಭಿಮತತ್ವಂ.

ವೇದಾಂತಿಗಳಾದ ನಮ್ಮ ಸಿದ್ಧಾಂತವನ್ನು ವಿಮರ್ಶಿಸಿನೋಡಿದರೆ— ಈ ಎರಡುಪಕ್ಷಗಳೂ ನಮಗೆ ಅಭಿಮತಗಳಲ್ಲವೆಂದು ದೃಢವಾಗಿ ಹೇಳಬಹುದು; ಏತಕ್ಕೆಂದರೆ ನೈಯಾಯಿಕರಿಗೆ ಅಭಿಮತವಾಗಿರುವ ಪರಮಾಣುಗಳನ್ನೂ, ಅವಯವಾತಿರಿಕ್ತವಾದ ಅವಯವಿಯನ್ನೂ ನಾವು ಒಪ್ಪುವುದೇ ಇಲ್ಲ. ಆದಕಾರಣ— ಅವಯವಗಳು ಒಟ್ಟಿಗೆ ಕೂಡಿರುವ ಅವಸ್ಥೆಯಲ್ಲಿ ಪಾಕವುಂಟಾಗುವುದೋ? ಅಥವಾ ಪ್ರತ್ಯೇಕವಾಗಿರುವ ಅವಸ್ಥೆಯಲ್ಲಿ ಪಾಕವುಂಟಾಗುವುದೋ? ಎಂಬುದನ್ನುಮಾತ್ರ ನಾವು ವಿಚಾರಿಸಿ ನಿರ್ಣಯಿಸಿಬಿಟ್ಟರೆ ಸಾಕಾಗಿರುವುದು.

## ೧೧೧೦೬. ಅವಯವಾನಾಂ ಯಥಾಸಂಭವಂ ಸಂಘಾತಾವಸ್ಥಾಯಾಂ ಪ್ರತ್ಯೇಕಾವಸ್ಥಾಯಾಂ ವಾ ಪಾಕೋತ್ಪತ್ತಿನಿರೂಪಣಂ.

ಸಂದರ್ಭಾನುಸಾರವಾಗಿ ಎರಡನ್ನೂ ನಾವು ಒಪ್ಪುವೆವು; ಹೇಗೆಂದರೆ— ಘಟ ಮುಂತಾದ ಅವಯವಿಗಳು ಶೈಥಿಲ್ಯವನ್ನು ಹೊಂದದೆಯೇ ಪಾಕಭೇದದಿಂದ ರೂಪಾದಿಗಳ ಪರಿವೃತ್ತಿಯನ್ನು ಹೊಂದುತ್ತವೆಯೆಂಬುದು ಪ್ರತ್ಯಕ್ಷಸಿದ್ಧವಾದುದರಿಂದ ಸಂಘಾತಾವಸ್ಥೆಯಲ್ಲಿ ಪಾಕವುಂಟಾಗುವುದೆಂಬ ಪ್ರಥಮಪಕ್ಷವನ್ನು ಒಪ್ಪಿದಂತಾಯಿತು; ಹೀಗಾದರೆ ಪಿಠರಪಾಕಪ್ರಕ್ರಿಯೆಯನ್ನೇ ಒಪ್ಪಿದಂತಾಯಿತು; ಹಾಗಿರುವಲ್ಲಿ ವೈಶೇಷಿಕರು ಪೀಲುಪಾಕಪ್ರಕ್ರಿಯೆಯನ್ನು ಏತಕ್ಕೆ ಆದರಿಸುತ್ತಾರೆ? ಒಂದೆರಡು ಆಭಾಸಯುಕ್ತಿಗಳ ಆಧಾರದಮೇಲೆ ಅವರು ಹಾಗೆ ಆದರಿಸುತ್ತಾರೆ; ಹೇಗೆಂದರೆ—ಅವಯವಿಯಲ್ಲಿರುವ ರೂಪಾದಿಗಳು ಆಶ್ರಯವಿರುವಪರ್ಯಂತವೂ ಇದ್ದೇ ಇರುವುವೆಂಬ ಒಂದು ನಿಯಮವನ್ನೂ, ಅವಯವದಲ್ಲಿರುವ ವೈಶೇಷಿಕಗುಣಗಳಿಂದಲೇ ಅವಯವಿಯಲ್ಲಿ ವೈಶೇಷಿಕಗುಣಗಳು ಉಂಟಾಗುವುವೆಂಬ ಮತ್ತೊಂದು ನಿಯಮವನ್ನೂ ಅವರು ಒಪ್ಪುವರು. ಈ ಕಾರಣದಿಂದಲೇ ಅವರ ಮತದಲ್ಲಿ— ಘಟವೆಂಬ ಅವಯವಿಯಲ್ಲಿ ಪಾಕವುಂಟಾದಾಗ ಆ ಅವಯವಿಗೆ ನಾಶವುಂಟಾದರಲ್ಲದೆ ಪೂರ್ವರೂಪಾದಿಗಳಿಗೆ ನಾಶವುಂಟಾಗುವುದಕ್ಕಿಲ್ಲ; ಮತ್ತು ಅವಯವಗಳಲ್ಲಿ ಹೊಸರೂಪಾದಿಗಳು ಹುಟ್ಟಿದರಲ್ಲದೆ ಅವಯವಿಯಲ್ಲಿ ಹೊಸರೂಪಾದಿಗಳು ಹುಟ್ಟುವುದಕ್ಕೂ ಅವಕಾಶವಿಲ್ಲ; ಆದುದರಿಂದ ಪೀಲುಪಾಕಪ್ರಕ್ರಿಯೆಯನ್ನು ಅವರು ಕಲ್ಪಿಸುವರು.

ಅವಯುವಗಳು ವಿಭಕ್ತಗಳಾಗಿರುವ ಅವಸ್ಥೆಯಲ್ಲಿ ಪಾಕವುಂಟಾಗುವುದೆಂಬ ಎರಡನೆಯು ಪಕ್ಷವೂ ನಮ್ಮ ಮತದಲ್ಲಿ ಯುಕ್ತವಾಗಿಯೇ ಇರುವುದು; ಹೇಗೆಂದರೆ, ಮಧೂಚ್ಛಿಷ್ಟವೇ (ಜೇನುಮೇಣ) ಮೊದಲಾದ ಕೆಲವು ಪಸ್ತುಗಳಲ್ಲಿ ಬೆಂಕಿ ತಗಲಿದ ಮಾತ್ರಕ್ಕೆ ಕೆಲವು ಅವಯುವಗಳಿಗೆ ವಿನಾಶವಾಗಲಿ ಶೈಥಿಲ್ಯವಾಗಲಿ ಪ್ರತ್ಯಕ್ಷದಲ್ಲಿ ಕಾಣುವುದರಿಂದ ಅವಯುವಶೈಥಿಲ್ಯಪೂರ್ವಕವಾಗಿಯೇ ಪಾಕವನ್ನು ಒಪ್ಪಬಹುದು. ಹೀಗೆ ಒಪ್ಪುವುದರಿಂದಲೇ ಏಕದೇಶಪಾಕವೂ ಸಂಗತವಾಗಬಹುದು. ಏಕದೇಶಪಾಕದಿಂದ ಏಕದೇಶಶೈಥಿಲ್ಯವೂ ಉಂಟಾಗಬಹುದಷ್ಟೆ? ಅವಯುವಶೈಥಿಲ್ಯವುಂಟಾಗದೆಯೇ ಪಾಕವುಂಟಾಗುವುದೆಂದು ಒಪ್ಪಿದರೇನೇ ಏಕದೇಶಪಾಕವು ಅಸಂಗತವಾಗುವುದು. ಏಕದೇಶದಲ್ಲಿ ಅಗ್ನಿಸಂಯೋಗವುಂಟಾದ ಮಾತ್ರಕ್ಕೆ ಅವಯುವಿಯಲ್ಲಿರುವ ರೂಪವು ನಷ್ಟವಾಗಲಾರದು; ಏತಕ್ಕೆಂದರೆ ಆ ರೂಪವು ಅವಯುವಿಯಲ್ಲಿ ವ್ಯಾಪ್ಯವೃತ್ತಿಯಾಗಿರುವುದು. ಪೂರ್ವರೂಪಕ್ಕೆ ನಾಶವುಂಟಾದರಲ್ಲದೆ ರೂಪಾಂತರದ ಉತ್ಪತ್ತಿಯೂ ಸಂಭವಿಸುವುದಿಲ್ಲ. ರೂಪಾಂತರವೂ ಅವಯುವಿಯಲ್ಲಿ ವ್ಯಾಪ್ಯವೃತ್ತಿಯಾದುದರಿಂದ ಏಕದೇಶಾಗ್ನಿಸಂಯೋಗವುಂಟಾಗುವಾಗ ಅಂಥ ರೂಪಾಂತರದ ಉತ್ಪತ್ತಿ ಸಂಭವಿಸಲಾರದಷ್ಟೆ?

**ಇಂತು ತತ್ತ್ವಶುದ್ಧಿಯೆಂಬ ವಿಶಿಷ್ಟಾದ್ವೈತಪ್ರಕರಣಗ್ರಂಥದೊಳ್ ಅದ್ರವ್ಯಪರಿಚ್ಛೇದದಲ್ಲಿ ಸ್ಪರ್ಶ, ರೂಪ, ರಸ, ಗಂಧ ನಿರೂಪಣಪ್ರಕರಣಂ ತೃತೀಯಂ.**

# ಚತುರ್ಥಪ್ರಕರಣಂ.

## ೧೧೦೭. ಅಥ ಸಂಯೋಗಲಕ್ಷಣಂ.

ಪುರೋವರ್ತಿಪದಾರ್ಥಗಳೆರಡರಲ್ಲಿ ವಾಚ್ಯತಾಸಂಬಂಧದಿಂದ ಸಂಯುಕ್ತಪದವನ್ನು ವಿಶೇಷಣವಾಗಿ ಗ್ರಹಿಸುವ—ಚಕ್ಷುರಿಂದ್ರಿಯಜನ್ಯ—ತ್ವಗಿಂದ್ರಿಯಜನ್ಯೋಭಯಪ್ರತ್ಯಕ್ಷಜ್ಞಾನಕ್ಕೆ ನಿಮಿತ್ತವಾದ ಅದ್ರವ್ಯವು ಸಂಯೋಗವೆನಿಸಿಕೊಳ್ಳುವುದು. ಎಂದರೆ—ಚಕ್ಷುರಿಂದ್ರಿಯಜನ್ಯವಾಗಿಯೂ ತ್ವಗಿಂದ್ರಿಯಜನ್ಯವಾಗಿಯೂ ಇರುವ "**ಇಮೌ ಸಂಯುಕ್ತೌ**" (ಇವುಗಳೆರಡು ಸಂಯುಕ್ತಗಳಾಗಿರುವುವು) ಎಂಬ ಪ್ರತ್ಯಕ್ಷಕ್ಕೆ ನಿಮಿತ್ತವಾಗಿಯೂ ಅದ್ರವ್ಯವಾಗಿಯೂ ಇರುವುದು ಸಂಯೋಗವೆನಿಸಿಕೊಳ್ಳುವುದು.

ಈ ಲಕ್ಷಣವಾಕ್ಯದಲ್ಲಿ ಅದ್ರವ್ಯಪದವನ್ನು ಸೇರಿಸದಿದ್ದರೆ—"ಇಮೌ ಸಂಯುಕ್ತೌ" ಎಂಬ ಪ್ರತ್ಯಕ್ಷಜ್ಞಾನಕ್ಕೆ ಪುರೋವರ್ತಿದ್ರವ್ಯಗಳೆರಡೂ ನಿಮಿತ್ತಗಳಾದುದರಿಂದ ಅವುಗಳಲ್ಲಿ ಲಕ್ಷಣಕ್ಕೆ ಅತಿಪ್ರಸಂಗವುಂಟಾಗುವುದು. ಅದನ್ನು ತಪ್ಪಿಸುವುದಕ್ಕಾಗಿ ಅದ್ರವ್ಯಪದವು ಸೇರಿಸಲ್ಪಟ್ಟಿರುವುದು.

ಅದ್ರವ್ಯತ್ವವು ಎಲ್ಲಾ ಅದ್ರವ್ಯಗಳಿಗೂ ಸಾಧಾರಣವಾದುದರಿಂದ ಸಂಯೋಗಕ್ಕೆ ಅಷ್ಟುಮಾತ್ರವೇ ಅಸಾಧಾರಣಲಕ್ಷಣವಾಗಲಾರದಾದಪ್ರಯುಕ್ತ ಲಕ್ಷಣದಲ್ಲಿ ನಿಮಿತ್ತಾಂತವಾದ ವಿಶೇಷಣವು ಸೇರಿಸಲ್ಪಟ್ಟಿರುವುದು.

ಮತ್ತು—ಲಕ್ಷಣವಾಕ್ಯದಲ್ಲಿ "ಚಕ್ಷುರಿಂದ್ರಿಯಜನ್ಯತ್ವಗಿಂದ್ರಿಯಜನ್ಯೋಭಯಪ್ರತ್ಯಕ್ಷಜ್ಞಾನಕ್ಕೆ" ಎಂಬುದನ್ನು ಸೇರಿಸದೆ "ಚಕ್ಷುರಿಂದ್ರಿಯಜನ್ಯಪ್ರತ್ಯಕ್ಷಜ್ಞಾನಕ್ಕೆ" ಎಂಬ ಇಷ್ಟುಮಾತ್ರವನ್ನೇ ಸೇರಿಸಿದರೆ ರೂಪವು ಚಕ್ಷುರಿಂದ್ರಿಯಜನ್ಯಪ್ರತ್ಯಕ್ಷಜ್ಞಾನಕ್ಕೆ ನಿಮಿತ್ತವಾದುದರಿಂದ ಅದರಲ್ಲಿ ಲಕ್ಷಣವು ಅತಿಪ್ರಸಕ್ತವಾಗುವುದು; ಅದನ್ನು ತಪ್ಪಿಸುವುದಕ್ಕಾಗಿ 'ತ್ವಗಿಂದ್ರಿಯಜನ್ಯೋಭಯಪ್ರತ್ಯಕ್ಷಜ್ಞಾನಕ್ಕೆ" ಎಂಬುದೂ ಲಕ್ಷಣದಲ್ಲಿ ಸೇರಿಸಲ್ಪಟ್ಟಿರುವುದು; ರೂಪವು ಚಕ್ಷುರಿಂದ್ರಿಯಜನ್ಯಪ್ರತ್ಯಕ್ಷಜ್ಞಾನಕ್ಕೆ ನಿಮಿತ್ತವಾದರೂ ತ್ವಗಿಂದ್ರಿಯಜನ್ಯಪ್ರತ್ಯಕ್ಷಜ್ಞಾನಕ್ಕೆ ನಿಮಿತ್ತವಲ್ಲವಾದುದರಿಂದ ಅತಿಪ್ರಸಂಗವಿಲ್ಲ.

"ಚಕ್ಷುರಿಂದ್ರಿಯಜನ್ಯ" ಎಂಬುದನ್ನು ಬಿಟ್ಟು "ತ್ವಗಿಂದ್ರಿಯಜನ್ಯಪ್ರತ್ಯಕ್ಷಜ್ಞಾನಕ್ಕೆ" ಎಂಬ ಇಷ್ಟುಮಾತ್ರವನ್ನೇ ಸೇರಿಸಿದರೆ ಸ್ಪರ್ಶವು ತ್ವಗಿಂದ್ರಿಯಜನ್ಯಪ್ರತ್ಯಕ್ಷಜ್ಞಾನಕ್ಕೆ ನಿಮಿತ್ತವಾದುದರಿಂದ ಅದರಲ್ಲಿ ಲಕ್ಷಣವು ಅತಿಪ್ರಸಕ್ತವಾಗುವುದು; ಇದಕ್ಕಾಗಿ "ಚಕ್ಷುರಿಂದ್ರಿಯಜನ್ಯ" ಎಂಬ ಪದವೂ ಸೇರಿಸಲ್ಪಟ್ಟಿರುವುದು; ಸ್ಪರ್ಶವು ತ್ವಗಿಂದ್ರಿಯಜನ್ಯಪ್ರತ್ಯಕ್ಷಜ್ಞಾನಕ್ಕೆ ನಿಮಿತ್ತವಾದರೂ ಚಕ್ಷುರಿಂದ್ರಿಯಜನ್ಯಪ್ರತ್ಯಕ್ಷಜ್ಞಾನಕ್ಕೆ ನಿಮಿತ್ತವಲ್ಲವಾದುದರಿಂದ ಅತಿಪ್ರಸಂಗವಿಲ್ಲ. ಸಂಯೋಗವನ್ನು ಚಕ್ಷುರಿಂದ್ರಿಯ-ತ್ವಗಿಂದ್ರಿಯಗಳೆರಡರಿಂದಲೂ ಗ್ರಹಿಸಬಹುದಾದುದರಿಂದ ಲಕ್ಷಣಕ್ಕೆ ಸಮನ್ವಯವಾಗಬಹುದು.

ಸಂಯೋಗದಂತೆ ಪರಿಮಾಣವನ್ನೂ ಚಕ್ಷುರಿಂದ್ರಿಯ-ತ್ವಗಿಂದ್ರಿಯಗಳೆರಡರಿಂದಲೂ ಗ್ರಹಿಸಬಹುದು; ಇಂಥ ಪರಿಮಾಣವೂ ಸಂಯೋಗವಿಶೇಷವೆಂದೇ ಕೆಲವರ ಮತವು; ಈ ಮತದಲ್ಲಿ ಪರಿಮಾಣದಲ್ಲಿಯೂ ಲಕ್ಷಣಕ್ಕೆ ಸಮನ್ವಯವನ್ನು ತಿಳಿಯಬಹುದು; ಆದರೆ ಈ ಪರಿಮಾಣವು ಸಂಯೋಗವಲ್ಲವೆಂದೂ, ಸಂಯೋಗಕ್ಕಿಂತಲೂ ಅತಿರಿಕ್ತವಾದುದೆಂದೂ ಕೆಲವರು ಹೇಳುವರು; ಅವರ ಮತದಲ್ಲಿ

ಈ ಲಕ್ಷಣವು ಪರಿಮಾಣದಲ್ಲಿ ಅತಿಪ್ರಸಕ್ತವಾಗುವುದು; ಅದನ್ನು ತಪ್ಪಿಸುವು ದಕ್ಕಾಗಿ "ಪುರೋವರ್ತಿಪದಾರ್ಥಗಳೆರಡರಲ್ಲಿ ವಾಚ್ಯತಾಸಂಬಂಧದಿಂದ ಸಂಯು ಕ್ತಪದವನ್ನು ವಿಶೇಷಣವಾಗಿ ಗ್ರಹಿಸುವ" ಎಂಬ ದಳವು ಜ್ಞಾನಕ್ಕೆ ವಿಶೇಷಣ ವಾಗಿ ಸೇರಿಸಲ್ಪಟ್ಟಿರುವುದು; ಹೀಗೆ ಸೇರಿಸಿದ ಈ ದಳಕ್ಕೆ "ಲಕ್ಷಣದಲ್ಲಿ ಪರಿಮಾಣ ಭಿನ್ನವೆಂಬ ವಿಶೇಷಣವನ್ನು ಸೇರಿಸಿಕೊಳ್ಳಬೇಕು" ಎಂಬುದರಲ್ಲಿ ತಾತ್ಪರ್ಯವಾಗಿರು ವುದು; ಆಗ "ಪರಿಮಾಣಭಿನ್ನವಾಗಿಯೂ ಚಕ್ಷುರಿಂದ್ರಿಯಜನ್ಯತ್ವಗಿಂದ್ರಿಯ ಜನ್ಯೋಭಯಪ್ರತ್ಯಕ್ಷಜ್ಞಾನಕ್ಕೆ ನಿಮಿತ್ತವಾಗಿಯೂ ಇರುವ ಅದ್ರವ್ಯವು ಸಂ ಯೋಗವೆನಿಸಿಕೊಳ್ಳುವುದು" ಎಂದು ಲಕ್ಷಣವು ಏರ್ಪಡುವುದು; ಈ ಲಕ್ಷಣಕ್ಕೆ ಪರಿಮಾಣದಲ್ಲಿ ಅತಿಪ್ರಸಕ್ತಿಯಿಲ್ಲ; ಪರಿಮಾಣವು ಪರಿಮಾಣಕ್ಕಿಂತಲೂ ಭಿನ್ನ ವಲ್ಲವಷ್ಟೆ?

ಹಾಗಾದರೆ—ಪರಿಮಾಣವೂ ಸಂಯೋಗವಿಶೇಷವೆಂದೇ ಹೇಳುವವರ ಮತ ದಲ್ಲಿ ಈದಳಕ್ಕೆ ಪ್ರಯೋಜನವಿಲ್ಲದೆ ಹೋಗುವುದಲ್ಲವೆ? ಇಲ್ಲ; ಆಗಲೂ ಪ್ರಯೋ ಜನವುಂಟು; ಹೇಗೆಂದರೆ—

ಸಂಯೋಗದಂತೆಯೂ ಪರಿಮಾಣದಂತೆಯೂ ಸಂಖ್ಯೆಯನ್ನೂ ಚಕ್ಷುರಿಂ ದ್ರಿಯತ್ವಗಿಂದ್ರಿಯಗಳೆರಡರಿಂದಲೂ ಗ್ರಹಿಸಬಹುದು; ಆದಕಾರಣ ಈ ಸಂಖ್ಯೆ ಚಕ್ಷುರಿಂದ್ರಿಯಜನ್ಯತ್ವಗಿಂದ್ರಿಯಜನ್ಯೋಭಯಪ್ರತ್ಯಕ್ಷಜ್ಞಾನಕ್ಕೆ ನಿಮಿತ್ತವಾ ದುದರಿಂದ ಲಕ್ಷಣವು ಅದರಲ್ಲಿ ಅತಿಪ್ರಸಕ್ತವಾಗುವುದು; ಅದನ್ನು ತಪ್ಪಿಸುವು ದಕ್ಕಾಗಿ ಉಕ್ತದಳವು ಲಕ್ಷಣದಲ್ಲಿ ಸೇರಿಸಲ್ಪಟ್ಟಿರುವುದು; ಮೊದಲಿನಂತೆಯೇ ಈಗಲೂ ಈ ದಳಕ್ಕೆ—"ಲಕ್ಷಣದಲ್ಲಿ ಸಂಖ್ಯಾಭಿನ್ನವೆಂಬ ವಿಶೇಷಣವನ್ನು ಸೇರಿಸಿ ಕೊಳ್ಳಬೇಕು" ಎಂಬುದರಲ್ಲಿಯೇ ತಾತ್ಪರ್ಯವಾಗಿರುವುದು; ಆಗ "ಸಂಖ್ಯಾ ಭಿನ್ನವಾಗಿಯೂ ಚಕ್ಷುರಿಂದ್ರಿಯಜನ್ಯತ್ವಗಿಂದ್ರಿಯಜನ್ಯೋಭಯಪ್ರತ್ಯಕ್ಷಜ್ಞಾ ನಕ್ಕೆ ನಿಮಿತ್ತವಾಗಿಯೂ ಇರುವ ಅದ್ರವ್ಯವು ಸಂಯೋಗವೆನಿಸಿಕೊಳ್ಳು ವುದು" ಎಂದು ಲಕ್ಷಣವು ಏರ್ಪಡುವುದು. ಈ ಲಕ್ಷಣಕ್ಕೆ ಸಂಖ್ಯೆಯಲ್ಲಿ ಅತಿ ಪ್ರಸಕ್ತಿಯಿಲ್ಲ; ಸಂಖ್ಯೆ ಸಂಖ್ಯೆಗಿಂತಲೂ ಭಿನ್ನವಲ್ಲವಷ್ಟೆ?

## ೧೧೦೮. ಸಂಯೋಗಸ್ಯ ಸಂಯೋಗಿಸ್ವರೂಪಾತ್ಮಕತ್ವಂ ಅಂತರಾಳಶೂನ್ಯತ್ವಾತ್ಮಕತ್ವಂ ಚೇತಿ ಪಕ್ಷ ದ್ವಯಾನುವಾದಃ.

ಇಂಥ ಸಂಯೋಗವನ್ನು—ಕೆಲವರು ಭಾವರೂಪವಾದ ಪದಾರ್ಥವೆಂದೂ, ಇನ್ನು ಕೆಲವರು ಅಭಾವರೂಪವಾದ ಪದಾರ್ಥವೆಂದೂ ಹೇಳುವರು. ಭಾವರೂಪ

ವೆಂದು ಹೇಳುವವರೂ ಸಂಯೋಗದ ಸ್ವರೂಪವನ್ನು ನಾವು ಹೇಳಿದಂತೆ ಒಪ್ಪುವು ದಿಲ್ಲ; ಮತ್ತೇನೆಂದರೆ—ಯಾವ ಎರಡು ಪದಾರ್ಥಗಳಿಗೆ ಸಂಯೋಗವುಂಟಾಗಿರು ವುದೋ ಆ ಪದಾರ್ಥಗಳ ಸ್ವರೂಪಾತ್ಮಕವಾಗಿಯೇ ಇದು ಇರುವುದೆಂದು ಹೇಳು ವರು. ಅಭಾವರೂಪವೆಂದು ಹೇಳುವವರು—ಪದಾರ್ಥಗಳ ನೈರಂತರ್ಯವೇ ಸಂ ಯೋಗವೆಂದು ಹೇಳುವರು; ನೈರಂತರ್ಯವೆಂದರೆ ಅಂತರಾಳಶೂನ್ಯತೆ; ಅಂತ ರಾಳವೆಂದರೆ ಮಧ್ಯಭಾಗದಲ್ಲಿರುವ ಅವಕಾಶ. ಘಟಪಟಗಳೆರಡೂ ಸಂಯುಕ್ತಗಳಾ ಗಿರುವಾಗ ಅವೆರಡಕ್ಕೂ ಮಧ್ಯದಲ್ಲಿ ಅಂತರಾಳವಿಲ್ಲವಷ್ಟೆ?

## ೧೧೧೯. ತತ್ರ ಪ್ರಥಮಪಕ್ಷನಿರಾಕರಣಂ.

ಹೀಗೆ ಹೇಳುವ ಇಬ್ಬರ ಮತವೂ ಸಿದ್ಧಾಂತದಲ್ಲಿ ಅಭಿಮತವಲ್ಲ; ಹೇಗೆಂದರೆ—ಸಂಯೋಗವು ಸಂಯೋಗಪದಾರ್ಥಗಳ ಸ್ವರೂಪಾತ್ಮಕವಾಗಿರುವು ದೆಂಬ ಮೊದಲನೆಯ ಮತವು ಸಂಗತವಲ್ಲ—ಏತಕ್ಕೆಂದರೆ—ಘಟಪಟಗಳೆರಡಕ್ಕೂ ಸಂಯೋಗವು ಹುಟ್ಟುವುದಕ್ಕಿಂತಲೂ ಪೂರ್ವದಲ್ಲಿಯೂ, ಹುಟ್ಟಿ ನಷ್ಟವಾದ ಅನಂತರದಲ್ಲಿಯೂ ಘಟಪಟಗಳ ಸ್ವರೂಪವು ಇದ್ದೇ ಇರುವುದು; ಆದರೂ ಆಗ ಸಂಯೋಗಪ್ರತೀತಿ ಇಲ್ಲವಷ್ಟೆ? ಸಂಯೋಗವು ಸಂಯೋಗಿಪದಾರ್ಥಸ್ವರೂಪಾ ತ್ಮಕವೇ ಆಗಿರುವುದಾದರೆ ಪೂರ್ವೋತ್ತರಕಾಲಗಳಲ್ಲಿಯೂ ಸಂಯೋಗವು ತೋರ ಬೇಕಷ್ಟೆ?

## ೧೧೧೦. ದ್ವಿತೀಯಪಕ್ಷೇ ಅಂತರಾಳಶೂನ್ಯತ್ವಸ್ಯ ಭಾವಾತಿರಿಕ್ತತ್ವೇ ಅನಭ್ಯುಪಗಮಃ, ಭಾವಾಂತರರೂಪತ್ವೇ ಇಷ್ಟಾಪತ್ತಿಃ

"ಅಂತರಾಳಶೂನ್ಯತೆಯೇ ಸಂಯೋಗವು" ಎಂಬ ಎರಡನೆಯ ಮತವೂ ಸಂಗತವಲ್ಲ; ಏತಕ್ಕೆಂದರೆ—ಅಂತರಾಳಶೂನ್ಯತೆಯೆಂಬ ಈ ಅಭಾವವನ್ನು ಭಾ ವಾಂತರಕ್ಕಿಂತಲೂ ಅತಿರಿಕ್ತವಾದ ಪದಾರ್ಥವಾಗಿ ಒಪ್ಪುವಿರಾದರೆ ಅದನ್ನು ಸಿದ್ಧಾಂತದಲ್ಲಿ ನಿರಾಕರಿಸಿಯೇ ಇರುವೆವು; ಭಾವಾಂತರರೂಪವಾಗಿಯೇ ಒಪ್ಪು ವಿರಾದರೆ ಆಗ ನಮಗೆ ವಿವಾದವೇ ಇಲ್ಲ; ಅಂತರಾಳಶೂನ್ಯತೆಯೆಂಬ ಈ ಅಭಾವ ಪದಾರ್ಥವು ಸನ್ನಿಹಿತದೇಶಸಂಯೋಗವೆಂಬ ಭಾವಾಂತರರೂಪವಾಗಿಯೇ ಇರು ವುದರಿಂದ ನಮ್ಮ ಇಷ್ಟಸಿದ್ಧಿಯೇ ಆಗುವುದು; ಘಟಕ್ಕೆ ಪಟದೊಡನೆ ಅಂತರಾಳ ಶೂನ್ಯತೆಯೆಂದರೆ ಘಟಕ್ಕೆ ಅತ್ಯಂತಸನ್ನಿಹಿತವಾದ ಪ್ರದೇಶದಲ್ಲಿ ಪಟಕ್ಕೆ ಸಂಯೋ ಗವೆಂದೇ ಅರ್ಥವಾಗುವುದಷ್ಟೆ?

## ೧೧೧೧. ಅಂತರಾಳಶೂನ್ಯತ್ವಸ್ಯ ಭಾವಾತಿರಿಕ್ತಾಭಾವರೂಪತ್ವೇಽಪಿ ಪ್ರತಿಯೋಗಿತಯಾ ಸಂಯೋಗಸಿದ್ಧಿಃ

ಓಹೋ! ಸನ್ನಿಹಿತಪ್ರದೇಶಸಂಯೋಗವೆಂದು ಹೇಳಿದಮಾತ್ರಕ್ಕೆ ನಿಮ್ಮ ಇಷ್ಟಸಿದ್ಧಿ ಹೇಗಾಯಿತು? ಆಗಲೂ ಆ ಸಂಯೋಗವೆಂಬುದು ನೈರಂತರ್ಯವೆಂಬ ಅಂತರಾಳಶೂನ್ಯತಾರೂಪವಾಗಿಯೇ ಇರುವುದು; ನೈರಂತರ್ಯವನ್ನು ಸಂಯೋಗಿ ಪದಾರ್ಥಸ್ವರೂಪವೆಂದು ಹೇಳುವೆವಾದರೆ ಪೂರ್ವೋಕ್ತದೋಷಕ್ಕೆ ಭಾಗಿಗಳಾಗುವೆವು; ಸನ್ನಿಹಿತದೇಶಸಂಯೋಗವೆಂದು ಹೇಳುವೆವಾದರೆ ಸಂಯೋಗವನ್ನು ಒಪ್ಪಿಕೊಂಡವರಾಗಿಬಿಡುವೆವು; ಆದಕಾರಣ ಎರಡುಬಗೆಯಾಗಿಯೂ ನಾವು ಹೇಳುವುದಿಲ್ಲ; ನೈರಂತರ್ಯವೆಂಬುದು ಭಾವಾತಿರಿಕ್ತವಾದ ಅಭಾವಪದಾರ್ಥವಾಗಿರುವುದೆಂದೂ, ಅದೇ ಸಂಯೋಗವೆಂದೂ ಹೇಳುವೆವು. ಆಗ ಯಾವ ದೋಷವೂ ಇಲ್ಲವಷ್ಟೆ?

ಇಲ್ಲವೆಂಬುದಿಲ್ಲ; ಆಗಲೂ ದೋಷವುಂಟು; ಹೇಗೆಂದರೆ— ಅಭಾವಪದಾರ್ಥವನ್ನು ತಿಳಿಯಲಪೇಕ್ಷಿಸುವವನು ಮೊದಲು ಅದರ ಪ್ರತಿಯೋಗಿಯನ್ನು ತಿಳಿದುಕೊಳ್ಳಬೇಕು; ಘಟವನ್ನು ತಿಳಿಯದವನು ಘಟಾಭಾವವನ್ನು ತಿಳಿಯಲಾರನಷ್ಟೆ? ಘಟಪಟಗಳ ನೈರಂತರ್ಯವೆಂದರೆ ಘಟಪಟಗಳ ಅಂತರಾಳಶೂನ್ಯತೆಯೊಂದಲ್ಲವೆ ಅರ್ಥವಾಗುವುದು; ಈ ಅಂತರಾಳಶೂನ್ಯತೆಯೆಂಬುದು ಘಟಪಟಗಳ ದೂರದೂರಪ್ರದೇಶಸಂಯೋಗದ ಅಭಾವರೂಪವಾಗಿರುವುದು; ಅಭಾವರೂಪವಾದ ಈ ಅಂತರಾಳಶೂನ್ಯತೆಯಲ್ಲಿ ದೂರದೂರಪ್ರದೇಶಸಂಯೋಗವೇ ಪ್ರತಿಯೋಗಿಯಾದುದರಿಂದ ಅಂತರಾಳಶೂನ್ಯತೆಯನ್ನು ಒಪ್ಪುವ ನೀವು ಅದರ ಪ್ರತಿಯೋಗಿಯಾದ ಸಂಯೋಗವನ್ನು ಒಪ್ಪಿದಂತೆ ಆಯಿತಲ್ಲವೆ?

## ೧೧೧೨. ಸಂಯೋಗಸ್ಯ ಸ್ವಾಭಾವಸಾಮಾನಾಧಿಕರಣ್ಯರೂಪಾವ್ಯಾಪ್ಯವೃತ್ತಿತ್ವೋಪಪಾದನಂ.

ಇಂಥ ಸಂಯೋಗವು— ಯಾವ ವಸ್ತುವಿನಲ್ಲಿ ತಾನು ಇಲ್ಲವೆನಿಸಿಕೊಂಡಿರುವುದೋ ಅದೇ ವಸ್ತುವಿನಲ್ಲಿ ತಾನು ಉಂಟೆಂದು ಹೇಳಿಸಿಕೊಳ್ಳಲೂ ಅರ್ಹವಾಗಿರುವುದು; ಈ ಸ್ವಭಾವವನ್ನೇ ಶಾಸ್ತ್ರಕಾರರು "ಸ್ವಾಭಾವಸಾಮಾನಾಧಿಕರಣ್ಯಾರ್ಹತ್ವಂ" ಎಂದೂ "ಅವ್ಯಾಪ್ಯವೃತ್ತಿತ್ವಂ" ಎಂದೂ ವ್ಯವಹರಿಸುವರು. ಆದರೆ ಯಾವ ವಸ್ತುವಿನಲ್ಲಿ ಇದು ಹಾಗೆ ಇರುವುದೋ ಆ ವಸ್ತು ಸಾವಯವ

ವೆನಿಸಿಕೊಂಡು ಅಂಶಭೇದಗಳನ್ನು ಪಡೆದಿರಬೇಕು ; ಹಾಗಿದ್ದರೇನೆ ಅದರ ಒಂದು ಅಂಶದಲ್ಲಿ ಸಂಯೋಗವೂ ಮತ್ತೊಂದು ಅಂಶದಲ್ಲಿ ಸಂಯೋಗಾಭಾವವೂ ಇರ ಬಹುದು. ವೃಕ್ಷವೆಂಬ ಒಂದೇ ವಸ್ತುವಿನ ಕೊಂಬೆಯೆಂಬ ಒಂದಂಶದಲ್ಲಿ ಕಪಿಗಳ ಸಂಯೋಗವೂ, ಅದೇ ವೃಕ್ಷದ ಬುಡವೆಂಬ ಮತ್ತೊಂದಂಶದಲ್ಲಿ ಕಪಿಗಳ ಸಂಯೋ ಗಾಭಾವವೂ ಇರುತ್ತಿರುವುವೆಂಬುದು ಪ್ರತ್ಯಕ್ಷಸಿದ್ಧವಷ್ಟೆ ? ಆದರೆ ಸಂಯೋಗವೂ ಸಂಯೋಗಾಭಾವವೂ ಪರಸ್ಪರವಿರುದ್ಧಗಳಾಗಿದ್ದರೂ ಒಂದೇ ಅಂಶದಲ್ಲಿ ಇವು ಗಳು ಇರುವುವೆಂದರೇನೇ ಇವುಗಳಿಗೆ ವಿರೋಧವಿರುವುದು ; ಅಂಶಭೇದದಿಂದ ಇರುವುವಾದರೆ ಆಗ ಇವೆರಡಕ್ಕೂ ವಿರೋಧವಿಲ್ಲ ; ಅಂಶಭೇದವೇ ಇವುಗಳ ವಿರೋಧವನ್ನು ಪರಿಹರಿಸುವುದು.

## ೧೧೧೩. ನಿರವಯವದ್ರವ್ಯೇಷ್ವಪಿ ಸಂಯೋಗಸ್ಯ ಅವ್ಯಾ ಪ್ಯವೃತ್ತಿತ್ವೋಪಪತ್ತಿಃ.

ಓಹೋ ! ಸಾವಯವವಸ್ತುವಿನಲ್ಲಿಯೇ ಅಂಶಭೇದದಿಂದ ಸಂಯೋಗವೂ ಸಂಯೋಗಾಭಾವವೂ ಕೂಡಬಹುದೆಂದು ಹೇಳಿಬಿಟ್ಟರೆ ನಿರವಯವಗಳೆಂದು ಪ್ರಸಿ ದ್ಧಗಳಾಗಿರುವ ಕಾಲ, ಆಕಾಶ, ಈಶ್ವರ, ಧರ್ಮಭೂತಜ್ಞಾನ ಈ ವಸ್ತುಗಳಲ್ಲಿ ಅವ ಯವರೂಪವಾದ ಅಂಶಭೇದವೇ ಸಂಭವಿಸುವುದಿಲ್ಲವಾದುದರಿಂದ ಅವುಗಳಲ್ಲಿ ಘಟಾದಿವಸ್ತುಗಳ ಸಂಯೋಗಕ್ಕೂ ಸಂಯೋಗಾಭಾವಕ್ಕೂ ಸಾಮಾನಾಧಿಕರ ಣ್ಯವು ಹೇಗೆ ಉಪಪನ್ನವಾದೀತು ? ಎಂದು ಚಿಂತಿಸಬೇಕಾದುದಿಲ್ಲ ; ನಿರವಯವ ವಸ್ತುಗಳಲ್ಲಿಯೂ ವಸ್ತ್ವಂತರರೂಪವಾದ ಉಪಾಧಿಯಿಂದ ಆವರಿಸಲ್ಪಟ್ಟಿರುವ ಪ್ರದೇಶವೆಂಬ ಅಂಶಭೇದವು ಸಂಭವಿಸಬಹುದು ; ಆಕಾಶವು ನಿರವಯವವೆಂದು ಹೇಳುವವರ ಮತದಲ್ಲಿ ಭೇರಿಯೆಂಬ ವಸ್ತ್ವಂತರದಿಂದ ಆವರಿಸಲ್ಪಟ್ಟಿರುವ ಆಕಾಶ ಪ್ರದೇಶದಲ್ಲಿ ಶಬ್ದೋತ್ಪತ್ತಿಯೂ, ಉಳಿದಪ್ರದೇಶದಲ್ಲಿ ಶಬ್ದದ ಅಭಾವವೂ ಹೇಗೆ ಕೂಡುವುವೋ ; ಅದರಂತೆ ವಸ್ತ್ವಂತರದಿಂದ ಸಂಬದ್ಧಗಳಾಗಿರುವ ಈಶ್ವರ ಕಾಲ ಈ ವಸ್ತುಗಳಲ್ಲಿಯೂ ಘಟಾದಿಪದಾರ್ಥಗಳ ಸಂಯೋಗವೂ ಸಂಯೋಗಾ ಭಾವವೂ ಕೂಡಬಹುದು.

ಈ ಸಂದರ್ಭದಲ್ಲಿ ಹೇಳಬೇಕಾದ ಇನ್ನೂ ಅನೇಕ ಸೂಕ್ಷ್ಮಾಂಶಗಳಿದ್ದರೂ ವಿಶೇಷವಾದ ಶಾಸ್ತ್ರಪರಿಚಯವಿಲ್ಲದವರಿಗೆ ಅವು ಕಠಿನವಿಷಯಗಳಾದುದರಿಂದ ಅವುಗಳನ್ನು ಇಲ್ಲಿ ಬರೆಯದೆ ಬಿಟ್ಟಿರುವೆವು.

## ೧೧೧೪. ನಿತ್ಯಾನಿತ್ಯಭೇದೇನ ಸಂಯೋಗಸ್ಯ ದ್ವೈವಿಧ್ಯಂ.

ಇಂಥ ಸಂಯೋಗವು— ಅನಿತ್ಯಸಂಯೋಗವೆಂದೂ,ನಿತ್ಯಸಂಯೋಗವೆಂದೂ ಎರಡು ಬಗೆಯಾಗಿರುವುದು. ಪರಿಮಿತವಾದ ಪರಿಮಾಣವುಳ್ಳ ಘಟಪಟಾದಿವಸ್ತು ಗಳಿಗೆ ಉಂಟಾಗುವ ಸಂಯೋಗವು ಅನಿತ್ಯಸಂಯೋಗವಾಗಿರುವುದು; ಮತ್ತು ಪರಿಮಿತಪರಮಾಣವುಳ್ಳ ಘಟಾದಿವಸ್ತುಗಳಿಗೂ ಅಪರಿಮಿತಪರಿಮಾಣವುಳ್ಳ ಆಕಾ ಶಾದಿವಸ್ತುಗಳಿಗೂ ಉಂಟಾಗುವ ಸಂಯೋಗವೂ ಅನಿತ್ಯಸಂಯೋಗವಾಗಿರು ವುದು. ಘಟಾದಿವಸ್ತುಗಳು ಅನಿತ್ಯಗಳಾದುದರಿಂದ ಅವುಗಳಿಗೆ ನಿತ್ಯಸಂಯೋಗವು ಸಂಭವಿಸಲಾರದಷ್ಟೆ?

## ೧೧೧೫. ಅನಿತ್ಯಸಂಯೋಗಸ್ಯಾಪಿ ಉಭಯಕರ್ಮಜನ್ಯತ್ವಾನ್ಯತರ ಕರ್ಮಜನ್ಯತ್ವಾಭ್ಯಾಂ ದ್ವೈವಿಧ್ಯಂ.

ಮತ್ತು—ಸಂಯೋಗವನ್ನು ಪಡೆವುದಕ್ಕೆ ಸಿದ್ಧವಾಗಿರುವ ಎರಡು ವಸ್ತು ಗಳೊಳಗೆ ಎರಡರ ಪ್ರೇರಣಾಬಲದಿಂದ ಉಂಟಾಗುವ ಸಂಯೋಗವೂ, ಕೇವಲ ಒಂದರ ಪ್ರೇರಣಾಬಲದಿಂದ ಉಂಟಾಗುವ ಸಂಯೋಗವೂ ಅನಿತ್ಯಸಂಯೋಗ ಗಳಾಗಿರುವುವು. ಒಂದಕ್ಕೊಂದು ಹೋರಾಡುವುದಕ್ಕೆ ನಿಂತಿರುವ ಎರಡು ಟಗರು ಗಳಿಗೆ ಅಥವಾ ಎರಡು ಜಟ್ಟಿಗಳಿಗೆ ಉಂಟಾಗುವ ಸಂಯೋಗವು ಎರಡರ ಪ್ರೇರಣೆ ಯಿಂದಲೂ ಉಂಟಾಗಿ ಅನಿತ್ಯಸಂಯೋಗವಾಗಿರುವುದು; ಸ್ಥಿರವಾಗಿ ನಿಂತಿರುವ ವೃಕ್ಷಕ್ಕೂ ಆಕಾಶದಲ್ಲಿ ಹಾರಾಡುವ ಪಕ್ಷಿಗೂ ಉಂಟಾಗುವ ಸಂಯೋಗವು ಕೇವಲ ಪಕ್ಷಿಯ ಪ್ರೇರಣಾಬಲದಿಂದ ಉಂಟಾಗಿ ಅನಿತ್ಯಸಂಯೋಗವಾಗಿರು ವುದು. ಹೀಗೆ ಉದಾಹರಣಪೂರ್ವಕವಾಗಿ ಇದನ್ನು ನಿರೂಪಿಸಿ ತೋರಿಸಿದುದ ರಿಂದ—ಅನಿತ್ಯಸಂಯೋಗವು ಉಭಯಕರ್ಮಜನ್ಯವೆಂದೂ, ಅನ್ಯತರಕರ್ಮ ಜನ್ಯ ವೆಂದೂ ಎರಡುಬಗೆಯಾಗಿರುವುದೆಂದು ವ್ಯಕ್ತಪಡಿಸಿದಂತಾಯಿತು.

## ೧೧೧೬. ವೈಶೇಷಿಕಾಭಿಮತಸಂಯೋಗಜಸಂಯೋಗಸದ್ಭಾವ ಪಕ್ಷಾನುವಾದಃ.

ವೈಶೇಷಿಕದರ್ಶನಕಾರರು ಸಂಯೋಗಜನ್ಯವಾದ ಸಂಯೋಗವೂ ಉಂಟೆಂದು ಹೇಳುವರು; ಹೇಗೆಂದರೆ—ಅವಯವಿಯೆನಿಸಿಕೊಂಡ ಶರೀರದ ಅವಯವವಾದ ಹಸ್ತಕ್ಕೂ ಪುಸ್ತಕಕ್ಕೂ ಸಂಯೋಗವುಂಟಾದರೆ ಅದರಿಂದ ಅವಯವಿಯಾದ ಶರೀರಕ್ಕೂ ಪುಸ್ತಕಕ್ಕೂ ಸಂಯೋಗವುಂಟಾಗುವುದು; ಇದರಿಂದ ಸಂಯೋಗಜ ಸಂಯೋಗವನ್ನೂ ಒಪ್ಪಬೇಕು; ಎಂದು ಹೇಳುವರು—

## ೧೧೧೭. ಅವಯವಾತಿರಿಕ್ತಾವಯವ್ಯಭಾವಾತ್ ಸಂಯೋಗಜ ಸಂಯೋಗಸದ್ಭಾವನಿರಾಕರಣಂ

ಇದು ಸಂಗತವಲ್ಲ—ಏತಕ್ಕೆಂದರೆ ಅವಯವಕ್ಕಿಂತಲೂ ಅತಿರಿಕ್ತವಾದ ಅವಯವಿಯೆಂಬುದೇ ಅಪ್ರಸಿದ್ಧವಾಗಿರುವಲ್ಲಿ ಅವಯವಸಂಯೋಗಜನ್ಯವಾದ ಅವಯವಿಸಂಯೋಗವೆಂಬುದು ಹೇಗೆ ಸಂಭವಿಸೀತು? ಅವಯವಸಂಯೋಗವೇ ಅವಯವಿಸಂಯೋಗರೂಪವಾಗಿರುವುದಲ್ಲದೆ ಅವಯವಸಂಯೋಗಕ್ಕಿಂತಲೂ ಅತಿರಿಕ್ತವಾದ ಅವಯವಿಸಂಯೋಗವೆಂಬುದೊಂದು ಇಲ್ಲವೇ ಇಲ್ಲ. ಹಸ್ತಪುಸ್ತಕ ಸಂಯೋಗವೇ ಶರೀರಪುಸ್ತಕಸಂಯೋಗರೂಪವಾಗಿರುವುದಲ್ಲದೆ ಅತಿರಿಕ್ತವಾದುದೊಂದಲ್ಲ. ಇಲ್ಲಿ ಎರಡುಸಂಯೋಗಗಳಿದ್ದರಲ್ಲವೆ ಒಂದನ್ನು ಕಾರಣವಾಗಿಯೂ ಮತ್ತೊಂದನ್ನು ಕಾರ್ಯವಾಗಿಯೂ ಹೇಳಿ ಸಂಯೋಗಜಸಂಯೋಗವುಂಟೆಂದು ಹೇಳಬಹುದು; ಇಲ್ಲಿ ಅದೇ ಇಲ್ಲ. "ಶರೀರದ ಏಕದೇಶದಲ್ಲಿ ಪುಸ್ತಕಸಂಯೋಗ ವುಂಟಾಗಿರುವುದು' ಎಂಬುದಾಗಿಯೇ ಪ್ರತ್ಯಕ್ಷಪ್ರತೀತಿಯೂ ಸಹ ಇರುವುದಲ್ಲದೆ—"ಹಸ್ತಪುಸ್ತಕಗಳಿಗೆ ಮಾತ್ರವೇ ಈಗ ಸಂಯೋಗವುಂಟಾಗಿರುವುದು; ಶರೀರಪುಸ್ತಕಗಳಿಗೆ ಇನ್ನೂ ಸಂಯೋಗವುಂಟಾಗಿಲ್ಲ" ಎಂಬುದಾಗಿ ಪ್ರತೀತಿಯಿಲ್ಲ.

## ೧೧೧೮. ಅವಯವಾತಿರಿಕ್ತಾವಯವ್ಯಭ್ಯುಪಗಮೇಽಪಿ ಸಂಯೋಗಜಸಂಯೋಗಾನಾವಶ್ಯಕತಾ.

ಅಥವಾ—ಅವಯವಿಯೆಂಬುದೊಂದನ್ನು ಒಪ್ಪಿಕೊಂಡರೂ ಆಗಲೂ ಈ ಸಂಯೋಗಜನ್ಯಸಂಯೋಗವೆಂಬುದು ಸಿದ್ಧಿಸುವುದಿಲ್ಲ; ಹೇಗೆಂದರೆ—ಯಾವ ಹೇತುವಿನಿಂದ ಯಾವಾಗ ಅವಯವವು ವಸ್ತ್ವಂತರದೊಡನೆ ಸಂಯೋಗವನ್ನು ಪಡೆವುದೋ ಅದೇ ಹೇತುವಿನಿಂದ ಅದೇ ಸಮಯದಲ್ಲಿ ಅವಯವಿಯೂ ಆ ವಸ್ತ್ವಂತರದೊಡನೆ ಸಂಯೋಗವನ್ನು ಪಡೆದಿರುವುದೆಂದು ಏಕೆ ಒಪ್ಪಬಾರದು? ಶರೀರಪುಸ್ತಕಸಂಯೋಗಕ್ಕೆ ಹಸ್ತಪುಸ್ತಕಸಂಯೋಗೋತ್ತರಕಾಲಿಕತ್ವವು ಪ್ರತ್ಯಕ್ಷದಲ್ಲಿ ಕಾಣುವುದಿಲ್ಲವಷ್ಟೆ? ಎರಡು ಸಂಯೋಗಗಳಿಗೆ ಜನ್ಯಜನಕಭಾವ (ಕಾರ್ಯಕಾರಣಭಾವ) ವಿರುವುದಾದರೆ ಅವೆರಡೂ ಹಿಂದುಮುಂದಾಗಿರಬೇಕವೋ? ಹೀಗೆ ಇಲ್ಲಿ ಎರಡು ಸಂಯೋಗಗಳು ಇಲ್ಲದಿರುವಾಗ, ಅವುಗಳಿಗೆ ಪೌರ್ವಾಪರ್ಯವೂ ಇಲ್ಲದಿರುವಾಗ ಯಾವುದು ಯಾವುದಕ್ಕೆ ಕಾರಣವು? ಯಾವುದು ಯಾವುದಕ್ಕೆ ಕಾರ್ಯವು? ಪಟದ ಅವಯವವಾದ ತಂತುವಿನಲ್ಲಿರುವ ರೂಪದಿಂದಲೇ ಪಟದಲ್ಲಿ

ರೂಪವುಂಟಾಗುವಂತೆ ಶರೀರದ ಅವಯವವಾದ ಹಸ್ತದಲ್ಲಿರುವ ಪುಸ್ತಕಸಂಯೋಗಾನುಕೂಲವ್ಯಾಪಾರದಿಂದಲೇ ಶರೀರಪುಸ್ತಕಸಂಯೋಗವೂ ಉಂಟಾಗಬಹುದಾದುದರಿಂದ ಇದಕ್ಕಾಗಿ ಶರೀರದಲ್ಲಿ ಪ್ರತ್ಯೇಕವಾದ ವ್ಯಾಪಾರವು ಬೇಕಾಗಿಲ್ಲ.

**೧೧೧೯. ಸಂಯೋಗವತ್ ಕ್ರಿಯಾಯಾ ಅಪಿ ಅವ್ಯಾಪ್ಯವೃತ್ತಿತ್ವಾಭ್ಯುಪಗಮಾತ್ ಅವಯವಕ್ರಿಯಾಯಾ ಏವ ಅವಯವಿಕ್ರಿಯಾರೂಪತ್ವಂ.**

ಅಥವಾ—ಹಸ್ತವ್ಯಾಪಾರದಿಂದಲೇ ಹಸ್ತಸಂಯುಕ್ತವಾದ ಶರೀರದಲ್ಲಿ ವ್ಯಾಪಾರವು ಸಿದ್ಧವಾದಪ್ರಯುಕ್ತ ಅದರಿಂದಲೇ ಶರೀರಪುಸ್ತಕಸಂಯೋಗವೂ ಸಿದ್ಧವಾಗಬಹುದು. ಅದು ಹೇಗೆ? ಹಸ್ತದಲ್ಲಿ ಚಲನಕ್ರಿಯೆಯುಂಟಾದಮಾತ್ರಕ್ಕೆ ಶರೀರದಲ್ಲಿಯೂ ಚಲನಕ್ರಿಯೆ ಹೇಗೆ ಸಿದ್ಧಿಸೀತು? ಕ್ರಿಯೆಗೆ ವ್ಯಾಪ್ಯವೃತ್ತಿತ್ವವು ಸ್ವಾಭಾವಿಕವಾಗಿರುವುದು; ಹಸ್ತಮಾತ್ರದಲ್ಲಿರುವ ಕ್ರಿಯೆ ಶರೀರಕ್ಕೆ ಅವ್ಯಾಪ್ಯವೃತ್ತಿಯಾಗುವುದರಿಂದ ಅದು ಶರೀರದ ಕ್ರಿಯೆಯಾಗಲಾರದು; ಆದಕಾರಣ ಶರೀರದಲ್ಲಿ ವ್ಯಾಪ್ಯವೃತ್ತಿಯಾದ ಕ್ರಿಯಾಂತರವುಂಟಾಗಬೇಕಲ್ಲವೆ?

ಇಲ್ಲ; ಹಾಗೆ ಉಂಟಾಗಬೇಕಾದುದಿಲ್ಲ—ಸ್ವಾಭಾವಸಾಮಾನಾಧಿಕರಣ್ಯವೆಂಬ ಅವ್ಯಾಪ್ಯವೃತ್ತಿತ್ವವನ್ನು ಪ್ರತ್ಯಕ್ಷಬಲದಿಂದ ಸಂಯೋಗಕ್ಕೆ ಹೇಗೆ ಒಪ್ಪಿರುವೆವೋ ಅದರಂತೆ ಕ್ರಿಯೆಗೂ ಪ್ರತ್ಯಕ್ಷಬಲದಿಂದಲೇ ಅವ್ಯಾಪ್ಯವೃತ್ತಿತ್ವವನ್ನು ಒಪ್ಪಬೇಕಾದುದರಿಂದ ಹಸ್ತಕ್ರಿಯೆಯೇ ಶರೀರದ ಕ್ರಿಯೆಯಾಗಿರುವುದೆಂದು ಹೇಳಲು ಅಡ್ಡಿಯಿಲ್ಲ.

**೧೧೨೦. ಅವಯವಾವಯವಿನೋರ್ದ್ವಯೋರಪಿ ನಿಷ್ಕ್ರಿಯತ್ವೇಽಪಿ ಅನ್ಯದೀಯಕ್ರಿಯಯಾ ಸಂಯೋಗೋತ್ಪತ್ತ್ಯುಪಪತ್ತಿಃ.**

ಮತ್ತು ದೇವದತ್ತನ ಹಸ್ತದಲ್ಲಿ ಚಲನಕ್ರಿಯೆಯೂ ಇಲ್ಲದಿರುವಾಗ ಮತ್ತೊಬ್ಬನು ಪುಸ್ತಕವನ್ನು ತಂದು ದೇವದತ್ತನ ಹಸ್ತದೊಡನೆ ಕೂಡಿಸಿದನಾದರೆ ಆಗ ಅಂಥ ಪುಸ್ತಕವು ದೇವದತ್ತಶರೀರದೊಡನೆಯೂ ಕೂಡಿಯೇ ಕೂಡಿತಾದುದರಿಂದ ಕೂಡಲಿಲ್ಲವೆಂದು ಹೇಳುವ ಪರಿ ಹೇಗೆ? ಚಲನಕ್ರಿಯಾಶೂನ್ಯತ್ವವೆಂಬುದು ಶರೀರದಲ್ಲಿ ಹೇಗೋ ಹಾಗೆಯೇ ಹಸ್ತದಲ್ಲಿಯೂ ತುಲ್ಯವಾಗಿರುವುದಷ್ಟೆ? ಪುಸ್ತಕಸಂಯೋಗಾಭಿಮುಖ್ಯವೆಂಬುದೂ ಸಹ ಹಸ್ತಶರೀರಗಳೆರಡಕ್ಕೂ ತುಲ್ಯವಾಗಿರುವುದಷ್ಟೆ?

ಹೀಗೆ ಸಂಯೋಗಜನ್ಯಸಂಯೋಗವನ್ನು ನಿರಾಕರಿಸಿದುದರಿಂದಲೇ ವಿಭಾಗಜನ್ಯವಿಭಾಗವನ್ನೂ ನಿರಾಕರಿಸಿದಂತಾಯಿತು. ವಿಭಾಗವೆಂಬುದೂ ಅತಿರಿಕ್ತವಲ್ಲ

ವೆಂಬುದನ್ನೂ ಸಂಯೋಗಧ್ವಂಸರೂಪವಾದ ಭೇದದಲ್ಲಿಯೇ ಇದಕ್ಕೆ ಅಂತರ್ಭಾವವನ್ನೂ ಮುಂದೆ ತೋರಿಸುವೆವು.

## ೧೧೨೧. ಅಥ ನಿತ್ಯಸಂಯೋಗನಿರೂಪಣಂ

ಹೀಗೆ ಅನಿತ್ಯಸಂಯೋಗವನ್ನು ವಿಚಾರಿಸಿದೆವು ; ಇನ್ನು ನಿತ್ಯಸಂಯೋಗವನ್ನು ವಿಚಾರಿಸೋಣ—ಅಂತರಾಳಶೂನ್ಯವಾಗಿಯೂ ಚಲನಕ್ರಿಯಾರಹಿತವಾಗಿಯೂ ಇರುವ ಎರಡು ದ್ರವ್ಯಗಳಿಗೆ ಸಿದ್ಧವಾಗಿರುವ ಸಂಯೋಗವೇ ನಿತ್ಯಸಂಯೋಗವೆನಿಸಿಕೊಳ್ಳುವುದು. ಈಶ್ವರ-ಕಾಲ-ಆಕಾಶ-ನಿತ್ಯಮುಕ್ತೇಶ್ವರರ ಧರ್ಮಭೂತಜ್ಞಾನ ಈ ದ್ರವ್ಯಗಳಿಗೆ ಸಿದ್ಧವಾಗಿರುವ ಸಂಯೋಗವು ನಿತ್ಯಸಂಯೋಗವಾಗಿರುವುದು.

## ೧೧೨೨. ವಿಭುದ್ವಯಸಂಯೋಗಾನಭ್ಯುಪಗಂತೃವೈಶೇಷಿಕಮತನಿರಾಕರಣಾಯ ಅನುಮಾನೇನ ವಿಭುದ್ವಯಸಂಯೋಗಸಮರ್ಥನಂ.

ವಿಭುಪದಾರ್ಥಗಳೆರಡಕ್ಕೆ ಸಂಯೋಗವೇ ಸಂಭವಿಸುವುದಿಲ್ಲವೆಂದು ವೈಶೇಷಿಕದರ್ಶನಕಾರರು ಹೇಳುವರು ; ಆದರೆ ಇವರ ಹೇಳಿಕೆ ಯುಕ್ತವಲ್ಲ ; ಅಬಾಧಿತವಾಗಿರುವ ಅನುಮಾನಪ್ರಮಾಣದಿಂದ ವಿಭುದ್ವಯಸಂಯೋಗವು ಸಿದ್ಧವೇ ಆಗುವುದು ; ಹೇಗೆಂದರೆ—"ಈಶ್ವರನು ಕಾಲದೊಡನೆ ಸಂಯೋಗವನ್ನು ಪಡೆದೇ ಇರುವನು" ಎಂದು ಪ್ರತಿಜ್ಞೆಯನ್ನು ಮಾಡಿ, "ಕಾಲದೊಡನೆ ಅಂತರಾಳಶೂನ್ಯನಾಗಿರುವುದರಿಂದ' ಎಂದು ಹೇತುವನ್ನು ನಿರ್ದೇಶಿಸಿ, "ಯಾವುದು ಯಾವುದರೊಡನೆ ಅಂತರಾಳಶೂನ್ಯತೆಯನ್ನು ಪಡೆದಿರುವುದೋ ಅದು ಅದರೊಡನೆ ಸಂಯೋಗವನ್ನು ಪಡೆದೇ ಇರುವುದು" ಎಂದು ಸಾಮಾನ್ಯವ್ಯಾಪ್ತಿಯನ್ನು ಉಪನ್ಯಸಿಸಿ, "ಸೂರ್ಯ ಮೊದಲಾದ ತೇಜೋವಸ್ತುಗಳ ಆಲೋಕವೆಂಬ ತೇಜೋದ್ರವ್ಯವು ನೇತ್ರರಶ್ಮಿಯೆಂಬ ತೇಜೋದ್ರವ್ಯದೊಡನೆ ಅಂತರಾಳಶೂನ್ಯತೆಯನ್ನು ಪಡೆದಿರುವುದರಿಂದ ನೇತ್ರರಶ್ಮಿಯೊಡನೆ ಸಂಯೋಗವನ್ನು ಪಡೆದೇ ಇರುವುದು" ಎಂದು ದೃಷ್ಟಾಂತವಿಶೇಷದಲ್ಲಿ ವ್ಯಾಪ್ತಿಪರಿಚಯವನ್ನು ವಿಶದವಾಗಿ ಉಂಟುಮಾಡಿಕೊಟ್ಟು, "ಈಶ್ವರನು ಕಾಲದೊಡನೆ ಅಂತರಾಳಶೂನ್ಯತೆಯನ್ನು ಪಡದೇ ಇರುವನು" ಎಂದು ಪಕ್ಷದಲ್ಲಿ ಹೇತುವನ್ನು ಮೂದಲಿಸಿ, "ಆದಕಾರಣ ಈಶ್ವರನು ಕಾಲದೊಡನೆ ಸಂಯೋಗವನ್ನು ಪಡೆದೇ ಇರುವನು" ಎಂದು ನಿಗಮನಮಾಡಿದೆವಾದರೆ—ಈಶ್ವರನಿಗೆ ಕಾಲಸಂಯೋಗವನ್ನು ಯಾರು ಇಲ್ಲಗೊಳಿಸಬಲ್ಲರು ?

ಈಶ್ವರನು ಕಾಲದೊಡನೆ ಸಂಯುಕ್ತನಲ್ಲವೆಂದು ಹೇಳುವುದಾದರೆ ಈಶ್ವರನಿಗೂ ಕಾಲಕ್ಕೂ ಮಧ್ಯದಲ್ಲಿ ಅಂತರಾಳವು ತೋರಬೇಕು.

## ೧೧೨೩. ವಿಭುನೋರ್ದ್ವಯೋರಂತರಾಳಶೂನ್ಯತ್ವಮಾತ್ರಾಭ್ಯುಪಗಮೇಽಪಿ ಸಂಯೋಗಸ್ಯ ಅವರ್ಜನೀಯತ್ವಂ.

ಯಾರಾದರೆ ವಿಭುಪದಾರ್ಥಗಳಿಗೆ ಪರಸ್ಪರವಾಗಿ ಅಂತರಾಳಶೂನ್ಯತೆಯನ್ನು ಮಾತ್ರವೇ ಒಪ್ಪುವರೋ ; ಅವರ ಮತದಲ್ಲಿಯೂ ಅವುಗಳಿಗೆ ಸಂಯೋಗವೂ ಸಿದ್ಧವೇ ಆಗುವುದು ; ತಪ್ಪಲಾರದು ; ಏತಕ್ಕೆಂದರೆ ಸಂಯೋಗವೆಂಬುದು ನಿರಂತರಾಳತೆಗೆ ಅವಿನಾಭೂತವಾಗಿರುವುದು. ನಮ್ಮ ಮತದಲ್ಲಿಯಾದರೆ ಅಂತರಾಳಶೂನ್ಯತೆಯೆಂಬುದು ಅಭಾವಪದಾರ್ಥವಾದುದರಿಂದ ಅಭಾವವು ಭಾವಾಂತರರೂಪವಾಗಬೇಕಾದಪ್ರಯುಕ್ತ ಅದು ಅತ್ಯಂತಸನ್ನಿಹಿತದೇಶಸಂಯೋಗರೂಪವಾಗಿಯೇ ಇರುವುದು.

ಓಹೋ! "ಈಶ್ವರನಿಗೆ ಕಾಲದೊಡನೆ ಇರುವ ಅಂತರಾಳಶೂನ್ಯತೆ ಅತ್ಯಂತಸನ್ನಿಹಿತದೇಶಸಂಯೋಗರೂಪವಾದುದಾದರೆ ಅಂಥ ದೇಶಕ್ಕೂ ಈಶ್ವರನಿಗೂ ಸಂಯೋಗವಿರಲಿ; ಅದರಿಂದ ಈಶ್ವರನಿಗೆ ಕಾಲದೊಡನೆ ಸಂಯೋಗವು ಹೇಗೆ ಸಿದ್ಧಿಸೀತು ?" ಎಂದು ಆಶಂಕಿಸಬಾರದು ; ಅತ್ಯಂತಸನ್ನಿಹಿತದೇಶಸಂಯೋಗವು ಪರಸ್ಪರಸಂಯೋಗಕ್ಕೆ ಅವಿನಾಭೂತವಾದುದರಿಂದ ಈಶ್ವರನಿಗೆ ಕಾಲದೊಡನೆ ಸಂಯೋಗವು ತಪ್ಪಲಾರದು.

## ೧೧೨೪. ಅಂತರಾಳಶೂನ್ಯತ್ವಸ್ಯ ಅತ್ಯಂತಸನ್ನಿಹಿತದೇಶಸಂಯೋಗರೂಪತ್ವಾನುಪಪತ್ತ್ಯಾಶಂಕಾತತ್ಪರಿಹಾರೌ.

ಪೂಜ್ಯರೆ! ಅಂತರಾಳಶೂನ್ಯತೆಯೆಂಬುದು ಸನ್ನಿಹಿತದೇಶಸಂಯೋಗರೂಪವೇ ಆಗಿರುವುದೆಂದು ಹೇಳಿದಿರಿ; ಇದು ಯುಕ್ತವಲ್ಲ; ಸಂಯೋಗವೆಂಬುದು ದ್ರವ್ಯಗಳಿಗೇ ಉಂಟಾಗುವುದಲ್ಲದೆ ದ್ರವ್ಯಾದ್ರವ್ಯಗಳಿಗೆ ಸಂಭವಿಸುವಂಥದಲ್ಲ; ಶಬ್ದ-ಸ್ಪರ್ಶ-ರೂಪ-ರಸ-ಗಂಧ ಮೊದಲಾದ ಗುಣಗಳಿಗೆ ಗುಣಿಯೊಡನೆ ಅಂತರಾಳಶೂನ್ಯತೆಯಿದ್ದರೂ ಸಂಯೋಗವಿಲ್ಲ ; ವಸ್ತುಸ್ಥಿತಿಯಲ್ಲಿ ಅಂತರಾಳಶೂನ್ಯತೆ ಸಂಯೋಗರೂಪವೇ ಆಗಿದ್ದುದಾದರೆ ಗುಣಗುಣಿಗಳಿಗೆ ಸಂಯೋಗವಿಲ್ಲವಾದುದರಿಂದ ಅಂತರಾಳಶೂನ್ಯತೆಯೆಂಬ ನೈರಂತರ್ಯವೂ ಇಲ್ಲದೆ ಹೋಗಬೇಕಾದೀತಲ್ಲವೆ ?

ಎಂದು ಆಶಂಕಿಸಬಾರದು—ಏತಕ್ಕೆಂದರೆ—ಗುಣಗುಣಿಗಳಿಗೆ ಸಂಯೋಗವೆಂಬುದು ಹೇಗೆ ಇಲ್ಲವೋ ಹಾಗೆಯೇ ನಿರಂತರಾಳತ್ವಪ್ರತೀತಿಯೂ ಇಲ್ಲ; ಲೋಕದಲ್ಲಿ ಹಾಗೆ ವ್ಯವಹಾರವಿಲ್ಲವಷ್ಟೆ ?

ಓಹೋ! "ಗುಣಗುಣಿಗಳಿಗೆ ಅಂತರಾಳಶೂನ್ಯತೆಯಿಲ್ಲದಿದ್ದರೆ ಅಂತರಾಳವುಂಟೋ ?" ಎಂದು ದುಡಿಕಿ ಆಶಂಕಿಸಬೇಡಿರಿ; ಗುಣಗುಣಿಗಳಿಗೆ ಸಂಯೋಗವಿಲ್ಲದಿದ್ದರೆ ವಿಭಾಗವುಂಟೋ ? ಎಂಬ ಪ್ರತಿಬಂದಿಯಾದ ಆಕ್ಷೇಪಕ್ಕೆ ಯಾವ ಪರಿಹಾರವನ್ನು ನೀವು ಹೇಳುವಿರೋ ? ನಿಮ್ಮ ಆಶಂಕೆಗೂ ಅದೇ ಪರಿಹಾರವನ್ನು ನೀವೇ ತಿಳಿದುಕೊಳ್ಳಬಹುದು.

## ೧೧೨೫. ಸಂಯೋಗಹೇತ್ವಭಾವಾತ್ ವಿಭುನೋರ್ಜನ್ಯಸಂಯೋಗನಿರಾಕರಣಸಂಭವೇಽಪಿ ಹೇತ್ವಜನ್ಯನಿತ್ಯಸಂಯೋಗನಿರಾಕರಣಾಸಂಭವಃ

ಪೂಜ್ಯರೆ! ಎರಡು ದ್ರವ್ಯಗಳಿಗೆ ಪರಸ್ಪರಸಂಯೋಗವುಂಟಾಗುವುದಕ್ಕೆ ಯಾವ ಹೇತು ಲೋಕದಲ್ಲಿ ಪ್ರಸಿದ್ಧವಾಗಿರುವುದೋ ಅಂಥ ಹೇತು ಈಶ್ವರನಿಗೂ ಕಾಲಕ್ಕೂ ಇಲ್ಲವಾದುದರಿಂದ ಈಶ್ವರನಿಗೆ ಕಾಲದೊಡನೆ ಸಂಯೋಗವನ್ನು ಹೇಗೆ ಒಪ್ಪಲಾದೀತು ?

ಹೀಗೆ ಆಶಂಕಿಸಬೇಡಿರಿ; ಏತಕ್ಕೆಂದರೆ—ಹೇತುವಿಲ್ಲದುದರಿಂದ ಸಂಯೋಗವಿಲ್ಲವೆಂದು ಹೇಳುವ ನಿಮಗೆ—"ಜ್ಞಾಪಕಹೇತುವಿಲ್ಲದುದರಿಂದ ಈಶ್ವರನಿಗೂ ಕಾಲಕ್ಕೂ ಇರುವ ಸಂಯೋಗವನ್ನು ತಿಳಿಯಲಾಗುವುದಿಲ್ಲ" ಎಂದು ಅಭಿಪ್ರಾಯವೋ? ಅಥವಾ ಸಂಯೋಗೋತ್ಪತ್ತಿಕಾರಕವಾದ ಹೇತುವಿಲ್ಲದುದರಿಂದ ಈಶ್ವರನಿಗೆ ಕಾಲದೊಡನೆ ಸಂಯೋಗವೇ ಉತ್ಪನ್ನವಾಗಿಲ್ಲ" ಎಂದು ಅಭಿಪ್ರಾಯವೋ !

ಅನುಮಾನಪ್ರಮಾಣವೆಂಬ ಜ್ಞಾಪಕಹೇತುವನ್ನು ನಾವು ಮೊದಲೇ ತೋರಿಸಿರುವೆವಾದಪ್ರಯುಕ್ತ ಮೊದಲನೆಯ ಅಭಿಪ್ರಾಯವು ಯುಕ್ತವಲ್ಲ ;

ಎರಡನೆಯ ಅಭಿಪ್ರಾಯದಲ್ಲಿಯೂ—ನಮಗೆ ಹಾನಿಯಿಲ್ಲ; ನಿಮಗೆ ಪ್ರಯೋಜನವಿಲ್ಲ ; ಹೇಗೆಂದರೆ—ಲೋಕದಲ್ಲಿ ಸಂಯೋಗಿಗಳೊಳಗೆ ಸಂಯೋಗದ ಉತ್ಪತ್ತಿಗೆ ಉಭಯವ್ಯಾಪಾರವಾಗಲಿ ಅನ್ಯತರವ್ಯಾಪಾರವಾಗಲಿ ಹೇತುವಾಗಿರುವುದೆಂಬುದು ಎರಡು ಟಗರುಗಳಲ್ಲಿಯೂ ವೃಕ್ಷಪಕ್ಷಿಗಳಲ್ಲಿಯೂ ಪ್ರಸಿದ್ಧವಾಗಿರುವುದು ; ಅಂಥ ಕಾರಕಹೇತುವಿನಿಂದ ಉಂಟಾಗುವ ಸಂಯೋಗವು ಅನಿತ್ಯಸಂಯೋಗವಾಗುವುದೇ ಹೊರತು ನಿತ್ಯಸಂಯೋಗವಾಗಲಾರದು ; ಸಂಯೋಗಕಾರಕವಾದ

ಹೇತುವನ್ನು ಕಾಲೇಶ್ವರರಲ್ಲಿ ಪ್ರತಿಷೇಧಿಸಿದರೆ ಹೇತುಜನ್ಯವಾದ ಅನಿತ್ಯಸಂಯೋಗವು ಕಾಲೇಶ್ವರರಿಗೆ ಇರಲೇಬೇಡ; ಅದರಿಂದ ನಮಗೇನೂ ಹಾನಿಯೂ ಇಲ್ಲ. ಆದಮಾತ್ರಕ್ಕೆ ಈಶ್ವರನಿಗೆ ಕಾಲದೊಡನೆ ನಿತ್ಯಸಿದ್ಧವಾಗಿರುವ ನಿತ್ಯಸಂಯೋಗಕ್ಕೆ ಪ್ರತಿಷೇಧವು ಹೇಗೆ ಸಿದ್ಧಿಸೀತು? ಸಿದ್ಧಿಸುವುದೇ ಇಲ್ಲ; ಅದರಿಂದ ನಿಮ್ಮ ಇಷ್ಟಸಿದ್ಧಿಯೂ ಆಗಲಿಲ್ಲ;

ಕಾರಣವು ತೊಲಗಿದರೆ—ಕಾರಣದಿಂದ ಜನ್ಯವಾಗಬಹುದಾದ ಕಾರ್ಯಮಾತ್ರವೇ ತೊಲಗುವುದಲ್ಲದೆ ಅಜನ್ಯವಾದ (ನಿತ್ಯವಾದ) ಪದಾರ್ಥವೂ ತೊಲಗುವುದಿಲ್ಲವೆಂಬ ಯುಕ್ತಿಯನ್ನು ಈಶ್ವರನ ನಿತ್ಯಜ್ಞಾನೇಚ್ಛಾಪ್ರಯತ್ನಗಳಲ್ಲಿ ನೀವೇ ತೋರಿಸಿರುತ್ತೀರಿ; ಅದೇ ಯುಕ್ತಿಯನ್ನು ಈಗಲೂ ಏಕೆ ಸ್ಮರಣೆಗೆ ತಂದುಕೊಳ್ಳಬಾರದು? ಆದಕಾರಣ—ಸಂಯೋಗಕಾರಣವಿಲ್ಲವೆಂಬ ಹೇತುವಿನಿಂದ ನಿತ್ಯವಿಭುದ್ರವ್ಯಗಳಿಗೆ ನಿತ್ಯಸಂಯೋಗವಿಲ್ಲವೆಂದು ಸಾಧಿಸುವುದು ಯಾರಿಗೂ ಶಕ್ಯವಲ್ಲ.

## ೧೧೨೬. ವಿಭೂನಾಮಪಿಕಾಲಾದೀನಾಂ ಈಶ್ವರೇಣ ವಿಭುನಾ ಸಂಯೋಗಾವಶ್ಯಕತಾ.

ಮತ್ತು—ಕಾಲವೇ ಮೊದಲಾದ ವಿಭುಪದಾರ್ಥಗಳಲ್ಲಿ ಈಶ್ವರನ ಅನುಪ್ರವೇಶಪ್ರಯುಕ್ತವಾದ ಈಶ್ವರಸಂಯೋಗವೇ ಇಲ್ಲದಿದ್ದಪಕ್ಷದಲ್ಲಿ ಆ ಪದಾರ್ಥಗಳು ತಮ್ಮ ತಮ್ಮ ಕೆಲಸಗಳನ್ನು ಅಣುಮಾತ್ರವೂ ಮಾಡಲಾರವೆಂಬ ಈ ಅರ್ಥವು (ವಿಷಯವು) "ಕಾಲಂ ಸ ಪಚತೇ ತತ್ರ ನ ಕಾಲಸ್ತತ್ರವೈ ಪ್ರಭುಃ" "ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ" ಎಂಬುವೇ ಮೊದಲಾದ ನೂರಾರು ಸ್ಮೃತಿವಾಕ್ಯಗಳಲ್ಲಿಯೂ ಶ್ರುತಿವಾಕ್ಯಗಳಲ್ಲಿಯೂ ಸುಪ್ರಸಿದ್ಧವಾಗಿರುವುದು. ಅಷ್ಟೇತಕ್ಕೆ? "ಯೇನ ವಿನಾ ತೃಣಾಗ್ರಮಪಿ ನ ಚಲತಿ" (ಈಶ್ವರಸಂಯೋಗವಿಲ್ಲದಿದ್ದರೆ ಹುಲ್ಲಿನ ತುದಿಯೂ ಸಹ ಅತ್ತಿತ್ತ ಚಲಿಸಲೂ ಸಮರ್ಥವಾಗಲಾರದು) ಎಂದು ಪಂಡಿತಪಾಮರಸಾಧಾರಣವಾಗಿ ಲೋಕದವರೆಲ್ಲರೂ ವ್ಯವಹರಿಸುತ್ತಿರುವರಷ್ಟೆ?

## ೧೧೨೭. ಕಾಲಾದೀನಾಂ ವಿಭೂನಾಮೀಶ್ವರಸಮವ್ಯಾಪ್ತತ್ವೇಽಪಿ ಈಶ್ವರನಿಯಾಮ್ಯತ್ವೋಪಪತ್ತಿಃ

ಓಹೋ! "ಅಂತರ್ಬಹಿಶ್ಚ" ಎಂಬ ವಾಕ್ಯದಲ್ಲಿ—ಸಕಲಪದಾರ್ಥಗಳ ಹೊರಭಾಗದಲ್ಲಿಯೂ ನಾರಾಯಣನು ವ್ಯಾಪಿಸಿರುವನೆಂದು ಅವಗತವಾಗುವ ಕಾರಣ—ಈಶ್ವರನು ಅವನ ಧರ್ಮಭೂತಜ್ಞಾನ ಈ ಎರಡನ್ನು ಬಿಟ್ಟು ಉಳಿದ

ಯಾವ ಪದಾರ್ಥವೂ ವಿಭುಪದಾರ್ಥವಲ್ಲವೆಂದು ಒಪ್ಪಬೇಕಾಗುವುದು ; ಏತಕ್ಕೆಂದರೆ—ಯಾವ ಪದಾರ್ಥವು ಯಾವ ಪ್ರದೇಶದಲ್ಲಿ ವ್ಯಾಪಿಸಿಲ್ಲವೋ ಆ ಪದಾರ್ಥಕ್ಕೆ ಆ ಪ್ರದೇಶವೇ ಬಹಿಃಪ್ರದೇಶವೆನಿಸಿಕೊಳ್ಳುವುದು ; ಸಕಲಪದಾರ್ಥಗಳ ಬಹಿಃಪ್ರದೇಶದಲ್ಲಿಯೂ ಈಶ್ವರನು ವ್ಯಾಪಿಸಬೇಕಾದರೆ ಸಕಲಪದಾರ್ಥಗಳಿಗೂ ಬಹಿಃಪ್ರದೇಶವುಂಟೆಂದು ಸಿದ್ಧವಾಗುವುದು; ಹೀಗಾದಮೇಲೆ ಈಶ್ವರವ್ಯತಿರಿಕ್ತವಾದ ಯಾವ ವಸ್ತುವಿಗೂ ವಿಭುತ್ವವಿಲ್ಲದೆ ಹೋಗುವುದಲ್ಲವೆ ?

ಇಲ್ಲ—ಕಾಲಾದಿಗಳಿಗೆ ಎಂದಿಗೂ ವಿಭುತ್ವವು ತಪ್ಪಲಾರದು. "ಅಂತರ್ಬಹಿಶ್ಚ" ಎಂಬ ವಾಕ್ಯದಲ್ಲಿ ಯಾವ ಪದಾರ್ಥಗಳಿಗೆ ಬಹಿಃಪ್ರದೇಶವು ಪ್ರಮಾಣದಿಂದ ಪ್ರಸಿದ್ಧವಾಗಿರುವುದೋ ಅಂಥ ಸರ್ವಪದಾರ್ಥವೇ ವಿವಕ್ಷಿತವಾಗಿರುವುದೆಂದು ಅಂಗೀಕರಿಸಿದರೂ ವಾಕ್ಯದ ಮುಖ್ಯಾರ್ಥಕ್ಕೆ ಹಾನಿಯಿಲ್ಲ; ಹಾಗಿಲ್ಲದೆ ಈಶ್ವರವ್ಯತಿರಿಕ್ತವಾದ ಸಮಸ್ತವೂ ಸರ್ವಪದದಿಂದ ವಿವಕ್ಷಿತವೆಂದು ಹೇಳುವುದಾದರೆ ಈಶ್ವರನ ಧರ್ಮಭೂತಜ್ಞಾನಕ್ಕೂ ವಿಭುತ್ವವು ಸಿದ್ಧಿಸದೆ ಹೋದೀತು; ಆದಕಾರಣ ಕಾಲವೇ ಮೊದಲಾದ ವಿಭುಪದಾರ್ಥಗಳಿಗೆ ಬಹಿಃಪ್ರದೇಶವೇ ಇಲ್ಲವಾದುದರಿಂದ ಅವುಗಳಲ್ಲಿ ಈಶ್ವರನಿಗೆ ಬಹಿರ್ವ್ಯಾಪ್ತಿಯಿಲ್ಲದೆ ಸಮವ್ಯಾಪ್ತಿಯೇ ಇದ್ದರೂ ಅವುಗಳು ಈಶ್ವರನಿಗೆ ನಿಯಾಮ್ಯಗಳಾಗಿಯೇ ಇರುವುವೆಂಬುದಕ್ಕೆ ಎಳ್ಳಷ್ಟು ಚ್ಯುತಿಯಿಲ್ಲ; ಅಂತರ್ವ್ಯಾಪ್ತಿ ಅವುಗಳಲ್ಲಿಯೂ ತಪ್ಪಲಿಲ್ಲವಷ್ಟೆ? ಹೀಗೆ ಅಂತರ್ವ್ಯಾಪ್ತಿಯಮೂಲಕ ಈಶ್ವರಸಂಯೋಗವನ್ನೂ ಈಶ್ವರನಿಯಾಮ್ಯತ್ವವನ್ನೂ ಕಾಲಾದಿಗಳಿಗೆ ಒಪ್ಪಿದರೇನೇ—ಶ್ರುತ್ಯಾದಿಪ್ರಮಾಣಗಳಿಂದ ಕಾಲಾದಿಗಳಿಗೆ ಅವಗತವಾಗಿರುವ ಈಶ್ವರಶರೀರತ್ವವೂ ಸುರಕ್ಷಿತವಾಗಬಹುದು. ವಿಭುಪದಾರ್ಥಗಳಿಗೆ ನಿತ್ಯಸಂಯೋಗವನ್ನು ಸಾಧಿಸಿಕೊಡುವ ಇನ್ನೂ ಅನೇಕವಾದ ಅನುಮಾನಪ್ರಮಾಣಗಳನ್ನು ಆಕರಗ್ರಂಥಗಳಿಂದಲೇ ತಿಳಿಯಬೇಕು.

## ೧೧೨೮. ಅಥ ಶಕ್ತಿಲಕ್ಷಣಂ

ಆ ಆ ಕಾರ್ಯಗಳಿಗೆ ಕಾರಣಗಳೆನಿಸಿಕೊಂಡಿರುವ ವಸ್ತುಗಳೆಲ್ಲದರಲ್ಲಿಯೂ ಇರುವ ಕಾರಣತ್ವಧರ್ಮಕ್ಕೆ ನಿರ್ವಾಹಕವಾದ ಒಂದಾನೊಂದು ಅದ್ರವ್ಯವಿಶೇಷವು ಶಕ್ತಿಯೆನಿಸಿಕೊಳ್ಳುವುದು. ಕಾರಣಗತವಾಗಿಯೂ ಕಾರ್ಯೋತ್ಪತ್ತಿಗೆ ಅನುಕೂಲವಾಗಿಯೂ ಇರುವ ಈ ಶಕ್ತಿಯೆಂಬುದರ ಸ್ವರೂಪವನ್ನು ಸೂಕ್ಷ್ಮದೃಷ್ಟಿಯಿಂದ ಪರಿಶೋಧಿಸಿ ನೋಡಿದರೆ—ಇದು ಕಾರಣತಾಸ್ವರೂಪವಾಗಿಯೇ ಇರುವುದೆಂಬ ವೇದಾಂತಿಗಳ ಸಿದ್ಧಾಂತರಹಸ್ಯವು ವ್ಯಕ್ತವಾಗುವುದು. "ಕಾರ್ಯೋಪ

ಯೋಗಿಯಾಗಿಯೂ ಕಾರಣಗತವಾಗಿಯೂ ಇರುವ ಅಪೃಥಕ್ಸಿದ್ಧವಿಶೇಷಣವೇ ಶಕ್ತಿಯೆನಿಸಿಕೊಳ್ಳುವುದು" ಎಂದು ಶ್ರುತಪ್ರಕಾಶಿಕಾಚಾರ್ಯರೂ ಅಪ್ಪಣೆಕೊಡಿಸಿರುವರು.

## ೧೧೨೯. ಶಕ್ತಿಸದ್ಭಾವೇ ಅನುಮಾನಪ್ರಮಾಣನಿರೂಪಣಂ

ಇಂಥ ಶಕ್ತಿಯೆಂಬುದೊಂದು ಅತೀಂದ್ರಿಯಪದಾರ್ಥವು ಉಂಟೆಂದು ತೋರಿಸುವುದಕ್ಕಾಗಿ ಅನುಮಾನವೂ ಆಗಮವೂ ಪ್ರಮಾಣಗಳಾಗಿ ನಿಂತಿರುವುವು. ಹೇಗೆಂದರೆ—ಅವಕಾಶಪ್ರದಾನಶಕ್ತಿ ಪಂಚಭೂತಗಳೊಳಗೆ ಆಕಾಶಕ್ಕೇ ಇರುವುದು; ಬೀಸುವ ಶಕ್ತಿ ವಾಯುವಿಗೇ ಇರುವುದು; ಸುಡುವ ಶಕ್ತಿ ತೇಜಸ್ಸಿಗೇ ಇರುವುದು; ನೆನೆಸುವ ಶಕ್ತಿ ಜಲಕ್ಕೇ ಇರುವುದು; ಧಾರಣಶಕ್ತಿ ಪೃಥಿವಿಗೇ ಇರುವುದು; ದಹನಕಾರ್ಯಕ್ಕೆ ಕಾರಣವಾದ ಅಗ್ನಿಸ್ವರೂಪದಲ್ಲಿಯೂ ನ್ಯೂನತೆಯಿಲ್ಲದೆ, ದಾಹ್ಯವಸ್ತುವಿನ ಸಾಂನಿಧ್ಯವೇ ಮೊದಲಾದ ಸಹಕಾರಿಸಾಮಗ್ರಿಯಲ್ಲಿಯೂ ನ್ಯೂನತೆಯಿಲ್ಲದೆ ಇರುವಾಗ ದಹನವೆಂಬ ಕಾರ್ಯವು ತಪ್ಪಕೂಡದು; ಆದರೂ ಅಂಥ ಸಂದರ್ಭದಲ್ಲಿ ಮಣಿವಿಶೇಷವಾಗಲಿ ಮಂತ್ರವಿಶೇಷವಾಗಲಿ ಸನ್ನಿಹಿತವಾಗಿದ್ದುಕೊಂಡು ಅಗ್ನಿಯಲ್ಲಿ ಯಾವುದನ್ನು ತಡೆದುಬಿಡುವುದರಿಂದ ಅಗ್ನಿ ದಹನಕಾರ್ಯವನ್ನು ಉಂಟುಮಾಡಲಾರದಾಗುವುದೋ ಅಂಥ ಅತೀಂದ್ರಿಯಪದಾರ್ಥವು ಅಗ್ನಿಯ ಶಕ್ತಿಯೆನಿಸಿಕೊಳ್ಳುವುದು. ಇಂಥ ಶಕ್ತಿ ಕಾರಣತ್ವಕ್ಕೆ ಅವಚ್ಛೇದಕವೆಂದೂ, (ವಿಶೇಷಣವೆಂದೂ) ಕಾರಣತಾಸ್ವರೂಪವೇ ಎಂದೂ ಎರಡು ಪಕ್ಷಗಳು ದಾರ್ಶನಿಕರಿಗೆ ಅಭಿಮತಗಳಾಗಿರುವುವು.

ಇಲ್ಲಿ—ಅತೀಂದ್ರಿಯವಾದ ಶಕ್ತಿಯನ್ನು ಸಾಧಿಸಿಕೊಡುವ ಅನುಮಾನಪ್ರಮಾಣವನ್ನು ಈರೀತಿಯಲ್ಲಿ ಪ್ರಯೋಗಿಸಬೇಕು—"**ಮಣ್ಯಾದಿಸಮವಹಿತವಹ್ನಿನಿಷ್ಠೋ ದಾಹೋಪಧಾಯಕತ್ವಾಭಾವಃ ದಾಹಕಾರಣತಾವಚ್ಛೇದಕಾಭಾವಪ್ರಯುಕ್ತಃ, ಸಹಕಾರ್ಯಭಾವಾಪ್ರಯುಕ್ತದಾಹೋಪಧಾಯಕತ್ವಾಭಾವತ್ವಾತ್, ಯತ್ರ ಸಹಕಾರ್ಯಭಾವಾಪ್ರಯುಕ್ತಯತ್ಕಾರ್ಯೋಪಧಾಯಕತ್ವಾಭಾವತ್ವಂ ತತ್ರ ತತ್ಕಾರ್ಯಕಾರಣತಾವಚ್ಛೇದಕಾಭಾವಪ್ರಯುಕ್ತತ್ವಂ, ಯಥಾ ದಂಡಾದಿನಿಷ್ಠಪಟಾದ್ಯುಪಧಾಯಕತ್ವಾಭಾವಃ**"* ಇಂಥ

---

* ಈ ಅನುಮಾನಪ್ರಮಾಣದ ಅಭಿಪ್ರಾಯವೇನೆಂದರೆ—ಯಾವ ಕಾರಣವಸ್ತು ಯಾವ ಕಾರ್ಯವನ್ನು ಆವಶ್ಯಕವಾಗಿಯೂ ಉಂಟುಮಾಡಬೇಕೋ ಅಂಥ ಕಾರಣವು ಆ ಕಾರ್ಯವನ್ನು ಉಂಟುಮಾಡಲಿಲ್ಲವೆಂಬುದಕ್ಕೆ ಎರಡು ನಿಮಿತ್ತಗಳುಂಟು.—ಆ ಕಾರಣವಸ್ತು ತನ್ನಲ್ಲಿರುವ ಕಾರಣತ್ವಕ್ಕೆ ನಿರ್ಣಾಯಕವಾದ (ನಿಯಾಮಕವಾದ) ವಿಶೇಷಣವನ್ನು ಕಳೆದುಕೊಳ್ಳುವಿಕೆ ಒಂದು

ಅನುಮಾನಪ್ರಮಾಣದಿಂದ ಕಾರಣತಾವಚ್ಛೇದಕಾಭಾವಕ್ಕೆ ಪ್ರತಿಯೋಗಿಯಾಗಿ ಸಿದ್ಧಿಸುವ ಧರ್ಮವಿಶೇಷವೇ ಅತೀಂದ್ರಿಯವಾದ ಶಕ್ತಿಯೆಂದು ಸಿದ್ಧವಾಗುವುದು.

---

ನಿಮಿತ್ತವಾಗಿರುವುದು; ಕಾರ್ಯೋತ್ಪತ್ತಿಗೆ ಆವಶ್ಯಕವಾಗಿರುವ ಸಹಕಾರಿಕಾರಣಗಳು ಒಟ್ಟಾಗಿ ಕೂಡಲಿಲ್ಲವೆಂಬುದು ಮತ್ತೊಂದು ನಿಮಿತ್ತವಾಗಿರುವುದು; ಕಾರಣವಸ್ತು ತನ್ನ ಕಾರ್ಯವನ್ನು ಉಂಟುಮಾಡಲಿಲ್ಲವೆಂಬುದಕ್ಕೆ ಎಲ್ಲಿ ಎರಡನೆಯ ನಿಮಿತ್ತವಿಲ್ಲವೋ ಅಲ್ಲಿ ಮೊದಲನೆಯ ನಿಮಿತ್ತ ವಿದ್ದೇ ಇರಬೇಕು; ಎಂದರೆ—ಕಾರಣವಸ್ತುವಿನಲ್ಲಿರುವ ಯಾವ ಕಾರ್ಯಜನಕತ್ವಾಭಾವವು—ಕಾರ್ಯೋತ್ಪತ್ತಿಗೆ ಆವಶ್ಯಕವಾಗಿರುವ ಸಹಕಾರಿಕಾರಣಗಳು ಒಟ್ಟಾಗಿ ಕೂಡಲಿಲ್ಲವೆಂಬುದರಿಂದ ಬಂದುದಾಗಿಲ್ಲವೋ, ಕಾರಣವಸ್ತುವಿನಲ್ಲಿರುವ ಅಂಥ ಅಭಾವವು—ಆ ಕಾರಣವಸ್ತು ತನ್ನಲ್ಲಿರುವ ಕಾರಣತ್ವಕ್ಕೆ ನಿಯಾಮಕವಾದ ವಿಶೇಷಣವನ್ನು ಕಳೆದುಕೊಳ್ಳುವಿಕೆಯಿಂದಲೇ ಬಂದುದಾಗಿರುವುದೆಂದು ಒಪ್ಪಬೇಕು; ಹೇಗೆಂದರೆ—ದಂಡವು ಘಟವನ್ನು ಉಂಟುಮಾಡಬಲ್ಲುದಾದರೂ ಪಟವನ್ನು ಉಂಟುಮಾಡಲಾರದು; ಎಂದರೆ—ದಂಡವು ಘಟಕ್ಕೆ ಕಾರಣವಾಗುವಾಗ ತನ್ನಲ್ಲಿರುವ ಕಾರಣತ್ವಕ್ಕೆ ನಿಯಾಮಕವಾದ ಶಕ್ತಿಯೆಂಬ ವಿಶೇಷಣವನ್ನು ಪಡೆದಿರುವಂತೆ ಪಟಕ್ಕೆ ಕಾರಣವಾಗುವಾಗ ಅಂಥ ವಿಶೇಷಣವನ್ನು ಪಡೆದಿಲ್ಲ; ಪಟದ ಉತ್ಪತ್ತಿಗೆ ಆವಶ್ಯಕವಾಗಿರುವ ಉಳಿದ ಸಹಕಾರಿಕಾರಣಗಳೆಲ್ಲವೂ ಒಟ್ಟಾಗಿ ಕೂಡಿದ್ದರೂ ದಂಡವು ಪಟವನ್ನು ಉಂಟುಮಾಡುವುದೇ ಇಲ್ಲ; ಆದಕಾರಣ ದಂಡದಲ್ಲಿರುವ ಈ ಪಟಜನಕತ್ವಾಭಾವವು ಪಟಕಾರಣತ್ವಕ್ಕೆ ನಿಯಾಮಕವಾದ ವಿಶೇಷಣವಿಲ್ಲದುದರಿಂದಲೇ ಬಂದುದಾಗಿರುವುದಲ್ಲದೆ ಸಹಕಾರಿಕಾರಣಗಳು ಒಟ್ಟಾಗಿ ಕೂಡಲಿಲ್ಲವೆಂಬುದರಿಂದ ಬಂದುದಲ್ಲ; ಈ ದೃಷ್ಟಾಂತದಿಂದ ನಮಗೆ ಅವಗತವಾಗುವುದೇನೆಂದರೆ—ಸಹಕಾರಿಕಾರಣಗಳ ಅಭಾವದಿಂದ ಪ್ರಯುಕ್ತವಲ್ಲದ ಕಾರ್ಯಜನಕತ್ವಾಭಾವವು ಕಾರಣತೆಗೆ ನಿಯಾಮಕವಾದ ವಿಶೇಷಣದ ಅಭಾವದಿಂದಲೇ ಪ್ರಯುಕ್ತವಾಗಿರುವುದೆಂಬ ವ್ಯಾಪ್ತಿ (ನಿಯಮವು) ಅವಗತವಾಗುವುದು;

ಈಗ ಅಗ್ನಿಯ ಪರವಾಗಿ ವಿಚಾರಮಾಡೋಣ—ಸುಡುವಿಕೆಯೆಂಬುದು ಅಗ್ನಿಯ ಕಾರ್ಯವಾಗಿರುವುದೆಂದು ಎಲ್ಲರಿಗೂ ವಿದಿತವೇ ಆಗಿರುವುದು; ಸುಡುವಿಕೆಗೆ ಆವಶ್ಯಕವಾಗಿ ಬೇಕಾಗಿರುವ ದಾಹ್ಯವಸ್ತುಸಾನ್ನಿಧ್ಯವೇ ಮೊದಲಾದ ಸಹಕಾರಿಕಾರಣಗಳೆಲ್ಲವೂ ಒಟ್ಟಾಗಿ ಕೂಡಿರುವಾಗ ಮಣಿವಿಶೇಷವಾಗಲಿ ಮಂತ್ರವಿಶೇಷವಾಗಲಿ ಸನ್ನಿಹಿತವಾಗಿದ್ದುದಾದರೆ ಆಗ ಅಗ್ನಿ ಸುಡಲಾರದೆಂಬುದೂ ವಿವೇಚಕರಾದವರಿಗೆ ಲೋಕದಲ್ಲಿ ಅವಗತವಾಗಿರುವುದು. ಆಗ ಅಗ್ನಿಯಲ್ಲಿರುವ ದಾಹಜನಕತ್ವಾಭಾವವು ಸಹಕಾರಿಕಾರಣಗಳ ಅಭಾವದಿಂದ ಪ್ರಯುಕ್ತವಲ್ಲವಾದ ಅಭಾವವಾಗಿರುವುದರಿಂದ—ಕಾರಣತ್ವಕ್ಕೆ ನಿಯಾಮಕವಾದ ವಿಶೇಷಣದ ಅಭಾವದಿಂದಲೇ ಪ್ರಯುಕ್ತವಾಗಿರುವುದೆಂದು ಒಪ್ಪಬೇಕು; ಅಗ್ನಿಯಲ್ಲಿರುವ ಅಂಥ ವಿಶೇಷಣವು ಮಣಿಮಂತ್ರಗಳ ಸಾನ್ನಿಧ್ಯದಿಂದ ತಡೆಯಲ್ಪಡುವುದು; (ಅಡಗುವುದು) ಮಣಿಮಂತ್ರಗಳ ಸಾನ್ನಿಧ್ಯವಿಲ್ಲದಿದ್ದರೆ ಪುನಃ ತಲೆಯೆತ್ತುವುದು; ಎಂದರೆ ಮಣಿಮಂತ್ರಗಳ ಸಾನ್ನಿಧ್ಯವು ಅಗ್ನಿಗತವಾದ ಅಂಥ ವಿಶೇಷಣವನ್ನು ಅಡಗಿಸುವುದರ ಮೂಲಕ ಅಗ್ನಿಯ ದಾಹಜನಕತ್ವಸ್ವಭಾವವನ್ನು ತಪ್ಪಿಸುವುದು; ಮಣಿಮಂತ್ರಗಳ ಸಾನ್ನಿಧ್ಯವಿಲ್ಲದಿದ್ದರೆ ಅಂಥ ವಿಶೇಷಣಕ್ಕೆ ಪ್ರತಿಹತಿಯಿಲ್ಲವಾಗಿ ಅಗ್ನಿ ತನ್ನ ಕೆಲಸವನ್ನು ನಡಸಬಲ್ಲುದಾಗಿರುವುದು; ಹೀಗೆ ಅಗ್ನಿಗತವಾದ ಅಂಥ ಕಾರಣತ್ವಕ್ಕೆ ನಿಯಾಮಕವಾಗಿರುವ ಅಂಥ ವಿಶೇಷಣವೇ ಶಕ್ತಿಯೆನಿಸಿಕೊಳ್ಳುವುದೆಂಬುದು ಉಕ್ತವಾದ ಅನುಮಾನಪ್ರಮಾಣದಿಂದ ಸಿದ್ಧವಾಗುವುದು.

ಕಾರಣವೆನಿಸಿಕೊಂಡ ವಸ್ತುವಿನಲ್ಲಿರುವ ಈ ಶಕ್ತಿಗೆ ಮಣಿವಿಶೇಷ-ಮಂತ್ರ ವಿಶೇಷಗಳು ಹೇಗೆ ಪ್ರತಿಬಂಧಕಗಳೋ, ಅದರಂತೆ ದೇವತಾಽನುಗ್ರಹವಿಶೇಷವೂ ಪ್ರತಿಬಂಧಕವಾಗುವುದು. ಆದುದರಿಂದಲೇ ಶ್ರೀರಾಮದೂತನಾದ **ಆಂಜನೇಯನ** ಬಾಲದಲ್ಲಿ ರಾಕ್ಷಸರು ಅಗ್ನಿಯನ್ನು ಹತ್ತಿಸಿದ ಸುದ್ದಿಯನ್ನು ಕೇಳಿದ ಜಗನ್ಮಾತೆಯಾದ **ಶ್ರೀಜಾನಕಿ-ಆಂಜನೇಯನಲ್ಲಿ** ವಿಶೇಷಾನುಗ್ರಹವನ್ನು ಮಾಡಿ, ಕಿಂಕರನಾದ ಅಗ್ನಿಯನ್ನು ಕುರಿತು **"ಶೀತೋ ಭವ ಹನೂಮತಃ"** (ಎಲೈ ಅಗ್ನಿಯೇ! ರಾಮದೂತನಾದ ಆಂಜನೇಯನ ವಿಷಯದಲ್ಲಿ ನೀನು ತಣ್ಣಗಾಗಿರು) ಎಂದರೆ ದಹನಕಾರ್ಯಕ್ಕೆ ಕಾರಣಭೂತನೆನಿಸಿಕೊಂಡ ನೀನು ನಿನ್ನಲ್ಲಿರುವ ಕಾರಣತ್ವಕ್ಕೆ ನಿಯಾಮಕವಾದ ವಿಶೇಷಣವಾಗಿರುವ ಅಥವಾ ಕಾರಣತ್ವರೂಪವಾಗಿಯೇ ಇರುವ ಶಕ್ತಿಯನ್ನು ಕಳೆದುಕೊಂಡವನಾಗು) ಎಂದು ಆಜ್ಞಾಪಿಸಲು ತತ್‌ಕ್ಷಣದಲ್ಲಿಯೇ ಅಗ್ನಿ ಆಂಜನೇಯನಿಗೆ ಹಿಮದಂತೆ ತಣ್ಣಗಾದನು.

"ಇವಳು ಆಜ್ಞಾಪಿಸಿದ ಮಾತ್ರಕ್ಕೆ ಅಗ್ನಿ ತನಗೆ ಅವರ್ಜನೀಯವಾದ ಸ್ವಾಭಾವಿಕಶಕ್ತಿಯನ್ನು ಹೇಗೆ ಬಿಡಲಾದೀತು?" ಎಂದು ಆಶಂಕಿಸಕೆಲಸವಿಲ್ಲ **"ಭೀಷಾಽಸ್ಮಾದ್ವಾತಃ ಪವತೇ-ಭೀಷೋದೇತಿ ಸೂರ್ಯಃ-ಭೀಷಾಽಸ್ಮಾದಗ್ನಿಶ್ಚೇಂದ್ರಶ್ಚ-ಮೃತ್ಯುರ್ಧಾವತಿ ಪಂಚಮ ಇತಿ"** (ಪರಮಾತ್ಮನಾದ ಶ್ರೀಮನ್ನಾರಾಯಣನ ಭೀತಿಯಿಂದಲೇ ಗಾಳಿ ಬೀಸುತ್ತಿರುವುದು, ಅವನ ಭೀತಿಯಿಂದಲೇ ಸೂರ್ಯನು ತಪ್ಪದೆ ಕ್ಲೃಪ್ತಕಾಲದಲ್ಲಿ ಹುಟ್ಟುತ್ತಿರುವನು, ಅವನ ಭೀತಿಯಿಂದಲೇ ಅಗ್ನಿಯೂ ಇಂದ್ರನೂ ತಮ್ಮ ತಮ್ಮ ಕೆಲಸಗಳನ್ನು ನಡಸುವರು, ಐದನೆಯವನಾದ ಮೃತ್ಯುವೂ ಸಹ ಪರಮಾತ್ಮನ ಭೀತಿಯಿಂದಲೇ ತನ್ನ ಕೆಲಸಕ್ಕೆ ಓಡುತ್ತಿರುವನು) ಎಂಬ ತೈತ್ತಿರೀಯಶ್ರುತಿಯಿಂದ ಸಕಲದೇವತೆಗಳಿಗೂ ಪರಮಾತ್ಮನ ಆಜ್ಞಾವಶವರ್ತಿತ್ವವು ಸಿದ್ಧವಾದರೆ—"ಪತಿಯ ಕಿಂಕರರು ಪತ್ನಿಗೂ ಕಿಂಕರರಾಗುವರು" ಎಂದು ಪ್ರತ್ಯೇಕವಾಗಿ ಹೇಳಬೇಕಾದುದಿಲ್ಲವಷ್ಟೆ. ಈ ಅಭಿಪ್ರಾಯವು—

***"ದಹ್ಯಮಾನೇ ಚ ಲಾಂಗೂಲೇ ಚಿಂತಯಾಮಾಸ ವಾನರಃ।**
**ಪ್ರದೀಪ್ತೋಽಗ್ನಿರಯಂ ಕಸ್ಮಾನ್ನ ಮಾಂ ದಹತಿ ಸರ್ವತಃ॥**
**ದೃಶ್ಯತೇ ಚ ಮಹಾಜ್ವಾಲಃ ಕರೋತಿ ಚ ನ ಮೇ ರುಜಂ।**
**ಶಿಶಿರಸ್ಯೇವ ಸಂಪಾತೋ ಲಾಂಗೂಲಾಗ್ರೇ ಪ್ರತಿಷ್ಠಿತಃ॥**

*೧ ಬಾಲವು ಸುಡುತ್ತಿರುವುದೆಂದು ಮಂದಮತಿಗಳಾದ ರಾಕ್ಷಸರು ತಿಳಿದುಕೊಂಡಿರುವ ಸಮಯದಲ್ಲಿ ರಾಮದೂತನಾದ ವಾನರನು ಚಿಂತಿಸಿದ ಕ್ರಮವೇಂತೆಂದರೆ—ಬಾಲದ

ಅಥವಾ ತದಿದಂ ವ್ಯಕ್ತಂ ಯದ್ದೃಷ್ಟಂ ಪ್ಲವತಾ ಮಯಾ ।
ರಾಮಪ್ರಭಾವಾದಾಶ್ಚರ್ಯಂ ಪರ್ವತಃ ಸರಿತಾಂ ಪತೌ ॥
ಯದಿ ತಾವತ್ಸಮುದ್ರಸ್ಯ ಮೈನಾಕಸ್ಯ ಚ ಧೀಮತಃ ।
ರಾಮಾರ್ಥಂ ಸಂಭ್ರಮಸ್ತಾದೃಕ್ಕಿಮಗ್ನಿರ್ನ ಕರಿಷ್ಯತಿ ॥
ಸೀತಾಯಾಶ್ಚಾನೃಶಂಸ್ಯೇನ ತೇಜಸಾ ರಾಘವಸ್ಯ ಚ ।
ಪಿತುಶ್ಚ ಮಮ ಸಖ್ಯೇನ ನ ಮಾಂ ದಹತಿ ಪಾವಕಃ ॥ "

ಎಂಬುವ ಆಂಜನೇಯನ ಉಕ್ತಿಗಳಿಂದಲೇ ಸ್ಪಷ್ಟವಾಗಿ ಅವಗತವಾಗುವುದು.

## ೧೧೩೦. ಇಂದ್ರಿಯಾಗೋಚರಸ್ಯಾಪಿ ಶಕ್ತಿತತ್ತ್ವಸ್ಯ ಅಪಲಾಪಾನರ್ಹತ್ವಂ.

ಇಂಥ ಶಕ್ತಿಯೆಂಬುದು ಅತೀಂದ್ರಿಯವೆಂದು ಹೇಳಿದುದರಿಂದಲೇ—ಇಂದ್ರಿಯಕ್ಕೆ ಗೋಚರವಾಗಲಿಲ್ಲವೆಂಬ ಇಷ್ಟುಮಾತ್ರದಿಂದ ಇದನ್ನು ಅಪಲಪಿಸಲು

---

ಸರ್ವಭಾಗದಲ್ಲಿಯೂ ಪ್ರಬಲವಾಗಿ ಹತ್ತಿಕೊಂಡು ಉರಿಯುತ್ತಿರುವ ಈ ಅಗ್ನಿ ನನ್ನನ್ನು ಸುಡದಿರುವುದಕ್ಕೆ ಕಾರಣವೇನು ?

೨ ಮಹಾಜ್ವಾಲೆಗಳೊಡನೆ ಕೂಡಿರುವ ಅಗ್ನಿಯಾದರೆ ಕಾಣಲ್ಪಡುತ್ತದೆ; ಆದರೂ ಇದು ನನಗೆ ಸ್ವಲ್ಪಮಾತ್ರವೂ ದುಃಖವನ್ನು ಉಂಟುಮಾಡುತ್ತಿಲ್ಲ ; ಬಾಲದಲ್ಲಿ ಸ್ಥಾಪಿತವಾಗಿರುವ ಈ ಅಗ್ನಿ ನನ್ನ ಭಾಗಕ್ಕೆ ಮಂಜು ಬಿದ್ದಂತೆ ಆಗಿರುವುದು ; ಇದಕ್ಕೆ ಕಾರಣವೇನು ?

೩ ಓಹೋ ! ಈಗ ನನಗೆ ಸ್ಪಷ್ಟವಾಗಿ ಗೊತ್ತಾಯಿತು, ಹೇಗೆಂದರೆ—ರಾಮಕಾರ್ಯಕ್ಕಾಗಿ ಸಮುದ್ರಲಂಘನವನ್ನು ಮಾಡುವುದಕ್ಕೆ ಪ್ರಾರಂಭಿಸಿದ ಸಮಯದಲ್ಲಿಯೇ ರಾಮಪ್ರಭಾವದಿಂದ ಸಮುದ್ರದ ಮೇಲೆ ಮೈನಾಕಪರ್ವತಾಭಿಮಾನಿದೇವತೆ ನನ್ನನ್ನು ಇದಿರ್ಗೊಂಡು ಸತ್ಕರಿಸಿದ ಆಶ್ಚರ್ಯವನ್ನು ನಾನು ಕಂಡೆನು.

೪ ಪರಮಾತ್ಮನಾದ ಶ್ರೀರಾಘವನ ಆಜ್ಞೆಗೆ ಅಧೀನನಾಗಿ ಸೇತುವನ್ನು ಧರಿಸುವುದರ ಮೂಲಕ ಸಮುದ್ರರಾಜನೂ, ರಾಮದೂತನಾದ ನನ್ನನ್ನು ಸತ್ಕರಿಸುವುದರಮೂಲಕ ಬುದ್ಧಿವಂತೆಯಾದ ಮೈನಾಕದೇವತೆಯೂ ರಾಮಕಾರ್ಯಕ್ಕಾಗಿ ಅಷ್ಟೊಂದು ಸಂಭ್ರಮವನ್ನು ವಹಿಸಿದರೆಂಬುದು ಹಿಂದೆಯೇ ಸ್ಪಷ್ಟವಾಗಿರುವುದಾದರೆ ಅಗ್ನಿದೇವತೆಯೂ ಸಹ ರಾಮಪ್ರೀತಿಸಂಪಾದನೆಗೋಸ್ಕರ ನನ್ನ ವಿಷಯದಲ್ಲಿ ಯಾವ ಹಿತವನ್ನುತಾನೆ ಮಾಡಲಾರಳು ?

೫ ಅಗ್ನಿ ಈಗ ನನ್ನನ್ನು ಸುಡುವುದಿಲ್ಲವೆಂಬುದಕ್ಕೆ ಮೂರು ಕಾರಣಗಳು ನನಗೆ ತೋರಿಬರುವುವು—ಅವುಗಳಲ್ಲಿ—ಶ್ರೀಜಾನಕಿಗೆ ನನ್ನ ವಿಷಯದಲ್ಲಿರುವ ಆಶ್ರಿತಾನುಗ್ರಹವೆಂಬ ಆನೃಶಂಸ್ಯವೇ ಪ್ರಧಾನಕಾರಣವಾದುದರಿಂದ ಮೊದಲನೆಯ ಕಾರಣವಾಗಿರುವುದು? ಶ್ರೀರಾಘವನ ತೇಜಸ್ಸು " ಅಪ್ರಮೇಯಂ ಹಿ ತತ್ತೇಜೋ ಯಸ್ಯ ಸಾ ಜನಕಾತ್ಮಜಾ " ಎಂದು ಜಾನಕೀಸಂಬಂಧಾಧೀನವಾದುದರಿಂದ ಸಿತ್ಯಾನುಷಂಗಿಕವಾದಪ್ರಯುಕ್ತ ಎರಡನೆಯ ಕಾರಣವಾಗಿರುವುದು ; ನನ್ನ ತಂದೆಯಾದ ವಾಯುವಿನೊಡನೆ ಅಗ್ನಿಗೆ ಉಂಟಾಗಿರುವ ಮೈತ್ರಿ ಮೂರನೆಯ ಕಾರಣವಾಗಿರುವುದು.

(ಇಲ್ಲಗೊಳಿಸಲು) ಪ್ರಯತ್ನಪಡುವವರಿಗೆ ಅವಕಾಶವಿಲ್ಲವಾಗಿರುವುದು. ಇಂದ್ರಿಯದಿಂದ ಗ್ರಹಿಸಲು ಯೋಗ್ಯತೆಯನ್ನು ಪಡೆದಿರುವ ವಸ್ತು ಇಂದ್ರಿಯಕ್ಕೆ ಗೋಚರವಾಗದಿದ್ದರೇನೇ ಅದನ್ನು ಇಲ್ಲಗೊಳಿಸಬಹುದೇ ಹೊರತು—ಇಂದ್ರಿಯದಿಂದ ಗ್ರಹಿಸಲು ಯೋಗ್ಯವಲ್ಲದ ವಸ್ತುವನ್ನು ಹಾಗೆ ಅಪಲಪಿಸಲಾಗುವುದಿಲ್ಲ; ಅದು ಇಂದ್ರಿಯಕ್ಕೆ ಗೋಚರವಾಗದಿದ್ದರೂ ಪ್ರಮಾಣಾಂತರಕ್ಕೆ ಗೋಚರವೇ ಆಗುವುದಷ್ಟೆ.

ಲೋಹದ ಆಕರ್ಷಣೆಗೆ ಅನುಕೂಲವಾದ ಶಕ್ತಿವಿಶೇಷವನ್ನು ಅಯಸ್ಕಾಂತವೆಂಬ ಶಿಲಾವಿಶೇಷದಲ್ಲಿ ಸ್ಪಷ್ಟವಾಗಿ ಕಾಣಬಹುದು; ಭಯವನ್ನೂ ಕಂಪನವನ್ನೂ ಉಂಟುಮಾಡುವುದಕ್ಕೆ ಅನುಕೂಲವಾದ ಶಕ್ತಿವಿಶೇಷವನ್ನು ದುಂದುಭಿಯ (ರಣಭೇರಿಯ) ಧ್ವನಿಯಲ್ಲಿ ಸ್ಪಷ್ಟವಾಗಿ ಕಾಣಬಹುದು; ಭೇರಿ ಬಹಳ ಚಿಕ್ಕದಾಗಿದ್ದರೂ ಅದರ ಚರ್ಮಕ್ಕೆ ಒಂದುಬಗೆಯ ಮೂಲಿಕೆಯ ರಸವನ್ನು ಸವರಿ ಆ ಭೇರಿಯನ್ನು ಹೊಡೆದರೆ ಸಮಸ್ತವಾದ ದಿಙ್ಮಂಡಲದಲ್ಲಿಯೂ ವ್ಯಾಪಿಸುವ ಅತಿಪ್ರಬಲವಾದ ಧ್ವನಿಯನ್ನು ಉಂಟುಮಾಡುವುದಕ್ಕೆ ಅನುಕೂಲವಾದ ಶಕ್ತಿವಿಶೇಷವನ್ನು ಆ ಭೇರಿಯಲ್ಲಿ ಸ್ಪಷ್ಟವಾಗಿ ಕಾಣಬಹುದು; ಯಾವುದಕ್ಕೂ ಅಂಜದ ಮಹಾಸರ್ಪಗಳನ್ನು ಆ ಧ್ವನಿಯಿಂದ ದೂರಪಡಿಸುವುದಕ್ಕೆ ಅನುಕೂಲವಾದ ಶಕ್ತಿವಿಶೇಷವನ್ನೂ, ಚಿಕಿತ್ಸೆಗೆ ಸಾಧ್ಯವಾಗದ ಅನೇಕರೋಗಗಳಿಗೆ ಪರಿಹಾರವನ್ನು ಆ ಧ್ವನಿಯಿಂದ ಉಂಟುಮಾಡುವುದಕ್ಕೆ ಅನುಕೂಲವಾದ ಶಕ್ತಿವಿಶೇಷವನ್ನೂ ಅದೇ ಭೇರಿಯಲ್ಲಿ ಸ್ಪಷ್ಟವಾಗಿ ಕಾಣಬಹುದೆಂದು ಆಯುರ್ವೇದಾಭಿಜ್ಞರು ಉಪದೇಶಿಸುವರು.

ಶಕ್ತಿಯೆಂಬ ತತ್ತ್ವವನ್ನೇ ಅಪಲಪಿಸುವುದಕ್ಕಾಗಿ ದರ್ಶನಗ್ರಂಥಗಳಲ್ಲಿ ಆ ಆ ವಾದಿಗಳು ಹರಡುತ್ತಿರುವ ಎಲ್ಲಾ ಪಕ್ಷಗಳಿಗೂ ಮುಂದೆ ಹೇಳುವ ಆಗನುದಿಂದಲೇ ತಿರಸ್ಕಾರವಾಗುವುದರಿಂದ ಶಕ್ತಿತತ್ತ್ವವನ್ನು ಅಪಲಪಿಸಲು ಶಕ್ಯವಲ್ಲ.

## ೧೧೩೧. ಶಕ್ತೌ ಶಕ್ತ್ಯಂತರಸ್ಯ ಸತ್ತ್ವೇಽನವಸ್ಥಾ, ಅಸತ್ತ್ವೇ ಶಕ್ತೇಃ ಕಾರಣತ್ವಾನುಪಪತ್ತಿರಿತ್ಯಾಶಂಕಾ.

ಪೂಜ್ಯರೆ! ಅಗ್ನಿಯಲ್ಲಿ ದಹನಶಕ್ತಿಯಿರುವಂತೆ ಆ ಶಕ್ತಿಯಲ್ಲಿ ದಹನಶಕ್ತಿ ಉಂಟೋ! ಅಥವಾ ಇಲ್ಲವೋ? ಉಂಟೆಂದು ಹೇಳುವುದಾದರೆ ಆ ಪ್ರಥಮಶಕ್ತಿಗೆ ಸುಡುವ ಸಾಮರ್ಥ್ಯವು ದ್ವಿತೀಯಶಕ್ತ್ಯಧೀನವಾಗಿರುವುದೆಂದು ಹೇಳಿದಂತಾದುದರಿಂದ ಆ ದ್ವಿತೀಯಶಕ್ತಿಗೂ ಅಂಥ ಸಾಮರ್ಥ್ಯವು ತೃತೀಯಶಕ್ತ್ಯಧೀನವೆಂದೂ, ಆ ತೃತೀಯಶಕ್ತಿಗೂ ಆ ಸಾಮರ್ಥ್ಯವು ಮತ್ತೊಂದು ಶಕ್ತಿಯ

ಅಧೀನವೆಂದೂ ಹೇಳಬೇಕಾಗಿ ಬರುವುದಾದಪ್ರಯುಕ್ತ ಅನವಸ್ಥಾದೋಷದಿಂದ ಎಂದಿಗೂ ಬಿಡುಗಡೆಯಾಗುವುದಿಲ್ಲ; ಈ ತೊಂದರೆಯ ಪರಿಹಾರಕ್ಕಾಗಿ— ಶಕ್ತಿಯಲ್ಲಿ ಶಕ್ತಿಯಿಲ್ಲವೆಂದು ಹೇಳುವುದಾದರೆ ಶಕ್ತಿಶೂನ್ಯವಾದ ಆ ಮೊದಲನೆಯ ಶಕ್ತಿ ಸುಡುವಿಕೆಯೆಂಬ ಕಾರ್ಯಕ್ಕೆ ಕಾರಣವಾಗದೆ ಹೋಗಬೇಕಾಗಿ ಬರುವುದು; ಎಂದರೆ ಅಗ್ನಿಯಲ್ಲಿರುವ ಶಕ್ತಿಗೆ ದಾಹಕಾರಣತ್ವವೇ ತಪ್ಪಿಹೋಗುವುದು. ಶಕ್ತಿಯಿಲ್ಲದ ಕಾರಣವು ಕಾರ್ಯವನ್ನು ಉಂಟುಮಾಡಲಾರದಷ್ಟೆ! ಹಾಗಿಲ್ಲದೆ ಶಕ್ತಿಶೂನ್ಯವಾದ ಕಾರಣವೂ ಕಾರ್ಯವನ್ನು ಉಂಟುಮಾಡುವುದೆಂದು ಒಪ್ಪುವುದಾದರೆ "ಸಿಕತಾಭ್ಯೋಽಪಿ ತೈಲಮುತ್ಪದ್ಯೇತ, ಶಿಲಾಶಕಲಾದಿಭ್ಯೋಽಪಿ ಅಂಕುರಾದಿಕಮುತ್ಪದ್ಯೇತ" ಎಂಬಂತೆ ಮರಳುಗಳಿಂದ ಎಣ್ಣೆಯೂ, ಕಲ್ಲಿನ ಚೂರುಗಳಿಂದ ಮೊಳಕೆಯೂ ಉಂಟಾಗಬೇಕಾಗಿ ಬರುವುದು; ಇಂಥ ಉಭಯಸಂಕಟಕ್ಕೆ ಪರಿಹಾರವೇನು?

## ೧೧೩೨. ಶಕ್ತೇಃ ಶಕ್ತ್ಯಂತರಾಭಾವೇನ ಅಕಾರಣತ್ವೇಽಪಿ ಶಕ್ತಿಮತ ಏವ ಕಾರಣತ್ವಾತ್ಕಾರ್ಯೋಪಪತ್ತಿಃ.

ಉಭಯಸಂಕಟವಿದ್ದರಲ್ಲವೆ ಪರಿಹಾರವನ್ನು ಹುಡುಕಬೇಕು; ಉಭಯಸಂಕಟವೇ ಇಲ್ಲ. ಅಗ್ನಿಯಲ್ಲಿರುವ ಶಕ್ತಿಯಲ್ಲಿ ಶಕ್ತ್ಯಂತರವನ್ನು ನಾವು ಒಪ್ಪುವುದಿಲ್ಲವಾದುದರಿಂದ ಅನವಸ್ಥಾದೋಷಕ್ಕೆ ಪ್ರಸಕ್ತಿಯೇ ಇಲ್ಲ. ಹಾಗಾದರೆ ಶಕ್ತಿಶೂನ್ಯವಾದ ಆ ಶಕ್ತಿ ದಹನಕಾರ್ಯಕ್ಕೆ ಕಾರಣವಾಗದೆ ಹೋಗಬೇಕಾಗುವುದಲ್ಲವೆ?" ಎಂಬ ಆಶಂಕೆಗೆ "ಶಕ್ತಿ ಕಾರಣವಾಗಲೇಬೇಡ" ಎಂಬ ಪರಿಹಾರವನ್ನು ತಿಳಿಯಬಹುದು. ಹಾಗಾದರೆ ದಹನಕಾರ್ಯವು ನಡೆವ ಬಗೆ ಹೇಗೆಂದು ಚಿಂತಿಸಬೇಕಾಗಿಲ್ಲ. ಶಕ್ತಿವಿಶಿಷ್ಟವಾದ ಅಗ್ನಿ ನಮ್ಮ ಕೈವಶವಾಗಿದ್ದರೆ ದಹನವೆಂಬ ಕಾರ್ಯವುಂಟಾಗಲು ಅಡ್ಡಿಯೇನು? ಎಂದರೆ—ದಹನವೆಂಬ ಕಾರ್ಯಕ್ಕೆ ಶಕ್ತಿವಿಶಿಷ್ಟವಾದ ಅಗ್ನಿಯನ್ನೇ ಕಾರಣವಾಗಿ ನಾವು ಒಪ್ಪುವೆವಲ್ಲದೆ ಶಕ್ತಿಯನ್ನು ಕಾರಣವಾಗಿ ಒಪ್ಪುವುದಿಲ್ಲ. ದಹನಕಾರಣತ್ವವೆಂಬ ಧರ್ಮವು ಅಗ್ನಿಯೆಂಬ ಧರ್ಮಿಯಲ್ಲಿ ಇರುವುದೇ ಹೊರತು ಶಕ್ತಿಯಲ್ಲಿ ಇಲ್ಲ. ಈ ಶಕ್ತಿಯೆಂಬುದನ್ನು ಅಗ್ನಿಯಲ್ಲಿರುವ ಅಂಥ ಕಾರಣತ್ವಕ್ಕೆ ನಿಯಾಮಕವಾದ ವಿಶೇಷಣವಾಗಿ ಒಪ್ಪುವೆವು. ಇಂಥ ವಿಶೇಷಣವನ್ನೇ ದರ್ಶನಕಾರರು "ಕಾರಣತಾವಚ್ಛೇದಕ" ಎಂದು ವ್ಯವಹರಿಸುವರು. ಅಗ್ನಿಯಲ್ಲಿರುವ ಈ ವಿಶೇಷಣವು ಅಗ್ನಿಯಲ್ಲಿಯೇ ಕಾರಣತ್ವವನ್ನು ವ್ಯವಸ್ಥಾಪಿಸಿಕೊಡುವುದು. ಇಂಥ ವಿಶೇಷಣವು ಜಲಾದಿವಸ್ತುಗಳಲ್ಲಿ ಇಲ್ಲವಾದುದರಿಂದಲೇ ಜಲಾದಿಗಳು ದಹನಕಾರ್ಯಕ್ಕೆ ಕಾರಣವಾಗಲಾರವು.

ಅಥವಾ ಈ ಶಕ್ತಿಯೆಂಬುದನ್ನು ಅಗ್ನಿಯೆಂಬ ಧರ್ಮಿಯಲ್ಲಿರುವ ಕಾರಣತಾಸ್ವರೂಪವಾದ ಧರ್ಮವೆಂದೇ ಒಪ್ಪುವೆವು ; ಎಂದರೆ " ಶಕ್ತಿ " ಎಂಬ ಶಬ್ದವೂ " ಕಾರಣತೆ " ಎಂಬ ಶಬ್ದವೂ ಪರ್ಯಾಯಶಬ್ದಗಳಾಗಿ ಏಕಾರ್ಥಬೋಧಕಗಳಾಗಿರುವುವೆಂದು ಒಪ್ಪುವೆವು. ಆದಕಾರಣ ಶಕ್ತಿಯಲ್ಲಿ ಶಕ್ತ್ಯಂತರವು ಬೇಕಾಗಿಲ್ಲ. ಅಶಕ್ತವಾದ (ಶಕ್ತಿಹೀನವಾದ) ಈ ಶಕ್ತಿಗೆ ಕಾರಣತ್ವವೆಂಬ ಧರ್ಮವು ಸಂಭವಿಸದಿದ್ದರೂ ಕಾರಣತಾವಚ್ಛೇದಕತ್ವವೆಂಬ ಧರ್ಮವೂ ಸಂಭವಿಸುವುದಿಲ್ಲವೆಂಬುದಿಲ್ಲ; ಅಥವಾ ಈ ಶಕ್ತಿ ಕಾರಣತಾಸ್ವರೂಪವೂ ಆಗುವುದಿಲ್ಲವೆಂಬುದಿಲ್ಲ.

ಈ ರೀತಿಯಾಗಿ ನೀವು ಅಂಗೀಕರಿಸದಿದ್ದರೆ ಆಗ ನಿಮ್ಮನ್ನು ಕುರಿತು ನಾವು ಹೇಳುವ ಪ್ರತಿಬಂದಿಗೆ ನೀವು ಯಾವ ಸಮಾಧಾನವನ್ನು ಹೇಳಬಲ್ಲಿರಿ ? ಹೇಗೆಂದರೆ—ಅಗ್ನಿಯೆಂಬ ಧರ್ಮಿಯಲ್ಲಿರುವ ಉಷ್ಣಸ್ಪರ್ಶವೆಂಬ ಧರ್ಮದಲ್ಲಿ ಉಷ್ಣಸ್ಪರ್ಶವೆಂಬ ಧರ್ಮಾಂತರವುಂಟೋ ? ಅಥವಾ ಇಲ್ಲವೋ ? ಉಂಟೆಂದು ಹೇಳುವುದಾದರೆ ಪೂರ್ವೋಕ್ತರೀತಿಯಲ್ಲಿ ಅನವಸ್ಥಾದೋಷವು ಪ್ರಸಕ್ತವಾಗುವುದು ; ಇಲ್ಲವೆಂದು ಹೇಳುವುದಾದರೆ ಸ್ಫೋಟವೆಂಬ (ಕೊಪ್ಪಳವೆಂಬ) ಕಾರ್ಯವನ್ನು ಇದು ಉಂಟುಮಾಡಕೂಡದೆಂದು ಪ್ರಸಕ್ತವಾಗುವುದು. " ಅಗ್ನಿಯಲ್ಲಿರುವ ಸ್ಫೋಟಕಾರಣತ್ವಕ್ಕೆ ಇದು ನಿಯಾಮಕವಾಗುವುದೇ ಹೊರತು ಸ್ಫೋಟಪ್ರಯೋಜಕತ್ವಕ್ಕೆ ಇದು ನಿಯಾಮಕವಾಗುವುದಿಲ್ಲ " ಎಂಬ ಪರಿಹಾರವನ್ನು ಹೇಳುವಿರಾದರೆ ಇದೇ ಪರಿಹಾರವನ್ನು ಶಕ್ತಿಪಕ್ಷದಲ್ಲಿಯೂ ಏಕೆ ಅಂಗೀಕರಿಸಬಾರದು ?

ಆದಕಾರಣ—ಕಾರಣತಾವಚ್ಛೇದಕವೆಂದಾಗಲಿ ಕಾರಣತಾಸ್ವರೂಪವೆಂದಾಗಲಿ ಈ ಶಕ್ತಿಯನ್ನು ಒಪ್ಪುವ ನಮ್ಮ ಮತದಲ್ಲಿ ಯಾರೂ ಯಾವ ದೋಷವನ್ನೂ ಆಪಾದನೆಮಾಡಲಾರರು.

## ೧೧೪೩. ಶಕ್ತಿಸದ್ಭಾವೇ ಆಗಮಪ್ರಮಾಣನಿರೂಪಣಂ.

ಇಂಥ ಶಕ್ತಿಯ ಸದ್ಭಾವದಲ್ಲಿ ಆಗಮವನ್ನೂ ಪ್ರಮಾಣವಾಗಿ ತಿಳಿಯಬಹುದು. ಆದುರಿಂದಲೇ ಶ್ರೀಮದ್ವಿಷ್ಣುಪುರಾಣದಲ್ಲಿ—

" ಶಕ್ತಯಸ್ಸರ್ವಭಾವಾನಾಮಚಿಂತ್ಯಜ್ಞಾನಗೋಚರಾಃ ।
ಯತೋಽತೋ ಬ್ರಹ್ಮಣಸ್ತಾಸ್ತು ಸರ್ಗಾದ್ಯಾ ಭಾವಶಕ್ತಯಃ ।
ಭವಂತಿ ತಪತಾಂ ಶ್ರೇಷ್ಠ ಪಾವಕಸ್ಯ ಯಥೋಷ್ಣತಾ ॥ "

ಎಂಬುದಾಗಿ ಶ್ರೀಮತ್ಪರಾಶರಮಹರ್ಷಿಯ ಸೂಕ್ತಿಯಿರುವುದು.

ಇದರ ಅರ್ಥವೇನೆಂದರೆ—**ಹೇ ತಪತಾಂ ಶ್ರೇಷ್ಠ**—ತಪಸ್ವಿಗಳೊಳಗೆ ಉತ್ತಮನಾದ ಓ ಮೈತ್ರೇಯನೇ! **ಯತಃ**—ಯಾವಕಾರಣದಿಂದ **ಸರ್ವ ಭಾವಾನಾಂ**— ಸಮಸ್ತಪದಾರ್ಥಗಳಿಗೂ **ಶಕ್ತಯಃ**—ವಿಲಕ್ಷಣವಿಲಕ್ಷಣಗಳಾದ ನಾನಾಶಕ್ತಿಗಳು **ಅಚಿಂತ್ಯಜ್ಞಾನಗೋಚರಾಃ**—ಚಿಂತಿಸಲಶಕ್ಯಗಳಾಗಿಯೂ ಜ್ಞಾನಗೋಚರಗಳಾಗಿಯೂ; ಎಂದರೆ—ಪ್ರತ್ಯಕ್ಷದಿಂದ ನಿರ್ಣಯಿಸಲು ಅಶಕ್ಯಗಳಾಗಿಯೂ, ಅನುಮಾನಜನ್ಯಗಳಾದ ಮತ್ತು ಆಗಮಜನ್ಯಗಳಾದ ಜ್ಞಾನಗಳಿಗೆ ಗೋಚರಗಳಾಗಿಯೂ **(ಭವಂತಿ)** ಸಿದ್ಧಿಸುವುವೋ ಅತಃ ಆ ಕಾರಣದಿಂದಲೇ **ಸರ್ಗಾದ್ಯಾಃ**—ಜಗತ್ಸೃಷ್ಟ್ಯಾದಿಗಳಿಗೆ ಅನುಕೂಲಗಳಾದ **ತಾಃ ಭಾವಶಕ್ತಯಃ**—ವಸ್ತುತ್ವಪ್ರಯುಕ್ತಗಳಾದ ಅಂಥ ಶಕ್ತಿಗಳು **ಪಾವಕಸ್ಯ** ಅಗ್ನಿಗೆ **ಉಷ್ಣತಾ ಯಥಾ**—ಔಷ್ಣ್ಯಗುಣದಂತೆ **ಬ್ರಹ್ಮಣಃ**—ಸರ್ವವ್ಯಾಪಕನಾದ ಪರಮಾತ್ಮನಿಗೂ **ಭವಂತಿ**—ಸ್ವಾಭಾವಿಕಗಳಾಗಿಯೂ ಆಗಮಾನುಮಾನಪ್ರಮಾಣಗಳಿಂದ ಸಿದ್ಧಗಳಾಗಿಯೂ ಇರುವುವು.

ಮತ್ತು—ಭಗವದ್ಭಕ್ತರಲ್ಲಿ ಪ್ರಥಮಗಣನೆಗೆ ಅರ್ಹರೆಂದು ಪುರಾಣಪ್ರಸಿದ್ಧರಾದ **ನಾರದಮಹರ್ಷಿಗೂ**, ಪರಮಭಾಗವತೋತ್ತಮನೆಂದು ಪುರಾಣಪ್ರಸಿದ್ಧನಾಗಿರುವ ಅಹಿರ್ಬುಧ್ನ್ಯಶಬ್ದವಾಚ್ಯನಾದ ಮಹಾದೇವನಿಗೂ ಸಂವಾದರೂಪವಾಗಿ ಪ್ರವರ್ತಿಸಿರುವ **ಅಹಿರ್ಬುಧ್ನ್ಯಸಂಹಿತೆಯೊಳಗೆ** "ಜ್ಞಾನ, ಶಕ್ತಿ, ಐಶ್ವರ್ಯ, ಬಲ, ವೀರ್ಯ, ತೇಜಸ್ಸು" ಎಂಬ ಪರಮಾತ್ಮನ ಆರು ಗುಣಗಳ ಸ್ವರೂಪವನ್ನು ತೋರಿಸಿ—

**"ಷಾಡ್ಗುಣ್ಯಂ ತತ್ಪರಂ ಬ್ರಹ್ಮ ಸ್ವಶಕ್ತಿಪರಿಬೃಂಹಿತಂ।**
**ಬಹು ಸ್ಯಾಮಿತಿ ಸಂಕಲ್ಪಂ ಭಜತೇ ತತ್ಸುದರ್ಶನಂ॥"**

ಎಂಬುದಾಗಿ ಎರಡನೆಯ ಅಧ್ಯಾಯದ ಕೊನೆಯ ಶ್ಲೋಕದಲ್ಲಿ—"ಜ್ಞಾನಾದಿ ಷಡ್ಗುಣಸಹಿತನಾದ ಪರಮಾತ್ಮನು ಅನಿತರಸಾಧಾರಣವಾದ ತನ್ನ ಶಕ್ತಿಯಿಂದ ಉತ್ತೇಜಿತನಾಗಿ ಸೂಕ್ಷ್ಮಚಿದಚಿದ್ವಿಶಿಷ್ಟನಾದ ತನ್ನನ್ನು ಸ್ಥೂಲಚಿದಚಿದ್ವಿಶಿಷ್ಟಾಕಾರದಿಂದ ಬಹುವಾಗಿ ಪರಿಣಾಮಗೊಳಿಸುವಂತೆ ಸಂಕಲ್ಪಿಸುವನು' ಎಂದು ಉಪದೇಶಿಸಲು—ಅದನ್ನು ಕೇಳಿದ ನಾರದರು ಮೂರನೆಯ ಅಧ್ಯಾಯದ ಪ್ರಾರಂಭದಲ್ಲಿ ಪ್ರಶ್ನೆ ಮಾಡುತ್ತಾರೆ—

**"ಷಾಡ್ಗುಣ್ಯಂ ತತ್ಕಥಂ ಬ್ರಹ್ಮ ಸ್ವಶಕ್ತಿಪರಿಬೃಂಹಿತಂ।**
**ತಸ್ಯ ಶಕ್ತಿಶ್ಚ ಕಾ ನಾಮ ಯಯಾ ಬೃಂಹಿತಮುಚ್ಯತೇ॥"**

ಓ ಅಹಿರ್ಬುಧ್ನ್ಯನೆ! ಪರಮಾತ್ಮನು ತನ್ನ ಶಕ್ತಿಯಿಂದ ಉತ್ತೇಜಿತನಾದ ಬಗೆ ಹೇಗೆ? ಮತ್ತು ಯಾವ ಶಕ್ತಿಯಿಂದ ಅವನು ಉತ್ತೇಜಿತನಾಗುವನೋ ಅಂಥ ಶಕ್ತಿಯ ಸ್ವರೂಪವೆಂಥದು?

ನಾರದರ ಈ ಪ್ರಶ್ನೆಗೆ ಅಹಿರ್ಬುಧ್ನ್ಯನು ಪ್ರತ್ಯುತ್ತರವನ್ನು ಉಪದೇಶಿಸಿದ ಕ್ರಮವೆಂತೆಂದರೆ—

**ಅಹಿರ್ಬುಧ್ನ್ಯಃ—**

**"ಶಕ್ತಯಸ್ಸರ್ವಭಾವಾನಾಮಚಿಂತ್ಯಾ ಅಪೃಥಕ್‌ಸ್ಥಿತಾಃ।
ಸ್ವರೂಪೇ ನೈವ ದೃಶ್ಯಂತೇ ದೃಶ್ಯಂತೇ ಕಾರ್ಯತಸ್ತು ತಾಃ॥
ಸೂಕ್ಷ್ಮಾವಸ್ಥಾ ಹಿ ಸಾ ತೇಷಾಂ ಸರ್ವಭಾವಾನುಗಾಮಿನೀ।
ಇದಂತಯಾ ವಿಧಾತುಂ ಸಾ ನ ನಿಷೇದ್ಧುಂ ಚ ಶಕ್ಯತೇ॥"**

**ಓ-ನಾರದನೆ!** ಪರಮಾತ್ಮನ ಶಕ್ತಿಯನ್ನು ನಿನ್ನ ಅವಗಾಹನೆಗೆ ತರುವುದಕ್ಕಾಗಿ ಮೊತ್ತಮೊದಲು ಲೌಕಿಕಪದಾರ್ಥಗಳಲ್ಲಿರುವ ಶಕ್ತಿಯನ್ನು ದೃಷ್ಟಾಂತವಾಗಿ ಉಪದೇಶಿಸುವೆನು ಕೇಳು—ಸಮಸ್ತಪದಾರ್ಥಗಳಲ್ಲಿಯೂ ಆ ಆ ಪದಾರ್ಥಗಳಿಗೆ ತಕ್ಕಂತೆ ಶಕ್ತಿಯೆಂಬುದು ಸಿದ್ಧವಾಗಿರುವುದು. ಆ ಆ ಪದಾರ್ಥಗಳ ಸ್ವರೂಪಗಳು ಪ್ರತ್ಯಕ್ಷಜ್ಞಾನಕ್ಕೆ ಗೋಚರಗಳಾಗುವಂತೆ ಅವುಗಳ ಶಕ್ತಿಯೆಂಬುದು ಪ್ರತ್ಯಕ್ಷಜ್ಞಾನಕ್ಕೆ ಗೋಚರವಾಗತಕ್ಕುದಲ್ಲ. ಆದುದರಿಂದಲೇ ಅದು ಅಚಿಂತ್ಯ (ಪ್ರತ್ಯಕ್ಷಜ್ಞಾನದಿಂದ ಚಿಂತಿಸಲಶಕ್ಯ) ವೆನಿಸಿಕೊಳ್ಳುವುದು. "ಹಾಗಾದರೆ ಅಂಥ ಶಕ್ತಿಯೆಂಬುದೊಂದು ಉಂಟೆಂದು ಹೇಗೆ ಹೇಳಲಾದೀತು" ಎಂದು ಆಶಂಕಿಸಬೇಡ; ಆ ಆ ಪದಾರ್ಥಗಳಿಂದ ಉತ್ಪನ್ನವಾಗುವ ಕಾರ್ಯಬಲದಿಂದ ಅಂಥ ಕಾರ್ಯೋತ್ಪತ್ತಿಗೆ ಉಪಯೋಗಿಯಾದ ಅಪೃಥಕ್ಸಿದ್ಧವಿಶೇಷಣವಾಗಿ ಕಾರಣದಲ್ಲಿ ಅವಶ್ಯ ಕಲ್ಪನೀಯವಾಗಿರುವುದು. ಹಾಗೆ ಅನುಮಾನಪ್ರಮಾಣದಿಂದ ಕಲ್ಪಿಸದಿದ್ದರೆ ಒಂದು ಪದಾರ್ಥದಿಂದ ಉಂಟಾಗುವ ಕಾರ್ಯವು ಮತ್ತೊಂದು ಪದಾರ್ಥದಿಂದಲೂ ಉಂಟಾಗಬೇಕಾಗಿಬರುವುದು. ಹೀಗೆ ಕಾರ್ಯಬಲದಿಂದ ಕಾರಣದಲ್ಲಿ ಕಲ್ಪನೀಯವಾದುದರಿಂದಲೇ ಈ ಶಕ್ತಿ—ತಮ್ಮ ತಮ್ಮ ಕಾರ್ಯವನ್ನು ಕುರಿತು ಕಾರಣೀಭೂತವಾಗಿಯೇ ಇರುವ ಸಮಸ್ತಪದಾರ್ಥಗಳಲ್ಲಿಯೂ ಅಪೃಥಕ್ಸಿದ್ಧವಿಶೇಷಣವಾಗಿ ಅಥವಾ ಕಾರಣತಾರೂಪವಾಗಿ ಇದ್ದೇ ಇರುವುದು.

**ಓ-ನಾರದನೆ!** ಕಾರಣವೆನಿಸಿಕೊಂಡ ಸಕಲವಸ್ತುಗಳನ್ನೂ ಯಾವಾಗಲೂ ತೊಡರುತ್ತಲೇ ಇರುವ ಈ ಶಕ್ತಿ ಕಾರ್ಯವಸ್ತುಗಳ ಅತ್ಯಂತಸೂಕ್ಷ್ಮ

ವಸ್ಥಾರೂಪವಾಗಿರುವುದು. ಈ ಶಕ್ತಿ ಪ್ರತ್ಯಕ್ಷಗ್ರಹಣಕ್ಕೆ ಯೋಗ್ಯವಲ್ಲದುದರಿಂದಲೇ ಇದರ ಸ್ವರೂಪವನ್ನು "**ಇದು**" ಎಂಬುದಾಗಿಯಾಗಲಿ, "**ಇಂಥದು**" ಎಂಬುದಾಗಿಯಾಗಲಿ ವಿಧಿರೂಪದಿಂದ ನಿರ್ದೇಶಿಸಿ ತೋರಿಸಲು ಶಕ್ಯವಲ್ಲ; ಮತ್ತು ಕಾರ್ಯಬಲದಿಂದ ಅವಶ್ಯಕಲ್ಪನೀಯವಾಗಿ ಸಿದ್ಧವಾಗಿರುವಪ್ರಯುಕ್ತ "**ಶಕ್ತಿಯೆಂಬುದು ಇಲ್ಲ**" ಎಂದು ಇದನ್ನು ನಿಷೇಧಿಸಲೂ ಶಕ್ಯವಲ್ಲ.

**"ಸರ್ವೈರನನುಯೋಜ್ಯಾ ಹಿ ಶಕ್ತಯೋ ಭಾವಗೋಚರಾಃ ।"**

**ಓ-ನಾರದನೆ!** ಸರ್ವವಸ್ತುಗಳಿಗೂ ವಸ್ತುತ್ವಪ್ರಯುಕ್ತಗಳಾಗಿ ಅವುಗಳಲ್ಲಿ ನೆಲೆಗೊಂಡಿರುವ ಆ ಆ ಶಕ್ತಿಗಳು ಯಾರ ಆಕ್ಷೇಪಣೆಗೂ ಗುರಿಯಾಗತಕ್ಕವುಗಳಲ್ಲ. "**ಬೆಂಕಿ ದಹಿಸುತ್ತದೆ, ನೀರು ನೆನೆಸುತ್ತದೆ**" ಎಂದು ಹೇಳಿದರೆ— "**ಬೆಂಕಿ ಹೇಗೆ ದಹಿಸಬಲ್ಲುದು? ನೀರು ಹೇಗೆ ನೆನೆಸಬಲ್ಲುದು?**" ಎಂಬುದಾಗಿ ಯಾರು ಆಕ್ಷೇಪಿಸಬಲ್ಲರು? ಒಂದುವೇಳೆ ಯಾರಾದರೂ ಹಾಗೆ ಆಕ್ಷೇಪಿಸಿದರೂ ಪ್ರಯೋಜನವೇನು?

**"ಏವಂ ಭಗವತಸ್ತಸ್ಯ ಪರಸ್ಯ ಬ್ರಹ್ಮಣೋ ಮುನೇ ॥**
**ಸರ್ವಭಾವಾನುಗಾ ಶಕ್ತಿರ್ಜ್ಯೋತ್ಸ್ನೇವ ಹಿಮದೀಧಿತೇಃ ।**
**ಭಾವಾಭಾವಾನುಗಾ ತಸ್ಯ ಸರ್ವಕಾರ್ಯಕರೀ ವಿಭೋಃ ॥**
**ಸ್ವಾತಂತ್ರ್ಯರೂಪಾ ಸಾ ವಿಷ್ಣೋಃ ಪ್ರಸ್ಫುರತ್ತಾ ಜಗನ್ಮಯೀ ।**
**ಉದಿತಾನುದಿತಾಕಾರಾ ನಿಮೇಷೋನ್ಮೇಷರೂಪಿಣೀ ॥"**

**ಓ-ನಾರದನೆ!.** ಹೀಗೆ ಲೋಕದೃಷ್ಟವಾದ ಸಮಸ್ತಪದಾರ್ಥಗಳಲ್ಲಿಯೂ ಕಾರ್ಯೋಪಯೋಗಿಯಾಗಿ ಅಡಗಿರುವ ವಿಲಕ್ಷಣವಿಲಕ್ಷಣಶಕ್ತಿಗಳನ್ನು ದೃಷ್ಟಾಂತಗಳಾಗಿ ನೋಡಿಕೊಳ್ಳುವಿಯಾದರೆ ಅದರಂತೆ ಪರಮಾತ್ಮನಲ್ಲಿಯೂ ವಸ್ತುತ್ವಪ್ರಯುಕ್ತವಾದ ವಿಲಕ್ಷಣಶಕ್ತಿ ಉಂಟೆಂದು ತಿಳಿಯಬಲ್ಲವನಾಗುವಿ. ಈ ಶಕ್ತಿ ಸರ್ವದೇಶಸರ್ವಕಾಲಸರ್ವಾವಸ್ಥೆಗಳಲ್ಲಿಯೂ ಪರಮಾತ್ಮನನ್ನು ಹಿಂಬಾಲಿಸುತ್ತ ಚಂದ್ರನಿಗೆ ಚಂದ್ರಿಕೆಯಂತೆ ಅಪೃಥಕ್ಸಿದ್ಧವಾಗಿರುವುದು; ಮತ್ತು ಸರ್ವವ್ಯಾಪಕನಾದುದರಿಂದ ವಿಷ್ಣುವೆನಿಸಿಕೊಂಡಿರುವ ಆ ಪರಮಾತ್ಮನ ನಿರಂಕುಶಸ್ವಾತಂತ್ರ್ಯರೂಪವಾಗಿರುವುದು. ಸೃಷ್ಟಿಸ್ಥಿತಿಸಂಹಾರನಿಗ್ರಹಾನುಗ್ರಹಗಳೆಂಬ ಪಂಚಕೃತ್ಯಗಳಿಗೆ ಅನುಕೂಲವಾಗಿ ಆ ಆ ಸಮಯಗಳಲ್ಲಿ ವಿಕಾಸವನ್ನೂ ತಿರೋಧಾನವನ್ನೂ ಪಡೆಯುತ್ತಿರುವುದರಿಂದ ಉದಿತಾನುದಿತಸ್ವರೂಪವೆಂದೂ, ನಿಮೇಷೋನ್ಮೇಷರೂಪವೆಂದೂ ಪ್ರಾಜ್ಞರಿಂದ ವ್ಯವಹರಿಸಲ್ಪಡುತ್ತಿರುವುದು.

ಹೀಗೆ ಪರಮಾತ್ಮನಲ್ಲಿ ಸ್ವರೂಪಪ್ರಯುಕ್ತವಾಗಿ ಸಿದ್ಧವಾಗಿರುವ ಶಕ್ತಿಯ ವೈಭವವನ್ನು ವಿಸ್ತರದಿಂದ ಬಹುಮುಖವಾಗಿ ತೋರಿಸಿ ಕೊನೆಯಲ್ಲಿ ಸಾರಾರ್ಥವನ್ನು ಉಪದೇಶಿಸಿದ ಕ್ರಮವೆಂತೆಂದರೆ—

" ಉದಧೇರಿವ ಚ ಸ್ಥೈರ್ಯಂ ಮಹತ್ತ್ವೇವ ವಿಹಾಯಸಃ।
ಪ್ರಭೇವ ದಿವಸೇಶಸ್ಯ ಜ್ಯೋತ್ಸ್ನೇವ ಹಿಮದೀಧಿತೇಃ ॥
ವಿಷ್ಣೋಸ್ಸರ್ವಾಂಗಸಂಪೂರ್ಣಾ ಭಾವಾಭಾವಾನುಗಾಮಿನೀ।
ಶಕ್ತಿರ್ನಾರಾಯಣೀ ದಿವ್ಯಾ ಸರ್ವಸಿದ್ಧಾಂತಸಂಮತಾ ॥ "

ಓ-ನಾರದನೆ ! ಜಲನಿಧಿಯೆನಿಸಿಕೊಂಡಿರುವ ಸಮುದ್ರಕ್ಕೆ ಸ್ಥೈರ್ಯಗುಣದಂತೆಯೂ, ಎಲ್ಲೆಯಿಲ್ಲದ ಆಕಾಶಕ್ಕೆ ಮಹತ್ತ್ವಗುಣದಂತೆಯೂ, ದಿನಮಣಿಯೆನಿಸಿಕೊಂಡ ಆದಿತ್ಯನಿಗೆ ಪ್ರಭೆಯಂತೆಯೂ, ಶೀತಕಿರಣನೆನಿಸಿಕೊಂಡ ಚಂದ್ರನಿಗೆ ಚಂದ್ರಿಕೆಯಂತೆಯೂ, ಸರ್ವವ್ಯಾಪಕನಾದ ಶ್ರೀವಿಷ್ಣುವೆಂಬ ಧರ್ಮಿಗೆ ಅಪೃಥಕ್ಸಿದ್ಧವಾದ ಧರ್ಮಭೂತವಾಗಿಯೂ, ಅವನ ಸಕಲಕಾರ್ಯಗಳನ್ನೂ ನಿರ್ವಹಿಸುವ ವಿಷಯದಲ್ಲಿ ಎಳ್ಳಿನ ಮೊನೆಯಷ್ಟೂ ನ್ಯೂನತೆಯಿಲ್ಲದುದರಿಂದ ಸರ್ವಭಾಗದಲ್ಲಿಯೂ ಪರಿಪೂರ್ಣವಾಗಿಯೂ, ಸರ್ವದೇಶ-ಸರ್ವಕಾಲ-ಸರ್ವಾವಸ್ಥೆಗಳಲ್ಲಿಯೂ ಅವನನ್ನು ಬಿಡದೆ ತೊಡರುತ್ತಿರುವುದಾಗಿಯೂ, ಆದುದರಿಂದಲೇ " ನಾರಾಯಣೀ-ಶ್ರೀಃ-ಲಕ್ಷ್ಮೀಃ " ಇವೇ ಮೊದಲಾದ ಶಬ್ದಗಳಿಂದ ನಿರ್ದೇಶಿಸಲು ಅರ್ಹವಾದುದಾಗಿಯೂ ಇರುವ ಈಶಕ್ತಿ " ಸಾಂಖ್ಯಂ ಯೋಗಃ ಪಂಚರಾತ್ರಂ ವೇದಾಃ ಪಾಶುಪತಂ ತಥಾ "ಎಂದು ಶ್ರೀಮನ್ಮಹಾಭಾರತದಲ್ಲಿ ಪ್ರಸಿದ್ಧವಾಗಿರುವ ಪಂಚಸಿದ್ಧಾಂತಗಳಲ್ಲಿಯೂ ಐಕಮತ್ಯದಿಂದ ಅಂಗೀಕರಿಸಲ್ಪಟ್ಟಿರುವುದು.

" ದೇವಾಚ್ಛಕ್ತಿಮತೋ ಭಿನ್ನಾ ಬ್ರಹ್ಮಣಃ ಪರಮೇಷ್ಠಿನಃ।
ಏಷ ಚೈಷಾ ಚ ಶಾಸ್ತ್ರೇಷು ಧರ್ಮಧರ್ಮಿಸ್ವಭಾವತಃ ॥
ಭವದ್ಭಾವಸ್ವರೂಪೇಣ ತತ್ತ್ವಮೇಕಮಿವೋದಿತಾ।
ಸ್ವಾತಂತ್ರ್ಯೇಣ ಸ್ವರೂಪೇಣ ವಿಷ್ಣುಪತ್ನೀಯಮದ್ಭುತಾ ॥ "
ಯತೋ ಜಗದ್ಭವಿಷ್ಯಂತೀ ಕ್ವಚಿದುನ್ಮೇಷಮೃಚ್ಛತಿ "

ಓ ನಾರದನೆ ! ವಸ್ತುಸ್ಥಿತಿಯನ್ನು ನಿರೂಪಿಸಿನೋಡಿದರೆ ಈ ಶಕ್ತಿ ಶಕ್ತಿವಿಶಿಷ್ಟನಾದ ಆ ಪರಮಾತ್ಮನ ಸ್ವರೂಪಕ್ಕಿಂತಲೂ ಭಿನ್ನವಾದ ತತ್ತ್ವವಾಗಿರುವುದು ; ಆದರೂ ಈ ಶಕ್ತಿಗೂ ಪರಮಾತ್ಮನಿಗೂ ಅಪೃಥಕ್ಸಿದ್ಧಧರ್ಮಧರ್ಮಿಭಾವವಿರುವುದರಿಂದ " ಈ ಎರಡೂ ಒಂದೇ ತತ್ತ್ವವೋ " ಎಂದು ತೋರುವಂತೆ ಶಾಸ್ತ್ರಗಳಲ್ಲಿ ಉಪದೇಶವು ಕಾಣುವುದು. ಆಶ್ಚರ್ಯಕಾರಿಣಿಯಾಗಿಯೂ ವಿಷ್ಣುಪತ್ನೀ

ಶಬ್ದವಾಚ್ಯೆಯಾಗಿಯೂ ಇರುವ ಈ ಶಕ್ತಿ ನಿರಂಕುಶಸ್ವತಂತ್ರನಾದ ವಿಷ್ಣುವಿನಲ್ಲಿ ರುವ ಸ್ವಾತಂತ್ರ್ಯವೆಂಬ ಧರ್ಮಸ್ವರೂಪವಾದುದರಿಂದ ಪ್ರಪಂಚಾಕಾರವಾಗಿ ಪರಿಣ ಮಿಸಲುದ್ಯೋಗಿಸಿ—ಅಪರಿಚ್ಛಿನ್ನವಾದ ಪರಮಾತ್ಮಸ್ವರೂಪದ ಕೋಟಿಕೋಟಿ ಭಾಗದ ಏಕದೇಶದಲ್ಲಿ ವಿಕಾಸವೆಂಬ ಉನ್ಮೇಷವನ್ನು ಪಡೆವುದು.

ಇನ್ನೂ ಇದರ ವಿಸ್ತರವನ್ನು ತಿಳಿಯಲಪೇಕ್ಷಿಸುವವರು—**ಲಕ್ಷ್ಮೀತಂತ್ರ-ಅಹಿರ್ಬುಧ್ನ್ಯಸಂಹಿತೆ** ಮೊದಲಾದ ಗ್ರಂಥಗಳಿಂದಲೇ ಆಚಾರ್ಯೋಪದೇಶಮೂಲಕವಾಗಿ ತಿಳಿಯಬಹುದು.

ಈ ಪರಿಯಲ್ಲಿ ಕಾರಣವಸ್ತುನಿಷ್ಠವಾಗಿರುವ ಕಾರಣತ್ವಕ್ಕೆ ನಿಯಾಮಕ ವಾದ ವಿಶೇಷಣವಾಗಿಯಾಗಲಿ ಅಥವಾ ಕಾರಣತ್ವಸ್ವರೂಪವಾಗಿಯಾಗಲಿ ಈ ಶಕ್ತಿಯೆಂಬ ಅದ್ರವ್ಯವಿಶೇಷವು ಅಬಾಧಿತವಾಗಿಯೂ ನಿರ್ದೋಷವಾಗಿಯೂ ಇರುವ ಆಗಮಾನುಮಾನಪ್ರಮಾಣಗಳಿಂದ ಸಿದ್ಧವಾಗಿರುವಪ್ರಯುಕ್ತ ಇದನ್ನು ಅಪಲಪಿಸಲು ಯಾರಿಗೂ ಶಕ್ಯವಲ್ಲ.

## ೧೧೩೪. ಶೈವಾಭಿಮತಶಕ್ತಿಸ್ವರೂಪನಿರೂಪಣಂ-

ಈ ಶಕ್ತಿಯ ವಿಷಯದಲ್ಲಿ ಶೈವಮತದವರು ಹೇಳುವುದೇನೆಂದರೆ—ಶಕ್ತಿ ಯೆಂಬುದು ಬ್ರಹ್ಮತತ್ತ್ವಕ್ಕಿಂತಲೂ ಭಿನ್ನವೂ ಅಲ್ಲ; ಅಭಿನ್ನವೂ ಅಲ್ಲ; ಭಿನ್ನಾ ಭಿನ್ನವಾಗಿರುವುದು. ಸತ್ತೆ, ಜ್ಞಾನ, ಆನಂದ ಮುಂತಾದ ಶಬ್ದಗಳಿಂದ ಶಾಸ್ತ್ರಗ ಳಲ್ಲಿ ನಿರ್ದೇಶಿಸಲ್ಪಡುವುದು. ಇದು ಸ್ವತಃ ನಿರ್ವಿಕಾರವಾಗಿದ್ದರೂ ಅಚಿದ್ವಿಶಿಷ್ಟ ತ್ವಾಕಾರದಿಂದ ಜಗತ್ತಿಗೆ ಉಪಾದಾನಕಾರಣವಾಗಿರುವುದು. * " **ಜಗದುತ್ಪಾದಿಕಾ ಶಕ್ತಿಸ್ತವ ಪ್ರಕೃತಿರಿಷ್ಯತೇ** " ಎಂಬ ಸ್ಮೃತಿವಚನದಿಂದಲೂ, † " **ತೇ ಧ್ಯಾನಯೋಗಾನುಗತಾ ಅಪಶ್ಯನ್ ದೇವಾತ್ಮಶಕ್ತಿಂ ಸ್ವಗುಣೈರ್ನಿಗೂಢಾಂ** " ಎಂಬ ಶ್ರುತಿವಚನದಿಂದಲೂ ಈ ಶಕ್ತಿಯೆಂಬುದು ಸಿದ್ಧವಾಗುವುದು. ಮೃಷ್ಟಾನ್ನ ಭೋಜನಾದಿಗಳಿಂದ ಅಭಿವ್ಯಕ್ತವಾಗುವ ವೈಷಯಿಕಾನಂದದೊಡನೆ ಅಭಿನ್ನವಾಗಿ ರುವುದು. ಶಿವಸಂಬಧಿನಿಯಾದುದರಿಂದ " ಶೈವೀ " ಎಂದು ಪ್ರಸಿದ್ಧವಾಗಿರುವ ಈ ಚಿಚ್ಛಕ್ತಿಯೇ ಪ್ರಪಂಚಕ್ಕೆ ಉಪಾದಾನಕಾರಣವಾಗುವುದು. ಕಾರಣವೆನಿಸಿಕೊ

---

* **ಓ ಶಿವನೇ!** ನಿನ್ನಲ್ಲಿರುವ ಈ ಶಕ್ತಿ ಜಗದುತ್ಪತ್ತಿಗೆ ಹೇತುವಾದಪ್ರಯುಕ್ತ ಪ್ರಾಜ್ಞರಿಂದ ಜಗದುಪಾದಾನಕಾರಣವಾಗಿ ಅಂಗೀಕರಿಸಲ್ಪಟ್ಟಿರುವುದು.

† ಧ್ಯಾನಯೋಗಮಾರ್ಗವನ್ನು ಅವಲಂಬಿಸಿರುವ ಜ್ಞಾನಿಗಳು ದೇವನೆನಿಸಿಕೊಂಡಿರುವ ಪರಶಿವನ ಶಕ್ತಿಯನ್ನು—ತನ್ನ ಗುಣಗಳೊಡನೆ ಆ ದೇವನಲ್ಲಿ ಗುಪ್ತವಾಗಿ ಅಡಗಿರುವಂಥದನ್ನಾಗಿ ಸಾಕ್ಷಾತ್ಕರಿಸಿದರು.

ಕ್ಕುವ ಸಮಸ್ತವಸ್ತುಗಳಿಗೂ ತನ್ನ ಸಾಂನಿಧ್ಯಮಾತ್ರದಿಂದಲೇ (ಸತ್ತಾಮಾತ್ರದಿಂದಲೇ) ಉಪಕಾರಕವಾಗಿರುವುದು; ಜ್ಞಾಯಮಾನವಾಗಿಯೇ ಉಪಕಾರಕವಾಗುವುದೆಂಬ ನಿರ್ಬಂಧವಿಲ್ಲ. ಆದುದರಿಂದಲೇ ಶಕ್ತಿಜ್ಞಾನವಿಲ್ಲದಿದ್ದರೂ ಕಾರ್ಯೋತ್ಪತ್ತಿಗೇನೂ ತೊಂದರೆಯಿಲ್ಲ. ಈ ಶಕ್ತಿಯೆಂಬುದು ಇಲ್ಲದಿದ್ದರೆ ಸಮಸ್ತವಸ್ತುವೂ ನಿಸ್ಸಾರವಾಗುವುದು. ಹೆಚ್ಚು ಮಾತುಗಳಿಂದೇನು; ಸಾಕ್ಷಾತ್ಪರಶಿವನೂ ಸಹ ಈ ಶಕ್ತಿಯಿಲ್ಲದಿದ್ದರೆ ಅತ್ತಿತ್ತಲಾಗಿ ಚಲಿಸುವುದಕ್ಕೂ, ಕೊನೆಗೆ ಕಣ್ಣು ಮಿಟುಕಿಸುವುದಕ್ಕೂ ಸಮರ್ಥನಾಗಲಾರನು. ಆದುದರಿಂದಲೇ—

* "ಶಿವಶ್ಶಕ್ತ್ಯಾ ಯುಕ್ತೋ ಯದಿ ಭವತಿ ಶಕ್ತಃ ಪ್ರಭವಿತುಂ
ನ ಚೇದೇವಂ ದೇವೋ ನ ಖಲು ಕುಶಲಃ ಸ್ಪಂದಿತುಮಪಿ ॥

ಎಂಬುದಾಗಿ ಹಿರಿಯರ ಸೂಕ್ತಿಯೂ ಹೊರಟಿರುವುದು. ಶಕ್ತಿಯಿದ್ದರೆ ಕಾರಣವಸ್ತುಗಳಿಗೆ ಕಾರ್ಯೋತ್ಪಾದನಸಾಮರ್ಥ್ಯವುಂಟೆಂದೂ, ಶಕ್ತಿಯಿಲ್ಲದಿದ್ದರೆ ಕಾರ್ಯೋತ್ಪಾದನಸಾಮರ್ಥ್ಯವಿಲ್ಲವೆಂದೂ ಈ ಅನ್ವಯವ್ಯತಿರೇಕಗಳು ಲೋಕಸಿದ್ಧಗಳಾಗಿಯೇ ಇರುವುವು. ಆದುದರಿಂದಲೇ "ಘಟಸ್ಸನ್, ಪಟಸ್ಸನ್" ಇತ್ಯಾದಿಸ್ಥಳದಲ್ಲಿ ಸತ್ಪದಾರ್ಥವು ಘಟಪಟಾದಿಗಳಿಗೆ ವಿಶೇಷಣವಾಗಿ ತೋರುತ್ತಿದ್ದರೂ ಸ್ವವ್ಯತಿರಿಕ್ತವಾದ ಸಮಸ್ತವಸ್ತುಗಳಿಗೂ ತಾನು ಅಧಿಷ್ಠಾನವಾದುದರಿಂದ ಹೇಗಾದರೆ ಪ್ರಧಾನಭೂತವಾಗಿ ನಿಲ್ಲುವುದೋ; ಅದರಂತೆ ಈ ಶಕ್ತಿಯೆಂಬುದು ಎಲ್ಲಾ ಕಾರಣವಸ್ತುಗಳಲ್ಲಿಯೂ ವಿಶೇಷಣವಾಗಿ ಸ್ಫುರಿಸುತ್ತಿದ್ದರೂ ಸರ್ವೋಪಾದಾನತ್ವವು ತನಗೇ ಇರುವುದರಿಂದ ತಾನೇ ಪ್ರಧಾನಭೂತವಾಗಿ ನಿಲ್ಲುವುದು. ಕಾರಣವಸ್ತುಗಳು ಭಿನ್ನಭಿನ್ನಗಳಾಗಿದ್ದರೂ ಅವುಗಳಲ್ಲಿರುವ ಶಕ್ತಿ ಭಿನ್ನಭಿನ್ನವಲ್ಲ; ಪ್ರತಿಯೊಂದು ಕಾರಣವಸ್ತುವಿನಲ್ಲಿಯೂ ಒಂದೊಂದು ಶಕ್ತಿಯನ್ನು ಕಲ್ಪಿಸುವುದಾದರೆ ಗೌರವದೋಷವು ಪ್ರಸಕ್ತವಾಗುವುದರಿಂದ ಸರ್ವಕಾರಣವಸ್ತುಗಳಲ್ಲಿಯೂ ಅನುಗತವಾಗಿರುವ ಒಂದೇ ಒಂದು ಶಕ್ತಿತತ್ತ್ವವನ್ನು ಒಪ್ಪಬೇಕು. † "ಏಕೈವ ತು ಪರಾ ಶಕ್ತಿರ್ಜ್ಞಾನಾನಂದಕ್ರಿಯಾಮಯೀ" ಎಂಬ ವಚನದಿಂದಲೂ ಶಕ್ತಿಯ ಏಕತ್ವವು ಸಿದ್ಧವಾಗುವುದು. ಉಪಾದಾನಕಾರಣತ್ವ

---

* ಶಿವನು ಶಕ್ತಿಯೊಡನೆ ಕೂಡಿದರೇನೇ ತನ್ನ ಕೆಲಸವನ್ನು ಮಾಡಲು ಸಮರ್ಥನಾಗುವನು; ಹಾಗಿಲ್ಲವಾದರೆ—ಅವನು ದೇವನೆನಿಸಿಕೊಂಡಿದ್ದರೂ ಅತ್ತಿತ್ತಲಾಗಿ ಚಲಿಸುವುದಕ್ಕೂ ಸಹ ಸಮರ್ಥನಾಗನು.

† ಜ್ಞಾನಸ್ವರೂಪವಾಗಿಯೂ, ಆನಂದಸ್ವರೂಪವಾಗಿಯೂ, ಕ್ರಿಯಾಸ್ವರೂಪವಾಗಿಯೂ ಇರುವ ಪರಶಕ್ತಿಯೆಂಬುದು ಒಂದೇ ಒಂದಾಗಿರುವುದು.

ಪ್ರಯುಕ್ತವಾದ ವಿಕಾರಗಳೆಲ್ಲವೂ ಶಕ್ತಿಸಂಬಂಧಿವಸ್ತುಗಳಲ್ಲಿ ನಿಲ್ಲುವುವೇ ಹೊರತು ಶಕ್ತಿಯನ್ನು ಸ್ಪರ್ಶಿಸಲಾರವಾದುದರಿಂದ ಈ ಶಕ್ತಿಯ ನಿರ್ವಿಕಾರತ್ವಕ್ಕೆ ಚ್ಯುತಿಯಿಲ್ಲ. ಈ ಶಕ್ತಿ ಕೆಲಸವನ್ನು ನಿರ್ವಹಿಸುವ ಕಾಲದಲ್ಲಿ ತನಗೆ ಸಹಾಯವಾಗಿ ಮತ್ತೊಂದು ಶಕ್ತಿಯನ್ನು ಅಪೇಕ್ಷಿಸುವುದಿಲ್ಲ; ತಾನೇ ಶಕ್ತವಾಗಿರುವುದು. ಹಾಗಿಲ್ಲದಿದ್ದರೆ ಅನವಸ್ಥಾದೋಷವು ಪ್ರಸಕ್ತವಾದೀತು.

ಈ ಶಕ್ತಿ ಯಾರ ಆಕ್ಷೇಪಕ್ಕೂ ಒಳಗಾಗದ ಮಹಾವೈಭವವನ್ನು ಪಡೆದಿರುವುದು; ಏತಕ್ಕೆಂದರೆ—ಧರ್ಮಿಗ್ರಾಹಕಪ್ರಮಾಣವೇ ಈ ಶಕ್ತಿಯನ್ನು ಅಘಟಿತಘಟನಾಸಮರ್ಥವಾದ ಸ್ವರೂಪವುಳ್ಳದನ್ನಾಗಿ ಬೋಧಿಸುತ್ತಿರುವುದು. ಈ ಶಕ್ತಿತತ್ತ್ವಕ್ಕೆ ಉಕ್ತರೀತಿಯಲ್ಲಿ ಏಕತ್ವವು ಸಿದ್ಧವಾದುದರಿಂದಲೇ ಇದು ದೇಶಕಾಲಪರಿಚ್ಛೇದರಹಿತವಾಗಿರುವುದು. ಹಾಗಿಲ್ಲದಿದ್ದರೆ ಸರ್ವದೇಶಕಾಲವ್ಯಾಪಿಯಾದ ಕಾರ್ಯೋತ್ಪತ್ತಿ ಅನುಪಪನ್ನವಾದೀತು. * "**ವ್ಯಾಪಿಕಾ ತು ಪರಾ ಶಕ್ತಿರ್ವ್ಯಾಪ್ಯಂ ವಿಶ್ವಮಿದಂ ಜಗತ್**" ಎಂಬ ವಚನದಿಂದಲೂ ಇದರ ವ್ಯಾಪಕತ್ವವು ಸಿದ್ಧವಾಗಿರುವುದು. ಅಚಿದ್ವಿಶಿಷ್ಟತ್ವಾಕಾರದಿಂದ ಸಮಸ್ತಪರಿಣಾಮಕ್ಕೂ ಆಶ್ರಯವಾದುದರಿಂದಲೇ ಈ ಶಕ್ತಿ ವಸ್ತುಪರಿಚ್ಛೇದಶೂನ್ಯವಾಗಿಯೂ ಇರುವುದು.

ಅಚಿದ್ವಿಶಿಷ್ಟತ್ವಾಕಾರದಿಂದ ಇದು ಸಾವಯವವೆನಿಸಿಕೊಂಡರೂ ನಿಷ್ಕೃಷ್ಟಚಿಚ್ಛಕ್ತ್ಯಾಕಾರದಿಂದ ಈ ಶಕ್ತಿ ನಿರವಯವವಾಗಿಯೇ ಇರುವುದು. ಕಾರ್ಯಕಾರಣರೂಪವಾದ ಪ್ರಪಂಚವೆಂಬ ಕಂಚುಕದಿಂದ ಕಂಚುಕಿತವಾಗಿರುವ ಈ ಶಕ್ತಿತತ್ತ್ವವು ಮುಕ್ತಿಕಾಲದಲ್ಲಿ ಪ್ರಪಂಚಪ್ರಳಯವುಳ್ಳದಾಗಿ ಆಗುವುದರಿಂದ ಅಂಥ ಶಕ್ತಿತತ್ತ್ವವನ್ನೇ ಪ್ರಪಂಚಕ್ಕಿಂತಲೂ ಉತ್ಕೃಷ್ಟವಾದ ತತ್ತ್ವವಾಗಿ ಧ್ಯಾನಮಾಡಬೇಕು. ಇದು **ಶೈವಮತದ ಸಾರಾಂಶವಾಗಿರುವುದು.**

## ೧೧೩೭. ತನ್ನಿರಾಕರಣಂ, ತತ್ರ ಶಕ್ತೇಃ ಪ್ರಾಧಾನ್ಯಾನುಪಪತ್ತಿಃ, ಉಪಾದಾನತ್ವಾನುಪಪತ್ತಿಶ್ಚ.

ಇದನ್ನು ಇತರವೇದಾಂತಿಗಳು ಒಪ್ಪುವುದಿಲ್ಲ; ಏತಕ್ಕೆಂದರೆ—ಶಕ್ತಿವಿಶಿಷ್ಟನಿಗೇ ಪ್ರಾಧಾನ್ಯವು ಶಾಸ್ತ್ರಗಳಲ್ಲಿ ಅವಗತವಾಗಿರುವಕಾರಣ ಶಕ್ತಿಗೆ ಶಕ್ತಿವಂತನನ್ನು ಕುರಿತು ಉಪಸರ್ಜನತ್ವವನ್ನು ಹೇಳಬೇಕಲ್ಲದೆ ಪ್ರಾಧಾನ್ಯವನ್ನು ಅಂಗೀಕರಿಸಲಾಗುವುದಿಲ್ಲ. ಶಾಸ್ತ್ರವಿರೋಧಪ್ರಸಂಗವುಂಟಾಗುವುದರಿಂದ ಪ್ರಾಧಾ

---

* ಪರಶಕ್ತಿಯೆಂಬುದು ಸರ್ವವ್ಯಾಪಕವಾಗಿರುವುದು; ಈ ಸಮಸ್ತಪ್ರಪಂಚವೂ ಅಂಥ ಶಕ್ತಿಗೆ ವ್ಯಾಪ್ಯವಾಗಿರುವುದು.

ನ್ಯವು ಯಾವಾಗ ಉಪಪನ್ನವಾಗಲಿಲ್ಲವೋ, ಆಗಲೇ ಈ ಶಕ್ತಿಗೆ ಜಗದುಪಾದಾನ ಕಾರಣತ್ವವೂ ಅನುಪಪನ್ನವೆಂಬುದು ಸಿದ್ಧವಾಯಿತು. "ಘಟಸ್ಸನ್-ಪಟಸ್ಸನ್" ಎಂಬ ಸ್ಥಳದಲ್ಲಿ ಶಾಬ್ದಮರ್ಯಾದೆಯಿಂದ ಸತ್ಪದಾರ್ಥವು ಘಟಾದಿಪದಾರ್ಥಗಳಿಗೆ ವಿಶೇಷಣವಾಗಿದ್ದರೂ ಆರ್ಥಪ್ರಾಧಾನ್ಯದಿಂದ ವಿಶೇಷ್ಯವಾಗಿಯೇ ನಿಲ್ಲುವುದು. ಸತ್ಪದಬೋಧ್ಯನಾದ ಪರಮಾತ್ಮನಿಗೆ ಘಟಾದಿಪದಾರ್ಥಗಳು ಶರೀರಗಳಾದುದರಿಂದ ಅಪೃಥಕ್ಸಿದ್ಧವಿಶೇಷಣಗಳಾಗಿಯೇ ಇರುವುವಾದಪ್ರಯುಕ್ತ ಸತ್ಪದಾರ್ಥದ ಪ್ರಾಧಾನ್ಯಕ್ಕೆ ಚ್ಯುತಿಯಿಲ್ಲವಷ್ಟೆ? ಆದರಂತೆ ಶಕ್ತಿಗೆ ಶಾಬ್ದಪ್ರಾಧಾನ್ಯವೂ ಇಲ್ಲದಿರುವಾಗ ಇದಕ್ಕೆ ಉಪಾದಾನಕಾರಣತ್ವವನ್ನು ಹೇಗೆ ಅಂಗೀಕರಿಸಲಾದೀತು ?

## ೧೧೩೬ ಉಪಾದಾನತ್ವಾಭಾವೇಽಪಿ ಶಕ್ತೇರುತ್ಪತ್ತಿವಿನಾಶರೂಪ ಪರಿಣಾಮೋಪಪತ್ತಿಃ

ಓಹೋ! "ಉಪಾದಾನತ್ವವಿಲ್ಲದಿದ್ದರೆ ಉಪಾದಾನತ್ವವ್ಯಾಪ್ಯವಾದ ಪರಿಣಾಮವು ಶಕ್ತಿಗೆ ಹೇಗೆ ಸಂಭವಿಸೀತು?" ಎಂದು ಆಶಂಕಿಸಕೆಲಸವಿಲ್ಲ; ಉತ್ಪತ್ತಿವಿನಾಶವ್ಯತಿರಿಕ್ತವಾದ ಪರಿಣಾಮವು ಶಕ್ತಿಗೆ ಇಲ್ಲವೇ ಇಲ್ಲವಷ್ಟೆ. ಉತ್ಪತ್ತಿವಿನಾಶರೂಪವಾದ ಪರಿಣಾಮವಾದರೆ ಉಪಾದಾನತ್ವವ್ಯಾಪ್ಯವಲ್ಲ. ಸಂಯೋಗವೆಂಬ ಅದ್ರವ್ಯದಲ್ಲಿ ಉಪಾದಾನತ್ವವಿಲ್ಲದಿದ್ದರೂ ಉತ್ಪತ್ತಿವಿನಾಶಗಳುಂಟಷ್ಟೆ.

## ೧೧೩೭ ಶಕ್ತೇರೇಕತ್ವಾನುಪಪತ್ತಿಃ

ಮತ್ತು—ಸರ್ವಕಾರಣಗಳಲ್ಲಿಯೂ ಒಂದೇ ಶಕ್ತಿ ಅನುಗತವಾಗಿರುವುದೆಂದು ಹೇಳಿ ಇದಕ್ಕೆ ಏಕತ್ವವನ್ನು ಅಂಗೀಕರಿಸಿದುದೂ ಸಂಗತವಲ್ಲ; ಶಕ್ತಿಯೆಂಬುದು ಕಾರ್ಯಬಲದಿಂದ ಕಾರಣದಲ್ಲಿ ಕಲ್ಪಿಸಲ್ಪಡುವುದಾದರೆ ಪ್ರತಿಕಾರಣವಸ್ತುವಿನಿಂದಲೂ ಭಿನ್ನಭಿನ್ನಕಾರ್ಯಗಳೇ ಉಂಟಾಗುತ್ತಿರುವಲ್ಲಿ ಭಿನ್ನಭಿನ್ನಶಕ್ತಿಗಳನ್ನೇ ಅವುಗಳಲ್ಲಿ ಕಲ್ಪನೆಮಾಡಬೇಕಾಗಿರುವಾಗ ಸರ್ವಕಾರಣಗಳಲ್ಲಿಯೂ ಅನುಗತವಾದ ಏಕಶಕ್ತಿಯನ್ನು ಹೇಗೆ ಕಲ್ಪಿಸಲಾದೀತು?

## ೧೧೩೮ ಶಕ್ತೇರ್ನಿತ್ಯತ್ವಾನುಪಪತ್ತಿಃ

ಮತ್ತು—ಸರ್ವಕಾರಣಗಳಲ್ಲಿಯೂ ಶಕ್ತಿಗೆ ನಿತ್ಯತ್ವವನ್ನು ಒಪ್ಪಲಾಗುವುದಿಲ್ಲ. ನಿತ್ಯವಸ್ತುಗಳಲ್ಲಿ ಈ ಶಕ್ತಿಗೆ ನಿತ್ಯತ್ವವು ಒಂದುವೇಳೆ ಸಂಭವಿಸಿದರೂ ಅನಿತ್ಯವಸ್ತುಗಳಲ್ಲಿರುವ ಈ ಶಕ್ತಿಗೆ ನಿತ್ಯತ್ವವನ್ನು ತೋರಿಸಿಕೊಡುವ ಪ್ರಮಾಣವು ಯಾವುದೂ ಇಲ್ಲದಿರುವಾಗ ನಿತ್ಯತ್ವವನ್ನು ಹೇಗೆ ಅಂಗೀಕರಿಸಲಾದೀತು?

## ೧೧೯೯. ಶಕ್ತೇರನಾದಿತ್ವಾನುಪಪತ್ತಿಃ

ಮತ್ತು—ಈ ಶಕ್ತಿಯೆಂಬುದಕ್ಕೆ ನಿಮ್ಮ ಅಭಿಪ್ರಾಯದಂತೆ ಅನಾದಿತ್ವ ವನ್ನು ಒಪ್ಪಲಾಗುವುದಿಲ್ಲ. ತನಗೆ ಆಶ್ರಯವಾದ ಆ ಆ ಕಾರಣವಸ್ತುಗಳ ಜತೆಯ ಲ್ಲಿಯೇ ತಾನು ಉತ್ಪನ್ನವಾಗಿ ಸ್ವರೂಪಲಾಭವನ್ನು ಪಡೆವ ಈ ಶಕ್ತಿಗೆ ಸ್ವಾಶ್ರ ಯವಸ್ತುವಿನ ಉತ್ಪತ್ತಿಗಿಂತಲೂ ಪೂರ್ವದಲ್ಲಿ ನಿರಾಶ್ರಯಸ್ಥಿತಿ ಸಂಭವಿಸಲು ಅವಕಾಶವಿಲ್ಲದಿರುವಾಗ ಅನಾದಿತ್ವವನ್ನು ಹೇಗೆ ಅಂಗೀಕರಿಸಲಾದೀತು?

## ೧೧೪೦. ಶಕ್ತೇರಪರ್ಯನುಯೋಜ್ಯವೈಭವತ್ವಾನುಪಪತ್ತಿಃ

ಮತ್ತು—ಈ ಶಕ್ತಿ ಯಾರ ಆಕ್ಷೇಪಕ್ಕೂ ಒಳಗಾಗದ ಮಹಾವೈಭವವನ್ನು ಪಡೆದಿರುವುದೆಂದು ಹೇಳಿ ಅಪರ್ಯನುಯೋಜ್ಯವೈಭವತ್ವವನ್ನು ಇದಕ್ಕೆ ಅಂಗೀಕರಿ ಸಿದುದೂ ಸಂಗತವಲ್ಲ. ಹಾಗೆ ಅಂಗೀಕರಿಸುವುದಾದರೆ—ಅಗ್ನಿಯಿಂದ ದಹನಕಾ ರ್ಯವೇ ಉಂಟಾಗುವುದೆಂದೂ, ಜಲದಿಂದ ಸೇಚನಕಾರ್ಯವೇ ಉಂಟಾಗುವುದೆಂದೂ ವಿಷಯವ್ಯವಸ್ಥೆಯನ್ನು ಮಾಡಲಾಗುವುದಿಲ್ಲವಷ್ಟೆ? ಅಗ್ನಿಯಲ್ಲಿರುವ ಶಕ್ತಿಗೆ ಜಲ ಗತವಾದ ಶಕ್ತಿಯೊಡನೆಯೂ, ಜಲಗತವಾದ ಶಕ್ತಿಗೆ ಅಗ್ನಿಗತವಾದ ಶಕ್ತಿಯೊಡ ನೆಯೂ ಅಭೇದವನ್ನೂ ಅಪರ್ಯನುಯೋಜ್ಯವೈಭವವನ್ನೂ ಅಂಗೀಕರಿಸುವುದಾದರೆ ಅಗ್ನಿಯಿಂದ ಸೇಚನಕಾರ್ಯವೂ, ಜಲದಿಂದ ದಹನಕಾರ್ಯವೂ ಏಕೆ ಉಂಟಾಗಬಾ ರದೆಂಬ ಆಕ್ಷೇಪಕ್ಕೆ ಯಾವ ಪರಿಹಾರವನ್ನು ಹೇಳಬಲ್ಲಿರಿ?

## ೧೧೪೧. ಶಕ್ತೇಸ್ತ್ರಿವಿಧಪರಿಚ್ಛೇದರಾಹಿತ್ಯಾನುಪಪತ್ತಿಃ

ಮತ್ತು—ಉಕ್ತರೀತಿಯಲ್ಲಿ ಅಪರ್ಯನುಯೋಜ್ಯವೈಭವತ್ವವು ಅಸಂಗತ ವಾದುದರಿಂದಲೇ ವಸ್ತುಪರಿಚ್ಛೇದವೂ ಸಿದ್ಧವಾದಪ್ರಯುಕ್ತ ಶಕ್ತಿಗೆ ನೀವು ಅಂಗೀಕರಿಸುವ ವಸ್ತುಪರಿಚ್ಛೇದರಾಹಿತ್ಯವೂ ಉಪಪನ್ನವಲ್ಲ. ಕಾರ್ಯವ್ಯವಸ್ಥೆಗೆ ಅನುಸಾರವಾಗಿ ಕಾರಣಗತವಾದ ಶಕ್ತಿಗಳಿಗೆ ಪರಸ್ಪರಭೇದವೇ ಸಿದ್ಧವಾದಪ್ರ ಯುಕ್ತ ಅಗ್ನಿಯಲ್ಲಿರುವ ಶಕ್ತಿ ಜಲದಲ್ಲಿ ಇಲ್ಲವೆಂದೂ, ಜಲದಲ್ಲಿರುವ ಶಕ್ತಿ ಅಗ್ನಿ ಯಲ್ಲಿ ಇಲ್ಲವೆಂದೂ ಸಿದ್ಧವಾದುದರಿಂದ ದೇಶಪರಿಚ್ಛೇದವೂ ಇದಕ್ಕೆ ಬಂದುದರಿಂ ದಲೂ, ಉತ್ಪತ್ತಿವಿನಾಶಗಳಿಗೆ ಭಾಗಿಯಾದ ಈ ಶಕ್ತಿಗೆ ಕಾಲಪರಿಚ್ಛೇದವೂ ಪ್ರಾಪ್ತವಾದುದರಿಂದಲೂ ನೀವು ಹೇಳುವ ದೇಶಕಾಲಪರಿಚ್ಛೇದರಾಹಿತ್ಯವೂ ಇದಕ್ಕೆ ಉಪಪನ್ನವಲ್ಲ.

## ೧೧೪೨ ಪ್ರತಿವಸ್ತು ಶಕ್ತಿಭೇದಾವಶ್ಯಂಭಾವಃ.

ಅದೇತಕ್ಕೆ ? ಆಶ್ರಯಭೇದದಿಂದ ಶಕ್ತಿಭೇದವನ್ನು ಒಪ್ಪಬೇಕಾದುದಿಲ್ಲ ; ಬ್ರಹ್ಮವೆಂಬ ಒಂದೇ ವಸ್ತು ಶಕ್ತಿಗೆ ಆಶ್ರಯವಾಗಿರುವುದೆಂದೂ, ಬ್ರಹ್ಮವ್ಯತಿರಿಕ್ತವಾದ ಸಮಸ್ತವಸ್ತುವೂ ಶಕ್ತಿಗೆ ಆಶ್ರಯವಲ್ಲವೆಂದೂ ಹೇಳುವೆವು. ಹಾಗಾದರೆ ಆ ಆ ಕಾರಣವಸ್ತುಗಳು ಆ ಆ ಕಾರ್ಯಗಳನ್ನು ಉಂಟುಮಾಡುವುದರಲ್ಲಿ "ಶಕ್ತಗಳು" ಎನಿಸಿಕೊಳ್ಳುವ ಬಗೆ ಹೇಗೆಂದು ಚಿಂತಿಸಕೆಲಸವಿಲ್ಲ; "ಶಕ್ತಗಳು" ಎಂಬ ಪದಕ್ಕೆ "ಶಕ್ತ್ಯಾಶ್ರಯಗಳು" ಎಂದು ಅರ್ಥವಲ್ಲ; "ಶಕ್ತಿವಿಷಯಗಳು" ಎಂದೇ ಅರ್ಥವನ್ನು ಹೇಳುವೆವು. ಬ್ರಹ್ಮತತ್ತ್ವವನ್ನು ಆಶ್ರಯಿಸಿಕೊಂಡಿರುವ ಶಕ್ತಿಯೇ ಸರ್ವಕಾರ್ಯಗಳಿಗೂ ನಿರ್ವಾಹಕವಾದುದರಿಂದಲೂ, ಅಗ್ನಿ, ಜಲ ಮುಂತಾದ ಸಮಸ್ತಕಾರಣವಸ್ತುಗಳೂ ಬ್ರಹ್ಮಗತವಾದ ಶಕ್ತಿಗೆ ವಿಷಯಗಳಾದುದರಿಂದಲೂ ಅವುಗಳು ಆ ಆ ಕಾರ್ಯಗಳನ್ನು ಉಂಟುಮಾಡುವುದಕ್ಕಾಗಲಿ "ಶಕ್ತಗಳು" ಎನಿಸಿಕೊಳ್ಳುವುದಕ್ಕಾಗಲಿ ಯಾವ ಅಡ್ಡಿಯೂ ಇಲ್ಲ. ಆಶ್ರಯಭೇದವಿದ್ದರಲ್ಲವೆ ಶಕ್ತಿಭೇದವನ್ನು ಒಪ್ಪಬೇಕಾಗಿಬರುವುದು ? ಬ್ರಹ್ಮವೆಂಬ ಒಂದೇ ವಸ್ತು ಶಕ್ತಿಗೆ ಆಶ್ರಯವಾಗಿರುವುದೆಂದು ಹೇಳುವ ನಮ್ಮ ಮತದಲ್ಲಿ ಆಶ್ರಯಭೇದಪ್ರಸಕ್ತಿಯೇ ಇಲ್ಲದಿರುವಾಗ ವ್ಯರ್ಥವಾದ ಶಕ್ತಿಭೇದವನ್ನು ಒಪ್ಪಬೇಕಾದುದಿಲ್ಲವಷ್ಟೆ ?

ಇಂಥ ಆಶಂಕೆ ಸಂಗತವಲ್ಲ ; ಏತಕ್ಕೆಂದರೆ "ಶಕ್ತಗಳು" ಎಂಬ ಪದಕ್ಕೆ "ಶಕ್ತ್ಯಾಶ್ರಯಗಳು" ಎಂಬ ಅರ್ಥವು ಅನಾದಿಯಾದ ವೃದ್ಧಪರಂಪರೆಯಿಂದ ಸಿದ್ಧವಾಗಿರುವುದೇ ಹೊರತು "ಶಕ್ತಿವಿಷಯಗಳು" ಎಂಬ ಅರ್ಥವು ನಿಗಮ, ನಿರುಕ್ತ, ವ್ಯಾಕರಣ, ಕೋಶ ಮುಂತಾದ ಯಾವ ಪ್ರಮಾಣಗಳಿಂದಲೂ ಸಿದ್ಧವಾಗಿಲ್ಲ. "ವಹ್ನಿರ್ದಾಹೇ ಶಕ್ತಃ, ಜಲಂ ಸೇಚನೇ ಶಕ್ತಂ" ಎಂದು ಪ್ರತ್ಯೇಕವಾಗಿ ಶಕ್ತ್ಯಾಶ್ರಯತ್ವವ್ಯವಹಾರವು ಲೋಕದಲ್ಲಿ ಅನಾದಿಕಾಲದಿಂದಲೂ ವಾಡಿಕೆಯಲ್ಲಿ ಬಂದಿರುವಾಗ ಇಂಥ ವ್ಯವಹಾರದ ಸ್ವಾರಸ್ಯಕ್ಕೆ ಬಾಧೆಯನ್ನು ಹೇಳುವುದು ವಿವೇಚಕರಿಗೆ ಉಚಿತವಲ್ಲ.

## ೧೧೪೩. ಬ್ರಹ್ಮನಿಷ್ಠಾಯಾ ಅಪಿ ಶಕ್ತೇರುಪಾದಾನತ್ವಾನುಪಪತ್ತಿಃ.

ಪೂಜ್ಯರೆ! ಹಾಗಾದರೆ ಉಕ್ತರೀತಿಯಲ್ಲಿ ಬ್ರಹ್ಮವ್ಯತಿರಿಕ್ತವಸ್ತುಗಳೂ ಶಕ್ತಿಗೆ ಆಶ್ರಯಗಳಾಗಿರಲಿ ; ಹಾಗಿದ್ದರೂ ಬ್ರಹ್ಮಗತವಾದ ಶಕ್ತಿ ಇತರ

ಶಕ್ತಿಗಳಿಗಿಂತಲೂ ಅತ್ಯಂತವಿಲಕ್ಷಣವಾದುದರಿಂದ ಇಂಥ ಬ್ರಹ್ಮಶಕ್ತಿಗೆ ಪ್ರಾಧಾನ್ಯವೂ ಉಪಾದಾನತ್ವಾದಿಗಳೂ ಸಂಭವಿಸಬಹುದಲ್ಲವೆ ?

ಇಲ್ಲ ; ಇತರಸಮಸ್ತಶಕ್ತಿಗಳಿಗಿಂತಲೂ ಬ್ರಹ್ಮಶಕ್ತಿಗೆ ಅತ್ಯಂತವೈಲಕ್ಷಣ್ಯವು ಸಂಭವಿಸಿದರೂ ಪ್ರಾಧಾನ್ಯವು ಸಂಭವಿಸುವುದಿಲ್ಲ. "**ಬ್ರಹ್ಮದ ಶಕ್ತಿ**" ಎಂದು ವ್ಯವಹಾರವಿರುವುದೇ ಹೊರತು "**ಶಕ್ತಿಯು ಬ್ರಹ್ಮವು**" ಎಂದು ವ್ಯವಹಾರವಿಲ್ಲ. ಆದುದರಿಂದ "**ಪರಸ್ಯ ಬ್ರಹ್ಮಣಃ ಶಕ್ತಿಃ**" ಎಂಬುದಾಗಿ ಪರಬ್ರಹ್ಮಕ್ಕೆ ವಿಶೇಷಣವಾಗಿಯೇ ಶಾಸ್ತ್ರಗಳಲ್ಲಿ ಅವಗತವಾಗಿರುವ ಈ ಶಕ್ತಿಗೆ ಇತರವೈಲಕ್ಷಣ್ಯವಿದ್ದಮಾತ್ರಕ್ಕೆ ಬ್ರಹ್ಮಾಪೇಕ್ಷಯಾ (ಬ್ರಹ್ಮಕ್ಕಿಂತಲೂ) ಪ್ರಾಧಾನ್ಯವು ಹೇಗೆ ಸಂಭವಿಸೀತು ? ಬ್ರಹ್ಮಾಪೇಕ್ಷಯಾ ಪ್ರಾಧಾನ್ಯವನ್ನು, ಅಥವಾ ಬ್ರಹ್ಮಸಾಮ್ಯವನ್ನು ಬೋಧಿಸತಕ್ಕ ವಚನಗಳು ಎಲ್ಲಿಯಾದರೂ ಕಂಡುಬರುವುವಾದರೆ ಅಂಥ ವಚನಗಳು ಶಕ್ತಿಯ ಪ್ರಶಂಸೆಗೋಸ್ಕರ ಬಂದಿರುವುವೇ ಹೊರತು ವಸ್ತುಸ್ಥಿತಿಯನ್ನು ಬೋಧಿಸುವುದಕ್ಕಾಗಿ ಬಂದುವಲ್ಲವೆಂದು ಉಪಪತ್ತಿಯನ್ನು ಹೇಳಬಹುದು. "**ಪರಸ್ಯ ಬ್ರಹ್ಮಣಃ ಶಕ್ತಿಃ**" ಎಂಬ ಉತ್ಪತ್ತಿವಾಕ್ಯರೂಪವಾದ ಧರ್ಮಿಗ್ರಾಹಕಪ್ರಮಾಣದಿಂದ ಬ್ರಹ್ಮವಿಶೇಷಣತ್ವವೇ ಶಕ್ತಿಗೆ ಅವಗತವಾಗಿರುವಾಗ ಉತ್ಪನ್ನವಾಕ್ಯರೂಪವಾದ ಇತರವಚನಗಳಿಂದ ಇದಕ್ಕೆ ವಿರುದ್ಧವಾಗಿ ಪ್ರಾಧಾನ್ಯವನ್ನಾಗಲಿ ಬ್ರಹ್ಮಸಮತ್ವವನ್ನಾಗಲಿ ಹೇಗೆ ಬೋಧಿಸಲಾದೀತು ? ಬ್ರಹ್ಮಾಪೇಕ್ಷಯಾ ಆಧಿಕ್ಯವನ್ನು ಬೋಧಿಸುವ ವಚನಗಳಾದರೆ ಶಾಸ್ತ್ರಗಳಲ್ಲಿ ಎಲ್ಲಿಯೂ ಇಲ್ಲವೇ ಇಲ್ಲ. ಆದಕಾರಣ ಶಕ್ತಿಪ್ರಾಧಾನ್ಯವಾದವು ಸುತರಾಂ ಸಂಗತವಲ್ಲ.

**ರುದ್ರಯಾಮಳವೇ** ಮೊದಲಾದ ತಂತ್ರಗ್ರಂಥಗಳಾದರೆ ವೇದಾಂತಸೂತ್ರಾಂತರ್ಗತವಾದ ಪಾಶುಪತಾಧಿಕರಣದಿಂದಲೇ ನಿರಾಕರಿಸಲ್ಪಟ್ಟಿರುವುವು.

## ೧೧೪೪ ಶಕ್ತ್ಯಭೇದವಾದಸ್ಯ ಸಂವಿದದ್ವೈತವಾದ ಸಮಾನದೋಷಭಾಗಿತ್ವಂ.

ಮತ್ತು ನಿಮ್ಮ ಮತರೀತಿಯಾಗಿ ಆನಂದಶಬ್ದವಾಚ್ಯವಾದ ಈ ಶಕ್ತಿಗೆ ಸರ್ವಜೀವರುಗಳಿಂದಲೂ ಅನುಭವಿಸಲ್ಪಡುತ್ತಿರುವ ವಿಷಯಾನಂದದೊಡನೆ ಅಭೇದವನ್ನು ಅಂಗೀಕರಿಸಿ ಸ್ವರೂಪಭೇದವನ್ನೂ ನಿರಾಕರಿಸಿಬಿಟ್ಟರೆ—ಜ್ಞಾನಸ್ವರೂಪದಲ್ಲಿ ಭೇದವನ್ನು ಒಪ್ಪದಿರುವ ಮಿಥ್ಯಾವಾದಿಗಳ ಮತದಲ್ಲಿ ಆಪಾದಿತಗಳಾಗುವ ದೋಷಗಳೆಲ್ಲವೂ ಇಲ್ಲಿಯೂ ಪ್ರಸಕ್ತಗಳಾಗುವುವು. ಜ್ಞಾನಸ್ವರೂಪದಲ್ಲಿ ಭೇದವಿಲ್ಲದಿದ್ದರೆ ಚೈತ್ರನ ಜ್ಞಾನದಲ್ಲಿ ಅನುಭೂತಗಳಾದ ಸುಖದುಃಖಗಳಿಗೆಲ್ಲಾ

ಮೈತ್ರನ ಜ್ಞಾನದಲ್ಲಿಯೂ ಪ್ರತಿಸಂಧಾನವು (ಅನುಭವವು) ಆವಶ್ಯಕವಾಗುವು ದಾದುದರಿಂದ ಭೋಗಸಾಂಕರ್ಯವೇ ಮೊದಲಾದ ದೋಷಗಳು ಹೇಗೆ ಪ್ರಸಕ್ತ ಗಳಾಗುವುವೋ, ಅದರಂತೆ ಶಕ್ತಿಸ್ವರೂಪದಲ್ಲಿ ಭೇದವನ್ನು ಒಪ್ಪದಿದ್ದರೆ ಅಗ್ನಿ ಯಿಂದ ಆಗುವ ದಹನಕಾರ್ಯವು ಜಲದಿಂದಲೂ ಆಗಬೇಕು ; ಜಲದಿಂದ ಅದು ಆಗ ದಿದ್ದರೆ ಅಗ್ನಿಯಿಂದಲೂ ಆಗಕೂಡದು ; ಶಕ್ತಿ ಎರಡರಲ್ಲಿಯೂ ಒಂದೇ ಆಗಿರುವು ದಷ್ಟೆ ? ಮತ್ತು ಜಲದಿಂದ ಆಗುವ ಸೇಚನಕಾರ್ಯವು ಅಗ್ನಿಯಿಂದಲೂ ಆಗಬೇಕು ; ಅಗ್ನಿಯಿಂದ ಅದು ಆಗದಿದ್ದರೆ ಜಲದಿಂದಲೂ ಆಗಕೂಡದು ; ಶಕ್ತಿ ಎರಡರಲ್ಲಿಯೂ ಒಂದೇ ಆಗಿರುವುದಷ್ಟೆ ? ಶೈವಮತದವರಿಗೆ ಅಭಿಮತವಾದ ಶಕ್ತಿಸ್ವರೂಪವು ಹೀಗೆ ಉಕ್ತರೀತಿಯಲ್ಲಿ ಅನೇಕದೋಷಗ್ರಸ್ತವಾದುದರಿಂದ ಪ್ರಾಮಾಣಿಕರಾದ ವರಿಗೆ ಅಭಿಮತವಾಗದು. ಆದಕಾರಣ ಪ್ರಮಾಣಶರಣರಾದವರು ಶಕ್ತಿಸ್ವರೂಪ ವನ್ನು ನಾವು ತೋರಿಸಿದಂತೆಯೇ ಒಪ್ಪಬೇಕು.

## ೧೧೪೫ ಶಕ್ತೇರ್ದ್ರವ್ಯಮಾತ್ರನಿಷ್ಠತ್ವಂ ದ್ರವ್ಯಾದ್ರವ್ಯೋಭಯ ನಿಷ್ಠತ್ವಂ ಚೇತಿ ಪಕ್ಷದ್ವಯಂ.

ಇಂಥ ಶಕ್ತಿ ದ್ರವ್ಯಗಳಲ್ಲಿ ಮಾತ್ರವೇ ಇರುವುದೆಂದೂ, ದ್ರವ್ಯಾದ್ರವ್ಯ ಗಳೆರಡರಲ್ಲಿಯೂ ಇರುವುದೆಂದೂ ಎರಡುಬಗೆಯಾದ ವಾದಗಳು ಪೂರ್ವಾಚಾರ್ಯರ ಗ್ರಂಥಗಳಲ್ಲಿ ಕಂಡುಬರುವುವು. ಹೇಗೆಂದರೆ, ಆತ್ಮಸಿದ್ಧಿಗ್ರಂಥದಲ್ಲಿ—“**ಸರ್ವ ದ್ರವ್ಯೇಷು ತತ್ಕಾರ್ಯಸಮಧಿಗಮ್ಯಃ ತತ್ಪ್ರತಿಯೋಗಿಶಕ್ತ್ಯಾಖ್ಯೋ ಗುಣಃ ಸಾಧಾರಣಃ**” (ಸಮಸ್ತದ್ರವ್ಯಗಳಲ್ಲಿಯೂ ಅವುಗಳ ಫಲರೂಪವಾದ ಕಾರ್ಯಬಲದಿಂದ ಕಲ್ಪನೀಯವಾಗಿಯೂ ಕಾರ್ಯವಿಷಯಕವಾಗಿಯೂ ಇರುವ ಶಕ್ತಿ ಯೆಂಬ ಒಂದಾನೊಂದು ಗುಣವು ಸಾಧಾರಣವಾಗಿ ಇದ್ದೇ ಇರುವುದು.) ಎಂದು **ಶ್ರೀಯಾಮುನಾರ್ಯರ** ಸೂಕ್ತಿಯಿರುವುದು ; ಈ ಸೂಕ್ತಿಯಲ್ಲಿ “**ಸರ್ವ ದ್ರವ್ಯೇಷು**” ಎಂಬ ಸ್ಥಳದಲ್ಲಿ “**ಸರ್ವದ್ರವ್ಯೇಷ್ವೇವ**” ಎಂಬುದಾಗಿ ಒಂದು ಏವಕಾರವನ್ನು ಸೇರಿಸಿ ದ್ರವ್ಯಗಳಲ್ಲಿ ಮಾತ್ರವೇ ಶಕ್ತಿ ಇರುವುದೆಂದು ಕೆಲವರು ವ್ಯಾಖ್ಯಾನಮಾಡುವರು ;

ಇನ್ನು ಕೆಲವರು ಏವಕಾರವನ್ನು ದ್ರವ್ಯಪದದೊಡನೆ ಸೇರಿಸದೆ “**ಸರ್ವ ದ್ರವ್ಯೇಷು ಅಸ್ತ್ಯೇವ**” ಎಂದು ಕ್ರಿಯಾಪದದೊಡನೆ ಸೇರಿಸಿ “ಸಮಸ್ತದ್ರವ್ಯ ಗಳಲ್ಲಿಯೂ ಶಕ್ತಿ ಇಲ್ಲವೆಂಬುದಿಲ್ಲ ಇದ್ದೇ ಇರುವುದು ; ಆದರೆ ಅದ್ರವ್ಯಗಳಲ್ಲಿಯೂ ಇರುವುದು” ಎಂದು ವ್ಯಾಖ್ಯಾನಮಾಡುವರು. ಆದುದರಿಂದಲೇ **ವರದವಿಷ್ಣು**

ಮಿಶ್ರಾಚಾರ್ಯರು—" ಶಕ್ತೇರ್ಗುಣತ್ವೇಽಪಿ ಗುಣಕರ್ಮಣೋಸ್ತತ್ಸಂಭವಃ" (ಶಕ್ತಿಯೆಂಬುದು ಯದ್ಯಪಿ ದ್ರವ್ಯಗತವಾದ ಗುಣವೇ ಹವುದು ; ಆದರೂ ಇತರ ಗುಣಗಳಲ್ಲಿಯೂ ಕರ್ಮದಲ್ಲಿಯೂ ಈ ಶಕ್ತಿ ಸಂಭವಿಸಬಹುದು.) ಎಂದು ಅಪ್ಪಣೆ ಕೊಡಿಸಿರುವರು.

## ೧೧೪೬. ಶಕ್ತೇರ್ದ್ರವ್ಯಮಾತ್ರನಿಷ್ಠತ್ವೇಽಪಿ ಗುಣಾದೀನಾಂ ಶಕ್ತತ್ವವ್ಯವಹಾರೋಪಪತ್ತಿಪ್ರದರ್ಶನಂ

ಈ ಎರಡು ಪಕ್ಷಗಳೊಳಗೆ ಮೊದಲನೆಯ ಪಕ್ಷದಲ್ಲಿ ರೂಪ-ರಸ ಮುಂತಾದ ಅದ್ರವ್ಯಗಳೊಳಗೆ ಸಾಕ್ಷಾತ್ತಾಗಿ ಶಕ್ತಿ ಇಲ್ಲದಿದ್ದರೂ—ಶಕ್ತ್ಯಾಶ್ರಯವಾದ ದ್ರವ್ಯವನ್ನೇ ರೂಪರಸಾದಿಗಳೂ ಆಶ್ರಯಿಸಿಕೊಂಡಿರುವುವಾದಪ್ರಯುಕ್ತ ಸಾಮಾನಾಧಿಕರಣ್ಯಬಲದಿಂದಲೇ "ರೂಪಂ ಚಾಕ್ಷುಷೇ ಶಕ್ತಂ, ರಸೋ ರಾಸನೇ ಶಕ್ತಃ" (ರೂಪವು ಚಕ್ಷುರಿಂದ್ರಿಯಜನ್ಯವಾದ ಪ್ರತ್ಯಕ್ಷವನ್ನು ಉಂಟುಮಾಡುವುದರಲ್ಲಿ ಸಮರ್ಥವಾದುದು; ರಸವು ರಸನೇಂದ್ರಿಯಜನ್ಯವಾದ ಪ್ರತ್ಯಕ್ಷವನ್ನು ಉಂಟುಮಾಡುವುದರಲ್ಲಿ ಸಮರ್ಥವಾದುದು.) ಎಂಬುದಾಗಿ ರೂಪರಸಾದಿಗಳಿಗೂ ಶಕ್ತತ್ವವ್ಯವಹಾರವು ನಿರರ್ಗಳವಾಗಿ ಬರಬಹುದು. ಶಕ್ತಪದಕ್ಕೆ ಶಕ್ತಿವಿಶಿಷ್ಟವೆಂದು ಅರ್ಥವಾಗುವುದಾದರೆ ರೂಪರಸಾದಿಗಳು ಆಶ್ರಯತ್ವಸಂಬಂಧದಿಂದ ಶಕ್ತಿವಿಶಿಷ್ಟಗಳಲ್ಲವಾದರೂ ಸಾಮಾನಾಧಿಕರಣ್ಯಸಂಬಂಧದಿಂದ ಶಕ್ತಿವಿಶಿಷ್ಟಗಳಾಗಬಹುದಲ್ಲವೆ? ಎರಡನೆಯ ಪಕ್ಷದಲ್ಲಿ ರೂಪರಸಾದಿಗಳಲ್ಲಿಯೂ ಸಾಕ್ಷಾತ್ತಾಗಿ ಶಕ್ತಿ ಇದ್ದೇ ಇರುವುದರಿಂದ ಶಕ್ತತ್ವವ್ಯವಹಾರಕ್ಕೆ ಯಾವ ತೊಂದರೆಯೂ ಇಲ್ಲ.

## ೧೧೪೭. ಶಕ್ತೇರತಿರಿಕ್ತಪದಾರ್ಥತ್ವೇ ಭಾಷ್ಯಕಾರಸಂಮತಿಃ

ಹೀಗೆ ಉಕ್ತರೀತಿಯಲ್ಲಿ ಶಕ್ತಿಯೆಂಬುದು ದ್ರವ್ಯಮಾತ್ರದಲ್ಲಿಯೇ ಇರಲಿ; ಅಥವಾ ದ್ರವ್ಯಾದ್ರವ್ಯಗಳೆರಡರಲ್ಲಿಯೂ ಇರಲಿ; ಇದರ ಸ್ಥಿತಿವಿಚಾರವು ಹೇಗಿದ್ದರೂ ಶಕ್ತಿಯೆಂಬುದೊಂದು ಅತಿರಿಕ್ತಪದಾರ್ಥವುಂಟೆಂಬುದು ಅಬಾಧಿತವಾಗಿ ನಡೆದುಬರುತ್ತಿರುವ ಅನಾದಿಸಂಪ್ರದಾಯದಿಂದ ಸಿದ್ಧವಾಗಿರುವುದೆಂಬ ವಿಷಯದಲ್ಲಿ ವಿವಾದವಿಲ್ಲ. ಭಾಷ್ಯಕಾರರೂ ಸಹ ಶಾರೀರಕದರ್ಶನದ ಎರಡನೆಯ ಅಧ್ಯಾಯದ ಪ್ರಥಮಪಾದದೊಳಗೆ "ನ ತು ದೃಷ್ಟಾಂತಭಾವಾತ್" ಎಂಬ ಒಂಬತ್ತನೆಯ ಸೂತ್ರದ ಭಾಷ್ಯದಲ್ಲಿ ಶರೀರಲಕ್ಷಣವನ್ನು ನಿರೂಪಿಸುವ ಸಂದರ್ಭದಲ್ಲಿ "ಅಗ್ನ್ಯಾದೇಃ ಶಕ್ತಿಪ್ರತಿಬಂಧಾದೌಷ್ಣ್ಯಾದ್ಯದರ್ಶನವತ್" (ಅಗ್ನಿ ಮುಂತಾದ ವಸ್ತುಗಳಲ್ಲಿ ಮಣಿಮಂತ್ರಾದಿಗಳಿಂದ ಶಕ್ತಿ ಪ್ರತಿಬದ್ಧವಾದುದಾದರೆ

(ಕುಂಠಿತವಾದುದಾದರೆ) ಔಷ್ಣ್ಯವೇ ಮೊದಲಾದ ಗುಣಗಳು ಪ್ರಕಾಶಕ್ಕೆ ಬರುವುದಿಲ್ಲ) ಎಂಬ ಸೂಕ್ತಿಯಿಂದ ಶಕ್ತಿಸದ್ಭಾವವನ್ನು ತೋರಿಸಿರುವರು.

## ೧೧೪೪ ಅವಿದ್ಯಾಖ್ಯಕರ್ಮ-ಜೀವ-ಜಗದಾದೌ ಶಕ್ತಿಶಬ್ದಪ್ರಯೋಗಸ್ಯೌಪಚಾರಿಕತ್ವಂ.

೧. ಪೂಜ್ಯರೆ! ಶಕ್ತಿಯೆಂಬುದು ಅತಿರಿಕ್ತಪದಾರ್ಥವೆಂದು ಹೇಳುತ್ತೀರಿ; ಆದರೆ ಇದು ಸಂಗತವಾಗಿ ಕಾಣುವುದಿಲ್ಲ; ಏತಕ್ಕೆಂದರೆ—ಶ್ರೀಭಾಷ್ಯಕಾರರು—"ವೈಷಮ್ಯನೈರ್ಘೃಣ್ಯೇ ನ ಸಾಪೇಕ್ಷತ್ವಾತ್ತಥಾ ಹಿ ದರ್ಶಯತಿ" (೨—೧—೩೪) ಎಂಬ ವೇದಾಂತಸೂತ್ರದ ಭಾಷ್ಯದಲ್ಲಿ—

"ನಿಮಿತ್ತಮಾತ್ರಮೇವಾಸೌ ಸೃಜ್ಯಾನಾಂ ಸರ್ಗಕರ್ಮಣಿ ।
ಪ್ರಧಾನಕಾರಣೀಭೂತಾ ಯತೋ ವೈ ಸೃಜ್ಯಶಕ್ತಯಃ ॥
ನಿಮಿತ್ತಮಾತ್ರಂ ಮುಕ್ತ್ವೈವ ನಾನ್ಯತ್ಕಿಂಚಿದಪೇಕ್ಷತೇ ।
ನೀಯತೇ ತಪತಾಂ ಶ್ರೇಷ್ಠ ಸ್ವಶಕ್ತ್ಯಾ ವಸ್ತು ವಸ್ತುತಾಂ ॥"

ಎಂಬ ವಿಷ್ಣುಪುರಾಣವಚನಗಳನ್ನು ಉದಾಹರಿಸಿ—"ಸ್ವಶಕ್ತ್ಯಾ-ಸ್ವಕರ್ಮಣೈವ ದೇವಾದಿವಸ್ತುತಾಪ್ರಾಪ್ತಿರಿತಿ" ಎಂಬ ಭಾಷ್ಯಗ್ರಂಥದಿಂದ ಪುಣ್ಯಪಾಪರೂಪವಾದ ಕರ್ಮಗಳಿಗೆ ಜೀವಶಕ್ತಿತ್ವವನ್ನು ಸ್ಪಷ್ಟವಾಗಿ ತೋರಿಸಿರುವರು;

ಈ ವಚನಗಳ ಅರ್ಥವೇನೆಂದರೆ—ತಪತಾಂ ಶ್ರೇಷ್ಠ! ತಪಸ್ವಿಗಳೊಳಗೆ ಶ್ರೇಷ್ಠನಾದ ಓ ಮೈತ್ರೇಯನೆ! ಯತಃ—ಯಾವ ಕಾರಣದಿಂದ, ಸೃಜ್ಯಾನಾಂ—ಸೃಷ್ಟಿಗೆ ವಿಷಯಭೂತರಾಗಿರುವ ಚೇತನರ,—ಸರ್ಗಕರ್ಮಣಿ—ದೇವಾದಿವಿಷಮಸೃಷ್ಟಿವ್ಯಾಪಾರದಲ್ಲಿ, ಸೃಜ್ಯಶಕ್ತಯಃ—ಸೃಷ್ಟಿವಿಷಯಭೂತರಾದ ಬದ್ಧಚೇತನರ ಪುಣ್ಯಪಾಪರೂಪವಾದ ಕರ್ಮಗಳೆಂಬ ಶಕ್ತಿಗಳೇ, ಪ್ರಧಾನಕಾರಣೀಭೂತಾಃ—ಮುಖ್ಯಕಾರಣಗಳಾಗಿರುವುವೋ, (ಅಸಾಧಾರಣಕಾರಣಗಳಾಗಿರುವುವೋ) ಅತಃ—ಆದುದರಿಂದಲೇ, ಅಸೌ—ಈ ಪರಮಾತ್ಮನು, (ಬದ್ಧಚೇತನರ ವಿಷಮಸೃಷ್ಟಿಕೆಲಸದಲ್ಲಿ) ನಿಮಿತ್ತಮಾತ್ರಮೇವ—ಅಮುಖ್ಯಕಾರಣವಾಗಿರುವನು (ಸಾಧಾರಣಕಾರಣವಾಗಿರುವನು) ಅಷ್ಟೇ ಅಲ್ಲದೆ ಅಸಾಧಾರಣಕಾರಣವಾಗನು, ವಸ್ತು—ಬದ್ಧಜೀವತತ್ತ್ವವು (ದೇವತ್ವ-ಮನುಷ್ಯತ್ವಾದಿವಿಷಮಧರ್ಮಪ್ರಾಪ್ತಿವಿಷಯದಲ್ಲಿ), ನಿಮಿತ್ತಮಾತ್ರಮೇವ ಮುಕ್ತ್ವಾ—ಪರಮಾತ್ಮನೆಂಬ ಸಾಧಾರಣಕಾರಣವೊಂದನ್ನು ಬಿಟ್ಟು, ಅನ್ಯತ್ಕಿಂಚಿತ್—ಬೇರೆ ಯಾವುದೊಂದನ್ನೂ ನಾಪೇಕ್ಷತೇ-ಬಯಸುವುದಿಲ್ಲ, ಸ್ವಶಕ್ತ್ಯಾ-ಪುಣ್ಯಪಾಪರೂಪವಾದ ತನ್ನ ಶಕ್ತಿಯಿಂದಲೇ,

ವಸ್ತುತಾಂ-ದೇವಮನುಷ್ಯಾದಿಭಾವವನ್ನು (ದೇವತ್ವಮನುಷ್ಯತ್ವಾದಿವಿಷಮಭಾವ ವನ್ನು) ನೀಯತೇ—(ಈ ಬದ್ಧಜೀವವಸ್ತು) ಹೊಂದಿಸಲ್ಪಡುತ್ತದೆ.

ಈ ಅಭಿಪ್ರಾಯದಿಂದಲೇ—"ದೇವಾದಿವೈಚಿತ್ರ್ಯಹೇತುಃ ಸೃಜ್ಯಮಾನಾನಾಂ ಕ್ಷೇತ್ರಜ್ಞಾನಾಂ ಪ್ರಾಚೀನಕರ್ಮಶಕ್ತಿರೇವೇತ್ಯುಕ್ತಂ" (ದೇವತ್ವ-ಮನುಷ್ಯತ್ವಾದಿವೈಷಮ್ಯಕ್ಕೆ ಹೇತು—ಸೃಷ್ಟಿವಿಷಯಭೂತರಾದ ಕ್ಷೇತ್ರಜ್ಞರ ಪ್ರಾಚೀನಕರ್ಮಶಕ್ತಿಯೇ ಎಂದು ಹೇಳಲ್ಪಟ್ಟಿರುವುದು) ಎಂಬ ಭಾಷ್ಯಗ್ರಂಥದಲ್ಲಿ ಶಕ್ತಿಶಬ್ದವನ್ನು ಪುಣ್ಯಪಾಪಕರ್ಮಗಳಲ್ಲಿ ಪ್ರಯೋಗಿಸಿರುವರು; ಹೀಗಿರುವಲ್ಲಿ ಶಕ್ತಿಯೆಂಬ ಅತಿರಿಕ್ತಪದಾರ್ಥವನ್ನು ಅಂಗೀಕರಿಸುವಿಕೆ ಈ ಭಾಷ್ಯಗ್ರಂಥಕ್ಕೆ ವಿರುದ್ಧವಾಗಿರುವುದು.

೨. ಮತ್ತು—"ತದಧಿಗಮ ಉತ್ತರಪೂರ್ವಾಘಯೋರಶ್ಲೇಷವಿನಾಶೌ ತದ್ವ್ಯಪದೇಶಾತ್" (೪—೧—೧೩) ಎಂಬ ಸೂತ್ರದ ಭಾಷ್ಯದಲ್ಲಿ—"ಅಘಸ್ಯ ವಿನಾಶಕರಣಂ-ಉತ್ಪನ್ನಾಯಾಸ್ತಚ್ಛಕ್ತೇರ್ವಿನಾಶಕರಣಂ, ಶಕ್ತಿರಪಿ ಪರಮಪುರುಷಾಪ್ರೀತಿರೇವ" (ಪಾಪದ ನಾಶಕರಣವೆಂಬುದು ಉತ್ಪನ್ನವಾದ ಕರ್ಮಶಕ್ತಿಯನ್ನು ವಿನಾಶಗೊಳಿಸುವಿಕೆಯೇ, ಪಾಪಕರ್ಮಶಕ್ತಿಯೆಂಬುದೂ ಪರಮಪುರುಷನ ಅಪ್ರೀತಿಯೇ,) ಎಂಬ ಭಾಷ್ಯಗ್ರಂಥದಲ್ಲಿ ಪರಮಪುರುಷನ ಪ್ರೀತ್ಯಪ್ರೀತಿಗಳಲ್ಲಿ ಕರ್ಮಶಕ್ತಿತ್ವವನ್ನು ವಿವಕ್ಷಿಸಿ ಶಕ್ತಿಶಬ್ದವನ್ನು ಪ್ರಯೋಗಿಸಿರುವರು; ಹೀಗಿರುವಲ್ಲಿ ಶಕ್ತಿಯೆಂಬ ಅತಿರಿಕ್ತಪದಾರ್ಥವನ್ನು ಅಂಗೀಕರಿಸುವಿಕೆ ಈ ಭಾಷ್ಯಗ್ರಂಥಕ್ಕೆ ವಿರುದ್ಧವಾಗಿರುವುದು.

೩. ಮತ್ತು—ಶ್ರೀಮದ್ವಿಷ್ಣುಪುರಾಣದಲ್ಲಿ—

"ವಿಷ್ಣುಶಕ್ತಿಃ ಪರಾ ಪ್ರೋಕ್ತಾ ಕ್ಷೇತ್ರಜ್ಞಾಖ್ಯಾ ತಥಾಽಪರಾ ।
ಅವಿದ್ಯಾ ಕರ್ಮಸಂಜ್ಞಾಽನ್ಯಾ ತೃತೀಯಾ ಶಕ್ತಿರಿಷ್ಯತೇ ॥೧॥
ಯಯಾ ಕ್ಷೇತ್ರಜ್ಞಶಕ್ತಿಸ್ಸಾ ವೇಷ್ಟಿತಾ ನೃಪ ಸರ್ವಗಾ ।
ಸಂಸಾರತಾಪಾನಖಿಲಾನವಾಪ್ನೋತ್ಯತಿಸಂತತಾನ್ ॥೨॥
ತಯಾ ತಿರೋಹಿತತ್ವಾಚ್ಚ ಶಕ್ತಿಃ ಕ್ಷೇತ್ರಜ್ಞಸಂಜ್ಞಿತಾ ।
ಸರ್ವಭೂತೇಷು ಭೂಪಾಲ ತಾರತಮ್ಯೇನ ವರ್ತತೇ ॥೩॥
ಸಮಸ್ತಾಶ್ಶಕ್ತಯಶ್ಚೈತಾ ನೃಪ ಯತ್ರ ಪ್ರತಿಷ್ಠಿತಾಃ ।
ತದ್ವಿಶ್ವರೂಪವೈರೂಪ್ಯಂ ರೂಪಮನ್ಯದ್ಧರೇರ್ಮಹತ್ ॥೪॥
ಏಕದೇಶಸ್ಥಿತಸ್ಯಾಗ್ನೇಃ ಜ್ಯೋತ್ಸ್ನಾ ವಿಸ್ತಾರಿಣೀ ಯಥಾ ।
ಪರಸ್ಯ ಬ್ರಹ್ಮಣಃ ಶಕ್ತಿಸ್ತಥೇದಮಖಿಲಂ ಜಗತ್ ॥" ॥೫॥

ಎಂಬುವೇ ಮೊದಲಾದ ವಚನಗಳೊಳಗೆ ಅಪೃಥಕ್ಸಿದ್ಧವಿಶೇಷಣಗಳಲ್ಲಿ ಶಕ್ತಿಶಬ್ದವು ಪ್ರಯೋಗಿಸಲ್ಪಟ್ಟಿರುವುದು.

೧. ಈ ವಚನಗಳ ಅರ್ಥವೇನೆಂದರೆ—ಪರಶಕ್ತಿಯೆಂದೂ, ಅಪರಶಕ್ತಿಯೆಂದೂ, ಅವಿದ್ಯಾಶಕ್ತಿಯೆಂದೂ ಪರಮಾತ್ಮನಿಗೆ ಮೂರು ಶಕ್ತಿಗಳುಂಟು; ಅವುಗಳೊಳಗೆ ಪ್ರಕೃತಿವಿನಿರ್ಮುಕ್ತವಾದ ಶುದ್ಧಾತ್ಮಸ್ವರೂಪವೇ ಪರಮಾತ್ಮನಾದ ಶ್ರೀ ಮಹಾವಿಷ್ಣುವಿನ ಪರಶಕ್ತಿಯೆನಿಸಿಕೊಳ್ಳುವುದು ; ಪ್ರಕೃತಿಸಂಯುಕ್ತನಾದ ಕ್ಷೇತ್ರಜ್ಞನೆಂಬ ಬದ್ಧಜೀವಸ್ವರೂಪವೇ ವಿಷ್ಣುವಿನ ಅಪರಶಕ್ತಿಯೆನಿಸಿಕೊಳ್ಳುವುದು; ಕರ್ಮವೆಂಬ ಹೆಸರನ್ನು ಪಡೆದಿರುವ ಮೂರನೆಯ ಶಕ್ತಿಯೇ ಮಹಾವಿಷ್ಣುವಿನ ಅವಿದ್ಯಾಶಕ್ತಿಯಾಗಿರುವುದು.

೨. ಓ ರಾಜನೆ! ಜ್ಞಾನದ ಮೂಲಕ ಸರ್ವವನ್ನೂ ವ್ಯಾಪಿಸುವುದಕ್ಕೆ ಅರ್ಹವಾಗಿರುವ ಆ ಕ್ಷೇತ್ರಜ್ಞಶಕ್ತಿ ಕರ್ಮವೆಂಬ ಈ ಅವಿದ್ಯಾಶಕ್ತಿಯಿಂದಲೇ ಆವರಿಸಲ್ಪಟ್ಟುದಾಗಿ ಜ್ಞಾನಸಂಕೋಚವನ್ನು ಪಡೆದು ನಿರಂತರವಾಗಿ ಬರುತ್ತಿರುವ ಸಾಂಸಾರಿಕದುಃಖಗಳಿಗೆ ಗುರಿಯಾಗುತ್ತಿರುವುದು.

೩. ಓ ರಾಜನೆ! ಹೀಗೆ ಆ ಕ್ಷೇತ್ರಜ್ಞಶಕ್ತಿ ಕರ್ಮವೆಂಬ ಅವಿದ್ಯಾಶಕ್ತಿಯಿಂದ ಆವರಿಸಲ್ಪಟ್ಟುದಾಗಿರುವುದರಿಂದಲೇ ಕರ್ಮತಾರತಮ್ಯಕ್ಕೆ ಅನುಗುಣವಾದ ಜ್ಞಾನತಾರತಮ್ಯವನ್ನು ಪಡೆದು ದೇವ, ಮನುಷ್ಯ, ತಿರ್ಯಕ್, ಸ್ಥಾವರಗಳೆಂಬ ನಾಲ್ಕುಬಗೆಯ ಶರೀರಗಳಲ್ಲಿಯೂ ಜ್ಞಾನಸಂಕೋಚವಿಕಾಸಗಳ ತಾರತಮ್ಯದೊಡನೆಯೇ ಪ್ರವೇಶಿಸಿ ನಿಲ್ಲುವುದು.

೪. ಓ ರಾಜನೆ! ಪೂರ್ವಶ್ಲೋಕೋಕ್ತಗಳಾದ ಈ ಮೂರು ಶಕ್ತಿಗಳೂ ಯಾವುದರಲ್ಲಿ ಸುಪ್ರತಿಷ್ಠಿತಗಳಾಗಿರುವುವೋ, ಉಳಿದ ಸಮಸ್ತರೂಪಗಳಿಗಿಂತಲೂ ಅತ್ಯಂತವಿಲಕ್ಷಣವಾಗಿರುವ ಅಪರಿಚ್ಛಿನ್ನವಾದ ಅಂಥ ದಿವ್ಯಮಂಗಳ ವಿಗ್ರಹವೆಂಬ ರೂಪವಿಶೇಷವು ಪರಮಾತ್ಮನ ಮತ್ತೊಂದು ಶಕ್ತಿಯಾಗಿರುವುದು.

೫. ಧರ್ಮಿಯಾದ ಅಗ್ನಿ ಒಂದು ಪ್ರದೇಶದಲ್ಲಿದ್ದರೂ ಅದರ ಧರ್ಮವಾದ (ಅಪೃಥಕ್ಸಿದ್ಧವಿಶೇಷಣವಾದ) ಕಿರಣವು ಹೇಗಾದರೆ ಹರಡಿಕೊಳ್ಳುವುದೋ ಎಂದರೆ, ಧರ್ಮಿಯಾದ ವಿಶೇಷ್ಯಕ್ಕೂ ಧರ್ಮವಾದ ವಿಶೇಷಣಕ್ಕೂ ಸ್ವಭಾವವ್ಯವಸ್ಥೆಯೇ ಇರುವುದಲ್ಲದೆ ಸ್ವಭಾವಸಾಂಕರ್ಯವು ಹೇಗೆ ಇಲ್ಲವೋ, ಅದರಂತೆ ಚೇತನಾಚೇತನರೂಪವಾದ ಈ ಸಮಸ್ತಪ್ರಪಂಚವೂ ಪರಮಾತ್ಮನಿಗೆ ಅಪೃಥಕ್ಸಿದ್ಧವಿಶೇಷಣವಾಗಿ ಶಕ್ತಿಯೆನಿಸಿಕೊಂಡಿರುವುದರಿಂದ ಇದರಲ್ಲಿರುವ ವಿಕಾರಾದಿಸ್ವಭಾವಗಳು ವಿಶೇಷ್ಯವಾದ ಪರಮಾತ್ಮಸ್ವರೂಪವನ್ನು ಸಾಕ್ಷಾತ್ತಾಗಿ ಸ್ಪರ್ಶಿಸಲಾರವು.

ಹೀಗೆ ಈ ವಚನಗಳಲ್ಲಿ—ಶುದ್ಧಾತ್ಮಸ್ವರೂಪ, ಬದ್ಧಾತ್ಮಸ್ವರೂಪ, ಕರ್ಮವೆಂಬ ಅವಿದ್ಯೆ, ದಿವ್ಯಮಂಗಳವಿಗ್ರಹ, ಜಗತ್ತು, ಇಷ್ಟು ಪದಾರ್ಥಗಳ ಪರವಾಗಿ ಶಕ್ತಿಶಬ್ದವು ಪ್ರಯೋಗಿಸಲ್ಪಟ್ಟಿರುವುದು. ಹೀಗಿರುವಲ್ಲಿ ಶಕ್ತಿಯೆಂಬ ಅತಿರಿಕ್ತ ಪದಾರ್ಥವನ್ನು ಅಂಗೀಕರಿಸುವಿಕೆ ಇದಕ್ಕೆ ವಿರುದ್ಧವಾಗಿರುವುದು.

೪. ಮತ್ತು—ವೇದಾರ್ಥಸಂಗ್ರಹದಲ್ಲಿ—"ಶಕ್ತಯಸ್ಸರ್ವಭಾವಾನಾಮಚಿಂತ್ಯಜ್ಞಾನಗೋಚರಾಃ" ಎಂಬ ವಿಷ್ಣುಪುರಾಣವಚನವ್ಯಾಖ್ಯಾನ ಸಂದರ್ಭದಲ್ಲಿ—"ಅತೋ ವಿಚಿತ್ರಾನಂತಶಕ್ತಿಯುಕ್ತಂ ಬ್ರಹ್ಮೇತ್ಯರ್ಥಃ" (ಆದುದರಿಂದ ಬ್ರಹ್ಮತತ್ತ್ವವು ಆಶ್ಚರ್ಯಕರವಾದ ಅನಂತಶಕ್ತಿಗಳೊಡನೆ ಕೂಡಿದುದಾಗಿರುವುದೆಂದು ಅರ್ಥವು) ಎಂದು ಹೇಳಿ ಆ ಶಕ್ತಿಗಳ ಸ್ವರೂಪವೆಂಥದೆಂಬುದನ್ನು ವಿಶದಪಡಿಸುವುದಕ್ಕಾಗಿ—"ತದಾಹ—

ಜಗದೇತನ್ಮಹಾಶ್ಚರ್ಯಂ ರೂಪಂ ಯಸ್ಯ ಮಹಾತ್ಮನಃ ।
ತೇನಾಶ್ಚರ್ಯವರೇಣಾಹಂ ಭವತಾ ಕೃಷ್ಣಸಂಗತಃ ॥"

ಎಂಬ ವಚನವನ್ನು ಉದಾಹರಿಸಿರುವರು ;

ಈ ವಚನದ ಅರ್ಥವೇನೆಂದರೆ—ಇದು ಶ್ರೀ ಕೃಷ್ಣನನ್ನು ಕುರಿತು ಅಕ್ರೂರನು ಹೇಳುವ ವಾಕ್ಯವಾಗಿರುವುದು.—ಓ ಕೃಷ್ಣ! ಅತ್ಯಾಶ್ಚರ್ಯಕರವಾದ ಈ ಪ್ರಪಂಚವೆಂಬುದು ಯಾವ ಮಹಾನುಭಾವನ ರೂಪವೆನಿಸಿಕೊಂಡು ಅಪೃಥಕ್ಸಿದ್ಧವಿಶೇಷಣವಾದ ಶಕ್ತಿಯಾಗಿರುವುದೋ ; ಅದಕ್ಕಿಂತಲೂ ಮಿಕ್ಕಿದ ಆಶ್ಚರ್ಯಸ್ವರೂಪನಾದ ಅಂಥ ನಿನ್ನೊಡನೆ ನಾನು ಈಗ ಬಂದು ಸೇರಿದವನಾಗಿರುವೆನು ; ಹದಿನಾಲ್ಕು ಲೋಕಗಳಲ್ಲಿಯೂ ಇರುವ ಅತ್ಯಾಶ್ಚರ್ಯಗಳನ್ನು ಚಿಂತಿಸಿ ಮರುಳಾಗಿದ್ದ ನಾನು ಈ ಎಲ್ಲ ಆಶ್ಚರ್ಯಗಳಿಗೂ ನೀನೇ ಮೂಲಭೂತನೆಂದು ತಿಳಿದು ಪರಮಾಶ್ಚರ್ಯಭೂತನಾದ ನಿನ್ನನ್ನು ಈಗ ಕಣ್ಣಿನಿಂದ ಸಾಕ್ಷಾತ್ಕರಿಸಿ ಮತ್ತಷ್ಟು ಬೆರಗಾಗಿರುವೆನು ಎಂಬುದು ಶ್ಲೋಕಾಭಿಪ್ರಾಯವಾಗಿರುವುದು. ಇಲ್ಲಿ ಶಕ್ತಿಶಬ್ದಾರ್ಥವನ್ನು ನಿಷ್ಕರ್ಷಿಸುವುದಕ್ಕಾಗಿ ಈ ಶ್ಲೋಕವನ್ನು ಉದಾಹರಿಸಿದ ಭಾಷ್ಯಕಾರರಿಗೆ ಈ ಶ್ಲೋಕದಲ್ಲಿ ಉಕ್ತವಾಗಿರುವ ಚೇತನಾಚೇತನರೂಪವಾದ ಪ್ರಪಂಚಕ್ಕಿಂತಲೂ ಅತಿರಿಕ್ತವಾದ ಶಕ್ತಿಯೆಂಬುದು ಅಭಿಮತವಲ್ಲವೆಂದು ತೋರುವುದು. ಹೀಗಿರುವಲ್ಲಿ ಶಕ್ತಿಯೆಂಬ ಅತಿರಿಕ್ತಪದಾರ್ಥವನ್ನು ಅಂಗೀಕರಿಸುವಿಕೆ ಈ ವೇದಾರ್ಥಸಂಗ್ರಹಗ್ರಂಥದೊಡನೆಯೂ ವಿರುದ್ಧವಾಗಿರುವುದಲ್ಲವೆ ?

ಎಂದು ಆಶಂಕಿಸಕೆಲಸವಿಲ್ಲ; ಏತಕ್ಕೆಂದರೆ—ಉಕ್ತಸ್ಥಳಗಳಲ್ಲೆಲ್ಲಾ ಶಕ್ತಿ ಶಬ್ದಪ್ರಯೋಗವು ಮುಖ್ಯವಲ್ಲ. ಕರ್ಮಂವೆಬುದು ಜೀವನಿಂದಲೇ ಉತ್ಪನ್ನವಾಗುವು ದಾದಪ್ರಯುಕ್ತ ಜೀವನಿಗೆ ಪರತಂತ್ರವಾದಕಾರಣ ಪಾರತಂತ್ರ್ಯವನ್ನೇ ನಿಮಿತ್ತ ವಾಗಿ ಮಾಡಿಕೊಂಡು ಕ್ರಿಯೆಯಲ್ಲಿ ಶಕ್ತಿಶಬ್ದವು ಪ್ರಯೋಗಿಸಲ್ಪಟ್ಟಿರುವುದೇ ಹೊರತು—ಶಕ್ತಿಯೆಂಬ ಅದ್ರವ್ಯವಿಶೇಷವನ್ನು ನಿರಾಕರಿಸುವ ತಾತ್ಪರ್ಯದಿಂದ ಪ್ರಯೋಗಿಸಿಲ್ಲ: ಇದರಂತೆಯೇ ಸಮಸ್ತಪ್ರಪಂಚವೂ ಈಶ್ವರನಿಗೆ ಪರತಂತ್ರವಾ ದುದರಿಂದ ಈಶ್ವರಶಕ್ತಿಯೆಂದು ನಿರ್ದೇಶಿಸಲ್ಪಟ್ಟಿರುವುದು. ಆದಕಾರಣ ಹಿಂದೆ ತೋರಿಸಿದ ರೀತಿಯಲ್ಲಿ ಆಗಮಾನುಮಾನಪ್ರಮಾಣಗಳಿಂದ ಸಿದ್ಧವಾಗಿರುವ ಶಕ್ತಿ ಯೆಂಬ ಧರ್ಮರೂಪವಾದ ಅದ್ರವ್ಯವಿಶೇಷವು ಅಬಾಧಿತವಾಗಿರುವುದು.

ಗ್ರಂಥಾರಂಭದಲ್ಲಿ ನಿರ್ದೇಶಿಸಿದ್ದ ಆರು ದ್ರವ್ಯಗಳನ್ನೂ, ಹತ್ತು ಅದ್ರವ್ಯಗ ಳನ್ನೂ ಅವುಗಳ ಲಕ್ಷಣ-ಸ್ವರೂಪ-ಸ್ವಭಾವ-ಒಳಭೇದ-ಇತ್ಯಾದಿವಿಚಾರಗಳೊಡನೆ ಸೇರಿಸಿ ಇದುವರೆಗೂ ನಿರೂಪಿಸಿ ತೋರಿಸಿದೆವು. ಇದರಿಂದ ದ್ರವ್ಯಾದ್ರವ್ಯರೂಪವಾದ ತತ್ತ್ವದ ವಿಷಯದಲ್ಲಿ ನಾನಾವಾದಿಗಳ ಕೋಲಾಹಲದಿಂದ ಜನಗಳಿಗೆ ಉಂಟಾ ಗಿರುವ ಅನ್ಯಥಾಜ್ಞಾನವನ್ನು ಪರಿಹರಿಸಿಕೊಳ್ಳುವುದಕ್ಕೂ, ಯಥಾರ್ಥಜ್ಞಾನವನ್ನು ಸಂಪಾದಿಸಿಕೊಳ್ಳುವುದಕ್ಕೂ ಅನುಕೂಲ್ಯವನ್ನು ಕಲ್ಪಿಸಿದಂತಾಯಿತು. ಇದರ ಮೇಲೆ ದರ್ಶನಾಂತರಕಾರರು ಅಂಗೀಕರಿಸಿರುವ ದ್ರವ್ಯಾಂತರಗಳಿಗೂ ಅದ್ರವ್ಯಾಂ ತರಗಳಿಗೂ ಉಕ್ತದ್ರವ್ಯಾದ್ರವ್ಯಗಳಲ್ಲಿಯೇ ಅಂತರ್ಭಾವವಿರುವುದೆಂಬ ಕ್ರಮವನ್ನು ವಿವರವಾಗಿ ತೋರಿಸಬೇಕು; ಆದರೆ ಇದು ಸಾಧಾರಣಕೆಲಸವಲ್ಲ; ಸ್ವಲ್ಪಗ್ರಂಥ ದಲ್ಲಿ ಬರೆದು ಮುಗಿಸಲು ಸಾಧ್ಯವಾದುದೂ ಅಲ್ಲ. ಆದುದರಿಂದ "ತತ್ತ್ವಶುದ್ಧಿ ಪರಿಶಿಷ್ಟ" ಎಂಬ ಹೆಸರಿನಿಂದ ಒಂದು ಚಿಕ್ಕ ಗ್ರಂಥವನ್ನೇ ಬರೆದು ಅದರಲ್ಲಿ ಆ ವಿಷಯಗಳನ್ನೆಲ್ಲಾ ಸ್ಪಷ್ಟಪಡಿಸಿರುವೆವಾದಕಾರಣ ಆ ವಿಷಯಗಳನ್ನು ತಿಳಿಯ ಲಪೇಕ್ಷಿಸುವ ಕುತೂಹಲಿಗಳು ಆ ಗ್ರಂಥದಿಂದಲೇ ಅವುಗಳನ್ನು ತಿಳಿಯಬೇಕು. ತತ್ತ್ವದ ಸಂಶುದ್ಧಿಗಾಗಿ ಉಪಕ್ರಮಿಸಿದ ಈ ಗ್ರಂಥದಲ್ಲಿ ಅದರ ಸಂಶುದ್ಧಿಗಾಗಿ ಎಷ್ಟು ಅಂಶಗಳು ಅಪೇಕ್ಷಿತಗಳೋ ಅಷ್ಟನ್ನು ಇಲ್ಲಿ ಕಡಮೆಮಾಡದೆ ನಿರೂಪಿಸಿ ರುವೆವಾದುದರಿಂದ ತತ್ತ್ವಶುದ್ಧಿಗ್ರಂಥವು ಇಷ್ಟಕ್ಕೆ ಸಮಾಪ್ತವಾಗಿರುವುದು.

ಸಂಪ್ರತಿ ತತ್ತ್ವಂ ಮಲಿನಂ
ಮಿಥ್ಯಾವಾದೋ ಯದಾಽಽಗತೋ ಮಲಿನಃ ।
ಸಂಪ್ರತಿ ತತ್ತ್ವಂ ವಿಮಲಂ
ತತ್ತ್ವವಿಶುದ್ಧಿರ್ಯದಾಽಽಗತಾ ವಿಮಲಾ ॥

ಇತ್ಥಂ ವಿಬುಧನಿಯೋಗಾತ್
ವಿಹಿತಾ ತತ್ತ್ವಸ್ಯ ಶುದ್ಧಿರೇಷಾಽದ್ಯ ।
ತಾಮೇನಾಮಿಹ ಕಮಲಾ
ಜಾನೇಃ ಪದಯೋರುಪಾಯನೀಕುರ್ಮಃ ॥

ಯದ್ಯಪಿ ಬಹವೋ ದೋಷಾಃ
ಗುಣಲವಮತ್ರೈವ ಯೇಽಭಿವೀಕ್ಷಂತೇ ॥
ಮಹತಾಂ ತೇಷಾಂ ಚರಣೇ
ಷ್ವರ್ಪಿತಮೇತತ್ಪ್ರಮೋದಮಾಧತ್ತಾಂ ॥

ಬ್ರಹ್ಮಾತಿರಿಕ್ತಮಖಿಲಂ ಜಡಜೀವಜಾತಂ
ಬ್ರಹ್ಮೋಪಸರ್ಜನತಯಾ ಪರಿಚಿಂತಯಂತಃ ।
ಛಾತ್ರಾ ಯಥೋದಿತಮಿದಂ ಶುಕವತ್ಪಠಂತಃ
ಪ್ರಚ್ಛನ್ನವಾದಿವಿಜಯೇ ಪರಿತೋ ಯತಧ್ವಂ ॥

ವೇದಾಂತವೇದ್ಯಮುರರೀಕೃತಗೋಪವೇಷಂ
ಜನ್ಮಸ್ಥಿತಿಪ್ರಳಯಕಾರಣಮಬ್ಜಯೋನೇಃ ।
ದುಃಖತ್ರಯೋಪಶಮನಾಯ ಮಹಾಸುಖಾಪ್ತ್ಯೈ
ಲಕ್ಷ್ಮೀಸಖಂ ಕಮಲಲೋಚನಮಾಶ್ರಯಾಮಃ ॥

ಇಂತು ತತ್ತ್ವಶುದ್ಧಿಯೆಂಬ ವಿಶಿಷ್ಟಾದ್ವೈತಪ್ರಕರಣಗ್ರಂಥದೊಳ್
ಅದ್ರವ್ಯಪರಿಚ್ಛೇದದಲ್ಲಿ ಸಂಯೋಗ-ಶಕ್ತಿನಿರೂಪಣ
ಪ್ರಕರಣಂ ಚತುರ್ಥಂ.

## ಇತಿ ಅದ್ರವ್ಯಪರಿಚ್ಛೇದಃ ಷಷ್ಠಃ ಸಮಾಪ್ತಃ.

॥ ಓಂ ॥

ಶ್ರೀಮತೇ ರಾಮಾನುಜಾಯ ನಮಃ.

ಸಮಾಪ್ತಾ ಚೇಯಂ ತತ್ತ್ವಶುದ್ಧಿಃ.

॥ ಶ್ರೀಃ ॥